# ದ್ವೈತ ಸಿದ್ಧಾಂತ ವೈಜಯಂತೀ

## (ಸಭಾಸಾರ ಸಂಗ್ರಹ ಸಂಪುಟ I, II ಮತ್ತು III)



G. K. MURTHY

— ಶ್ರೀ ಶ್ರೀ ಸತ್ಯಧ್ಯಾನ ತೀರ್ಥರು

|| ಶ್ರೀಃ ||

ಶ್ರೀಮದ್ಧನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ

ಶ್ರೀ ಲಕ್ಷ್ಮೀಹಯಗ್ರೀವಾಯ ನಮಃ ||

ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥಪ್ರದಾಯಿನೇ |

ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯ ತೇ ನಮಃ ||



# ದ್ವೈತ ಸಿದ್ಧಾಂತ ವೈಜಯಂತೀ



## ( ಸಭಾಸಾರಸಂಗ್ರಹ )

## ( Volume I )



*Edited by :*

**H. SUBBA RAO, M.A.**

# Dwait Siddhant Vaijayantee —
## ( SABHA SARA SANGRAHA – VOLUME I )



Publisher :
Hon. Gen Secretary
Satyadhyana Vidyapeetha
302/1, Bheemani Street, Matunga, Bombay – 19 DD



ಶ್ರೀಮತ್ ಸತ್ಯಧ್ಯಾನತೀರ್ಥರ ಜನ್ಮಶತಮಾನೋತ್ಸವ ಮತ್ತು ಶ್ರೀಮತ್ ಸತ್ಯಪ್ರಮೋದತೀರ್ಥರ
ಸಿಂಹಾಸನಾರೋಹಣ ರಜತಮಹೋತ್ಸವ ಸವಿನೆನಪಿನ ಪ್ರಕಟನೆ 1



ಪುನರ್ಮುದ್ರಣ : ೧೯೭೨









ಮುದ್ರಕರು :
ಎಮ್. ಸಿ. ಕುಲಕರ್ಣಿ
ವಿಜಯಲಕ್ಷ್ಮಿ ಆರ್ಟ ಪ್ರಿಂಟರ್ಸ
ಶೇರಿ ಬೀದಿ, ಬೆಳಗಾವಿ.

# ವಿಷಯಾನುಕ್ರಮಣಿಕೆಯು

## ಸಭಾಸಾರಸಂಗ್ರಹ ಭಾಗ ೧

– ❋ –



ज्ञानोत्कर्षजुषोऽघसंचयमुषो भास्वत्सुधांशुत्विषो ।
नानादुर्मतविद्विषो जितरुषो विद्वद्वरालीपुषः ।।
सच्चारित्र्यसुपूतभव्यवपुषस्सच्छास्त्रसार्थायुषः ।
सत्यध्यानमुनीशमान्यगुरवः कुर्युस्सदा मङ्गलम् ।।



संख्यावज्जनसौख्यजीवनविधौ विद्यासमुज्जीवने ।
सख्यातीतधनौर्णवस्त्र–रजत–स्वर्णान्नविश्राणनात् ॥
मत्यध्यानयतीश्वरोऽभिनव इत्योजस्विनाम्ना श्रुतः ।
सत्यामोदगुरुर्बुधामरतरुः कुर्यात्सदा मङ्गलम् ॥

॥ श्री ॥

श्रीमत्परमहंस परिव्राजकाचार्यवर्यत्वाद्यनेक गुणगणालंकृत
श्रीमद्रामचंद्र वेदव्यासदेवर दिव्यपादपद्माराधक
श्रीमद्वैष्णवसिद्धान्त प्रतिष्ठापनाचार्य श्रीमज्जगद्गुरु श्रीमन्मध्वाचार्यर
मूलसंस्थान श्रीमदुत्तरादि मठाधीशराद

**श्री १००८ श्रीमत्सत्याभिज्ञतीर्थ श्रीपादवडेयरवर करकमलसंजातराद**
**श्री १००८ श्रीमत्सत्यप्रमोदतीर्थ श्रीपादंगळवर अनुग्रहद मुन्नुडी**

अदुःखमितरत्सर्वं जीवा एव तु दुःखिनः ।
तेषां दुःखप्रहाणाय श्रुतिरेषा प्रवर्तते ॥

ಎಂಬ ಪ್ರಮಾಣಾನುಸಾರವಾಗಿ ನಿತ್ಯಾನಂತ ಸುಖಸ್ವರೂಪಿಯಾದ ಈಶ್ವರನಿಗೆ ದುಃಖವಿಲ್ಲ. ಜಡಕ್ಕೆ ಜ್ಞಾನವಿಲ್ಲದೇ ಇದ್ದದ್ದರಿಂದ ದುಃಖಾನುಭವದ ಪ್ರಸಂಗವಿಲ್ಲ. ಆದರೆ ಜೀವನಿಗೆ ಜ್ಞಾನವಿದ್ದದ್ದರಿಂದ ಸುಖದುಃಖವನ್ನು ಅರಿಯುವ ಸಾಮರ್ಥ್ಯವಿದೆ. ವಸ್ತುತಃ ಜೀವನು ಸುಖಸ್ವರೂಪಿಯೇ. ಆದರೆ ಆ ಸ್ವರೂಪಸುಖವು ಅವಿದ್ಯೆಯಿಂದ ಆವೃತವಾದದ್ದರಿಂದ ಅದರ ಅನುಭವವು ಅವನಿಗೆ ಆಗುವದಿಲ್ಲ. ಈ ಕಾರಣದಿಂದ ಸಂತತವಾಗಿ ದುಃಖವನ್ನು ಅನುಭವಿಸುತ್ತ ಇರುತ್ತಾನೆ. ಕೆಲವು ವೇಳೆ ಸುಖವಾದರೂ ಆ ಸುಖವು ಕ್ಷಣಿಕವೆಂದೂ, ಸ್ವಲ್ಪೇ ಕಾಲದಲ್ಲಿ ಹೋಗುವದೆಂಬ ದುಃಖದಿಂದ ಕೂಡಿರುತ್ತದೆ. ಜೀವರಾಶಿಗಳ ಈ ದುಃಖವನ್ನು ಹೋಗಲಾಡಿಸುವದಕ್ಕಾಗಿಯೇ ವೇದಗಳು ಪ್ರವೃತ್ತವಾಗಿವೆ. ಆದರೆ ಕಾಲ ಪ್ರಭಾವದಿಂದ ವೇದಗಳು ಖಿಲವಾಗುತ್ತಾ ಹೋದವು. ಉಪಲಬ್ಧವಿದ್ದ ವೇದಗಳ ಅರ್ಥಜ್ಞಾನವು ಆಗದಂತೆ ಆಯಿತು. ಕೆಲವರಿಗೆ ಅಲ್ಪ ಸ್ವಲ್ಪ ಜ್ಞಾನವಾದರೂ ಯಥಾರ್ಥ ಜ್ಞಾನವು ಉತ್ಪನ್ನವಾಗಲಿಲ್ಲ. ನಿಜವಾದ ಜ್ಞಾನಿಗಳು ಅತ್ಯಂತ ವಿರಲರಾದರು. ಕೆಲವರಲ್ಲಿ ಜ್ಞಾನವಿದ್ದರೂ, ಅದರ ಲಾಭವನ್ನು ಪಡೆಯಲು ಜನರಿಗೆ ಮನಸ್ಸಾಗಲಿಲ್ಲ. ಇಂಥ ದುರ್ದಶೆ ಪ್ರಾಪ್ತವಾದಾಗ ಬ್ರಹ್ಮಾದಿಗಳ ಪ್ರಾರ್ಥನೆಯ ಮೇರೆಗೆ ಶ್ರೀ ಹರಿಯ ಅವತಾರರೂಪವಾದ ವೇದವ್ಯಾಸ ದೇವರು ಅವತರಿಸಿ, ಭಾರತ–ಬ್ರಹ್ಮಸೂತ್ರಗಳನ್ನು ರಚಿಸಿದರು. ವೇದಗಳ ವಿಭಜನೆ ಮಾಡಿದರು. ಮಹಾಪುರಾಣ – ಉಪಪುರಾಣಗಳನ್ನು ಬರೆದರು. ಪುನಃ ನಿರ್ಮಲ ಜ್ಞಾನವು ಉದಯವಾಯಿತು. ಈ ಜ್ಞಾನದಿಂದ ಎಷ್ಟೋ ಕಾಲದವರೆಗೆ ಜನರು ತಮ್ಮ ಸಾಧನ – ಅನುಷ್ಠಾನ ಮಾಡಿಕೊಂಡರು. ಯುಗಾಂತರಾನುಸಾರವಾಗಿ ಈ ಗ್ರಂಥಗಳ ಅರ್ಥವೂ ಜನರಿಗೆ ತಿಳಿಯದಂತೆ ಆಯಿತು. ಕೆಲವರು ಇವುಗಳಿಗೆ ಅಪಾರ್ಥ ಮಾಡಿದರು. ಕೆಲವರು ಇವುಗಳನ್ನು ತಿರಸ್ಕರಿಸಿದರು. ಇನ್ನೂ ಕೆಲವರು ಖಂಡಿಸಿದರು.

ಇಂಥ ಸಂದರ್ಭದಲ್ಲಿ ಶ್ರೀ ಹರಿಯ ಆಜ್ಞಾನುಸಾರವಾಗಿ ವಾಯುದೇವರೇ ಶ್ರೀಮದಾನಂದತೀರ್ಥರಾಗಿ ಅವತರಿಸಿ ದುರ್ಭೇದ್ಯವಾದ ಮತ್ತು ವಿಶ್ವತೋಮುಖ ವಾದ ಭಾಷ್ಯ ಗ್ರಂಥಗಳನ್ನು ರಚಿಸಿ, ನಮ್ಮ ಮೇಲೆ ಮಹೋಪಕಾರ ಮಾಡಿ ದರು. ಹಿಂದಿನ ವ್ಯಾಖ್ಯಾನಗಳಲ್ಲಿದ್ದ ಲೋಪ – ದೋಷಗಳನ್ನು ಎತ್ತಿ ಹಿಡಿದು ಸ್ಪಷ್ಟವಾಗಿ ತೋರಿಸಿ, ಅವೆಲ್ಲವೂ ವೇದ, ವಿಶೇಷವಾಗಿ ಶಾಸ್ತ್ರ ಮತ್ತು ವೇದವ್ಯಾಸ ರಚಿತ ಗ್ರಂಥಗಳಿಗೆ ಸಮ್ಮತವಲ್ಲವೆಂದು ಸಮರ್ಥಿಸಿದರು. ಶ್ರೀಮದಾನಂದ ತೀರ್ಥರ ಗ್ರಂಥಗಳು ಬಹಳ ಗಹನವಾಗಿವೆ. ಅವುಗಳ ರಹಸ್ಯ ತಿಳಿದುಕೊಳ್ಳುವದು ತುಂಬಾ ಕಷ್ಟ. ಅದಕ್ಕೋಸ್ಕರ ಶ್ರೀ ಜಯತೀರ್ಥರು ಅವತರಿಸಿ, ಇಂಥ ಪ್ರೌಢ ಗ್ರಂಥಗಳ ಅರ್ಥವನ್ನು ಸರಲವಾಗಿಯೂ, ಸುಂದರವಾಗಿಯೂ, ಭಾವಪೂರ್ಣವಾಗಿಯೂ, ಸಕಲರಿಗೂ ಮನೋಜ್ಞವಾಗಿಯೂ ಸ್ಪಷ್ಟೀಕರಿಸಿದರು. ಸರ್ವಜ್ಞಕಲ್ಪರಾದ ಶ್ರೀಮಜ್ಜಯತೀರ್ಥರ ಶ್ರೀಮನ್ನ್ಯಾಯ ಸುಧಾದಿ ಗ್ರಂಥಗಳು ಬಹಳ ಜಟಿಲವಾಗಿವೆ. ಪ್ರಮೇಯಪೂರ್ಣವಾಗಿವೆ. ನ್ಯಾಯ ಪರಿಭಾಷೆಯಲ್ಲಿ ಬರೆಯಲ್ಪಟ್ಟಿವೆ. ಅವು ಗಳಲ್ಲಿ ಸಕಲ ಶಾಸ್ತ್ರಗಳ ವಿಚಾರ ಬಂದಿವೆ. ಅವೈದಿಕ ನಾಸ್ತಿಕ ಮತಗಳ ಖಂಡನ ವಿದೆ. ಆ – ಆ ಮತದಲ್ಲಿರುವ ಗಹನ ಗ್ರಂಥಗಳ ಪರಾಮರ್ಶೆ ಇದೆ.

ಶ್ರೀಮಜ್ಜಯತೀರ್ಥರ ಕೃತಿಗಳನ್ನು ಸ್ಪಷ್ಟ ಮಾಡುವದಕ್ಕಾಗಿ ವಿದ್ವತ್ ಸಾರ್ವಭೌಮರೂ, ಅಪರೋಕ್ಷ ಜ್ಞಾನಿಗಳೂ ಆದ, ಶ್ರೀ ವ್ಯಾಸರಾಯರು, ಶ್ರೀ ವಾದಿ ರಾಜರು, ಶ್ರೀ ವಿಜಯೀಂದ್ರರು, ಶ್ರೀ ರಘೂತ್ತಮರು, ಶ್ರೀ ವೇದೇಶರು, ಶ್ರೀ ವಿದ್ಯಾಧೀಶರು, ಶ್ರೀ ರಾಘವೇಂದ್ರರು, ಶ್ರೀ ಸತ್ಯನಾಥರು ಮೊದಲಾದ ನೂರಾರು ಯತಿವರೇಣ್ಯರು, 'ಚಂದ್ರಿಕಾ' ಮೊದಲಾದ ಗ್ರಂಥಗಳನ್ನು ರಚಿಸಿದರು. ಇಲ್ಲಿಯ ವರೆಗೆ ಉಪಲಬ್ಧ ಈ ಎಲ್ಲ ಗ್ರಂಥಗಳ ಸಾರಾರ್ಥವನ್ನು, ಕೂಲಂಕಷ ಅಭ್ಯಸಿಸಿ ಇಡೀ ಆಯುಷ್ಯ, ಪಂಡಿತ– ಪಾಮರರಿಗೆ ಉಪದೇಶಿಸಿ ಮಹಾಪ್ರವಚನಾಚಾರ್ಯ ರಾದ, ಕಲಿಯುಗದಕರ್ಣ – ವಿದ್ವತ್‌ಕಾಮಧೇನು – ಕಲ್ಪವೃಕ್ಷ – ಚಿಂತಾಮಣಿ ಎನಿಸಿದ, ಪ್ರತಿಭೆಯಲ್ಲಿ ಬ್ರಹಸ್ಪತಿಗೆ ಸಮಾನರಾದ, "ಅಭಿನವ ಆನಂದತೀರ್ಥ ರೆಂದು ಪ್ರಸಿದ್ಧಿ ಹೊಂದಿದ ಪ್ರಾತಃಸ್ಮರಣೀಯರಾದ ನಮ್ಮ ಪರಮ ಗುರುಗಳಾದ ಶ್ರೀ ಶ್ರೀ ಸತ್ಯಧ್ಯಾನತೀರ್ಥರು ಆಧುನಿಕ ಜನರ ಮನಸ್ಸಿಗೆ ಹಿಡಿಸುವಂತೆ, ಜನ ಸಾಮಾನ್ಯಕ್ಕೆ ಗೊತ್ತಾಗುವ ಕನ್ನಡ ಮೊದಲಾದ ಭಾಷೆಗಳಲ್ಲಿ 'ಸಭಾಸಾರಸಂಗ್ರಹ' ಸಿವ್ಹಿಲ್ ಸೂಟ್, ಗೀತಾಪ್ರತಿಪದಾರ್ಥಚಂದ್ರಿಕಾ, ಗೀತಾಸಾರಸಂಗ್ರಹ ಮೊದ ಲಾದ ಅನರ್ಘ್ಯ ಗ್ರಂಥಗಳನ್ನು ರಚಿಸಿ, ಜಗತ್ತಿಗೆ ಮಹೋಪಕಾರ ಮಾಡಿ ಅಜರಾ ಮರ ಕೀರ್ತಿಶಾಲಿಗಳಾಗಿದ್ದಾರೆ.

ಇವುಗಳ ಭಾಷೆ ಕನ್ನಡವಾಗಿದ್ದರೂ, ತತ್ವಜ್ಞಾನ ಗಾಂಭೀರ್ಯಕ್ಕೆ ಸ್ವಲ್ಪವೂ ಚ್ಯುತಿಯಿಲ್ಲ. ಈ ಗ್ರಂಥಗಳಲ್ಲಿ ನಮ್ಮ ಸಿದ್ಧಾಂತದ ಸಾರಾತ್ ಸಾರತರವಾದ ಸಕಲ ಪ್ರಮೇಯಗಳನ್ನು ಶ್ರೀ ಶ್ರೀಪಾದಂಗಳವರು ಸಂಗ್ರಹಿಸಿದ್ದಾರೆ. ವಿಶೇಷವಾಗಿ ಸಭಾಸಾರಸಂಗ್ರಹದ ದ್ವಿತೀಯ, ತೃತೀಯ ಭಾಗಗಳಲ್ಲಿ ಗೀತಾಭಾಷ್ಯ, ಗೀತಾ

ತಾತ್ಪರ್ಯ, ಪ್ರಮೇಯದೀಪಿಕಾ, ನ್ಯಾಯದೀಪಿಕಾ ಇತ್ಯಾದಿ ಗ್ರಂಥಗಳ ರಹಸ್ಯಾರ್ಥವನ್ನು ಸರಳ ಕನ್ನಡ ಭಾಷೆಯಲ್ಲಿ ಸುಂದರವಾಗಿ ಪ್ರತಿಪಾದಿಸಿದ್ದಾರೆ. ಇದನ್ನು ಚೆನ್ನಾಗಿ ಅಭ್ಯಸಿಸಿದ ಲೌಕಿಕರಿಗೆ, ನಮ್ಮ ಸಿದ್ಧಾಂತದ ಸೂಕ್ಷ್ಮ ಜ್ಞಾನವು ಆಗುವದೆಂಬುವದರಲ್ಲಿ ಸಂಶಯವಿಲ್ಲ. ಅದರಂತೆ ಇವುಗಳನ್ನು ಗಾಢವಾಗಿ ಅಭ್ಯಸಿಸಿದ ಪಂಡಿತರಿಗೆ ಮಹಾ ಪಾಂಡಿತ್ಯ ಬರುವದರಲ್ಲಿ ಎಳ್ಳಷ್ಟು ಸಂದೇಹವಿಲ್ಲ.

ಇಂಥ ಮೌಲಿಕ ಗ್ರಂಥಗಳು ಈಗ ದೊರೆಯದೇ ಇದ್ದದ್ದನ್ನು ನೋಡಿ, ನಮ್ಮ ಆದೇಶದ ಮೇರೆಗೆ " ಶ್ರೀ ಸತ್ಯಧ್ಯಾನ ವಿದ್ಯಾಪೀಠವು " ಉತ್ಸನ್ನವಾಗುತ್ತಿರುವ, ಅಪ್ರಸಿದ್ಧ, ನಾಮಶೇಷವಾದ ಗ್ರಂಥಗಳನ್ನು ಮುದ್ರಿಸಿ ಪ್ರಕಟಿಸುವ ಪರಮ ಪವಿತ್ರ ಕಾರ್ಯವನ್ನು ಮಾಡುತ್ತಲಿದೆ. ಈಗಾಗಲೇ ಅನೇಕ ಮೌಲಿಕ ಗ್ರಂಥಗಳನ್ನು ಪ್ರಕಾಶಿಸಿದೆ.

ಪ್ರಸ್ತುತ ಪ್ರಾತಃಸ್ಮರಣೀಯ ಶ್ರೀಮತ್ಸತ್ಯಧ್ಯಾನತೀರ್ಥ ಶ್ರೀಪಾದಂಗಳವರ ಜನ್ಮ ಶತಮಾನೋತ್ಸವದ ಸ್ಮಾರಕವಾಗಿ ಶ್ರೀ ಶ್ರೀಗಳವರು ರಚಿಸಿದ, ಗ್ರಂಥಗಳ ಪುನರ್ಮುದ್ರಣದ ಪವಿತ್ರ ಕಾರ್ಯವನ್ನು ನಮ್ಮ ಆಜ್ಞೆಯ ಮೇರೆಗೆ ವಿದ್ಯಾಪೀಠವು ಕೈಕೊಂಡಿದೆ.

ನಮ್ಮಿಂದಲೇ ಸ್ಥಾಪಿತವಾದ, ನಮ್ಮದೇ ಆದ ಈ ವಿದ್ಯಾಪೀಠದ ಈ ಮಹತ್ ಪವಿತ್ರ ಕಾರ್ಯವು ಪೂರ್ಣ ಯಶಸ್ವಿಯಾಗಲಿ, ಅದರಿಂದ ಪ್ರಕಟಿಸಿದ ಮೌಲಿಕ ಗ್ರಂಥಗಳನ್ನು ಅಭ್ಯಸಿಸಿದ ಜಿಜ್ಞಾಸುಗಳಾದ ನಮ್ಮ ಶಿಷ್ಯರೆಲ್ಲರೂ ಶ್ರೇಯೋಭಾಗಿಗಳಾಗಲಿ ಮತ್ತು " ಸತ್ಯಧ್ಯಾನ ವಿದ್ಯಾಪೀಠವು ಇಂಥ ಪವಿತ್ರ ಕಾರ್ಯವನ್ನು ಮಾಡಲು ಇತೋಽಪ್ಯತಿಶಯ ಶಕ್ತಿಯುಳ್ಳದ್ದಾಗಲೆಂದು ನಮ್ಮ ಆರಾಧ್ಯ ದಿಗ್ವಿಜಯ, ಮೂಲ ರಾಮಚಂದ್ರ ವೇದವ್ಯಾಸ ದೇವರಲ್ಲಿ ಪ್ರಾರ್ಥಿಸುತ್ತೇವೆ.

ಪದ್ಮಸರೋವರ<br>
ರಾಮನವಮೀ, ಶ್ರೀಶಕೆ ೧೮೯೪ }



ಪ್ರಾತಃಸ್ಮರಣೀಯ ಶ್ರೀ ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರು.

॥ श्रीशं वन्दे ॥

# ನಿವೇದನೆ

ಇಂದಿನ ವೈಜ್ಞಾನಿಕ ಯುಗದಲ್ಲಿ ಭಾರತೀಯ ಸನಾತನ ಧರ್ಮ–ಸಂಸ್ಕೃತಿಗಳ ಅವಶ್ಯಕತೆಯನ್ನು ಕೆಲವರು ಅಲ್ಲಗಳೆಯುತ್ತಿದ್ದರೂ ಸುಜ್ಞರಿಗೆ ಅವುಗಳ ಪರಮಾವಶ್ಯಕತೆ ಹೆಚ್ಚು ಹೆಚ್ಚು ತಲೆದೋರುತ್ತಿದೆ. ವೈಜ್ಞಾನಿಕ ಆವಿಷ್ಕಾರಗಳು ಮನುಷ್ಯನ ಕೆಲವು ಸಮಸ್ಯೆಗಳನ್ನು ಪರಿಹರಿಸಲು ಪ್ರಯತ್ನಿಸುತ್ತಿದ್ದರೂ ಮೂಲಭೂತ ಸಮಸ್ಯೆಗಳನ್ನು ಬಿಡಿಸಲು ಅಸಮರ್ಥವಾಗಿವೆ, ಎಂಬುದು ಸರ್ವರಿಗೂ ವಿದಿತವಾದ ವಿಷಯ. ಆದ್ದರಿಂದ ಜಗತ್ತಿನ ಜನಗಳೆಲ್ಲರೂ ಚಾತಕ ಪಕ್ಷಿಗಳಂತೆ ಶಾಂತಿಯ ನಿರೀಕ್ಷಣೆಯಲ್ಲಿದ್ದಾರೆಂದು ಬೇರೆ ಹೇಳಬೇಕಾಗಿಲ್ಲ. ವಿಜ್ಞಾನದ ದಾರಿಯಲ್ಲಿ ಶಾಂತಿಯು ಎಷ್ಟು ಹುಡುಕಿದರೂ ಸಿಕ್ಕುತ್ತಿಲ್ಲ. ಈ ದಿಶೆಯಲ್ಲಿ ಭಾರತೀಯ ಸನಾತನ ಧರ್ಮ–ಸಂಸ್ಕೃತಿಯು ಸುತರಾಂ ಸಹಾಯಕವಾಗಿದೆ. ಇಂಥ ಪವಿತ್ರ ಸಂಸ್ಕೃತಿಯ ರಕ್ಷಣೆ ಮತ್ತು ಪೋಷಣೆಗಾಗಿ ನಮ್ಮ ದೇಶದಲ್ಲಿ ಅನೇಕ ಮಹನೀಯರು ಅವತರಿಸಿದ್ದಾರೆ. ತಮ್ಮ ತಪಃಪ್ರಭಾವದಿಂದ ವಿಶ್ವದ ಜಾಡ್ಯವನ್ನು ದೂರ ಮಾಡುವದಕ್ಕಾಗಿ ಭಗೀರಥ ಪ್ರಯತ್ನ ಮಾಡಿದರೆಂಬುದು ವಿಶ್ವವಿಶ್ರುತ. ಅಂಥ ಮಹಾತ್ಮರ ಮಹಾಮಾಲಿಕೆಯಲ್ಲಿ ಜಗದ್ಗುರುಗಳೂ, ಸಹಸ್ರಾರು ಪಂಡಿತಾಗ್ರೇಸರರ ವಿದ್ಯಾಗುರುಗಳೂ, ನಮ್ಮ ವಿದ್ಯಾಗುರುಗಳೂ ಆದ ಪ್ರಾತಃಸ್ಮರಣೀಯ ಶ್ರೀ ೧೦೦೮ ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರ ಹೆಸರು ಇಂದಿನ ಜನಾಂಗಕ್ಕೆ ಎದ್ದು ಕಾಣುತ್ತದೆ. ಈ ಮಹಾನುಭಾವರು ಜ್ಞಾನದಾನ – ಅನ್ನದಾನ – ಅಭಯದಾನಕ್ಕಾಗಿ ತಮ್ಮ ಇಡೀ ಜೀವನವನ್ನೇ ಮುಡುಪಾಗಿಟ್ಟು, "ಅಭಿನವ ಆನಂದ ತೀರ್ಥರೆಂದು" ಸಾರ್ಥಕ ಬಿರುದುಭೂಷಿತರಾದರು.

ಶ್ರೀ ಶ್ರೀಪಾದಂಗಳವರು ಪಂಡಿತ – ಪಾಮರರಿಗೆ ನಮ್ಮ ಸಿದ್ಧಾಂತದ ಸೂಕ್ಷ್ಮಜ್ಞಾನವು ಆಗುವದಕ್ಕಾಗಿ ಜನತೆಯ ಭಾಷೆಯಲ್ಲಿ ಅನೇಕ ಮೌಲಿಕ ಗ್ರಂಥಗಳನ್ನು ರಚಿಸುವ ಅನುಗ್ರಹ ಮಾಡಿದ್ದಾರೆ. ಅವುಗಳಲ್ಲಿ "ಸಭಾಸಾರಸಂಗ್ರಹ" (ದ್ವೈತ ಸಿದ್ಧಾಂತ ವೈಜಯಂತೀ) ದ ಭಾಗಗಳು ಅನರ್ಘ್ಯ ಕೃತಿಗಳಾಗಿವೆ. ಪ್ರತಿಯೊಬ್ಬರ ಜೀವನದಲ್ಲಿ ಮಾರ್ಗದರ್ಶಕ, ಮಹತ್ವಪೂರ್ಣ, ಅತ್ಯಾವಶ್ಯಕ ವಿಷಯಗಳಿಂದ ಓತಪ್ರೋತವಾಗಿವೆ. ಸುಜ್ಞರಾದ ವಾಚಕರಿಗೆ ಈ ಕೃತಿಗಳ ಮಹತ್ವ – ಅವಶ್ಯಕತೆ ತಾನಾಗಿಯೇ ತಿಳಿಯುವದರಲ್ಲಿ ಸಂದೇಹವಿಲ್ಲ.

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲ ಸಂಸ್ಥಾನ ಶ್ರೀಮದುತ್ತರಾದಿ ಮಠಾಧೀಶರಾದ ಶ್ರೀ ೧೦೦೮ ಶ್ರೀಮತ್ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಪರಮಕೃಪಾಪೀಯೂಷ ಪರಿಪೋಷಿತವಾದ 'ಸತ್ಯಧ್ಯಾನ ವಿದ್ಯಾಪೀಠವು' ಪರಿ

ಪರಿಯಾಗಿ ಸನಾತನ ಧರ್ಮ, ಸಂಸ್ಕೃತಿಯ ರಕ್ಷಣೆ- ಪೋಷಣೆಗಾಗಿ ಕಟಿಬದ್ಧವಾಗಿದೆ. ಶ್ರೀ ೧೦೦೮ ಶ್ರೀಪಾದಂಗಳವರ ಆಜ್ಞೆಯ ಮೇರೆಗೆ, ಯುಗಪುರುಷರಾದ ಶ್ರೀ ಶ್ರೀಮತ್ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರ ಜನ್ಮ ಶತಮಾನೋತ್ಸವದ ಸ್ಮಾರಕವಾಗಿ ಈ ಮಂಗಲ ಅವಸರದಲ್ಲಿ ಮಹೋತ್ಸವ ನಾಯಕರೇ ವಿರಚಿಸಿದ, ದ್ವೈತ ಸಿದ್ಧಾಂತ ವೈಜಯಂತೀ ಪ್ರಾಯವಾದ ಗ್ರಂಥಗಳ ಪುನರ್ಮುದ್ರಣದ ಮಹತ್ಕಾರ್ಯವನ್ನು ವಿದ್ಯಾಪೀಠವು ಕೈಕೊಂಡಿದೆ. ದಯಾಘನ ಮೂಲರಾಮ – ದಿಗ್ವಿಜಯ ರಾಮ – ವೇದವ್ಯಾಸ ದೇವರ ಅನುಗ್ರಹ ಮತ್ತು ಶ್ರೀ ಶ್ರೀಪಾದಂಗಳವರ ಆಶೀರ್ವಾದ ಬಲದಿಂದ ಈ ಬೃಹದ್ ಯೋಜನೆಯ ಕಾರ್ಯ ಸುಸಫಲವಾಗುವದೆಂದು ಹೇಳಬೇಕೆ ?

ಕ್ರಮವಾಗಿ ಪ್ರಾತಃಸ್ಮರಣೀಯ ಶ್ರೀ ಶ್ರೀಪಾದಂಗಳವರೇ ರಚಿಸಿದ "ಸಿವ್ಹಿಲ್ ಸೂಟ್" ( Civil Suit ) ( ಕನ್ನಡದಲ್ಲಿ ) ಗ್ರಂಥದ ಪುನರ್ಮುದ್ರಣ ಮಾಡುವದಲ್ಲದೇ, ಶ್ರೀಮತ್ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರ ಸವಿವರ ಚರಿತ್ರೆಯನ್ನು ಕನ್ನಡದಲ್ಲಿ ಪ್ರಕಟಿಸಬೇಕೆಂದು ನಿರ್ಧರಿಸಲಾಗಿದೆ.

ಈ ಗ್ರಂಥ ಮುದ್ರಣದ ವಿಷಯದಲ್ಲಿ ನಮ್ಮ ಕಾರ್ಯ ನಿರ್ವಾಹಕರು ದಕ್ಷತೆಯಿಂದ ಪ್ರೂಫ್ ತಿದ್ದುವದರಲ್ಲಿ ಸಾಕಷ್ಟು ಪರಿಶ್ರಮವಹಿಸಿ, ತಪ್ಪುಗಳು ಉಳಿಯದಂತೆ ಪ್ರಯತ್ನಿಸಿದ್ದಾರೆ. ಆದರೂ ಮುದ್ರಾರಾಕ್ಷಸನ ಹಾವಳಿ ಮತ್ತು ಬೇರೆ ಕಾರಣಗಳಿಂದ ಅಲ್ಲಲ್ಲಿ ದೋಷಗಳು ಕಂಡು ಬಂದಲ್ಲಿ, ಆತ್ಮೀಯರಾದ ವಾಚಕರು ಹಂಸ–ಕ್ಷೀರನ್ಯಾಯವನ್ನವಲಂಬಿಸಿ ಗುಣವನ್ನು ಮಾತ್ರ ಗ್ರಹಿಸುವರೆಂದೂ, ಮತ್ತು ವಿದ್ಯಾಪೀಠದ ಬೃಹದ್ ಯೋಜನೆಯ ಈ ಕಾರ್ಯವನ್ನು ಪ್ರೋತ್ಸಾಹಿಸುವರೆಂದೂ ಆಶಿಸುತ್ತೇವೆ.

ಸದ್ಯಃ ಸರ್ವಜ್ಞಾಚಾರ್ಯರ ಮೂಲ ಸಿಂಹಾಸನದಲ್ಲಿ ವಿರಾಜಮಾನರಾದ ಶ್ರೀ ಶ್ರೀಪಾದಂಗಳವರು ತನು–ಮನ–ಧನಗಳಿಂದ ಹೆಜ್ಜೆ ಹೆಜ್ಜೆಗೆ ಪ್ರೋತ್ಸಾಹಿಸುವದಲ್ಲದೇ ಈ ಸನ್ನಿವೇಶದಲ್ಲಿ ಮುನ್ನುಡಿಯನ್ನು ಅನುಗ್ರಹಿಸಿದ್ದಕ್ಕಾಗಿ ಮಹಾಸನ್ನಿಧಾನದಲ್ಲಿ ಈ ಬೃಹದ್ ಗ್ರಂಥವನ್ನು ವಿದ್ಯಾಪೀಠವು ಭಕ್ತಿ–ಶ್ರದ್ಧಾಪೂರ್ವಕ ಅನಂತಾನಂತ ಪ್ರಣಾಮಗಳೊಂದಿಗೆ ಸಮರ್ಪಿಸುತ್ತಲಿದೆ.

ಅಕ್ಷಯ್ಯ ತೃತೀಯಾ
ಶ್ರೀ ಶಕೆ ೧೮೯೪
೧೫–೫–೧೯೭೨

**ಮಹಾಮ್ಯಾಷ್ಕ್ರ ಗೋಪಾಲಾಚಾರ್ಯರು**
ಕಾರ್ಯಾಧ್ಯಕ್ಷರು,
ಸತ್ಯಧ್ಯಾನ ವಿದ್ಯಾಪೀಠ, ಮುಂಬಯಿ.

# ಪ್ರಕಾಶಕರ ನುಡಿ

ನಮ್ಮ ಭಾರತೀಯ ಸಂಸ್ಕೃತಿ-ಪರಂಪರೆಗನುಗುಣವಾಗಿ, ವೈದಿಕ ತತ್ವಗಳ-ಪರಿಚಯ - ಪ್ರಚಾರ - ಪುರಸ್ಕಾರಗಳು ಸತ್ಯಧ್ಯಾನ ವಿದ್ಯಾಪೀಠದ ಮುಖ್ಯ ಗುರಿಯಾಗಿವೆ. ಈ ದಿಶೆಯಲ್ಲಿ ನಮ್ಮ ಗುರುವರ್ಯರಾದ, ಪಂಡಿತರಾಜ, ಪಂಡಿತರತ್ನ ಇತ್ಯಾದ್ಯನೇಕ ಬಿರುದುಭೂಷಿತ, ಪರಮಪೂಜ್ಯ ಮಾಹುಲಿ ಗೋಪಾಲಾಚಾರ್ಯರವರ ಸುಧೃಢ, ನಿರ್ವ್ಯಾಜ ನೇತೃತ್ವದಲ್ಲಿ ವಿದ್ಯಾಪೀಠವು ಬಹುಮುಖ ಕಾರ್ಯಗಳಲ್ಲಿ ಅನೇಕ ವರ್ಷಗಳಿಂದ ಪ್ರವೃತ್ತವಾಗಿದೆ. ಈ ಕೆಲವು ವರ್ಷಗಳಲ್ಲಿ ಪ್ರಾಚೀನ, ಅಪ್ರಕಾಶಿತ ಅನೇಕ ಮೌಲಿಕ ಗ್ರಂಥಗಳನ್ನು ಶೋಧಿಸಿ ಪ್ರಕಾಶನಗೊಳಿಸಿದೆ.

ಪ್ರಸ್ತುತ ಶ್ರೀಮತ್ ಸತ್ಯಧ್ಯಾನತೀರ್ಥ ಜನ್ಮಶತಮಾನೋತ್ಸವ ಮತ್ತು ಶ್ರೀಮತ್ ಸತ್ಯಪ್ರಮೋದತೀರ್ಥ ಸಿಂಹಾಸನಾರೋಹಣ ರಜತಮಹೋತ್ಸವ ವರ್ಷವು, ವೈದಿಕಸಿದ್ಧಾಂತ ಇತಿಹಾಸದಲ್ಲಿ ಸ್ಮರಣೀಯವಾದ ಸುಅವಸರ. ವಿದ್ಯಾಪೀಠದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡತಕ್ಕ ಸುಸಮಯ. ಈ ಪವಿತ್ರ ಸಂದರ್ಭದಲ್ಲಿ ಜ್ಞಾನಸತ್ರ - ಸ್ಮಾರಕ ಕಟ್ಟಡ - ಉತ್ಸವಗಳು - ಗ್ರಂಥ ಪ್ರಕಾಶನ ಮೊದಲಾದವುಗಳನ್ನು ನೆರವೇರಿಸಬೇಕೆಂದು ವಿದ್ಯಾಪೀಠವು ನಿರ್ಧರಿಸಿದೆ. ಅದರಂತೆ ಅನೇಕಾನೇಕ ಆಸ್ತಿಕ ಜಿಜ್ಞಾಸು ಜನಗಳ ಬೇಡಿಕೆಯಂತೆ, ಶಕಪುರುಷರಾದ ಶ್ರೀ ಶ್ರೀಮತ್ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರು ರಚಿಸಿದ ಅಮೌಲ್ಯ ಗ್ರಂಥಗಳ ಪುನರ್ಮುದ್ರಣದ ಕಾರ್ಯವನ್ನು ಕೈಕೊಂಡಿದೆ. ನಮ್ಮ ಶ್ರೀ ೧೦೦೮ ಶ್ರೀಮತ್ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಆಜ್ಞೆಯ ಮೇರೆಗೆ ಸದ್ಯಃ ಉಪಲಬ್ಧವಾಗದೇ ಇರುವ "ಸಭಾಸಾರಸಂಗ್ರಹ" ಗಳ (ದ್ವೈತಸಿದ್ಧಾಂತ ವೈಜಯಂತೀ) ಯ ಪುನರ್ಮುದ್ರಣವು ಪ್ರಪ್ರಥಮ ಹೆಜ್ಜೆಯಾಯಿತು.

ಶ್ರೀಮತ್ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರ ಮಹಾಸನ್ನಿಧಾನದಲ್ಲಿ ಸ್ವತಃ ಉಪಸ್ಥಿತರಿದ್ದು, ಶ್ರೀ ಶ್ರೀಪಾದಂಗಳವರ ಅನುಗ್ರಹಕ್ಕೆ ಪಾತ್ರರಾಗಿ, ಶ್ರೀ ಶ್ರೀಗಳವರ ಉಪನ್ಯಾಸಗಳನ್ನು ಸಂಗ್ರಹಿಸಿ, ಆಸ್ತಿಕ ಜನತೆಗೆ ಮಹೋಪಕಾರ ಮಾಡಿದ ಶ್ರೀಮಾನ್ ಪಂಡಿತ ಹೆಚ್. ಕೆ. ಸುಬ್ಬರಾಯರನ್ನು ಮತ್ತು ಶ್ರೀಮಾನ್ ಪಂಡಿತ, ವ್ಹಿ. ಎನ್. ದೇಶಿಕಾಚಾರ್ಯರನ್ನು ಈ ಪ್ರಸಂಗದಲ್ಲಿ ವಿದ್ಯಾಪೀಠವು ನೆನಿಸದೇ ಇರದು.

ಅನೇಕ ವರ್ಷಗಳಿಂದ ವಿದ್ಯಾಪೀಠಕ್ಕೆ ನಿಷ್ಕಾಮ ಸೇವೆ ಸಲ್ಲಿಸುತ್ತಿರುವ ಇಲ್ಲಿಯವರೆಗಿನ ಎಲ್ಲ ಗ್ರಂಥಗಳನ್ನು ಶೋಧಿಸಿದಂತೆ, ವೃದ್ಧಾಪ್ಯದಲ್ಲಿಯೂ ಅನೇಕ ದೈಹಿಕ ಅನಿವಾರ್ಯ ತೊಂದರೆಗಳನ್ನು ಲೆಕ್ಕಿಸದೇ, ಈ ಗ್ರಂಥದ ಮುದ್ರಣ ಕಾರ್ಯದಲ್ಲಿ ಮಾರ್ಗದರ್ಶನ, ಪ್ರೂಫ್ ತಿದ್ದುವದರ ಮೂಲಕ ಸಹಕರಿಸಿದ, ವಿದ್ಯಾಪೀಠದ ಕೇವಲ ಹಿತೈಷಿಗಳಾದ, ರಾಷ್ಟ್ರಪತಿ ಪ್ರಶಸ್ತಿಪ್ರಾಪ್ತ, ಸಾಹಿತ್ಯರತ್ನ, ಪಂಡಿತಾಗ್ರೇಸರ, ಪೂಜ್ಯ ಗಲಗಲಿ ರಾಮಾಚಾರ್ಯರ ಮಹೋಪಕಾರ ಚಿರಸ್ಮರಣೀಯ.

ಈ ಹೊತ್ತಿಗೆಯನ್ನು ಸಾಕಷ್ಟು ಶುದ್ಧವಾಗಿ, ಸುಂದರವಾಗಿ ಓದುಗರ ಕೈಯಲ್ಲಿಡಲು ಹಗಲಿರುಳು ಅವಿರತ ಪ್ರಯತ್ನ ಮಾಡಿದ ಪಂಡಿತ ವಿಜಯೀಂದ್ರ ಶರ್ಮಾ ರಾಮಾಚಾರ್ಯ ನಾಗರಹಳ್ಳಿ ಮತ್ತು ಅದರಂತೆ ಶ್ರೀ ಕೃಷ್ಣಕೊಲ್ಹಾರ ಕುಲಕರ್ಣಿಯವರ ಸೇವೆಯನ್ನು ವಿದ್ಯಾಪೀಠವು ಮರೆಯುವಂತೆ ಇಲ್ಲ.

ಈ ಕಾರ್ಯದಲ್ಲಿ ಸೂಕ್ತ – ಸಲಹೆ – ಪ್ರೋತ್ಸಾಹನೆ, ಮುಂತಾದವುಗಳಿಂದ ಸಹಕರಿಸಿದ, ಬೆಳಗಾವಿಯ ಶ್ರೀ ಸತ್ಯಧ್ಯಾನತೀರ್ಥ ಜನ್ಮ ಶತಮಾನೋತ್ಸವ ಮತ್ತು ಶ್ರೀ ಸತ್ಯಪ್ರಮೋದತೀರ್ಥ ಸಿಂಹಾಸನಾರೋಹಣ ರಜತ ಮಹೋತ್ಸವ ಸಮಿತಿ, ಶ್ರೀ ಉತ್ತರಾದಿಮಠದ ದಿವಾಣರಾದ, ಪೂ. ಪಂ. ಗೋಪಾಲಾಚಾರ್ಯ ಗಂಗೂರ, ಪಂ ಕೃಷ್ಣಾಚಾರ್ಯ ವಾಸುದೇವಾಚಾರ್ಯ ಪಾಚ್ಛಾಪೂರ, ಪಂ. ಅಶ್ವತ್ಥಾಮಾ-ಚಾರ್ಯ ಮಾಹುಲಿ, ಪಂ. ರಾಮಾಚಾರ್ಯ ಜೋಶಿ, ಪಂ. ಗೋವರ್ಧನಾ-ಚಾರ್ಯ ಗಲಗಲಿ, ಸರ್ವಶ್ರೀ ಸಿ. ಹನುಮಂತರಾವ್, ಡಾ|| ಶ್ರೀನಿವಾಸ ಹಾವ-ನೂರ, ಆರ್. ಶ್ರೀನಿವಾಸರಾವ್, ಪಿ. ಎಸ್. ನಾರಾಯಣಮೂರ್ತಿ, ಪ್ರಾಧ್ಯಾಪಕ, ಗುರುಪ್ರಸಾದ ಮೂರ್ತಿ, ಪಿ. ಆರ್. ರಾಯಚೂರ ಮತ್ತು ಪರೋಕ್ಷ ಹಾಗೂ ಅಪರೋಕ್ಷದಲ್ಲಿ ಸಹಾಯ ಮಾಡಿದ ಎಲ್ಲ ಅಭಿಮಾನಿ ಮಹನೀಯರಿಗೆ ವಿದ್ಯಾಪೀಠವು ಕೃತಜ್ಞವಾಗಿದೆ.

ಮುದ್ರಣವನ್ನು ಕಲೆಯನ್ನಾಗಿಸಿ ಈ ವಿಷಯದಲ್ಲಿ ವಿಶೇಷ ಆಸ್ಥೆವಹಿಸಿ ಹೊತ್ತಿಗೆಯನ್ನು ಅಲ್ಪ ಕಾಲದಲ್ಲಿಯೇ ಹೊರತಂದ ವಿದ್ಯಾಪೀಠದ ಅಭಿಮಾನಿಗಳ ಲ್ಲೊಬ್ಬರಾದ, ವಿಜಯಲಕ್ಷ್ಮೀ ಆರ್ಟ ಪ್ರಿಂಟರ್ಸದ ಮಾಲಿಕರಾದ ಶ್ರೀ ಮೋಹನ ಚಿದಂಬರ ಕುಲಕರ್ಣಿ ಹಾಗೂ ಬಂಧುಗಳು ಮತ್ತು ಮುದ್ರಣಾಲಯದ ಕಾರ್ಯ ಕರ್ತೃರು ನಿಜವಾಗಿಯೂ ಅಭಿನಂದನಾರ್ಹರು. ಇವರೆಲ್ಲರಿಗೂ ಶ್ರೀ ದಿಗ್ವಿಜಯ ರಾಮದೇವರ, ಶ್ರೀ ಶ್ರೀಗಳವರ ಪೂರ್ಣಾನುಗ್ರಹವಾಗಲೆಂದು ಪ್ರಾರ್ಥಿಸುತ್ತೇನೆ.

ಇಂದಿನ ಕಾಲದಲ್ಲಿ ಪುಸ್ತಕ ಪ್ರಕಾಶನವು ದೊಡ್ಡ ಮೊತ್ತದ ಖರ್ಚಿನ ಕಾರ್ಯ ವಾಗಿದೆ. ಆದರೂ ವಿದ್ಯಮಾನ ಶ್ರೀ ಶ್ರೀಪಾದಂಗಳವರ ಪರಮಾನುಗ್ರಹ, ಜನತೆಯ ಆಗ್ರಹದ ಬೇಡಿಕೆ, ಇದರಿಂದಾಗಿ ಈ ಶತಾಬ್ದಿ ಉತ್ಸವದ ಸುಅವಸರದಲ್ಲಿ ತನ್ನ ಆದ್ಯ ಕರ್ತವ್ಯವೆಂಬ ದೃಷ್ಟಿಯಿಂದ ವಿದ್ಯಾಪೀಠವು ಈ ಬ್ರಹತ್ ಕಾರ್ಯವನ್ನು ಕೈಯಲ್ಲಿ ತೆಗೆದುಕೊಂಡಿದೆ. ಅಭಿಮಾನಿಗಳಾದ ಆಸ್ತಿಕ ವಾಚಕರು ಇದನ್ನು ಹೃತ್ಪೂರ್ವಕ ಆದರಿಸಿ, ಲಾಭ ಪಡೆದು ಸಹಕರಿಸುವಿರಾಗಿಯೂ, ಇಂಥ ಅನೇಕ ಮೌಲಿಕ ಪ್ರಕಾ ಶನಗಳನ್ನು ಶೀಘ್ರದಲ್ಲಿಯೇ ಹೊರತರುವದಕ್ಕಾಗಿ ಅನುವು ಮಾಡುವಿರಾಗಿಯೂ ದೃಢವಾಗಿ ನಂಬಿದ್ದೇನೆ.

ವಿಜಯಾದಶಮೀ,
ಶ್ರೀ ಶಕೆ ೧೯೦೪
೦೭–೧೦–೧೯೮೨

ಸಜ್ಜನ ವಿಧೇಯ,
**ಹೆಚ್. ಎಸ್. ಕೃಷ್ಣಸ್ವಾಮಿರಾವ್**
ಗೌರವ ಪ್ರಧಾನ ಕಾರ್ಯದರ್ಶಿಗಳು,
ಸತ್ಯಧ್ಯಾನ ವಿದ್ಯಾಪೀಠ, ಮುಂಬಯಿ.

|| ಶ್ರೀ ದಿಗ್ವಿಜಯರಾಮೋ ವಿಜಯತೇತರಾಮ್ ||
ಶ್ರೀ ಶ್ರೀಮತ್ಪರಮಹಂಸೇತ್ಯಾದಿ ಬಿರುದಾಂಕಿತ
ಶ್ರೀಮದುತ್ತರಾದಿಮಠಾಧೀಶರಾದ ಶ್ರೀಶ್ರೀಸತ್ಯಧ್ಯಾನಶ್ರೀಪಾದಂಗಳವರ
ಮಹಾಸನ್ನಿಧಾನದಲ್ಲಿ ಮೈಸೂರಿನ ವೇದಾಂತವಿಮರ್ಶಿನೀ ಸಭೆಯಲ್ಲಿ
(ತಾ|| ೧೯-೬-೩೦ ರಂದು) ಚರ್ಚಿಸಿದ

# ವಿಷಯಗಳ ಮುಖ್ಯಸಾರಾಂಶವು.



## ಮಿ|| ವಿ. ಸುಬ್ರಹ್ಮಣ್ಯ ಅಯ್ಯರ್ ರಿ|| ಯೂನಿವರ್ಸಿಟಿ ರಿಜಿಸ್ಟ್ರಾರವರು ಶ್ರೀ ಶ್ರೀಗಳವರಲ್ಲಿ ಮಾಡಿದ ಪ್ರಶ್ನೆ.



೧ ಪ್ರಶ್ನೆ—ಸ್ವಾಮೀ ! ಪಾಠಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ಧರ್ಮೋಪದೇಶ ಮಾಡಬೇಕಲ್ಲವೆ ?

**ಉತ್ತರ**—ಅವಶ್ಯ ಆಗಲಿ. ಇದು ನಮಗೆ ಅಪೇಕ್ಷಿತವೇ ! ಮುಜರಾಯಿ ಸೆಕ್ರೆಟರಿಯವರಿಗೆ ತಿಳಿಸಿದ್ದೇವೆ. ಪ್ರಭುಗಳಿಗೂ ತಿಳಿಸಿ, ಮಠದಿಂದ ತದರ್ಥವಾಗಿ ಉತ್ತಮರಾದ ವಿದ್ವಾಂಸರನ್ನು ಕಾಲೇಜು ಹೈಸ್ಕೂಲುಗಳಲ್ಲಿ ನೇಮಿಸಿ ನಿಮ್ಮ ಉದ್ದೇಶ ವನ್ನು ನೆರವೇರಿಸಬೇಕೆಂದಿದ್ದೇವೆ

೨ ಪ್ರಶ್ನೆ—ಸ್ವಾಮೀ ! ಪರಸ್ಪರ ಭಿನ್ನವಾದ ಅನೇಕ ಮತದವರಿರುವಾಗ ಅವರೆಲ್ಲರಿಗೂ ಏಕರೀತಿಯಿಂದ ಉಪದೇಶ ನಡೆಯುವುದು ಹೇಗೆ ?

**ಉತ್ತರ**— ಅವರವರ ಮತಪ್ರವರ್ತಕರು ಅವರವರ ವಿದ್ವಾಂಸರಿಂದ ತಮ್ಮ ಧರ್ಮೋಪದೇಶವನ್ನು ತಮ್ಮ ಜನರಿಗೆ ಮಾಡಿಸಬಹುದು.

೩ ಪ್ರಶ್ನೆ—ಹಾಗೆ ಏಕೆ ಮಾಡಬೇಕು ? ಸರ್ವಸಾಧಾರಣವಾದ ಧರ್ಮೋಪ ದೇಶವನ್ನು ಶಾಲೆಗಳಲ್ಲಿ ಮಾಡಿಸಬಹುದಲ್ಲ ?

**ಉತ್ತರ**—ಅದು ಅಸಾಧ್ಯವು; ಲೋಕದಲ್ಲಿ ಸರ್ವಮತಸಾಧಾರಣವಾದ ಧರ್ಮವೇ ಇಲ್ಲ ಹೇಗೆಂದರೆ:—ಸಂಧ್ಯಾವಂದನ ಶಬ್ದ ಪರ್ಯಾಲೋಚನೆಯಿಂದಲೇ ವೇದಾಂತ ವಿಚಾರವು ಕರ್ಮಾಚರಣಕ್ಕೂ ಸಹ ಆವಶ್ಯಕವೆಂತಲೇ ಹೇಳಬೇಕು. ಸಂಧ್ಯಾವಂದನವೆಂದರೆ ಭಕ್ತಿಪೂರ್ವಕ ಸಂಧ್ಯಾನಾಮಕ ಪರಮಾತ್ಮನ ಅಭಿವಂದ ನವು. ಅಭಿವಂದನ ಕಾರ್ಯಕ್ಕೆ ದ್ವೈತಭಾವವೇ ಇರಬೇಕಾಗುತ್ತದೆ. ಅದ್ವೈತ ಮತ

ರೀತ್ಯಾ "ಮತ್ತಸ್ತ್ವಂ ಉತ್ಕೃಷ್ಟಃ" ಎಂಬ ಅರ್ಥವುಳ್ಳ ಅಭಿವಂದನವು ಹೇಗೆ ತಾನೆ ಕೂಡುತ್ತದೆ ? ಆದುದರಿಂದ ಏನು ಮಾಡಬೇಕಾದರೂ ವೇದಾಂತ ವಿಚಾರ ಮಾಡಿ ತತ್ವನಿರ್ಣಯ ಮಾಡಿಕೊಳ್ಳಬೇಕು. ಛಾಂದೋಗ್ಯ ಶೃತಿಯಲ್ಲಿ ತತ್ವಜ್ಞಾನಿ ಕೃತಕರ್ಮವು ಅನಂತವಾಗುವದೆಂದೂ, ತದ್ರಹಿತಕರ್ಮವು ನಿಷ್ಫಲವಾಗುವದೆಂದೂ ಸ್ಪಷ್ಟವಾಗಿ ಹೇಳಿದೆ. ಹೀಗೆ ವೇದಾಂತ ವಿಚಾರವೇ ಸರ್ವ ಕರ್ಮಾಪೇಕ್ಷಿಯಾಗಿ ಪ್ರಧಾನವಾದುದರಿಂದಲೇ ತದರ್ಥವಾಗಿ ನಾವೂ ಸಹ ದೀಕ್ಷಾ ವಹಿಸಿ ಸಜ್ಜನರ ಉಪ ಕಾರಾರ್ಥವಾಗಿ ದೇಶದೇಶಾಂತರಗಳಲ್ಲಿ ಸಂಚಾರ ಮಾಡುತ್ತಲಿದ್ದೇವೆ.

೪ **ಪ್ರಶ್ನೆ**—ಸ್ವಾಮೀ ! ಕೆಲವರು ದೇಹಾತಿರಿಕ್ತ ಚೇತನರೇ ಇಲ್ಲ, ಜನ್ಮಾಂತರವೂ ಇಲ್ಲ, ಹೀಗಿರುವಲ್ಲಿ ಸತ್ಕರ್ಮಾನುಷ್ಠಾನದಿಂದ ಫಲವೇನು ಎಂದು ಅನ್ನುತ್ತಿರುವರು. ಇದಕ್ಕೆ ಸಮಾಧಾನವೇನು ?

**ಉತ್ತರ**— ಪಶ್ವಾದಿಗಳಲ್ಲಿಯೂ ಜನಿಸಿದ ಉತ್ತರ ಕ್ಷಣದಲ್ಲಿಯೇ ಸ್ತನ್ಯ ಪಾನಾದಿ ಪ್ರವೃತ್ತಿಯು ಶಿಕ್ಷಣವಿಲ್ಲದೇ ಕಂಡಿದೆ. ಈ ಪ್ರವೃತ್ತಿಯು "ಸ್ತನ್ಯಪಾನಂ ಮದಿಷ್ಟಸಾಧನಂ" ಎಂದರೆ ಸ್ತನ್ಯಪಾನದಿಂದ ನನಗೆ ಸುಖವಾಗುತ್ತದೆ ಎಂಬ ಜ್ಞಾನ ಪೂರ್ವಕವಾದುದು. ಈ ಜ್ಞಾನವು ಅದು ಸ್ತನ್ಯಪಾನಕ್ಕೆ ಪ್ರಾರಂಭದಲ್ಲಿಯೇ ಹುಟ್ಟಿರಬೇಕಾದುದರಿಂದ ಹಿಂದಿನ ಜನ್ಮದ ಸ್ತನ್ಯಪಾನದ ಅನುಭವದಿಂದಲೇ ಹುಟ್ಟಿರಬೇಕೇ ಹೊರತು ಈಗಿನದಲ್ಲ. ಇದರಿಂದ ದೇಹಾಂತರವೂ ಆ ದೇಹಾಂತರದಲ್ಲಿ ಉತ್ಪನ್ನವಾದ ಕರ್ಮಾನುಭವಜನಿತ ಸಂಸ್ಕಾರಕ್ಕೆ ಆಶ್ರಯನಾದ ಒಬ್ಬ ಚೇತನನೂ ಇದ್ದೇ ತೀರಬೇಕೆಂದು ಅನುಮಾನ ಪ್ರಮಾಣದಿಂದ ಸಿದ್ಧವಾಗುತ್ತದೆ.

೫ **ಪ್ರಶ್ನೆ**—"ಸ್ತನ್ಯಪಾನಂ ಮದಿಷ್ಟಸಾಧನಂ" ಎಂಬ ಜ್ಞಾನವು ಜನ್ಮಾಂತರದಿಂದ ಬಂದದ್ದೆಂದು ಅಪ್ಪಣೆ ಕೊಡಿಸಿದಿರಿ; ಎವಲ್ಯೂಷ್ರ್ ಥಿಯರಿ—(Evolution Theory) ಹೇಳುವವರು ಕೂಸಿಗೆ ದೇಹತದ್ಗತ ರಕ್ತಮಾಂಸಾದಿಗಳು ಮಾತಾ ಪಿತೃಗಳ ಶುಕ್ಲಶೋಣಿತದಿಂದ ಹೇಗೆ ಹುಟ್ಟುತ್ತವೆಯೋ ಹಾಗೇ ತಂದೆಯ ಜ್ಞಾನವೂ ಕೂಡ ಶಿಶುವಿಗೆ ಬರುತ್ತದೆ ಎಂದು ಹೇಳುತ್ತಾರೆ. ಸಂಸ್ಕಾರ ಮತ್ತು ಜನ್ಮಾಂತರಗಳ ಕಲ್ಪನೆಯು ಏತಕ್ಕೆ ?

**ಉತ್ತರ**—ತಂದೆ-ತಾಯಿಗಳ ಬುದ್ಧಿಶಕ್ತಿಯು ಪ್ರಾಯೇಣ ಶಿಶುವಿಗೆ ಬರುವುದೆಂದು ಹೇಳಬಹುದು. ಪರಂತು ಜ್ಞಾನವು ತನ್ನ ಇಂದ್ರಿಯಾದಿ ಕರಣಗಳಿಂದಲೇ ಉಂಟಾಗಬೇಕೆಂದು ಹೇಳಬೇಕು. ಯಥಾ— ತಂದೆಯು ತಾನು ಸ್ತನ್ಯಪಾನ ಮಾಡಿ ಇದು ಸುಖಸಾಧನವೆಂದು ತಿಳಿದರೆ ಒಂದಾವರ್ತಿಯೂ ಸ್ತನ್ಯಪಾನ ಮಾಡದ ಶಿಶುವಿಗೆ ಆ ಜ್ಞಾನವು ಬರಲಿಕ್ಕೆ ಕಾರಣವಿಲ್ಲ. ಏಕೆಂದರೆ— ಜ್ಞಾನವೆಂಬುದು

**ಸ್ವ**ಕರಣ(ಸಾಧನ) ಜನ್ಯವಾದ ಪದಾರ್ಥವು. ತಂದೆಯ ಕರಣ (ಇಂದ್ರಿಯ) ದಿಂದ ಶಿಶುವು ಜ್ಞಾನವಂತನಾಗಲಾರನು. ತಂದೆಯ "ಸ್ತನ್ಯಪಾನಂ ಮದಿಷ್ಟಸಾಧನಂ" ಎಂಬ ಜ್ಞಾನವು ಗರ್ಭಸ್ಥ ಶಿಶುವಿಗೆ ಪ್ರತ್ಯಕ್ಷವಲ್ಲ ಅನುಮಾನದಿಂದಲೂ ವೇದ್ಯವಲ್ಲ. ಗರ್ಭಸ್ಥ ಶಿಶುವಿಗೆ ಉಪದೇಶವು ನಡೆಯಲಾರದುದರಿಂದ ಶಬ್ದದಿಂದಲೂ ಬಂದುದಲ್ಲ. ಆದುದರಿಂದ ಶಿಶುವು ತನ್ನ ಜನ್ಮಾಂತರದ ದೇಹದಲ್ಲಿದ್ದ ಕರಣಗಳಿಂದ ಮಾಡಿದ ಸ್ತನ್ಯಪಾನದ ಅನುಭವಜನಿತ ಸಂಸ್ಕಾರದಿಂದಲೇ ಹುಟ್ಟಿದ ತತ್ಕ್ಷಣ "ಸ್ತನ್ಯಪಾನಂ ಮದಿಷ್ಟಸಾಧನಂ" ಎಂದು ಅನುಭವಿಸುತ್ತಾನೆ. ಆದುದರಿಂದಲೇ ಒಂದೊಂದು ಸಾರಿ ತಂದೆಯು ದಡ್ಡನಾದರೂ, ಕುರುಡನಾದರೂ ಶಿಶುವು ಮೇಧಾವಿಯಾಗಿಯೂ ಚಕ್ಷುಷ್ಮಂತನಾಗಿಯೂ ಆಗುತ್ತಾನೆ ಅತಏವ ಶಿಶುವು ತನ್ನ ಜನ್ಮಾಂತರದ ಸಂಸ್ಕಾರದಿಂದಲೇ ಪ್ರಥಮ ಸ್ತನ್ಯಪಾನದಲ್ಲಿ ಪ್ರವೃತ್ತನಾಗಬೇಕೆಂದು ಹೇಳಬೇಕು. ಹೆರಿಡಿಟರಿ ಥಿಯರಿ ಹೇಳುವವರ ಮಾತು ಇಷ್ಟು ಮಾತ್ರ ನಿಜ. ಜ್ಞಾನೋತ್ಪತ್ತಿಗೆ ಪ್ರಯೋಜಕವಾದ ಮನಃಶಕ್ತಿಯು ತಂದೆತಾಯಿಗಳಿಂದ ಪ್ರಾಯೇಣ ಬರುವುದುಂಟು.

೬ **ಪ್ರಶ್ನೆ**—ಜ್ಞಾನವು ಸ್ವಕರಣಜನ್ಯವೆಂದು ಅಪ್ಪಣೆ ಆಯಿತು. ಹಾಗೆ ಏತಕ್ಕೆ ಹೇಳಬೇಕು ? ತಂದೆಯ ದೇಹಗತಪರಮಾಣುಗಳೇ ಶಿಶುವಿನ ದೇಹವಾಗಿ ಪರಿಣಮಿಸಿದಂತೆ ತಂದೆಯ ಜ್ಞಾನವೇ ಸಾಕ್ಷಾತ್ತಾಗಿ ಶಿಶುವಿನ ಜ್ಞಾನವಾಗಿ ಪರಿಣಮಿಸಿದೆಯೆಂದು ಹೇಳಬಹುದಲ್ಲ ?

**ಉತ್ತರ**–ಹಾಗಲ್ಲ–ಜ್ಞಾನವೆಂಬುದು ರಸರಕ್ತಾದಿಗಳಂತೆ ಅಲ್ಲ. "ಇದಂ ರೂಪಂ" ಎಂಬ ಜ್ಞಾನವು ಹುಟ್ಟಬೇಕಾದರೆ ತನ್ನ ಕಣ್ಣಿನಿಂದಲೇ ಆಗಬೇಕು. ಇದು ಶಬ್ದವು ಎಂಬ ಜ್ಞಾನವು ಕಿವಿಯಿಂದಲೇ ಆಗಬೇಕು. ಹೀಗೆ ಸ್ತನ್ಯಪಾನವು ಸುಖ ಸಾಧನವು ಎಂಬ ಜ್ಞಾನವೂ ಕೂಡ ಜ್ಞಾನಕರಣ (ಅನುಮಾನ) ದಿಂದಲೇ ಆಗಬೇಕು. ತಂದೆಯ ಜ್ಞಾನವು ಶಿಶುವಿನಲ್ಲಿ ಪರಿಣಮಿಸುವುದಿಲ್ಲ. ಅನ್ಯಥಾ ಕಣ್ಣುಳ್ಳ ತಂದೆಯ ಕುರುಡ ಶಿಶುವಿಗೂ ರೂಪಜ್ಞಾನವಾಗಬೇಕು.

೭ **ಪ್ರಶ್ನೆ**—ಜ್ಞಾನಕ್ಕೆ ಕರಣವು ಆವಶ್ಯಕವಿಲ್ಲ. ಅದು ಕನ್ನಡಿಯಂತೆ ಒಂದು ಪದಾರ್ಥವು. ರಸರಕ್ತಾದಿಗಳಂತೆ ಶಿಶುವಿಗೆ ತಂದೆಯಿಂದ ಹರಿದುಬರುತ್ತದೆ. ಅಷ್ಟೇ ಅಲ್ಲ, ಜ್ಞಾನವೇ ದೇಹವು. ದೇಹವೇ ಜ್ಞಾನವು. ದೇಹಾತಿರಿಕ್ತವಾದ ಜ್ಞಾನವಿದ್ದರಲ್ಲವೆ ತಂದೆಯಿಂದ ಮಗುವಿಗೆ ಬಂತೋ ಇಲ್ಲವೋ ಎಂದು ಸಂದೇಹ. ಈಗ ಆ ರೀತಿ ಸಂದೇಹಕ್ಕೆ ಅವಕಾಶವಿಲ್ಲ, ಶಿಶುವಿಗೆ ದೇಹ ಬಂದಾಗಲೇ ದೇಹಾಭಿನ್ನವಾದ ಜ್ಞಾನವೂ ಬಂದೇ ಇರುತ್ತದೆ. "ಸರ್ವಂ ಜ್ಞಾನಮಯಂ" ಮತ್ತು ಅನುಮಾನ ಪ್ರಮಾಣದಿಂದ ದೇಹಾಂತರವನ್ನೂ ಚೇತನವನ್ನೂ ದೇಹದಿಂದ ಭಿನ್ನವಾದ ಜ್ಞಾನ

ವನ್ನೂ ಸಾಧನ ಮಾಡುವುದಕ್ಕೆ ಆಗುವುದಿಲ್ಲ. ಕ್ಯಾಂಟ್ (Kant) ಸಾಹೇಬನು ಹೇಳುವದೇನಂದರೆ—ಪ್ರತ್ಯಕ್ಷ ಯೋಗ್ಯವಾದ ಭೌತಿಕ ಪ್ರಪಂಚದಲ್ಲೇ ಧೂಮವನ್ನು ನೋಡಿ ಅನುಮಾನದಿಂದ ವಹ್ನಿಯನ್ನು ಸಾಧಿಸುವಂತೆ ಒಂದರಿಂದ ಮತ್ತೊಂದನ್ನು ಊಹಿಸಬಹುದು. ಪ್ರತ್ಯಕ್ಷಕ್ಕೆ ಕಾಣದ ಗರ್ಭಸ್ಥವಾದ ಶಿಶುವಿನ ಇಷ್ಟಸಾಧನತ್ವ ಜ್ಞಾನವು ಅತೀಂದ್ರಿಯವಾದುದರಿಂದ ಅನುಮಾನ ಪ್ರಮಾಣದಿಂದ ನಿರ್ಣಯ ಮಾಡಲ್ಪಡತಕ್ಕದ್ದಲ್ಲವಾಗಿ ತೋರುತ್ತದೆ.

ಶ್ರೀಶ್ರೀಗಳವರು—"ಸರ್ವಂ ಜ್ಞಾನಮಯಂ" ಎನ್ನುವದರಿಂದ ನಿಮ್ಮ ಆಶಯ ಏನು ?

ಸು— ಇದು ಘಟವೆಂಬ ಜ್ಞಾನದಲ್ಲಿ ಘಟ ಬೇರೆ ಜ್ಞಾನ ಬೇರೆ ಎಂದು ಹೇಳುವದಕ್ಕಾಗುವದಿಲ್ಲ. ಏಕೆಂದರೆ ಸೈನ್ಸ್ (Science) ತಿಳಿದವರು ಹೇಳುವದು ಏನೆಂದರೆ—ಕಣ್ಣಿನಲ್ಲಿ ಫೋಟೋ ಉತ್ಪನ್ನವಾಗಿ ಅದು ಮೆದುಳಿಗೆ ಹೋಗಿ ಅಲ್ಲಿ ಒಂದು ಬಗೆ ಪರಿಣಾಮವಾಗಿ ಆಕಾರ ವಿಶೇಷಗಳುಳ್ಳ ಚಿತ್ರವಾಗುತ್ತದೆ· (Mental Image) ಆ ಚಿತ್ರವೇ ನಮಗೆ ಗೋಚರವಾಗುವದೇ ಹೊರತು ಇನ್ನು ಘಟ ವಾವುದು ? ಘಟವು ಭೂಮಿಯ ಮೇಲಿದೆ. (Mental Image) ಎಂಬುದು ದೇಹದ ಒಳಗೆ ಇದೆಯಲ್ಲಾ ಎನ್ನುವ ಹಾಗಿಲ್ಲ. ಘಟವು ಹೊರಗಿದೆ ಎಂಬುದು ಸಹ ಒಂದು (Mental Image) ಅಲ್ಲವೆ? ಈ ರೀತಿ ಬಾಹ್ಯತ್ವ ಜ್ಞಾನದಿಂದ ಸರ್ವವೂ ಮೆದುಳು ಪರಿಣಾಮವೆ ಹೊರತು ಜ್ಞಾನಾತಿರಿಕ್ತವಾದ ವಸ್ತುವಿಲ್ಲ. ಆ ಜ್ಞಾನವು (Mental Image) ಬರುತ್ತದೆ. ಆದ್ದರಿಂದ ಸರ್ವಂ ಜ್ಞಾನಮಯಂ ಎಂದು ಅರಿಕೆ ಮಾಡಿದ್ದೇನೆ.

ಶ್ರೀ ಶ್ರೀಗಳವರು— ಇದು ನಿಂದಿತವಾದ ವಿಜ್ಞಾನವಾದಕ್ಕೆ ಸದೃಶವು. ಆಹಾ! ಹಾಗಿದ್ದರೆ ನಾವು ಕಣ್ಣು ಮುಚ್ಚಿ ಮಲಗಿ ನಿದ್ರಿಸುವಾಗ (Mental Image) ರೂಪವಾದ ಘಟಾದಿ ಜ್ಞಾನವು ಇಲ್ಲವಾದುದರಿಂದ ಘಟಪಟಾದಿ ಸರ್ವ ವಸ್ತುಗಳು ಇಲ್ಲದೇ ಹೋಗಬೇಕಾದೀತು. ಮೃತನಾದರಂತೂ ಸರ್ವವು ಶೂನ್ಯವೇ ಆಗಬೇಕು. ಹಾಗಿಲ್ಲ. ಕಿಂಚ ಮೆದಳು ಪರಿಣಾಮವು ಯಂತ್ರದಿಂದ ಗೋಚರವಾಗುತ್ತದಾದ್ದರಿಂದ ಅದು ಜ್ಞಾನವಲ್ಲ—ಜ್ಞಾನವು ಅದಕ್ಕಿಂತ ಭಿನ್ನವಾದ ಅತೀಂದ್ರಿಯ ವಸ್ತುವು. (Mental Image) ಆಗೋಣವೆಂಬುದು ಜ್ಞಾನೋತ್ಪತ್ತಿಗೆ ಪ್ರಯೋಜಕವಾದ ಮನಸ್ಸಿನ ಒಂದು ಕ್ರಿಯಾಶಕ್ತಿಯು. ಕಿಂಚ ನೀವು ಜ್ಞಾತೃಜ್ಞಾನಜ್ಞೇಯ ಇವು ಮೂರನ್ನೂ ಏಕೀಕರಿಸಿ ಬಿಟ್ಟಿರಿ. ಪುರುಷನ ಫೋಟೋ (Photo) ಪುರುಷನನ್ನು ಗುರಿತಿಸುವದಕ್ಕೆ ಸಾಧಕವೇ ಸರಿ. ಆದರೂ ಅದು

ಹೇಗೆ ಪುರುಷನಲ್ಲವೋ ಹಾಗೆ ಘಟದ (Mental Image) ಘಟಜ್ಞಾನಕ್ಕೆ ಸಾಧಕವೇ ಹೊರತು ಘಟವೇ ಅಲ್ಲ—ನಾನು ಘಟವನ್ನು ತಿಳಿಯುತ್ತೇನೆ ಎಂಬಲ್ಲಿ ಘಟವು ವಿಷಯವಾಗಿಯೂ ನಾನು ಎಂಬವನು ಕರ್ತನಾಗಿಯೂ ತಿಳಿಯೋಣ ವೆಂಬುದೇ ಜ್ಞಾನಸ್ವರೂಪವಾಗಿಯೂ ಮೂರು ಭಿನ್ನಪದಾರ್ಥಗಳು ಸರ್ವರ ಅನು ಭವದಲ್ಲಿವೆ.



## II

ತಾ॥ 20-6-1930 ರಲ್ಲಿ

### ಶ್ರೀಮನ್ಮಹಾರಾಜರವರ ಕಾಲೇಜ್ ಇಂಗ್ಲಿಷ್ ಟ್ಯೂಟರ್ ಮಿ॥ ಎಚ್. ಸುಬ್ಬರಾವ್ ಎಂ.ಎ., ರವರ ಪ್ರಶ್ನೆ



೧ **ಪ್ರಶ್ನೆ**—ಸ್ವಾಮೀ! ಪ್ರತ್ಯಕ್ಷವನ್ನೇ ಪ್ರಮಾಣವಾಗಿ ಇಟ್ಟುಕೊಂಡು ಇಹಲೋಕದಲ್ಲಿರುವವರೆಗೂ ಸುಖವಾಗಿ ಬದುಕುವದೇ ಧರ್ಮವೆಂದು ಅನೇಕರು ನಂಬಿದ್ದಾರೆ. ಈ ವಿಷಯದಲ್ಲಿ ಅಪ್ಪಣೆ ಏನು ?

**ಉತ್ತರ**— ಇದು ಚಾರ್ವಾಕಮತ. ನಾವು ಇನ್ನು ತತ್ವವಿಚಾರವನ್ನು ಮೂಲದಿಂದ ಪ್ರಾರಂಭಿಸಬೇಕಾಯಿತು. ಪ್ರತ್ಯಕ್ಷ ಅಂದರೆ ಚಕ್ಷುರಾದಿ ಪಂಚ ಜ್ಞಾನೇಂದ್ರಿಯಗಳೇ ಪ್ರಮಾಣಗಳು ಅಂದರೆ ಜ್ಞಾನಸಾಧನಗಳು. (Standards of Judgement) ಎಂದು ಹೇಳುವ ಚಾರ್ವಾಕನು "ಮೇ ಮಾತಾ ವಂಧ್ಯಾ" ಎಂದು ಹೇಳುವವನಂತೆ ವ್ಯಾಹತ ಭಾಷಿಯಾಗುತ್ತಾನೆ. ಹೇಗೆಂದರೆ ಪ್ರತ್ಯಕ್ಷವೇ ಪ್ರಮಾಣವು ಎಂದು ಚಾರ್ವಾಕನು ಹೇಳಿದ ನಂತರ ತನ್ನ ಶಿಷ್ಯನಿಗೆ ಆ ಜ್ಞಾನದ ಉತ್ಪತ್ತಿಯಾಯಿತೋ ಇಲ್ಲವೋ ಎಂಬುದನ್ನು ಹೇಗೆ ತಿಳಿಯುತ್ತಾನೆ? ಜ್ಞಾನವು ಪಂಚೇಂದ್ರಿಯ ಗೋಚರವಲ್ಲವಾದುದರಿಂದ ಪ್ರತ್ಯಕ್ಷದಿಂದ ತಿಳಿಯಲಾರನು. ಆದ್ದರಿಂದ ಶಿಷ್ಯನ ಮುಖವಿಕಾಸಾದಿಗಳಿಂದ ಅಥವಾ "ಗೊತ್ತಾಯಿತು" ಎಂಬ ಅವನ ಮಾತುಗಳಿಂದ ಶಿಷ್ಯನಲ್ಲಿ ಈ ಜ್ಞಾನವು ಹುಟ್ಟಿತೆಂದು ಅನುಮಿಸುತ್ತಾನೆ. (ಊಹಿಸುತ್ತಾನೆ) ಆದ್ದರಿಂದ ಇವನು ತನ್ನ ಕಾರ್ಯದಲ್ಲಿ ಅನುಮಾನ ಪ್ರಮಾಣ ವನ್ನೊಪ್ಪಿ ಬಾಯಲ್ಲಿ ಮಾತ್ರ ಪ್ರತ್ಯಕ್ಷವೇ ಪ್ರಮಾಣವೆಂದು ಹೇಳಿದರೆ ವ್ಯಾಹತ ಭಾಷಿ ಆಗಲಿಲ್ಲವೆ? ಕಿಂಚ ಚಾರ್ವಾಕನು ಶಬ್ದವನ್ನೂ ಪ್ರಮಾಣವೆಂದು

ಒಪ್ಪಬೇಕು. ಪ್ರ,(ಉಪಸರ್ಗ) ಮಾಙ್, (ಧಾತು) ಲ್ಯುಟ್ (ಪ್ರತ್ಯಯ) ಎಂದು ಪ್ರಮಾಣ ಶಬ್ದದಲ್ಲಿ ಮೂರು ಭಾಗಗಳಿರುತ್ತವೆ. ಪ್ರ=ನಿಜವಾದ, ಮಾ=ಜ್ಞಾನವನ್ನು, ಲ್ಯುಟ್=ಹುಟ್ಟಿಸತಕ್ಕದ್ದು ಅಂದರೆ ಯಥಾರ್ಥ ಜ್ಞಾನವನ್ನು ಹುಟ್ಟಿಸತಕ್ಕದ್ದು ಎಂದು ಪ್ರಮಾಣ ಶಬ್ದಾರ್ಥವು. ಪ್ರಕೃತದಲ್ಲಿ "ಶಬ್ದವು ಪ್ರಮಾಣವಲ್ಲ" ವೆಂಬ ಶಬ್ದದಿಂದ ಜ್ಞಾನವು ಉತ್ಪನ್ನವಾಗುವದೋ ಇಲ್ಲವೋ ಎಂದು ಚಾರ್ವಾಕನನ್ನು ಕೇಳಬೇಕು. ಇಲ್ಲವೆಂದರೆ ಚಾರ್ವಾಕನ ಶಬ್ದವು ಪ್ರಮಾಣವಲ್ಲವೆಂಬ ಮಾತು ಹೋಯಿತು. ಉತ್ಪನ್ನವಾಗುತ್ತದೆಂದರೆ ಶಬ್ದಕ್ಕೆ ಪ್ರಾಮಾಣ್ಯವನ್ನು ಒಪ್ಪಿದಂತಾಯಿತು. ಆದುದರಿಂದ ಪ್ರತ್ಯಕ್ಷ, ಅನುಮಾನ, ಶಬ್ದ ಇವು ಮೂರು ಪ್ರಮಾಣಗಳೆಂತಲೇ ಚಾರ್ವಾಕನೂ ಅವಶ್ಯವಾಗಿ ಒಪ್ಪಬೇಕು.

೨ **ಪ್ರಶ್ನೆ**—ಸ್ವಾಮೀ ! "ಶಬ್ದವು ಪ್ರಮಾಣವಲ್ಲ" ವೆಂಬ ಶಬ್ದದ ಹೊರತು ಇತರ ಶಬ್ದಗಳು ಅಪ್ರಮಾಣವು ಎಂದು ಹೇಳಿದರೆ ಏನು ಅಪ್ಪಣೆಯಾಗುತ್ತೆ ?

**ಉತ್ತರ**—ಪ್ರತ್ಯಕ್ಷವೇ ಪ್ರಮಾಣವು ಎಂಬ ಶಬ್ದವು ಏಕೆ ಪ್ರಮಾಣವಾಯಿತು ? ಬಾಧಕವಿಲ್ಲವಾದುದರಿಂದಲೇ ಪ್ರಮಾಣವೆಂದು ಹೇಳಬೇಕು. ಇದು ಪ್ರತ್ಯಕ್ಷದಲ್ಲೂ ಸಮವು. ಶುಕ್ತಿರಜತಜ್ಞಾನವು ಪ್ರತ್ಯಕ್ಷವಾದರೂ ಅದಕ್ಕೆ ಮುಂದೆ "ಇದು ರಜತವಲ್ಲ" ಎಂಬ ಬಾಧಜ್ಞಾನವು ಬರುವುದರಿಂದ ಅಪ್ರಮಾಣವೆನಿಸುವುದು. ಘಟಜ್ಞಾನವು ಬಾಧಜ್ಞಾನರಹಿತವಾದುದರಿಂದ ಪ್ರಮಾಣವೇ ಸರಿ. ಹಾಗೆಯೇ ಅನುಮಾನದಲ್ಲಿ ಧೂಮವನ್ನು ನೋಡಿ ವಹ್ನಿಯನ್ನು ತಿಳಿಯೋಣವು ಸದನುಮಾನವು ಬಾಷ್ಪಾರೋಪಿತ ಧೂಮದಿಂದ ಅಗ್ನಿಯನ್ನು ನಿಶ್ಚಯ ಮಾಡುವುದು ದುಷ್ಟಾನುಮಾನವು ಶಬ್ದದಲ್ಲೂ ಪರೀಕ್ಷಾ ನಂತರ ಬಾಧಕ ಬಂದಲ್ಲಿ ಆ ಶಬ್ದವು ಅಪ್ರಮಾಣವು. ಹೇಗೆಂದರೆ "ನದೀತೀರೆ ಪಂಚ ಫಲಾನಿ ಸಂತಿ" ಎಂಬ ವಂಚಕನ ವಾಕ್ಯವು ಪ್ರವೃತ್ತ್ಯ ನಂತರ ಫಲ ಸಿಕ್ಕದೆ ಹೋಗುವದರಿಂದ ಅಪ್ರಮಾಣವು. ಸ್ವರ್ಗ ಉಂಟು ನರಕ ಉಂಟೆಂಬ ವೇದವಾಕ್ಯ ಬಾಧಕವಿಲ್ಲವಾದುದರಿಂದ ಪ್ರಮಾಣವು.

೩ **ಪ್ರಶ್ನೆ**—ಸ್ವಾಮೀ ! ಸ್ವರ್ಗ ನರಕಗಳು ಇದ್ದರೆ ಕಣ್ಣಿಗೆ ಕಾಣುತ್ತಿದ್ದವು. ಅವು ಪ್ರತ್ಯಕ್ಷ ಗೋಚರವಲ್ಲವಾದುದರಿಂದ ಅವು ಇಲ್ಲವೆಂದು ಏಕೆ ಹೇಳಬಾರದು ?

**ಉತ್ತರ**—ಇಲ್ಲಿ ತಿಳಿಯಬೇಕಾದ ಸೂಕ್ಷ್ಮ ವಿಷಯವಿದೆ. ಏನೆಂದರೆ—ಚಕ್ಷುರಿಂದ್ರಿಯದಿಂದ ಮಾವಿನಹಣ್ಣಿನಲ್ಲಿರುವ ರಸವು ಗೋಚರವಾಗುವದಿಲ್ಲವಾದ್ದರಿಂದ ಹಣ್ಣಿನಲ್ಲಿ ರಸವು ಇಲ್ಲವೆನ್ನುವುದಕ್ಕಾಗುವುದಿಲ್ಲ. ಹಾಗೆಯೇ ಶ್ರೋತ್ರದಿಂದ ರೂಪವಿಲ್ಲವೆಂದು ಹೇಳುವದಕ್ಕಾಗುವದಿಲ್ಲವಾದ್ದರಿಂದ ಯಾವ ವಿಷಯವು ಯಾವ ಇಂದ್ರಿಯಕ್ಕೆ ಯೋಗ್ಯವೋ ಆ ಇಂದ್ರಿಯಕ್ಕೆ ಆ ವಿಷಯವು ಗೋಚರವಾಗದಿದ್ದರೆ

ಅದು ಇಲ್ಲವೆಂದು ನಿಶ್ಚಯಿಸಬಹುದು. ಪ್ರಕೃತದಲ್ಲಿ ಸ್ವರ್ಗನರಕಗಳು ಪ್ರತ್ಯಕ್ಷ ಯೋಗ್ಯವಲ್ಲವಾದುದರಿಂದ ಆ ವಿಷಯದಲ್ಲಿ (ಅತೀಂದ್ರಿಯ ವಿಷಯದಲ್ಲಿ) ಶಬ್ದವೇ ಪ್ರಮಾಣವು. ಸ್ವರ್ಗನರಕಗಳುಂಟೆಂಬ ಶಬ್ದಕ್ಕೆ ಬಾಧಜ್ಞಾನವು ಇಲ್ಲದುದರಿಂದ ಅದು ಯಥಾರ್ಥವೇ ಸರಿ.

೪ ಪ್ರಶ್ನೆ—ಸ್ವಾಮೀ! ಸ್ವರ್ಗನರಕಗಳು ಅತೀಂದ್ರಿಯಗಳೇ ಅಲ್ಲ; ಅವು ಭೂವಿಶೇಷಗಳು. ಮೈಕ್ರಾಸ್ಕೋಪ್ (Microscope) ಮೊದಲಾದ ಯಂತ್ರಗಳಿಂದಲೂ ಕೂಡ ಕಾಣುವದಿಲ್ಲವಾದ್ದರಿಂದ ಯಾಕೆ ಇಲ್ಲವೆನ್ನಬಾರದು ?

ಶ್ರೀ ಶ್ರೀಗಳವರು—ಹಾಗಾದರೆ ನಮಗೆ ಈ ವಿಷಯಕ್ಕೆ ಉತ್ತರ ಕೊಡಿರಿ. ನಿಮ್ಮ ಮನಸ್ಸಿನಲ್ಲಿರುವ ವಾಕ್ಯಾರ್ಥಜ್ಞಾನವು ಯಾವ ಯಂತ್ರದಿಂದಲೂ ಗೋಚರವಲ್ಲದ್ದರಿಂದ ಏಕೆ ಇಲ್ಲವೆನ್ನಬಾರದು ?

ಉತ್ತರ—ಸು—ಸ್ವಾಮೀ! ಅತೀಂದ್ರಿಯ ಪದಾರ್ಥಗಳು ದ್ವಿವಿಧ. ಕೆಲವು ಪ್ರತ್ಯಕ್ಷ ಯೋಗ್ಯಗಳಾಗಿ ದೂರಸ್ಥತ್ವಾದಿ ದೋಷಗಳಿಂದ ನಮ್ಮ ಕಣ್ಣಿಗೆ ಕಾಣಿಸುವುದಿಲ್ಲ. ಬೊಂಬಾಯಿ ಪಟ್ಟಣವನ್ನು ನಾವು ನೋಡಿರುವದಿಲ್ಲ. ಆದರೆ ಅದರ ವಿಚಾರದಲ್ಲಿ ನನ್ನ ಮಿತ್ರನ ವಾಕ್ಯವು ಪ್ರಮಾಣವಾಗುವದು. ಯಂತ್ರಸಹಾಯದಿಂದ ಅವನ್ನು ತಿಳಿಯಬಹುದು. ಧರ್ಮಾಧರ್ಮಗಳೇ ಮುಂತಾದವು ಸರ್ವಥಾ ಅತೀಂದ್ರಿಯಗಳು. ಅವನ್ನು ಯಾವ ಯಂತ್ರಸಹಾಯದಿಂದಲೂ ನೋಡುವದಕ್ಕಾಗುವದಿಲ್ಲ. ಪ್ರಕೃತದಲ್ಲಿ ಸ್ವರ್ಗನರಕಗಳು ಪ್ರತ್ಯಕ್ಷ ಯೋಗ್ಯವಾದ ಅತೀಂದ್ರಿಯ ವಸ್ತುಗಳು. ಯಂತ್ರಸಹಾಯದಿಂದ ಅವು ಕಾಣದಿದ್ದಲ್ಲಿ ಅವು ಇಲ್ಲವೆಂದೇ ಹೇಳಬೇಕು.

ಉತ್ತರ—ಶ್ರೀ ಶ್ರೀಗಳವರು—ಬೊಂಬಾಯಿಗೂ ಸ್ವರ್ಗನರಕಗಳಿಗೂ ಏನೂ ಭೇದವಿಲ್ಲ. ಒಂದು ವಸ್ತುವು ಪ್ರತ್ಯಕ್ಷವಾಗಬೇಕಾದರೆ ಅದರಲ್ಲಿ ಮಹತ್ವ, ಉದ್ಭೂತರೂಪವತ್ವ, ಸಮೀಪಸ್ಥತ್ವ ಮುಂತಾದ ಅನೇಕ ಸಾಮಗ್ರಿಗಳು ಬೇಕು. ಬೊಂಬಾಯಿ ದೂರದಲ್ಲಿರುವದರಿಂದ ಕಾಣುವದಿಲ್ಲ. ಹಾಗೆ ಸ್ವರ್ಗಾದಿಗಳು ಬಹು ದೂರದಲ್ಲಿವೆ. ತೇಜಃಪ್ರಚುರವಾದ ವಿಲಕ್ಷಣಭೂಮಿಯಾದ್ದರಿಂದಲೂ ಬಹುದೂರದಲ್ಲಿರುವದರಿಂದಲೂ ಮಧ್ಯೆ ವ್ಯವಧಾನಗಳು ಇರುವದರಿಂದಲೂ ಯಂತ್ರಾದಿಗಳಿಂದಲೂ ಸಾಧ್ಯವಾಗದಷ್ಟು ಮೀರಿವೆ. ಪಿಶಾಚದೇಹ ಮತ್ತು ಪೈಶಾಚ ಲೋಕಗಳು ಕಾಣುವದಿಲ್ಲ. ಆದರೂ ಅವು ಇವೆ. ನಾನಾ ವ್ಯಾಪಾರ ಮಾಡುತ್ತವೆ ಎಂದು ಸೈನ್ಸ್ ತಿಳಿದವರು (Scientists) ಹೇಳುತ್ತಾರಷ್ಟೇ.

೫ ಪ್ರಶ್ನೆ—ಸ್ವಾಮೀ! ಬೊಂಬಾಯಿಯನ್ನು ನಾನು ನೋಡದಿದ್ದರೂ ನೋಡಿದ ಆಪ್ತರು ಬಂದು ಹೇಳುವರು. ಸ್ವರ್ಗವನ್ನು ನೋಡಿ ಬಂದವರು ಯಾರು ?

**ಉತ್ತರ**—"ಪ್ರಾಪ್ಯ ಪುಣ್ಯಕೃತಾಂ ಲೋಕಾನುಷಿತ್ವಾ ಶಾಶ್ವತೀಃ ಸಮಾಃ। ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ" ಎಂದು ಸರ್ವಾಪ್ತನಾದ ಶ್ರೀ ಕೃಷ್ಣಸ್ವಾಮಿಯು ಹೇಳಿರುವುದರಿಂದ ಸ್ವರ್ಗಾದಿ ಲೋಕಗಳು ಉಂಟೆಂದು ತಿಳಿಯಬೇಕು. ಅಂದರೆ ಇಷ್ಟು ಮಾತ್ರ ಭೇದ. ಬೊಂಬಾಯಿಗೆ ಹತ್ತು ದಿನದಲ್ಲಿ ಹೋಗಿ ಬರಬಹುದು. ಸ್ವರ್ಗಕ್ಕೆ ಹೋದರೆ ಬಹು ದೂರವಾದುದರಿಂದಲೂ, ಕಾರಣಾಂತರದಿಂದಲೂ ಇನ್ನೊಂದು ಜನ್ಮದಲ್ಲಿಯೇ ಬರುತ್ತಾನೆ ಮತ್ತು ಕೆಲವರು ಸತ್ತು ಹೋಗಿ ಪುನಃ ಬದುಕಿಕೊಂಡಾಗ ಅವರುಗಳು ತಾವು ಮಧ್ಯೆ ಅಂತರಾಳದಲ್ಲಿ ಹೋಗಿದ್ದ ಲೋಕಾಂತರಗಳನ್ನು ವರ್ಣನೆ ಮಾಡಿರುವದು ಅನೇಕರಿಗೆ ಗೊತ್ತಿದೆ, ವಿಚಾರಿಸಿರಿ. ಕಿಂಚ ಇಹಲೋಕದಲ್ಲಿ ಒಬ್ಬ ರಾಜನಾಗಿ ಮತ್ತೊಬ್ಬ ಭೃತ್ಯನಾಗಿದ್ದಾನೆ. ಇಂತಹ ತಾರತಮ್ಯಕ್ಕೆ ಅವರು ಲೋಕಾಂತರದಿಂದ ಬರುವಾಗ ತಂದ ಅದೃಷ್ಟ ವಿಶೇಷವೇ ಕಾರಣ. ಬೇರೆ ಕಾರಣವಿಲ್ಲ. ಆದ್ದರಿಂದ ಸ್ವರ್ಗಾದಿಗಳು ಉಂಟೆಂಬ ವೇದವಾಕ್ಯವು ಯಥಾರ್ಥವು. ಆದಕ್ಕೆ ಬಾಧಕವಿಲ್ಲೆಂದು ತಿಳಿಯಬೇಕು.

೬ **ಪ್ರಶ್ನೆ**—ಸು—ಸ್ವಾಮೀ! ನಿಶ್ಚಯವಾಗಲಿಲ್ಲ ಸ್ವರ್ಗಾದಿಗಳಿಲ್ಲವೆಂಬ ಮತ್ತೊಬ್ಬರ ವಾಕ್ಯವು ಜಾಗರೂಕವಾಗಿರುವಾಗ ವೇದವಾಕ್ಯವೇ ನಿಶ್ಚಾಯಕವೆಂದು ಹೇಗೆ ತಿಳಿಯಬೇಕು?

**ಉತ್ತರ**—"ಧರ್ಮಾಭಾವೋಪಿನೋತೇನ ಪ್ರತ್ಯಕ್ಷಾವಗತೋಭವೇತ್" ಎಂದು ಇರುವದರಿಂದ ಸ್ವರ್ಗಾದ್ಯಭಾವದಲ್ಲಿ ನಿಮಗೆ ನಿಶ್ಚಾಯಕ ಪ್ರಮಾಣಗಳಿಲ್ಲ. ಯಾಕೆಂದರೆ ಸ್ವರ್ಗಾಭಾವವನ್ನು ನೀನು ಪ್ರತ್ಯಕ್ಷದಿಂದ ಹೇಳಲಾಗುವದಿಲ್ಲ. ಯಾವ ಇಂದ್ರಿಯದಿಂದ ಯಾವ ವಸ್ತುವನ್ನು ತಿಳಿಯುವಿಯೋ ಆ ಇಂದ್ರಿಯಕ್ಕೇ ಅದರ ಅಭಾವವು ಗೋಚರವಾಗುವದು. ಪ್ರಕೃತದಲ್ಲಿ ಹಿಂದೆ ಹೇಳಿದ ಕಾರಣಗಳಿಂದ ಸ್ವರ್ಗಾದಿಗಳು ಕಣ್ಣಿಗೆ ಸಾಕ್ಷಾತ್ತಾಗಿ ಕಾಣದುದರಿಂದ ಅವುಗಳ ಅಭಾವವನ್ನು ಘಟಾಭಾವದಂತೆ ಪ್ರತ್ಯಕ್ಷವಾಗಿ ತಿಳಿಯಲಾಗುವದಿಲ್ಲ ಆದ್ದರಿಂದ ಸ್ವರ್ಗಾದ್ಯಭಾವವು ಪ್ರತ್ಯಕ್ಷ ಗೋಚರವಲ್ಲ. ಅನುಮಾನದಿಂದಲೂ ಸ್ವರ್ಗಾದ್ಯಭಾವವನ್ನು ನಿಶ್ಚಯಿಸಲಾಗುವದಿಲ್ಲ. ಮೂರನೆಯದಾದ ಶಬ್ದಪ್ರಮಾಣದಿಂದಲೂ ಸ್ವರ್ಗಾದ್ಯಭಾವವನ್ನು ನಿಶ್ಚಯಿಸಲಾಗುವದಿಲ್ಲ.

೭ **ಪ್ರಶ್ನೆ**—ಸು—ಸ್ವಾಮೀ! ಹಾಗಾದರೆ, ಸ್ವರ್ಗಾದಿಗಳಿಲ್ಲವೆಂಬ ನನ್ನ ವಾಕ್ಯವೇ ಸ್ವರ್ಗಾದ್ಯಭಾವದಲ್ಲಿ ಪ್ರಮಾಣವಾಗಲಿ?

**ಉತ್ತರ**—ನಿನ್ನ ವಾಕ್ಯಕ್ಕೆ ದೌರ್ಬಲ್ಯ, ವೇದವಾಕ್ಯಕ್ಕೆ ಪ್ರಾಬಲ್ಯ ಇವೆರಡನ್ನೂ ವೇದಾಪೌರುಷೇಯತ್ವ ಸಮರ್ಥನ ಮಾಡುವದರ ಮೂಲಕ ತೋರಿಸುತ್ತೇವೆ. ಆದ್ದರಿಂದ ಸ್ವರ್ಗಾದ್ಯಭಾವದಲ್ಲಿ ಪ್ರಮಾಣವಿಲ್ಲ.

೮ **ಪ್ರಶ್ನೆ**—ಸ್ವರ್ಗ ಉಂಟೆಂಬುದರಲ್ಲಿ ನಿಶ್ಚಯವೇನು ? ವೇದವಾಕ್ಯವೇ ನಿಜವೋ ಸುಳ್ಳೋ ಎಂಬ ಸಂಶಯವಿರುವುದಷ್ಟೆ ?

**ಉತ್ತರ**—ಸಂತೋಷ; ನನ್ನ ದಾರಿಗೆ ಬಂದಿರಿ- ಸ್ವರ್ಗ ನರಕಗಳು ಇರಬಹುದು ಎಂಬ ಸಂಶಯವಿದ್ದರೆ ಸಾಕು. ಅಷ್ಟರಿಂದಲೇ ಸ್ನಾನಾದಿ ಸತ್ಕರ್ಮಗಳಲ್ಲಿ ಆಸಕ್ತರಾಗ ಬೇಕು. ಸ್ವರ್ಗ ನರಕಾದಿಗಳಿಲ್ಲದಿದ್ದರೆ ಸತ್ಕರ್ಮಾನುಷ್ಠಾನದಿಂದ ನಷ್ಟವಿಲ್ಲ. ಸ್ವರ್ಗ ನರಕಾದಿಗಳಿದ್ದಲ್ಲಿ ಕರ್ಮಪರಿತ್ಯಾಗದಿಂದ ಮಹಾ ನರಕಪ್ರಾಪ್ತಿರೂಪ ಅನರ್ಥವೂ ಸತ್ಕರ್ಮಾಚರಣೆಯಿಂದ ಮಹಾ ಲಾಭವೂ ಉಂಟು. ದ್ವೈತಾದ್ವೈತ ವಿಚಾರದಲ್ಲೂ ಹೀಗೆಯೇ ಸರಿ. ಹೇಗೆಂದರೆ—ಅದ್ವೈತವೇ ನಿಜತತ್ವವಾದರೆ ದ್ವೈತಭಾವದಿಂದ ಉಪಾಸನೆಮಾಡುವವನಿಗೆ ಹಾನಿ ಏನೂ ಇಲ್ಲ. ನಾನು ಬ್ರಹ್ಮನಿದ್ದೆ, ಈಗಲೂ ಬ್ರಹ್ಮನೇ, ನೂತನವಾಗಿ ಇನ್ನು ಬ್ರಹ್ಮತ್ವಪ್ರಾಪ್ತಿ ಇಲ್ಲ. ಬ್ರಹ್ಮನು ನಿತ್ಯನು. ನಾನೇ ಬ್ರಹ್ಮನು. ದ್ವೈತವು ಸತ್ಯವಾದರೆ ಅದ್ವೈತರೀತ್ಯಾ ಉಪಾಸನೆ ಮಾಡಿದರೆ "ಘಾತಯಂತಿ ಹಿ ರಾಜಾನೋ ರಾಜಾಹಮಿತಿ ವಾದಿನಂ" ಎಂಬ ನ್ಯಾಯಾನುಸಾರ "ಮಾಮಪ್ರಾಪ್ಯೈವ ಕೌಂತೇಯ" ಇತ್ಯಾದಿ ಕೃಷ್ಣನ ವಾಕ್ಯ ರೀತ್ಯಾ ತೊಂದರೆ ಉಂಟು. ಆದ್ದರಿಂದ ದ್ವೈತದಲ್ಲಿ ನಿಶ್ಚಯ ಹುಟ್ಟದಿದ್ದರೂ ದ್ವೈತರೀತಿಯಿಂದಲೇ ಭಗವಂತನ ಉಪಾಸನೆಯು ಉಚಿತವು. ಆದರಂತೆ ಸಂದೇಹವಿದ್ದರೂ ಸತ್ಕರ್ಮಾನುಷ್ಠಾನ ಮಾಡಲೇಬೇಕು. ನಿಷಿದ್ಧಕರ್ಮವನ್ನು ತ್ಯಾಗಮಾಡಬೇಕು.

೯ **ಪ್ರಶ್ನೆ**—ಸ್ವಾಮೀ ! ಈರೀತಿ ಹೇಳಿದರೆ 1930ನೆಯ ಇಸವಿಯವರೆಗೂ ರಚಿತವಾದ ಸರ್ವಮತಗಳೂ ಅನರ್ಥಪ್ರದಗಳು. ವೇದಾದಿಗಳು ಸುಳ್ಳು. ಗಾಂಧಿಯವರ ಸೇವೆಯನ್ನು ಮಾಡಿ ಜನರು ಕೃತಾರ್ಥರಾಗಬೇಕು—ಅನ್ಯಥಾ ಮಹಾ ನರಕ ಪ್ರಾಪ್ತಿಯಾಗುತ್ತದೆ" ಎಂದು ಈ ದಿನ ನಾನು ಒಂದು ಗ್ರಂಥವನ್ನು ರಚಿಸಿದರೆ ಸಂಶಯದಿಂದಲಾದರೂ ಗಾಂಧಿಯವರ ಸೇವೆಯನ್ನೇ ಮಾಡಬೇಕಾಗುತ್ತದೆ. ವೇದಾದಿಗಳ ತಿರಸ್ಕಾರವು ಪ್ರಾಪ್ತವಾಯಿತು. ಈಗ ಏನು ಅಪ್ಪಣೆ ?

**ಉತ್ತರ**—ಸರಿ. ಆದರೂ ನಿಮ್ಮ ಮಾತಿನಲ್ಲಿ ವಿಶ್ವಾಸಮಾಡದಿರುವದಕ್ಕೆ ಕಾಪಟ್ಯ ಅಥವಾ ಭ್ರಾಂತ್ಯಾದಿ ಕಾರಣಗಳನ್ನೂ ವೇದಾದಿ ವಾಕ್ಯಗಳಲ್ಲಿ ವಿಶ್ವಾಸ ಮಾಡುವದಕ್ಕೆ ಕಾರಣವನ್ನೂ ನಾಳೆ ನಿರೂಪಿಸುತ್ತೇವೆ. ವಸ್ತುತಃ ನೀವು ಹೇಳಿದಂಥ ಗ್ರಂಥಗಳನ್ನು ಯಾರೂ ಮಾಡಿಲ್ಲ. ಸಮಾಜದ ಸೇವೆಯನ್ನು ಮಾಡಿ ಎಂದು ಹೇಳುವವರಿದ್ದಾರೆಯೇ ಹೊರತು ಮಾಡದಿದ್ದರೆ ನರಕವಾಗುತ್ತದೆಂದು ಯಾವ ವಾದಿಯೂ ಹೇಳಿಲ್ಲ. ಹಾಗೆ ಹೇಳುವವರಾದರೆ ನರಕವೆಂಬ ಪದಾರ್ಥವು ನಮ್ಮ ವೇದದಿಂದಲೇ ಸಿದ್ಧಿಸುವುದರಿಂದ ಅವರ ಮಾತು ವೇದವೆಂಬ ದಂಡದಿಂದಲೇ ಹತವಾಗುತ್ತದೆ. ಇನ್ನೇನು ಕೇಳುವಿರಿ ?

**೧೦ ಸ್ವಾಮೀ!** ನಮಗೆ ಸ್ವರ್ಗಾದಿಗಳು ಬೇಡ. ಪ್ರಾತ್ಯಕ್ಷಿಕವಾದ ನರಕವು ತಪ್ಪಿದರೆ ಸಾಕು ಇಷ್ಟುಮಾತ್ರಕ್ಕೆ ಪ್ರಯೋಜಕವಾದ ಆವಶ್ಯಧರ್ಮಗಳನ್ನು ಅಪ್ಪಣೆಕೊಡಿಸಬೇಕು. ಸಂಶಯಮಾತ್ರದಿಂದ ನಾವು ಸರ್ವಲೌಕಿಕಪರಿತ್ಯಾಗ ಮಾಡಿ ಕೇವಲ ವೈದಿಕಕರ್ಮಗಳನ್ನು ಮಾಡಲಾರೆವು.

**ಉತ್ತರ**—ಸ್ವರ್ಗಾದಿಗಳು ನಿಶ್ಚಯವಾಗಿಯೂ ಉಂಟು ಎಂಬುದನ್ನು ತೋರಿಸುತ್ತೇವೆ. ಸಂಶಯವಿದ್ದರೂ ಕೂಡ ಸ್ನಾನಸಂಧ್ಯಾವಂದನಾದಿ ವರ್ಣಾಶ್ರಮ ಗಳನ್ನು ಕಾಪಾಡಿಕೊಳ್ಳುವ ಅವಶ್ಯಕರ್ಮಗಳನ್ನು ಮಾಡಬೇಕು. "ನ ಪರದಾರಾನ್ ಗಚ್ಛೇತ್ ನಸುರಾಂಪಿಬೇತ್" ಇತ್ಯಾದಿ ನಿಷಿದ್ಧಕರ್ಮಗಳನ್ನು ಪರಿತ್ಯಾಗಮಾಡಬೇಕು. ಅಷ್ಟೇ ಅಲ್ಲ. ನಾವು ನಾಳೆ ನಿರೂಪಣಮಾಡುವ ರೀತಿಯಲ್ಲಿ ನಿಷ್ಕಾಮನಾಗಿ ವೇದವಾಕ್ಯಪ್ರಾಮಾಣ್ಯದಲ್ಲಿ ನಿಶ್ಚಯಬುದ್ಧಿಯಿಂದ ಸತ್ಕರ್ಮಾನುಷ್ಠಾನ ಮಾಡಿದರೆ ಜ್ಞಾನದ್ವಾರಾ ಮೋಕ್ಷಪ್ರಾಪ್ತಿಯಾಗುತ್ತದೆಂದು ತಿಳಿಯಿರಿ.



# III

ತಾ|| 21—6—1930 ರಲ್ಲಿ

## ಪ್ರಶ್ನೆಮಾಡುವವರು ಮಿ|| ಎಚ್. ಸುಬ್ಬರಾವ್ ಎಂ.ಎ.



**ಪ್ರಶ್ನೆ**—ಸ್ವಾಮೀ! ಈ ದಿನ ತಾವು ವೇದರೂಪವಾದ ಶಬ್ದರಾಶಿಯು ಪ್ರಮಾಣವೋ ಅಲ್ಲವೋ ಎಂಬ ಸಂದೇಹವನ್ನು ಬಿಡಿಸಿ ಅದು ಪ್ರಮಾಣವೇ (ಯಥಾರ್ಥಜ್ಞಾನಜನಕವೇ) ಸರಿ ಎಂಬುದನ್ನು ತೋರಿಸಬೇಕಾಗಿದೆ. ಇದಕ್ಕೂ ಪ್ರಥಮತಃ "ವೇದವು ಕೇವಲ ಸಂಗೀತ ವಿದ್ಯೆಯ ಸರಿಗಮಪಧನಿಸ ಇತ್ಯಾದಿ ಗಾಯನಾರ್ಥವಾಗಿ ರಚಿತವಾದ ವರ್ಣಸಮೂಹದಂತೆ ಒಂದು ಅಕ್ಷರಮಾಲಾ ವಿಶೇಷವೇ ಹೊರತು ಅರ್ಥಯುಕ್ತವಾದ ಪದಕದಂಬಗಳಿಂದ ಬದ್ಧವಾದ ವಾಕ್ಯಗಳೇ ಅಲ್ಲ" ಎಂಬ ವೆಬ್ ಮೊದಲಾದ ಆಂಗ್ಲೇಯರ ಗ್ರಂಥಗಳಿಂದ ಜನಿತವಾದ ಸಂದೇಹ ವನ್ನು ಪರಿಹಾರಮಾಡುವದಾಗಬೇಕು.

**ಉತ್ತರ**—ಶ್ರೀ ಶ್ರೀಗಳವರು—ಅಯ್ಯಾ! ತುಳು ತೆಲುಗು ಮೊದಲಾದ ಭಾಷೆಗಳು ಅವುಗಳನ್ನು ಸರ್ವಥಾ ತಿಳಿಯದ ಮನುಷ್ಯನಿಗೆ ನಿರರ್ಥಕವಾದ ಶಬ್ದ ರಾಶಿಯಂತೆ ತೋರಿದರೂ ಕೆಲವು ದಿನಗಳ ಅಭ್ಯಾಸದ ನಂತರ ವೃದ್ಧವ್ಯವಹಾರ

ದಿಂದಲೂ, ಆ ಭಾಷೆಗಳ ಸಂಬಂಧಿ ನಿಘಂಟುಗಳಿಂದಲೂ, ಪದಗಳ ಅರ್ಥಗಳನ್ನು ತಿಳಿದ ನಂತರ ಆ ಭಾಷೆಗಳ ವರ್ಣಸಮುದಾಯವೂ ಕೂಡ ಜ್ಞಾನಜನಕಗಳೆಂದು ತಿಳಿದುಬರುತ್ತದೆ. ಹೀಗೆಯೇ ದೇವಭಾಷೆಯ ಪರಿಚಯರಹಿತನಾದ ಮಂದನಿಗೆ ವೇದವು ಅರಣ್ಯದಲ್ಲಿ ಋಷಿಗಳು ಗಾಯನಾರ್ಥವಾಗಿ ರಚನೆಮಾಡಿದ ನಿರರ್ಥಕ ವರ್ಣಸಮುದಾಯವೆಂದು ತೋರಿದರೂ, ಸಂಸ್ಕೃತವನ್ನು ಅಭ್ಯಾಸಮಾಡಿ ವೃದ್ಧ ವ್ಯವಹಾರದಿಂದಲೂ, "ನಿರುಕ್ತ" ವೆಂಬ ಗ್ರಂಥದಿಂದಲೂ, ನಿಘಂಟುಗಳಿಂದಲೂ, ವೇದದಲ್ಲಿರುವ ಪದಗಳಿಗೆ ಅರ್ಥವನ್ನು ತಿಳಿದನಂತರ ಅದು ಅರ್ಥವುಳ್ಳ ವಾಕ್ಯಸಮೂಹ ವೆಂದು ಗೊತ್ತಾಗುತ್ತದೆ. "ಸರ್ವೇ ವೇದಾ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ" ಎಂಬದೆ ಸರ್ವ ವೇದಗಳು ಯಾವನ ಸ್ವರೂಪವನ್ನು **ಬೋಧಿಸುತ್ತವೆಯೋ** ನಾನಾವಿಧವಾದ ತಪಸ್ಸನ್ನು ಯಾವನ ಪ್ರೀತ್ಯರ್ಥವಾಗಿ ಮಾಡಬೇಕೆಂದು **ಹೇಳುತ್ತವೆಯೋ** ಎಂಬ ಅರ್ಥವುಳ್ಳ ಶ್ರುತಿಯೇ ಸರ್ವವೇದ ಗಳಿಗೂ ಬೋಧಕತ್ವವು (ಜ್ಞಾನಜನಕತ್ವವು) ಉಂಟು, ನಿರರ್ಥಕಶಬ್ದರಾಶಿಯಲ್ಲ ವೆಂದು ಹೇಳುತ್ತದೆ.

೨ **ಪ್ರಶ್ನೆ**—ಒಪ್ಪಿದೆನು. ವೇದವಾಕ್ಯಗಳಿಗೆ ಬೋಧಕತ್ವವು ಸಿದ್ಧ ವಾಯಿತು. ಆದರೆ ವೇದವಾಕ್ಯಗಳು ನಿಯಮೇನ ಯಥಾರ್ಥಜ್ಞಾನಜನಕಗಳು ಎಂಬ ತಮ್ಮ ಮತಕ್ಕೆ ಆಧಾರವೇನು ?

**ಉತ್ತರ**—ಸಾವಧಾನಮನಸ್ಕರಾಗಿ ಕೇಳಿರಿ. ಈ ವಿಷಯದಲ್ಲಿ ನಮಗೆ ಆಧಾರವೇ ಬೇಕಾಗಿಲ್ಲ. ಪ್ರವಾಹಕ್ಕೆ ಹರಿಯುವುದು ಹೇಗೆ ಸ್ವಭಾವವೋ, ಅಗ್ನಿಗೆ ದಾಹಕತ್ವವೂ, ಜಲಕ್ಕೆ ಶೈತ್ಯವೂ, ಪಾದಗಳಿಗೆ ಗಮನಶಕ್ತಿಯೂ, ಚಕ್ಷುಸ್ಸಿಗೆ ದರ್ಶನಶಕ್ತಿಯೂ ಹೇಗೆ ಸ್ವಾಭಾವಿಕಗಳೋ ಹಾಗೆಯೇ ವಾಕ್ಯಕ್ಕೆ (ಸರ್ವಕರಣ ಗಳಿಗೂ) ಯಥಾರ್ಥಜ್ಞಾನಜನಕತ್ವವು ಸ್ವಾಭಾವಿಕವು. ಕೃಷ್ಣರಾಜಸಾಗರದ ಕಟ್ಟೆಯಿಂದ ಪ್ರವಾಹವು ನಿಂತಿರುವುದು. ಮಣಿಮಂತ್ರಾದಿಗಳಿಂದ ಕೆಲವುವೇಳೆ ಅಗ್ನಿಯು ಸುಡುವುದಿಲ್ಲ. ಬೆಂಕಿಯಿಂದ ಕಾಯಿಸಿದರೆ ಜಲವು ಶೀತಲವಾಗಿರುವುದಿಲ್ಲ. ಮುಳ್ಳು ನೆಟ್ಟುಕೊಂಡರೆ ಪಾದಗಳು ಚಲಿಸಲಾರವು. ಪರೆಬಂದಾಗ ಚಕ್ಷುಸ್ಸು ನೋಡಲಾರದು. ಹೀಗಿದ್ದರೂ ವ್ಯವಹಾರಜ್ಞರು ಪ್ರವಾಹಕ್ಕೆ ಹರಿಯುವ ಶಕ್ತಿಯೂ, ಅಗ್ನಿಗೆ ದಾಹಕತ್ವವೇ ಮೊದಲಾದವುಗಳೂ ಆಯಾ ಪದಾರ್ಥ ಗಳಿಗೆ ಸ್ವಭಾವಸಿದ್ಧಗಳು. ಆದರೂ ಪ್ರತಿಬಂಧಕವಿದ್ದುದರಿಂದ ಪ್ರವಾಹವು ಹರಿಯಲಿಲ್ಲ. ಅಗ್ನಿಯು ಸುಡಲಿಲ್ಲ. ಜಲವು ತಣ್ಣಗಿರಲಿಲ್ಲ. ಕಂಟಕರುದ್ಧವಾದುದ ರಿಂದಲೇ ಕಾಲುಗಳು ನಡೆಯಲಾರದೆಹೋದವು. ಕಣ್ಣಿನಲ್ಲಿ ಪ್ರಾಪ್ತವಾದ ದೋಷದಿಂದಲೇ ಕಣ್ಣುಗಳು ನೋಡಲಾರವು ಎಂದು ಹೇಳುತ್ತಾರೆ. ಹೀಗೆಯೇ

ವಾಕ್ಯಗಳೂ ನಿಯಮೇನ ಯಥಾರ್ಥಜ್ಞಾನವನ್ನು ಹುಟ್ಟಿಸುತ್ತವೆ. ಆದುದರಿಂದಲೇ ಬೆಂಗಳೂರಿಗೆ ದಾರಿ ಯಾವುದೆಂದರೆ ಶ್ರೀರಂಗಪಟ್ಟಣದ ರಸ್ತೆಯನ್ನು ತೋರಿಸಿ ಈ ಮಾರ್ಗದಲ್ಲಿ ಹೋಗಬೇಕೆಂದು ಯಾರಾದರೂ ಒಬ್ಬರು ಹೇಳಿದರೆ ನಿಶ್ಶಂಕವಾಗಿ ಪ್ರಯಾಣಮಾಡುತ್ತೇವೆ. ನ್ಯಾಯಸ್ಥಾನದಲ್ಲಿ ನಾನು ಸತ್ಯವಂತನೆಂಬ ಪ್ರತಿವಾದಿಯ ಮಾತನ್ನು ಅವನು ಸತ್ಯವಂತನಲ್ಲವೆಂದು ರುಜುವಾತು ಬರುವವರೆಗೂ ನಂಬಿರುತ್ತಾರೆ. ನೀನು ಸತ್ಯವಂತನೆಂಬಲ್ಲಿ ರುಜುವಾತು ಕೊಡೆಂದು ಕೇಳುವುದಿಲ್ಲ.

೩ **ಪ್ರಶ್ನೆ**—ಹಾಗಾದರೆ "ಮೊಲಕ್ಕೆ ಮೂರು ಕೊಂಬುಂಟು" ಎಂಬ ಭ್ರಾಂತನ ವಾಕ್ಯವೂ ಮತ್ತು "ಸರ್ವವೂ ಶೂನ್ಯವು" ಇತ್ಯಾದಿ ಅಪ್ರಮಾಣಿಕ ವಾಕ್ಯಗಳೂ ಯಥಾರ್ಥಜ್ಞಾನಜನಕವಾಗಬೇಕಾಯಿತು.

**ಉತ್ತರ**—ಬಾಧಕವಿರುವುದರಿಂದ ಆ ವಾಕ್ಯದಲ್ಲಿ ಅಪ್ರಾಮಾಣ್ಯವು ನಿಶ್ಚಿತವಾಗುತ್ತದೆ. ಬಾಧಕರಹಿತವಾದ ಸರ್ವವಾಕ್ಯಗಳೂ ನಿಯಮೇನ ಯಥಾರ್ಥಜ್ಞಾನಜನಕಗಳು.

೪ **ಪ್ರಶ್ನೆ**—ಸ್ವಾಮೀ! ವಾಕ್ಯಸಾಮಾನ್ಯವು ಜ್ಞಾನಜನಕವು. ಅದನ್ನು ಪ್ರಯೋಗಮಾಡುವ ಪುರುಷನು ಸತ್ಯವಂತನೂ ಆಪ್ತನೂ ಆಗಿದ್ದರೆ ಆ ವಾಕ್ಯವು **ಯಥಾರ್ಥ**ಜ್ಞಾನಜನಕವಾಗುತ್ತದೆ. ಅವನು ದೋಷಿಯೂ ವಂಚಕನೂ ಆಗಿದ್ದರೆ ಅವನ ವಾಕ್ಯವು ಅಪ್ರಮಾಣವಾಗುತ್ತದೆ ಎಂದು ಏಕೆ ಹೇಳಬಾರದು ?

**ಉತ್ತರ**—ಇದು ಲೋಕವ್ಯವಹಾರವಿರುದ್ಧವು. ನೀವೇ ನೋಡಿರಿ 4+3=7 ಎಂಬ ಒಂದು ವಾಕ್ಯವನ್ನು ಶ್ರವಣಮಾಡಿದನಂತರ ಇವನು ಸತ್ಯವಂತನು ಇವನು ಆಪ್ತನು ಎಂಬ ಜ್ಞಾನವಿಲ್ಲದಿದ್ದರೂ ಪರೀಕ್ಷೆ ಮಾಡದೆ ಆ ವಾಕ್ಯವನ್ನು ಯಥಾರ್ಥವೆಂದು ತಿಳಿಯುತ್ತೇವೆ. ಹಾಗಲ್ಲದೆ ಅವನ ಸತ್ಯವಾದಿತ್ವವನ್ನೂ ಅವನ ಆಪ್ತತ್ವವನ್ನೂ ನಿಶ್ಚಯಿಸುವವರೆಗೂ ಕಾಯುವುದಿಲ್ಲ. ಹಾಗೆ ಮಾಡುವುದಾದರೆ ಅನವಸ್ಥಾದೋಷವು ಬಂದು ಯಾವ ವಾಕ್ಯಜ್ಞಾನದಿಂದಲೂ ಯಾಥಾರ್ಥ್ಯ ನಿಶ್ಚಯವು ಇಲ್ಲದೆ ಹೋಗಬೇಕಾದೀತು! ಹೇಗೆಂದರೆ ನಾನು ಎಂ.ಎ., ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದೇನೆಂಬ ನಿಮ್ಮ ಮಾತನ್ನು ನಿಮ್ಮ ಸತ್ಯವಾದಿತ್ವ ಆಪ್ತತ್ವಾದಿಗಳನ್ನು ನಿಶ್ಚಯಿಸಿಕೊಂಡೇ ನಾವು ನಿಜವೆಂದು ತಿಳಿಯುವುದಾದರೆ "ನಾನು ಸತ್ಯವಂತನೆಂದು ನೀವು ತೋರಿಸುವ ಸರ್ಟಿಫಿಕೇಟೂ ಒಂದು ವಾಕ್ಯವಾದುದರಿಂದ ಅದನ್ನೂ ಆಪ್ತೋಕ್ತವೆಂದು ನಿಶ್ಚಯವಾಗುವವರೆಗೂ ನಂಬುವ ಹಾಗಿಲ್ಲ. ಅದು ಸತ್ಯವೆಂದು ತೋರಿಸುವುದಕ್ಕೆ ಇನ್ನೊಂದು ಸರ್ಟಿಫಿಕೇಟು ವಾಕ್ಯ. ಅದೂ ಸತ್ಯವೆಂದು ತೋರಿಸುವುದಕ್ಕೆ ಮತ್ತೊಂದು ಸರ್ಟಿಫಿಕೇಟು ವಾಕ್ಯವು. ಹೀಗೆ ಎಲ್ಲಿಯೂ ವಿಶ್ರಾಂತಿ ಇಲ್ಲದೆ ಯಾವ ವಾಕ್ಯಜ್ಞಾನದಲ್ಲೂ ಪ್ರಾಮಾಣ್ಯ ನಿಶ್ಚಯವು ಅಶಕ್ಯವಾದೀತು.

೫ **ಪ್ರಶ್ನೆ**—ಸ್ವಾಮೀ! ನಾವು ಎಷ್ಟೋ ವೇಳೆ ಲೋಕದಲ್ಲಿ ಈ ಮನುಷ್ಯನ ಮಾತು ಸತ್ಯವೋ ಸುಳ್ಳೋ ಎಂದು ಪರೀಕ್ಷೆ ಮಾಡುವುದಿಲ್ಲವೇ? ಆಗ ಅವನು ಸತ್ಯವಂತನೆಂದು ತಿಳಿದಷ್ಟೇ ಅವನ ಮಾತುಗಳನ್ನು ನಂಬುತ್ತೇವೆ.

**ಉತ್ತರ**—ಅಯ್ಯಾ, ಸ್ವಲ್ಪ ಕೇಳು. ಅಂತಹ ಸಂದರ್ಭದಲ್ಲಿ ಪುರುಷನು ಸತ್ಯವಂತನೆಂದು ತಿಳಿದರೆ ಅವನಲ್ಲಿದ್ದ ವಂಚಕತ್ವ ಸಂದೇಹವು ನಿವೃತ್ತವಾಗುವದು. ನಂತರ ಯಾವ ಬಾಧಕವೂ ಇಲ್ಲದುದರಿಂದ ಅವನ ವಾಕ್ಯಗಳು ತಮ್ಮ ಸ್ವಭಾವ ದಿಂದಲೇ ಯಥಾರ್ಥಜ್ಞಾನವನ್ನು ಹುಟ್ಟಿಸುತ್ತವೆ. ಯಾವ ವಾಕ್ಯದಲ್ಲಿಯೂ ಸ್ವಭಾವತಃ ದೋಷವಿಲ್ಲ. ಪ್ರಯೋಗಮಾಡುವ ಪುರುಷನ ದೋಷದಿಂದ ವಾಕ್ಯವು ಅಪ್ರಮಾಣವಾಗುತ್ತದೆ. ಪುರುಷನಲ್ಲಿ ದೋಷವಿರಬಹುದೆಂಬ ಶಂಕೆ ಬಂದರೆ ಅವನ ವಾಕ್ಯವು ಯಥಾರ್ಥ ಜ್ಞಾನವನ್ನು ಹುಟ್ಟಿಸಲಾರದು. ಆಗ ಪರೀಕ್ಷೆಮಾಡುತ್ತೇವೆ. ಪರೀಕ್ಷೆಯಲ್ಲಿ ದೋಷಿಯಲ್ಲವೆಂದು ನಿಶ್ಚಯವಾದರೆ ಸಾಕು. ತತ್ಕ್ಷಣವೇ ಅವನ ವಾಕ್ಯವು ಪ್ರಮಾಣವೆಂದು ನಿಶ್ಚಯಿಸುತ್ತೇವೆ. ದೋಷವಿದ್ದರೆ ವಾಕ್ಯವು ಅಪ್ರಮಾಣವೇ ಸರಿ. ನ್ಯಾಯಸ್ಥಾನದಲ್ಲಿನ ನಡವಳಿಕೆಯೂ ಇದಕ್ಕೆ ನಿದರ್ಶನವಾಗಿರುತ್ತದೆ. ಪ್ರತಿವಾದಿಯು ನಾನು ಕಳ್ಳನಲ್ಲ ಸತ್ಯವಂತನೆಂದು ಹೇಳುತ್ತಾನೆ. ಆದರೆ ಇವನು ಕಳ್ಳನೆಂಬ ವಾದಿಗಳ ಮಾತುಗಳು ಅವನ ವಾಕ್ಯದಲ್ಲಿ ಪ್ರಾಮಾಣ್ಯ ನಿಶ್ಚಯಕ್ಕೆ ವಿರೋಧಗಳಾಗಿರುತ್ತವಾದುದರಿಂದ ಸಂದೇಹವು ಬರುತ್ತದೆ. ಅದರಿಂದಲೇ ಸಾಕ್ಷಿಯ ತನಿಖೆಯಾಗುತ್ತದೆ. ಸಾಕ್ಷಿವಿಚಾರದಲ್ಲಿ ಆ ಪ್ರತಿವಾದಿಯಲ್ಲಿ ದೋಷವು ನಿಶ್ಚಿತವಾದರೆ ಅವನ ವಾಕ್ಯವು ಅಪ್ರಮಾಣವೇ. ಸಾಕ್ಷಿಗಳು ಋಜುವಾತು ಮಾಡಲಾರದೆ ಹೋದರೆ ನಾನು ಸತ್ಯವಂತನೆಂಬ ಅವನ ವಾಕ್ಯವನ್ನು ನಂಬಿ ಅವನನ್ನು ಬಿಟ್ಟುಬಿಡುತ್ತಾರೆ. (Every person is honest until he is proved to be guilty ಎಂಬುದೇ ಅವರ ನ್ಯಾಯವು. H. S.) ಕಂಟಕದಿಂದ ಪ್ರತಿರುದ್ಧವಾದ ಗಜವು ನಡೆಯಲಾರದೆ ಹೋದರೆ ಮುಳ್ಳು ತೆಗೆದಕೂಡಲೆ ಸ್ವಯಮೇವ ಹೇಗೆ ಚಲಿಸುತ್ತದೋ ಹಾಗೆಯೇ ವಾಕ್ಯವು ಅಪ್ರಮಾಣಿಕವೋ ಏನೋ ಎಂಬ ಸಂದೇಹದಿಂದ ಗ್ರಸ್ತವಾದರೆ ಪರೀಕ್ಷಾನಂತರ ವಕ್ತೃಪುರುಷನಲ್ಲಿ ದೋಷವೇನೂ ಇಲ್ಲವೆಂದು ಕಂಡುಬಂದರೆ ಶಂಕಾಶೂಲಗಳು ನಿವೃತ್ತವಾಗುತ್ತವೆ. ವಾಕ್ಯದಿಂದ ಪ್ರಾಮಾಣ್ಯನಿಶ್ಚಯವೂ ಆಗುತ್ತದೆ. ಪುರುಷನ ಸತ್ಯತ್ವಾದಿ ನಿಶ್ಚಯವೂ ಅವನಲ್ಲಿ ದೋಷವಿಲ್ಲವೆಂದು ತೋರಿಸುವದರಲ್ಲಿಯೇ ಪ್ರಯೋಜಕವಾಗುತ್ತದೆ. ಅಂತೂ ಅವನು ನಿರ್ದೋಷಿ ಎಂಬ ಜ್ಞಾನದಿಂದ ಆ ಮನುಷ್ಯನ ವಾಕ್ಯದಲ್ಲಿ ನಮಗಿದ್ದ ಸುಳ್ಳೋ ಏನೋ ಎಂಬ ಸಂದೇಹದ ನಿವೃತ್ತಿಯಾದ ಕೂಡಲೇ ರಾಹುಮುಕ್ತ ಸೂರ್ಯನು ಹೇಗೆ ಸ್ವಯಂ ಪ್ರಕಾಶಿಸುತ್ತಾನೆಯೋ ಹಾಗೆಯೇ ಅವನ ವಾಕ್ಯಗಳು ಸ್ವತಃ ಯಥಾರ್ಥ ಜ್ಞಾನಜನಕಗಳಾಗುತ್ತವೆ.

೬ **ಪ್ರಶ್ನೆ**—ಸ್ವಾಮೀ! ಹಾಗಾದರೆ ಡಿಲ್ಲಿಯಲ್ಲಿ 1607ನೇ ಇಸವಿಯಲ್ಲಿ ಮೂರು ಕೊಂಬುಳ್ಳ ಒಂದು ಮೊಲವಿದ್ದಿತೆಂಬ ವಾಕ್ಯವನ್ನು ಕೇಳಿದರೆ ಆ ವಾಕ್ಯ ಕರ್ತನಲ್ಲಿ ಕಾದಂಬರೀ ಗ್ರಂಥಗಳನ್ನು ಬರೆಯುವವನಂತೆ ದೋಷವಿರಬಹುದೆಂದು ಸಂದೇಹವು ಬರುವದು. ಈ ಸಂದೇಹ ನಿವೃತ್ತಿಗಾಗಿ ಆ ವಾಕ್ಯದ ಪ್ರಾಮಾಣ್ಯ ಗ್ರಹಣಕ್ಕೆ ಬಾಧಕಗಳನ್ನು ಪರಿಹಾರ ಮಾಡುವದಕ್ಕೆ ನಾಕಾದಷ್ಟು ಆಗಿನ ಕಾಲದ ಗ್ರಂಥವೇ ಮೊದಲಾದ ಸಾಮಗ್ರಿಗಳಿಲ್ಲ. ಈಗ ಏನು ಮಾಡಬೇಕು ?

**ಉತ್ತರ**—ಇಂತಹ ಸಂದರ್ಭದಲ್ಲಿ ಸಂದೇಹವು ದುಷ್ಪರಿಹರವು. ಕಾದಂಬರ್ಯಾದಿ ವಾಕ್ಯಗಳಂತೆ ಇದು ಸುಳ್ಳೋ ಅಥವಾ "ಕಾಶಿಯಲ್ಲಿ ಗಂಗೆಯು ಹರಿಯುತ್ತದೆ" ಎಂಬ ವಾಕ್ಯದಂತೆ ಪ್ರಮಾಣವೋ ಎಂಬ ಸಂದೇಹವು ಉಳಿದೇ ಉಳಿಯುತ್ತದೆ.

೭ **ಪ್ರಶ್ನೆ**—ಸ್ವಾಮಿಾ! ಹಾಗಿದ್ದರೆ ಪ್ರಕೃತದಲ್ಲಿ ವೇದವಾಕ್ಯಗಳಲ್ಲೂ ಪ್ರಾಮಾಣ್ಯನಿಶ್ಚಯಕ್ಕೆ ಅನೇಕ ಬಾಧಕಗಳುಂಟು. 'ಪುತ್ರಕಾಮಃ ಪುತ್ರೇಷ್ಟ್ಯಾ ಯಜೇತ" ಇವೇ ಮೊದಲಾದ ಅನೃತವಾಕ್ಯಗಳೂ "ಉದಿತೇ ಹೋತವ್ಯಂ ಅನುದಿತೇ ಹೋತವ್ಯಂ" ಇತ್ಯಾದಿ ಪರಸ್ಪರ ವ್ಯಾಹತವಾಕ್ಯಗಳೂ, "ಅಗ್ನಿಮೀಳೇ ಪುರೋಹಿತಂ" "ಆದಿತ್ಯೋ ವೈ ಯೂಪಃ" ಅಂದರೆ ಅಗ್ನಿಯೇ ಮಂತ್ರಪಠನ ಮಾಡುವ ಪುರೋಹಿತನು, ಸ್ತಂಭವೇ ಸೂರ್ಯನು ಎಂದು ಹೇಳುವ ಪ್ರತ್ಯಕ್ಷ ವಿರುದ್ಧೋಕ್ತಿಗಳೂ, ಜರ್ಭರಿ ತುರ್ಭರೀ ಮೊದಲಾದ ನಿರರ್ಥಕಶಬ್ದಗಳೂ ಕಂಡು ಬರುವದರಿಂದ ವೇದಕರ್ತನಾದ ಪುರುಷನು ವಾಕ್ಯಕ್ಕೆ ಅಪ್ರಾಮಾಣ್ಯಕಾರಣವಾದ ಮನೋದೋಷವುಳ್ಳವನಾಗಿದ್ದಾನೆ; ಆದುದರಿಂದಲೇ ವೇದವು ಅಪ್ರಮಾಣವೆಂದು ನಿಶ್ಚಯಮಾಡಬಹುದಲ್ಲವೇ ?

**ಉತ್ತರ**—ಆಗಲಾರದು ಈ ಬಾಧಕಗಳೆಲ್ಲವೂ ಅತಿ ದುರ್ಬಲಗಳು. ಪುತ್ರಕಾಮೇಷ್ಟಿಯನ್ನು ಮಾಡಿದರೆ ಪುತ್ರನು ಹುಟ್ಟಿಯೇ ಹುಟ್ಟುವನು. ಕೆಲವುವೇಳೆ ಯಾಗಮಾಡಿಯೂ ಪುತ್ರನಾಗದಿದ್ದರೆ ಆ ಯಾಗವು ಸರಿಯಾಗಿ ನಡೆದಿಲ್ಲ. ಕರ್ತೃ ವೈಗುಣ್ಯದಿಂದ ನಿಷ್ಫಲವಾಯಿತೆಂದು ತಿಳಿಯಬೇಕು. "ಉದಿತೇ ಹೋತವ್ಯಂ ಅನುದಿತೇ ಹೋತವ್ಯಂ" ಇತ್ಯಾದಿ ವಾಕ್ಯಗಳು ಆಪಾತತಃ ವಿರುದ್ಧವಾಗಿ ಕಂಡುಬಂದರೂ, ವೈಕಲ್ಪಿಕವಾಗಿ ಮಾಡಬಹುದೆಂದಾಗಲೀ ಅಧಿಕಾರ್ಯಾದಿ ಭೇದದಿಂದ ಉಭಯ ವಿಧಾಚರಣೆಯೂ ಯುಕ್ತವೆಂದಾಗಲೀ ಹೇಳಬಹುದು. "ಅಗ್ನಿಮೀಳೇ ಪುರೋಹಿತಂ" ಎಂಬಲ್ಲಿ ಪುರೋಹಿತಂ ಎಂಬುದು ಯೌಗಿಕಶಬ್ದವು. ಸರ್ವ ಜನರಿಗೂ ಹಿತಕಾರಿಯಾದ ಅಗ್ನಿಯನ್ನು ಸ್ತುತಿಸುತ್ತೇನೆಂದು ಅರ್ಥ. "ಆದಿತ್ಯೋ ವೈ ಯೂಪಃ" ಎಂದರೆ ಯಜ್ಞಶಾಲೆಯಲ್ಲಿರುವ ಯೂಪಸ್ತಂಭವು ಸೂರ್ಯನಂತೆ ಪ್ರಕಾಶಮಾನವಾಗಿರುತ್ತದೆ ಎಂದರ್ಥವು. ಜರ್ಭರೀ ತುರ್ಭರೀ

ಮೊದಲಾದ ಪದಗಳು ನಿರರ್ಥಕಗಳೆಂದು ತಿಳಿಯಬೇಡಿ. "ಸರ್ವೇವೇದಾಃ ಸರ್ವೇ ಘೋಷಾಃ ಏಕೈವವ್ಯಾಹೃತಿ:" ಎಂದು ಹೇಳಿರುವುದರಿಂದ ಅವುಗಳಿಗೂ ಅರ್ಥವುಂಟು. ಈ ವಾಕ್ಯವನ್ನು "ನಿರುಕ್ತ" ಗ್ರಂಥದಲ್ಲಿ ವ್ಯಾಖ್ಯಾನಮಾಡಿದ್ದಾರೆ. ವೇದವಾಕ್ಯಗಳಿಗೆ ಅಪ್ರಾಮಾಣ್ಯವನ್ನು ತೋರಿಸುವ ನಿಮ್ಮ ಬಾಧಕಗಳು ಪರಿಹೃತವಾದವಷ್ಟೆ !

೮ **ಪ್ರಶ್ನೆ**—ಸ್ವಾಮೀ ! ನನ್ನ ಬಾಧಕಗಳಿಗೆ ತಾವು ಬೇರೆ ವಿಧವಾಗಿ ಉಪಪತ್ತಿಯನ್ನು ಹೇಳಿಬಿಟ್ಟುದುದರಿಂದ ಅವು ವೇದಾಪ್ರಾಮಾಣ್ಯಕ್ಕೆ ಸಾಧಕವಾಗ ಲಾರವು. ಆದರೂ ಸಂದೇಹವು ಮಾತ್ರ ನಿವೃತ್ತವಾಗಲಿಲ್ಲ. ಕರ್ತೃವೈಗುಣ್ಯಾದಿ ನಿಮಿತ್ತದಿಂದ ಯಾಗಮಾಡಿದರೂ ಪುತ್ರೋತ್ಪತ್ತಿಯಾಗಲಿಲ್ಲವೋ ಅಥವಾ ವಂಚಕನಾದ ಇಲ್ಲವೆ ಭ್ರಾಂತನಾದ ಗ್ರಂಥಕರ್ತನೇ "ಪುತ್ರಕಾಮಃ ಪುತ್ರೇಷ್ಟ್ಯಾಯಜೇತ" ಎಂದು ಅನೃತ ವಚನವನ್ನೇ ರಚನೆಮಾಡಿದನೋ ಎಂದು ಡೋಲಾಯಮಾನವಾದ ಜ್ಞಾನವು ಉತ್ಪನ್ನವಾಯಿತು. ನಿರ್ಣಾಯಕಯುಕ್ತಿ ಯಿಂದ ಈ ಸಂದೇಹವನ್ನು ತಾವು ಪರಿಹರಿಸಬೇಕು.

**ಉತ್ತರ**—ಸಾವಧಾನಮನಸ್ಕರಾಗಿ ಕೇಳಿರಿ, ನಿರಭಿಧೇಯತ್ವ (ಕಚಟ ತಪಾನಾಂಜಬಗಡದತ್ವಾತ್ ಎಂಬುವರಂತೆ) ಅನ್ವಯರಾಹಿತ್ಯ (ಕುಂಡಮಜಾ ಜಿನಂ) ಇತ್ಯಾದಿ ವಾಕ್ಯದಂತೆ ವಿಪರೀತಾನ್ವಯತ್ವ (ಗಿರಿರ್ಭುಕ್ತಮಗ್ನಿರ್ವಾ ದೇವದತ್ತೇನ ಇತ್ಯಾದಿ ವಾಕ್ಯಗಳಂತೆ) ಇವು ಮೂರೂ ವಾಕ್ಯದೋಷಗಳೆನಿಸಿ ಕೊಳ್ಳುತ್ತವೆ. ಈ ದೋಷಗಳಿಂದ ಯುಕ್ತವಾದ ವಾಕ್ಯಗಳಿಂದ ಯಥಾರ್ಥಜ್ಞಾನವು ಹುಟ್ಟಲಾರದು. ವಾಕ್ಯಗಳಿಗೆ ಈ ದೋಷಗಳು ಬರಬೇಕಾದರೆ ಆ ವಾಕ್ಯವನ್ನು ರಚನೆಮಾಡಿದ ಪುರುಷನ ಬುದ್ಧಿದೋಷದಿಂದಲೇ ಬರಬೇಕು. ಪ್ರಮಾದ, ಅಜ್ಞಾನ, ವಿಪರೀತಜ್ಞಾನ, ಅಪಟುಕರಣತ್ವ, ವಿಪ್ರಲಿಪ್ಸಾದಿ ದೋಷಗಳಲ್ಲಿ ಯಾವುದಾದರೂ ಒಂದು ಅಥವಾ ಅನೇಕ ದೋಷಗಳಿಗೆ ವಶನಾಗಿ ವಾಕ್ಯಕರ್ತನು ನಿರಭಿಧೇಯತ್ವ, ಅನ್ವಯರಾಹಿತ್ಯ, ವಿಪರೀತಾನ್ವಯತ್ವವೆಂಬ ದೋಷಗಳಲ್ಲಿ ಒಂದು ಅಥವಾ ಅನೇಕ ದೋಷಗಳಿಂದ ಯುಕ್ತವಾದ ವಾಕ್ಯಗಳನ್ನು ರಚಿಸುತ್ತಾನೆ. ಅಷ್ಟೇ ವಿನಾ ವಾಕ್ಯದಲ್ಲಿ ಸ್ವಾಭಾವಿಕವಾದ ದೋಷಗಳಿಲ್ಲ.

೯ **ಪ್ರಶ್ನೆ**—ಸ್ವಾಮೀ ! ವಾಕ್ಯಗಳು ಸ್ವಭಾವತಃ ನಿರಭಿಧೇಯತ್ವಾದಿ ದೋಷಗಳಿಂದ ಯುಕ್ತವಾಗಿವೆ ಎಂದು ಯಾಕೆ ಹೇಳಬಾರದು ? ದುರ್ಗಂಧಕ್ಕೆ ದುಃಖಕೊಡುವುದೇ ಹೇಗೆ ಸ್ವಭಾವವೋ ಹಾಗೇ ವಾಕ್ಯಕ್ಕೆ ನಿರಭಿಧೇಯತ್ವಾದಿ ದೋಷಯುಕ್ತವಾಗಿರುವುದೇ ಸ್ವಭಾವವಾಗಿರಲಿ !

**ಉತ್ತರ**—ಅದು ಹಾಗಲ್ಲ. ನೀವು ಹೇಳಿದಂತೆ ವಾಕ್ಯವು ಸ್ವಭಾವತಃ ನಿರಭಿಧೇಯತ್ವಾದಿ ದೋಷಗಳಿಂದ ಯುಕ್ತವಾಗಿದ್ದರೆ "ನಾಲ್ಕು+ಮೂರು=ಏಳು"

"ಕಾಶಿಯಲ್ಲಿ ಗಂಗಾನದಿಯು ಪ್ರವಹಿಸುತ್ತದೆ" ಎಂಬ ಸಾಮಾನ್ಯವಾಕ್ಯ ಶ್ರವಣಾನಂತರವೂ ಕೂಡ ನಿಯಮೇನ ಸಂದೇಹ ಉಂಟಾಗಿ ಆ ಸಂದೇಹನಿವೃತ್ತಿಗಾಗಿ ಉಪಯೋಗಿಸುವ ವಾಕ್ಯದಲ್ಲೂ ಸಂದೇಹ ಹೊಂದಿ ಎಲ್ಲಿಯೂ ವಿಶ್ರಾಂತಿಹೊಂದದೆ ಪ್ರಾಮಾಣ್ಯನಿಶ್ಚಯವೇ ಅಸಾಧ್ಯವಾಗಿ ಸರ್ವ ವ್ಯವಹಾರಲೋಪವು ಉಂಟಾದೀತು ! ಪುರುಷದೋಷದಿಂದಲೇ ವಾಕ್ಯದಲ್ಲಿ ದೋಷವು ಉಂಟಾಗುವದರಿಂದ ಪುರುಷನಲ್ಲಿ ದೋಷವಿಲ್ಲದಿದ್ದರೆ ಅಥವಾ ಯಾವ ಪುರುಷನೂ ರಚನೆಮಾಡದಿದ್ದರೆ ಇದ್ದರೆ ಆ ವಾಕ್ಯವು ಸ್ವತಃ ಯಥಾರ್ಥಜ್ಞಾನಜನಕವಾಗುವದು. ಪ್ರಕೃತದಲ್ಲಿ ವೇದ ವಾಕ್ಯವನ್ನು ತನ್ನ ಸ್ವಬುದ್ಧಿಯಿಂದ ಕಾಳಿದಾಸಾದಿಗಳು ತಮ್ಮ ಗ್ರಂಥಗಳನ್ನು ರಚನೆಮಾಡಿದಂತೆ ಯಾರೂ ರಚನೆಮಾಡಲಿಲ್ಲ. ವೇದವಾಕ್ಯವು ಅಪೌರುಷೇಯವು; ಅಂದರೆ ಈಗ ನಾವು ಉಚ್ಚಾರಮಾಡುವ ವೇದವು ನಮ್ಮ ಬುದ್ಧಿಯಿಂದ ರಚಿತವಾದ ಕ್ರಮವುಳ್ಳದ್ದಲ್ಲ. ನಮ್ಮ ಹಿರಿಯರ ಉಪದೇಶಾನುಸಾರವಾಗಿ ಉಚ್ಚರಿಸಿದುದು. ಅವರೂ ತಮ್ಮ ಹಿರಿಯರ ಉಪದೇಶಾನುಸಾರ ಉಚ್ಚಾರಮಾಡಿದುದು. ಕೊನೆಗೆ ಚತುರ್ಮುಖ ಬ್ರಹ್ಮದೇವರು ಪ್ರಳಯೋದಕಶಾಯಿಯಾದ ಶ್ರೀಮನ್ನಾರಾಯಣನ ಉಚ್ಚಾರಣಾನುಸಾರವಾಗಿ ಉಚ್ಚರಿಸಿದರು. ಆ ನಾರಾಯಣನೂ ಆ ವೇದವನ್ನು ಮಾಡಿದವನಲ್ಲ. ಪೂರ್ವಕಲ್ಪದಲ್ಲಿದ್ದ ಕ್ರಮವಿಶಿಷ್ಟವಾದ ವರ್ಣಸಮೂಹಗಳನ್ನೇ ಇತರರಿಗೆ ಉಪದೇಶಮಾಡಿದ್ದಾನೆ. ಆ ಪೂರ್ವಕಲ್ಪದಲ್ಲಿ ಅದಕ್ಕಿಂತ ಪೂರ್ವ ಕಲ್ಪದಲ್ಲಿದ್ದಂತೆ ಉಪದೇಶಮಾಡಿದ್ದಾನೆ. ಹೀಗೆಯೇ ಎಷ್ಟು ಹಿಂದೆ ಹೋದರೂ ವೇದದಲ್ಲಿರುವ ವರ್ಣಕ್ರಮವನ್ನು ರಚಿಸಿದ ಒಬ್ಬ ಪುರುಷನೂ ಸಿಕ್ಕುವದಿಲ್ಲ ವಾದುದರಿಂದ ವೇದವು ಅನಾದಿಯೂ ಅಪೌರುಷೇಯವೂ ಎಂದು ಶಾಸ್ತ್ರಜ್ಞರು ಹೇಳುತ್ತಾರೆ. ಹೀಗೆ ವೇದವಾಕ್ಯಗಳನ್ನು ರಚನೆ ಮಾಡಿದ ಸ್ವತಂತ್ರನಾದ ಕರ್ತೃಪುರುಷನೇ ಇಲ್ಲದುದರಿಂದ ಆ ವಾಕ್ಯಗಳಲ್ಲಿ ನಿಮಗೆ ದೋಷಶಂಕೆಗೆ ಅವಕಾಶ ವಿಲ್ಲ. ವಾಕ್ಯಕ್ಕೆ ಬೇರೆ ವಿಧವಾಗಿ ದೋಷವು ಸಂಭವಿಸುವಹಾಗಿಲ್ಲ.

೧೦ **ಪ್ರಶ್ನೆ**—ಸ್ವಾಮೀ ! ವೇದವಾಕ್ಯವು ಅಪೌರುಷೇಯವಾದುದರಿಂದ ಅದು ನಿರ್ದೋಷವು. ಅತಏವ ಅದರಲ್ಲಿ ದೋಷಶಂಕೆಯನ್ನು ಮಾಡಕೂಡದೆಂದು ಹೇಳಿದ ಹಾಗಾಯಿತು. ವೇದವಾಕ್ಯವು ಅಪೌರುಷೇಯವೆಂಬುದರಲ್ಲಿ ಪ್ರಮಾಣ ಗಳನ್ನು ನಾಳೆದಿನ ದಯಮಾಡಿ ಹೇಳಬೇಕು.

**ಉತ್ತರ**—ಒಳ್ಳೇದು ! ನಿರೂಪಿಸುತ್ತೇವೆ. ಅವುಗಳನ್ನು ಶ್ರವಣಮಾಡಿ ಅಪೌರುಷೇಯವಾದ ವೇದದಲ್ಲಿ ಯಾವ ಸಂದೇಹವನ್ನೂ ಮಾಡದೆ ಸಕಲರೂ ಅದರಲ್ಲಿ ಪ್ರತಿಪಾದ್ಯನಾದ ಶ್ರೀಮನ್ನಾರಾಯಣನನ್ನು ವೇದವಿಹಿತವಾದ ಕರ್ಮಾ ನುಷ್ಠಾನಗಳಿಂದ ಆರಾಧನೆಮಾಡಿ ಜ್ಞಾನದ್ವಾರಾ ಮೋಕ್ಷವನ್ನು ಸಂಪಾದಿಸಬೇಕು.



# IV

## ತಾ. 23-6-1930 ರಲ್ಲಿ

**ಪ್ರಶ್ನೆ ಮಾಡಿದವರು.**

1. ಅರ್ಥಶಾಸ್ತ್ರವಿಶಾರದ ಮಹಾಮಹೋಪಾಧ್ಯಾಯ **ಶಾಮಶಾಸ್ತ್ರಿಗಳು, ಪಿ. ಎಚ್. ಡಿ.**
2. **ಎಚ್. ಸುಬ್ಬರಾವ್, ಎಂ. ಎ.**
3. **ಸಾಹುಕಾರ ಸಂಜೀವಶೆಟ್ಟರು, ಬಿ. ಎ.**

೧ **ಪ್ರಶ್ನೆ**—ಸಾಹುಕಾರ್ರು— ಮಹಾಸ್ವಾಮೀ! ಅದ್ವೈತಿಗಳೂ ಕೂಡ ಸಂಸಾರಾವಸ್ಥೆಯಲ್ಲಿ "ನಾನು ಬ್ರಹ್ಮ"ನೆಂದು ಹೇಳುವದಿಲ್ಲ ಯಾವಾಗಲೋ ಮುಂದೆ ಬ್ರಹ್ಮತ್ವವು ಬರುವದೆಂದಷ್ಟೇ ಹೇಳುತ್ತಾರೆ. ಈಗ ಭೇದವೇ ಸತ್ಯವು ಎಂದು ಅವರ ಮತವೂ ಇರುವದರಿಂದ ದ್ವೈತರೀತಿಯಿಂದ ಕರ್ಮಾನುಷ್ಠಾನ ಉಪಾಸನೆಗಳನ್ನು ಮಾಡಿದರೇನು, ಅದ್ವೈತಮತಾನುಸಾರವಾಗಿ ಮಾಡಿದರೆ ತಾನೆ ಏನು ?

**ಉತ್ತರ**—ಶ್ರೀ ಶ್ರೀಗಳವರು—ನಿಮ್ಮ ಉಪಪಾದನೆಯು ಅದ್ವೈತ ಶಾಸ್ತ್ರಕ್ಕೆ ಸ್ವಲ್ಪ ವಿರೋಧವಾಗಿದೆ. 'ನಾನು ಹಿಂದೆ ಬ್ರಹ್ಮನಿದ್ದೆನು, ಈಗಲೂ ಬ್ರಹ್ಮ ಸ್ವರೂಪನು, ಮುಂದೂ ಬ್ರಹ್ಮಸ್ವರೂಪನು. ಬ್ರಹ್ಮನು ನಿತ್ಯಜ್ಞಪ್ತಿಸ್ವರೂಪನು. ಆ ಬ್ರಹ್ಮನೇ ನಾನು' ಎಂಬುದೇ ಅವರ ಸಿದ್ಧಾಂತವು ಬ್ರಹ್ಮತ್ವವು ಮುಂದೆ ಪ್ರಾಪ್ತವಾಗತಕ್ಕ ಒಂದು ಪದಾರ್ಥವೆಂದು ಅವರು ಒಪ್ಪುವದಿಲ್ಲ, ಮೇಲಾಗಿ ಈಗ ನಾನು ಬ್ರಹ್ಮನಲ್ಲದೇನೇ ಇದ್ದರೆ ಮುಂದೆ ಹೇಗೆತಾನೇ ಬ್ರಹ್ಮನಾದೇನು ? "ನಹ್ಯನ್ಯೋ ಅನ್ಯಾತ್ಮತಾಂ ಭಜತೆ" ಒಬ್ಬ ಚೇತನನು ಅತ್ಯಂತ ಭಿನ್ನನಾದ ಮತ್ತೊಬ್ಬ ಚೇತನನ ತಾದಾತ್ಮ್ಯವನ್ನು ಹೊಂದಲಾರನು.

೨ **ಪ್ರಶ್ನೆ**—ಸಾಹುಕಾರ್ರು— ಹಾಗಾದರೆ ಯಾವುದನ್ನು ಉದ್ದೇಶಿಸಿ ಕರ್ಮ ಉಪಾಸನಾದಿಗಳನ್ನು ಆಚರಿಸಬೇಕು ?

**ಉತ್ತರ**—ಶ್ರೀ ಶ್ರೀಗಳವರು—ಪರಮಾರ್ಥವಾಗಿ ವಿಚಾರಮಾಡಿದರೆ ಅವರ ಮತರೀತ್ಯಾ ಕರ್ಮ ಉಪಾಸನಾದಿಗಳು ನಿರರ್ಥಕವೇ. ಅಷ್ಟೇ ಅಲ್ಲ. ಸಂಸಾರಾ ವಸ್ಥೆಯಲ್ಲಿ ಉಭಯಮತಗಳಿಗೂ ಅನೂಕೂಲವಾದ ಒಂದೇ ಉಪಾಸನೆಯು ಇರುವುದೆಂದು ಹೇಳಿದರೂ ಸರಿಯಲ್ಲ. ಮುಮುಕ್ಷುವಾದ ದ್ವೈತಿಯು

" ದಾಸೋಽಹಂ " ಎಂದು ಶ್ರೀಮನ್ನಾರಾಯಣನನ್ನು ಭಜಿಸುತ್ತಾನೆ. ಮುಮುಕ್ಷು ವಾದ ಅದ್ವೈತಿಯಾದರೋ "ಅಹಂ ಬ್ರಹ್ಮಾಸ್ಮಿ" "ಮಹ್ಯಮೇವ ನಮೋ ನಮಃ" ಇತ್ಯಾದಿ ರೀತಿಯಿಂದ ಉಪಾಸನೆಮಾಡುತ್ತಾನೆ.

೩ ಪ್ರಶ್ನೆ—ಸಾಹುಕಾರ್ರು—ಮಹಾಸ್ವಾಮಿ ! ಈ ರೀತಿ ಶಂಕರಾಚಾರ್ಯರು ಹೇಳಿರಲಾರರು. ಇದಕ್ಕೆ ಆಧಾರವೇನು ?

**ಉತ್ತರ**—ಇಗೋ ನೋಡಬಹುದು. ಶಂಕರಾಚಾರ್ಯರ "ಪ್ರೌಢಾನುಭೂತಿ" ಎಂಬ ಗ್ರಂಥದ ಶ್ಲೋಕಗಳನ್ನು ಉದಾಹರಿಸುವೆವು.

" ದ್ವೈತಂ ಮಯ್ಯಖಿಲಂ ಸಮುತ್ಥಿತಮಿದಂ ಮಿಥ್ಯಾಮನಃ ಕಲ್ಪಿತಂ ।
ನಿರ್ದ್ವೈತೋಽಸ್ಮ್ಯಹಮಸ್ಮಿ ನಿರ್ಮಲಚಿದಾಕಾಶೋಽಸ್ಮಿಪೂರ್ಣೋಽಸ್ಮ್ಯಹಂ ।
ನಿರ್ಮಾಯೋಽಸ್ಮಿ ನಿರಂತರೋಽಸ್ಮಿ ವಿಪುಲಪೌಢಪ್ರಕಾಶೋಽಸ್ಮ್ಯಹಂ ।
ಮತ್ತೋಽನ್ಯನ್ನಹಿ ಕಿಂಚಿದಸ್ತಿಯದಿ ಚಿದ್ಭ್ರಾಮ್ಯಂತತಸ್ತನ್ಮೃಷಾ ।
ಪೂರ್ಣೋಽಸ್ಮಿದ್ವಯವರ್ಜಿತೋಽಸ್ಮಿ ವಿಪುಲಾಕಾಶೋಽಸ್ಮಿ ನಿತ್ಯೋಽಸ್ಮ್ಯಹಂ ।
ಯದ್ವಾವೇದ್ಯಮಶೇಷಮೇ ತದನಿಶಂ ಮದ್ರೂಪಮೇವೇತ್ಯಪಿ
ಜ್ಞಾತ್ವಾತ್ಯಕ್ತಮರುನ್ಮಹೋದಧಿರಿವ ಪ್ರೌಢೋಽಗಭೀರೋಽಸ್ಮ್ಯಹಂ ।
ಗಂತವ್ಯಂ ಕಿಮಿಹಾಸ್ತಿ ಸರ್ವ ಪರಿಪೂರ್ಣಸ್ಯಾಪ್ಯಖಂಡಾಕೃತೇಃ ।
ಕರ್ತವ್ಯಂ ಕಿಮಿಹಾಸ್ತಿ ನಿಷ್ಕ್ರಿಯತನೋರ್ಮೇಽಕ್ಷೈಕರೂಪಸ್ಯಮೇ ।
ಶ್ರೋತವ್ಯಂಚಕಿಮಸ್ತಿ ಪೂರ್ಣಸದೃಶೋ ಮಿಥ್ಯಾಪರೋಕ್ಷಸ್ಯಮೇ ।
ಮಂತವ್ಯಂಚನಮೇಽಸ್ತಿ ಕಿಂಚಿದಪಿವಾನಿಃಸಂಶಯಜ್ಯೋತಿಷಃ ।
ಸತ್ಯಾನಂದಚಿದಾತ್ಮಕಾಯ ವಿಪುಲಪ್ರಜ್ಞಾಯ **ಮಹ್ಯಂ ನಮಃ** ॥ "

೪ ಪ್ರಶ್ನೆ—ಸಾಹುಕಾರ್ರು—ಮಹಾಸ್ವಾಮೀ ! ಬ್ರಹ್ಮನಿಗೆ ಈಗ ಅವಿದ್ಯಾ ಅಥವಾ ಮಾಯಾ ಎಂಬ ಹೆಸರುಳ್ಳ ಆವರಕವಿರುವದರಿಂದ ಅದರ ನಿವೃತ್ತ್ಯರ್ಥವಾಗಿ ಕರ್ಮಾದಿಗಳನ್ನು ಆಚರಿಸಬಹುದಲ್ಲವೇ ?

**ಉತ್ತರ**—ವಿಚಾರ ಮಾಡಿದರೆ ಈ ವಿಷಯವು ಕೂಡುವದಿಲ್ಲ. "ಅಸಂಗೋ ಹ್ಯಯಂ ಪುರುಷಃ" ಎಂಬ ಶ್ರುತಿಗೆ ಬ್ರಹ್ಮನಿಗೆ ಅವಿದ್ಯಾದಿ ಯಾವ ಸಂಬಂಧವೂ ಇಲ್ಲವೆಂಬ ಅರ್ಥವೆಂದು ಶಂಕರಾಚಾರ್ಯರೇ ಹೇಳಿರುತ್ತಾರೆ. ಆದುದರಿಂದ ಸರ್ವಥಾ ಬ್ರಹ್ಮಸಂಬಂಧರಹಿತವಾದ ಅವಿದ್ಯೆಯು ಬ್ರಹ್ಮನನ್ನು ಹೇಗತಾನೇ ಆವರಿಸುವದು ? ಕಿಂಚ, ಅವಿದ್ಯಾನಿವೃತ್ತಿರೂಪವಾದ ಮುಕ್ತಿಯು ಸತ್ಯವಾದರೆ ಬ್ರಹ್ಮಸ್ವರೂಪ ವಾಗಬೇಕು. ಬ್ರಹ್ಮಸ್ವರೂಪವು ಸರ್ವದಾ ಸಿದ್ಧವಾದುದು. ಹೊಸದಾಗಿ ಕರ್ಮಾನುಷ್ಠಾನ ಉಪಾಸನಾದಿಗಳಿಂದ ಪ್ರಾಪ್ತವಾಗತಕ್ಕದ್ದಲ್ಲ " ಅವಿದ್ಯಾ

ನಿವೃತ್ತಿ" ರೂಪವಾದ ಮುಕ್ತಿಯನ್ನು "ಮಿಥ್ಯಾ" ಎಂದು ಹೇಳುವದಕ್ಕೂ ಆಗುವದಿಲ್ಲ. ಮೇಲಾಗಿ ಅದ್ವೈತಮತದ ರೀತ್ಯಾ ಸರ್ವಥಾ ಅಜ್ಞೇಯನಾದ ಬ್ರಹ್ಮನು ಹೇಗೆತಾನೇ ಉಪಾಸನೆಗೆ ವಿಷಯನಾಗುವನು ? ಅಷ್ಟೇ ಅಲ್ಲದೆ ಪರಮಾರ್ಥವಾಗಿ " ನ ವರ್ಣಾ ನವರ್ಣಾಶ್ರಮಾಚಾರಧರ್ಮಾ ನ ಶಾಸ್ತಾ ನ ಶಾಸ್ತ್ರಂ ನ ಶಿಷ್ಯೋ ನ ಶಿಕ್ಷಾ, ನ ಚತ್ವಂ ನಚಾಹಂ ನಚಾಯಂಪ್ರಪಂಚಃ" ಎಂತಿರುವದರಿಂದ ಕರ್ಮಾದಿಪರಿತ್ಯಾಗದಿಂದ ಯಾವ ಹಾನಿಯನ್ನು ಹೇಳುವಹಾಗಿಲ್ಲ ಆದುದರಿಂದಲೇ ನಾವು ಕರ್ಮಾನುಷ್ಠಾನ ಉಪಾಸನಾದಿಗಳನ್ನು ಯಾವತ್ತೂ ದ್ವೈತಮತದ ರೀತಿಯಿಂದಲೇ ಆಚರಿಸಬೇಕೆಂದು ನಿರೂಪಿಸಿರುತ್ತೇವೆ

೫ ಪ್ರಶ್ನೆ—ಸುಬ್ಬರಾಯರು—ಸ್ವಾಮೀ ! ಮಾಯಾ ಎಂಬುದು ಬ್ರಹ್ಮನಿಗೆ ಆವರಕವೆಂದು ಅದ್ವೈತಿಗಳು ಹೇಳುವರಷ್ಟೆ ? ಅದು ವಸ್ತ್ರಕ್ಕೆ ಬಣ್ಣದಂತೆಯೋ, ದೀಪಕ್ಕೆ ಗೋಡೆಯಂತೆಯೋ ಯಾವರೀತಿಯಲ್ಲಿ ಆವರಕವೆಂದು ಹೇಳುತ್ತಾರೆ ? ದಯಮಾಡಿ ನಿರೂಪಿಸಬೇಕು.

**ಉತ್ತರ—**ಶ್ರೀ ಶ್ರೀಗಳವರು—ಅವರು ಅದನ್ನು ದುರ್ನಿರೂಪವು, ಹೇಳು ವದಕ್ಕಾಗುವದಿಲ್ಲವೆನ್ನುತ್ತಾರೆ. ಅವರ ಗ್ರಂಥವನ್ನೇ ನೋಡಿರಿ

(ಭಾಮತಿ—ಅಸ್ತುವಾನುಪಪತ್ತಿರೇವ । ಕಾರ್ಯಕಾರಣಯೋರ್ಮಾಯಾತ್ಮಕತ್ವಾತ್ । ಅನನುಪಪತ್ತಿರ್ಹಿ ಮಾಯಾಮುಪೊದ್ಬಲಯತ್ಯನುಪಪದ್ಯಮಾನಾರ್ಥತ್ವಾನ್ಮಾಯಾಯಾಃ ॥ P 423.

ಅಂದರೆ ಮಾಯಾ ಎಂಬುದು ಸರ್ವಥಾ ಉಪಪಾದನೆಮಾಡಿ ಹೇಳಲು ಅಶಕ್ಯವಾದ ಪದಾರ್ಥವಾದುದರಿಂದ ದುರ್ನಿರೂಪವಾಗಿರುವದೇ ಮಾಯೆಗೆ ಒಂದು ಬಲವು.

**ಕಲ್ಪತರುಪರಿಮಳ:—** "ಮಾಯಾಯಾಮನುಪಪತ್ತಿರಲಂಕಾರ ಇತಿ ನ ಮಾಯಾವಾದೇ ಅತ್ಯಂತಮುಪಪಾದನಾರ್ಥಂ ಪ್ರಯತಿತವ್ಯಮಿತಿವ್ಯುತ್ಪಾದನಾಯ ಶಂಕೇಯಂ "

ಕಿಂಚ "ದುರ್ಘಟತ್ವಮವಿದ್ಯಾಯಾಃ ಭೂಷಣಂ ನ ತು ದೂಷಣಂ । ಕಥಂಚಿದ್ಘಟಮಾನತ್ವೇऽವಿದ್ಯಾತ್ವಂ ದುರ್ಘಟಂ ಭವೇತ್ ।" ಇತ್ಯಾದಿ ಶ್ಲೋಕಗಳಿಂದ ಅವಿದ್ಯಾಸ್ವರೂಪವನ್ನು ಹೇಳುವದಕ್ಕೆ ಬರುವದಿಲ್ಲವೆಂದು ಸ್ಪಷ್ಟವಾಗಿ ಒಪ್ಪಿರುತ್ತಾರೆ.)

೬ ಪ್ರಶ್ನೆ—ಸು—ಸ್ವಾಮಿ ! ಅವಿದ್ಯಾ ಎಂಬುದರ ವಿಷಯದಲ್ಲಿ ಏನನ್ನೂ ಹೇಳುವದಕ್ಕಾಗದಿದ್ದರೆ ಅದು ನಿವೃತ್ತವಾಗುವದೋ ಇಲ್ಲವೋ ? ನಿವೃತ್ತವಾಗುವ

ದಾದರೆ ಯಾವುದರಿಂದ ಹೇಗೆ ನಿವೃತ್ತವಾಗುವದು ? ಬ್ರಹ್ಮನು ಸರ್ವಥಾ ಅಜ್ಞೇಯನಾದುದರಿಂದ ಮುಮುಕ್ಷುವು ಆತನನ್ನು ಉಪಾಸನೆ ಮಾಡುವದು ಅಸಂಭಾವಿತವು. ಶತ್ರುವಾದ ಅವಿದ್ಯೆಯ ತಿರಸ್ಕಾರಕ್ಕಾದರೂ ಯತ್ನಮಾಡಬೇಕು. ಅವಿದ್ಯಾಸ್ವರೂಪವೂ ವಿದಿತವಾಗದಿದ್ದರೆ ಏನು ತಾನೇ ಮಾಡಬೇಕು ?

ಉತ್ತರ—"ಇದಂ ನು ಸತ್ಯಂ ಮಮ ನಾಸ್ತಿ ವಿಕ್ರಿಯಾ ವಿಕಾರಹೇತು ರ್ನಹಿಮೇಽದ್ವಯತ್ವತಃ । ನ ಪುಣ್ಯಪಾಪೇ ನಚ ಮೋಕ್ಷಬಂಧನೇ ನ ಚಾಸ್ತಿ ವರ್ಣಾಶ್ರಮಿತಾ ಶರೀರತಃ" ಎಂಬುದೇ ಅವರ "ಉಪದೇಶ" ವಾಕ್ಯವು. ಆದುದ ರಿಂದಲೇ ಪರಮಾರ್ಥತತ್ವವೇನೆಂದು ಶಿಷ್ಯನು ಮೂರಾವರ್ತಿ ಕೇಳಲು ಶಂಕರಾ ಚಾರ್ಯರು ಮೌನವನ್ನು ವಹಿಸಿದರೆಂದು ಭಾಷ್ಯದಲ್ಲಿರುತ್ತದೆ.

೭ ಪ್ರಶ್ನೆ— ಸು—ಹಾಗಾದರೆ ಶೂನ್ಯವಾದಕ್ಕೂ ಈ ಮತಕ್ಕೂ ಏನು ವಿಶೇಷವು ?

ಉತ್ತರ—ಇಗೋ ! ನೀವು ಕಲಹಕ್ಕೆ ಕಾಲಿಡುತ್ತಿದ್ದೀರಿ ! ಉತ್ತರವನ್ನು ಹೇಳಿದರೆ ಸ್ವಾಮಿಗಳು ಅದ್ವೈತಿಗಳನ್ನೆಲ್ಲಾ ನಾನಾಪ್ರಕಾರವಾಗಿ ಬಯ್ಯುತ್ತಾರೆಂದು ಅನ್ಯಥಾ ತಿಳಿಯುತ್ತಾರೆ. ಉತ್ತರ ಹೇಳದಿದ್ದರೆ ತತ್ವನಿಶ್ಚಯವಾಗಲಾರದು. ಲಾಯರುಗಳು ನ್ಯಾಯಸ್ಥಾನದಲ್ಲಿ ಬಹುಪ್ರಕಾರವಾಗಿ ತಮ್ಮ ತಮ್ಮ ಕಕ್ಷಿಗಾರರು ಗಳನ್ನು ವಹಿಸಿಕೊಂಡು ವ್ಯಾಜ್ಯವಾಡುತ್ತಾರೆ. ಆದರೂ ಅವರಿಗೆ ಸ್ವಲ್ಪವಾದರೂ ಮನಸ್ತಾಪವು ಉಂಟಾಗುವುದಿಲ್ಲ. ವೇದಾರ್ಥವಿಚಾರದಲ್ಲಿಯಾದರೋ ಬ್ರಾಹ್ಮಣರ ಬುದ್ಧಿ ಕಲಹವು ವ್ಯಕ್ತಿದ್ವೇಷದಲ್ಲಿ ಪರ್ಯವಸಾನವಾಗುವುದು. ಇದಕ್ಕೇನು ಮಾಡುವುದು ?

ಶಾಮಶಾಸ್ತ್ರಿಗಳು—ಮಹಾಸ್ವಾಮೀ ! ತಾವು ಆಡಿದ ಮಾತು ಯಥಾರ್ಥವು. ಪ್ರಮೇಯ ನಿರ್ಣಯಾರ್ಥವಾಗಿ ಪರಸ್ಪರ ಯುಕ್ತಿಚಾಲವನ್ನು ನಡೆಯಿಸುವಾಗ ಮಾಡಿದ ದೋಷಾಪಾದನೆಗಳನ್ನು ಬೈಗುಳೆಂದು ಭ್ರಮಿಸಿ ಅಜ್ಞರು ದ್ವೇಷ ಮಾಡುತ್ತಾರೆ. ಅದ್ವೈತಮತದ ಮೇಲೆ ಪ್ರಾಪ್ತವಾಗಿರುವ ಈ ಪ್ರಚ್ಛನ್ನ ಬೌದ್ಧತ್ವಾಪಾದನೆಯನ್ನು ನಾನು ಬಲ್ಲೆನು. ಅದ್ವೈತಮತವು ಬೌದ್ಧಧರ್ಮಕೆ ಸದೃಶ್ಯವೇ ! ಆದರೆ ಏನಾಯಿತು ? ಬೌದ್ಧಮತಸಾದೃಶ್ಯವೇ ಒಂದು ದೂಷಣವೇ ? ಈ ವಿಷಯವನ್ನು ತಿಳಿಯದೆ ವೃಥಾ ದ್ವೇಷಮಾಡುವವರು ತಿಳಿಯದವರು. ತಾರ್ಕಿಕ ಶಿಖಾಮಣಿಗಳಾದ ಉದಯನಾಚಾರ್ಯರೂ ಕೂಡ ಸೌಗತಮತವೂ ವಿಚಾರಾರ್ಹ ವೆಂದು ಸ್ತುತಿಸಿರುತ್ತಾರೆ. ( ಈ ವಿಷಯದಲ್ಲಿ ಶಾಸ್ತ್ರಿಗಳು ಒಂದು ಶ್ಲೋಕವನ್ನು ಹೇಳಿದರು. )

ಶ್ರೀ ಶ್ರೀಗಳವರು—ನೀವು ಸರಿಯಾಗಿ ಹೇಳಿದಿರಿ. ಗೌಡಪಾದರ ಕಾಲದಿಂದಲೂ ಅದ್ವೈತಮತವು ಪ್ರಚ್ಛನ್ನಬೌದ್ಧವಾದವೆಂಬ ಪ್ರವಾದವು ಬರುತ್ತಲೇ ಇದೆ. ನಾವು ಅದನ್ನೇ ಯುಕ್ತಿಗಳಿಂದ ಪ್ರತಿಪಾದನೆಮಾಡಿ ತೋರಿಸಿರುತ್ತೇವೆಯೇ ಹೊರತು ನೂತನವಾಗಿ ರಚನೆ ಮಾಡಿಲ್ಲ ಅಷ್ಟೇ ವಿನಾ ನಾವು ವ್ಯಕ್ತಿನಿಂದೆಯನ್ನು ಎಲ್ಲಿಯೂ ಮಾಡಿಲ್ಲ. ಹಾಗೇನಾದರೂ ಇರುವವನ್ನು ನಮ್ಮ ಗ್ರಂಥಗಳಲ್ಲಿ ತೋರಿಸಿದರೆ ನಾವು ತೆಗೆದುಬಿಡುತ್ತೇವೆ.

ಶಾಮಶಾಸ್ತ್ರಿಗಳು—ನಾನು ಎಲ್ಲಿಯೂ ಅಂತಹ ನಿಂದೋಕ್ತಿಗಳನ್ನು ನೋಡಿಲ್ಲ. ಆದರೆ ಬೌದ್ಧಮತಕ್ಕೂ ಅದ್ವೈತತತ್ವಕ್ಕೂ ಒಂದೆರಡು ವೈಲಕ್ಷಣ್ಯಗಳಿವೆ....। [ ಇಲ್ಲಿ ಶಾಸ್ತ್ರಿಗಳು ಒಂದು ಶ್ಲೋಕವನ್ನು ನಿರೂಪಣೆ ಮಾಡಿದರು. H. S.] ಈ ಶ್ಲೋಕದಲ್ಲಿ ಹೇಳಿರುವಂತೆ ಪ್ರವಾಹರೂಪವಾದ ಕ್ಷಣಿಕವಾದ ಅನಂತಜ್ಞಾನಗಳನ್ನು ಬೌದ್ಧರು ಒಪ್ಪಿರುತ್ತಾರೆ. ಅದ್ವೈತಮತದಲ್ಲಾದರೋ ಒಂದೇ ನಿತ್ಯವಾದ ಜ್ಞಾನಸ್ವರೂಪವನ್ನು ತತ್ವವೆಂದು ಹೇಳುತ್ತಾರೆ.

ಶ್ರೀ ಶ್ರೀಗಳವರು—ಹೌದು ! ನೀವು ಹೇಳಿದುದೆಲ್ಲವೂ ಪೂರ್ವದಲ್ಲಿ ಆಶಂಕಿತಗಳಾಗಿವೆ. ಯಥಾಹಿ:—

1 "ಕ್ರಮತೇ ನಹಿ ಬುದ್ಧಸ್ಯ ಜ್ಞಾನಂ ಧರ್ಮೇಷುತಾಯಿನಃ। ಸರ್ವೇಧರ್ಮಾಸ್ತಥಾ ಜ್ಞಾನಂ ನೈತದ್ಬುದ್ಧೇನಭಾಷಿತಂ "— ಗೌಡಪಾದಕಾರಿಕಾ ||

2 " ಜ್ಞಾನಮಾತ್ರಂ ಪಾರಮಾರ್ಥಿಕಂ ತತ್ರೈವ ಜ್ಞಾತೃಜ್ಞೇಯಾದಿ ಕಲ್ಪಿತಮಿತಿ **ಸೌಗತಮತಮೇವ ಭವತಾಪಿ ಸಂಗ್ರಹೀತಮಿತ್ಯಾಶಂಕ್ಯಾಹ— ಜ್ಞಾನಮಿತಿ** ||" ಆನಂದಗಿರಿಟೀಕಾ.

3 " ಜ್ಞಾನಜ್ಞೇಯಜ್ಞಾತೃಭೇದರಹಿತಂ ಪರಮಾರ್ಥತತ್ವಂ ಅದ್ವಯಮೇತನ್ನಬುದ್ಧೇನಭಾಷಿತಂ || ಯದ್ಯಪಿಬಾಹ್ಯಾರ್ಥನಿರಾಕರಣಂ ಜ್ಞಾನಮಾತ್ರ ಕಲ್ಪನಾಚ ಅದ್ವಯವಸ್ತು ಸಾಮೀಪ್ಯಮುಕ್ತಂ. ಇದಂತು ಪರಮಾರ್ಥತತ್ವಂ ಅದ್ವೈತಂ ವೇದಾಂತೇಷ್ವೇವ ವಿಜ್ಞೇಯಮಿತ್ಯರ್ಥಃ|| ಶಂಕರಾಚಾರ್ಯಕೃತಭಾಷ್ಯಂ.

4 "ಜ್ಞಾನಮಿತ್ಯಾದಿವ್ಯಾಚಷ್ಟೆ—" ಜ್ಞಾನೇತಿ ". ಸಕಲ ಭೇದವಿಕಲಂ ಪರಿಪೂರ್ಣಂ ಅನಾದಿನಿಧನಂ ಜ್ಞಪ್ತಿಮಾತ್ರಂ ಉಪನಿಷದೇಕಸಮಧಿಗಮ್ಯಂ ತತ್ವಮಿಹ ಪ್ರತಿಪಾದ್ಯತೇ ಮತಾಂತರೇತು (ಬೌದ್ಧಮತೇತು) ನೈವಮಿತಿ ಕುತೋಮತ ಸಾಂಕರ್ಯಶಂಕಾವಕಾಶಮಾಸಾದಯೇದಿತ್ಯರ್ಥಃ||" ಆನಂದಗಿರಿಟೀಕಾ.

5 ಶಂಕರಾಚಾರ್ಯರು ಒಂದು ದೇವಾಲಯವನ್ನು ಪ್ರವೇಶಮಾಡುವದಕ್ಕೆ ಹೋಗುವಾಗ ಒಬ್ಬ ಬ್ರಾಹ್ಮಣನು ಪ್ರಶ್ನೆಮಾಡಿರುತ್ತಾನೆ. ಶಂಕರಾಚಾರ್ಯರು

ಉತ್ತರವನ್ನು ಕೊಟ್ಟಿರುತ್ತಾರೆ. "ವಿಜ್ಞಾನವಾದಸ್ಯಚಕಿಂ ವಿಭೇದಕಂ ಭವನ್ಮತ್ರಾ ದ್ಬ್ರೂಹಿ ತತಃಪರಂ ವ್ರಜ । ವಿಜ್ಞಾನವಾದೀಕ್ಷಣಿಕತ್ವಮೇಷಾಮಂಗೀಚಕಾರೇ ತಿಮಹಾರ್ಣವಿಶೇಷಃ॥"

ಈ ರೀತಿ ನೀವು ಹೇಳಿದ ವಿಷಯಗಳು ಬಹು ಪ್ರಾಚೀನರಿಂದಲೂ ಅಂಗೀಕೃತ ವಾಗಿವೆ.

೮ ಪ್ರಶ್ನೆ—ಸುಬ್ಬರಾಯರು—ಸ್ವಾಮೀ ! ಪ್ರಧಾನತತ್ವವಾದ ಪರಬ್ರಹ್ಮನ ವಿಷಯದಲ್ಲಿಯೇ ಬೌದ್ಧಮತಕ್ಕೂ ಅದ್ವೈತಮತಕ್ಕೂ ಇಂಥಾ ಪ್ರಬಲ ವೈಲಕ್ಷಣ್ಯವು ಇದ್ದಮೇಲೆ ಅಪ್ರಧಾನತತ್ವವಾದ ಜಗದ್ವಿಷಯದಲ್ಲಿ ಅವೆರಡಕ್ಕೂ ಇರುವ ಸಾದೃಶ್ಯ ವನ್ನು ಮೇಲಾಗಿಟ್ಟುಕೊಂಡು ಅದ್ವೈತಮತವನ್ನು ಪ್ರಚ್ಛನ್ನ ಬೌದ್ಧಮತವೆಂದು ಕರೆಯುವದು ಅನ್ಯಾಯವಲ್ಲವೇ ?

ಉತ್ತರ—ಶ್ರೀ ಶ್ರೀಗಳವರು—ತಮ್ಮ 'ಜ್ಞಾನಸ್ವರೂಪ'ನಾದ ಬ್ರಹ್ಮನೂ ಬೌದ್ಧವಾದ 'ವಿಜ್ಞಾನ'ವೂ ಒಂದೇ ಎಂದು ಕಂಠತಃ ಶಂಕರಾಚಾರ್ಯರು ಒಪ್ಪಿದ್ದಾ ರೆಂದು ನಾವು ಹೇಳಲ್ಲ ಅವರಿಂದ ಪ್ರತಿಪಾದಿತವಾದ ವೈಲಕ್ಷಣ್ಯವು ಯುಕ್ತಿಸಹ ವಲ್ಲವೆಂದು ನಾವು ನಿರೂಪಿಸಿರುತ್ತೇವೆ. ತಥಾಹಿ:—ಸಕಲ ಭೇದರಹಿತನಾಗಿಯೂ, ಪರಿಪೂರ್ಣನಾಗಿಯೂ, ನಿತ್ಯನಾಗಿಯೂ, ಉಪನಿಷದೇಕಸಮಧಿಗಮ್ಯನಾಗಿಯೂ ಇರುವ ಜ್ಞಾನಸ್ವರೂಪವೇ ತತ್ವವೆಂದು ಅದ್ವೈತಿಗಳು ಹೇಳುತ್ತಾರೆ. ಕ್ಷಣಿಕವಾದ 'ವಿಜ್ಞಾನ'ವು ತತ್ವವೆಂದು ಬೌದ್ಧರು ಹೇಳುತ್ತಾರೆ. ಆದರೆ ಅದ್ವೈತಮತದ ರೀತ್ಯಾ ಉಕ್ತವಾದ ನಾಲ್ಕು ವಿಶೇಷಣಗಳೂ ಜ್ಞಾನಸ್ವರೂಪನಾದ ಬ್ರಹ್ಮನಲ್ಲಿಲ್ಲ. ಬ್ರಹ್ಮನು ನಿರ್ವಿಶೇಷನು ಅಂದರೆ ಸಕಲ ಧರ್ಮಗಳಿಂದ ರಹಿತನು ಎಂದು ಅವರು ಒಪ್ಪಿರು ತ್ತಾರೆ. ಬೌದ್ಧರೂ ವಿಜ್ಞಾನವು ನಿರ್ವಿಶೇಷವೆಂದು ಒಪ್ಪಿರುತ್ತಾರೆ.

ಶಾಮಶಾಸ್ತ್ರಿಗಳು— ಹೌದು. ಉಭಯವಾದದಲ್ಲೂ ಅದು ಸಮವೇ.

ಶ್ರೀ ಶ್ರೀಗಳವರು— ಕಿಂಚ ಎರಡು ಪದಾರ್ಥಗಳಿರುವ ಪರಸ್ಪರ ಭೇದ ಸಾಕ್ಷಾತ್ಕಾರವಾಗಬೇಕಾದರೆ ಅವೆರಡರ ಭೇದಧರ್ಮಸಾಕ್ಷಾತ್ಕಾರವು ಆವಶ್ಯಕವು. ನಿನ್ನಲ್ಲಿಲ್ಲದಿರುವ ಯಾವದಾದರೂ ಧರ್ಮವು ನಮ್ಮಲ್ಲೂ, ನಮ್ಮಲ್ಲಿಲ್ಲದಿರುವ ಯಾವು ದಾದರೂ ಧರ್ಮವು ನಿಮ್ಮಲ್ಲೂ, ಇದ್ದರಲ್ಲವೇ ನಮ್ಮಿಬ್ಬರಿಗೂ ಭೇದವನ್ನು ಹೇಳಬೇಕು.

ಸುಬ್ಬರಾಯರು—ಇಬ್ಬರೂ ಅತ್ಯಂತ ಸದೃಶರಾಗಿದ್ದರೆ ?

ಶ್ರೀಶ್ರೀಗಳವರು—ಭಿನ್ನದೇಶಸಂಬಂಧವೆಂಬ ಭೇದಕಧರ್ಮವು ಅವರ್ಜನೀಯವು. ಪ್ರಕೃತದಲ್ಲಿ ಬೌದ್ಧಮತದ "ವಿಜ್ಞಾನವು" ಅದ್ವೈತಶಾಸ್ತ್ರದ "ಜ್ಞಾನವು" ಇವೆರಡೂ ನಿರ್ವಿಶೇಷಗಳಾದುದರಿಂದ ಭೇದವೆಲ್ಲಿಂದ ಬಂತು ? ಸಕಲ ಭೇದರಾಹಿತ್ಯ, ಪೂರ್ಣತ್ವ-

ನಿತ್ಯತ್ವ, ವೇದಜನ್ಯಜ್ಞಾನವಿಷಯತ್ವ ಈ ಒಂದೂ ಧರ್ಮವೂ ಬ್ರಹ್ಮನಲ್ಲಿಲ್ಲ. ಕಿಂಚ ಅದ್ವೈತದ "ಜ್ಞಾನಸ್ವರೂಪನು" ನಿತ್ಯನು; ಬೌದ್ಧವಾದದ "ವಿಜ್ಞಾನವು" ಕ್ಷಣಿಕವು ಎಂಬ ಉಕ್ತಿಯೂ ವಿಚಾರಾಸಹಿಷ್ಣುವಾದುದು. ಹೇಗೆಂದರೆ, ನಿತ್ಯನೆಂದರೆ ಭೂತ-ಭವಿಷತ್-ವರ್ತಮಾನವೆಂಬ ಸರ್ವಕಾಲಸಂಬಂಧವುಳ್ಳವನೆಂದರ್ಥವು. ಕ್ಷಣಿಕವೆಂದರೆ ಸ್ವಲ್ಪಕಾಲ ಸಂಬಂಧವುಳ್ಳದ್ದೆಂದರ್ಥವು. ಕ್ಷಣಿಕ ವಿಜ್ಞಾನಕ್ಕೆ ಸ್ವಲ್ಪಕಾಲ ಸಂಬಂಧವೆಂಬ ಧರ್ಮವನ್ನು ವಿಜ್ಞಾನವಾದಿಗಳಾಗಲೀ 'ಜ್ಞಾನರೂಪ'ಕ್ಕೆ ಸರ್ವಕಾಲ ಸಂಬಂಧವೆಂಬ ಧರ್ಮವನ್ನು ಅದ್ವೈತವಾದಿಗಳಾಗಲೀ ಒಪ್ಪಿಲ್ಲ.

ಶಾಮಶಾಸ್ತ್ರಿಗಳು—ಹೌದು. ಅನ್ಯಥಾ, ಬ್ರಹ್ಮನು ನಿರ್ವಿಶೇಷನೆಂಬ ವಾದವು ಭಗ್ನವಾಗುವದು.

ಶ್ರೀ ಶ್ರೀಗಳವರು—ಇನ್ನು ಉಪನಿಷದೇಕಗಮ್ಯನೆಂದೂ ಬ್ರಹ್ಮನನ್ನು ಹೇಳಲಾಗುವದಿಲ್ಲ. " ಯತೋವಾಚೋನಿವರ್ತಂತೇ ಅಪ್ರಾಪ್ಯಮನಸಾ ಸಹ " ಎಂಬ ಶ್ರುತಿಗೆ ಅದ್ವೈತಿಗಳು ಅರ್ಥಮಾಡಿರುವಂತೆ ಬ್ರಹ್ಮನು " ಮನೋವಾಚಾಮಗೋಚರಂ " ಅಂದರೆ ಮನಸ್ಸಿಗೂ, ವಾಣಿಗೂ ವಿಷಯನಾಗತಕ್ಕವನಲ್ಲ. ಸಗುಣ ಬ್ರಹ್ಮನೇ (ಮಿಥ್ಯಾ ಬ್ರಹ್ಮನು ) ಶ್ರುತಿಪ್ರತಿಪಾದ್ಯನು.

ಶಾಮಶಾಸ್ತ್ರಿಗಳು— ಹೌದು. ಶುದ್ಧಬ್ರಹ್ಮನು ಅಜ್ಞೇಯನು. ಜ್ಞೇಯನಾದರೆ ಅವನು ಅಶುದ್ಧನಾಗುವನು.

ಶ್ರೀ ಶ್ರೀಗಳವರು—ಇನ್ನು ಬ್ರಹ್ಮನಿಗೆ ಯಾವ ಶಬ್ದವಾಚ್ಯತ್ವವೂ ಬರಲು ಶಕ್ಯವಿಲ್ಲ. ಪದಗಳು ನಾಲ್ಕೇ ನಿಮಿತ್ತಗಳಿಂದ ಅರ್ಥಬೋಧಕಗಳಾಗುವವು 'ದಂಡೀ' ಇತ್ಯಾದಿಗಳಂತೆ ಕೆಲವು ದ್ರವ್ಯನಿಮಿತ್ತಕವಾಗಿ ಭೋದಕಗಳಾಗುವವು. ' ಬ್ರಾಹ್ಮಣ ' ಇತ್ಯಾದಿ ನಾಮಗಳಂತೆ ಕೆಲವು ಪದಗಳು ಜಾತಿನಿಮಿತ್ತಕಗಳು. ' ಶ್ಯಾಮ ' ಇತ್ಯಾದಿಗಳಂತೆ ಕೆಲವು ಗುಣನಿಮಿತ್ತವಾಗಿ ಬಂದವುಗಳು. 'ಪಾಚಕ' ಮುಂತಾದ ಕೆಲವು ನಾಮಗಳು ಕ್ರಿಯಾನಿಮಿತ್ತವಾಗಿ ಇಡಲ್ಪಟ್ಟವುಗಳು. ಅದ್ವೈತಿಗಳ " ಜ್ಞಾನಸ್ವರೂಪ "ದಲ್ಲಿ ಪೂರ್ವೋಕ್ತವಾದ ಯಾವ ನಿಮಿತ್ತಗಳೂ ಇಲ್ಲದುದರಿಂದ ಯಾವ ಶಬ್ದವಾಚ್ಯತ್ವವೂ ಕೂಡುವದಿಲ್ಲ. "ಅಥಕಸ್ಮಾದುಚ್ಯತೇ ಬ್ರಹ್ಮ, ಬೃಹಂತೋಹ್ಯಸ್ಮಿನ್ಗುಣಾಃ " ಎಂಬ ಶ್ರುತ್ಯನುಸಾರವಾಗಿ ಗುಣಪೂರ್ಣವೆಂಬ ಅರ್ಥವುಳ್ಳ ಬ್ರಹ್ಮ ಶಬ್ದವಾಚ್ಯತ್ವವು ಸರ್ವಥಾ ಅಸಂಭಾವಿತವು. ಇದೇ ವಿಷಯವನ್ನು ಅದ್ವೈತ ಸಿದ್ಧಿಕಾರರು ನಿರೂಪಿಸಿರುತ್ತಾರೆ.

" ಬ್ರಹ್ಮಣ್ಯವಾಚ್ಯೇ ಯೋ ವಿದ್ವಾನ್ ವಾಚ್ಯತಾಮಧಿಗಚ್ಛತಿ ।
ಸನಿಸ್ತ್ರಪೋನಿಮಿತ್ತಾನಾಂ ವಿರಹೈಃ ಪ್ರತಿಬೋಧ್ಯತಾಂ ॥ "

ಅಂದರೆ ಯಾವ ವಿದ್ವಾಂಸನು ಅವಾಚ್ಯನಾದ ಬ್ರಹ್ಮನಲ್ಲಿ ವಾಚ್ಯತ್ವವುಂಟೆಂದು ತಿಳಿಯುತ್ತಾನೆಯೋ ಆ ನಿರ್ಲಜ್ಜನಿಗೆ ವಾಚ್ಯತ್ವಪ್ರಯೋಜಕಗಳಾದ ಯಾವ ನಿಮಿತ್ತಗಳೂ ಬ್ರಹ್ಮನಲ್ಲಿ ಇಲ್ಲವೆಂದು ಉಪದೇಶ ಮಾಡಬೇಕು ಹೀಗೆ ವಿಚಾರಾನಂತರ ಪರಮತತ್ವ ವಿಷಯದಲ್ಲಿಯೂ ಅತ್ಯಂತ ಸಾದೃಶ್ಯವಿರುವುದರಿಂದ ಪೂರ್ವಿಕರುಗಳಲ್ಲೇ ಅನೇಕರು ಅದ್ವೈತಶಾಸ್ತ್ರವನ್ನು "ಪ್ರಚ್ಛನ್ನಬೌದ್ಧವಾದ"ವೆಂದು ಕರೆದಿರುತ್ತಾರೆ.

ಸುಬ್ಬರಾಯರು—ಸ್ವಾಮೀ! ಬ್ರಹ್ಮನು ಸರ್ವಥಾ ಅಜ್ಞೇಯನಾಗಿದ್ದರೆ ಅವನು ಇದ್ದಾನೆ ಎಂದು ತಾನೇ ಹೇಗೆ ಹೇಳುವುದು ? ಅವನು ಶಶಶೃಂಗಪ್ರಾಯನಾದವನಲ್ಲವೇ ?

ಶಾಮಶಾಸ್ತ್ರಿಗಳು—ಅದು ಹೇಗೆ ? "ಸತ್ಯಂಜ್ಞಾನಮನಂತಂಬ್ರಹ್ಮ" ಎಂಬ ಶ್ರುತಿಯಲ್ಲಿ ಬ್ರಹ್ಮನಿಗೆ ಜ್ಞಾನಸ್ವರೂಪತ್ವವು ಹೇಳಿರುವುದಷ್ಟೆ !

ಶ್ರೀಶ್ರೀಗಳವರು—ಹಾಗೆ ಹೇಳಿದರೆ ನೀವು ಬ್ರಹ್ಮನಿಗೆ ಶ್ರುತಿಪ್ರತಿಪಾದ್ಯತ್ವವೆಂಬ ಧರ್ಮವನ್ನು ಒಪ್ಪಬೇಕು !

ಶಾಮಶಾಸ್ತ್ರಿಗಳು—ಹೌದು. ಅದು ಕೂಡುವುದಿಲ್ಲ ಬ್ರಹ್ಮನು ಯಾವ ಪ್ರಮಾಣದಿಂದಲೂ ಜ್ಞೇಯನಲ್ಲ. ಅವನು ಕೇವಲ ಸ್ಫುರಣರೂಪನು. ಜಾಗ್ರತ್ ಸ್ವಪ್ನಾವಸ್ಥೆಗಳನ್ನು ದಾಟಿದ ನಂತರ ಸುಷುಪ್ತಿಯಲ್ಲಿ ಚೈತನ್ಯಮಾತ್ರವು ಇರುತ್ತದೆ. ತದಿತರ ಸಮಸ್ತವೂ ಅವನಲ್ಲೇ ಲೀನವಾಗಿರುತ್ತದೆ.

ಶ್ರೀಶ್ರೀಗಳವರು—ಸಮಸ್ತವೂ ಅವನಲ್ಲಿ ಲೀನವಾಗಿರುತ್ತದೆ ಎಂಬಲ್ಲಿ ಪ್ರಮಾಣವೇನು ?

ಶಾಮಶಾಸ್ತ್ರಿಗಳು—ಉತ್ತರಕಾಲದ ಪರಾಮರ್ಶದಿಂದ ಹಾಗೆ ಅನುಮಿಸಬೇಕು!

ಶ್ರೀ ಶ್ರೀಗಳವರು—ಹಾಗಾದರೆ ಅನುಮಿತಿವಿಷಯತ್ವವನ್ನು ನಿಮ್ಮ ಬ್ರಹ್ಮನಿಗೆ ಒಪ್ಪುವಿರೋ ?

ಶಾಮಶಾಸ್ತ್ರಿಗಳು—ಅದಾಗಲಾರದು. ಹೋಗಲಿ ! ಬ್ರಹ್ಮನು ಅನುಭವೈಕಗಮ್ಯನೆಂದು ಯಾಕೆ ಹೇಳಬಾರದು ?

ಶ್ರೀ ಶ್ರೀಗಳವರು—ಅನುಭವಗಮ್ಯನೆಂದರೆ ಜ್ಞಾನಕ್ಕೆ ವಿಷಯನೆಂದರ್ಥವು. ಜ್ಞಾನವಿಷಯತ್ವವೆಂಬ ಧರ್ಮವನ್ನು ಬ್ರಹ್ಮನಿಗೆ ಒಪ್ಪುವಿರೋ ?

ಶ್ಯಾಮಶಾಸ್ತ್ರಿಗಳು—ಅದು ಹೋಗಲಿ ! ಅನುಭವಸ್ವರೂಪನೇ ಬ್ರಹ್ಮನು. ಪ್ರತ್ಯಕ್ಷ ಅನುಮಾನ, ಆಗಮಾದಿ ಆರು ಪ್ರಮಾಣಗಳಿಂದಲೂ ವೇದ್ಯನಲ್ಲ. ಆದರೂ ಅವನು ಇಲ್ಲವೆಂದು ಹೇಳಲಾಗುವುದಿಲ್ಲ. ಅವನು ಸ್ವಪ್ರಕಾಶನು.

ಶ್ರೀ ಶ್ರೀಗಳವರು—“ಅವೇದ್ಯತ್ವಂ ಸ್ವಪ್ರಕಾಶತ್ವಂ” ಎಂದು ಅದ್ವೈತ ಶಾಸ್ತ್ರ ದಲ್ಲಿ ಪರಿಷ್ಕಾರ ಮಾಡಿರುವುದರಿಂದ ಬ್ರಹ್ಮನು ಸರ್ವರಿಂದಲೂ ಅವೇದ್ಯನೆಂದರ್ಥವು. ಹೀಗಿರುವಲ್ಲಿ ಅನುಭವರೂಪವಾದ ಒಂದು ವಸ್ತುವು ಇರುವುದೆಂದು **ನಮಗೆ** ಹೇಗೆ ಗೊತ್ತಾಗಬೇಕು ? ಅದ್ವೈತಶಾಸ್ತ್ರದಲ್ಲಿ ಬ್ರಹ್ಮನು ಸಕಲಪ್ರಮಾಣಬಹಿರ್ಭೂತ ನೆಂದು ಅಭಯಂಕರ ವಾಸುದೇವಶಾಸ್ತ್ರಿಗಳೂ ಸ್ಪಷ್ಟವಾಗಿ ಒರೆದಿರುತ್ತಾರೆ.

“ದ್ವೈತವಾದಿನಾಂ ಮತೇ ಬ್ರಹ್ಮಣಃ ಪ್ರಮಾಣವಿಷಯತ್ವಂ ನ್ಯಾಯ್ಯಮ । ಅದ್ವೈತವಾದಿನಾಂ ಮತೇ ನ ಕಥಮಪಿ ಪ್ರಮಾಣವಿಷಯತ್ವಂ ಬ್ರಹ್ಮಣಃ । ತನ್ಮತಾನುಸಾರೇಣಾದ್ವೈತಾತ್ಮಸಾಕ್ಷಾತ್ಕಾರೇ ಸತಿ ನ ಪ್ರಮಾತುಃ ಪ್ರಮಾತೃತ್ವಂ ನಾಪಿ ಬ್ರಹ್ಮಣಃ ಪ್ರಮೇಯತ್ವಂ । ಪ್ರಮಾತೃಪ್ರಮೇಯಭಾವಸ್ಯ ದ್ವೈತ ಮೂಲಕತ್ವಾತ್ ॥ ”....

ಶಾಮಶಾಸ್ತ್ರಿಗಳು—ಇದು ದುರ್ಗಮವಾದ ವಿಚಾರವು. ಸನ್ನಿಧಾನದಲ್ಲಿ ಹೆಚ್ಚು ಚರ್ಚಿಸುವುದಕ್ಕೆ ಸಮರ್ಥನಲ್ಲ.

[ಇಲ್ಲಿಗೆ ವೇದಾಂತ ವಿಚಾರವು ಮುಗಿಯಿತು. ನಂತರ ಲೋಕವ್ಯವಹಾರ ಸಂಬಂಧಿಯಾದ ಕೆಲವು ಪ್ರಶ್ನೋತ್ತರಗಳು ನಡೆದವು—H.S.]

ಶಾಮಶಾಸ್ತ್ರಿಗಳು—ಮಹಾಸ್ವಾಮಿ ! ಈಗ ಬ್ರಾಹ್ಮಣರು ಸ್ವವರ್ಣಾಶ್ರಮೋ ಚಿತ ಧರ್ಮಗಳನ್ನು ಪರಿತ್ಯಾಗ ಮಾಡಿ ಪರಸ್ಪರ ದ್ವೇಷದಿಂದ ಯುಕ್ತರಾಗಿ ಬಹು ಶೋಚನೀಯವಾದ ಅವಸ್ಥೆಯಲ್ಲಿರುತ್ತಾರೆ. ಪ್ರಭುಗಳಾದ ತಾವು ಇಪ್ಪತ್ತು ಜನ ವಿದ್ವಾಂಸರುಗಳನ್ನು ತಯಾರು ಮಾಡಿ ದೇಶದೇಶಾಂತರಕ್ಕೆ ಉಪದೇಶಾರ್ಥವಾಗಿ ದಯಮಾಡಿ ಕಳುಹಿಸಿ ಕೊಡಬೇಕಾಗಿ ಸನ್ನಿಧಾನದಲ್ಲಿ ವಿಜ್ಞಾಪಿಸಿಕೊಳ್ಳುತ್ತೇನೆ.

ಶ್ರೀ ಶ್ರೀಗಳವರು—ಹಾಗೆಯೇ ಮಾಡಬೇಕೆಂದಿದ್ದೇವೆ. ತದರ್ಥವಾಗಿ ವರ್ಷಕ್ಕೆ ೬೦,೦೦೦ ರೂಪಾಯಿಗಳು ಉತ್ಪತ್ತಿಯಾಗುವಷ್ಟು ಮೂಲ ಧನವನ್ನು ಏರ್ಪಡಿ ಸಿದ್ದೇವೆ. ಈ ವಿಷಯವನ್ನು ಪ್ರಕಟ ಮಾಡಿದ್ದೇವೆ. ಆದರೆ ಧರ್ಮೋಪದೇಶವನ್ನು ಯಾವ ರೀತಿಯಲ್ಲಿ ನಡೆಸಬೇಕೆಂದು ನಿಮ್ಮ ಅಭಿಪ್ರಾಯವು ?

ಶಾಮಶಾಸ್ತ್ರಿಗಳು—ವಿಜ್ಞಾಪನೆ ಮಾಡಿಕೊಳ್ಳುತ್ತೇನೆ. ಸರ್ವಮತ ಸಾಧಾ ರಣವಾಗಿ “ಸತ್ಯಂ ವದ” “ಪರದಾರಾನ್ ಮಾ ಗಚ್ಛ” ಇತ್ಯಾದಿ ಧರ್ಮಗಳು ಇರು ತ್ತವೆ. ದ್ವೈತವು ಸರಿ ಅದ್ವೈತವು ಸರಿಯಲ್ಲ; ಇತ್ಯಾದಿ ಉಪದೇಶಗಳನ್ನು ಮಾಡದೇ ಸರ್ವಸಾಮಾನ್ಯವಾದ ಧರ್ಮಗಳನ್ನು ಮಾತ್ರ ಉಪನ್ಯಾಸ ಮೂಲಕ ಯಾವ ಮತದ ಜನರಿಗೂ ಉದ್ವೇಗ ಬರದಂತೆ ಚಾತುರ್ಯದಿಂದ ಬೋಧಿಸಬೇಕೆಂದು ನನ್ನ ಅಭಿಪ್ರಾಯವು. ಏಕೆಂದರೆ ದ್ವೈತವು ಸರಿಯೋ ಅದ್ವೈತವು ಸರಿಯೋ ಇವೇ

ಮೊದಲಾದುದನ್ನು ನಿಶ್ಚಯ ಮಾಡುವುದು ಅಶಕ್ಯವು; ಮತ್ತು ಜನರಿಗೆ ಅದನ್ನು ತಿಳಿಯಬೇಕೆಂಬ ಕುತೂಹಲವೂ ಇಲ್ಲ.

ಶ್ರೀ ಶ್ರೀಗಳವರು—ಶಾಸ್ತ್ರಿಗಳೇ! ನಿಮ್ಮ ಮಾತುಗಳು ಆಪಾತತಃ ರಮಣೀಯವಾಗಿ ತೋರುತ್ತವೆ. ವಸ್ತುತಃ ಯಾವ ಧರ್ಮವೂ ಮತವನ್ನು ಬಿಟ್ಟಿಲ್ಲ. ಏಕೆ ನಾನು ಸುಳ್ಳಾಡಬಾರದು ? ಎಂದು ಒಬ್ಬ ಒಂಭತ್ತನವು ಪ್ರಶ್ನೆ ಮಾಡಿದರೆ ಸತ್ಯದಿಂದ ಸರ್ವೋತ್ಕೃಷ್ಟನಾದ ನಾರಾಯಣನು ಪ್ರೀತನಾಗುತ್ತಾನೆ ಎಂದು ನಾವು ಉತ್ತರ ಕೊಡಲೇಬೇಕು. ಇದರಿಂದ ಅದ್ವೈತಿಗಳಿಗೆ ಉಪೇಕ್ಷಾಬುದ್ಧಿಯು ಹುಟ್ಟುತ್ತದೆ. ಮೇಲಾಗಿ ಸಕಲ ಗ್ರಂಥಗಳನ್ನೂ ನೋಡಿ ಶ್ರುತಿ, ಸ್ಮೃತಿ, ಇತಿಹಾಸಾದಿ ಸರ್ವಪ್ರಮಾಣಗಳಿಗೂ ದ್ವೈತ ಮತವು ಅತಿ ಸಮ್ಮತವಾದುದು ಎಂದು ನಾವು ನಿಶ್ಚಯಿಸಿರುತ್ತೇವೆ. ಆ ಮಾರ್ಗದಲ್ಲಿ ಅನುಷ್ಠಾನ ಮಾಡಿದರೇ ಮುಕ್ತಿಯಾಗುವದು; ಅನ್ಯಥಾ ಸರ್ವಥಾ ಆಗಲಾರದೆಂದು ಪ್ರಮಾಣಗಳಿರುತ್ತವೆ. ಹೀಗಿರುವದರಿಂದ ನಾವೂ ಆ ಮತದಲ್ಲಿ ದೃಢನಿಶ್ಚಯವಿಟ್ಟು ಅನುಷ್ಠಾನ ಮಾಡಿ ವಿಷಯಸುಖಗಳನ್ನು ಪರಿತ್ಯಾಗ ಮಾಡಿ ಇತರ ಅಜ್ಞರಾದ ಜನರಲ್ಲಿ ಕಾರುಣ್ಯ ಹೊಂದಿ ಅವರೂ ಈ ಸನ್ಮಾರ್ಗವನ್ನು ಅನುವರ್ತಿಸಲಿ, ಸಕಲ ಲೋಕವೂ ಈ ನಿಷ್ಕಂಟಕವಾದ ಜ್ಞಾನವನ್ನು ಹೊಂದಿ ಮುಕ್ತವಾಗಲಿ ಎಂಬ ಅಭಿಪ್ರಾಯದಿಂದ ಮತ್ತು ತತ್ತ್ವೋಪದೇಶವನ್ನು ಮಾಡುವದೇ ಪರಮ ಧರ್ಮವೆಂದು ಗೀತೆಯಲ್ಲಿ ಶ್ರೀಕೃಷ್ಣನು ಹೇಳಿರುವದರಿಂದ ಈ ವೇದಾಂತ ವಿಚಾರದಲ್ಲಿ ಆಸಕ್ತರಾಗಿದ್ದೇವೆ. (ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ । ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯ ಸಂಶಯಃ H. S. ) ವೇದಾಂತ ವಿಚಾರಾರ್ಥವಾಗಿ ನೀವು ಎಲ್ಲಿಗೆ ಕರೆದರೆ ನಾವು ಅಲ್ಲಿಗೆ ಬರುವದಕ್ಕೆ ಸಿದ್ಧರಾಗಿರುತ್ತೇವೆ. ನಮ್ಮ ಬಳಿಗೆ ನೀವೇ ಬರಬೇಕು, ರಾಜ ಮರ್ಯಾದೆಗಳನ್ನು ಮಾಡಬೇಕು ಎಂದು ನಾವು ಅಪೇಕ್ಷಿಸುವದಿಲ್ಲ.

ಶಾಮಶಾಸ್ತ್ರಿಗಳು—ತಾವು ಕೋರದಿದ್ದರೂ ನಾವುಗಳೇ ನಮಸ್ಕಾರಾದಿಗಳಿಂದ ತಮ್ಮನ್ನು ಪೂಜೆ ಮಾಡಬೇಕು. ಹಾಗೆ ಮಾಡದವನು ಮೂರ್ಖನೆನಿಸುವನು. ಆದರೆ ದ್ವೈತ ತತ್ತ್ವವನ್ನು ತಾವು ಉಪದೇಶ ಮಾಡಿದರೂ, ಅದ್ವೈತವು ತಪ್ಪೆಂದು ಏಕೆ ಹೇಳಬೇಕು ? ಮೈಸೂರಿಗೆ ನಂಜನಗೂಡಿನಿಂದಲೂ ಮಾರ್ಗವುಂಟು, ಯಡತೊರೆಯಿಂದಲೂ ಮಾರ್ಗವುಂಟು, ಬೆಂಗಳೂರಿನಿಂದಲೂ ಮಾರ್ಗವುಂಟು. ಹಾಗೆ ಮುಕ್ತಿಗೆ ನಾನಾ ಮಾರ್ಗಗಳಿರುವದರಿಂದ ದ್ವೈತವೇ ಸರಿ ಎಂದು ಹೇಗೆ ಹೇಳುವದು ?

ಶ್ರೀ ಶ್ರೀಗಳವರು—ಶಾಸ್ತ್ರಿಗಳೇ ! ಇದು ಹಾಗಾಗಲಾರದು. ಇಲ್ಲಿಂದ ನೆಟ್ಟಗೆ ಪೂರ್ವ ದಿಕ್ಕಿಗೆ ಪ್ರಯಾಣ ಮಾಡಿದರೂ, ನೆಟ್ಟಗೆ ಪಶ್ಚಿಮ ದಿಕ್ಕಿಗೆ ಪ್ರಯಾಣ

ಮಾಡಿದರೂ ಬೆಂಗಳೂರು ಸಿಕ್ಕುತ್ತದೆ ಎಂದು ಹೇಳಲಿಕ್ಕಾಗುವುದಿಲ್ಲ, ಒಂದೇ ಮಾರ್ಗವು ಯಥಾರ್ಥವು. ಹೀಗೆಯೇ ದ್ವೈತಾದ್ವೈತ ಮತಗಳು ಪರಸ್ಪರ ವಿರುದ್ಧಗಳಾದುವರಿಂದ ಉಭಯ ಮಾರ್ಗದಿಂದಲೂ ಮುಕ್ತಿಯಾಗಲಾರದು. ಆದುದರಿಂದ ಸರ್ವ ಶಾಸ್ತ್ರಗಳನ್ನೂ ಆಲೋಚನೆ ಮಾಡಿ ಪುನಃ ಪುನಃ ವಿಚಾರಿಸಿದರೂ, ದ್ವೈತ ಮತವು ಅತ್ಯಂತ ಪ್ರಾಮಾಣಿಕವಾಗಿರುವದರಿಂದಲೇ ನೀವುಗಳೂ ಕೂಡ ಆ ರೀತಿಯಿಂದಲೇ ಉಪಾಸನೆ ಮಾಡಬೇಕು ಎಂದು ನಿಮಗೆ ಉಪಕಾರವಾಗುವದೆಂದು ತಿಳಿದು ನಾವು ಉಪದೇಶ ಮಾಡುತ್ತೇವೆ. ಕೇಳದೆ ಹೋದರೆ ನಾವೇನು ಮಾಡಲಾದೀತು ? ಇನ್ನು ಸಾಧಾರಣ ಧರ್ಮವೆಲ್ಲಿಂದ ಬಂತು ?

ಶಾಮಶಾಸ್ತ್ರಿಗಳು—ಮಹಾಸ್ವಾಮಿ ! ಗೀತೆಯು ಸರ್ವಮತ ಸಮ್ಮತವು. ತಾವು ಅದನ್ನು ಉಪದೇಶ ಮಾಡಿದರೆ ಸಾಕು. ದ್ವೈತ ಮತವೇ ಸರಿ ಎಂಬ ಆಗ್ರಹವು ಕೂಡದು.

ಸುಬ್ಬರಾಯರು—ಶಾಸ್ತ್ರಿಗಳೇ ! ವಿಚಾರಾನಂತರ ಮನಸಾ ನಿರ್ಣೀತವಾದ ಮತವನ್ನು ಇದೇ ಸರಿ ಎಂದು ಹೇಳುವದು ಆಗ್ರಹವೇ ? ನಾಲ್ಕು ಅಧಿಕ ಮೂರು ಏಳೇ ಆಗುತ್ತದೆ ಎಂದು ಶಪಥ ಮಾಡಿ ಹೇಳಿದರೆ ದೋಷವೇ ? ಸರ್ವ ಮತ ಸಾಧಾರಣವಾದ ಉಪದೇಶವನ್ನು ಮಾಡಬೇಕೆಂಬ ತಮ್ಮ ಮತದಲ್ಲಿ ತಮಗೆ ಆಗ್ರಹವಿಲ್ಲವೋ ? ಹಿಂದೂ ಮುಸಲ್ಮಾನಾದಿ ಸರ್ವ ಜನಾಂಗಗಳೂ ಒಂದಾಗಬೇಕೆಂಬ ಅಭಿಪ್ರಾಯದಿಂದ ಪ್ರಾಣ ಹೋದರೂ ಚಿಂತೆಯಿಲ್ಲ ಎಂದು ಗಾಂಧಿಯು ತನ್ನ ಮತವನ್ನು ತಾನೂ ಅನುಷ್ಠಾನ ಮಾಡಿ, ಇತರರಿಗೂ ಉಪದೇಶ ಮಾಡುತ್ತಿರುವದು ಅನ್ಯಾಯವೋ ?

ಶಾಮಶಾಸ್ತ್ರಿಗಳು—ಇಲ್ಲ. ಗಾಂಧಿಯವರ ಆಚರಣೆಯು ಪರಮಧರ್ಮವು. ಸರ್ವ ಆಂಗ್ಲೇಯರೂ ಅದನ್ನು ಕೊಂಡಾಡುತ್ತಾರೆ. ಆದರೆ ತತ್ವವಿಚಾರವನ್ನು ಅಂತರಂಗವಾಗಿ ಮಾಡಲಿ ! ಸರ್ವ ಜನರಿಗೂ ಅದನ್ನು ಒತ್ತಿ ಏಕೆ ಉಪದೇಶ ಮಾಡಬೇಕು ?

ಸುಬ್ಬರಾಯರು—ಆಂಗ್ಲೇಯರು ಕೊಂಡಾಡುವದರಿಂದ ಗಾಂಧಿಯವರ ಆಚರಣೆಯು ಧರ್ಮವಾಗಲಾರದು, ಶ್ರುತಿ, ಸ್ಮೃತಿಗಳಿಗೆ ಸಮ್ಮತವಾಗಿದ್ದರೆ ಧರ್ಮವಾಗುವದು. ತತ್ವ ವಿಚಾರದಲ್ಲಿ ಶಪಥಪೂರ್ವಕವಾದ ಬಹಿರಂಗೋಪದೇಶವು ಅನುಚಿತವೆಂಬುದು "ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ" ಅಂದರೆ ತತ್ವಜ್ಞಾನಕ್ಕಿಂತ ಪವಿತ್ರವಾದ ವಸ್ತುವಿಲ್ಲವು ! ಎಂಬಂತೆ "Motto" ಅಂದರೆ ಅನುಷ್ಠಾನಾರ್ಹವಾದ ಪ್ರತಿಜ್ಞೆಯ ಪಾಲಕರಾದ, ನಮ್ಮ ವಿಶ್ವವಿದ್ಯಾನಿಲಯದಲ್ಲಿ ಉಚ್ಚಸ್ಥಾನದಲ್ಲಿ ಅಧಿಕೃತರಾದ ತಾವು ಹೇಗೆ ಹೇಳುವದಕ್ಕಾದೀತು ? ಮೇಲಾಗಿ

"ಕಾಂಪ್ರಮೈಸ್" (Compromise) ನಾಮಕ ಗ್ರಂಥದಲ್ಲಿ ಲಾರ್ಡ್ ಮಾರ್ಲೆ ಸಾಹೇಬನು ಈ ರೀತಿ ಬರೆದಿರುತ್ತಾನೆ. ಯಾವಾತನು ಬುದ್ಧಿಯುಕ್ತನಾದರೂ ತತ್ವ ವಿಚಾರವನ್ನು ಮಾಡುವದಿಲ್ಲವೋ, ವಿಚಾರ ಮಾಡಿದ ನಂತರ ತನ್ನ ಮನಸ್ಸಿನಲ್ಲಿ ನಿಶ್ಚಿತವಾದ ಅಭಿಪ್ರಾಯವನ್ನು ತಾನೂ ಅನುಷ್ಠಾನ ಮಾಡದೆ ಉಪದೇಶ ಮಾಡದೆ ಇರುವನೋ ಅಂಥವನು "An intellectual bastard" ಜ್ಞಾನ ಮಾರ್ಗದಲ್ಲಿ ತಂದೆಗೆ ಹುಟ್ಟಿದವನಲ್ಲ; ಮತ್ತು "An intellectual impostor.... who has sold his birth-right for a mess of pottage" ಜ್ಞಾನ ಮಾರ್ಗದಲ್ಲಿ ಆತನು ವಂಚಕನು ಮತ್ತು ತನ್ನ ಜನ್ಮತಃ ಪ್ರಾಪ್ತವಾದ ಜ್ಞಾನ ರೂಪವಾದ ಆಸ್ತಿಯನ್ನು ಒಂದು ಬಟ್ಟಲ ಚಹಾಕ್ಕಾಗಿ ಮಾರಿಕೊಂಡವನೆಂದು ಅಂತಹ ಮನುಷ್ಯನನ್ನು ಧಿಕ್ಕರಿಸಿರುತ್ತಾನೆ. ಅದೂ ಅಲ್ಲದೆ ಪರಮ ಕಾರುಣಿಕರಾದ ಜ್ಞಾನಿಗಳಾದ ಸಾಧುಗಳು ತಮ್ಮ ಅನುಕಂಪೆಗೆ ವಿಷಯರಾದ ಜನಗಳಿಗೆ ಉತ್ತಮವಾದ ಮೋಕ್ಷಪ್ರದವಾದ ಬ್ರಹ್ಮವಿದ್ಯೆಯನ್ನು ಪುನಃ ಪುನಃ ಉಪದೇಶ ಮಾಡದೆ ಮರೆ ಮಾಡಿ ಸಾಮಾನ್ಯವಾದ ಧರ್ಮೋಪದೇಶವನ್ನು ಮಾತ್ರ ಮಾಡಬೇಕೆಂದು ನೀವು ನಿರ್ಬಂಧ ಮಾಡುವದಕ್ಕೆ ಕಾರಣವೇನು ?

ಶಾಮಶಾಸ್ತ್ರಿಗಳು— "Compromise" ನಾಮ ಗ್ರಂಥದಲ್ಲಿ ಹಾಗೆ ಇದ್ದರೆ ಅದು ಗ್ರಂಥದ ಹೆಸರಿನಿಂದ ಸೂಚಿತವಾದ ಅರ್ಥಕ್ಕೇ ವಿರುದ್ಧವಾದ ನಿಶ್ಚಯವಾಯಿತಲ್ಲಾ !

ಸುಬ್ಬರಾಯರು—ಗ್ರಂಥದ ಹೆಸರನ್ನು ಹಾಗಿಟ್ಟರೂ ಜ್ಞಾನ ಮಾರ್ಗದಲ್ಲಿ ಮತ್ತು ಮತಸಂಬಂಧಿ ಅನುಷ್ಠಾನಗಳಲ್ಲಿ "Compromise" ಅಂದರೆ ಮಧ್ಯಸ್ಥನ ನಡೆವಳಿಕೆಯನ್ನು ಮಾಡಕೂಡದೆಂದು ಆ ಗ್ರಂಥಕರ್ತನ ಸಿದ್ಧಾಂತವು.

ಶ್ರೀ ಶ್ರೀಗಳವರು—ಶಾಸ್ತ್ರಿಗಳೇ ! ನೀವು ಸೂಚಿಸಿದ ಮಧ್ಯಸ್ಥನ ನಡವಳಿಕೆಯು ಒಂದು ವಿಧವಾದ ವಂಚನೆಯೇ ! ನಮಗೆ ವ್ಯಕ್ತಿನಿಂದೆಯಲ್ಲಿ ಸ್ವಲ್ಪವೂ ತಾತ್ಪರ್ಯವಿಲ್ಲ. ಆದುದರಿಂದಲೇ ನೀವು ಎಲ್ಲಿ ವಿಚಾರಕ್ಕೆ ಕರೆದರೂ ನಾವು ಅಲ್ಲಿಗೆ ಬರಲು ಸಿದ್ಧರಾಗಿರುತ್ತೇವೆ. ಸರ್ವ ಜನರೂ ವಿಚಾರ ಮಾಡಿ ತತ್ವಜ್ಞಾನವನ್ನು ಹೊಂದಲಿ ಎಂಬ ಉದ್ದೇಶದಿಂದ ನಾವು ದೇಶದೇಶಾಂತರದಲ್ಲಿ ಸುತ್ತುತ್ತಿರುವೆವು.

ವೆಂಕಟಕೃಷ್ಣಯ್ಯನವರು— ದೇವರು ! ನಮಗೆ ತತ್ವ ವಿಚಾರವೂ ಬೇಡ. ನಮಗೆ ದೇವರೂ ಬೇಡ. ಈಗ ನಮಗೆ ಕರ್ಮವೇ ದೇವರು. ಬರೀ ಉಪದೇಶದಿಂದೇನು ? ಸತ್ಕರ್ಮಾನುಷ್ಠಾನಗಳನ್ನಾಚರಿಸುತ್ತಾ ನಮಗೆಲ್ಲರಿಗೂ ನಿದರ್ಶನ ರೂಪರಾದ ಮಹಾ ಪುರುಷರಿದ್ದರೆ ಸಾಕು.

ಶ್ರೀ ಶ್ರೀಗಳವರು— (ನಗುತ್ತಾ) ಜಡವಾದ ಕರ್ಮವು ಸಾಕ್ಷಾತ್ತಾಗಿ ಫಲವನ್ನು ಕೊಡಲಾರದು. ಕರ್ಮದಿಂದ ಸಂತುಷ್ಟನಾದ ಚೇತನನು ಫಲ ಕೊಡುವವನೆಂಬ ನಿಯಮವುಂಟು. ಆದುದರಿಂದ ದುಃಸಂಗವನ್ನೂ ದುರ್ವಿಷಯಗಳನ್ನೂ ಪರಿತ್ಯಾಗ ಮಾಡಿ, ವೇದವಿಹಿತವಾದ ಸತ್ಕರ್ಮಾನುಷ್ಠಾನಗಳನ್ನು ಭಗವದರ್ಪಣ ಬುದ್ಧಿಯಿಂದ ಆಚರಿಸಿ, ವೇದೋಕ್ತ ಧರ್ಮಾಚರಣೆಯಿಂದ ಪ್ರಸನ್ನನಾದ ಪರಮ ಚೇತನನಾದ ಶ್ರೀಕೃಷ್ಣನ ಪರಮಾನುಗ್ರಹಕ್ಕೆ ಪಾತ್ರರಾಗಬೇಕೆಂದು ನಾವು ಉಪದೇಶ ಮಾಡುತ್ತಿದ್ದೇವೆ.



## V

ತಾ॥ 24—6—1930 ರಲ್ಲಿ

### ಪ್ರಶ್ನೆ ಮಾಡಿದವರು ಹೆಚ್. ಸುಬ್ಬರಾಯರು, ಎಂ.ಎ.



೧ **ಪ್ರಶ್ನೆ**— ಮಹಾಸ್ವಾಮೀ ! ಈ ದಿವಸ ತಾವು ವೇದಾಪೌರುಷೇಯತ್ವವನ್ನು ಸಮರ್ಥನೆ ಮಾಡಿ ತೋರಿಸಿ ಕೊಡಬೇಕು. ಒಬ್ಬ ಆಂಗ್ಲೇಯ ಗ್ರಂಥಕರ್ತನು "The name Vyavaharika Satta is a contradiction in terms" ಅಂದರೆ ವ್ಯಾವಹಾರಿಕ ಸತ್ತಾ ಎಂಬುದು ವಿರುದ್ಧೋಕ್ತಿಯು. ವ್ಯಾವಹಾರಿಕವೆಂದರೆ ಬಾಧ್ಯವು (ಇಲ್ಲದೆ ಇರುವದು), ಸತ್ತಾ ಎಂದರೆ ಅಬಾಧ್ಯವು (ಇರೋಣವು) ಒಟ್ಟಿಗೆ ಬಾಧ್ಯಾಬಾಧ್ಯವು ಎಂದು ವಿರುದ್ಧೋಕ್ತಿಯಾದುದರಿಂದ ಈ ಲಕ್ಷಣವುಳ್ಳ ವಸ್ತುವು ಅಸಂಭಾವಿತವು ಎಂದು ಬರೆದಿರುತ್ತಾನೆ. ಹೀಗೆಯೇ ಅಪೌರುಷೇಯ ವಾಕ್ಯವೆಂಬುವದು ವಿರುದ್ಧೋಕ್ತಿಯು. ಅಪೌರುಷೇಯವೆಂದರೆ ಯಾವ ಪುರುಷನಿಂದಲೂ ರಚಿತವಾಗದುದು ಎಂದರ್ಥವು. ವಾಕ್ಯವೆಂದರೆ ಕರ್ತೃರಚಿತ ವರ್ಣ ಸಮೂಹವು. ಆದುದರಿಂದ ಅಪೌರುಷೇಯ ವಾಕ್ಯವೆಂಬುದೇ ಅಸಂಭಾವಿತವು. ಇದಕ್ಕೆ ಏನು ಅಪ್ಪಣೆಯಾಗುತ್ತದೆ ?

**ಉತ್ತರ**— ಶ್ರೀ ಶ್ರೀಗಳವರು— ಅಪೌರುಷೇಯತ್ವವೂ ವಾಕ್ಯತ್ವವೂ ಅಂಥ ವಿರುದ್ಧ ಧರ್ಮಗಳಲ್ಲ. ಅಪೌರುಷೇಯವೆಂದರೆ ಸ್ವತಂತ್ರಕರ್ತನಿಂದ ಪ್ರಣೀತವಾದುದಲ್ಲ ಎಂದು ಇಷ್ಟೇ ಅರ್ಥವು. ಈಗ ಕಾಳಿದಾಸಾದಿ ಕೃತ ವಾಕ್ಯಗಳನ್ನು ಉಚ್ಚರಿಸುವಾಗ ಅವುಗಳನ್ನು ಪೂರ್ವಿಕರ ಉಪದೇಶಾನುಸಾರವಾಗಿ ಉಚ್ಚರಿಸುತ್ತೇವೆ. ಹೀಗೆ ಹಿಂದಕ್ಕೆ ಹೋಗುತ್ತ ಹೋಗುತ್ತ ಕಾಳಿದಾಸನಲ್ಲಿ ಪರಂಪರೆಯು ವಿಚ್ಛಿನ್ನ

ವಾಗುತ್ತದೆ. ವೇದವಾಕ್ಯವು ಹಾಗೆ ಅಲ್ಲ. ನಮ್ಮ ವೇದೋಚ್ಚಾರಣೆಗೆ ಪೂರ್ವಿಕರ ಉಚ್ಚಾರಣೆಯು ಕಾರಣವು. ಅವರ ಉಚ್ಚಾರಣೆಗೆ ಅವರಿಗಿಂತಲೂ ಪೂರ್ವಿಕರ ಉಚ್ಚಾರಣೆಯು ಕಾರಣವು. ಕೊನೆಗೆ ನಾರಾಯಣನ ಉಚ್ಚಾರಣೆಗೂ ತನ್ನ ಪೂರ್ವ ಕಲ್ಪದ ಉಚ್ಚಾರಣೆಯು ಕಾರಣವು. ಹೀಗೆ ಎಷ್ಟು ಹಿಂದೆ ಹೋದರೂ ಉಚ್ಚಾರಣ ಪರಂಪರೆಗೆ ವಿಚ್ಛೇದವು ಬಾರದುದರಿಂದ ವೇದವಾಕ್ಯಗಳು ಅನಾದಿ ಎನಿಸುತ್ತವೆ. ಮತ್ತು ಈ ಪರಂಪರೆಯಲ್ಲಿ ಯಾವ ಪುರುಷನ ಉಚ್ಚಾರಣೆಯೂ ಗುರುಗಳ ಸಜಾತೀಯವಾದ ಉಚ್ಚಾರಣೆಯನ್ನು ಅಪೇಕ್ಷಿಸದಂತೆ ತನ್ನ ಸ್ವಬುದ್ಧಿಯಿಂದ ರಚಿತವಲ್ಲವಾದುದರಿಂದ ವೇದವಾಕ್ಯಗಳು ಅಪೌರುಷೇಯಗಳೆನಿಸುವವು.

೨ **ಪ್ರಶ್ನೆ**— ಸರಿ. ಅಪೌರುಷೇಯ ವಾಕ್ಯವು ಇದೆಯೆಂಬಲ್ಲಿ ಪ್ರಮಾಣ ವೇನು ? ಸಂಭಾವಿತವಾದದ್ದೆಲ್ಲ ಇರುವದಿಲ್ಲ. ಮೇಲಾಗಿ ವೇದವಾಕ್ಯವೇ ಅಪೌರು ಷೇಯವು ಎಂದು ಏಕೆ ಕಲ್ಪನೆ ಮಾಡಬೇಕು ?

**ಉತ್ತರ**— ವಾದಿಗಳು ನಾಸ್ತಿಕರು, ಆಸ್ತಿಕರು ಎಂದು ಎರಡು ವಿಧ. ಇಲ್ಲಿ ಧರ್ಮಾಧರ್ಮಗಳನ್ನು ಒಪ್ಪುವವರು ಆಸ್ತಿಕರು ಎಂದು ಅರ್ಥವು. ಒಂದು ಅಪೌರುಷೇಯ ವಾಕ್ಯವೆಂಬ ಪದಾರ್ಥವನ್ನು ಒಪ್ಪದಿದ್ದರೆ ಸರ್ವ ಆಸ್ತಿಕರಿಗೂ ಅಭಿಮತವಾದ "ಧರ್ಮ" ವೆಂಬ ಪದಾರ್ಥವೇ ಸಿದ್ಧಿಸುವದಿಲ್ಲ.

೩ **ಪ್ರಶ್ನೆ**— ಸ್ವಾಮೀ ! ಧರ್ಮವೆಂದರೆ ಏನು ?

**ಉತ್ತರ**—ಅದೃಷ್ಟದ್ವಾರಾ ಸುಖಜನಕವಾದ ವ್ಯಾಪಾರವು "ಧರ್ಮ" ವೆನಿಸು ವದು. ಒಂದೊಂದು ವೇಳೆ ಅದೃಷ್ಟವೂ ಧರ್ಮವೆಂದು ಶಾಸ್ತ್ರದಲ್ಲಿ ವ್ಯವಹರಿಸಲ್ಪಡು ತ್ತದೆ.

## VI

ತಾ॥ 25—6—1930 ರಲ್ಲಿ

**ಪ್ರಶ್ನೆ ಮಾಡಿದವರು,**

**1. ಒಬ್ಬರು ಶ್ರೀವೈಷ್ಣವ ಬ್ರಾಹ್ಮಣರು ಮತ್ತು**

**2. ಸುಬ್ಬಯ್ಯನವರು, Comptroller's Office, Bangalore.**

---

೧ **ಪ್ರಶ್ನೆ**— ಶ್ರೀ ವೈಷ್ಣವರು—ಮಹಾಸ್ವಾಮೀ ! ಸಂಸಾರದಲ್ಲಿರುವ ಸರ್ವ ಜೀವರಿಗೂ ಶ್ರೀ ಪರಮಾತ್ಮನು ಮುಕ್ತಿಯನ್ನು ಕೊಟ್ಟ ಮೇಲೆ ಮುಂದೆ

ಸೃಷ್ಟಿ ಯೋಗ್ಯರಾದ ಜೀವರೇ ಇಲ್ಲವಾದುದರಿಂದ ಅವನು ಯಾರನ್ನು ಸೃಷ್ಟಿ ಮಾಡ ಬೇಕು ? ಅವನಿಗೆ ನಿರ್ವ್ಯಾಪಾರತೆಯು ಪ್ರಾಪ್ತವಾಯಿತಲ್ಲವೇ ?

**ಉತ್ತರ**— ಶ್ರೀ ಶ್ರೀಗಳವರು— ನಿಮ್ಮ ಮತವಲ್ಲಿ ವೇದಾಂತ ದೇಶಿಕಾ ಚಾರ್ಯರು ಈ ಶಂಕೆಯನ್ನು ಮಾಡಿಕೊಂಡು ಶ್ರೀ ಪರಮಾತ್ಮನು ಹಿಂದೆ ಅನಂತ ಜೀವರಾಶಿಗಳಿಗೆ ಮುಕ್ತಿಯನ್ನು ಕೊಟ್ಟಿರುತ್ತಾನೆ; ಇನ್ನು ಈಗ ಸಂಸಾರ ದಲ್ಲಿರುವ ಸಮಸ್ತ ಜೀವರಾಶಿಗಳಿಗೂ ಮೋಕ್ಷವಾಗಿ ಹೋಗಿ ಈಶ್ವರನ ಸೃಷ್ಟ್ಯಾದಿಗಳು ನಿಂತು ಹೋಗಬೇಕಾಗುತ್ತದೆ; ಅದು ಶ್ರುತಿವಿರುದ್ಧವು; ಆದುದ ರಿಂದ ಕೆಲವು ಜೀವರು ನಿತ್ಯ ಸಂಸಾರಿಗಳು; ಅವರನ್ನು ಈಶ್ವರನು ಪುನಃ ಪುನಃ ಸೃಷ್ಟಿ ಮಾಡುತ್ತಿರುತ್ತಾನೆ ಎಂದು ಸಮಾಧಾನ ಹೇಳಿರುತ್ತಾರೆ. ಇದು ಅನುಪ ಪನ್ನವು. ಹಾಗಾಗುವದಾದರೆ, ನಾವೆಲ್ಲರೂ ನಿತ್ಯ ಸಂಸಾರಿಗಳಾಗಬೇಕಾಗುತ್ತದೆ ! ತನ್ನ ಸೃಷ್ಟಿ ಕಾರ್ಯವು ನಿಂತು ಹೋಗುತ್ತದೆಂಬ ಭಯದಿಂದ ಭಕ್ತರಿಗೆ ಮೋಕ್ಷ ವನ್ನು ಕೊಡುವದಿಲ್ಲವೆಂಬ ಕಲ್ಪನೆಯು ಸರಿಯಲ್ಲ. ವಸ್ತುತಃ ಜೀವರು ಅನಂತ ರಾಗಿರುವದರಿಂದ ಸೃಷ್ಟಿ ಕಾರ್ಯಕ್ಕೆ ವಿಚ್ಛೇದವೇ ಇಲ್ಲ.

೨ **ಪ್ರಶ್ನೆ**— ಶ್ರೀ ವೈಷ್ಣವರು—ಸ್ವಾಮೀ ! ಕಾಲವು ಅನಂತವಾದುದರಿಂದ ಜೀವರಾಶಿಗಳು ಅನಂತವಾದರೂ ಯಾವುದಾದರೂ ಒಂದು ಕಾಲವಿಶೇಷದಲ್ಲಿ ಸರ್ವ ಜೀವರೂ ಮುಕ್ತರಾಗಿ ಸೃಷ್ಟಿ ಕಾರ್ಯವು ನಿಂತು ಹೋಗಬೇಕಲ್ಲವೇ ?

**ಉತ್ತರ**— ಕಾಲಾನಂತ್ಯಕ್ಕಿಂತಲೂ ಜೀವಾನಂತ್ಯವು ಅಧಿಕವಾಗಿರುವದರಿಂದ ಸೃಷ್ಟಿ ಪ್ರವಾಹವು ಮುಗಿಯುವ ಹಾಗಿಲ್ಲ.

೩ **ಪ್ರಶ್ನೆ**— ಸುಬ್ಬಯ್ಯನವರು— ಸ್ವಾಮೀ ! ಎಲ್ಲರೂ ಮುಕ್ತರಾಗಿ ಹೋಗಲಿ ! ಈಶ್ವರನು ನಿರ್ವ್ಯಾಪಾರನಾದರೆ ಏನು ಬಾಧೆ ?

**ಉತ್ತರ**— ಈಶ್ವರನು ಯಾವಾಗಲೂ ಸೃಷ್ಟ್ಯಾದಿ ವ್ಯಾಪಾರಗಳನ್ನು ನಡೆ ಯಿಸುತ್ತಿರುವನೆಂದು "ಅಥಾರ್ತವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ" ಇತ್ಯಾದಿ ಶ್ರುತಿಗಳಿರುತ್ತವೆ.

೪ **ಪ್ರಶ್ನೆ**—ಓಹೋ ! ಈ ಶ್ರುತಿಯನ್ನು ನಿರ್ವಾಹ ಮಾಡುವದಕ್ಕೋ ಸ್ಕರವೋ ಇಷ್ಟು ಕಲ್ಪನೆ ಮಾಡುವದು ! ಒಳ್ಳೆಯದು ! ಆದರೆ ದೇವರು ನಿಷ್ಕ್ರಿಯನು ಎಂದು ಹೇಳುತ್ತಾರಲ್ಲ ! ಅದಕ್ಕೇನರ್ಥವು ?

ಶ್ರೀ ಶ್ರೀಗಳವರು— ನೀವು ಯಾವ ಅರ್ಥವನ್ನು ತಿಳಿದುಕೊಂಡಿರುತ್ತೀರಿ ?

ಸು—ಸ್ವಾಮೀ ! ನಾನು "ನಿಷ್ಕ್ರಿಯನು" ಅಂದರೆ ದೇವರು ಎಲ್ಲ ವ್ಯಾಪಾರಗಳನ್ನು ಮಾಡಿದರೂ ನಿರ್ಲಿಪ್ತನಾಗಿರುವನು ಎಂದು ಅದ್ವೈತಿಗಳು ಹೇಳುವರೆಂದು ತಿಳಿದಿರುತ್ತೇನೆ.

ಶ್ರೀ ಶ್ರೀಗಳವರು— ಅದು ಅದ್ವೈತಿಗಳು ಹೇಳುವ ಅರ್ಥವಲ್ಲ; ಅದ್ವೈತ ಮತದಲ್ಲಿ ಬ್ರಹ್ಮನು ನಿಷ್ಕ್ರಿಯನು ಎಂದರೆ ಸಮಸ್ತ ಕ್ರಿಯಾಶೂನ್ಯನು ಎಂದರ್ಥವು. ಸೃಷ್ಟ್ಯಾದಿ ಕ್ರಿಯೆಗಳು ಕಾಣುವುವಲ್ಲಾ ಎಂದರೆ ಅವು "ಕಲ್ಪಿತವು" ನಿಜವಲ್ಲವೆಂದು ಹೇಳುತ್ತಾರೆ.

೫ **ಪ್ರಶ್ನೆ**—ಸು—ಕಲ್ಪಿತವೇ ! ಹೇಗೆ ನಿಜವಾದೀತು ? ಒಂದು ಕನ್ನಡ ಪದ್ಯದಲ್ಲಿ ಬ್ರಹ್ಮನೇ ತನ್ನ ಭಾವನೆಯಿಂದ ಮಹತ್ತತ್ವ ಅಹಂಕಾರತತ್ವ ಇವುಗಳನ್ನೆಲ್ಲ ಸೃಷ್ಟಿ ಮಾಡಿ ಅವನು ಇವೆಲ್ಲಕ್ಕಿಂತಲೂ ಬೇರೆಯಾಗಿ "ಇದಲ್ಲ ! ಇದಲ್ಲ ! ಇದಲ್ಲ !" ಎಂದು ಸರ್ವನಿಷೇಧರೂಪನಾಗಿ ಒಬ್ಬನೇ ಇರುತ್ತಾನೆಂದು ಹೇಳಲಾಗಿದೆ. ಅವನಿಗೆ ಕ್ರಿಯೆ ಎಲ್ಲಿಂದ ಬಂತು ?

**ಉತ್ತರ**—ನಿಮ್ಮ ಮಾತು ಬ್ರಹ್ಮನು ಅಕ್ರಿಯನು ಎನ್ನುವದಕ್ಕಾಗಲೀ, ಜಗತ್ತು ಕಲ್ಪಿತವು ಎನ್ನುವದಕ್ಕಾಗಲೀ, ಸಾಧಕವಾಗಲಾರದು. ಕುಂಬಾರನು ಮಣ್ಣಿನಿಂದ ಮಡಕೆ ಮುಂತಾದ ಪದಾರ್ಥಗಳನ್ನು ನಿರ್ಮಾಣ ಮಾಡುವಾಗ ಅವನು ಮಣ್ಣಿನಿಂದಲೂ, ಮಣ್ಣಿನಿಂದ ಮಾಡಿದ ಘಟದಿಂದಲೂ, ಅತ್ಯಂತ ಭಿನ್ನನಾಗಿರುತ್ತಾನೆ. ಮತ್ತು ಘಟ ನಿರ್ಮಾಣರೂಪವಾದ ವ್ಯಾಪಾರವುಳ್ಳವನಾಗುತ್ತಾನೆ. ಕುಂಬಾರನು ಅಕ್ರಿಯನೂ ಅಲ್ಲ. ಅವನಿಂದ ನಿರ್ಮಿತವಾದ ಘಟಾದಿ ಪದಾರ್ಥಗಳು ಸುಳ್ಳೂ ಅಲ್ಲ. ಹೀಗೆಯೇ ದೇವರು ಪ್ರಕೃತಿಯಿಂದ ಮಹತ್ತತ್ವಾದಿ ಸಮಸ್ತ ಜಗತ್ತನ್ನೂ ನಿರ್ಮಾಣ ಮಾಡುವದರಿಂದ ದೇವರು ಸಕ್ರಿಯನಾದನು. ಜಗತ್ತು ಸತ್ಯವೂ ಆಯಿತು. "ತಮ ಆಸೀತ್" ಎಂಬ ಶ್ರುತಿಯಲ್ಲಿಯೂ, "ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ" ಎಂದು ಗೀತೆಯಲ್ಲಿಯೂ ಹೇಳಿರುವದರಿಂದ ಪ್ರಕೃತಿಯು ಸರ್ವದಾ ದೇವರಿಂದ ಭಿನ್ನವಾದುದು. "ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಂ" ಎಂದು ಹೇಳಿರುವದರಿಂದ ಈಶ್ವರನ ವ್ಯಾಪಾರದಿಂದ ಪ್ರಕೃತಿಯು ನಾನಾ ವಿಕಾರಗಳನ್ನು ಹೊಂದುತ್ತದೆ. ಮತ್ತು "ನೇತಿ" "ನೇತಿ" ಎಂದು ಸರ್ವನಿಷೇಧರೂಪನಾಗಿ ಒಬ್ಬನೇ ಉಳಿಯುವನೆಂದು ನೀವು ಹೇಳಿದಿರಷ್ಟೆ ! ಬ್ರಹ್ಮನು ಆಕಾಶವಲ್ಲ, ಘಟವಲ್ಲ, ಅಂದರೆ ಅವುಗಳಿಗಿಂತ ಅತ್ಯಂತ ಭಿನ್ನನು ಎಂದು ನಿಮ್ಮ ಅರ್ಥವೇ ? ಅಥವಾ ಘಟವೂ ಇಲ್ಲ, ಆಕಾಶವೂ ಇಲ್ಲ, ಎಂದು ಇವುಗಳೆಲ್ಲ ಸುಳ್ಳು ಎಂದು ನಿಮ್ಮ ಅರ್ಥವೇ ?

ಸು—ಸ್ವಾಮೀ ! ಬ್ರಹ್ಮನು ದೇಹವಲ್ಲ, ಇಂದ್ರಿಯವಲ್ಲ, ಆಕಾಶವಲ್ಲ ಎಂದೂ ಸರ್ವಭಿನ್ನನು ಎಂದು ನನ್ನ ಅರ್ಥವು.

ಶ್ರೀ ಶ್ರೀಗಳವರು— ಇದು ದ್ವೈತಿಗಳು ಮಾಡುವ ಅರ್ಥವು. ಇದರಿಂದ ಜಗತ್ತು ಭ್ರಾಂತಿಕಲ್ಪಿತವು ಅಂದರೆ ಸುಳ್ಳು ಎಂದಾಗಲಿಲ್ಲ.

೬ ಪ್ರಶ್ನೆ—ಸು—ಅದು ಹೇಗೇ ? ಸ್ವಾಮೀ, ಭಾವನೆ ಅಂದರೆ ಬ್ರಹ್ಮನ ಚಿಚ್ಛಕ್ತಿಯು. ಬ್ರಹ್ಮನು ಬೇರೆ ಚಿಚ್ಛಕ್ತಿಯು ಬೇರೆ ಅಲ್ಲ. ಆ ಚಿಚ್ಛಕ್ತಿಯೇ ಮಹತ್ತತ್ವವಾಯಿತು, ಅಹಂಕಾರತತ್ವವಾಯಿತು, ಆಕಾಶತತ್ವವಾಯಿತು. ನಾನೇ ಮೊದಲಾದ ಸಮಸ್ತ ಜಗತ್ತೂ ಅವನೇ ! ಇನ್ನು ಬ್ರಹ್ಮಾತಿರಿಕ್ತವಾಗಿ ಯಾವದು ತಾನೇ ಇರುತ್ತೆ ?

ಉತ್ತರ—ನೀವು ಹೇಳಿದ ಪ್ರಕಾರ ಬ್ರಹ್ಮನೇ ಆಕಾಶವು ! ಬ್ರಹ್ಮನೇ ಭೂಮಿಯು ! ಬ್ರಹ್ಮನೇ ಮಣ್ಣು ! ಬ್ರಹ್ಮನೇ ಹಂದಿಯು ! ಬ್ರಹ್ಮನೇ ಕಲ್ಲು ಆದರೆ, ಬ್ರಹ್ಮನಿಗೆ ಬಹು ವಿಕಾರಗಳು ಬಂದೊದಗುವವು !

ಸು—ಬಂದರೆ ಏನು ? ಬ್ರಹ್ಮನು ನಾನಾ ರೂಪಗಳನ್ನು ತಾಳಿರುತ್ತಾನೆ. ನಾನೂ ಬ್ರಹ್ಮನೇ ! ಕತ್ತೆಯೂ, ಕೋಳಿಯು, ಹಂದಿಯೂ, ಸಮಸ್ತವೂ ಬ್ರಹ್ಮನೇ, ಕನ್ನಡ ಪದ್ಯಗಳಲ್ಲಿ ಹಾಗೆಯೇ ಹೇಳಿರುತ್ತದೆ.

ಶ್ರೀ ಶ್ರೀಗಳವರು—ಅದು ಶ್ರುತಿವಿರುದ್ಧವು. "ನಿರ್ವಿಕಾರೋऽಕ್ಷರಃ ಶುದ್ಧಃ" ಎಂಬ ಶ್ರುತಿಯಲ್ಲಿ ಬ್ರಹ್ಮನು ನಿರ್ವಿಕಾರನು ಎಂದು ಹೇಳಿರುತ್ತದೆ.

೭ ಪ್ರಶ್ನೆ—ಸು—ಅದು ಯಾವಾಗಿನ ಮಾತು ? ಮುಂದೆ ಬ್ರಹ್ಮನು ನಿರ್ವಿಕಾರನಾಗಿರುತ್ತಾನೆ. ಅದು ಪರಮಾರ್ಥ ಅವಸ್ಥೆಯ ವಿಚಾರವು. ಈಗ ನಾನಾ ವ್ಯಾಪಾರಗಳುಂಟು !

ಶ್ರೀ ಶ್ರೀಗಳವರು— ಈ ನಾನಾ ವ್ಯಾಪಾರಗಳು ನಿಜವೇ ಸುಳ್ಳೇ ? ಪರಮಾರ್ಥತತ್ವವನ್ನು ಹೇಳಿ.

ಸು—ಎಲ್ಲವೂ ನಿಜವೇ ?

ಶ್ರೀ ಶ್ರೀಗಳವರು—ಹಾಗಾದರೆ ಬ್ರಹ್ಮನೇ ಆಕಾಶವು, ಬ್ರಹ್ಮನೇ ಕಲ್ಲು, ಬ್ರಹ್ಮನೇ ಹಂದಿಯು ಇತ್ಯಾದಿ ನಿಮ್ಮ ಪೂರ್ವೋಕ್ತಿಗಳು ಸುಸ್ಥವಾದುದರಿಂದ ಬ್ರಹ್ಮನು ವಿಕಾರವುಳ್ಳವನಾದನು. ಅದು ಶ್ರುತಿವಿರುದ್ಧವು.

೮ ಪ್ರಶ್ನೆ—ಸು—ಅದು ಹಾಗಾಗಲಾರದು ! ಸ್ವಾಮೀ ! ಬ್ರಹ್ಮನು ತನ್ನ ಭಾವನೆಯಿಂದ ಅಂದರೆ ಚಿಚ್ಛಕ್ತಿಯಿಂದ ನಾನಾ ಆಕಾರಗಳನ್ನು ತಾಳುತ್ತಾನೆ. ಹೇಗೆ ಚಿನ್ನವು, ಬಂದಿ, ಕಡಗ ಮುಂತಾದ ನಾನಾ ರೂಪಗಳನ್ನು ಹೊಂದಿದರೂ ಅದು ನಿರ್ವಿಕಾರವಾಗಿಯೇ ಇರುತ್ತದೊ, ಹೇಗೆ ನಮ್ಮ ಮನಸ್ಸು ನಾನಾ ಯೋಚನೆಗಳನ್ನೂ, ಚಿಂತಾ ಸಂತಾಪಗಳನ್ನೂ ಹೊಂದಿದರೂ ನಿರ್ವಿಕಾರವಾಗಿರುತ್ತದೋ ಹಾಗೇ ಬ್ರಹ್ಮನು ನಾನಾ ರೂಪಗಳನ್ನು ಹೊಂದಿದರೂ ನಿರ್ವಿಕಾರನಾಗಿರುತ್ತಾನೆ.

ಶ್ರೀ ಶ್ರೀಗಳವರು—ನಿಮ್ಮ ದೃಷ್ಟಾಂತಗಳು ನಮ್ಮ ಅಭಿಪ್ರಾಯಕ್ಕೆ ಸಾಧಕ ವಾಗಿವೆ. ಚಿಂತಾಸಂತಾಪಾದಿಗಳು ಮನಸ್ಸಿನ ವಿಕಾರಗಳು. ಕಡಗ, ಬಂದಿಯೇ ಮುಂತಾದ ಆಭರಣಗಳು ಚಿನ್ನದ ವಿಕಾರಗಳೆನಿಸುತ್ತವೆ. ಹೀಗೆಯೇ ಈ ಜಗತ್ತೆಲ್ಲವೂ ಬ್ರಹ್ಮನ ವಿಕಾರವಾದರೆ ಅವನು ಬಹು ದುಃಖಿಯಾಗಬೇಕಾಯಿತು !

೯ **ಪ್ರಶ್ನೆ**—ಸು— ಇದೆಲ್ಲ ಈಗಿನ ಮಾತು ಸ್ವಾಮಿ ! ಬ್ರಹ್ಮನು ಒಬ್ಬನೇ ಇರುವನು. ಅದೇ ಪರಮಾರ್ಥವು ! ಈಗ ಕಾಣುವವೆಲ್ಲ ಇರುವಂತಿವೆ. ಆದರೆ ವಸ್ತುತಃ ಇಲ್ಲ. ಇದೆಲ್ಲಾ ಭ್ರಾಂತಿ.

**ಉತ್ತರ**— ಇದೇ ಅದ್ವೈತಮತವು. ನೀವು ಹೇಳುವ ಹಾಗೆ ಈ ಜಗತ್ತೆಲ್ಲ 'ಭ್ರಾಂತಿ ಕಲ್ಪಿತ' ಎಂದಾದರೆ, ಆ ಭ್ರಾಂತಿಯು ಯಾರಿಗೆ ?

ಸು—ಆ ಭ್ರಾಂತಿಯು ನಮಗೆ ! ಜೀವರಿಗೇ ಭ್ರಾಂತಿಯು.

ಶ್ರೀ ಶ್ರೀಗಳವರು—ನಾನು ಜೀವನು ಎಂಬುದೂ 'ಭ್ರಾಂತಿ' ಕಲ್ಪಿತವಷ್ಟೇ ! ಆ ಭ್ರಾಂತಿಯು ಯಾರಿಗೆ ? ಕೊನೆಯ ಪರಮಾರ್ಥವಾದ ಮಾತನ್ನು ಹೇಳಿ.

ಸು—ಆ ಭ್ರಮೆಯು ಬ್ರಹ್ಮನಿಗೇ ಇರಲಿ !

ಶ್ರೀ ಶ್ರೀಗಳವರು—ಹಾಗಾದರೆ ಬ್ರಹ್ಮನು ಭ್ರಾಂತನಾದನು. ಅದು ಸರಿ ಯಲ್ಲ. ವಸ್ತುತಃ ಅದ್ವೈತಮತದ ಗ್ರಂಥಕಾರರೇ ಜಗದ್ಭ್ರಮೆಯು ಹೇಗೆ ಉಂಟಾಯಿತು ? ಭ್ರಮೋತ್ಪತ್ತಿಗೆ ಆವಶ್ಯಕವಾದ ಕಾರಣಗಳು ಒಂದೂ ಇಲ್ಲವಲ್ಲಾ ಎಂದು ಪ್ರಶ್ನೆ ಮಾಡಿಕೊಂಡು ಇದು ದುರ್ನಿರೂಪವು. ಈ ವಿಷಯವನ್ನು ಹೇಳುವದಕ್ಕಾಗುವದಿಲ್ಲವೆಂದು ಸಮಾಧಾನವನ್ನು ಹೇಳಿರುತ್ತಾರೆ.

೧೦ **ಪ್ರಶ್ನೆ**— ಸಭಿಕರು—ಸ್ವಾಮೀ ! ಈ ವಿಷಯವನ್ನು ದಯಮಾಡಿ ವಿಶದವಾಗಿ ನಿರೂಪಿಸಬೇಕು.

ಶ್ರೀ ಶ್ರೀಗಳವರು—ತಥಾಹಿ—

**ಶಂಕರಭಾಷ್ಯಂ**—"ಕಸ್ಯ ಪುನರಯಮಪ್ರಬೋಧ ಇತಿ **ಚೇತ್** । ಯಸ್ತ್ವಂ ಪೃಚ್ಛಸಿ ತಸ್ಯ ತ ಇತಿ ವದಾಮಃ । ನನ್ವಹಮೀಶ್ವರ ಏವೋಕ್ತಃ ಶ್ರುತ್ಯಾ । ಯದ್ಯೇವಂ ಪ್ರತಿಬುದ್ಧೋಽಸಿ ನಾಸ್ತಿ ಕಸ್ಯಚಿದಪ್ರಬೋಧಃ ।"

**ಭಾಮತೀ**—ಯುಕ್ತಂ ಹಿ ಪುರೋವರ್ತಿನಿದ್ರವ್ಯೇದ್ರಾಘೀಯಸಿ ಸಾಮಾನ್ಯ ರೂಪೇಣಾಲೋಕಿತೇ ವಿಶೇಷರೂಪೇಣಾಗೃಹೀತೇ ವಿಶೇಷಾಂತರ ಸಮಾರೋಪಣಂ । ಇಹತು ಪ್ರಕಾಶಾತ್ಮನೋ ನಿರ್ವಿಶೇಷಸಾಮಾನ್ಯಸ್ಯಾಪರಾಧೀನ ಪ್ರಕಾಶಸ್ಯನಾ ಗೃಹೀತಮಸ್ತಿ ಕಿಂ ಚಿದ್ರೂಪಮಿತಿ ಕಸ್ಯ ವಿಶೇಷಸ್ಯ ಅಗ್ರಹೇ ಕಿಂ ವಿಶೇಷಾಂತರಂ ಸಮಾರೋಪ್ಯತಾಂ । ತಸ್ಮಾದ್ಬ್ರಹ್ಮಣೋ ಜೀವಭಾವಾರೋಪಾಸಂಭವಾಜ್ಜೀವೋ ಜೀವೋ ಬ್ರಹ್ಮಚ ಬ್ರಹ್ಮೇತಿ ತತ್ವಮಸೀತಿ ಪ್ರತೀಕೋಪದೇಶ ಏವೇತಿ ಪ್ರಾಪ್ತಂ ।

ಏವಂ ಪ್ರಾಪ್ತೇ ಅಭಿಧೀಯತೇ— ಶ್ವೇತಕೇತೋರಾತ್ಮೈವ ಪರಮೇಶ್ವರಃ ಪ್ರತಿಪತ್ತವ್ಯೋ, ನತು ಶ್ವೇತಕೇತೋರ್ವ್ಯತಿರಿಕ್ತಃ ಪರಮೇಶ್ವರಃ। * ಭೇದೇಹಿಗೌಣತ್ವಾಪತ್ತಿರ್ನ ಚ ಮುಖ್ಯಸಂಭವೇ ಗೌಣತ್ವಂ ಯುಕ್ತಂ।...........ನಿರಂಶಸ್ಯಾಪಿಚಾನಾದ್ಯನಿರ್ವಾಚ್ಯಾವಿದ್ಯಾ ತದ್ವಾಸನಾ ಸಮಾರೋಪಿತ ವಿವಿಧಪ್ರಪಂಚಾತ್ಮನಃ ಸಾಂಶಸ್ಯೇವಕಸ್ಯಚಿದಂಶಸ್ಯಾಗ್ರಹಣಾದ್ವಿಭ್ರಮ ಇವ। ಪರಮಾರ್ಥಸ್ತು ನ ವಿಭ್ರಮೋನಾಮಕಶ್ಚಿನ್ನ ಚ ಸಂಸಾರೋ ನಾಮ। ಕಿಂತು ಸರ್ವಮೇತತ್ಸರ್ವಾನುಪಪತ್ತಿಭಾಜನತ್ವೇನಾನಿರ್ವಚನೀಯಮಿತಿ ಯುಕ್ತಮುತ್ಪಶ್ಯಾಮಃ॥ ತದನೇನಾಭಿಸಂಧಿನೋಕ್ತಂ—"ಯದ್ಯೇವಂ ಪ್ರತಿಬುದ್ಧೋಸಿ ನಾಸ್ತಿ ಕಸ್ಯಚಿದಪ್ರಬೋಧ ಇತಿ।" ಅನ್ಯೇಪ್ಯಾಹುಃ—"ಯದ್ಯದ್ವೈತೇ ನ ತೋಷೋಸ್ತಿ ಮುಕ್ತ ಏವಾಸಿ ಸರ್ವದಾ ಇತಿ॥"

ಇದರ ಅರ್ಥವು—"ಬ್ರಹ್ಮನು ಒಬ್ಬನೇ ಸತ್ಯನು. ಅವನು ನಿರ್ಗುಣನೂ ನಿಷ್ಕ್ರಿಯನೂ ಆಗಿದ್ದಾನೆ ಇತರ ಪದಾರ್ಥವೇ ಇಲ್ಲ" ಎಂದು ಹೇಳಿದ ಪಕ್ಷದಲ್ಲಿ ಈ ಜಗತ್ತೂ, ಜೀವನು ಮತ್ತು ಆತನಿಗೆ ಸಂಸಾರವೂ, ಶ್ರವಣಮನನಾದಿ ಸಾಧನಗಳಿಂದಾಗುವ ಸಂಸಾರದ ಡೆಸೆಯಿಂದ ಮೋಕ್ಷವೂ ಕೂಡದೇ ಹೋಗಬೇಕಾದೀತು" ಎಂದು ದ್ವೈತಿಗಳು ಅದ್ವೈತಮತದಮೇಲೆ ಆಕ್ಷೇಪ ಮಾಡಲು ಬ್ರಹ್ಮನಲ್ಲಿ ಅಜ್ಞಾನ,

* ಈ ವ್ಯಾಖ್ಯಾನದಲ್ಲಿ ಭಾಮತೀಕಾರರು ತತ್ವಮಸಿ ಎಂಬ ವಾಕ್ಯಕ್ಕೆ 'ತತ್' ಪದಾರ್ಥವಾದ ಪರಮೇಶ್ವರನಿಗೂ 'ತ್ವಂ' ಪದಾರ್ಥವಾದ ಶ್ವೇತಕೇತುವಿಗೂ ಐಕ್ಯವು ಎಂಬ ಅರ್ಥವು ಮುಖ್ಯಾರ್ಥವೆಂದು ನಿರೂಪಣೆ ಮಾಡಿರುತ್ತಾರೆ ಇದು ಅವರ ಮೂಲಕಾರರಾದ ಶಂಕರಾಚಾರ್ಯರ ಉಕ್ತಿಗೆ ಅತ್ಯಂತ ವಿರುದ್ಧವಾಗಿರುವುದೆಂದು ತಿಳಿಯಬೇಕು, ತಥಾಹಿ :—

1 ವಿವೇಕಚೂಡಾಮಣಿ .— ತತ್ವಂ ಪದಾಭ್ಯಾಮಭಿಧೀಯಮಾನಯೋರ್ಬ್ರಹ್ಮಾತ್ಮನೋಃ
ಶೋಧಿತಯೋರ್ಯದೀತ್ಥಂ। ಶ್ರುತ್ಯುಕ್ತಯೋಸ್ತತ್ವಮಸೀತಿ
ಸಮ್ಯಗೇಕತ್ವಮೇವ ಪ್ರತಿಪಾದ್ಯತೇ ಮುಹುಃ॥

ಐಕ್ಯಂತಯೋರ್ಲಕ್ಷಿತಯೋರ್ನವಾಚ್ಯಯೋರ್ನಿಗದ್ಯತೇಽನ್ಯೋನ್ಯ ವಿರುದ್ಧ
ಧರ್ಮಿಣೋಃ।

ಖದ್ಯೋತಭಾನ್ವೋರಿವ ರಾಜಭೃತ್ಯಯೋಃ ಕೂಪಾಂಬುರಾಶ್ಯೋಃ
ಪರಮಾಣುಮೇರ್ವೋಃ॥

ಈ ಶ್ಲೋಕಗಳಲ್ಲಿ ಶಂಕರಾಚಾರ್ಯರು 'ತತ್' ಪದಾರ್ಥವಾದ ಬ್ರಹ್ಮನಿಗೂ ತ್ವಂ ಪದಾರ್ಥವಾದ ಜೀವನಿಗೂ ಸಾಕ್ಷಾದೈಕ್ಯವು ಕೂಡುವದಿಲ್ಲವಾದುದರಿಂದ ಈ ಶ್ರುತಿಗೆ ಮುಖ್ಯಾರ್ಥವನ್ನು ಪರಿತ್ಯಾಗಮಾಡಿ ಲಕ್ಷಣಾವೃತ್ತಿಯನ್ನು ಸ್ವೀಕರಿಸಿ 'ತತ್ವಂ' ಪದಗಳಿಂದ ಲಕ್ಷಿತವಾದ ಚೈತನ್ಯವು ಒಂದೇ ಎಂದು ಅಮುಖ್ಯಾರ್ಥವನ್ನೇ ಮಾಡಿದ್ದಾರೆ. ಕೂಪಸಮುದ್ರಗಳಿಗೂ, ಖದ್ಯೋತಸೂರ್ಯರುಗಳಿಗೂ, ಭೃತ್ಯನಿಗೂ, ರಾಜನಿಗೂ ವಿರುದ್ಧ ಧರ್ಮಗಳಿರುವದರಿಂದ ಹೇಗೆ ಐಕ್ಯವು ಅಶಕ್ಯವೋ ಹಾಗೇ ಅಲ್ಪಜ್ಞನಾದ ಶ್ವೇತಕೇತುವಿಗೂ ಸರ್ವಜ್ಞನಾದ ಪರಮೇಶ್ವರನಿಗೂ ವಿರುದ್ಧಧರ್ಮಗಳಿರುವದರಿಂದ ಮುಖ್ಯಾರ್ಥವಾದ ಸಾಕ್ಷಾದೈಕ್ಯವು ಕೂಡಲಾರದೆಂದು ಸ್ಪಷ್ಟವಾಗಿ ಹೇಳಿರುತ್ತಾರೆ, "ಸರ್ವವೇದಾಂತಸಿದ್ಧಾಂತಸಾರಸಂಗ್ರಹ" ದಲ್ಲಿಯೂ ಈ ವಿಷಯವನ್ನು ಅತಿ ಸ್ಫುಟವಾಗಿ ವಿವರಿಸಿರುತ್ತಾರೆ.

ಅಂತಃಕರಣ ವೊದಲಾದ ಜಗತ್ತು ಆರೋಪಿತ ( ಅಧ್ಯಸ್ತ ) ವಾಗಿರೋಣದರಿಂದ ಆ ಅಜ್ಞಾನದಿಂದ ಅಥವಾ ಅಂತಃಕರಣದಿಂದ ಯುಕ್ತವಾದ ಚೈತನ್ಯವೇ (ಬ್ರಹ್ಮನೇ) ಜೀವನು. ಅವನಿಗೇ ಕರ್ತೃತ್ವಾದಿ ಸಂಸಾರಸಂಬಂಧವು ತತ್ಪ್ರಯುಕ್ತ ದುಃಖಾದಿಗಳೂ ಬರುತ್ತವೆ. ಅಜ್ಞಾನ, ಅಂತಃಕರಣಾದಿಗಳು ಬ್ರಹ್ಮನ ಅಜ್ಞಾನದಿಂದ ಆರೋಪಿತವಾದ ಪ್ರಯುಕ್ತ ರಜ್ಜುವಿನಲ್ಲಿ "ಇದು" ಎಂದು ಸಾಮಾನ್ಯಧರ್ಮದಿಂದ ಜ್ಞಾನವಾದನಂತರ, ರುಜ್ಜುತ್ವವೆಂಬ ವಿಶೇಷ ಧರ್ಮದ ಅಜ್ಞಾನದಿಂದ ಆರೋಪಿತವಾದ ಸರ್ಪವು "ರುಜ್ಜು" ಎಂದು ವಿಶೇಷಧರ್ಮಜ್ಞಾನವಾದನಂತರ ಹೇಗೆ ನಿವೃತ್ತವಾಗುವದೋ, ಹಾಗೆಯೇ ಬ್ರಹ್ಮಜ್ಞಾನವಾದ ಕೂಡಲೇ ಅಜ್ಞಾನಕಲ್ಪಿತವಾದ ಅಂತಃಕರಣಾದಿಗಳು ನಿವೃತ್ತವಾಗಿ, ಚೈತನ್ಯವು ಆ ಉಪಾಧಿಯಿಂದ ಮುಕ್ತವಾಗಿ, ( ಕಲ್ಪಿತ ಜೀವಭಾವವು ಹೋಗಿ) ಬ್ರಹ್ಮನಾಗುವುದೆಂದು ಅದ್ವೈತಿಗಳು ಹೇಳಿದುದಕ್ಕೆ "ಮುಂದೆ ಕಂಡುಬರುವ ಸರ್ಪದಂತೆ ದೀರ್ಘವಾದ "ಇದು" (ದ್ರವ್ಯ) ಎಂದು ಸಾಮಾನ್ಯಧರ್ಮದಿಂದ ಜ್ಞಾತವಾದ, "ರಜ್ಜು" ಎಂದು ವಿಶೇಷಧರ್ಮದಿಂದ ಅಜ್ಞಾತವಾದ ರಜ್ಜುವಿನಲ್ಲಿ (ಹಗ್ಗದಲ್ಲಿ) ಭ್ರಮಕ್ಕೆ ಕಾರಣಸಾಮುಗ್ರಿಗಳು ಇದ್ದುದರಿಂದ ಸರ್ಪತ್ವರೂಪವಾದ ಧರ್ಮಾಂತರವನ್ನು ( ಸರ್ಪತ್ವವನ್ನು ) ಆರೋಪ ಮಾಡಬಹುದು; ಆದರೆ ಭ್ರಮಕ್ಕೆ ಕಾರಣವಾದ ಸಾಮಾನ್ಯಧರ್ಮದಿಂದ ಜ್ಞಾನವು, ವಿಶೇಷಧರ್ಮದಿಂದ ಅಜ್ಞಾನವು, ಆರೋಪ ಮಾಡತಕ್ಕ ವಸ್ತುವಿನ ಸಾದೃಶ್ಯವು ಇವೇ ವೊದಲಾದವುಗಳು ಸರ್ವಧರ್ಮರಹಿತನಾದ ಬ್ರಹ್ಮನಲ್ಲಿ ಕೂಡುವುದಿಲ್ಲವಾದುದರಿಂದ ಬ್ರಹ್ಮನಲ್ಲಿ ಜೀವಭಾವಾರೋಪಕ್ಕೆ ( ಭ್ರಮಕ್ಕೆ ) ಸಂಭವವಿಲ್ಲವಾದ ಕಾರಣ ಜೀವನು ಜೀವನೇ; ಬ್ರಹ್ಮನು ಬ್ರಹ್ಮನೇ; (ಬ್ರಹ್ಮನಲ್ಲಿ ಜೀವಭಾವವು ಆರೋಪಿತವಲ್ಲ, ಜೀವನು ಬ್ರಹ್ಮನಂತೆ ಸತ್ಯನು ಜೀವಬ್ರಹ್ಮರಿಗೆ ಭೇದ ಉಂಟು ) ಆದಕಾರಣ ತತ್ವಮಸ್ಯಾದಿ ವಾಕ್ಯವು ಪ್ರತೀಕೋಪದೇಶವು ಅಂದರೆ, ಎಲೈ ಶ್ವೇತಕೇತುವೇ ! ನೀನು ಬ್ರಹ್ಮನ ಪ್ರತಿಮೆಯಾಗಿರುತ್ತೀ ! ಎಂದು ಶ್ರುತಿಯನ್ನು ಭೇದಪರವಾಗಿಯೇ ಅರ್ಥಮಾಡಬೇಕು ಎಂದು ದ್ವೈತಿಗಳು ಮಾಡತಕ್ಕ ಆಕ್ಷೇಪವನ್ನು ತೆಗೆದುಕೊಂಡು,

ಯದ್ಯಪಿ ಬ್ರಹ್ಮನು ನಿರಂಶನಾದರೂ ಆ ಬ್ರಹ್ಮನಲ್ಲಿ ಅನಾದಿಯಾದ ಅವಿದ್ಯಾ ಮತ್ತು ಅದರ ವಾಸನಾದಿಂದ ಜಗತ್ತು ಆರೋಪಿತವಾಗಿರವದರಿಂದ (ಜಗದ್ಭ್ರಮವು ಬಂದಿರುವದರಿಂದ) ಬ್ರಹ್ಮನೇ ನಾನಾ ವಿಧವಾದ ಪ್ರಪಂಚರೂಪನಾದುದರಿಂದ ಸಾಂಶಪದಾರ್ಥಗಳಲ್ಲಿ ಕೆಲವು ಅಂಶದ ತಿಳಿಯೋಣ, ಕೆಲವು ಅಂಶದ ತಿಳಿಯದೇ ಇರೋಣ ಹೇಗೋ ಹಾಗೆ ನಾನಾ ವಿಧವಾದ ಪ್ರಪಂಚರೂಪನಾದ ಬ್ರಹ್ಮನ ಕೆಲವು ಅಂಶಗಳು ತಿಳಿಯದೆ ಭ್ರಮ ಬಂದಂತೆ ಆಗುವದು. ವಸ್ತುತಃ ಭ್ರಮಕ್ಕೆ ಕಾರಣಗಳು ಇಲ್ಲದೇ ಇರುವದರಿಂದ ಭ್ರಮವೆಂಬುವುದೇ ಇಲ್ಲ. ಸಂಸಾರವೆಂಬುವದೂ ಇಲ್ಲ.

" ಬ್ರಹ್ಮನು ಒಬ್ಬನೇ ಸತ್ಯನಾದರೆ ಭ್ರಮಕ್ಕೆ ಕಾರಣವಿಲ್ಲವಾದುದರಿಂದ ಭ್ರಮವೇ ಕೂಡುವದಿಲ್ಲ. ಜೀವಭಾವವೂ ಕೂಡುವದಿಲ್ಲ. ಸಂಸಾರಮೋಕ್ಷಗಳೂ ಇಲ್ಲ. ಜಗತ್ತು ತೋರುವದಕ್ಕೆ ಕಾರಣವಿಲ್ಲ. ಇವೇ ಮೊದಲಾದ **ದ್ವೈತಿಗಳು ಹೇಳುವ ಸರ್ವಾನುಪಪತ್ತಿಗಳೂ ಬರುತ್ತವೆ.** ಆದಕಾರಣ ಜೀವಭಾವ,ಜಗತ್ತು, ಸಂಸಾರ, ಮೋಕ್ಷ ಮೊದಲಾದ ಸರ್ವವೂ **ಹೀಗೆಂದು ಹೇಳುವದಕ್ಕೆ ಬರುವದಿಲ್ಲ.** ಇದೇ ಅಭಿಪ್ರಾಯದಿಂದ ಶಂಕರಾಚಾರ್ಯರು "ಯದ್ಯೇವಂಪ್ರತಿಬುದ್ಧೋಽಸಿ ನಾಸ್ತಿ ಕಸ್ಯಚಿದಪ್ರಬೋಧಃ" ಎಂದು ಹೇಳಿದ್ದಾರೆ.

ಹೀಗೆ ಭಾಮತೀಕಾರರು ಅದ್ವೈತಮತದ ಮೇಲೆ ಹೇಳಿದ ಅನುಪಪತ್ತಿಗಳನ್ನು ಪರಿಹಾರ ಮಾಡುವದಕ್ಕೆ ಶಕ್ತಿಯಿಲ್ಲದೆ ಸರ್ವ ಅನುಪಪತ್ತಿಗಳನ್ನೂ ಒಪ್ಪಿಕೊಂಡಿದ್ದಾರೆ.

೧೧ ಪ್ರಶ್ನೆ—ಸು—ಬ್ರಹ್ಮನಿಗೆ ಭ್ರಮೆಯನ್ನು ಏಕೆ ಹೇಳಬೇಕು ಸ್ವಾಮೀ! "ಪೂರ್ಣದೇವ " ತನ್ನ "ಆನಂದವರಿಯದೆ" " ಜೀವನಾದ" ಎಂದು ಕನ್ನಡ ಪದ್ಯದಲ್ಲಿ ಇರುವದರಿಂದ ಬ್ರಹ್ಮನಿಗೆ ಭ್ರಮೆ ಎಲ್ಲಿಂದ ಬಂತು ? ಅವನು ತನ್ನನ್ನು ತಾನೇ ಮರೆತು "ದೃಶ್ಯ" ಪ್ರಪಂಚರೂಪನಾದನು ಎಂದು ಹೇಳಬೇಕು.

ಶ್ರೀ ಶ್ರೀಗಳವರು—ಬ್ರಹ್ಮನು ತನ್ನ ಆನಂದವನ್ನು " ಮರೆತನು " ಅಂದರೆ ಅವನಿಗೆ ಜ್ಞಾಪಕಶಕ್ತಿಯಿರಲಿಲ್ಲ ಎಂದು ಅರ್ಥವಾಯಿತು. ಬ್ರಹ್ಮನು ಮರೆವು ಉಳ್ಳವನು ಅಂದರೆ ನಮ್ಮಂತೆ ಅಜ್ಞನು ಎಂದು ಪ್ರಾಪ್ತವಾದುದರಿಂದ ಪೂರ್ಣನಾದ ಪರಬ್ರಹ್ಮನನ್ನು ಈ ರೀತಿ ಉಪಾಸನೆ ಮಾಡಬಾರದು.

ಸು— ನಾನು ಹೆಚ್ಚು ತಿಳಿದವನಲ್ಲ. ಕ್ಷಮಿಸಬೇಕು

( ಸುಬ್ಬಯ್ಯನವರು ಶ್ರೀಪಾದಂಗಳವರಿಗೆ ದಂಡಪ್ರಣಾಮ ಮಾಡಿದರು. ನಮಸ್ಕಾರಕಾಲದಲ್ಲಿ ಬಾಯಿಂದ ಸಚ್ಚಿದಾನಂದಮೂರ್ತೀ ! ಎಂದು ಹೇಳಿದರು. ಶ್ರೀ ಶ್ರೀಗಳವರು ನಕ್ಕು ಅಪ್ಪಾ ! ನಾವು ಸಚ್ಚಿದಾನಂದಮೂರ್ತಿಯಾದ ದೇವರಲ್ಲ. ನೀವು ಇನ್ನೂ ಇಲ್ಲಿರುವ ಪರ್ಯಂತವೂ ಸಭೆಗೆ ಬಂದು ತತ್ತ್ವವಿಚಾರ ಮಾಡಿರೆಂದು ಅಪ್ಪಣೆಯನ್ನು ಕೊಟ್ಟರು.—H. S.)



## VII

### ತಾ. 27-6-1930 ರಲ್ಲಿ

### ಪ್ರಾಶ್ನಿಕರು—ವಿದ್ಯಾರ್ಥಿಗಳು



ಈ ದಿವಸ ರಾತ್ರಿ ಏಳು ಘಂಟೆಯಿಂದ ಹನ್ನೊಂದು ಘಂಟೆ ಪರ್ಯಂತವೂ ಮಹಾ ಸಭೆಯು ನಡೆಯಿತು. ವಿನೀತರಾದ ವಿದ್ಯಾರ್ಥಿಗಳಿಂದ ಪೃಷ್ಟರಾದ ಶ್ರೀ ಶ್ರೀಗಳವರು ಊರ್ಧ್ವಪುಂಡ್ರಧಾರಣ, ಮತ್ತು ತಪ್ತಚಕ್ರಧಾರಣ ಇವುಗಳ ವಿಷಯದಲ್ಲಿ ಅನೇಕ ಪ್ರಮಾಣಗಳನ್ನು ಉದಾಹರಿಸಿದರು. ಅವುಗಳನ್ನು ಮುಂದೆ ವಿಶದವಾಗಿ ವಿವರಿಸುತ್ತೇನೆ—H. S



## VIII

### ತಾ. 28-6-1930 ರಲ್ಲಿ

### ಪ್ರಾಶ್ನಿಕರು—ಎಚ್. ಸುಬ್ಬರಾವ್, ಎಂ. ಎ.
### ಶ್ರೀಪಾದಾಚಾರ್ಯರು, ಎಂ. ಎ.

---

೧ ಪ್ರಶ್ನೆ—ಸುಬ್ಬರಾಯರು— ಒಂದು ಅಪೌರುಷೇಯ ವಾಕ್ಯವನ್ನು ಒಡಂಬಡದಿದ್ದರೆ ಸರ್ವಮತಾನುಯಾಯಿಗಳಿಗೂ ಅಭಿಮತವಾದ "ಧರ್ಮ"ವೆಂಬ ಪದಾರ್ಥವೇ ಸಿದ್ಧಿಸುವುದಿಲ್ಲವೆಂದೂ, ಅದೃಷ್ಟದ್ವಾರಾ ಸುಖಜನಕವಾದ ವ್ಯಾಪಾರವು (ಅಥವಾ ಸುಖಜನಕವಾದ ಅದೃಷ್ಟವು) ಧರ್ಮವೆನಿಸುವದೆಂದೂ ತಮ್ಮಿಂದ ಅಪ್ಪಣೆಯಾಯಿತು. ಈ ವಿಷಯದಲ್ಲಿ ನನಗೆ ಬಹಳ ಸಂದೇಹವಿರುತ್ತದೆ. "ಧರ್ಮ"ವೆಂಬ ಪದಾರ್ಥವೇ ಇಲ್ಲವೆಂದು ಏಕೆ ಹೇಳಬಾರದು ?

ಉತ್ತರ—ಶ್ರೀ ಶ್ರೀಗಳವರು—"ಧರ್ಮ"ವೇ ಇಲ್ಲದಿದ್ದರೆ ಇದು ಸತ್ಕರ್ಮವು ಇದು ದುಷ್ಕರ್ಮವು ಎಂಬ ವ್ಯವಸ್ಥೆ ಇರದೆ ಲೋಕವ್ಯವಹಾರರಕ್ಷಣೆಗೆ ಉಪಾಯವಿಲ್ಲದೆ ಸರ್ವಜನರೂ ದುಃಖಾಂಬುಧಿಯಲ್ಲಿ ಮುಳುಗಬೇಕಾದೀತು ! ಚೋರನು, ಜಾರನು, ವಂಚಕನು, ರಾಜ್ಯದ್ರೋಹಿಯು ಇವರೇ ಮೊದಲಾದ ನೀಚರು ನಿರಂಕುಶರಾಗಿ ಪ್ರವರ್ತಿಸುವರು ಧರ್ಮವೆಂಬ ಪದಾರ್ಥ ಇಲ್ಲದಿದ್ದರೆ ಇವರನ್ನು ದುಷ್ಟರೆಂದು ನಿರ್ಣಯಮಾಡುವ ಬಗೆ ಹೇಗೆ ? ಹಾಗೆ ಯಾವ ನಿರ್ಣಯವೂ ಬೇಡವೆಂಬ ಪಕ್ಷಕ್ಕೆ ಲೋಕವು ಅರಕ್ಷಿತವಾಗಿ ಕ್ಷಿಪ್ರದಲ್ಲಿಯೇ ಜಗತ್ತು ನಷ್ಟವಾಗುವದರಲ್ಲಿ ಸಂದೇಹವಿಲ್ಲ.

೨ ಪ್ರಶ್ನೆ—ಸು—ಮಹಾಸ್ವಾಮೀ ! ಲೋಕವ್ಯವಹಾರ ರಕ್ಷಣೆಗಾಗಿಯಷ್ಟೇ ಒಂದು "ಧರ್ಮ"ವೆಂಬ ಪದಾರ್ಥವನ್ನು ಒಪ್ಪಬೇಕು ! ಅದು ಅನ್ಯಥಾ ಉಪಪನ್ನ ವಾಗುವದು. ವ್ಯವಸ್ಥಿತವಾದ ಧರ್ಮವೆಂಬ ಪದಾರ್ಥವಿಲ್ಲದುದರಿಂದ ಪ್ರತಿ ಯೊಬ್ಬನೂ ತನ್ನ ಸ್ವಾರ್ಥಕ್ಕಾಗಿ ಪ್ರವರ್ತಿಸಿದರೆ ಬಲಿಷ್ಠನಿಂದ ದುರ್ಬಲನಿಗೆ ಪ್ರಾಣಹಾನಿಯೂ, ಬಲಿಷ್ಠನಿಗೆ ಮತ್ತಷ್ಟು ಬಲಾಢ್ಯರಿಂದ ನಾಶವೂ ಉಂಟಾಗುವದು. "ತಿಮಿಂಗಿಲಗಿಲೋಪ್ಯಸ್ತಿ ತದ್ಗಿಲೋಪ್ಯಸ್ತಿ ರಾಘವ" ಎಂದು ಹೇಳಿರುವ ಮೇರೆಗೆ ಒಬ್ಬರಿಗಿಂತ ಒಬ್ಬರು ಲೋಕದಲ್ಲಿ ಬಲಸಂಪನ್ನರಾಗಿರುವದರಿಂದ ಇವರೆಲ್ಲರೂ ತಮ್ಮ ಸ್ವಾರ್ಥಸಾಧನೆಯಲ್ಲಿಯೇ ತತ್ಪರರಾದರೆ ಇವರಲ್ಲಿ ಪರಸ್ಪರ ಸಂಘರ್ಷ ಉಂಟಾಗಿ ದೇಶವಾಸವೇ ಭಯಂಕರವಾಗುವದು. ಇದನ್ನು ತಿಳಿದು ಪ್ರಜೆಗಳೆಲ್ಲರೂ ಸೇರಿ ದಂಡಧರನಾದ ರಾಜನನ್ನು ಏರ್ಪಡಿಸಿ, ಅವನ ಕಾಯಿದೆಗಳನ್ನೇ ಧರ್ಮವೆಂದು ಅಂಗೀಕರಿಸಬಹುದೆಂದು ಹಾಬ್ಸ್‌ಸಾಹೇಬನು ಹೇಳುತ್ತಾನೆ. ಹೀಗೆ, ಬಹು ಜನ ಸಮ್ಮತಿಯಿಂದ ವ್ಯವಸ್ಥಿತವಾದ ಆಚರಣೆಯನ್ನೇ ಧರ್ಮವೆಂದು ಕರೆಯಬಹುದು. ಬಹುಜನರಿಗೆ ಸುಖಕರವಾದ ಆಚರಣೆಯನ್ನಾದರೂ ಧರ್ಮವೆಂದು ಕರೆಯಬಹುದು—(Utilitarianism). ಅಹಿಂಸೆಯನ್ನೋ, ಲೋಕೋಪಕಾರವನ್ನೋ, ದೇಶ ಸೇವೆ ಯನ್ನೋ ಧರ್ಮವೆಂದು ಕರೆಯಬಹುದು. ಹೀಗಿರುವಲ್ಲಿ ಅದೃಷ್ಟ ದ್ವಾರಾ ತನಗೆ ಸುಖಜನಕವಾದ ವ್ಯಾಪಾರವೇ "ಧರ್ಮ"ವು ಎಂಬಲ್ಲಿ ಕಾರಣವೇನು ?

ಶ್ರೀ ಶ್ರೀಗಳವರು—ಅಯ್ಯಾ ! ಬಹು ಜನರಿಂದ ವ್ಯವಸ್ಥಿತವಾದ ಆಚರಣೆ ಯನ್ನಾಗಲೀ, ರಾಜಾಜ್ಞಾನುಸಾರಿ ಕರ್ಮವನ್ನಾಗಲೀ, ಲೋಕೋಪಕಾರವನ್ನಾಗಲೀ "ಧರ್ಮ"ವೆಂದು ನೀನು ಕರೆದೆಯಷ್ಟೆ ! ಇದು ಧರ್ಮವಲ್ಲ. ಲೋಕ ಹಿಂಸನವೇ ಧರ್ಮವು, ಪ್ರಜಾನಾಶಕರವಾದ, ಸ್ವಾರ್ಥಸಾಧಕವಾದ ವ್ಯಾಪಾರವೇ ಧರ್ಮವು ಎಂದು ನಾವು ಪ್ರತಿಹೇಳಿದರೆ ನೀನು ಏನು ಹೇಳುತ್ತೀ ?

ಸುಬ್ಬರಾಯರು—ಹಾಗಾದರೆ ಪ್ರಜಾನಾಶವು ಪ್ರಾಪ್ತವಾಗುವದು.

ಶ್ರೀ ಶ್ರೀಗಳವರು—ಅದೂ ಆಗಲಿ ! ನನಗೆ ಸುಖವಾದರೆ ಸಾಕು. ಸಕಲ ಲೋಕಕ್ಷಯಕರವಾದ ವ್ಯಾಪಾರವೇ ಧರ್ಮವೆಂದು ಯಾರಾದರೂ ಹೇಳಿದರೆ ಏನು ಉತ್ತರ ಕೊಡುವಿರಿ ! ಅಷ್ಟೇ ಅಲ್ಲ. ಅನೇಕ ಪುರುಷರ ಸಮ್ಮತಿಯಿಂದಲೇ ಧರ್ಮ ನಿಶ್ಚಯವನ್ನು ಮಾಡುವದಾದರೆ ಪುರುಷಬುದ್ಧಿಭೇದದಿಂದ ನಾನಾ ಪ್ರಕಾರವಾದ ಮತಗಳು ಉತ್ಪನ್ನವಾಗಿ, ಜನರು ಸ್ವೇಚ್ಛಾಚಾರಿಗಳೂ, ಲೋಕಕ್ಷಯಕಾರಕರೂ ಆಗಿ ತಾವೂ ನಾಶ ಹೊಂದುವದು ನಿಶ್ಚಯವು.

೩ ಪ್ರಶ್ನೆ— ಸುಬ್ಬರಾಯರು— ರಾಜಾಜ್ಞಾನುಸಾರಿಯಾದ ಆಚರಣೆಗಳೇ ಮೊದಲಾದವು ಏಕೆ ಧರ್ಮವೆನಿಸುವವು ಎಂದು ತಾವು ಪ್ರಶ್ನೆಮಾಡಿದರೆ ನಾನು

ಯುಕ್ತಿಯನ್ನು ಹೇಳಲಾರೆನು. ಈ ತೊಂದರೆಯು ತಮಗೂ ಸಮಾನವೇ! ತಮ್ಮಿಂದ ಉಕ್ತಲಕ್ಷಣ ( ಅದೃಷ್ಟ ದ್ವಾರಾ ಸುಖಜನಕ ವ್ಯಾಪಾರವೆಂಬ ) ವುಳ್ಳ "ಧರ್ಮ"ವು ಇದೆ ಎಂಬಲ್ಲಿ ಪ್ರಮಾಣವೇನು ?

ಶ್ರೀ ಶ್ರೀಗಳವರು—ಧರ್ಮಾಧರ್ಮಗಳು ಅತೀಂದ್ರಿಯವಾದುದರಿಂದ ಪ್ರತ್ಯಕ್ಷ ಗೋಚರವಲ್ಲ. ಆಗಮವು ಪ್ರಮಾಣವಾದರೂ, ಅದರ ಪ್ರಾಮಾಣ್ಯವು ಇನ್ನೂ ನಿಶ್ಚಿತವಾಗಿಲ್ಲವಾದುದರಿಂದ ನಾವು ಅದನ್ನೂ ಧರ್ಮಸದ್ಭಾವದಲ್ಲಿ ಪ್ರಮಾಣವಾಗಿ ಉದಾಹರಿಸಲಾರೆವು. ಆದರೂ ಅನುಮಾನಪ್ರಮಾಣದಿಂದ ಅತೀಂದ್ರಿಯವಾದ ಯಾವುದೋ ಒಂದು ಕರ್ಮಜನಿತ ಅದೃಷ್ಟವೆಂಬ ಪದಾರ್ಥವು ಇರಬೇಕೆಂದು ತಿಳಿಯಬಹುದು. ಸುಖಕಾರಣವಾದರೆ "ಧರ್ಮ"ವೆಂದೂ, ದುಃಖಕಾರಣವಾದರೆ "ಅಧರ್ಮ"ವೆಂದೂ ತಿಳಿಯುತ್ತೇವೆ.

೪ ಪ್ರಶ್ನೆ—ಸುಬ್ಬರಾಯರು—ಸ್ವಾಮೀ! ಅದು ಹೇಗೆ ?

ಶ್ರೀ ಶ್ರೀಗಳವರು—ನೀನು "ಜೀವ" ನೆಂಬ ಪದಾರ್ಥವನ್ನು ಒಪ್ಪುವಿಯೋ ?

ಸುಬ್ಬರಾಯರು—"ಅಹಂ" "ಅಹಂ" ( " ನಾನು " ) ಎಂಬ ಜ್ಞಾನಕ್ಕೆ ಗೋಚರನಾಗುವವನು ಜೀವನು. ಇವನೇ ಈ ದೇಹದಲ್ಲಿದ್ದು ಸುಖದುಃಖಗಳನ್ನು ಭೋಗಿಸತಕ್ಕವನು ಎಂಬುದು ಸರ್ವಾನುಭವಸಿದ್ಧವು.

ಶ್ರೀ ಶ್ರೀಗಳವರು— ಜೀವನು ನಿತ್ಯನೋ ಅನಿತ್ಯನೋ ?

ಸುಬ್ಬರಾಯರು—" ಅಹಂ " ಪದಾರ್ಥವಾದ ಜೀವನು ಅನುಭವದಿಂದ ವೇದ್ಯನು. ಆ ಅನುಭವವು ಜೀವನು ನಿತ್ಯನೊ ಅನಿತ್ಯನೊ ಎಂಬುದನ್ನು ತಿಳಿಸ ಲಾರದು.

ಶ್ರೀ ಶ್ರೀಗಳವರು—ಸರಿ, ಆದರೂ ಜೀವನು ಅನಾದಿ ಎಂಬುದು ಅನುಮಾನ ಸಿದ್ಧವು. ನಾವು ಪೂರ್ವದಲ್ಲಿ ನಿರೂಪಣೆ ಮಾಡಿದ ವಿಷಯವು ನಿನ್ನ ಮನಸ್ಸಿನಲ್ಲಿರ ಬಹುದು. ಆಗ ತಾನೇ ಜನಿಸಿದ ಶಿಶುವು ಮಾತೃಸ್ತನ್ಯಪಾನದಲ್ಲಿ ಶಿಕ್ಷಣವಿಲ್ಲದೆ ಪ್ರವರ್ತಿಸುವದು. ಈ ಪ್ರವೃತ್ತಿಯು ಸ್ತನ್ಯಪಾನದಿಂದ ನನಗೆ ಸುಖವಾಗುತ್ತದೆ ಎಂಬ ಜ್ಞಾನಪೂರ್ವಕವಾದುದು. ಈ ಜ್ಞಾನವು ಶಿಶುವಿಗೆ ಪ್ರತ್ಯಕ್ಷದಿಂದ ಬಂದು ದಲ್ಲ. ಉಪದೇಶರೂಪವಾದ ಆಗಮದಿಂದಲೂ ಜನ್ಯವಲ್ಲ. ಮತ್ತೇನೆಂದರೆ "ಸ್ತನ್ಯ-ಪಾನಂ ಮದಿಷ್ಟಸಾಧನಂ ಸ್ತನ್ಯಪಾನತ್ವಾತ್ ಪೂರ್ವಕೃತಸ್ತನ್ಯಪಾನವ್ವತ್ " ಎಂದರೆ ಪೂರ್ವದಲ್ಲಿ ನನ್ನಿಂದ ಕೃತವಾದ ಸ್ತನ್ಯಪಾನದಂತೆ ಈಗಲೂ ಸ್ತನ್ಯಪಾನವು ಸುಖಪ್ರದವಾಗುತ್ತದೆ ಎಂದು ಶಿಶುವು ಅನುಮಿಸುತ್ತಾನೆ (ಊಹಿಸುತ್ತಾನೆ). ಶಿಶುವಿನ ಈ ಅನುಮಾನವು ಜನ್ಮಾಂತರಾನುಭವಜನಿತ ಸಂಸ್ಕಾರವು ಉಂಟೆಂಬ ಲ್ಲಿಯೂ ಇಂಥಾ ಸಂಸ್ಕಾರಾಶ್ರಯನಾದ ಚೇತನನು ಅನಾದಿಯಾಗಿ ಪೂರ್ವ ದಿಂದಲೂ ಇದ್ದನೆಂಬಲ್ಲಿಯೂ ಪ್ರಮಾಣವಾಗುವದು.

ಸುಬ್ಬರಾಯರು—ಹೌದು ಸ್ವಾಮೀ! ಅನೇಕ ಅನಾದಿ ಚೇತನರು ಇದ್ದಾರೆಂಬುದು ಸಿದ್ಧವಾಯಿತು. ಮುಂದೇನು ?

ಶ್ರೀ ಶ್ರೀಗಳವರು—ಇಂಥ ಅನೇಕ ಚೇತನರು ಭೂಲೋಕದಲ್ಲಿ ನಾನಾ ವಿಧವಾದ ದೇಹ, ಸಂಪತ್ತು ಮತ್ತು ಭೋಗಗಳುಳ್ಳವರಾಗಿದ್ದಾರೆ. ಒಬ್ಬನು ಸುಂದರನು, ಒಬ್ಬನು ಕುರುಡನು, ಮತ್ತೊಬ್ಬನು ಕಿವುಡನು; ಒಬ್ಬನು ದರಿದ್ರನು ಮತ್ತೊಬ್ಬನು ಸಾಹುಕಾರನು; ಒಬ್ಬನು ರಾಜನು ಮತ್ತೊಬ್ಬನು ಭೃತ್ಯನು; ಒಬ್ಬನು ನಾಯಿಯು ಮತ್ತೊಬ್ಬನು ಕತ್ತೆಯು; ಒಬ್ಬನು ಸುಖಿಯು ಮತ್ತೊಬ್ಬನು ಸದಾ ದುಃಖಿಯು ಹೀಗೆ ಇರುವರು. ಜಗತ್ತಿನಲ್ಲಿರುವ ಇಂಥ ತಾರತಮ್ಯಕ್ಕೆ ಆಯಾ ಚೇತನರ ಪೂರ್ವ ಜನ್ಮ ಕೃತಕರ್ಮಜನಿತವಾದ ಒಂದು ಅದೃಷ್ಟ ವಿಶೇಷವೇ ಕಾರಣವು ಹೊರತು ಬೇರೆ ಯಾವದೂ ಕಂಡು ಬರುವದಿಲ್ಲ. ಮತ್ತು ಜಡವಾದ ಕರ್ಮವು ಸಾಕ್ಷಾತ್ತಾಗಿ ಫಲ ಕೊಡಲಾರದಾದುದರಿಂದ ಅವರವರ ಪೂರ್ವಕೃತ ಕರ್ಮಾನುಸಾರವಾಗಿ ಈ ಜನ್ಮದಲ್ಲಿ ಫಲವನ್ನು ಕೊಡುವ ಒಬ್ಬ ಪರಮ ಚೇತನನನ್ನೂ ಒಪ್ಪಬೇಕು. ನಮ್ಮ ಜನ್ಮಾಂತರ ಕೃತಕರ್ಮಜನಿತವಾದ ಯಾವ ಅದೃಷ್ಟವನ್ನು ನಿಮಿತ್ತ ಮಾಡಿ ಫಲಪ್ರದನಾದ ಪರಮಚೇತನನು (ಈಶ್ವರನು) ಸುಖಜನಕವಾದ ಸಂಪತ್ತು ಜ್ಞಾನ ಮೊದಲಾದವುಗಳನ್ನು ದಯಪಾಲಿಸುವನೋ ಅಂಥ ಅದೃಷ್ಟವು "ಧರ್ಮ" (ಪುಣ್ಯ) ವೆಂದೂ, ಮತ್ತು ಯಾವ ಅದೃಷ್ಟವನ್ನು ನಿಮಿತ್ತ ಮಾಡಿ ದುಃಖಜನಕವಾದ ದಾರಿದ್ರ್ಯ, ರೋಗ ಮೊದಲಾದವುಗಳನ್ನು ವಿಧಿಸುವನೋ ಅಂಥ ಅದೃಷ್ಟವು "ಅಧರ್ಮ" (ಪಾಪ) ವೆಂದೂ ಶಾಸ್ತ್ರದಲ್ಲಿ ವ್ಯವಹರಿಸಲ್ಪಡುವದು. ಹಾಗೆಯೇ ಪುಣ್ಯಜನಕಗಳಾದ ಕರ್ಮಗಳು ಧರ್ಮಗಳೆಂದೂ, ಪಾಪಜನಕಗಳಾದ ಕರ್ಮಗಳು ಅಧರ್ಮಗಳೆಂದೂ ನಿರ್ಣೀತವಾಗಿವೆ. ಅದೃಷ್ಟದ್ವಾರಾ ಆತ್ಮನಿಗೆ ಸುಖಜನಕವಾದ ವ್ಯಾಪಾರವೆಂಬ ಲಕ್ಷಣವುಳ್ಳ "ಧರ್ಮ" ವೆಂಬ ಪದಾರ್ಥವು ಉಂಟೆಂದಾಯಿತಷ್ಟೇ ?

**೫ ಪ್ರಶ್ನೆ**—ಶ್ರೀಪಾದಾಚಾರ್ಯರು—ಸ್ವಾಮೀ! ಜಗತ್ತಿನಲ್ಲಿರುವ ವೈಚಿತ್ರ್ಯವನ್ನೂ, ತಾರತಮ್ಯವನ್ನೂ ನಿರ್ವಾಹ ಮಾಡುವ ಉದ್ದೇಶದಿಂದ ಜನ್ಮಾಂತರ ಕರ್ಮಜನಿತವಾದ ಅದೃಷ್ಟವೆಂದು ಹೆಸರುಳ್ಳ ಧರ್ಮವೆಂಬ ಪದಾರ್ಥವನ್ನು ಒಪ್ಪಬೇಕೆಂದು ಅಪ್ಪಣೆ ಕೊಡಿಸಿದಿರಿ. ಜಗದ್ವೈಚಿತ್ರ್ಯಾದಿಗಳು ತಮ್ಮ ಪಾಡಿಗೆ ತಾವೇ ಆದವು ಎಂದು ಏಕೆ ಹೇಳಬಾರದು ?

ಶ್ರೀ ಶ್ರೀಗಳವರು— "ನ ಹಿ ನಿಷ್ಕಾರಣಂ ಕಾರ್ಯಮಸ್ತಿ." ಕಾರಣವಿಲ್ಲದೆ ಕಾರ್ಯವು ಹುಟ್ಟುವದಿಲ್ಲ. ಜಗತ್ತಿನಲ್ಲಿರುವ ವೈಚಿತ್ರ್ಯ ತಾರತಮ್ಯಾದಿ ಕಾರ್ಯಗಳಿಗೆ ಬೇರೆ ಯಾವ ಕಾರಣವನ್ನು ಹೇಳುವಿರಿ ?

ಶ್ರೀಪಾದಾಚಾರ್ಯರು— ಸ್ವಾಮೀ! ಕೆಲವು ಶಿಶುಗಳು ಮಾತೃಗರ್ಭದ ದೋಷದಿಂದ ಕುರುಡು, ಕಿವುಡು ಆಗುವವು. ಕೆಲವರು ಗರ್ಭದ ಅನುಕೂಲತೆ

ಯಿಂದ ಸುಂದರರಾಗುವರು. ಹೀಗೆಯೇ ಸಮಸ್ತ ವಿಷಯಗಳಲ್ಲಿಯೂ ತತ್ತದ್ವಿಷಯೋಚಿತವಾದ ಕಾರಣಗಳನ್ನು ಕಂಡು ಹಿಡಿದು ಹೇಳಬಹುದು.

ಶ್ರೀ ಶ್ರೀಗಳವರು— ಒಂದು ಮಾತೃ ಗರ್ಭದಲ್ಲಿ ದೋಷಪ್ರಾಪ್ತಿಗೂ ಮತ್ತೊಂದರಲ್ಲಿ ಆನುಕೂಲ್ಯವು ಇರುವದಕ್ಕೂ ಕಾರಣವೇನು ?

ಶ್ರೀವಾದಾಚಾರ್ಯರು— ಆ ವೈಚಿತ್ರ್ಯಕ್ಕೆ ಅವುಗಳ ಕಾರಣವೈಚಿತ್ರ್ಯವು ಕಾರಣವು.

ಶ್ರೀ ಶ್ರೀಗಳವರು— ಆ ಕಾರಣ ವೈಚಿತ್ರ್ಯಕ್ಕೆ ಕಾರಣವೇನು ? ಕೊನೆಯ ಮಾತನ್ನು ಹೇಳಿ.

ಶ್ರೀವಾದಾಚಾರ್ಯರು— ಸ್ವಾಮೀ ! ಸಮಸ್ತ ಜಗದುತ್ಪತ್ತಿಗೂ ಕಾರಣ ಭೂತವಾದ ಭೂತಸೂಕ್ಷ್ಮಗಳ **ಸ್ವಭಾವ** ವೈಚಿತ್ರ್ಯವೇ ಜಗದ್ವೈಚಿತ್ರ್ಯಕ್ಕೆ ಕಾರಣವು. ಅಗ್ನಿಗೆ ಔಷ್ಣ್ಯವು ಸ್ವಭಾವವು. ಸೂಜಿಗಲ್ಲಿಗೆ ಆಕರ್ಷಕ ಶಕ್ತಿಯು ಸ್ವಭಾವವು. ಹೀಗೆ ಭಿನ್ನ ಭಿನ್ನ ಸ್ವಭಾವಗಳಿಂದ ಯುಕ್ತವಾದ ಅನಂತ ಪದಾರ್ಥಗಳು ನಾನಾ ವಿಧವಾಗಿ ಕಲೆತು ಲೋಕವೈಚಿತ್ರ್ಯಕ್ಕೂ ತಾರತಮ್ಯಕ್ಕೂ ಕಾರಣಗಳಾಗುತ್ತವೆ. ಎಂದು ಹೇಳಬಹುದಲ್ಲಾ !

ಶ್ರೀ ಶ್ರೀಗಳವರು— ಈ "ಸ್ವಭಾವ ವಾದ"ವು ಬಹು ದೋಷಯುಕ್ತವಾಗಿದೆ. "ಸ್ವಭಾವ" ಕ್ಕೂ ಕೂಡ ನಿಯಾಮಕನಾಗಿ ಶ್ರೀ ಪರಮಾತ್ಮನಿದ್ದಾನೆಂಬುದು ಶ್ರುತಿಸಿದ್ಧವು. ಅದು ಹಾಗಿರಲಿ ! ಭಿನ್ನ ಸ್ವಭಾವವುಳ್ಳ ಈ ಅನಂತ ಪದಾರ್ಥಗಳು ಪರಸ್ಪರ ನಾನಾ ವಿಧವಾಗಿ ಮಿಳಿತವಾದರಷ್ಟೇ ಅನೇಕ ಜಗತ್ಕಾರ್ಯಗಳೂ ತದ್ಗತ ವೈಚಿತ್ರ್ಯಾದಿಗಳೂ ಉಂಟಾಗಬೇಕು. ಈ ಮೇಳನ ಕರ್ತೃತ್ವವು ಸ್ವಭಾವಕ್ಕೆ ಕೂಡಲಾರದು. ಇಂಥ ಮೇಳನವೂ ಕೂಡ ಸ್ವಭಾವದಿಂದಲೇ ಆಗುವದೆಂದು ನೀವು ಹೇಳುವಿರಾದರೆ ಪ್ರಬಲವಾದ ದೋಷಾಂತರವು ಬಂದೊದಗುವದು. ಭೂತ ಸೂಕ್ಷ್ಮಗಳ ಸ್ವಭಾವಗಳು ನಿತ್ಯವಾಗಿ ಒಂದೇ ರೀತಿ ಇರುವದರಿಂದ ಅನೇಕ ಪದಾರ್ಥಗತ "ಸ್ವಭಾವ"ಗಳ ಮೇಳನವೂ ಒಂದೇ ರೀತಿಯಾಗಿ ಜಗತ್ಪ್ರವಾಹವು ಶಶ್ವದೇಕ ಪ್ರಕಾರವಾಗಿ (ಒಂದೇ ರೀತಿಯಾಗಿ) ನಡೆಯಬೇಕಾದೀತು ! ಈ ವರ್ಷದಲ್ಲಿ ಈ ದಿವಸ ಮಳೆಯಾದರೆ ಮುಂದಿನ ವರ್ಷದಲ್ಲಿಯೂ ಸಕಲ "ಸ್ವಭಾವ" ಗಳೂ ಇದೇ ರೀತಿಯಲ್ಲಿ ಸ್ವಭಾವದಿಂದಲೇ ಕಲಿತು ಇದೇ ದಿವಸ ವೃಷ್ಟಿಯನ್ನು ಉಂಟು ಮಾಡಬೇಕು. ಲೋಕದಲ್ಲಿ ಹೀಗಿರುವದಿಲ್ಲ. ಒಂದು ದೇಶದಲ್ಲಿ ವೃಷ್ಟಿಯು, ಅದರ ಸಮೀಪವಿದ್ದ ಮತ್ತೊಂದು ಪ್ರದೇಶದಲ್ಲಿ ಅನಾವೃಷ್ಟಿಯು, ಒಂದು ವರ್ಷ ಕ್ಷಾಮವು ಮತ್ತೊಂದು ವರ್ಷದಲ್ಲಿ ಸುಭಿಕ್ಷವು, ಸಮವಾದ ವಯೋಧರ್ಮವೇ ಮೊದಲಾದ ಸಂಪತ್ತುಳ್ಳವರಲ್ಲಿ ಒಬ್ಬನಿಗೆ ಕೀರ್ತಿ, ಮತ್ತೊಬ್ಬನಿಗೆ ಅಕೀರ್ತಿ ಇವೇ ಮೊದಲಾದ ತಾರತಮ್ಯವೂ ಮತ್ತು ವೈಚಿತ್ರ್ಯಗಳೂ ಕಂಡು

ಒರುವದರಿಂದ ಫಲಪ್ರದನಾದ ಯಾವನೋ ಒಬ್ಬ ಚೇತನನು ಭೋಗಕರ್ತೃಗಳಾದ ತತ್ತದ್ದೇಶ ವಾಸಿಗಳ ಅದೃಷ್ಟ ವಿಶೇಷವನ್ನೂ, ತತ್ತತ್ಕಾರ್ಯೋತ್ಪಾದಕಗಳಾದ ಕಾರಣಗಳನ್ನೂ, ನಿಮಿತ್ತ ಮಾಡಿ ಕೆಲವು ಕಡೆ ವೃಷ್ಟಿಯನ್ನೂ, ಕೆಲವು ಕಡೆ ಕ್ಷಾಮವನ್ನೂ, ಕೆಲವರಿಗೆ ಸುಖಸಾಧನಗಳಾದ ಸಂಪತ್ತು ಆರೋಗ್ಯಕಳತ್ರಪುತ್ರ ಮಿತ್ರಾದಿ ಭಾಗ್ಯವನ್ನೂ, ಇನ್ನು ಕೆಲವರಿಗೆ ದುಃಖಸಾಧನಗಳಾದ ರೋಗ, ದಾರಿದ್ರ್ಯ, ಬಂಧುನಾಶಾದಿ ದುರ್ಭಾಗ್ಯವನ್ನೂ ಉಂಟು ಮಾಡುವನೆಂದು ಅವಶ್ಯವಾಗಿ ಒಪ್ಪಬೇಕು. ಈ ವಿಷಯವನ್ನು ಮನಸ್ಸಿನಲ್ಲಿಟ್ಟುಕೊಂಡು "ಬಹುಚಿತ್ರ ಜಗದ್ಬಹುಧಾಕರಣಾತ್ಪರಶಕ್ತಿರನಂತ ಗುಣಃ ಪರಮಃ" ಎಂದು ಶ್ರೀಮದಾಚಾರ್ಯರು ಶ್ರೀ ಹರಿಯನ್ನು ಸ್ತೋತ್ರ ಮಾಡಿದ್ದಾರೆ.

೬ **ಪ್ರಶ್ನೆ**— ಸುಬ್ಬರಾಯರು— ಸ್ವಾಮೀ ! ತಾವು ಹೇಳಿದಂತೆ "ಧರ್ಮ" ವೆಂಬ ಪದಾರ್ಥವನ್ನು ಒಪ್ಪಿದೆವು. ಮುಂದೇನು ?

ಶ್ರೀ ಶ್ರೀಗಳವರು— "ಧರ್ಮ" ವೆಂಬ ಪದಾರ್ಥವನ್ನು ನೀವು ಅಂಗೀಕಾರ ಮಾಡಿದರೆ ಅಪೌರುಷೇಯ ವಾಕ್ಯವು ಉಂಟೆಂದೂ ಅಂಗೀಕರಿಸಿದ ನ್ಯಾಯವೇ.

ಸುಬ್ಬರಾಯರು— ಸ್ವಾಮೀ ! ಇಷ್ಟು ಪ್ರಯಾಸವು ಏತಕ್ಕೆ ? ಅಹಿಂಸೆಯು ಪರಮ ಧರ್ಮವೆಂದು ಜಿನನೂ, ನಿರ್ವಾಣಪ್ರದವಾದ ಶೂನ್ಯಧ್ಯಾನವೂ, ಸರ್ವ ಪರಿತ್ಯಾಗವೂ ಧರ್ಮವೆಂದು ಬುದ್ಧನೂ, ಭೂತದಯೆ, ಲೋಕೋಪಕಾರ ಮೊದಲಾದುವುಗಳೇ ಧರ್ಮವೆಂದು ಕ್ರಿಸ್ತನೂ, ಸ್ವಾರ್ಥ ಸುಖ ಪರಿತ್ಯಾಗಪೂರ್ವಕವಾದ ದೇಶ ಸೇವೆಯೇ ಪರಮ ಧರ್ಮವೆಂದು ನವೀನ ಆಂಗ್ಲೇಯರೂ ಇನ್ನು ಮುಹಮ್ಮದನೇ ಮೊದಲಾದ ಅನೇಕ ಮತಪ್ರವರ್ತಕರು "ಅಪೌರುಷೇಯ ವಾಕ್ಯ"ವನ್ನು ಒಪ್ಪದಿದ್ದರೂ ಧರ್ಮಸ್ವರೂಪವನ್ನು ತಿಳಿಸಿರುತ್ತಾರಾದ್ದರಿಂದ ಧರ್ಮಸಿದ್ಧಿಯು ಅಪೌರುಷೇಯ ವಾಕ್ಯದಿಂದಲೇ ಆಗಬೇಕೆಂಬ ನಿರ್ಬಂಧವೇಕೆ ?

ಶ್ರೀ ಶ್ರೀಗಳವರು— ಅಯ್ಯಾ ! ಪಂಜರದಲ್ಲಿ ಹುಲಿ ಬಿದ್ದಂತೆ ನಿನ್ನ ಮಾತುಗಳಲ್ಲೇ ನೀನು ಸಿಕ್ಕಿ ಬಿದ್ದಿರುವಿ ! ನೀನೇ ನೋಡು. ಅನೇಕ ಮತಪ್ರವರ್ತಕರು "ನಾನು ಸರ್ವಜ್ಞನು" "ನಾನು ಸರ್ವಜ್ಞನು" ಎಂದು ಮೇಲಾಡುತ್ತ ಪರಸ್ಪರ ವಿರುದ್ಧವಾಗಿ ಧರ್ಮ ಸ್ವರೂಪವನ್ನು ನಿರೂಪಣೆ ಮಾಡಿರುತ್ತಾರೆ. ಧರ್ಮೋಪದೇಶಕನ ಸರ್ವಜ್ಞತೆಯು ನಿಶ್ಚಯವಾಗುವವರೆಗೂ ಅವನ ವಾಕ್ಯಗಳಲ್ಲಿ ಪ್ರಾಮಾಣ್ಯ ನಿಶ್ಚಯವಾಗಲಾರದು. ವಕ್ತೃಸರ್ವಜ್ಞತೆಯಲ್ಲಿ ಪ್ರಮಾಣವು ದೊರಕಲಾರದು. ಪೌರುಷೇಯ ವಾಕ್ಯದಿಂದ ಧರ್ಮವನ್ನು ನಿಶ್ಚಯ ಮಾಡುವದಾದರೆ ಪ್ರತಿಯೊಬ್ಬನೂ "ನಾನು ಸರ್ವಜ್ಞನು" ಎಂದು ಹೇಳುವದಕ್ಕಾರಂಭಿಸಿ, ಸಕಲ ಧರ್ಮನಾಶವೇ ಪ್ರಾಪ್ತವಾಗುವದು.

ಮೇಲಾಗಿ ಈಶ್ವರನು ಯಾವ ಧರ್ಮಜನಿತ ಅದೃಷ್ಟ ವಿಶೇಷವನ್ನು ನಿಮಿತ್ತ ಮಾಡಿ ಸುಖ ಅಥವಾ ಜ್ಞಾನರೂಪವಾದ ಫಲವನ್ನು ಕೊಡುವನೋ, ಅದೇ "ಪುಣ್ಯ"ವು ಅಥವಾ "ಧರ್ಮ"ವೆಂದೂ ಮತ್ತು ಯಾವ ಅದೃಷ್ಟ ವಿಶೇಷವನ್ನು ನಿಮಿತ್ತ ಮಾಡಿ ದುಃಖ ಅಥವಾ ಅಜ್ಞಾನ ರೂಪವಾದ ಫಲವನ್ನು ಕೊಡುವನೋ, ಅದೇ "ಪಾಪ"ವು ಅಥವಾ "ಅಧರ್ಮ"ವೆಂದೂ ನಾವು ಸಯುಕ್ತಿಕವಾಗಿ ನಿರೂಪಿಸುತ್ತೇವೆ. ನೀನು ಹೇಳಿದ ಮತಪ್ರವರ್ತಕರಲ್ಲಿ ಅನೇಕರು ಇಂಥ "ಧರ್ಮ" ವನ್ನು ಅಂಗೀಕರಿಸಿಲ್ಲ.

೭ **ಪ್ರಶ್ನೆ**— ಸುಬ್ಬರಾಯರು— ಹೌದು ಮಹಾ ಸ್ವಾಮೀ ! ಆದರೂ ತಮ್ಮಿಂದ ಉಕ್ತವಾದ "ಧರ್ಮ"ವೆಂಬ ಪದಾರ್ಥವನ್ನೇ ವಶಿಷ್ಠಾದಿ ಯೋಗೀಶ್ವರರು ತಮ್ಮ ದಿವ್ಯ ದೃಷ್ಟಿಯಿಂದ ಹೇಳಬಹುದಲ್ಲವೇ ? ಇನ್ನು ಅನಾದಿಯಾದ, ಯಾರೂ ರಚನೆ ಮಾಡದ ವಾಕ್ಯದಿಂದಲೇ "ಧರ್ಮ"ವೆಂಬ ಪದಾರ್ಥದ ಜ್ಞಾನವು ಬರಬೇಕೆಂಬ ನಿರ್ಬಂಧವೇಕೆ ?

ಶ್ರೀ ಶ್ರೀಗಳವರು— ಯದ್ಯಪಿ ಯೋಗೀಶ್ವರರು ಅತೀಂದ್ರಿಯವಾದ ಧರ್ಮಾಧರ್ಮಗಳನ್ನು ಕೂಡ ದಿವ್ಯಚಕ್ಷುಸ್ಸಿನಿಂದ ನೋಡಿ ತಮ್ಮ ಶಿಷ್ಯರಿಗೆ ಅವುಗಳನ್ನು ನಿರೂಪಿಸಬಹುದು. ಆದರೂ ಅವರ ವಾಕ್ಯದಿಂದ ಧರ್ಮಾದಿ ನಿಶ್ಚಯವು ಆಗಲಾರದು. ಮತ್ತೊಬ್ಬ ಪುರುಷನು ನಾನು ಯೋಗೀಶ್ವರೇಶ್ವರನು ಎಂದು ಹೇಳಿ ಭಿನ್ನವಾದ ರೀತಿಯಲ್ಲಿ "ಧರ್ಮ"ವನ್ನು ಪ್ರತಿಪಾದನೆ ಮಾಡಿದರೆ ಅವರಿಬ್ಬರ ವಾಕ್ಯಗಳಿಗೂ ಪರಸ್ಪರ ವಿರೋಧ ಉಂಟಾಗಿ, ಲೋಕದಲ್ಲಿ ಇಂಥದೇ "ಧರ್ಮ" ವೆಂದು ನಿಶ್ಚಯವಾಗದೆ ಸರ್ವ ವ್ಯವಹಾರ ಲೋಪವು ಸಂಭವಿಸುವದು.

ಕಿಂಚ, ಈಗ ಯೋಗೀಶ್ವರನಾಗಬೇಕಾದರೆ ಆ ಪುರುಷನು ಜನ್ಮಾಂತರದಲ್ಲಿ ಪುಣ್ಯಗಳನ್ನು ಆಚರಿಸಿರಬೇಕು. ಆ ಪೂರ್ವ ಜನ್ಮದಲ್ಲಿ ಬೇರೆ ಯೋಗೀಶ್ವರರಿಲ್ಲದ ಕಾರಣ ಆತನಿಗೂ ಸಹ ಧರ್ಮಾದಿ ನಿಶ್ಚಯವು ಯೋಗೀಶ್ವರ ಭಿನ್ನವಾದ ಅನಾದಿ ವಾಕ್ಯದಿಂದಲೇ ಆಗಬೇಕು. ಇದರಿಂದಲೇ ಅನಾದಿಯಾದ ಜೀವನಿಂದ ಕೃತವಾದ ಧರ್ಮಾಧರ್ಮಗಳು ಪ್ರವಾಹತಃ ಅನಾದಿಯಾಗಿರುವುದೆಂದೂ, ಅವುಗಳನ್ನು ಪ್ರತಿಪಾದನೆ ಮಾಡುವ ವಾಕ್ಯವೂ ಅನಾದಿಯಾಗಿರಬೇಕೆಂದೂ ಸಿದ್ಧವಾಯಿತು.

೮ **ಪ್ರಶ್ನೆ**— ಸುಬ್ಬರಾಯರು—ಮಹಾಸ್ವಾಮೀ ! ಧರ್ಮವೆಂಬ ಪದಾರ್ಥವನ್ನು ಒಪ್ಪಿದರೆ ಅಪೌರುಷೇಯ ವಾಕ್ಯವನ್ನು ಒಪ್ಪಿದಂತಾಯಿತೆಂದು ತಮ್ಮಿಂದ ನಿರೂಪಿತವಾಯಿತು. ಅದು ಹೇಗೆ ?

ಶ್ರೀ ಶ್ರೀಗಳವರು— ಜೀವರು ಅನಾದಿಯಾದುದರಿಂದ ಅವರಿಂದ ಕೃತವಾದ ಕರ್ಮಗಳು ಅನಂತಗಳೂ ಪ್ರವಾಹತಃ ಅನಾದಿಗಳೂ ಆಗಿರುತ್ತವೆ. ಆ ಕರ್ಮಗಳಲ್ಲಿ ಯಾವುದರಿಂದ "ಧರ್ಮ"ವು ಉತ್ಪನ್ನವಾಗುವುದು ? ಯಾವದು ಅಧರ್ಮಜನಕವು? ಕರ್ಮಗಳಿಗೆ ಫಲಪ್ರದನಾದ ಚೇತನನು ಯಾವ ಪ್ರಮಾಣವನ್ನು

ಆಧಾರವಾಗಿಟ್ಟುಕೊಂಡು ಈ ಕರ್ಮವು ಪುಣ್ಯಕರ್ಮವು ಈ ಕರ್ಮವು ಪಾಪಕರ್ಮವು ಎಂದು ವ್ಯವಸ್ಥೆ ಮಾಡುತ್ತಾನೆ ಎಂದು ಪ್ರಶ್ನೆ ಮಾಡಿದರೆ ಪೌರುಷೇಯ ವಾಕ್ಯಗಳು ಸರ್ವವೂ ಸಂದೇಹ ವಿಷಯಗಳಾಗಿ ಅವ್ಯವಸ್ಥೆಗೆ ಕಾರಣ ವಾಗುವುದರಿಂದಲೂ ಮತ್ತು ಸಾಪೇಕ್ಷವಾದುದರಿಂದಲೂ ಇದು ಧರ್ಮವು ಇದು ಅಧರ್ಮವು ಎಂಬ ನಿಶ್ಚಯ ಜ್ಞಾನವನ್ನು ಹುಟ್ಟಿಸಲಾರವು. ಆದುದರಿಂದ ಅಧಿಕಾರಿಗಳು ಈ ಕರ್ಮವು ಸುಖಪ್ರದವಾಗುವುದು, ಅತಏವ ಸತ್ಕರ್ಮವು. ಇದು ದುಃಖಪ್ರದವಾಗುವುದು, ಅತಏವ ದುಷ್ಕರ್ಮವು. ಎಂದು ವಿವೇಚನೆ ಮಾಡಿ ತಿಳಿಯುವದಕ್ಕೂ ಫಲಪ್ರದನಾದ ಪರಮ ಚೇತನನ, ಇಂಥ ಕರ್ಮವನ್ನು ಮಾಡಿದುದರಿಂದ ನಾನು ಸುಖಪ್ರದನಾಗಬೇಕು; ಇಂಥ ಕರ್ಮವನ್ನು ಮಾಡಿ ದುದರಿಂದ ನಾನು ದುಃಖಪ್ರದನಾಗುವೆನು ಎಂಬ ವ್ಯವಸ್ಥೆಯನ್ನು ತಿಳಿಸುವದಕ್ಕೂ ಜ್ಞಾಪಕವಾದ, ಧರ್ಮಾಧರ್ಮ ಸ್ವರೂಪವನ್ನು ನಿಶ್ಚಯಿಸಿ ಹೇಳುವ ಒಂದು ಅನಾದಿ ವಾಕ್ಯವು ಅವಶ್ಯವಾಗಿ ಇರಬೇಕೆಂದು ಸಿದ್ಧವಾಗುತ್ತದೆ. ಅವುಗಳೇ "ಸ್ವರ್ಗ-ಕಾಮೋ ಯಜೇತ" "ತದ್ವಿಜಿಜ್ಞಾಸಸ್ವ ತದ್ಬ್ರಹ್ಮ" "ನಸುರಾಂ ಪಿಬೇತ್" ಇತ್ಯಾದಿ ವಾಕ್ಯಗಳು.

೯ **ಪ್ರಶ್ನೆ**—ಸುಬ್ಬರಾಯರು– ಅಂಥ ಅನಾದಿಯಾದ ವಾಕ್ಯವು ಯಾವುದು ?

**ಉತ್ತರ**— ಶ್ರೀ ಶ್ರೀಗಳವರು— ವೇದವಾಕ್ಯವೇ. ಅಂಗಡಿಯಲ್ಲಿ ಹತ್ತು ಜನರು ತಮಗೆ ಬೇಕಾದ ಸರಕುಗಳನ್ನು ಕೊಂಡುಕೊಂಡು ದ್ರವ್ಯವನ್ನು ಕೊಟ್ಟು ತಮ್ಮ ತಮ್ಮ ಮನೆಗಳಿಗೆ ಹೋಗುತ್ತಾನೆ. ಒಬ್ಬನು ಮಾತ್ರ ಗದ್ದಿಗೆಯ ಮೇಲೆ ಕುಳಿತು ಪದಾರ್ಥಗಳನ್ನು ಕೊಟ್ಟು ದ್ರವ್ಯವನ್ನು ಸ್ವೀಕರಿಸುತ್ತ ಇದ್ದಾನೆ. ಇದರಲ್ಲಿ ವರ್ತಕನು ಯಾರು ? ಎಂದು ಪ್ರಶ್ನೆ ಮಾಡಿದರೆ ಸಾಮಾನುಗಳನ್ನು ಮಾರಿ ದುಡ್ಡು ವಸೂಲು ಮಾಡುವವನು ವರ್ತಕನೆಂದು ಸುಲಭವಾಗಿ ಹೇಳಬಹುದು. ಇದೇ ರೀತಿ ಯಲ್ಲಿ "ಧರ್ಮ"ವನ್ನು ಒಪ್ಪಿದುದರಿಂದಲೇ ಅನಾದಿ ವಾಕ್ಯವನ್ನೂ ನೀವು ಒಪ್ಪಿರು ತ್ತೀರಿ. ಒಂದು ಅನಾದಿ ವಾಕ್ಯವು ಇದೆ ಎಂದು ನಿಶ್ಚಿತವಾಗಿದೆ. ವೇದವಾಕ್ಯ, ಜಿನವಾಕ್ಯ, ಬುದ್ಧವಾಕ್ಯ, ಇವೇ ಮೊದಲಾದ ವಾಕ್ಯಗಳಲ್ಲಿ ಯಾವದು ಅನಾದಿ ಎಂದು ವಿಪ್ರತಿಪತ್ತಿಯು ಬಂದರೆ, ಇದ್ದಲಿಗಳ ರಾಶಿಯಲ್ಲಿ ವಜ್ರಪದಕದಂತೆ ವೇದವು ಇವುಗಳೆಲ್ಲಕ್ಕಿಂತಲೂ ವಿಲಕ್ಷಣವೆಂದು ಸುಲಭವಾಗಿ ನಿಶ್ಚಯಿಸಬಹುದು. ಜಿನ ಬುದ್ಧಾದಿ ಹೆಸರುಗಳಿಂದ ಸಹಿತವಾಗಿರುವದರಿಂದಲೇ ಆ ವಾಕ್ಯಗಳು ಪೌರುಷೇಯ ಗಳೆಂದು ಸಿದ್ಧವಾಗುತ್ತದೆ. ವೇದವಾಕ್ಯವಾದರೋ ಅನಾದಿ ಎಂಬ ಪ್ರಸಿದ್ಧಿಯಿಂದ ಯುಕ್ತವಾಗಿದೆ. ಇದನ್ನು ಅಧ್ಯಯನ ಮಾಡುವ ಶಿಷ್ಯರೆಲ್ಲರೂ ಪುರಾತನವಾದ ಸ್ವರ ವಿಶಿಷ್ಟ ವರ್ಣಸಮೂಹವನ್ನೇ ನಮ್ಮ ಗುರುಗಳು ನಮಗೆ ಉಪದೇಶ ಮಾಡುತ್ತಾ ರೆಂದೂ, ಇದನ್ನು ಉಪದೇಶ ಮಾಡುವ ಗುರುಗಳೆಲ್ಲರೂ ನಮ್ಮ ಗುರುಗಳು ನಮಗೆ

ಅನುಗ್ರಹ ಮಾಡಿ ಉಪದೇಶ ಮಾಡಿದ ಕ್ರಮವಿಶಿಷ್ಟವಾದ ವರ್ಣ ಸಮುದಾಯ ವನ್ನೇ ಅದೇ ಸ್ವರದಿಂದ ಸಹಿತವಾಗಿ ನಮ್ಮ ಶಿಷ್ಯರಿಗೆ ನಾವು ಅಧ್ಯಾಪನ ಮಾಡಿಸು ತ್ತಿದ್ದೇವೆಂದೂ ತಿಳಿಯುತ್ತಾ ಬಂದಿದ್ದಾರೆ. ಹೀಗೆ ಹಿಂದೆ ಎಷ್ಟು ಕಲ್ಪಗಳು ಹೋದರೂ ಈ ಬುದ್ಧಿಯಿಂದಲೇ ವೇದೋಪದೇಶವು ಪರಂಪರೆಯಾಗಿ ನಡೆದು ಬಂದಿರುತ್ತದೆ. ಆದುದರಿಂದಲೇ ಅದನ್ನು "ಅನಾದಿ" ಎಂದೂ, ಯಾರೂ ಸ್ವತಂತ್ರ ವಾಗಿ ರಚನೆ ಮಾಡದಿರುವದರಿಂದ ಅಪೌರುಷೇಯವೆಂದೂ ಕರೆಯುತ್ತಾರೆ. "ಶ್ರುತಿ" ಎಂಬ (ಎಂದರೆ ಅನಾದಿ ಕಾಲದಿಂದಲೂ ಗುರುಗಳ ಮುಖದಿಂದ ಶ್ರವಣ ಮಾಡಿ ದುದು ರಚಿತವಲ್ಲ ಎಂಬ ಅರ್ಥವುಳ್ಳ) ಅದರ ನಾಮವೇ ವೇದಾಪೌರುಷೇಯತ್ವದಲ್ಲಿ ಸಾಧಕವಾಗಿರುತ್ತದೆ. ಇದರ ಮೇಲೆ ನಿತ್ಯನಾದ ಸರ್ವ ಕರ್ಮಫಲಪ್ರದನಾದ ಈಶ್ವರನ ವ್ಯವಸ್ಥಾಜ್ಞಾಪಕವಾದ ವಾಕ್ಯವಾದುದರಿಂದ ಅದೂ ನಿತ್ಯವೆಂದು ಅನು ಮಾನದಿಂದ ಸಿದ್ಧವಾಗುವದು.

**೧೦ ಪ್ರಶ್ನೆ**— ಸ್ವಾಮೀ ! ವೇದವು ಅಪೌರುಷೇಯವಾದರೆ "ಜನಮೇಜಯ ಪರೀಕ್ಷಿತೌ" ಇತ್ಯಾದಿ ಇದಾನೀಂತನ ಪುರುಷರ ಹೆಸರುಗಳೂ, "ಭೃಗುವಲ್ಲೀ" ಮುಂತಾದ ಋಷಿನಾಮಗಳಿಂದ ಸಹಿತವಾದ ಉಪನಿಷನ್ನಾಮಗಳೂ ಅದರಲ್ಲಿ ಹೇಗೆ ಕಂಡು ಬಂದಿವೆ ?

ಶ್ರೀ ಶ್ರೀಗಳವರು— "ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವ-ಮಕಲ್ಪಯತ್" ಎಂಬ ಶ್ರುತ್ಯನುಸಾರವಾಗಿ ಸೃಷ್ಟಿ ಪ್ರವಾಹವು ಅನಾದಿ ನಿತ್ಯ ವಾದುದರಿಂದ ಪ್ರತಿಕಲ್ಪದಲ್ಲೂ ಜನಮೇಜಯ ಪರೀಕ್ಷಿತರುಗಳು ಭಿನ್ನಭಿನ್ನರು ಸಂಸಾರಕ್ಕೆ ಬಂದು ಮುಕ್ತರಾಗುತ್ತಲೇ ಇರುತ್ತಾರೆ. ಹೀಗೆಯೇ ಆಧಿಕಾರಿಕ ದೇವತೆಗಳು. ವೇದವು ಪ್ರತಿನಿಯತವಾಗಿ ಯಾವ ಒಂದು ವ್ಯಕ್ತಿಯಲ್ಲೂ ದೃಷ್ಟಿ ಇಡದೆ ಅನಾದಿಯಾದ ಕಾಲಪ್ರವಾಹದಲ್ಲಿ ನಡೆದಿರುವ ಚರಿತ್ರೆಯನ್ನು ಅಲ್ಲಲ್ಲಿ ನಿರೂಪಣೆ ಮಾಡಿರುವದರಿಂದ ನಾನಾ ದೇವತೆಗಳ, ಋಷಿಗಳ, ಮತ್ತು ರಾಜರುಗಳ ಹೆಸರುಗಳು ಅದರಲ್ಲಿ ಕಂಡು ಬರುತ್ತವೆ. ಈ ಕಲ್ಪದ ಚೇತನರ ಚರಿತ್ರೆಯನ್ನೇ ಹೇಳುವದೆಂದು ಭ್ರಮಿಸಿ ವೇದದಲ್ಲಿ ಪೌರುಷೇಯತ್ವ ಶಂಕೆಯನ್ನು ಮಾಡಕೂಡದು. ಭೃಗುಋಷಿಗಳಿಂದ ದೃಷ್ಟವಾದುದರಿಂದ ಆ ಉಪನಿಷದ್ಭಾಗಕ್ಕೆ ಭೃಗುವಲ್ಲೀ ಎಂದು ಹೆಸರು. ಇನ್ನು ಏನು ಕೇಳಬೇಕೆಂದಿರುತ್ತೀರಿ ?

**೧೧ ಪ್ರಶ್ನೆ**—ಸುಬ್ಬರಾಯರು— ಸ್ವಾಮೀ ! ಜಡವಾದ ಅತಏವ ಅಭಿಪ್ರಾ ಯರಹಿತವಾದ ವೇದವಾಕ್ಯದಿಂದ ಜ್ಞಾನವು ಹೇಗೆ ಹುಟ್ಟುತ್ತದೆ ?

ಶ್ರೀ ಶ್ರೀಗಳವರು— ಚಕ್ಷುಃ ಶ್ರೋತ್ರಾದಿ ಇಂದ್ರಿಯಗಳು ಜಡವಾದರೂ ಯಥಾರ್ಥ ಜ್ಞಾನವನ್ನು ಹುಟ್ಟಿಸುವವು. ಇದೇ ರೀತಿಯಲ್ಲಿ ನಿರ್ದುಷ್ಟವಾದ ವಾಕ್ಯವು ಜಡವಾದರೂ ಯಥಾರ್ಥ ಜ್ಞಾನವನ್ನು ಹುಟ್ಟಿಸುವದು. ಮತ್ತು ಸ್ವಭಾವತಃ ವೇದವಾಕ್ಯವು ಅಭಿಪ್ರಾಯದಿಂದ ರಹಿತವಾದರೂ ಅನಾದಿಯಾದ "ಆಮ್ನಾಯಂತು

ಬ್ರಹ್ಮಚಾರಿಣಃ ಸ್ವಾಹಾ! ವಿಮಾಯಂತು ಬ್ರಹ್ಮಚಾರಿಣಃ ಸ್ವಾಹಾ!" ಇತ್ಯಾದಿ ವಾಕ್ಯಗಳನ್ನು ನಾವು ಉಚ್ಚರಿಸಿ ಆ ಮಂತ್ರಗಳಿಂದ ನಮ್ಮ ಅಭಿಪ್ರಾಯ ವನ್ನು ಪ್ರವೇಶ ಮಾಡಿಸಿ "ಎಲೈ ದೇವರೇ! ವೇದಾರ್ಥ ವಿಚಾರ ಮಾಡುವ ಅನೇಕ ಜನ ಶಿಷ್ಯರು ನಮ್ಮ ಬಳಿಗೆ ಒದಗಲಿ" ಎಂದು ಶ್ರೀ ಹರಿಯನ್ನು ಪ್ರಾರ್ಥಿಸ ಬಹುದು. ಜಡವಾದ ಅನಾದಿ ವಾಕ್ಯವಾದರೂ ಚೇತನರ ಅಭಿಪ್ರಾಯ ವಿಶೇಷ ದಿಂದ ಸಹಿತವಾಗಿರುವದರಿಂದ, ಶ್ರೀ ಹರಿಯು ಆ ಸ್ತೋತ್ರಗಳಿಂದ ಪ್ರಸನ್ನನಾಗಿ ಭಕ್ತರಾದ ಅಧಿಕಾರಿಗಳಿಗೆ ಅವರವರ ಕರ್ಮೋಚಿತವಾದ ಇಷ್ಟಾರ್ಥಗಳನ್ನು ಕೊಟ್ಟು ಸಂತೈಸುವದರಲ್ಲಿ ಸಂದೇಹವಿಲ್ಲ.

[ಸಂಕ್ಷೇಪ:— ಒಂದು ಅದೃಷ್ಟರೂಪವಾದ ಧರ್ಮವೆಂಬ ಪದಾರ್ಥವನ್ನು ಒಪ್ಪದಿದ್ದರೆ ಲೋಕ ವ್ಯವಹಾರವು ಲುಪ್ತವಾಗಿ ಜಗನ್ನಾಶವು ಪ್ರಾಪ್ತವಾಗುವದ ರಿಂದಲೂ, ಲೋಕದಲ್ಲಿ ಕಂಡು ಬರುವ ವೈಚಿತ್ರ್ಯ ತಾರತಮ್ಯಾದಿಗಳನ್ನು ನಿರ್ವಾಹ ಮಾಡುವ ಉದ್ದೇಶದಿಂದಲೂ "ಧರ್ಮ"ವೆಂಬ ಪದಾರ್ಥವನ್ನು ಸರ್ವವಾದಿಗಳೂ ಇದೆ ಎಂದು ಅವಶ್ಯವಾಗಿ ಅಂಗೀಕರಿಸಬೇಕು. ಅಂಥ ಧರ್ಮಜ್ಞಾನವು ಪೌರುಷೇಯ ವಾಕ್ಯದಿಂದ ಪ್ರಾಪ್ತವಾಗುವದಾದರೆ ನಾನಾ ವಿಧವಾದ ಸಂದೇಹ ಗಳುಂಟಾಗಿ ಪುನಃ ದುರವಸ್ಥೆಯು ಬಂದೊದಗುವದರಿಂದ ಒಂದು ಅನಾದಿ ವಾಕ್ಯ ವನ್ನೂ ಅಂಗೀಕರಿಸಬೇಕು. ಅಂಥ ಅನಾದಿ ವಾಕ್ಯವು ಯಾವುದೆಂದು ವಿಚಾರಿಸಿ ದರೆ ಯಾರೂ ರಚನೆ ಮಾಡಿಲ್ಲವೆಂಬ ಪ್ರಸಿದ್ಧಿಯು ವೇದ ವಾಕ್ಯಕ್ಕೇ ಇರುವದರಿಂದ ವೇದವೇ ಆಗುವದು. ಆದುದರಿಂದಲೇ ಅದಕ್ಕೆ "ಶ್ರುತಿ" ಎಂದು ಹೆಸರು. **H.S.**]



## IX

ತಾ|| 29—6—1930 ರಲ್ಲಿ

### ಪ್ರಾಶ್ನಿಕರು—ಎಚ್. ಸುಬ್ಬರಾಯರು, ಎಂ.ಎ. ಮತ್ತು ವಿದ್ಯಾರ್ಥಿಗಳು

---

೧ **ಪ್ರಶ್ನೆ** — ಸುಬ್ಬರಾಯರು — ಸ್ವಾಮೀ! ವೇದಾಪೌರುಷೇಯತ್ವವು ಸಪ್ರಮಾಣವಾಗಿ ತಮ್ಮಿಂದ ನಿರೂಪಿತವಾಯಿತು. ಆದರೂ ಹೃದಯದಲ್ಲಿ ಅಂಕುರಿತವಾದ ಒಂದೆರಡು ಸಂದೇಹಗಳು ಮನಸ್ಸನ್ನು ಬಾಧಿಸುತ್ತಿವೆ. ವೇದವು ಸ್ವರವಿಶಿಷ್ಟವಾದ ವರ್ಣಸಮೂಹವಷ್ಟೆ? ಈ ವರ್ಣಸಮುದಾಯವನ್ನು ಸರಿಯಾಗಿ ವಿಂಗಡಿಸಿ "ಪದ"ಗಳನ್ನಾಗಿ ಮಾಡುವದೂ, ಈ ಪದದಿಂದ ಈ ವಸ್ತುವು ವಾಚ್ಯ ವಾಗಿರಲಿ ಎಂದು ಸಂಕೇತ ಮಾಡುವದೂ ಒಬ್ಬ ಚೇತನನ ವ್ಯಾಪಾರವಾದುದರಿಂದ

ಆ ಚೇತನನು (ಈಶ್ವರನು) ತನ್ನ ಇಚ್ಛಾನುಸಾರವಾಗಿ ವರ್ಣಗಳನ್ನು ಒಟ್ಟು ಗೂಡಿಸಿ ಪದಗಳನ್ನಾಗಿ ಮಾಡುವನು. ಪದಗಳಿಗೂ ತನ್ನ ಮನಸ್ಸಿಗೆ ಬಂದಂತೆ ಅರ್ಥವನ್ನು ಕಲ್ಪಿಸುವನು. ಹೇಗೆಂದರೆ "ಕಚಟ ತಪ" ಎಂಬ ವರ್ಣಸಮೂಹಕ್ಕೆ ಏನೂ ಅರ್ಥವಿಲ್ಲದಿದ್ದರೂ "ಕಚಟ" ಎಂದರೆ "ರಾಮನನ್ನು" "ತಪ" ಎಂದರೆ "ಸ್ಮರಿಸು" ಎಂದರ್ಥವು ಎಂದು ನಾನು ಕಲ್ಪನೆ ಮಾಡಬಹುದು. ಇದೇ ರೀತಿಯಲ್ಲಿ ವೇದದಲ್ಲಿರುವ "ಪದ" ಗಳು ನಾರಾಯಣಮತಿ ಕಲ್ಪಿತಗಳು. ಆ ಪದಗಳಿಗೆ ಅರ್ಥಗಳೂ ನಾರಾಯಣನ ಸಂಕೇತದಿಂದ ಬಂದವು. ಏವಂಚ ವೇದವಾಕ್ಯಗಳು ಪೌರುಷೇಯಪ್ರಾಯಗಳೇ ಆಗಲಿಲ್ಲವೇ ?

**ಉತ್ತರ**—ಶ್ರೀ ಶ್ರೀಗಳವರು—ವೇದವು ನಿರರ್ಥಕವರ್ಣಸಮೂಹವಲ್ಲವೆಂದು ನಾವು ಹಿಂದೆಯೇ ನಿರೂಪಿಸಿರುತ್ತೇವೆ. "ಸರ್ವೇ ವೇದಾ ಯತ್ಪದ ಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ" ಎಂಬ ಶ್ರುತಿಯು ವೇದವಾಕ್ಯಗಳಿಗೆ ಬೋಧಕತ್ವವು ಉಂಟೆಂದು ಹೇಳುತ್ತದೆ. ವೇದವಾಕ್ಯಗಳಲ್ಲಿ ಅನಾದಿ ಕಾಲದಿಂದಲೂ ಯಾರಿಂದಲೂ ರಚಿತವಲ್ಲದ ಅರ್ಥಬೋಧಕಗಳಾದ ಪದಗಳಿರಬೇಕೆಂದು ಇದರಿಂದ ಸಿದ್ಧವಾಯಿತು. ಕಿಂಚ ಪ್ರಕೃತಿ, ಕಾಲ, ಈಶ್ವರನೇ ಮುಂತಾದ ಸರ್ವ ಜಗತ್ತೂ "ಸ್ವರೂಪೇಣ ವಾ ಪ್ರವಾಹತೋವಾ" ಅನಾದಿಯಾಗಿರುತ್ತವೆ. ಈ ಅನಂತ ಪದಾರ್ಥಗಳಿಗೂ ವಾಚಕಗಳಾದ ಪದಗಳೂ ಅನಾದಿಯಾದ ವೇದದಲ್ಲಿ ತಾನೇ ಇರಬೇಕು ! ಪದಗಳಿಗೆ ನಾರಾಯಣನ ಸಂಕೇತದಿಂದ ಅರ್ಥಬೋಧಕತ್ವವೆಂಬುದು ಸುಳ್ಳು. "ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನಹಿ ಸಂಬಂಧಃ ಎಂಬ ಜೈಮಿನೀಸೂತ್ರದಲ್ಲಿ ಪದಗಳಿಗೂ ಮತ್ತು ಪದಾರ್ಥಗಳಿಗೂ ಇರುವ ವಾಚ್ಯವಾಚಕ ಭಾವವೆಂಬ ಸಂಬಂಧವು ಸ್ವಭಾವಸಿದ್ಧವು. (ಸಂಕೇತದಿಂದ ಬಂದಿಲ್ಲ) ಎಂದು ಹೇಳಿರುತ್ತದೆ. ನಾರಾಯಣನು ವೇದದಲ್ಲಿರುವ ಪದಗಳಿಗಿರುವ ಸ್ವಭಾವಸಿದ್ಧವಾದ ಅರ್ಥವನ್ನೇ ಬ್ರಹ್ಮಾದಿಗಳಿಗೆ ಉಪದೇಶ ಮಾಡಿರುತ್ತಾನೆ.

೨ ಪ್ರಶ್ನೆ—ಸು—ಸ್ವಾಮೀ ! ವೇದವು ಬಹು ಗಂಭೀರವು. ಮಂದರಿಗೆ ದುರವಗಾಹವು. "ವೇದವಿದೇವಚಾಹಂ" ಎಂದು ಶ್ರೀಕೃಷ್ಣನು **ನಾನೊಬ್ಬನೇ** ವೇದಾರ್ಥವನ್ನು ಬಲ್ಲವನು ಎಂದು ತಾನೇ ಹೇಳಿರುತ್ತಾನಾದ್ದರಿಂದ ಶ್ರೀಮನ್ನಾರಾಯಣನ ವ್ಯಾಖ್ಯಾನದಿಂದಲೇ ಬ್ರಹ್ಮಾದಿಗಳು ವೇದಾರ್ಥವನ್ನು ತಿಳಿಯಬೇಕಾಗಿರುವದರಿಂದ ಆ ನಾರಾಯಣನು ವೇದವನ್ನು ಉಪದೇಶ ಮಾಡುವ ಕಾಲದಲ್ಲಿ ತನ್ನ ಮಹಿಮೆಯೇ ಮೇಲಕ್ಕೆ ಬರುವಂತೆ ವಾಕ್ಯಗಳಿಗೆ ಅಪಾರ್ಥವನ್ನು ಕಲ್ಪಿಸಿರಬಹುದು. ತಥಾಚ ವೇದವಾಕ್ಯವು ಪೌರುಷೇಯ ಪ್ರಾಯವೇ ಆಯಿತು. "ಭಕ್ಷಿತೇಪಿ ಲಶುನೇ ನ ಶಾಂತೋ ವ್ಯಾಧಿಃ" ಬಹು ಕಷ್ಟಪಟ್ಟು ವೇದಾಪೌರುಷೇಯತ್ವವನ್ನು ಸಾಧನೆ ಮಾಡಿದ ತಮ್ಮ ಪ್ರಯಾಸವು ಗಜಸ್ನಾನದಂತೆ ವ್ಯರ್ಥವಾಯಿತಲ್ಲವೇ ?

**ಉತ್ತರ**— ನೀನು ಗೀತಾವಾಕ್ಯಕ್ಕೆ ಅರ್ಥವನ್ನು ಕಲ್ಪಿಸಿಕೊಂಡು ಈ ಪೂರ್ವಪಕ್ಷವನ್ನು ತಂದಿರುತ್ತೀರೇನು ? "ಅಗ್ನಿರ್ವೈದೇವಾನಾಮವಮಃ ವಿಷ್ಣುಃ ಪರಮಃ" ಎಂಬ ಶ್ರುತಿಗೆ ಸಾಮಾನ್ಯವಾದ ಕಾವ್ಯಜ್ಞಾನವುಳ್ಳವನೂ ಅರ್ಥವನ್ನು ತಿಳಿಯುವನು. ಅತಿ ಕ್ಲಿಷ್ಟತರವಾದ ವೇದ ಭಾಗಗಳ ಹಾಗೂ ವೇದದ ಪರಮ ಮುಖ್ಯವಾದ ಅರ್ಥವನ್ನು **ಸಾಕಲ್ಯೇನ** ನಾನೊಬ್ಬನೇ **ಸ್ವತಂತ್ರನಾಗಿ** ತಿಳಿಯು ವವನು ಎಂದು ಗೀತಾ ವಾಕ್ಯಕ್ಕೆ ಅರ್ಥವು, ಅನ್ಯಥಾ ಅನುಭವ ವಿರೋಧವು ಬರುವದು. ಕಿಂಚ ವ್ಯಾಖ್ಯಾನಕರ್ತನಾದ ಶ್ರೀಮನ್ನಾರಾಯಣನು ನಿರುಕ್ತ, ನಿಘಂಟು, ವ್ಯಾಕರಣಾದಿಗಳಿಗೆ ಅನುಸಾರವಾಗಿ ವೇದವಾಕ್ಯಗಳಿಗೆ **ಇರುವ** ಅರ್ಥ ವನ್ನೇ ಉಪಕ್ರಮಾದಿ ಲಿಂಗಗಳಿಂದ ಆಲೋಚನೆ ಮಾಡಿ ಪ್ರಕಾಶಪಡಿಸಿದವನೇ ಹೊರತು ತನ್ನ ಮತಿಯಿಂದ ರಚಿತವಾದ ಅರ್ಥವನ್ನು ಕಲ್ಪನೆ ಮಾಡಿರುವದಿಲ್ಲ.

೩ **ಪ್ರಶ್ನೆ**— ಸ್ವಾಮೀ ! ನನ್ನ ಸಂದೇಹಗಳು ದೂರ ಹೋದವು ! ವೇದವು ನಿರ್ದುಷ್ಟವಾದ ಅತ ಏವ ಅತ್ಯಂತ ಪ್ರಾಮಾಣಿಕವಾದ ವಾಕ್ಯಸಮೂಹವೆಂಬುದು ಸಿದ್ಧವಾಯಿತು. ಇಂಥಾ ವೇದಗಳಿಗೆ ಅತಿ ಸಮ್ಮತವಾದ ಪರಮ ಧರ್ಮವು ಯಾವು ದೆಂಬುದನ್ನು ಸವಿಸ್ತಾರವಾಗಿ ಉಪದೇಶ ಮಾಡಬೇಕು.

**ಉತ್ತರ**— ಶ್ರೀ ಶ್ರೀಗಳವರು— ಸಂತೋಷ. ಸಾವಧಾನ ಮನಸ್ಕರಾಗಿ ಕೇಳಿರಿ.

ಈ ಜಗತ್ತಿನಲ್ಲಿ "ಸುಖಮೇವ ಮೇ ಸ್ಯಾದ್ದುಃಖಂ ಮನಾಗಪಿ ಮಾಭೂತ್" ಎಂದರೆ ಸರ್ವದಾ ಸುಖವೇ ನಮಗಾಗಲಿ, ದುಃಖವು ಸ್ವಲ್ಪವಾದರೂ ಬೇಡ ಎಂದು ಸರ್ವರಿಂದಲೂ ಪ್ರಾರ್ಥ್ಯಮಾನವಾದುದು ಸುಖವು, ಇಂಥ ಸುಖವು ಜೀವನ **ಸ್ವರೂಪ**ವಾಗಿಯೇ ಇದ್ದರೂ ಅದರ ಮೇಲೆ ಪ್ರಕೃತಿ ರೂಪವಾದ ಬಂಧವು (ಆವರಣವು) ಇರುವದರಿಂದ ಅನುಭವಕ್ಕೆ ಬಾರದುದರಿಂದ ಜೀವರು ವಿಷಯ ಸುಖಾರ್ಥವಾಗಿ ಪ್ರವರ್ತಿಸಿ "ಅಚತುರ್ದಶಮಾದ್ವರ್ಷಾತ್ಕರ್ಮಾಣಿ ನಿಯಮೇನತು ದಶಾವರಾಣಾಂ ದೇಹಾನಾಂ ಕಾರಣಾನಿ ಕರೋತ್ಯಯಂ" ಎಂದು ಹೇಳಿರುವಂತೆ ಒಂದೊಂದು ಜನ್ಮದಲ್ಲಿ ಅನೇಕ ಜನ್ಮಾಪಾದಕ ಕರ್ಮಗಳನ್ನು ಮಾಡುತ್ತಾ ಮಾಡುತ್ತಾ ಆ ಕರ್ಮಗಳಿಂದ ನಾನಾ ವಿಧವಾದ ನಾಯಿ, ಕೋಳಿ, ಕುರಿ, ಗೋವು, ಮನುಷ್ಯ ಮೊದಲಾದ ಯೋನಿಗಳನ್ನು ಹೊಂದುತ್ತಾ ಈ ಸಂಸಾರದಲ್ಲಿ ದಾರಾ, ಪುತ್ರ, ಮಿತ್ರ, ಧನ, ಗೇಹಾದಿಪ್ರಯುಕ್ತ ನಾನಾ ವಿಧವಾದ ದುಃಖಗಳನ್ನು ಅನುಭವಿಸುತ್ತಾ ಘೋರವಾದ ಸಂಸಾರಾರಣ್ಯದಲ್ಲಿ ಮಾರ್ಗಭ್ರಷ್ಟ ಪುರುಷನು ಹೇಗೊ ಹಾಗೆ ದೀನನಾಗಿ ಈ ದುಃಖನಿವೃತ್ತಿಗೆ ಉಪಾಯವನ್ನು ತಿಳಿಯಲಾರದೆ ಅಲೆಯುತ್ತಿರುವನು. "ಅದುಃಖಮಿತರತ್ಸರ್ವಂ ಜೀವಾ ಏವ ತು ದುಃಖಿನಃ ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ" ಎಂದು ಹೇಳಿರುವದರಿಂದ

ಇಂಥ ಜೀವರುಗಳ ದುಃಖನಿವೃತ್ತಿಗೋಸ್ಕರ ಅನಾದಿಯಾದ ವೇದವಾಣಿಯು "ಆತ್ಮಾವಾ ಅರೇ ದೃಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ" ಎಂದು ಶ್ರವಣ, ಮನನ, ನಿದಿಧ್ಯಾಸನಜನ್ಯವಾದ ಪರಮಾತ್ಮದರ್ಶನರೂಪವಾದ ಉಪಾಯವನ್ನು ಉಪದೇಶ ಮಾಡುತ್ತದೆ. ಸ್ವತಃ ಸುಖರೂಪರಾದ ಜೀವರ ಅನಾದಿಯಾದ ಬಂಧವು (ಆವರಕವು) ಸ್ವತಂತ್ರನಾದ ಪರಮಾತ್ಮನ ಪ್ರಸಾದದಿಂದಲೇ ನಿವೃತ್ತವಾಗಬೇಕು. "ಯಮೇವೈಷವೃಣುತೇ ತೇನಲಭ್ಯಃ" ಅಂದರೆ ಇಚ್ಛಾರೂಪನಾದ ಶ್ರೀ ಹರಿಯು ಯಾವನನ್ನು ನೋಡಿ ಇವನು ನನ್ನ ಭಕ್ತನೆಂದು ಪರಿಗ್ರಹಿಸುವನೋ ಅವನಿಂದಲೇ ತಾನು ಲಭ್ಯನು ಎಂದು ಅರ್ಥ ಹೇಳುವ ಶ್ರುತಿಯೂ "ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ" "ಮತ್ಪ್ರಸಾದಾತ್ತರಿಷ್ಯಸಿ" ಇತ್ಯಾದಿ ಶ್ರೀ ಕೃಷ್ಣೋಕ್ತಿಗಳೂ, "ಬಂಧಕೋ ಭವಪಾಶೇನ ಭವಪಾಶಾಚ್ಚಮೋಚಕಃ" ಎಂಬ ಸ್ಮೃತಿಯೂ ಶ್ರೀ ಪರಮಾತ್ಮನ ಪ್ರಸಾದದಿಂದಲೇ ಬಂಧನಿವೃತ್ತಿಪೂರ್ವಕ ಸ್ವರೂಪಸುಖಾವಿರ್ಭಾವಾತ್ಮಕವಾದ ಮುಕ್ತಿಯು ಆಗುವದೆಂದು ಹೇಳುವವು. "ತಮೇವಂ ವಿದ್ವಾನ್ ಅಮೃತ ಇಹ ಭವತಿ ನಾನ್ಯಃ ಪಂಥಾ ಅಯನಾಯವಿದ್ಯತೇ" ಅಂದರೆ ಅಧಿಕಾರಿ ವರ್ಗದಲ್ಲಿ ಯಾವಾತನು ಪೂರ್ವೋಕ್ತ (ಸಹಸ್ರ ಶೀರ್ಷತ್ವಾದಿ) ಗುಣವಿಶಿಷ್ಟನಾಗಿರುವ ಪರಮಾತ್ಮನನ್ನು ತಿಳಿಯುವನೋ ಅವನೇ ಮುಕ್ತನಾಗುವನು. ಮುಕ್ತಿಗೆ ಬೇರೆ ಮಾರ್ಗವಿಲ್ಲ ಎಂದು ಹೇಳುವ ಶ್ರುತಿಯೂ ಮುಕ್ತಿಪ್ರದವಾದ ಶ್ರೀ ಪರಮಾತ್ಮನ ಪ್ರಸಾದವು ಆತನ ಅಪರೋಕ್ಷ ಜ್ಞಾನದಿಂದಲೇ ಆಗುವದೆಂದು ಹೇಳುವದು.

ಶ್ರೀ ಪರಮಾತ್ಮನ "ದರ್ಶನರೂಪವಾದ ಅಪರೋಕ್ಷ ಜ್ಞಾನವಾಗಲೀ, ಮುಕ್ತಿಪ್ರದವಾದ ಆತನ ಅತ್ಯರ್ಥ ಪ್ರಸಾದವಾಗಲೀ, ಬಲಾತ್ಕಾರದಿಂದ ಅಥವಾ ಲಂಚವೇ ಮೊದಲಾದ ದ್ರವ್ಯವಿನಿಮಯಗಳಿಂದ ದೊರಕಲಾರದು. ಲೋಕದಲ್ಲಿ ಅಪೂರ್ಣರಾದ ಮನುಷ್ಯರು ಅವರಿಗೆ ಅಭೀಪ್ಸಿತವಾದ ಯಾವುದಾದರೂ ಒಂದು ಪದಾರ್ಥವನ್ನು ನಾವು ಕೊಟ್ಟರೆ ಅದರಿಂದ ಸುಖವನ್ನು ಹೊಂದಿ ನಮ್ಮ ಇಷ್ಟಾರ್ಥಗಳನ್ನು ನಲ್ಲಿಸುವರು. ಶ್ರೀ ಪರಮಾತ್ಮನಾದರೋ ಪೂರ್ಣಕಾಮನು. ಅವನಿಗೆ ಈ ಜಗತ್ತಿನಲ್ಲಿ ಬೇಕಾದ ಒಂದು ವಸ್ತುವೂ ಇಲ್ಲ. ಆದುದರಿಂದ ಅವನನ್ನು ಕ್ಷುದ್ರೋಪಾಯಗಳಿಂದ ವಶಪಡಿಸಿಕೊಳ್ಳುವುದು ಅಶಕ್ಯವು.

೪ **ಪ್ರಶ್ನೆ**— ಸ್ವಾಮೀ ! ಪರಮಾತ್ಮನು ಪೂರ್ಣಕಾಮನು. ಅವನಿಗೆ ಅಪೇಕ್ಷಿತವಾದುದು ಒಂದೂ ಇಲ್ಲ ಎಂಬಲ್ಲಿ ಪ್ರಮಾಣವೇನು ?

**ಉತ್ತರ**— "ಅಪ್ತಕಾಮಸ್ಯ ಕಾ ಸ್ಪೃಹಾ" ಎಂಬ ಶ್ರುತಿಯು ಪ್ರಮಾಣವು. ಯುಕ್ತಿಯನ್ನು ಹೇಳುವೆನು. ಕೇಳು— ಮನುಷ್ಯರಿಗೆ ಧನದೇಹಾದಿ ಸರ್ವ ಸಂಪತ್ತುಗಳೂ ಸುಖಾನುಭವಕ್ಕೆ **ಸಾಧನಗಳು.** ಸುಖವು ಮಾತ್ರ ಸ್ವತಃ ಪುರುಷಾರ್ಥವು.

ನಿನಗೆ ಧನ ಯಾಕೆ ? ಮನೆ ಯಾಕೆ ? ಮಡದಿ ಯಾಕೆ ? ಎಂದು ಕೇಳಿದರೆ ನನ್ನ ಸುಖಾರ್ಥವಾಗಿ ಎಂದು ಪ್ರತಿಯೊಬ್ಬನೂ ಉತ್ತರ ಕೊಡುತ್ತಾನೆ. ಸುಖವು ಯಾಕೆ? ಎಂಬ ಪ್ರಶ್ನೆಗೆ ಉತ್ತರವಿಲ್ಲ; ಆದುದರಿಂದಲೇ ಅದು ಸ್ವತಃ ಪುರುಷಾರ್ಥವೆನಿಸು ವದು. ಲೋಕದಲ್ಲಿ ಯಾವ ಯಾವ ಪದಾರ್ಥಗಳಿದ್ದರೂ ಅವುಗಳಿಂದಾಗಬೇಕಾ ದುದು ಸುಖವಷ್ಟೆ ! ಅಂಥ ಸುಖವು ಪರಿಪೂರ್ಣವಾಗಿ ಶ್ರೀ ಹರಿಯಲ್ಲಿ ಇರುವದ ರಿಂದ ಅವನು ಪೂರ್ಣ ಕಾಮನು; ಬೇರೆ ಯಾವುದನ್ನೂ ಅಪೇಕ್ಷಿಸಲಾರನು. ಅವನ ಆನಂದೋದ್ರೇಕದಿಂದಲೇ ಈ ಜಗತ್ಸರ್ಜನಾದಿ ವ್ಯಾಪಾರಗಳು ನಡೆಯುವವು. ಈ ಅರ್ಥವನ್ನೇ "ಕೋಹ್ಯೇವಾನ್ಯಾತ್ ಕಃಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್" ಎಂಬ ಶ್ರುತಿಯು ಹೇಳುವದು.

೫ **ಪ್ರಶ್ನೆ**— ಸ್ವಾಮೀ ! ಇಂಥ ಪೂರ್ಣ ಕಾಮನನ್ನು ನಾವು ಯಾವ ಉಪಾಯದಿಂದ ದರ್ಶನ ಮಾಡಬಹುದು ?

**ಉತ್ತರ**— "ಭಕ್ತ್ಯಾನನ್ಯ ಯೋಗೇನಮಾಮಿಚ್ಛಾಪ್ತುಂ ಧನಂಜಯ" "ಏಕಭಕ್ತಿರ್ವಿಶಿಷ್ಯತೇ" "ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಂ ||" "ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ | ಶಕ್ಯ ಏವಂ ವಿಧೋದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ | ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂ ವಿಧೋರ್ಜುನ ಜ್ಞಾತುಂ ದ್ರಷ್ಟುಂ ಚ ತತ್ವೇನ **ಪ್ರವೇಷ್ಟುಂ** ಚ ಪರಂತಪ ||" ಅಂದರೆ ಪೂರ್ವೋಕ್ತ ಮಹಾಮಹಿಮೋಪೇತನಾದ ನನ್ನನ್ನು ಕೇವಲ ( ಭಕ್ತಿರಹಿತವಾದ ) ವೇದದಿಂದಾಗಲೀ, ಕೇವಲ ತಪಸ್ಸಿನಿಂದಾಗಲೀ, ಕೇವಲ ದಾನದಿಂದಾಗಲೀ, ಕೇವಲ ಯಾಗಗಳಿಂದಲಾಗಲೀ ನೋಡುವದು ಅಶಕ್ಯವು. ಮತ್ತೇನೆಂದರೆ ಅನನ್ಯವಾದ (ಅನ್ಯರಾದ ರುದ್ರಾದಿಗಳನ್ನು ಪ್ರಧಾನ ರೆಂದು ತಿಳಿಯದ) ಭಕ್ತಿಯಿಂದ ಈ ವಿಧವಾದ ರೂಪವುಳ್ಳ ನನ್ನನ್ನು ಯಥಾರ್ಥ ವಾಗಿ ತಿಳಿಯುವುದಕ್ಕೂ, ನೋಡುವುದಕ್ಕೂ ನಂತರ ಮುಕ್ತಿಯಲ್ಲಿ ನನ್ನಲ್ಲಿ ಪ್ರವೇಶಿಸುವುದಕ್ಕೂ ಸಾಧ್ಯವಾಗುವುದು; ಎಂದು ಕೃಷ್ಣನು ಹೇಳಿರುವದರಿಂದಲೂ "ಭಕ್ತಿಕ್ರೀತೋ ಜನಾರ್ದನಃ" "ಭಕ್ತ್ಯೈಕ ಲಭ್ಯಃ ಪುರುಷೋತ್ತಮೋಸೌ" ಇತ್ಯಾದಿ ವಚನಗಳಿಂದಲೂ ಭಗವತ್ಸಾಕ್ಷಾತ್ಕಾರಕ್ಕೆ ಭಕ್ತಿಯೇ ಪ್ರಧಾನಸಾಧನ ವೆಂದು ತಿಳಿದು ಬರುವದು.

೬ **ಪ್ರಶ್ನೆ**— ಸ್ವಾಮೀ ! ರೂಪವುಳ್ಳ ಸ್ತಂಭಾದಿ ಪದಾರ್ಥಗಳನ್ನು ನೋಡು ವುದಕ್ಕೆ ಚಕ್ಷುಸ್ಸನ್ನಿಕರ್ಷವಿದ್ದರೆ ಸಾಕು. ಹಾಗೆಯೇ ಭಗವಂತನು ನೀರೂಪನಲ್ಲ ವಾದುದರಿಂದ ಅವನನ್ನು ನೋಡಲು ಭಕ್ತಿ ಯಾತಕ್ಕೆ ?

**ಉತ್ತರ**— ರೂಪವತ್ಪದಾರ್ಥವಾದರೂ ಭಗವಂತನು ವಿಲಕ್ಷಣನೂ ಮತ್ತು ಅಚಿಂತ್ಯ ಯೋಗೈಶ್ವರ್ಯವುಳ್ಳವನೂ ಆದುದರಿಂದ ಅವನ ಅನುಗ್ರಹವಿಲ್ಲದೆ ಅವನನ್ನು

ನೋಡುವದಕ್ಕಾಗುವದಿಲ್ಲ. ಅಣಿಮಾದಿ ಸಿದ್ಧಿ ಹೊಂದಿದ ಯೋಗೀಶ್ವರರೇ ಅದೃಶ್ಯ ರಾಗಿರಬಲ್ಲರೆಂಬಲ್ಲಿ ಯೋಗೀಶ್ವರೇಶ್ವರನಾದ ಪರಮಾತ್ಮನು ಮಂದದೃಷ್ಟಿಗೆ ಗೋಚರನಾಗದಂತೆ ತನ್ನ ಇಚ್ಛೆಯಿಂದಲೇ ಮರೆಯಾಗಿದ್ದಾನೆಂಬುದು ಕೈಮುತ್ಯ ನ್ಯಾಯಸಿದ್ಧವು. "ತದವ್ಯಕ್ತಮಾಹಹಿ" ಎಂಬ ಬ್ರಹ್ಮಸೂತ್ರವು ಈ ಅರ್ಥವನ್ನು ನಿರೂಪಿಸುತ್ತದೆ. ಮಹಾಭಾರತದಲ್ಲಿ ನಾರದರಿಗೆ ಶ್ರೀ ಹರಿಯು ಉಪದೇಶ ಮಾಡಿರುತ್ತಾನೆ.

"ಏತತ್ತ್ವಯಾ ನ ವಿಜ್ಞೇಯಂ ರೂಪವಾನಿತಿ ದೃಶ್ಯತೇ ।
ಇಚ್ಛನ್ ಮುಹೂರ್ತಾನ್ನಶ್ಯೇಹಮೀಶೋಹಂ ಜಗತಾಂ ಗುರುಃ ॥"

ನಾರದರು ಶ್ರೀ ಹರಿಯು ದರ್ಶನವನ್ನು ಹೊಂದಿ ಸಂತುಷ್ಟರಾಗಿ ಸ್ತೋತ್ರ ಮಾಡಿದರು. ಆಗ ನಾರಾಯಣನು ನಾರದರನ್ನು ಕುರಿತು ಎಲೈ ನಾರದನೇ! ನಾನು ಅಚಿಂತ್ಯಯೋಗೈಶ್ವರ್ಯವುಳ್ಳವನು ಪ್ರಾಕೃತರಿಗೆ ಗೋಚರನಾಗತಕ್ಕವನಲ್ಲ. ನಿನ್ನ ಭಕ್ತಿಯಿಂದ ಪ್ರಸನ್ನನಾಗಿ ನಿನಗೆ ದರ್ಶನವನ್ನು ಕೊಟ್ಟಿರುತ್ತೇನೆ, ಎಂದು ಹೇಳಿ ಈ ವಾಕ್ಯವನ್ನು ಹೇಳಿರುತ್ತಾನೆ. ರೂಪವುಳ್ಳ (ಸ್ತಂಭಾದಿ) ಪದಾರ್ಥಗಳು ಹೇಗೆ ಅವುಗಳ ಸ್ವಭಾವದಿಂದಲೇ (ಭಕ್ತ್ಯಾದಿ ಸಾಧನಗಳನ್ನು ಅಪೇಕ್ಷಿಸದೆ) ಕಣ್ಣಿಗೆ ಕಾಣಿಸುವವೋ ಹಾಗೆಯೇ ನಾನೂ ಗೋಚರನಾಗುತ್ತೇನೆಂದು ನೀನು ತಿಳಿಯ ಬೇಡ. ನನ್ನ ಇಚ್ಛೆಯಿಂದ ಒಂದು ಕ್ಷಣಕಾಲದಲ್ಲಿ ಅದರ್ಶನವನ್ನು ಹೊಂದ ಬಲ್ಲೆನು; ನಾನು ಸರ್ವಶಕ್ತನು; ಜಗದ್ಗುರುವು ಅಂದರೆ ಸರ್ವ ವಿದ್ಯೆಗಳನ್ನು ಬಲ್ಲವನು ಎಂದು ಇದರ ಅರ್ಥವು.

೭ **ಪ್ರಶ್ನೆ**— ಸ್ವಾಮೀ! ಭಕ್ತಿಯು ಮೋಕ್ಷಕ್ಕೆ ಮುಖ್ಯ ಸಾಧನವಾಗುವ ದಾದರೆ ಕುರುಬರು, ಚಂಡಾಲರು, ಹೂಣರು ಮೊದಲಾದ ಪಾಂಡಿತ್ಯರಹಿತರಾದ ದಡ್ಡರೆಲ್ಲರೂ ಮುಕ್ತರಾಗಬಹುದೆಂದಾಯಿತು. ಅಷ್ಟೇ ಅಲ್ಲದೆ "ನಾನ್ಯಃ ಪಂಥಾ ಅಯನಾಯ ವಿದ್ಯತೇ" ಎಂಬ ಜ್ಞಾನದಿಂದಲೇ ಮೋಕ್ಷವಾಗುವದು; ಅನ್ಯಥಾ ಆಗಲಾರದೆಂದು ಹೇಳುವ ಶ್ರುತಿವಿರೋಧವು ಬರಲಿಲ್ಲವೆ?

**ಉತ್ತರ**— ಜ್ಞಾನರಹಿತವಾದ ಮೂಢ ಭಕ್ತಿಯು ಮೋಕ್ಷಕ್ಕೆ ಸಾಧನವಾಗ ಲಾರದು. ಭಕ್ತಿ ಶಬ್ದಾರ್ಥವನ್ನು ಕೇಳು. "ಮಾಹಾತ್ಮ್ಯ ಜ್ಞಾನ ಪೂರ್ವಸ್ತು ಸುದೃಢಃ ಸರ್ವತೋಧಿಕಃ। ಸ್ನೇಹೋ ಭಕ್ತಿರಿತಿಪ್ರೋಕ್ತಸ್ತಯಾ ಮುಕ್ತಿರ್ನ ಚಾನ್ಯಥಾ॥" ಎಂದು ವಚನವಿರುವದು. "ನಿರವಧಿಕಾನಂತಾನವದ್ಯ ಕಲ್ಯಾಣ ಗುಣತ್ವ ಜ್ಞಾನಪೂರ್ವಕಃ ಸ್ವಸ್ವಾತ್ಮೀಯ ಸಮಸ್ತವಸ್ತುಭ್ಯೋ ಅನೇಕ ಗುಣಾಧಿಕಃ ಅಂತರಾಯ ಸಹಸ್ರೇಣಾಪ್ಯಪ್ರತಿಬದ್ಧಃ ಪ್ರೇಮಪ್ರವಾಹೋ ಭಕ್ತಿಃ" ಎಂದು ಭಕ್ತಿ ಶಬ್ದದ ವಿಶದವಾದ ಅರ್ಥವು; ಅಂದರೆ ಶ್ರೀ ಪರಮಾತ್ಮನು ಪ್ರತ್ಯೇಕವೂ ಪರಿ

ಪೂರ್ಣವಾದ ಅನಂತನಿರ್ದುಷ್ಟ ಕಲ್ಯಾಣಗುಣಗಳುಳ್ಳವನೆಂಬ ಜ್ಞಾನಪೂರ್ವಕವಾಗಿ ತನ್ನ ದೇಹ ಮತ್ತು ತನ್ನ ಸಂಬಂಧಿಗಳೇ ಮೊದಲಾದ ಲೋಕದಲ್ಲಿರುವ ಸಮಸ್ತ ವಸ್ತುಗಳಲ್ಲಿಯೂ ತನಗಿರುವ ಪ್ರೀತಿಗಿಂತಲೂ ಅನಂತ ಮಡಿ ಗುಣಿಸಿದಷ್ಟು ಅಧಿಕವಾದ, ವಿಘ್ನ ಸಹಸ್ರಗಳು ಒಂದರೂ ಪ್ರತಿಬದ್ಧವಾಗದ, ಶ್ರೀ ಹರಿಯಲ್ಲಿ ಮಾಡುವ ಪ್ರೇಮ ಪ್ರವಾಹವೇ ಭಕ್ತಿಯೆನಿಸುವದು. ಇಂಥ ಜ್ಞಾನಪೂರ್ವಕವಾದ ಸ್ನೇಹವೇ ಭಕ್ತಿಯೆನಿಸುವದರಿಂದ ಜ್ಞಾನವಿಲ್ಲದೆ ಮುಕ್ತಿಯು ಸಿಕ್ಕಲಾರದು ಎಂದು ಹೇಳುವ "ನಾನ್ಯಃ ಪಂಥಾ" ಎಂಬ ಶ್ರುತಿಯ ವಿರೋಧವು ಹೇಗೆ ತಾನೇ ಬರುವದು !

**ಪ್ರಶ್ನೆ**— ಸ್ವಾಮೀ, ಗೊತ್ತಾಯಿತು. ಮುಂದೇನಪ್ಪಣೆಯಾಗುತ್ತದೆ.

**ಉತ್ತರ**— ಇಂಥ ಭಗವದ್ಭಕ್ತಿಯು ಶ್ರವಣ, ಮನನ, ಧ್ಯಾನರೂಪವಾದ ಸಾಧನಗಳಿಂದಲೇ ಬರುವದು. ಶ್ರವಣವೆಂದರೆ ಭಗವನ್ಮಹಿಮೆಗಳನ್ನು ಪ್ರತಿಪಾದಿಸುವ ವೇದಾದಿ ಶಾಸ್ತ್ರಾರ್ಥಗಳನ್ನು ಗುರುಮುಖೇನ ವಿಧ್ಯುಕ್ತವಾಗಿ ತಿಳಿಯುವದು. ಮನನವೆಂದರೆ ತಿಳಿದಂಥ ಶಾಸ್ತ್ರಾರ್ಥವು ಸರಿಯೋ ತಪ್ಪೋ ಎಂದು ನಾನಾ ಯುಕ್ತಿಗಳಿಂದ "ಬ್ರಹ್ಮಮೀಮಾಂಸಾ" ಶಾಸ್ತ್ರೋಕ್ತ ಪ್ರಕಾರ ಪುನಃ ಪುನಃ ವಿಮರ್ಶೆ ಮಾಡುವದು. ಧ್ಯಾನವೆಂದರೆ ಸಂತತ ಸ್ಮೃತಿಯು. ಹೀಗೆ ಭಗವದ್ಭಕ್ತಿಯೂ ಅದಕ್ಕೆ ಸಾಧಕವಾದ ಶಾಸ್ತ್ರಶ್ರವಣ ಮನನ ನಿಧಿಧ್ಯಾಸನಗಳೂ ಪರಮ ಧರ್ಮಗಳೆನಿಸುವವು.

೮ **ಪ್ರಶ್ನೆ**— ಸ್ವಾಮೀ, ಹಾಗಾದರೆ ಕರ್ಮಾಚರಣೆಯು ಯಾತಕ್ಕೆ ?

**ಉತ್ತರ**—(ವೇದೋಕ್ತ) ಸತ್ಕರ್ಮಾಚರಣೆಯಿಂದ ಜನಿತವಾದ **ಪುಣ್ಯದಿಂದ** ಅಂತಃಕರಣವು ಶುದ್ಧವಾಗುವದು. ವಿಷಯಗಳಲ್ಲಿ ವಿರಕ್ತಿಯು ಹುಟ್ಟುವುದು. ವಿರಕ್ತನೂ ಶುದ್ಧಾಂತಃಕರಣನೂ ಆದ ಪುರುಷನು ಮಾಡುವ ಶ್ರವಣಾದಿಗಳು ನೇಗಿಲಿನಿಂದ ಉತ್ತ, ಫಲವತ್ತಾದ ಭೂಮಿಯಲ್ಲಿ ಬಿತ್ತಿದ ಬೀಜದಂತೆ ಫಲಿಸುವುದು. ಅನ್ಯಥಾ ಬಂಡೆ ಕಲ್ಲಿನ ಮೇಲೆ ನೆಟ್ಟ ಸಸಿಯಂತೆ ಭಕ್ತಿಯನ್ನು ಹುಟ್ಟಿಸಲಾರದೆ ವ್ಯರ್ಥವಾಗುವುವು. "ಕರ್ಮಣಾ ಜ್ಞಾನಮಾತನೋತಿ" ಎಂಬ ಶ್ರುತಿಗೂ ಸತ್ಕರ್ಮದಿಂದ ಶುದ್ಧಾಂತಃಕರಣನಾಗಿ ಶ್ರವಣಾದಿ ದ್ವಾರಾ ಜ್ಞಾನವನ್ನು ಹೊಂದುತ್ತಾನೆಂದೇ ಅರ್ಥವು.

ಮೇಲಾಗಿ ವೇದೋಕ್ತ ನಿತ್ಯನೈಮಿತ್ತಿಕ ಕರ್ಮಾಚರಣೆಯಿಂದ ರಹಿತನಾದರೆ ಆತನು ಭ್ರಷ್ಟನಾಗುವನು. ಬ್ರಾಹ್ಮಣ್ಯವು ನಾಶವಾಗುವುದು. ಅಂಥವನಿಗೆ ವೇದದ ಶ್ರವಣಾದಿಗಳಲ್ಲಿ ಕೂಡ ಅಧಿಕಾರವು ತಪ್ಪುವದು. ಆದುದರಿಂದ ಸತ್ಕರ್ಮಾನುಷ್ಠಾನವು ಆವಶ್ಯಕವು. "ಸ್ವೇಸ್ವೇಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ" "ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿದಂತಿ ಮಾನವಃ" ಎಂದು ಶ್ರೀಕೃಷ್ಣನು ಹೇಳಿರುತ್ತಾನೆ.

೯ ಪ್ರಶ್ನೆ— ಸ್ವಾಮೀ, ವೇದೋಕ್ತವಾದ ಸತ್ಕರ್ಮಗಳು ಯಾವುವು ?

**ಉತ್ತರ**—ಸ್ವವರ್ಣಾಶ್ರಮೋಚಿತವಾದ ಕರ್ಮವು ಸತ್ಕರ್ಮವು. ಸ್ವವರ್ಣಾಶ್ರಮವಿಹಿತವಲ್ಲದ ಕರ್ಮವು ದುಷ್ಕರ್ಮವು.

"ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥"

ಅಂದರೆ ಸರ್ವಾಂಗಸಂಪತ್ಪೂರ್ವಕವಾಗಿ ಕೃತವಾದ ಅನ್ಯವರ್ಣಾಶ್ರಮೋಚಿತ ಧರ್ಮಕ್ಕಿಂತಲೂ, ಅಂಗವಿಹೀನವಾದರೂ, ಸ್ವವರ್ಣಾಶ್ರಮವಿಹಿತ ಅನುಷ್ಠಾನವು ಶ್ರೇಯಸ್ಕರವು. ಸ್ವಧರ್ಮವನ್ನು ಅವಲಂಬನೆ ಮಾಡಿ ಮರಣವಾದರೂ ಶ್ರೇಷ್ಠವು ಅಂದರೆ ಸ್ವರ್ಗಾದ್ಯುತ್ತಮ ಲೋಕಪ್ರದವು. ಆದರೆ ಪರಧರ್ಮಾನುಷ್ಠಾನವು ಭಯಂಕರವು ಅಂದರೆ ನರಕಾದ್ಯನರ್ಥಗಳನ್ನೂ ನಾಯಿ, ಕುರಿ, ಕೋಳಿ ಮುಂತಾದ ದುರ್ಯೋನಿಗಳನ್ನೂ ಹೊಂದಿಸುವುದು. ಆದುದರಿಂದ ಎಂಥ ಆಪತ್ಕಾಲವಾದರೂ ತನ್ನ ವರ್ಣಾಶ್ರಮ ವಿರುದ್ಧವಾದ (ಬ್ರಾಹ್ಮಣ್ಯನಾಶವಾಗತಕ್ಕ) ಕರ್ಮಗಳನ್ನು ಮಾಡಬಾರದು.

೧೦ ಪ್ರಶ್ನೆ— ಸ್ವಾಮೀ, ಹಾಗಾದರೆ ಸರ್ವರೂ ಸರ್ವದಾ ಕರ್ಮಾಚರಣೆಯಲ್ಲಿಯೇ ಆಸಕ್ತರಾಗಬೇಕಾಗುವದು ! ಇನ್ನು ಜ್ಞಾನಸಂಪಾದನೆಗೆ ಕಾಲವೆಲ್ಲಿಂದ ಬಂತು ?

**ಉತ್ತರ**— "ಋತಂಚಸ್ವಾಧ್ಯಾಯ ಪ್ರವಚನೇಚ । ಸತ್ಯಂಚ ಸ್ವಾಧ್ಯಾಯ ಪ್ರವಚನೇಚ ತಪಶ್ಚ ಸ್ವಾಧ್ಯಾಯ ಪ್ರವಚನೇಚ । ದಮಶ್ಚಸ್ವಾಧ್ಯಾಯ ಪ್ರವಚನೇಚ ॥ ಶಮಶ್ಚ ಸ್ವಾಧ್ಯಾಯ ಪ್ರವಚನೇಚ । ಅಗ್ನಯಶ್ಚ ಸ್ವಾಧ್ಯಾಯ ಪ್ರವಚನೇಚ । ಅಗ್ನಿಹೋತ್ರಂ ಚ ಸ್ವಾಧ್ಯಾಯ ಪ್ರವಚನೇಚ । ಅತಿಥಯಶ್ಚ ಸ್ವಾಧ್ಯಾಯ ಪ್ರವಚನೇಚ । ಮಾನುಷಂ ಚ ಸ್ವಾಧ್ಯಾಯ ಪ್ರವಚನೇಚ । ಪ್ರಜಾಚ ಸ್ವಾಧ್ಯಾಯ ಪ್ರವಚನೇಚ । ಪ್ರಜನಶ್ಚ ಸ್ವಾಧ್ಯಾಯ ಪ್ರವಚನೇಚ । ಪ್ರಜಾತಿಶ್ಚ ಸ್ವಾಧ್ಯಾಯ ಪ್ರವಚನೇಚ.... ಸ್ವಾಧ್ಯಾಯ ಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ । ತದ್ಧಿ ತಪಸ್ತದ್ಧಿ ತಪಃ ॥" ಎಂಬ ಶ್ರುತಿಯು ಒಂದೊಂದು ಕರ್ಮಾಚರಣೆಯನ್ನು ವಿಧಾನ ಮಾಡುವಾಗಲೂ ಅದರ ಮಗ್ಗುಲಿನಲ್ಲಿಯೇ ಸ್ವಾಧ್ಯಾಯ ಪ್ರವಚನಗಳನ್ನೂ ( ಶ್ರವಣ ಉಪದೇಶಗಳನ್ನು ) ಮಾಡಬೇಕೆಂದು ಪುನಃ ಪುನಃ ಪ್ರತ್ಯೇಕವಾಗಿ ವಿಧಾನ ಮಾಡಿರುವದರಿಂದಲೂ "ತದ್ಧಿ ತಪಸ್ತದ್ಧಿ ತಪಃ" ಎಂದರೆ ಸ್ವಾಧ್ಯಾಯ ಪ್ರವಚನಗಳು ಮುಖ್ಯ ತಪಸ್ಸು ಎಂದು ಅಂತ್ಯದಲ್ಲಿ ಉಪಸಂಹಾರ ಮಾಡಿರುವದರಿಂದಲೂ, ಸರ್ವಕರ್ಮಾಪೇಕ್ಷಯಾ ಸಾಕ್ಷಾತ್ ಜ್ಞಾನ ಸಾಧನವಾದ ಶ್ರವಣಾದಿಗಳು ಶ್ರೇಷ್ಠವೆಂದೂ, ಅವುಗಳಿಗೆ ಹಾನಿ ಬರದಂತೆ ಯಥಾಶಕ್ತಿ ಸಂಕ್ಷೇಪವಾಗಿ ತನ್ನ ವರ್ಣಾಶ್ರಮಗಳು ನಾಶ ಹೊಂದುವಷ್ಟು ಕರ್ಮ

ಗಳನ್ನು ಮಾಡುತ್ತಾ ಶ್ರವಣಾದಿಗಳಲ್ಲಿ ಆಸಕ್ತರಾಗಬೇಕೆಂದು ತಿಳಿದು ಬರುತ್ತದೆ. "ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ" ಎಂದು ಶ್ರೀಕೃಷ್ಣನೂ ಇದೇ ಅರ್ಥವನ್ನು ಹೇಳಿರುತ್ತಾನೆ.

ಆದರೆ ನಿತ್ಯಕರ್ಮಪರಿತ್ಯಾಗವು, ನಿಷಿದ್ಧ ಕರ್ಮಾಚರಣೆಯು ಇವೆರಡೂ ಭಯಂಕರಗಳು. ಕರ್ಮವನ್ನು ಮಾಡದ ಪತಿತನಿಗೆ ವೇದಾಧಿಕಾರವು ನಾಶವಾಗುವದು. "ಅನಾರ್ಯಕಾಯಾನೃಜವೇ ಶಠಾಯ ನ ಮಾಂ ಬ್ರೂಯಾ ಋಜವೇ ಬ್ರೂಹಿ ನಿತ್ಯಂ" ಎಂಬ ಶ್ರುತಿಯಲ್ಲಿ ವೇದೋಕ್ತ ಕರ್ಮಾನುಷ್ಠಾನ ಮಾಡದ ಆಚಾರರಹಿತನಿಗೂ, ನಿಷಿದ್ಧಕರ್ಮಾನುಷ್ಠಾನವನ್ನು ಮಾಡುವ ದುರಾಚಾರಿಗೂ, ಗುರುಗಳಲ್ಲಿ ವಿನೀತನಾಗದಿರುವ ಮೂರ್ಖನಿಗೂ ನನ್ನನ್ನು ಉಪದೇಶ ಮಾಡಬೇಡವೆಂದು ವೇದಾಭಿಮಾನಿ ದೇವತೆಯು ಬ್ರಾಹ್ಮಣನನ್ನು ಪ್ರಾರ್ಥಿಸಿರುತ್ತಾಳೆ. "ಆಚಾರಹೀನಂ ನ ಪುನಂತಿ ವೇದಾಃ" ಎಂಬ ಸ್ಮೃತಿಯೂ ಈ ಅರ್ಥದಲ್ಲಿ ಪ್ರಮಾಣವಾಗಿರುತ್ತದೆ.

"ಇದಂತೇನಾತಪಸ್ಕಾಯ ನಾಭಕ್ತಾಯ ಕದಾಚನ ।
ನ ಚಾಶುಶ್ರೂಷವೇವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥"

ಎಂಬಲ್ಲಿ ಶ್ರೀಕೃಷ್ಣನು ಭಗವದ್ಗೀತೆಗೆ ಅಧಿಕಾರಿಗಳನ್ನು ವರ್ಣಿಸಿರುತ್ತಾನೆ. ಇನ್ನು ಜ್ಞಾನಸಂಪಾದನೆ ಮಾಡುವವನಿಗೆ ವಿರಕ್ತಿಯು (**ನಿಷಿದ್ಧ** ವಿಷಯಾಭಿಲಾಷೆಯಿಲ್ಲದೇ ಇರೋಣವು) ಆವಶ್ಯಕವೆಂಬಲ್ಲಿ "ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್" ಇತ್ಯಾದಿ ಶ್ರುತಿಯು ಪ್ರಮಾಣವು. ಭಾಗವತದಲ್ಲಿ—

"ನ ತಸ್ಯ ತತ್ವಗ್ರಹಣಾಯ ಸಾಕ್ಷಾದ್ವರೀಯಸೀರಪಿ ವಾಚಃ ಸಮಾಸನ್ ।
ಸ್ವಪ್ನೇ ನಿರುಕ್ತ್ಯಾ ಗೃಹಮೇಧಿಸೌಖ್ಯಂ ನ ಯಸ್ಯ ಹೇಯಾನುಮಿತಂ
ಸ್ವಯಂಸ್ಯಾತ್ ॥"

ಎಂದರೆ ಯಾವಾತನಿಗೆ ಗೃಹಸ್ಥಾಶ್ರಮದಲ್ಲಿ ಅನುಭವಿಸುವ ಗ್ರಾಮ್ಯಸುಖವೇ ಮೊದಲಾದ ಸೌಖ್ಯಗಳು ಸ್ವಪ್ನದಂತೆ ಅಲ್ಪವೂ, ಅಸ್ಥಿರವೂ, ಆಗಿರುವದರಿಂದ ಹೇಯವು (ಪರಿತ್ಯಾಜ್ಯವು) ಎಂದು ತಿಳಿದಿಲ್ಲವೋ ಅಂಥವನಿಗೆ ಸರ್ವೋತ್ಕೃಷ್ಟವಾದ ವೇದವಾಕ್ಯಗಳೂ ಕೂಡ ತತ್ವಜ್ಞಾನವನ್ನು ಹುಟ್ಟಿಸಲಾರವು; ಎಂದು ಹೇಳಿರುವದರಿಂದ ವೈರಾಗ್ಯವೂ ಆವಶ್ಯಕವು.

೧೧ **ಪ್ರಶ್ನೆ**— ಸ್ವಾಮೀ, ಧರ್ಮವಿಷಯದಲ್ಲಿ ನಾನು ಕೇಳಿದ ಪ್ರಶ್ನೆಗೆ ತಾವು ಇದುವರೆಗೂ ಹೇಳಿದ ಸಮಾಧಾನದ ಸಾರಾಂಶವೇನು ? ದಯಮಾಡಿ ನಿರೂಪಿಸಬೇಕು.

**ಉತ್ತರ**—"ಸ್ವಧರ್ಮಾಚರಣಂ ಶಕ್ತ್ಯಾ । ವಿಧರ್ಮಾಚ್ಚ ನಿವರ್ತನಂ । ದೈವಾಲ್ಲಬ್ಧೇನ ಸಂತೋಷಃ ಆತ್ಮವಿಚ್ಚರಣಾರ್ಚನಂ । ಗ್ರಾಮ್ಯಧರ್ಮ ನಿವೃತ್ತಿಶ್ಚ ಮೋಕ್ಷಧರ್ಮರತಿಸ್ತಥಾ ॥" ಎಂಬ ಭಾಗವತವಚನಾನುಸಾರವಾಗಿ ತನ್ನ ಯಥಾಶಕ್ತಿ ಸತ್ಕರ್ಮಗಳ ಆಚರಣೆಯಿಂದಲೂ, ನಿಷಿದ್ಧಕರ್ಮಪರಿತ್ಯಾಗದಿಂದಲೂ, ಸ್ವವರ್ಣಾಶ್ರಮಗಳನ್ನು ಪರಿರಕ್ಷಣೆಮಾಡಿಕೊಂಡು, ಮತ್ತು ಯತ್ಕರೋಷಿ ಯದಶ್ನಾಸಿ, ಯಜ್ಜುಹೋಷಿ ದದಾಸಿಯತ್ । ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವಮದರ್ಪಣಂ ॥" ಎಂದರೆ ಏನೇನು **ಅನಿಷಿದ್ಧ**ವಾದ ಕರ್ಮಗಳನ್ನು ಮಾಡುತ್ತಿಯೋ, ಭಕ್ಷಣೇ ಮಾಡುತ್ತಿಯೋ, ಹೋಮ ಮಾಡುತ್ತಿಯೋ, ಸತ್ಪಾತ್ರದಲ್ಲಿ ದಾನ ಮಾಡುತ್ತಿಯೋ, ಉಪಸಾವಾದಿ ತಪಸ್ಸು ಮಾಡುತ್ತಿಯೋ ಇವುಗಳನ್ನೆಲ್ಲಾ ನನಗೆ ಅರ್ಪಣೆಮಾಡು ಎಂದು ಶ್ರೀಕೃಷ್ಣನು ಹೇಳಿರುವದರಿಂದ ಅನಿಷ್ಟವಾದ ನಮ್ಮ ದಿನಚರ್ಯಗಳನ್ನು ಕೂಡ ಶ್ರೀ ಪರಮಾತ್ಮನ ಪೂಜೆ ಎಂದು ತಿಳಿದು ಅವನಲ್ಲಿಯೇ ಅರ್ಪಿಸುತ್ತಾ ಅವನ ಅಚಿಂತ್ಯವಾದ ಮಹಾತ್ಮ್ಯ ಪ್ರತಿಪಾದಕವಾದ ವೇದವೇದಾಂತಾದಿ ಶಾಸ್ತ್ರಗಳನ್ನು ಭಕ್ತಿಪೂರ್ವಕವಾಗಿ ಸದ್ಗುರುಗಳ ಮುಖದಿಂದ ಶ್ರವಣಮಾಡುವುದು, ಮನನ ಮಾಡುವದೇ ಮತ್ತು ಅವನ ಮೂರ್ತಿಯನ್ನು ಸದಾ ಧ್ಯಾನಮಾಡುವುದು ಎಂಬಿವುಗಳೇ ಪರಮಧರ್ಮಗಳು. ಇವುಗಳೇ ಶ್ರೀಹರಿಯ ಅಪರೋಕ್ಷ ಜ್ಞಾನಕ್ಕೂ ನಂತರ ಭವಸಾಗರದಿಂದ ಮುಕ್ತಿಗೂ ಕಾರಣವಾಗುತ್ತವೆಂಬುದು ಸಕಲಶ್ರುತಿಸ್ಮೃತಿಗಳಿಗೆ ಸಮ್ಮತವಾದ ಅರ್ಥವು. ಇದಕ್ಕೆ ಭಿನ್ನವಾದ ಮಾರ್ಗವು ಕುಮಾರ್ಗವು. ಈ ವಿಷಯದಲ್ಲಿ ಸಂಶಯವಿಲ್ಲ.

**೧೨ ಪ್ರಶ್ನೆ**— ಸ್ವಾಮೀ, ನಮ್ಮ ಸಾಮಾನ್ಯವಾದ ಉದರಪೂರ್ತಿ ಪ್ರಯೋಜಕವಾದ ದಿನಚರ್ಯೆಗಳು ಶ್ರೀಹರಿಗೆ ಹೇಗೆ ಪೂಜಾರೂಪಗಳಾಗುವುವು.?

**ಉತ್ತರ**— ಅಜ್ಞರಿಗೆ ಅಸಂಭಾವಿತವಾಗಿ ಕಂಡರೂ ಜ್ಞಾನಿಗಳಿಗೆ ಅವು ಹಾಗೇಯೇ ಸರಿ! "ಅಥ ದೇವರಃ" ಎಂಬ ಶ್ರುತಿಯು ಶ್ರೀ ಪರಮಾತ್ಮನ ಆವಾಸ ಸ್ಥಾನವಾದ ಈ ನಮ್ಮ ಶರೀರವೇ ಆ ಸ್ವಾಮಿಯ ರಥವೆಂದು ಹೇಳುತ್ತದೆ, ಪ್ರಕಾಶ ಸಂಹಿತೆಯಲ್ಲಿಯೂ ಕೂಡ "ಇದಂ ಶರಿರಂ ಶ್ರೀ ವಿಷ್ಣೋರಥಮಿತ್ಯನುಚಿಂತಯೇತ್" ಎಂದು ಹೇಳಿರುವದರಿಂದ ನಮ್ಮ ಹೃದ್ಗುಹಾವಾಸಿಯಾದ ಪರಮಾತ್ಮನ ಅನುಸಂಧಾನಪೂರ್ವಕವಾಗಿ ನಾವು ಈ ಶರೀರಕ್ಕೆ ಏನೇನು ಅಲಂಕಾರ ಮಾಡಿದರೂ ಅದು ಅತನ ಸೇವಾರೂಪವಾಗಿ ಪುಣ್ಯಫಲಪ್ರದವಾಗುವದರಲ್ಲಿ ಸಂದೇಹವಿಲ್ಲ. ಈ ವಿವಕ್ಷಾದಿಂದ ನಾವು ಪ್ರತಿದಿನವೂ ಮಾಡುವ ಭೋಜನವೂ ವೈಶ್ವಾನರಹೋಮವೆನಿಸುವದು; ಸ್ತ್ರೀ ಸಂಗಾದಿ ವಿಷಯಸೇವನೆಯೂ ಕೂಡ (ವಾಮದೇವಯಜ್ಞವೆಂದು ಹೆಸರುಳ್ಳದ್ದಾಗಿ) ಅತನ ಪ್ರೀತಿಗೆ ಕಾರಣವಾಗುವುದು.

**ಪ್ರಶ್ನೆ**— ಸ್ವಾಮೀ ! ಹಾಗಾದರೆ ನಿಶ್ಶಂಕವಾಗಿ ನಾವೆಲ್ಲರೂ ಯಥೇಷ್ಟ ವಿಷಯಭೋಗದಲ್ಲಿ ಆಸಕ್ತರಾಗಬಹುದೆಂದಾಯಿತಲ್ಲ ?

**ಉತ್ತರ**— ಅನಿಷಿದ್ಧ ವಿಷಯ ಸೇವನೆಯು ಪೂಜಾರೂಪವಾಗುವುದು. "ಶ್ರುತಿಸ್ಮೃತೀ ಹರೇರಾಜ್ಞೇ" ಎಂದು ಹೇಳಿರುವುದರಿಂದ ಆವನ ಆಜ್ಞಾವಿರುದ್ಧ ವಾದ ಸುರಾಪಾನಾದಿಗಳು ಹೇಗೆ ಆವನಿಗೆ ಪೂಜಾರೂಪವಾಗುವವು ? ರಾಜನು ತನಗೆ ಕೊಡಬೇಡವೆಂದು ಹೇಳಿದ ಪದಾರ್ಥವನ್ನು ಆತನಿಗೆ ಸಮರ್ಪಿಸಿದರೂ ಆತನಿಗೆ ಸಂತೋಷವಾಗಲಾರದು. ಇದೇ ರೀತಿ ವೇದನಿಷಿದ್ಧವಾದ ಕರ್ಮಗಳನ್ನು ಶ್ರೀ ಹರಿಯು ಸೇವಾರೂಪವಾಗಿ ತಿಳಿದು ಫಲ ಕೊಡಲಾರನು.

೧೩ **ಪ್ರಶ್ನೆ**— ನಾಗೇಶರಾಯರೇ ಮುಂತಾದ ವಿದ್ಯಾರ್ಥಿಗಳು— ಮಹಾ ಸ್ವಾಮೀ ! "ಗಾಂಧಿ"ಯವರ ಆಚರಣೆಗಳು ಧರ್ಮವೆನಿಸುವವೋ ಇಲ್ಲವೋ ಎಂಬ ನಮ್ಮ ಸಂದೇಹವನ್ನು ಪರಿಹರಿಸಬೇಕೆಂದು ಪ್ರಾರ್ಥಿಸುತ್ತೇವೆ.

**ಉತ್ತರ**— ಶ್ರೀ ಶ್ರೀಗಳವರು— ಒಬ್ಬೊಬ್ಬ ವ್ಯಕ್ತಿವಿಷಯದಲ್ಲಿ ಪ್ರಶ್ನೆ ಮಾಡಿ ನಮ್ಮನ್ನು ಜಗಳಕ್ಕೆ ಕರೆಯಬೇಡಿರಿ. ಒರೆಗಲ್ಲನ್ನು ಕೊಟ್ಟು ನಾಲ್ಕೆಂಟು ಲೋಹಗಳನ್ನು ಮುಂದೆ ಇಟ್ಟರೆ ಇದು ಚಿನ್ನವು, ಇದು ಬೆಳ್ಳಿಯು ಎಂದು ಕಂಡು ಹಿಡಿಯುವುದು ಹೇಗೆ ಸುಲಭವೋ, ಹಾಗೆಯೇ ಸ್ವವರ್ಣಾಶ್ರಮವಿಹಿತವಾದ ಆತ ಏವ ಭಗವತ್ಪ್ರೀತಿಕರವಾದ ವೇದಾವಿರುದ್ಧ ಕರ್ಮಾನುಷ್ಠಾನವೇ ಧರ್ಮವು ಎಂದು ನಿಷ್ಕೃಷ್ಟವಾಗಿ ನೀವು ತಿಳಿದಿರುವುದರಿಂದ, ಗಾಂಧಿಯವರ ಯಾವ ಆಚರಣೆಯು ಅನುವರ್ತನೀಯವು, ಯಾವುದು ಅಧರ್ಮಕರವೆಂಬುದನ್ನು ನೀವೇ ತಿಳಿಯ ಬಹುದು. ಅಷ್ಟು ನಿರ್ಣಯ ಮಾಡುವುದೂ ನಿಮಗೆ ಕಷ್ಟವಾದರೆ, ಪ್ರತ್ಯೇಕವಾಗಿ ಒಂದೊಂದು ಆಚರಣೆಯನ್ನು ಹೆಸರು ಹಿಡಿದು ಇದು ಧರ್ಮವೋ ಅಧರ್ಮವೋ ? ಎಂದು ಪ್ರಶ್ನೆ ಮಾಡಿರಿ. ನಿರೂಪಿಸುತ್ತೇವೆ.

೧೪ **ಪ್ರಶ್ನೆ**— ವಿದ್ಯಾರ್ಥಿಗಳು— ಮಹಾಸ್ವಾಮೀ ! ಸುಮಾರು ಒಂದು ಕೋಟಿಯಷ್ಟು ಪಂಚಮ ಜಾತಿಗೆ ಸೇರಿದ ಪ್ರಜೆಗಳನ್ನು ಅಸ್ಪೃಶ್ಯರೆಂದು ವಿಭಾಗ ಮಾಡಿ, ಅವರನ್ನು ಸಕಲ ವ್ಯವಹಾರಗಳಲ್ಲಿಯೂ ಹೊರಗೆ ಹಾಕಿರುವುದು ಶುಭ್ರ ವಾದ ಭಾರತೀಯ ಕೀರ್ತಿಗೆ ಒಂದು ಕಪ್ಪುಮಚ್ಚೆಯು; ಈ ನಡವಳಿಕೆಯು ಹಿಂದೂ ತತ್ವಜ್ಞರ ಅಲ್ಪತೆಯನ್ನು ಪ್ರಕಾಶಗೊಳಿಸುವುದು. ಆದುದರಿಂದ ಸಮಾಜದ ಔನ್ನತ್ಯವನ್ನು ಮನಸ್ಸಿನಲ್ಲಿಟ್ಟು, ಶಾಸ್ತ್ರಕ್ಕೆ ಅಪಾರ್ಥವನ್ನು ಕಲ್ಪಿಸದೆ, ಉದಾರವಾದ ನಮ್ಮ ಪೂರ್ವಿಕ ಋಷಿಗಳ ಬುದ್ಧಿಯಿಂದ ವ್ಯವಹಾರವನ್ನು ನಡೆಯಿಸಬೇಕು. ಮತ್ತು ಈಗ ಅಯೋಗ್ಯರೆಂದು ಬಹಿಷ್ಕೃತರಾಗಿರುವ ಹೊಲೆಯ, ಮಾದಿಗ ಇವೇ ಮೊದಲಾದ ನಾನಾ ಹೆಸರುಳ್ಳ ಸುಮಾರು ಒಂದು ಕೋಟಿ ಪ್ರಜೆಗಳನ್ನು ಸಮಾಜದ ಅಂತರಂಗ ವ್ಯವಹಾರಗಳಲ್ಲಿ ಸೇರಿಸಿಕೊಂಡು ಪರಸ್ಪರ ಸುಹೃದಯದಿಂದ ಕಲೆತು

ಐಕಮತ್ಯವನ್ನು ಹೊಂದಿ ದೇಶಾಭಿವೃದ್ಧಿಯನ್ನು ಪಡೆಯಬೇಕೆಂದು ಮಹಾತ್ಮಾ ಗಾಂಧಿಯವರು ಹೇಳುತ್ತಾರೆ. ಅವರ ಉಕ್ತಿಯಲ್ಲಿ ಏನು ದೋಷ ? ಪಂಚಮರು ಅಸ್ಪೃಶ್ಯರೆಂದು ಯಾವ ಶಾಸ್ತ್ರದಲ್ಲಿ ಹೇಳಿರುತ್ತದೆ ?

ಶ್ರೀ ಶ್ರೀಗಳವರು— ನಿಮ್ಮ ಮಾತುಗಳಿಗೆ ಕ್ರಮವಾಗಿ ಉತ್ತರವನ್ನು ನಿರೂಪಿಸುತ್ತೇವೆ. ಕೇಳಿ. 1. ಪಂಚಮರನ್ನು ಹೊಲೆಯರು, ಮಾದಿಗರು ಎಂದು ನಾನಾ ವಿಧವಾಗಿ ನಾಮಕರಣ ಮಾಡಿ ವ್ಯವಹಾರಗಳಲ್ಲಿ ಸೇರಿಸದೆ ಹೊರಗೆ ಹಾಕಿರುವವರು ಭಾರತೀಯ ಜನಾಂಗವಲ್ಲ; 2. ಇದು ಹಿಂದೂ ತತ್ತ್ವಜ್ಞರ ಸ್ವಾರ್ಥಸಾಧಕವಾದ ವಂಚನೋಪಾಯವೂ ಅಲ್ಲ. "ಚಂಡಾಲಾಯ ಉಚ್ಛಿಷ್ಟಂ ಪ್ರಯಚ್ಛೇತ್" ಎಂಬ ಶ್ರುತಿಯಿಂದಲೇ ಚಂಡಾಲರು ಪೂರ್ವದಿಂದಲೂ ಇದ್ದ ರೆಂಬುದು ತಿಳಿದು ಬರುತ್ತದೆ. ನಮ್ಮ ಪೂರ್ವಿಕರಾದ ಋಷಿಗಳು ಪಂಚಮರಿಗೆ ಸವ್ಯವಹಾರಾದಿಗಳನ್ನು ಕೊಟ್ಟು ಅವರ ಸಹವಾಸದಲ್ಲಿ ಒಂದೇ ಮನೆಯಲ್ಲಿ ವಾಸ ಮಾಡುತ್ತಿದ್ದರೆಂಬಲ್ಲಿ ಪ್ರಮಾಣವಿಲ್ಲ. ಮತ್ತು ಈಗಿರುವಂತೆ ವಿವಿಕ್ತರಾಗಿಯೇ ಇದ್ದರೆಂಬುದರಲ್ಲಿ ಪ್ರಮಾಣಗಳಿವೆ. 3. ಕಿಂಚ, ಸಮಸ್ತ ವ್ಯವಹಾರಗಳಲ್ಲಿಯೂ ಏಕೀಭಾವದಿಂದ ಕಲೆತರೇ ಜನಾಂಗದಲ್ಲಿ ಐಕಮತ್ಯವು ಬರುವುದೆಂಬುದು ಭ್ರಾಂತಿ ಕಲ್ಪಿತವು. ಐಕಮತ್ಯವು ಸೌಹಾರ್ದದಿಂದ ಬರುವುದು. ಒಂದೇ ಗೃಹದಲ್ಲಿ ಯಜಮಾನನು, ಪತ್ನಿಯು, ಪುತ್ರನು, ಭೃತ್ಯನು ಇವರೆಲ್ಲರೂ ಸಮಾನರಲ್ಲ ದಿದ್ದರೂ ಪರಸ್ಪರ ಸ್ನೇಹದಿಂದ ಬದ್ಧರಾಗಿರುವುದರಿಂದ ಹೇಗೆ ಐಕಮತ್ಯವು ಕಂಡು ಬರುವದೋ, ಹಾಗೆಯೇ ಬ್ರಾಹ್ಮಣಾದಿ, ಚತುರ್ವರ್ಣದವರೂ, ವರ್ಣಬಾಹ್ಯರಾದ ಚಂಡಾಲಾದಿಗಳೂ, ಶಾಸ್ತ್ರೋಕ್ತವಿಧಿಯನ್ನು ಮೀರದೆ ಸ್ವಯೋಗ್ಯ ಕರ್ಮಗಳನ್ನು ಆಚರಿಸುತ್ತಿದ್ದರೆ, ಘನತರವಾದ, ಐಕಮತ್ಯವು ಉಂಟಾಗುವದು. ಅನ್ಯೋಪಾಯ ಗಳಿಂದ ಐಕಮತ್ಯವು ಉಂಟಾಗುವದಿಲ್ಲ. ಉಂಟಾದರೂ ಆಶುತರವಿನಾಶಿಯು. ಇನ್ನು ದೇಶಾಭಿವೃದ್ಧಿಯನ್ನು ಪಡೆಯಬೇಕಾದರೆ ಸರ್ವರೂ ಭೋಜನ, ವಿವಾಹಾದಿ ವ್ಯವಹಾರಗಳಲ್ಲಿ ಐಕ್ಯವನ್ನು ಹೊಂದಬೇಕೆಂಬ ಮಾತೂ ಸುಳ್ಳು. ಶಾಸ್ತ್ರಾವಿರುದ್ಧ ವಾದ ಮರ್ಯಾದೆಯಿಂದ ಎಲ್ಲರೂ ಒಂದಾಗಿ, ಮನೋಭಾವದಿಂದ ಐಕಮತ್ಯವನ್ನು ಹೊಂದಿ ಸ್ವೋಚಿತವಾದ ದೇಶೋನ್ನತಿಗೆ ಕಾರಣವಾದ ಕರ್ಮಗಳನ್ನು ಮಾಡುತ್ತ ಸುಖವನ್ನು ಹೊಂದಬಹುದು. ಪಂಚಮರಿಗೆ ಉತ್ತಮ ವರ್ಣದವರು ಯಾವ ವಿಧವಾದ ಉಪಕಾರವನ್ನೂ ಮಾಡಕೂಡದೆಂದು ನಾವು ಹೇಳುವುದಿಲ್ಲ. ಪ್ರತಿ ಗ್ರಾಮದಲ್ಲಿಯೂ ಅವರಿಗೆ ಬೇರೆ ಬಾವಿಗಳನ್ನು ತೋಡಿಸಿ ಕೊಡಬಹುದು. ಅವರಿಗೆ ವಾಸವಸ್ತ್ರಾದಿಗಳನ್ನು ಕಲ್ಪಿಸಿ ಕೊಡಬಹುದು. ಶಾಸ್ತ್ರಾವಿರುದ್ಧವಾಗಿ ಶ್ರೀ ಪರಮಾತ್ಮ ನಿಗೆ ಸಮ್ಮತಿಯಾಗುವ ರೀತಿಯಲ್ಲಿ ವ್ಯವಹಾರವು ಉಚಿತವು. ಆಷ್ಟೇ ವಿನಾ ಪಂಚಮರ ಸ್ಪರ್ಶ, ಒಂದೇ ಕೂಪದಿಂದ ಜಲಾಹರಣ ಮತ್ತು ಸಹಭೋಜನಾದಿ

ಕ್ರಿಯೆಗಳು ಬ್ರಾಹ್ಮಣನನ್ನು ಪತಿತನನ್ನಾಗಿ ಮಾಡುವವು. ಶಾಸ್ತ್ರದೃಷ್ಟಿಯಿಂದ ನೋಡಿದರೆ ಅದು ಪಂಚಮರಿಗೂ ಅಹಿತಕರವು. ಈ ವಿಷಯದಲ್ಲಿ ಪ್ರಮಾಣವು:– "ಅಸ್ಪೃಶ್ಯಃ ಖಲು ಚಂಡಾಲಃ ಶ್ರೇಷ್ಠವರ್ಣಂ ಸ್ಪೃಶೇದ್ಯದಿ । ಅಜ್ಞಾನಾದಪಿ ಲೋಕೇಽಸ್ಮಿನ್ಪ್ರೇತ್ಯ ಸ್ಥಾವರತಾಂ ವ್ರಜೇತ್ ॥" ಎಂದರೆ ಅಸ್ಪೃಶ್ಯನಾದ ಚಂಡಾಲನು ಶ್ರೇಷ್ಠ ವರ್ಣದವನನ್ನು ಅಜ್ಞಾನದಿಂದ ಮುಟ್ಟಿದರೂ ಮೃತಿ ಹೊಂದಿದ ನಂತರ ಸ್ಥಾವರತ್ವ (ವೃಕ್ಷಾದಿಜನ್ಮಗಳನ್ನು) ವನ್ನು ಹೊಂದುತ್ತಾನೆ.

೧೫ **ಪ್ರಶ್ನೆ**— ವಿದ್ಯಾರ್ಥಿಗಳು— ಸ್ವಾಮೀ ! ಸ್ಪರ್ಶಮಾತ್ರದಿಂದ ಚಂಡಾಲನ ದೇಹದಿಂದ ಬ್ರಾಹ್ಮಣನ ದೇಹಕ್ಕೆ ಏನಾದರೂ ಅಪವಿತ್ರತೆಯು ಹರಿದುಕೊಂಡು ಬರುತ್ತದೆಯೇ ?

**ಉತ್ತರ**— ಶ್ರೀ ಶ್ರೀಗಳವರು— ಹಾಗೆಯೇ ಸರಿ. ವೇದೋಕ್ತ ಸಂಸ್ಕಾರ ಮತ್ತು ವೇದಮಂತ್ರ ಪಠನಾದಿಗಳಿಂದ ಬ್ರಾಹ್ಮಣ ದೇಹದಲ್ಲಿ ಪರಮಾತ್ಮನ ಸಾನ್ನಿಧ್ಯವು ವಿಶೇಷವಾಗಿ ಇರುವುದು. ಅದು ಚಂಡಾಲ ಸ್ಪರ್ಶದಿಂದ ನಾಶವಾಗುವುದು. ಗುಡ್ಡದ ಮೇಲಿನ ಕಲ್ಲನ್ನು ವಡ್ಡರು ಸುತ್ತಿಗೆಯಿಂದ ಒಡೆಯುವರು. ಅದರಿಂದ ಅವರಿಗೆ ದೋಷವಿಲ್ಲ. ಆದರಿಂದ ದೇವತಾ ಪ್ರತಿಮೆಯನ್ನು ನಿರ್ಮಾಣ ಮಾಡಿ ಪ್ರಾಣ ಪ್ರತಿಷ್ಠೆ ಮಾಡಿದ ನಂತರ ಅದು ಪೂಜಾರ್ಹವಾಗುವುದು. ಶಾಸ್ತ್ರ ನಿಷಿದ್ಧ ಸ್ಪರ್ಶಾದಿಗಳಿಂದ, ಪ್ರತಿಮೆಯಲ್ಲಿ ಮಂತ್ರ ಶಕ್ತಿಯಿಂದ ಆಹಿತವಾದ ಸಾನ್ನಿಧ್ಯವು ಹೊರಟು ಹೋಗುವುದು. ಈ ಎರಡು ವಿಷಯಗಳಲ್ಲಿ ಪ್ರಮಾಣವು:— ಪರಾಶರಸ್ಮೃತಿ :— "ಆಸನಾಚ್ಛಯನಾದ್ಯಾನಾತ್ಸಂ ಭಾಷಾತ್ಸಹ ಭೋಜನಾತ್ । ಸಂಕ್ರಾಮಂತಿ ಹಿ ಪಾಪಾನಿ ತೈಲಬಿಂದುರಿವಾಂಭಸಿ ॥" ಎಂದರೆ ಆಸನ, ಶಯನ, ಸಹಭೋಜನಾದಿಗಳಿಂದ ತೈಲಬಿಂದುವು ಜಲದಲ್ಲಿ ವ್ಯಾಪಿಸಿಕೊಳ್ಳುವಂತೆ ಪಾಪಗಳು ಒಬ್ಬರಿಂದೊಬ್ಬರಿಗೆ ಪ್ರವಹಿಸುವವು. ವಿಷ್ಣುರಹಸ್ಯೇ— "ಚಂಡಾಲಪತಿತೋದಕ್ಯಾ ಸೂತಿಕಾದಿ ನಿರೀಕ್ಷಣೈಃ । ಪೂಜಾಭಾವಾದ್ದಶಾಹಂ ಚ ಸನ್ನಿಧಾನಂ ವಿನಶ್ಯತಿ."

೧೬ **ಪ್ರಶ್ನೆ**— ವಿದ್ಯಾರ್ಥಿಗಳು— ಸ್ವಾಮೀ ! ಚಂಡಾಲ ಸ್ಪರ್ಶ ಮಾತ್ರದಿಂದ ಓಡಿ ಹೋಗುವಷ್ಟು ಕೋಮಲ ಪದಾರ್ಥವೆ ನಮ್ಮ ಬ್ರಾಹ್ಮಣ್ಯವು ?

**ಉತ್ತರ**— ಶ್ರೀ ಶ್ರೀಗಳವರು— ಮೋಟಾರ್ ಯಂತ್ರದಲ್ಲಿ ಒಂದು ಸಣ್ಣ ತಂತಿಯನ್ನು ಒಳಗೆ ಸ್ಪರ್ಶ ಮಾಡಿಸಿದರೆ ಬಹು ವೇಗದಿಂದ ಹೋಗುತ್ತಿರುವ ಗಾಡಿಯು ಥಟ್ಟನೆ ನಿಂತು ಬಿಡುವದು. ಹಾಗೆಯೇ ಚಂಡಾಲ ಸ್ಪರ್ಶದಿಂದ ಬ್ರಾಹ್ಮಣನ ಶಕ್ತಿಯು ಕಡಮೆಯಾಗುವುದೆಂದು ಶಾಸ್ತ್ರದಲ್ಲಿ ಹೇಳಿದೆ.

೧೭ **ಪ್ರಶ್ನೆ**— ವಿದ್ಯಾರ್ಥಿಗಳು— ಸ್ವಾಮೀ ! "ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ । ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥" ಎಂದು ಶ್ರೀ ಕೃಷ್ಣನು ಶ್ವಪಾಕರಾದ ಚಂಡಾಲರನ್ನೂ ಬ್ರಾಹ್ಮಣರನ್ನೂ ಸಮವಾಗಿ

ಪಂಡಿತರು ತಿಳಿಯುವರೆಂದು ಹೇಳಿರುವನು. ಹೀಗಿರುವಲ್ಲಿ ಸ್ಪೃಶ್ಯಾಸ್ಪೃಶ್ಯ ವಿವೇಕವು ಹೇಗೆ ಸಂಭವಿಸುವದು ?

**ಉತ್ತರ**— ಶ್ರೀ ಶ್ರೀಗಳವರು— ನಿಮಗೆ "ಸಮದರ್ಶಿನಃ" ಎಂಬ ಪದಕ್ಕೆ ಅರ್ಥವು ಆಗಲಿಲ್ಲ. ಮುಂದಿನ ಗೀತಾಶ್ಲೋಕದಲ್ಲಿ "ಸಮ" ಶಬ್ದದ ಅರ್ಥವನ್ನು ಶ್ರೀ ಕೃಷ್ಣನೇ ಹೇಳಿರುತ್ತಾನೆ.

"ಇಹೈವ ತೈರ್ಜಿತಸ್ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।
**ನಿರ್ದೋಷಂ ಹಿ ಸಮಂ ಬ್ರಹ್ಮ** ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ॥

ಇದರ ಅರ್ಥವು :— ಯಾರ ಮನಸ್ಸು **"ಸಾಮ್ಯ"** ವಿಷಯದಲ್ಲಿ ಸ್ಥಿತವಾಗಿದೆಯೋ ಅವರು ಈ ಜನ್ಮದಲ್ಲಿಯೇ ಜನ್ಮಾದಿ ರೂಪವಾದ ಸಂಸಾರವನ್ನು ಜಯಿಸುತ್ತಾರೆ. ನಿರ್ದೋಷನಾದ ಪರಬ್ರಹ್ಮನೇ "ಸಮ" ವೆಂದು ಕರೆಯಿಸಿಕೊಳ್ಳಲ್ಪಡುವ ವಸ್ತುವು. ಸಮತ್ವ ಗುಣದಿಂದ ಸರ್ವತ್ರ ಇರುವವನು ಪರಮಾತ್ಮನಾದುದರಿಂದ ಈ ಸಮದರ್ಶಿಗಳು ಬ್ರಹ್ಮನಲ್ಲಿ ಸ್ಥಿತರು. ಈ ಶ್ಲೋಕಕ್ಕೆ ಅನುಗುಣವಾಗಿ ಬ್ರಾಹ್ಮಣನಲ್ಲಿಯೂ, ಗೋವಿನಲ್ಲಿಯೂ, ಗಜದಲ್ಲಿಯೂ, ನಾಯಿಯಲ್ಲಿಯೂ, ಚಂಡಾಲನಲ್ಲಿಯೂ ಪಂಡಿತರು ಸಮದರ್ಶಿಗಳು ಅಂದರೆ ಸಮತ್ವ (ನಿರ್ದೋಷ) ಗುಣವಿಶಿಷ್ಟನಾದ ಪರಮಾತ್ಮನು ಇದ್ದಾನೆ ಎಂದು ನೀವು ಉದಾಹರಿಸಿದ ಗೀತಾ ವಾಕ್ಯಕ್ಕೆ ಅರ್ಥ ಮಾಡಬೇಕು. ಪರಮಾತ್ಮನಿಗೆ ಸ್ಥಾನಭೇದಪ್ರಯುಕ್ತ ಗುಣ ಭೇದವು ಇಲ್ಲವೆಂದು ತಾತ್ಪರ್ಯವು.

**೧೮ ಪ್ರಶ್ನೆ**— ವಿದ್ಯಾರ್ಥಿಗಳು— ಸ್ವಾಮೀ ! ಚಂಡಾಲರಿಗೆ ಯಾವ ರೀತಿ ದೇವರ ಭಜನೆಯು ಉಕ್ತವಾಗಿದೆ ?

**ಉತ್ತರ**— ಶ್ರೀ ಶ್ರೀಗಳವರು— "ಸ್ತ್ರೀ ಶೂದ್ರಪ್ರತಿಲೋಮಾದ್ಯಾಸ್ತಂತ್ರ ಮಾತ್ರಾಧಿಕಾರಿಣಃ । ನ ತೇಷಾಂ ವೈದಿಕೇ ಮಾರ್ಗೇ ಪ್ರವೇಶೋ ವಿಹಿತೋದಿತಃ॥" ಇದು ವಿಷ್ಣುರಹಸ್ಯೋಕ್ತಿಯು. ಚಂಡಾಲರಿಗೆ ವಿಷ್ಣುದೀಕ್ಷಾಗ್ರಹಣ, ಭಗವನ್ನಾಮ ಸ್ಮರಣ, ಏಕಾದಶೀವ್ರತ ಇವುಗಳಲ್ಲಿ ಅಧಿಕಾರವುಂಟು. ಇದಕ್ಕೆ ವಚನವು :— ವಿಷ್ಣುರಹಸ್ಯೇ :—

"ವಿಲೋಮೈಃ ಪ್ರತಿಲೋಮೈಶ್ಚ ತಥಾ ಕುಂಡೈಶ್ಚ ಗೋಳಕೈಃ ।
ಕರ್ತವ್ಯಾ ವಿಷ್ಣುಭಕ್ತಿಶ್ಚ ಗ್ರಾಹ್ಯಾ ಧೀಕ್ಷಾಹರೇರಪಿ ॥"

**೧೯ ಪ್ರಶ್ನೆ**— ವಿದ್ಯಾರ್ಥಿಗಳು— ಸ್ವಾಮೀ, ಚಂಡಾಲರನ್ನು ಸ್ಪರ್ಶ ಮಾಡಬಾರದೆಂಬಲ್ಲಿಯೂ, ಚಂಡಾಲರು ದೇವಾಲಯವನ್ನು ಪ್ರವೇಶಿಸಬಾರದೆಂಬಲ್ಲಿಯೂ ಪ್ರಮಾಣಗಳು ಯಾವುವು ?

**ಉತ್ತರ**— ಶ್ರೀ ಶ್ರೀಗಳವರು— ಪರಾಶರ ಸ್ಮೃತಿಯಲ್ಲಿ ಹೀಗೆ ಹೇಳಿದೆ.

ಚಂಡಾಲಸ್ಪರ್ಶನೇ ಚೈವ ಸಚ್ಛೈಲಂ ಸ್ನಾನ ಮಾಚರೇತ್ ।
ಚಂಡಾಲಖಾತವಾಪೀಷು ಪೀತ್ವಾ ಸಲಿಲಮಗ್ರಜಃ ।
ಅಜ್ಞಾನಾದೇಕಭುಕ್ತೇನ ತ್ವಹೋರಾತ್ರೇಣ ಶುಧ್ಯತಿ ॥"

ಮತ್ತು

" ಪ್ರಾಸಾದದೇವಹರ್ಮ್ಯಾಣಾಂ ಚಂಡಾಲಪತಿತಾದಿಷು ।
ಅಂತಃಪ್ರವಿಷ್ಟೇಷು ತಥಾ ಶುದ್ಧಿಃ ಸ್ಯಾತ್ಕೇನ ಕರ್ಮಣಾ ।
ಗೋಭಿಃಸಂಕ್ರಮಣಂ ಕೃತ್ವಾ ಗೋಮೂತ್ರೇಣೈವಲೇಪಯೇತ್ ॥
ಪುಣ್ಯಾಹಂ ವಾಚಯಿತ್ವಾತುತತ್ತೋಯೈರ್ದರ್ಭಸಂಯುತೈಃ ॥
ಸಂಪ್ರೋಕ್ಷ್ಯ ಸರ್ವತಃ ಪಶ್ಚಾದ್ದೇವಂ ಸಮಭಿಷೇಚಯೇತ್ ॥"

ಇದರ ಅರ್ಥವು:— ಚಂಡಾಲರ ಸ್ಪರ್ಶವಾದರೆ ಸಚ್ಛೈಲ ಸ್ನಾನ ಮಾಡಬೇಕು. ತಿಳಿಯದೆ ಚಂಡಾಲರ ಭಾವಿಗಳಲ್ಲಿನ ನೀರು ಕುಡಿದರೆ ಒಂದು ದಿನ ಉಪವಾಸ ಮಾಡಬೇಕು. ಪ್ರಾಸಾದ ದೇವಸ್ಥಾನಗಳಲ್ಲಿ ಚಂಡಾಲಪತಿತಾದಿಗಳು ಪ್ರವೇಶಿಸಿದರೆ ಗೋವುಗಳ ಪಾದಕ್ಷೇಪ ಮಾಡಿಸಿ, ಗೋಮೂತ್ರದಿಂದ ಸಾರಿಸಿ, ಸಂಪ್ರೋಕ್ಷಣೆ ಮಾಡಿ ದೇವರಿಗೆ ಅಭಿಷೇಕ ಮಾಡಬೇಕು. ಮತ್ತು **ವಾರಾಹೇ** :—

"ಸಾಲಗ್ರಾಮಂ ನಸ್ಪೃಶೇತ್ತು ಹೀನವರ್ಣೋ ವಸುಂಧರೇ ।
"ಸ್ತ್ರೀಶೂದ್ರಕರಸಂಸ್ಪರ್ಶೋ ವಜ್ರಸ್ಪರ್ಶಾಧಿಕೋ ಮತಃ ।
ಶೂದ್ರೋವಾಽನುಪನೀತೋ ವಾ ಸ್ತ್ರಿಯೋ ವಾ ಪತಿತೋಪಿ ವಾ ।
ಕೇಶವಂ ವಾ ಶಿವಂ ವಾಪಿ ಸ್ಪೃಷ್ಟ್ವಾ ನರಕಮಶ್ನುತೇ ।"

ಇದು ವರಾಹದೇವರ ವಚನವು. "ಎಲೈ ಭೂದೇವಿ, ಹೀನವರ್ಣದವನು, ಸಾಲಗ್ರಾಮುವನ್ನು ಮುಟ್ಟಕೂಡದು. ಸ್ತ್ರೀ ಶೂದ್ರರ ಸ್ಪರ್ಶವು ಸಿಡಿಲಿಗೆ ಸಮಾನವಾದುದು. ಶೂದ್ರನು, ಉಪನಯನ ರಹಿತನು, ಸ್ತ್ರೀಯು, ಪತಿತನು ಇವರುಗಳು ಕೇಶವನನ್ನಾಗಲಿ ಮಹಾದೇವರನ್ನಾಗಲೀ ಮುಟ್ಟಿದರೆ ನರಕವನ್ನು ಹೊಂದುತ್ತಾನೆ: ಎಂದು ಇದರ ಅರ್ಥವು. "

**೨೦ ಪ್ರಶ್ನೆ**— ವಿದ್ಯಾರ್ಥಿಗಳು— ಮಹಾಸ್ವಾಮೀ! ನಾವು ಖದ್ದರ್ ಬಟ್ಟೆಯನ್ನು ಉಡಬಹುದೋ ಅಥವಾ ಉಡಬಾರದೋ ?

ಶ್ರೀ ಶ್ರೀಗಳವರು — ಇವುಗಳನ್ನು ಶಾಸ್ತ್ರದಲ್ಲಿ ನಿಷೇಧ ಮಾಡಿರುವದಿಲ್ಲ. ನೂಲನ್ನು ನೇಯುವದು ಕುವಿಂದನಿಗೆ ವಿಹಿತವಾದ ವ್ಯಾಪಾರವು. ಬ್ರಾಹ್ಮಣರಿಗೆ ಅದು ಆಪದ್ಧರ್ಮವು. ಸತ್ಯ, ಶಮ, ದಮ ಇವೇ ಮೊದಲಾದ ಸದ್ಗುಣಗಳು ಸರ್ವರಿಂದಲೂ ಪ್ರಯತ್ನದಿಂದ ಸಂಪಾದನೀಯವು. ಈ ಗುಣಗಳೂ ಕೂಡ ಸ್ವವರ್ಣಾಶ್ರಮಧರ್ಮ ಪರಿತ್ಯಾಗರೂಪವಾದ ಪ್ರಬಲ ಭಗವದ್ದ್ರೋಹವನ್ನು ಸಂಪಾದನೆ ಮಾಡಿದವನಿಗೆ ಅಂತ್ಯದಲ್ಲಿ ಉತ್ಕೃಷ್ಟ ಫಲವನ್ನು ಕೊಡುವದರಲ್ಲಿ

ಸಮರ್ಥವಾಗಲಾರವು. ಆದುದರಿಂದ ಅವಶ್ಯವಾಗಿಯೂ ನೀವೆಲ್ಲರೂ ಸ್ವಧರ್ಮ ರಕ್ಷಣೆಯಲ್ಲಿ ತತ್ಪರರಾಗಬೇಕು. ಪಾತಿವ್ರತ್ಯದಿಂದ ರಹಿತಳಾಗಿ, ಸಮಸ್ತ ಕಲ್ಯಾಣ ಗುಣಗಳಿಂದ ಯುಕ್ತಳಾದರೂ ಆ ಸ್ತ್ರೀಯು ಹೇಗೆ ಸಜ್ಜನರ ಪ್ರಶಂಸೆಗೆ ವಿಷಯ ಳಾಗಲಾರಳೋ, ಅದೇ ರೀತಿಯಲ್ಲಿ ಸ್ವಧರ್ಮದಿಂದ ಚ್ಯುತನಾದ ಪುರುಷನ ಇತರ ಮಹಾಪ್ರಯತ್ನಗಳೂ ಕೂಡ ಅಲ್ಪವೇ ಫಲವನ್ನು ಕೊಡುವವು. ಆದುದರಿಂದ ನೀವೆಲ್ಲರೂ ಶಾಸ್ತ್ರಾರ್ಥ ವಿಚಾರವನ್ನು ಮಾಡಿ, ನಿಜತತ್ವವನ್ನು ತಿಳಿದು, ನಂತರ ಸ್ವಧರ್ಮಾನುಸಾರಿಯಾದ ದೇಶ ಸೇವೆಯಿಂದ ಇಹಲೋಕದಲ್ಲಿಯೂ ಕೀರ್ತಿಯನ್ನು ಹೊಂದಿ ಶ್ರೀ ಪರಮಾತ್ಮನ ಜ್ಞಾನಜನಕವಾದ ಪ್ರಸಾದಕ್ಕೆ ಪಾತ್ರರಾಗಬೇಕೆಂದು ಪುನಃ ಪುನಃ ಉಪದೇಶ ಮಾಡಿದ್ದೇವೆ.



## X

ತಾ॥ 20—6—1930 ರಲ್ಲಿ

**ಪ್ರಾಶ್ನಿಕರು— V. ಸೇತುರಾಯರು, ಮಹಾರಾಜಾ ಕಾಲೇಜ್, ಮತ್ತು ಆನೇಕಲ್ಲು ಶ್ರೀನಿವಾಸಚಾರ್ಯರೇ ಮುಂತಾದ ವಿದ್ವಾಂಸರು.**

---

೧ **ಪ್ರಶ್ನೆ**— ಸೇತುರಾಯರು— ಮಹಾಸ್ವಾಮೀ! ಭಯಂಕರವಾದ ಕಲಿ ಕಾಲವು ಪ್ರಾಪ್ತವಾಗಿರುತ್ತದೆ. ನಮ್ಮ ಪೂರ್ವಿಕರ ಆಚರಣೆ ನಮಗೆ ಅಶಕ್ಯವು. ಹೇಗೆ ಪೂರ್ವದಲ್ಲಿ ಪ್ರತ್ಯಕ್ಷ ಪಶುವಿನಿಂದಲೇ ಬ್ರಾಹ್ಮಣರು ಯಜ್ಞ ಮಾಡುತ್ತಿದ್ದು, ಈಗ ಅದು ಅನಾಢ್ಯವಾಗಿ, ಪಿಷ್ಟಪಶುವಿನಿಂದಲೇ ಯಜ್ಞವನ್ನು ನಿರ್ವಾಹ ಮಾಡುತ್ತಾರೋ, ಹಾಗೆಯೇ ಸಂಭಾಷಣ, ಸ್ಪರ್ಶ, ಭೋಜನ, ವಿವಾಹಾದಿ ವ್ಯವಹಾರಗಳಲ್ಲಿ ಕೆಲವು ಆಚರಣೆಗಳನ್ನು ಬದಲಾಯಿಸಿದರೆ, ಲೋಕಕ್ಕೂ ಕ್ಷೇಮ ವಾಗಿ ನಮಗೂ ಸಾಧನೆಯು ಸುಲಭವಾಗಿ ಜರಗುವದು. ಇಂಥ ಧರ್ಮದ ಬದಲಾವಣೆಗೆ ಅವಕಾಶವಿದ್ದರೆ ಅಪ್ಪಣೆಯಾಗಬೇಕು.

**ಉತ್ತರ**—ಶ್ರೀ ಶ್ರೀಗಳವರು— ವೇದವೇ ಕಾಲಾನುಗುಣವಾಗಿ ಭಿನ್ನ ಭಿನ್ನ ಧರ್ಮಗಳನ್ನು ಹೇಳಿರುತ್ತದೆಯೇ ಎಂದು ನಿಮ್ಮ ಪ್ರಶ್ನಾಭಿಪ್ರಾಯವೇ? ಅಥವಾ ನಾವೇ ಕಾಲಾನುಗುಣವಾಗಿ ಧರ್ಮಗಳನ್ನು ಕಲ್ಪಿಸಬಹುದೇ ಎಂದು ಕೇಳುವಿರೋ? ಮೊದಲನೆಯ ಅಭಿಪ್ರಾಯವಿದ್ದರೆ ನಿಮ್ಮ ಪ್ರಶ್ನವು ಉಚಿತವೇ ಸರಿ. ವೇದವೇ ಅನೇಕ ಆಪದ್ಧರ್ಮಗಳನ್ನು ನಿರೂಪಿಸಿರುತ್ತದೆ. ಕಲಿಯುಗದಲ್ಲಿ ಜನರ ಅನುಕೂಲತೆ ಗೋಸ್ಕರ ಕೆಲವು ಸಾಮಾನ್ಯ ಧರ್ಮಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಟ್ಟಿರುವದು.

ಕೃತಯುಗದಲ್ಲಿ ಧ್ಯಾನದಿಂದ ಏನು ಪುಣ್ಯವೋ ಅದು ಕಲಿಯುಗದಲ್ಲಿ ಹರಿಕೀರ್ತನ ದಿಂದಲೇ ಬರುವದು. ಈ "ಬದಲಾವಣೆ" ಗಳು ಕೂಡ ವೇದೋಕ್ತವಾದುದರಿಂದ ಅವುಗಳೂ "ಧರ್ಮ" ವೆನಿಸುವವು. ಆದುದರಿಂದ ನಾವು "ಧರ್ಮ" ವನ್ನು ಬದಲಾಯಿಸಿದ ಹಾಗಾಗಲಿಲ್ಲ. "ವೇದಪ್ರಣಿಹಿತೋ ಹಿ ಧರ್ಮಃ" ಆಪತ್ಕಾಲದಲ್ಲಿ ವೇದವಿಹಿತವಾದ ವಿಶೇಷ ಆಚರಣೆಗಳನ್ನು ಮಾಡಿದರೆ "ಧರ್ಮ" ವನ್ನು ಹೇಗೆ ಬದಲಾವಣೆ ಮಾಡಿದಂತಾಯಿತು ?

ವೇದವಿಹಿತವಲ್ಲದ ಕೆಲವು ಆಚರಣೆಗಳನ್ನು ಕಾಲಾನುಗುಣವಾಗಿ ನಾವು ಏರ್ಪಡಿಸಿ ಅವುಗಳನ್ನು "ಧರ್ಮ" ಗಳೆಂದು ಕರೆಯಬೇಕೆಂದು ನಿಮ್ಮ ಅಭಿಪ್ರಾಯ ವಿರಬಹುದು. ಹಾಗಾದರೆ, ಒಂದು ತೊಂದರೆಯುಂಟು. ನಾವು ನೂತನ ಆಚರಣೆ ಗಳನ್ನು ಕಲ್ಪಿಸಬಹುದು, ಆದರೆ ಅವು "ಧರ್ಮ" ಗಳೆಂದು ಕರೆಯಲ್ಪಡಲಾರವು. ಅಸ್ಪೃಶ್ಯರು ಇನ್ನು ಮೇಲೆ ಸ್ಪೃಶ್ಯರಾಗಲಿ ಎಂದು ನಾವು ಹೊಸ ಕಾನೂನುಗಳನ್ನು ನಿರ್ಮಾಣ ಮಾಡಿದರೆ ಅದು ಧರ್ಮವಾಗಲಾರದು. ಅದೃಷ್ಟದ್ವಾರಾ ಸುಖಜನಕ ವಾದ ವ್ಯಾಪಾರವಷ್ಟೇ ಧರ್ಮವು. ಅದು ವೇದೋಕ್ತವಾದ ವ್ಯಾಪಾರವೇ ಆಗುವುದು. ವೇದೋಕ್ತವಾದ "ಸತ್ಯಂ ವದ" ಇತ್ಯಾದಿ ಆಚರಣೆಗಳನ್ನು ಮಾಡಿ ದರೆ ಈಶ್ವರನು ಇಹಜನ್ಮದಲ್ಲಿ ಅಥವಾ ಮುಂದಿನ ಜನ್ಮದಲ್ಲಿ ಅಥವಾ ಉಭಯತ್ರವೂ ಸುಖವನ್ನು ಕೊಡುವನು. ಆದರೆ ಇನ್ನು ಮೇಲೆ ಅಸ್ಪೃಶ್ಯರ ಸ್ಪರ್ಶವು ಧರ್ಮವಾಗಲಿ ಎಂದು ನಾವು ಹೇಳಿದರೆ ಅಸ್ಪೃಶ್ಯರ ಸ್ಪರ್ಶವನ್ನು ನಿಮಿತ್ತ ಮಾಡಿ ಸುಖವನ್ನು ಎಂದಿಗೂ ಈಶ್ವರನು ಕೊಡುವದಿಲ್ಲ. ಆದುದರಿಂದ ನಾವು ಕಲ್ಪನೆ ಮಾಡುವ ಆಚರಣೆಯು ಅಧರ್ಮವೆನಿಸುವದು. ಆದುದರಿಂದ ಇಂಥ ಧರ್ಮ ಬದಲಾವಣೆಯು ಆಸ್ತಿಕರಿಗೆ ಸಮ್ಮತವಾಗಲಾರದು. ನಿಮ್ಮ ದೃಷ್ಟಾಂತವು ಸರಿಯಾದುದಲ್ಲ. ಯಜ್ಞದಲ್ಲಿ ಕೃತಾದಿ ಯುಗಗಳಲ್ಲಿಯೂ ಸಹ ಪಿಷ್ಟಪಶುವನ್ನೇ ಉಪಯೋಗಿಸುತ್ತಿದ್ದರೆಂದು ಪ್ರಮಾಣವಿರುತ್ತದೆ.

**ಪ್ರಶ್ನೆ—** ಶ್ರೀನಿವಾಸಾಚಾರ್ಯರು— ಸ್ವಾಮೀ ! ಯಜ್ಞದಲ್ಲಿ ಪಶುಹಿಂಸೆಯು ಸರ್ವಥಾ ವಿಹಿತವಲ್ಲವೆಂದು ಎಲ್ಲಿ ಹೇಳಿರುತ್ತದೆ ?

ಶ್ರೀ ಶ್ರೀಗಳವರು— ಈ ಪುರಾಣ ವಚನಗಳನ್ನು ಶ್ರವಣ ಮಾಡಿರಿ.

**ಸ್ಕಾಂದೇ—** ಋಷಯ ಊಚುಃ.
"ಅಹಿಂಸೈವ ಪರೋಧರ್ಮಸ್ತತ್ರ ವೇದೇಽಸ್ತಿ ಕೀರ್ತಿತಃ ।
ಸಾಕ್ಷಾತ್ಪಶುವಧೋ ಯಜ್ಞೇ ನಹಿ ವೇದಸ್ಯ ಸಂಮತಃ ॥

ಚತುಷ್ಪಾದಸ್ಯ ಧರ್ಮಸ್ಯ ಸ್ಥಾಪನೇ ಹ್ಯೇವ ಸರ್ವಥಾ ।
ತಾತ್ಪರ್ಯಮಸ್ತಿ ವೇದಸ್ಯ ನ ತು ನಾಶೇಽಸ್ಯ ಹಿಂಸಯಾ ॥
ರಜಸ್ತಮೋ ದೋಷವಶಾತ್ತಥಾಪ್ಯಸುರಪಾತ್ರಪಾಃ ।

ಮೇಧ್ಯೇನಾಜೇನ ಯಷ್ಟವ್ಯಮಿತ್ಯಾದೌ ಮತಿಜಾಡ್ಯತಃ ॥
ಛಾಗಾದಿಮರ್ಥಂ ಬುಬುಧುರ್ವ್ರೀಹ್ಯಾದಿಂತು ನ ತೇ ವಿದುಃ ।
ಸಾತ್ವಿಕಾನಾಂತು ಯುಷ್ಮಾಕಂ ವೇದಸ್ಯಾರ್ಥೋ ಯಥಾಸ್ಥಿತಃ ॥
ಗೃಹೀತವ್ಯೋಽನ್ಯಥಾ ನೈವ ತಾದೃಶೀಕ್ರಿಯೋಚಿತಾ ।
ಯಾದೃಶೋಹಿ ಗುಣೋ ಯಸ್ಯ ಸ್ವಭಾವಸ್ತಸ್ಯ ತಾದೃಶಃ ॥
ಸ್ವಸ್ವಭಾವಾನುಸಾರೇಣ ಪ್ರವೃತ್ತಿಸ್ಸ್ಯಾಚ್ಚ ಕರ್ಮಣಿ ।
ಸಾತ್ವಿಕಾನಾಂ ಹಿ ವೋ ದೇವಃ ಸಾಕ್ಷಾದ್ವಿಷ್ಣೂ ರಮಾಪತಿಃ ॥
ಅಹಿಂಸಯಜ್ಞೋಽಸ್ತಿ ತತೋಽಧಿಕಾರಸ್ತಸ್ಯತುಷ್ಟಯೇ ।
ಪ್ರತ್ಯಕ್ಷಪಶುಮಾಲಭ್ಯ ಯಜ್ಞಸ್ಯಾಚರಣಂ ತು ಯತ್ ॥
ಧರ್ಮಸ್ಸವಿಪರೀತೋ ವೈ ಯುಷ್ಮಾಕಂ ಸುರಸತ್ತಮಾಃ ।
ತಸ್ಮಾದ್ವ್ರೀಹಿಭಿರೇವಾಸೌ ಯಜ್ಞಃ ಕ್ಷೀರೇಣ ಸರ್ಪಿಷಾ ॥
ಮೇಧ್ಯೈರನ್ನರಸೈಶ್ಚಾನ್ಯೈಃ ಕಾರ್ಯೋ ನ ಪಶುಹಿಂಸಯಾ ।
ತತ್ರಾಪಿ ಬೀಜೈರ್ಯಷ್ಟವ್ಯಮಜಸಂಜ್ಞಾ ಮುಪಾಗತೈಃ ॥
ತ್ರಿವರ್ಷಕಾಲಮುಷಿತೈರ್ನ ಯೇಷಾಂ ಪುನರುದ್ಭವಃ ॥ "

ದೇವತೆಗಳಿಗೂ ಋಷಿಗಳಿಗೂ ಯಜ್ಞವಿಧಾನ ವಿಷಯದಲ್ಲಿ ವಿವಾದವು ನಡೆಯಿತು. ದೇವತೆಗಳು ಸಾಕ್ಷಾತ್ಪಶುಹಿಂಸನದಿಂದಲೇ ಯಜ್ಞವನ್ನು ಮಾಡ ಬೇಕೆಂದೂ ಋಷಿಗಳು "ವ್ರೀಹಿ" ನಿಷ್ಪನ್ನವಾದ ಪಿಷ್ಟಪಶುವಿನಿಂದ ಯಜ್ಞವನ್ನು ನೆರವೇರಿಸುವದೇ ವೇದಕ್ಕೆ ಸಮ್ಮತವೆಂದೂ ವಾದಿಸಿದರು, ಕೊನೆಗೆ ಋಷಿಗಳ ಪಕ್ಷವೇ ಜಯಿಸಿತು. ಋಷಿಗಳು ದೇವತೆಗಳನ್ನು ಕುರಿತು ಹೇಳುತ್ತಾರೆ—

"ಎಲೈ ದೇವತೆಗಳಿರಾ! ಅಹಿಂಸೆಯೇ ಪರಮಧರ್ಮವೆಂದು ವೇದವು ಹೇಳುತ್ತದೆ. ಯಜ್ಞದಲ್ಲಿ ಸಾಕ್ಷಾತ್ಪಶುವಧವು ವೇದಕ್ಕೆ ಸಮ್ಮತವಲ್ಲ. ನಾಲ್ಕು ಪಾದಗಳುಳ್ಳ ಧರ್ಮವನ್ನು ಸ್ಥಾಪನೆ ಮಾಡುವದರಲ್ಲಿಯೇ ವೇದಕ್ಕೆ ತಾತ್ಪರ್ಯವಿರುತ್ತದೆಯೇ ವಿನಹ ಪಶುಹಿಂಸೆಯಿಂದ ಅದನ್ನು ನಾಶ ಮಾಡಬೇಕೆಂದಿರುವದಿಲ್ಲ. ಹೀಗಿದ್ದರೂ ರಜಸ್ತಮೋ ದೋಷವಶದಿಂದ ಅಸುರಾದಿಗಳು ಪವಿತ್ರವಾದ ಅಜವೇ ಯಜ್ಞಾರ್ಹವು; ಆದುದರಿಂದಲೇ ಯಾಗಮಾಡಬೇಕೆಂದು ಅರ್ಥವುಳ್ಳ "ಮೇಧ್ಯೇನಾಜೇನ ಯಷ್ಟವ್ಯಂ" ಇತ್ಯಾದಿ ವೇದವಾಕ್ಯಗಳಲ್ಲಿ ತಮ್ಮ ಮತಿಜಾಡ್ಯದಿಂದ (ಬುದ್ಧಿಮಾಂದ್ಯದಿಂದ) 'ಅಜ' ಎಂಬ ಪದಕ್ಕೆ ಆಡು ಎಂದು ಅರ್ಥ ಮಾಡಿದರು; "ವ್ರೀಹಿ" ಎಂಬ ಅರ್ಥವನ್ನು ತಿಳಿಯಲಿಲ್ಲ. ಸಾತ್ವಿಕರಾದ ನೀವುಗಳಾದರೋ ವೇದದ ಯಥಾಸ್ಥಿತವಾದ ಅರ್ಥ ವನ್ನು ಪರಿಗ್ರಹಿಸಬೇಕು. ಅಲ್ಲದೇ ಅಸುರಾದಿಗಳಂತೆ ಕರ್ಮ ಮಾಡುವದು ಉಚಿತ ವಲ್ಲ. ಎಂಥ (ಸಾತ್ವಿಕಾದಿ) ಗುಣಗಳಿಂದ ಪುರುಷನು ಯುಕ್ತನಾಗಿರುವನೋ ಅವನ ಸ್ವಭಾವವು ಅಂಥದೇ ಇರುವದು. ಸ್ವಭಾವಾನುಸಾರವಾಗಿ ಕರ್ಮದಲ್ಲಿ ಪ್ರವೃತ್ತಿ

ಯುಂಟಾಗುವದು. ಎಲೈ ದೇವತೆಗಳಿರಾ, ಸಾತ್ವಿಕರಾದ ನಿಮಗೆ ರಮಾಪತಿಯಾದ ಸಾಕ್ಷಾದ್ವಿಷ್ಣುವೇ ದೇವತೆಯು. ಆದುದರಿಂದಲೇ ಆತನ ಪ್ರೀತ್ಯರ್ಥವಾಗಿ ಅಹಿಂಸ (ಪಶುವಧೆಯಿಂದ ರಹಿತವಾದ) ಯಜ್ಞದಲ್ಲಿಯೇ ನಿಮಗೆ ಅಧಿಕಾರವು. ಎಲೈ ಸುರಶ್ರೇಷ್ಠರೇ, ಪ್ರತ್ಯಕ್ಷ ಪಶುವನ್ನು ಸಂಹಾರಮಾಡಿ ಯಜ್ಞವನ್ನು ಆಚರಿಸುವದು ನಿಮಗೆ ವಿಪರೀತ ಧರ್ಮವೇ ಸರಿ. ಅದುದರಿಂದ "ವ್ರೀಹಿ" (ಧಾನ್ಯ) ಗಳಿಂದಲೂ, ಕ್ಷೀರ, ತುಪ್ಪ ಮತ್ತು ಇತರ ಪವಿತ್ರವಾದ ಅನ್ನರಸಗಳಿಂದಲೂ ಯಾಗವನ್ನು ಮಾಡಬೇಕು. ಪಶುಹಿಂಸೆಯಿಂದ ಮಾಡಕೂಡದು, ಅದರಲ್ಲಿಯೂ ಮೂರು ವರ್ಷ, ಹಾಗೇ ಇಟ್ಟಿದ್ದ ಗದ್ದೆಯಲ್ಲಿ ನೆಟ್ಟರೆ ಅಂಕುರವಾಗುವ ಸಾಮರ್ಥ್ಯ ರಹಿತವಾದ ಅತ ಏವ "ಅಜ" (ಅಂಕುರವಾಗಿ ಇರುವದು) ಎಂದು ಹೆಸರುಳ್ಳ ಧಾನ್ಯದ ಬೀಜಗಳಿಂದಲೇ ಯಾಗ ಮಾಡಬೇಕು."

ವಾಮನಶಾಸ್ತ್ರಿಗಳಿಂದ ವಿರಚಿತವಾದ "ಪಶ್ವಾಲಂಭಮೀಮಾಂಸಾ" ಗ್ರಂಥದಲ್ಲಿರುವ ಪ್ರಮಾಣವಾಕ್ಯಗಳಿಂದಲೂ ಇದೇ ಸಮಾಧಾನವು ಬರುವದು. ಅವರು

"ತಸ್ಯ ತೇನಾನುಭಾವೇನ ಮೃಗಹಿಂಸಾತ್ಮನಸ್ತದಾ ।
ತಪೋ ಮಹತ್ಸಮುತ್ಸನ್ನಂ ತಸ್ಮಾದ್ಧಿಂಸಾ ನ ಯಾಜ್ಞಿಯಾ ॥"

ಇತ್ಯಾದಿ ಪ್ರಮಾಣಗಳನ್ನು ಉದಾಹರಿಸಿ ತಮ್ಮ ಟಿಪ್ಪಣಿಯಲ್ಲಿ ಬರೆದಿರುತ್ತಾರೆ—"ಯಾಜ್ಞಿಯಾಪಿ ಹಿಂಸಾ ನ ಕೇವಲಂ ಧರ್ಮಾಯೇತ್ಯರ್ಥಃ । ಏವಂಚೌಷಧೇಯಜ್ಞ ಏವ ಸಾತ್ವಿಕಬ್ರಾಹ್ಮಣಸ್ಯಾಧಿಕಾರಃ ॥" ಇದರ ಅರ್ಥವು—ಯಜ್ಞದಲ್ಲಿ ಮಾಡುವ ಹಿಂಸೆಯೂ ಕೂಡ ಕೇವಲ ಧರ್ಮಜನಕವಲ್ಲವೆಂದರ್ಥವು ಹೀಗೆ ವ್ರೀಹಿಗಳಿಂದ ಮಾಡಿದ ಯಜ್ಞದಲ್ಲಿಯೇ ಸಾತ್ವಿಕಬ್ರಾಹ್ಮಣನಿಗೆ ಅಧಿಕಾರವು. ನಂತರ ಶಾಸ್ತ್ರಿಗಳು ಈ ಕೆಳಗೆ ಕಂಡ ಮೂರು ಪ್ರಮಾಣಗಳನ್ನು ಉದಾಹರಿಸುತ್ತಾರೆ.

**ವನಪರ್ವಣಿ ಜಾಜಲಿಸಂವಾದೇ :—**

"ನಮೋ ಬ್ರಾಹ್ಮಣಯಜ್ಞಾಯ ಯೇ ಚ ಯಜ್ಞವಿದೋ ಜನಾಃ ।
ಸ್ವಯಜ್ಞಂ ಬ್ರಾಹ್ಮಣಾ ಹಿತ್ವಾ ಕ್ಷತ್ರಯಜ್ಞಮಿಹಾಸ್ಥಿತಾಃ ॥
ಯದೇವ ಸುಕೃತಂ ಹವ್ಯಂ ತೇನ ತುಷ್ಯಂತಿ ದೇವತಾಃ ।
ನಮಸ್ಕಾರೇಣ ಹವಿಷಾ ಸ್ವಾಧ್ಯಾಯೈರೌಷಧೈಸ್ತಥಾ ॥

ಮತ್ತು **ಮೋಕ್ಷಧರ್ಮೇ:—**

"ಅವ್ಯವಸ್ಥಿತಮರ್ಯಾದೈರ್ವಿಮೂಢೈರ್ನಾಸ್ತಿಕೈಃ ಪರೈಃ
ಸಂಶಯಾತ್ಮಭಿರವ್ಯಕ್ತೈರ್ಹಿಂಸಾ ಸಮನುವರ್ಣಿತಾ ।
ಸರ್ವಕರ್ಮಸ್ವಹಿಂಸಾಂ ಹಿ ಧರ್ಮಾತ್ಮಾ ಮನುರಬ್ರವೀತ್ ।
ಕಾಮಕಾರಾದ್ವಿಹಿಂಸಂತಿ ಬಹಿರ್ವೇದ್ಯಾಂ ಪಶೂನ್ ಯಥಾ"
ಇತಿ ಹಿಂಸಾಯುಕ್ತಯಜ್ಞನಿಂದಾಪೂರ್ವಕಂ

"ವಿಷ್ಣುಮೇವಾಭಿಜಾನಂತಿ **ಸರ್ವಯಾಗೇಷು ಬ್ರಾಹ್ಮಣಾಃ** ।
ಪಾಯಸೈಃ ಸುಮನೋಭಿಶ್ಚ ತಸ್ಯಾಪಿ ಯಜನಂ ಸ್ಮೃತಂ ॥

ಇತಿವಾಕ್ಯಾಚ್ಚ

ಇದರ ಅರ್ಥವು— "ಬ್ರಾಹ್ಮಣ ಯಜ್ಞಕ್ಕೆ ನಮಸ್ಕಾರವು; ಮತ್ತು ಯಜ್ಞಕೋವಿದರಾದ ಜನರಿಗೂ ನಮಸ್ಕಾರವು ಬ್ರಾಹ್ಮಣರು ತಮ್ಮ **ಯಜ್ಞವನ್ನು** ತ್ಯಾಗಮಾಡಿ ಕ್ಷತ್ರಯಜ್ಞವನ್ನು (ಪಶುವಧೆಯಿಂದ ಯುಕ್ತವಾದ) ಈಗ ಆರಂಭಿಸಿದರು. ಸುಕೃತರೂಪವಾದ ಹವ್ಯದಿಂದಲೂ, **ಔಷಧ** (ವ್ರೀಹಿ)ಗಳಿಂದಲೂ ದೇವತೆಗಳು ಸಂತೋಷಪಡುತ್ತಾರೆ" ಮತ್ತು ಮೋಕ್ಷಧರ್ಮದಲ್ಲಿ ಹೀಗೆ ಹೇಳಿದೆ—"ವ್ಯವಸ್ಥಿತವಾದ (ವೇದದ) ಮರ್ಯಾದೆಯನ್ನು ಮೀರಿದಂಥ, ವಿಮೂಢರಾದ, ನಾಸ್ತಿಕರಾದ ಕೆಲವು ಅಸಜ್ಜನರಿಂದ ಹಿಂಸೆಯು ವೇದವಿಹಿತವೆಂದು ವರ್ಣಿತವಾಗಿರುವದು. ಧರ್ಮಾತ್ಮನಾದ ಮನುವಾದರೋ **ಸರ್ವ ಕರ್ಮಗಳಲ್ಲೂ** ಅಹಿಂಸೆಯೇ ಧರ್ಮವೆಂದು ಹೇಳಿರುತ್ತಾನೆ. ಹೀಗಿದ್ದರೂ ಯಜ್ಞವೇದಿಯಲ್ಲಿಯೂ ಕೂಡ, ಹೊರಗಡೆ (ಕಟುಕರ ಮನೆಯಲ್ಲಿ) ಪಶುಗಳನ್ನು ಹೇಗೋ ಹಾಗೆಯೇ ಸಂಹಾರಮಾಡುತ್ತಾರೆ" ಈ ರೀತಿ ಪಶುಹಿಂಸಾಪೂರ್ವಕವಾದ ಯಜ್ಞನಿಂದೆಯನ್ನು ಮಾಡಿ ಮೋಕ್ಷಧರ್ಮದಲ್ಲಿ ಪುನಃ ಹೀಗೆ ಹೇಳಿದೆ. "ಸರ್ವ ಯಾಗಗಳಲ್ಲೂ ಬ್ರಾಹ್ಮಣರು ವಿಷ್ಣುವನ್ನೇ ಉದ್ದೇಶಮಾಡಿ ಪಾಯಸಗಳಿಂದಲೂ ಪುಷ್ಪಗಳಿಂದಲೂ ಯಜ್ಞಮಾಡುತ್ತಾರೆ."

ವಾಮನಶಾಸ್ತ್ರಿಗಳು ಈ ರೀತಿ ಪ್ರಮಾಣಗಳನ್ನು ಬರೆದು **ನೀಲಕಂಠ** ವ್ಯಾಖ್ಯಾನದ ವಾಕ್ಯಗಳನ್ನು ಉದಾಹರಿಸುತ್ತಾರೆ "ಅತಏವ ನೀಲಕಂಠ ಸುಧಿಯಾ ಭಾರತಭಾವದೀಪೇ ನಾಸ್ತಿಕೈರಿತಿಸಂಶಯಾತ್ಮಭಿರಿತಿ ಚ ಪದಯೋರ್ನಾಸ್ತಿ ಬ್ರಹ್ಮೇತಿ ವದದ್ಭಿಃ; ಆತ್ಮಾದೇಹೋಽನ್ಯೋವಾ ಅನ್ಯೋಪಿ ಕರ್ತಾ, ಅಕರ್ತಾವಾ ಇತ್ಯಾದಿ ರೂಪಃ ಸಂಶಯಸ್ತದ್ವಾನಾತ್ಮಾಚಿತ್ತಂ ಯೇಷಾಂ ತೈರಿತಿ ಯಥಾಕ್ರಮಂ ವಿವರಣಂ ಕೃತಂ। ಏವಂ ಚಾಜ್ಞಾನಿನಾಂ ಕರ್ಮವಿಹಿತಮಿತಿಸಿದ್ಧಂ ಭವತೀತಿ ನಾಸ್ತಿಕೈರಿತಿಪದಂ ನಾಸ್ತಿಕಾನುದ್ದಿಶ್ಯೇತಿ ತ್ವಯೈವ (ಪೂರ್ವಪಕ್ಷಿಣಾ) ವ್ಯಾಖ್ಯಾತತ್ವಾದ್ಬ್ರಹ್ಮಾಸ್ತಿತ್ವಾದ್ಯಜ್ಞಾನವಂತ ಏವ ಕರ್ಮಸು ಅಧಿಕೃತಾ ಇತ್ಯೇವಾಸ್ಮಾಕಮಪಿ ಸಿದ್ಧಾಂತಃ." ಇದರ ಫಲಿತಾರ್ಥವು—"ಈರೀತಿಯಾಗಿ ಬ್ರಹ್ಮನು ಇದ್ದಾನೆಂದು ಸರ್ವದಾ ತಿಳಿಯದ ಅಜ್ಞಾನಿಗಳಿಗೇ ಕರ್ಮಗಳಲ್ಲಿ (ಪಶು ಹಿಂಸೆಯಲ್ಲಿ) ಅಧಿಕಾರವೆಂದು ನಮ್ಮ (ಅದ್ವೈತಿಗಳ) ಸಿದ್ಧಾಂತವು."

ಈ ವಾಕ್ಯಗಳ ಪರ್ಯಾಲೋಚನೆಯಿಂದ **ಬ್ರಾಹ್ಮಣರಿಗೆ** ಯಜ್ಞದಲ್ಲಿ ಪಶು ಹಿಂಸನವು ಉಚಿತವಲ್ಲವೆಂದೂ ಮತ್ತು ವೇದಮರ್ಯಾದೆಯನ್ನು ಮೀರಿದ ಬ್ರಹ್ಮನೇ ಇಲ್ಲವೆನ್ನುವ ನಾಸ್ತಿಕರಿಗೂ ದೇಹವೇ ಆತ್ಮನೋ ಏನೋ ಎಂಬ

ಸಂಶಯಗ್ರಸ್ತವಾದ ಚಿತ್ತವುಳ್ಳವರಿಗೂ ಪಶುಹಿಂಸೆಯು ವಿಹಿತವೆಂದೂ ವಾಮನ ಶಾಸ್ತ್ರಿಗಳಿಗೆ ಸಮ್ಮತವಾಗಿರುವಂತೆ ತೋರುತ್ತದೆ. ಅಷ್ಟೇ ಅಲ್ಲ "ಇತ್ಯೇವಾಸ್ಮಾಕಮಪಿಸಿದ್ಧಾಂತಃ, " ಎಂದರೆ ನಮ್ಮ ಅದ್ವೈತಸಿದ್ಧಾಂತವೂ ಹಾಗೇಯೇ ಸರಿ! ಎಂದು ಬರೆದಿರುತ್ತಾರೆ. ಈಗ ವಿವಾದವು ಇಷ್ಟರಲ್ಲಿ ಪರ್ಯವಸಿತವಾಯಿತು. ವೈಷ್ಣವರು ಯಜ್ಞದಲ್ಲಿ ಸಾಕ್ಷಾತ್ ಪಶುಹಿಂಸೆಯು ಬ್ರಾಹ್ಮಣರಿಗೆ ವಿಹಿತವಲ್ಲವೆಂದು ಹೇಳಿದರು ಅದ್ವೈತಿಗಳು, ಬ್ರಹ್ಮನೇ ಇಲ್ಲವೆನ್ನುವ ನಾಸ್ತಿಕರಿಗೂ ದೇಹವೇ ಆತ್ಮವೋ ಏನೋ ಎಂಬ ಸಂಶಯಾತ್ಮಕಚಿತ್ತವುಳ್ಳವರಿಗೂ ಸಾಕ್ಷಾತ್ಪಶುಯಜ್ಞದಲ್ಲಿ ಅಧಿಕಾರವೆಂದು ಒಪ್ಪಿಕೊಂಡರು. ಈ ತೀರ್ಮಾನವನ್ನು ವೈಷ್ಣವರು ಯಾವ ರೀತಿಯಿಂದಲೂ ಪ್ರತಿಭಟಿಸಲು ಇಚ್ಛಿಸಲಾರರು. ಮುಮುಕ್ಷುವಾದ ಸಾತ್ವಿಕ ಬ್ರಾಹ್ಮಣಶಿಖಾಮಣಿಯು ಸಾಕ್ಷಾತ್ಪಶುವಿನಿಂದ ಯಜ್ಞವನ್ನು ಆಚರಿಸಬೇಕೆಂದು ಶಾಸ್ತ್ರಗಳು ಸಿದ್ಧಾಂತಮಾಡಿದ್ದರೆ, ವೈಷ್ಣವರು ಪ್ರತಿಯುಕ್ತಿಗಳಿಂದ ಆ ಪಕ್ಷವನ್ನು ಖಂಡನೆಮಾಡಬೇಕಾಗಿತ್ತು. "ನಾಸ್ತಿಕರು" "ವಿಮೂಢರು" "ಸಂಶಯಾತ್ಮರು" ಇವರೇ ಮುಂತಾದವರು ಸಾಕ್ಷಾತ್ಪಶುಯಜ್ಞದಲ್ಲಿ ಅಧಿಕಾರಿಗಳೆಂಬ ನಿರ್ಣಯವು ಅವರಿಗೂ ಸಮ್ಮತವೇ ಸರಿ. ಆದುದರಿಂದ ದೇವತೆಗಳ ಕುಲದೇವತೆಯಾದ ವಿಷ್ಣುವು, ಸಾತ್ವಿಕವಾದ ಪಶುಹಿಂಸಾರಹಿತವಾದ "ಅಜ" ಎಂಬ ಹೆಸರುಳ್ಳ ವ್ರೀಹಿಗಳಿಂದ ಮಾಡಿದ ಪಿಷ್ಟಪಶುಹೋಮದಿಂದಲೇ ಸಂತೃಪ್ತನಾಗಿ ಭಕ್ತರಿಗೆ ಜ್ಞಾನರೂಪವಾದ ಭಾಗ್ಯವನ್ನು ದಯಪಾಲಿಸುವನೆಂಬುದು ಸಿದ್ಧವು.



## XI

ತಾ. 2-7-1930 ರಲ್ಲಿ

**ಪ್ರಾಶ್ನಿಕರು—H. ಸುಬ್ಬರಾಯರು M. A.**
**V. ಸೇತುರಾಯರು Maharaja's College.**
**ನಾಗೇಶರಾಯರು**

---

೧ **ಪ್ರಶ್ನೆ**— ನಾಗೇಶರಾಯರು— ಮಹಾಸ್ವಾಮೀ! ಜಗತ್ತು ಕ್ಷಣಭಂಗುರವು; ಇಹಲೋಕದ ಸುಖವು ಕ್ಷಣಿಕವು ಎಂದು ಶಾಸ್ತ್ರಜ್ಞರು ಹೇಳುತ್ತಾರೆ. ಈ ವಿಷಯದಲ್ಲಿ ಪ್ರಮಾಣವೇನು?

**ಉತ್ತರ— ಶ್ರೀ ಶ್ರೀಗಳವರು—**"ಸರ್ವೇ ಅರ್ಥಕಾಮಾಃ ಕ್ಷಣ ಭಂಗುರಾಯುಷಃ। ಕುರ್ವಂತಿ ಮರ್ತ್ಯಸ್ಯ ಕಿಯತ್ಪ್ರಿಯಂ ಚಲಾಃ।"
ಎಂಬ ಸ್ಮೃತಿಯು ಪ್ರಮಾಣವು. ಪರಂತು ಕಣ್ಣಿಂದ ನೋಡುವದಕ್ಕೆ ಕನ್ನಡಿ

ಬೇಕೇ ? ಜಗತ್ತು ಅನಿತ್ಯವು ಎಂಬದು ಪ್ರತ್ಯಕ್ಷ ವೇದ್ಯವು. ಎಷ್ಟೋ ಜನರ ಧನವು ನಾಶವಾಗಿರುವದು. ಕೆಲವರಿಗೆ ಕುಟುಂಬನಾಶವು. ಕೆಲವರಿಗೆ ಪುತ್ರ ಮಿತ್ರಾದಿ ನಾಶವು. ಇನ್ನು ಕೆಲವರಿಗೆ ಬಂಧುಮರಣವೂ ಆಗುತ್ತಿರುವದನ್ನು ನಾವು ಪ್ರತಿದಿನವೂ ನೋಡುತ್ತಲೇ ಇದ್ದೇವೆ. "ಪ್ರಪಾಯಾಮಿವಸಂಗಮಃ" ಎಂದು ಹೇಳಿರುವಂತೆ, ಅಥವಾ ಸಂತೆಯಲ್ಲಿ ನಾನಾ ವ್ಯಾಪಾರಿಗಳು ಸೇರುವಂತೆ ಈ ಭೂಲೋಕದಲ್ಲಿ ನಾನಾ ಕರ್ಮಗಳಿಂದ ಯುಕ್ತರಾಗಿ ನಾವೆಲ್ಲರೂ ಸೇರಿದ್ದೇವೆ. ವ್ಯಾಪಾರದ ನಂತರ, ಸಂತೆಯ ಜನರು ನಾನಾ ದಿಕ್ಕಿಗೆ ಚದರಿ ಹೋಗುವಂತೆ ಒಬ್ಬೊಬ್ಬರೂ ಬಂಧುಮಿತ್ರಾದಿಗಳನ್ನು ಬಿಟ್ಟು, ಸ್ವಕರ್ಮಾರ್ಜಿತ ನಾನಾಲೋಕ ಗಳಿಗೆ ಹೊರಟು ಹೋಗುತ್ತಾರೆ. ಯಾರಿಗೆ ಯಾರಿಂದಲೂ ನಿಜವಾದ ಸಂಬಂಧವಿಲ್ಲ. ಮರಣಾನಂತರದಲ್ಲಿ ಇಹಲೋಕದ ಸಂಪತ್ತು ಮೊದಲಾದ ಯಾವ ಭಾಗ್ಯವೂ ನಮ್ಮನ್ನು ಅನುಸರಿಸಲಾರದು. ಆದುದರಿಂದಲೇ ಅನಿತ್ಯವಾದ ಧನದಾರಾಪುತ್ರ ಮಿತ್ರಾದಿಗಳಲ್ಲಿ ಆಶೆ ಇಡಬಾರದೆಂದು ಶಾಸ್ತ್ರಜ್ಞರು ಹೇಳುತ್ತಾರೆ.

೨ **ಪ್ರಶ್ನೆ**— ಸ್ವಾಮೀ ! ಎಷ್ಟೋ ಜನರು ಸಾಯುವವರೆಗೂ ಕುಟುಂಬ ಸಮೇತರಾಗಿಯೇ ಇರುತ್ತಾರೆ. ಕೆಲವರ ದ್ರವ್ಯವು ನಾಶವಾಗುವದಿಲ್ಲ. ಹೀಗಿರು ವಲ್ಲಿ ಇವುಗಳನ್ನು ಹೇಗೆ ಕ್ಷಣಿಕಗಳೆಂದು ಕರೆಯುವದು ?

**ಉತ್ತರ**—ಶ್ರೀ ಶ್ರೀಗಳವರು— ಮರಣಾನಂತರ ನಮ್ಮ ಸಂಗಡ ಬರದೇ ಇರುವದರಿಂದ ಇವೆಲ್ಲವೂ ಅನಿತ್ಯವೇ ಸರಿ.

೨ **ಪ್ರಶ್ನೆ**—ಹಾಗಾದರೆ ಮರಣಾನಂತರ ಯಾವದು ಜೀವನನ್ನು ಅನುವರ್ತಿ ಸುವದು ?

**ಉತ್ತರ**—"ಧನಾನಿ ಭೂಮೌ ಪಶವಶ್ಚ ಗೋಷ್ಠೇ ಭಾರ್ಯಾ ಗೃಹದ್ವಾರಿ ಸುತಃ ಸ್ಮಶಾನೇ । ದೇಹಶ್ಚಿತಾಯಾಂ ಪರಲೋಕಮಾರ್ಗೇ ಕರ್ಮಾನುಗೋ ಗಚ್ಛತಿ ಜೀವ ಏಕಃ ॥"

ಮತ್ತು "ಬಾಂಧವಾ ವಿಮುಖಾ ಯಾಂತಿ ಧರ್ಮಸ್ತಮನುಗಚ್ಛತಿ" ಎಂದು ಹೇಳಿರುವದರಿಂದ ನಮ್ಮ ಪುಣ್ಯಪಾಪಗಳೂ, ಜ್ಞಾನಾಜ್ಞಾನಗಳೂ, ನಮ್ಮ ಸಂಗಡ ಬರುತ್ತವೆ.

೪ **ಪ್ರಶ್ನೆ**—ಸುಬ್ಬರಾಯರು—ಸ್ವಾಮೀ ! ಸರ್ವನಾಶಕವಾದ ಮರಣವಾದ ಮೇಲೆ ಇವು ಹೇಗೆ ಜೀವನನ್ನು ಅನುವರ್ತಿಸುವವು ?

**ಉತ್ತರ**— ಶ್ರೀ ಶ್ರೀಗಳವರು — "ತದಂತರಪ್ರತಿಪತ್ತೌ ರಂಹತಿಸಂಪರಿಷ್ವಕ್ತಃ ಪ್ರಶ್ನನಿರೂಪಣಾಭ್ಯಾಂ" "ಪ್ರಾಣಗತೇಶ್ಚ" ಮುಂತಾದ ಸೂತ್ರಗಳಲ್ಲಿ ಜೀವನ ಅಂತಃಕರಣವೂ, ಇಂದ್ರಿಯಗಳ ಸೂಕ್ಷ್ಮಭಾಗಗಳೂ, ಮರಣಾನಂತರದಲ್ಲಿಯೂ ಸಹ ಜೀವನನ್ನು ಅನುವರ್ತಿಸುವವು ಎಂದು ಶಾಸ್ತ್ರಕಾರರು ನಿರ್ಣಯಿಸಿರುತ್ತಾರೆ.

ಜೀವನು ತನ್ನ ಜೊತೆಯ.ಲ್ಲಿ ತೆಗೆದುಕೊಂಡು ಹೋದ ಪುಣ್ಯ ಪಾಪಾನುಸಾರವಾಗಿ ಲೋಕಾಂತರಗಳನ್ನು ಹೊಂದುತ್ತಾನೆ. ಆದರಲ್ಲಿಯೂ ಜ್ಞಾನಿಯೇ ಉತ್ತಮ ಲೋಕಗಳನ್ನೂ, ಪಾಪಿಯು ಅಧೋಲೋಕವನ್ನೂ ಹೊಂದುತ್ತಾನೆ.

೫ ಪ್ರಶ್ನೆ—ಸುಬ್ಬರಾಯರು—ಸ್ವಾಮೀ ! ನಮ್ಮ ಜ್ಞಾನವು ನಮ್ಮ ಸಂಗಡವೇ ಬರುವದಷ್ಟೇ ! ಈ ಜ್ಞಾನವು ಯಥಾರ್ಥವಾದರೆ ಉತ್ತಮಲೋಕವೂ, ಅಯಥಾರ್ಥವಾದರೆ ನರಕಾದಿಗಳೂ ಆಗುವದಕ್ಕೆ ಕಾರಣವೇನು ? ಮಣ್ಣಿನ ಸ್ತಂಭವನ್ನು ನೋಡಿ ಇದು ಬೆಳ್ಳಿಯದೆಂದು ತಿಳಿದರೆ ಏನು ಪಾಪವು ?

**ಉತ್ತರ**— ಶ್ರೀ ಶ್ರೀಗಳವರು—ಸ್ತಂಭವನ್ನು ಬೆಳ್ಳಿಯಿಂದ ಮಾಡಿದ್ದೆಂದು ತಿಳಿದರೆ ಪ್ರಭುಗಳು ಕೋಪಿಸಿಕೊಳ್ಳಲಾರರು. ಆದರೆ ನೀನು ಮಹಾರಾಜರ ಮನೆಯಲ್ಲಿ ವಾಸಮಾಡುತ್ತಿದ್ದು, ಇದು ನನ್ನ ಮನೆಯು ಎಂಬ ಜ್ಞಾನವುಳ್ಳವನಾದರೆ, ನೀನು ಒಂದಾನೊಂದು ದಿನ ಕಾರಾಗೃಹಕ್ಕೆ ಹೋಗುವದರಲ್ಲಿ ಸಂದೇಹವಿಲ್ಲ. ಹೀಗೆಯೇ ಈಶ್ವರನ ಸರ್ವೋತ್ತಮತ್ವವನ್ನು ತಿಳಿಯದೆ ಅವನ ಗುಣೋತ್ಕರ್ಷಕ್ಕೆ ನ್ಯೂನತಾಸಂಪಾದಕವಾದ ನಾನೇ ಈಶ್ವರನು ಎಂಬ ಜ್ಞಾನವುಳ್ಳವನಾದರೆ, ಈಶ್ವರನ ಕೋಪಕ್ಕೆ ಪಾತ್ರನಾಗಿ ನರಕಾದ್ಯನರ್ಥಗಳನ್ನು ಅನುಭವಿಸಬೇಕಾಗುವದು. ಜ್ಞಾನವು ಜನ್ಮಜನ್ಮಾಂತರದಲ್ಲಿಯೂ ನಮ್ಮ ಸಂಗಡ ಬರುವದರಿಂದ ಸಮೀಚೀನವಾದ ತತ್ವಜ್ಞಾನವನ್ನು ಗುರುಸೇವಾದಿಗಳಿಂದ ಅವಶ್ಯವಾಗಿಯೂ ಸಂಪಾದಿಸಬೇಕು, ಇದೇ ವಿಷಯವನ್ನು ಶ್ರೀಕೃಷ್ಣನು "ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ । ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ವದರ್ಶಿನಃ ॥" ಎಂಬ ಶ್ಲೋಕದಲ್ಲಿ ಹೇಳಿರುತ್ತಾನೆ.

೬ ಪ್ರಶ್ನೆ—ಸುಬ್ಬರಾಯರು—ಸ್ವಾಮೀ ! ಜ್ಞಾನವು ಜನ್ಮಾಂತರದಲ್ಲಿಯೂ ಅನುವರ್ತಿಸಿಕೊಂಡು ಬರುತ್ತದೆ ಎಂಬಲ್ಲಿ ಪ್ರಮಾಣವೇನು ?

**ಉತ್ತರ**—ಶ್ರೀ ಶ್ರೀಗಳವರು—"ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ । ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಂ ॥" ಎಂದು ಶ್ರೀಕೃಷ್ಣನು ಹೇಳಿರುತ್ತಾನೆ. ಯೋಗಭ್ರಷ್ಟನು ಜನ್ಮಾಂತರದಲ್ಲಿ ಉತ್ತಮವಾದ ವೇದೋಕ್ತಕರ್ಮಾನುಷ್ಠಾನ ಮಾಡುವ ಶ್ರೀಮಂತರ ಕುಲದಲ್ಲಿ ಉತ್ಪನ್ನನಾಗಿ, ತನ್ನ ಪೂರ್ವಜನ್ಮದ ಜ್ಞಾನವನ್ನು ಕ್ಷಿಪ್ರದಲ್ಲಿಯೇ ಹೊಂದುತ್ತಾನೆ;ಎಂದು ಹೇಳಿರುವದರಿಂದ ನೀವೆಲ್ಲರೂ ಜ್ಞಾನಾರ್ಥವಾಗಿ ಪ್ರಯತ್ನ ಮಾಡಬೇಕು. ಲೋಕದಲ್ಲಿ ಜನರಿಗಿರುವ ಜ್ಞಾನವೈಚಿತ್ರ್ಯಕ್ಕೂ,ತಾರತಮ್ಯಕ್ಕೂ ಜನ್ಮಾಂತರದ ಸಂಸ್ಕಾರವೇ ಕಾರಣವು.

೭ ಪ್ರಶ್ನೆ—ಸ್ವಾಮೀ ! ಯಾವ ಜ್ಞಾನವು ಉತ್ತಮಲೋಕಪ್ರದವು ?

**ಉತ್ತರ**—ಶ್ರೀ ಶ್ರೀಗಳವರು— " ಊರ್ಧ್ವಂ ಗಚ್ಛಂತಿ ಸತ್ವಸ್ಥಾಃ " ಎಂದು ಇರುವದರಿಂದ ಸಾತ್ವಿಕವಾದ ತತ್ವಜ್ಞಾನವನ್ನು ವೇದಾದಿಶಾಸ್ತ್ರಗಳಿಂದಲೂ ಶ್ರೀಕೃಷ್ಣ ಗೀತೆಯ ಅಭ್ಯಾಸದಿಂದಲೂ ಹೊಂದಬೇಕು.

೮ **ಪ್ರಶ್ನೆ**—ಸ್ವಾಮೀ ! ವೇದವು ಪ್ರಮಾಣವೇ ಸರಿ ! ಆದರೆ ಗೀತೆಯು ಪ್ರಮಾಣವು ಎಂಬಲ್ಲಿ ಆಧಾರವೇನು ?

**ಉತ್ತರ**—ಶ್ರೀ ಶ್ರೀಗಳವರು— ಅನೇಕ ಆಧಾರಗಳಿವೆ. ಅದು ಹಾಗಿರಲಿ ! ಬಾಧರಹಿತವಾದ ಸರ್ವವಾಕ್ಯಗಳೂ ಪ್ರಮಾಣವೇ ಸರಿ ಗೀತೆಯು ಪ್ರಮಾಣವೆಂಬಲ್ಲಿ ಬಾಧಕವೇನು ?

ಸುಬ್ಬರಾಯರು— ಗೀತೆಯನ್ನು ರಚಿಸಿದ ಶ್ರೀ ವೇದವ್ಯಾಸರು ಗೌತಮ ಕಾಣಾದಾದಿಗಳಂತೆ ಸುಳ್ಳು ಬರೆದಿರಬಹುದು ಎಂಬ ಸಂದೇಹವು ಬರಲಾರದೇ ?

ಶ್ರೀ ಶ್ರೀಗಳವರು— ಸಂದೇಹಮಾತ್ರದಿಂದ ಅಪ್ರಾಮಾಣ್ಯ ನಿಶ್ಚಯವಾಗಲಾರದು. ಬಾಧಕವಿದ್ದರೇನೆ ವಾಕ್ಯವು ಅಪ್ರಮಾಣವಾಗುವದು ನ್ಯಾಯಸ್ಥಾನದಲ್ಲಿ ಸಾಕ್ಷಿಗಾರನ ಮಾತು ಸುಳ್ಳೆಂದು ಸರಿಯಾದ ರುಜುವಾತು ಬರದೇ ಇದ್ದರೆ ಅದನ್ನು ಪ್ರಮಾಣವೆಂದೇ ನಿಶ್ಚಯಿಸಿ ನ್ಯಾಯಾಧಿಪತಿಯು ತೀರ್ಪನ್ನು ಕೊಡುವನು. ನೀವು ಗೀತೆಯಲ್ಲಿ ಏನಾದರೂ ಸುಳ್ಳು ಇದ್ದರೆ ತೋರಿಸಿರಿ.. ಸಂದೇಹಮಾತ್ರದಿಂದ ಅದು ಅಪ್ರಮಾಣವಾಗಲಾರದು.

ಸುಬ್ಬರಾಯರು—ಸ್ವಾಮೀ ! ಗೀತೆಯು ಪ್ರಮಾಣವೋ ಅಲ್ಲವೋ ಎಂಬ ಸಂದೇಹವು ನಿವೃತ್ತಿಯಾಗುವವರೆಗೂ ಪ್ರಾಮಾಣ್ಯ ನಿಶ್ಚಯವು ಆಗಲಾರದು. ಪ್ರಾಮಾಣ್ಯ ನಿಶ್ಚಯವಿಲ್ಲದೆ, ಗ್ರಂಥಾಭ್ಯಾಸದಲ್ಲಿ ಪ್ರವೃತ್ತಿಯುಂಟಾಗಲಾರದು. ಪ್ರವೃತ್ತಿಯು ಗ್ರಂಥಪಠನಕ್ಕೆ ಕಾರಣವು. ಗ್ರಂಥವನ್ನೇ ಓದದೇ ನಾವು ಬಾಧಕಗಳನ್ನು ಹೇಗೆ ಹೇಳುವದು ? ಆದುದರಿಂದ ಗೀತೆಯಲ್ಲಿ ಪ್ರಾಮಾಣ್ಯಸಂದೇಹವು ನಿವೃತ್ತಿಯಾಗುವವರೆಗೂ ನಾವು ಗ್ರಂಥವನ್ನೇ ಓದುವಹಾಗಿಲ್ಲ.

ಶ್ರೀ ಶ್ರೀಗಳವರು— ಸಾಮಾನ್ಯವಾಗಿ ಗೀತೆಯು ಮೋಕ್ಷಸಾಧನವೆಂದು ನೀವೆಲ್ಲರೂ ಶ್ರವಣ ಮಾಡಿಯೇ ಇರುತ್ತೀರಿ ಹಾಗಿದ್ದರೆ ಗೀತೆಯಲ್ಲಿ ಹೇಗಿದೆ ನೋಡೋಣ ಎಂದು ಸಾಮಾನ್ಯವಾದ ಪ್ರವೃತ್ತಿಯು ಉಂಟಾಗುವದು. ಗ್ರಂಥ ಓದುವದಕ್ಕೆ ಪ್ರಾಮಾಣ್ಯನಿಶ್ಚಯವು ಆಗಿಯೇ ತೀರಬೇಕೆಂಬ ನಿರ್ಬಂಧವಿಲ್ಲ.

ಸುಬ್ಬರಾಯರು—ಹಾಗಾದರೆ ಪ್ರಾಮಾಣ್ಯನಿಶ್ಚಯವು ಏತಕ್ಕೆ ಆಗಬೇಕು ?

ಶ್ರೀ ಶ್ರೀಗಳವರು— ಗೀತೋಕ್ತರೀತಿಯಲ್ಲಿಯೇ ಅನುಷ್ಠಾನ ಮಾಡಬೇಕು. ಹಾಗೆ ಸರ್ವವಿಷಯಗಳನ್ನೂ ಪರಿತ್ಯಾಗಮಾಡಿ, ಶ್ರೀಕೃಷ್ಣನು ಉಪದೇಶ ಮಾಡಿರುವ ರೀತಿಯಲ್ಲಿಯೇ ಸಕಲ ಆಚರಣೆಗಳನ್ನೂ ನಡೆಯಿಸಬೇಕಾದರೆ, ಗೀತೆಯಲ್ಲಿ ದೃಢವಾದ ಪ್ರಾಮಾಣ್ಯನಿಶ್ಚಯವು ಬೇಕು.

ಸುಬ್ಬರಾಯರು—ಸ್ವಾಮೀ ! ನಾವು ವೇದವನ್ನು ಪ್ರಮಾಣವೆಂದು ತಿಳಿದಿರುತ್ತೇನೆ. ಗೀತೆಯಲ್ಲಿರುವ ಒಂದೊಂದು ಪ್ರಮೇಯವೂ ವೇದಾನುಸಾರಿಯಾಗಿದೆ ಎಂದು ತೋರಿಸಿದರೆ ಸಾಕು.

ಶ್ರೀ ಶ್ರೀಗಳವರು— ವೇದವಿರುದ್ಧವಾದ ಒಂದು ಪ್ರಮೇಯವೂ ಗೀತೆಯಲ್ಲಿರುವದಿಲ್ಲವೆಂದು ನಾವು ತೋರಿಸುವೆವು. ಶ್ರೀ ಕೃಷ್ಣನು ವೇದವಿರುದ್ಧವಾಗಿ ಯಾವ ಪ್ರಮೇಯವನ್ನು ಹೇಳಿರುತ್ತಾನೆ. ಯಾವದಾದರೂ ಒಂದನ್ನು ತೋರಿಸಿರಿ.

ಸುಬ್ಬರಾಯರು— ಕ್ಷತ್ರಿಯಾಗ್ರಣಿಯಾದ ಅರ್ಜುನನು ಯುದ್ಧಭೂಮಿಯಲ್ಲಿ ಅಳುವದು ಹೇಗೆ ಸಂಭವವು ?

ಶ್ರೀ ಶ್ರೀಗಳವರು—ಅತ್ತನೆಂದು ಬರೆದಿರುತ್ತದೆ. ಅಳಲಿಲ್ಲವೆಂಬ ಪ್ರಮಾಣವಿದ್ದರೆ ಹೇಳಿರಿ. ಬಾಧಕವನ್ನು ತೋರಿಸದೆ ವಾಕ್ಯದಲ್ಲಿ ವೃಥಾ ಸಂಶಯ ಹೊಂದುವದಕ್ಕೆ ಕಾರಣವಿಲ್ಲ.

ಸುಬ್ಬರಾಯರು—ವೇದದಲ್ಲಿ ಅರ್ಜುನನ ಮೂಲರೂಪನಾದ ಇಂದ್ರನು ಸರ್ವಜ್ಞನೆಂದು ಹೇಳಿರುತ್ತದೆ.

ಶ್ರೀ ಶ್ರೀಗಳವರು—ಅದೇ ವೇದದಲ್ಲಿ ಇಂದ್ರನು ವೃತ್ರವಧೆಯಿಂದ ಬಹು ದುಃಖಪಟ್ಟನೆಂದು ಹೇಳಲಾಗಿದೆ. ಜ್ಞಾನಿಗಳಾದ ದೇವತೆಗಳಿಗೂ ಜ್ಞಾನದಲ್ಲಿ ತಿರೋಭಾವವು ಒಂದೊಂದು ವೇಳೆಯಲ್ಲಿ ಆಗುತ್ತದೆ.

೯ ಪ್ರಶ್ನೆ—ಸೇತುರಾಯರು—ಸ್ವಾಮೀ ! ಕೃಷ್ಣನು ಎಲ್ಲ ಜೀವರನ್ನು ನಿತ್ಯರೆಂದು “ ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ” ಎಂಬ ಶ್ಲೋಕದಲ್ಲಿ ಹೇಳಿರುತ್ತಾನೆ; ಮತ್ತೊಂದು ಕಡೆಗೆ ನಾನೇ “ ಪುರುಷೋತ್ತಮನು ” ಎಂದರೆ, ನಿತ್ಯರಾದ ಸರ್ವಚೇತನರಿಗಿಂತಲೂ ನಾನೇ ಉತ್ತಮನೆಂದು ಹೇಳಿರುತ್ತಾನೆ. ನಿತ್ಯರಾದ ಚೇತನರಿಗೆ ಇವನಿಂದ ಆಗಬೇಕಾದುದು ಏನು ? ನಿತ್ಯ ಪದಾರ್ಥಗಳಿಗೆ ಮತ್ತೊಬ್ಬ ನಿಯಾಮಕನೆಂಬುದು ಅಸಂಭಾವಿತವು.

ಉತರ್ತ—ಶ್ರೀ ಶ್ರೀಗಳವರು—ಲೋಕದಲ್ಲಿ ದುರ್ಬಲರಿಗೆ ಪ್ರಬಲರು ನಿಯಾಮಕರಾಗಿರುವರು. ನಿಮಗಿಂತ ವೃದ್ಧರಾದ ಭೃತ್ಯರಿಗೂ ಸಹ ನೀವು ನಿಯಾಮಕರಾಗಿದ್ದೀರಷ್ಟೆ ! ನಿಯಮ್ಯನು ಕಡಿಮೆ ಶಕ್ತಿಯುಳ್ಳವನಾಗಿಯೂ ನಿಯಾಮಕನು ಹೆಚ್ಚು ಶಕ್ತಿಯುಳ್ಳವನಾಗಿಯೂ ಇರಬೇಕೆಂದು ನಿಯಮವುಂಟು. ಆದುದರಿಂದ ಪೂರ್ಣಬಲನಾದ ಪರಮಾತ್ಮನ ಅಧೀನದಲ್ಲಿ ಅಲ್ಪಶಕ್ತಿಯುಳ್ಳ ಚೇತನಾಚೇತನವೂ ನಿತ್ಯಾನಿತ್ಯವೂ ಆದ ಸಮಸ್ತ ಜಗತ್ತೂ ಇದೆ ಎಂಬಲ್ಲಿ ಏನೂ ಬಾಧಕವಿರುವದಿಲ್ಲ.

೧೦ ಪ್ರಶ್ನೆ—ಸುಬ್ಬರಾಯರು— ವೇದದಲ್ಲಿ ಕರ್ಮಾನುಷ್ಠಾನಮಾಡಿ ಜ್ಞಾನವನ್ನು ಸಂಪಾದಿಸಬೇಕೆಂದು “ ಕರ್ಮಣಾ ಜ್ಞಾನಮಾತನೋತಿ ” ಎಂಬ ಶ್ರುತಿಯು ಹೇಳಿರುತ್ತದೆ. ಭಗವದ್ಗೀತೆಯಲ್ಲಿ

"ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।
ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥

ಎಂಬ ಶ್ಲೋಕದಲ್ಲಿ ಕರ್ಮಪರಿತ್ಯಾಗವನ್ನೇ ಹೇಳಿರುತ್ತದೆ; ಆದುದರಿಂದ ಭಗವದ್ಗೀತೆಯು ಅಪ್ರಮಾಣವೇ ಸರಿ.

ಶ್ರೀ ಶ್ರೀಗಳವರ:— ನಿಮ್ಮ ಶ್ಲೋಕಾರ್ಥವನ್ನು ಹೇಳಿರಿ.

ಸುಬ್ಬರಾಯರು:—ನನ್ನ ಮಾತಿನಲ್ಲಿ ವಿಶ್ವಾಸಮಾಡಿ ಅಧ್ಯಾತ್ಮಚೇತಸಾ ಅಂದರೆ ಪರಮಾರ್ಥದೃಷ್ಟಿಯಿಂದ ಸರ್ವಮಿಥ್ಯಾತ್ವವನ್ನು ತಿಳಿದು, ಸರ್ವಾಣಿ ಕರ್ಮಾಣಿ ಸಂನ್ಯಸ್ಯ—ಸರ್ವಕರ್ಮಗಳನ್ನೂ ಪರಿತ್ಯಾಗಮಾಡಿ ನಿರಾಶೀಃ=ಸರ್ವ ಆಶಾರಹಿತನಾಗಿ, ನಿರ್ಮಮೋ ಭೂತ್ವಾ=ಜೀವಭಾವವನ್ನೂ ತೊರೆದು ನಾನೇ ಬ್ರಹ್ಮನು ಎಂದು ತಿಳಿದು, ವಿಗತಜ್ವರಃ=ಗತವಾದ ಅಜ್ಞಾನಜನ್ಯವಾದ ಸಂತಾಪವುಳ್ಳವನಾಗಿ ಯುಧ್ಯಸ್ವ=ಯುದ್ಧಮಾಡು. ಹೀಗೆ ಜೀವನೇ ಬ್ರಹ್ಮನು, ಪರಮಾರ್ಥದೃಷ್ಟಿಯಿಂದ ಸರ್ವವೂ ಮಿಥ್ಯಾ ಆಗಿರುವದರಿಂದ ಜ್ಞಾನಿಯು ಸರ್ವ ಕರ್ಮಗಳನ್ನೂ ಪರಿತ್ಯಾಗ ಮಾಡಬೇಕು; ಜೀವಭಾವವನ್ನು ಮರೆತು ಬ್ರಹ್ಮಭಾವವನ್ನು ತಿಳಿಯುವದರಿಂದ ಅವಿದ್ಯಾಜನ್ಯವಾದ ಸಂತಾಪಾದಿಗಳು ನಿವೃತ್ತವಾಗುವವು; ಇತ್ಯಾದಿ ಸೂಕ್ಷ್ಮಪ್ರಮೇಯಗಳು ಈ ಶ್ಲೋಕದಲ್ಲಿ ಗೂಢವಾಗಿವೆ.

ಶ್ರೀ ಶ್ರೀಗಳವರ—ಈ ಅರ್ಥವು ಶ್ರೀ ಕೃಷ್ಣನಿಂದ ಅಭಿಪ್ರೇತವಾದುದಲ್ಲ ಪರಮಾರ್ಥತತ್ವವನ್ನು ತಿಳಿದ ಮಹಾಜ್ಞಾನಿಗಳೂ ಕೂಡ ಕರ್ಮಾಚರಣೆಯನ್ನು ಮಾಡಬೇಕೆಂದೇ ಕೃಷ್ಣನು ಹೇಳಿರತ್ತಾನೆ.

ತಥಾಹಿ—1. ಕರ್ಮಪರಿತ್ಯಾಗವು ಉಚಿತವೆಂದು ಶ್ರೀಕೃಷ್ಣನ ಅಭಿಪ್ರಾಯವಾಗಿದ್ದರೆ, ಇದೇ ಶ್ಲೋಕದಲ್ಲಿ "ಯುಧ್ಯಸ್ವ" ಎಂದರೆ ಯುದ್ಧಮಾಡೆಂದು ಕರ್ಮವನ್ನು ವಿಧಿಸುವದು ಅಸಂಗತವಾಗುವದು.

2. "ಶಿಶುಂ ಸಂನ್ಯಸ್ಯ ಭೂತಲೇ" ಇತ್ಯಾದಿ. ಪ್ರಯೋಗಾನುಸಾರ ಸಂನ್ಯಸ್ಯ ಎಂದರೆ "ಇಟ್ಟು" ಎಂದೂ ಅರ್ಥವಾಗುವದು ಪ್ರಕೃತದಲ್ಲಿ ಮಯಿ ಎಂದರೆ ನನ್ನಲ್ಲಿ ಸರ್ವಕರ್ಮಗಳನ್ನೂ ನ್ಯಾಸಮಾಡಬೇಕೆಂದು ಶ್ರೀಕೃಷ್ಣನು ಹೇಳಿರುವದರಿಂದ ಇಲ್ಲಿ ಸಂನ್ಯಸ್ಯ ಎಂಬ ಪದಕ್ಕೆ "ಇಟ್ಟು" ಎಂದರೆ ಸಕಲಕರ್ಮಗಳನ್ನೂ ನನ್ನಲ್ಲಿಯೇ ಅರ್ಪಿಸಿ ಎಂದು ಅರ್ಥ ಮಾಡಬೇಕೇ ಹೊರತು "ಬಿಟ್ಟು" ಎಂಬ ಅರ್ಥವು ಅಸಂಗತವಾಗುವದು.

3. ಕಿಂಚ ಸಕಲ ಕರ್ಮಗಳ ಪರಿತ್ಯಾಗವು ಅಸಾಧ್ಯವು.

"ನ ಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।"

ಶರೀರಯಾತ್ರಾಪಿ ಚ ತೇ ನ ಪ್ರಸಿಧ್ಯೇದಕರ್ಮಣಃ।
ನಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ॥

ಎಂದರೆ "ಯಾವನೂ ಯಾವ ಕರ್ಮವನ್ನೂ ಮಾಡದೆ ಒಂದು ಕ್ಷಣವಾದರೂ ಇರಲಾರನು. ಯಾವ ಕರ್ಮವನ್ನೂ ಮಾಡದೆ ಇದ್ದರೆ ನೀನು ಬದುಕುವದಕ್ಕೇ ಆಗುವದಿಲ್ಲ. ಸಕಲ ಕರ್ಮಗಳನ್ನೂ ಜೀವನು ಬಿಡುವದು ಅಶಕ್ಯವು;" ಎಂದು ಶ್ರೀಕೃಷ್ಣನೇ ಹೇಳಿರುವದರಿಂದ ಈ ಶ್ಲೋಕದಲ್ಲಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯ ಎಂಬುದಕ್ಕೆ ಸರ್ವಕರ್ಮಗಳನ್ನೂ ಪರಿತ್ಯಾಗ ಮಾಡಿ ಎಂದು ಅರ್ಥ ಮಾಡುವದು ವಿರುದ್ಧವಾಗುವದು. ಸರ್ವ ಕರ್ಮಗಳನ್ನೂ ನನ್ನಲ್ಲಿ ಅರ್ಪಿಸಿ ಎಂಬ ಅರ್ಥವು ಅತ್ಯಂತ ಸಂಗತವಾಗಿರುವದು. ಶ್ರೀ ಕೃಷ್ಣನ ಪ್ರೀತ್ಯರ್ಥವಾಗಿಯಷ್ಟೆ ನಾವು ಪ್ರತಿದಿನವೂ ಕರ್ಮಗಳನ್ನು ಆಚರಿಸುತ್ತಿರುವದು! ಮತ್ತು "ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್। ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ" ಎಂದು ಸ್ಪಷ್ಟವಾಗಿ ಕೃಷ್ಣನ ಉಪದೇಶವಿರುತ್ತದೆ.

4. ಅಧ್ಯಾತ್ಮಚೇತಸಾ ಎಂದರೆ ಪರಮಾತ್ಮ ಬುದ್ಧಿಯಿಂದ ಎಂದರ್ಥವು. ಸಕಲ ಕರ್ಮಗಳನ್ನೂ ಪರಮಾತ್ಮಬುದ್ಧಿಯಿಂದ ನನ್ನಲ್ಲಿ ಸಮರ್ಪಿಸು ಎಂದು ಶ್ರೀಕೃಷ್ಣನು ಹೇಳಿದಂತಾಯಿತು. ಶ್ರೀ ಕೃಷ್ಣನು ಎಲ್ಲರಂತೆ ಒಬ್ಬ ಮನುಷ್ಯನೆಂದು ತಿಳಿಯದೆ, ಕೃಷ್ಣನೇ ಸಾಕ್ಷಾತ್ಪರಮಾತ್ಮನೆಂದು ತಿಳಿದು ಅವನ ಪ್ರಿತ್ಯರ್ಥವಾಗಿ ಸಕಲ ಕರ್ಮಗಳನ್ನೂ ಅವನಲ್ಲಿ ಅರ್ಪಿಸಬೇಕೆಂದರ್ಥವು. "ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಂ। ಪರಂಭಾವಮಜಾನಂತೋ ಮಮ-ಭೂತಮಹೇಶ್ವರಂ" ॥ ಎಂಬ ಶ್ಲೋಕದಲ್ಲಿ ಮೂಢರು ನನ್ನನ್ನು ಮಾನುಷಶರೀರ ವನ್ನು ಹೊಂದಿದವನೆಂದು ತಿಳಿದು ನಿತ್ಯಪರಿಪೂರ್ಣವಾದ ನನ್ನ ಉತ್ತಮ ಸ್ವರೂಪ ವನ್ನೂ ತಿಳಿಯಲಾರದೆ ಅವಮಾನ ಮಾಡುತ್ತಾರೆ, ಅಂದರೆ ಅಧಮನನ್ನಾಗಿ ತಿಳಿಯು ತ್ತಾರೆ; ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ ಆದ್ದರಿಂದ, ಪ್ರಕೃತದಲ್ಲಿ "ಎಲೈ ಅರ್ಜುನನೇ ನಾನು ಪರಮಾತ್ಮನೆಂದು ತಿಳಿದು ಸರ್ವಕರ್ಮಗಳನ್ನೂ ನನ್ನಲ್ಲಿ ಅರ್ಪಿಸು, ಕೇವಲ ಮನುಷ್ಯನನ್ನಾಗಿ ತಿಳಿಯಬೇಡ" ಎಂಬ ಉಪದೇಶವು ಉಚಿತವೇ ಸರಿ. ಕರ್ಮಪರಿತ್ಯಾಗವೇ ಕೃಷ್ಣನಿಗೆ ಸಮ್ಮತವಾಗಿದ್ದರೆ; ಮಯಿ, ಅಧ್ಯಾತ್ಮಚೇತಸಾ ಎಂಬ ಎರಡು ಪದಗಳೂ ಇಲ್ಲದೆ ಸರ್ವಾಣಿ ಕರ್ಮಾಣಿ ಸಂನ್ಯಸ್ಯ ಎಂದು ಇಷ್ಟೇ ಇರಬೇಕಾಗಿತ್ತು.

5. ಪರಂತು ಭಗವದ್ಗೀತೆಯಲ್ಲಿ ಅನೇಕ ಸ್ಥಳಗಳಲ್ಲಿ ಕರ್ಮಗಳನ್ನು ಅವಶ್ಯ ಮಾಡಬೇಕೆಂದು ಶ್ರೀ ಕೃಷ್ಣನು ಹೇಳಿರುತ್ತಾನೆ.

"ಮಾತೇ ಸಂಗೋಽಸ್ತ್ವ ಕರ್ಮಣಿ." ಅರ್ಥವು:— ನಿನಗೆ ಕರ್ಮ ಬಿಡುವ ದರಲ್ಲಿ ವಿಶ್ವಾಸವು ಬೇಡ.

"ಯೋಗ್ಯಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ"– ಎಲೈ ಅರ್ಜುನನೇ ಜ್ಞಾನೋಪಾಯದಲ್ಲಿ ನಿರತನಾಗಿ ಫಲಾಪೇಕ್ಷೆಯಿಲ್ಲದೆ ಕರ್ಮವನ್ನು ಮಾಡು.

"ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ । — ಕರ್ಮಗಳನ್ನು ಮಾಡದೇ ಇರುವದರಿಂದ ಮನುಷ್ಯನು ಮೋಕ್ಷವನ್ನು ಹೊಂದುವದಿಲ್ಲ.

"ಯಸ್ತ್ವಿಂದ್ರಿಯಾಣಿಮನಸಾನಿಯಮ್ಯಾರಭತೇಽರ್ಜುನ । ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಸ್ಸವಿಶಿಷ್ಯತೇ"-ಯಾವಾತನು ಮನಸ್ಸಿನಿಂದ ಇಂದ್ರಿಯಗಳನ್ನು ನಿಗ್ರಹಿಸಿ ಕರ್ಮೇಂದ್ರಿಯಗಳಿಂದ ಕರ್ಮಯೋಗವನ್ನು ಆಚರಿಸುವನೋ ಅವನು ಶ್ರೇಷ್ಠನು.

"ನಿಯತಂ ಕುರು ಕರ್ಮತ್ವಂ ಕರ್ಮ" ಜ್ಯಾಯೋ ಹ್ಯಕರ್ಮಣಃ ।—ವರ್ಣಾಶ್ರಮೋಚಿತವಾದ ಕರ್ಮವನ್ನು ನೀನು ಮಾಡು. ಅಕರ್ಮಕ್ಕಿಂತ ಕರ್ಮವು ಶ್ರೇಷ್ಠವು.

ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಸ್ಸಮಾಚರ ।"– ಯಜ್ಞನಾಮಕ ಪರಮಾತ್ಮನ ಪ್ರೀತ್ಯರ್ಥವಾಗಿ ಫಲಾಪೇಕ್ಷೆಯಿಲ್ಲದೆ ಕರ್ಮ ಮಾಡು.

"ತಸ್ಮಾದಸಕ್ತಸ್ಸತತಂ ಕಾರ್ಯಂ ಕರ್ಮ ಸಮಾಚರ ।" — ಆದುದರಿಂದ ಫಲಾಪೇಕ್ಷೆಯಿಲ್ಲದೆ ವಿಧ್ಯುಕ್ತಕರ್ಮವನ್ನು ಆಚರಿಸು.

"ಏವಂ ಜ್ಞಾತ್ವಾಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।
ಕುರು ಕರ್ಮೈವತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಂ ॥ "

ಈ ಪ್ರಕಾರ ತಿಳಿದು ಮೋಕ್ಷಾರ್ಥಿಗಳಾದ ಪೂರ್ವಿಕರಿಂದ ಆಚರಿಸಲ್ಪಟ್ಟಂತೆ ಅತ್ಯಂತ ಪೂರ್ವತಮವಾದ ಕರ್ಮವನ್ನು ನೀನು ಆಚರಿಸುವವನಾಗು.

"ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ।"

ಯೋಗಿಗಳು ಫಲೇಚ್ಛೆಯನ್ನು ಬಿಟ್ಟು ಮನಶ್ಶುದ್ಧ್ಯರ್ಥವಾಗಿ ಕರ್ಮವನ್ನು ಮಾಡುತ್ತಾರೆ.

"ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿಯಃ ।
**ಸ ಸನ್ಯಾಸೀಚ** ಯೋಗಿ ಚ ನ ನಿರಗ್ನಿರ್ನ ಚಾಕ್ರಿಯಃ ॥ "

ಕರ್ಮಫಲವನ್ನು ಅಪೇಕ್ಷಿಸದೇ ವಿಧ್ಯುಕ್ತ ಕರ್ಮವನ್ನು ಮಾಡುವವನೇ ಸನ್ಯಾಸಿಯು ಮತ್ತು ಯೋಗಿಯು. ಅಗ್ನಿತ್ಯಾಗಿಯೂ ಕ್ರಿಯಾತ್ಯಾಗಿಯೂ ಅಲ್ಲ. **ಈ** ಶ್ಲೋಕದಿಂದ ಪರಮಾರ್ಥ ದೃಷ್ಟಿಯಿಂದಲೇ ಸಕಲವನ್ನೂ ನೋಡುವ **ಸನ್ಯಾಸಿಯೂ** ಕೂಡ ವಿಧ್ಯುಕ್ತವಾದ ಕರ್ಮವನ್ನು ಮಾಡಬೇಕೆಂದು ಸಿದ್ಧವಾಗುತ್ತದೆ.

"ಮದರ್ಥಮಪಿ ಕರ್ಮಾಣಿ ಕುರ್ವ್ವ ಸಿದ್ಧಿಮವಾಪ್ಸ್ಯಸಿ ॥"

ನನ್ನ ಪ್ರೀತ್ಯರ್ಥವಾಗಿ ಕರ್ಮಗಳನ್ನು ಆಚರಿಸುವವನಾಗಿ ಸಿದ್ಧಿಯನ್ನು ಹೊಂದುವಿ.

"ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।
ಯಜ್ಞೋ ದಾನಂ ತಪಶ್ಚೈವ ಪಾವನಾನಿ **ಮನೀಷಿಣಾಂ** ॥"

ಯಜ್ಞದಾನ ತಪೋರೂಪವಾದ ಕರ್ಮವನ್ನು ಬಿಡಕೂಡದು. ಮಾಡಲೇ ಬೇಕು. ಯಜ್ಞಾದಿಗಳು **ಪಂಡಿತರಿಗೂ** ಪವಿತ್ರಕರಗಳು. ಈ ಶ್ಲೋಕದಲ್ಲಿ ತತ್ತ್ವಜ್ಞಾನವುಳ್ಳ ಪಂಡಿತರಿಗೂ ಯಜ್ಞಾದಿಗಳು ಪಾವನಗಳು ಎಂದು ಹೇಳಿರುವದ ರಿಂದ ಮುಕ್ತಿಪರ್ಯಂತವೂ ಯಜ್ಞಾದಿಕರ್ಮಗಳನ್ನು ಮಾಡಬೇಕೆಂದು ಸಿದ್ಧವಾಗುತ್ತದೆ.

"ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।
ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥"

ವಿಧ್ಯುಕ್ತಕರ್ಮ ಪರಿತ್ಯಾಗವು ಉಚಿತವಲ್ಲ. ಮೋಹದಿಂದ ಅದರ ಪರಿತ್ಯಾಗವು ತಾಮಸವೆನಿಸುವದು. ಈ ಶ್ಲೋಕದಲ್ಲಿ ಸ್ವವರ್ಣಾಶ್ರಮೋಚಿತಕರ್ಮ ಪರಿತ್ಯಾಗವು **ಸಂನ್ಯಾಸವಲ್ಲ;** ಮತ್ತೇನೆಂದರೆ, ತಾಮಸ ಆಚರಣೆಯು ಎಂದು ಸ್ಪಷ್ಟವಾಗಿರುವದರಿಂದ ಸಂನ್ಯಾಸಿಗೂ ಸ್ವೋಚಿತಕರ್ಮವು ಅವಶ್ಯಕವೆಂದು ಸಿದ್ಧವಾಗುವದು.

"ಸರ್ವಕರ್ಮಾಣ್ಯಪಿ **ಸದಾ** ಕುರ್ವಾಣೋ ಮದ್ವ್ಯಪಾಶ್ರಯಃ ।
ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ ॥"

ಸಕಲ ಕರ್ಮಗಳನ್ನು ಮಾಡಿ ನನ್ನಲ್ಲಿಯೇ ಸಮರ್ಪಿಸುವವನು ನನ್ನ ಅನುಗ್ರಹದಿಂದ ಶಾಶ್ವತವೂ ಅವ್ಯಯವೂ ಆದ ನನ್ನ ಲೋಕವನ್ನು ಹೊಂದುವನು.

ಈ ರೀತಿಯಲ್ಲಿ ಎಲ್ಲಿ ನೋಡಿದರೂ ಕರ್ಮಾಕರಣೆಯ ಬಗೆಗೆ ನಿಂದೆಯೂ, ವಿಧ್ಯುಕ್ತ ಕರ್ಮಾಚರಣೆಯನ್ನು ಮಾಡಲೇಬೇಕೆಂಬ ವಿಧಿಯೂ ಕಂಡು ಬರುತ್ತದೆ. ಆದುದರಿಂದ ಈ ಶ್ಲೋಕದಲ್ಲಿಯೂ ಶ್ರೀ ಕೃಷ್ಣನ ಈ ಅಭಿಪ್ರಾಯನುಸಾರವಾಗಿ ಅರ್ಥ ಮಾಡಬೇಕು.

ಇನ್ನು "ನಿರ್ಮಮೋ ಭೂತ್ವಾ" ಎಂಬುದರ ಅರ್ಥವನ್ನು ಶ್ರೀ ಕೃಷ್ಣನೇ ಹದಿನೆಂಟನೆಯ ಅಧ್ಯಾಯದಲ್ಲಿ ಹೇಳಿರುತ್ತಾನೆ.

"ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।
ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಂ ॥
ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಂ ।
ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಂ ॥
ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ ।
ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ।

ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ||
ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ||
ಯಸ್ಯ ನಾಹಂ ಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ |
ಹತ್ವಾಪಿ ಸ ಇಮಾಁಲ್ಲೋಕಾನ್ನ ಹಂತಿ ನ ನಿಬಧ್ಯತೇ ||"

ಒಂದು ಕರ್ಮಕ್ಕೆ ದೇಹಭೂಮ್ಯಾದಿಗಳು, ಕರ್ತನಾದ ಜೀವನು, ಕರಣವಾದ ಇಂದ್ರಿಯಾದಿಗಳು, ಚೇಷ್ಟಾ ಎಂದರೆ ಕರ್ಮೇಂದ್ರಿಯ ವ್ಯಾಪಾರಗಳು ಮತ್ತು ದೈವಂ ಎಂದರೆ ಫಲಪ್ರದನಾದ ಪರಮಾತ್ಮನು ಹೀಗೆ ಐದು ಕಾರಣಗಳು. ಶರೀರ ವಾಕ್ಕು ಮನಸ್ಸುಗಳಿಂದ ಮಾಡತಕ್ಕ ಸರ್ವ ಸತ್ಕರ್ಮ ದುಷ್ಕರ್ಮಗಳಿಗೂ ಇವು **ಐದು** ಕಾರಣಗಳು. ಹೀಗಿರುವಲ್ಲಿ ಪುಣ್ಯಹೀನನಾಗಿ **ನಾನೊಬ್ಬನೇ ಕರ್ತನೆಂದು** ತಿಳಿಯುವವನು ದುರ್ಮತಿಯು. ಯಾರಿಗೆ ಅಹಂಕಾರವಿಲ್ಲವೋ ಅಂದರೆ ಯಾರು ನಾನೊಬ್ಬನೇ ಮಾಡಲಿಲ್ಲವೆಂದು ತಿಳಿಯುವನೋ ಆತನು ಪ್ರಮಾದದಿಂದ ದುಷ್ಕರ್ಮಗಳನ್ನು ಮಾಡಿದರೂ ಬದ್ಧನಾಗುವುದಿಲ್ಲ; ಎಂದು ಶ್ರೀ ಕೃಷ್ಣನು ಹೇಳಿರುವುದರಿಂದ "ನಿರ್ಮಮಃ" ಎಂದರೆ— "ಅನಹಂ ಕೃತಃ—ನಾನೊಬ್ಬನೇ ಕರ್ಮವನ್ನು ಮಾಡಲಿಲ್ಲ; ಈ ಕರ್ಮವು ನನ್ನೊಬ್ಬನದೇ ಅಲ್ಲವೆಂದು ತಿಳಿಯುವವನು" ಎಂದು ಅರ್ಥ ಮಾಡಬೇಕು.

"ವಿಗತಜ್ವರಃ" ಎಂದರೆ ಅವಿದ್ಯಾಜನ್ಯಸಂತಾಪರಹಿತನೆಂದು ಅರ್ಥ ಮಾಡುವುದಕ್ಕೆ ಅವಕಾಶವಿಲ್ಲ. "ಶೋಕರಹಿತನಾಗಿ" "ಭಯರಹಿತನಾಗಿ" ಎಂದು ಇಷ್ಟೇ ಅರ್ಥವು. ಬಂಧುಹನನವು ಪಾಪಕರವೆಂದು ಅರ್ಜುನನಿಗೆ ಭಯವಿತ್ತು. ಅದರಿಂದಲೇ "ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ" ಎಂದು ಹೇಳಿದ್ದನು. ಮತ್ತು "ನ ಚೈತದ್ವಿದ್ಮಃ ಕತರನ್ನೋ ಗರೀಯೋ ಯದ್ವಾ ಜಯೇಮ ಯದಿ ವಾ ನೋ ಜಯೇಯುಃ" ಎಂದು ಯುದ್ಧದಲ್ಲಿ ಜಯವು ಬರುವದೋ ಇಲ್ಲವೋ ಎಂಬ ಸಂದೇಹದಿಂದ ಅವನಿಗೆ ಭಯವಿತ್ತು. ಶ್ರೀಕೃಷ್ಣನು ತತ್ವೋಪದೇಶ ಮಾಡಿರುತ್ತಾನೆ. "ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ" ಎಂದರೆ ಸತ್ಕರ್ಮದಿಂದ ದುಃಖವಿಲ್ಲ; ದುಷ್ಕರ್ಮದಿಂದ ಸುಖವಿಲ್ಲ. ಧರ್ಮಕ್ಕೆ ದ್ವೇಷಿಗಳಾದ ದುರ್ಯೋಧನಾದಿಗಳನ್ನು ಯುದ್ಧದಲ್ಲಿ ಸಂಹಾರ ಮಾಡುವದು ಕ್ಷತ್ರಿಯನಿಗೆ ಸತ್ಕರ್ಮವು. ಆದುದರಿಂದ ಇಂಥ ಸತ್ಕರ್ಮವನ್ನು ನಿರ್ಭಯವಾಗಿ ಆಚರಿಸು. ಸರ್ವ ಸತ್ಕರ್ಮಗಳನ್ನೂ ನನ್ನಲ್ಲಿ ಅಧ್ಯಾತ್ಮ ಬುದ್ಧಿಯಿಂದ ಅರ್ಪಿಸು ಎಂದು ಶ್ರೀಕೃಷ್ಣನು ಹೇಳಿರುತ್ತಾನೆ. ಜಯವು ಬರುವದೋ ಇಲ್ಲವೋ ಎಂಬ ಸಂದೇಹದಿಂದಲೂ ಭಯಪಡಬೇಕಾದುದಿಲ್ಲ.

"ಹತೋ ವಾ ಪ್ರಾಪ್ಸ್ಯಸೀ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ"

ಎಂಬ ಶ್ಲೋಕೋಕ್ತರೀತ್ಯಾ ಜಯಪರಾಜಯಗಳೆಂಬ ಉಭಯ ಪಕ್ಷದಲ್ಲೂ ಸುಖವೇ ಇರುವದರಿಂದ ಸಂಶಯವಿದ್ದರೂ ಬಾಧಕವಿಲ್ಲ. ವಸ್ತುತಃ "ಮಯಾ

ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ । ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥" ಎಂದು ಇರುವದರಿಂದ ಜಯವು ನಿಶ್ಚಿತವಾಗಿರುತ್ತದೆ. ಆದುದರಿಂದ "ಯುಧ್ಯಸ್ವ ವಿಗತಜ್ವರಃ" ಎಂದರೆ ನಿರ್ಭಯನಾಗಿ ಯುದ್ಧ ಮಾಡು ಎಂದು ಶ್ರೀಕೃಷ್ಣನು ಹೇಳಿರುತ್ತಾನೆ.

ಈ ಶ್ಲೋಕದ ಫಲಿತಾರ್ಥವೇನೆಂದರೆ :— ಸರ್ವಾಣಿ ಕರ್ಮಾಣಿ = ಸರ್ವ ವರ್ಣಾಶ್ರಮೋಚಿತವಾದ ಕರ್ಮಗಳನ್ನೂ, ಅಧ್ಯಾತ್ಮಚೇತಸಾ = ನಾನೇ (ಶ್ರೀಕೃಷ್ಣನೇ) ಸರ್ವ ಆತ್ಮಗಳ ಮೇಲಿರುವನು ಅಂದರೆ ಸರ್ವಾಧಿಕನು ಎಂಬ ಬುದ್ಧಿಯಿಂದ, ಮಯಿ ಸಂನ್ಯಸ್ಯ=ನನ್ನಲ್ಲಿ ಸಮರ್ಪಿಸಿ, ನಿರಾಶೀಃ=ಕರ್ಮಫಲಾಪೇಕ್ಷೆಯಿಂದ ರಹಿತನಾಗಿ, ನಿರ್ಮಮೋ ಭೂತ್ವಾ=ನಾನೊಬ್ಬನೇ ಕರ್ಮ ಮಾಡುವನೆಂಬ ಅಹಂಭಾವದಿಂದ ವರ್ಜಿತನಾಗಿ, ವಿಗತಜ್ವರಃ = ಬಂಧುಹನನವು ಪಾಪಕರವು; ಯುದ್ಧದಲ್ಲಿ ಜಯವು ಬರುವದೋ ಇಲ್ಲವೋ ಎಂಬ ಭಯವನ್ನೂ ಬಿಟ್ಟು, ಯುದ್ಧಸ್ವ = ಕ್ಷತ್ರಿಯೋಚಿತವಾದ ಧರ್ಮಯುದ್ಧವನ್ನು ಮಾಡು.

**ಪ್ರಶ್ನೆ**— ಸುಬ್ಬರಾಯರು— ಸ್ವಾಮೀ ! ತಮ್ಮ ಅರ್ಥವನ್ನು ಶ್ರವಣ ಮಾಡಿದೆನು. ಆದರೆ "ಮಯಿ ಸಂನ್ಯಸ್ಯ" ಎಂದರೆ ಸರ್ವಕರ್ಮಗಳನ್ನೂ **ನನ್ನಲ್ಲಿ** ಅರ್ಪಿಸಬೇಕು ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ. ಶ್ರುತಿಯಲ್ಲಾದರೋ "ತಪಾಂಸಿ ಸರ್ವಾಣಿ ಚ ಯದ್ವದಂತಿ" ಎಂದು ಪರಬ್ರಹ್ಮನ ಪ್ರೀತ್ಯರ್ಥವಾಗಿ ವೇದಗಳು ಸರ್ವ ತಪಸ್ಸುಗಳನ್ನೂ ವಿಧಾನ ಮಾಡುತ್ತವೆ ಎಂದು ಇರುವದು. ಇದು ಹೇಗೆ ಸಂಗತವಾಗುವದು ?

ಶ್ರೀ ಶ್ರೀಗಳವರು— ಶ್ರೀ ಕೃಷ್ಣನೇ ಪರಬ್ರಹ್ಮನು. ಇದು ಸಮಸ್ತ ವೇದಗಳಿಗೂ ವೇದಾಂತಕ್ಕೂ ಸಮ್ಮತವಾದ ಅರ್ಥವು.



# XII

ತಾ॥ 3—7—1930 ರಲ್ಲಿ

## ಪ್ರಾಶ್ನಿಕರು ಎಚ್. ಸುಬ್ಬರಾಯರು, ಎಂ.ಎ.

---

೧ **ಪ್ರಶ್ನೆ**—ಸುಬ್ಬರಾಯರ — ಸ್ವಾಮೀ ! ಶ್ರೀ ಕೃಷ್ಣನು ಸಾಕ್ಷಾತ್ಪರಬ್ರಹ್ಮನೆಂಬಲ್ಲಿ ಪ್ರಮಾಣವೇನು ?

ಶ್ರೀ ಶ್ರೀಗಳವರು— ಈ ಪ್ರಶ್ನೆಯನ್ನು ಯಾವ ಉದ್ದೇಶದಿಂದ ಕೇಳುತ್ತೀರಿ ?

ಸುಬ್ಬರಾಯರು— ಸ್ವಾಮೀ ! ಸರ್ವಕರ್ಮಗಳನ್ನೂ ನನ್ನಲ್ಲಿಯೇ ಸಮರ್ಪಿಸಬೇಕು ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ. ಶ್ರುತಿಯಾದರೋ "ತಪಾಂಸಿ

ಸರ್ವಾಣಿ ಚ ಯದ್ವದಂತಿ" ಎಂದು ಪರಬ್ರಹ್ಮನ ಪ್ರೀತ್ಯರ್ಥವಾಗಿ ಸರ್ವ ಕರ್ಮ ಗಳನ್ನೂ ಆಚರಿಸಬೇಕೆಂದು ಹೇಳುತ್ತದೆ. ಶ್ರೀ ಕೃಷ್ಣನೇ ಪರಬ್ರಹ್ಮನಾದರೆ ವೇದವಾಕ್ಯಕ್ಕೂ ಶ್ರೀ ಕೃಷ್ಣನ ಮಾತುಗಳಿಗೂ ಸಾಮಂಜಸ್ಯವು ಬರುವದು. ಅನ್ಯಥಾ (ಕೃಷ್ಣನು ಪರಬ್ರಹ್ಮನಲ್ಲದಿದ್ದರೆ) ಶ್ರೀ ಕೃಷ್ಣನೂ ನಮ್ಮಂತೆ ಒಬ್ಬ ಜೀವ ನಾದರೆ ಸಕಲ ಕರ್ಮ ಸಮರ್ಪಣೆಯನ್ನು ನನ್ನಲ್ಲಿ ಮಾಡು ಎಂಬ ಅವನ ಉಕ್ತಿ ಯಿಂದ ನಾನೇ ಬ್ರಹ್ಮನು ಎಂದು ಹೇಳಿಕೊಂಡಂತಾಯಿತು. ಅದರಿಂದ ಸಮಸ್ತ ಜೀವರೂ ಬ್ರಹ್ಮರೇ ಎಂದು ಸಿದ್ಧವಾಗುವದು. ಶ್ರೀ ಕೃಷ್ಣನು ಪರಬ್ರಹ್ಮನಾದರೆ ಇಂಥ ವಿವಾದಕ್ಕೆ ಅವಕಾಶವಿಲ್ಲ;

ಶ್ರೀ ಶ್ರೀಗಳವರು— ಶ್ರೀ ಕೃಷ್ಣನು ನಾರಾಯಣನೇ ಎಂಬುದು ನಿನಗೆ ಗೊತ್ತೋ ?

ಸುಬ್ಬರಾಯರು— ಆ ವಿಷಯದಲ್ಲಿ ಸರ್ವರೂ ಸಮ್ಮತಿಸುತ್ತಾರೆ. "ಜಾತೋ ನಾರಾಯಣಃ ಸಾಕ್ಷಾತ್" ಇತ್ಯಾದಿ ಬಹು ಪ್ರಮಾಣಗಳೂ ಇರುತ್ತವೆ.

ಶ್ರೀ ಶ್ರೀಗಳವರು—ಆ ನಾರಾಯಣನೇ ಪರಬ್ರಹ್ಮನೆಂದು ವೇದದಲ್ಲಿ ಹೇಳಿದೆ. "ಏಕೋ ನಾರಾಯಣ ಆಸೀನ್ನ ಬ್ರಹ್ಮಾನ ಚ ಶಂಕರಃ; ವಾಸುದೇವೋ ವಾ ಇದ ಮಗ್ರ ಆಸೀತ್" ಇತ್ಯಾದಿ ಶ್ರುತಿಗಳಲ್ಲಿ ನಾರಾಯಣನು ಮಹಾಪ್ರಳಯದಲ್ಲಿ ತಾನೊಬ್ಬನೇ ಇದ್ದನೆಂದು ಹೇಳಿರುತ್ತದೆ. ಬ್ರಹ್ಮ, ಶಂಕರಾದಿಗಳನ್ನು ಅನಂತರ ಹುಟ್ಟಿಸಿರುತ್ತಾನೆ.

ಸುಬ್ಬರಾಯರು— ಸ್ವಾಮೀ ! ಪರಬ್ರಹ್ಮನೆಂದರೇನು ?

ಶ್ರೀ ಶ್ರೀಗಳವರು— ಪರಿಪೂರ್ಣವಾದ ವಸ್ತು ಅಥವಾ ಸರ್ವೋತ್ತಮ ವಸ್ತು ಎಂದು ಅರ್ಥವು.

ಸುಬ್ಬರಾಯರು— ಸರ್ವಾಪೇಕ್ಷಯಾ ಮೊದಲು ಪ್ರಳಯೋದಕಶಾಯಿಯಾಗಿ ಇದ್ದ ಮಾತ್ರಕ್ಕೆ, ಅವನು ಸರ್ವೋತ್ತಮನೆಂದು ಹೇಗೆ ಹೇಳುವದು ?

ಶ್ರೀ ಶ್ರೀಗಳವರು— ಬ್ರಹ್ಮ ಶಂಕರಾದಿ ಸರ್ವಜಗತ್ತಿಗೂ ಉತ್ಪಾದಕನಾದ್ದ ರಿಂದ ಉತ್ತಮನೆನಿಸಿ ವನು.

ಸುಬ್ಬರಾಯರು—ಎಷ್ಟೋ ಜನರ ಮಕ್ಕಳು ತಂದೆಗಳನ್ನು ಮೀರಿಸ ವರು.

ಶ್ರೀ ಶ್ರೀಗಳವರು— ದುರ್ಬಲರಾದ ಬ್ರಹ್ಮರುದ್ರಾದಿಗಳನ್ನು ಶಿಶುಗಳಂತೆ ಗಣನೆ ಮಾಡಿ ಪಾಲಿಸುವನು.

ಸುಬ್ಬರಾಯರು— ಇದರಿಂದಲೂ ಸರ್ವೋತ್ತಮತ್ವವು ಸಿದ್ಧಿಸುವದಿಲ್ಲ. ಎಷ್ಟೋ ಪರಿಷನ್ಮಂಡಲಿಯ ರಕ್ಷಣೆಯನ್ನು ಒಬ್ಬ ಕಾರ್ಯದರ್ಶಿಯು ಮಾಡುವನು. ಆ ಕಾರ್ಯದರ್ಶಿಯು ಒಬ್ಬ ಸಾಮಾನ್ಯನಾದ ವಿದ್ವಾಂಸನೇ ಹೊರತು ಸರ್ವ ಶ್ರೇಷ್ಠನಲ್ಲ.

ಶ್ರೀ ಶ್ರೀಗಳವರು— ಸಕಲ ಜಗತ್ತನ್ನೂ ಸಂಹಾರ ಮಾಡಿ ತನ್ನ ಉದರ ದಲ್ಲಿಟ್ಟುಕೊಂಡು ಲೀಲೆಯಿಂದ ಪ್ರಳಯೋದಕದಲ್ಲಿ ಮಲಗಿರುತ್ತಾನೆ.

ಸುಬ್ಬರಾಯರು— ರಹಸ್ಯದಲ್ಲಿ ವಿಷದಾನಾದಿಗಳಿಂದ ಪ್ರಬಲರನ್ನೂ ಸಂಹಾರ ಮಾಡಿದ ದುರ್ಬಲರು ಎಷ್ಟೋ ಮಂದಿ ಇರುವರು.

ಶ್ರೀ ಶ್ರೀಗಳವರು ಪರಮಾತ್ಮನ ಸೃಷ್ಟಿಕರ್ತೃತ್ವ, ಸ್ಥಿತಿಕರ್ತೃತ್ವ, ಸಂಹಾರ ಕರ್ತೃತ್ವ ಇವು ಒಂದೊಂದೂ ಉಪಪಾದನೆ ಮಾಡಿ ತೋರಿಸಿದರೆ, ನಾರಾಯಣನ ಸರ್ವೋತ್ತಮತ್ವವನ್ನು ತೋರಿಸುವದರಲ್ಲಿ ಸಮರ್ಥವಾಗಿರುತ್ತವೆ. ಅದು ಹಾಗಿರಲಿ! ಪರಮಾತ್ಮನು ನಿಖಿಲಜಗತ್ತಿಗೂ ನಿಯಾಮಕನು; ಬ್ರಹ್ಮಾದಿಗಳಿಗೂ ಜ್ಞಾನಪ್ರದನು. ಕಿಂಚ ಮೇಲಾಗಿ, ಬ್ರಹ್ಮಾದಿ ಸಮಸ್ತರೂ ಬದ್ಧರು; ಪರಮಾತ್ಮನು ಬಂಧಶೂನ್ಯನು. ಬ್ರಹ್ಮಾದಿಗಳು ಅಮುಕ್ತರು; ಪರಮಾತ್ಮನು ನಿತ್ಯಮುಕ್ತನಾಗಿ ಇತರರಿಗೆ ಮುಕ್ತಿಪ್ರದನು. ಈ ಲಕ್ಷಣಗಳಿಂದಲಾದರೂ ನಾರಾಯಣನ ಸರ್ವೋತ್ತಮತ್ವವು ಸಿದ್ಧಿಸುವುದೋ ಇಲ್ಲವೋ ?

ಸುಬ್ಬರಾಯರು— ಮೋಕ್ಷದಾನ ಶಕ್ತಿಯು ನಾರಾಯಣನಿಗೇ ಎಂಬಲ್ಲಿ ಪ್ರಮಾಣವೇನು ?

ಶ್ರೀ ಶ್ರೀಗಳವರು— "ಯತ್ಪ್ರಯಂತ್ಯಭಿಸಂವಿಶಂತಿ." "ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ"; "ಪೃಥಗಾತ್ಮಾನಂ ಪ್ರೇರಿತಾರಂಚ ಮತ್ವಾ....ತೇನಾಮೃತತ್ವಮೇತಿ."

**೨ ಪ್ರಶ್ನೆ**— ಸುಬ್ಬರಾಯರು— ಸ್ವಾಮೀ ! ಜನ್ಮಾದಿಕಾರಣನು ನಾರಾಯಣನು ಎಂದು ಹೇಳುವ ಶ್ರುತಿಗಳು ಯಾವುವು ?

**ಉತ್ತರ**–ಶ್ರೀ ಶ್ರೀಗಳವರು—"ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ । ಯತ್ಪ್ರಯಂತ್ಯಭಿಸಂವಿಶಂತಿ । ತದ್ವಿಜಿಜ್ಞಾಸಸ್ವ ತದ್ಬ್ರಹ್ಮ" ಇವೇ ಮುಂತಾದುವು.

**೩ ಪ್ರಶ್ನೆ**— ಸುಬ್ಬರಾಯರು— ಸ್ವಾಮೀ ! "ಶ್ರೀಯಂ ವಸಾನಾ ಅಮೃತತ್ವಮಾಯನ್"; 'ಹಿರಣ್ಯಗರ್ಭಃ ಸಮವರ್ತತಾಗ್ರೇ"; "ವಾಯುರ್ವೈ ಗೌತಮ ಸೂತ್ರೇಣಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಭೂತಾನಿ ಸಂದೃಬ್ಧಾನಿ ಭವಂತಿ"; "ಏಕೋ ರುದ್ರೋ ನ ದ್ವಿತೀಯೋಽವತಸ್ಥೇ"; "ಜ್ಞಾತ್ವಾ ಶಿವಂ ಶಾಂತಿ ಮತ್ಯಂತಮೇತಿ"; "ರುದ್ರೋ ವಾವ ಲೋಕಾಧಾರಃ"; "ಸರ್ವಸ್ಮಾದಿಂದ್ರ ಉತ್ತರಃ"; "ಸರ್ವಂ ತದಿಂದ್ರ ತೇ ವಶೇ"; "ಇಂದ್ರೋ ರಾಜಾ ಜಗತಃ"; "ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ"; "ಗಣಾನಾಂ ತ್ವಾ ಗಣಪತಿಂ ಹವಾಮಹೇ"— ಎಂದರೆ "ಲಕ್ಷ್ಮಿಯು ಉಪಾಸನೆಯಿಂದ ಮುಕ್ತಿಯಾಗುವದು." "ಸೃಷ್ಟಿಗೆ ಪೂರ್ವದಲ್ಲಿ ಹಿರಣ್ಯಗರ್ಭನಿದ್ದನು." "ವಾಯುವಿನಿಂದಲೇ ಈ ಲೋಕವೂ, ಪರಲೋಕವೂ, ಸರ್ವ ಪ್ರಾಣಿಗಳೂ ಧರಿಸಲ್ಪಟ್ಟಿವೆ." "ಮೊದಲು ರುದ್ರನೊಬ್ಬನೇ ಇದ್ದನು"; "ಶಿವನನ್ನು

ಉಪಾಸನೆ ಮಾಡುವವರಿಗೆ ಮೋಕ್ಷವಾಗುವುದು;" "ರುದ್ರನೇ ಲೋಕಾಧಾರನು." "ಎಲ್ಲರಿಗಿಂತಲೂ ಇಂದ್ರನು ಶ್ರೇಷ್ಠನು"; "ಎಲೈ ಇಂದ್ರನೇ ಸರ್ವವೂ ನಿನ್ನ ವಶದಲ್ಲಿದೆ"; "ಇಂದ್ರನೇ ಜಗತ್ತಿಗೆ ರಾಜನು." "ಸ್ಥಾವರ ಜಂಗಮಾತ್ಮಕವಾದ ಸರ್ವ ಜಗತ್ತಿಗೂ ಸೂರ್ಯನು ಸ್ವಾಮಿಯು." "ಜ್ಞಾನಿಗಳಲ್ಲಿ ಗಣಪತಿಯು ಶ್ರೇಷ್ಠನು"; ಇತ್ಯಾದಿ ಅರ್ಥಗಳನ್ನು ಹೇಳುವ ಅನೇಕ ಶ್ರುತಿಗಳು ನಾರಾಯಣೇತರ ರಿಗೆ ಜನ್ಮಾದಿ ಕಾರಣತ್ವವನ್ನು ಹೇಳುವುದರಿಂದ ನಾರಾಯಣನೇ ಸರ್ವೋತ್ತಮನು ಎಂದು ಹೇಗೆ ಹೇಳುವುದು ?

ಶ್ರೀ ಶ್ರೀಗಳವರು— ಎಲೈ ! ಇಬ್ಬರು ಬ್ರಹ್ಮರುಗಳನ್ನು ಶ್ರುತಿಯು ಹೇಳುವ ದಿಲ್ಲ. ನಾರಾಯಣ, ಬ್ರಹ್ಮ, ರುದ್ರ, ಇಂದ್ರ, ಸೂರ್ಯ, ಗಣಪತಿಯೇ ಮುಂತಾದವರಲ್ಲಿ ಯಾರಾದರೂ ಒಬ್ಬರು ಬ್ರಹ್ಮನಾಗಿರಬೇಕು. ಆ ಒಬ್ಬರು ಯಾರಾಗಿರಬಹುದೆಂದು ವಿಮರ್ಶೆ ಮಾಡಿದರೆ ನಾರಾಯಣನೇ ಪರಬ್ರಹ್ಮನೆಂದು ನಿರ್ಣಯ ಮಾಡುವದಕ್ಕೆ ಅನುಕೂಲವಾದ ಯುಕ್ತಿಯು ಇರುವುದು. ಅದು ಹೇಗೆಂದರೆ—

ವಾಸುದೇವೋ ವಾ ಇದಮಗ್ರ ಆಸೀನ್ನಬ್ರಹ್ಮಾ ನ ಚ ಶಂಕರಃ ।
ನೇಂದ್ರಸೂರ್ಯೌ ನ ಚ ಗುಹೋ ನ ವಿನಾಯಕಃ ॥

"ಏಕೋ ನಾರಾಯಣ ಆಸೀನ್ನಬ್ರಹ್ಮಾ ನೇಶಾನೋ ನೇಮೇ ದ್ಯಾವಾಪೃಥಿವೀ ।" ಅಂದರೆ **ಈ** ಸರ್ವ ಜಗತ್ಸೃಷ್ಟಿಗೂ ಮೊದಲು ವಾಸುದೇವನೇ ಇದ್ದನು. ಬ್ರಹ್ಮನು ಇರಲಿಲ್ಲ, ಶಂಕರನು ಇರಲಿಲ್ಲ, ಇಂದ್ರಸೂರ್ಯರು ಇರಲಿಲ್ಲ, ವಿನಾಯಕನೂ ಇರ ಲಿಲ್ಲ; ಎಂಬ ಅರ್ಥ ಹೇಳುವ ಶ್ರುತಿಯು ಕಂಠತಃ ಬ್ರಹ್ಮರುದ್ರಾದಿಗಳ ಹೆಸರನ್ನು ಹೇಳಿ ಅವರು ಮೊದಲಿರಲಿಲ್ಲವೆಂದು ಸ್ಪಷ್ಟವಾಗಿ ಹೇಳಿರುವದರಿಂದ ನಾರಾಯಣನೇ ಜಗದುತ್ಪಾದಕನೆಂದು ನಿಶ್ಚಿತವಾಗುವದು.

ಸುಬ್ಬರಾಯರು— "ಏಕೋ ರುದ್ರೋ ನ ದ್ವಿತೀಯೋಽವತಸ್ಥೇ" ಎಂದು ರುದ್ರನೇ ಸೃಷ್ಟಿಗೆ ಮೊದಲಿದ್ದನು ಎಂದು ಹೇಳುವ ಶ್ರುತಿಗಳಿಗೆ ಗತಿಯೇನು ?

ಶ್ರೀ ಶ್ರೀಗಳವರು — ರುದ್ರನೇ ಮೊದಲಿದ್ದನು, ಚತುರ್ಮುಖಬ್ರಹ್ಮನೇ ಮೊದಲಿದ್ದನು, ಸೂರ್ಯನೇ ಮೊದಲಿದ್ದನು ಎಂದು ಹೇಳುವ ಶ್ರುತಿಗಳಲ್ಲಿ **ನಾರಾಯಣನು ಇರಲಿಲ್ಲ ಎಂದು ಎಲ್ಲೂ ಹೇಳಿರುವುದಿಲ್ಲ.** ಆದುದರಿಂದ ರುದ್ರನೇ ಮೊದಲಿದ್ದನು, ನಾರಾಯಣನೇ ಮೊದಲಿದ್ದನು ಮುಂತಾದ ಶ್ರುತಿಗಳಿಗೆ ಏಕವಾಕ್ಯತೆಯನ್ನು ಮಾಡಬೇಕಾದರೆ ನಾರಾಯಣನಿಗೆ ಬ್ರಹ್ಮನೆಂದೂ, ವಾಯು ವೆಂದೂ, ರುದ್ರನೆಂದೂ, ಸೋಮನೆಂದೂ, ಸೂರ್ಯನೆಂದೂ, ಇಂದ್ರನೆಂದೂ ಇವೇ ಮೊದಲಾದ ನಾನಾ ನಾಮಗಳುಂಟು ಎಂದು ನಿರ್ಣಯ ಮಾಡಬೇಕು. ಹಾಗೆಯೇ ಬ್ರಹ್ಮ, ರುದ್ರ, ಇಂದ್ರಾದಿ **ದೇವತೆಗಳು** ನಾರಾಯಣನಿಂದ ಭಿನ್ನರಾದವರು; ಅವರು ಸೃಷ್ಟಿಗೆ ಪೂರ್ವದಲ್ಲಿ ಇರಲಿಲ್ಲ. ಬ್ರಹ್ಮ, ರುದ್ರ, ಇಂದ್ರಾದಿ ಅನೇಕ

**ಹೆಸರುಳ್ಳ** ನಾರಾಯಣನು ಸೃಷ್ಟಿಗೆ ಪೂರ್ವದಲ್ಲಿ ತಾನೊಬ್ಬನೇ ಇದ್ದನು; ಬ್ರಹ್ಮ-ನಾಮಕದೇವತೆಯೂ, ರುದ್ರನಾಮಕದೇವತೆಯೂ ಇಂದ್ರನೇ ಮೊದಲಾದ ದೇವತೆಗಳೂ ಇರಲಿಲ್ಲ ಎಂದು ಹೇಳಿದರೆ ಶ್ರುತ್ಯರ್ಥವು ಸಮಂಜಸವಾಗುವದು.

**ಪ್ರಶ್ನೆ**—ಸುಬ್ಬರಾಯರು— ಸ್ವಾಮೀ! ಸೃಷ್ಟಿಗೆ ಪೂರ್ವದಲ್ಲಿದ್ದ ನಾರಾಯಣನು ಈ ದೇವತೆಗಳ ಹೆಸರುಗಳನ್ನು ಏಕೆ ಇಟ್ಟುಕೊಂಡನು ?

ಶ್ರೀ ಶ್ರೀಗಳವರು— ಸೃಷ್ಟಿಗೆ ಪೂರ್ವದಲ್ಲಿದ್ದ ನಾರಾಯಣನೇ ವಿಷ್ಣು, ಬ್ರಹ್ಮ, ಇಂದ್ರ, ಚಂದ್ರಾದಿ ಅನಂತನಾಮಗಳುಳ್ಳವನು. ಅವನು ಬ್ರಹ್ಮಾದಿದೇವತೆಗಳನ್ನು ಸೃಷ್ಟಿ ಮಾಡಿದ, ನಂತರ ಆ ದೇವತೆಗಳಿಗೆ ತನ್ನ ಹೆಸರುಗಳಿಂದಲೇ ನಾಮಕರಣ ಮಾಡಿರುವನು. ಹೇಗೆ ಪುತ್ರೋತ್ಸವವಾದರೆ ಗೃಹಸ್ಥನು ತನ್ನ ಪುತ್ರನಿಗೆ ತನ್ನ ತಂದೆಯ ಹೆಸರನ್ನೋ ಅಥವಾ ಕುಲದೇವರ ಹೆಸರನ್ನೋ ಇಡುವನೋ ಹಾಗೇಯೇ ನಾರಾಯಣನು ತಾನೇ ಹುಟ್ಟಿಸಿದ ಬ್ರಹ್ಮರುದ್ರಾದಿ ಚೇತನಗರಿಗೆಲ್ಲ ತನ್ನ ಹೆಸರುಗಳನ್ನೇ ಇಟ್ಟಿರುತ್ತಾನೆ.

ಸುಬ್ಬರಾಯರು— ನಾರಾಯಣನಿಗೂ ಬ್ರಹ್ಮ ರುದ್ರಾದಿ ದೇವತೆಗಳಿಗೂ ಐಕ್ಯವಾಗಲಾರದೇ ?

ಶ್ರೀ ಶ್ರೀಗಳವರು— ನಿನ್ನ ಹೆಸರನ್ನು ನಿನ್ನ ಪುತ್ರನಿಗೆ ಇಟ್ಟರೆ ನಿನಗೂ ನಿನ್ನ ಮಗನಿಗೂ ಐಕ್ಯವು ಬರುವದೇ ? ಕಿಂಚ, ನಾರಾಯಣನಿಗೂ ಬ್ರಹ್ಮರುದ್ರಾದಿ ದೇವತೆಗಳಿಗೂ ಐಕ್ಯವಿದ್ದಪಕ್ಷದಲ್ಲಿ "ಏಕೋ ನಾರಾಯಣ ಆಸೀತ್ ಎಂದರೆ— ಬ್ರಹ್ಮರುದ್ರಾದಿ ಅನಂತ ದೇವತಾತ್ಮಕನಾದ ನಾರಾಯಣನು ಸೃಷ್ಟಿಗೆ ಪೂರ್ವದಲ್ಲಿದ್ದನು, ಎಂದು ಅರ್ಥವಾಗುವದರಿಂದ, ಅನಂತರದಲ್ಲಿ **"ನ ಬ್ರಹ್ಮಾ ನ ಚ ಶಂಕರಃ"** ಇತ್ಯಾದಿ ರೀತಿಯಾಗಿ ಬ್ರಹ್ಮದೇವತೆಯು ಇರಲಿಲ್ಲ; ರುದ್ರದೇವತೆಯು ಇರಲಿಲ್ಲ ಎಂದು ಹೇಳುವದು ವಿರುದ್ಧೋಕ್ತಿಯಾಗುತ್ತಿತ್ತು. ಆದುದರಿಂದ ಬ್ರಹ್ಮರುದ್ರಾದ್ಯನೇಕ ಹೆಸರುಳ್ಳ ನಾರಾಯಣನು ಸೃಷ್ಟಿಗೆ ಪೂರ್ವದಲ್ಲಿದ್ದನು: ಅವನಿಂದ ಬ್ರಹ್ಮದೇವತೆಯೂ, ರುದ್ರದೇವತೆಯೂ ಉತ್ಪನ್ನರಾದರು ಎಂದು ಅರ್ಥ ಮಾಡಿದರೆ, ಸರ್ವಶ್ರುತಿಗಳಿಗೂ ಏಕವಾಕ್ಯತೆಯು ಬರುವದು.

**ಪ್ರಶ್ನೆ**— ಸುಬ್ಬರಾಯರು— ಸ್ವಾಮೀ! ಶ್ರುತಿಗಳ ಪರಸ್ಪರ ವಿರೋಧ ಪರಿಹಾರಮಾಡುವ ಉದ್ದಿಶ್ಯ ವಿಚಾರ ಮಾಡಿದರೆ ಈ ಅರ್ಥವೇನೇ ಬರುವದು. ಆದರೆ ನಾರಾಯಣನಿಗೆ ಬ್ರಹ್ಮರುದ್ರಾದಿ ಹೆಸರುಗಳು ಅನಾದಿಕಾಲಗಳಿಂದಲೂ ಉಂಟು ಎಂಬಲ್ಲಿ ಸ್ಪಷ್ಟ ಶ್ರುತಿಯುಂಟೋ ?

ಶ್ರೀ ಶ್ರೀಗಳವರು— ಉಂಟು. "ಸರ್ವೇ ವೇದಾ ಸರ್ವೇ ಘೋಷಾಃ.... ಪ್ರಾಣಮುಚ ಇತ್ಯೇವ ವಿದ್ಯಾತ್" "ಯೋ ದೇವಾನಾಂ ನಾಮಧಾ ಏಕ ಏವ ತಂ ಸಂಪ್ರಶ್ನಂ ಭುವನಾಯಂತ್ಯನ್ಯಾ". ಅಂದರೆ "ಸರ್ವನಾಮಗಳೂ ಯಾರಲ್ಲಿ

ಪರಮಮುಖ್ಯವೃತ್ತಿಯಿಂದ ಪ್ರವರ್ತಿಸುವವನೋ ಅವನೇ ಸರ್ವೋತ್ತಮನಾದ ವಿಷ್ಣುವೆಂದು ಸರ್ವ ವೇದಗಳೂ ಹೇಳುತ್ತವೆ. " "ಯಾವನು ಒಬ್ಬನೇ ಸರ್ವ ದೇವತೆಗಳ ನಾಮಗಳನ್ನು ಧರಿಸಿದವನೋ ಅಂಥ ಸರ್ವ ಜನರಿಂದಲೂ ಪ್ರಾರ್ಥನೀಯನಾದವನನ್ನು ಸರ್ವ ಲೋಕವೂ ಮೋಕ್ಷದಲ್ಲಿ ಪ್ರವೇಶಿಸುತ್ತದೆ." ಎಂದು ಅರ್ಥವುಳ್ಳ ಶ್ರುತಿಗಳು ನಾರಾಯಣನಿಗೆ ಅನಂತ ನಾಮಗಳುಂಟು ಎಂದು ಹೇಳುತ್ತವೆ.

**ಪ್ರಶ್ನೆ**—ಸುಬ್ಬರಾಯರು—ಸ್ವಾಮೀ ! ನಾರಾಯಣನು ಒಂದು ಕಲ್ಪದಲ್ಲಿ ಸೃಷ್ಟಿಗೆ ಪೂರ್ವದಲ್ಲಿದ್ದನು. ಮತ್ತೊಂದು ಕಲ್ಪದಲ್ಲಿ ರುದ್ರನು ಸೃಷ್ಟಿಗೆ ಪೂರ್ವದಲ್ಲಿದ್ದನು. ಇವರೆಲ್ಲರೂ "ಪರಬ್ರಹ್ಮ" ರೆ ಎಂದು ಏಕೆ ಹೇಳಬಾರದು ?

**ಉತ್ತರ**—ಶ್ರೀ ಶ್ರೀಗಳವರು— ಅನೇಕ ಪರಬ್ರಹ್ಮರನ್ನು ಸ್ಥಾಪಿಸುವದಕ್ಕೆ ಹೊದರೆ ಒಬ್ಬರೂ 'ಬ್ರಹ್ಮ' ರಾಗಲಾರರು. ಸರ್ವೋತ್ತಮನೆಂದರೆ ಸರ್ವಕಾಲದಲ್ಲಿಯೂ ಸರ್ವರಿಗಿಂತಲೂ ಉತ್ತಮನು ಎಂದರ್ಥವು. ನಾರಾಯಣನೂ ಸರ್ವೋತ್ತಮನು ರುದ್ರನೂ ಸರ್ವೋತ್ತಮನು ಎಂಬುದು ವ್ಯಾಹತಭಾಷಣವಾಗುವದು. ಹೇಗೆಂದರೆ ನಾರಾಯಣನು ಸರ್ವೋತ್ತಮನೆಂದರೆ ಸರ್ವಾಂತಃಪಾತಿಯಾದ ರುದ್ರನಿಗಿಂತಲೂ ಉತ್ತಮನೆಂದರ್ಥವು. ಹೀಗೆ ಹೇಳಿ, ನಂತರ ರುದ್ರನು ಸರ್ವೋತ್ತಮನೆಂಬುದು ಹೇಗೆ ಕೂಡುವದು ?

ಸುಬ್ಬರಾಯರು:— ಸ್ವಾಮೀ ! ಅಂಥ ನಿರವಧಿಕವಾದ ಸರ್ವೋತ್ತಮತ್ವವು ಒಬ್ಬರಿಗೂ ಬೇಡ ಅನೇಕ ಜನ ಪರಸ್ಪರ ಸಮಾನರಾದ ತಾಸೀಲದಾರರು ಸೇರಿ ಒಂದು ದೇಶವನ್ನು ರಕ್ಷಣೆ ಮಾಡುವಂತೆ ಅನೇಕ ಜನರು ಈಶ್ವರರು ಸೇರಿ ಪ್ರಜಾಸೃಷ್ಟಿಯನ್ನು ಮಾಡಲಿ ! ಆದರಲ್ಲೂ ಪರಸ್ಪರ ವ್ಯಾಜ್ಯವು ಬರದಂತೆ ಒಂದೊಂದುಕಲ್ಪದಲ್ಲಿ ಒಬ್ಬೊಬ್ಬರು ನಿಯಾಮಾಕಾರಾಗಿ ಸೃಷ್ಟ್ಯಾದಿಗಳನ್ನು ಮಾಡುವಂತೆ ವ್ಯವಸ್ಥೆ ಮಾಡಿಕೊಂಡಿದ್ದಾರೆಂದು ಏಕೆ ಕಲ್ಪಿಸಬಾರದು ?

ಶ್ರೀ ಶ್ರೀಗಳವರು—ಅನೇಕ ಜನ ನಿರ್ಮತ್ಸರರಾದ ಸಾಮಾನ್ಯ ಈಶ್ವರರನ್ನು ಶ್ರುತಿಯು ಅಂಗೀಕರಿಸುವದಿಲ್ಲ. "ಸರ್ವೇ ವೇದಾ **ಯತ್ಪದಮಾ**ಮನಂತಿ" ಎಂದರೆ ಸರ್ವ ವೇದಗಳು ಯಾವ ಒಬ್ಬ (ಪರಬ್ರಹ್ಮನ) ಸ್ವರೂಪವನ್ನು ಭೋದಿಸುವವೋ ಎಂದು ಅರ್ಥವುಳ್ಳ ಶ್ರುತಿಯೂ 'ಯತ್ಪದಂ' ಎಂಬ ಏಕವಚನಾಂತವಾದ ಶಬ್ದವನ್ನು ಪ್ರಯೋಗ ಮಾಡಿರುವದರಿಂದ ಬ್ರಹ್ಮನು ಒಬ್ಬನೇ ಎಂದು ಸಿದ್ಧವಾಗುವದು.

ಸುಬ್ಬರಾಯರು— ಸ್ವಾಮೀ ! ಅದು ಸಮೂಹೈಕವಚನವೆಂದು ಏಕೆ ತಿಳಿಯಬಾರದು ?

ಶ್ರೀ ಶ್ರೀಗಳವರು— "ಆನಂದೋ ಬ್ರಹ್ಮೇತಿ ವ್ಯಜಾನಾತ್" ಎಂಬ ಇವೇ ಮುಂತಾದ ಶ್ರುತಿಗಳು ಹಾಗಾಗಲಾರವು. ಯಾಕೆಂದರೆ "ಅಥ ಕಸ್ಮಾದುಚ್ಯತೇ ಬ್ರಹ್ಮ-ಬೃಹಂತೋಹ್ಯಸ್ಮಿನ್ ಗುಣಾಃ"; "ಅನಂತ ಬ್ರಹ್ಮ"; "ಏಕಮೇವಾದ್ವಿತೀಯಂ

ಬ್ರಹ್ಮ" ಇತ್ಯಾದಿ ಶ್ರುತಿಗಳು ಬ್ರಹ್ಮನು ಅನಂತ ಗುಣಗಳುಳ್ಳವನು; ಬ್ರಹ್ಮನು ನಿರವಧಿಕನು; ಸರ್ವೋತ್ತಮ ವಸ್ತುವು ಒಂದೇ ಎಂದು ಸ್ಪಷ್ಟವಾಗಿ ಹೇಳುವುದು "ಏಕೋ ದಾಧಾರ ಭುವನಾನಿ ವಿಶ್ವಾ" ಎಂಬ ಶ್ರುತಿಯು ಜಗದ್ಭರ್ತನು ಒಬ್ಬನೇ ಎಂದು ಸ್ಪಷ್ಟವಾಗಿ ಹೇಳುತ್ತದೆ. ಆದುದರಿಂದ ನಾರಾಯಣನೇ ಪರಬ್ರಹ್ಮನು- ಸರ್ವೋತ್ತಮ ವಸ್ತುವು— ಜನ್ಮಾದಿ ಕಾರಣನು ಎಂದು ಸಿದ್ಧವಾಯಿತು.

**ಪ್ರಶ್ನೆ**— ಸುಬ್ಬರಾಯರು— ಸ್ವಾಮೀ ! ನಾರಾಯಣನು ಜನ್ಮಾದಿ ಕಾರಣ ನಾದ ಸಗುಣಬ್ರಹ್ಮನು, ಇವನಿಗಿಂತ ಭಿನ್ನವಾದ ನಿರ್ಗುಣವಾದ ವಸ್ತುವು ಇರುವದು. ಅದೇ ಪರಬ್ರಹ್ಮವು ಎಂದು ಏಕೆ ಹೇಳಬಾರದು ?

ಶ್ರೀ ಶ್ರೀಗಳವರು— ನಿರ್ಗುಣವಾದ ಎಂದು ಹೇಳಿ, ಅಷ್ಟಕ್ಕೇ ನಿಲ್ಲಿರಿ, ಮುಂದೆ "ಇರುವುದು" ಎಂದು ಹೇಳಿದರೆ "**ಸತ್ತಾ**" ಅಂದರೆ "ಇರೋಣ" ಎಂಬ ಗುಣವನ್ನು ಒಪ್ಪಿದಂತಾಗುವುದು. ನಿರ್ಗುಣ ವಸ್ತುವು ಇತ್ತು ಎಂಬುದು ವ್ಯಾಹತೋಕ್ತಿಯು, ಇಂಥ ನಿರ್ಧರ್ಮಕವಾದ ವಸ್ತುವು ಇತ್ತೆಂಬಲ್ಲಿ ಪ್ರಮಾಣ ವೇನು ?

ಸುಬ್ಬರಾಯರು— "ಕೇವಲೋ ನಿರ್ಗುಣಶ್ಚ"

ಶ್ರೀ ಶ್ರೀಗಳವರು— ಶ್ವೇತಾಶ್ವೇತರೋಪನಿಷತ್ತಿನಲ್ಲಿರುವ ಈ ಶ್ರುತಿಯ ಆಕಾರ ವನ್ನು ಸ್ವಲ್ಪ ನೋಡಿರಿ. ಅಧ್ಯಾಯದ ಆರಂಭದಲ್ಲಿ "ಜ್ಞಃ ಕಾಲಕಾಲೋ **ಗುಣೀ** ಸರ್ವವಿದ್ಯಃ" ಎಂದು ಹೇಳಿ ಮಧ್ಯದಲ್ಲಿ "ನ ತಸ್ಯ ಕಶ್ಚಿತ್ಪತಿರಸ್ತಿ ಲೋಕೇ ನ ಚೇಶಿತಾ ನೈವ ಚ ತಸ್ಯ ಲಿಂಗಂ । ಸಕಾರಣಂ ಕರಣಾಧಿಪಾಧಿಪೋ ನ ಚಾಸ್ಯ ಕಶ್ಚಿಜ್ಜನಿತಾ ನ ಚಾಧಿಪಃ ॥ ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ । ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥ **ಏಕೋ** ವಶೀ ನಿಷ್ಕ್ರಿಯಾಣಾಂಬಹೂನಾಮೇಕಂ ಬೀಜಂ ಬಹುಧಾ ಯಃ ಕರೋತಿ । ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ ॥" ಎಂದು ಹೇಳಿ, ನಂತರ, "**ಪುನಃ** ಜ್ಞಃಕಾಲಕಾಲೋ **ಗುಣೀ** ಸರ್ವ ವಿದ್ಯಃ" ಎಂದು ಉಪಸಂಹಾರದಲ್ಲಿಯೂ ಇರುವುದರಿಂದ **ಯಾವನು ನಿರ್ಗುಣನೋ ಅವನೇ ಸಗುಣನು** ಎಂದು ಹೇಳಿದಂತಾಯಿತು. "ಏಕೋದೇವಃ" ಇತ್ಯಾದಿ ಶ್ರುತ್ಯುಕ್ತ ರೀತಿಯಲ್ಲಿ ಯಾವನು ಒಬ್ಬನೇ ದೇವತ್ವಾದಿ ಗುಣವುಳ್ಳವನೋ ಅವನೇ ನಿರ್ಗುಣನು ಎಂದು "ನಿರ್ಗುಣಶ್ಚ" ಎಂಬ ಕೊನೆಯ ಪದದಲ್ಲಿರುವ ಸಮುಚ್ಚಯಾರ್ಥಕವಾದ ಚ ಶಬ್ದವು ಹೇಳುವುದು. ಹೀಗಿರುವಲ್ಲಿ ನಿರ್ಗುಣನೆಂದೂ ಸಗುಣನೆಂದೂ ಭಿನ್ನ ಹೆಸರುಗಳುಳ್ಳ ಇಬ್ಬರು ಬ್ರಹ್ಮರು ಇದ್ದಾರೆಂದು ಹೇಗೆ ಹೇಳುವಿರಿ ?

ಸುಬ್ಬರಾಯರು— ಸ್ವಾಮೀ ! ಒಬ್ಬನೇ ನಿರ್ಗುಣನೂ ಸಗುಣನೂ ಆಗುವುದು ಹೇಗೆ ? ಇದು ವಿರುದ್ಧೋಕ್ತಿಯಲ್ಲವೆ ?

ಶ್ರೀ ಶ್ರೀಗಳವರು— ಎರಡು ಶ್ರುತಿಗಳಿಗೆ ಪರಸ್ಪರ ವಿರೋಧ ಬಂದರೆ ಒಂದು ಪ್ರಮಾಣವೆಂದೂ, ಮತ್ತೊಂದು ಅಪ್ರಮಾಣವೆಂದೂ ಹೇಳಕೂಡದು. ಅಪೌರುಷೇಯವಾದ ವೇದದ ಸರ್ವ ವಾಕ್ಯಗಳೂ ಪ್ರಮಾಣಗಳೇ ಆದುದರಿಂದ ಎರಡು ಗೋವುಗಳಿಗೆ ಪರಸ್ಪರ ಕಲಹ ಬಂದರೆ, ಅವುಗಳಲ್ಲಿ ಒಂದನ್ನೂ ಹನನ ಮಾಡದೆ ಮೃದುವಾಗಿ ವಿರೋಧವನ್ನು ಬಿಡಿಸುವಂತೆ "ನಿರ್ಗುಣಶ್ಚ" "ಗುಣೀ" ಎಂಬ ಎರಡು ವೇದವಾಕ್ಯಗಳಿಗಿರುವ ಕಲಹವನ್ನೂ ಯೋಗ್ಯವಾದ ಅರ್ಥಾಂತರ ಪರಿಕಲ್ಪನೆಯಿಂದ ಸಮಾಧಾನ ಹೊಂದಿಸಬೇಕು. "ನಿರ್ಗುಣಃ" ಎಂದರೆ ಸತ್ವರಜಸ್ತಮೋಗುಣರಹಿತನು ಅಥವಾ ದುಷ್ಟಗುಣರಹಿತನು ಎಂದರ್ಥವು. ಇದು ಏನೋ ಸ್ವಕಪೋಲಕಲ್ಪಿತವಾದ ಹೊಸ ಅರ್ಥವೆಂದು ನೀನು ತಿಳಿಯಬೇಡ. ಇದೇ ಶ್ವೇತಾಶ್ವೇತರೋಪನಿಷದ್ಭಾಷ್ಯದಲ್ಲಿಯೂ, ಮತ್ತು ಶಂಕರಾಚಾರ್ಯರ ಗೀತಾಭಾಷ್ಯದ ಹದಿಮೂರನೆಯ ಅಧ್ಯಾಯದಲ್ಲಿಯು, "ನಿರ್ಗುಣಂ ಗುಣಭೋಕ್ತೃಚ" ಎಂಬಲ್ಲಿರುವ ನಿರ್ಗುಣಪದಕ್ಕೆ "ಗುಣಾಃ ಸತ್ವರಜಸ್ತಮಾಂಸಿ ತೈಃ ರಹಿತಂ" ಎಂದು ಅರ್ಥ ಮಾಡಿರುತ್ತಾರೆ.

ಸುಬ್ಬರಾಯರು— ಸ್ವಾಮೀ ! "ಏಕೋ ದೇವಃ ಸರ್ವಭೂತೇಷು ಗೂಢಃ" ಇತ್ಯಾದಿ ಶ್ರುತಿಭಾಗದಲ್ಲಿ ಹೇಳಿರುವ ಗುಣಗಳೆಲ್ಲ ಕಲ್ಪಿತ ಗುಣಗಳು (ಸುಳ್ಳು ಗುಣಗಳು) "ನಿರ್ಗುಣಶ್ಚ" ಎಂಬ ಶ್ರುತಿಯ ಅಂತ್ಯ ಭಾಗದಲ್ಲಿರುವ ನಿರ್ಗುಣತ್ವವು ಪಾರಮಾರ್ಥಿಕವಾದುದು ಎಂದು ಏಕೆ ವ್ಯವಸ್ಥೆ ಮಾಡಬಾರದು ?

ಶ್ರೀ ಶ್ರೀಗಳವರು— ಹಾಗೆ ಮಾಡಿದರೆ, ಶ್ರುತಿಯು ಉನ್ಮತ್ತ ಪ್ರಲಾಪಕ್ಕೆ ಸದೃಶವಾಗುವದು. ಹೇಗೆಂದರೆ ಪ್ರತ್ಯಕ್ಷದಿಂದಾಗಲೀ, ಅನುಮಾನದಿಂದಲಾಗಲೀ, ಪರಬ್ರಹ್ಮನು ಇದ್ದಾನೆಂದು ನಾವು ತಿಳಿಯುವುದಕ್ಕಾಗುವುದಿಲ್ಲ. ವೇದದಿಂದಲೇ ತಿಳಿಯಬೇಕು. ಅಂಥ ವೇದವು ಅಜ್ಞರಾದ ನಮಗೆ ಪ್ರಥಮತಃ ಬ್ರಹ್ಮೋಪದೇಶವನ್ನು ಮಾಡುವಾಗ ಪಾರಮಾರ್ಥಿಕ ತತ್ವವನ್ನು ಹೇಳಬೇಕೇ ಹೊರತು ಬ್ರಹ್ಮನು ಸರ್ವೋತ್ತಮನು, ಸೃಷ್ಟಿಕರ್ತನು, ಮುಕ್ತಿಪ್ರದನು ಎಂದು ಹೇಳುತ್ತ ಹೇಳುತ್ತ, "ಸುಳ್ಳು", "ಸುಳ್ಳು", "ಅದೊಂದೂ ಇಲ್ಲ; ಬ್ರಹ್ಮನು ನಿರ್ಗುಣನು" ಎಂದು ಹೇಳಿದರೆ ಹುಚ್ಚರ ಮಾತಿನಂತೆ ಆಗುವುದು. "ಪ್ರಸಕ್ತಸ್ಯ ಪ್ರತಿಷೇಧಃ" ಎಂಬ ನ್ಯಾಯವು ಸರ್ವ ಲೋಕ ಸಮ್ಮತವು. ಸ್ವಸ್ಥಚಿತ್ತನಾಗಿ ಮನೆಯಲ್ಲಿರುವ ಒಬ್ಬ ಗೃಹಸ್ಥನ ಬಳಿಗೆ ಹೋಗಿ, ನಮ್ಮ ಮನೆಯಲ್ಲಿ ಸಂತರ್ಪಣೆ ನಡೆಯುವುದು ತಾವು ದಯಮಾಡಿಸಬೇಕು ಎಂದು ಕರೆದು, ಆ ಬ್ರಾಹ್ಮಣನು ಭೋಜನಕ್ಕೆ ಬಂದಾಗ ತಾನೇ ಆತನನ್ನು ಕುರಿತು "ನೀನು ಏಕೆ ? ಸಂತರ್ಪಣೆ ನಡೆಯುವುದೆಂದರೇನು ? ಏನು ಕಥೆ ? ನೀನು ಮೂಢನು" ಬಂದಿ ಎಂದು ತನ್ನ ಮಾತಿನಿಂದಲೇ ಪ್ರಾಪ್ತನಾದ ಅತಿಥಿಯನ್ನು ಹೊರಗೆ ಕಳುಹಿಸುವ ಪುರುಷನ ಮಾತಿನಂತೆ ಅನಾದಿ ನಿತ್ಯವಾದ ವೇದವಾಣಿಯು ಆಗುವುದು. ಏನೂ ತಿಳಿಯದ ನಮಗೆ ಒಬ್ಬ ಬ್ರಹ್ಮನು

ಉಂಟೆಂದು ತಿಳಿಸಿ, ಆವನನ್ನು ಗುಣವಂತನೆಂದು ಹೇಳುತ್ತ ಕೊನೆಗೆ ಗುಣವೂ ಇಲ್ಲ ! ಏನೂ ಇಲ್ಲ ! ಸುಮ್ಮನೆ ಹಾಗೆ ಹೇಳಿದೆನು ಎಂದು ಹೇಳುವ ವೇದವಾಕ್ಯದಲ್ಲಿ ನಮಗೆ ಯಾವ ಗೌರವವು ಉಂಟಾಗುವುದು ? ಅಷ್ಟೇ ಅಲ್ಲ ! ಮತ್ತೊಂದು ಸಂದೇಹವೂ ಅಂಕುರಿತವಾಗುವುದು. ಇದುವರೆಗೂ ಹೇಳಿದ್ದೆಲ್ಲ ಕಲ್ಪಿತವು (ಸುಳ್ಳು) ಎಂದು "ನಿರ್ಗುಣಶ್ಚ" ಎಂಬ ವಾಕ್ಯದಲ್ಲಿ ಹೇಳಿದಂತೆ, ಮುಂದೆ ಮತ್ತೊಂದು ಕಡೆಯಲ್ಲಿ ಇದನ್ನೂ ನಿರಾಕರಣೆ ಮಾಡಿ, ಬ್ರಹ್ಮನೂ ಇಲ್ಲ ! ಏನೂ ಇಲ್ಲ ! ಎಲ್ಲವೂ ಶೂನ್ಯವು ಎಂದು ಹೇಳುವುದೋ ಏನೋ ಎಂಬ ಸಂಶಯವು ಪ್ರಾಜ್ಞರಿಗೆ ಬರದೇ ಇರಲಾರದು. ಇದರಿಂದಲೇ

ನಿರ್ವಿಶೇಷಂ ಪರಂಬ್ರಹ್ಮ ಸಾಕ್ಷಾತ್ಕರ್ತುಮನೀಶ್ವರಾಃ ।
ಯೇ ಮಂದಾಸ್ತೇಽನುಕಂಪ್ಯಂತೇ ಸವಿಶೇಷನಿರೂಪಣೈಃ ॥

ಎಂಬ ಅದ್ವೈತಿಗಳ ಶ್ಲೋಕದಲ್ಲಿ ಹೇಳಿರುವ ಯುಕ್ತಿಯು ಬಹು ವೇದವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಹೇಳಬೇಕಾಗಿ ಬರುವುದರಿಂದ ಅಂಗೀಕಾರಾರ್ಹವಲ್ಲವು. ಪರಂತು " ನಿರ್ಗುಣತ್ವ "ವು ಪಾರಮಾರ್ಥಿಕವೆಂದು ನೀವು ಹೇಳಿದಿರಷ್ಟೆ. ನಿರ್ಗುಣತ್ವವೆಂಬ ಧರ್ಮವು ಬ್ರಹ್ಮನಿಗೆ ಹೇಗೆ ಸಲ್ಲುವುದು ?

ಸುಬ್ಬರಾಯರು— ಸ್ವಾಮೀ ! ನಿರ್ಗುಣತ್ವವು ಧರ್ಮವಲ್ಲ. ಅದು ಗುಣಾಭಾವರೂಪವು. ಅಭಾವವು ಅಧಿಕರಣ ಸ್ವರೂಪವಾದ್ದರಿಂದ ಬೇರೆ ಧರ್ಮವನ್ನು ನಾವು ಒಡಂಬಟ್ಟ ಹಾಗೆ ಆಗಲಿಲ್ಲ ಎಂದು ಏಕೆ ಹೇಳಬಾರದು ?

ಶ್ರೀ ಶ್ರೀಗಳವರು — ಸರ್ವಥಾ ಹೇಳಬಾರದು. ಹಾಗಾದರೆ ಬ್ರಹ್ಮನು ಅಭಾವಸ್ವರೂಪನೇ ಆಗುವನು. **ಬ್ರಹ್ಮ= ಅಭಾವವು** ಎಂದಾಗುವುದು,

ಸುಬ್ಬರಾಯರು— ಹಾಗೇ ಆಗಲಿ ! ಬ್ರಹ್ಮನು ಅಭಾವಸ್ವರೂಪನಾದರೆ ಏನು ದೋಷವು ?

ಶ್ರೀ ಶ್ರೀಗಳವರು — ಸಾಪೇಕ್ಷಪ್ರತೀತಿವಿಷಯವಾದ ಅಭಾವವು ನಿರಪೇಕ್ಷ ಪ್ರತೀತಿವಿಷಯನಾದ ಬ್ರಹ್ಮನಾಗಲಾರದು.

ಪರಂತು ಬ್ರಹ್ಮನು ನಿರ್ಗುಣನು ಎಂದರೆ, ವೇದಪ್ರತಿಪಾದ್ಯತ್ವ, ನಿರ್ಗುಣಶಬ್ದ ಪ್ರತಿಪಾದ್ಯತ್ವವೇ ಮೊದಲಾದ ಸರ್ವ ಧರ್ಮಗಳೂ ಇಲ್ಲವೆಂದು ಹೇಳಬೇಕು, ಹಾಗೆಂದರೆ ವೇದಾದಿ ಪ್ರಮಾಣಗಳಿಗೆ ಗೋಚರನಲ್ಲ ಎಂದು ನೀವು ಒಪ್ಪಿದಂತಾಯಿತು. ನಾರಾಯಣಾತಿರಿಕ್ತನಾದ ನಿರ್ಗುಣಬ್ರಹ್ಮನು ವೇದದಲ್ಲಿ ಪ್ರತಿಪಾದಿತನಾಗಿಲ್ಲವೆಂದಷ್ಟೆ ನಾವೂ ಹೇಳಿದ್ದು. " ನಾರಾಯಣಂ ಪರಬ್ರಹ್ಮ " ಇತ್ಯಾದಿ ಶ್ರುತಿಗಳೂ ಕೂಡ ಪರಬ್ರಹ್ಮನು (ಸರ್ವೋತ್ತಮ ವಸ್ತುವು) ನಾರಾಯಣನೊಬ್ಬನೇ ಎಂದು ಹೇಳುತ್ತವೆ. ಆದುದರಿಂದ ಬ್ರಹ್ಮ, ರುದ್ರ, ಇಂದ್ರ, ಚಂದ್ರಾದಿ ಅನಂತ ನಾಮಗಳಿಗೆ ಅರ್ಥಭೂತನಾದ ಅಗಣಿತ ಗುಣವಿಶಿಷ್ಟನಾದ ಶ್ರೀಮನ್ನಾರಾಯಣ

ನನ್ನು ನೀವೆಲ್ಲರೂ ಭಕ್ತಿಯಿಂದ ಯಥಾಶಕ್ತಿ ಉಪಾಸನೆ ಮಾಡಿ ಮೋಕ್ಷಾದಿ ಪುರುಷಾರ್ಥಗಳನ್ನು ಹೊಂದಬೇಕೆಂದು ನಿರೂಪಣೆ ಮಾಡಿರುತ್ತೇವೆ.



# XIII

ತಾ॥ 4—7—1930 ರಲ್ಲಿ

**ಪ್ರಾಶ್ನಿಕರು— ವಿ. ಸೇತುರಾಯರು.**

---

**೧ ಪ್ರಶ್ನೆ**— ಸೇತುರಾಯರು— ಮಹಾಸ್ವಾಮೀ ! ಬ್ರಾಹ್ಮಣರು ಪ್ರಾಯೇಣ ಕರ್ಮಭ್ರಷ್ಟರಾಗಿ ಪರಿಶೋಚನೀಯವಾದ ಅವಸ್ಥೆಯಲ್ಲಿರುವರು; ಮತ್ತು ಅವರಲ್ಲೇ ನಾನಾ ಮತಾವಲಂಬಿಗಳಾದ ಪರಸ್ಪರ ಪಂಗಡಗಳುಂಟಾಗಿ, ಲೌಕಿಕ ವ್ಯವಹಾರಗಳೇ ಅತಿ ಕಷ್ಟಕರವಾಗುತ್ತಿವೆ, ಅಲ್ಲದೆ ಸ್ಮಾರ್ತರಿಗೂ ವೈಷ್ಣವರಿಗೂ ಮತವೈಷಮ್ಯದಿಂದ ವಿರೋಧವು ಅಂಕುರಿತವಾಗಿ ದಿನೇ ದಿನೇ ವೃದ್ಧಿ ಹೊಂದುತ್ತಿದೆ ಇದಕ್ಕೆಲ್ಲ ಮೂಲ ಕಾರಣವು ವೇದಾಂತ ವಿಚಾರವು. ಆದುದರಿಂದ ವಿಷಬೀಜ ದಂತಿರುವ ವೇದಾಂತೋಪದೇಶವನ್ನು ನೀರೆರೆದು ವೃದ್ಧಿ ಹೊಂದಿಸದೆ, ಬ್ರಾಹ್ಮಣರ ಐಕಮತ್ಯಕ್ಕೆ ಕಾರಣವಾದ ವರ್ಣಾಶ್ರಮ ಧರ್ಮಗಳನ್ನು ಪುನಃ ಪುನಃ ಉಪದೇಶ ಮಾಡುತ್ತ ಬಂದರೆ ಲೋಕಕ್ಕೆ ಬಹಳ ಕ್ಷೇಮವುಂಟೆಂದು ಅನೇಕ ಜನರ ಅಭಿಪ್ರಾಯವಿರುತ್ತದೆ. "ಸತ್ಯವಾದಿ" ಎಂಬ ಪತ್ರಿಕೆಯಲ್ಲಿಯೂ ಸಹ ಇದೇ ಸಲಹೆಯನ್ನು ಸೂಚಿಸಿರುತ್ತಾರೆ. ಸನ್ನಿಧಾನದಲ್ಲಿ ವಿಶೇಷ ವಿಜ್ಞಾಪಿಸಿಕೊಳ್ಳುವುದಕ್ಕೆ ಸಮರ್ಥನಲ್ಲ.

ಶ್ರೀ ಶ್ರೀಗಳವರು— ಯಾವ ಉಪದೇಶಗಳನ್ನು ಮಾಡುವುದರಿಂದ ಲೋಕಕ್ಕೆ ಕ್ಷೇಮವೆಂದು ನೀವು ತಿಳಿದಿರುತ್ತೀರಿ ?

ಸೇತುರಾಯರು— ವೇದವು ಪ್ರಮಾಣವು; ವೇದೋಕ್ತವಾದ ಸ್ನಾನ, ಸಂಧ್ಯಾವಂದನೆ, ಅಗ್ನಿಹೋತ್ರ, ಜಪ, ದೇವತಾರ್ಚನೆ ಮುಂತಾದ ನಿತ್ಯಕರ್ಮಾನುಷ್ಠಾನವು ಅತ್ಯಾವಶ್ಯಕವು; ಅಹಿಂಸಾ, ಶಮ, ದಮ, ಸತ್ಯ ಮುಂತಾದ ಗುಣಗಳು ಅವಶ್ಯವಾಗಿ ಸಂಪಾದನೀಯವು; ಮದ್ಯಪಾನ, ಮಾಂಸಭಕ್ಷಣೆ, ಗೋವಧೆ, ವ್ಯಭಿಚಾರ, ಧೂಮ್ರಪಾನ, ಕಾಫಿ, ಟೀ ಮೊದಲಾದ ಮಾದಕದ್ರವ್ಯ ಸೇವನ ಇವೇ ಮೊದಲಾದ ದುರಾಚಾರಗಳ ಪರಿತ್ಯಾಗವನ್ನು ಜನರ ಮನಸ್ಸಿಗೆ ಬರುವಂತೆ ಬೋಧಿಸಬೇಕೆಂದು ಜನರ ಅಭಿಪ್ರಾಯವು.

ಶ್ರೀ ಶ್ರೀಗಳವರು— ಹಾಗಾದರೆ ವೇದಾಂತ ವಿಚಾರವು ಲೋಕಕ್ಕೆ ಅಕ್ಷೇಮಕರವೋ ?

ಸೇತುರಾಯರು— ಸ್ವಾಮೀ ! ಪ್ರಕೃತದಲ್ಲಿ ಜನರಿಗೆ ಹಾಗೇ ತೋರಿದೆ.

ಶ್ರೀ ಶ್ರೀಗಳವರು—ಶಿಶುವಿಗೆ ತೈಲಾಭ್ಯಂಜನವು ಅಕ್ಷೇಮಕರವೆಂದು ತೋರುವದು. ಅದರಿಂದ ತೈಲಾಭ್ಯಂಜನವು ದುಷ್ಟವೆಂದು ವೈದ್ಯರು ನಿಶ್ಚಯಿಸುವದಿಲ್ಲ. ವೇದಾಂತ ಶಾಸ್ತ್ರದಲ್ಲಿಯೇ ವಿಷದಂತೆ ಲೋಕಹಿಂಸಕರವಾದ ಏನಾದರೂ ಅಂಶ ಉಂಟೇ ಎಂಬ ಪ್ರಶ್ನೆಗೆ ಉತ್ತರವನ್ನು ಹೇಳಿರಿ.

ಸೇತುರಾಯರು— ನಾನು ಈ ಪ್ರಶ್ನೆಗೆ ಉತ್ತರವನ್ನು ಹೇಳಲಾರೆನು. ಆದರೆ ನನಗೆ ಇಷ್ಟು ತೋರುತ್ತದೆ. ದ್ವೈತಮತವೇ ಪ್ರಾಮಾಣಿಕವೆಂಬ ತಮ್ಮ ಉಪಪಾದನೆಯಿಂದ ಬಹಳ ಜನ ಸ್ಮಾರ್ತಬ್ರಾಹ್ಮಣರಿಗೆ ಮನಸ್ತಾಪವು ಉಂಟಾಗಿರುತ್ತದೆ.

ಶ್ರೀ ಶ್ರೀಗಳವರು— ಮನಸ್ತಾಪವೆಂದರೆ ದ್ವೇಷವು. ದ್ವೇಷಕ್ಕೆ ಕಾರಣ ಸಾಮಗ್ರಿಗಳು ಯಾವವು ನಿಮಗೆ ಗೊತ್ತೋ ?

ಸೇತುರಾಯರು— ಸನ್ನಿಧಾನದಿಂದಲೇ ಅಪ್ಪಣೆಯಾಗಬೇಕು.

ಶ್ರೀ ಶ್ರೀಗಳವರು— ಕಾಮವಿಘಾತವು ಮತ್ತು ಅನಿಷ್ಟಪ್ರಾಪ್ತಿಯು ಇವೇ ದ್ವೇಷಕ್ಕೆ ಮುಖ್ಯ ಕಾರಣಗಳು. ಒಬ್ಬನ ಇಷ್ಟವಾದ ವಸ್ತುವಿನ ಪ್ರಾಪ್ತಿಗೆ ಯಾರಾದರೂ ವಿರೋಧ ಮಾಡಿದರೆ, ಅವರಲ್ಲಿ ಅವನಿಗೆ ದ್ವೇಷವು ಉಂಟಾಗುತ್ತದೆ; ಅಥವಾ ಅನಿಷ್ಟವಾದ ದಂಡಾದಿಗಳನ್ನು ಯಾರಾದರೂ ಮಾಡಿದರೂ ದ್ವೇಷವು ಬರುವದು. ಪ್ರಕೃತದಲ್ಲಿ ಬ್ರಾಹ್ಮಣರ ಕ್ಷೇಮವನ್ನು ಕೋರುವದರಲ್ಲಿ ಬದ್ಧಕಂಕಣರಾದ ನಮ್ಮಿಂದ ಯಾವ ರೀತಿಯಲ್ಲಿ ಬ್ರಾಹ್ಮಣರ ಹಿಂಸೆಯು ಪ್ರಾಪ್ತವಾಗುತ್ತದೆ ?

ಸೇತುರಾಯರು— ಮಹಾಸ್ವಾಮೀ ! ತಮ್ಮ ಮತವೇ ಸರಿ ಎಂದು ನೀವು ಉಪದೇಶ ಮಾಡಿದರೆ, ಅದ್ವೈತಿಗಳು ತಮ್ಮ ಮತವನ್ನು ಶ್ರೀಗಳವರು ನಿಂದೆ ಮಾಡುತ್ತಾರೆಂದು ತಿಳಿಯುತ್ತಾರೆ. ಇರುವ ಸಂಗತಿಯನ್ನು ಸ್ಪಷ್ಟವಾಗಿ ತಿಳಿಸಿರುತ್ತೇನೆ. ಕ್ಷಮಿಸಬೇಕು.

ಶ್ರೀ ಶ್ರೀಗಳವರು— ಕೇಳಿರಿ ! ಜ್ಞಾನಮಾರ್ಗವನ್ನು, ಕರ್ಮಮಾರ್ಗವನ್ನು ಮಿಶ್ರಮಾಡಿ ಮಾತಾಡಬಾರದು. ನಮ್ಮ ವೇದಾಂತಶಾಸ್ತ್ರವು ಸ್ಮಾರ್ತಬ್ರಾಹ್ಮಣರ ಧನಾದಿ ಭಾಗ್ಯಗಳಿಗೆ ನಾಶಕವಾದುದಲ್ಲ; ಅಥವಾ ಅವರಿಗೆ ಅನಿಷ್ಟವಾದ ಹಾನಿಗಳನ್ನೂ ತರತಕ್ಕದ್ದಲ್ಲ, ಸ್ಮಾರ್ತರು ಬ್ರಾಹ್ಮಣರಲ್ಲ, ಸ್ಮಾರ್ತರು ದುಷ್ಟರು ಇತ್ಯಾದಿ ರೀತಿಯಾದ ಉಪದೇಶವು ದ್ವೇಷೋತ್ಪಾದಕವೇ ಸರಿ ! "ಪ್ರಚ್ಛನ್ನಬೌದ್ಧತ್ವ" ವ್ಯವಹಾರವೂ ಕೂಡ ಕೆಲವರಿಂದ ಯಥಾರ್ಥವಾಗಿ ಗೃಹಿತವಾಗಿದೆ. ಅದ್ವೈತಿಗಳು ಬ್ರಾಹ್ಮಣರೇ ಅಲ್ಲ ! ಅವರು ತಿಬೇಟದೇಶದ ಬೌದ್ಧರು; ಹಿಂದೂ ದೇಶಕ್ಕೆ ಬಂದು ಬ್ರಾಹ್ಮಣ ವೇಷಧಾರಿಗಳಾಗಿದ್ದಾರೆಂದು ನಾವು ಹೇಳಿದರೆ, ಅದು ಖಂಡಿತವಾಗಿಯೂ ಮನಸ್ತಾಪಕ್ಕೆ ಕಾರಣವಾದುದೇ. ಅಂಥ ಅಭಿಪ್ರಾಯವು ನಮ್ಮ ಹೃದಯದಿಂದ ದೂರೋತ್ಸಾರಿತವಾಗಿರುವದೆಂದು ನೀವು ತಿಳಿದಿರುವಿರಿಷ್ಟೆ !

ಸೇತುರಾಯರು— ನನಗೆ ಗೊತ್ತಿಲ್ಲವೇ ? ಪ್ರತಿಸಂವತ್ಸರವೂ ಸ್ಮಾರ್ತ ವಿದ್ವನ್ಮಂಡಲಿಯು ತಮ್ಮಿಂದ ಆಹೂತವಾಗಿ ನಾನಾವಿಧವಾದ ಬಹುಮಾನಗಳನ್ನು ಹೊಂದಿ ಮೈಸೂರಿಗೆ ಬರುತ್ತಿರುವದನ್ನು ಕಣ್ಣಾರೆ ನಾನೇ ನೋಡಿದ್ದೇನೆ.

ಶ್ರೀ ಶ್ರೀಗಳವರು— ಸರಿ ! ಮತ್ತೇನೆಂದರೆ, **ಅದ್ವೈತಮತವು ಪ್ರಚ್ಛನ್ನ ಬೌದ್ಧಮತವೆಂದು** ವಿವಾದವು ನಡೆಯಿತು. ಇದು ಜ್ಞಾನಮಾರ್ಗದಲ್ಲಿ ಉತ್ಪನ್ನವಾದ ಕಲಹವು. ಇಂಥ ಕಲಹದಿಂದಲೂ ಮನಸ್ತಾಪವು ಉಂಟಾದರೆ ಈ ಯಾವತ್ತೂ ಭೂಲೋಕವು ನಮ್ಮನ್ನು ದ್ವೇಷ ಮಾಡಬೇಕಾದೀತು ! ದ್ವೈತ ಮತವೇ ಅತ್ಯಂತ ಪ್ರಾಮಾಣಿಕವು; ಮಿಕ್ಕ ಸರ್ವಮತಗಳೂ ವೇದಾದಿ ಶಾಸ್ತ್ರಗಳಿಗೆ ಅನುಸಾರಿಯಾದುವಲ್ಲವೆಂದು ನಾವು ಶಪಥಪೂರ್ವಕವಾಗಿ ಉದ್ಘೋಷಿಸುತ್ತಿರುತ್ತೇವೆ. ಇದರಿಂದ ಕ್ರಿಸ್ತರೂ, ಬುದ್ಧರೂ ತ.ರುಷ್ಕರೂ, ವಲ್ಲಭರೂ ನಿಂಬಾರ್ಕ ಮತಾನುಯಾಯಿಗಳೂ, ಶೈವರೂ, ಶಾಕ್ತೇಯರೂ, ಶ್ರೀವೈಷ್ಣವರೇ ಮೊದಲಾದ ಸರ್ವಜನಾಂಗಗಳೂ ನಮ್ಮನ್ನು ದ್ವೇಷಿಸಬೇಕಾದೀತು ! ಇಂಥ ತತ್ವವಿಚಾರದಲ್ಲಿ ಉತ್ಪನ್ನವಾದ ಕಲಹವೂ ಕೂಡ ವ್ಯಕ್ತಿ ದ್ವೇಷವನ್ನು ವೃದ್ಧಿ ಮಾಡುವದಾದರೆ ಅಂಗ್ಲೇಯರು ರಾಜದ್ರೋಹಿಗಳನ್ನು ದ್ವೇಷ ಮಾಡುವದಕ್ಕಿಂತ ಹೆಚ್ಚಾಗಿ ನಮ್ಮನ್ನು ದ್ವೇಷಮಾಡಬೇಕಾದೀತು ! ಹೀಗಿರುವಲ್ಲಿ, ಸ್ಮಾರ್ತಬ್ರಾಹ್ಮಣರಲ್ಲಿ ಮಾತ್ರ ಮನಸ್ತಾಪವು ಅಂಕುರಿತವಾಗುತ್ತಿದೆ ಎಂದು ನೀವು ಹೇಳಲು ಕಾರಣವೇನು ?

ಸೇತುರಾಯರು— ಸ್ವಾಮೀ ! ತಾವು ಹೇಳಿದುದು ನಿಜ ಆದರೆ ನಮ್ಮ ಮತವೇ ಸರಿಯೆಂದು ಹೇಳುವದು ಹೇಗೆ ?

ಶ್ರೀ ಶ್ರೀಗಳವರು— ಕೋರ್ಟಿನಲ್ಲಿ ವಾದಿಯು ಅಪರಾಧ ಮಾಡಿದ್ದಾನೆಂದು ಒಂದೊಂದು ವೇಳೆ ನ್ಯಾಯಾಧಿಪತಿಯು ನಿಶ್ಚಯಿಸುತ್ತಾನಷ್ಟೆ ! ಅದು ಹೇಗೆ ?

ಸೇತುರಾಯರು—ಸಾಕ್ಷಿ ತನಿಖೆಯಾದ ನಂತರ, ಸಾಕ್ಷಿವಚನಗಳ ಬಲಾಬಲವನ್ನು ನೋಡಿಕೊಂಡು ನ್ಯಾಯಾಧಿಪತಿಯು ತೀರ್ಮಾನವನ್ನು ಬರೆಯುತ್ತಾನೆ.

ಶ್ರೀ ಶ್ರೀಗಳವರು—ಇಲ್ಲಿಯೂ ಹಾಗೆಯೇ ! ವೇದಾದಿ ಶಾಸ್ತ್ರಗಳನ್ನೇ ಆಧಾರವಾಗಿಟ್ಟು ದ್ವೈತ ದ್ವೈತಗಳಲ್ಲಿ ಯಾವ ಕಡೆಗೆ ಪ್ರಮಾಣಗಳು ಬಲವಾಗಿವೆ ? ಎಂದು ಕಲಹ (ವಿಚಾರ) ಮಾಡತ್ತೇವೆ ? ಇದರಿಂದ ಯಾರಿಗೆ ಘಾಸಿಯಾಯಿತು ?

ಸೇತುರಾಯರು— ಹೌದು ! ಅವರ ಶಾಸ್ತ್ರವು ಪ್ರಾಮಾಣಿಕವಲ್ಲವೆಂದು ಹೇಳಿದರೆ ಅವರಿಗೆ ದುಃಖವಾಗುವದಿಲ್ಲವೇ ?

ಶ್ರೀ ಶ್ರೀಗಳವರು— ನಿಮ್ಮ ರೂಪ ಚೆನ್ನಾಗಿಲ್ಲ, ನೀವು ಅಯೋಗ್ಯರು ಎಂದು ಅಧಿಕಾರಿಗಳು ಬೈದರೆ ನೀವು ಅವರ ಮೇಲೆ ಮಾನನಷ್ಟಕ್ಕೆ ದಾವೆ ಮಾಡುವದು ಉಚಿತವು. ಆದರೆ, ನೀವು ತಂದಿಟ್ಟ ಗಣಿತದ ಲೆಕ್ಕವು ಸರಿಯಾಗಿಲ್ಲವೆಂದು ಹೇಳಿದರೆ ನೀವು ಏನುಮಾಡುವಿರಿ ?

ಸೇತುರಾಯರು— ಅದು ವಿಚಾರದಿಂದ ಸರಿಹೋಗುತ್ತದೆ. ಅಲ್ಲಿ ದ್ವೇಷಕ್ಕೇನೂ ಕಾರಣವಿಲ್ಲ.

ಶ್ರೀ ಶ್ರೀಗಳವರು—ಇಲ್ಲಿಯೂ ಹಾಗೆಯೇ! ಅದು ಸರಿ! ನಿಮ್ಮ ಕಾಲೇಜಿನಲ್ಲಿ ವೇದಾಂತದ ಅಭ್ಯಾಸವನ್ನು ಇಟ್ಟಿರುತ್ತಾರೆಯೋ ?

ಸೇತುರಾಯರು—ಓಹೋ ! ಸರ್ವ ವೇದಗಳನ್ನೂ ಪಾಠಹೇಳುತ್ತಾರೆ.

ಶ್ರೀ ಶ್ರೀಗಳವರು—ಅಲ್ಲಿ ಪಾಠ ಹೇಳುವವರು ಯಾವ ಮತವನ್ನೂ ಅವಲಂಬಿಸದೆ, ಒಂದು ಮತವನ್ನೂ ಖಂಡನೆ ಮಾಡದೆ ಪಾಠ ಹೇಳುತ್ತಾರೆಯೋ ?

ಸೇತುರಾಯರು— ಅದ್ಹ್ಯೇ ? ಅದೆಲ್ಲಾಗುವದು ? ಅವರು ಗ್ರೀನ್, ಜೋನಾಂಕೆ, ಬ್ರಾಡ್ಲೇ ಮುಂತಾದವರು ಮಾಡಿರುವ ಐಡಿಯಲಿಸ್ಟ್ (Idealism) ತತ್ವವನ್ನು ಅವಲಂಬಿಸಿ ಸರ್ವಮತಗಳನ್ನೂ ಖಂಡನೆ ಮಾಡುತ್ತಾರೆ.

ಶ್ರೀ ಶ್ರೀಗಳವರು—ಅದರಿಂದ ಅವರ ಮೇಲೆ ಯಾರೂ ದಂಡೆತ್ತಿ ಬರುವದಿಲ್ಲವಷ್ಟೇ ?

ಸೇತುರಾಯರು— ಸ್ವಾಮೀ ! ಅಲ್ಲಿ ಅಂಥ ಪ್ರಸಕ್ತಿಯೇ ಇಲ್ಲ. ಆಂಗ್ಲೇಯ ಪಂಡಿತರು ಮಾಡಿದ ಗ್ರಂಥಗಳನ್ನು ಖಂಡನೆ ಮಾಡಿ ಇಲ್ಲಿಂದ ಕಾಗದ ಬರೆದರೆ, ಅವರು ನಮ್ಮಲ್ಲಿ ಬಹಳ ವಿಶ್ವಾಸ ಮಾಡಿ ಮೊದಲು ಧನ್ಯವಾದ ಮಾಡುತ್ತಾರೆ. ಆಮೇಲೆ ವಿಷಯವಿಚಾರವನ್ನೂ ಮಾಡುತ್ತಾರೆ. ವಿಷಯಗಳಲ್ಲಿ ಒಬ್ಬರು ಹೇಳುವದನ್ನು ಮತ್ತೊಬ್ಬರು ಹೇಳುವದಿಲ್ಲ. ಇಂಥ ವಿರೋಧವು ಇದ್ದೇ ಇರುವದು. ಆದರೂ ಅವರಲ್ಲಿ ಸ್ವಲ್ಪವೂ ದ್ವೇಷವಿಲ್ಲ. ಅವರು ( ಬ್ರಾಡ್ ಮೈಂಡೆಡ್ ಅಂದರೆ) ಉದಾರವಾದ ಮನಸ್ಸ್ವಭಾವವುಳ್ಳವರು. ನಮ್ಮ ಕಾಲೇಜಿನಲ್ಲಿದ್ದ ರಾಧಾಕೃಷ್ಣರಿಗೂ ಆಂಗ್ಲೇಯರಿಗೂ ತತ್ವವಿಷಯಕವಾದ ಖಂಡನೆ ಮಂಡನೆಗಳಿಂದ ಸಹಿತವಾದ ಅನೇಕ ವ್ಯವಹಾರಗಳು ನಡೆಯುತ್ತಿದ್ದವು. ಇದನ್ನು ನಾನು ಬಲ್ಲೆನು.

ಶ್ರೀ ಶ್ರೀಗಳವರು— ನಿಮ್ಮ ಉತ್ತರವು ಸರಿಯಾಯಿತು. ನಾವು ಮತ್ತೊಂದು ಪ್ರಶ್ನೆಯನ್ನು ಕೇಳುತ್ತೇವೆ. ನೀವು ಅದಕ್ಕೂ ಉತ್ತರ ಕೊಡಬೇಕು.

ಸೇತುರಾಯರು— ಅಪ್ಪಣೆ !

ಶ್ರೀ ಶ್ರೀಗಳವರು— ನಿಮ್ಮ ಮನೆಯಲ್ಲಿ ಹಬ್ಬದ ದಿನ ನಿಮಗೆ ಅತ್ಯಂತ ಪ್ರಿಯವಾದ ಭಕ್ಷ್ಯಗಳಿಂದ ಸಹಿತವಾದ ಪರಮಾನ್ನಭೋಜನವು ದೊರೆತರೆ, ನೀವು ಒಬ್ಬರೇ ಊಟ ಮಾಡುವಿರೋ ?

ಸೇತುರಾಯರು— ಮಹಾಸ್ವಾಮೀ ! ಎಂಥ ನೀಚನು ಸಹ ಹಾಗೆ ಮಾಡಲಾರನು.

ಶ್ರೀ ಶ್ರೀಗಳವರು— ಮತ್ತೇನು ಮಾಡುವಿರಿ ?

ಸೇತುರಾಯರು— ಇಷ್ಟಮಿತ್ರರು, ಬಂಧುವರ್ಗದವರು, ಬ್ರಾಹ್ಮಣರು ಇವರ ಸಹಿತವಾಗಿ ಸರಸಸಲ್ಲಾಪಗಳನ್ನಾಡುತ್ತ ಭೋಜನಮಾಡುತ್ತೇವೆ.

ಶ್ರೀ ಶ್ರೀಗಳವರು— ನೀವು ಒಬ್ಬರೇ ಏಕೆ ಭಕ್ಷ್ಯಾದಿಗಳನ್ನು ಸಂಗ್ರಹಿಸಿಟ್ಟು ಕೊಂಡು ತಿನ್ನಬಾರದು ?

ಸೇತುರಾಯರು— ಮಕ್ಕಳನ್ನು ಬಿಟ್ಟು ತಿನ್ನುವದಕ್ಕಾಗುವದಿಲ್ಲ. ನಮ್ಮಂತೆಯೇ ಇತರರೂ ಸುಖಪಡಬೇಕೆಂದು ನಮಗೆಲ್ಲ ಆಶೆ ಇರುತ್ತದೆ. ಹಾಗಿಲ್ಲ ದಿರುವನು ಕಟುಕನು.

ಶ್ರೀ ಶ್ರೀಗಳವರು— ಸಂತೋಷ. ನೋಡಿದಿರಾ ! ಜ್ಞಾನಮಾರ್ಗದಲ್ಲಿಯೂ ಹೀಗೆಯೇ ಇರುವದು. ನಮಗೆ ಪ್ರಾಪ್ತವಾದ ತತ್ತ್ವಜ್ಞಾನದಿಂದ ಹೇಗೆ ಸುಖವುಂಟಾಯಿತೋ ಹಾಗೇಯೇ ಅತಿ ಸಮೀಚೀನವಾದ ಈ ತತ್ತ್ವವನ್ನು ಜನರು ದ್ವೇಷಬುದ್ಧಿಯಿಂದಲಾದರೂ ಸರಿ, ಮೊದಲು ವಿಚಾರ ಮಾಡಲಿ ! ನಂತರ ಅದರ ಗುಣಗಳು ಅಮೋಘವಾಗಿ ಕಂಡುಬಂದರೆ ಇಟ್ಟುಕೊಳ್ಳಲಿ ! ಇಲ್ಲದಿದ್ದರೆ ಬಿಟ್ಟು ಬಿಡಲಿ ! ಎಂಬುದೇ ನಮ್ಮ ಆಶಯವು. ವಜ್ರವನ್ನು ಗಾಜೆಂದು ತಿಳಿದು ನೋಡಿ ದರೂ, ಪರೀಕ್ಷಾನಂತರ ಅದರ ಗುಣವು ಹೊರಗೆ ಬೀಳುವದರಲ್ಲಿ ಸಂದೇಹವಿಲ್ಲ. ಲೋಕಕ್ಕೆ ಯಥಾಸ್ಥಿತವಾದ ತತ್ತ್ವವು ತಿಳಿಯಲಿ ! ಸರ್ವರು ಜ್ಞಾನದಿಂದ ಪೂರ್ಣ ರಾಗಲಿ ಎಂದು ನಾವು ಕೋರುತ್ತೇವೆ. ಅದರಲ್ಲಿಯೂ ನಮಸ್ತ ಪಂಗಡದ ಬ್ರಾಹ್ಮಣರೂ ಅವಶ್ಯವಾಗಿ, ಅಮೋಘವಾದ ತಮ್ಮ ಬುದ್ಧಿಕೌಶಲ್ಯವನ್ನು ಉಪಯೋಗಿಸಿ, ವೇದಾಂತ ಶಾಸ್ತ್ರವಿಮರ್ಶೆಯನ್ನು ಮಾಡಿ ಉಪಕಾರವನ್ನು ಹೊಂದ ಬೇಕೆಂಬುದು ನಮಗೆ ಮುಖ್ಯ ಅಪೇಕ್ಷೆಯು. ತೀಕ್ಷ್ಣಧಾರಾಖಡ್ಗದಂತೆ ನಿಶ್ಚಿತ ವಾದ ಬ್ರಾಹ್ಮಣರ ಬುದ್ಧಿಯು ಪರಬ್ರಹ್ಮಪ್ರಾಪ್ತಿಗೆ ಪ್ರತಿಬಂಧಕವಾಗಿರುವ ಸಂದೇಹಗಳ ಛೇದನೆಯಲ್ಲಿ ಉಪಯುಕ್ತವಾಗಬೇಕು. ಇಲ್ಲದೆ ಇದ್ದರೆ ತುಕ್ಕುಹಿಡಿದ ಕಬ್ಬಿಣದಂತೆ ವ್ಯರ್ಥವಾಗುವದು. “ ತದ್ಧಿ ಪತಃ ತದ್ಧಿ ಪತಃ ” ಎಂಬ ತೈತ್ತರೀಯ ಶ್ರುತಿಯು ತತ್ತ್ವೋಪದೇಶವು ಪರಮ ಪುಣ್ಯಕರವೆಂದು ಹೇಳುವದರಿಂದಲೂ, ಜನರಿಗೆ ಸಕಲ ಲಾಭಗಳಿಗಿಂತ ತತ್ತ್ವಜ್ಞಾನದಲಾಭವು ಅನರ್ಘವಾದುದುರಿಂದಲೂ, ವೇದಾಂತವಿಚಾರದಿಂದ ಲೋಕೋಪಕಾರವು ಆಗುವದು ; ನಮಗೂ ಪುಣ್ಯವು ಬರುವದೆಂದು ತಿಳಿದು, ನಾವು ವೇದಾರ್ಥವಿಚಾರದಲ್ಲಿ ಆಸಕ್ತರಾಗಿದ್ದೇವೆ. ಬಹು ಜನರಿಗೆ ಅತಿ ದುಃಖಕರವಾದ ಉಪದೇಶವನ್ನು ಗಾಂಧಿಯವರೇ ಮೊದಲಾದವರು ಮಾಡುತ್ತಿದ್ದರೂ, ಅವರೆಲ್ಲರೂ ಲೋಕಹಿತೈಷಿಗಳೆಂದೇ ನೀವು ನಂಬಿರುತ್ತಿರಿ. ಇನ್ನು ವೇದಾಂತವಿಚಾರವು ಅದಕ್ಕಿಂತಲೂ ಪಾಪಿಯೇ ?

ಸೇತುರಾಯರು— ಕ್ಷಮಿಸಬೇಕು ! ಅನ್ಯಾಯ ! ಇವು ಕೆಲವು ನಮ್ಮ ಸಮಾಜದ ನಡೆವಳಿಕೆಗಳು.

ಶ್ರೀ ಶ್ರೀಗಳವರು — ವೇದಾಂತ ವಿಚಾರವನ್ನು ಮಾಡಕೂಡದೆಂಬ ಮತವು ಎಷ್ಟು ಅನರ್ಥಕರವೆಂಬುದನ್ನು ನೀವು ಬಲ್ಲಿರಾ ? ನಿಮ್ಮ ವೇದಾಂತ ವಿಚಾರವು ನಮಗೆ ಬೇಡ ! ನಿಮ್ಮ ಮೋಕ್ಷವೂ ನಮಗೆ ಬೇಡ ! ಜ್ಞಾನವೂ ಬೇಡ ! ಎಂದು ನೀವು ಹೇಳಿದಂತಾಯಿತು. ರೋಗಿಗೆ ಔಷಧವು ವಿರೋಧಿಯಾಗಿ ಕಾಣುವಂತೆ ನಿಮಗೆ ತತ್ತ್ವವಿಮರ್ಶೆಯು ಈಗ ಬಹು ಸಂಕಟಕರವಾಗಿ ಕಂಡು ಬಂದಿದೆ. "ತ ಇಹ ಸಿಂಹೋವಾ! ವ್ಯಾಘ್ರೋವಾ !" ಇತ್ಯಾದಿ ಛಾಂದೋಗ್ಯಶ್ರುತಿಯು, ತತ್ತ್ವಜ್ಞಾನವಿಲ್ಲ ದವನು ಸಿಂಹವ್ಯಾಘ್ರಾದಿ ನಾನಾಯೋನಿಗಳನ್ನು ಹೊಂದುತ್ತಲೇ ಇರುವನೆಂದು ಹೇಳುತ್ತದೆ. "ಜೀವಾ ಏವ ತು ದುಃಖಿನಃ। ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ॥" ಎಂದು ಜೀವರುಗಳ ಅಜ್ಞಾನಜನ್ಯ ದುಃಖನಾಶಾರ್ಥವಾಗಿ, ವೇದವು ತತ್ತ್ವವನ್ನು ಬೋಧಿಸುವದರ ಮೂಲಕ ತತ್ತ್ವೋಪದೇಶರೂಪವಾದ ದೇಶಸೇವೆಯನ್ನು ಅವಶ್ಯ ಮಾಡಬೇಕೆಂದು ಸಮಸ್ತ ಜ್ಞಾನಿಗಳಿಗೂ ತಿಳಿಸುತ್ತದೆ. "ಉತ್ತಿಷ್ಠತ, ಜಾಗ್ರತ, ಪ್ರಾಪ್ಯವರಾನ್ನಿಬೋಧತ" ಇತ್ಯಾದಿ ಶ್ರುತಿಗಳು ಅಜ್ಞಾನಾಂಧಕಾರದಲ್ಲಿ ಸುಪ್ತರಾದ ಜನರನ್ನು ಕುರಿತು "ಎಲೈ ಅಧಿಕಾರಿಗಳಿರಾ ! ನಿಮ್ಮ ರಜಸ್ತಮೋಗುಣ ಗಳನ್ನು ಬಿಟ್ಟು ಸ್ವೋಚಿತ ಧರ್ಮಾನುಷ್ಠಾನದಲ್ಲಿ ಆಸಕ್ತರಾಗಿರಿ. ಮತ್ತು ಶಿಷ್ಯ ಭಾವದಿಂದ ಜ್ಞಾನಿಗಳನ್ನು ಸೇರಿ ಅವರಿಂದ ವಿಧ್ಯುಕ್ತ ರೀತಿಯಲ್ಲಿ ತತ್ತ್ವಶ್ರವಣವನ್ನು ಮಾಡಿರಿ" ಎಂದು ಹೇಳುತ್ತವೆ. ಮತ್ತೊಂದು ಶ್ರುತಿಯಾದರೋ "ಇಹ ಚೇದವೇ ದೀದಥ ಸತ್ಯಮಸ್ತಿ । ನ ಚೇದಿಹಾವೇದೀನ್ಮಹತೀವಿನಷ್ಟಿಃ"॥ ಎಂದರೆ ಈ ಭೂಲೋಕ ದಲ್ಲಿ ಸಾಧನ ಭೂಮಿಯಲ್ಲಿ ಹುಟ್ಟಿರುವಾಗಲೇ (ಬ್ರಹ್ಮವಿದ್ಯೆಯನ್ನು ಸದ್ಗುರುಗಳಿಂದ ಹೊಂದಿ) ಪರಮಾತ್ಮನನ್ನು ತಿಳಿದರೆ, ಅಂಥ ಅಧಿಕಾರಿಗೆ ಇಹಪರಗಳೆರಡರಲ್ಲೂ ಕಲ್ಯಾಣವುಂಟು. ಹಾಗೆ ಬ್ರಹ್ಮಜಿಜ್ಞಾಸೆಯನ್ನು ಮಾಡದೇ ಇದ್ದರೆ ಮಹತೀ ವಿನಷ್ಟಿಃ ಅಂದರೆ ಘೋರವಾದ ನರಕಾದ್ಯನರ್ಥವು ಪ್ರಾಪ್ತಿಯಾಗುವದೆಂದು ಹೇಳು ತ್ತದೆ. "ತದ್ವಿಜಿಜ್ಞಾಸಸ್ವ"; "ಶ್ರೋತವ್ಯೋ ಮಂತ್ರವ್ಯೋ ನಿದಿಧ್ಯಾಸಿತವ್ಯಃ" ಎಂಬ ಶ್ರುತಿಗಳೂ "ಶ್ರವಣಂ ಮನನಂ ಚೈವ ವಿಷ್ಣೋಃ ಕಾರ್ಯಂ ಸರ್ವದೈವ ಹಿ" ಎಂಬ ಸ್ಮೃತಿಯೂ ತತ್ತ್ವವಿಚಾರದಲ್ಲಿ ಆಲಸ್ಯ ಮಾಡಬಾರದೆಂದು ಹೇಳುತ್ತವೆ.

ಕಿಂಚ, ಸರ್ವಥಾ ತತ್ತ್ವಜ್ಞಾನಶೂನ್ಯನ ಸ್ನಾನ, ಸಂಧ್ಯಾದಿ ಕರ್ಮಗಳೂ ಕೂಡ ಏನು ಫಲವನ್ನು ಕೊಡುವವೆಂದು ನೀವು ತಿಳಿದಿರುತ್ತೀರಿ ? ಸರ್ವಥಾ ಜ್ಞಾನಸಹಾಯ ರಹಿತವಾದ ಕರ್ಮವು ಭಸ್ಮದಲ್ಲಿ ಹೋಮ ಮಾಡಿದಂತೆಯೇ ಎಂದು ತಿಳಿಯಬೇಕು. ಧರ್ಮಶಾಸ್ತ್ರೋಕ್ತ ಸಂಧ್ಯಾ, ಜಪ, ತಪ, ಹೋಮಗಳೂ ಕೂಡ ತತ್ತ್ವಜ್ಞಾನಸಹಿತ ವಾದರೇ ವಿಶಿಷ್ಟ ಫಲವನ್ನು ಕೊಡುವದರಲ್ಲಿ ಸಮರ್ಥಗಳಾಗುವದರಿಂದ, ವೇದಾಂತ ವಿಚಾರವು ಅತ್ಯಂತ ಪ್ರಧಾನವಾದ ಕರ್ಮವಾಗಿರುತ್ತದೆ. ಪರಂತು ಬ್ರಾಹ್ಮಣರು ಈಗ ಸ್ವಕರ್ಮಭ್ರಷ್ಟರಾಗಿದ್ದಾರೆಂದು ನೀವು ಹೇಳಿದಿರಿ ! ಇದಕ್ಕೆ ತತ್ತ್ವವಿಚಾರದಲ್ಲಿ ಅವರಿಗಿರುವ ಪ್ರಮಾದವೇ ( ಅನಾದರಣೆ ) ಮುಖ್ಯ ಕಾರಣವು. ಇಂಥ

ಪತಿತರು ಎಷ್ಟು ಪ್ರಾಯಶ್ಚಿತ್ತ ಮಾಡಿದರೂ, ಅವರನ್ನು ಉದ್ಧರಿಸುವದು ಅಶಕ್ಯವು ಆದರೆ ಅವರನ್ನು ಸದ್ಗುರುಗಳಿಂದ ವಿಧ್ಯುಕ್ತವಾಗಿ ಆಚರಿಸಲ್ಪಟ್ಟ ವೇದಾಂತ ಶಾಸ್ತ್ರಶ್ರವಣವು ಮಾತ್ರ ಇಂಥ ಪಾಪಿಗಳನ್ನು ಕೂಡ ಶೋಧನ ಮಾಡುವದರಲ್ಲಿ ಸಮರ್ಥವು. ಪಾಪವೆಂಬ ತೂಲ (ಅರಳೆಯ) ರಾಶಿಗಳಿಗೆ ಅಗ್ನಿಕಣದಂತಿರುವ ಶಾಸ್ತ್ರ ವಿಚಾರವನ್ನು ಯಾವ ಪ್ರಾಜ್ಞನು ಉಪೇಕ್ಷಿಸುವನು !

ಇನ್ನು ಗೀತಾಶಾಸ್ತ್ರದ ಪ್ರವೃತ್ತಿಪ್ರಕಾರವನ್ನೂ, ಶ್ರೀ ಕೃಷ್ಣನ ಅಮೃತಸ್ಯಂದಕ ವಾದ ಮಧುರೋಕ್ತಿಗಳನ್ನೂ, ಸರ್ವರೂ ಅವಶ್ಯವಾಗಿ ಚಿಂತನೆ ಮಾಡಬೇಕು. ಬಂಧುಹನನವು ಉಚಿತವಲ್ಲ, ನಾನು ಯುದ್ಧ ಮಾಡಲಾರೆನೆಂದು ಹೇಳಿದ ಅರ್ಜುನ ನಿಗೆ ದುಷ್ಟಕ್ಷತ್ರಿಯ ವಧವು ಅಧರ್ಮಕರವಾದುದಲ್ಲವೆಂದು ಇಷ್ಟು ಮಾತ್ರ ಹೇಳಿ, ಕೃಷ್ಣನು ಅರ್ಜುನನ್ನು ಯುದ್ಧದಲ್ಲಿ ಪ್ರೇರಿಸಬಹುದಾಗಿತ್ತು. ತತ್ವಜ್ಞಾನರಹಿತನ ಯುದ್ಧಾದಿ ಸ್ವಕರ್ಮವೂ ಕೂಡ ಅತ್ಯಲ್ಪ ಫಲಪ್ರದವಾದುದೆಂದು ತಿಳಿದು, ತನ್ನ ಭಕ್ತನಾದ ಅರ್ಜುನನಿಗೆ ವಿಶೇಷವಾದ ಪುಣ್ಯವನ್ನು ಸಂಪಾದಿಸಿ ಕೊಡಬೇಕೆಂಬ ಅಭಿಪ್ರಾಯದಿಂದಲೇ ಶ್ರೀಕೃಷ್ಣನು ಸಮಸ್ತ ವೇದಾರ್ಥವನ್ನೂ ಸಂಕ್ಷೇಪವಾಗಿ ಉಪದೇಶ ಮಾಡಿರುತ್ತಾನೆ. ಶ್ರೀ ಕೃಷ್ಣನು ಕೇವಲ ವರ್ಣಾಶ್ರಮ ಧರ್ಮಗಳನ್ನು ಉಪದೇಶ ಮಾಡದೆ ತತ್ವವಿಚಾರದಲ್ಲಿ ಪ್ರವೃತ್ತನಾಗಿ "ನಾನು ಪುರುಷೋತ್ತಮನು, ಸ್ವತಂತ್ರನು; ಜೀವರೆಲ್ಲ ನಿತ್ಯರು, ಅಲ್ಪಜ್ಞರು, ನನ್ನ ಆಧೀನರು, ನನ್ನಿಂದ ಪ್ರೇರಿತವಾದ ಪ್ರಕೃತಿಬಂಧಕ್ಕೆ ವಶರಾಗಿರುವರು. ಸಂಸಾರದಿಂದ ಮೋಕ್ಷವನ್ನು ಇಚ್ಛಿಸುವವರು ನನ್ನನ್ನೇ ಶರಣು ಹೊಂದಬೇಕು"; ಇತ್ಯಾದಿ ಉಪದೇಶ ಮಾಡಿದುದೂ ಒಂದು ದೋಷವೇ ಆಗಬೇಕಾಯಿತು. ಯಾದವಚೂಡಾಮಣಿ ಯಾದ ಪಾರ್ಥಸಾರಥಿಯು ಸಜ್ಜನಹಿತೈಷಿಯಾಗಿ ಶಿಷ್ಯನ ಬಂಡಿಯನ್ನು ಹೊಡೆ ದನು. ತತ್ವವಿಚಾರವು ಅವಶ್ಯವೆಂಬಲ್ಲಿ ಆತನ ವಾಕ್ಯಗಳೇ ಪ್ರಮಾಣಗಳು.

1. "ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ" ಅಂದರೆ ಜ್ಞಾನಫಲವು ಕರ್ಮಫಲಕ್ಕಿಂತಲೂ ಅತ್ಯಧಿಕವಾದುದು.

2. "ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।
ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥

ಅಂದರೆ ಚರುಪುರೋಡಾಶಾದಿ ದ್ರವ್ಯಗಳಿಂದ ಮಾಡುವ ಯಜ್ಞಕ್ಕಿಂತ ಶ್ರವಣಮನನಾದಿ ರೂಪವಾದ ಜ್ಞಾನಯಜ್ಞವು ಶ್ರೇಷ್ಠವು. ಸಕಲ ಕರ್ಮವೂ ಜ್ಞಾನಫಲದಲ್ಲಿ ಅಂತರ್ಭವಿಸುತ್ತದೆ.

3. "ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್ ।
ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥"

ಈ ಮಾನುಷದೇಹದಲ್ಲಿಯೇ ದೇಹತ್ಯಾಗರೂಪವಾದ ಮರಣಾತ್ಪೂರ್ವದಲ್ಲಿಯೇ (ತತ್ವಜ್ಞಾನದಿಂದ) ಕಾಮಕ್ರೋಧಗಳಿಂದುಂಟಾದ ಮನಸ್ಸಿನ ಚಾಂಚಲ್ಯವನ್ನು ಸಹಿಸುವದಕ್ಕೆ ಯಾವಾತನು ಸಮರ್ಥನಾಗುತ್ತಾನೆಯೋ, ಆತನೇ ಯೋಗಯುಕ್ತನು ; ಆತನಿಗೆ ಸುಖವುಂಟು. ತತ್ವಜ್ಞಾನವಿಲ್ಲದೆ, ಕಾಮಾದಿಜಯವು ಅಶಕ್ಯವಾದುದರಿಂದ ಸರ್ವಪ್ರಯತ್ನದಿಂದಲೂ ಜ್ಞಾನೋಪಾಯದಲ್ಲಿ ಪ್ರವರ್ತನಾಗಬೇಕೆಂದು ತಾತ್ಪರ್ಯವು.

4. "ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಂ ।"

ಅನಿತ್ಯವಾದ ಸುಖರಹಿತವಾದ ಈ ಮನುಷ್ಯ ದೇಹದಲ್ಲಿ ಜನ್ಮತಾಳಿ ವಿಳಂಬಮಾಡದೆ ನನ್ನನ್ನು ಸೇವಿಸು. ಅಂದರೆ ಶೀಘ್ರವಾಗಿ ತತ್ವವಿಚಾರಮಾಡಿ 'ನನ್ನ ಸ್ವರೂಪವನ್ನು ತಿಳಿದು ನನ್ನನ್ನು ಉಪಾಸನೆಮಾಡೆಂದು ತಾತ್ಪರ್ಯವು.

5. "ಅಧ್ಯಾತ್ಮ ವಿದ್ಯಾ ವಿದ್ಯಾನಾಂ" ಅಂದರೆ ಸಕಲ ವಿದ್ಯೆಗಳಲ್ಲಿ ಭಗವತ್ತತ್ವವನ್ನು ಪ್ರತಿಪಾದನೆಮಾಡುವ ಬ್ರಹ್ಮವಿದ್ಯೆಯು ಶ್ರೇಷ್ಠವು.

6. "ಅಧ್ಯಾತ್ಮಜ್ಞಾನನಿತ್ಯತ್ವಂ ತತ್ವಜ್ಞಾನಾರ್ಥದರ್ಶನಂ ।
ಏತದ್ಜ್ಞಾನಮಿತಿಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥"

ಸರ್ವದಾ ಭಗವದ್ವಿಷಯಕವಾದ ತತ್ವಜ್ಞಾನದಲ್ಲಿ ಆಸಕ್ತಿಯು ಮತ್ತು ಅಪರೋಕ್ಷಜ್ಞಾನಾರ್ಥವಾಗಿ ಶಾಸ್ತ್ರಪರ್ಯಾಲೋಚನೆಯು ಇವು ಮುಖ್ಯಜ್ಞಾನ ಸಾಧನಗಳು. ಇವಕ್ಕೆ ವಿರುದ್ಧವಾದವು ಜ್ಞಾನಸಾಧನಗಳಲ್ಲ.

ಈ ರೀತಿಯಲ್ಲಿ ತತ್ವವಿಚಾರಕ್ಕೆ ಪ್ರಾಧಾನ್ಯವನ್ನು ನಿರೂಪಿಸುವದು ಯದುಕುಲೋತ್ತಂಸನ ವಾಗಮೃತವನ್ನು ನೀವು ಪಾನಮಾಡಿರುವಿರಷ್ಟೆ ! "ಯಸ್ತನ್ನವೇದ ಕಿಂಋಚಾ ಕರಿಷ್ಯತಿ" ಎಂಬ ಶ್ರುತಿಯೂ ಕೂಡ ಯಾವನು ಪರಬ್ರಹ್ಮನನ್ನು ತಿಳಿಯಲಿಲ್ಲವೋ ಅಂಥವನಿಗೆ ವೇದಾಧ್ಯಯನದಿಂದ ತಾನೇ ಏನು ಪ್ರಯೋಜನವು ? ಎಂದು ಸ್ಪಷ್ಟವಾಗಿ ವೇದಾಂತವಿಚಾರಕ್ಕೆ ಪ್ರಾಶಸ್ತ್ಯವನ್ನು ಬೋಧಿಸುತ್ತದೆ. ಇದೇ ಅರ್ಥವನ್ನು

"ಚತುರ್ವೇದ್ಯಪಿ ಯೋ ವಿಪ್ರೋವಾಸುದೇವಂ ನ ವಿಂದತಿ ।
ವೇದಭಾರಕ್ರಾಂತಃ ಸ ವೈ ಬ್ರಾಹ್ಮಣಗರ್ದಭಃ ॥"

ಎಂಬ ಪ್ರಸಿದ್ಧವಾದ ಶ್ರುತಿವಾಕ್ಯ ಗರುಡಪುರಾಣವಚನವು ಧೃಢೀಕರಿಸುತ್ತದೆ. ಇನ್ನೂ ನಿಮಗೆ ತತ್ವವಿಚಾರದಲ್ಲಿ ಅಶ್ರದ್ಧೆಯೋ ?

ಸೇತುರಾಯರು— ಕ್ಷಮಿಸಬೇಕು. ತಿಳುವಳಿಕೆಯಿಲ್ಲದ ಜನರು ನಾನಾ ಪ್ರಕಾರವಾಗಿ ಮನಸ್ಸಿನಲ್ಲಿ ವಿರೋಧವನ್ನು ಕಲ್ಪಿಸಿಕೊಂಡು ಬ್ರಾಹ್ಮಣಜನಾಂಗದಲ್ಲೇ ಮನಸ್ತಾಪವನ್ನುಂಟುಮಾಡಿಬಿಡುವರು. ಇಷ್ಟುಮಾತ್ರವೇ ನನ್ನ ತಾತ್ಪರ್ಯ ವಿದ್ದಿತು !

ಶ್ರೀ ಶ್ರೀಗಳವರು— ಅದು ಎಂದಿಗೆ ತಾನೆ ತಪ್ಪುವದು ? ಸ್ನಾನ, ಸಂಧ್ಯಾ ಜಪ, ತಪ, ಹೋಮಾದಿಗಳ ಕರ್ತವ್ಯತೆಯ ವಿಷಯದಲ್ಲಿ ಉಪನ್ಯಾಸ ಮಾಡ ಕೂಡದೆಂದು ನಮ್ಮ ತಾತ್ಪರ್ಯವಲ್ಲ. ಮತ್ತು ಈಗ ಅನೇಕ ದಿವಸಗಳಿಂದಲೂ ನಾನಾ ಧರ್ಮಗಳ ವಿಷಯದಲ್ಲಿಯೂ ವೇದಪ್ರಾಮಾಣ್ಯದ ವಿಷಯದಲ್ಲಿಯೂ ಚರ್ಚೆಯು ನಡೆಯುತ್ತಲೇ ಇದೆ. ಆದರೆ ಸರ್ವಥಾ ತತ್ವವಿಚಾರಗಳಿಂದ ರಹಿತವಾದ ಉಪದೇಶಗಳು ಶ್ರೋತೃಜನರ ಆಕಾಂಕ್ಷೆಯನ್ನು ಪೂರ್ಣಮಾಡಲಾರದೆ, ವಕ್ತೃ ತಾತ್ಪರ್ಯವನ್ನೂ ವಿಶದಮಾಡಲಾರದೆ, ಹೇಳುವವರಿಗೂ, ಕೇಳುವವರಿಗೂ, ಉಭಯರಿಗೂ ಅತೃಪ್ತಿಕರವಾಗುವವು. ಮತ್ತು ಸುಧಾಪಾನದಲ್ಲಿ ಲೋಲುಪನಾದ ರಸಜ್ಞನು ಜಲ ಪಾನದಿಂದ ತೃಪ್ತನಾಗುವನೇ ?

ಕಿಂಚ, ನೀವೆ ಒಪ್ಪಿಕೊಳ್ಳುವಂತೆ ಕೆಲವು ಜನ ಅಜ್ಞರಿಗೆ ದುಃಖವಾಗುವ ದೆಂದು ದ್ವೈತತತ್ವವನ್ನು ನಾವು ಸರ್ವಥಾ ಮರೆಮಾಡಿ, ಕೇವಲ ವೇದಾದಿಗಳ ಪ್ರಾಮಾಣ್ಯ, ವೇದೋಕ್ತಕರ್ಮ, ಕರ್ತವ್ಯತೆ ಇವುಗಳ ವಿಷಯದಲ್ಲಿಯೇ ಉಪನ್ಯಾಸವನ್ನು ಜರುಗಿಸಿದರೆ, ನಂತರ ಕೆಲವುದಿನಗಳಲ್ಲಿ ಅಬ್ರಾಹ್ಮಣರೆಲ್ಲರೂ ಒಂದಾಗಿ ಸೇರಿ ಅವೈದಿಕಧರ್ಮಗಳನ್ನು ಪ್ರತಿಪಾದನೆ ಮಾಡಿ, ಜನರ ಐಕ್ಯಮತ್ಯ ವನ್ನು ಕೆಡಿಸಬಾರದು. ವರ್ಣಾಶ್ರಮ ಧರ್ಮಗಳು ಆವಶ್ಯಕವೆಂದರೆ ನಾವು ನೀಚರೆಂದು ನೀವು (ಬ್ರಾಹ್ಮಣರು) ಹೇಳಿದಂತಾಯಿತು ಆದುದರಿಂದ ನೀವು ಇನ್ನು ಮೇಲೆ ಸತ್ಯ, ಭೂತದಯೆ, ಪಶ್ಚಾತ್ತಾಪ ಇತ್ಯಾದಿ ಸರ್ವಸಾಮಾನ್ಯ ವಿಷಯಗಳಲ್ಲಿ ಉಪದೇಶ ಮಾಡಬೇಕೇ ಹೊರತು ಲೋಕೋಪದ್ರವಕರವಾದ "ವೈದಿಕ" ಧರ್ಮಗಳನ್ನು ಸಭೆಯಲ್ಲಿ ಉದ್ಘೋಷಿಸಬಾರದು ಎಂದು ಹೇಳುತ್ತಾರೆ. ಆಗ ನಾವು ಏನು ಮಾಡಬೇಕೆಂದು ನೀವು ಹೇಳುತ್ತೀರಿ !

ಸೇತುರಾಯರು—ಮಹಾಸ್ವಾಮೀ ! ಯಾರು ಏನು ಬೇಕಾದರೂ ಹೇಳಿ ಕೊಳ್ಳಲಿ ! ಯಥಾರ್ಥವಾದ ತತ್ವವಿಮರ್ಶೆಯನ್ನು ಮಾಡಿಯೇತೀರಬೇಕು. ವೇದ ವೇದಾಂತಗಳ ವಿಚಾರವು ಬ್ರಾಹ್ಮಣನಿಗೆ ಕುಲಪರಂಪರೆಯಿಂದ ಪ್ರಾಪ್ತವಾದ ಧರ್ಮವು.

ಶ್ರೀ ಶ್ರೀಗಳವರು—ಮುಖ್ಯಪ್ರಮೇಯವೇನೆಂದರೆ, ನಾವು ಜ್ಞಾನಶೂನ್ಯರಾಗಿ ಸತ್ತರೆ ಉತ್ತಮಲೋಕಗಳು ನಮಗೆ ಪ್ರಾಪ್ತವಾಗಲಾರವು. ಮುಖ್ಯತತ್ವವಾದ ಪರಬ್ರಹ್ಮನ ಸ್ವರೂಪವನ್ನು ಅಯಥಾರ್ಥವಾಗಿ ತಿಳಿದರೂ ನಮಗೆ ಕಲ್ಯಾಣವಿಲ್ಲ. ಆದುದರಿಂದ ಯಥಾರ್ಥಜ್ಞಾನವನ್ನು ಸಂಪಾದಿಸಬೇಕು. ಆ ಜ್ಞಾನವು ಅಪೌರುಷೇಯವಾದ ವೇದದಿಂದಲೇ ಬರಬೇಕು. ವೇದದ ಅರ್ಥವನ್ನು ಬಹುಕಾಲ ವಿಚಾರಮಾಡಿ ತಿಳಿಯದೇ ಹೋದರೆ, ಯಥಾರ್ಥಜ್ಞಾನವು ಹುಟ್ಟಲಾರದು. ಯಥಾರ್ಥಜ್ಞಾನದಿಂದಲೇ ಮೋಕ್ಷಪ್ರಾಪ್ತಿಯಾಗುವದೆಂಬ ನಿಯಮವುಂಟು.

ಆದುದರಿಂದ ಪ್ರತಿಯೊಬ್ಬರು ತಮ್ಮ ಅತ್ಯಂತಿಕ ಶ್ರೇಯಸ್ಸಾರ್ಥವಾಗಿ ಸ್ವಲ್ಪ ಲೌಕಿಕ ತೊಂದರೆಗಳು ಬಂದರೂ ಸಹಿಸಿಕೊಂಡು ವೇದಾದಿಪ್ರಮಾಣಗಳಿಂದ ನಿರ್ಣೀತವಾದ ಪರಮಪುರುಷನಾದ ಶ್ರೀಮನ್ನಾರಾಯಣನ ಸರ್ವೋತ್ತಮತ್ವವನ್ನು ವಿಚಾರ ಮಾಡಿ, ತತ್ವನಿಶ್ಚಯ, ಮಾಡಿಕೊಂಡು ನಾಮಮಾತ್ರದಿಂದ ಬ್ರಾಹ್ಮಣರೆಂದೆನಿಸಿ ಕೊಳ್ಳದೆ ನಿಜವಾದ ಬ್ರಾಹ್ಮಣ್ಯವನ್ನೇ ಸಂಪಾದಿಸಬೇಕು. ನಾತ್ವಿಕರಾದ ಸರ್ವ ರಿಗೂ ಇದೇ ನಮ್ಮ ಉಪದೇಶವು.



## XIV

ತಾ|| 12—7—1930 ರಲ್ಲಿ

**ಪ್ರಾಶ್ನಿಕರು— ಎಚ್. ಸುಬ್ಬರಾಯರು, ಎಂ.ಎ.**
**ವಿ. ಸೇತುರಾಯರು.**

---

**ಪ್ರಶ್ನೆ—** ಸ್ವಾಮೀ ! ನಾರಾಯಣನು ಪ್ರಳಯೋದಕಶಾಯಿಯಾಗಿ ಬ್ರಹ್ಮಾದಿ ಸರ್ವಜೀವರುಗಳ ಸೃಷ್ಟಿಗೂ ಪೂರ್ವದಲ್ಲಿ ಇದ್ದುದರಿಂದಲೂ, ಬ್ರಹ್ಮಾದಿ ಸರ್ವ ಚೇತನರ ವಿಷಯದಲ್ಲಿಯೂ ಸೃಷ್ಟಿಪಾಲನಾದಿ ವ್ಯಾಪಾರಗಳನ್ನು ಮಾಡುವದ ರಿಂದಲೂ ಅವನೇ ಪುರುಷೋತ್ತಮನು; ಅವನೇ ಪರಬ್ರಹ್ಮನು; ಬ್ರಹ್ಮರುದ್ರಾದಿ ಚೇತನರು ಅವನಿಂದ ಉತ್ಪನ್ನರಾಗಿ, ಅವನಿಂದ ನಿಯಮ್ಯರಾಗಿರುವದರಿಂದ ಅವರು "ಅಪರಬ್ರಹ್ಮ" ರು ಎಂದರೆ ಸರ್ವೋತ್ತಮ ವಸ್ತುಗಳಾಗಲಾರರು ಎಂದು ಉಪ ದೇಶವು ನಡೆಯಿತು. ಕೆಲವರು ಇದಕ್ಕೆ ಬೇರೆ ವಿಧವಾಗಿ ಉಪಪತ್ತಿಗಳನ್ನು ಹೇಳಿ, ಹೀಗೆ ಅನಿರ್ಣೀತವಾದ ನಾನಾರ್ಥಗಳುಳ್ಳದುದರಿಂದ ವೇದವು ಪ್ರಮಾಣವಲ್ಲವೆಂದು ಹೇಳಿರುವರು.

ಶ್ರೀ ಶ್ರೀಗಳವರು— ಅವರ ಯುಕ್ತಿಯನ್ನು ಸಂಕ್ಷೇಪವಾಗಿ ವಿವರಿಸಿರಿ.

ಸುಬ್ಬರಾಯರು— ಪ್ರಳಯ ಕಾಲದಲ್ಲಿ ವಟಪತ್ರದ ಮೇಲೆ ಬ್ರಹ್ಮ, ರುದ್ರ, ಇಂದ್ರ ಇತ್ಯಾದಿ ಅನಂತ ಚೇತನರೂ ಇದ್ದೇ ಇರಬೇಕು. ಅನ್ಯಥಾ, ಸರ್ವಥಾ ಪೂರ್ವದಲ್ಲಿಲ್ಲದ ಜೀವರುಗಳನ್ನು ನಾರಾಯಣನು ಸೃಷ್ಟಿ ಮಾಡಿದನೆಂದು ಹೇಳ ಬೇಕಾಗುವದು. ಆಗ ಜೀವರುಗಳು ಅನಾದಿ ಎಂದು ಹೇಳುವ ಮತಕ್ಕೆ ಭಂಗ ಬರುವದು. ಆದುದರಿಂದ ಬ್ರಹ್ಮರುದ್ರಾದಿ ಸರ್ವಚೇತನ ಸಮುದಾಯಾತ್ಮಕವಾದ ಒಂದಾನೊಂದು ವಸ್ತುವು ಪ್ರಳಯೋದಕದಲ್ಲಿ ಇತ್ತು. ಅದಕ್ಕೇ ಪರಬ್ರಹ್ಮ ನೆಂತಲೂ, ನಾರಾಯಣನೆಂತಲೂ ಹೆಸರು. ಸಮುದಾಯಕ್ಕೆ ಏಕವಚನಾಂತ ಶಬ್ದ ಪ್ರಯೋಗವು ಹೇಗೆಂದು ಶಂಕಿಸಬೇಕಾದುದಿಲ್ಲ. ಮಹಾರಾಜರೂ, ದಿವಾನರೂ,

ಅಮುಲ್ದಾರರೇ ಮೊದಲಾದ ಅನೇಕ ಅಧಿಕಾರಿಗಳ ಸಮುದಾಯಕ್ಕೆ "ಸರ್ಕಾರ" ವೆಂಬ ಏಕವಚನಾಂತವಾದ ಶಬ್ದಪ್ರಯೋಗವು ಲೋಕದಲ್ಲಿ ಕಂಡು ಬರುತ್ತಿದೆ. ಆದುದರಿಂದ ಬ್ರಹ್ಮರುದ್ರಾದಿ ಸಮಸ್ತ ಚೇತನ ಸಮುದಾಯವೇ ಪರಬ್ರಹ್ಮವಸ್ತುವು ಎಂದು ಹೇಳಬಹುದು.

ಅಥವಾ ಲಕ್ಷ್ಮೀಪತಿಯಾದ ನಾರಾಯಣನೊಬ್ಬನೇ ವಟಪತ್ರಶಾಯಿಯಾಗಿ ಇರಲಿ. ಅವನೇ ತನ್ನ ಲೀಲೆಯಿಂದ ಬ್ರಹ್ಮರುದ್ರೇಂದ್ರಾದಿ ಸುರನರತಿರ್ಯಗಾದಿ ನಾನಾ ರೂಪಗಳನ್ನು ತನ್ನ ಇಚ್ಛೆಯಿಂದ ತಾಳಿದನೆಂದು ಹೇಳಬಹುದು. ಆಗ "ಸರ್ವಂ ಖಲ್ವಿದಂ ಬ್ರಹ್ಮ," "ಅಯಮಾತ್ಮಾ ಬ್ರಹ್ಮ" ಇತ್ಯಾದಿ ಶ್ರುತಿಗಳೂ ಉಪಪನ್ನವಾಗುವವು. ಸರ್ವಚೇತನರೂ ಪರಬ್ರಹ್ಮನ ತುಂಡುಗಳು. ಅಂದರೆ ನಾರಾಯಣನ ಅಂಶಗಳೇ. ಈ ಅರ್ಥದಲ್ಲಿ "ಮಮೈವಾಂಶೋ ಜೀವಲೋಕೇ" ಇತ್ಯಾದಿ ಶ್ರೀ ಕೃಷ್ಣನ ವಾಕ್ಯಗಳೂ, "ಮಹಾವಿಷ್ಣುಃ ಪೃಥಿವೀಪತಿಃ" ಇತ್ಯಾದಿ ಪೌರಾಣಿಕ ಪ್ರಯೋಗಗಳೂ ಸಮಂಜಸವಾಗುವವು. ಹೀಗಿರುವಲ್ಲಿ ಸಮಸ್ತ ಚೇತನರಿಗಿಂತಲೂ ಅತ್ಯಂತ ಭಿನ್ನವಾದ ಒಂದೇ ಒಂದು ನಾರಾಯಣನೆಂದು ಹೆಸರುಳ್ಳ ಪರಬ್ರಹ್ಮ ವಸ್ತುವು ಇತ್ತು ಎಂದು ಹೇಗೆ ಹೇಳುವದು ?

ಶ್ರೀ ಶ್ರೀಗಳವರು— "ಏಕೋ ನಾರಾಯಣ ಆಸೀತ್" ಎಂಬ ಶ್ರುತಿಗೆ ಏನು ಅರ್ಥವು ?

ಸುಬ್ಬರಾಯರು— "ಆಸೀತ್" ಎಂದರೆ "ಆವಿರಾಸೀತ್" ಎಂದರ್ಥವು. ನಾರಾಯಣನೊಬ್ಬನು ವ್ಯಕ್ತನಾಗಿದ್ದನು. ಬ್ರಹ್ಮಾದಿರೂಪದಿಂದ ನಾರಾಯಣನು ವ್ಯಕ್ತನಾಗಿರಲಿಲ್ಲ. ಈ ತೊಂದರೆಯು ತಮಗೂ ಸಮಾನವೇ. ಮತ್ಸ್ಯ, ಕೂರ್ಮ ವರಾಹಾದಿ ರೂಪಗಳು ಭಗವಂತನ ಅಂಶಗಳಷ್ಟೇ! ಏಕೋ ನಾರಾಯಣ ಆಸೀತ್ ಎಂಬ ಶ್ರುತಿಗೆ ತಾವು ಯಾವ ರೀತಿಯಲ್ಲಿ ಅರ್ಥವನ್ನು ಮಾಡುವಿರೋ ಹಾಗೇ ನಾವೂ ಮಾಡುತ್ತೇವೆ.

ಶ್ರೀ ಶ್ರೀಗಳವರು— ಚೇತನಾಚೇತನಾತ್ಮಕವಾದ ಈ ಯಾವತ್ತು ಜಗತ್ತು ನಾರಾಯಣನ ಅಂಶವೆಂದೇ ನಮ್ಮ ಸಿದ್ಧಾಂತವು. *"ಪಾದೋಽಸ್ಯ ವಿಶ್ವಾ ಭೂತಾನಿ"

---

*ಸುಬ್ಬರಾಯರು— ಸ್ವಾಮೀ ! ಸಮಸ್ತ ಚೇತನರ ನಾಲ್ಕರಷ್ಟು ಪರಾಕ್ರಮವುಳ್ಳವನು ಬ್ರಹ್ಮನು ಎಂದು ಶ್ರುತಿಯು ಅರ್ಥವಾಗುವದು, ಇಷ್ಟೇನೇ ದೇವರ ಸಾಮರ್ಥ್ಯವು ?

ಶ್ರೀ ಶ್ರೀಗಳವರು— "ಸುವರ್ಣಕೋಶಂ ರಜಸಾ ಪರಿವೃತಂ ದೇವಾನಾಂ ವಸುಧಾನೀಂ ವಿರಾಜಂ ಅಮೃತಸ್ಯ ಪೂರ್ಣಾಂತಾಮುಕಲಾಂ ವಿಚಕ್ಷತೇ । ಪಾದಂ ಷಡ್ಹೋತುಃ ನ ಕಿಲಾವಿವಿತ್ಸೇ ॥"

ಇದರ ಅರ್ಥವು :— ಸುವರ್ಣಾತ್ಮಕವಾದ, ಅಬಾದಿ ಒಂಭತ್ತು ಆವರಣಗಳಿಂದ ಪರಿವೃತವಾದ ಬ್ರಹ್ಮದೇವರಿಗೆ ಶರೀರವಾದ ದೇವತೆಗಳಿಗೆ ತಮ್ಮ ಸಂಪತ್ತನ್ನು ಇಡುವ ಪೆಟ್ಟಿಗೆಯೋಪಾದಿಯಲ್ಲಿರುವ ಮತ್ತು ಮುಕ್ತವರ್ಗದಿಂದ ಪರಿಪೂರ್ಣವಾದ ಈ ಬ್ರಹ್ಮಾಂಡಕೋಶವನ್ನು

ಎಂಬ ಶ್ರುತಿಯು ಸಮಸ್ತ ಚೇತನರೂ ನಾರಾಯಣನ ಅಂಶಗಳು ಎಂದು ಹೇಳುತ್ತದೆ.

ಸುಬ್ಬರಾಯರು— ಸ್ವಾಮೀ! ಈಗ ವಿಚಿತ್ರವಾಯಿತು! ತಾವು ಜೀವಬ್ರಹ್ಮೈಕ್ಯವನ್ನು ಕಂಠತಃ ಒಪ್ಪಿದಂತಾಯಿತಲ್ಲವೇ ?

ಶ್ರೀ ಶ್ರೀಗಳವರು— ಅಗೋ! ಆ ಅಭಿಮಾನವು ಮಾತ್ರ ನಿಮಗೆ ಬೇಡ! ಅಂಶವೆಂಬ ಶಬ್ದವು ಎರಡು ರೀತಿ ಲೋಕದಲ್ಲಿ ಪ್ರಯುಕ್ತವಾಗಿದೆ. ಕೃಷ್ಣನು ನಾರಾಯಣನ ಅಂಶವು ಎಂದರೆ ಕೃಷ್ಣನು ನಾರಾಯಣನೇ ಅವನ ಸ್ವರೂಪವೇ ಎಂದರ್ಥವು. ದುರ್ಯೋಧನನ ಬಲವು ಭೀಮನ ಬಲದ ಹತ್ತನೇಯ ಅಂಶವು ; ಈ ಸಾಹುಕಾರನ ಆಸ್ತಿಯು ನನ್ನ ಧನದ ಚತುರ್ಥಾಂಶವಾಗುವದು ; ಇತ್ಯಾದಿ ಪ್ರಯೋಗಗಳಲ್ಲಿ ಅಂಶ ಶಬ್ದಕ್ಕೆ ಏನರ್ಥವು ? ನನ್ನ ಧನದ ಚತುರ್ಥಾಂಶವು ಸಾಹುಕಾರನಿಗೆ ಹೋಗುವುದೋ ? ಭೀಮಬಲದ ಹತ್ತನೇ ಒಂದುಭಾಗವು ದುರ್ಯೋಧನನ ದೇಹಕ್ಕೆ ಹರಿದುಕೊಂಡು ಬರುವುದೋ ?

ಸುಬ್ಬರಾಯರು— ಭೀಮನ ಬಲದ ಹತ್ತನೇಯ ಒಂದು ಭಾಗ ಬಲಕ್ಕೆ **ಸದೃಶ್ಯವಾದ,** ತದ್ಭಿನ್ನವಾದ ಬಲವುಳ್ಳವನು ದುರ್ಯೋಧನನು ಎಂದರ್ಥವು. ನನ್ನ ಧನದ ನಾಲ್ಕನೇಯ ಒಂದು ಭಾಗಕ್ಕೆ ಸದೃಶ್ಯವಾದ **ಬೇರೇ** ಧನವೇ ಸಾಹುಕಾರನಲ್ಲಿರುವದು ಎಂದರ್ಥವು.

ಶ್ರೀ ಶ್ರೀಗಳವರು— ಸರಿ. ಹೀಗೆ ಅಂಶ ಶಬ್ದಕ್ಕೆ ಸ್ವರೂಪಾಂಶವೆಂದೂ ಅರ್ಥವು; ಭಿನ್ನಾಂಶವು ಎಂದೂ ಅರ್ಥವು ಆಗುವದು. ಪ್ರಕೃತದಲ್ಲಿ ಜೀವರು ಪರಬ್ರಹ್ಮನ ಸಾಕ್ಷಾದಂಶವು (ಸ್ವರೂಪಾಂಶವು) ಎಂದು ಅದ್ವೈತಿಗಳೂ ಒಪ್ಪಿರುವದಿಲ್ಲ. ನಾವೂ ಒಪ್ಪುವದಿಲ್ಲ.

ಸುಬ್ಬರಾಯರು— ಸ್ವಾಮೀ! ಜೀವರೇ "ಪರಬ್ರಹ್ಮ"ನು ಎಂದು ಹೇಳುವ ಅದ್ವೈತಿಗಳು ಬ್ರಹ್ಮಾದಿ ಚೇತನರು ಪರಬ್ರಹ್ಮನ ಸ್ವರೂಪಾಂಶರೆಂದು ಏಕೆ ಒಪ್ಪುವದಿಲ್ಲ ? ಈ ವಿಷಯದಲ್ಲಿ ಆಧಾರ ಬೇಕು.

---

ಷಡಿಂದ್ರಿಯಗಳಲ್ಲಿ ನಿಂತು ವಿಷಯಭೋಗವನ್ನು ಮಾಡುವ ಶ್ರೀವಿಷ್ಣುವಿನ ಏಕದೇಶ ಪರಿಮಿತವಾದ ಭಿನ್ನಾಂಶವೆಂತಲೇ ಜ್ಞಾನಿಗಳು ತಿಳಿಯುತ್ತಾರೆ. ಏಕೆಂದರೆ ಪುರುಷಸೂಕ್ತಾದ್ಯಾಗಮಗಳಲ್ಲಿ ಸರ್ವಭೂತಗಳೂ ಶ್ರೀ ವಿಷ್ಣುವಿನ ಪಾದದ ಅಂದರೆ ನಾಲ್ಕನೆಯ ಒಂದು ಭಾಗವು ಎಂದು ಹೇಳಿರುವ ಚತುರ್ಥಾಂಶಪರಿಮಿತತ್ವವನ್ನು ಈ ಸಮಸ್ತ ಜಗತ್ತೂ ಹೊಂದಿಲ್ಲ. ಮತ್ತೇನೆಂದರೆ ಈ ಯಾವತ್ತೂ ಜಗತ್ತು ವಿಷ್ಣುಸಾಮರ್ಥ್ಯದ ಏಕದೇಶ (ಅತ್ಯಲ್ಪ) ಪರಿಮಿತವಾದ ಸಾಮರ್ಥ್ಯವುಳ್ಳದ್ದು. ಶ್ರುತ್ಯನುಸಾರವಾಗಿ ಜಗತ್ತು ವಿಷ್ಣುವಿನ ಪಾದವು ಎಂದರೆ ನಾಲ್ಕನೇಯ ಒಂದು ಭಾಗ ಸಾಮರ್ಥ್ಯವುಳ್ಳದ್ದು ಎಂದು ಅರ್ಥವಲ್ಲ: ವಿಷ್ಣುಸಾಮರ್ಥ್ಯದ ಅನಂತಾಂಶಗಳಲ್ಲಿ ಒಂದಂಶವುಳ್ಳದ್ದು, ಎಂದು ತಿಳಿಯಬೇಕು.

ಶ್ರೀ ಶ್ರೀಗಳವರು— ಇಗೋ ! ಶಂಕರಭಾಷ್ಯೇ ಅಂಶಾಧಿಕರಣೇ-"ಜೀವಃ ಈಶ್ವರಸ್ಯಾಂಶೋ ಭವಿತುಮರ್ಹತಿ, ಯಥಾಗ್ನೇರ್ವಿಸ್ಫುಲಿಂಗಃ । ಅಂಶ ಇವಾಂಶೋ ನ ಹಿ ನಿರವಯವಸ್ಯ ಮುಖ್ಯೋಽಂಶಃ ಸಂಭವತಿ॥" ಇದಕ್ಕೆ ವ್ಯಾಖ್ಯಾನಕಾರರಾದ ಭಾಮತೀಕಾರರೂ ಕೂಡ "ಜೀವೋಬ್ರಹ್ಮಾಂಶ ಇವ ತತ್ತಂತ್ರತಯಾ ನತ್ವಂಶಃ" ಎಂದರೆ ಪರಬ್ರಹ್ಮನ ಆಧೀನರಾದದ್ದರಿಂದ ಪರಬ್ರಹ್ಮನ ಅಂಶವೆಂದು ಜೀವರಿಗೆ ಹೆಸರೇ ಹೊರತು ಜೀವರುಗಳು ಮುಖ್ಯತಃ ಪರಮಾತ್ಮನ ಅಂಶವಲ್ಲವೆಂದು ಬರೆದಿರುತ್ತಾರೆ. ಭಾಷ್ಯಾರ್ಥವು— "ಅಗ್ನಿ ಕಿರಣಗಳು ಅಗ್ನಿಯ ಅಂಶಗಳಂತೆ, ಜೀವನು ಬ್ರಹ್ಮನ ಅಂಶ ವೆಂದು ಹೇಳಿರುತ್ತದೆ (ಶ್ರುತಿಗಳಲ್ಲಿ). ಇಲ್ಲಿ ಅಂಶದಂತೆ ಅಂಶವು ಎಂದೇ ಅರ್ಥಮಾಡ ಬೇಕು. ಏಕೆಂದರೆ ಬ್ರಹ್ಮನು **ನಿರವಯುವನು.** ಆವನಿಗೆ ಪಾರಮಾರ್ಥಿಕವಾದ ಅಂಶವು ಇರುವದಿಲ್ಲ." ಈ ರೀತಿಯಲ್ಲಿ ಪರಬ್ರಹ್ಮನು ನಿರವಯವನಾದ್ದರಿಂದ ಜೀವರುಗಳು ಅವನ ಅಂಶವಾಗಲಾರರು ಎಂದೂ, ಅವನ ಆಧೀನರಾದ್ದರಿಂದ ಅವನ "ಅಂಶ"ರು ಎಂದು ವ್ಯವಹಾರವು ಸಂಭವಿಸುವದೆಂದೂ ಒಪ್ಪಿರುತ್ತಾರೆ.

ಸುಬ್ಬರಾಯರು— ನಿರವಯವನಿಗೆ ಅಂಶಭಾವವು ಕೂಡದೇ ಹೋದರೆ ಸ್ವಾಮಿತ್ವವೂ ಕೂಡಲಾರದು.

ಶ್ರೀ ಶ್ರೀಗಳವರು— ಅದು ಹೇಗೆ ?

ಸುಬ್ಬರಾಯರು—ನನ್ನ ಭೃತ್ಯನಿಗೆ ನಾನು ಸ್ವಾಮಿಯು ಎಂದರೆ ನನ್ನ ಇಂದ್ರಿಯ ವ್ಯಾಪಾರಗಳಿಂದ ನನ್ನ ಭೃತ್ಯನ ವ್ಯಾಪಾರವು ಹೀಗೇ ನಡೆಯಬೇಕೆಂದು ನಿಯಮಿಸುತ್ತೇನೆ. ಸರ್ವಥಾ ಅವಯವರಹಿತನಾದ ಬ್ರಹ್ಮನು ಅನಂತ ಜೀವರು ಗಳಿಗೆ ಸ್ವಾಮಿಯು ಹೇಗೆ ತಾನೇ ಆಗುವನು ?

ಶ್ರೀ ಶ್ರೀಗಳವರು— ಈ ಅನುಪಪತ್ತಿಯು ಬಂದೇ ಬರುವದು. ಅವರ ಗ್ರಂಥವು ಇರುವದು ಹಾಗೇ ! ನಾವೇನು ಮಾಡೋಣ !

ಸುಬ್ಬರಾಯರು— ಸ್ವಾಮೀ ? ಜೀವರುಗಳು ಬ್ರಹ್ಮನ ಸ್ವರೂಪಾಂಶವೆಂದು ಅದ್ವೈತಿಗಳು ಒಪ್ಪದಿದ್ದರೆ ಹೋಗಲಿ ! ದ್ವೈತಿಗಳು ಅಂಗೀಕರಿಸದಿರುವದರಲ್ಲಿ ಪ್ರಮಾಣವೇನು?

ಶ್ರೀ ಶ್ರೀಗಳವರು—"ಯಸ್ಮಾತ್ಕ್ಷರಮತೀತೋಹಮಕ್ಷರಾದಪಿಚೋತ್ತಮಃ । ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥" ಎಂದರೆ ದೇಹನಾಶ ವುಳ್ಳ ಬ್ರಹ್ಮಾದಿ ಚೇತನರು ಕ್ಷರಪುರುಷರು; ದೇಹನಾಶರಹಿತಳಾದ ಲಕ್ಷ್ಮೀದೇವಿಯು ಅಕ್ಷರ ಪುರುಷಳು. ಇಂಥ ಕ್ಷರಪುರುಷರಗಿಂತಲೂ ಅಕ್ಷರಪುರುಷರಗಿಂತಲೂ ಮೀರಿ ಇರುವದರಿಂದ ಪುರಾಣಗಳಲ್ಲಿಯೂ ವೇದಗಳಲ್ಲಿಯೂ ನಾನು ಪುರುಷೋತ್ತಮನು ಅಂದರೆ ಸರ್ವೋತ್ಕೃಷ್ಟಚೇತನನು ಎಂದು ಪ್ರಸಿದ್ಧನಾಗಿರುತ್ತೇನೆ; ಎಂದು ಶ್ರೀಕೃಷ್ಣನು ಸಮಸ್ತ ಜೀವರುಗಳಿಗಿಂತಲೂ ನಾನು ಉತ್ತಮನು ಮತ್ತು ಭಿನ್ನನು

ಎಂದು ಹೇಳಿರುವುದರಿಂದ "ಮಮೈವಾಂಶೋ ಜೀವಲೋಕೇ" ಎಂಬಲ್ಲಿಯೂ ಲೋಕದಲ್ಲಿರುವ ಜೀವರುಗಳು ನನ್ನ ಭಿನ್ನಾಂಶರು ಎಂದೇ ಅರ್ಥ ಮಾಡಬೇಕು.

ಸುಬ್ಬರಾಯರು— ಹಾಗಾದರೆ ಮತ್ಸ್ಯಾದಿ ರೂಪಗಳೂ ಭಿನ್ನಾಂಶವೇ ಆಗಲಿ ! ಪಕ್ಷಪಾತಕ್ಕೆ ಕಾರಣವೇನು ?

ಶ್ರೀ ಶ್ರೀಗಳವರು— ಮತ್ಸ್ಯಾದಿ ರೂಪಗಳಿಗೆ ಸರ್ವಥಾ ನಾಶವಿಲ್ಲ; ನಾರಾಯಣನಂತೆ ಜ್ಞಾನಾನಂದಾದಿ ಗುಣಗಳಿಂದ ಸರ್ವದಾ ಪರಿಪೂರ್ಣವಾಗಿರುತ್ತವೆ. ಜೀವರುಗಳಾದರೋ ದೇಹನಾಶವುಳ್ಳವರು. ಈ ಉಭಯವಿಷಯದಲ್ಲಿಯೂ ಸ್ಪಷ್ಟವಾದ ಪ್ರಮಾಣಗಳಿರುತ್ತವೆ. ಪ್ರಮಾಣಬಲದಿಂದ ಪ್ರಮೇಯಗಳನ್ನು ನಿಶ್ಚಯಿಸಬೇಕು.

ಸುಬ್ಬರಾಯರು— ಆ ಪ್ರಮಾಣಗಳು ಯಾವುವು ?

ಶ್ರೀ ಶ್ರೀಗಳವರು— *"ಜೀವಾ ಏವ ತು ದುಃಖಿನಃ" "ಕ್ಷರಃ ಸರ್ವಾಣಿ ಭೂತಾನಿ" ಮತ್ತು "ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೆ" ಇತ್ಯಾದಿ ಶ್ರುತಿಗಳು ಪ್ರಮಾಣಗಳು. ಅಲ್ಲದೆ ಜೀವರುಗಳು ಪರಬ್ರಹ್ಮನ ಅಂಶಗಳೆಂದು ಹೇಳಿದರೆ ಬ್ರಹ್ಮನಿಗೆ ನಾಯಿ, ಕುರಿ, ಕೋಳಿ ಇತ್ಯಾದಿ ನಾನಾ ಶರೀರಗಳಲ್ಲಿ ದುಃಖಾನುಭವವೂ, ವಿಕಾರವೂ ಬರಬೇಕಾಗುವುದು. ಪೂರ್ಣನಾದ ಪರಬ್ರಹ್ಮನಿಗೆ ವಿಕಾರವುಂಟೇ ?

ಸುಬ್ಬರಾಯರು— ಜೀವನಿಗೆ ದೇಹನಾಶವೂ, ಸುಖದುಃಖಭೋಗಜನ್ಯವಾದ ವಿಕಾರಾದಿಗಳೂ ಇರುವುದರಿಂದಲೂ, ಪರಬ್ರಹ್ಮನು ನಿತ್ಯನೂ ನಿರ್ವಿಕಾರನೂ ಆದುದರಿಂದಲೂ **"ಮಮೈವಾಂಶೋ ಜೀವಲೋಕೇ"** ಎಂಬಲ್ಲಿ ಜೀವರುಗಳು ನನ್ನ ಭಿನ್ನಾಂಶರು ಎಂದೇ ಅರ್ಥ ಮಾಡಬೇಕು ಎಂದು ತಾವು ಹೇಳಿದ ಹಾಗಾಯಿತು.

ಶ್ರೀ ಶ್ರೀಗಳವರು— ಅಷ್ಟೇ ಅಲ್ಲ ! ಸ್ಪಷ್ಟ ಶ್ರುತಿಗಳಿವೆ.

"ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರಃ ।
ಯೋಽಪ್ಸು ತಿಷ್ಠನ್ನದ್ಭ್ಯೋ ಅಂತರಃ ॥

---

ಇದರ ಅರ್ಥವು :— *ಜೀವರುಗಳೇ ದುಃಖವಿಶಿಷ್ಟರು. ಸರ್ವ ಪ್ರಾಣಿಸಮೂಹವೂ (ಬ್ರಹ್ಮಾದಿ ಸರ್ವ ಜಗತ್ತು) ನಾಶಹೊಂದುವುದರಿಂದ ಕ್ಷರವೆನ್ನಿಸುವುದು. ಹೀಗೆ ಜೀವರುಗಳಿಗೆ ದುಃಖವೂ ದೇಹಹಾನಿರೂಪವಾದ ನಾಶವೂ ಹೇಳಿರುತ್ತದೆ.

ಪರಮಾತ್ಮನ ಮೂಲರೂಪವು ಪೂರ್ಣವು; ಪರಮಾತ್ಮನ ಅವತಾರ ರೂಪವು ಪೂರ್ಣವು. ಪೂರ್ಣವಾದ ಮೂಲ ರೂಪದಿಂದ ಪೂರ್ಣವಾದ ಅವತಾರ ರೂಪಗಳು ಆವಿರ್ಭವಿಸುತ್ತವೆ. ಈ ಶ್ರುತಿಯಿಂದ ಮತ್ಸ್ಯಾದಿ ಸರ್ವ ಭಗವದವತಾರಗಳೂ ಮೂಲ ರೂಪಿಯಾದ ನಾರಾಯಣನಂತೆ ಪೂರ್ಣವಾಗಿರುವುವು ಎಂದು ನಿಶ್ಚಿತವಾಗುತ್ತದೆ.

ಯೋಽಗ್ನೌ ತಿಷ್ಠನ್ನಗ್ನೇರಂತರಃ ।
ಯೋಽಂತರಿಕ್ಷೇ ತಿಷ್ಠನ್ನಂತರಿಕ್ಷಾದಂತರಃ ॥
ಯೋ ವಾಯೌ ತಿಷ್ಠನ್ವಾಯೋರಂತರಃ ।
ಯೋ ದಿವಿ ತಿಷ್ಠನ್ದಿವಿ ಅಂತರಃ ॥
ಯೋ ಆದಿತ್ಯೇ ತಿಷ್ಠನ್ನಾದಿತ್ಯಾದಂತರಃ ।
ಯೋ ದಿಕ್ಷು ತಿಷ್ಠನ್ದಿಗ್ಭ್ಯೋಽಂತರಃ ॥

ಇತ್ಯಾದಿ ಇಪ್ಪತ್ತುಮೂರು ವಾಕ್ಯಗಳಿರುತ್ತವೆ.

**ತಾತ್ಪರ್ಯವು**- ಯಾವನು ಪೃಥಿವಿ (ಅಭಿಮಾನಿ ದೇವತೆ) ಯಲ್ಲಿ ಸ್ಥಿತನಾಗಿ ಪೃಥಿವಿಗಿಂತ ಭಿನ್ನನಾಗಿರುವನೋ.... ಅವನೇ ಅಂತರ್ಯಾಮಿಯು. ಯಾವನು ಅಗ್ನಿ ದೇವತೆಯಲ್ಲಿ ಸ್ಥಿತನಾಗಿ ಅಗ್ನಿಯಿಂದ **ಭಿನ್ನನಾಗಿರುವನೋ**........... ಅವನೇ ಅಂತರ್ಯಾಮಿಯು. ಯಾವನು ಅಂತರಿಕ್ಷದಲ್ಲಿ ಸ್ಥಿತನಾಗಿ ಅಂತರಿಕ್ಷದಿಂದ ಭಿನ್ನನಾಗಿರುವನೋ....ಅವನೇ ಅಂತರ್ಯಾಮಿಯು. ಯಾವನು ವಾಯುವಿನಲ್ಲಿ ಸ್ಥಿತನಾಗಿ ವಾಯು ದೇವತೆಯಿಂದ ಭಿನ್ನನೋ ಅವನೇ ಅಂತರ್ಯಾಮಿಯು. ಯಾವನು ದ್ಯುನಾಮಕದೇವತೆ ಯಲ್ಲಿ ಸ್ಥಿತನಾಗಿ ದ್ಯುನಾಮಕ ದೇವತೆಯಿಂದ ಭಿನ್ನನಾಗಿರುವನೋ, ಅವನೇ ಅಂತರ್ಯಾಮಿಯು. ಯಾವನು, ಆದಿತ್ಯನಲ್ಲಿ ಸ್ಥಿತನಾಗಿ ಆದಿತ್ಯನಿಂದ ಭಿನ್ನನಾಗಿರುವನೋ, ಅವನೇ ಅಂತರ್ಯಾಮಿಯು. ಯಾವನು ದಿಗ್ದೇವತೆಗಳಲ್ಲಿ ಸ್ಥಿತನಾಗಿ ದಿಗ್ದೇವತೆಗಳಿಂದ ಭಿನ್ನನಾಗಿರುವನೋ, ಅವನೇ ಅಂತರ್ಯಾಮಿಯು. ಹೀಗೆ ಇಪ್ಪತ್ತು ಮೂರು ವಾಕ್ಯಗಳಲ್ಲಿಯೂ ಪರಬ್ರಹ್ಮನಿಂದ ಪೃಥಿವ್ಯಾದಿ ದೇವತೆಗಳು ಭಿನ್ನರೆಂದು ಹೇಳುವುದರಿಂದ ಜೀವರುಗಳು ಪರಮಾತ್ಮನ ಸ್ವರೂಪಾಂಶವಾಗಲಾರರು.

ಸುಬ್ಬರಾಯರು— ಈ ಶ್ರುತಿಗಳಲ್ಲಿ "ಭೇದವು" ಸ್ಪಷ್ಟವಾಗಿ ಪ್ರತಿಪಾದಿತ ವಾಗಿರುವುದು. ಅದ್ವೈತಭಾಷ್ಯದಲ್ಲಿ ಇವುಗಳನ್ನುಹೇಗೆ ವ್ಯಾಖ್ಯಾನ ಮಾಡಿರುವರು ?

ಶ್ರೀ ಶ್ರೀಗಳವರು — "ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ" ಎಂಬ ಬ್ರಹ್ಮಸೂತ್ರದಲ್ಲಿ ಶಂಕರಾಚಾರ್ಯರೂ ಕೂಡ ಈ ಶ್ರುತಿಗಳನ್ನು ಜೀವಬ್ರಹ್ಮರಿಗೆ ಭೇದವು ಇರುತ್ತದೆ ಎಂಬ ಅರ್ಥದಲ್ಲಿಯೇ ವ್ಯಾಖ್ಯಾನ ಮಾಡಿರುತ್ತಾರೆ. ಈ ಸೂತ್ರ ಭಾಷ್ಯದಲ್ಲಿ ಶಂಕರಾಚಾರ್ಯರು ಜೀವನೇ ಪೃಥಿವ್ಯಾದಿಗಳ ಅಂತರ್ಯಾಮಿಯು ಏಕೆ ಆಗಬಾರದೆಂದು ಶಂಕಿಸಿಕೊಂಡು, ಕಾಣ್ವಶಾಖೆಯಲ್ಲಿಯೂ, ಮಾಧ್ಯಂದಿನ ಶಾಖೆಯಲ್ಲಿಯೂ, "ಯೋ ವಿಜ್ಞಾನೇತಿಷ್ಠನ್ ಮತ್ತು "ಯ ಆತ್ಮನಿ ತಿಷ್ಠನ್" ಇತ್ಯಾದಿ ಶ್ರುತಿಗಳಲ್ಲಿ ಬ್ರಹ್ಮನೇ **ಜೀವನಲ್ಲಿ** ಅಂತರ್ಯಾಮಿಯಾಗಿರುವನು (ಜೀವನ ಒಳಗೆ ಇದ್ದು ನಿಯಮಿಸುವನು. ನಾನಾವ್ಯಾಪಾರಗಳಲ್ಲಿ ಪ್ರೇರಿಸುವನು) ಎಂದು ಹೇಳಿರುವದರಿಂದ, ಜೀವನಿಗೆ ಸರ್ವಾಂತರ್ಯಾಮಿತ್ವವು ಸಂಭವಿಸಲಾರದು ಎಂದು ಯುಕ್ತಿಯನ್ನು ಉಪಪಾದನೆ ಮಾಡಿ ತೋರಿಸಿ, "**ತಸ್ಮಾಚ್ಛಾರೀರಾದನ್ಯ ಈಶ್ವರೋಽಂತರ್ಯಾಮೀ**

**ತಿಸಿದ್ಧಂ"** ಅಂದರೆ "ಆದುದರಿಂದ ಜೀವನಿಂದ **ಭಿನ್ನನಾದ** ಈಶ್ವರನೇ ಅಂತರ್ಯಾಮಿಯು" ಎಂದು ಸಿದ್ಧಾಂತ ಮಾಡಿರುತ್ತಾರೆ.

ಸುಬ್ಬರಾಯರು— ಹಾಗಾದರೆ ಅದ್ವೈತಕ್ಕೆ ಹಾನಿ ಒದಗಲಿಲ್ಲವೇ ?

ಶ್ರೀ ಶ್ರೀಗಳವರು— ಈ ಸೂತ್ರಭಾಷ್ಯದಲ್ಲಿ ಸಿದ್ಧಾಂತಿತವಾದ ಭೇದವು ಮತ್ತು ಅಂತರ್ಯಾಮಿತ್ವವು ವ್ಯಾವಹಾರಿಕವು; ಅಂದರೆ ಅಜ್ಞಜನರ ದೃಷ್ಟಿಯಿಂದ ಹೇಳಿದ್ದು ಎಂದು ಹೇಳುವರು. ಇಗೋ ಅವರ ಮಾತು :— "ಅವಿದ್ಯಾಪ್ರತ್ಯುಪಸ್ಥಾಪಿತ ಕಾರ್ಯಕರಣೋಪಾಧಿ ನಿಮಿತ್ತೋಽಯಂ ಶಾರೀರಾಂತರ್ಯಾಮಿಣೋರ್ಭೇದ ವ್ಯಪದೇಶೋ ನ ಪಾರಮಾರ್ಥಿಕಃ":— ಅವಿದ್ಯಾಜನ್ಯ (ಅಂತಃಕರಣರೂಪ) ಉಪಾಧಿ ನಿಮಿತ್ತದಿಂದ ಜೀವನಿಗೂ ಅಂತರ್ಯಾಮಿಗೂ ಭೇದವೆಂಬ ವ್ಯವಹಾರವೇ, ಹೊರತು ಭೇದವು ಪಾರಮಾರ್ಥಿಕವಲ್ಲ ಎಂದು ಇದರ ಅರ್ಥವು.

ಸುಬ್ಬರಾಯರು—ಸ್ವಾಮೀ ! ಬಹಳ ಆಶ್ಚರ್ಯವಾಗಿದೆ ! ಪೂರ್ವಪಕ್ಷವು ಅಜ್ಞದೃಷ್ಟಿಯಿಂದ ಮಾಡಿದುದೆಂದೂ, ಸಿದ್ಧಾಂತವು ಪಾರಮಾರ್ಥಿಕವೆಂದೂ ಲೋಕಸಿದ್ಧವಾದುದು. ಪ್ರಕೃತದಲ್ಲಾದರೋ ಜೀವನೇ ಬ್ರಹ್ಮನಾಗಲಿ, ಜೀವನೇ ಅಂತರ್ಯಾಮಿಯಾಗಲಿ ಇತ್ಯಾದಿ ರೀತಿಯಾಗಿ **ಅಜ್ಞದೃಷ್ಟಿಯಿಂದ** ಪೂರ್ವಪಕ್ಷವು ನಡೆದಿರುತ್ತದೆ. ಜೀವನು ಬ್ರಹ್ಮನಲ್ಲ, ಜೀವನು ಅಂತರ್ಯಾಮಿಯಲ್ಲ ಎಂಬ ಸಿದ್ಧಾಂತವೂ **ಅಜ್ಞದೃಷ್ಟಿಯಿಂದಾದರೆ** ಯಾವುದು ನಿಜ, ಯಾವುದು ಸುಳ್ಳು ಎಂದು ನಾವು ವ್ಯವಸ್ಥೆ ಮಾಡಬೇಕು ? ಮೂರು ನಾಲ್ಕು ಐದು ಎಂದು ಒಬ್ಬ ಬಾಲಕನು ಅಜ್ಞಾನದಿಂದ ಪೂರ್ವಪಕ್ಷ ಮಾಡಿದರೆ ಮೂರು ನಾಲ್ಕು ಐದಲ್ಲ, ಆರಿರುತ್ತದೆ ಎಂದು ಸಿದ್ಧಾಂತವನ್ನೂ ಅಜ್ಞಾನದಿಂದಲೇ ಮಾಡಿದರೆ ಲೋಕದಲ್ಲಿ ಪ್ರಮೇಯನಿಶ್ಚಯವು ದುರ್ಘಟವೇ ಸರಿ ! ಒಬ್ಬ ಆಂಗ್ಲೇಯ ಗ್ರಂಥಕರ್ತನೂ ಕೂಡ "It is as if one darkness expelling another darkness" ಎಂದರೆ "ಇದು ಒಂದು ಅಂಧಕಾರವು ಮತ್ತೊಂದು ಅಂಧಕಾರವನ್ನು ಪರಿಹಾರ ಮಾಡಿದಂತಾಯಿತು" ಎಂದು ಹೇಳಿರುತ್ತಾನೆ. ಜೀವನು ಅಂತರ್ಯಾಮಿಯು ಎಂಬ ಪೂರ್ವಪಕ್ಷಕ್ಕೆ ಜೀವನಿಂದ ಕಲ್ಪಿತ (ಸುಳ್ಳು) ಭೇದವುಳ್ಳ ಈಶ್ವರನು **ಅಂತರ್ಯಾಮಿಯು** ಎಂಬುದು ಉತ್ತರವೇ ?

ಶ್ರೀ ಶ್ರೀಗಳವರು— ಈ ಪ್ರಶ್ನೆಗೆ ಉತ್ತರವನ್ನು ನೀವು ಅದ್ವೈತಿಗಳನ್ನೇ ಕೇಳಬೇಕು. ಅಂದರೆ ಇಷ್ಟು ಮಾತ್ರ ಸಿದ್ಧವು. ಶಂಕರಭಾಷ್ಯದಲ್ಲಿ ಅನೇಕ ಸ್ಥಳಗಳಲ್ಲಿ ಇಂಥ ಶಂಕಾಸಮಾಧಾನಗಳು ನಡೆದಿರುತ್ತವೆ.

ಸುಬ್ಬರಾಯರು— ಸ್ವಾಮೀ ! ಈ ಸೂತ್ರ ಭಾಷ್ಯದಲ್ಲಿ ಜೀವನೇ ಬ್ರಹ್ಮನು, ಜೀವನೇ ಅಂತರ್ಯಾಮಿಯು ಎಂದು ಪೂರ್ವಪಕ್ಷ ಮಾಡಿದವನೇ ಪಾರಮಾರ್ಥಿಕ ದೃಷ್ಟಿಯುಳ್ಳವನಾದನು; ಜೀವನು ಅಂತರ್ಯಾಮಿಯು ಎಂದು ಸಿದ್ಧಾಂತ ಮಾಡಿದವನೇ ವ್ಯಾವಹಾರಿಕ ದೃಷ್ಟಿಯುಳ್ಳವನಾದನು. ಪೂರ್ವಪಕ್ಷಿಯು ಜ್ಞಾನಿಯು,

ಸಿದ್ಧಾಂತಿಯು ಅಜ್ಞಾನಿಯು ಎಂದು ಪ್ರಾಪ್ತವಾಯಿತು. ಇಂಥ ವಿಚಿತ್ರವು ಇನ್ನು ಎಲ್ಲಿಯೂ ಇರಲಾರದು. ಇದ್ದರೆ ಮತ್ತೊಂದು ಪ್ರಸಿದ್ಧವಾದ ಸ್ಥಳವನ್ನು ತೋರಿಸಬೇಕು.

ಶ್ರೀ ಶ್ರೀಗಳವರು—ಇಗೋ! "ಈಕ್ಷತೇರ್ನಾಶಬ್ದಂ" ಎಂಬ ಬ್ರಹ್ಮಸೂತ್ರದ ಶಂಕರಭಾಷ್ಯದಲ್ಲಿ ಸಾಂಖ್ಯಮತದ ರೀತ್ಯಾ "ಸದೇವ ಸೋಮ್ಯೇದಮಗ್ರ ಆಸೀತ್" ಎಂಬ ಶ್ರುತಿಯಲ್ಲಿರುವ ಸಚ್ಛಬ್ದವಾಚ್ಯವಾದ ವಸ್ತುವು ಪ್ರಧಾನವು (ಜಡ-ಪ್ರಕೃತಿಯು); ಅದೇ ಜಗತ್ಕಾರಣವೆಂದು ಪೂರ್ವಪಕ್ಷವು ಬಂದಿರುತ್ತದೆ. ಈ ಮತವನ್ನು ಶಂಕರಾಚಾರ್ಯರು ಖಂಡನೆ ಮಾಡಬೇಕಾಗಿ, "ತದೈಕ್ಷತ" ಎಂದರೆ "ಸಚ್ಛಬ್ಧವಾಚ್ಯವಾದ ವಸ್ತುವು ನೋಡಿತು" ಎಂದು ಹೇಳಿರುವದರಿಂದ ಈ ಕ್ಷಣ-ಕರ್ತೃತ್ವವು (ನೋಡೋಣವು) ಜಡ ಪ್ರಕೃತಿಗೆ ಸಂಭವಿಸುವದಿಲ್ಲವಾದುದರಿಂದಲೂ, ಬ್ರಹ್ಮನಿಗೆ ಸಂಭವಿಸಬಹುದಾದುದರಿಂದಲೂ ಬ್ರಹ್ಮನೇ ಜಗತ್ಕಾರಣನು ಜಡಪ್ರಕೃತಿಯಲ್ಲ ಎಂದು ಸಿದ್ಧಾಂತ ಮಾಡಿದರು. ಆದರೆ ಭಾಷ್ಯಕಾರರಿಗೇ ಇಲ್ಲಿ ಬಹಳ ಸಂಕಟವು ಪ್ರಾಪ್ತವಾಯಿತು. ನಿರ್ಗುಣನಾದ ಬ್ರಹ್ಮನಿಗೆ ಈಕ್ಷಣಕರ್ತೃತ್ವವು ಹೇಗೆ ಸಂಭವಿಸುವುದು ? ಎಂದು ಶಂಕಿಸಿಕೊಂಡು ಆರೋಪಿತ (ಸುಳ್ಳು, ಇಲ್ಲದಿರುವ) ಈಕ್ಷಣಕರ್ತೃತ್ವವನ್ನು ಬ್ರಹ್ಮನಲ್ಲಿ ಅಂಗೀಕಾರ ಮಾಡಿದುದರಿಂದ ಅಪಸಿದ್ಧಾಂತಾದಿ ದೋಷಗಳು ಬರುವದಿಲ್ಲವೆಂದು ಸಮಾಧಾನ ಹೇಳಿರುತ್ತಾರೆ.

ಸುಬ್ಬರಾಯರು— ಸ್ವಾಮೀ! **ಆರೋಪಿತ** (ಭ್ರಾಂತಿಗೆ ವಿಷಯವಾದ ಸುಳ್ಳಾದ) **ಈಕ್ಷಣಕರ್ತೃತ್ವವು** ಪ್ರಧಾನದಲ್ಲೂ ಇರಬಹುದಲ್ಲವೆ ? ಆದುದರಿಂದ ಸಚ್ಛಬ್ಧವಾಚ್ಯವಾದ ವಸ್ತುವು ಪ್ರಧಾನವೇ ಎಂದು ಏಕೆ ಹೇಳಬಾರದು ?

ಶ್ರೀ ಶ್ರೀಗಳವರು— ನೀವು ಹೇಳುವ ದೂಷಣವು ದುಷ್ಪರಿಹರವು. ಆದರೆ ಅವರು ಹೇಳುವ ಮಾತನ್ನು ಕೇಳಿರಿ; ಅಮಾತ್ಯನಲ್ಲಿ ಇವನು ರಾಜನು ಎಂಬ ಭ್ರಮವು ಬೇಗ ಬರುವುದು, ನೀಚಭೃತ್ಯನಲ್ಲಿ ಆ ಭ್ರಮವೂ ಕೂಡ ಬರುವದಿಲ್ಲ. "ಆರೋಪಿತರಾಜತ್ವವೂ" ಕೂಡ ಹೇಗೆ ಭೃತ್ಯನಲ್ಲಿ ಸಂಭವಿಸದೆ ಅಮಾತ್ಯನಲ್ಲಿ ಸಂಭವಿಸುವದೋ, ಹಾಗೆಯೇ ಆರೋಪಿತಕರ್ತೃತ್ವ ಕೂಡ ಪ್ರಧಾನದಲ್ಲಿ ಸಂಭವಿಸದೆ ಚೇತನನಾದ ಬ್ರಹ್ಮನಲ್ಲಿ ಸಂಭವಿಸುವದು. ಆದುದರಿಂದ ಸಚ್ಛಬ್ದವಾಚ್ಯವಾದ ವಸ್ತುವು ಬ್ರಹ್ಮನೇ: ಪ್ರಧಾನವಲ್ಲವೆಂದು ಟಿಪ್ಪಣೀಕಾರರು ಹೇಳಿರುತ್ತಾರೆ. ಆದರೆ ಇದು ಚಮತ್ಕಾರದ ಮಾತಾಯಿತೇ ಹೊರತು ಯುಕ್ತಿಸಹವಲ್ಲವು. ಅಮಾತ್ಯನಿಗೂ ಸೇನಾದಿಗಳೂ, ಉತ್ತಮ ಉಡಿಗೆಗಳೂ, ಒಂದೂ ಇಲ್ಲ ಎಂದು ಇಟ್ಟುಕೊಳ್ಳೋಣ: ನೀಚಭೃತ್ಯನಿಗಂತೂ ಒಂದೂ ಇಲ್ಲ. ಹೀಗಿರುವಲ್ಲಿ ಇಬ್ಬರೂ ಸಮರು. ಅಂದರೆ ಇಬ್ಬರಲ್ಲಿ ಯಾರೊಬ್ಬರನ್ನು ನೋಡಿದರೂ "ರಾಜ" ನೆಂಬ ಭ್ರಮವು ಬರಬಹುದು; ಅಥವಾ ಬರದೇ ಇರಬಹುದು. ನೀಚಭೃತ್ಯನಲ್ಲಿಲ್ಲದ ಯಾವುದಾದರೂ **ಉಡಿಗೆ**

ತೊಡಿಗೆಗಳ ವೈಲಕ್ಷಣ್ಯವು ಅಮಾತ್ಯನಲ್ಲಿದ್ದರೆ ಆಗ ಅಮಾತ್ಯನಲ್ಲಿ ರಾಜಭ್ರಮವು ಬರುವುದೆಂದೂ, ಭೃತ್ಯನಲ್ಲಿ ಬರುವುದಿಲ್ಲವೆಂದೂ, ಕಥಂಚಿತ್ ಹೇಳಬಹುದಾಗಿತ್ತು. ಹೀಗೆಯೇ ಪ್ರಕೃತದಲ್ಲಿ ಪ್ರಧಾನವೂ, ನಿರ್ಗುಣ ಬ್ರಹ್ಮನೂ ಈ ವಿಷಯದಲ್ಲಿ ಸಮರು; ಅಂದರೆ ಇಬ್ಬರಿಗೂ ವಾಸ್ತವವಾದ ಈಕ್ಷಣಕರ್ತೃತ್ವವು ಇರುವದಿಲ್ಲ. ಇನ್ನೂ ವಿಚಾರ ಮಾಡಿದರೆ ಜಡಪ್ರಕೃತಿಯ ನಾನಾ ವ್ಯಾಪಾರಗಳನ್ನು ನಾವು ನೋಡುತ್ತಿರುವದರಿಂದ ಆರೋಪಿತ ಈಕ್ಷಣಕರ್ತೃತ್ವವು ಪ್ರಧಾನದಲ್ಲಿಯೇ ಸಂಭವಿಸುವದು.

ಹೀಗೆ ಅವರ ಮತದಲ್ಲಿ, ಪೂರ್ವಪಕ್ಷವು ಒಂದು ಅಜ್ಞದೃಷ್ಟಿಯನ್ನು ಅವಲಂಬಿಸಿಕೊಂಡು ಪ್ರಾಪ್ತವಾಯಿತು. ಸಿದ್ಧಾಂತವೂ ಅಜ್ಞದೃಷ್ಟಿಯಿಂದಲೇ ನಿರ್ವಾಹ್ಯವು. ಹಾಗಿರುವದರಿಂದಲೇ "ಚೋದ್ಯಂ ವಾ ಪರಿಹಾರೋ ವಾ ಕ್ರಿಯತಾಂ ದ್ವೈತಭಾಷಯಾ । ನ ಹ್ಯದ್ವೈತೇ ಶಾಸ್ತ್ರಚೋದನಾ" ಎಂದರೆ ಎಲ್ಲ ಶಂಕಾಸಮಾಧಾನಗಳೂ ದ್ವೈತಭಾವದಿಂದಲೇ (ವ್ಯವಹಾರ ದೃಷ್ಟಿಯಿಂದಲೇ) ನಡೆಯಬೇಕು. ಅದ್ವೈತ ವಿಷಯದಲ್ಲಿ ಪ್ರಶ್ನೆಯೇ ಅನುಚಿತವು; ಎಂದು ಪ್ರಾಚೀನರು ಹೇಳಿರುತ್ತಾರೆ.

ಸುಬ್ಬರಾಯರು— ಹಾಗಾದರೆ ಅದ್ವೈತವನ್ನು ಸಾಧಿಸುವ ಬಗೆ ಹೇಗೆ ?

ಶ್ರೀ ಶ್ರೀಗಳವರು— ಅದ್ವೈತವನ್ನು ಸಾಧನೆ ಮಾಡುವದಕ್ಕೆ ಹೊರಟರೆ ದ್ವೈತಭಾವವು ಬರುವದು; ನಿರ್ಗುಣಬ್ರಹ್ಮನನ್ನು ಪ್ರಮಾಣಗಳಿಂದ ಉಪಪಾದನೆ ಮಾಡುವದಕ್ಕೆ ಹೊರಟರೆ, ನಿರ್ಗುಣತ್ವವು ಭಗ್ನವಾಗುವದು. ಆದುದರಿಂದ "ಅವಚನೇನ್ನೈವ ಪ್ರೋವಾಚ" ಎಂಬ ಶ್ರುತ್ಯನುಸಾರವಾಗಿ "ಮೌನಮೇವ ಪರಂ ಉತ್ತರಂ" ಎಂದು ತಿಳಿದು ಶಿಷ್ಯನು ಪ್ರಶ್ನೆ ಮಾಡಿದಾಗ ಗುರುಗಳು ಮೌನವನ್ನು ಧರಿಸಿದರೆಂದು ಶಂಕರಭಾಷ್ಯದಲ್ಲಿ ಬರೆದಿರುತ್ತದೆ.

ಸುಬ್ಬರಾಯರು—ಸ್ವಾಮೀ ! ಬುದ್ಧದೇವನೂ ಅಂತ್ಯತತ್ವವೇನೆಂದು ಶಿಷ್ಯನು ಪ್ರಶ್ನೆ ಮಾಡಿದಾಗ ಮೌನವನ್ನು ಧರಿಸಿದನೆಂದು ಬರೆದಿರುತ್ತದೆ. ಆಂಗ್ಲೇಯರು "It stands self-condemned" ಎಂದರೆ ತಮ್ಮ ಮತಕ್ಕೆ ಪ್ರಮಾಣಗಳಿಲ್ಲವೆಂದು ಮೌನದಿಂದ ಒಪ್ಪಿಕೊಂಡು ತಮ್ಮನ್ನು ತಾವೇ ದೂಷಿಸಿಕೊಂಡಂತಾಯಿತು ಎಂದು ಬರೆದಿರುತ್ತಾರೆ. ಇಲ್ಲಿಯೂ ಹಾಗೆಯೇ ಆಯಿತಲ್ಲ !

ಸೇತುರಾಯರು— ಸ್ವಾಮೀ ! ಅದ್ವೈತವನ್ನು ಪ್ರಮಾಣಗಳಿಂದ ಸಾಧನೆ ಮಾಡುವದಕ್ಕೆ ಹೊರಟರೆ, ದ್ವೈತಭಾವವು ಬಂದು ಬಿಡುವದರಿಂದ ಸ್ವಕ್ರಿಯಾ ವಿರೋಧ ಪರಿಹಾರಾರ್ಥವಾಗಿ ಮೌನವನ್ನು ಧರಿಸಬೇಕು. ಹಾಗಾದರೆ ಈ ಯಾವತ್ತು ಲಕ್ಷಾಂತರ ಗ್ರಂಥಗಳು ಏತಕ್ಕೆ ?

ಶ್ರೀ ಶ್ರೀಗಳವರು—ಈ ದಿವಸದ ನಿಮ್ಮ ಪ್ರಶ್ನೆಗಳೆಲ್ಲ ಅದ್ವೈತಗ್ರಂಥಕಾರರಿಗೆ ಕೇಳತಕ್ಕವುಗಳು. ಅವರ ಮತದ ರೀತ್ಯಾ ಸಕಲವೂ ವ್ಯರ್ಥವೇ !

ಸುಬ್ಬರಾಯರು— ಸ್ವಾಮೀ ! ಅವರೂ ಹಾಗೆಯೇ ಹೇಳುವರೇ ?

ಶ್ರೀ ಶ್ರೀಗಳವರು— "ಸಿದ್ಧಂತು ನಿವರ್ತಕತ್ವಾತ್" ಎಂದರೆ ನಮ್ಮ ಶಾಸ್ತ್ರವು ಅದ್ವೈತವನ್ನು ಪ್ರತಿಪಾದನೆ ಮಾಡದೆ ಇದ್ದರೂ, ದ್ವೈತಭ್ರಮೆಯನ್ನು ನಿವೃತ್ತಿ (ಅವಿದ್ಯಾನಿವೃತ್ತಿ) ಮಾಡುವದು. ಆದುದರಿಂದ ನಮ್ಮ ಶಾಸ್ತ್ರವು ಸಫಲವಾಯಿತು. ಎಂದು ಹೇಳುವರು, ಆದರೆ ಇದು ಸಮೀಚೀನವಾದ ಯುಕ್ತಿಯಾಗಲಾರದು. ಅದ್ವೈತ ವನ್ನು ಪ್ರತಿಪಾದನೆ ಮಾಡದೆ ದ್ವೈತಭ್ರಮೆಯನ್ನು ಪರಿಹರಿಸುವದು ಅಸಂಭಾವಿ ತವು. ಕಿಂಚ ಭ್ರಮೆಯು ಯಾರಿಗೆ ಹೇಗೆ ಬಂತು ? "ಅಸಂಗೋಹ್ಯಯಂ ಪುರುಷಃ" ಎಂಬ ಶ್ರುತ್ಯನುಸಾರವಾಗಿ ನಿತ್ಯಜ್ಞಪ್ತಿಸ್ವರೂಪನಾದ ಅವಿದ್ಯಾಸಂಬಂಧ ರಹಿತನಾದ ಬ್ರಹ್ಮನಿಗೆ ಭ್ರಮವು ಬರುವದೆಂದರೇನು ? ಈ ಪ್ರಶ್ನೆಗೆ ಉತ್ತರವು ದುರ್ನಿರೂಪವೆಂದೇ ಹೇಳಿರುವರು. ಈ ಮಾತು ಆಪಾತತಃ ರಮಣೀಯವಾಗಿದೆಯೇ ಹೊರತು ಅದನ್ನು ನಂಬಿ ಅನುಷ್ಠಾನ ಮಾಡುವದಕ್ಕೆ ಹೊರಟರೆ ಅನುಪಪತ್ತಿಗಳು ಎಂಥವರಿಗೂ ತೋರದೇ ಇರಲಾರವು.

ಸುಬ್ಬರಾಯರು—ಸ್ವಾಮೀ ! ಇಷ್ಟು ಉಪನ್ಯಾಸದಿಂದ "ಯ ಆತ್ಮನಿ ತಿಷ್ಠನ್" ಇತ್ಯಾದಿ ಶ್ರುತಿಗಳಲ್ಲಿ ಸ್ಪಷ್ಟವಾಗಿ ಜೀವಬ್ರಹ್ಮರಿಗೆ ಭೇದವು ಹೇಳಿರುವದರಿಂದ *ಜೀವನು ಪರಬ್ರಹ್ಮನ ಭಿನ್ನಾಂಶವೇ ಎಂದು ಸಿದ್ಧವಾಯಿತು. ಬ್ರಹ್ಮಾದಿ ಚೇತನ ಸಮುದಾಯವೇ ಪರಬ್ರಹ್ಮವಸ್ತುವೆಂದು ಏಕೆ ಹೇಳಬಾರದು ?

ಶ್ರೀ ಶ್ರೀಗಳವರು— ಸಮುದಾಯವೆಂದರೆ ದ್ರಾಕ್ಷಿ, ಬಾದಾಮಿ, ಕಲ್ಲುಸಕ್ಕರೆ ಮೊದಲಾದವುಗಳ ಮಿಶ್ರಣದಂತೆಯೋ (Mixture) ಅಥವಾ ಅನೇಕ ಜೇನು ಹುಳುಗಳಿಂದ ತರಲ್ಪಟ್ಟ ನಾನಾ ಪುಷ್ಪರಸಗಳು ಕಲೆತು ಪರಿಣತವಾಗಿ ಜೇನುತುಪ್ಪ ವೆಂಬ ಒಂದು ಬೇರೆ ಪದಾರ್ಥವಾಗುವದು. ಅಂಥ ಸಮುದಾಯವೇ (Compound) ಪರಬ್ರಹ್ಮವಸ್ತುವು ?

ಸುಬ್ಬರಾಯರು—ದ್ರಾಕ್ಷಿ ಬಾದಾಮಿಗಳ ಮಿಶ್ರಣದಂತೆ ಎಂದು ಹೇಳುತ್ತೇವೆ.

ಶ್ರೀ ಶ್ರೀಗಳವರು—ಅನೇಕ ಚೇತನರ ಒಂದು ಸಮುದಾಯವು ಪ್ರಳಯಕಾಲ ದಲ್ಲಿತ್ತು ಎಂದು ನೀವು ಹೇಳಿದ ಹಾಗಾಯಿತು. ಆದರೆ ಈ ಚೇತನರೆಲ್ಲರೂ "ಪರಬ್ರಹ್ಮ" ವಸ್ತುವಾಗಲಾರರು. **"ಯತೋ ವಾ ಇಮಾನಿ ಭೂತಾನಿ**

---

*"ನಾ ವಿಷ್ಣುಃ ಪೃಥಿವೀಪತಿಃ" ಎಂದರೆ ಮಹಾವಿಷ್ಣುವೇ ರಾಜನು ಎಂದು ಆಪಾತತಃ ತೋರುವ ಅರ್ಥವು. ವಿಷ್ಣುವೇ ರಾಜಜೀವನಾದರೆ ಆತನಿಗೆ ವಿಕಾರಗಳೂ ಮರಣಾದಿ ದುಃಖ ಗಳೂ ಬರಬೇಕಾಗುವುದು. ಆದುದರಿಂದ ವಿಷ್ಣುವು ರಾಜನಲ್ಲಿ ಇರುತ್ತಾನೆ ಎಂದು ಅರ್ಥ ಮಾಡ ಬೇಕು. "ರಾಜರಾಜೇಶ್ವರ" ನೆಂಬ ವಿಭೂತಿರೂಪದಿಂದ ನಾರಾಯಣನು ಮಾಂಧಾತೃ, ಪ್ರಿಯ ವ್ರತ, ಧ್ರುವ ಪ್ರಹ್ಲಾದಾದಿ ಚಕ್ರವರ್ತಿಗಳಲ್ಲಿರುತ್ತಾನೆಂಬುದು ಭಾಗವತದಲ್ಲಿ ಸುಪ್ರಸಿದ್ಧವು.

ಜಾಯಂತೇ ” “ ಯ ಆತ್ಮನಿ ತಿಷ್ಠನ್ ಅಂತರೋ ಯಮಯತಿ ” ಎಂಬ ಶ್ರುತಿಗಳಿಂದ ಸರ್ವ ಪ್ರಾಣಿಗಳಿಗೂ ಒಬ್ಬನು ಉತ್ಪಾದಕನು; ಜೀವರುಗಳಲ್ಲಿ ಅಂತರ್ಯಾಮಿಯಾಗಿ ಒಬ್ಬನೇ ನಿಯಾಮಕನು ಎಂಬ ತಾತ್ಪರ್ಯವು ಬರುವುದರಿಂದ ಸರ್ವೋತ್ತಮತ್ವವೂ ಸರ್ವ ನಿಯಾಮಕತ್ವವೂ ಒಬ್ಬನಿಗೇ ಬರುವದು. ಸಮುದಾಯವು ಪ್ರಳಯಕಾಲದಲ್ಲಿ ಇದ್ದರೂ ಸಮುದಾಯಗತ ಬ್ರಹ್ಮಾದಿ ಸರ್ವ ಚೇತನರಿಗೂ ನಾರಾಯಣನೇ ಉತ್ಪಾದಕನು. ನಾರಾಯಣನೇ ನಿಯಾಮಕನು ಎಂದು ನೀನು ಅಂಗೀಕರಿಸಬೇಕು. ಏವಂ ಚ ಸರ್ಕಾರದಲ್ಲಿ ಅನೇಕ ಜನರು ಇದ್ದರೂ ಮಹಾರಾಜರು ಒಬ್ಬರೇ ನಿಯಾಮಕರು ಹೇಗೋ ಹಾಗೆಯೇ ಇನ್ನೂ ವಿಲಕ್ಷಣವೂ ವಿಶಿಷ್ಟವೂ ಆದ ರೀತಿಯಲ್ಲಿ ನಾರಾಯಣನು ಸರ್ವನಿಯಾಮಕನು; ಅತ ಏವ “ ಪರಬ್ರಹ್ಮನು ” ( ಸರ್ವೋತ್ತಮ ವಸ್ತುವು) ಎಂದು ಸಿದ್ಧವಾಗುವದು.

ಸುಬ್ಬರಾಯರು—ಸ್ವಾಮೀ ! ಹಾಗಾದರೆ ಜೇನುತುಪ್ಪದಂತೆ ಬ್ರಹ್ಮಾದಿ ಚೇತನ ಸಮುದಾಯದ ಒಂದು ಪರಿಣಾಮ ವಿಶೇಷವೇ ಪರಬ್ರಹ್ಮನು ಎಂದು ಹೇಳಬಹುದು.

ಶ್ರೀ ಶ್ರೀಗಳವರು— ಇದು ದುರ್ಮತಗಳಲ್ಲಿ ಶ್ರೇಷ್ಠವಾದುದು. ಇಂಥಾ ವಿಶಿಷ್ಟಪದಾರ್ಥವೇ ಪರಬ್ರಹ್ಮವಸ್ತುವಾದರೆ ಬ್ರಹ್ಮಾದಿ ಚೇತನರು ಪರಬ್ರಹ್ಮನಿಂದ ಒಡೆದು ಹೊರಗೆ ಬಂದಾಗ ವಿಶಿಷ್ಟವು ಭಿನ್ನಭಿನ್ನವಾಗಿ ಪರಮಾತ್ಮನು ನಾನಾವಿಕಾರಗಳನ್ನು ಹೊಂದಬೇಕಾಗುವದು. ಕೊನೆಗೆ ವಿಶಿಷ್ಟಕ್ಕೆ ನಾಶವೂ ಪ್ರಾಪ್ತವಾಗಿ ಬ್ರಹ್ಮನೇ ಇಲ್ಲವೆಂದಾಗುವದು. ಮತ್ತು ಈ ಮತದ ಪ್ರಕಾರ ಜೀವರುಗಳ ಸಂಘದಿಂದ ವಿಶಿಷ್ಟಬ್ರಹ್ಮನು ಹುಟ್ಟಿದನು ಎಂದು ಪ್ರಾಪ್ತವಾಗುವದೇ ಹೊರತು ಬ್ರಹ್ಮನಿಂದ ಜೀವೋತ್ಪತ್ತಿಯನ್ನು ಹೇಳಿದ ಹಾಗಾಗಲಿಲ್ಲ. ಸುಣ್ಣಕಲ್ಲು ಮತ್ತು ನೀರು ಇವುಗಳ ಸಂಯೋಗದಿಂದ ಸುಣ್ಣವೆಂಬ ವಿಶಿಷ್ಟಪದಾರ್ಥವು ಹುಟ್ಟುತ್ತದೆ. ಹೈಡ್ರೋಜನ್ ಮತ್ತು ಆಕ್ಸಿಜನ್ ಎಂದು ನೀವು ಕರೆಯುವ ವಾಯುಗಳ ಸಂಯೋಗದಿಂದ ಜಲವೆಂಬ ವಿಶಿಷ್ಟಪದಾರ್ಥವು ಹುಟ್ಟುತ್ತದೆ. ಆದರೆ ಸುಣ್ಣದಿಂದ ಸುಣ್ಣಕಲ್ಲು ಹುಟ್ಟಲಾರದು. ಜಲವು ಸ್ವಯಂ ನಾಶವಾಗದೆ ಜಲದಿಂದ ಆಕ್ಸಿಜನ್ ಎಂಬ ವಾಯುವು ಹುಟ್ಟಲಾರದು.

ಸುಬ್ಬರಾಯರು—ಸ್ವಾಮೀ ! ಸೃಷ್ಟಿಗೆ ಪೂರ್ವದಲ್ಲಿ ವಿಶಿಷ್ಟವಾಗಿದ್ದ ಪರಬ್ರಹ್ಮನು ಒಡೆದು ಹೋಗಿ ನಾನಾ ಜೀವರುಗಳು ಉತ್ಪನ್ನರಾದರು. ಈಗ ಪರಬ್ರಹ್ಮನೇ ಇಲ್ಲ ಎಂದು ಯಾಕೆ ಹೇಳಬಾರದು ?

ಶ್ರೀ ಶ್ರೀಗಳವರು— ಪರಮಾತ್ಮನು ನಿತ್ಯನೂ ನಿರ್ವಿಕಾರನೂ ಆಗಿರುವನು. ಅವನು ಅಚ್ಛೇದ್ಯನು ಮತ್ತು ಅಭೇದ್ಯನು ಎಂದು “ನಿರ್ವಿಕಾರೋಽಕ್ಷರಃ ಶುದ್ಧಃ” ಎಂಬ ಶ್ರುತಿಯು ಹೇಳುವದು. ಆದುದರಿಂದ ನೀವೆಲ್ಲರೂ ನಿತ್ಯನೂ ನಿರ್ವಿಕಾರನೂ ಪರಮಾರ್ಥವಾಗಿ ಸರ್ವಾಂತರ್ಯಾಮಿಯೂ ಸರ್ವನಿಯಾಮಕನೂ ಆಗಿರುವನೆಂದು ಶ್ರೀ ಪರಮಾತ್ಮನನ್ನು ಉಪಾಸನೆ ಮಾಡಿ ಅವನ ಅನುಗ್ರಹಕ್ಕೆ ಪಾತ್ರರಾಗಬೇಕು.

## XV

ತಾ॥ 18—7—1930 ರಲ್ಲಿ

### ಪ್ರಾಶ್ನಿಕರು— ಸೇತುರಾಯರು.

೧ ಪ್ರಶ್ನೆ— ಸೇತುರಾಯರು—ಸ್ವಾಮೀ ! 'ಸತ್ಯಂಜ್ಞಾನಮನಂತಂ ಬ್ರಹ್ಮ' ಇತ್ಯಾದಿ ಶ್ರುತಿಗಳಿಗೆ ಅದ್ವೈತಿಗಳು ಹೇಳುವ ಅರ್ಥವೇನು ? ಬ್ರಹ್ಮನು ಸತ್ಯಸ್ವರೂಪನು, ಜ್ಞಾನಸ್ವರೂಪನು, ಅನಂತನು ಎಂದಷ್ಟೇ ಅರ್ಥವಲ್ಲವೇ ?

ಶ್ರೀ ಶ್ರೀಗಳವರು— **ಅನೃತಜಡವಿರೋಧಿರೂಪಮಂತತ್ರಯ ಮಲ ಬಂಧನ ದುಃಖತಾವಿರುದ್ಧಂ***ಇತ್ಯಾದಿ ಶ್ಲೋಕೋಕ್ತರೀತ್ಯಾ ಬ್ರಹ್ಮನು ಅಸತ್ಯನಲ್ಲ, ಅಜ್ಞಾನಸ್ವರೂಪನಲ್ಲ, ಅಂತನಲ್ಲ ಹೀಗೆ " ಅನ್ಯಾಪೋಹವಾದ "ವೆಂದು ಪ್ರಸಿದ್ಧವಾದ ವಿಜ್ಞಾನವಾದದಲ್ಲಿಯೂ ಅದ್ವೈತಮತದಲ್ಲಿಯೂ, ಸಹ ಅಂತ್ಯ ತತ್ವವು ಸರ್ವವ್ಯಾವೃತ್ತ ರೂಪವಾದುದು; ಅಂದರೆ ಬ್ರಹ್ಮನಲ್ಲಿ ಸತ್ಯತ್ವ, ಜ್ಞಾನತ್ವ, ಅನಂತತ್ವವೇ ಮುಂತಾದ ಗುಣಗಳು ಇರುವದರಿಂದ ಅವನು ಸತ್ಯನು, ಜ್ಞಾನಸ್ವರೂಪನು, ಅನಂತನು ಎಂದು ಹೇಳುವದಿಲ್ಲ. ಮತ್ತೇನೆಂದರೆ ಅವನು ಅಸತ್ಯನಲ್ಲ, ಅಜ್ಞಾನಸ್ವರೂಪನಲ್ಲ, ಅಂತಸ್ವರೂಪನಲ್ಲವಾದುದರಿಂದ ಅವನನ್ನು ಸತ್ಯಂ, ಜ್ಞಾನಂ, ಅನಂತಂ ಎಂದು ವ್ಯವಹಾರ ಮಾಡುವದು; ಎಂದು ಹೇಳುತ್ತಾರೆ.

ಸೇತುರಾಯರು—ಸತ್ಯತ್ವವುಳ್ಳವನು, ಜ್ಞಾನತ್ವವುಳ್ಳವನಾದುದರಿಂದ ಸತ್ಯನು ಜ್ಞಾನಸ್ವರೂಪನು ಎಂದು ಏಕೆ ಹೇಳಬಾರದು ?

ಶ್ರೀ ಶ್ರೀಗಳವರು— ಬ್ರಹ್ಮನು ನಿರ್ಧರ್ಮಕನಾದುದರಿಂದ ದ್ರವ್ಯ, ಗುಣ, ಕ್ರಿಯಾ, ಜಾತಿರೂಪವಾದ ಯಾವ ನಿಮಿತ್ತಗಳೂ ಅವನಲ್ಲಿ ಸಂಭವಿಸಲಾರವು. ಆದುದರಿಂದ ಸತ್ಯತ್ವಾದಿ ಗುಣಪ್ರಯುಕ್ತವಾಗಿ ಸತ್ಯಂ, ಜ್ಞಾನಂ, ಅನಂತಂ ಇತ್ಯಾದಿ ಶಬ್ದವಾಚ್ಯನು ಎಂದು ಹೇಳಲಾರರು. ಮತ್ತೇನೆಂದರೆ ಲಕ್ಷಣಯಾ ಅಸತ್ಯತ್ವಾದಿ ವ್ಯಾವೃತ್ತಿಪೂರ್ವಕವಾಗಿ ' ಬ್ರಹ್ಮನು ' ಎಂದು ಇಷ್ಟೇ ಬೋಧವನ್ನು ಉಪನಿಷತ್ತುಗಳು ಹುಟ್ಟಿಸುತ್ತವೆ ಎಂದು ಹೇಳುತ್ತಾರೆ.

---

* ಅನೃತ ವಿರೋಧಿಯಾದುದರಿಂದ ಬ್ರಹ್ಮನು ಸತ್ಯವೆನಿಸುವನು ( ಸತ್ಯತ್ವವುಳ್ಳವನಾದ ಪ್ರಯುಕ್ತವಲ್ಲ; ) ಜಡವಿರೋಧಿಯಾದುದರಿಂದ ಬ್ರಹ್ಮನು ಜ್ಞಾನಸ್ವರೂಪನೆನಿಸುವನು ( ಜ್ಞಾನತ್ವ ವೆಂಬ ಧರ್ಮಪ್ರಯುಕ್ತವಲ್ಲ.) ಅಂತತ್ರಯ ವಿರುದ್ಧನಾದುದರಿಂದ ಅನಂತನೆನಿಸುವನು ( ಅಪರಿಚ್ಛಿನ್ನತ್ವರೂಪ ಧರ್ಮವಿರುವ ಪ್ರಯುಕ್ತವಲ್ಲ. ) ಹೀಗೆಯೇ ಮಲವಿರೋಧಿಯಾದುದರಿಂದ ಶುದ್ಧನೆನಿಸುವನು. ( ಶುದ್ಧತ್ವವೆಂಬ ಧರ್ಮವಿರುವದಿಲ್ಲ.) ಹೀಗೇಯೇ ಮಲವಿರೋಧಿ ಯಾದುದರಿಂದ ಮುಕ್ತನೆನಿಸುವನು. ( ಮುಕ್ತತ್ವವೆಂಬ ಧರ್ಮವಿರುವದಿಲ್ಲ. ) ಬಂಧವಿರೋಧಿಯಾದುದರಿಂದ ಮುಕ್ತನೆನಿಸುವನು. (ಮುಕ್ತತ್ವವೆಂಬ ಧರ್ಮವು ಬ್ರಹ್ಮನಲ್ಲಿಲ್ಲ.) ದುಃಖ ವಿರೋಧಿಯಾದುದರಿಂದ ಅನಂತನೆನಿಸುವನು (ಸೌಖ್ಯವೆಂಬ ಧರ್ಮವು ಬ್ರಹ್ಮನಲ್ಲಿಲ್ಲ.) ಹೀಗೆ ಶಂಕರಾಚಾರ್ಯರು ಹೇಳಿರುತ್ತಾರೆ.

ಸೇತುರಾಯರು— ಹೀಗೆ ಹೇಳುವದರಲ್ಲಿ ಅನುಪಪತ್ತಿಯೇನು ?

ಶ್ರೀ ಶ್ರೀಗಳವರು— ಎರಡು ಮುಖ್ಯ ಅನುಪತ್ತಿಗಳು ಇರುತ್ತವೆ. ಬ್ರಹ್ಮನಲ್ಲಿ ಸತ್ಯತ್ವಾದಿ ಯಾವ ಗುಣಗಳನ್ನೂ ಸಮರ್ಪಣೆಮಾಡದೆ ಬ್ರಹ್ಮನು ಅಸತ್ಯನಲ್ಲ ಎಂದು ಹೇಗೆ ಹೇಳುವದು ? ನೀವು ಸುಳ್ಳು ಹೇಳುವವರಲ್ಲ. ಎಂದು ಹೇಳಬೇಕಾದರೆ, ಇಗೋ ಇವರು ನಿಜ ಹೇಳಿದರು. ಆದುದರಿಂದ ಇವರು ಸುಳ್ಳು ಹೇಳುವವರಲ್ಲ ಎಂದು ತಾನೇ ಲೋಕದಲ್ಲಿ ವ್ಯವಹಾರವಿರುವದು. ಆದುದರಿಂದ ಬ್ರಹ್ಮನಲ್ಲಿ ಸತ್ಯತ್ವಾದಿಗುಣಗಳು ಇರುವದರಿಂದಲೇ ಅವನು ಅಸತ್ಯನಲ್ಲ ಎಂದು ಹೇಳಬೇಕು. ಹಾಗೆ ಮಾಡಿದರೆ ಬ್ರಹ್ಮನು ನಿರ್ವಿಶೇಷನು ( ನಿರ್ಧರ್ಮಕನು ) ಎಂಬ ಮತವು ಹೋಗುವದು.

ಕಿಂಚ, ಬ್ರಹ್ಮನು ಸರ್ವಥಾ ಅಜ್ಞೇಯನೆಂದು ಒಪ್ಪಿ ಸತ್ಯಂ ಜ್ಞಾನಮನಂತಂ ಬ್ರಹ್ಮ ಎಂಬ ಶ್ರುತಿಯಿಂದ ಲಕ್ಷಣಾವೃತ್ತಿಯಿಂದ " ಬ್ರಹ್ಮ " ಎಂಬ ಅಖಂಡಬೋಧವು ಬರುವದು ಎಂದು ಹೇಳುವದು ಅಸಂಭಾವಿತವು. ಏಕೆಂದರೆ ಸರ್ವಥಾ ಅಜ್ಞೇಯನಿಗೆ ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯತ್ವವೂ ಕೂಡುವದಿಲ್ಲ.*

ಸೇತುರಾಯರು— ಬೆಳಿಗ್ಗೆ ಎದ್ದರೆ 'ಬ್ರಹ್ಮಜಿಜ್ಞಾಸಾ' ದಿಂದೇನು ಫಲ ? ಬ್ರಹ್ಮಸದ್ಭಾವದಲ್ಲಿ ಪ್ರಮಾಣವೇನು ? ಇತ್ಯಾದಿ ರೀತಿಯಲ್ಲಿ ಶಿಷ್ಯನು ಪ್ರಶ್ನೆಗಳನ್ನೂ ಅದಕ್ಕೆ ಗುರುಗಳು ಉತ್ತರವನ್ನೂ ಬ್ರಹ್ಮಶಬ್ದಘಟಿತವಾಗಿಯೇ ಮಾಡುತ್ತಿರುತ್ತಾರೆ. ಹೀಗಿರುವಲ್ಲಿ ಬ್ರಹ್ಮನು ಸರ್ವಥಾ ಅಜ್ಞೇಯನು, ಅವನು ಶಾಸ್ತ್ರದಿಂದ ಅಗಮ್ಯನು, ಎಂದು ಹೇಗೆ ಹೇಳುವದು ? ಮತ್ತು ಶಾಸ್ತ್ರದಿಂದ ಬ್ರಹ್ಮಜ್ಞಾನವು ಬರದಿದ್ದರೆ ಬಂಡಿಗಟ್ಟಲೆ ಬರೆದಿರುವ ಪುಸ್ತಕಗಳನ್ನೆಲ್ಲ ಏಕೆ ಓದಬೇಕು ?

ಶ್ರೀ ಶ್ರೀಗಳವರು—ಈ ಅನುಪತ್ತಿಗಳ ನಿವಾರಣಾರ್ಥವಾಗಿ ಕೆಲವರು ಅದ್ವೈತಿಗಳು ಅಂತಃಕರಣವೃತ್ತಿವಿಷಯತ್ವವನ್ನು (ಧರ್ಮಾದಿಗಳಂತೆ) ಬ್ರಹ್ಮನಲ್ಲಿ ಒಪ್ಪಿರುವರು. ಆದರೆ ಅವನು ನಿರ್ಧರ್ಮಕನಾದುದರಿಂದ, ಅದೂ ಕೂಡುವದಿಲ್ಲ. ವಸ್ತುತಃ ಇವೇ ಪ್ರಶ್ನೆಗಳನ್ನೇ ನಮ್ಮ ಶಾಸ್ತ್ರಕಾರರೂ ಮಾಡಿರುತ್ತಾರೆ. ಈ ಪ್ರಶ್ನೆಗಳಿಗೆ ಅದ್ವೈತಮತದಲ್ಲಿ ಮನಸ್ಸಿಗೆ ಬರುವ ಸಮಾಧಾನವು ದೊರಕಲಾರದು. ಪರಂತು ನೀವು ತುಂಬ ಮುಷ್ಕರ ಮಾಡಿ ಕೇಳಿದರೆ ಕೆಲವರು ಅದ್ವೈತಿಗಳು, " ಹೋಗಲಿ !

---

* "ಗಂಗಾಯಾಂ ಘೋಷಃ" ಎಂಬಲ್ಲಿ ಗಂಗಾ ಪದಕ್ಕೆ ಲಕ್ಷಣಯಾ 'ಗಂಗಾತೀರವು' ಎಂದರ್ಥವು. ಲಕ್ಷಣಯಾ ಗಂಗಾಪದ ಪ್ರತಿಪಾದ್ಯವಾದ ತೀರವು ತೀರಪದ ವಾಚ್ಯವಾಗಿರುತ್ತದೆ. ಮತ್ತು ಶಕ್ಯಾರ್ಥವಾದ ಗಂಗಾಪ್ರವಾಹದ ಸಂಬಂಧವುಳ್ಳದ್ದೆಂದು ಜ್ಞಾತವಾಗಿರುವದು. ಅದ್ವೈತ ಮತದಲ್ಲಿ ಬ್ರಹ್ಮನು ಸರ್ವಥಾ ಅವಾಚ್ಯನೂ, ಅಜ್ಞೇಯನೂ ಆಗಿರುವದರಿಂದ ಶಕ್ಯಸಂಬಂಧಜ್ಞಾನವೇ ಬರುವದಕ್ಕೆ ಅವಕಾಶವಿಲ್ಲದೆ ಇರುವದರಿಂದ ಬ್ರಹ್ಮನು ಲಕ್ಷಣಾವೃತ್ತಿಯಿಂದಲೂ ಸತ್ಯಂ ಜ್ಞಾನಂ ಇತ್ಯಾದಿ ಶ್ರುತಿಗಳಿಂದ ಬೋಧ್ಯನಾಗಲಾರನು.

ನಮ್ಮ 'ಬ್ರಹ್ಮ'ನು ವೇದದಿಂದ ಸಿದ್ಧಿಸಬೇಕಾಗಿಲ್ಲ. ಅನುಭವದಿಂದ ಸಿದ್ಧಿಸುವನು;" ಎಂದು ಹೇಳಿಬಿಡುವರು.

ಸೇತುರಾಯರು—ಸ್ವಾಮೀ ! ಅದೇನು ಕಡಿಮೆಯಾಯಿತೇ ? ಅನುಭವದಿಂದ ಬ್ರಹ್ಮನು ಇದ್ದಾನೆ ಎಂದು ತಿಳಿದಮೇಲೆ ವೇದಪ್ರತಿಪಾದ್ಯತ್ವವು ಅವನಿಗಿಲ್ಲದಿದ್ದರೆ ತಾನೇ ಏನು ? ಬ್ರಹ್ಮನನ್ನು ವೇದದಿಂದಲೇ ತಿಳಿಯಬೇಕೆಂದು ನಿರ್ಬಂಧವುಂಟೋ ?

ಶ್ರೀ ಶ್ರೀಗಳವರು— ನಿರ್ಬಂಧವುಂಟು. ಅದು ಹಾಗಿರಲಿ. ಬ್ರಹ್ಮನನ್ನೋ ಅಥವಾ ಬ್ರಹ್ಮೈಕ್ಯವನ್ನೋ ಅನುಭವದಿಂದಲೇ ಎಲ್ಲರೂ ತಿಳಿಯುವದಾದರೆ ಬ್ರಹ್ಮಜ್ಞಾನವು ಎಲ್ಲರಿಗೂ ಇರಬೇಕು. ಬ್ರಹ್ಮವಿಷಯದಲ್ಲಿ ಸಂದೇಹವೇ ಇರಕೂಡದು. "ನಾನು ಇದ್ದೇನೆ" ಎಂಬುದು ಸರ್ವಜನರ ಅನುಭವವು. ನಾನು ಇದ್ದೇನೋ, ಇಲ್ಲವೋ ಎಂಬ ಸಂದೇಹವು ಯಾರಿಗಾದರೂ ಬರಲಾರದು. ಬ್ರಹ್ಮನ ವಿಷಯದಲ್ಲಿ ಎಷ್ಟೋ ಜನರಿಗೆ ಏನೂ ತಿಳಿಯದು. ಸಂದೇಹಗಳೂ ವಿಪ್ರತಿಪತ್ತಿಗಳೂ ಅನಂತವಾಗಿವೆ ಆದುದರಿಂದ ನಮ್ಮ ಬ್ರಹ್ಮನು (ಅಥವಾ ವಾಕ್ಯವು) ಅನುಭವದಿಂದ ಸಿದ್ಧಿಸುವದು ಎಂಬ ಮಾತನ್ನು ಬಿಟ್ಟುಬಿಡಬೇಕು. ಅನುಭವದಿಂದ ಬ್ರಹ್ಮನು ಸಿದ್ಧಿಸುವದಾದರೆ ದ್ವೈತಿಗಳಿಗೂ ವಿವಾದವು ಏತಕ್ಕಾಗಿ ?

ಸೇತುರಾಯರು—ಸ್ವಾಮೀ ! ಬ್ರಹ್ಮನು ಇದ್ದಾನೆ; ಜೀವನೂ ಬ್ರಹ್ಮನೂ ಒಂದೇ ಎಂಬ ಅನುಭವವು ಮುಂದೆ ಬರುವದು. ಈಗ ಇರುವದಿಲ್ಲ; ಎಂದು ಹೇಳಬಹುದಲ್ಲವೇ ?

ಶ್ರೀ ಶ್ರೀಗಳವರು— ಹಾಗಾದರೆ ಈಗ ಬ್ರಹ್ಮನು ಇದ್ದಾನೆ ಎಂಬ ಅನುಭವವು ಒಬ್ಬರಿಗೂ ಇಲ್ಲದುದರಿಂದ ಬ್ರಹ್ಮನು ಈಗ ಸಿದ್ಧಿಸಲಿಲ್ಲ. ಮುಂದೆ ಬ್ರಹ್ಮನು ಇದ್ದಾನೆ ಎಂಬ ಅನುಭವವು ಬರುವದು; ಆ ಅನುಭವದಿಂದ ಬ್ರಹ್ಮನು ಇದ್ದಾನೆ ಎಂದು ನಾವು ತಿಳಿಯಬಹುದು ಎಂದು ಹೇಳುವದಾದರೆ, ಆ ವಿಷಯದಲ್ಲಿ ಪ್ರಮಾಣವು ಬೇಕು. ಮುಂದೆ ಬ್ರಹ್ಮನು ಇದ್ದಾನೆ ಎಂಬ ಅನುಭವವು ಬರುವದು ಎಂದು ಯಾರಿಗೂ 'ಅನುಭವ'ವಿರುವದಿಲ್ಲ. ಆದುದರಿಂದ ಬ್ರಹ್ಮಸದ್ಭಾವವನ್ನು ಬೋಧಿಸುವ ಈ ಭವಿಷ್ಯದನುಭವದ ವಿಷಯದಲ್ಲಿ ಪ್ರತ್ಯಕ್ಷಾನುಮಾನಗಳಾಗಲೀ ಆಗಮವಾಗಲೀ ಬರಬೇಕು. ಅತೀಂದ್ರಿಯ ವಿಷಯದಲ್ಲಿ ಪ್ರತ್ಯಕ್ಷಾನುಮಾನಗಳು ಪ್ರವರ್ತಿಸಲಾರದವಾದುದರಿಂದ, ಆಗಮದಿಂದಲೇ ಈ ವಿಷಯವನ್ನು ತಿಳಿಯಬೇಕು. ಆಗ **ಬ್ರಹ್ಮನು ವೇದಪ್ರತಿಪಾದ್ಯನು** ಎಂದು ಒಪ್ಪಬೇಕಾಗುವದು. ವೇದದಲ್ಲಿ ಬ್ರಹ್ಮನು ಇದ್ದಾನೆ ಮುಂದೆ ಅನುಭವವು ಬರುವದು ಎಂದು ಹೇಳಿದ ಮೇಲೆ ಅವನು ನಿರ್ಧರ್ಮಕನು ಎಂದು ಹೇಳುವದನ್ನೂ ಬಿಟ್ಟುಬಿಡಬೇಕು.

೨ ಪ್ರಶ್ನೆ— ಸೇತುರಾಯರು— ಸ್ವಾಮೀ ! ಅಂತಃಕರಣವು ಒಂದೋ ಅನೇಕವೋ ? ಅದ್ವೈತಿಗಳು ಈ ವಿಷಯದಲ್ಲಿ ಏನು ಹೇಳುತ್ತಾರೆ ?

ಶ್ರೀ ಶ್ರೀಗಳವರು— ಅನೇಕ ಅಂತಃಕರಣಗಳು ಇರುವವು. ಅಂತಃಕರಣರೂಪ ಉಪಾಧ್ಯವಚ್ಛಿನ್ನ ಚೈತನ್ಯವೇ ಜೀವವೆನಿಸುವದು ಎಂದು ಕೆಲವರು ಹೇಳುತ್ತಾರೆ.

ಸೇತುರಾಯರು— ಈ ಅಂತಃಕರಣವು ಸತ್ಯವೋ ? ಕಲ್ಪಿತವೋ ?

ಶ್ರೀ ಶ್ರೀಗಳವರು— ಅಂತಃಕರಣವೂ ಕಲ್ಪಿತವೇ ! ಈ ಕಲ್ಪಿತವಾದ ಅಂತಃಕರಣರೂಪವಾದ ಉಪಾಧಿಸಂಬಂಧದಿಂದ ಬ್ರಹ್ಮನಿಗೇ ಜೀವಭಾವವು ಬರುವದು ಎಂದು ಅದ್ವೈತಮತದಲ್ಲಿ ಹೇಳಿರುತ್ತದೆ.

ಸೇತುರಾಯರು— ಇದರಲ್ಲಿ ಅನುಪತ್ತಿಯೇನು ?

ಶ್ರೀ ಶ್ರೀಗಳವರು— ಅನಂತ ಅನುಪತ್ತಿಗಳಿವೆ. ನೀವೇ ನೋಡಿರಿ ! ಈ ಅಂತಃಕರಣವು ಕಲ್ಪಿತವಾಗಬೇಕಾದರೆ ಯಾರಿಗಾದರೂ ಭ್ರಾಂತಿ ಇರಬೇಕು. ಜೀವನ ಭ್ರಾಂತಿಯಿಂದಲೇ ಅಂತಃಕರಣವು ಕಲ್ಪಿತವು ಎಂದು ಹೇಳಲಾಗುವದಿಲ್ಲ. ಏಕೆಂದರೆ ಕಲ್ಪಿತ ಅಂತಕರಣದ ಸಂಬಂಧವಾದ ಮೇಲಷ್ಟೇ ಜೀವಭಾವವು ಬರುವದು ! ಆದುದರಿಂದ ಬ್ರಹ್ಮನಿಗೇ ಅಂತಃಕರಣ ಭ್ರಾಂತಿಯು ಎಂದು ಹೇಳಬೇಕು. ನಿತ್ಯಜ್ಞಪ್ತಿಸ್ವರೂಪದಾದ ಬ್ರಹ್ಮನಿಗೆ ಭ್ರಾಂತಿಯನ್ನು ಹೇಳುವದು ಹೇಗೆ ? ಅವಿದ್ಯಾಸಂಬಂಧದಿಂದ ಬ್ರಹ್ಮನಿಗೆ ಅಂತಃಕರಣ ಭ್ರಾಂತಿಯು ಬರುವದು ಎಂದು ಹೇಳುವುದಾದರೆ "ಅಸಂಗೋ ಹ್ಯಯಂ ಪುರುಷಃ" ಎಂದರೆ ಬ್ರಹ್ಮನು ಸರ್ವಥಾ ಅವಿದ್ಯಾದಿಸಂಬಂಧರಹಿತನು ಎಂದು ಅರ್ಥ ಹೇಳುವ ಶ್ರುತಿಯ ವಿರೋಧವು ಬರುವದು. ಕಿಂಚ, ಅವಿದ್ಯೆಯೂ ಕೂಡ ಅದ್ವೈತಮತದ ರೀತ್ಯಾ ಸತ್ಯಪದಾರ್ಥವಲ್ಲ. ಬ್ರಹ್ಮನು ಒಬ್ಬನೇ ಸತ್ಯನು. ಅವಿದ್ಯಾ ಎಂಬುದು ಕಲ್ಪಿತವಾದುದು ಎಂದು ಒಪ್ಪುವದಾದರೆ, ಆ ಅವಿದ್ಯಾಕಲ್ಪಕಭ್ರಮವು ಯಾರಿಗೆ ? ಜೀವನಿಗಾಗಲಾರದು. ಅವಿದ್ಯಾಕಲ್ಪಿತ ಅಂತಃಕರಣದ ಸಂಬಂಧದಿಂದಷ್ಟೇ ಜೀವಭಾವವು ಬರುವದು. ಬ್ರಹ್ಮನಿಗೇ ಅವಿದ್ಯಾಭ್ರಮವು ಎಂದು ಹೇಳುವದಾದರೆ ಅವಿದ್ಯಾ ಪರಂಪರೆಯನ್ನು ಒಪ್ಪಬೇಕಾಗಿ ಅನವಸ್ಥಾ ದೂಷಣೆಯು ಬರುವದು. ಆದುದರಿಂದ ಬ್ರಹ್ಮನಿಗೆ ಜೀವಭಾವವು ಯಾವರೀತಿಯಲ್ಲೂ ಬರುವ ಸಂಭವವಿರುವದಿಲ್ಲ. ಮತ್ತು ಬ್ರಹ್ಮನಿಗೆ ಜೀವಭ್ರಮೆಯು ಬರಬೇಕಾದರೆ ಭ್ರಮೆಗೆ ಕಾರಣಭೂತವಾದ ಪುರೋವರ್ತಿ ವಸ್ತುವಿನ ಸಾಮಾನ್ಯಜ್ಞಾನ, ವಿಶೇಷಜ್ಞಾನಾಭಾವ, ಸಾದೃಶ್ಯ ಇವೇ ಮುಂತಾದ ಸಾಮಗ್ರಿ

ಗಳು ಬೇಕು. ಬ್ರಹ್ಮನು ನಿರವಯನಾದುದರಿಂದ ಇಂಥ ಸಾಮಗ್ರಿಗಳು ಒಂದೂ ಇರುವದಿಲ್ಲವೆಂದು ಅದ್ವೈತ ವ್ಯಾಖ್ಯಾನಕಾರರಾದ ಭಾಮತೀಕಾರರೇ ತೋರಿಸಿರುತ್ತಾರೆಂದು ನಾವು ಹಿಂದೆ ನಿರೂಪಿಸಿರುತ್ತೇವೆ. ಆದುದರಿಂದ ಜೀವಭಾವಕ್ಕೆ ಕಾರಣಭೂತವಾದ ಅಂತಃಕರಣ ಭ್ರಮೆಯು ಬ್ರಹ್ಮನಿಗೆ ಬರಲಾರದು.

ಇದೂ ಅಲ್ಲದೆ ಬ್ರಹ್ಮನಿಗೆ ಅವಿದ್ಯಾಭ್ರಮವು; ಇಂಥ ಕಲ್ಪಿತ ಅವಿದ್ಯಾದಿಂದ ಅಂತಃಕರಣಭ್ರಮೆಯು ಇಂಥ ಕಲ್ಪಿತ ಅಂತಃಕರಣೋಪಾಧಿಕವಾದ ಜೀವಭಾವವು ಇವೇ ಮುಂತಾದ ವಿಷಯಗಳನ್ನು ಸಾಧನೆ ಮಾಡತಕ್ಕ ಒಂದು ಶ್ರುತಿಯೂ ಇಲ್ಲವಾದುದರಿಂದ ಹೇಗೆ ತಾನೇ ಒಪ್ಪುವದಕ್ಕಾಗುತ್ತದೆ ? ಇವುಗಳನ್ನೆಲ್ಲ ವಿಚಾರ ಮಾಡಿಯೇ ಶ್ರೀಮದಾಚಾರ್ಯರು " **ಅನಂತದೋಷದುಷ್ಟಂ ಚ ಹೇಯಂ ಮಾಯಾವಂ ಶಂಭ್ಯೈಃ** " ಎಂದರೆ ಅನಂತ ಅನುಪಪತ್ತಿಗಳಿಂದ ಯುಕ್ತವಾಗಿರುವದರಿಂದ ಅದ್ವೈತಮತವು ಮೋಕ್ಷೇಚ್ಛುಗಳಿಂದ ಪರಿಗ್ರಾಹ್ಯವಲ್ಲವೆಂದು ಹೇಳಿರುತ್ತಾರೆ.

॥ ಶ್ರೀಕೃಷ್ಣಾರ್ಪಣಮಸ್ತು ॥

|| ಶ್ರೀಃ ||

ಶ್ರೀಮದ್ಧನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ

ಶ್ರೀ ಲಕ್ಷ್ಮೀಹಯಗ್ರೀವಾಯ ನಮಃ ||

ನರಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ ।
ಜಯತ್ಯಮಿತಸದ್‌ಜ್ಞಾನಸುಖಶಕ್ತಿಪಯೋನಿಧಿಃ ||



# ದ್ವೈತ ಸಿದ್ಧಾಂತ ವೈಜಯಂತೀ



## ( ಸಭಾಸಾರಸಂಗ್ರಹ )

## ( Volume II )

ಗೀತೋಪನ್ಯಾಸಗಳು – 1



*Edited by :*

**H. SUBBA RAO, M.A.**

# Dwait Siddhant Vaijayantee —

## ( SABHA SARA SANGRAHA – VOLUME II )

( Satyadhyanar Geetopanyasagalu 1 )



**Publisher :**

Hon. Gen. Secretary

Satyadhyana Vidyapeetha

302/1, Bheemani Street, Matunga, Bombay – 19 DD



ಶ್ರೀಮತ್ ಸತ್ಯಧ್ಯಾನತೀರ್ಥರ ಜನ್ಮಶತಮಾನೋತ್ಸವ ಮತ್ತು ಶ್ರೀಮತ್ ಸತ್ಯಪ್ರಮೋದತೀರ್ಥರ
ಸಿಂಹಾಸನಾರೋಹಣ ರಜತಮಹೋತ್ಸವ ಸವಿನೆನಪಿನ ಪ್ರಕಟನೆ 1

**ದ್ವಿತೀಯ ಮುದ್ರಣ : ೧೯೭೨**





**ಮುದ್ರಕರು :**

ಎಮ್. ಸಿ. ಕುಲಕರ್ಣಿ

ವಿಜಯಲಕ್ಷ್ಮಿ ಆರ್ಟ ಪ್ರಿಂಟರ್ಸ

ಶೇರಿ ಬೀದಿ, ಬೆಳಗಾವಿ.

# ಮುನ್ನುಡಿಯು



ಈ ಗ್ರಂಥದಲ್ಲಿರುವ ಪ್ರಮೇಯಗಳ ಪ್ರತಿಪಾದನೆಗೆ ಮಹಾಸಭೆಯಲ್ಲಿ ಶ್ರೀಪಾದ ಒಡೆಯರ ಸನ್ನಿಧಾನದಲ್ಲಿ ನಡೆದ ಚರ್ಚೆಯು ಬೀಜಭೂತವಾದುದು. ಕೆಲವು ವಿಷಯಗಳು ಸಭೆಯಲ್ಲಿಯೂ, ಕೆಲವು ವಿಷಯಗಳು ಚಾತುರ್ಮಾಸ್ಯದಲ್ಲಿ ಸಂಸ್ಥಾನದ ನಿವಾಸವಾದ 'ಚಿತ್ರರಂಜನ'ದಲ್ಲಿ ವಿದ್ವಜ್ಜನಗೋಷ್ಠಿಯಲ್ಲಿಯೂ ಚರ್ಚಿಸಲ್ಪಟ್ಟಿರುವುವು. ಮತ್ತು ಕೆಲವು ಪ್ರಶ್ನೆಗಳು ಬೇರೆ ಬೇರೆ ತಾರೀಖುಗಳಲ್ಲಿ ಮಾಡಲ್ಪಟ್ಟಿರುವುವು. ವಿಭಿನ್ನ ದೇಶಕಾಲಗಳಲ್ಲಿ ಚರ್ಚಿಸಿದ ವಿಷಯಗಳು ಸಂಗತವಾಗುವಂತೆ ಪ್ರಕರಣೋಚಿತವಾಗಿ ಅಲ್ಲಲ್ಲಿ ನಿರೂಪಿತವಾಗಿರುವುವು. ಮತ್ತು ಕೆಲವು ವಿಷಯಗಳು ಸಭೆಯಲ್ಲಿ ಸಂಕ್ಷೇಪವಾಗಿ ಚರ್ಚಿಸಲ್ಪಟ್ಟಿದ್ದರೂ ಗ್ರಂಥದಲ್ಲಿ ವಿಸ್ತಾರವಾಗಿಯೇ ಉಪಪಾದಿಸಲ್ಪಟ್ಟಿರುವುವು. ಪ್ರಾಶ್ನಿಕರ ನಾಮನಿರ್ದೇಶವು ಉದ್ವೇಗಕರವಾಗಬಹುದೆಂದು ನಾನೇ ಸ್ವಂತವಾಗಿ ಶಂಕಿಸಿಕೊಂಡು ಹೆಸರುಗಳನ್ನು ಹೇಳುವುದನ್ನು ಬಿಟ್ಟು, ಸಾಮಾನ್ಯವಾಗಿ ಉಪನ್ಯಾಸರೂಪದಿಂದಲೂ, ಕಠಿಣ ಸ್ಥಳಗಳಲ್ಲಿ ಪ್ರಶ್ನೋತ್ತರರೂಪದಿಂದಲೂ, ಶ್ರೀಪಾದಂಗಳವರ ಅಭಿಪ್ರಾಯಗಳನ್ನು ಓದುವವರ ಅನುಕೂಲವನ್ನನುಸರಿಸಿ— ನಾನು ತಿಳಿದುಕೊಂಡಂತೆ— ನಿರೂಪಿಸಿರುತ್ತೇನೆ. ಆದುದರಿಂದ ಕೆಲವು ವಿಷಯಗಳು ಸೀತಾವಿಲಾಸದಲ್ಲಿ ಚರ್ಚಿಸಲ್ಪಡಲಿಲ್ಲವೆಂದಾಗಲೀ, ಕೆಲವು ವಿಷಯಗಳು ಗ್ರಂಥದಲ್ಲಿ ನಮೂದಿಸಲ್ಪಟ್ಟಿರುವ ತಾರೀಖಿನಲ್ಲಿ ವಿಚಾರಿತವಾಗಲಿಲ್ಲವೆಂದಾಗಲೀ ಯಾವ ವಿಧವಾದ ಶಂಕೆಯನ್ನೂ ಹೊಂದಬೇಕಾದುದಿಲ್ಲ. ರಾಮದೇವರ ನಿವಾಸವು ಅಯೋಧ್ಯೆಯು, ಕೃಷ್ಣನ ವಸತಿಯು ವೈಕುಂಠವು. ಇದೇ ನ್ಯಾಯದಿಂದ ಶ್ರೀಪಾದ ಒಡೆಯರು ತತ್ವವಿಮರ್ಶಾರ್ಥವಾಗಿ ಕುಳಿತ ಸ್ಥಳವೇ ಮಹಾಸಭೆಯು. ಅವರು ಸಾಭಿಪ್ರಾಯವಾಗಿ ಮಾತಾಡಿದ ಮಾತುಗಳೇ ತತ್ವಗಳು. ಅವುಗಳೆಲ್ಲಾ ಪ್ರಾಯೇಣ ನನ್ನ ನಿರೂಪಣೆಗೆ ವಿಷಯಗಳು. ಈ ನ್ಯಾಯವನ್ನು ಅನುಸರಿಸಿಯೇ ಇನ್ನೂ ಅನೇಕ ಗ್ರಂಥಗಳನ್ನು ಮುಂದೆ ಬರೆಯಬೇಕೆಂದಿರುತ್ತೇನೆ. ಆದುದರಿಂದ ಮಹಾಪುರುಷರಾದ ಶ್ರೀ ಶ್ರೀಗಳವರು ಅಭಿಪ್ರಾಯಪುರಸ್ಸರವಾಗಿ ನಿರೂಪಿಸಿರುವ ತತ್ವವಿಷಯಗಳಿಂದಲೇ ಪೂರ್ಣವಾಗಿರುವುದರಿಂದ ಈ ಗ್ರಂಥವೂ, ಇನ್ನು ಮೇಲೆ ಇದೇ ನ್ಯಾಯವನ್ನವಲಂಬಿಸಿ ಬರೆಯಲ್ಪಡುವ ಇತರ ಗ್ರಂಥಗಳೂ ಸಹ, ವಿದ್ವಜ್ಜನ ಮನೋರಂಜಕವಾಗಿ, ಸಜ್ಜನರಿಗೆ ಸಂಸಾರತಾರಕವಾದ ಶ್ರೀ ಕೃಷ್ಣನ ಬ್ರಹ್ಮವಿದ್ಯೆಯ ಯಥಾರ್ಥವಾದ ರಹಸ್ಯವನ್ನು ತಿಳಿದುಕೊಳ್ಳುವುದರಲ್ಲಿ ಸಹಾಯಕವಾಗಿರುತ್ತದೆ ಎಂದು ನಂಬಿರುತ್ತೇನೆ.

ಮೈಸೂರು,<br>
ತಾ॥ 24–9–30.

**H. Subba Rao.**

# ವಿಷಯಾನುಕ್ರಮಣಿಕೆಯು



|| ಶ್ರೀಃ ||

ಶ್ರೀ ಮದ್ಧಸುಮದ್ಧೀಮ ಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ
ಶ್ರೀ ಲಕ್ಷ್ಮಿಹಯಗ್ರೀವಾಯನಮಃ.

ಶ್ರೀ ಶ್ರೀಮತ್ಪರಮಹಂಸೇತ್ಯಾದಿ ಬಿರುದಾಂಕಿತರಾದ

**ಶ್ರೀಮದುತ್ತರಾದಿ ಮಠಾಧೀಶರಾದ ಶ್ರೀ ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರ ಮಹಾಸನ್ನಿಧಾನದಲ್ಲಿ ಮೈಸೂರಿನ ಸೀತಾವಿಲಾಸಛತ್ರದಲ್ಲಿ ನಡೆದ ಶ್ರೀ ವೇದಾಂತವಿಮರ್ಶಿನೀ ಮಹಾಸಭೆಯಲ್ಲಿ ಚರ್ಚಿಸಿದ**

## ವಿಷಯಗಳ ಮುಖ್ಯ ಸಾರಾಂಶ.

# ಸ ಭಾ ಸಾ ರ ಸಂ ಗ್ರ ಹ

(Volume II)

**ಗೀತೋಪನ್ಯಾಸಗಳು**

I

ತಾ|| 18-19-20—7—1930 ರಲ್ಲಿ

**ಪ್ರಾಶ್ನಿಕರು— ಮಹಾವಿದ್ವಾಂಸರು ಮತ್ತು ವಿದ್ಯಾರ್ಥಿಗಳು.**

---

೧ ಪ್ರಶ್ನೆ— ಮಹಾಸ್ವಾಮೀ! ಮಧ್ವಮತದ ಸರ್ವೋತ್ತಮತ್ವವನ್ನು ಶ್ರೀಮದ್ಭಗವದ್ಗೀತೆಯ ಶ್ರೀಕೃಷ್ಣನ ವಾಕ್ಯಗಳ ಆಧಾರದಿಂದಲೇ ದಯಮಾಡಿ ಪ್ರದರ್ಶನೆ ಮಾಡಬೇಕು.

ಶ್ರೀ ಶ್ರೀಗಳವರು— ಓಂ! ನಮ್ಮ ಮತದ ಸರ್ವಸ್ವವನ್ನೂ ವ್ಯಾಸರಾಯರು ಒಂದು ಶ್ಲೋಕದಲ್ಲಿ ಸಂಗ್ರಹಿಸಿರುತ್ತಾರೆ.

**ಶ್ರೀಮನ್ಮಧ್ವಮತೇಹರಿಃ ಪರತರಃ |**
**ಸತ್ಯಂಜಗತ್ತತ್ವತೋಭಿನ್ನಾಜೀವಗಣಾಃ |**
**ಹರೇರನುಚರಾ ನೀಚೋಚ್ಚಭಾವಂಗತಾಃ |**
**ಮುಕ್ತಿರ್ನೈಜಸುಖಾನುಭೂತಿರಮಲಾ |**
**ಭಕ್ತಿಶ್ಚತತ್ಸಾಧನಂ ಹ್ಯಕ್ಷಾದಿತ್ರಿತಯಂ |**
**ಪ್ರಮಾಣಮಖಿಲಾಮ್ನಾಯೈಕವೇದ್ಯೋಹರಿಃ ||**

1. ಹರಿಸರ್ವೋತ್ತಮತ್ವವು. 2. ಜಗತ್ಸತ್ಯತ್ವವು; 3. ಪಾರಮಾರ್ಥಿಕ ಪಂಚಭೇದಗಳು; 4. ಜೀವರುಗಳಿಗೆ ವಿಷ್ಣುಭೃತ್ಯತ್ವವು; 5. ಜೀವರುಗಳಲ್ಲಿ ಪರಸ್ಪರ ತಾರತಮ್ಯವು; 6. ಸ್ವರೂಪಾನಂದಾವಿರ್ಭಾವರೂಪವಾದ ಮುಕ್ತಿಯು; 7. ಭಕ್ತಿಗೇ ಮೋಕ್ಷಸಾಧನತ್ವವು; 8. ಪ್ರತ್ಯಕ್ಷಾನುಮಾನಾಗಮಗಳಿಗೆ ಪ್ರಾಮಾಣ್ಯವು. 9. ಹರಿಗೆ ಸರ್ವವೇದ ಮುಖ್ಯ ಪ್ರತಿಪಾದ್ಯತ್ವವು; ಹೀಗೆ ಒಂಭತ್ತು ಪ್ರಮೇಯಗಳು ಮಧ್ವಮತದಲ್ಲಿ ಬಹು ಮುಖ್ಯವಾದುವುಗಳು. ಈ ಒಂಭತ್ತು ವಿಷಯಗಳನ್ನೂ ಒಂದೊಂದು ದಿನ ಒಂದೊಂದು ವಿಷಯದಂತೆ ಕ್ರಮವಾಗಿ ಉಪನ್ಯಾಸ ಮಾಡಿದರೆ **ಪ್ರಮೇಯನವಮಲ್ಲಿಕೆಯೇ** ಆಗುವದು. ಈ ದಿವಸ ವಿಷ್ಣುಸರ್ವೋತ್ತಮತ್ವವನ್ನು ಶ್ರೀಕೃಷ್ಣನ ವಾಕ್ಯಗಳಿಂದಲೇ ಉಪಪಾದನೆಮಾಡಿ ತೋರಿಸುತ್ತೇವೆ. ತಥಾಹಿ —

## ೧) ವಿಷ್ಣುಸರ್ವೋತ್ತಮತ್ವ ಸಮರ್ಥನವು.

ಭಗವದ್ಗೀತೆಯಲ್ಲಿ ವಿಷ್ಣುಸರ್ವೋತ್ತಮತ್ವವನ್ನು ಪ್ರತಿಪಾದನೆ ಮಾಡುವ ವಾಕ್ಯಗಳು ಎರಡು ವಿಧವಾಗಿರುತ್ತವೆ. ಕೆಲವು ವಾಕ್ಯಗಳಲ್ಲಿ ನಾನೇ ಸರ್ವೋತ್ತಮನು ಎಂದು ಶ್ರೀಕೃಷ್ಣನು ಸಾಕ್ಷಾತ್ತಾಗಿ ಹೇಳಿಕೊಂಡಿರುತ್ತಾನೆ. ಮತ್ತೆ ಕೆಲವು ವಾಕ್ಯಗಳಲ್ಲಿ ಸರ್ವೋತ್ತಮತ್ವ ಜ್ಞಾಪಕಗಳಾದ ಯುಕ್ತಿಗಳನ್ನು ಉಪನ್ಯಾಸ ಮಾಡಿರುತ್ತಾನೆ. ಇದೂ ಅಲ್ಲದೆ ಹನ್ನೊಂದನೆಯ ಅಧ್ಯಾಯದಲ್ಲಿ ವಿಷ್ಣುಸರ್ವೋತ್ತಮತ್ವದಲ್ಲಿ ಜ್ಞಾನಿಗಳ ಪ್ರತ್ಯಕ್ಷವೂ ಪ್ರಮಾಣವೆಂದು ತೋರಿಸುವದಕ್ಕಾಗಿ ಭಗವದ್ಗೀತೆಯಲ್ಲಿ ಅರ್ಜುನನ ವಿಶ್ವರೂಪದರ್ಶನವು ಮತ್ತು ಅವನು ಮಾಡಿದ ಭಗವಂತನ ಸ್ತುತಿಪ್ರಕಾರವೂ ನಿರೂಪಣೆಮಾಡಲ್ಪಟ್ಟಿರುತ್ತವೆ.

೨ **ಪ್ರಶ್ನೆ**— ವಿಷ್ಣುವೇ ಸರ್ವೋತ್ತಮನೆಂದು ಭೋಧಿಸುವ ಸಾಕ್ಷಾತ್ ಶ್ರೀಕೃಷ್ಣನ ವಾಕ್ಯಗಳು ಯಾವವು ?

ಶ್ರೀ ಶ್ರೀಗಳವರು— ವಿಷ್ಣುವೇ ಶ್ರೀಕೃಷ್ಣನೆಂಬುದನ್ನು ನೀವು ಒಪ್ಪಿರುತ್ತೀರಿ. ಅಥವಾ "**ಹೃಷೀಕೇಶಂ** ತದಾ ವಾಕ್ಯಮಿದಮಾಹ" ; ಕಿಂನೋ ರಾಜ್ಯೇನ**ಗೋವಿಂದ**" ; "ಕಾಪ್ರೀತಿಸ್ಸ್ಯಾಜ್ಜ**ನಾರ್ದನ**" ; "ಧೃತಿಂ ನ ವಿಂದಾಮಿ ಶಮಂಚ **ವಿಷ್ಣೋ**" ; ಇತ್ಯಾದಿ ಅನೇಕ ವಾಕ್ಯಗಳಿಂದ ಕೃಷ್ಣನು ವಿಷ್ಣುವೇ ಎಂಬುದು ಸಿದ್ಧವಾಗುವದು. ಇಂಥ ಕೃಷ್ಣನೇ ಸರ್ವೋತ್ತಮನೆಂಬುದು ಅನೇಕ ಗೀತಾವಾಕ್ಯಗಳಲ್ಲಿ ಸ್ಪಷ್ಟವಾಗಿರುವದು.

**1........ಸರ್ವಲೋಕಮಹೇಶ್ವರಂ........ಜ್ಞಾತ್ವಾ ಮಾಂ ಶಾಂತಿಮೃಚ್ಛತಿ** [5.29.]

ಅರ್ಥವು— ಚೇತನಾಚೇತನಾತ್ಮಕವಾದ **ಸರ್ವಜಗತ್ತಿಗೂ ಒಡೆಯನಾದ** ನನ್ನನ್ನು ಧ್ಯಾನಮಾಡಿ ಮುಕ್ತಿಯನ್ನು ಹೊಂದುತ್ತಾನೆ.

**2. ಭೂಮಿರಾಪೋಽನಲೋವಾಯುಃ ಖಂಮನೋಬುದ್ಧಿರೇವಚ |
ಅಹಂಕಾರಇತೀಯಂಮೇ ಭಿನ್ನಾಪ್ರಕೃತಿರಷ್ಟಧಾ |
ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿಮೇಪರಾಂ |
ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ |
ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ |
ಅಹಂಕೃತ್ಸ್ನಸ್ಯಜಗತಃ ಪ್ರಭವಃ ಪ್ರಲಯಸ್ತಥಾ |
ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿಧನಂಜಯ | ”**—[7. 4-7]

ಇದರ ತಾತ್ಪರ್ಯವು— ಪೃಥಿವಿಯು, ಜಲವು, ಅಗ್ನಿಯು, ವಾಯುವು, ಆಕಾಶವು, ಮನಸ್ತತ್ವವು, ಬುದ್ಧಿತತ್ವವು, (ಮಹತ್ತತ್ವದಿಂದ ಸಹಿತವಾದ) ಅಹಂಕಾರತತ್ವವು ಈ ಪ್ರಕಾರ **ನನ್ನ ಆಧೀನವಾದ ಪ್ರಕೃತಿಯು** ಎಂಟು ಪ್ರಕಾರವಾಗಿರುತ್ತದೆ. ಈ ಜಡಪ್ರಕೃತಿಯು ಅಧಮವು. ಇವುಗಳಿಂದ ಭಿನ್ನಳಾದ ಯಾವ ದೇವಿಯಿಂದ ಈ ಚರಾಚರ ಜಗತ್ತು ಧರಿಸಲ್ಪಡುವದೋ ಅಂಥ ಸರ್ವದೇಹಿಗಳ ಪ್ರಾಣಧಾರಣೆಯನ್ನು ಮಾಡಿ ನಿತ್ಯಳಾಗಿರುವ ಮಹಾಲಕ್ಷ್ಮಿಯನ್ನು ಉತ್ತಮಳನ್ನಾಗಿಯೂ **ನನ್ನ ಆಧೀನಳನ್ನಾಗಿಯೂ** ತಿಳಿ. ಉತ್ಪನ್ನರಾದ ಸರ್ವ ಪ್ರಾಣಿಗಳೂ ಈ ಪೂರ್ವೋಕ್ತ ನನ್ನ ಆಧೀನವಾದ ಚೇತನಾಚೇತನ ಪ್ರಕೃತಿಗಳಿಂದ (ಯಥಾಯೋಗ್ಯವಾದ) ಉತ್ಪತ್ತಿಯುಳ್ಳವುಗಳೆಂದು ನಿಶ್ಚಯವಾಗಿ ತಿಳಿಯುವವನಾಗು. ಸಕಲ ಪ್ರಪಂಚಕ್ಕೂ ನಾನು ಸೃಷ್ಟಿ ಮಾಡುವವನು ಮತ್ತು ಸಂಹಾರ ಮಾಡುವವನು. **ಎಲೈ ಧನಂಜಯನೇ ! ನನಗಿಂತ ಬೇರೆ ಸರ್ವೋತ್ತಮ ವಸ್ತುವು ಯಾವುದೂ ಇಲ್ಲ.**

ಈ ವಾಕ್ಯದಲ್ಲಿ ಶ್ರೀ ಕೃಷ್ಣನು ತನ್ನ ಅಧೀನವಾದ ಚೇತನಾಚೇತನಾತ್ಮಕವಾದ ಉಭಯವಿಧ ಪ್ರಕೃತಿಗಳಿಂದಲೇ ಸರ್ವ ಜಗದುತ್ಪತ್ತಿಯಾಗುವದು ಮತ್ತು ತಾನೇ ಜಗತ್ತಿಗೆ ಸೃಷ್ಟಿ ಸಂಹಾರಗಳನ್ನು ಮಾಡುವವನೆಂದು ಯುಕ್ತಿಗಳಿಂದ ತನ್ನ ಉತ್ತಮತ್ವವನ್ನು ಸ್ಥಾಪಿಸಿ ತನಗಿಂತ ಉತ್ತಮ ವಸ್ತುವು ಯಾವದೂ ಇಲ್ಲವೆಂದು ಘಂಟಾಘೋಷವಾಗಿ ನುಡಿದಿರುತ್ತಾನೆ.

**3. ಪರಂಭಾವಮಜಾನಂತಃ ಮಮಾವ್ಯಯಮನುತ್ತಮಂ**—[7-24.]

ಅರ್ಥವು—(ಅಜ್ಞಾನಿಗಳು) ನನ್ನ ನಾಶರಹಿತವಾದ ಉತ್ತಮಾಂತರ ರಹಿತವಾದ (ಬೇರೆ ಉತ್ತಮ ವಸ್ತುವಿನಿಂದ ರಹಿತವಾದ) ಪರಿಪೂರ್ಣವಾದ ಇತರ ವಿಲಕ್ಷಣವಾದ ನನ್ನ ಯಥಾರ್ಥಸ್ವರೂಪವನ್ನು ತಿಳಿಯಲಾರರು.

**4. ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ |
ಪರಂಭಾವಮಜಾನಂತೋ ಮಮ ಭೂತಮಹೇಶ್ವರಂ ||** [9. 11]

ಇದರ ತಾತ್ಪರ್ಯವು— ಮೂಢರು ಮನುಷ್ಯದೇಹಕ್ಕೆ ಸದೃಶವಾದ ರೂಪವನ್ನು ತಾಳಿರುವ ನನ್ನನ್ನು ನೋಡಿ ನಾನೂ ಒಬ್ಬ ಮನುಷ್ಯನೆಂದು ಭ್ರಮಿಸಿ, ನಿತ್ಯವಾದ ಗುಣಪರಿಪೂರ್ಣವಾದ ಅತ್ಯುತ್ತಮವಾದ ನನ್ನ ಯಥಾರ್ಥಸ್ವರೂಪವನ್ನು ತಿಳಿಯಲಾರದೆ ನನ್ನನ್ನು ಅವಮಾನ ಮಾಡುತ್ತಾರೆ.

5. **ಪರಂಬ್ರಹ್ಮ ಪರಂಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂವಿಭುಂ ।**
**ಆಹುಸ್ತ್ವಾಂ ಋಷಯಃ ಸರ್ವೇದೇವರ್ಷಿರ್ನಾರದಸ್ತಥಾ ।**
**ಅಸಿತೋದೇವಲೋವ್ಯಾಸಃ ಸ್ವಯಂಚೈವಬ್ರವೀಷಿಮೇ ।**
**ಸರ್ವಮೇತದೃತಂಮನ್ಯೇಯನ್ಮಾಂವದಸಿ ಕೇಶವ ॥**
—(10. 12—14.)

**ಭೂತಭಾವನಭೂತೇಶದೇವದೇವಜಗತ್ಪತೇ ॥** (10. 15.)

ತಾತ್ಪರ್ಯವು— ಅರ್ಜುನನು ಸ್ತುತಿಸುತ್ತಾನೆ— ಹೇ ಕೇಶವ ! ನೀನೇ ಪರಬ್ರಹ್ಮನು ( ಸರ್ವೋತ್ತಮವಾದ ಪೂರ್ಣವಸ್ತುವು. ) ಅತ್ಯುತ್ತಮವಾದ ಆಶ್ರಯನು, ಪರಮಶುದ್ಧನು; ಸರ್ವೋತ್ತಮನು. ವಸಿಷ್ಠಾದಿ ಋಷಿಗಳೂ ದೇವರ್ಷಿಗಳಾದ ನಾರದರೂ, ಅಸಿತರೂ, ದೇವಲರೂ ಮತ್ತು ವೇದವ್ಯಾಸರೂ ಕೂಡ ನಿನ್ನನ್ನು ಪೂರ್ಣ ಷಡ್ಗುಣವುಳ್ಳವನು, ನಿರ್ವಿಕಾರನು, ಲೋಕವಿಲಕ್ಷಣನು, ಆದಿದೇವನು, ಅಜನು, ವಿಭುವು ಎಂದು ಹೇಳುತ್ತಾರೆ. ನೀನು ನನಗೆ ಉಪದೇಶ ಮಾಡಿದ ನಿನ್ನ ಮಾಹಾತ್ಮ್ಯೆಯು ಎಲ್ಲ ಸತ್ಯವಾದುದೇ ಎಂದು ತಿಳಿದಿರುತ್ತೇನೆ.... ಹೇ ಜಗತ್ತಿನಲ್ಲಿರುವ ಸರ್ವಪ್ರಾಣಿಗಳ ಉತ್ಪಾದಕನೇ ! ಹೇ ಭೂತನಿಯಾಮಕ ! ಹೇ ದೇವತೆಗಳಿಗೂ ದೇವನೇ ! ಜಗತ್ಪತೇ !

ಈ ವಾಕ್ಯಗಳಲ್ಲಿ ಅರ್ಜುನನು ಕೃಷ್ಣನನ್ನು **ಪರಬ್ರಹ್ಮ**ನೆಂದು ಕರೆದು ತನ್ನ ಅಭಿಪ್ರಾಯವು ಸರ್ವಮಹರ್ಷಿಗಳಿಗೂ ವೇದಾಂತ ಸೂತ್ರಕರ್ತರಾದ ವೇದವ್ಯಾಸರಿಗೂ ಸಮ್ಮತವಾದುದೆಂದು ಯುಕ್ತಿಯನ್ನೂ ನಿರೂಪಿಸಿರುತ್ತಾನೆ.

ಹೀಗೆ ಶ್ರೀ ಕೃಷ್ಣನು ಹನ್ನೊಂದನೆಯ ಅಧ್ಯಾಯದ ವರೆಗೆ ವಕ್ಷ್ಯಮಾಣ ಅನೇಕ ಯುಕ್ತಿಗಳನ್ನು ಪ್ರದರ್ಶನೆ ಮಾಡಿ ನಾಲ್ಕೈದು ವೇಳೆ ಕಂಠತಃ ನಾನೇ ಸರ್ವೋತ್ತಮನೆಂದು ಶಿಷ್ಯನಾದ ಅರ್ಜುನನಿಗೆ ಬೋಧಿಸಿ ತನ್ನಿಂದ ಉಪದಿಷ್ಟವಾದ ತನ್ನ ಉತ್ತಮಸ್ವರೂಪವನ್ನು ತಿಳಿಯುವದಕ್ಕೆ ಸಾಧಕವಾದ ದಿವ್ಯದೃಷ್ಟಿಯನ್ನೂ ಕೊಟ್ಟಿರುತ್ತಾನೆ. ದಿವ್ಯಚಕ್ಷುಸ್ಸಿನಿಂದ ಪರಬ್ರಹ್ಮನ ಸಾಕ್ಷಾತ್ಕಾರವನ್ನು ಹೊಂದಿರುವ ಬ್ರಹ್ಮಜ್ಞಾನಿಯಾದ ಅರ್ಜುನನೂ ಸ್ಪಷ್ಟವಾಗಿ ವಿಷ್ಣುಸರ್ವೋತ್ತಮತ್ವವನ್ನೇ ಉದ್ಘೋಷಿಸಿರುತ್ತಾನೆ. ಜ್ಞಾನಿಚಕ್ಷುಸ್ಸಿಗೆ ವಿಷಯವಾದುದರಿಂದ ಈ ಸರ್ವೋತ್ತಮತ್ವವು ಅತ್ಯಂತ ಪಾರಮಾರ್ಥಿಕವೆಂದು ಹೇಳಬೇಕು.

6. ಪಿತಾಸಿಲೋಕಸ್ಯ ಚರಾಚರಸ್ಯ ತ್ವಮಸ್ಯಪೂಜ್ಯಶ್ಚ ಗುರುರ್ಗರೀಯಾನ್ ।
ನತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋಲೋಕತ್ರಯೇಽಪ್ಯ ಪ್ರತಿಮಪ್ರಭಾವ ॥ (11. 43.)

ಅರ್ಥವು :— ನೀನು ಈ ಸ್ಥಾವರ ಜಂಗಮಾತ್ಮಕವಾದ ಪ್ರಪಂಚಕ್ಕೆ ತಂದೆಯಾಗಿರುತ್ತೀಯೆ. ಮತ್ತು ಪೂಜ್ಯನೂ, ಗುರುವೂ, ಶ್ರೇಷ್ಠರಿಗಿಂತಲೂ ಶ್ರೇಷ್ಠನೂ ಆಗಿರುತ್ತೀಯೆ. ಅಸದೃಶವಾದ ಪ್ರಭಾವವುಳ್ಳ ಎಲೈ ಸ್ವಾಮಿಯೇ! ನಿನಗೆ ಸಮಾನನು ಮೂರು ಲೋಕಗಳಲ್ಲಿ ಎಲ್ಲಿಯೂ ಇಲ್ಲ; ಇನ್ನು ನಿನಗಿಂತಲೂ ಅಧಿಕನಾದವನು ಎಲ್ಲಿಂದ ಬಂದಾನು ?

7. ಮತ್ಕರ್ಮಕೃನ್ಮತ್ಪರಮಃ....ಯಃಸಮಾಮೇತಿಪಾಂಡವ । (11.55)

ಅರ್ಥವು :— ಅರ್ಜುನ ! ನನ್ನ ಪ್ರೀತ್ಯರ್ಥವಾಗಿ ವಿಹಿತಕರ್ಮಗಳನ್ನು ಮಾಡುವವನಾಗಿ ನಾನೇ ಸರ್ವೋತ್ತಮನೆಂದು ಜ್ಞಾನವುಳ್ಳವನು........ನನ್ನನ್ನು ಹೊಂದುತ್ತಾನೆ.

8. ಶ್ರದ್ದಧಾನಾಮತ್ಪರಮಾಭಕ್ತಾಸ್ತೇಽತೀವಮೇಪ್ರಿಯಾಃ ।
—(12. 20.)

ಅರ್ಥವು :— ಆಸ್ತಿಕ್ಯಬುದ್ಧಿಯುಳ್ಳವರಾಗಿ ನಾನೇ (ಕೃಷ್ಣನೇ) ಸರ್ವೋತ್ತಮನೆಂಬ ಜ್ಞಾನವುಳ್ಳ ಭಕ್ತರು ನನಗೆ ಅತ್ಯಂತ ಪ್ರಿಯರು.

9. ದ್ವಾವಿಮೌಪುರುಷೌ ಲೋಕೇಕ್ಷರಶ್ಚಾಕ್ಷರ ಏವ ಚ ।
ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ।
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಯೋ ಲೋಕತ್ರಯ ಮಾವಿಶ್ಯಬಿಭರ್ತ್ಯವ್ಯಯ ಈಶ್ವರಃ ।
ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿಚೋತ್ತಮಃ ।
ಅತೋಽಸ್ಮಿಲೋಕೇವೇದೇ ಚ ಪ್ರಥಿತಃ ಪುರುಷೋತ್ತಮಃ ।
ಯೋಮಾಮೇವಮಸಂಮೂಢೋ ಜಾನಾತಿಪುರುಷೋತ್ತಮಂ ।
ಸ ಸರ್ವವಿದ್ಭಜತಿ ಮಾಂ ಸರ್ವಭಾವೇನಭಾರತ ।
ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ।
ಏತದ್ಬುಧ್ವಾಬುದ್ಧಿಮಾನ್ಸ್ಯಾತ್ ಕೃತಕೃತ್ಯಶ್ಚಭಾರತ ॥
—(15. 16-29)

ಇದರ ತಾತ್ಪರ್ಯವು :— ಪ್ರಪಂಚದಲ್ಲಿ ಕ್ಷರವೆಂತಲೂ ಅಕ್ಷರವೆಂತಲೂ ಎರಡು ವಿಧವಾದ ಪ್ರಮಾಣಪ್ರಸಿದ್ಧರಾದ ಚೇತನರಿರುವರು. ಬ್ರಹ್ಮಾದಿ ಸರ್ವ

ಜೀವರಾಶಿಯೂ ( ಶರೀರನಾಶವುಳ್ಳವರಾದ ಕಾರಣ ) ಕ್ಷರಪುರುಷರೆನಿಸುವರು; ( ನಿರ್ವಿಕಾರಳಾದುದರಿಂದ ) ಕೂಟಸ್ಥನಾಮಕ ಲಕ್ಷ್ಮೀದೇವಿಯು (ದೇಹನಾಶ ರಹಿತಳಾದುದರಿಂದ) ಅಕ್ಷರ ಪುರುಷಸಂಜ್ಞೆಯುಳ್ಳವಳು. ಉತ್ತಮ ಪುರುಷನಾದರೋ ಪೂರ್ವೋಕ್ತ ಕ್ಷರಾಕ್ಷರಪುರುಷರಿಗಿಂತ ಭಿನ್ನನು; ಆದುದರಿಂದಲೇ ಪರಮಾತ್ಮನೆಂದು (ಪರಮ=ಉತ್ತಮ, ಆತ್ಮಾ=ಚೇತನನು.) "ಚೇತನಶ್ಚೇತನಾನಾಂ" ಇತ್ಯಾದಿ ಶ್ರುತಿಗಳಲ್ಲಿ ಪ್ರತಿಪಾದಿತನಾಗಿರುವನು. (ಪರಮಾತ್ಮನು ಪುರುಷೋತ್ತಮನೆಂಬಲ್ಲಿ ಯುಕ್ತಿಯನ್ನು ಕೂಡ ಹೇಳುತ್ತಾನೆ. ) ಪುರುಷೋತ್ತಮನು ಮೂರು ಲೋಕಗಳನ್ನೂ ಪ್ರವೇಶ ಮಾಡಿ ಧಾರಣವನ್ನೂ ಪಾಲನವನ್ನೂ ಮಾಡುತ್ತಾನೆ. ಲೋಕತ್ರಯಗಳು ನಾಶ ಹೊಂದಿದರೂ ತಾನು ನಾಶ ಹೊಂದುವದಿಲ್ಲವಾದುದರಿಂದ ಅವನು ಅವ್ಯಯನು. ತಾನು ಪ್ರವೇಶಮಾಡಿರುವ ಜಗತ್ತು ನಾಶಹೊಂದಿದರೂ ತನಗೆ ನಾಶವು ಇಲ್ಲದಿರುವುದು ಹೇಗೆಂದರೆ "ಈಶ್ವರಃ" ಅಚಿಂತ್ಯಶಕ್ತಿಯುಳ್ಳವನು. (ಆ ಉತ್ತಮ ಪುರುಷನು ನಾನೇ ಎಂದು ಶ್ರೀ ಕೃಷ್ಣನು ಹೇಳುತ್ತಾನೆ. ಯಾವ ಕಾರಣದಿಂದ ನಾನು ಕ್ಷರಪುರುಷ ಸಮೂಹವನ್ನು ಮೀರಿ ಅವರಿಗಿಂತ ಅಧಿಕನಾಗಿ ಇದ್ದೇನೆಯೋ ಮತ್ತು ಅಕ್ಷರಳಾದ ಲಕ್ಷ್ಮಿಗಿಂತಲೂ ಉತ್ತಮನೋ ಆ ಕಾರಣದಿಂದಲೇ ಭಾರತಾದಿ ಪೌರುಷೇಯ ಗ್ರಂಥಗಳಲ್ಲಿಯೂ ಮತ್ತು ವೇದದಲ್ಲಿಯೂ ನಾನೇ ಪುರುಷೋತ್ತಮನೆಂದು ಪ್ರಸಿದ್ಧನಾಗಿರುವೆನು. ಎಲೈ ಭರತಕುಲೋತ್ಪನ್ನನಾದ ಅರ್ಜುನನೇ ! ಈ ಪ್ರಕಾರ ( ಶ್ರೀ ಕೃಷ್ಣನು ಕ್ಷರಾಕ್ಷರಪುರುಷರಿಗಿಂತ ಉತ್ತಮನು. ವೇದಾದಿಗಳಲ್ಲಿ ಈ ರೀತಿ ಪ್ರತಿಪಾದಿತನು ಎಂಬುದಾಗಿ ) ಯಾವ ಅಧಿಕಾರಿಯು **ಅಸಮ್ಮೂಢಃ** "ಜಾನಾತಿ ಪುರುಷೋತ್ತಮಂ" ಎಂದರೆ ಸರ್ವೋತ್ತಮತ್ವವು ಮಿಥ್ಯಾಭೂತವು, (ಕಲ್ಪಿತವು) ಎಂದು ತಿಳಿಯದೆ ಪುರುಷೋತ್ತಮನೆಂದು ಯಥಾರ್ಥವಾಗಿ ತಿಳಿಯುತ್ತಾನೆಯೋ ಅವನು ಸರ್ವ ಶಾಸ್ತ್ರಾರ್ಥಜ್ಞನು; ಅವನು ಸರ್ವವನ್ನೂ ತಿಳಿದವನೇ. (ಸರ್ವಪ್ರಧಾನನಾದ ಪರಮಾತ್ಮನನ್ನು ತಿಳಿದರೆ ಅಪ್ರಧಾನವಾದ ಇತರ ಸರ್ವವಸ್ತುವಿನ ಜ್ಞಾನದಿಂದ ಆಗುವ ಫಲಗಳೆಲ್ಲವೂ ಪ್ರಧಾನವಸ್ತು ಜ್ಞಾನಜನ್ಯಫಲದಲ್ಲಿ ಅಂತರ್ಭೂತವಾಗಿವೆ.) ಹೀಗೆ ನನ್ನ ಪುರುಷೋತ್ತಮತ್ವವನ್ನು ತಿಳಿದವನು ಸರ್ವ ಪ್ರಕಾರದಿಂದಲೂ (ಪಿತೃತ್ವೇನ, ಸ್ವಾಮಿತ್ವೇನ, ಸುಹೃತ್ವೇನ, ಬಂಧುತ್ವೇನ, ಸಖಿತ್ವೇನ, ಗತಿತ್ವೇನ) ನನ್ನನ್ನೇ ಭಜಿಸುತ್ತಾನೆ. ಇದು ಅತಿ ಗೋಪ್ಯತಮವಾದ ಪ್ರಮೇಯವು. ಎಲೈ ಪಾಪರಹಿತನೇ ! ನಿನಗೋಸ್ಕರ ನನ್ನಿಂದ ಉಪದೇಶ ಮಾಡಲ್ಪಟ್ಟಿತು. ಇದನ್ನು ತಿಳಿದ ನಂತರ ಉಕ್ತಪ್ರಕಾರ ಧ್ಯಾನ ಮಾಡಿ ಅಪರೋಕ್ಷಜ್ಞಾನಿಯಾಗುತ್ತಾನೆ; ನಂತರ ಮುಕ್ತನೂ ಆಗುತ್ತಾನೆ.

ಹೀಗೆ ಶ್ರೀಕೃಷ್ಣನು ತಾನು ಸರ್ವಚೇತನರಿಗಿಂತಲೂ ಉತ್ತಮನು ಎಂದು

ಕಂಠತಃ ಹೇಳಿ ತನ್ನ ವಾಕ್ಯದಲ್ಲಿ ವಿಶ್ವಾಸವಿಲ್ಲದ ಮುಂದರ ಆಶಂಕಾಪರಿಹಾರಾರ್ಥವಾಗಿ ಮೂರುಲೋಕಗಳ ಧಾರಣಕರ್ತೃತ್ವ. ರಕ್ಷಣಕರ್ತೃತ್ವ, ಅವ್ಯಯತ್ವ, ಈಶ್ವರತ್ವ, ಇವೇ ಮುಂತಾದ ಅನೇಕ ಯುಕ್ತಿಗಳನ್ನು ಹೇಳಿ ಉಕ್ತಾರ್ಥದಲ್ಲಿ ದಾರ್ಢ್ಯಾರ್ಥವಾಗಿ ವೇದದ ಸಮ್ಮತಿಯನ್ನೂ ಕೊಟ್ಟಿರುತ್ತಾನೆ. ಮೊದಲೇ ಅನರ್ಘವಾದ ವಜ್ರವು; ಅದರಮೇಲಿ ಸಾಣೆಹಿಡಿದಿರುವದು: ಅದನ್ನು ದಿವ್ಯವಾದ ಕುಂದಣದ, ಭಂಗಾರದ ಕಟ್ಟಿನಲ್ಲಿ ಕಟ್ಟಿದರೆ ಹೇಗೆ ಶೋಭಿಸುವುದೋ ಹಾಗೆಯೇ ಶ್ರೀಕೃಷ್ಣನ ವಾಕ್ಯಗಳು ಯುಕ್ತಿಯಿಂದ ಅಲಂಕೃತವಾಗಿ ವೇದಗಳ ಸಮ್ಮತಿಯಿಂದ ದೃಢೀಕೃತವಾಗಿ ಪ್ರಮಾಣತಮವೆಂದು ನಿಶ್ಚಿತವಾಗಿರುವದರಿಂದ ಮೂರು ಲೋಕಗಳಲ್ಲೂ ಅತ್ಯಂತ ಮಾನ್ಯವಾಗಿರುತ್ತವೆ.

೩ **ಪ್ರಶ್ನೆ—** ಸ್ವಾಮೀ ! ಭಗವದ್ಗೀತೆಯಲ್ಲಿ ಬ್ರಹ್ಮರುದ್ರಾದಿಗಳಿಗೆ ಸರ್ವೋತ್ತಮತ್ವವು ಇಲ್ಲವೆಂದು ಎಲ್ಲಿ ಸ್ಪಷ್ಟವಾಗಿ ಹೇಳಿರುವದು ? ಶಿವನು ಸರ್ವೋತ್ತಮನು, ಶಕ್ತಿಯು (ಲಕ್ಷ್ಮಿಯು) ಸರ್ವೋತ್ತಮವು ಎಂಬ ಇವೇ ಮುಂತಾದ ಸಂದೇಹಗಳ ಪರಿಹಾರವಾಗದೆ ವಿಷ್ಣುಸರ್ವೋತ್ತಮತ್ವವು ಪ್ರತಿಷ್ಠಿತವಾಗಲಾರದು.

**ಉತ್ತರ—** ಬ್ರಹ್ಮಜ್ಞಾನಿಯಾಗಿ ದಿವ್ಯಚಕ್ಷುಸ್ಸಿನಿಂದ ಶ್ರೀಕೃಷ್ಣನ ವಿಶ್ವರೂಪವನ್ನು ನೋಡುವ ಅರ್ಜುನನು ಈ ವಿಷಯದಲ್ಲಿ ಸಾಕ್ಷಿಹೇಳುವವನಾಗಿರುವನು.

**1. ಪಶ್ಯಾಮಿದೇವಾಂಸ್ತವ ದೇವ ದೇಹೇ ಸರ್ವಾಂಸ್ತಥಾಭೂತವಿಶೇಷ ಸಂಘಾನ್ ।**
**ಬ್ರಹ್ಮಾಣಮೀಶಂ ಕಮಲಾಸನಸ್ಥಂ ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥**— (11.15.)

ಅರ್ಥವು:—ಎಲೈ ಸ್ವಾಮೀಯೇ ! ನಿನ್ನ ದೇಹದಲ್ಲಿ ಸಮಸ್ತ ದೇವತೆಗಳನ್ನೂ ಮತ್ತು ಸಮಸ್ತ ಪ್ರಾಣಿವಿಶೇಷಗಳ ಸಮೂಹಗಳನ್ನೂ, ಕಮಲಾಸನದಲ್ಲಿರುವ **ಬ್ರಹ್ಮದೇವರನ್ನೂ,** ಬ್ರಹ್ಮದೇವರ ತೊಡೆಯಮೇಲೆ ಕುಳಿತಿರುವ **ರುದ್ರದೇವರನ್ನೂ,** ಸಮಸ್ತ ಋಷಿಗಳನ್ನೂ ಅದ್ಭುತವಾದ ಸರ್ಪಗಳನ್ನೂ ನೋಡುತ್ತೇನೆ. ಅಪರಿಚ್ಛಿನ್ನವಾದ ಭಗವಂತನ ರೂಪದ ಏಕದೇಶದಲ್ಲಿ ಅವನನ್ನು ಆಶ್ರಯಿಸಿಕೊಂಡು ಬ್ರಹ್ಮರುದ್ರರುಗಳು ಇರುತ್ತಾರೆಂದು ತಾತ್ಪರ್ಯವು.

**2. ರುದ್ರಾದಿತ್ಯಾವಸವೋಯೇ ಚ ಸಾಧ್ಯಾವಿಶ್ವೇಶ್ವಿನೌ ಮರುತಶ್ಚೋಷ್ಮಪಾಶ್ಚ ।**

**ಗಂಧರ್ವಯಕ್ಷಾಸುರ ಸಿದ್ಧಸಂಘಾವೀಕ್ಷಂತೇತ್ವಾಂ ವಿಸ್ಮಿತಾಶ್ಚೈವಸರ್ವೇ ॥**—(11. 22.)

ಅರ್ಥವು:— **ಏಕಾದಶರುದ್ರರೂ,** ದ್ವಾದಶಾದಿತ್ಯರೂ, ಅಷ್ಟವಸುಗಳೂ, ಸಾಧ್ಯರೂ, ವಿಶ್ವೇದೇವತೆಗಳೂ, ಅಶ್ವಿನೀದೇವತೆಗಳೂ, ನಲವತ್ತೊಂಬತ್ತು ಜನ ಮರುತ್ತುಗಳೂ, ಪಿತೃದೇವತೆಗಳೂ, ಗಂಧರ್ವರೂ, ಯಕ್ಷರು, ಅಸುರರು, ಸಿದ್ಧರು ಇವರ ಸಮೂಹವೂ ಇವರೇ ಮೊದಲಾದ ಸರ್ವರೂ ಆಶ್ಚರ್ಯಭರಿತರಾಗಿ ನಿನ್ನನ್ನು ನೋಡುತ್ತಾರೆ.

**3. ಕಸ್ಮಾಚ್ಚ ತೇನ ನಮೇರನ್ ಮಹಾತ್ಮನ್ ಗರೀಯಸೇ ಬ್ರಹ್ಮ ಣೋಽಪ್ಯಾದಿಕರ್ತ್ರೇ ||**—(11-37)

ಎಲೈ ಪರಿಪೂರ್ಣಸ್ವಾಮಿಯೇ ! ಗುರುಶ್ರೇಷ್ಠನಾದ ಲೋಕಕರ್ತನಾದ **ಚತುರ್ಮುಖಬ್ರಹ್ಮದೇವರಿಗೂ ಸೃಷ್ಟಿಕರ್ತನಾದ ನಿನಗೆ** (ಸಕಲ ಲೋಕದವರೂ) ಏತಕ್ಕೆ ನಮಸ್ಕಾರಮಾಡದೆ ಇದ್ದಾರು ? ಮಾಡಿಯೇ ಮಾಡು ತ್ತಾರೆಂದು ಭಾವವು.

**4. ಬ್ರಹ್ಮಣೋಹಿ ಪ್ರತಿಷ್ಠಾಹ ಮಮೃತಸ್ಯಾವ್ಯಯಸ್ಯ ಚ ।**
**ಶಾಶ್ವತಸ್ಯ ಚ ಧರ್ಮಸ್ಯಸುಖಸ್ಯೈಕಾಂತಿಕಸ್ಯಚ ||** —(14. 27)

ನಾನು **ಮಹಾಲಕ್ಷ್ಮಿಗೂ,** ( ಬ್ರಹ್ಮದೇವರಿಗೂ ) ನಾಶರಹಿತವಾದ ಮುಕ್ತವರ್ಗಕ್ಕೂ, ಅಕ್ಷಯಫಲಪ್ರದವಾದ ನಿಷ್ಕಾಮಧರ್ಮಕ್ಕೂ, ಅತ್ಯಂತಿಕ ವಾದ (ಅತ್ಯುತ್ತಮವಾದ) ದುಃಖಸಂಪರ್ಕರಹಿತವಾದ ಮುಕ್ತಿಸುಖಕ್ಕೂ ಸ್ಥಿತಿಕಾರಣನು.

**5. ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ ।**
**ಜೀವಭೂತಾಂ ಮಹಾಬಾಹೋ....||**—(7-5)

ಅರ್ಥವು:— ಜಡಪ್ರಕೃತಿಗಿಂತ ಭಿನ್ನಳಾಗಿ ಸರ್ವದೇಹಿಗಳ ಪ್ರಾಣ ಧಾರಣೆಗೆ ಕಾರಣಳಾದ ಚೇತನ ಪ್ರಕೃತಿಯನ್ನು ( ಲಕ್ಷ್ಮೀದೇವಿಯನ್ನು ) ( ಚೇತನಾಚೇತನ ಸರ್ವ ಜಗತ್ತಿಗಿಂತಲೂ) ಉತ್ತಮಳನ್ನಾಗಿಯೂ ನನ್ನ ಆಧೀನ ಳನ್ನಾಗಿಯೂ ತಿಳಿ. ಈ ವಾಕ್ಯಗಳಿಂದ ಲಕ್ಷ್ಮೀ ಬ್ರಹ್ಮರುದ್ರಾದಿಗಳು ವಿಷ್ಣುವಿನ ಆಧೀನರೇ ಹೊರತು ಸರ್ವೋತ್ತಮರಲ್ಲವೆಂದು ಸಿದ್ಧವಾಗುವದು.

**೪. ಪ್ರಶ್ನೆ**— ವೇದಾರ್ಥ ನಿರ್ಣಾಯಕವಾದ ಬ್ರಹ್ಮಸೂತ್ರದಲ್ಲಿ ವಿಷ್ಣುವು ಪರಬ್ರಹ್ಮನು ಅಂದರೆ ಸರ್ವೋತ್ತಮ ವಸ್ತುವು ಎಂಬುದನ್ನು ಯಾವ ಯಾವ ಯುಕ್ತಿಗಳಿಂದ ವೇದಾಂತ ಸೂತ್ರಕಾರರಾದ ವೇದವ್ಯಾಸರು ತೋರಿಸುತ್ತಾರೆ ? ಭಗವದ್ಗೀತೆಯ ವಿಷ್ಣು ಸರ್ವೋತ್ತಮತ್ವವು ಅದೇ ಯುಕ್ತಿಗಳಿಂದ ಸ್ಥಾಪಿತವಾ ಗಿದ್ದರೆ ಬ್ರಹ್ಮಸೂತ್ರಗಳಿಗೂ ಕೃಷ್ಣನ ಮಾತುಗಳಿಗೂ ಏಕವಾಕ್ಯತೆಯು ಬರುವದು.

**ಉತ್ತರ**— ಕಂಠತಃ ಅನೇಕ ಯುಕ್ತಿಗಳಿಂದಲೂ ಸೂಚಿತವಾದ ಅನಂತ ಯುಕ್ತಿಗಳಿಂದಲೂ ವಿಷ್ಣುವಿಗೆ ಬ್ರಹ್ಮತ್ವವು (ಸರ್ವೋತ್ತಮತ್ವವು) ವೇದಾಂತ

ಸೂತ್ರಗಳಲ್ಲಿ ನಿರ್ಣೀತವಾಗಿದೆ. ಮುಖ್ಯವಾದ ಯುಕ್ತಿಗಳು ಉದಾಹರಿಸಲ್ಪಡುವವು. ಪೂರ್ಣಾನಂದತ್ವ, ಸ್ವಾತಂತ್ರ್ಯ, ಸರ್ವಜ್ಞತ್ವ, ಜನ್ಮ (ಸೃಷ್ಟಿ), ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಇವುಗಳ ಕರ್ತೃತ್ವ; ಅಂತರ್ಬಹಿರ್ವ್ಯಾಪ್ತತ್ವ; ಪುರುಷಸೂಕ್ತಪ್ರತಿಪಾದ್ಯತ್ವ; ನಿಖಿಲವೇದವೇದಾಂತ ಪ್ರತಿಪಾದ್ಯತ್ವ; ಪ್ರಣವಪ್ರತಿಪಾದ್ಯತ್ವ; ಸತ್ವಾದಿಗುಣರಾಹಿತ್ಯ; ಕರ್ಮಬಂಧ ರಾಹಿತ್ಯ; ಸರ್ವಸತ್ಕರ್ಮಫಲಭೋಕ್ತೃತ್ವ; ಸರ್ವತ್ರಸಮತ್ವ; ಪ್ರತ್ಯೇಕಂ ಸರ್ವೇಂದ್ರಿಯ ಕಾರ್ಯಕಾರಿ ವಿಲಕ್ಷಣೇಂದ್ರಿಯತ್ವ; ಮುಕ್ತಿಹೇತುಭೂತಜ್ಞಾನ ವಿಷಯತ್ವ; ಪರಮಾಕ್ಷರತ್ವ; ಅವ್ಯಕ್ತತ್ವ; ಅಚಿಂತ್ಯಶಕ್ತಿಮತ್ವ; ಇವೇ ಮುಂತಾದ ಅನೇಕ ಲಕ್ಷಣ* (ಅಸಾಧಾರಣ ಧರ್ಮ) ಗಳಿಂದ ವಿಷ್ಣುವೇ ಬ್ರಹ್ಮನು ಎಂದು ಶ್ರೀ ವ್ಯಾಸರು ನಿರ್ಣಯ ಮಾಡಿರುವರು.

ಇನ್ನು ಈ ವಿವಕ್ಷೆಯಿಂದ ಭಗವದ್ಗೀತೆಯನ್ನು ಆಲೋಡನೆ ಮಾಡೋಣ.

(1) **ಪೂರ್ಣಾನಂದತ್ವವು** ವಿಷ್ಣುಧರ್ಮವೆಂದು "ಆನಂದಮಯೋಽಭ್ಯಾಸಾತ್" ಇತ್ಯಾದಿ ಬ್ರಹ್ಮಸೂತ್ರಗಳಲ್ಲಿ ನಿಶ್ಚಿತವಾಗಿರುವದು. ಪೂರ್ಣಾನಂದ ಸ್ವರೂಪನಾದುದರಿಂದ ಶ್ರೀ ಕೃಷ್ಣನು ಸರ್ವೋತ್ತಮನು ಎಂದು ನಿಶ್ಚಯಿಸಬಹುದು. ಸುಖವು ಸ್ವತಃ ಪುರುಷಾರ್ಥವು. ಮನುಷ್ಯರಿಗೆ ಧನ, ಕನಕ, ವಸ್ತ್ರ ವಾಹನಾದಿ ಸರ್ವಭೋಗ್ಯ ದ್ರವ್ಯಗಳೂ ಸುಖಾರ್ಥವಾಗಿ ಅಪೇಕ್ಷಿತವಾಗಿದೆ. ಸುಖವು ಯಾತಕ್ಕೆಂದರೆ ಆ ಪ್ರಶ್ನೆಗೆ ಉತ್ತರವಿಲ್ಲ. ಆದುದರಿಂದ ಸುಖವು ಸ್ವತಃ ಪುರುಷಾರ್ಥವೆನ್ನಿಸುವದು. ಅಂಥ ಸುಖದಿಂದ ಪೂರ್ಣನಾದವನಿಗೆ ಮೂರು ಲೋಕಗಳಲ್ಲಿಯೂ ಅಪೇಕ್ಷಿತವಾದ ದ್ರವ್ಯವು ಯಾವುದೂ ಇರುವದಿಲ್ಲ. ಆದುದರಿಂದ

---

*ಲಕ್ಷಣವೆಂದರೆ ಅಸಾಧಾರಣಧರ್ಮವು. ಯಾವ ವಸ್ತುವಿಗೆ ಲಕ್ಷಣವನ್ನು ನಾವು ಹೇಳಬೇಕೋ ಅದು ಲಕ್ಷ್ಯವೆನಿಸುವುದು. ಲಕ್ಷ್ಯಭಿನ್ನವಾದ ಯಾವ ವಸ್ತುವಿನಲ್ಲಿಯೂ ಇಲ್ಲದೆ ಲಕ್ಷ್ಯ ವಸ್ತುವಿನಲ್ಲಿ ಮಾತ್ರ ಇರುವ ಧರ್ಮವು ಲಕ್ಷಣವೆನಿಸುವುದು. ಗೋವಿಗೆ ಸಾಸ್ನಾದಿಮತ್ವವು ಅಂದರೆ ಗಳಕಂಬಳವೇ ಮೊದಲಾದುವನ್ನು ಹೊಂದಿರೋಣವು ಲಕ್ಷಣವೆನಿಸುವದು. ಗಳಕಂಬಳವು ಗೋಭಿನ್ನವಾದ ಯಾವ ಪ್ರಾಣಿಗೂ ಇಲ್ಲ. ಗೋವಿಗೆ ಮಾತ್ರ ಇರುತ್ತದೆ. ಆದುದರಿಂದ ಅದು ಗೋವಿನ ಲಕ್ಷಣವು ( ಅಸಾಧಾರಣ ಧರ್ಮವು ) ಎನಿಸುವದು. ಯಾವುದು "ಸಾಸ್ನಾದಿ" ಗಳನ್ನು ಉಳ್ಳದ್ದೋ ಅದು ಗೋವು ಎಂದು ವಸ್ತುನಿರ್ದೇಶವನ್ನು ಮಾಡುವದು ಲಕ್ಷಣಜ್ಞಾನದ ಮುಖ್ಯ ಪ್ರಯೋಜನವು, ಪ್ರಕೃತದಲ್ಲಿ ಸರ್ವೋತ್ತಮತ್ವಪ್ರಯೋಜಕವಾದ ಸಕಲ ಜಗತ್ಸೃಷ್ಟಿಕರ್ತೃತ್ವವೇ ಮೊದಲಾದ ಧರ್ಮಗಳು ಬ್ರಹ್ಮರುದ್ರಾದಿಗಳಲ್ಲಿ ಎಲ್ಲಿಯೂ ಇಲ್ಲದೆ ವಿಷ್ಣುವಿನಲ್ಲಿ ಮಾತ್ರ ಇರುವದರಿಂದ ವಿಷ್ಣುವು ಸರ್ವೋತ್ತಮನು ಎಂದು ಸೂತ್ರಕಾರರು ನಿರ್ಣಯ ಮಾಡಿರುತ್ತಾರೆ. ಭಗವದ್ಗೀತೆಯಲ್ಲಿಯೂ ಕೂಡ ವೇದಾಂತಸೂತ್ರಗಳಲ್ಲಿ ಪ್ರದರ್ಶಿತವಾದ ಅನೇಕ ಲಕ್ಷಣಗಳನ್ನು ಹೊಂದಿರುವದರಿಂದ ನಾನು ಸರ್ವೋತ್ತಮನು ಎಂದು ಸ್ಪಷ್ಟವಾಗಿ ಶ್ರೀ ಕೃಷ್ಣನೇ ಉಪಪಾದನೆ ಮಾಡಿ ತೋರಿಸಿರುತ್ತಾನೆ.

ಪೂರ್ಣಸುಖವುಳ್ಳವನು ನಿರಪೇಕ್ಷನಾದುದರಿಂದ ಸರ್ವೋತ್ತಮನೆನಿಸುವನು. ಶ್ರೀ ಕೃಷ್ಣನು ಹೇಳುತ್ತಾನೆ.

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷುಲೋಕೇಷು ಕಿಂಚನ |**
**ನಾನವಾಪ್ತಮವಾಪ್ತವ್ಯಂ....** ||— (3. 22.)

ಅರ್ಥವು :— ಎಲೈ ಅರ್ಜುನನೇ ! ತ್ರಿಲೋಕಗಳಲ್ಲಿಯೂ ನನಗೆ ಪೂರ್ವದಲ್ಲಿ ಲಬ್ಧವಾಗದೆ ಉತ್ತರಕಾಲದಲ್ಲಿ ಹೊಂದಬೇಕಾದ ಅಪೇಕ್ಷಿತವಸ್ತುವು ಯಾವುದೂ ಇಲ್ಲವಾದುದರಿಂದ ತದರ್ಥವಾಗಿ ನನ್ನಿಂದ ಕರ್ತವ್ಯವಾದ ಯಾವ ಕರ್ಮವೂ ಇಲ್ಲ.

ಬ್ರಹ್ಮರುದ್ರಾದಿ ಸರ್ವಜೀವರುಗಳೂ ಮೋಕ್ಷಾರ್ಥವಾಗಿ ಅಥವಾ ಕೇವಲ ಪರಮಾತ್ಮನ ಪ್ರಸಾದವನ್ನು ಇಚ್ಛಿಸುವವರಾಗಿ ಅವನ ಆರಾಧನೆಯಲ್ಲಿ ತತ್ಪರರಾಗಿರುವದರಿಂದ ಈ ಲಕ್ಷಣವು ಕೃಷ್ಣನೊಬ್ಬನಲ್ಲಿಯೇ ಇರುವದರಿಂದ ಇವನು ಸರ್ವೋತ್ತಮನೆನಿಸುವನು. ಯದ್ಯಪಿ ಲಕ್ಷ್ಮೀದೇವಿಯು ನಿತ್ಯಮುಕ್ತಳು. ಆದರೂ ಆಕೆಯು ವಿಷ್ಣುವಿನ ಅಧೀನಳಾಗಿ ತನ್ನ ಸುಖಾನುಭವವನ್ನು ಮಾಡುತ್ತಿರುವಳು. **"ಬ್ರಹ್ಮಣೋಹಿ ಪ್ರತಿಷ್ಠಾಹಂ"** ಎಂದರೆ ಲಕ್ಷ್ಮೀದೇವಿಗೂ ನಾನೇ ಆಧಾರನು ಎಂದು ಶ್ರೀ ಕೃಷ್ಣನು ಹೇಳಿರುತ್ತಾನಷ್ಟೇ !

2. **ಸ್ವಾತಂತ್ರ್ಯವು** ಸರ್ವೋತ್ತಮತ್ವವನ್ನು ನಿರ್ಣಯಿಸುವ ಲ ಣವು ಎಂಬುದು "ತದನನ್ಯತ್ವಮಾರಂಭಣಶಬ್ದಾದಿಭ್ಯಃ" ಇತ್ಯಾದಿ ಬ್ರಹ್ಮಸೂತ್ರಗಳಲ್ಲಿ ನಿರ್ಣೀತವಾಗಿರುತ್ತದೆ. ಶ್ರೀ ಕೃಷ್ಣನು ಈ ಲಕ್ಷಣವು ತನ್ನಲ್ಲಿರುವದೆಂದು ಹೇಳುತ್ತಾನೆ.

(1) **ಮಾಂ ವಿದ್ಧ್ಯಕರ್ತಾರಮವ್ಯಯಂ |** —(4. 13.)

ಬ್ರಾಹ್ಮಣಾದಿ ಚತುರ್ವರ್ಣಗಳಿಗೂ ನಾನೇ ಕರ್ತನು. ಆದರೆ ನನಗೆ ಬೇರೆ ಒಬ್ಬ ಕರ್ತನು ಇಲ್ಲವು; ನಾನು ಸ್ವತಂತ್ರನು ಎಂದು ತಿಳಿಯುವನಾಗು.

(2) **ಮತ್ತಃ ಸರ್ವಂ ಪ್ರವರ್ತತೇ |** —(10. 8.)

ನನ್ನಿಂದಲೇ ಸಕಲ ಪ್ರಾಣಿಗಳೂ ತಮ್ಮ ತಮ್ಮ ವ್ಯಾಪಾರದಲ್ಲಿ ಪ್ರವೃತ್ತವಾಗುತ್ತವೆ. "ನಖುತೇತ್ವತ್ಕ್ರಿಯತೇ ಕಿಂಚನಾರೇ" ಇತ್ಯಾದಿ ಶ್ರುತ್ಯರ್ಥವನ್ನೇ ಶ್ರೀ ಕೃಷ್ಣನು ನಿರೂಪಣೆ ಮಾಡಿ ಸರ್ವವೂ ತನ್ನ ಅಧೀನವೆಂದು ಹೇಳಿರುತ್ತಾನೆ.

3. **ಸರ್ವಜ್ಞತ್ವವು.** ಸರ್ವಾರ್ಥವಿಷಯಕಜ್ಞಾನವು, ಸರ್ವಜ್ಞತ್ವವು ಇದರಲ್ಲಿ ಸ್ವ (ತನ್ನ) ವಿಷಯಕಜ್ಞಾನವೂ ಮತ್ತು ತನಗಿಂತ ಭಿನ್ನವಾದ ನಿಖಿಲ ಜಗತ್ತಿನಲ್ಲಿರುವ ಸರ್ವಪದಾರ್ಥವಿಷಯಕಜ್ಞಾನವೂ ಅಂತರ್ಭಾವವನ್ನು ಹೊಂದಿವೆ. ಅದೃಶ್ಯತ್ವಾಧಿಕರಣದಲ್ಲಿ ಇದು ಸರ್ವೋತ್ತಮತ್ವಸಾಧಕವಾದ ಯುಕ್ತಿಯೆಂದು ಹೇಳಲ್ಪ

ಟ್ಟಿರುತ್ತದೆ. ಇಂಥ ಧರ್ಮವು ಒಬ್ಬ ವಿಷ್ಣುವಿಗೆ ಹೊರತು ಬ್ರಹ್ಮಾದಿದೇವತೆಗಳಿಗೂ ಇರುವದಿಲ್ಲವೆಂದು ಶ್ರೀ ಕೃಷ್ಣನು ಹೇಳಿರುತ್ತಾನೆ.

(1) **ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂವೇದಸರ್ವಾಣಿ ನತ್ವಂ ವೇತ್ಥ ಪರಂತಪ ॥** —(4. 5.)

ಅರ್ಥವು— ಎಲೈ ಅರ್ಜುನನೇ ! ನನಗೂ ನನ್ನ ಅಧೀನವಾದ ನಿನಗೂ ಅನಂತ ಜನ್ಮಗಳು ಕಳೆದು ಹೋದವು. ಅವೆಲ್ಲವುಗಳನ್ನು ನಾನು ತಿಳಿದವನು. ನೀನು (ಪರಂತಪನಾದುದರಿಂದ) ಅವುಗಳನ್ನುತಿಳಿದವನಲ್ಲ. ಇದರಿಂದ ಶ್ರೀಕೃಷ್ಣನು ಸರ್ವಜ್ಞನು ಮತ್ತು ಪಾರ್ಥಾದಿ ಜೀವರು ಅಲ್ಪಜ್ಞರು ಎಂದು ಸಿದ್ಧವಾಗುವದು.

(2) **ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿಮಾಂತುವೇದ ನಕಶ್ಚನ ॥** (7–26)

ಅರ್ಥವು— ಎಲೈ ಅರ್ಜುನನೇ ! ನಾನು ಪೂರ್ವದಲ್ಲಿದ್ದ, ಈಗ ಇರುವ ಮತ್ತು ಮುಂದೆ ಬರುವ ಸಕಲ ಪದಾರ್ಥಗಳನ್ನೂ ತಿಳಿದಿರುತ್ತೇನೆ. ನನ್ನನ್ನಾದರೋ ಯಾವನೂ ತಿಳಿದವನಿಲ್ಲ. (ಸರ್ವಜ್ಞನೆಂದು ಪ್ರಸಿದ್ಧನಾಗಿರುವ) ಚತುರ್ಮುಖ ಬ್ರಹ್ಮನೂ ತಿಳಿದವನಲ್ಲ. (ಕಃ ಎಂದು ಚತುರ್ಮುಖ ಬ್ರಹ್ಮದೇವರಿಗೆ ಹೆಸರು.)

ಈ ರೀತಿಯಾಗಿ ಕೃಷ್ಣನು ತನಗೆ ಸರ್ವವಿಷಯಕ ಜ್ಞಾನವು ಉಂಟೆಂದು ಹೇಳಿ ಬ್ರಹ್ಮಾದಿಗಳಿಗೆ ಇಲ್ಲವೆಂದೂ ಹೇಳಿರುತ್ತಾನೆ.

(3) **ವೇದಾಂತಕೃದ್ವೇದ ವಿದೇವ ಚಾಹಂ ।** —(15. 15.)

ಅರ್ಥವು— ವೇದಾಂತ ಸೂತ್ರಗಳನ್ನು ರಚಿಸಿದವನೂ ಮತ್ತು ನಿಖಿಲವೇದಗಳನ್ನೂ ಸಾಕಲ್ಯೇನ ತಿಳಿಯುವವನೂ ನಾನೇ.

(4) **ನಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।**
(10. 2.)

ಅರ್ಥವು— ನನ್ನ ಮಹಿಮೆಯನ್ನು ದೇವತೆಗಳಸಮೂಹವೂ, ಮಹರ್ಷಿಗಳೂ ಕೂಡ ತಿಳಿಯಲಾರರು. ಇದರಿಂದ ದೇವಾದಿಗಳ ಜ್ಞಾನವು ಅಲ್ಪವೆಂದು ನಿಶ್ಚಿತವಾಗುತ್ತದೆ. ಶಿಷ್ಯನಾದ ಅರ್ಜುನನೂ ಕೂಡ ಹೀಗೆಯೇ ಹೇಳುತ್ತಾನೆ.

(5) **ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।**
**ನಹಿ ತೇ ಭಗವನ್ವ್ಯಕ್ತಿಂ ವಿದುರ್ದೇವಾ ನ ದಾನವಾಃ ।**
**ಸ್ವಯಮೇವಾತ್ಮನಾತ್ಮಾನಂ ವೇತ್ಥತ್ವಂ ಪುರುಷೋತ್ತಮ ॥**
—(10. 14-15)

ಅರ್ಥವು— ಎಲೈ ಕೇಶವನೇ ! (ಬ್ರಹ್ಮರುದ್ರಾದಿಪ್ರವರ್ತಕನಾದ ಸ್ವಾಮಿಯೇ !) ನೀನು ನನ್ನನ್ನು ಕುರಿತು ಹೇಳಿದ ನಿನ್ನ ಮಾಹಾತ್ಮ್ಯೆಯೆಲ್ಲವೂ ಯಥಾ

ರ್ಥವೇ ! ಎಲೈ ಭಗವಂತನೇ ! ನಿನ್ನ ಸಾಮರ್ಥ್ಯಾತಿಶಯವನ್ನು ದೇವತೆಗಳಾಗಲೀ, ದಾನವರಾಗಲೀ ತಿಳಿದವರಲ್ಲ. ಹೇ ಪುರುಷೋತ್ತಮ ! ಇತರರ ಅಪೇಕ್ಷೆಯಿಲ್ಲದೆ ಸ್ವಸಾಮರ್ಥ್ಯದಿಂದ ನೀನೇ ನಿನ್ನನ್ನು ತಿಳಿದುಕೊಂಡಿರುತ್ತಿಯೇ ! ಇದರಿಂದ ಬ್ರಹ್ಮಾದಿಗಳು ಸರ್ವಜ್ಞರಾದರೂ ಭಗವಂತನ ಸಾಮರ್ಥ್ಯಾತಿಶಯವನ್ನು ಸಾಕಲ್ಯವಾಗಿ ತಿಳಿಯಲಾರರೆಂದು ಸಿದ್ಧವಾಯಿತು. ಭಗವಂತನು ಸಾಕಲ್ಯೇನ, ಜ್ಞೇಯನೆಂದು ತಿಳಿಯುವವರು ಮೂಢರೆಂದು ಹೇಳುತ್ತಾನೆ.

(7) **ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇಮಾಮಬುದ್ಧಯಃ ।**
—(7. 24)

ಸಾಕಲ್ಯೇನ ಮತ್ತು ನನ್ನ ಅನುಗ್ರಹವಿಲ್ಲದೆ ಅಜ್ಞೇಯನಾದ ನನ್ನನ್ನು ಸಾಕಲ್ಯೇನ ಜ್ಞೇಯನು ಎಂದು ಮೂಢರು ತಿಳಿಯುವರು.

**4. ಜನ್ಮಾದ್ಯಷ್ಟಕರ್ತೃತ್ವವು** ಸರ್ವೋತ್ತಮತ್ವವನ್ನು ಸ್ಥಾಪಿಸುವುದರಲ್ಲಿ ಸಮರ್ಥವಾದ ಯುಕ್ತಿಯೆಂದು **"ಜನ್ಮಾದ್ಯಸ್ಯಯತಃ"** ಮುಂತಾದ ವೇದಾಂತಸೂತ್ರಗಳಲ್ಲಿ ಸುಪ್ರಸಿದ್ಧವಾಗಿರುತ್ತದೆ. ಭಗವದ್ಗೀತೆಯಲ್ಲಿ ಸ್ಪಷ್ಟವಾಗಿ ಶ್ರೀಕೃಷ್ಣನಿಗೇ ಅಷ್ಟಕರ್ತೃತ್ವವು ಪ್ರಮಿತವಾಗಿದೆ.

**ಸೃಷ್ಟಿಕರ್ತೃತ್ವವು—**

(1) **ಅಹಂಕೃತ್ಸ್ನಸ್ಯಜಗತಃ ಪ್ರಭವಃ ।** — (7. 6.)
ನಾನು ಸರ್ವ ಜಗತ್ತಿಗೂ ಸೃಷ್ಟಿಕರ್ತನು.

(2) **ಅಹಂಸರ್ವಸ್ಯ ಪ್ರಭವಃ ।**— (10. 8.)
ನಾನು ಸರ್ವಜಗತ್ತಿಗೂ ಉತ್ಪಾದಕನು.

(3) **ಯೇಚೈವಸಾತ್ವಿಕಾಭಾವಾರಾಜಸಾಸ್ತಾಮಸಾಶ್ಚಯೇ ।**
**ಮತ್ತ ಏವೇತಿತಾನ್ವಿದ್ಧಿ....॥**—(7. 12.)

ಲೋಕದಲ್ಲಿರುವ ಸಾತ್ವಿಕ ರಾಜಸ ತಾಮಸಗಳೆಂಬ ತ್ರಿವಿಧಪದಾರ್ಥಗಳೂ ನನ್ನಿಂದಲೇ ಹುಟ್ಟಿರುವವು ಎಂದು ತಿಳಿ.

(4) **ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ ।**
(8. 18.)

ಅವ್ಯಕ್ತನಾಮಕ ಪರಮಾತ್ಮನಿಂದ ಸಕಲ ಕಾರ್ಯ ಪದಾರ್ಥಗಳೂ ಸೃಷ್ಟಿಕಾಲದಲ್ಲಿ ಹುಟ್ಟುತ್ತವೆ.

(5) **ಭವಾಪ್ಯಯೌಹಿಭೂತಾನಾಂಶ್ರುತೌ ವಿಸ್ತರಶೋಮಯಾ ।**
**ತ್ವತ್ತಃಕಮಲಪತ್ರಾಕ್ಷ....॥**—(11. 2.)

ಹೇ ಕಮಲಪತ್ರಾಕ್ಷ ! ಸರ್ವಪದಾರ್ಥಗಳಿಗೂ ನಿನ್ನಿಂದಲೇ **ಉತ್ಪತ್ತಿ** ಲಯಗಳಾಗುವವೆಂದು ನನ್ನಿಂದ ವಿಸ್ತಾರವಾಗಿ ಕೇಳಲ್ಪಟ್ಟಿತು.

(6) **ಪಿತಾಸಿಲೋಕಸ್ಯ ಚರಾಚರಸ್ಯ** ।—(11·43.)
ಚರಾಚರವಾದ ನಿಖಿಲಜಗತ್ತಿಗೂ ನೀನು ತಂದೆಯು.

(7) **ಚಾತುರ್ವರ್ಣ್ಯಂಮಯಾಸೃಷ್ಟಂ** ।—(4. 13.)
ಚತುರ್ವರ್ಣಸಮೂಹವು ನನ್ನಿಂದಲೇ ಸೃಷ್ಟಿಸಲ್ಪಟ್ಟಿತು.

(8) **ಅಹಮಾದಿರ್ಹಿದೇವಾನಾಂ ಮಹರ್ಷೀಣಾಂಚಸರ್ವಶಃ** ।
—(10. 2.)
ನಾನು ಸಮಸ್ತ ದೇವತೆಗಳಿಗೂ ಮತ್ತು ಮಹರ್ಷಿಗಳಿಗೂ ಕಾರಣನು.

(9) **ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಂ** ।—(9. 7.)
ಪ್ರಳಯದಲ್ಲಿ ನಷ್ಟವಾದ ಜಗತ್ತನ್ನು ಪುನಃ ಕಲ್ಪದ ಆದಿಯಲ್ಲಿ ಸೃಷ್ಟಿ ಮಾಡುತ್ತೇನೆ.

(10) **ಪ್ರಭವಃ** ।—(9. 18.)
ನಾನು ಸೃಷ್ಟಿಕರ್ತನು.

(11) **ಪ್ರಭವಿಷ್ಣು ಚ** ।—(13. 17.)
ಪರಬ್ರಹ್ಮನು (ಶ್ರೀಕೃಷ್ಣನು) ಸೃಷ್ಟಿಕಾಲದಲ್ಲಿ ಸರ್ವೋತ್ಪಾದಕನು.

(12) **ಸರ್ವಯೋನಿಷುಕೌಂತೇಯ ಮೂರ್ತಯಃ ಸಂಭವಂತಿ ಯಾಃ** ।
**ತಾಸಾಂ ಬ್ರಹ್ಮಮಹದ್ಯೋನಿರಹಂ ಬೀಜಪ್ರದಃ ಪಿತಾ** ॥
—(14. 4.)

ಅರ್ಥವು:— ಆದಿಸೃಷ್ಟಿಯಲ್ಲಿ ಮಾತ್ರವೇ ನಾನು ಜಗದುತ್ಪಾದಕನೆಂದಲ್ಲ ದೇವ, ಮನುಷ್ಯ, ಪಶು, ಪಕ್ಷ್ಯಾದಿಯೋನಿಗಳಲ್ಲಿ ಯಾವ ಯಾವ ಪ್ರಾಣಿಗಳು ಹುಟ್ಟುತ್ತವೆಯೋ ಅವುಗಳಿಗೆಲ್ಲಾ ಲಕ್ಷ್ಮಿಯು ಕ್ಷೇತ್ರರೂಪವಾದ ಕಾರಣಳು (ತಾಯಿಯಂತೆ) ನಾನು ಗರ್ಭಾದಾನಮಾಡುವ ತಂದೆಯು. ಇದರಿಂದ ಲೋಕದಲ್ಲಿರುವ ಪಿತ್ರಾದಿಗಳಲ್ಲಿ ಸ್ಥಿತನಾಗಿ ಪುತ್ರಾದಿಗಳನ್ನು ಉತ್ಪತ್ತಿ ಮಾಡುವವನು ಪರಮಾತ್ಮನು ಎಂದು ಸಿದ್ಧವಾದುದರಿಂದ ವಿಷ್ಣುವಿನ ಸರ್ವೋತ್ತಮತ್ವವು ನಿಸ್ಸಂಶಯವಾಯಿತು. ಶ್ರೀಕೃಷ್ಣನು ನಿಖಿಲಜಗತ್ತಿಗೂ ತಾನೆ ಉತ್ಪಾದಕನೆಂದು ಹೇಳಿ ಮತ್ತೊಬ್ಬರಿಗೆ ಆ ಸಾಮರ್ಥ್ಯವು ಇಲ್ಲವೆಂದೂ ತಿಳಿಸುತ್ತಾನೆ.

13. **ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಂ** (।–910)
ಅಧಿಪತಿಯಾದ ನನ್ನಿಂದ ಪ್ರೇರಿತವಾಗಿ ಚೇತನ ಪ್ರಕೃತಿಯು ಚೇತನಾಚೇತನಾತ್ಮಕವಾದ ಜಗತ್ತನ್ನು ಹುಟ್ಟಿಸುತ್ತದೆ.

14. **ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ** ।—(9.8.)
ನನ್ನ ಆಧೀನವಾದ ಪ್ರಕೃತಿಯನ್ನು ಕಾರಣತ್ವೇನ ಸ್ವೀಕರಿಸಿ ಪುನಃ ಪುನಃ ಸಕಲ ಚೇತನಾಚೇತನರೂಪಪ್ರಪಂಚವನ್ನು ಹುಟ್ಟಿಸುತ್ತೇನೆ ಇದರಿಂದ

ಪರಮಾತ್ಮನು ಸ್ವತಂತ್ರಸೃಷ್ಟಿಕರ್ತನು; ಲಕ್ಷ್ಮ್ಯಾದಿಗಳು ಅವನ ಅಧೀನರಾಗಿ ಅವನ ಅನುಗ್ರಹದಿಂದಲೇ ಸೃಷ್ಟಿ ಮಾಡುವವರು ಎಂದು ನಿಶ್ಚಿತವಾಗುವದು.

ಭಗವಂತನು ತನಗೆ ಮತ್ತೊಬ್ಬ ಸೃಷ್ಟಿಕರ್ತನು ಇಲ್ಲವೆಂದು ಹೇಳುತ್ತಾನೆ.

**(15) ವಿಧ್ಯಕರ್ತಾರಮವ್ಯಯಂ** —(4. 13)

**(16) ನಮೇ ವಿದುಃ ಸುರಗಣಾಃ ಪ್ರಭವಂ** —(10. 2.)

ನನಗೆ ಬೇರೆ ಕರ್ತೃಗಳು ಇಲ್ಲ; ನಾನು ಅವ್ಯಯನೆಂದು ತಿಳಿ. ದೇವತೆಗಳೂ ಋಷಿಗಳೂ ನನಗೆ ಉತ್ಪತ್ತಿ ಇಲ್ಲವೆಂದೇ ತಿಳಿದಿರುವರು.

ಹಾಗಾದರೆ "ಬಹೂನಿಮೇವ್ಯತೀತಾನಿ ಜನ್ಮಾನಿ" ಎಂಬ ಶ್ಲೋಕದಲ್ಲಿ ನನಗೂ ಅನೇಕ ಜನ್ಮಗಳು ಕಳೆದು ಹೋಗಿವೆ; ಎಂದು ಹೇಳಿದುದು ಹೇಗೆಂದರೆ ತನ್ನ ಮಾತಿನ ತಾತ್ಪರ್ಯವನ್ನು ಶ್ರೀ ಕೃಷ್ಣನು ಮುಂದಿನ ಶ್ಲೋಕದಲ್ಲಿ ತಾನೇ ನಿರೂಪಣೆ ಮಾಡಿರುತ್ತಾನೆ.

**(18) ಅಜೋಽಪಿಸನ್ನವ್ಯಯಾತ್ಮಾಭೂತಾನಾಮೀಶ್ವರೋಽಪಿಸರ್ |**
**ಪ್ರಕೃತಿಂಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ||**
—(4. 6.)

**(19) ಜನ್ಮಕರ್ಮ ಚ ಮೇದಿವ್ಯಂ**—(4. 9.)

ಅರ್ಥವು— ನಾನು ದೇಹೋತ್ಪತ್ತಿರಹಿತನಾದರೂ, ನಾಶರಹಿತವಾದ ಸ್ವರೂಪ ಮತ್ತು ದೇಹವುಳ್ಳವನಾದರೂ, ಸರ್ವ ಪ್ರಾಣಿಗಳಿಗೂ ನಿಯಾಮಕನಾಗಿದ್ದರೂ ಕೂಡ ನನ್ನ ಇಚ್ಛೆಯಿಂದ ನನ್ನ ಅಧೀನರಾದ ವಸುದೇವಾದಿಗಳನ್ನು (ನರಸಿಂಹಾವತಾರದಲ್ಲಿ ಸ್ತಂಭಾದಿಗಳಂತೆ) ನಿಮಿತ್ತ ಮಾಡಿಕೊಂಡು ಆವಿರ್ಭವಿಸುತ್ತೇನೆ. ಹೀಗೆ ಲೋಕವಿಲಕ್ಷಣವಾದ ನನ್ನ ಅವತಾರ ಮತ್ತು ಕರ್ಮಗಳನ್ನು ತಿಳಿದವರು ಮುಕ್ತರಾಗುತ್ತಾರೆ.

ಈ ರೀತಿಯಲ್ಲಿ ಶ್ರೀ ಕೃಷ್ಣನು ತಾನೇ ನಿಖಿಲ ಜಗತ್ತಿಗೂ ಸ್ಥೂಲ ಸೂಕ್ಷ್ಮಾದಿ ಸರ್ವ ಸೃಷ್ಟಿಗಳನ್ನು ಮಾಡುವವನೆಂದೂ, ಲಕ್ಷ್ಮ್ಯಾದಿಗಳು ಸ್ವತಂತ್ರರಾಗಿ ಸೃಷ್ಟಿಕರ್ತರಲ್ಲವೆಂದೂ, ತನಗೆ ಸೃಷ್ಟಿಯು ಯಾರಿಂದಲೂ ಯಾವ ಕಾರಣದಿಂದಲೂ ಇಲ್ಲವೆಂತಲೂ ಹೇಳಿರುವದರಿಂದ ಸ್ವಾತಂತ್ರ್ಯೇಣ ಸರ್ವ ಸೃಷ್ಟಿಕರ್ತೃತ್ವರೂಪ ಲಕ್ಷಣವು ಆತನಿಗೇ ಪ್ರಾಪ್ತವಾಯಿತು. ಆದುದರಿಂದ ಆತನೇ ಸರ್ವೋತ್ತಮನು.

5. **ಸ್ಥಿತಿಕರ್ತೃತ್ವ**— ಸ್ವತಂತ್ರವಾಗಿ ನಿಖಿಲಜಗತ್ತನ್ನೂ ರಕ್ಷಿಸುವ ಸಾಮರ್ಥ್ಯವು ಬ್ರಹ್ಮಾದಿಗಳಿಗೆ ಯಾರಿಗೂ ಇಲ್ಲ. ವಿಷ್ಣುವಿಗೇ ಉಂಟು. ಆದುದರಿಂದ ಆತನು ಸರ್ವೋತ್ತಮನು. ವಿಷ್ಣುವಿನ ಪಾಲನವ್ಯಾಪಾರವು ಮೂರು ವಿಧವಾಗಿರುವದು. 1. ಅಂತರ್ಬಹಿಃ ಚರಾಚರ ಜಗತ್ತನ್ನು ಅನುಪ್ರವೇಶಿಸಿ ಅದರ ಸ್ವರೂಪವು ನಾಶ ಹೊಂದದಂತೆ ಆಧಾರನಾಗಿರುತ್ತಾನೆ. 2. ಚೇತನಾಚೇತನಾತ್ಮಕವಾದ

ನಾನಾವ್ಯಕ್ತಿಗಳಲ್ಲಿ ಅಂತರ್ಗತನಾಗಿ ಜೀವರುಗಳಿಗೆ ಆಹಾರಾದಿಪ್ರದನಾಗಿ ಪಾಲಿಸುತ್ತಾನೆ. 3. ಮತ್ತು ಸಾಕ್ಷಾತ್ತಾಗಿ ಅವತಾರಗಳನ್ನು ಮಾಡಿ ತಂದೆಯು ಸ್ವಹಸ್ತದಿಂದ ಶಿಶುವನ್ನು ರಕ್ಷಿಸುವಂತೆ ಭಕ್ತರುಗಳನ್ನು ರಕ್ಷಿಸುತ್ತಾನೆ. ಈ ಮೂರು ವಿಧವಾಗಿಯೂ ಸ್ವಾತಂತ್ರ್ಯೇಣ ನಿಖಿಲಜಗದ್ರಕ್ಷಣೆಯು ವಿಷ್ಣುವಿಗೆ ಮಾತ್ರ ಇರುವುದು.

(1) **ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ।**
—(7.7.)

ಅರ್ಥವು— ಮುತ್ತು, ಕೆಂಪು ಮುಂತಾದ ರತ್ನಗಳು, ಪೋಣಿಸುವ ದಾರದ ಆಧಾರದಿಂದ ಹೇಗೆ ನಿಂತಿರುವವೋ ಹಾಗೆಯೇ ಈ ಚರಾಚರಾತ್ಮಕವಾದ ಸರ್ವ ಪ್ರಪಂಚವೂ ನನ್ನ ಆಧಾರದಲ್ಲಿ ನಿಂತಿರುತ್ತದೆ. ಪರಮಾತ್ಮನ, ಆಶ್ರಯರಹಿತವಾದರೆ ಈ ಜಗತ್ತು ಪುಡಿಪುಡಿಯಾಗಿ ಹೋಗುವದು ಎಂದು ಭಾವವು.

(2) **ಸರ್ವಸ್ಯಧಾತಾರಂ ।** —(8. 9.)
ಪರಮಾತ್ಮನು ಸರ್ವಪ್ರಪಂಚಕ್ಕೂ ಧಾರಣ ಪೋಷಣ ಕರ್ತನು.

(3) **ಮತ್ಸ್ಥಾನಿ ಸರ್ವಭೂತಾನಿ ।** —(9. 4.)
ಸರ್ವ ಭೂತಗಳೂ ನನ್ನ ಆಧಾರದಿಂದಲೇ ಇರುತ್ತವೆ.

(4) **ಪಿತಾಹಮಸ್ಯ ಜಗತೋ ಮಾತಾ ಧಾತಾ ।** —(9. 16.)
ಈ ಜಗತ್ತಿಗೆ ನಾನು....ಪೋಷಕನು.

(5) **ಸ್ಥಾನಂ ನಿಧಾನಂ ।** —(9. 18.)
ನಾನು ಸರ್ವಾಧಾರನು ಮತ್ತು ಅತ್ಯಂತವಾಗಿ ಧಾರಕನು.
ಅರ್ಜುನನೂ ಹಾಗೆಯೇ ಹೇಳುತ್ತಾನೆ.

(6) **ತ್ವಮಸ್ಯವಿಶ್ವಸ್ಯಪರಂ ನಿಧಾನಂ ।** —(11. 38.)
ನೀನು ಈ ಪ್ರಪಂಚಕ್ಕೆ ಅತ್ಯುತ್ತಮವಾದ ಆಶ್ರಯನು.

(7) **ಪಶ್ಯಾಮಿ ದೇವಾಂಸ್ತವ ದೇವ ದೇಹೇ ಸರ್ವಾಂಸ್ತಥಾ ಭೂತ ವಿಶೇಷಸಂಘಾನ್ ।**
**ಬ್ರಹ್ಮಾಣಮೀಶಂ ಕಮಲಾಸನಸ್ಥಂ ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥** —(11-15)

ಹೇ ದೇವ ! ನಿನ್ನ ದೇಹದಲ್ಲಿ ( ನಿನ್ನನ್ನು ಆಶ್ರಯಿಸಿಕೊಂಡು ) ಸರ್ವ ದೇವತೆಗಳೂ, ಪ್ರಾಣಿಗಳಸಮೂಹವೂ, ಬ್ರಹ್ಮದೇವರೂ, ಬ್ರಹ್ಮದೇವರ ತೊಡೆಯ ಮೇಲಿರುವ ರುದ್ರದೇವರೂ, ಸರ್ವಋಷಿಗಳೂ ಮತ್ತು ಅದ್ಭುತವಾದ ಸರ್ಪಗಳೂ ಇರುವುದನ್ನು ನಾನು ನೋಡುತ್ತೇನೆ.

(8) **ಸರ್ವಭೃಚ್ಚೈವ ।** —(13. 15.)
ಪರಬ್ರಹ್ಮನು ಸರ್ವಧಾರಕನು.

(9) ಭೂತಭರ್ತೃ ಚ ತತ್ ಜ್ಞೇಯಂ ।—(13. 17.)
ಪರಬ್ರಹ್ಮನು (ಶ್ರೀಕೃಷ್ಣನು) ಸರ್ವಪ್ರಾಣಿಗಳಿಗೂ ಧಾರಣ ಪೋಷಣ ಕರ್ತನು.

(19) ಭರ್ತಾ........ದೇಹೇಸ್ಮಿನ್ ಪುರುಷಃ ಪರಃ ।—(13. 22.)
ಪ್ರಕೃತಿವಿಲಕ್ಷಣನಾದ ಪುರುಷನು ( ಶ್ರೀಕೃಷ್ಣನು ) ಈ ದೇಹದಲ್ಲಿ ನಿಂತು ಪ್ರಾಣಿಗಳನ್ನು ಧರಿಸಿರುವನು.

(11) ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ।
—( 15. 17. )

ನಾಶರಹಿತನೂ, ಅಚಿಂತ್ಯಶಕ್ತಿಯುಳ್ಳವನೂ ಆದ ಪರಮಾತ್ಮನು ಮೂರು ಲೋಕಗಳನ್ನೂ ಪ್ರವೇಶಮಾಡಿ ಧಾರಣಮಾಡುವವನಾಗಿದ್ದಾನೆ. ಯಾರಿಗೆ ಯಾವಾತನು ಧಾರಣಪೋಷಣಕರ್ತನೋ ಅವನು ಅವರಿಗಿಂತ ಉತ್ತಮನು ಎಂದು ಲೋಕದಲ್ಲಿ ವ್ಯಾಪ್ತಿಯಿರುವದು. ಪರಮಾತ್ಮನು ನಿಖಿಲಜಗತ್ತಿಗೂ ಧಾರಣ ಪೋಷಣಕರ್ತನಾದುದರಿಂದ ಜಗತ್ತಿಗಿಂತ ಉತ್ತಮನೆನಿಸುವನು. ತನ್ನಿಂದ ಭಿನ್ನರಾದವರಿಗೆ ಇರುವ ಲೋಕಧಾರಕತ್ವ ಶಕ್ತಿಯು ಪರಮಾತ್ಮನ ಆಧೀನವೆಂದೂ, ತನಗೆ ಮತ್ತೊಬ್ಬನ ಆಧಾರವು ಇಲ್ಲವೆಂದೂ ಹೇಳಿ ಶ್ರೀಕೃಷ್ಣನು ತನ್ನ ಸರ್ವೋತ್ತಮತ್ವವನ್ನು ದೃಢೀಕರಿಸುತ್ತಾನೆ.

(12) ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।
ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋಭೂತ್ವಾರಸಾತ್ಮಕಃ ॥
ಅಹಂವೈಶ್ವಾನರೋ ಭೂತ್ವಾಪ್ರಾಣಿನಾಂ ದೇಹಮಾಶ್ರಿತಃ ।
ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ॥
—(15. 13. 14.)

ಅರ್ಥವು—ನಾನು ಭೂಮಿಯನ್ನು ಪ್ರವೇಶ ಮಾಡಿ ನನ್ನ ಸ್ವಶಕ್ತಿಯಿಂದ ಸರ್ವ ಪ್ರಾಣಿಗಳನ್ನೂ ಧರಿಸುತ್ತೇನೆ. ( ಭೂಮಿಯಲ್ಲಿರುವ ಧಾರಕತ್ವಶಕ್ತಿಯು ನನ್ನ ಅಧೀನವೆಂದು ಅರ್ಥವು.) ಅಮೃತರಸರೂಪನಾದ ನಾನು ಚಂದ್ರನಲ್ಲಿದ್ದು ಸಕಲ ಸಸ್ಯಾದಿಗಳನ್ನೂ ಅಭಿವೃದ್ಧಿ ಹೊಂದಿಸುತ್ತೇನೆ. (ಚಂದ್ರನಲ್ಲಿರುವ ತನ್ನ ಅಮೃತ ರಸಾತ್ಮಕವಾದ ಕಿರಣಗಳಿಂದ ಸಸ್ಯಾದಿಗಳನ್ನು ಪೋಷಿಸುವ ಶಕ್ತಿಯು ನನ್ನ ಆಧೀನವು ಎಂದರ್ಥವು. ) ನಾನು ವೈಶ್ವಾನರ ನಾಮಕನಾಗಿ ಪ್ರಾಣಿಗಳ ದೇಹವನ್ನು ಪ್ರವೇಶ ಮಾಡಿ ಜಾಠರಾಗ್ನಿಯಲ್ಲಿ ಸ್ಥಿತನಾಗಿ ಪ್ರಾಣಾಪಾನಗಳಿಂದ ಸಹಿತನಾಗಿ ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯಗಳೆಂಬ ಚತುರ್ವಿಧ ಅನ್ನವನ್ನು ಪಚನ ಮಾಡುತ್ತೇನೆ. (ಜಾಠರಾಗ್ನಿಗೆ ಇರುವ ಚತುರ್ವಿಧ ಅನ್ನವನ್ನು ಜೀರ್ಣಿಸುವ ಶಕ್ತಿಯು ನನ್ನ ಅಧೀನವು ಎಂದರ್ಥವು.)

(13) ಯೇ ಚೈವ ಸಾತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।
ಮತ್ತ ಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ ॥—
( 7-12 )

ಲೋಕದಲ್ಲಿರುವ ಸಾತ್ವಿಕ, ರಾಜಸ, ತಾಮಸಗಳಾದ ಸರ್ವ ಪದಾರ್ಥಗಳೂ ನನ್ನಿಂದಲೇ ಹುಟ್ಟಿರುವವು. ನಾನು ಅವುಗಳಲ್ಲಿ ಆಶ್ರಿತನಾಗಿ ಇಲ್ಲ. ಅವುಗಳು ನನ್ನಲ್ಲಿ ಆಶ್ರಿತವಾಗಿವೆ.

(14) ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ।
—( 9. 4. )

ಸರ್ವ ಪ್ರಾಣಿಗಳೂ ನನ್ನ ಆಧಾರದಲ್ಲಿ ಇರುತ್ತವೆ. ನಾನು ಅವುಗಳನ್ನು ಆಶ್ರಯಿಸಿಕೊಂಡು ಅವುಗಳಲ್ಲಿಲ್ಲ. ಇದಲ್ಲದೆ ಶ್ರೀಕೃಷ್ಣನು ಅವತಾರಾದಿ ನಾನಾ ರೂಪಗಳಿಂದ ಬ್ರಹ್ಮರುದ್ರಾದಿಗಳಿಗೆ ಅಶಕ್ಯವಾದ ದುಷ್ಟನಿಗ್ರಹ ಶಿಷ್ಟಪರಿಪಾಲನರೂಪ ವ್ಯಾಪಾರವನ್ನೂ ಮಾಡುತ್ತಾನೆ.

ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥ (4. 7.)

ಅರ್ಥವು—ಯಾವ ಯಾವ ಕಾಲದಲ್ಲಿ ಧರ್ಮಕ್ಕೆ ಹ್ರಾಸವೂ ಅಧರ್ಮಕ್ಕೆ ವೃದ್ಧಿಯೂ ಆಗುವದೋ ಆಗ ನಾನು ಅವತಾರ ಮಾಡುತ್ತೇನೆ. ಸಾಧುಗಳ ರಕ್ಷಣಾರ್ಥವಾಗಿಯೂ ಪಾಪಿಗಳ ವಿನಾಶಾರ್ಥವಾಗಿಯೂ, ಧರ್ಮಸಂಸ್ಥಾಪನೆ ಮಾಡುವದಕ್ಕೂ ಆಯಾ ಕಾಲಗಳಲ್ಲಿ ಅವತರಿಸುತ್ತೇನೆ.

(16) ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ ।—(11. 18.)

ನೀನು ( ಶ್ರೀ ಕೃಷ್ಣನು ) ಸನಾತನ ಧರ್ಮವನ್ನು ರಕ್ಷಿಸುವವನು.

(17) ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ
ವಹಾಮ್ಯಹಂ॥ —(9 22.)

ಅರ್ಥವು— ಯಾರು ನನ್ನನ್ನು ಅನನ್ಯಮನಸ್ಕರಾಗಿ ಭಕ್ತ್ಯುದ್ರೇಕದಿಂದ ಧ್ಯಾನಮಾಡುತ್ತಾರೆಯೋ ಅಂಥ ನನ್ನ ನಿತ್ಯ ಸೇವೆಯಲ್ಲಿ ನಿರತರಾದ ನನ್ನ ಭಕ್ತರ ಯೋಗಕ್ಷೇಮವನ್ನು ನಾನು ನಿರ್ವಹಿಸುತ್ತೇನೆ. ಅವರಿಗೆ ಇರತಕ್ಕ ಜ್ಞಾನಾದಿಗಳ ರಕ್ಷಣೆಯು ಮತ್ತು ಪ್ರಾಪ್ತವಾಗತಕ್ಕ ಮುಕ್ತಿಯೇ ಮುಂತಾದ ಫಲಗಳು ಇವೆರಡನ್ನೂ ನೋಡಿಕೊಳ್ಳುತ್ತೇನೆಂದರ್ಥವು.

(18) ನ ಮೇ ಭಕ್ತಃ ಪ್ರಣಶ್ಯತಿ ।—( 9. 22. )

ನನ್ನ ಭಕ್ತನಿಗೆ ಯಾವಕಾಲದಲ್ಲೂ ಅನರ್ಥವಾಗಲಾರದು. ರುದ್ರಾದಿಗಳ ಭಕ್ತರು ರಾವಣ, ಬಾಣ, ಭಸ್ಮಾಸುರಾದಿಗಳು ನಷ್ಟರಾಗಿರುವದು ಸುಪ್ರಸಿದ್ಧವು.

**6 ಸಂಹಾರ ಕರ್ತೃತ್ವವು** ಬ್ರಹ್ಮರುದ್ರೇಂದ್ರಾದಿ ಸಮಸ್ತ ಚೇತನ ವರ್ಗವನ್ನೂ ಮತ್ತು ಅವ್ಯಕ್ತಾಂತವಾದ ಅಚೇತನತತ್ವಗಳನ್ನೂ ಪ್ರಳಯಕಾಲದಲ್ಲಿ ಸ್ವಾತಂತ್ರ್ಯೇಣ ಸಂಹಾರಮಾಡಿ ತನ್ನ ಉದರದಲ್ಲಿಟ್ಟುಕೊಂಡು ವಟಪತ್ರಶಾಯಿಯಾಗಿ ಶ್ರೀ ಹರಿಯು ಮಲಗುವವನು. ಇದರಿಂದಲೂ ಅವನು ಸರ್ವಜಗತ್ತಿಗಿಂತಲೂ ಉತ್ತಮನೆಂದು ಸಿದ್ಧವಾಗುವದು.

(1) **ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಳಯಸ್ತಥಾ** ।—(7. 6.)
**ಸಕಲ ಪ್ರಪಂಚಕ್ಕೂ** ನಾನು ಸೃಷ್ಟಿಕರ್ತನು; ಹಾಗೆಯೇ **ಸಂಹಾರ ಕರ್ತನು.**

(2) **ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ** ।
—(8. 18 )

ಅರ್ಥವು— ಮಹಾಪ್ರಳಯಕಾಲವು ಪ್ರಾಪ್ತವಾದಾಗ ಅವ್ಯಕ್ತನಾಮಕ ಪರಮಾತ್ಮನಲ್ಲಿಯೇ ಸಕಲಕಾರ್ಯಪ್ರಪಂಚವೂ ಲೀನವಾಗುತ್ತದೆ.

(3) **ಪ್ರಲಯಃ** ।—(9. 18.)

ನಾನು ಸಂಹಾರಕರ್ತನು.

(4) **ಗ್ರಸಿಷ್ಣು** ।—(12. 17.)

ಪರಬ್ರಹ್ಮನು ( ನಾನು ) ಸರ್ವಸಂಹಾರಕನು. ಇತರರು ಮಾಡತಕ್ಕ ಸಂಹಾರವ್ಯಾಪಾರವು ನನ್ನ ಆಧೀನವಾದುದರಿಂದ ಸ್ವತಂತ್ರ ಸಂಹಾರಕರ್ತೃತ್ವವು ನನಗೇ ಹೊರತು ಇತರರಿಗೆ ಬರಲಾರದೆಂದು ಶ್ರೀಕೃಷ್ಣನು ತೋರಿಸಿರುತ್ತಾನೆ.

(5) **ಸರ್ವ ಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಂ** ।
**ಕಲ್ಪಕ್ಷಯೇ....**॥—(9. 7.)

ಹೇ ಕೌಂತೇಯ ! ಚರಾಚರಜಗತ್ತು ನನ್ನ ಅಧೀನವಾದ ಪ್ರಕೃತಿಯಲ್ಲಿ ಕಲ್ಪಾಂತದಲ್ಲಿ ಲಯಹೊಂದುತ್ತದೆ. ನಾನೇ ಸಂಹಾರಮಾಡಿ ಸೂಕ್ಷ್ಮರೂಪೇಣ ಮೂಲಪ್ರಕೃತಿಯಲ್ಲಿ ಸೇರಿಸಿಬಿಡುತ್ತೇನೆಂದು ಭಾವವು.

(6) **ಮೃತ್ಯುಸ್ಸರ್ವಹರಶ್ಚಾಹಂ** ।

(7) **ಕಾಲೋಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ ಲೋಕಾನ್ಸಮಾ**
**ಹರ್ತುಮಿಹ ಪ್ರವೃತ್ತಃ** —(11. 32.)

ಮಾರಕನಾದುದರಿಂದ ಮೃತ್ಯುವೆಂಬ ಹೆಸರಿನಿಂದ ಮೃತ್ಯುನಾಮಕದೇವತೆಯಲ್ಲಿ ಸ್ಥಿತನಾಗಿ ಸರ್ವವನ್ನೂ ಸಂಹಾರ ಮಾಡುವವನು ನಾನೇ.

ಸಕಲ ಸಂಹಾರಕನಾದುದರಿಂದ ನಾನು ಕಾಲನಾಮಕನು. ಭೂಭಾರ ಪರಿಹಾರಾರ್ಥವಾಗಿ ಪರಿಪೂರ್ಣನಾದ ನಾನು, ಉಭಯಸೈನ್ಯದಲ್ಲಿರುವ ಜನರನ್ನೂ ನಿನ್ನ

ಪ್ರತ್ಯಕ್ಷದಲ್ಲಿಯೇ ಸಂಹಾರಮಾಡುವ ಕಾರ್ಯದಲ್ಲಿ ಉದ್ಯುಕ್ತನಾಗಿದ್ದೇನೆ. ಹೀಗೆ ಭೀಮಾರ್ಜುನ ದ್ರೋಣಾಶ್ವತ್ಥಾಮಾದಿಗಳಿಂದ ನಡೆಯುವ ಸಂಹಾರವೂ ತಾನು ಅವರೊಳಗೆ ನಿಂತು ನಡೆಯಿಸುವದರಿಂದಲೇ ನೆರವೇರುವದೆಂದು ಸೂಚಿಸಿರುತ್ತಾನೆ. ಈ ಅರ್ಥವನ್ನೇ—

(8) **ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ।**
**ಮಯಾಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾಃ** ॥–(11.33.34.)

ಎಂಬ ವಾಕ್ಯಗಳಲ್ಲಿ ನಿರೂಪಿಸಿರುತ್ತಾನೆ.

ಅರ್ಥವು—ಹೇ ಅರ್ಜುನ ! ನೀನೇ ಮೊದಲಾದ ಯೋಧರಲ್ಲಿ ನಿಂತು ನನ್ನ ಇಚ್ಛೆಯಿಂದ ನಾನೇ ಮಾಡುವ ಈ ಉಭಯ ಸೇನಾಸಂಹಾರ ಕಾರ್ಯದಲ್ಲಿ ನೀನು ನಿಮಿತ್ತಮಾತ್ರನು. ನನ್ನಿಂದ ಸಂಹೃತರಾದವರನ್ನು ನೀನು ಯುದ್ಧದಲ್ಲಿ ಸಂಹಾರ ಮಾಡು. ಅಂದರೆ ಶತ್ರುಸಂಹಾರ ಕಾರ್ಯವು ಮುಖ್ಯತಃ ನನ್ನಿಂದ ನಡೆಯತಕ್ಕದ್ದು. ಮುಖ್ಯಕಾರಣನಾದ ನಾನು ಇವರ ಸಂಹಾರದಲ್ಲಿ ಇಚ್ಛೆಯನ್ನು ಮಾಡಿರುವೆನಾದುದರಿಂದ ಇವರು ಸತ್ತ ಪ್ರಾಯರೇ. ನಿನ್ನಲ್ಲಿ ನಿಂತು ಅವರನ್ನು ಸಂಹಾರಮಾಡುವವನು ನಾನೇ. ನೀನು ನಿಮಿತ್ತನು; ನೆಪಮಾತ್ರವು.

7. **ನಿಯಮನಕರ್ತೃತ್ವವು** ಚೇತನಾಚೇತನಾತ್ಮಕ ಸಕಲ ಜಗತ್ತನ್ನೂ ಸ್ವತಂತ್ರವಾಗಿ ವ್ಯಾಪಾರಗಳಲ್ಲಿ ಪ್ರೇರಿಸುವ ಕಾರ್ಯವು ಶ್ರೀಕೃಷ್ಣನಿಗೆ ಒಬ್ಬನಿಗೇ ಇರುವದರಿಂದ ಅವನು ಸರ್ವೋತ್ತಮನೆಂದು ಸಿದ್ಧವಾಗುವದು.

(1) **ಮತ್ತಃಸರ್ವಂಪ್ರವರ್ತತೇ**—(10. 8.)

ನನ್ನಿಂದಲೇ ಸಕಲ ಪ್ರಾಣಿಗಳೂ ಸ್ವಸ್ವವ್ಯಾಪಾರಗಳಲ್ಲಿ ಪ್ರವರ್ತಿಸುತ್ತವೆ.

(2) **ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ**॥
(18. 61.)

ಅರ್ಥವು— ಸರ್ವನಿಯಾಮಕನಾದ ನಾನು ಶರೀರಯುಕ್ತರಾದ ಸಕಲ ಪ್ರಾಣಿಗಳನ್ನೂ ನನ್ನ ಸ್ವೇಚ್ಛೆಯಿಂದ ನಾನಾ ಪ್ರಕಾರವಾದ ಕರ್ಮಗಳಲ್ಲಿ ಪ್ರೇರಿಸುವವನಾಗಿ ಸರ್ವ ಪ್ರಾಣಿಗಳ ಹೃದಯಪ್ರದೇಶದಲ್ಲಿ ಸ್ಥಿತನಾಗಿರುತ್ತೇನೆ.

ಈ ರೀತಿಯಾಗಿ ತನ್ನ ನಿಯಾಮಕತ್ವವನ್ನು ಹೇಳಿ ಶ್ರೀ ಕೃಷ್ಣನು ಸಪ್ತಮಾಧ್ಯಾಯದಲ್ಲಿಯೂ, ದಶಮಾಧ್ಯಾಯದಲ್ಲಿಯೂ ವಿಶೇಷ ನಿಯಮನಾರ್ಥವಾಗಿ ತಾನು ತೆಗೆದುಕೊಂಡಿರುವ ರೂಪವಿಶೇಷಗಳನ್ನು ಉಪದೇಶಮಾಡಿರುತ್ತಾನೆ.

(3) **ರಸೋಽಹ ಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ।**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥**
**ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।**

ಜೀವನಂ ಸರ್ವ ಭೂತೇಷು ತಪಶ್ಚಾಸ್ಮಿ ತಪಸ್ವಿಷು ||
ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಂ ||
ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಂ |
ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ||

—(7 8 11.)

ಅರ್ಥವು— ಹೇ ಕೌಂತೇಯ ! ಜಲದಲ್ಲಿ ಸಾರಭೂತವಾದ ರಸವೆಂಬ ಗುಣಕ್ಕೆ ನಾನು ನಿಯಾಮಕನು; ಚಂದ್ರಸೂರ್ಯರಲ್ಲಿರುವ ಪ್ರಭೆಗೆ (ಪ್ರಕಾಶಗಳಿಗೆ) ನಾನು ನಿಯಾಮಕನು; ಸಕಲವೇದಗಳಲ್ಲಿ ಓಂಕಾರವು ಮುಖ್ಯವಾಗುವದಕ್ಕೆ ನಾನು ಕಾರಣನು; ಆಕಾಶದಲ್ಲಿರುವ ಶಬ್ದವೆಂಬ ಸ್ವಾಭಾವಿಕಧರ್ಮಕ್ಕೆ ನಾನು ನಿಯಾಮಕನು. ಗಂಡಸರಲ್ಲಿರುವ ಪೌರುಷಕ್ಕೆ ನಾನು ನಿಯಾಮಕನು. ಭೂಮಿಯಲ್ಲಿರುವ ಶುಭಗಂಧವೆಂಬ ಸ್ವಾಭಾವಿಕ ಧರ್ಮಕ್ಕೂ ನಾನು ನಿಯಾಮಕನು. ಅಗ್ನಿಯಲ್ಲಿರುವ ದಾಹಕತ್ವಸಾಮರ್ಥ್ಯಕ್ಕೆ ನಾನು ನಿಯಾಮಕನು. ಸಕಲ ಪ್ರಾಣಿಗಳಲ್ಲಿರುವ ಪ್ರಾಣಧಾರಣ ಶಕ್ತಿಗೂ ನಾನು ನಿಯಾಮಕನು. ತಪಸ್ವಿಗಳಲ್ಲಿರುವ ಸಾರಭೂತವಾದ ತಪಸ್ಸೆಂಬ ಧರ್ಮಕ್ಕೆ ನಾನು ನಿಯಾಮಕನು. ಬುದ್ಧಿವಂತರಲ್ಲಿರುವ ಬುದ್ಧಿ ಎಂಬ ಸಾರಭೂತವಾದ ಧರ್ಮಕ್ಕೆ ನಾನು ನಿಯಾಮಕನು; ತೇಜಸ್ವಿಗಳಲ್ಲಿರುವ ತೇಜಸ್ಸೆಂಬ ಮುಖ್ಯ ಧರ್ಮಕ್ಕೆ ನಾನು ಕಾರಣನು. ಬಲಿಷ್ಠರಲ್ಲಿರುವ ಫಲಾಪೇಕ್ಷೆಯಿಲ್ಲದೆ ಯೋಗ್ಯಸ್ಥಳದಲ್ಲಿ ಉಪಯೋಗಿಸಲ್ಪಡುವ ಬಲಕ್ಕೆ ನಾನು ಪ್ರವರ್ತಕನು. (ದುಷ್ಟಬಲಕ್ಕೂ ಪರಮಾತ್ಮನು ನಿಯಾಮಕನಾದರೂ ಅದು ಉಪಾಸನಾರ್ಹವಲ್ಲ) ಮತ್ತು ಸರ್ವಪ್ರಾಣಿಗಳಲ್ಲಿರುವ ಧರ್ಮಾವಿರುದ್ಧ ಕಾಮಗಳಿಗೂ ನಾನೇ ನಿಯಾಮಕನು.

(4) ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಂ |
ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಂ ||

—(9. 16.)

ನಾನೇ ಕ್ರತುವಿನಲ್ಲಿ, ಯಜ್ಞದಲ್ಲಿ, ಸ್ವಧಾದಲ್ಲಿ, ಔಷಧಂ ಎಂದರೆ ಯಜ್ಞದಲ್ಲಿ ಉಪಯುಕ್ತವಾದ ವನಸ್ಪತಿಗಳಲ್ಲಿ, ಯಜ್ಞದ ಮಂತ್ರಗಳಲ್ಲಿ, ಆಜ್ಯ, ಅಗ್ನಿ ಮತ್ತು ಹೋಮ ಇವುಗಳಲ್ಲೆಲ್ಲಾ ನಿಯಾಮಕನಾಗಿ ಕ್ರತು, ಯಜ್ಞ ಇತ್ಯಾದಿ ಹೆಸರುಗಳುಳ್ಳವನಾಗಿ ಆಯಾಯ ಪದಾರ್ಥಗಳಲ್ಲಿ ಇರುತ್ತೇನೆ. ಇದರಿಂದ ವಿಶಿಷ್ಟ ಯಜ್ಞನಿಯಾಮಕತ್ವವು ವರ್ಣಿತವಾಯಿತು.

(5) ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂಚ ಯೇ ವಿದುಃ |
ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ||

ಅಧಿಭೂತಗಳಲ್ಲಿ (ದೇಹವೇ ಮೊದಲಾದ ಪೃಥಿವ್ಯಾದಿ ಸಮಸ್ತ ವಿನಾಶ

ವುಳ್ಳ ಪದಾರ್ಥಗಳಲ್ಲಿ ) ನಿಯಾಮಕನಾಗಿರುವ, ಅಧಿದೈವನಾದ (ಹಿರಣ್ಯಗರ್ಭಾದಿ ಸಮಸ್ತ ದೇವತೆಗಳಲ್ಲಿ ಅಂತರ್ಗತನಾಗಿ ನಿಯಾಮಕನಾಗಿರುವ), ಮತ್ತು ಅಧಿ ಯಜ್ಞನಾದ (ಯಜ್ಞಕ್ರಿಯಾ, ಯಜ್ಞಕರ್ತೃ, ಯಜ್ಞೋಪಕರಣದ್ರವ್ಯಗಳು ಮತ್ತು ಯಜ್ಞಜನ್ಯಫಲಗಳಿಗೆ ನಿಯಾಮಕನಾಗಿರುವ) ನನ್ನ ರೂಪ ವಿಶೇಷಗಳನ್ನು ತಿಳಿದು ಮರಣಕಾಲದಲ್ಲಿಯೂ ಕೂಡ ನನ್ನನ್ನು ಯಾರು ತಿಳಿಯುವರೋ ಅವರೇ ಸಮಾಧಿಯುಕ್ತವಾದ ಮನಸ್ಸುಳ್ಳವರು.

**(6) ಯದಾದಿತ್ಯಗಂತತೇಜೋಜಗದ್ಭಾಸಯತೇಽಖಿಲಂ ।**
**ಯಚ್ಚಂದ್ರಮಸಿಯಚ್ಚಾಗ್ನೌತತ್ತೇಜೋವಿದ್ಧಿ ಮಾಮಕಂ ॥**
**—(15. 12.)**

ಸರ್ವ ಪ್ರಪಂಚವನ್ನೂ ಬೆಳಗುವ ಸೂರ್ಯನಲ್ಲಿರುವ ಪ್ರಕಾಶನ ಶಕ್ತಿಯೂ ಮತ್ತು ಚಂದ್ರನಲ್ಲಿರುವ ಮತ್ತು ಅಗ್ನಿಯಲ್ಲಿರುವ ಪ್ರಕಾಶನ ಶಕ್ತಿಯೂ ನನ್ನ ಆಧೀನವು.

**(7) ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**
**ವೇದಾನಾಂಸಾಮವೇದೋಽಸ್ಮಿ ದೇವಾನಾಮಸ್ಮಿವಾಸವಃ ।**
**ಇಂದ್ರಿಯಾಣಾಂಮನಶ್ಚಾಸ್ಮಿಭೂತಾನಾಮಸ್ಮಿಚೇತನಾ ॥**
ಇತ್ಯಾದಿ (10.22-40.)

* ಎಲೈ ಜಿತನಿದ್ರನಾದ ಪಾರ್ಥನೇ ! ನಾನು ಸರ್ವತ್ರ ವ್ಯಾಪ್ತನಾಗಿಯೂ ಸಕಲಪ್ರಾಣಿಗಳ ಅಂತಃಕರಣದಲ್ಲಿಯೂ (ತತ್ತದ್ಯೋಗತಾನುಸಾರ ನಿಯಮ ನಾರ್ಥವಾಗಿ) ಸ್ಥಿತನಾಗಿರುತ್ತೇನೆ. ಇಂಥ ನಿಯಾಮಕ ಭಗವದ್ರೂಪಗಳಿಗೆ ವಿಭೂತಿ ರೂಪಗಳೆಂದು ಹೆಸರು. ಅಂಥ ವಿಭೂತಿರೂಪಗಳನ್ನು ಹದಿನೆಂಟು ಶ್ಲೋಕಗಳಲ್ಲಿ ನಿರೂಪಣೆಮಾಡಿರುತ್ತಾನೆ. (ವಿಸ್ತರಭಯದಿಂದ ಇಲ್ಲಿ ಉದಾಹರಿಸಲಿಲ್ಲ.) ವೇದ ಗಳಲ್ಲಿ ಸಾಮವೇದಕ್ಕೆ ಋಗ್ವೇದವನ್ನು ಬಿಟ್ಟು ) ಆಧಿಕ್ಯಪ್ರದನು; ಜಡಗ ಳಲ್ಲಿ ಚಿತ್ತಕ್ಕೆ ಆಧಿಕ್ಯಪ್ರದನೂ ಆಗಿ ನಾನೇ ನಾನಾನಿಯಾಮಕ ರೂಪಗಳಿಂದ ಆಯಾ ಪದಾರ್ಥಗಳಲ್ಲಿ ಇರುತ್ತೇನೆ. **"ರುದ್ರಾಣಾಂಶಂಕರಶ್ಚಾಸ್ಮಿ"** ಎಂದು ಏಕಾದಶ ರುದ್ರರುಗಳಲ್ಲಿ ಮಹಾದೇವರಿಗೆ ಆಧಿಕ್ಯಪ್ರದನಾಗಿ ಶಂಕರ ನಾಮಕನಾಗಿ ನಾನೇ ಅವನಲ್ಲಿ ಸನ್ನಿಹಿತನಾಗಿರುತ್ತೇನೆಂದು. ಹೇಳಿರುತ್ತಾನಾದ್ದ ರಿಂದ ರುದ್ರದೇವರು ನಿಯಮ್ಯರು; ನಾರಾಯಣನು ನಿಯಾಮಕನು. ಎಂಬುದು ಸಿದ್ಧವಾಯಿತು.

**(8) ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಂ ।** (10.39)
**ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।** (10.40)

* ಈ ಭಾಗಗಳಲ್ಲಿ ಉಪದೇಶಗಮ್ಯವಾದ ಬಹು ಸೂಕ್ಷ್ಮ ವಿಷಯಗಳು ಅಡಗಿರುತ್ತವೆ.

**ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವವಾ ।**
**ತತ್ತದೇವಾವಗಚ್ಛತ್ವಂ ಮಮತೇಜೋಂಶಸಂಭವಂ**
**॥—(10. 41.)**

ಇದರ ಅರ್ಥವು:— ಸ್ಥಾವರಜಂಗಮಾತ್ಮಕವಾದ ಪ್ರಪಂಚದಲ್ಲಿ ನನ್ನ ಆಧೀನವಲ್ಲದ ಯಾವುದೊಂದು ವಸ್ತುವು ಇರುವದಿಲ್ಲ.* (ಎಲ್ಲವೂ ನನ್ನ ಆಧೀನವೆಂದು ಭಾವವು.) ಎಲೈ ಪರಂತಪನೇ ! ನನ್ನ **ದಿವ್ಯವಾದ** ಎಂದರೆ ಲೋಕವಿಲಕ್ಷಣ ವಾದ ಮತ್ತು ಅದ್ಭುತವಾದ ವಿಭೂತಿರೂಪಗಳಿಗೆ ಪರ್ಯವಸಾನವಿಲ್ಲ. ಯಾವ ಯಾವ ವಸ್ತುವು ಸ್ವಸಜಾತೀಯವಸ್ತುಗಳಲ್ಲಿ ಆಧಿಕ್ಯವನ್ನು ಹೊಂದಿರುವದೋ, ಸಂಪತ್ತಿನಿಂದ ಯುಕ್ತವಾಗಿರುವದೋ ಅಥವಾ ಅತಿ ಅಭಿವೃದ್ಧವಾದ ಸ್ಥಿತಿ ಯಲ್ಲಿರುವದೋ, ಅದೆಲ್ಲ ನನ್ನ ತೇಜಸ್ಸಿನ ಒಂದು ಅಂಶವಿಶೇಷದಿಂದ ಸಹಕೃತ ವಾಗಿರುವುದೆಂದು ತಿಳಿಯುವವನಾಗು.

**8–9. ಜ್ಞಾನಪ್ರದತ್ವ ಮತ್ತು ಅಜ್ಞಾನಪ್ರದತ್ವವು.** ನಿಖಿಲಜಗ ತ್ತಿಗೂ ಜ್ಞಾನ ಮತ್ತು ಅಜ್ಞಾನ ಇವೇ ಮೊದಲಾದ ಸಕಲ ಮನೋಧರ್ಮಗ ಳನ್ನೂ ಸ್ವಾತಂತ್ರ್ಯೇಣ ಪ್ರೇರಿಸುವ ಸಾಮರ್ಥ್ಯವು ವಿಷ್ಣುವಿಗೇ ಹೊರತು ಇತರ ರಿಗಿಲ್ಲ. ಮನಆದಿ ಸರ್ವೇಂದ್ರಿಯಗಳಿಗೂ ನಿಯಾಮಕನೆಂದು ಅರ್ಥವುಳ್ಳ ಹೃಷೀ ಕೇಶನೆಂಬ ಶ್ರೀಕೃಷ್ಣನ ಹೆಸರೇ ಈ ಅರ್ಥವನ್ನು ಸೂಚಿಸುವದು. ಬ್ರಹ್ಮ,

---

* "ಪ್ರಕೃತಿ ಸ್ತ್ವಾಂನಿಯೋಕ್ಷ್ಯತಿ" ಮತ್ತು "ಕರಿಷ್ಯಸ್ಯವಶೋಪಿತತ್" ಎಂಬಲ್ಲಿ ಪ್ರಕೃತಿಯು ಬಲಾತ್ಕಾರದಿಂದ ಜೀವರಲ್ಲಿ ನಿಂತು ಸ್ವತಂತ್ರವಾಗಿ ವ್ಯಾಪಾರದಲ್ಲಿ ಪ್ರೇರಿಸುವುದ ರಲ್ಲಿ ಸಮರ್ಥಳೆಂದು ಅರ್ಥವು ತೋರುವುದು. ಆದರೆ ಇದು ದುರರ್ಥವು. ಯಾತಕ್ಕೆಂದರೆ 1. ಶ್ರೀ ಕೃಷ್ಣನ ಈ ವಾಕ್ಯಗಳಿಂದ ಪರಮಾತ್ಮನ ಸನ್ನಿಧಾನವೇ ಆಕೆಯ ವಿಶೇಷ ಸಾಮರ್ಥ್ಯಕ್ಕೆ ಕಾರಣ ವೆಂದು ನಿಶ್ಚಿತವಾಗುವದು. ಮತ್ತು 2. "ಪ್ರಕೃತಿಂ ವಿದ್ಧಿಮೇಪರಾಂ" "ಪ್ರಕೃತಿಂಯಾಂತಿ ಮಾಮಿಕಾಂ" "ಬ್ರಹ್ಮಣೋಹಿ ಪ್ರತಿಷ್ಠಾಹಂ" ಇತ್ಯಾದಿ ವಾಕ್ಯಗಳಲ್ಲಿ ಪ್ರಕೃತಿಯು ನನ್ನ ಆಧೀನಳೆಂದು ಸ್ಪಷ್ಟವಾಗಿ ಶ್ರೀಕೃಷ್ಣನೇ ಹೇಳಿರುತ್ತಾನೆ. 3. ಮತ್ತು ಅದೇ ಹದಿನೆಂಟ ನೆಯ ಅಧ್ಯಾಯದಲ್ಲಿಯೇ ಮುಂದಿನ ಶ್ಲೋಕದಲ್ಲಿಯೇ "ಈಶ್ವರಃ ಸರ್ವಭೂತಾನಾಂ ಹೃದ್ದೇಶೇ ಅರ್ಜುನ ತಿಷ್ಠತಿ । ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥" ಎಂದರೆ ಶರೀ ರಿಗಳಾದ ಸರ್ವಜೀವರ ಹೃದಯಪ್ರದೇಶದಲ್ಲಿಯೂ ನಾನು ಕುಳಿತುಕೊಂಡು ನಾನಾ ವ್ಯಾಪಾರಗಳಲ್ಲಿ ಪ್ರೇರಿಸುತ್ತೇನೆಂದು ಹೇಳಿರುವದರಿಂದ ಶ್ರೀಕೃಷ್ಣನೇ ಮುಖ್ಯ ಪ್ರೇರಕನು; ಲಕ್ಷ್ಮಿಯೇ ಮೊದಲಾದವರು ಪರಮಾತ್ಮನ ಪ್ರೇರಣಾ ಕಾರ್ಯದಲ್ಲಿ ಅಂಗಭೂತರಾಗಿರುವರು ; ಮತ್ತು ಅವನ ಆಧೀನವಾದ ವ್ಯಾಪಾರವುಳ್ಳವರು. ಇಲ್ಲಿ ಈಶ್ವರಶಬ್ದವು ಕೃಷ್ಣಭಿನ್ನನನ್ನು ಬೋಧಿಸುವ ದೆಂದು ತಿಳಿಯಬಾರದು. "ಮಾಮೇಕಂಶರಣಂ ವ್ರಜ" ಎಂಬ ಮುಂದಿನ ಶ್ಲೋಕಾನುಸಾರ ವಾಗಿ ಇಲ್ಲಿ ಈಶ್ವರಶಬ್ದದವಾಚ್ಯನು ಶ್ರೀಕೃಷ್ಣನೇ ಆಗುವನು.

ರುದ್ರಾದಿಸಕಲದೇವತೆಗಳಿಗೂ ಜ್ಞಾನಪ್ರದನು ವಿಷ್ಣುವು. ವಿಷ್ಣುವಿನ ಜ್ಞಾನಕ್ಕೆ ನಿಯಾಮಕರು ಬೇರೊಬ್ಬರಿಲ್ಲ. ಅವನು ಸ್ವತಃ ಸರ್ವಜ್ಞನು. ಬ್ರಹ್ಮಾದಿಗಳು ವಿಷ್ಣುವಿನ ಅನುಗ್ರಹದಿಂದ ವಿಷ್ಣುವನ್ನು ತಿಳಿಯುವುದಕ್ಕೆ ಸಮರ್ಥರಾಗುವರು. ತಥಾಹಿ :—

**(1) ಬುದ್ಧಿರ್ಬುದ್ಧಿಮತಾಮಸ್ಮಿ ।** —(7. 10.)

ಜ್ಞಾನಿಗಳಲ್ಲಿರುವ ಜ್ಞಾನಕ್ಕೆ ನಾನು ಕಾರಣನು.

**(2) ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।**
**ತಸ್ಯತಸ್ಯಾಚಲಾಂ ಶ್ರದ್ಧಾಂ ತಾಮೇವವಿದಧಾಮ್ಯಹಂ ॥** —(7. 21.)

ಯಾವ ಯಾವನು, ಯಾವ ಯಾವ ದೇವತೆಗಳಲ್ಲಿ ಭಕ್ತಿವುಳ್ಳವನಾಗಿ ಶ್ರದ್ಧೆಯಿಂದ ಪೂಜಿಸಬೇಕೆಂದು ಅಪೇಕ್ಷಿಸುತ್ತಾನೆಯೋ ಅವರವರಿಗೆ ನಾನು ಆ ಶ್ರದ್ಧೆಯನ್ನು ದೃಢವಾಗುವಂತೆ ಮಾಡುತ್ತೇನೆ. ಇದರಲ್ಲಿ ಶ್ರೀ ಕೃಷ್ಣನಿಗೆ ಶ್ರದ್ಧಾ (ಆಸ್ತಿಕ್ಯಬುದ್ಧಿ) ಎಂಬ ಜ್ಞಾನವಿಶೇಷಪ್ರದತ್ವರೂಪ ಮಹಿಮೆಯು ಹೇಳಲ್ಪಟ್ಟಿರುತ್ತದೆ.

**(3) ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಶ್ಶಮಃ ।**
**ಸುಖಂದುಃಖಂ ಭವೋಽಭಾವೋ ಭಯಂಚಾಭಯಮೇವಚ ।**
**ಅಹಿಂಸಾಸಮತಾತುಷ್ಟಿಸ್ತಪೋ ದಾನಂ ಯಶೋಽಯಶಃ ।**
**ಭವಂತಿಭಾವಾಭೂತಾನಾಂ ಮತ್ತಏವ ಪೃಥಗ್ವಿಧಾಃ ॥**
(10. 4-5)

ಇದರ ಅರ್ಥವು— ನಿಶ್ಚಯಜ್ಞಾನವು, ಸಂಶಯಾದಿಸಾಮಾನ್ಯಜ್ಞಾನವು, ಅಕಾರ್ಯದಲ್ಲಿ ಇಚ್ಛಾತ್ಯಾಗವು, ಕ್ಷಮೆಯು, ಸತ್ಯವು, ಶಮ, ದಮ, ಸುಖ, ದುಃಖ, ಭಯ, ಅಭಯ, ಅಹಿಂಸೆಯು, ಸಮತ್ವವು (ದ್ವಂದ್ವಸಹಿಷ್ಣುತೆಯು), ತುಷ್ಟಿಯು (ವಿಷಯಗಳಲ್ಲಿ ಅಲಂಬುದ್ಧಿಯು), ತಪಸ್ಸು, ದಾನವು, ಕೀರ್ತಿಯು, ಅಪಕೀರ್ತಿಯು ಹೀಗೆ ಅನೇಕ ಪ್ರಕಾರವುಳ್ಳ ನಾನಾ ಧರ್ಮಗಳು ಪ್ರಾಣಿಗಳಿಗೆ ನನ್ನ ದೆಸೆಯಿಂದಲೇ ಹುಟ್ಟುತ್ತವೆ.

**(4) ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥**
(10. 10.)

**ತೇಷಾಮೇವಾನುಕಂಪಾರ್ಥ ಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನಭಾಸ್ವತಾ ॥**
(10. 11.)

ನಿರಂತರ ಪ್ರೀತಿಪೂರ್ವಕವಾಗಿ ನನ್ನಲ್ಲಿಯೇ ಇಡಲ್ಪಟ್ಟ ಮನಸ್ಸಿನಿಂದ ಭಜನೆ ಮಾಡುವವರಿಗೆ ಯಾವ ಜ್ಞಾನದಿಂದ ನನ್ನನ್ನು ಹೊಂದುತ್ತಾರೆಯೋ ಅಂಥ ಜ್ಞಾನೋಪಾಯವನ್ನು ಕೊಡುತ್ತೇನೆ. ಅವರಲ್ಲಿ ದಯೆಯಿಂದ ಅನುಗ್ರಹಾರ್ಥ ವಾಗಿ ಅವರ ಅಂತಃಕರಣದಲ್ಲಿ ಸ್ಥಿತನಾಗಿ ಪ್ರಕಾಶಮಾನವಾದ ಜ್ಞಾನವೆಂಬ ದೀಪದಿಂದ ಅವರ ಅಜ್ಞಾನಜನ್ಯ ತಮಸ್ಸನ್ನು ಅಂದರೆ ಮನಃಕ್ಲೇಶಗಳನ್ನು ನಾಶ ಮಾಡುತ್ತೇನೆ.

ಶ್ರೀ ಕೃಷ್ಣನು ವೃಕ್ಷಸಾಮ್ಯದಿಂದ ಪರಾಪರ ತತ್ವವನ್ನು ನಿರೂಪಣೆ ಮಾಡಿ ಈ ರೀತಿಯಾದ ತತ್ವಜ್ಞಾನವನ್ನು ಹೊಂದುವದಕ್ಕೆ ಉಪಾಯವೇನೆಂದರೆ ಹೇಳು ತ್ತಾನೆ.

(5) **ತಮೇವಚಾದ್ಯಂ ಪುರುಷಂ ಪ್ರಪದ್ಯೇ ಯತಃ ಪ್ರವೃತ್ತಿಃ ಪ ಸ್ರತಾ ಪುರಾಣೀ ||**

ಪುರಾತನವಾದ ಜನನಮರಣ ರೂಪವಾದ ಸಂಸಾರ ಪ್ರವಾಹವು ಯಾರಿಂದ ಉಂಟಾಯಿತೋ ಅಂಥ ಪುರಾತನನಾದ ಪರಮಾತ್ಮನನ್ನೇ ಶರಣು ಹೊಂದ ಬೇಕು; ಇದರಿಂದ ಪರಾಪರ ತತ್ವಜ್ಞಾನವು ಪರಮಾತ್ಮನ ಅನುಗ್ರಹದಿಂದಲೇ ಬರಬೇಕೆಂದು ಸಿದ್ಧವಾಗುವದು.

ಬ್ರಹ್ಮರುದ್ರೇಂದ್ರಾದಿ ದೇವತೆಗಳೂ ಕೆಲವು ವೇಳೆ ತಮ್ಮ ತಮ್ಮ ಭಕ್ತ ರಿಗೆ ಜ್ಞಾನವನ್ನೂ ತಮ್ಮ ದ್ವೇಷಿಗಳಿಗೆ ಅಜ್ಞಾನಾದಿಗಳನ್ನೂ ಕೊಡುತ್ತಿರುವದು ಪ್ರಮಿತವಾಗಿರುವದರಿಂದ (ಅತಿವ್ಯಾಪ್ತವಾದ) ಈ ಲಕ್ಷಣನಿಂದ ಕೃಷ್ಣನು ಸರ್ವೋತ್ತಮನೆಂದು ಹೇಗೆ ನಿಶ್ಚಯಿಸುವದು ಎಂಬ ಪ್ರಶ್ನೆಗೆ ಶ್ರೀ ಕೃಷ್ಣನೇ ಉತ್ತರ ವನ್ನು ಹೇಳಿರುತ್ತಾನೆ.

(6) **ಯೋ ಯೋ ಯಾಂ ಯಾಂ ತನುಂಭಕ್ತಃ ಶ್ರದ್ಧಯಾಽರ್ಚಿತು ಮಿಚ್ಛತಿ |**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ |**
**ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ |**
**ಲಭತೇ ಚ ತತಃ ಕಾಮಾ ಮಯ್ಯೈವ ವಿಹಿತಾ ಹಿತಾ |**

(7. 21-22.)

ಅರ್ಥವು— ಯಾರು ಯಾರು ಯಾವ ಯಾವ ದೇವತೆಗಳಲ್ಲಿ ಭಕ್ತಿಹೊಂದಿ ಶ್ರದ್ಧೆಯಿಂದ ಪೂಜಿಸುವದಕ್ಕೆ ಅಪೇಕ್ಷಿಸುತ್ತಾರೆಯೋ ಅಂಥ ಅಧಿಕಾರಿಗಳಿಗೆ ಆ ದೇವತೆಗಳಲ್ಲಿ ಇರುವ ಶ್ರದ್ಧೆಯನ್ನೇ ನಾನು ಸ್ಥಿರಮಾಡಿ ಬಿಡುತ್ತೇನೆ. ಅವನು ಅಂಥ ಅಚಲಶ್ರದ್ಧೆಯಿಂದ ಆ ದೇವತೆಯನ್ನು ಆರಾಧನೆ ಮಾಡಿ **ತನ್ನ ಅಭೀ ಷ್ಟಗಳನ್ನು ಆ ದೇವತೆಗಳಲ್ಲಿ ಅಂತರ್ಗತನಾದ ನನ್ನಿಂದಲೇ ಹೊಂದುತ್ತಾನೆ.**

(7) **ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ ।**
**ತೇಽಪಿಮಾಮೇವಕೌಂತೇಯ ಯಜಾಂತ್ಯವಿಧಿಪೂರ್ವಕಂ ॥**
(9. 23.)

ಅನ್ಯದೇವತೆಗಳನ್ನು ಪೂಜಿಸಿದರೂ ಅನ್ಯದೇವತಾಂತರ್ಗತನಾದ ನನ್ನ ಪೂಜೆಯೇ ಆಗುವದು. ಇದನ್ನು ತಿಳಿಯದೆ ಅನ್ಯದೇವತೆಗಳನ್ನು ಪೂಜಿಸುವವರು ಅವಿಧಿಪೂರ್ವಕವಾಗಿ ನನ್ನನ್ನೇ ಪೂಜಿಸುತ್ತಾರೆ. ಇವುಗಳಿಂದ ದೇವತೆಗಳು ಫಲ ಕೊಡುವದರಲ್ಲಿ ಸ್ವತಂತ್ರರಲ್ಲವೆಂದೂ ಅವರ ಅಂತರ್ಗತನಾದ ಪರಮಾತ್ಮನೇ ಅವರ ಫಲದಾನಶಕ್ತಿಗೆ ಪ್ರೇರಕನೆಂದೂ ಗೊತ್ತಾಗುವದು. ಮತ್ತು ಬ್ರಹ್ಮಾದಿಗಳ ಜ್ಞಾನವು ಅತ್ಯಲ್ಪವೆಂದು ವಿಶ್ವರೂಪಾಧ್ಯಾಯದಲ್ಲಿ ಅರ್ಜುನನು ನಿರೂಪಿಸಿರುವ ಅವರ ನಡವಳಿಕೆಯಿಂದಲೇ ನಿಶ್ಚಯಿಸಬಹುದು. ಅಲೌಕಿಕವಾದ ಭಗವಂತನ ವಿರಾಡ್ರೂಪವನ್ನು ನೋಡಿ ವಿಸ್ಮಿತರಾದರೆಂದು ಹೇಳಿರುತ್ತಾನೆ.

(8) **ರುದ್ರಾದಿತ್ಯಾ ವಸವೋಯೇಚಸಾಧ್ಯಾ........ವೀಕ್ಷಂತೇತ್ವಾಂ ವಿಸ್ಮಿತಾಶ್ಚೈವ ಸರ್ವೇ ।** —(11. 22.)

ರುದ್ರರೂ, ಆದಿತ್ಯರೂ, ವಸುಗಳೂ, ಸಾಧ್ಯರೂ ಇವರೇ ಮುಂತಾದ ಸರ್ವರೂ ವಿಸ್ಮಿತರಾಗಿ ನಿನ್ನನ್ನು ನೋಡುತ್ತಾರೆ. ಅದ್ಭುತವಾದ ಅಥವಾ ಅಪೂರ್ವ ವಸ್ತು ದರ್ಶನದಿಂದ ವಿಸ್ಮಯವುಂಟಾಗುವದು. ಸಕಲ ದೇವತೆಗಳಿಗೂ ವಿಷ್ಣುವಿನ ರೂಪವು ಆಶ್ಚರ್ಯವನ್ನುಂಟುಮಾಡಿರುವದರಿಂದ ಅವರ ಜ್ಞಾನವು ಅತ್ಯಲ್ಪವೆಂದೂ ಅತಏವ ಶ್ರೀಕೃಷ್ಣನಿಗೆ ಅಧೀನವಾಗಿಯೇ ಇರುವದೇ ಹೊರತು ಶ್ರೀಕೃಷ್ಣನ ಜ್ಞಾನವನ್ನು ನಿಯಮಿಸಲಾರದೆಂದೂ ಸಿದ್ಧವಾಗುವದು. ಕೃಷ್ಣನ ಜ್ಞಾನವು ಇನ್ನೊಬ್ಬರಿಂದ ಪ್ರೇರ್ಯವಾದುದಲ್ಲ.

(9) **ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ ॥**
(10. 15.)

ಇದರ ಅರ್ಥವು— ನಿನ್ನ ಸ್ವರೂಪವನ್ನು ದೇವತೆಗಳಾಗಲೀ ದಾನವರಾಗಲೀ ತಿಳಿಯಲಾರರು.) ಹಾಗಿದ್ದರೂ **ನೀನೇ** ನಿನ್ನ ಸ್ವರೂಪವನ್ನು ತಿಳಿದಿರುತ್ತೀಯೆ. ದೇವತೆಗಳಿಗೂ ಅಗಮ್ಯನಾದ ತನ್ನ ಸ್ವರೂಪವನ್ನು ವಿಷ್ಣುವು ನಿರಪೇಕ್ಷೆಯಾಗಿ ತಿಳಿಯುತ್ತಾನೆ ಎಂದು ನಿಶ್ಚಿತವಾಯಿತು. "ವೇದವಿದೇವಚಾಹಂ" ಎಂದರೆ ನಾನೊಬ್ಬನೇ ಸ್ವತಂತ್ರನಾಗಿ ವೇದಾರ್ಥವನ್ನು ತಿಳಿಯುವವನು ಎಂದು ಅರ್ಥವಾಗುವದರಿಂದ ಬ್ರಹ್ಮಾದಿ ದೇವತೆಗಳಿಗೆ ವೇದಾರ್ಥಜ್ಞಾನವು ಪರಮಾತ್ಮನ ಅನುಗ್ರಹದಿಂದ ಬರುವದೆಂದು ಸಿದ್ಧವಾಗುತ್ತದೆ. ಸ್ಪಷ್ಟವಚನವೂ ಉಂಟು.

(10) **ಮತ್ತಃ ಸ್ಮೃತಿಜ್ಞಾನಮಪೋಹನಂಚ ।** —(15. 15)
ನನ್ನಿಂದಲೇ ಸ್ಮರಣೆಯು, ಜ್ಞಾನವು, ವಿಪರ್ಯಯಜ್ಞಾನವೂ ಉಂಟಾಗುವವು.

**10-11. ಬಂಧ-ಮೋಕ್ಷಪ್ರದತ್ವ—** ಯಾರಿಗೆ ಯಾವನು ಬಂಧಕನೋ ಅವನು ಅವರಿಗಿಂತ ಉತ್ತಮನು; ಬದ್ಧರನ್ನು ಬಿಡುಗಡೆ ಮಾಡುವವನು ಬದ್ಧರಿಗಿಂತ ಸುತರಾಂ ಉತ್ತಮನು ಎಂದು ಲೋಕಸಿದ್ಧವಾಗಿರುವದು. ಇದು ವಿಷ್ಣು ಮಾತ್ರ ನಿಷ್ಠವಾದ ಲಕ್ಷಣವಾದುದರಿಂದ ವಿಷ್ಣು ಸರ್ವೋತ್ತಮತ್ವವು ಸಿದ್ಧಿಸುವದು.

(1) **ದೈವೀಹ್ಯೇಷಾಗುಣಮಯೀ ಮಮಮಾಯಾದುರತ್ಯಯಾ ।**
(71. 4.)

ದೇವನಾದ ನಾರಾಯಣನಿಗೆ ಅಧೀನವಾದ, ಮತ್ತು ಅತ್ಯದ್ಭುತವಾದ ಶಕ್ತಿಯುಳ್ಳ, ತ್ರಿಗುಣಾತ್ಮಕವಾದ, ನನ್ನಿಂದ ನಿಯಮ್ಯವಾದ, ಲಕ್ಷ್ಮಿಯಿಂದ ಅಭಿಮನ್ಯವಾದ ಅವಿದ್ಯೆಯು ದಾಟುವದಕ್ಕೆ ಅಶಕ್ಯವು.

ಹೀಗೆ ನನ್ನ ಮಾಯೆಯನ್ನು ದಾಟುವದು ಅಶಕ್ಯವೆಂದು ಹೇಳಿರುವದರಿಂದ ಬಂಧಕರ್ತೃತ್ವವು ವಿಷ್ಣುವಿಗೇ ಎಂಬುದು ಸಿದ್ಧವಾಯಿತು. ಮೋಕ್ಷಕರ್ತೃತ್ವವು ವಿಷ್ಣುವಿಗೇ ಎಂಬುವುದರಲ್ಲಿ ಅನೇಕ ಪ್ರಮಾಣಗಳುಂಟು.

(2) **ಮಾಮೇವಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿತೇ ।**
—(7. 14.)

ಯಾರು ನನ್ನನ್ನೇ ಆಶ್ರಯಿಸುತ್ತಾರೆಯೋ ಅವರೇ ಈ ( ಪೂರ್ವೋಕ್ತ ಲಕ್ಷ್ಮಿಯಿಂದ ಅಭಿಮನ್ಯವಾದ ನನ್ನ ಅಧೀನವಾದ ) ಪ್ರಕೃತಿಬಂಧವನ್ನು ದಾಟುತ್ತಾರೆ ( ಪರಿಹರಿಸಿಕೊಳ್ಳುತ್ತಾರೆ. ) ಪ್ರಕೃತಿಬಂಧ ನಿವೃತ್ತಿರೂಪ ಮುಕ್ತಿಯು ನನ್ನಿಂದಲೇ ಆಗಬೇಕೆಂದು ಕಂಠತಃ ಹೇಳಿರುತ್ತಾನೆ.

(3) **ಮತ್ಕರ್ಮಕೃನ್ಮತ್ಪರಮೋಮದ್ಭಕ್ತಸ್ಸಂಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಸ್ಸಮಾಮೇತಿಪಾಂಡವ ॥**
(11 55.)

ಅರ್ಥವು— ನನ್ನ ಪ್ರೀತ್ಯರ್ಥವಾಗಿ ವಿಹಿತಕರ್ಮಗಳನ್ನು ಮಾಡುವವನಾಗಿ, ನಾನೇ ( ಕೃಷ್ಣನೇ ) ಸರ್ವೋತ್ತಮನೆಂಬ ಜ್ಞಾನವುಳ್ಳವನಾಗಿ, ನನ್ನಲ್ಲಿ ಭಕ್ತಿಯುಳ್ಳವನಾಗಿ, ವಿಷಯಗಳಲ್ಲಿ ಸ್ನೇಹವರ್ಜಿತನಾಗಿ, ಸಕಲ ಸಜ್ಜನರಲ್ಲಿಯೂ ವಿರೋಧರಹಿತನಾಗಿರುವವನು ನನ್ನನ್ನು ಹೊಂದುತ್ತಾನೆ ಎಂದರೆ ಮುಕ್ತನಾಗುತ್ತಾನೆ. (ಪರಮಾತ್ಮನನ್ನು ಹೊಂದುವದು, ಎಂದರೆ ಅವನ ನಿತ್ಯವಾದ ಲೋಕಗಳಲ್ಲಿ ಅವನ ಪೂರ್ಣಾನುಗ್ರಹದಿಂದ ವಾಸಮಾಡುವದೇ ಮುಕ್ತಿಯು. ಇದು ಮುಂದೆ ವಿಶದವಾಗುವದು.)

(4) **ಮಚ್ಚಿತ್ತಸ್ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
(18. 58.)

ನನ್ನಲ್ಲಿಯೇ ಲಗ್ನವಾದ ಚಿತ್ತವುಳ್ಳವನಾಗಿ ನೀನು ಪ್ರಕೃತಿ, ಅವಿದ್ಯಾದಿ ಕೃತಸರ್ವಕ್ಲೇಶಗಳನ್ನೂ ನನ್ನ ಅನುಗ್ರಹದಿಂದ ದಾಟುತ್ತೀಯೆ (ಮುಕ್ತನಾಗುತ್ತೀಯೆ) ಎಂದರ್ಥವು.

**(5) ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥ —(18.66)**

ಸರ್ವ ಧರ್ಮಫಲಗಳನ್ನೂ ನನ್ನಲ್ಲಿ ಸಮರ್ಪಿಸಿ, ಸರ್ವ ಅವೈಷ್ಣವ ಧರ್ಮಗಳನ್ನೂ ಪರಿತ್ಯಾಗಮಾಡಿ ಅಥವಾ ಭಗವಂತನ ಶರಣಾಗತಿಯೇ ಎಲ್ಲ ಧರ್ಮಗಳಿಗಿಂತಲೂ ಶ್ರೇಷ್ಠವೆಂದು ತಿಳಿದು, ನನ್ನನ್ನು ಸರ್ವೋತ್ತಮನೆಂದು ತಿಳಿದು ನನ್ನಲ್ಲಿ ಶರಣಾಗತನಾಗು. ನಾನು ನಿನ್ನನ್ನು ಸರ್ವ ಪಾಪಗಳಿಂದಲೂ ಬಿಡಿಸಿಬಿಡುತ್ತೇನೆ. ನೀನು ದುಃಖಪಡಬೇಡ. (ಸಂಸಾರದಿಂದ ಮುಕ್ತನನ್ನಾಗಿ ಮಾಡುತ್ತೇನೆಂದು ಅರ್ಥವು.)

ಹೀಗೆ ಬಂಧಕರ್ತೃತ್ವವೂ ಮೋಕ್ಷದಾನ ಶಕ್ತಿಯೂ ಶ್ರೀಕೃಷ್ಣನಿಗೇ ಇರುತ್ತವೆ. ಬ್ರಹ್ಮಾದಿ ಚೇತನರಿಗೂ ಈ ಸಾಮರ್ಥ್ಯವು ಇರುವದಿಲ್ಲವೆಂಬುದನ್ನು ಅವರುಗಳ ವಾಸಸ್ಥಾನದ ವೈಲಕ್ಷಣ್ಯ ಮತ್ತು ಅವರ ಪೂಜಾದಿಂದ ಪ್ರಾಪ್ತವಾಗುವ ಫಲವೈಲಕ್ಷಣ್ಯವೆಂಬ ಎರಡು ಯುಕ್ತಿಗಳಿಂದಲೂ ತೋರಿಸುತ್ತಾನೆ.

**(6) ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ –(8.16.)**

ಅರ್ಥವು:—ಬ್ರಹ್ಮಸದನವನ್ನು ಆರಂಭಿಸಿ ಕೆಳಗಿನ ಸರ್ವ ಲೋಕಗಳೂ ಪುನಃ ಪುನಃ ಸಂಸಾರಕ್ಕೆ ಕಾರಣವಾಗುತ್ತವೆ. ನನ್ನನ್ನು ಹೊಂದಿದರೆ ಪುನರ್ಜನ್ಮವು ಇರುವದಿಲ್ಲ. ಜನ ಆದಿಲೋಕಸ್ಥನಾದ ಶ್ರೀಕೃಷ್ಣನನ್ನು ಹೊಂದಿದವರಿಗೆಪುನರ್ಜನ್ಮಾಭಾವವು, ಕೃಷ್ಣನನ್ನು ಹೊಂದದವರಿಗೆ ಸರ್ವಥಾ ಪುನರಾವೃತ್ತಿರೂಪ ಸಂಸಾರವೂ ಹೇಳಲ್ಪಟ್ಟಿರುವದರಿಂದ ಬ್ರಹ್ಮರುದ್ರಾದಿಗಳ ಪ್ರಾಪ್ತಿಯು ಮೋಕ್ಷಕ್ಕೆ ಕಾರಣವಲ್ಲವೆಂದೂ ವಿಷ್ಣುವಿನ ಪ್ರಾಪ್ತಿಯು ಮೋಕ್ಷಕ್ಕೆ ಕಾರಣವೆಂದೂ ಸಿದ್ಧವಾಗುವದು.

**(7) ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ । —(18.53.)**

ನನ್ನ ಅನುಗ್ರಹದಿಂದ ಶಾಶ್ವತವಾದ ನಾಶರಹಿತವಾದ ಸ್ಥಾನವನ್ನು ಹೊಂದುತ್ತಾನೆ.

(8) **ಮಾಮುಪೇತ್ಯ ಪುನರ್ಜನ್ಮದುಃಖಾಲಯಮಶಾಶ್ವತಂ ।**
**ನಾಪ್ನುವಂತಿ ಮಹಾತ್ಮಾನಸ್ಸಂಸಿದ್ಧಿಂ ಪರಮಾಂಗತಾಃ ॥**
—(8.15.)

ನನ್ನ ಪ್ರಾಪ್ತಿಯೇ ಪರಮಗತಿಯೆಂದು ಶ್ರೀಕೃಷ್ಣನು ಹೇಳುತ್ತಾನೆ. ನನ್ನನ್ನು ಹೊಂದಿದ ಮಹಾತ್ಮರು (ನನ್ನ ಪ್ರಾಪ್ತಿಯೇ ಪರಮಗತಿಯಾದುದ ರಿಂದ) ಮೋಕ್ಷರೂಪವಾದ ಅತ್ಯುತ್ತಮವಾದ ಸಿದ್ಧಿಯನ್ನು ಹೊಂದಿದವರಾಗಿ ಅಶಾಶ್ವತವಾದ ದುಃಖಪೂರ್ಣವಾದ ಪುನಃ ಪುನಃ ದೇಹಸಂಬಂಧರೂಪ ಸಂಸಾರ ವನ್ನು ಹೊಂದುವದಿಲ್ಲ.

(9) **ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ।**
—(8. 21.)

ಅಧಿಕಾರಿಗಳು ಯಾವನನ್ನು ಹೊಂದಿದ ಮೇಲೆ ಪುನಃ ಜನ್ಮಮರಣರೂಪ ವಾದ ಸಂಸಾರವನ್ನು ಹೊಂದುವದಿಲ್ಲವೋ ಅಂಥ (ಪರಮಪ್ರಾಪ್ಯವಾದ) ಧ್ದು ನನ್ನ ಸ್ವರೂಪವು ಅಥವಾ ನಿತ್ಯವಾದ ನನ್ನ ವೈಕುಂಠಾದಿಲೋಕಗಳು. ಮಹಾಪ್ರಳಯ ಕಾಲದಲ್ಲಿ ಬ್ರಹ್ಮಾದಿ ಸರ್ವಜಗತ್ತು ನಾಶ ಹೊಂದಿದರೂ ನನಗೆ ನಾಶವಿಲ್ಲವೆಂದು ಶ್ರೀಕೃಷ್ಣನು ಹೇಳುತ್ತಾನೆ.

(10) **ಪರಸ್ತಸ್ಮಾತ್ತುಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।**
**ಯಸ್ಸಸರ್ವೇಷುಭೂತೇಷು ನಶ್ಯತ್ಸು ನ ವಿನಶ್ಯತಿ ॥** –(8. 20.)

ಅವ್ಯಕ್ತನಾಮಕ ಭಗವಂತನಾದರೋ ಸ್ವತಂತ್ರನು, ಉತ್ತಮನು ಮತ್ತು ಸನಾತನನು (ಅನಾದಿನಿತ್ಯನು); ಅವನು ವ್ಯಕ್ತವಾದ (ಉತ್ಪನ್ನವಾದ) ಪ್ರಾಣಿ ಸಮೂಹಗಳೆಲ್ಲಕ್ಕಿಂತಲೂ ಅನ್ಯಃ ಎಂದರೆ ವಿಲಕ್ಷಣನು. ಸರ್ವಪ್ರಾಣಿಗಳೂ ನಷ್ಟ ವಾದರೂ (ಪ್ರಳಯದಲ್ಲಿ) ಆತನು ನಾಶವನ್ನು ಹೊಂದುವದಿಲ್ಲ.

(11) **ನತದ್ಭಾಸಯತೇ ಸೂರ್ಯೋ ನ ಶಶಾಂಕೋನಪಾವಕಃ ।**
**ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥**
—(15. 6.)

ಯಾವ ಪರಬ್ರಹ್ಮನ ಲೋಕವನ್ನು ಈ ಸೂರ್ಯನೂ, ಚಂದ್ರನೂ, ಅಗ್ನಿ ಯೂ ಪ್ರಕಾಶಪಡಿಸುವದಿಲ್ಲವೋ, ಮತ್ತು ಯಾವುದನ್ನು ಹೊಂದಿದ ಮೇಲೆ ಪುನ ರಾವೃತ್ತಿಯಿಲ್ಲವೋ ಅಂಥ ಪರಮಧಾಮವು (ಪರಮಪ್ರಾಪ್ಯವಾದ ಸ್ಥಾನವು) ನನ್ನದು.

(12) **ತಮೇವ ಶರಣಂ ಗಚ್ಛ ಸರ್ವ ಭಾವೇನ ಭಾರತ ।**
**ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ ॥**
—(18. 62.)

ಎಲೈ ಭಾರತ! ಈಶ್ವರನನ್ನು (ನನ್ನನ್ನು) ಸರ್ವಪ್ರಕಾರದಿಂದಲೂ ಶರಣು ಹೊಂದು. ಈಶ್ವರನಾದ ನನ್ನ ಅನುಗ್ರಹದಿಂದ ಉತ್ಕೃಷ್ಟಶಾಂತಿಯನ್ನು (ಶಾಶ್ವತವಾದ ವೈಕುಂಠಾದಿ ಲೋಕಗಳನ್ನು) ಹೊಂದುತ್ತೀಯೆ, ಬ್ರಹ್ಮಾದಿ ದೇವತೆಗಳು ಶಾಶ್ವತವಾದ ಫಲವನ್ನು ಕೊಡಲಾರರು. ದೇವತೆಗಳ ಸೇವನೆಯಿಂದಾಗುವ ಫಲವು ಅತ್ಯಲ್ಪವಾದುದು ಮತ್ತು ಅಶಾಶ್ವತವಾದುದು. ಶ್ರೀಕೃಷ್ಣನ ಸೇವೆಯಿಂದಾಗುವ ಫಲವು ಸ್ಥಿರವಾದುದು ಮತ್ತು ನಿರವಧಿಕವಾದುದು ಎಂದು ಹೇಳುತ್ತಾನೆ.

**(13) ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।**
**ಅಂತವತ್ತು ಫಲಂತೇಷಾಂ ತದ್ಭವತ್ಯಲ್ಪಮೇಧಸಾಂ ।**
— (7 20-23)

**ಮಾಮುಪೇತ್ಯಪುನರ್ಜನ್ಮದುಃಖಾಲಯಮಶಾಶ್ವತಂ ।**
**ನಾಪ್ನುವಂತಿಮಹಾತ್ಮಾನಃ ಸಂಸಿದ್ಧಿಂಪರಮಾಂಗತಾಃ ॥**
—(8 15)

ಅಧಿಕಾರಿಗಳು ನಾನಾ ವಿಧವಾದ ಅಭೀಷ್ಟಗಳನ್ನು ಕೋರುವವರಾಗಿ ಅನ್ಯದೇವತೆಗಳನ್ನು ಶರಣುಹೊಂದುತ್ತಾರೆ. ಅಲ್ಪಬುದ್ಧಿಗಳಾದ ಇಂಥವರಿಗಾಗುವ ಫಲವು ಬಹು ಬೇಗ ನಾಶ ಹೊಂದತಕ್ಕದ್ದು. (ನನ್ನಲ್ಲಿ ಶರಣಾಗತನಾದರೆ ಅನಂತವಾದ ಫಲವುಂಟು ಎಂದು ಸೂಚಿಸಿರುತ್ತಾನೆ.) ನನ್ನಲ್ಲಿ ಶರಣಾಗತರಾದ ಮಹಾತ್ಮರು ಪರಮಸಂಸಿದ್ಧಿಯನ್ನು (ಮೋಕ್ಷವನ್ನು) ಹೊಂದಿದವರಾಗಿ ದುಃಖ ಪ್ರಚುರವಾದ ಅಶಾಶ್ವತವಾದ ಸಂಸಾರವನ್ನು ಹೊಂದುವದಿಲ್ಲ.

ಹನ್ನೆರಡನೇಯ ಅಧ್ಯಾಯದಲ್ಲಿ ನಿತ್ಯಮುಕ್ತಳಾದ ಲಕ್ಷ್ಮೀದೇವಿಯ ಉಪಾಸನೆಗೂ ನಿನ್ನ ಉಪಾಸನೆಗೂ ವ್ಯತ್ಯಾಸವೇನು ಎಂದು ಅರ್ಜುನನು ಕೇಳಿದ ಪ್ರಶ್ನೆಗೆ ಶ್ರೀಕೃಷ್ಣನು ಕೊಟ್ಟಿರುವ ಉತ್ತರವನ್ನು ಪರಾಮರ್ಶೆ ಮಾಡಿದರೆ ಲಕ್ಷ್ಮಿಗೂ ನಾರಾಯಣನಿಗೂ ಇರುವ ತಾರತಮ್ಯವು ವಿದಿತವಾಗುವದು. ಲಕ್ಷ್ಮೀ ಉಪಾಸನೆಯು ಅತಿಕ್ಲೇಶಕರವಾದುದು; ಮತ್ತು ಬಹುಕಾಲದಮೇಲೆ ವಿಷ್ಣುವಿನ ಪ್ರಸಾದಕ್ಕೆ ಕಾರಣವಾಗಿಯೇ ಫಲವನ್ನು ಕೊಡಿಸತಕ್ಕದ್ದು. ಲಕ್ಷ್ಮಿಯು ಸಾಕ್ಷಾತ್ತಾಗಿ ಸ್ವತಂತ್ರಳಾಗಿ ಫಲವನ್ನು ಕೊಡಲಾರಳು. ತನ್ನ ಉಪಾಸಕರ ವಿಷಯದಲ್ಲಿ ಶಿಫಾರಸು ಮಾಡಿ ತನ್ನ ಪತಿಯ ಕಡೆಯಿಂದ ವಿಶಿಷ್ಟ ಫಲವನ್ನು ಕೊಡಿಸುವಳು. ನಾರಾಯಣನ ಉಪಾಸನೆಯು ಹೆಚ್ಚುಕಷ್ಟಕರವಲ್ಲ; ಹೆಚ್ಚುವಿಳಂಬವಿಲ್ಲದೆ ಪೂರ್ಣಫಲವನ್ನು ನಾರಾಯಣನಿಂದಲೇ ಕೊಡಿಸುವುದು ಎಂದು ಹೇಳುತ್ತಾನೆ.

(14) ಅರ್ಜುನಉವಾಚ ॥
ಏವಂಸತತಯುಕ್ತಾಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।
ಯೇ ಚಾಪ್ಯಕ್ಷರಮವ್ಯಕ್ತಂತೇಷಾಂ ಕೇಯೋಗವಿತ್ತಮಾಃ ॥
ಶ್ರೀಭಗವಾನುವಾಚ ॥
ಮಯ್ಯಾವೇಶ್ಯಮನೋ ಯೇ ಮಾಂ ನಿತ್ಯಯುಕ್ತಾಉಪಾಸತೇ ।
ಶ್ರದ್ಧಯಾಪರಯೋಪೇತಾಸ್ತೇಮೇಯುಕ್ತತಮಾಮತಾಃ ।
ಯೇತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।
ತೇಪ್ರಾಪ್ನುವಂತಿಮಾಮೇವ ಸರ್ವಭೂತಹಿತೇರತಾಃ ।
ಕ್ಲೇಶೋಧಿಕತರಸ್ತೇಷಾಮವ್ಯಕ್ತಾಸಕ್ತ ಚೇತಸಾಂ ।
ಅವ್ಯಕ್ತಾಹಿಗತಿರ್ದುಃಖಂ ದೇಹವದ್ಭಿರವಾಪ್ಯತೇ ।
ಯೇತುಸರ್ವಾಣಿ ಕರ್ಮಾಣಿ ಮಯಿಸನ್ಯಸ್ಯಮತ್ಪರಾಃ ।
ಽನನ್ಯೇನೈವಯೋಗೇನ ಮಾಂ ಧ್ಯಾಯಂತಉಪಾಸತೇ ।
ತೇಷಾಮಹಂ ಸಮುದ್ಧರ್ತಾಮೃತ್ಯುಸಂಸಾರಸಾಗರಾತ್ ।
ಭವಾಮಿನಚಿರಾತ್ಪಾರ್ಥಮಯ್ಯಾವೇಶಿತ ಚೇತಸಾಂ ॥

—(12.1-7)

ಅರ್ಜುನನು ಪ್ರಶ್ನೆಮಾಡುತ್ತಾನೆ— ಹೇ ಸ್ವಾಮೀ ಪೂರ್ವೋಕ್ತಯುಕ್ತರೀತಿಯಲ್ಲಿ ನಿನ್ನನ್ನು ಯಾರು ಭಕ್ತಿಪೂರ್ವಕವಾಗಿ ಉಪಾಸನೆ ಮಾಡುತ್ತಾರೆಯೋ ಮತ್ತು ಯಾರು ಅಕ್ಷರನಾಮಕಳಾದ ಚೇತನಪ್ರಕೃತಿಯನ್ನು (ಲಕ್ಷ್ಮೀದೇವಿಯನ್ನು) ಭಕ್ತಿಪೂರ್ವಕವಾಗಿ ಉಪಾಸನೆ ಮಾಡುತ್ತಾರೆಯೋ ಅವರಿಬ್ಬರ ಮಧ್ಯದಲ್ಲಿ ಯಾರು ಅಧಿಕವಾಗಿ ಮೋಕ್ಷೋಪಾಯವನ್ನು ಬಲ್ಲರು ?

ಶ್ರೀಕೃಷ್ಣನು ಹೇಳುತ್ತಾನೆ— ಯಾರು ನನ್ನಲ್ಲಿ ಮನಸ್ಸನ್ನಿಟ್ಟು ನಿರಂತರ ಕರ್ಮಧ್ಯಾನಾದಿಗಳಿಂದ ಉತ್ಕೃಷ್ಟಶ್ರದ್ಧೆಯಿಂದ **ನನ್ನನ್ನು ಉಪಾಸನೆ ಮಾಡುತ್ತಾರೆಯೋ ಅವರೇ ಅಧಿಕವಾಗಿ ಮೋಕ್ಷೋಪಾಯವನ್ನು ಬಲ್ಲವರು.** ಯಾರು ಅಕ್ಷರಳೂ, ಅನಿರ್ದೇಶ್ಯಳೂ, ಅವ್ಯಕ್ತಳೂ ಆದ ಲಕ್ಷ್ಮೀದೇವಿಯನ್ನು ಉಪಾಸನೆ ಮಾಡುತ್ತಾರೆಯೋ ಅವರು ಸರ್ವಪ್ರಾಣಿಗಳ ಸುಖವನ್ನು ಕೋರುವದೇ ಮೊದಲಾದ ಗುಣಗಳುಳ್ಳವರಾಗಿ ನನ್ನನ್ನೇ ಹೊಂದುತ್ತಾರೆ. (ಲಕ್ಷ್ಮೀ ದ್ವಾರಾ ನನ್ನಿಂದಲೇ ಮುಕ್ತಿಫಲವನ್ನು ಹೊಂದುತ್ತಾರೆ. ಎಂದರ್ಥವು. )

ಹೀಗೆ ಅವ್ಯಕ್ತೋಪಾಸಕರಿಗೂ ಮುಕ್ತಿಯು, ವಿಷ್ಣುವಿನ ಉಪಾಸಕರಿಗೂ ಮುಕ್ತಿಯು ಎಂದು ಫಲಸಾಮ್ಯವು ಇರುವದರಿಂದ ನಿನ್ನ ಉಪಾಸನೆಯು ಹೇಗೆ ಉತ್ತಮವೆಂದರೆ ಹೇಳುತ್ತಾನೆ.— ಅವ್ಯಕ್ತೋಪಾಸನೆಯನ್ನು ಮಾಡುವ ಅಧಿ

ಕಾರಿಗಳಿಗೆ ಅತ್ಯಂತ ಅಧಿಕವಾದ ಕ್ಲೇಶವುಂಟು. ಲಕ್ಷ್ಮೀದೇವಿಯ ಉಪಾಸನೆಯೇ ದ್ವಾರವಾಗಿ ಉಳ್ಳ ಭಗವತ್ಪ್ರಾಪ್ತಿಮಾರ್ಗವು ಪ್ರಾಣಿಗಳಿಗೆ ಬಹು ಶ್ರಮದಿಂದ ಸಹಿತವಾಗಿ ಹೊಂದಲ್ಪಡುವದು. ಯಾರು ಸರ್ವವಿಧ್ಯುಕ್ತ ಕರ್ಮಗಳನ್ನು ಮಾಡಿ ನನ್ನಲ್ಲಿಯೇ ಅರ್ಪಿಸಿ ನಾನೇ ಸರ್ವೋತ್ತಮನೆಂದು ತಿಳಿದು ಅನನ್ಯವಾದ ಮನಸ್ಸಿನಿಂದ ನನ್ನನ್ನು ಧ್ಯಾನಮಾಡುತ್ತಾ ಉಪಾಸನೆ ಮಾಡುತ್ತಾರೆಯೋ ಅಂಥ ನನ್ನಲ್ಲಿಯೇ ಆಸಕ್ತವಾದ ಮನಸ್ಸುಳ್ಳವರನ್ನು ನಾನು ಶೀಘ್ರವಾಗಿ ಮೃತ್ಯುರೂಪ ಈ ಸಂಸಾರದ ದೆಸೆಯಿಂದ ಉದ್ಧರಿಸುತ್ತೇನೆ.

ಲಕ್ಷ್ಮೀಯಲ್ಲಿರುವ ಮೋಕ್ಷದಾನ ಶಕ್ತಿಯೂ ಕೂಡ ಪರಮಾತ್ಮನ ಅಧೀನವೇ ಎಂಬುದು ಈ ಶ್ಲೋಕಗಳಿಂದಲೇ ತಿಳಿದು ಒರುವದು. ಶ್ರೀಕೃಷ್ಣನೂ ಅನ್ಯತ್ರ ಹೇಳಿರುತ್ತಾನೆ.

(15) **ಬ್ರಹ್ಮಣೋಹಿಪ್ರತಿಷ್ಠಾಹ ಮಮೃತಸ್ಯಾವ್ಯಯಸ್ಯಚ |**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ||**
—(14. 27.)

ನಾನು ಲಕ್ಷ್ಮೀದೇವಿಗೂ ನಾಶರಹಿತವಾದ ಮುಕ್ತಿವರ್ಗಕ್ಕೂ ಸನಾತನವಾದ ಧರ್ಮಕ್ಕೂ ಮತ್ತು ಮೋಕ್ಷ ಸುಖಕ್ಕೂ ನಿಯಾಮಕನು.

ಈ ರೀತಿಯಲ್ಲಿ ಶ್ರೀಕೃಷ್ಣನು, ವೇದಾಂತಸೂತ್ರಗಳಲ್ಲಿ ಯಾವ ಲಕ್ಷಣಗಳಿಂದ ವಿಷ್ಣುವೇ ಪರಬ್ರಹ್ಮನೆಂದು ನಿರ್ಣಯ ಮಾಡಿರುವರೋ ಅದೇ ಅಸಾಧಾರಣ ಧರ್ಮಗಳು ತನ್ನಲ್ಲಿರುವವೆಂದು ಪ್ರತಿಪಾದನೆ ಮಾಡಿ ತೋರಿಸಿ ತನ್ನ ಸರ್ವೋತ್ತಮತ್ವವನ್ನು ಸ್ಥಾಪಿಸಿರುತ್ತಾನೆ. ಅಷ್ಟದಿಗ್ಗಜಗಳ ಆಧಾರದಿಂದ ಸಪ್ತಸಮುದ್ರವಲಯಾಂಕಿತವಾದ ಈ ಯಾವತ್ತೂ ಪೃಥ್ವಿಯು ಸುಪ್ರತಿಷ್ಠಿತವಾಗಿರುವಂತೆ ಪರಬ್ರಹ್ಮನ ಸರ್ವೋತ್ತಮತ್ವವು ಅಷ್ಟಕರ್ತೃತ್ವರೂಪ ಅಸಾಧಾರಣ ಧರ್ಮಗಳಿಂದ ಶಾಸ್ತ್ರದಲ್ಲಿ ಸ್ಥಾಪಿಸಲ್ಪಟ್ಟಿರುವದು.

ಇವುಗಳ ಹೊರತು ಇತರ ದೇವತೆಗಳಲ್ಲಿಲ್ಲದ ಅನೇಕ ಅಸಾಧಾರಣ ಧರ್ಮಗಳು ಶ್ರೀಕೃಷ್ಣನಲ್ಲಿ ವ್ಯಕ್ತವಾಗಿರುವವು. ಇವು ಒಂದೊಂದೂ ಸರ್ವೋತ್ತಮತ್ವಕ್ಕೆ ಸಾಧಕವಾದ ಧರ್ಮಗಳು.

**12. ನಿಯಾಮಕರೂಪೇಣ ಅಂತರ್ಬಹಿರ್ವ್ಯಾಪ್ತತ್ವವು** ವಿಷ್ಣುವಿಗೆ ಸರ್ವೋತ್ತಮತ್ವಸಾಧಕವಾದ ಲಕ್ಷಣವೆಂದು "ಸರ್ವತ್ರಪ್ರಸಿದ್ಧೋಪದೇಶಾತ್" ಇತ್ಯಾದಿ ವೇದಾಂತಸೂತ್ರಗಳಲ್ಲಿ ನಿರ್ಣೀತವಾಗಿರುವದು. ಅದು ಶ್ರೀಕೃಷ್ಣನಲ್ಲಿರುತ್ತದೆ.

(1) **ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ |**
—(7. 19.)

ವಾಸುದೇವನು ಸರ್ವತ್ರ ವ್ಯಾಪ್ತನೆಂದು ತಿಳಿಯುವ ಮಹಾತ್ಮನು ಅತಿ ದುರ್ಲಭನು. ಈ ಶ್ಲೋಕದಲ್ಲಿ ವಾಸುದೇವನೇ "ಸರ್ವ" ವೂ ಎಂಬ ಮರರ್ಥವು ಆಪಾತತಃ ತೋರುವದು. ಅರ್ಜುನನು ಬುದ್ಧಿವಂತನಾದ ಶಿಷ್ಯನು. ಶ್ರೀಕೃಷ್ಣನ ಅಭಿಪ್ರಾಯವನ್ನು ತಾನು ಹೇಳಿರುತ್ತಾನೆ.

**ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ।** —(11.)

ನೀನು ಸರ್ವವನ್ನೂ ವ್ಯಾಪಿಸಿಕೊಂಡಿರುವದರಿಂದ ನೀನೇ ಸರ್ವವು ಎನ್ನಿಸಿ ಕೊಳ್ಳುತ್ತೀಯೆ. ಇದರಿಂದ **"ಸರ್ವಂ ಖಲ್ವಿದಂಬ್ರಹ್ಮ"** ಎಂಬ ಶ್ರುತಿಯನ್ನೂ ಅರ್ಜುನನು ವ್ಯಾಖ್ಯಾನ ಮಾಡಿದ ಹಾಗಾಯಿತು.

**(2) ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ॥** –(9. 4.)

ಚರಾಚರಾತ್ಮಕವಾದ ಈ ಸರ್ವ ಪ್ರಪಂಚವೂ ಸೂಕ್ಷ್ಮರೂಪಿಯಾದ ನನ್ನಿಂದ ವ್ಯಾಪ್ತವಾಗಿದೆ.

**(3) ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**
—(10. 20.)

ನಾನು ಸರ್ವತ್ರವ್ಯಾಪ್ತನಾಗಿ ಸರ್ವ ದೇಹಿಗಳ ಅಂತಃಕರಣದಲ್ಲಿಯೂ ಸ್ಥಿತನಾಗಿರುವೆನು.

**(4) ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನಸ್ಥಿತೋಜಗತ್ ।**
—(10. 42.)

ನಾನು ಈ ಪ್ರಮಾಣಪ್ರಮಿತವಾದ ಸರ್ವ ಜಗತ್ತನ್ನೂ ನನ್ನ ಅನಂತಾಂಶ ಗಳಲ್ಲಿ ಏಕಾಂಶದಿಂದಲೇ ವ್ಯಾಪಿಸಿಕೊಂಡು ಇರುತ್ತೇನೆ.

**(5) ನಾಂತಂ ನ ಮಧ್ಯಂ ನ ಪುನಸ್ತವಾದಿಂ ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ।** —(11. 16.)

ಹೇ ವಿಶ್ವೇಶ್ವರ ! ವಿಶ್ವರೂಪ ( ವ್ಯಾಪ್ತವಾದ ರೂಪವುಳ್ಳವನೇ ) ! ನಿನ್ನ ವ್ಯಾಪ್ತಿಗೆ ಆದಿಯನ್ನೂ ಮಧ್ಯವನ್ನೂ ಅಂತವನ್ನೂ ತಿಳಿಯಲಾರೆನು. ನೀನು ಅಪರಿಚ್ಛಿನ್ನ ವ್ಯಾಪ್ತಿಯುಳ್ಳವನೆಂದರ್ಥವು.

**(6) ದ್ಯಾವಾಪೃಥಿವ್ಯೋರಿದಮಂತರಂ ಹಿ ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।** —(11. 20.)

ಭೂಲೋಕ ಮತ್ತು ಅಂತರಿಕ್ಷ ಲೋಕಗಳ ಮಧ್ಯಭಾಗವು ಮತ್ತು ಸರ್ವ ದಿಕ್ಕುಗಳೂ ಕೂಡ ನಿನ್ನೊಬ್ಬನಿಂದಲೇ ವ್ಯಾಪಿಸಲ್ಪಟ್ಟಿವೆ.

**(7) ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ।** —(11. 40.)

ನೀನು ಸರ್ವತ್ರ ವ್ಯಾಪ್ತನಾದುದರಿಂದ ಸರ್ವನಾಗಿರುತ್ತೀ.

(8) ....ಲೋಕೇಸರ್ವಮಾವೃತ್ಯತಿಷ್ಠತಿ ।—(13; 14.)

ಪರಬ್ರಹ್ಮನು ಸರ್ವವನ್ನೂ ವ್ಯಾಪಿಸಿಕೊಂಡು ಇರುತ್ತಾನೆ.

(9) ಬಹಿರಂತಶ್ಚಭೂತಾನಾಂ ।—(13. 16.)

ಪರಬ್ರಹ್ಮನು ಪ್ರಾಣಿಗಳ ಹೊರಗೂ ಒಳಗೂ ವ್ಯಾಪ್ತನಾಗಿದ್ದಾನೆ.

(10) ದೂರಸ್ಥಂ ಚಾಂತಿಕೇಚ ತತ್ ।—(13. 16.)

ಪರಬ್ರಹ್ಮನು ( ಶ್ರೀ ಕೃಷ್ಣನು ) ಸರ್ವಗತನಾದುದರಿಂದ ದೂರದಲ್ಲಿಯೂ ಸಮೀಪದಲ್ಲಿಯೂ ಇರತಕ್ಕವನು.

(11) ಹೃದಿಸರ್ವಸ್ಯವಿಷ್ಠಿತಂ ।—( 13. 18·)

ಪರಬ್ರಹ್ಮನು ಸರ್ವ ಪ್ರಾಣಿಗಳ ಹೃದಯಪ್ರದೇಶದಲ್ಲಿ ವಿಶೇಷವಾಗಿರುವವನು.

(12) ಸರ್ವಸ್ಯಚಾಹಂ ಹೃದಿಸನ್ನಿವಿಷ್ಟಃ ।—(15.15.)

ನಾನು ಸರ್ವರ ಹೃದಯದಲ್ಲಿಯೂ ಸನ್ನಿಹಿತನಾಗಿರುತ್ತೇನೆ.

(13) ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ।
—(18. 61.)

ಅರ್ಜುನ ! ಈಶ್ವರನು ( ನಾನು ) ಸರ್ವ ಪ್ರಾಣಿಗಳ ಹೃದಯ ಪ್ರದೇಶದಲ್ಲಿಯೂ ಸ್ಥಿತನಾಗಿರುತ್ತಾನೆ.

ಪೂರ್ವೋಕ್ತವಾದ ಸರ್ವಗತತ್ವವು ಬ್ರಹ್ಮಾದಿದೇವತೆಗಳಿಗಿರುವದಿಲ್ಲ.

(14) ಪಶ್ಯಾದಿತ್ಯಾನ್ ವಸೂನ್ ರುದ್ರಾನಶ್ವಿನೌಮರುತಸ್ತಥಾ ।
ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿಭಾರತ ॥
ಇಹೈಕಸ್ಥಂಜಗತ್ಕೃತ್ಸ್ನಂ ಪಶ್ಯಾದ್ಯಸಚರಾಚರಂ ।
ಮಮದೇಹೇಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥

ಹೇ ಭಾರತ ! ಆದಿತ್ಯರು, ವಸುಗಳು, ರುದ್ರರು, ಅಶ್ವಿನೀದೇವತೆಗಳು, ಮರುದ್ಗಣಗಳು, ಇನ್ನೂ ಪೂರ್ವದಲ್ಲಿ ನೋಡದಿರುವ ಸಕಲ ಅದ್ಭುತಪದಾರ್ಥಗಳು: ಮತ್ತು ಸ್ಥಾವರ ಜಂಗಮಾತ್ಮಕವಾದ ಸಕಲ ಪ್ರಪಂಚವನ್ನೂ ಈ ವಿಶ್ವರೂಪಿಯಾದ ನನ್ನ ದೇಹದಲ್ಲಿ ಏಕದೇಶದಲ್ಲಿರುವದನ್ನು ನೋಡು. ಅರ್ಜುನನೂ ಹಾಗೆಯೇ ನೋಡಿರುತ್ತಾನೆ.

(15) ತತ್ರೈಕಸ್ಥಂ ಜಗತ್ಕೃತ್ಸ್ನಂಪ್ರವಿಭಕ್ತಮನೇಕಧಾ ।
ಅಪಶ್ಯದ್ದೇವದೇವಸ್ಯಶರೀರೇ ಪಾಂಡವಸ್ತದಾ ॥—(11. 13.)

ಪಾಂಡುಪುತ್ರನಾದ ಅರ್ಜುನನು ಆಗ ದೇವದೇವನಾದ ಕೃಷ್ಣನ ಶರೀರದಲ್ಲಿ ಬಹು ಭೇದಭಿನ್ನವಾದ ಈ ನಿಖಿಲಜಗತ್ತನ್ನೂ ಏಕದೇಶದಲ್ಲಿ ಸ್ಥಿತವಾಗಿರುವದನ್ನಾಗಿ ( ವ್ಯಾಪ್ತವಾದ ಗಗನದಲ್ಲಿ ಒಂದು ಮಶಕವಿದ್ದಂತೆ ) ನೋಡಿದನು.

(16) **ಪಶ್ಯಾಮಿದೇವಾಂಸ್ತವದೇಹೇಸರ್ವಾಂಸ್ತಥಾಭೂತ ವಿಶೇಷಸಂಘಾನ್ ।**
**ಬ್ರಹ್ಮಾಣಮೀಶಂಕಮಲಾಸನಸ್ಥಂ ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥**—(11. 15.)

ಹೇ ದೇವ ! ನಿನ್ನ ದೇಹದಲ್ಲಿ ನಾನು ಸಕಲ ದೇವತೆಗಳನ್ನೂ, ಪ್ರಾಣಿ ಸಮೂಹಗಳನ್ನೂ, ಬ್ರಹ್ಮದೇವರನ್ನೂ, ರುದ್ರದೇವರನ್ನೂ ಸರ್ವ ಋಷಿಗಳನ್ನೂ ಉರಗಗಳನ್ನೂ ನೋಡುತ್ತೇನೆ.

ಯದ್ಯಪಿ **ಸರ್ವತ್ರಗಂ** (12. 3.) ಎಂಬ ಶ್ಲೋಕಭಾಗದಿಂದ ಲಕ್ಷ್ಮೀದೇವಿಯು ಸರ್ವತ್ರ ವ್ಯಾಪ್ತಳೆಂದು ನಿಶ್ಚಿತವಾಗುವದು. ಅಂದರೆ ಆಕೆಯು ಸರ್ವಗತತ್ವ, ಅಕ್ಷರತ್ವ, ಅವ್ಯಕ್ತತ್ವ, ಅಚಿಂತ್ಯತ್ವ, ಅನಿರ್ದೇಶ್ಯತ್ವ ಮೊದಲಾದ ಬ್ರಹ್ಮಾದಿ ದೇವತೆಗಳಲ್ಲಿಯೂ ಇಲ್ಲದ ಗುಣಗಳೂ ಕೂಡ ಪತಿಯಾದ ಪರಮಾತ್ಮನಿಂದ ನಿಯಮ್ಯವಾಗಿವೆ. ಈ ವಿಷಯದಲ್ಲಿ ಅನೇಕ ಪ್ರಮಾಣವಾಕ್ಯಗಳಿರುತ್ತವೆ.

(17) **ಬ್ರಹ್ಮಣೋಹಿ ಪ್ರತಿಷ್ಠಾಹಂ ।**

ನಾನು ಲಕ್ಷ್ಮೀಗೂ ಆಧಾರನು.

**ಮಯಾಧ್ಯಕ್ಷೇಣಪ್ರಕೃತಿಃ ಸೂಯತೇಸಚರಾಚರಂ ।**
ಅಧಿಪತಿಯಾದ ನನ್ನಿಂದ ಪ್ರೇರಿತವಾಗಿ ಚೇತನಪ್ರಕೃತಿಯು ಚರಾಚರ ಜಗತ್ತನ್ನು ಸೃಷ್ಟಿಸುವಳು.

**ಮಮಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಂ ॥**

ಲಕ್ಷ್ಮೀದೇವಿಯು ನನ್ನ ಭಾರ್ಯೆಯು (ಕ್ಷೇತ್ರರೂಪಳು.) ಅವಳಲ್ಲಿ ನಾನು ಗರ್ಭವನ್ನು ಇಡುತ್ತೇನೆ.

**ಮತ್ತಃ ಸರ್ವಂ ಪ್ರವರ್ತತೇ ॥**

ನನ್ನಿಂದ ಸರ್ವವೂ ಪ್ರವರ್ತಿಸುತ್ತದೆ. ಹೀಗಿರುವದರಿಂದ ಸ್ವಾತಂತ್ರ್ಯೇಣ ಸರ್ವತ್ರ ವ್ಯಾಪ್ತನಾಗಿರುವವನು ನಾರಾಯಣನೊಬ್ಬನೇ; ಆದುದರಿಂದ ಅವನೇ ಸರ್ವೋತ್ತಮನು ಎಂದು ನಿರ್ಣೀತವಾಗುವದು.

ಸರ್ವಗತನಾದ ಪರಮಾತ್ಮನಿಗೆ ನಾನಾ ಪದಾರ್ಥಗಳ ಸಂಬಂಧದಿಂದ ಗುಣದೋಷಲೇಪವು ಇರುವದಿಲ್ಲವೆಂದು ಶ್ರೀ ಕೃಷ್ಣನೇ ಹೇಳುತ್ತಾನೆ.

**(18) ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ।**
**ಯಥಾಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಽಪ ಲಿಪ್ಯತೇ ।**
**ಸರ್ವತ್ರಾವಸ್ಥಿತೋದೇಹೇ ತಥಾತ್ಮಾ ನೋಽಪಲಿಪ್ಯತೇ ॥**
(13. 32.)

ಪರಮಾತ್ಮನು (ನಾನು) ದೇಹಿಗಳ ಶರೀರದಲ್ಲೇ ಇದ್ದರೂ ಫಲಾಪೇಕ್ಷೆಯಿಂದ ಕರ್ಮವನ್ನು ಮಾಡುವದಿಲ್ಲ. ಜೀವಕೃತಕರ್ಮದ ಲೇಪವು ಅವನಿಗಿಲ್ಲ. ಜೀವದೇಹದಲ್ಲಿರುವ ದೋಷಗಳ ಲೇಪವೂ ಅವನಿಗಿಲ್ಲ. ಅಶುದ್ಧಪ್ರದೇಶಗಳಲ್ಲಿ ಸಂಬದ್ಧವಾದರೂ ಆಕಾಶವು ಬಹು ಸೂಕ್ಷ್ಮದ್ರವ್ಯವಾದುದರಿಂದ ಹೇಗೆ ಆಯಾಯ ವಸ್ತುಗಳ ಗುಣದೋಷ ಲೇಪವಿಲ್ಲದೆ ಇರುವದೋ ಹಾಗೆಯೇ ಸರ್ವತ್ರವ್ಯಾಪ್ತನಾಗಿ ಜೀವರ ದೇಹಗಳಲ್ಲಿಯೂ ವ್ಯಾಪ್ತನಾದ ಪರಮಾತ್ಮನೂ ಕೂಡ ಅವುಗಳ ಸಂಬಂಧದಿಂದ ಲೇಪರಹಿತನಾಗಿರುವನು (ಸುಖದುಃಖಾದಿಗಳನ್ನು ಹೊಂದುವದಿಲ್ಲ.)

**13. ಪುರುಷಸೂಕ್ತಪ್ರತಿಪಾದ್ಯತ್ವವು** ಸರ್ವ ವೇದಪ್ರತಿಪಾದ್ಯನಾದ ಪರಬ್ರಹ್ಮನಿಗೇ ಸಲ್ಲುವದು. ಆ ಧರ್ಮವು ಶ್ರೀಕೃಷ್ಣನಲ್ಲಿ ಕಂಡು ಬರುವದರಿಂದ ಶ್ರೀ ಕೃಷ್ಣನೇ ಪರಬ್ರಹ್ಮನು; ಆತನೇ ಸರ್ವೋತ್ತಮ ವಸ್ತುವು ಎಂದು ನಿಶ್ಚಯಿಸಬಹುದು. ಪುರುಷಸೂಕ್ತಪ್ರತಿಪಾದ್ಯವಾದ ಭಗವದ್ರೂಪವೇ ಶ್ರೀ ಕೃಷ್ಣನಿಂದ ಪ್ರದರ್ಶಿತವಾದ "ವಿಶ್ವರೂಪ" ವಾಗಿರುವದು.

**(1) ಪಶ್ಯಮೇ ಪಾರ್ಥರೂಪಾಣಿ ಶತಶೋಽಥಸಹಸ್ರಶಃ ।**
**ನಾನಾವಿಧಾನಿದಿವ್ಯಾನಿ ನಾನಾವರ್ಣಾಕೃತೀನಿಚ ॥** (—11. 5.)

ಎಲೈ ಅರ್ಜುನನೇ ! ಅಪ್ರಾಕೃತವಾದ ನಾನಾ ಪ್ರಕಾರವುಳ್ಳ ನಾನಾ ವರ್ಣಗಳು ಮತ್ತು ಆಕಾರವಿಶೇಷಗಳುಳ್ಳ ಬಹು ಸಂಖ್ಯಾಕವಾದ ನನ್ನ ರೂಪಗಳನ್ನು ನೋಡು.

**(2) ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಂ ।**
**ಅನೇಕವಕ್ತ್ರನಯನಂ ಅನೇಕಾದ್ಭುತದರ್ಶನಂ ॥**
**ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಂ ।**
—(11. 9-11.).

ಶ್ರೀ ಹರಿಯು ಪಾರ್ಥನಿಗೆ ಯಥಾರ್ಥವಾದ ಅಚಿಂತ್ಯವಾದ ಈಶ್ವರಸಂಬಂಧಿಯಾದ ತನ್ನ ವಿಶ್ವರೂಪವನ್ನು ತೋರಿಸಿದನು. ಅದು ಅನಂತಮುಖಗಳುಳ್ಳದ್ದು; ಅನಂತ ಕಣ್ಣುಗಳುಳ್ಳದ್ದು; ಅನಂತ ಆಶ್ಚರ್ಯಗಳುಳ್ಳದ್ದು; ಸರ್ವಾಶ್ಚರ್ಯಮಯವಾದುದು; ಕ್ರೀಡಾದಿಗುಣಗಳಿಂದ ಸಹಿತವಾದುದು; ಅಪರಿಚ್ಛಿನ್ನವಾದುದು (ದೇಶತಃ ಕಾಲತಃ ಗುಣತಃ); ಮತ್ತು ಅನಂತಮುಖಗಳಿಂದ ಯುಕ್ತವಾದುದು.

**(3) ಅನೇಕಬಾಹೂದರ ವಕ್ತ್ರನೇತ್ರಂ ಪಶ್ಯಾಮಿತ್ವಾಂ ಸರ್ವತೋ**
**ನಂತರೂಪಂ ।**

**(4) ನಾಂತಂನಮಧ್ಯಂನ ಪುನಸ್ತವಾದಿಂ ಪಶ್ಯಾಮಿವಿಶ್ವೇಶ್ವರ**
**ವಿಶ್ವರೂಪ ॥**

**(5) ಅನಾದಿಮಧ್ಯಾಂತ ಮನಂತವೀರ್ಯ ಮನಂತಬಾಹುಂಶಶಿ**
**ಸೂರ್ಯನೇತ್ರಂ ।**
**ಪಶ್ಯಾಮಿತ್ವಾಂದೀಪ್ತಹುತಾಶವಕ್ತ್ರಂ ಸ್ವತೇಜಸಾವಿಶ್ವಮಿದಂ**
**ತಪಂತಂ ॥**

**(6) ರೂಪಂಮಹತ್ತೇ ಬಹುವಕ್ತ್ರನೇತ್ರಂ ಮಹಾಬಾಹೋ ಬಹು**
**ಬಾಹೂರುಪಾದಂ ।**
**ಬಹೂದರಂ ಬಹುದಂಷ್ಟ್ರಾಕರಾಲಂ ದೃಷ್ಟ್ವಾಲೋಕಾಃ**
**ವ್ಯಥಿತಾಸ್ತಥಾಹಂ ॥ —(11. 16-23)**

ಅನೇಕ ಬಾಹುಗಳು, ಉದರಗಳು, ಮುಖಗಳು ಮತ್ತು ಕಣ್ಣುಗಳುಳ್ಳ ವ್ಯಾಪ್ತವಾದ ಅಪರಿಮಿತ ರೂಪಗಳುಳ್ಳ ನಿನ್ನನ್ನು ನೋಡುತ್ತೇನೆ. ಹೇ ವಿಶ್ವರೂಪ ! ನೀನು ದೇಶತಃ ಆದಿಮಧ್ಯಾಂತರಹಿತನು. (ಸರ್ವತ್ರವ್ಯಾಪ್ತನೆಂದರ್ಥವು) ಆದಿಮಧ್ಯಾಂತರಹಿತನಾದ (ನಿತ್ಯನಾದ) ಅಪರಿಮಿತ ವೀರ್ಯವುಳ್ಳ, ಅನಂತಬಾಹುಗಳುಳ್ಳ, ಸೂರ್ಯಚಂದ್ರರುಗಳೇ ನೇತ್ರಸ್ಥಾನದಲ್ಲಿ ಉಳ್ಳ, (ಸೂರ್ಯಚಂದ್ರರು ಪರಮಪುರುಷನ ನೇತ್ರದಿಂದ ಉತ್ಪನ್ನರಾದವರು ಮತ್ತು ನೇತ್ರವನ್ನು ಆಶ್ರಯಿಸಿಕೊಂಡಿರುವರು. ) ತೇಜಸ್ವಿಯಾದ ಅಗ್ನಿದೇವನಿಗೆ ಜನಕವಾದ ಮತ್ತು ಆಶ್ರಯವಾದ ಮುಖಗಳುಳ್ಳ ಸ್ವತೇಜಸ್ಸಿನಿಂದ ಸಕಲ ಜಗತ್ತನ್ನೂ ತಪಿಸುತ್ತಿರುವ ನಿನ್ನನ್ನು ನೋಡುತ್ತೇನೆ. ಹೇ ಪರಾಕ್ರಮಶಾಲಿಯಾದ ಸ್ವಾಮಿಯೇ ! ನಿನ್ನ ಅನಂತಮುಖಗಳು ಅನಂತ ನೇತ್ರಗಳು. ಅನಂತ ಬಾಹುಗಳು, ಅನಂತ ಊರುಗಳು ಅನಂತ ಪಾದಗಳು, ಅನಂತ ಉದರಗಳು ಮತ್ತು ಭಯಂಕರವಾದ ಅನಂತ ಕೋರೆದವಡೆಗಳುಳ್ಳ ನಿನ್ನ ಮಹದ್ರೂಪವನ್ನು ನೋಡಿ ಸಕಲ ಲೋಕದವರೂ ಭಯಪಟ್ಟಿರುವರು. ನಾನೂ ಭಯಹೊಂದಿರುವೆನು.

**(7) ಸರ್ವತಃ ಪಾಣಿಪಾದಂ ತತ್ಸರ್ವತೋಕ್ಷಿ ಶಿರೋಮುಖಂ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯತಿಷ್ಠತಿ ॥**
**—(13. 14.)**

ಪರಬ್ರಹ್ಮನು (ಶ್ರೀಕೃಷ್ಣನು) ಒಂದೊಂದು ರೂಪಿನಲ್ಲಿಯೂ ಅನಂತಪಾಣಿಗಳು, ಪಾದಗಳು, ಅನಂತನೇತ್ರಗಳು, ಅನಂತಶಿರಸ್ಸುಗಳು, ಅನಂತಮುಖಗಳು ಮತ್ತು ಅನಂತ ಶ್ರೋತ್ರಗಳುಳ್ಳವನು.

**14 ಸರ್ವವೇದ ಮತ್ತು ವೇದಾಂತ ಪ್ರತಿಪಾದ್ಯತ್ವವು** ಸರ್ವೋತ್ತಮ ವಸ್ತುವಾದ ಪರಬ್ರಹ್ಮನ ಲಕ್ಷಣವೆಂದು "ಸರ್ವೇವೇದಾಯತ್ಪದಮಾಮನಂತಿ" ಇತ್ಯಾದಿ ಪ್ರತಿಗಳಲ್ಲಿಯೂ, "ತತ್ತುಸಮನ್ವಯಾತ್" ಇತ್ಯಾದಿ ಬ್ರಹ್ಮಸೂತ್ರಗಳಲ್ಲಿಯೂ ಪ್ರಸಿದ್ಧವಾಗಿರುವದು. ಶ್ರೀಕೃಷ್ಣನು ತನಗೆ ಆ ಲಕ್ಷಣವು ಉಂಟೆಂದು ಹೇಳಿಕೊಂಡಿರುವದರಿಂದ ಅವನೇ ಪರಬ್ರಹ್ಮನು (ಸರ್ವೋತ್ತಮನು) ಎಂದು ಸಿದ್ಧವಾಗುವದು.

(1) **ವೇದೈಶ್ಚ ಸರ್ವೈರಹಮೇವವೇದ್ಯಃ** । —(15. 15.)

ಬ್ರಾಹ್ಮಣ, ಉಪನಿಷತ್, ಮಂತ್ರರೂಪವಾದ ಸಕಲ ವೇದಗಳಿಂದಲೂ ನಾನೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನು.

(2) **ಅತೋಽಸ್ಮಿಲೋಕೇವೇದೇ ಚ ಪ್ರಥಿತಃ ಪುರುಷೋತ್ತಮಃ** ।
—(15. 18)

ನಾನು ಸಕಲ ಭಾರತಾದಿ ಪೌರುಷೇಯ ಗ್ರಂಥಗಳಲ್ಲಿಯೂ ಮತ್ತು ವೇದಗಳಲ್ಲಿಯೂ ಪುರುಷೋತ್ತಮನೆಂದು ಪ್ರಸಿದ್ಧನು.

(3) **ಋಷಿಭಿರ್ಬಹುಧಾಗೀತಂ ಛಂದೋಭಿರ್ವಿವಿಧೈಃ ಪೃಥಕ್** ।
**ಬ್ರಹ್ಮಸೂತ್ರಪದೈಶ್ಚೈವಹೇತುಮದ್ಭಿರ್ವಿನಿಶ್ಚಿತೈಃ** ॥—(13. 5.)

(ಕ್ಷೇತ್ರ ಮತ್ತು ಅವುಗಳ ವಿಕಾರಗಳು ಅವುಗಳನ್ನು ಪ್ರೇರಿಸುವ ಭಗವಂತನು ಮತ್ತು ಅವನ ಪ್ರಭಾವವು) ಋಷಿಗಳಿಂದ (ಪರಸ್ಪರ. ವಿರುದ್ಧವಾಗಿ) ಬಹು ಪ್ರಕಾರವಾಗಿ ಹೇಳಲ್ಪಟ್ಟಿರುತ್ತದೆ. ಭಗವತ್ಸ್ವರೂಪವು ವೇದಾರ್ಥನಿಶ್ಚಾಯಕ ಯುಕ್ತಿಗಳಿಂದ ಸಹಿತವಾದ ಬ್ರಹ್ಮಸೂತ್ರಗಳಿಂದ ನಿರ್ಣೀತವಾದ ಅರ್ಥವುಳ್ಳ ಅನೇಕ ವೇದಗಳಿಂದ ಪ್ರತ್ಯೇಕವಾಗಿ ಪ್ರತಿಪಾದಿತವಾಗಿದೆ. ವೇದವೇದಾಂತ ಪ್ರತಿಪಾದ್ಯವೆಂಬ ಅರ್ಥವುಳ್ಳ ಗೋವಿಂದನೆಂಬ ಶ್ರೀಕೃಷ್ಣನ ಹೆಸರೂಕೂಡ ಈ ವಿಷಯದಲ್ಲಿ ಪ್ರಮಾಣವಾಗಿರುತ್ತದೆ.

**15 ಪ್ರಣವಪ್ರತಿಪಾದ್ಯತ್ವವು** ಸರ್ವೋತ್ತಮ ವಸ್ತುವಾದ ಪರಬ್ರಹ್ಮನ ಲಕ್ಷಣವೆಂದು ವೇದದಲ್ಲಿ ಸುಪ್ರಸಿದ್ಧವಾಗಿರುವದು. ಶ್ರೀಕೃಷ್ಣನು ನಾನೇ ಪ್ರಣವಪ್ರತಿಪಾದ್ಯನೆಂದು ಹೇಳುತ್ತಾನೆ. "ಪ್ರಣವಃ ಸರ್ವವೇದೇಷು" ಎಂದರೆ ಪ್ರಣವವು ಸರ್ವವೇದಗಳ ಸಾರಭೂತವಾದುದು; ಸರ್ವ ವೇದಾರ್ಥವನ್ನೂ ಒಳಗೊಂಡಿರುವದೆಂದು ಅರ್ಥವು. ಇಂಥಾ ಸರ್ವ ವೇದವ್ಯಾಖ್ಯೇಯ ರೂಪವಾದ ಪ್ರಣವದಿಂದ ಶ್ರೀಕೃಷ್ಣನು ಪ್ರತಿಪಾದ್ಯನಾದರೆ ವೇದಪ್ರತಿಪಾದ್ಯತ್ವವೂ ಅವನಿಗೆ ನಿಯತವಾಗಿ ಬಂದೇ ಬರುವದು. ಶ್ರೀಕೃಷ್ಣನು ಹೇಳುತ್ತಾನೆ—

**(1) ಓಮಿತ್ಯೇಕಾಕ್ಷರಂ ಬ್ರಹ್ಮವ್ಯಾಹರನ್ ಮಾಮನುಸ್ಮರನ್ ।
ಯಃಪ್ರಯಾತಿತ್ಯಜನ್‌ದೇಹಂ ಸ ಯಾತಿ ಪರಮಾಂ ಗತಿಂ ॥**
—(8. 13.)

ಓಂ ಎಂದು ಒಂದೇ ಅಕ್ಷರದಲ್ಲಿ ಅಡಗಿರುವ ಸರ್ವವೇದಗಳನ್ನೂ (ಅನಂತ ವೇದಗಳ ಅತ್ಯಂತ ಸಂಗ್ರಹರೂಪವಾದ ಓಂ ಎಂಬ ಅಕ್ಷರವನ್ನು) ಉಚ್ಚಾರಣೆ ಮಾಡುತ್ತ ಅದೇ ಕಾಲದಲ್ಲಿಯೇ ಮನಸ್ಸಿನಲ್ಲಿ ನನ್ನನ್ನು (ಶ್ರೀ ಕೃಷ್ಣನನ್ನು) ಧ್ಯಾನಮಾಡುತ್ತಾ ಯಾರುದೇಹವನ್ನು ಬಿಡುವರೋ ಅವರು ಮುಕ್ತರಾಗುವರು. ಇಲ್ಲಿ ನನ್ನರೂಪವನ್ನು ಧ್ಯಾನಮಾಡುತ್ತಾ ಓಂ ಎಂದು ಜಪಮಾಡಬೇಕು. ಎಂದು ಹೇಳಿರುವದರಿಂದ ಶ್ರೀ ಕೃಷ್ಣನು ಓಂಕಾರ ಪ್ರತಿಪಾದ್ಯನು ಎಂಬುದು ಸಿದ್ಧವಾಯಿತು. ಕೃಷ್ಣನನ್ನು ನೋಡುತ್ತಾ ಪುತ್ರೋಪ್ಪನ ನಾಮದಿಂದ ಕೂಗಿದರೆ ಅವನು ಹೇಗೆ ಬಂದು ಮುಕ್ತಿಪ್ರದನಾಗುವನು ?

**(2) ವೇದ್ಯಂಪವಿತ್ರಮೋಂಕಾರ ಋಕ್ಸಾಮಯಜುರೇವಚ ।**
—(9. 13.)

ನಾನು ಜ್ಞೇಯನಾದ ವಸ್ತುವು; ಜಗತ್ತಿಗೆ ಪಾವನನು; ಪ್ರಣವಪ್ರತಿಪಾದ್ಯನು; ಋಗ್ವೇದ, ಸಾಮವೇದ, ಯಜುರ್ವೇದಗಳಿಗೆ ನಿಯಾಮಕನಾಗಿಯೂ ಅವುಗಳಿಂದ ಪ್ರತಿಪಾದ್ಯನಾಗಿಯೂ ಇರುವವನು.

**(3) ಓಂತತ್ಸದಿತಿನಿರ್ದೇಶೋ ಬ್ರಹ್ಮಣಸ್ತ್ರಿವಿಧಃಸ್ಮೃತಃ ।**—(7.23.)

ಪರಬ್ರಹ್ಮನಿಗೆ ಓಂ ಎಂತಲೂ, ತತ್ ಎಂತಲೂ ಸತ್ ಎಂತಲೂ ಮೂರು ವಿಧವಾದ ಹೆಸರುಂಟು.

**16. ನಿರ್ಗುಣತ್ವವು** ( ಪ್ರಕೃತಿಸಂಬಂಧರಾಹಿತ್ಯವು ) "ಅರೂಪವದೇವಹಿತತ್ಪ್ರಧಾನತ್ವಾತ್" ಇತ್ಯಾದಿ ಸೂತ್ರಗಳಲ್ಲಿ ಸರ್ವೋತ್ತಮನಾದ ಪರಬ್ರಹ್ಮನಿಗೇ ಇರುವ ಲಕ್ಷಣವೆಂದು ನಿರ್ಣಯಮಾಡಲ್ಪಟ್ಟಿದೆ. ಅಂಥ ಅಸಾಧಾರಣ ಧರ್ಮವು ನನ್ನಲ್ಲಿರುವದೆಂದು ಶ್ರೀ ಕೃಷ್ಣನು ಹೇಳುತ್ತಾನೆ.

**(1) ಸ್ಥಿತ್ವಾಸ್ಯಾಮಂತಕಾಲೇಪಿ ಬ್ರಹ್ಮನಿರ್ವಾಣಮೃಚ್ಛತಿ ।**
—(2. 67.)

ದೇಹತ್ಯಾಗಕಾಲದಲ್ಲಿ ಜ್ಞಾನಯುಕ್ತನಾಗಿ ಭಗವಂತನ ಸ್ಮರಣೆಯು ಇದ್ದರೆ ಪ್ರಾಕೃತಶರೀರರಹಿತನಾದ ಪರಬ್ರಹ್ಮನನ್ನು (ನನ್ನನ್ನು) ಹೊಂದುತ್ತಾನೆ. "ಮಾಮನುಸ್ಮರನ್‌ಯಃ ಪ್ರಯಾತಿತ್ಯಜನ್ ದೇಹಂಸಯಾತಿ ಪರಮಾಂಗತಿಂ" ಎಂಬ ಎಂಟನೇಯ ಅಧ್ಯಾಯದ ಶ್ಲೋಕದ ರೀತ್ಯಾ ಇಲ್ಲಿ ಹೇಳಿರುವ ನಿರ್ವಾಣ ಬ್ರಹ್ಮನು ಶ್ರೀಕೃಷ್ಣನೇ.

ಪ್ರಶ್ನೆ—'ನಿರ್ವಾಣಂ' ಎಂದರೆ ದೇಹರಹಿತನೆಂದರ್ಥವು. ಸರ್ವಥಾ ದೇಹ ಶೂನ್ಯನೆಂದು ಹೇಳದೆ ಪ್ರಾಕೃತದೇಹರಹಿತನೆಂದು ಅರ್ಥ ಸಂಕೋಚವನ್ನು ಯಾತಕ್ಕೆ ಕಲ್ಪಿಸಬೇಕು ?

ಉತ್ತರ— ಸರ್ವಥಾ ದೇಹರಹಿತವಾದ ಚೇತನವು ಶಶವಿಷಾಣದಂತೆ ಅಪ್ರಸಿದ್ಧವು. ದೇಹರಹಿತನು ಪರಿದೃಶ್ಯಮಾನನಾಗಲಾರನು. ಕೃಷ್ಣನು ಅರ್ಜುನನ ದೃಷ್ಟಿಗೆ ಗೋಚರನಾಗುತ್ತಾನೆ. ಮತ್ತು **ದಿವ್ಯಚಕ್ಷುಸ್ಸಿನಿಂದ** ಆತನನ್ನು ನೋಡುವಾಗಲೂ ದೇಹವುಳ್ಳವನಾಗಿಯೇ ಗೋಚರನಾಗಿರುತ್ತಾನೆ. "ಪಶ್ಯಾಮಿ ದೇವಾಂಸ್ತವದೇವ **ದೇಹೇ**ಸರ್ವಾನ್" ಎಂದರೆ ಎಲೈ ಸ್ವಾಮಿಯೇ! ನಿನ್ನ **ದೇಹ ದಲ್ಲಿ** ಸಮಸ್ತ ದೇವತೆಗಳನ್ನೂ ನೋಡುತ್ತೇನೆ. ಎಂದು ಹೇಳಿರುತ್ತಾನೆ. ಮತ್ತು "ಅನಂತಬಾಹೂದರವಕ್ತ್ರನೇತ್ರಂ" "ಸರ್ವತಃ ಪಾಣಿಪಾದಂ" ಇತ್ಯಾದಿ ವಾಕ್ಯಗಳಿಂದ ಪರಬ್ರಹ್ಮನಾದ ಶ್ರೀ ಕೃಷ್ಣನು ಬಾಹು ಉದರ ಪಾಣಿಪಾದಾದಿ ಅವಯವಗಳುಳ್ಳ ವನೆಂದೇ ನಿಶ್ಚಿತವಾಗುವದು.

ಪ್ರಶ್ನೆ— ಸ್ವಾಮೀ ! ಪರಮಾತ್ಮನಿಗೂ ನಮ್ಮಂತೆ ಶರೀರವಿದ್ದರೆ ನಮ್ಮಂತೆ ದುಃಖಾದಿಗಳು ಪ್ರಾಪ್ತವಾಗಬೇಕು.

ಉತ್ತರ— ನಮಗಿರುವಂಥ ಶರೀರವು ಪರಮಾತ್ಮನಿಗಿದ್ದರೆ ನಮಗಿರುವಂತೆ ಪರಮಾತ್ಮನಿಗೆ ದುಃಖಾದಿಗಳು ಬರಬಹುದಾಗಿತ್ತು. ಆದರೆ ಪರಮಾತ್ಮನ ದೇಹವು **ದಿವ್ಯವು** ಎಂದರೆ ಲೋಕವಿಲಕ್ಷಣವು. 1. **ಪಶ್ಯಮೇಪಾರ್ಥರೂಪಾಣಿ.... ನಾನಾವಿಧಾನಿ ದಿವ್ಯಾನಿ; ಜನ್ಮಕರ್ಮಚಮೇದಿವ್ಯಂ** ಇತ್ಯಾದಿ ಪ್ರಮಾಣಗ ಳಿಂದ ಈ ವಿಷಯವು ಸಿದ್ಧವಾಗುವದು. 2. ನನ್ನನ್ನು ಮನುಷ್ಯದೇಹದಂತೆ ದೇಹವುಳ್ಳವನೆಂದು ತಿಳಿಯುವವರು ಮೂರ್ಖರೆಂದು "ಅವಜಾನಂತಿ ಮಾಂ **ಮೂಢಾಃ**" ಇತ್ಯಾದಿ ಶ್ಲೋಕಗಳಲ್ಲಿ ಹೇಳಿರುತ್ತಾನೆ. 3. ಮತ್ತು ದುಃಖ ಕಾರಣಗಳಾದ ಅಪೂರ್ಣತೆಯು, ಅಲ್ಪಶಕ್ತಿಯು, ಗುಣಸಂಬಂಧವು ಕರ್ಮಬಂಧವು ಇತ್ಯಾದಿಗಳು ಪರಮಾತ್ಮನಲ್ಲಿಲ್ಲವೆಂದು **ನಾನವಾಪ್ತಮವಾಪ್ತವ್ಯಂ; ಅನಂತವೀ ರ್ಯಾಮಿತವಿಕ್ರಮಸ್ತ್ವಂ; ಗುಣೇಭ್ಯಶ್ಚ ಪರಂ ವೇತ್ತಿಮದ್ಭಾವಂ; ನಮಾಂ ಕರ್ಮಾಣಿಲಿಂಪಂತಿ** ಇತ್ಯಾದಿ ಅನೇಕ ವಾಕ್ಯಗಳಿಂದ ಸಿದ್ಧವಾಗುವದು. ಇದೇ ರೀತಿಯಲ್ಲಿ ಪರಮಾತ್ಮನಿಗೆ ಗಮನಾಗಮನಾದಿ **ಕ್ರಿಯೆಗಳು** ಉಂಟೋ ಇಲ್ಲವೋ ? ಉಂಟಾದರೆ ಆತನಿಗೆ ವಿಕಾರವನ್ನು ಒಪ್ಪಬೇಕಾಗುವದು. ಇಲ್ಲವೆಂದರೆ ಸೃಷ್ಟ್ಯಾದಿ ಕರ್ತೃತ್ವವು ಆತನಿಗೆ ಸಂಭವಿಸಲಾರವು; ಇತ್ಯಾದಿ ರೀತಿಯಲ್ಲಿ ಮಾಡುವ ದುಸ್ತರ್ಕ ಗಳೂ ಪರಾಹತವಾಗುವವು. "ಜನ್ಮಕರ್ಮಚಮೇದಿವ್ಯಂ" ಎಂಬ ಶ್ರೀ ಕೃಷ್ಣನ ವಾಙ್ಮಯವಾದ ಅಸ್ತ್ರವು ಸಕಲ ವಿಕಲ್ಪಸೈನ್ಯಗಳನ್ನೂ ನಿವಾರಣೆಮಾಡಿ ತನ್ನ ಪೂರ್ಣತ್ವವನ್ನು ರಕ್ಷಿಸಿಕೊಳ್ಳುವದರಲ್ಲಿ ಸಮರ್ಥವಾಗಿರುವದು. ಆದುದರಿಂದ

ಪರಮಾತ್ಮನು ನಿಷ್ಕ್ರಿಯನು, ನಿರ್ಗುಣನು ಎಂದು ಹೇಳುವ ಶ್ರುತಿಗಳಿಗೆ ಪ್ರಾಕೃತಕ್ರಿಯಾ ರಹಿತನು; ಪ್ರಾಕೃತಗುಣಶೂನ್ಯನು ಎಂದೇ ಅರ್ಥ ಮಾಡಬೇಕು. ಶ್ರೀ ಕೃಷ್ಣನು ಹೇಳುತ್ತಾನೆ.

(2) **ಸಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ।**
—(5. 25.)

ಆ ಯೋಗಿಯು ಬ್ರಹ್ಮನಲ್ಲಿ ಸದಾ ಸ್ಥಿತನಾಗಿ ( ಸದಾ ಆತನ ಜ್ಞಾನವುಳ್ಳವನಾಗಿ ) ಅಂತ್ಯದಲ್ಲಿ ನಿರ್ವಾಣಬ್ರಹ್ಮನನ್ನು ಅಂದರೆ ಪ್ರಾಕೃತಶರೀರರಹಿತನಾದ ಬ್ರಹ್ಮನನ್ನು ( ಶ್ರೀ ಕೃಷ್ಣನನ್ನು ) ಹೊಂದುತ್ತಾನೆ.

(3) **ಲಭಂತೇ ಬ್ರಹ್ಮನಿರ್ವಾಣಂ ಋಷಯಃ ಕ್ಷೀಣಕಲ್ಮಷಾಃ ।**
—(5. 25.)

ಜ್ಞಾನಿಗಳು ಸರ್ವಸಂಶಯ ವಿಪರ್ಯಯಗಳಿಂದ ಮತ್ತು ಪಾಪಗಳಿಂದ ರಹಿತರಾಗಿ ದೇಹತ್ಯಾಗಾನಂತರದಲ್ಲಿ ಪ್ರಾಕೃತಶರೀರರಹಿತನಾದ ಬ್ರಹ್ಮನನ್ನು (ನನ್ನನ್ನು) ಹೊಂದುತ್ತಾರೆ. ( ಬ್ರಹ್ಮನು ಸರ್ವಥಾ ಅಶರೀರನಾದರೆ ಅವನನ್ನು ಭಕ್ತರು ಹೊಂದುವದು ಹೇಗೆ ? ಅಶರೀರರಿಗೆ ಪ್ರಾಪ್ಯತ್ವವು ಕೂಡುವದಿಲ್ಲ ) ಪುನಃ ಕೃಷ್ಣನು ಹೇಳುತ್ತಾನೆ—

(4) **ಆದಿತ್ಯವರ್ಣಂ ತಮಸಃ ಪರಸ್ತಾತ್ ।**—(8. 9.)

ಸೂರ್ಯನಂತೆ **ವರ್ಣವುಳ್ಳ** ತಮಶ್ಶಬ್ದವಾಚ್ಯವಾದ, ಪ್ರಕೃತಿಯಿಂದ ಬಹು ವಿಲಕ್ಷಣನಾದ, ಪ್ರಕೃತಿಸಂಬಂಧರಹಿತನಾದ ಪರಮಪುರುಷನನ್ನು ( ನನ್ನನ್ನು ) ಮರಣಕಾಲದಲ್ಲಿ ಧ್ಯಾನಮಾಡುವವರು ಮುಕ್ತರಾಗುತ್ತಾರೆ. (ಸರ್ವಥಾ ಅಶರೀರಿಗೆ ವರ್ಣಗಳು ಎಲ್ಲಿಂದ ಬಂದವು ? ಆದುದರಿಂದ ಜಡಸಂಬಂಧರಹಿತನಾದರೂ ವಿಲಕ್ಷಣ ತೇಜೋರೂಪಿಯು ಎಂದು ಸಿದ್ಧವಾಗುವದು. ಹನ್ನೊಂದನೆಯ ಅಧ್ಯಾಯದಲ್ಲಿಯೂ ಕೂಡ “ ಪಶ್ಯಮೇಪಾರ್ಥರೂಪಾಣಿಶತಶೋಽಥಸಹಸ್ರಶಃ। ನಾನಾವಿಧಾನಿದಿವ್ಯಾನಿನಾನಾವರ್ಣಾಕೃತೀನಿಚ ” ಎಂದರೆ ಎಲೈ ಅರ್ಜುನನೇ ! ನಾನಾ ವಿಧವಾದ ಅಪ್ರಾಕೃತವಾದ ಲೋಕವಿಲಕ್ಷಣವಾದ ನಾನಾ ವರ್ಣಗಳು ಮತ್ತು ನಾನಾ ಆಕಾರಗಳುಳ್ಳ ನನ್ನ ಅನಂತರೂಪಗಳನ್ನು ನೋಡು ಎಂದು ಹೇಳಿರುತ್ತಾನೆ.)

(5) **ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥**—(13.12.)

ಪರಬ್ರಹ್ಮನು ( ಶ್ರೀ ಕೃಷ್ಣನು ) ಉತ್ಪತ್ತಿಯುಳ್ಳ ಪ್ರಾಕೃತದೇಹೇಂದ್ರಿಯ ಗುಣಕರ್ಮವಿಹೀನನು; ಅವನು ಕಾರ್ಯರೂಪ ಪ್ರಪಂಚದಲ್ಲೂ ಕಾರಣ (ಅವ್ಯಕ್ತಾದಿ) ರೂಪಪ್ರಪಂಚದಲ್ಲೂ ಸೇರಿದವನಲ್ಲ ಅಂದರೆ ಸರ್ವಥಾ ಪ್ರಕೃತಿನಿರ್ಮಿತವಲ್ಲದ ದೇಹ, ಇಂದ್ರಿಯ, ಗುಣ, ಕರ್ಮಾದಿಗಳುಳ್ಳವನೆಂದರ್ಥವು.

(6) ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯ ವಿವರ್ಜಿತಂ ।
ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ*ಗುಣಭೋಕ್ತೃಚ ॥
—(13. 14.)

ಪರಬ್ರಹ್ಮನು ಸಕಲ ಇಂದ್ರಿಯಗಳನ್ನೂ ಇಂದ್ರಿಯ ವಿಷಯಗಳನ್ನೂ ತಿಳಿದವನು (ಇದರಿಂದ ಅವನಿಗೂ ಇಂದ್ರಿಯಗಳಿರಬೇಕೆಂದು ಸಿದ್ಧವಾಯಿತು.) ಅವನು ಸರ್ವೇಂದ್ರಿಯ ವಿವರ್ಜಿತನು. ಅವನು ನಿಸ್ಸಂಗನು; ಯಾವುದರ ಸಂಬಂಧವೂ ಇಲ್ಲದವನು; ಅವನು ಸರ್ವವನ್ನೂ ಧರಿಸಿದವನು (ಇದರಿಂದ ಸರ್ವವಸ್ತುಗಳ ಸಂಬಂಧವುಂಟೆಂದು ಹೇಳಿದಹಾಗಾಯಿತು); ಅವನು ನಿರ್ಗುಣನು ಮತ್ತು ಅವನೇ (ಚ ಶಬ್ದಾರ್ಥವು) ಗುಣಪೂರ್ಣನು.

ಈ ವಾಕ್ಯದಲ್ಲಿ ನಾನು ಇಂದ್ರಿಯರಹಿತನು, ಇಂದ್ರಿಯವುಳ್ಳವನು; ನಾನು ಯಾವುದರ ಸಂಬಂಧವೂ ಇಲ್ಲದವನು, ಎಲ್ಲದರ ಸಂಬಂಧವನ್ನೂ ಹೊಂದಿದವನು; ಸರ್ವಗುಣರಹಿತನು ಮತ್ತು ಗುಣಪೂರ್ಣನು ಎಂದು ಒಬ್ಬನಿಗೇ ವಿರುದ್ಧ ಧರ್ಮಗಳು ಹೇಳಲ್ಪಟ್ಟಿರುತ್ತವೆ. ಆದುದರಿಂದ ಲೋಕಪ್ರಸಿದ್ಧವಾದ ದುಷ್ಟ ಇಂದ್ರಿಯಗಳಿಂದ ರಹಿತನು; ಲೋಕದಲ್ಲಿ ಜನರಿಗಿರುವಂತೆ ಆಯಾಸವನ್ನೂ ದೋಷವನ್ನೂ ಹೊಂದಿರುವ ಸಂಬಂಧವುಳ್ಳವನಲ್ಲ; ಲೋಕದಲ್ಲಿರುವ ಪ್ರಕೃತಿನಿರ್ಮಿತ ಗುಣರಹಿತನು ಎಂದು ಇಷ್ಟೇ ಅರ್ಥಮಾಡಬೇಕು. ಹಾಗೆ ಮಾಡದಿದ್ದರೆ ಸರ್ವಜ್ಞನಾದ ಶ್ರೀಕೃಷ್ಣನ ವಾಕ್ಯಗಳು ವ್ಯಾಹತೋಕ್ತಿಗಳಾಗಿ ಉನ್ಮತ್ತಪ್ರಲಾಪಕ್ಕೆ ಸದೃಶವಾಗುವವು.

**ಪ್ರಶ್ನೆ**—ಸ್ವರೂಪೇಣ ನಿರ್ಗುಣನು, ಈಗ ಸಗುಣಬ್ರಹ್ಮನು ಎಂದು ಯಾತಕ್ಕೆ ಅರ್ಥಮಾಡಬಾರದು ?

**ಉತ್ತರ**—ಈಗಲೂ ನಾನೇ ನಿರ್ಗುಣನು ನಾನೇ ಸಗುಣನು ಎಂದು ತೋರಿಸುವದಕ್ಕೆ ಕೃಷ್ಣನು "ಚ" ಎಂಬ ಸಮುಚ್ಚಯಾರ್ಥಕ ಶಬ್ದವನ್ನು ಪ್ರಯೋಗ ಮಾಡಿರುತ್ತಾನೆ ಮತ್ತು ನಿರ್ಗುಣ ಬ್ರಹ್ಮನು ಇದ್ದಾನೆ ಎಂದರೆ "ಇರೋಣ" ಎಂಬ ಗುಣವನ್ನು ಒಪ್ಪಿದಂತಾಗುವುದರಿಂದ ನಾನು ವಂಧ್ಯಾಪುತ್ರನು ಎಂಬ ಮಾತಿನಂತೆ ವಿರುದ್ಧೋಕ್ತಿಯಾಗುವದು. ಮತ್ತು ಅದು ಅಪ್ರಾಮಾಣಿಕ ಕಲ್ಪನೆಯೆನ್ನಿಸುವದು. ಆದುದರಿಂದ ವಿರೋಧಶಾಂತಿಯನ್ನು ನಿರವಕಾಶವಾದ ಪ್ರಮಾ

---

* ಈ ಶ್ಲೋಕ ವ್ಯಾಖ್ಯಾನದಲ್ಲಿ ಗುಣಾಃಸತ್ವರಜಸ್ತಮಾಂಸಿ ತೈಃರಹಿತಂ ನಿರ್ಗುಣಂ ಎಂದರೆ ಸತ್ವರಜಸ್ತಮೋಗುಣ ಶೂನ್ಯನಾದುದರಿಂದ ಪರಮಾತ್ಮನು ನಿರ್ಗುಣನು ಎಂದು ಶಂಕರಾಚಾರ್ಯರೂಕೂಡ ಅರ್ಥ ಮಾಡಿರುತ್ತಾರೆ. ಸರ್ವತ್ರ ಹೀಗೆಯೇ ತತ್ವ ವಿಮರ್ಶೆಮಾಡಿದ್ದರೆ ಚೆನ್ನಾಗಿತ್ತು.

ಣಾಂತರಾನುಸಾರವಾಗಿ ಮಾಡಬೇಕು. ಕೃಷ್ಣನೇ ಪರಬ್ರಹ್ಮನೆಂಬಲ್ಲಿ ಸ್ವಾತಂತ್ರ್ಯ ಮತ್ತು ಸರ್ವಕರ್ತೃತ್ವಾದಿ ಯುಕ್ತಿಗಳಿರುತ್ತವೆ. ಶ್ರೀ ಕೃಷ್ಣನು ಪ್ರಕೃತಿನಿರ್ಮಿತ ಶರೀರ, ಮತ್ತು ಗುಣಗಳಿಂದ ರಹಿತನು ಎಂಬಲ್ಲಿ ಅನೇಕ ಶ್ರುತಿ ಸ್ಮೃತಿ, ಇತಿಹಾಸ ಪುರಾಣಗಳ ವಾಕ್ಯಗಳಿರುತ್ತವೆ. ಗೀತೆಯಲ್ಲಿಯೂ ಕೂಡ ತನ್ನ ಲೋಕವಿಲಕ್ಷಣತ್ವ ವನ್ನು ತಾನೇ ಹೇಳಿಕೊಂಡಿರುತ್ತಾನೆ.

**ಜನ್ಮಕರ್ಮ ಚ ಮೇ ದಿವ್ಯಮೇವಂಯೋವೇತ್ತಿ ತತ್ವತಃ ।**

**..........................ಮಾಮೇತಿಸೋಽರ್ಜುನ ॥** ನನ್ನ ಜನ್ಮಕರ್ಮಗಳು ಲೋಕ ವಿಲಕ್ಷಣಗಳೆಂದು ತಿಳಿಯುವವನೇ ಮುಕ್ತನಾಗುತ್ತಾನೆ.

**ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ ।**
**ಪರಂಭಾವಮಜಾನಂತೋ ಮಮಭೂತ ಮಹೇಶ್ವರಂ ॥**

ಮೂಢರು ನಾನು ಮನುಷ್ಯಶರೀರದಂತೆ ಲೌಕಿಕ ಶರೀರವುಳ್ಳವನೆಂದು ತಿಳಿದು ನನ್ನನ್ನು ಅವಮಾನಮಾಡುತ್ತಾರೆ. ( ಅಂದರೆ ಎಲ್ಲರಂತೆ ಒಬ್ಬ ಸಾಮಾನ್ಯ ಪುರುಷನೆಂದು ತಿಳಿಯುತ್ತಾರೆ). ಅವರು ಅನಾದಿನಿತ್ಯವಾದ, ಪೂರ್ಣಗುಣಭರಿತವಾದ, ಸರ್ವೋತ್ತಮವಾದ ನನ್ನ ಸ್ವರೂಪವನ್ನು ತಿಳಿದವರಲ್ಲ. ಹನ್ನೊಂದನೇಯ ಅಧ್ಯಾಯದಲ್ಲಿಯೂ ಇಂಥ ರೂಪಗಳನ್ನೇ ಅರ್ಜುನನು ನೋಡಿರುತ್ತಾನೆ.

(7) **ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಯಮವ್ಯಯಃ ।**
—13. 31.)

ಹೇ ಕೌಂತೇಯ ! ಉತ್ಪತ್ತಿರಹಿತನಾದುದರಿಂದ (ನಾಶಕ್ಕೆ ಕಾರಣವಾದ) **ಪ್ರಾಕೃತಗುಣರಹಿತನಾದುದರಿಂದ** ಪರಮಾತ್ಮನು (ನಾನು) ಅವ್ಯಯನು ಎಂದರೆ ಚತುರ್ವಿಧನಾಶರಹಿತನು.

(8) 1. **ಸತ್ವಂ ರಜಸ್ತಮಇತಿ ಗುಣಾಃ ಪ್ರಕೃತಿಸಂಭವಾಃ ।**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಂ ॥**
(—14. 5.)

ಸತ್ವರಜಸ್ತಮಗಳೆಂಬ ಮೂರು ಗುಣಗಳೂ ಪ್ರಕೃತಿ ಜನ್ಯವಾದುವುಗಳು. ಇವು ಸ್ವರೂಪೇಣ ಅವ್ಯಯನಾದ **ದೇಹಿಯನ್ನು** (ಪ್ರಾಕೃತ ದೇಹವುಳ್ಳ ಜೀವನನ್ನು ) ದೇಹದಲ್ಲಿ ಬಂಧಿಸುತ್ತವೆ.

2. **ಪುರುಷ: ಪ್ರಕೃತಿಸ್ಥೋಹಿ ಭುಂಕ್ತೆ ಪ್ರಕೃತಿಜಾನ್ಗುಣಾನ್ ।**
**ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥**
—(13. 21.)

ಜೀವನು ಪ್ರಕೃತಿನಿರ್ಮಿತಶರೀರದಲ್ಲಿ ಸ್ಥಿತನಾಗಿ ಪ್ರಕೃತಿಜನ್ಯವಾದ ಸುಖ ದುಃಖಾದಿಗಳನ್ನು ಭೋಗ ಮಾಡುತ್ತಾನೆ. ಈ ಜೀವನಿಗೆ ( ದೇವಋಷ್ಯಾದಿ ) ಉತ್ತಮ, ಅಥವಾ ( ರಾಕ್ಷಸ, ಪಿಶಾಚ, ನಾಯಿ, ಕುರಿ, ಕೋಳಿ ಮುಂತಾದ ) ಅಧಮಯೋನಿಗಳು ಪ್ರಾಪ್ತವಾಗುವದಕ್ಕೆ ಗುಣಸಂಗವೇ ಕಾರಣವು.

ಕೃಷ್ಣೋಪಾಸನೆಯ ಪ್ರಭಾವದಿಂದ ಗುಣಸಂಗದಿಂದ ಬಿಡಲ್ಪಟ್ಟ ಜೀವನು ಮುಕ್ತನಾಗುವನೆಂದೂ ಹೇಳುತ್ತಾನೆ.

3. **ಗುಣಾನೇತಾನತೀತ್ಯತ್ರೀನ್‌ದೇಹೀ ದೇಹಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತ**
**ಮಶ್ನುತೇ ॥** —(14. 20.)

ಶರೀರಿಯಾದ ಜೀವನು ದೇಹೋತ್ಪತ್ತಿಗೆ ಕಾರಣಗಳಾದ ತ್ರಿಗುಣಗಳನ್ನು ಅತಿಕ್ರಮಿಸಿದರೇನೇ ಜನ್ಮ ಮೃತ್ಯು ಜರಾ ದುಃಖರೂಪವಾದ ಸಂಸಾರದಿಂದ ಮುಕ್ತನಾಗಿ ಪರಬ್ರಹ್ಮನನ್ನು ಹೊಂದುತ್ತಾನೆ. ಹೀಗೆ **ಸರ್ವಜೀವರೂ** ಗುಣ ಬದ್ಧರೆಂದು ಹೇಳಿ ಪರಮಾತ್ಮನು (ಶ್ರೀ ಕೃಷ್ಣನು) ಮಾತ್ರ ಗುಣಸಂಬಂಧರಹಿತ ನೆಂದು ಹೇಳುತ್ತಾನೆ.—

4. **ನಾನ್ಯಂಗುಣೇಭ್ಯಃ ಕರ್ತಾರಂ ಯದಾದ್ರಷ್ಟಾನುಪಶ್ಯತಿ ।**
**ಗುಣೇಭ್ಯಶ್ಚಪರಂವೇತ್ತಿಮದ್ಭಾವಂಸೋಽಧಿಗಚ್ಛತಿ ॥**
—(14. 19.)

ಜೀವನು ಯಾವಾಗ ಗುಣಗಳಿಗಿಂತ ಬೇರೆ ಪರಿಣಾಮಕಾರಣಗಳನ್ನು ತಿಳಿಯುವದಿಲ್ಲವೋ ಮತ್ತು ಗುಣಗಳಿಗಿಂತ ಅನ್ಯನಾದ ವಿಲಕ್ಷಣನೂ ಸ್ವತಂತ್ರನೂ ಆದ ಪರಮಾತ್ಮನನ್ನು ತಿಳಿಯುತ್ತಾನೆಯೋ ಆಗ ಆ ಜೀವನು ನನ್ನನ್ನು ಹೊಂದು ತ್ತಾನೆ (ಮುಕ್ತನಾಗುತ್ತಾನೆ); ಎಂದು ಹೇಳಿರುತ್ತಾನೆ. ಇದರಿಂದ ಗುಣಸಂಬಂಧ ರಾಹಿತ್ಯವು ಶ್ರೀಕೃಷ್ಣನಿಗೆ ಒಬ್ಬನಿಗೇ ಎಂದು ಸಿದ್ಧವಾಗುವದು. ಕಿಂಚ ಯಾವನ ಭಜಕರಿಗೇ ಗುಣತ್ರಯಗಳು ನಿವೃತ್ತವಾಗುವವೋ ಅಂಥ ಪರಮ ಪುರುಷನು ಸ್ವತಃ ಗುಣಸಂಬಂಧರಹಿತನೆಂದು ಕೈಮುತ್ಯನ್ಯಾಯದಿಂದ ಸಿದ್ಧವಾಗುವದು.

(9) **ಮಾಂಚಯೋಽವ್ಯಭಿಚಾರೇಣ ಭಕ್ತಿಯೋಗೇನಸೇವತೇ ॥**
**ಸಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯಕಲ್ಪತೇ ॥**
—(14. 26.)

ಯಾವಾತನು ನಿರಂತರ ಭಕ್ತಿಯಿಂದ ನನ್ನನ್ನು ಉಪಾಸನೆ ಮಾಡುತ್ತಾ ನೆಯೋ ಅವನು ಈ ಗುಣತ್ರಯಗಳಿಂದ ರಹಿತನಾಗಿ ಮುಕ್ತನಾಗುವದಕ್ಕೆ ಶಕ್ತ ನಾಗುತ್ತಾನೆ.

**17.** ನಿರ್ಗುಣತ್ವವೆಂಬ ಧರ್ಮವು ಹೇಗೆ ಸರ್ವೋತ್ತಮತ್ವಕ್ಕೆ ಸಾಧಕವೋ

ಹಾಗೆಯೇ **ಕರ್ಮಬಂಧರಾಹಿತ್ಯವೂ** "ಸಂಭೋಗಪ್ರಾಪ್ತಿರಿತಿಚೇನ್ನ ವೈಶೇಷ್ಯಾತ್" ಇತ್ಯಾದಿ ಸೂತ್ರಗಳಲ್ಲಿ ಹೇಳಿರುವಂತೆ ಶ್ರೀ ಕೃಷ್ಣನ ಸರ್ವೋತ್ತಮತ್ವವನ್ನು ಸ್ಥಾಪಿಸುವದರಲ್ಲಿ ಸಮರ್ಥವಾದುದು. ಬ್ರಹ್ಮಾದಿ ಸರ್ವಜೀವರೂ ಸತ್ಕರ್ಮದಿಂದ ಪುಣ್ಯವನ್ನೂ ದುಷ್ಕರ್ಮದಿಂದ ಪಾಪವನ್ನೂ ಹೊಂದುತ್ತಿರುತ್ತಾರೆ. ಶ್ರೀ ಕೃಷ್ಣನು ಸ್ವತಂತ್ರನು ಮತ್ತು ಕರ್ಮಾಧ್ಯಕ್ಷನು. ಆತನಿಗೆ ಪುಣ್ಯ ಪಾಪಗಳ ಲೇಪವಿಲ್ಲ. ಇತರರು ಕರ್ಮದಲ್ಲಿ ಅಧಿಕಾರಿಗಳು.

(1) 1. **ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ |**
**ಮಾಕರ್ಮಫಲಹೇತುರ್ಭೂರ್ಮಾತೇ ಸಂಗೋಽಸ್ತ್ವಕರ್ಮಣಿ** || —(2. 47.)

ಎಲೈ ಅರ್ಜುನನೇ ! ನಿನಗೂ ಮತ್ತು ನಿನ್ನಂತಹ ಜ್ಞಾನಿಗಳಿಗೂ ಕರ್ಮಾಚರಣೆಯಲ್ಲಿಯೇ ಅಧಿಕಾರವು. ಕರ್ಮಫಲವನ್ನು ಕೋರುವದರಲ್ಲಿ ನಿನಗೆ ಅಧಿಕಾರವಿಲ್ಲ (ಸ್ವಾತಂತ್ರ್ಯವಿಲ್ಲದಿರುವದರಿಂದ). ಕರ್ಮಫಲವನ್ನು ಉದ್ದೇಶ ಮಾಡಿ ನೀನು ಕರ್ಮ ಮಾಡಬೇಡ. ನಿನಗೆ ಕರ್ಮಪರಿತ್ಯಾಗದಲ್ಲಿ ಸ್ನೇಹಬೇಡ.

2. **ನಿಯತಂ ಕುರು ಕರ್ಮ ತ್ವಂ ಕರ್ಮಜ್ಯಾಯೋಹ್ಯಕರ್ಮಣಃ |**
—(3. 8.)

ನೀನು ವಿಧ್ಯುಕ್ತಕರ್ಮವನ್ನು ಮಾಡು. ಕರ್ಮಾಚರಣೆಯು ಕರ್ಮ ಬಿಡುವದಕ್ಕಿಂತ ಶ್ರೇಷ್ಠವು.

3. **ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮಕರ್ತುಮಿಹಾರ್ಹಸಿ |**
—(16. 24.)

ಶಾಸ್ತ್ರವಿಧಿಯನ್ನು ತಿಳಿದು ನೀನು ಸತ್ಕರ್ಮವನ್ನು ಆಚರಿಸು.

4. **ಯಜ್ಞದಾನತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ |**
**ಯಜ್ಞೋದಾನಂ ತಪಶ್ಚೈವಪಾವನಾನಿ ಮನೀಷಿಣಾಂ** || (18.5)

ಯಜ್ಞದಾನತಪೋರೂಪವಾದ ಸತ್ಕರ್ಮವು ಅವಶ್ಯವಾಗಿ ಅನುಷ್ಠೇಯವು. ಯಜ್ಞದಾನ ತಪಸ್ಸುಗಳು ಜ್ಞಾನಿಗಳಿಗೂ ಶೋಧಕಪಾವಿತ್ರ್ಯಕಾರಣಗಳಾಗಿವೆ; ಎಂದು ಅರ್ಜುನನೇ ಮೊದಲಾದ ಸಕಲ ಜ್ಞಾನಿಗಳೂ ಮತ್ತು ಅಜ್ಞಾನಿಗಳೂ ಸಹ ಕರ್ಮವನ್ನು ಮಾಡಬೇಕೆಂದು ಹೇಳಿರುತ್ತಾನೆ.

5. **ಯದಹಂಕಾರಮಾಶ್ರಿತ್ಯನಯೋತ್ಸ್ಯ ಇತಿ ಮನ್ಯಸೇ |**
**ಮಿಥ್ಯೈಷವ್ಯವಸಾಯಸ್ತೇ ಪ್ರಕೃತಿಸ್ತ್ವಾಂನಿಯೋಕ್ಷ್ಯತಿ |**
**ಸ್ವಭಾವಜೇನಕೌಂತೇಯನಿಬದ್ಧಸ್ಸ್ವೇನಕರ್ಮಣಾ |**
**ಕರ್ತುಂ ನೇಚ್ಛಸಿ ಯನ್ಮೋಹಾತ್ಕರಿಷ್ಯಸ್ಯವಶೋಽಪಿತತ್ |**
—(18. 59-60)

ನೀನು ಸ್ವಾತಂತ್ರ್ಯಾಭಿಮಾನದಿಂದ ಯುದ್ಧ ಮಾಡುವದಿಲ್ಲವೆಂದು ತಿಳಿದರೆ ನಿನ್ನ ನಿಶ್ಚಯವು ವ್ಯರ್ಥವೇ ಆಗುವದು. ಯಾತಕ್ಕೆಂದರೆ ಪ್ರಕೃತಿಯು

(ಈಶ್ವರೇಚ್ಛೆಯು; ಸತ್ವಾದಿಗುಣನಿಯಾಮಕಳಾದ ಚೇತನಪ್ರಕೃತಿಯು) ನಿನ್ನನ್ನು ಬಲಾತ್ಕಾರವಾಗಿ **ಯುದ್ಧಕರ್ಮ**ದಲ್ಲಿ ಪ್ರೇರಿಸುತ್ತದೆ.

ಹೇ ಕೌಂತೇಯ! ಪೂರ್ವಾರ್ಜಿತಕರ್ಮರೂಪವಾದ ಬಂಧದಿಂದ ಯುಕ್ತನಾದ ನೀನು ಯುದ್ಧಕರ್ಮವನ್ನು ಮಾಡುವದಿಲ್ಲವೆಂದು ಬಂಧುಗಳಲ್ಲಿ ಮೋಹದಿಂದ ಇಚ್ಛಿಸಿದರೂ ಬಲಾತ್ಕಾರವಾಗಿ ಅವಶನಾಗಿ (ಅಂದರೆ ಈಶ್ವರಾಧೀನನಾಗಿ) ಅದೇ ಕರ್ಮವನ್ನು ಮಾಡುವವನಾಗುತ್ತೀಯೆ.

ಇದರಿಂದ ಸರ್ವಚೇತನರೂ ಕರ್ಮಬಂಧದಿಂದ ಯುಕ್ತರಾಗಿ ಸ್ವತಂತ್ರನಾದ ಪರಮಾತ್ಮನ ನಿಯಮನ ವ್ಯಾಪಾರಕ್ಕೆ ಅಧೀನರಾಗಿರುವರೆಂದು ನಿಶ್ಚಿತವಾಗುವದು.

ಪರಮಾತ್ಮನಿಗೆ ಹೀಗೆ ಅವಶ್ಯವಾಗಿ ಮಾಡಲ್ಪಡಬೇಕಾದ ಕರ್ಮವಿಲ್ಲ. ಅವನು ಸ್ವತಂತ್ರನು. ಅವನ ಜಗತ್ಸರ್ಜನಾದಿ ವ್ಯಾಪಾರಗಳು ಅವನ ಸ್ವಭಾವದಿಂದಲೇ ನಡೆದಿರುತ್ತವೆ. ಆದುದರಿಂದ ಅವನು ಕರ್ಮಬಂಧನಕ್ಕೆ ಸಿಕ್ಕುವವನಲ್ಲ.

(2) **ನಮೇಪಾರ್ಥಾಸ್ತಿ ಕರ್ತವ್ಯಂ ತ್ರಿಷುಲೋಕೇಷುಕಿಂಚನ ।**
**ನಾನವಾಪ್ತಮವಾಪ್ತವ್ಯಂ**............(3. 22.)

ಅರ್ಜುನ! ನಾನು ಮತ್ತೊಬ್ಬರ ನಿರ್ಬಂಧಕ್ಕೆ ವಶನಾಗಿ ಯಾವುದಾದರೂ ಪ್ರಯೋಜನವನ್ನು ಉದ್ದೇಶ ಮಾಡಿ ಮಾಡಬೇಕಾದ ಒಂದು ಕರ್ಮವು ಮೂರು ಲೋಕಗಳಲ್ಲಿಯೂ ಇಲ್ಲ. ಯಾತಕ್ಕೆಂದರೆ ನಾನು ಹೊಂದದೆ ಇರತಕ್ಕ ಪ್ರಯೋಜನಗಳು ಯಾವವೂ ಇಲ್ಲ. ನಾನು ಪೂರ್ಣಲಾಭನು ಎಂದು ಭಾವವು. ಹೀಗೆ ತನಗೆ ಕರ್ಮಬಂಧರಾಹಿತ್ಯದಲ್ಲಿ ತಾನು ಪೂರ್ಣಸುಖನಾಗಿರುವದೇ ಒಂದು ಕಾರಣವೆಂದು ಯುಕ್ತಿಯನ್ನೂ ಹೇಳಿರುತ್ತಾನೆ.

ಯುಕ್ತ್ಯಂತರದಿಂದಲೂ ಭಗವಂತನಿಗೆ ಕರ್ಮಬಂಧವು ಇಲ್ಲವೆಂದು ಸಿದ್ಧವಾಗುವದು.

(3) **ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿಮಾನವಾಃ ।**
**ಶ್ರದ್ಧಾವಂತೋಽನುಸೂಯಂತೋ ಮುಚ್ಯಂತೇತೇಽಪಿ**
**ಕರ್ಮಭಿಃ ॥** —(3-31.)

ಸರ್ವ ಸತ್ಕರ್ಮಗಳನ್ನೂ ಆಚರಿಸಿ ನನ್ನಲ್ಲಿಯೇ ಅರ್ಪಿಸಬೇಕೆಂಬ ನನ್ನ ಮತವನ್ನು ಯಾರು ಸರ್ವದಾ ಆಚರಿಸುತ್ತಾರೆಯೋ ಅವರು (ಜ್ಞಾನದ್ವಾರಾ) ಕರ್ಮಗಳಿಂದ ಮುಕ್ತರಾಗುವರು. ಯಾವನಲ್ಲಿ ಕರ್ಮಸಮರ್ಪಣೆ ಮಾಡುವವರೂ ಸಹ ಮುಕ್ತರಾಗುವರೋ ಅಂಥ ಕರ್ಮಬಂಧನವನ್ನು ಪರಿಹರಿಸುವ ಪರಮಪುರುಷನು ಕರ್ಮಬಂಧನಕ್ಕೆ ಸಿಕ್ಕಿದವನಲ್ಲವೆಂದು ಹೇಳಬೇಕಾದುದೇನು ?

**(4) ನಮಾಂ ಕರ್ಮಾಣಿಲಿಂಪಂತಿ ನ ಮೇ ಕರ್ಮಫಲೇಸ್ಪೃಹಾ।**
**ಇತಿಮಾಂ ಯೋಽಭಿಜಾನಾತಿ ಕರ್ಮಭಿರ್ನಸ ಬಧ್ಯತೇ। (41-4)**

ಕರ್ಮಗಳು ನನಗೆ ಬಂಧಕವಾಗಲಾರವು; (ನಾನು ಮಾಡುವ ಜಗತ್ಸೃಷ್ಟಿ ಸಂಹಾರಾದಿ ಕರ್ಮಗಳಿಂದ ಪುಣ್ಯಪಾಪಗಳುಂಟಾಗಿ ನನಗೆ ಸುಖದುಃಖಗಳು ಪ್ರಾಪ್ತವಾಗಲಾರವು ಎಂದರ್ಥವು;) ನಾನು ಕರ್ಮಫಲದಲ್ಲಿ ಅಪೇಕ್ಷಾರಹಿತನಾಗಿಯೂ, ಸ್ವತಂತ್ರನಾಗಿಯೂ, ಪೂರ್ಣಾನಂದನಾಗಿಯೂ ಇರುವೆನು. ಹೀಗೆ (ನಾನು ಕರ್ಮಬದ್ಧನಲ್ಲವೆಂದು) ತಿಳಿದವನೂ ಕೂಡ (ಜ್ಞಾನವನ್ನು ಹೊಂದಿ) ಕರ್ಮಗಳಿಂದ ಮುಕ್ತನಾಗುತ್ತಾನೆ.

**(5) ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ।**
**ಉದಾಸೀನವದಾಸೀನ ಮಸಕ್ತಂತೇಷು ಕರ್ಮಸು ॥**

—(9. 9)

ಹೇ ಧನಂಜಯ! ನನ್ನ ಜಗತ್ಸರ್ಜನಾದಿ ಕರ್ಮಗಳು ನನ್ನನ್ನು ಬಂಧನ ಮಾಡುವದಿಲ್ಲ. ಯಾತಕ್ಕೆಂದರೆ ಆ ಕರ್ಮಗಳಲ್ಲಿ ಯಾವ ಫಲಾಪೇಕ್ಷೆಯೂ ಇಲ್ಲದೆ ಆಸಕ್ತಿರಹಿತನಾಗಿ ವಸ್ತುತಃ ಉದಾಸೀನನಲ್ಲದಿದ್ದರೂ ಉದಾಸೀನನೋಪಾದಿಯಲ್ಲಿ ಇರುತ್ತೇನೆ.

18. **ಸರ್ವಸತ್ಕರ್ಮಫಲಭೋಕ್ತೃತ್ವವು** ಪರಬ್ರಹ್ಮನ ಅಸಾಧಾರಣ ಧರ್ಮವೆಂದು ವೇದದಲ್ಲಿಯೂ "ಗುಹಾಂ ಪ್ರವಿಷ್ಟಾವಾತ್ಮಾನೌಹಿತದ್ದರ್ಶನಾತ್" ಇತ್ಯಾದಿ ಬ್ರಹ್ಮಸೂತ್ರಗಳಲ್ಲಿಯೂ ನಿರ್ಣೀತವಾಗಿರುವದು. ಶ್ರೀ ಕೃಷ್ಣನು ಆ ಲಕ್ಷಣವು ತನ್ನಲ್ಲಿಯೇ ಉಂಟೆಂದು ಹೇಳುತ್ತಾನೆ.

**(1) ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ।**
**ನಿರಾಶೀ ರ್ನಿರ್ಮಮೋ ಭೂತ್ವಾ ಯುಧ್ಯಸ್ವವಿಗತಜ್ವರಃ॥**

—(3. 30.)

ಸಕಲ ವಿಧ್ಯುಕ್ತಕರ್ಮಗಳನ್ನೂ ನನ್ನಲ್ಲಿ ಅರ್ಪಿಸಿ ನಾನೇ ಸರ್ವೋತ್ತಮನೆಂದು ತಿಳಿದು ನಿರ್ಭಯನಾಗಿ ಯುದ್ಧ ಮಾಡು.

**(2) ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್।**
**ಯತ್ತಪಸ್ಯಸಿ ಕೌಂತೇಯತತ್ಕುರುಷ್ವಮದರ್ಪಣಂ।**

—(9. 27.)

ಸರ್ವ ಕರ್ಮಗಳನ್ನೂ ನನ್ನಲ್ಲಿ ಅರ್ಪಿಸು ಎಂಬ ಈ ವಿಧಿ ವಾಕ್ಯಗಳ ಬಲದಿಂದ ಶ್ರೀ ಕೃಷ್ಣನು ಸರ್ವ ಕರ್ಮಫಲಗಳನ್ನೂ ಸ್ವೀಕಾರ ಮಾಡುವವನೆಂದು ನಿಶ್ಚಿತವಾಗುವದು. ಮತ್ತು ಕಂಠತಃ ಹಾಗೆಯೇ ಹೇಳುತ್ತಾನೆ :—

**(3) ಭೋಕ್ತಾರಂ ಯಜ್ಞತಪಸಾಂ....ಜ್ಞಾತ್ವಾಮಾಂಶಾಂತಿ ಮೃಚ್ಛತಿ ॥** —(5. 29.)

ಅಧಿಕಾರಿಯು, ಜ್ಯೋತಿಷ್ಟೋಮಾದಿ ಯಾಗಗಳು ಮತ್ತು ಕೃಚ್ಛ್ರಚಾಂದ್ರಾಯಣಾದಿತಪಸ್ಸು ಇವುಗಳ ಫಲಭೋಕ್ತೃನಾದ ನನ್ನನ್ನು (ಶ್ರೀ ಕೃಷ್ಣನನ್ನು) ಉಪಾಸನೆ ಮಾಡಿ ಮುಕ್ತಿಯನ್ನು ಹೊಂದುತ್ತಾನೆ.

**(4) ಅಧಿಯಜ್ಞೋಽಹಮೇವಾತ್ರದೇಹೇ ।** —(8. 4.)

ಸಕಲ ಜೀವರುಗಳ ದೇಹದಲ್ಲಿದ್ದು ಯಜ್ಞಕ್ಕೆ ಪ್ರವರ್ತಕನಾಗಿ ಯಜ್ಞಫಲ ಭೋಕ್ತೃವೂ ಆಗಿರುವವನು ನಾನೇ.

**(5) ಅಹಂಹಿಸರ್ವಯಜ್ಞಾನಾಂ ಭೋಕ್ತಾಚಪ್ರಭುರೇವಚ ।** —(9. 24.)

ದ್ರವ್ಯಯಜ್ಞ, ತಪೋಯಜ್ಞ, ಮತ್ತು ಯೋಗಯಜ್ಞರೂಪಗಳಾದ ಸರ್ವ ಯಜ್ಞಗಳ ಫಲಭೋಕ್ತೃವೂ ಯಜ್ಞಗಳಿಗೆ ಪ್ರವರ್ತಕನೂ ನಾನೇ.

ಇಂಥ ಕರ್ಮಫಲಭೋಗದಿಂದ ಪರಮಾತ್ಮನಿಗೆ ಯಾವ ಆನಂದಾತಿಶಯವೂ ಇರುವದಿಲ್ಲ. ಆತನು ಪೂರ್ಣಾನಂದನು.

**19. ಸರ್ವತ್ರಸಮತ್ವ** ವೆಂಬ ಧರ್ಮವು ಪರಬ್ರಹ್ಮನಿಗೆ ಮಾತ್ರವೇ ಇರುವದೆಂದು "ನಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರಹಿ" ಇತ್ಯಾದಿ ಸೂತ್ರಗಳಲ್ಲಿ ಸೂತ್ರಕಾರರು ನಿರ್ಣಯ ಮಾಡಿರುತ್ತಾರೆ. ಶ್ರೀ ಕೃಷ್ಣನು ತನ್ನಲ್ಲಿ ಈ ಅಸಾಧಾರಣಧರ್ಮವಿರುವದೆಂದು ನಿರೂಪಿಸುತ್ತಾನೆ.

**(1) ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿಹಸ್ತಿನಿ ।**
**ಶುನಿಚೈವ ಶ್ವಪಾಕೇಚ ಪಂಡಿತಾಃಸಮದರ್ಶಿನಃ ॥** —(5. 18.)
**ನಿರ್ದೋಷಂಹಿಸಮಂ ಬ್ರಹ್ಮ.** —(5. 19.)

ಪಂಡಿತರು ವಿದ್ಯಾವಿನಯಸಂಪನ್ನನಾದ ಬ್ರಾಹ್ಮಣನಲ್ಲಿ, ಗೋವಿನಲ್ಲಿ, ಗಜದಲ್ಲಿ, ನಾಯಿಯಲ್ಲಿ, ಚಂಡಾಲನಲ್ಲಿ ಈ ರೀತಿ ವಿಷಮಸ್ಥಳಗಳಲ್ಲಿರುವ ಪರಮಾತ್ಮನು (ಶ್ರೀ ಕೃಷ್ಣನು) ನಿರ್ದೋಷತ್ವವಿಷಯದಲ್ಲಿ ತಾರತಮ್ಯರಹಿತನು; ಎಂದರೆ ಈ ವಿಷಮಾಧಿಷ್ಠಾನಗಳಲ್ಲಿರುವ ಪರಮಾತ್ಮನಿಗೆ ಸ್ಥಾನಭೇದಪ್ರಯುಕ್ತವಾಗಿ ಗುಣಭೇದವು ಇರುವುದಿಲ್ಲ; ಸರ್ವತ್ರ ನಿರ್ದೋಷನಾಗಿಯೇ ಇರುವನು ಎಂದು ತಿಳಿಯುತ್ತಾರೆ.

**(2) ಸಮಬುದ್ಧಿರ್ವಿಶಿಷ್ಯತೇ** —(6. 9.)

ಸುಹೃದಾದಿ ಅನೇಕ ಅಧಿಷ್ಠಾನಗಳಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನು (ಶ್ರೀ ಕೃಷ್ಣನು) ಸ್ವಲ್ಪವೂ ಭೇದವಿಲ್ಲದೆ ಆನಂದಪರಿಪೂರ್ಣನಾಗಿಯೇ ಇರುವನು ಎಂದು ತಿಳಿಯುವವನು ಜ್ಞಾನಿಯು.

**(3) ಸರ್ವಭೂತಸ್ಥಿತಂಯೋಮಾಂಭಜತ್ಯೇಕತ್ವಮಾಸ್ಥಿತಃ ।**
**........ಸಯೋಗೀಮಯಿವರ್ತತೇ ॥ —(6. 30.)**

ಸರ್ವಭೂತಗಳಲ್ಲಿಯೂ ಸ್ಥಿತನಾಗಿರುವ ನನ್ನನ್ನು ಸರ್ವಧಾ (ಜ್ಞಾನಾನಂದ ಗುಣಕ್ರಿಯಾದಿಗಳಲ್ಲಿ) ಅಭಿನ್ನನಾಗಿರುವನೆಂದು ಧ್ಯಾನ ಮಾಡುವ ಯೋಗಿಯು ನನ್ನ ಭಕ್ತನು.

**(4) ಈಕ್ಷತೇ ಯೋಗಯುಕ್ತಾತ್ಮಾಸರ್ವತ್ರಸಮದರ್ಶನಃ ।**
**—(6. 29.)**

ಧ್ಯಾನೋಪಾಯದಲ್ಲಿ ನಿರತನಾದವನು ಬ್ರಹ್ಮಾದಿ ತೃಣಾಂತ ಜೀವರಲ್ಲಿರುವ ಭಗವಂತನನ್ನು ( ಶ್ರೀ ಕೃಷ್ಣನನ್ನು ) ಐಶ್ವರ್ಯಾದಿ ಗುಣಗಳಿಂದ ಸಮನೆಂದು ತಿಳಿಯುವನು.

**(5) ಅವಿಭಕ್ತಂಚಭೂತೇಷು ವಿಭಕ್ತಮಿವಚಸ್ಥಿತಂ । —(13. 17.)**

ಪರಬ್ರಹ್ಮನು (ಶ್ರೀ ಕೃಷ್ಣನು) ನಾನಾ ವಿಧವಾದ ಪ್ರಾಣಿಗಳಲ್ಲಿ ಅಭಿನ್ನನಾಗಿಯೇ ಇದ್ದು ಅಜ್ಞಾನಿಗಳಿಗೆ ಮಾತ್ರ ಭೇದವುಳ್ಳವನಂತೆ ತೋರುವನು.

**(6) ಸಮಂಹಿ ಸರ್ವಭೂತೇಷು ತಿಷ್ಠಂತಂಪರಮೇಶ್ವರಂ ।**
**ವಿನಶ್ಯತ್ಸ್ವವಿನಶ್ಯಂತಂ ಯಃಪಶ್ಯತಿ ಸಪಶ್ಯತಿ ॥ —(13. 17.)**

ನ್ಯೂನಾಧಿಕ ಭಾವದಿಂದ ಇರುವ ಬ್ರಹ್ಮಾದಿ ತೃಣಾಂತರಾದ ನಾನಾ ವಿಧ ಪ್ರಾಣಿಗಳಲ್ಲಿ ಸ್ಥಿತನಾಗಿರುವ ಅಚಿಂತ್ಯಶಕ್ತಿಯುಳ್ಳ ಶ್ರೀ ಪರಮಾತ್ಮನನ್ನು ( ನನ್ನನ್ನು ) ಸರ್ವಥಾ ಭೇದರಹಿತನು (ನ್ಯೂನಾಧಿಕಭಾವರಹಿತನು; ಸರ್ವತ್ರ ನಿರ್ದೋಷಗುಣಪೂರ್ಣನಾಗಿರುವವನು ); ಮತ್ತು ಜನನಮರಣಾದಿ ನಾನಾ ದುಃಖವುಳ್ಳ ಪ್ರಾಣಿಗಳಲ್ಲಿದ್ದರೂ ದುಃಖಾದಿದೋಷಶೂನ್ಯನು ಎಂದು ತಿಳಿಯುವವನು ಜ್ಞಾನಿಯು.

**(7) ಸಮಂಪಶ್ಯನ್ಹಿ ಸರ್ವತ್ರಸಮವಸ್ಥಿತಮೀಶ್ವರಂ ।**
**ನ ಹಿನಸ್ತ್ಯಾತ್ಮನಾತ್ಮಾನಂ ತತೋಯಾತಿಪರಾಂಗತಿಂ ॥**
**(13. 29.)**

ಬ್ರಹ್ಮಾದಿ ತೃಣಾಂತ ಸರ್ವ ಪ್ರಾಣಿಗಳಲ್ಲಿ ನಿರ್ದೋಷನಾಗಿಯೂ ಜ್ಞಾನಾನಂದಪೂರ್ಣನಾಗಿಯೂ ಸ್ಥಿತನಾಗಿರುವ ಪರಮಾತ್ಮನನ್ನು (ಶ್ರೀ ಕೃಷ್ಣನನ್ನು) ಸಮನಾಗಿ (ತಾರತಮ್ಯರಹಿತನು, ಸರ್ವಥಾ ಅಭಿನ್ನನು ಎಂದು) ತಿಳಿಯುವವನು ತನ್ನನ್ನು ನರಕಾದ್ಯನರ್ಥಗಳಿಗೆ ಭಾಗಿಯಾಗಿ ಮಾಡಿಕೊಳ್ಳುವದಿಲ್ಲ. ಮತ್ತು ಮುಕ್ತಿಯನ್ನು ಹೊಂದುತ್ತಾನೆ.

(8) **ಯದಾಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।**
**ಬ್ರಹ್ಮಸಂಪದ್ಯತೇ ತದಾ ॥** —(13 31.)

ದೇವದಾನವಾದಿ ರೂಪೇಣ ನಾನಾ ಪ್ರಕಾರವಾಗಿ ವಿಭಿನ್ನರಾದ ಪ್ರಾಣಿಗಳು ಸರ್ವತ್ರ ಭೇದರಹಿತನಾದ ಒಬ್ಬನೇ ಪರಮಾತ್ಮನಲ್ಲಿ (ಶ್ರೀ ಕೃಷ್ಣನಲ್ಲಿ) ಆಶ್ರಿತ ವಾಗಿರುವುವೆಂದು ತಿಳಿದರೆ ಆಗ ಅಧಿಕಾರಿಯು ಪರಬ್ರಹ್ಮನನ್ನು ಹೊಂದುವನು.

20. **ಪ್ರತ್ಯೇಕಂ ಸರ್ವೇಂದ್ರಿಯಕಾರ್ಯಕಾರಿ ವಿಲಕ್ಷಣ ದೇಹೇಂದ್ರಿಯಾದಿಮತ್ವವು** ಬ್ರಹ್ಮಾದಿಗಳಲ್ಲಿ ಅನತಿವ್ಯಾಪ್ತವಾದ ಪರಬ್ರಹ್ಮ ಮಾತ್ರ ವೃತ್ತಿಯಾದ ಧರ್ಮವು. ಪರಮಾತ್ಮನ ಯಾವ ಒಂದು ಇಂದ್ರಿಯವೂ ಇತರ ಸರ್ವೇಂದ್ರಿಯಾದಿಗಳ ಕಾರ್ಯವನ್ನು ಮಾಡುವದರಲ್ಲಿ ಸಮರ್ಥವಾಗಿರುವು ದೆಂದರ್ಥವು. ಇದೂ ಶ್ರೀ ಕೃಷ್ಣನಲ್ಲಿ ಕಂಡು ಬರುವದು. ಕೃಷ್ಣನು ಹೇಳುತ್ತಾನೆ.

(1) **ಮಮಾತ್ಮಾ ಭೂತಭಾವನಃ ।** —(9. 5.)
ನನ್ನ ದೇಹವು ಪ್ರಾಣಿಗಳ ಸೃಷ್ಟಿ ಮಾಡುವದರಲ್ಲಿ ಸಮರ್ಥವಾದುದು.

(2) **ಅನೇಕಬಾಹೂದರ ವಕ್ತ್ರನೇತ್ರಂ ಪಶ್ಯಾಮಿತ್ವಾಂ ಸರ್ವತೋಽನಂತರೂಪಂ ॥** —(3. 14.)

ಇದು ಅರ್ಜುನನ ಸ್ತುತಿಯು. ಅನಂತ ಬಾಹುಗಳು, ಉದರಗಳು, ಮುಖ ಗಳು ಮತ್ತು ನೇತ್ರಗಳುಳ್ಳ ಮತ್ತು ಒಂದೊಂದು ರೂಪದಲ್ಲೂ ಅನಂತರೂಪ ಗಳುಳ್ಳಂಥ ಅನಂತರೂಪಗಳುಳ್ಳ ನಿನ್ನನ್ನು ನೋಡುತ್ತೇನೆ.

(3) **ಸರ್ವತಃ ಪಾಣಿಪಾದಂತತ್ಸರ್ವತೋಽಕ್ಷಿ ಶಿರೋಮುಖಂ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯತಿಷ್ಠತಿ ॥**
—(3. 14.)

ಪರಬ್ರಹ್ಮನು ( ಶ್ರೀ ಕೃಷ್ಣನು) ಸರ್ವಾವಯವಗಳಲ್ಲಿಯೂ ಹಸ್ತಪಾದ ಗಳ ಶಕ್ತಿಯುಳ್ಳವನು; ಸರ್ವಾಯವಗಳಿಂದಲೂ ಚಕ್ಷುಸ್ಸು, ಶಿರಸ್ಸು, ಮುಖವು ಇವುಗಳು ಮಾಡುವ ವ್ಯಾಪಾರಗಳನ್ನು ಮಾಡುವವನು; ಸರ್ವಾವಯವಗಳಲ್ಲಿ ಶ್ರೋತ್ರೇಂದ್ರಿಯಾದಿ ಶಕ್ತಿಯುಳ್ಳವನು. ಸರ್ವವನ್ನೂ ವ್ಯಾಪಿಸಿಕೊಂಡು ಇರುತ್ತಾನೆ.

21. **ಮುಕ್ತಿಹೇತುಭೂತ ಅಂತಕಾಲೀನಸ್ಮೃತಿ ವಿಷಯತ್ವವು** ಪರಬ್ರಹ್ಮನಿಗೇ ಎಂದು ವೇದಾಂತದಲ್ಲಿ ಅದೃಶ್ಯತ್ವಾಧಿಕರಣದಲ್ಲಿ ಸುನಿಶ್ಚಿತ ವಾಗಿರುವದು. ಮರಣ ಕಾಲದಲ್ಲಿ ಯಾರ ಸ್ಮರಣೆಯನ್ನು ಮಾಡಿದರೆ ಪುನರಾವೃತ್ತಿ ರಹಿತವಾದ ಮೋಕ್ಷವು ದೊರೆಯುವದೋ ಅವನೇ ಸರ್ವೋತ್ತಮನು. ಅವನು ಯಾರು ? ಶ್ರೀ ಕೃಷ್ಣನು ನಾನೇ ಎಂದು ಹೇಳುತ್ತಾನೆ.

**(1) ಏಷಾಬ್ರಾಹ್ಮೀಸ್ಥಿತಿಃ ಪಾರ್ಥನೈನಾಂ ಪ್ರಾಪ್ಯವಿಮುಹ್ಯತಿ ।**
**ಸ್ಥಿತ್ವಾಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥** (2. 72.)

ಪೂರ್ವೋಕ್ತರೀತಿಯಲ್ಲಿ ಸರ್ವಕಾಮರಹಿತವಾಗಿ ಭಗವದುಪಾಸನೆಯನ್ನು ಮಾಡುವದು ಬ್ರಹ್ಮಜ್ಞಾನಿಯ ಲಕ್ಷಣರೂಪವಾದ ಸ್ಥಿತಿಯು. ಈ ಸ್ಥಿತಿಯನ್ನು ಹೊಂದಿದವನು ಸಂಸಾರತಾಪವನ್ನು ಹೊಂದುವದಿಲ್ಲ. ದೇಹತ್ಯಾಗಕಾಲದಲ್ಲಿ ಇಂಥ ಭಗವದನುಸ್ಮೃತಿ ರೂಪ ಸ್ಥಿತಿಯಲ್ಲಿದ್ದವನಾದರೆ ಪ್ರಾಕೃತ ಶರೀರ ರಹಿತನಾದ ಬ್ರಹ್ಮನನ್ನು (ನನ್ನನ್ನು) ಹೊಂದುವನು.

**(2) ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।**
**ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥**
—(7. 30)

ವಿನಾಶಿಯಾದ ಸರ್ವಭಾವಗಳಲ್ಲಿಯೂ ಅಂತರ್ಗತನಾಗಿ ಹಿರಣ್ಯಗರ್ಭಾದಿ ಸರ್ವದೇವತಾಂತರ್ಗತನಾಗಿ, ಸರ್ವ ಯಜ್ಞಪ್ರವರ್ತಕನೂ ಫಲಭೋಕ್ತನೂ ಆದ ನನ್ನನ್ನು ತಿಳಿದು ದೇಹತ್ಯಾಗರೂಪವಾದ ಮರಣಕಾಲದಲ್ಲಿ ಯಾರು ನನ್ನನ್ನು ಧ್ಯಾನಮಾಡುವರೋ ಅವರೇ ಸಮಾಧಿಯುಕ್ತವಾದ ಮನಸ್ಸುಳ್ಳವರು.

**(3) ಅಂತಕಾಲೇಚ ಮಾಮೇವಸ್ಮರನ್ ಮುಕ್ತ್ವಾ ಕಲೇವರಂ ।**
**ಯಃ ಪ್ರಯಾತಿಸಮದ್ಭಾವಂ ಯಾತಿನಾಸ್ತ್ಯತ್ರಸಂಶಯಃ ॥**
—(8. 5.)

ಮೃತಿಕಾಲದಲ್ಲಿ ನನ್ನನ್ನೇ ಸ್ಮರಿಸುವವನಾಗಿ ದೇಹವನ್ನು ಪರಿತ್ಯಾಗ ಮಾಡಿ ಯಾವಾತನು ಪ್ರಯಾಣಮಾಡುತ್ತಾನೆಯೋ ಅವನು ನನ್ನಲ್ಲಿ (ನಿರ್ದುಃಖಾನಂದಾನುಭವಾತ್ಮಕವಾದ) ಸ್ಥಿತಿಯನ್ನು ಹೊಂದುತ್ತಾನೆ. (ಮುಕ್ತನಾಗುತ್ತಾನೆಂದರ್ಥವು). ಈ ವಿಷಯದಲ್ಲಿ ಸಂಶಯವಿಲ್ಲ.

**(4) ಓಮಿತ್ಯೇಕಾಕ್ಷರಂ ಬ್ರಹ್ಮವ್ಯಾಹರನ್ ಮಾಮನುಸ್ಮರನ್ ।**
**ಯಃ ಪ್ರಯಾತಿತ್ಯಜನ್ದೇಹಂ ಸಯಾತಿಪರಮಾಂಗತಿಂ ॥**
—(8. 13.)

ಪ್ರಣವವನ್ನು ಬಾಯಿಯಲ್ಲಿ ಉಚ್ಚಾರ ಮಾಡುತ್ತಾ ನನ್ನನ್ನು ಮನಸಾ ಧ್ಯಾನಮಾಡುತ್ತಾ ಯಾವಾತನು ದೇಹವನ್ನು ತ್ಯಾಗಮಾಡುತ್ತಾನೆಯೋ ಅವನು ಮುಕ್ತನಾಗುತ್ತಾನೆ.

ಯಾರ ಸ್ಮರಣೆಯಿಂದ ಮುಕ್ತನಾಗುತ್ತಾನೆಯೋ ಅವನು ಪರಬ್ರಹ್ಮನು ಎಂದರೆ ಸರ್ವೋತ್ತಮವಸ್ತುವೇ ಆಗಬೇಕೆಂದು ಈ ವಾಕ್ಯಗಳ ಫಲಿತಾಂಶವು.

22 **ಪರಮಾಕ್ಷರತ್ವವು** (ಅಕ್ಷರ ಶಬ್ದವಾಚ್ಯತ್ವವು) ಪರಬ್ರಹ್ಮನಾದ ವಿಷ್ಣುಮಾತ್ರ ನಿಷ್ಠವೆಂದು "ಅಕ್ಷರಮಂಬರಾಂತಧೃತೇಃ" ಇತ್ಯಾದಿ ವೇದಾಂತ ಸೂತ್ರಗಳಲ್ಲಿ ನಿರ್ಣಯಮಾಡಿರುತ್ತಾರೆ. ಶ್ರೀಕೃಷ್ಣನು ತಾನೇ ಮುಖ್ಯವಾಗಿ ಅಕ್ಷರಶಬ್ದವಾಚ್ಯನೆಂದು ಹೇಳಿರುವದರಿಂದ ಇದರಿಂದಲೂ ಆತನ ಸರ್ವೋತ್ತಮತ್ವವು ಸಿದ್ಧವಾಗುವದು.

ಅಕ್ಷರನೆಂದರೆ ನಾಶರಹಿತನೆಂದರ್ಥವು. ಅನಿತ್ಯತ್ವವು, ದೇಹಹಾನಿಯು ದುಃಖಪ್ರಾಪ್ತಿಯು ಮತ್ತು ಅಪೂರ್ಣತೆಯು ಎಂದು ನಾಶವು ನಾಲ್ಕು ಪ್ರಕಾರವಾಗಿರುವದೆಂದು ಶಾಸ್ತ್ರದಲ್ಲಿ ವರ್ಣಿಸುತ್ತಾರೆ. ಅಚ್ಯುತನಲ್ಲಿ ಈ ನಾಲ್ಕು ದೋಷಗಳೂ ಇಲ್ಲವಾದುದರಿಂದ ಆತನು ಅಕ್ಷರನೆನಿಸುವನು. **"ನತ್ವೇವಾಹಂ ಜಾತುನಾಸಂ"** ಇತ್ಯಾದಿ ಶ್ಲೋಕಗಳಿಂದ ತಾನು ಮತ್ತು ಸರ್ವ ಜೀವರೂ ನಿತ್ಯರೆಂದು ಶ್ರೀಕೃಷ್ಣನು ಹೇಳಿರುತ್ತಾನೆ. **"ದೇಹಿನೋ** ದೇಹಾಂತರ ಪ್ರಾಪ್ತಿಃ" ಎಂದು ಜೀವನಿಗೇ ದೇಹಹಾನಿರೂಪವಾದ ನಾಶವೇ ಹೊರತು ತನಗಿಲ್ಲವೆಂದು ಸೂಚಿಸುತ್ತಾನೆ.

**ಯಃ ಸಸರ್ವೇಷುಭೂತೇಷು ನಶ್ಯತ್ಸು ನ ವಿನಶ್ಯತಿ**—(8. 20.)

ಎಂಬ ಶ್ಲೋಕದಲ್ಲಿ ಮಹಾಪ್ರಳಯದಲ್ಲಿ ಸರ್ವಪ್ರಾಣಿಗಳೂ ದೇಹನಾಶವನ್ನು ಹೊಂದಿದರೂ ತನಗೆ ನಾಶವಿಲ್ಲವೆಂದು ಸ್ಪಷ್ಟವಾಗಿ ಹೇಳಿರುತ್ತಾನೆ, **"ನಾನವಾಪ್ತಮವಾಪ್ತವ್ಯಂ"** ಇತ್ಯಾದಿ ಶ್ಲೋಕಗಳಿಂದ ತನಗೆ ದುಃಖಕ್ಕೆ ಕಾರಣವೇ ಇಲ್ಲವೆಂದು ತೋರಿಸುತ್ತಾನೆ. **'ಮತ್ತಃಪರತರಂನಾನ್ಯತ್'** ಇತ್ಯಾದಿ ಶ್ಲೋಕಗಳಿಂದ ತನಗಿಂತ ಉತ್ತಮರಿಲ್ಲವೆಂದೂ ತಾನೇ ನಿರವಧಿಕನೆಂದೂ ಹೇಳಿರುತ್ತಾನೆ. ಆದುದರಿಂದ ದೇಹಹಾನಿರೂಪನಾಶವುಳ್ಳ ಜೀವರುಗಳು ಅಕ್ಷರವೆನಿಸಲಾರರು. ಯದ್ಯಪಿ ಸ್ವಯೋಗ್ಯಪೂರ್ಣಾನಂದಾನುಭವವುಳ್ಳ ಲಕ್ಷ್ಮೀದೇವಿಯು ಅಕ್ಷರಳೆನಿಸುವಳು. ಹದಿನೈದನೇಯ ಅಧ್ಯಾಯದಲ್ಲಿ ಶ್ರೀಕೃಷ್ಣನೂ ಸಹ "ಕೂಟಸ್ಥೋ ಅಕ್ಷರ ಉಚ್ಯತೇ" ಎಂದೂ ಲಕ್ಷ್ಮೀದೇವಿಗೂ ಅಕ್ಷರಶಬ್ದವಾಚ್ಯತ್ವವು ಉಂಟೆಂದು ಹೇಳಿರುತ್ತಾನೆ. ಆದರೂ ಲಕ್ಷ್ಮೀದೇವಿಯು ಅಸ್ವತಂತ್ರಳಾದುದರಿಂದ ಪರಮಾತ್ಮನ ಅನುಗ್ರಹದಿಂದ ಅಕ್ಷರಳೆನಿಸುವಳು. ಪರಮಾತ್ಮನಾದರೋ ಅನ್ಯನಿರಪೇಕ್ಷನಾಗಿ ಅಕ್ಷರನೆನಿಸುವನು. ಎಂಟನೇಯ ಅಧ್ಯಾಯದಲ್ಲಿ "ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃಪರಮಾಂಗತಿಂ । ಯಂಪ್ರಾಪ್ಯನನಿವರ್ತಂತೇ ತದ್ಧಾಮಪರಮಂಮಮ ॥ ಎಂಬಲ್ಲಿ ಶ್ರೀ ಕೃಷ್ಣನು "ಪುನರಾವೃತ್ತಿರಹಿತನಾದ ಮೋಕ್ಷಪ್ರದನಾದ ನಾನು ಅಕ್ಷರನೆನಿಸುವೆನು." ಎಂದು ಹೇಳಿರುವದರಿಂದ ಮುಖ್ಯವಾಗಿ ಅಕ್ಷರಶಬ್ದವಾಚ್ಯತ್ವವು ಮುಕ್ತಿಪ್ರದನಾದ ಶ್ರೀ ಕೃಷ್ಣನಿಗೇ ಸಲ್ಲುವದು.

ಕೆಲವು ಕಡೆ ಶಾಸ್ತ್ರದಲ್ಲಿ ಮುಕ್ತರನ್ನೂ ಲಕ್ಷ್ಮೀದೇವಿಯರನ್ನೂ ಅಕ್ಷರರೆಂದು ವ್ಯವಹರಿಸಿ ಅವರಿಗಿಂತಲೂ ಅಧಿಕನಾದ ಪರಮಾತ್ಮನನ್ನು ಪರಮಾಕ್ಷರನೆಂದು ನಿರ್ದೇಶಮಾಡಿರುತ್ತಾರೆ. ಪರಮಾಕ್ಷರತ್ವವು ಲಕ್ಷ್ಮ್ಯಾದಿ ಯಾವ ಚೇತನರಿಗೂ ಯಾವ ಕಾಲಕ್ಕೂ ಬರಲಾರದು.

(1) ಅಕ್ಷರಂ ಬ್ರಹ್ಮ ಪರಮಂ ||—(8 3.)

ಬ್ರಹ್ಮನು ಯಾರೆಂಬ ಪ್ರಶ್ನೆಗೆ ಇದು ಉತ್ತರವು. ಪರಮಾಕ್ಷರನು ಬ್ರಹ್ಮನು (ಶ್ರೀಕೃಷ್ಣನು) ಎಂದು ಸ್ಪಷ್ಟವಾದ ಉತ್ತರವು.

**(2) ಯದಕ್ಷರಂ ವೇದವಿದೋ ವದಂತಿ....ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ |—(8. 11.)**

ವೇದವೇತ್ತೃಗಳು ಯಾವ ಪರಬ್ರಹ್ಮನನ್ನು (ನನ್ನನ್ನು) ಅಕ್ಷರನೆಂದು ಕರೆಯುವರೋ....ಅಂಥವನ ಸ್ವರೂಪವನ್ನು ನಿನಗೆ ಹೇಳುತ್ತೇನೆ.

**(3) ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂಗತಿಮ್ |**
**ಯತ್ಪ್ರಾಪ್ಯನನಿವರ್ತಂತೇ ತದ್ಧಾಮ ಪರಮಂ ಮಮ ||**
**(8. 21.)**

ಅವ್ಯಕ್ತನಾಮಕ ಭಗವಂತನು ಅಕ್ಷರನೆನ್ನಿಸುವನು. ಅವನೇ ಪರಮ ಪ್ರಾಪ್ಯನು. ಯಾವನ ಪ್ರಾಪ್ತಿಯಾದ ನಂತರ ಪುನರಾವೃತ್ತಿರೂಪ ಸಂಸಾರವು ಇಲ್ಲವೋ ಅದು ನನ್ನ ಸ್ವರೂಪವು. ಅರ್ಜುನನೂ ಹಾಗೆಯೇ ನೋಡಿರುತ್ತಾನೆ.

**(4) ತ್ವಮಕ್ಷರಂ ಪರಮಂ ವೇದಿತವ್ಯಂ |—(11. 18).**

ನೀನು ಪರಮಾಕ್ಷರನೆಂದು ತಿಳಿಯಲ್ಪಡತಕ್ಕವನು.

**(5) ಅನಂತದೇವೇಶ ಜಗನ್ನಿವಾಸ ತ್ವಮಕ್ಷರಂ ಸದಸತ್ತತ್ಪರಂ ಯತ್ ||—(11. 17.)**

ಹೇ ಅನಂತ ! ದೇವೋತ್ತಮ ! ಜಗನ್ನಿವಾಸ ! ನೀನೇ **ಅಕ್ಷರನು;** ಕಾರ್ಯಕಾರಣರೂಪವಾದ ಸಮಸ್ತ ಪ್ರಪಂಚಕ್ಕೂ ವಿಲಕ್ಷಣನು ನೀನೇ.

23. **ಅವ್ಯಕ್ತತ್ವವು** ಸರ್ವೋತ್ತಮ ವಸ್ತುವಾದ ಪರಬ್ರಹ್ಮನ ಗುಣವೆಂದು "ಸೂಕ್ಷ್ಮಂತು ತದರ್ಹತ್ವಾತ್"; "ತದವ್ಯಕ್ತಮಾಹ ಹಿ" ಇತ್ಯಾದಿ ಬ್ರಹ್ಮಸೂತ್ರಗಳಲ್ಲಿ ನಿರ್ಣಯ ಮಾಡಿರುತ್ತಾರೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ತಾನೇ ಅವ್ಯಕ್ತನೆಂದು ಹೇಳಿರುವದರಿಂದ ಅವನು ಸರ್ವೋತ್ತಮನೆಂದು ಸಿದ್ಧವಾಗುವದು.

**ಪ್ರಶ್ನೆ**— ಸ್ವಾಮೀ ! ಅವ್ಯಕ್ತನು ಎಂದರೆ ವ್ಯಕ್ತನಲ್ಲ, ಜ್ಞಾನವಿಷಯನಲ್ಲ

ಅಜ್ಞೇಯನು ಎಂದು ಅರ್ಥವು. ಪರಬ್ರಹ್ಮನು ಅಜ್ಞೇಯನು ಎಂದಷ್ಟೇ ಅದ್ವೈತಿಗಳು ಹೇಳುತ್ತಾರೆ. ಅವರಿಗೂ ತಮಗೂ ಭೇದವೇನು ?

**ಉತ್ತರ**— ಅರ್ಜುನನ ಜ್ಞಾನಕ್ಕೆ ವಿಷಯನಾದ, ಭೀಷ್ಮಾದಿಗಳಿಂದ ಸ್ತುತ್ಯನಾದ ರಣರಂಗಸ್ಥನಾದ ಶ್ರೀಕೃಷ್ಣನು ನಾನು ಅಜ್ಞೇಯನು ಎಂದು **ಹೇಳಿಕೊಂಡರೆ** "ನಾನು ವಂಧ್ಯಾಪುತ್ರನು" ಎಂದು ಮಾತಾಡುವವನಂತೆ ವಿರುದ್ಧ ಭಾಷಿಯಾಗುವನು. ಸರ್ವಜ್ಞಚೂಡಾಮಣಿಯಾದ ಯದುನಾಥನ ಮಾತುಗಳು ಉನ್ಮತ್ತ ಪ್ರಲಾಪಗಳಲ್ಲ. ಆದುದರಿಂದ ಪ್ರಮಾಣಗಳಿಗೆ ವಿರೋಧ ಬರದಂತೆ ಪದಗಳಿಗೆ ಪ್ರಕರಣೋಚಿತವಾದ ಅರ್ಥವನ್ನು ಮಾಡಬೇಕು. ಅವ್ಯಕ್ತಶಬ್ದಾರ್ಥವು ಮೂರು ಪ್ರಕಾರವಾಗಿ ಶಾಸ್ತ್ರದಲ್ಲಿ ನಿರ್ಣೀತವಾಗಿರುವದು. (1) ಪರಮಾತ್ಮನು ಶಬ್ದಾದಿ ವಿಷಯಗಳಂತೆ ಪಂಚಜ್ಞಾನೇಂದ್ರಿಯಗಳಿಂದ ವೇದ್ಯನಾಗುವದಿಲ್ಲವಾದುದರಿಂದ ಅವ್ಯಕ್ತನೆನಿಸುವನು. ಆದುದರಿಂದಲೇ ಅವನಿಗೆ ಅಧೋಕ್ಷಜನೆಂದೂ ಹೆಸರು. (2) "ದೃಶ್ಯತೇತ್ವಗ್ರಯಾ ಬುದ್ಧ್ಯಾ" ಇತ್ಯಾದಿ ಶ್ರುತ್ಯನುಸಾರವಾಗಿ ದಿವ್ಯದೃಷ್ಟಿಗೆ (ಶ್ರವಣಾದಿಗಳಿಂದ ಸಂಸ್ಕೃತವಾದ ಮನಸ್ಸಿಗೆ) ಪರಮಾತ್ಮನು ವ್ಯಕ್ತನಾಗುವನು ಆದರೆ ದಿವ್ಯದೃಷ್ಟಿ ಮಾತ್ರದಿಂದಲೇ ಅವನನ್ನು ನೋಡುವದು ಅಸಾಧ್ಯವು. ಅವನೇ ತನ್ನ **ಪ್ರಸಾದದಿಂದ** ವ್ಯಕ್ತನಾದರೆ ಅವನನ್ನು ದಿವ್ಯ ಚಕ್ಷುಸ್ಸಿನಿಂದ ನೋಡಬಹುದು. ಅಧಿಕಾರಿಗಳ ಭಕ್ತಿನಿಮಿತ್ತವಾದ ಅವನ ಪ್ರಸಾದದಿಂದಲೇ ವ್ಯಕ್ತನಾಗುವ ಸ್ವಭಾವವುಳ್ಳವನಾದುದರಿಂದ ಅವನು ಅವ್ಯಕ್ತನೆನಿಸುವನು. (3) ಮತ್ತು ಪರಮಾತ್ಮನು ಪ್ರಸನ್ನನಾದರೂ ಅವನನ್ನು **ಸಾಕಲ್ಯೇನ** ತಿಳಿಯಲಾಗುವದಿಲ್ಲ. ಅವನ ಏಕದೇಶವೇ ಲಕ್ಷ್ಮೀಬ್ರಹ್ಮಾದಿ ತೃಣಾಂತ ಚೇತನರ ಜ್ಞಾನಕ್ಕೆ ವಿಷಯವಾಗಿರುವದು. ನಿರವಧಿಕಪರಿಪೂರ್ಣವಾದ ಅವನ ವೈಭವವು ಸಾಕಲ್ಯೇನ ಯಾರಿಗೂ ವ್ಯಕ್ತವಾಗುವದಿಲ್ಲವಾದುದರಿಂದಲೂ ಅವನು ಅವ್ಯಕ್ತನೆನ್ನಿಸುವನು. ಈ ಮೂರು ವಿಧವಾದ ಅವ್ಯಕ್ತತ್ವವೂ ಕೃಷ್ಣನಿಗೆ ಸಮಗ್ರವಾಗಿರುವದೆಂದು ಅವನ ವಾಕ್ಯಗಳಿಂದಲೇ ಸಿದ್ಧವಾಗುವದು.

**(1) ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇಯೋಗಮೈಶ್ವರಂ ॥**
(9. 4-5.)

ಚರಾಚರಾತ್ಮಕವಾದ ಈ ಸರ್ವಪ್ರಪಂಚವೂ ಸೂಕ್ಷ್ಮರೂಪಿಯಾದ ನನ್ನಿಂದ ವ್ಯಾಪ್ತವಾಗಿರುವದು. (ಹಾಗಿದ್ದರೆ ಘಟಾದಿ ಪದಾರ್ಥಗಳಂತೆ ಇಂದ್ರಿಯಗಳಿಗೆ ಏಕೆ ಗೋಚರನಾಗುವದಿಲ್ಲ ? ಅಥವಾ ದೇಹಾಂತರ್ಗತ ಶೀತೋಷ್ಣಗಳು ಗೋಚರವಾಗುವಂತೆ ಸ್ಪರ್ಶೇಂದ್ರಿಯಕ್ಕಾದರೂ ಏಕೆ ವಿಷಯನಾಗುವದಿಲ್ಲವೆಂದರೆ ಹೇಳುತ್ತಾನೆ.) ಸರ್ವಭೂತಗಳೂ ನನ್ನ ಸಂಬಂಧವನ್ನು ಹೊಂದಿ

ದ್ದರೂ ತ್ವಗಿಂದ್ರಿಯದಿಂದ ನನ್ನನ್ನು ತಿಳಿವು ನನ್ನ ಧರ್ಮಸಂಕ್ರಾತಿಯನ್ನು ಹೊಂದಿರುವದಿಲ್ಲ. ಇದಕ್ಕೆ ಕಾರಣವು ನನ್ನ ಈಶ್ವರಸಂಬಂಧಿಯಾದ ಯೋಗವು ಅಂದರೆ ಅಚಿಂತ್ಯಶಕ್ತಿಯು.

**(2) ಯಥಾಕಾಶ ಸ್ಥಿತೋ ನಿತ್ಯಂ ವಾಯುಸ್ಸರ್ವತ್ರಗೋ ಮಹಾನ್।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥**

—(9. 6.)

(ಭಗವಂತನು ಸರ್ವತ್ರವ್ಯಾಪ್ತನಾದರೂ ತ್ವಗಿಂದ್ರಿಯಾದಿಗಳಿಂದ ವೇದ್ಯನಾಗದಂತೆ ಪರಸ್ಪರ ಧರ್ಮಸಂಕ್ರಾಂತಿರಹಿತನಾಗಿರುವನು ಹೇಗೆಂಬುದರಲ್ಲಿ ಇದು ದೃಷ್ಟಾಂತವು)

ಆಕಾಶದಲ್ಲಿರುವ ಮಹಾವಾಯುವು ಸರ್ವತ್ರ ವ್ಯಾಪ್ತವಾಗಿದ್ದರೂ ಹೇಗೆ ಆಯಾಯಸ್ಥಳದ ಧರ್ಮಸಂಪರ್ಕವನ್ನು ಹೊಂದುವದಿಲ್ಲವೋ ಹಾಗೆಯೇ ಸರ್ವ ಪ್ರಾಣಿಗಳೂ ನನ್ನಲ್ಲಿಯೇ ಇದ್ದರೂ ನನ್ನ ಧರ್ಮಸಂಪರ್ಕರಹಿತವಾಗಿರುವವು ಎಂದು ತಿಳಿ.

**(3) ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ।**
**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ।**

—(7. 24–25.)

ಸ್ವಭಾವತಃ ಅವ್ಯಕ್ತಸ್ವರೂಪನಾದ ನನ್ನನ್ನು ವ್ಯಕ್ತನೆಂದು ವಿಪರೀತ ಜ್ಞಾನಿಗಳು ತಿಳಿಯುತ್ತಾರೆ. ನಾನು ನನ್ನ ಅಚಿಂತ್ಯಶಕ್ತಿಯಿಂದಲೂ ಪ್ರಕೃತಿಯಿಂದಲೂ ಆಚ್ಛಾದಿತನಾಗಿ ಸರ್ವಜನರ ಇಂದ್ರಿಯಜ್ಞಾನಕ್ಕೆ ವಿಷಯನಾಗುವದಿಲ್ಲ. ತೆರೆಯು ಮಧ್ಯೆ ಇದ್ದರೆ ತೆರೆಯಿಂದಾಚೆಯಲ್ಲಿನ ಪದಾರ್ಥ ಹೇಗೆ ಗೋಚರವಾಗುವದಿಲ್ಲವೋ ಹಾಗೆಯೇ ಅವಿದ್ಯಾರೂಪ ಪರೆಯಿಂದ ಸಹಿತರಾದ ಜೀವರು ನನ್ನ ಅಚಿಂತ್ಯಶಕ್ತಿಯಿಂದ ಅವ್ಯಕ್ತನಾದ ನನ್ನನ್ನು ತಿಳಿಯಲಾರರೆಂದು ಭಾವವು.

**(4) ಅವ್ಯಕ್ತೋಽಯಮಚಿಂತ್ಯೋಽಯಂ।** —(2. 25.)

(ಪರಮಾತ್ಮನು ಜೀವನ ಸಂಗಡ ಸದಾ ಇದ್ದರೂ) ಆವನು ಅದೃಶ್ಯನು. ದೇಹವುಳ್ಳವನಾಗಿ ಸರ್ವತ್ರ ಇರುವವನು ಹೇಗೆ ಅದೃಶ್ಯನೆಂದರೆ ಅವನು ಅಚಿಂತ್ಯನು ಎಂದರೆ ಅದ್ಭುತಶಕ್ತಿಯುಳ್ಳವನು.

**(5) ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್।**

(13. 16.)

ಅತಿಸೂಕ್ಷ್ಮನಾದುದರಿಂದ ಪರಬ್ರಹ್ಮನು ಇಂದ್ರಿಯಾಗೋಚರನು ಆತನು ದೂರದಲ್ಲಿಯೂ ಸಮೀಪದಲ್ಲಿಯೂ ಇರತಕ್ಕವನು.

(6) **ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂವಿಧೋದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ।**
**ಭಕ್ತ್ಯಾತ್ವನನ್ಯಯಾ ಶಕ್ಯಃ ಅಹಮೇವಂ ವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ವೇನ ಪ್ರವೇಷ್ಟುಂಚ ಪರಂತಪ ॥**
—(11. 54.)

ಅರ್ಜುನ ! ನನ್ನನ್ನು (ಭಕ್ತಿರಹಿತವಾದ) ವೇದಾರ್ಥಜ್ಞಾನದಿಂದಲಾಗಲೀ ತಪಸ್ಸಿನಿಂದಾಗಲೀ, ದಾನದಿಂದಾಗಲಿ, ಯಜ್ಞದಿಂದಾಗಲೀ ನೀನು ನೋಡಿ ದಂತೆ ನೋಡಲು ಸಾಧ್ಯವಾಗುವದಿಲ್ಲ. (ಹಾಗಾದರೆ ನೀನು ಯಾವ ಉಪಾಯ ದಿಂದ ಅಧಿಕಾರಿಗಳಿಗೆ ವ್ಯಕ್ತನಾಗುವಿ ಎಂದರೆ ಹೇಳುತ್ತಾನೆ:— ) ಅನನ್ಯಭಕ್ತಿ ಯಿಂದ ಅಪರಿಮಿತಮಹಿಮನಾದ ನನ್ನನ್ನು ತಿಳಿಯುವದಕ್ಕೂ, **ನೋಡುವು ದಕ್ಕೂ** ನಂತರ ಪ್ರವೇಶ ಮಾಡುವದಕ್ಕೂ ಶಕ್ಯವಾಗುವದು. ಭಕ್ತಿಯಿಂದ ಪ್ರಸನ್ನನಾಗಿ ಅವ್ಯಕ್ತನಾದ ಭಗವಂತನು ತನ್ನ ಸ್ವರೂಪವನ್ನು ವ್ಯಕ್ತ ಮಾಡುವ ನೆಂದು ಇದರಿಂದ ನಿಶ್ಚಿತವಾಗುವದು.

(7) **ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ವತಃ ।**
**ತತೋ ಮಾಂ ತತ್ವತೋ ಜ್ಞಾತ್ವಾ ವಿಶತೇ ತದನಂತರಂ ॥**
—(18. 55.)

ಭಕ್ತಿಯಿಂದ ನನ್ನ ಯಥಾರ್ಥಸ್ವರೂಪವನ್ನು ತಿಳಿದೇ ನನ್ನ ದರ್ಶನವನ್ನು ಹೊಂದಿ ನಂತರ ಮುಕ್ತನಾಗುವನೆಂದರ್ಥವು.

(8) **ಮತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ ॥** —(18. 62.)

ನನ್ನ ಪ್ರಸಾದದಿಂದಲೇ ಅತ್ಯುತ್ಕೃಷ್ಟವಾದ ಸಮಾಧಿಸುಖವನ್ನೂ ( ಅಪ ರೋಕ್ಷ ಜ್ಞಾನವನ್ನೂ ) ನಂತರ ಶಾಶ್ವತವಾದ ಮುಕ್ತಿಸ್ಥಾನವನ್ನೂ ಹೊಂದುವಿ.

ಭಗವಂತನು ಸಾಕಲ್ಯೇನ ಅಜ್ಞೇಯನೆಂಬುದನ್ನು ಅರ್ಜುನನೇ ಹೇಳಿರು ತ್ತಾನೆ.

(9) **ನಹಿ ತೇ ಭಗವನ್ವ್ಯಕ್ತಿಂ ವಿದುರ್ದೇವಾ ನದಾನವಾಃ ।**
**ಸ್ವಯಮೇವಾತ್ಮನಾತ್ಮಾನಂ ವೇತ್ಥತ್ವಂ ಪುರುಷೋತ್ತಮ ॥**
—(10. 14-15.)

ಹೇ ಭಗವನ್ ! ನಿನ್ನ ಸಾಮರ್ಥ್ಯಾತಿಶಯವನ್ನು ದೇವತೆಗಳಾಗಲೀ ( ಜ್ಞಾನಿಗಳೆಂದು ಪ್ರಸಿದ್ಧರಾದ ) ಪ್ರಹ್ಲಾದಾದಿದಾನವರಾಗಲೀ ತಿಳಿದವರಲ್ಲ. ನೀನೇ ನಿನ್ನ ಸಂಪೂರ್ಣ ಸಾಮರ್ಥ್ಯವನ್ನು ಮತ್ತೊಬ್ಬರ ಅಪೇಕ್ಷೆಯಿಲ್ಲದೆ ಸ್ವಸಾಮ ರ್ಥ್ಯದಿಂದ ತಿಳಿದಿರುತ್ತೀ.

(10) **ನಾಸ್ತ್ಯಂತೋ ವಿಸ್ತರಸ್ಯಮೇ** । —(10. 19.)

ಎಲೈ ಅರ್ಜುನನೇ ! ನನ್ನ ವಿಭೂತಿರೂಪಗಳಲ್ಲಿ ಕೆಲವನ್ನು ಮಾತ್ರ ನಿನಗೆ ಹೇಳುತ್ತೇನೆ. ಸಕಲವನ್ನೂ ಹೇಳಬೇಕಾದರೆ ಎಷ್ಟು ಹೇಳಿದರೂ ಪರಿಸಮಾಪ್ತಿ ಯಾಗಲಾರದು.

(11) **ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ** ।
**ಏಷತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ**
**ಮಯಾ** ॥ —(10. 40.)

ನನ್ನ ಅದ್ಭುತವಾದ ವಿಭೂತಿರೂಪಗಳಿಗೆ ಪರಿಸಮಾಪ್ತಿ ಇಲ್ಲ. ಈಗ ನಾನು ಹೇಳಿದ ವಿಭೂತಿರೂಪಗಳ ವಿಸ್ತಾರವಾದರೋ ಶೃಂಗಗ್ರಾಹಕತಯಾ ಸ್ವಲ್ಪ ಮಾತ್ರವು.

ಯದ್ಯಪಿ "ಯೇತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ"; "ಯೇ ಚಾಪ್ಯಕ್ಷರಮವ್ಯಕ್ತಂ" ಇತ್ಯಾದಿ ವಾಕ್ಯಗಳಲ್ಲಿ ಲಕ್ಷ್ಮೀದೇವಿಯರಿಗೂ ಅವ್ಯಕ್ತಶಬ್ದವಾಚ್ಯತ್ವವು ಉಂಟು ಎಂದು ಕಂಡು ಬರುವುದು. ಆದರೆ ಲಕ್ಷ್ಮೀ ದೇವಿಯು ಸರ್ವ ನಿಯಾಮಕನಾದ ಪರಮಾತ್ಮನಿಗೆ ಸರ್ವದಾ ವ್ಯಕ್ತಳಾಗಿಯೇ ಇರುವವಳಾದುದರಿಂದ ಅವನ ಅನುಗ್ರಹದಿಂದ ಆಕೆಯು ತನ್ನಿಂದ ನಿಯಮ್ಯರಾದ ಬ್ರಹ್ಮಾದಿ ಜೀವರಿಗೆ ಅವ್ಯಕ್ತಳಾಗಿರುವಳು. ಆದುದರಿಂದ ಮುಖ್ಯ ಅವ್ಯಕ್ತ ಶಬ್ದವಾಚ್ಯತ್ವವು ಸ್ವತಂತ್ರನಾದ ಶ್ರೀ ಕೃಷ್ಣನಿಗೇ ಸರಿ.

(12) **ಪರಸ್ತಸ್ಮಾತ್ತು ಭಾವೋಽನ್ಯೋಽ ವ್ಯಕ್ತೋಽವ್ಯಕ್ತಾತ್ಸನಾತನಃ** ।
—(8. 20.)

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಂ** ॥ –(8. 20.)

ಅವ್ಯಕ್ತನಾಮಕ ಭಗವಂತನು ವ್ಯಕ್ತವಾದ ಸರ್ವ ಪ್ರಾಣಿಗಳಿಗಿಂತಲೂ ಭಿನ್ನನು, ಸ್ವತಂತ್ರನು ಮತ್ತು ಉತ್ತಮನು. (ಆ ಅವ್ಯಕ್ತನು ಯಾರೆಂದರೆ ಹೇಳುತ್ತಾನೆ.— ) ಅಕ್ಷರನಾಗಿರುವ ಮತ್ತು ಯಾರನ್ನು (ಮುಕ್ತಿಯಲ್ಲಿ) ಪರಮ ಪ್ರಾಪ್ಯನೆಂದು ಹೇಳುವರೋ ಅವನೇ ಅವ್ಯಕ್ತನು. ಈ ವಾಕ್ಯಗಳಿಂದ ಮುಕ್ತಿ ಪ್ರದನಾದ ವಾಸುದೇವನೇ ಮುಖ್ಯತಃ ಅವ್ಯಕ್ತಶಬ್ದವಾಚ್ಯನೆಂದು ಸಿದ್ಧವಾಗುತ್ತದೆ.

**24. ಅಚಿಂತ್ಯಶಕ್ತಿಯು** "ಆತ್ಮನಿಚೈವಂ ವಿಚಿತ್ರಾಶ್ಚಹಿ"; "ಸರ್ವೋಪೇತಾಚತದ್ದರ್ಶನಾತ್" ಇತ್ಯಾದಿ ಬ್ರಹ್ಮಸೂತ್ರಗಳಲ್ಲಿ ಸರ್ವೋತ್ತಮನಾದ ಪರಬ್ರಹ್ಮಮಾತ್ರ ವೃತ್ತಿಯಾದ ಧರ್ಮವೆಂದು ವೇದವೇದಾಂತಗಳಲ್ಲಿ ನಿರೂಪಿಸಲ್ಪಟ್ಟಿದೆ.

ಅದ್ವೈತಮತದಲ್ಲಿ **“ ಅಘಟಿತಘಟನಾಪಟೀಯಸೀ ಸಾಚಾವಿದ್ಯಾ ”** ಎಂದು ಅವಿದ್ಯೆಗೇ ಅಘಟಿತಘಟನಾಸಾಮರ್ಥ್ಯರೂಪವಾದ ಅಚಿಂತ್ಯಶಕ್ತಿಯನ್ನು ಒಪ್ಪಿರುತ್ತಾರೆ. **ಜಡವಾದ** ಅವಿದ್ಯೆಗೆ ಇಂಥ ಅಚಿಂತ್ಯಶಕ್ತಿಯನ್ನು ಒಪ್ಪುವುದಾದರೆ ಬ್ರಹ್ಮನಿಗೆ ಜಡತ್ವವು; ಈಶ್ವರನಿಗೆ ವಿನಾಶವು; ಘಟಾದಿ ವಿನಾಶಿ ಪದಾರ್ಥಗಳಿಗೆ ನಿತ್ಯತ್ವವು ಮತ್ತು ಚೇತನತ್ವವು ಇವೇ ಮುಂತಾದ ಸಮಸ್ತ ಅಸಂಭಾವಿತ ಪ್ರಮೇಯಗಳನ್ನೂ ಒಪ್ಪಬೇಕಾಗುವುದರಿಂದ ಇದು ತತ್ವವಿಚಾರದ ದೌರ್ಬಲ್ಯಜನಿತ ಸ್ವಗೋಷ್ಠೀಜನ ಮನೋರಂಜಕವಾದ ಅಭಿಪ್ರಾಯವೇ ಹೊರತು ಶಾಸ್ತ್ರಾರ್ಥವಾಗಲಾರದು.

ಭಗವದ್ಗೀತೆಯ ವಾಕ್ಯಗಳಿಂದ ಶ್ರೀ ಕೃಷ್ಣನೇ ದೇವದುರ್ಜ್ಞೇಯವಾದ ಅದ್ಭುತ ಐಶ್ವರ್ಯವುಳ್ಳವನೆಂದು ಸಿದ್ಧವಾಗುವದು.

(1) **ಅವ್ಯಕ್ತೋಽಯಮಚಿಂತ್ಯೋಽಯಂ** । (2. 25.)

ಪರಬ್ರಹ್ಮನು ಅವ್ಯಕ್ತನು ಮತ್ತು ಅಚಿಂತ್ಯಾದ್ಭುತ ಶಕ್ತಿಯುಳ್ಳವನು.

(2) **ಆಶ್ಚರ್ಯವತ್ಪಶ್ಯತಿ ಕಶ್ಚಿದೇನ ಮಾಶ್ಚರ್ಯವದ್ವದತಿ ತಥೈವ ಚಾನ್ಯಃ** ।
**ಆಶ್ಚರ್ಯವಚ್ಚೈನಮನ್ಯಶ್ಶೃಣೋತಿ ಶ್ರುತ್ವಾಪ್ಯೇನಂ ವೇದ ನ ಚೈವಕಶ್ಚಿತ್** ॥ —(2. 29.)

ಸಾತ್ವಿಕಾಧಿಕಾರಿಯು (ಸರ್ವ ಸ್ವತಂತ್ರನಾದ) ಪರಮಾತ್ಮನನ್ನು ಅದ್ಭುತನನ್ನಾಗಿ ನೋಡುತ್ತಾನೆ. ಮತ್ತೊಬ್ಬನು ಇವನೇ ಅಸದೃಶನು ಅದ್ಭುತನು ಎಂದು ಹೇಳುತ್ತಾನೆ. ಮತ್ತೊಬ್ಬನು ಎಷ್ಟು ಶ್ರವಣ ಮಾಡಿದರೂ ಅವನ ಮಹಿಮೆಗೆ ಪರಿಸಮಾಪ್ತಿಯೇ ಇಲ್ಲದಿರುವದರಿಂದ ವಿಸ್ಮಿತನಾಗಿ ಶ್ರವಣ ಮಾಡುತ್ತಾನೆ. ಭಗವಂತನ ಮಾಹಾತ್ಮ್ಯೆಯನ್ನು ಎಷ್ಟು ಶ್ರವಣ ಮಾಡಿದರೂ ಅದ್ಭುತ ವಸ್ತುವಾದುದರಿಂದ ಸಾಕಲ್ಯದಿಂದ ತಿಳಿಯುವವನು ದುರ್ಲಭನು.

(3) **ಸರ್ವಸ್ಯಧಾತಾರಮಚಿಂತ್ಯರೂಪಂ** । (8. 9.)

ಪರಮಾತ್ಮನು (ನಾನು)........ಸಾಕಲ್ಯೇನ ತಿಳಿಯುವದಕ್ಕೆ ಅಶಕ್ಯವಾದ ರೂಪವುಳ್ಳವನು.

(2) **ಉಪದ್ರಷ್ಟಾಽನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ** । —(13. 23.)

ಪರಮಾತ್ಮನು ಸರ್ವಾಧಿಕನಾಗಿ ಸರ್ವವನ್ನೂ ನೋಡುವವನು....ಮಹಾಶಕ್ತಿಯುಳ್ಳವನು.

(5) **ಸಮಂ ಹಿ ಸರ್ವಭೂತೇಷು ತಿಷ್ಠಂತಂ ಪರಮೇಶ್ವರಂ ।**
**ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥** —(13. 28.)

ತಾರತಮ್ಯದಿಂದ ಯುಕ್ತರಾದ ಪ್ರಾಣಿಗಳಲ್ಲಿ ವಾಸ ಮಾಡುವ ಅಚಿಂತ್ಯ ಶಕ್ತಿಯುಳ್ಳ ಪರಮಾತ್ಮನನ್ನು ನ್ಯೂನಾಧಿಕಭಾವರಹಿತನೆಂದು ನಾಶ ಹೊಂದುವ ದೇಹಗಳಲ್ಲಿದ್ದರೂ ನಾಶರಹಿತನೆಂದೂ ತಿಳಿಯುವವನು ಜ್ಞಾನಿಯು.

ಈ ಶ್ಲೋಕದಲ್ಲಿ ಶ್ರೀ ಕೃಷ್ಣನು **"ಪರಮೇಶ್ವರಂ"** ಎಂಬ ಶಬ್ದದಿಂದ ತಾನು ಸ್ವಾಭಾವಿಕವಾದ ಅಚಿಂತ್ಯಶಕ್ತಿಯುಳ್ಳವನೆಂದು ಹೇಳಿ ಅದರ ಬಲದಿಂದಲೇ (1) ತಾರತಮ್ಯೋಪೇತರಾದ ಜೀವರಾಶಿಗಳಲ್ಲಿದ್ದರೂ ತಾನು ಸರ್ವತ್ರ ಪೂರ್ಣ ಗುಣನಾಗಿ ತಾರತಮ್ಯರಹಿತನೆಂದೂ (2) ತಾನು ವಾಸ ಮಾಡುವ ದೇಹಾದ್ಯಧಿಷ್ಠಾನಗಳು ನಾಶ ಹೊಂದಿದರೂ ತನಗೆ ನಾಶಾದಿಗಳು ಇಲ್ಲವೆಂದೂ ತನಗೆ ಅಚಿಂತ್ಯ ಶಕ್ತಿಯನ್ನು ಸಾಧಿಸುವ ಎರಡು ಯುಕ್ತಿಗಳನ್ನೂ ಹೇಳಿರುತ್ತಾನೆ. ಇನ್ನೂ ಕೆಲವು ಯುಕ್ತಿಗಳನ್ನು ಅಲ್ಲಲ್ಲಿ ಸೂಚಿಸಿರುತ್ತಾನೆ.

(6) **ದೂರಸ್ಥಂ ಚಾಂತಿಕೇ ತತ್** । —(13. 16.)

ಪರಮಾತ್ಮನು ಒಂದೇ .ರೂಪದಿಂದ ಒಂದೇ ಕಾಲದಲ್ಲಿ ಅತಿ ದೂರದಲ್ಲೂ ಅತಿ ಸಮೀಪದಲ್ಲೂ ಇರುತ್ತಾನೆ. ಇದು ಅಚಿಂತ್ಯಶಕ್ತಿಯ ವ್ಯಾಪಾರವು.

(7) **ನಾಯಂ ಭೂತ್ವಾ ಭವಿತಾ ವಾ ನ ಭೂಯಃ** । —(2. 20.)

ಪರಮಾತ್ಮನು ರಾಮಕೃಷ್ಣಾದಿರೂಪಗಳಿಂದ **ಪೂರ್ವದಲ್ಲಿ ಇರುವವನಾಗಿಯೇ** ರಾಮನು ಅವತರಿಸಿದನು, ಕೃಷ್ಣನು ಅವತರಿಸಿದನು ಎಂಬ ವ್ಯವಹಾರಕ್ಕೆ ವಿಷಯನಾಗುವನು. ವಸ್ತುತಃ ರಾಮರೂಪವೂ ಕೃಷ್ಣರೂಪವೂ ಅವತಾರ ಕಾಲಕ್ಕಿಂತ ಪೂರ್ವದಲ್ಲಿಯೇ ಅದೇ ರೂಪದಿಂದ ಇದ್ದವು ಎಂದು ತಾತ್ಪರ್ಯವು. ಅಚಿಂತ್ಯಶಕ್ತಿಯಿಲ್ಲದಿದ್ದರೆ ಇದು ಸಾಧ್ಯವಾಗಲಾರದು.

(8) **ಸರ್ವತಃ ಪಾಣಿಪಾದಂ** । —(13. 14.)

ಪರಮಾತ್ಮನು ಸರ್ವಾವಯವಗಳಲ್ಲಿಯೂ ಪಾಣಿಪಾದಗಳ ಶಕ್ತಿಯುಳ್ಳವನು. ಯಾವ ಒಂದು ಇಂದ್ರಿಯವೂ ಇತರ ಇಂದ್ರಿಯಗಳ ವ್ಯಾಪಾರ ಮಾಡುವದರಲ್ಲಿ ಸಮರ್ಥವಾದುದು. ಇದು ಅಚಿಂತ್ಯಶಕ್ತಿಯಿಂದಲೇ ಸಾಧ್ಯವು.

(9) **ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥**
—(15. 9.)

ಪೂರ್ಣಾನಂದನಾದ ಪರಮಾತ್ಮನು ಜೀವನ ಶ್ರೋತ್ರಾದಿ ಇಂದ್ರಿಯಗಳಲ್ಲಿ ಪ್ರವಿಷ್ಟನಾಗಿ ಜೀವಭುಕ್ತವಾದ ವಿಷಯಸುಖವನ್ನು ಮಾತ್ರ ಸ್ವೀಕರಿಸುತ್ತಾನೆ. ಆದರೂ ಅದರಿಂದ ಅವನ ಆನಂದಕ್ಕೆ ವೃದ್ಧ್ಯಾದಿಗಳು ಇಲ್ಲ. ಇದು ಅಚಿಂತ್ಯ ಶಕ್ತಿಪ್ರಯೋಜ್ಯ ವ್ಯಾಪಾರವು. ಶ್ರೀಮದಾಚಾರ್ಯರೂ ಕೂಡ **"ಪೂರ್ಣಾನಂದ ಮಯಸ್ಯಾಸ್ಯ ಚೇಷ್ಟಾ ನ ಜ್ಞಾಯತೇ ಕ್ವಚಿತ್"** ಎಂದು ಉದಾಹರಿಸಿರುತ್ತಾರೆ.

**(10) ಉತ್ಕ್ರಾಮಂತಂಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಂ ।**
**ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥**
**—15. 10.)**

(ಮರಣಕಾಲದಲ್ಲಿ) ಜೀವನನ್ನು ತೆಗೆದುಕೊಂಡು ಲೋಕಾಂತರಕ್ಕೆ ಪ್ರಯಾಣ ಮಾಡುವ ಮತ್ತು (ಸ್ಥಿತಿಕಾಲದಲ್ಲಿ) ಜೀವನಲ್ಲಿ ಸ್ಥಿತನಾಗಿರುವ **ಶುಭಮಾತ್ರವನ್ನು** ಭೋಗಿಸೇವ ಶ್ರೀಪರಮಾತ್ಮನನ್ನು ವಿಮೂಢರು ತಿಳಿಯಲಾರರು ಜ್ಞಾನಚಕ್ಷುಸ್ಸುಳ್ಳವರು ತಿಳಿಯುವರು. ಇದರಿಂದಲೂ ಪರಮಾತ್ಮನಿಗೆ ಅಚಿಂತ್ಯಶಕ್ತಿಯು ಸಿದ್ಧಿಸುವದು.

**(11) ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ।**
**—(15. 17.)**

ಪರಮಾತ್ಮನು ಮೂರು ಲೋಕಗಳನ್ನೂ ಪ್ರವೇಶಿಸಿ ಪ್ರಪಂಚವು ನಾಶ ಹೊಂದಿದರೂ ತಾನು ನಾಶರಹಿತನಾಗಿ ಅಚಿಂತ್ಯಶಕ್ತಿಯಿಂದ ತಾನೊಬ್ಬನೇ ಸರ್ವವನ್ನೂ ಧರಿಸಿರುತ್ತಾನೆ.

**(12) ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ।**
**—(10. 42.)**

ನಾನು ನನ್ನ ಏಕಾಂಶದಿಂದ ಈ ಸರ್ವ ಜಗತ್ತನ್ನೂ ವ್ಯಾಪಿಸಿಕೊಂಡು ಇರುತ್ತೇನೆ.

ಜ್ಞಾನಚಕ್ಷುಸ್ಸುಳ್ಳವರು ತನ್ನನ್ನು ತಿಳಿಯುವರೆಂದು ಶ್ರೀ ಕೃಷ್ಣನು ಹೇಳಿರುತ್ತಾನೆ. ಜ್ಞಾನಚಕ್ಷುಸ್ಸಿನಿಂದ ಸಹಿತನಾದ ಅರ್ಜುನನೇ ಶ್ರೀ ಕೃಷ್ಣನು ಅಚಿಂತ್ಯಾದ್ಭುತ ಶಕ್ತಿಯುಳ್ಳವನೆಂಬುದರಲ್ಲಿ ಸಾಕ್ಷಿಯಾಗಿರುತ್ತಾನೆ. ಅರ್ಜುನನು ಕೃಷ್ಣನ ದಿವ್ಯರೂಪವನ್ನು ತೋರಿಸಬೇಕೆಂದು ಪ್ರಾರ್ಥಿಸುವಾಗಲೇ ಆತನ ಅಚಿಂತ್ಯ ಶಕ್ತಿಯನ್ನು ತಿಳಿದಿರುತ್ತಾನೆ.

**(13) ಏವಮೇತದ ಥಾತ್ಥತ್ವ ಮಾತ್ಮಾನಂ ಪರಮೇಶ್ವರ ।**
**ದ್ರಷ್ಟು ಮಿಚ್ಛಾಮಿತೇ ರೂಪಮೈಶ್ವರಂ ಪುರುಷೋತ್ತಮ ॥**

ಹೇ ಪುರುಷೋತ್ತಮ ! ಹೇ ಪರಮೇಶ್ವರ ! ಅಚಿಂತ್ಯಾದ್ಭುತವಾದ ಮಹಾ ಶಕ್ತಿಯುಳ್ಳವನೇ ! ನೀನು ಹೇಳಿದ ನಿನ್ನ ಮಹಿಮೆಯೆಲ್ಲವೂ ಸತ್ಯವೇ ಸರಿ. **ಐಶ್ವರಂ ರೂಪಂ** ಎಂದರೆ ಅಚಿಂತ್ಯಶಕ್ತಿಕವಾದ ನಿನ್ನ ರೂಪವನ್ನು ನೋಡಬೇಕೆಂದು ಅಪೇಕ್ಷಿಸುತ್ತೇನೆ. ವಿಶ್ವರೂಪವು ಐಂದ್ರಜಾಲಿಕ ಪ್ರದರ್ಶನದಂತೆ ವಿಷ್ಣು ರಚಿತ ಮಾಯಾವಿಶಾಲವೆಂದು ಕೆಲವರು ವಿಮೂಢರು ಹೇಳುತ್ತಾರೆ. ಅರ್ಜುನನು ನಿನ್ನ ಮಾಯಾರೂಪವನ್ನು ತೋರಿಸು ಎಂದು ಹೇಳಿದ್ದರೆ ಆ ಪ್ರಾರ್ಥನೆಗೆ ಅನುಗುಣ ವಾಗಿ ತೋರಿಸಿದ ರೂಪವು ಮಾಯಿಕವೆಂದು ಕಥಂಚಿತ್ ಹೇಳಬಹುದಾಗಿತ್ತು. ಪ್ರಶ್ನೆ ಮಾಡುವಾಗಲೇ ನೀನು ಮಹೇಶ್ವರನು; ನಿನ್ನ ಐಶ್ವರ್ಯರೂಪವನ್ನು ತೋರಿಸು ಎಂದು ಕೇಳಿರುತ್ತಾನೆ. ಮತ್ತು **"ಯೋಗೇಶ್ವರ....ದರ್ಶಯಾತ್ಮಾ ನಮವ್ಯಯಂ"** ಎಂದರೆ ಯೋಗೇಶ್ವರನೇ ! ನಿನ್ನ ನಾಶರಹಿತವಾದ ಸ್ವರೂಪ ವನ್ನು ತೋರಿಸು ಎಂದು ಕೇಳಿರುತ್ತಾನೆ. ಇದರಿಂದ ಶ್ರೀ ಕೃಷ್ಣನು ತೋರಿಸಿದ ವಿಶ್ವರೂಪವು ನಾಶರಹಿತವಾದ ಆತನ ಸ್ವರೂಪವೆಂದು ಸಿದ್ಧವಾಗುವದು. ಕೃಷ್ಣನೂ ಕೂಡ

**(14) ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಂ ॥**
—(11. 8.)

ಎಂದು ಹೇಳಿರುತ್ತಾನೆ. ಇದರ ಅರ್ಥವು :— ನಿನಗೆ ದಿವ್ಯಚಕ್ಷಸ್ಸು ಕೊಡು ತ್ತೇನೆ. ನನ್ನ ಈಶ್ವರ ಸಂಬಂಧಿಯಾದ ಅಂದರೆ ಅಚಿಂತ್ಯವಾದ ಸಾಮರ್ಥ್ಯವನ್ನು ನೋಡು. ಹೀಗೆ ಹೇಳಿ

**(15) ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಂ ॥**
—(11. 9.)

ಪಾರ್ಥನಿಗೆ ತನ್ನ ಪರಮಂ ಎಂದರೆ ಯಥಾರ್ಥವಾದ ಮಾಯಿಕವಲ್ಲದ ಐಶ್ವರಂ ರೂಪಂ ಎಂದರೆ ಅಚಿಂತ್ಯಾದ್ಭುತಶಕ್ತ್ಯುಪೇತವಾದ ಪೂರ್ಣವಾದ ವಿಶ್ವರೂಪವನ್ನು ತೋರಿಸಿದನು.

ಈ ಪ್ರಶ್ನೋತ್ತರ ಪರಾಮರ್ಶೆಯಿಂದಲೇ ವಿಶ್ವರೂಪವು ಮಾಯಿಕವಲ್ಲವೆಂದು ಸಿದ್ಧವಾಗುವದು. ಮಾಯಿಕರೂಪವನ್ನು ನೋಡುವದಕ್ಕೆ ಇದ್ದ ಚಕ್ಷುಸ್ಸಿನ ಶಕ್ತಿಯೂ ಕೂಡ ದೋಷಾದಿಗಳಿಂದ ಅಥವಾ ಸಾದೃಶ್ಯದರ್ಶನಾದಿಗಳಿಂದ ಕುಂಠಿತವಾಗ ಬೇಕು. ದಿವ್ಯವಾದ ಎಂದರೆ ಅಲೌಕಿಕವಾದ ಅತೀಂದ್ರಿಯ ಪದಾರ್ಥಗಳನ್ನು

ನೋಡುವ ಚಕ್ಷುಸ್ಸು ಬೇಕಾಗಿಲ್ಲ. ದುಷ್ಟಚಕ್ಷುಸ್ಸು ಮಾಯಿಕ ಪದಾರ್ಥ ಗಳ ದರ್ಶನಕ್ಕೆ ಬೇಕಾಗಬಹುದು ದಿವ್ಯಚಕ್ಷುಸ್ಸು ಸರ್ವಥಾ ಅಪೇಕ್ಷಿತವಲ್ಲ. ದುಷ್ಟಚಕ್ಷುಸ್ಸಿಗೆ ಅಥವಾ ಸಾಮಾನ್ಯವಾದ ಚಕ್ಷುಸ್ಸಿಗೂ ಕೂಡ ತನ್ನ ಅಲೌಕಿಕ ಮಹಿಮೆಗಳು ಕಾಣುವದಿಲ್ಲವೆಂದೇ ಶ್ರೀಕೃಷ್ಣನು "ದಿವ್ಯಂದದಾಮಿತೇಚಕ್ಷುಃ" ಎಂದು ಪ್ರತಿಜ್ಞೆಮಾಡಿ ತನ್ನ "ಪರಮಂರೂಪವೈಶ್ವರಂ" ಅಂದರೆ ಉತ್ತಮವಾದ ಅಚಿಂತ್ಯಮಹಿಮೋಪೇತವಾದ ರೂಪವನ್ನು ತೋರಿಸಿರುತ್ತಾನೆ. ಇಂಥ ದಿವ್ಯಚಕ್ಷು ರಹಿತರಾದುದರಿಂದಲೇ ದುರ್ಯೋಧನಾದಿಗಳು ಸಭೆಯಲ್ಲಿ ಶ್ರೀ ಕೃಷ್ಣನ ವಿಶ್ವರೂಪ ವನ್ನು ನೋಡಿ ಜುಗುಪ್ಸೆಯನ್ನು ಹೊಂದಿದರೆಂದು ಮಹಾಭಾರತದಲ್ಲಿ ಹೇಳಿರು ತ್ತದೆ. ದಿವ್ಯಚಕ್ಷುಸ್ಸನ್ನು ಹೊಂದಿದ ನಂತರ ಅರ್ಜುನನು ಆ ರೂಪವನ್ನು ಅಚಿಂತ್ಯಮಹಿಮೆಯುಳ್ಳದ್ದೆಂದೇ ತಿಳಿದನು.

(16) **ಅನೇಕವಕ್ತ್ರನಯನಂ ಅನೇಕಾದ್ಭುತದರ್ಶನಂ ।**
**ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಂ ।**
**ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಂ ॥**
(11. 11.)

ಅನಂತ ಮುಖಗಳು, ಅನಂತ ಕಣ್ಣುಗಳು, ಅನಂತ ಆಶ್ಚರ್ಯವಾದ ದ್ರಷ್ಟವ್ಯರೂಪಗಳುಳ್ಳ ದಿವ್ಯವಾದ ಅಂದರೆ ಸ್ವರೂಪ ಭೂತವಾದ ಹಾರ ವಸ್ತ್ರಗ ಗಳನ್ನು ಧರಿಸಿದ ಸ್ವರೂಪಭೂತವಾದ ಗಂಧದಿಂದ ಲಿಪ್ತನಾದ **ಸರ್ವಾಶ್ಚರ್ಯ ಮಯವಾದ** ವಿಶ್ವತೋಮುಖವಾದ ಅನಂತವಾದ ಕ್ರಿಡಾದಿಗುಣವಿಶಿಷ್ಟವಾದ ವಿಶ್ವರೂಪವನ್ನು ಅರ್ಜುನನು ಕಂಡನು.

(17) ಮಾಯಿಕ ಪದಾರ್ಥಕ್ಕೆ ಮಹಾ ತೇಜಸ್ಸು-ಎಲ್ಲಿಂದ ಬಂತು ? ಅಂಥ ಕಾರವಷ್ಟೇ ಮಾಯಾರಚನೆಗೆ ಉಪೋದ್ಬಲಕವು. ವಿಶ್ವರೂಪವಾದರೋ ಅನಂತ ಸೂರ್ಯಕಾಂತಿಯಿಂದ ಸಹಿತವಾದದ್ದು.

**ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।**
**ಯದಿ ಭಾಸ್ಸದೃಶೀಸಾಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥**
—(11. 12.)
**ತೇಜೋಭಿರಾಪೂರ್ಯಜಗತ್ಸಮಗ್ರಂ ಭಾಸಸ್ತವೋಗ್ರಾಃ**
**ಪ್ರತಪಂತಿವಿಷ್ಣೋ ।**—(11. 30.)

ಅಂತರಿಕ್ಷದಲ್ಲಿ ಒಂದೇ ಕಾಲದಲ್ಲಿ ಅನಂತ ಸೂರ್ಯರು ಉದಯಿಸಿದರೆ ವ್ಯಕ್ತವಾಗುವ ಕಾಂತಿಯು ಆ ವಿಶ್ವರೂಪವನ್ನು ತಾಳಿದ ಶ್ರೀಹರಿಯ ದೇಹಕಾಂತಿಗೆ

ಸದೃಶವಾದರೂ ಆಗಬಹುದು. ಹೇ ವಿಷ್ಣೋ ! ನಿನ್ನ ತೀಕ್ಷ್ಣವಾದ ಪ್ರಭೆಗಳು ತಮ್ಮ ಪ್ರಕಾಶನ ಶಕ್ತಿಯಿಂದ ಸಕಲ ಪ್ರಪಂಚವನ್ನೂ ವ್ಯಾಪಿಸಿ ಸುಡುತ್ತವೆ. ಕಿಂಚ, ಈ ವಿಶ್ವರೂಪು ಸರ್ವಜ್ಞಾನಿಗಳಿಗೂ ಮತ್ತು ಮುಕ್ತರಿಗೂ ಪರಿದೃಶ್ಯಮಾನವಾಗಿರುತ್ತದೆ. ಯಥಾರ್ಥ ಜ್ಞಾನಿಗಳಾದ ದೇವತೆಗಳಿಂದಲೂ ಮುಕ್ತರಿಂದಲೂ ದೃಶ್ಯಮಾನವಾದ ರೂಪವು ಮಾಯಿಕವಾಗಲಾರದು :—

**(18) ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ।**

**ಅಮೀಹಿತ್ವಾಂ ಸುರಸಂಘಾ ವಿಶಂತಿ ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ।**

**ಗಂಧರ್ವಯಕ್ಷಾಸುರಸಿದ್ಧಸಂಘಾ ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥** —(11. 22.)

ಹೇ ಮಹಾತ್ಮನೇ ! ನಿನ್ನ ಅದ್ಭುತವಾದ ಮತ್ತು ಉಗ್ರವಾದ ರೂಪವನ್ನು **ನೋಡಿ** ಮೂರು ಲೋಕವೂ ವ್ಯಥೆಯನ್ನು ಹೊಂದಿದೆ. ಮುಕ್ತಾಮುಕ್ತ ಸಕಲ ದೇವತೆಗಳೂ ನಿನ್ನಲ್ಲಿ ಪ್ರವಿಷ್ಟರಾಗಿದ್ದಾರೆ. ಅದರಲ್ಲಿ ಕೆಲವರು ( ಅಮುಕ್ತರು ) ಭೀತರಾಗಿ ನಿನ್ನನ್ನು ಪ್ರಾಂಜಲಿಗಳಾಗಿ ಸ್ತುತಿಸುತ್ತಾರೆ. ಗಂಧರ್ವ ಯಕ್ಷಾದಿ ಸರ್ವ ದೇವಸಮೂಹವೂ ವಿಸ್ಮಿತವಾಗಿ ನಿನ್ನನ್ನು **ನೋಡುತ್ತದೆ.**

ಲೋಕದಲ್ಲಿ ದುರ್ಬಲನಾದ ಐಂದ್ರಜಾಲಿಕನು ಸಭಿಕರಿಗೆ ಇಷ್ಟವಾದ ಪದಾರ್ಥಗಳನ್ನು ತತ್ಕಾಲದಲ್ಲಿ ಯಥಾರ್ಥವಾಗಿ ನಿರ್ಮಾಣ ಮಾಡುವುದಕ್ಕೆ ಸಾಮರ್ಥ್ಯವಿಲ್ಲದಿರುವದರಿಂದ ಮಾಯಾಬಲವನ್ನು ಆಶ್ರಯಿಸುತ್ತಾನೆ. ಪರಮಾತ್ಮನಿಗೆ ಸ್ವಾಭಾವಿಕವಾದ ಅಚಿಂತ್ಯಬಲವೇ ಇರುವದರಿಂದ ಆತನ ಅದ್ಭುತರೂಪ ಪ್ರದರ್ಶನವು ಆತನಲ್ಲಿಯೇ ಇದ್ದ ರೂಪದ ಅಭಿವ್ಯಕ್ತಿಯೇ ಹೊರತು ತಾತ್ಕಾಲಿಕವಾದ ಮಾಯಿಕ ಸೃಷ್ಟಿಯಲ್ಲ.

**(19) ಅನಂತವೀರ್ಯಾಮಿತವಿಕ್ರಮಸ್ತ್ವಂ ।** —(11. 40.)

ಹೇ ಸ್ವಾಮೀ ! ನೀನು ಅಪರಿಮಿತಬಲಪರಾಕ್ರಮಸಂಪನ್ನನು.

ಆದುದರಿಂದಲೇ ಅಚಿಂತ್ಯವಾದ ಸ್ವರೂಪಭೂತವಾದ ಮಹಿಮೋಪೇತನನ್ನು ಯಾವ ಲೌಕಿಕ ಉಪಾಯಗಳಿಂದಲೂ ವಶಪಡಿಸಿಕೊಳ್ಳುವುದು ಸಾಧ್ಯವಲ್ಲವೆಂದು ತಿಳಿದು ದಾಸ್ಯಭಾವದಿಂದ ನಮಸ್ಕಾರ ಮಾಡಿರುತ್ತಾನೆ.

**(20) ನಮೋ ನಮಸ್ತೇಽಸ್ತು ಸಹಸ್ರಕೃತ್ವಃ ಪುನಶ್ಚ ಭೂಯೋಽಪಿ ನಮೋ ನಮಸ್ತೇ ।**

**ನಮಃ ಪುರಸ್ತಾದಥ ಪೃಷ್ಠತಸ್ತೇ ನಮೋಽಸ್ತುತೇ ಸರ್ವತ ಏವಸರ್ವ ॥** —(11. 40.)

ಹೇ ಸ್ವಾಮೀ ! ನಿನಗೆ ನಮಸ್ಕಾರವು ! ನಿನಗೆ ಮತ್ತೂ ಮತ್ತೂ ನಮಸ್ಕಾರವು. ಪೂರ್ವದಲ್ಲಿ, ಪಶ್ಚಿಮದಲ್ಲಿ, ದಕ್ಷಿಣೋತ್ತರಗಳಲ್ಲಿ ಹಿಂದೆ, ಮುಂದೆ, ಮೇಲೆ, ಕೆಳಗೆ ಎಲ್ಲಿ ನೋಡಿದರೆ ಅಲ್ಲಿ ವ್ಯಾಪ್ತನಾಗಿರುವ ನಿನಗೆ ನಮಸ್ಕಾರವು.

ತನ್ನ ಅಚಿಂತ್ಯಶಕ್ತಿಯು ಅವಿದ್ಯಾದಿ ಉಪಾಧಿಗಳಿಂದ ಪ್ರಾಪ್ತವಾದ ಮಾಯಾಬಲವಲ್ಲ; ಸ್ವರೂಪಭೂತವಾದ ಸಾಮರ್ಥ್ಯವೇ ಎಂದು ಶ್ರೀ ಕೃಷ್ಣನೇ ವಿಶ್ವರೂಪದ ಉಪಸಂಹಾರ ಕಾಲದಲ್ಲಿ ನಿರೂಪಣೆ ಮಾಡಿರುತ್ತಾನೆ.

**(21) ಮಯಾ ಪ್ರಸನ್ನೇನ ತವಾರ್ಜುನೇದಂ ರೂಪಂ ಪರಂ**
**ದರ್ಶಿತ ಮಾತ್ಮಯೋಗಾತ್ ।**
**ತೇಜೋಮಯಂ ವಿಶ್ವಮನಂತಮಾದ್ಯಂ........॥ –(11.47.)**

ಎಲೈ ಅರ್ಜುನನೇ ! ನಿನ್ನಲ್ಲಿ ಅನುಗ್ರಹವುಳ್ಳ ನನ್ನಿಂದ **ಆತ್ಮಯೋಗಾತ್** ಎಂದರೆ **ನನ್ನ ಸ್ವರೂಪಸಾಮರ್ಥ್ಯದಿಂದ, ತೇಜೋಮಯ**ವಾದ ಪೂರ್ಣವಾದ ಅಪರಿಚ್ಛಿನ್ನವಾದ ಜಗದಾದಿಕಾರಣವಾದ ಈ ರೂಪವು ನಿನಗೋಸ್ಕರ ತೋರಿಸಲ್ಪಟ್ಟಿತು.

ಕಿಂಚ, ಸುಳ್ಳು ನೋಟವನ್ನು ನೋಡುವದಕ್ಕೆ ಉಗ್ರವಾದ ತಪಸ್ಸು ಮಾಡಬೇಕಾದುದಿಲ್ಲ. ವಿಶ್ವರೂಪವಾದರೋ "ಸುದುರ್ದರ್ಶವು." ಕೃಷ್ಣನು ಹೇಳುತ್ತಾನೆ:–

**(22) ಸುದುರ್ದರ್ಶಮಿದಂ ರೂಪಂ........ । —(11. 52.)**
**ಭಕ್ತ್ಯಾತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ॥**
**ಜ್ಞಾತುಂ ದ್ರಷ್ಟುಂ........॥ —11. 54.)**

ಅರ್ಜುನ ! ಸುಲಭೋಪಾಯದಿಂದ ನನ್ನ ರೂಪವು ನೋಡುವದಕ್ಕೆ ಅಶಕ್ಯವು. ಅನನ್ಯವಾದ ಭಕ್ತಿಯಿಂದಲೇ ಇಂಥ ವಿಶ್ವರೂಪಿಯಾದ ನಾನು ತಿಳಿಯಲ್ಪಡತಕ್ಕವನು.

ಯುದ್ಧ ಶಾಂತವಾದರೂ ವಿಶ್ವರೂಪದರ್ಶನಜನಿತ ಸಂಜಯನ ಆನಂದವು ಕ್ಷೀಣವಾಗಲಿಲ್ಲ.

**(23) ತಚ್ಚ ಸಂಸ್ಮೃತ್ಯ ಸಂಸಂಸ್ಮೃತ್ಯ ರೂಪ ಮತ್ಯದ್ಭುತಂ ಹರೇಃ ।**
**ವಿಸ್ಮಯೋ ಮೇ ಮಹಾರ್ರಾಜ ಹೃಷ್ಯಾಮಿಚ ಪುನಃ ಪುನಃ ॥**
**—(18. 77.)**

ಎಲೈ ಧೃತರಾಷ್ಟ್ರನೇ ! ಕೃಷ್ಣಾರ್ಜುನರ ಸಂವಾದದ ಸ್ಮರಣೆಯಿಂದ ನನಗೆ ಪುನಃ ಪುನಃ ಹರ್ಷ ಉಂಟಾಗುವದು. ಮತ್ತು ಶ್ರೀ ಹರಿಯ ಪರಮಾಶ್ಚರ್ಯಕರವಾದ ಆ ವಿಶ್ವರೂಪವನ್ನು ಪುನಃ ಪುನಃ ಸ್ಮರಿಸಿಕೊಂಡು ನನಗೆ ಮಹಾ ಆಶ್ಚರ್ಯವು ಆಯಿತು; ಮತ್ತು ಮರಳಿ ಮರಳಿ ಆನಂದವನ್ನು ಹೊಂದುತ್ತೇನೆ.

" ಯೋಗೇಶ್ವರಾತ್ ಕೃಷ್ಣಾತ್ " ಎಂದು ಪೂರ್ವಶ್ಲೋಕದಲ್ಲಿ ಹೇಳಿ ಸಂಜಯನು ಶ್ರೀಕೃಷ್ಣನ ಸ್ವರೂಪವನ್ನು ಅಂತ್ಯಶ್ಲೋಕದಲ್ಲಿ ಸಂಗ್ರಹವಾಗಿ ವರ್ಣಿಸಿರುತ್ತಾನೆ.

**(24) ಯತ್ರ ಯೋಗೀಶ್ವರಃ ಕೃಷ್ಣೋಯತ್ರ ಪಾರ್ಥೋ ಧನುರ್ಧರಃ ।**

**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ॥**
—(18. 89.)

ಅಚಿಂತ್ಯಾದ್ಭುತ ಶಕ್ತಿಯನ್ನು ಹೊಂದಿರುವ ಸರ್ವೇಶ್ವರನಾದ ಶ್ರೀಕೃಷ್ಣನು ಎಲ್ಲಿ ( ಯಾವ ಸೈನ್ಯದಲ್ಲಿ ) ಇರುತ್ತಾನೆಯೋ, ( ಅವನನ್ನು ಆಶ್ರಯಿಸಿದ ) ಗಾಂಡೀವಧ್ವನಿಯಾದ ಅರ್ಜುನನು ಎಲ್ಲಿರುತ್ತಾನೆಯೋ ಅಲ್ಲಿಯೇ ರಾಜಲಕ್ಷ್ಮಿಯು, ಜಯವು, ಸಂಪತ್ತು, ನೀತಿಯೂ ನಿಶ್ಚಲವಾಗಿರುವುದೆಂದು ನನ್ನ ನಿಶ್ಚಯವು.

ಶ್ರೀ ಕೃಷ್ಣನ ಅಚಿಂತ್ಯಶಕ್ತಿಯು ಕುರುಕ್ಷೇತ್ರದ ಯುದ್ಧವೃತ್ತಾಂತದಿಂದಲೇ ತಿಳಿದುಬರುವದು. ಆಯುಧರಹಿತನಾದ ಕೃಷ್ಣನನ್ನು ಆಶ್ರಯಿಸಿ ಅಲ್ಪಸೇನೆಯಿಂದ ಯುಕ್ತರಾದ ಪಾಂಡವರು ಜಯಶೀಲರಾದರು. ಸರ್ವಾಯುಧಗಳಿಂದ ಸಂಪನ್ನರಾದ ಲಕ್ಷನಾರಾಯಣೀ ಸೇನೆಯನ್ನು ಕೃಷ್ಣನಿಂದ ಪಡೆದು ಹೆಚ್ಚು ಸೇನೆಯಿಂದ ಸಹಿತನಾದರೂ ದುರ್ಯೋಧನನು ದುರ್ಗತಿಯನ್ನು ಹೊಂದಿದನು. ಅಚಿಂತ್ಯಸಾಮರ್ಥ್ಯೋಪೇತನಾದ ಶ್ರೀ ಕೃಷ್ಣನನ್ನು ನಂಬಿದವರಿಗೂ ಯಥಾಯೋಗ್ಯವಾದ ಅಚಿಂತ್ಯಶಕ್ತಿಯು ಬರುವದೆಂದು " ಯತ್ರಪಾರ್ಥೋಧನುರ್ಧರಃ " ಎಂಬ ಶ್ಲೋಕಭಾಗದಿಂದ ಸಂಜಯನು ಸೂಚಿಸಿರುತ್ತಾನೆ. ಹೀಗಿರುವಲ್ಲಿ ಯೋಗಿಗಳಿಗೂ ಒಡೆಯನಾದ ಶ್ರೀ ಕೃಷ್ಣನ ಸಾಮರ್ಥ್ಯವನ್ನು ಎಷ್ಟೆಂದು ಹೇಳುವದಕ್ಕಾದೀತು.

25. ಇವೇ ಮೊದಲಾದ ಅನಂತಯುಕ್ತಿಗಳಿಂದ ವಿಷ್ಣು ಸರ್ವೋತ್ತಮತ್ವವು ವೇದಾಂತಸೂತ್ರಗಳಲ್ಲಿಯೂ ಭಗವದ್ಗೀತೆಯಲ್ಲಿಯೂ ನಿರ್ಣೀತವಾಗಿರುತ್ತದೆ. ಅನಂತ ಯುಕ್ತಿಗಳಿಂದೇನು ! **ಜ್ಞಾನಿಗಳ ಆಚರಣೆಯೋ** ಪರಮಾತ್ಮನ ಸರ್ವೋತ್ತಮತ್ವಜ್ಞಾಪಕವಾದ ಮುಖ್ಯಯುಕ್ತಿಯಾಗಿರುವದು. " ಅಹಮಾತ್ಮಾ ಗುಡಾಕೇಶ " ಎಂಬ ಶ್ರೀ ಕೃಷ್ಣನ ವಾಕ್ಯದಿಂದಲೂ " ಪರಬ್ರಹ್ಮ " ಎಂಬ ಅರ್ಜುನನ ಸ್ತುತಿಯಿಂದಲೂ ಕೃಷ್ಣನೇ ಆತ್ಮನು; ಕೃಷ್ಣನೇ ಪರಬ್ರಹ್ಮನು

ಎಂದು ಸಿದ್ಧವಾಗುವದು. ಇಂಥ ಆತ್ಮದರ್ಶನವನ್ನು ಮಾಡಿದ ಜ್ಞಾನಿಗಳು ಸರ್ವಲೌಕಿಕ ವಿಷಯುಗಳನ್ನೂ ತೃಣಪ್ರಾಯವಾಗಿ ತಿಳಿದಿರುತ್ತಾರೆ.

(1) **ಯಸ್ತ್ವಾತ್ಮರತಿರೇವಸ್ಯಾದಾತ್ಮತೃಪ್ತಶ್ಚಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥**
**ನೈವ ತಸ್ಯಕೃತೇನಾರ್ಥೋ ನಾಕೃತೇನೇಹಕಶ್ಚನ ।**
**ನಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥**
—(3· 17-18)

ಇದರ ಅರ್ಥವು:— ಯಾವಾತನು ಪರಮಾತ್ಮ ದರ್ಶನದಿಂದಲೇ ಉಂಟಾದ ಸುಖವುಳ್ಳವನಾಗಿ ಅನ್ಯತ್ರ ಆಸಕ್ತಿಯುಳ್ಳವನಲ್ಲವೋ, (ಪರಮಾತ್ಮನ ದರ್ಶನದಿಂದ ಉಂಟಾದ ಸುಖವುಳ್ಳವನಾದುದರಿಂದ) ಪರಮಾತ್ಮಪ್ರಸಾದದಿಂದ ಅನ್ಯವಿಷಯುಗಳಲ್ಲಿ ಅಲಂಬುದ್ಧಿಯುಳ್ಳವನೋ, ಅಂಥ ಅಸಂಪ್ರಜ್ಞಾತಸಮಾಧಿಸ್ಥನು ಮಾಡಬೇಕಾದ ಕಾರ್ಯವು ಯಾವುದೂ ಇರುವದಿಲ್ಲ. ಅಸಂಪ್ರಜ್ಞಾತ ಸಮಾಧಿಸ್ಥನಿಗೆ ಸಮಾಧಿಯನ್ನು ಬಿಟ್ಟು ಆಚರಿಸಲ್ಪಡುವ ಯಜ್ಞಾದಿಗಳಿಂದ ಪ್ರಯೋಜನವೇನೂ ಇರುವುದಿಲ್ಲ. (ಪರಮಾತ್ಮನ ದರ್ಶನಾರ್ಥವಾಗಿ ಯಜ್ಞಾದಿಗಳನ್ನು ಆಚರಿಸಬೇಕು. ಸರ್ವ ಕರ್ಮಗಳಿಗೆ ಫಲರೂಪನಾದ ಪರಮಾತ್ಮನ ದರ್ಶನವೇ ಆಗುತ್ತಿರುವಾಗ ಅದನ್ನು ಬಿಟ್ಟು ಇನ್ನು ಯಾವ ಫಲಕ್ಕೋಸ್ಕರ ಯಜ್ಞಾದಿಗಳನ್ನು ಆಚರಿಸಬೇಕು? ಪರಮಾತ್ಮನ ದರ್ಶನಕ್ಕಿಂತ ಉತ್ತಮ ಫಲವು ಇಲ್ಲವೆಂದು ಭಾವವು). ಅಸಂಪ್ರಜ್ಞಾತಸಮಾಧಿಸ್ಥನಿಗೆ ಸಂಧ್ಯಾವಂದನಾದಿ ನಿತ್ಯಕರ್ಮಪರಿತ್ಯಾಗದಿಂದಲೂ ಪಾಪವಿಲ್ಲ. ಆತನಿಗೆ ದೇವತಾಗುರ್ವಾದಿಗಳ ದರ್ಶನ, ವಂದನ, ಸಂಭಾಷಣಾದಿಗಳಿಂದ ತಾನು ಅನುಭವಿಸುತ್ತಿರುವ ಬ್ರಹ್ಮದರ್ಶನಜನ್ಯಸುಖದ ಲಾಭಕ್ಕಿಂತಲೂ ಅಧಿಕವಾದ ಲಾಭವು ಇರುವದಿಲ್ಲ. ಆರನೇಯ ಅಧ್ಯಾಯದಲ್ಲಿಯೂ ಶ್ರೀಕೃಷ್ಣನು ಹೀಗೆಯೇ ಹೇಳಿರುತ್ತಾನೆ.

(2) **ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
—(6. 22.)

ಪರಮಾತ್ಮ ದರ್ಶನಪ್ರಾಪಕವಾದ ಧ್ಯಾನಯೋಗವನ್ನು ಹೊಂದಿದ ನಂತರ ಅದಕ್ಕಿಂತ ಅಧಿಕವಾದ ಬೇರೆ ಲಾಭವನ್ನು ಅಧಿಕಾರಿಯು ತಿಳಿಯುವದಿಲ್ಲ. ಈ ವಾಕ್ಯಗಳಿಂದ ಪರಮಾತ್ಮ ದರ್ಶನವೇ ಸರ್ವೋತ್ತಮ ಲಾಭವೆಂದು ನಿಶ್ಚಿತವಾಗುವುದರಿಂದ ಪರಮಾತ್ಮನು ಸರ್ವೋತ್ತಮ ಪದಾರ್ಥವು; ಆತನ ದರ್ಶನಜನ್ಯವಾದ ಸುಖವು ಸರ್ವೋತ್ತಮಸುಖವು; ಎಂದು ಕೈಮುತ್ಯನ್ಯಾಯದಿಂದ ಸಿದ್ಧವಾಗುವದು.

ಈ ರೀತಿಯಾಗಿ ಆಪ್ತತಮನೂ ಸರ್ವಜ್ಞ ಶಿಖಾಮಣಿಯೂ ಸಾಕ್ಷಾಜ್ಜಗದ್ಗುರುವೂ ಆದ ಶ್ರೀಕೃಷ್ಣನಿಂದ ಅಧಿಕಾರಿ ವರ್ಗದಲ್ಲಿ ಶ್ರೇಷ್ಠನೂ ಪವಿತ್ರತಮನೂ ಭಕ್ತಿಯಿಂದ ಶರಣಾಗತನೂ ಆದ ಶಿಷ್ಯನಾದ ಅರ್ಜುನನಿಗೆ ಮಹಾಧರ್ಮಸಂಕಟ ಕಾಲದಲ್ಲಿ "ಇಮಂ ವಿವಸ್ವತೇ ಯೋಗಂ" ಇತ್ಯಾದಿ ವಾಕ್ಯಗಳಲ್ಲಿ ನಿರೂಪಿತವಾಗಿರುವಂತೆ ಉಪದಿಷ್ಟವಾದ ಪ್ರಾಚೀನತಮವೂ, ವೇದಸಮ್ಮತವೂ ಆದ ಈ ಬ್ರಹ್ಮವಿದ್ಯೆಯು ಸ್ಪಷ್ಟವಾಗಿ ಸರ್ವವಿಮರ್ಶಕರಿಗೂ ಹೃದಯಂಗಮವಾಗುವಂತೆ ಶ್ರೀಕೃಷ್ಣನೇ ಪರಬ್ರಹ್ಮನು; ಸರ್ವ ವೇದಪ್ರತಿಪಾದ್ಯನು; ಆತನೇ ಮುಕ್ತಿಪ್ರದನು; ಆತನಿಂದ ಭಿನ್ನವಾದ ಸರ್ವಪ್ರಾಣಿಜಾತವೂ ಆತನ ಅನಂತಾಂಶಗಳಲ್ಲಿ ಏಕದೇಶ ಬಲವುಳ್ಳದ್ದಾದುದರಿಂದ ಆತನೇ ಸರ್ವೋತ್ತಮನು; ಎಂದು ಗೀತೆಯು ಬಹು ಪ್ರಕಾರವಾಗಿ ಪುನಃ ಪುನಃ ಬೋಧಿಸುತ್ತಿರುವದು. ಸತ್ಯಜಗತ್ತಿಗೆ ನಿಯಾಮಕನೂ, ಅಲ್ಪರಾದ ಜೀವರುಗಳಿಗೆ ನಿರವಧಿಕಸ್ವಾಮಿಯೂ ಆಗಿರುವ ವಾಸುದೇವನು ಗೀತಾವಾಕ್ಯಗಳೆಂಬ ಸಿಂಹಾಸನದಲ್ಲಿ ಆರೂಢನಾಗಿ ವಿರಾಜಿಸುತ್ತಿರುವನು. ಹೀಗಿರುವಲ್ಲಿ ದಿವಾಂಧರಿಗೆ ಸೂರ್ಯನ ಪ್ರಭಾವವು ತೋರದಂತೆ, ಕಗ್ಗಲ್ಲಿಗೆ ಚಂದ್ರಕಿರಣ ಸಂಸ್ಪರ್ಶದಿಂದ ಸುಖವಾಗದಿರುವಂತೆ, ದುಸ್ತರ್ಕಗಳಿಂದ ದೃಢೀಕೃತವಾದ ಪರಂಪರೋಪದೇಶರಹಿತವಾದ ಅಶಿಕ್ಷಿತ ಬುದ್ಧಿಗಳಿಗೆ ಭಗವದ್ವಾಕ್ಯಗಳು ನಾನಾ ಮತಗಳನ್ನು ಪ್ರತಿಪಾದನೆ ಮಾಡುವ ಪರಸ್ಪರ ವಿರುದ್ಧವಾದ ವಾಕ್ಯಗಳ ಸಂಗ್ರಹವು; ಕರ್ಮಭ್ರಂಶವನ್ನು ನಿರೂಪಿಸುವ ಅವಧೂತ ವಿದ್ಯೆಯು; ಸಂಸಾರಪ್ರವೃತ್ತಿಯನ್ನೇ ಉದ್ಘೋಷಿಸುವ ಗೃಹಸ್ಥೋಪನ್ಯಾಸವು; ದುರ್ನಿರೂಪವಾದ ಅವಿದ್ಯಾಪ್ರಭಾವದಿಂದ ವಿಸ್ಮೃತವಾದ ಜೀವಚೈತನ್ಯದ ಬ್ರಹ್ಮತ್ವವನ್ನೇ ಜ್ಞಾಪಿಸುವ ವಿಜ್ಞಾಪನ ಪತ್ರಿಕೆಯು; ಇವೇ ಮುಂತಾಗಿ ನಾನಾರೀತಿಯಲ್ಲಿ ತೋರುವವೇ ಹೊರತು, ಅವಿದ್ಯಾಪಟಲವಿಹಿತ ನಯನರಾದ ಮಂದಜೀವರ ದುಃಖನಿವೃತ್ತಿಗಾಗಿ, ನಿತ್ಯಮುಕ್ತನೂ, ನಿತ್ಯಾನಂದ ಸ್ವರೂಪನೂ, ಪೂರ್ವೋಕ್ತ ಅನಂತ ಕಲ್ಯಾಣಗುಣಭರಿತನೂ, ವೇದವೇದಾಂತಗಳೆಂಬ ನಿಜರಾಜ್ಯದ ದಿವ್ಯ ಚಕ್ರಾಧಿಪತ್ಯದ ಸಾರ್ವಭೌಮಪದವಿಯಲ್ಲಿ ಆರೂಢನೂ ಆದ ರಮಾನಾಥನ ಸರ್ವೋತ್ತಮತ್ವವನ್ನು ಪ್ರಕಾಶಮಾಡುವ ತತ್ವಪ್ರದೀಪವೆಂದು ತೋರಲಾರವು. ಆದರೂ ಸೂರ್ಯಕಿರಣಗಳಿಂದ ಕಮಲವು ವಿಕಸಿತವಾಗುವಂತೆ, ಚಂದ್ರಕಾಂತವು ಚಂದ್ರಕಿರಣಗಳ ಸಂಸ್ಪರ್ಶಗಳಿಂದ ಕರಗಿ ಮೃದುವಾಗುವಂತೆ, ಸಾತ್ವಿಕಮನಸ್ಸುಳ್ಳ ಸಜ್ಜನರು ಆನಂದಸಾಗರನಾದ ಶ್ರೀ ಕೃಷ್ಣನ ಮಧುರವಾಣಿಯಿಂದ ಸುಮನೋಹರವಾದ ತತ್ವವನ್ನು ತಿಳಿದು, ವಿಸ್ತೃತಬುದ್ಧಿಯನ್ನು ಹೊಂದಿ, ಭಕ್ತಿಭಾವದಿಂದ ತೊಯ್ಯಲ್ಪಟ್ಟ ಹೃದಯವುಳ್ಳವರಾಗಿ, ಪಾರ್ಥಸಾರಥಿಯಾದ ಶ್ರೀ ಕೃಷ್ಣನ ಪಾದಪಲ್ಲವದಲ್ಲಿ ಲಗ್ನವಾದ ಚಿತ್ತದಿಂದ, ಅವನ ಪ್ರಸಾದಾತಿಶಯಕ್ಕೆ ಪಾತ್ರರಾಗಿ, ಭವವೇದನೆಯನ್ನು ಪರಿಹರಿಸಿಕೊಂಡು ನಿತ್ಯಸುಖವನ್ನು ಹೊಂದುವದರಲ್ಲಿ ಸಂಶಯವಿಲ್ಲ.



# II

# ಜಗತ್ಸತ್ಯತ್ವ ಸಮರ್ಥನವು.



19 ರಿಂದ 24—7—1930 ರಲ್ಲಿ

ಸಭಿಕರು— ಮಹಾವಿದ್ವಾಂಸರು, ಪಂಡಿತರು, ಮತ್ತು ವಿದ್ಯಾರ್ಥಿಗಳು.



ಪ್ರಶ್ನೆ— ಸ್ವಾಮೀ— ಪೂರ್ವದಿವಸದಲ್ಲಿ ಸಕಲ ಗೀತಾವಾಕ್ಯಗಳಿಗೂ ವಿಷ್ಣುವಿನ ಸರ್ವೋತ್ತಮತ್ವವನ್ನು ಪ್ರತಿಪಾದನೆ ಮಾಡುವದರಲ್ಲಿಯೇ ತಾತ್ಪರ್ಯವಿರುವದೆಂದು ತಮ್ಮಿಂದ ನಿರೂಪಿತವಾಯಿತು. ಆದರೆ ಎಲ್ಲಿಯವರೆಗೆ ಬ್ರಹ್ಮಾತಿರಿಕ್ತ ಸಕಲ ಪ್ರಪಂಚವೂ 'ಮಿಥ್ಯಾ' ಎಂದರೆ ಸ್ವರೂಪೇಣ ಇಲ್ಲದಿದ್ದರೂ ಬ್ರಹ್ಮನಲ್ಲಿ ಕಲ್ಪಿತವಾಗಿರುವದು ಎಂದು ಹೇಳುವ ಮತವು ಪ್ರಮಾಣಗಳಿಂದಲೂ ದೃಢಯುಕ್ತಿಗಳಿಂದಲೂ ದೂರೀಕೃತವಾಗುವದಿಲ್ಲವೋ ಅಲ್ಲಿಯವರೆಗೆ ತಮ್ಮಿಂದ ಸಿದ್ಧಾಂತಿತವಾದ ವಿಷ್ಣು ಸರ್ವೋತ್ತಮತ್ವವು ಸ್ವಪ್ನದಲ್ಲಿ ಪ್ರದರ್ಶಿತವಾದ ಗಂಟೆನಂತೆ ಪ್ರೇಕ್ಷಾವಂತರಿಂದ ಆದರಣೀಯವಾಗಲಾರದು. ಶೂನ್ಯಗೃಹದಲ್ಲಿ ಏಕಾಕಿಯಾಗಿ ಪ್ರವಿಷ್ಟನಾದ ಪುರುಷನ ಸ್ವಾಮಿತ್ವವೂ, ರಾಜ್ಯಹೀನನಾದ ರಾಜವೇಷ ಮಾತ್ರಧಾರಿಯಾದ (ನಾಟಕಶಾಲೆಯಲ್ಲಿರುವ) ನಟಪುರುಷನ ಚಕ್ರವರ್ತಿಪದವಿಯೂ, ತರಗತಿಗೆ ಒಬ್ಬನೇ ಆಗಿ ಶಾಲೆಯಲ್ಲಿ ವ್ಯಾಸಂಗಮಾಡುವ ವಿದ್ಯಾರ್ಥಿಯ ಪ್ರಾಥಮ್ಯವೂ ಹಾಸ್ಯಾಸ್ಪದವೇ ಸರಿ. ಮತ್ತು ಶುಕ್ತಿರಜತದ ನಿರ್ಮಾಣಕರ್ತನಿಗೆ ಎಷ್ಟು ಬುದ್ಧಿ ಬೇಕು? ಎಷ್ಟು ಪರಾಕ್ರಮವು ಮತ್ತು ಎಷ್ಟು ತಪಸ್ಸು ಆವಶ್ಯಕವು? ಹಾಗೆಯೇ ಶುಕ್ತಿರಜತದಂತೆ "ಮಿಥ್ಯಾ" ಆಗಿರುವ ಈ ಜಗತ್ತಿನ ಸೃಷ್ಟಿಗೆ ವಿಷ್ಣುವು ಎಷ್ಟು ಬುದ್ಧಿ ಕೌಶಲ್ಯವನ್ನು ಖರ್ಚು ಮಾಡಬೇಕು? ಇಂಥ ಸುಳ್ಳು ಜಗತ್ತಿನ ಸ್ವಾಮಿತ್ವವು ಎಷ್ಟು ಶೋಭಾಯಮಾನವಾದುದು? ಬ್ರಹ್ಮಭಿನ್ನವಾದ ಜಗತ್ತೆಲ್ಲವೂ ಶುಕ್ತಿರಜತದಂತೆ ಸುಳ್ಳಾದ ಮೇಲೆ ಅವನು ಯಾರಿಗೆ ನಿಯಾಮಕನು ಎಂದು ಹೇಳಬೇಕು?

ಆದುದರಿಂದ ಪ್ರತ್ಯಕ್ಷಾದಿ ಪ್ರಮಾಣ ಸಿದ್ಧವಾದ ವಿಯದಾದಿ (ಆಕಾಶವೇ ಮೊದಲಾದ) ಸರ್ವಜಗತ್ತೂ ಅತ್ಯಂತ ಸತ್ಯವಾದುದೆಂದು ತಾವು ಈ ದಿವಸ ಪ್ರತಿ

ಪಾದನೆ ಮಾಡಿ ತೋರಿಸಿದರೆ ಇಂಥ ಜಗಜ್ಜನಕನ ಮಹಿಮೆಯು ಅತ್ಯದ್ಭುತವೇ ಸರಿ ಎಂದು ನಾವು ನಿಶ್ಚಯಿಸಬಹುದು. ಅನ್ಯಥಾ ವಿಷ್ಣುವಿನ ಸರ್ವೋತ್ತಮತ್ವ ಸಾಧನಾರ್ಥವಾಗಿ ತಾವು ತೆಗೆದುಕೊಂಡ ಬಹು ಪ್ರಯಾಸವು ಭಸ್ಮದಲ್ಲಿ ಮಾಡಿದ ಹೋಮದಂತೆ ನಿರರ್ಥಕವಾಗುವದು.

**ಉತ್ತರ—ಶ್ರೀ ಶ್ರೀಗಳವರು—** ಶ್ರೀ ಕೃಷ್ಣನ ವಾಕ್ಯಗಳ ಆಧಾರದಿಂದಲೇ ನಾವು ಹಿಂದೆ ಪ್ರತಿಜ್ಞೆ ಮಾಡಿದಂತೆ ಅಂಬರಾದಿ ಸರ್ವಪ್ರಪಂಚವೂ ಸತ್ಯವೆಂದು ಉಪಪಾದನೆ ಮಾಡಿ ತೋರಿಸುತ್ತೇವೆ. ಇಲ್ಲಿ ಸ್ವಲ್ಪ ಉಪೋದ್ಘಾತವು ಆವಶ್ಯಕ ವಾಗಿದೆ. ಪ್ರಥಮತಃ "ಮಿಥ್ಯಾ" ಎಂಬ ಪದಕ್ಕೂ "ಸತ್ಯ" ವೆಂಬ ಪದಕ್ಕೂ ಅರ್ಥವೈಲಕ್ಷಣ್ಯವನ್ನು ನಿಷ್ಕೃಷ್ಟವಾಗಿ ಅವಶ್ಯವಾಗಿ ತಿಳಿಯಬೇಕು. ಇಲ್ಲದಿದ್ದರೆ ನಮ್ಮ ಈ ದಿವಸದ ವಿಚಾರವು ದಾರಿಯಿಲ್ಲದ ಗೊಂಡಾರಣ್ಯದಲ್ಲಿ ಮಾಡುವ ಪ್ರಯಾಣದಂತೆ ಆಗುವದು. ಶುಕ್ತಿರಜತವನ್ನು "ಮಿಥ್ಯಾ" ಎಂದೂ ಅಂಗಡಿ ಯಲ್ಲಿರುವ ರಜತವೇ ಮೊದಲಾದ ಪದಾರ್ಥಗಳನ್ನು ಸತ್ಯವೆಂದೂ ಸರ್ವರೂ ಕರೆಯುತ್ತಾರೆ. ಇವುಗಳೇ ಮೊದಲಾದ ಕೆಲವು ಪದಾರ್ಥಗಳ ವೈಲಕ್ಷಣ್ಯ ಪರಾಮರ್ಶದಿಂದಲೇ "ಸತ್ಯ" ಶಬ್ದಾರ್ಥವನ್ನೂ, "ಮಿಥ್ಯಾ" ಶಬ್ದಾರ್ಥವನ್ನೂ ನಾವು ತಿಳಿಯಬಹುದು.

1. ಶುಕ್ತಿರಜತವು ಪ್ರತೀತಿಮಾತ್ರಕಾಲೀನ ಜನ್ಮವುಳ್ಳದ್ದೆಂದು ಅದ್ವೈತಿ ಗಳು ಹೇಳುತ್ತಾರೆ. ಅಂದರೆ, ಶುಕ್ತಿಯನ್ನು ನೋಡಿ ಇದು ರಜತವು ಎಂಬ ಭ್ರಮವು ನಮಗೆ ಯಾವಾಗ ಬರುವದೋ, ಆಗಲೇ ಆ ರಜತವು ಇರುವಂತೆ ಜ್ಞಾನಕ್ಕೆ ಗೋಚರವಾಗುತ್ತದೆ. ಅದು ವಸ್ತುತಃ ಆಗಲೂ ಇಲ್ಲ. ಹಿಂದೆ ಯಾವಾ ಗಲೂ ಇರಲಿಲ್ಲ. ಮುಂದೂ ಇರುವದಿಲ್ಲ; ಭ್ರಮಕಾಲದಲ್ಲಿ ಮಾತ್ರ ಇರುವಂತೆ ತೋರುವದು.

ಆಕಾಶ, ಕಾಲ, ಇವೇ ಮುಂತಾದ ಕೆಲವು ಪದಾರ್ಥಗಳು **ಅನಾದಿಗಳು.** ಅಂದರೆ ಅವು ಇಲ್ಲದೇ ಇದ್ದ ಕಾಲವೇ ಇಲ್ಲ. ಮತ್ತು ಅಂಗಡಿಯಲ್ಲಿರುವ ರಜತವೂ ಕೂಡ ಬಹುದಿವಸದಿಂದ ಇರತಕ್ಕದ್ದೇ. ನಮಗೆ ಅವುಗಳ ಜ್ಞಾನ ಬರುವ ಕ್ಷಣದಲ್ಲಿ ಉತ್ಪನ್ನವಾದುವುಗಳಲ್ಲ. ಹೀಗೆ ಬಹುದೇಶಕಾಲಸಂಬಂಧವುಳ್ಳ ಪದಾರ್ಥಗಳು ಸತ್ಯವೆಂದೂ, ಭ್ರಮಕಾಲದಲ್ಲಿ ಮಾತ್ರ ತೋರಿ, ಹಿಂದೂ ತೋರದೆ ಮತ್ತು ಭ್ರಮ ಕಾಲದಲ್ಲಿಯೂ ಭ್ರಾಂತನಿಗೆ ಮಾತ್ರ ತೋರಿ ಎಲ್ಲರಿಗೂ ತೋರದೇ ಇರುವ ಪದಾರ್ಥಗಳು (ಅಸತ್ಯ) ಮಿಥ್ಯಾ ಎಂತಲೂ ನಿಶ್ಚಯಮಾಡಬಹುದು.

2. ಕುಂಬಾರನು ಘಟವನ್ನು (ಗಡಿಗೆಯನ್ನು) ನಿರ್ಮಾಣ ಮಾಡಬೇ ಕಾದರೆ ಮಣ್ಣು ಉಪಾದಾನ ಕಾರಣವಾಗುವದು. ಕುಂಬಾರನು, ಚಕ್ರವು, ದಂಡ

ಮುಂತಾದವು ನಿಮಿತ್ತಕಾರಣವೆನ್ನಿಸುವವು. ಇಂಥ ಸಂಭಾವಿತವಾದ ಕಾರಣ ಕಲಾಪಗಳಿಂದ ಹುಟ್ಟಿರುವದರಿಂದ ಘಟವು ಸತ್ಯವೆನ್ನಿಸುವದು. ಶುಕ್ತಿರಜತಕ್ಕೆ (ಗಡಿಗೆಗೆ ಮಣ್ಣಿನಂತೆ) ಸಂಭಾವಿತವಾದ ಯಾವ ಉಪಾದಾನ ಕಾರಣವಾಗಲೀ ನಿಮಿತ್ತಕಾರಣ ( ಚೇತನ, ಕರಣ, ಇತ್ಯಾದಿ ) ವಾಗಲೀ ಇರುವದಿಲ್ಲ. ಕಾರಣ ಜನ್ಯವಲ್ಲದೆ ಪ್ರತೀತಿ ಮಾತ್ರ ಸಿದ್ಧವಾದುದರಿಂದ "ಮಿಥ್ಯಾ" ಎನ್ನಿಸುವದು.

ಹೀಗೆ, ಉಪಾದಾನ ಮತ್ತು ನಿಮಿತ್ತಕಾರಣಗಳ ರಾಹಿತ್ಯವು ( ಇಲ್ಲದೇ ಇರೋಣವು ) ಶುಕ್ತಿರಜತದಲ್ಲಿಯೂ, ಉಪಾದಾನಾದಿ ಕಾರಣಸಮುದಾಯ ವತ್ವವು (ಇರುವದು) ಘಟಸೃಷ್ಟಿಯಲ್ಲಿಯೂ ಕಂಡುಬರುವದರಿಂದ ಶುಕ್ತಿರಜತವು ಮಿಥ್ಯಾ ಎನಿಸುವದು; ಘಟವು ಸತ್ಯವೆನಿಸುವದು.

3. ಶುಕ್ತಿಯಲ್ಲಿ ರಜತಭ್ರಮವು ಎಲ್ಲರಿಗೂ ಯಾವಾಗಲೂ ಬರಲಾರದು. ಕಣ್ಣಿನಲ್ಲಿ ಯಾವುದಾದರೂ ದೋಷವು ಅಥವಾ ಪದಾರ್ಥದಲ್ಲಿಯೇ ದೂರಸ್ಥತ್ವ ಸೌಕ್ಷ್ಮ್ಯಾದಿ ದೋಷಗಳು ಅಥವಾ ಮತ್ತೊಂದು ವಸ್ತುವಿನ ಅತ್ಯಂತ ಸಾದೃಶ್ಯವು ಇವೇ ಮೊದಲಾದ **ದೋಷ ಸಹಕೃತವಾದ ಇಂದ್ರಿಯದಿಂದ** ಉತ್ಪನ್ನವಾದ ಜ್ಞಾನಕ್ಕೆ ಮಿಥ್ಯಾ ಪದಾರ್ಥಗಳು ಇರುವಂತೆ ಕಾಣುವವು. ನಿರ್ದುಷ್ಟವಾದ ಇಂದ್ರಿಯಕ್ಕೆ ಶುಕ್ತಿರಜತ ಪ್ರತೀತಿಯು ಬರುವದಿಲ್ಲ. ಏವಂಚ, **ದೋಷಜನ್ಯ ಜ್ಞಾನವಿಷಯತ್ವ,** ತದಭಾವರೂಪವೈಲಕ್ಷಣ್ಯದಿಂದ ಶುಕ್ತಿರಜತವು ಮಿಥ್ಯಾ ಎಂದೂ, ಅಂಗಡಿಯಲ್ಲಿರುವ ರಜತವು ಸತ್ಯವೆಂದೂ ಪರೀಕ್ಷಕರು ನಿಶ್ಚಯಿಸುತ್ತಾರೆ.

4. ಶುಕ್ತಿಯನ್ನು ನೋಡಿ, ಇದು ರಜತವೆಂದು ಭ್ರಾಂತನಾದ ಪುರುಷನು ಕಣ್ಣು ಬಿಟ್ಟು ಬಗ್ಗಿ ನೋಡಿದ ಮೇಲೆ ಅಯ್ಯೋ ! **ಇಲ್ಲಿ ರಜತವು ಇಲ್ಲವೇ ಇಲ್ಲ** (ನೇದಂರಜತಂ; ನಾಸ್ತ್ಯತ್ರರಜತಂ) ಎಂಬ ಸಮೀಚೀನವಾದ **ಬಾಧ ಜ್ಞಾನವನ್ನು** ಹೊಂದುವನು. ಅಂಗಡಿಯ ಬೆಳ್ಳಿಯಲ್ಲಿ ಇದು ಬೆಳ್ಳಿಯಲ್ಲವೆಂಬ ಬಾಧಜ್ಞಾನವು ಯಾರಿಗೂ ಯಾವ ಕಾಲಕ್ಕೂ ಬರುವದಿಲ್ಲ. ಬೆಳ್ಳಿಯನ್ನು ಭಸ್ಮ ಮಾಡಿ ಬಿಟ್ಟರೂ ಕೂಡ **ಬೆಳ್ಳಿಯು ಇತ್ತು;** ಔಷಧಾರ್ಥವಾಗಿ ಭಸ್ಮಮಾಡಿರುವರು ಎಂದು ಜನರು ವ್ಯವಹಾರ ಮಾಡುವರೇ ಹೊರತು, ಬೆಳ್ಳಿ ಇರಲೇ ಇಲ್ಲ ಎಂದು ತಿಳಿಯಲಾರರು. ಶುಕ್ತಿರಜತದಲ್ಲಿ ಹಾಗಾಗಲಾರದು. ಭ್ರಾಂತಿಜ್ಞಾನವು ಹೋದ ಮೇಲೆ ಇಲ್ಲಿ **ರಜತವು ಇರಲೇ ಇಲ್ಲ** (ನಾಸೀದ್ರಜತಂ) ಎಂದು ಸರ್ವರೂ ತಿಳಿಯುತ್ತಾರೆ. ಆದುದರಿಂದ **ಬಾಧಜ್ಞಾನ ವಿಷಯತ್ವ** ತದಭಾವಗಳಿಂದ ಶುಕ್ತಿ ರಜತವು ಸುಳ್ಳೆಂದೂ ಅಂಗಡಿಯ ರಜತವು ಸತ್ಯವೆಂದೂ ನಿಶ್ಚಿತವಾಗುವದು.

5. ಅಂಗಡಿಯ ಬೆಳ್ಳಿಯಿಂದ ತಟ್ಟೆ, ಬಟ್ಟಲು, ಪಂಚಪಾತ್ರೆಯೇ ಮೊದಲಾದ ಪದಾರ್ಥಗಳನ್ನು ಮಾಡಿಸಬಹುದು. ಆದರೆ ಶುಕ್ತಿರಜತದಿಂದ ಯಾವ ಗೃಹೋ

ಪಯೋಗಿ ಪದಾರ್ಥವೂ ತಯಾರಾಗಲಾರದು. " **ಅರ್ಥಕ್ರಿಯಾಕಾರಿತ್ವ** " ವು ಅಂದರೆ ಭೋಗಸಾಧನವಾದ ನಾನಾ ಪದಾರ್ಥಗಳ ಉತ್ಪಾದಕತ್ವಶಕ್ತಿಯು ಸತ್ಯಪದಾರ್ಥಗಳಿಗೆ ಇರುವದೇ ಹೊರತು ಮಿಥ್ಯಾಭೂತ ಪದಾರ್ಥಗಳಿಗಿರುವದಿಲ್ಲ.

**ಪ್ರಶ್ನೆ**— ಸ್ವಾಮೀ ! ಮಿಥ್ಯಾಭೂತವಾದ ರಜ್ಜು ಸರ್ಪದಿಂದ ಭಯೋತ್ಪತ್ತ್ಯಾದಿಗಳು ಕಂಡಿರುವದಿಲ್ಲವೇ ?

**ಉತ್ತರ**— ರಜ್ಜುಸರ್ಪವು ಭಯಜನಕವಲ್ಲ. ಮತ್ತೇನೆಂದರೆ ರಜ್ಜುವನ್ನು ನೋಡಿ ಇದು ಸರ್ಪವು ಎಂಬ **ಜ್ಞಾನದಿಂದ** ಭಯಕಂಪಾದಿಗಳು ಹುಟ್ಟುತ್ತವೆ. **ಸರ್ಪಭ್ರಮವು** (ಜ್ಞಾನವಿಶೇಷವು) **ಸತ್ಯವಾದುದು.** ಸತ್ಯವಾದ **ಜ್ಞಾನಕ್ಕೆ** ಅರ್ಥಕ್ರಿಯಾಕಾರಿತ್ವವು, ಸರ್ವಸಮ್ಮತವಾದುದು. ಹೀಗೆ ಅರ್ಥಕ್ರಿಯಾಕಾರಿತ್ವ, ತದಭಾವಗಳಿಂದ ಅಂಗಡಿಯ ರಜತವು ಸತ್ಯವೆಂದೂ, ಶುಕ್ತಿರಜತವು " ಮಿಥ್ಯಾ " ಭೂತವೆಂದೂ ನಿರ್ಣಯ ಮಾಡಬಹುದು.

**6.** ಮುಕ್ತಿಯು ಪಾರಮಾರ್ಥಿಕ ಅವಸ್ಥೆಯು; ಬ್ರಹ್ಮಾಪರೋಕ್ಷಜ್ಞಾನವು ಪಾರಮಾರ್ಥಿಕ ವಿಷಯಕವು ಎಂಬುದು ಸರ್ವಜನಸಮ್ಮತವು. ಆದುದರಿಂದ **ಮುಕ್ತ್ಯವಸ್ಥೆಯಲ್ಲಿ** ಜಗತ್ತು ಇರುವದೆಂದೂ, ಬ್ರಹ್ಮಾಪರೋಕ್ಷಜ್ಞಾನಿಗಳು ತಮ್ಮ **ಜ್ಞಾನಾವಸ್ಥೆಯಲ್ಲಿ** ಜಗತ್ತು ಇರುವದೆಂದೂ ತಿಳಿದರೆ ಅದು ಸತ್ಯವಾಗುವದು ಎಂಬುದರಲ್ಲಿ ಸಂಶಯವಿಲ್ಲ.

**7.** ನಿತ್ಯಪದಾರ್ಥಗಳು ಯಾವಾಗಲೂ " ಮಿಥ್ಯಾ " ಆಗಲಾರವು. ನಿತ್ಯವೆಂದರೆ ಸರ್ವಕಾಲದಲ್ಲೂ ಇರುವವು ಎಂದರ್ಥವು. ಹಾಗಿರುವಲ್ಲಿ * **ನಾಸ್ತಿ ನಾಸೀನ್ನಭವಿಷ್ಯತಿ ಇತ್ಯಾಕಾರಕಜ್ಞಾನವಿಷಯತ್ವಂ ಮಿಥ್ಯಾತ್ವಂ** '' ಎಂಬ ಅದ್ವೈತಿಗಳು ಪರಿಷ್ಕಾರ ಮಾಡಿರುವ ಮಿಥ್ಯಾತ್ವವು ಅವುಗಳಿಗೆ ಹೇಗೆ ಬಂದೀತು ? ( ಇದರಂತೆ ಅನಿತ್ಯಪದಾರ್ಥಗಳೂ ಕೆಲವು ಕಾಲಪರ್ಯಂತ ಇರುವದರಿಂದ ಅವೂ ಸಹ ಮಿಥ್ಯಾ ಆಗಲಾರವು ) ಬ್ರಹ್ಮನು ನಿತ್ಯನಾದುದರಿಂದ ಸತ್ಯವಸ್ತುವೆನ್ನಿಸುವನು. ಇದೇ ರೀತಿಯಲ್ಲಿ ಶಾಸ್ತ್ರದಿಂದ ಇನ್ನೂ ಯಾವುದಾದರೂ ವಸ್ತುಗಳು ನಿತ್ಯವೆಂದು ಪ್ರಮಿತವಾದರೆ ಅವುಗಳನ್ನೂ ಸತ್ಯವೆಂದು ನಾವು ನಿರ್ಣಯ ಮಾಡಬೇಕು.

---

* ಈಗ ಇಲ್ಲ; ಹಿಂದಿರಲಿಲ್ಲ; ಮುಂದೂ ಇರುವದಿಲ್ಲ ಎಂಬ ಜ್ಞಾನಕ್ಕೆ ವಿಷಯವಾಗತಕ್ಕ ಪದಾರ್ಥವು ಮಿಥ್ಯಾ ಎನಿಸುವದು ಎಂದು ಅದ್ವೈತಿಗಳು ಹೇಳುತ್ತಾರೆ. **ಈ ಲಕ್ಷಣವು**

ಈ ರೀತಿ ಜಗತ್ತು ಸತ್ಯವೋ ಮಿಥ್ಯಾಭೂತವೋ ಎಂದು ಪರೀಕ್ಷೆಮಾಡುವುದರಲ್ಲಿ ಉದ್ಯುಕ್ತರಾದ ನಮಗೆ ಕೆಲವು ವ್ಯವಸ್ಥಾಪಕ ಸಾಮಗ್ರಿಗಳು ದೊರೆತವು. ಇಂಥ ಪ್ರಾಮಾಣಿಕ ಯುಕ್ತಿಗಳಿಂದ ಸಿದ್ಧವಾಗುವುದಾದರೆ ಜಗತ್ತು ಪಾರಮಾರ್ಥಿಕವು †ಪ್ರಮಾಣಪಾತಾಸಹಿಷ್ಣುವಾದರೆ (ಯುಕ್ತಿ ವಿರುದ್ಧವಾದರೆ) ಮಿಥ್ಯಾಭೂತವು.

ಇನ್ನೊಂದು ಮಾತನ್ನು ಹೇಳಿ ನಮ್ಮ ಉಪೋದ್ಘಾತಪ್ರಕ್ರಿಯೆಯನ್ನು ಮುಗಿಸಿ ಶ್ರೀಕೃಷ್ಣನ ವಾಕ್ಯಾಮೃತಪಾನದಲ್ಲಿ ಆಸಕ್ತರಾಗೋಣ. ಉಗುರಿನಿಂದಾಗುವ ಕೆಲಸಕ್ಕೆ ವಜ್ರಾಯುಧವು ಬೇಕೆ ? ಎಂಬ ಗಾದೆಗೆ ಅನುಸಾರವಾಗಿ "ವಿಶ್ವಂ ಮಿಥ್ಯಾ" ಎಂಬ ತತ್ವ ನಿಶ್ಚಯದ ದೋಷವನ್ನು ತೋರಿಸುವದಕ್ಕೆ ಸಾಕ್ಷಾತ್ಪರಬ್ರಹ್ಮನನ್ನು ಏಕೆ ಸಾಕ್ಷಿಯಾಗಿ ಕರೆಯಬೇಕು ? "ನ ತಸ್ಯ ಹೇತುಭಿಸ್ತ್ರಾಣಂ ಉತ್ಪತನ್ನೇವ ಯೋ ಮೃತಃ" ಎಂಬ ನ್ಯಾಯಾನುಸಾರವಾಗಿ "ನಾನು ವಂಧ್ಯಾಪುತ್ರನು" ಎಂಬ ಉಕ್ತಿಯಂತೆ ಸ್ವವ್ಯಾಹತವಾದ "ವಿಶ್ವಂ ಮಿಥ್ಯಾ" ಎಂಬ ಪ್ರತಿಜ್ಞೆಯು ಆತ್ಮಘಾತದಿಂದಲೇ ಮೃತವಾಗಿರುವದು. ಹೇಗೆಂದರೆ ಸರ್ವವೂ

---

ಶುಕ್ತಿ ರಜತದಲ್ಲಿ ಕಂಡುಬರುವುದು. ಅದರಂತೆ ಈ ಯಾವತ್ತು ಜಗತ್ತೂ ಮಿಥ್ಯಾ ಇರುವದು. ಎಂದು ಅವರ ಸಿದ್ಧಾಂತವು. ಆದರೆ ಕೆಲವು ನವೀನರು ಮಿಥ್ಯಾ ಎಂದರೆ ಅನಿತ್ಯವು ಎಂದು ಅರ್ಥ ಹೇಳುತ್ತಾರೆ. ಈ ಲಕ್ಷಣವು ಪ್ರಕೃತಿ, ಆಕಾಶ, ಕಾಲ ಮೊದಲಾದ ಕೆಲವು ಪದಾರ್ಥಗಳಲ್ಲಿ ಇಲ್ಲದೇ ಹೋದರೂ ಬ್ರಹ್ಮಾಂಡದಲ್ಲಿರುವ ಅನೇಕ ವಸ್ತುಗಳಲ್ಲಿ ಇರುವದರಿಂದ ದ್ವೈತ ವೇದಾಂತಿಗಳಿಗೆ ಅತಿ ವಿರುದ್ಧವಲ್ಲ. ಆಗ ಶುಕ್ತಿ ರಜತ ದೃಷ್ಟಾಂತವನ್ನು ಅದ್ವೈತಿಗಳು ಪರಿತ್ಯಾಗ ಮಾಡಬೇಕಾಗುವದು.

† ಕೆಲವರು ಅದ್ವೈತಿಗಳು ಯುಕ್ತಿ ವಿರುದ್ಧವಾದರೆ ತಾನೇ ಏನು ? ಯುಕ್ತಿಯಿಂದ ಪ್ರತಿಪಾದನೆ ಮಾಡುವುದಕ್ಕೆ ಬರದೇ ಇರುವದೇ ಅವಿದ್ಯಾಮಯವಾದ ಈ ಪ್ರಪಂಚಕ್ಕೆ ಭೂಷಣವು ಎಂದು ಹೇಳುತ್ತಾರೆ.

**ದುರ್ಘಟತ್ವಮವಿದ್ಯಾಯಾಃ ಭೂಷಣಂ ನ ತು ದೂಷಣಂ ।**

ಅವಿದ್ಯೆಯನ್ನು ಯುಕ್ತಿಯಿಂದ ನಿರೂಪಣೆ ಮಾಡುವದಕ್ಕೆ ಬರದೇ ಇರುವುದೇ ಒಂದು ಭೂಷಣವು, ದೂಷಣವಲ್ಲ.

**ಅವಿದ್ಯಾಯಾಃ ಅವಿದ್ಯಾತ್ವೇ ಇದಮೇವ ಹಿ ಲಕ್ಷಣಂ ।**
**ಮಾನಪಾತಾಸಹಿಷ್ಣುತ್ವಂ....॥**

ಅವಿದ್ಯೆಗೆ ಪ್ರಾಮಾಣಿಕ ಯುಕ್ತಿವಿರುದ್ಧವಾಗಿರುವದು ಮತ್ತು ಯುಕ್ತಿಯಿಂದ ಪ್ರತಿಪಾದನೆ ಮಾಡುವುದಕ್ಕೆ ಬರದೇ ಇರುವುದೇ ಮುಖ್ಯ ಲಕ್ಷಣವು.

ಮಿಥ್ಯಾ ಎಂಬ ಪ್ರತಿಜ್ಞಾವಾಕ್ಯವು ಮಿಥ್ಯಾಭೂತವಾದುದೇ ಅಥವಾ ಸತ್ಯವೇ ಎಂದು ವಿಕಲ್ಪ ಮಾಡಿ ಕೇಳಿದರೆ ಅದ್ವೈತಿಗಳು ಉಭಯತಃ ಪಾಶಾರಜ್ಜುವಿನಿಂದ ಗ್ರಸ್ತರಾಗುವರು. ಪ್ರತಿಜ್ಞಾವಾಕ್ಯವು ಸತ್ಯವಾದರೆ **ಸರ್ವವೂ** ಮಿಥ್ಯಾ ಎಂದು ಹೇಳುವದು ಹೇಗೆ? ಪ್ರತಿಜ್ಞಾವಾಕ್ಯವೂ ಮಿಥ್ಯಾ (ಇಲ್ಲವೇ ಇಲ್ಲ) ಎಂದು ಆದರೆ, ಮಿಥ್ಯಾಭೂತವಾದ (ವಂಧ್ಯಾಪುತ್ರನ ವಾಕ್ಯದಂತೆ) ವಾಕ್ಯಕ್ಕೆ ಸಾಧಕತ್ವವು ಇಲ್ಲವಾದುದರಿಂದ ಜಗನ್ಮಿಥ್ಯಾತ್ವವು ಸಿದ್ಧಿಸಲಾರದು. ಹಾಗೂ ವಿರೋಧವು ಬಿಡಲಿಲ್ಲ. ಹೀಗೆ ಸ್ವವ್ಯಾಹತಿರೂಪ ಆತ್ಮಹನನದಿಂದಲೇ ನಷ್ಟಪ್ರಾಣ ವಾದ ಈ ಮತದ ಖಂಡನೆಗಾಗಿ ಅಮೋಘವಾದ ಭಗವದ್ವಾಕ್ಯರೂಪ ಬಾಣಗ ಳನ್ನು ಪ್ರಯೋಗಿಸುವದು ಮೃತಮಾರಣದಂತೆ ವ್ಯರ್ಥವೇ! ಹಾಗಿದ್ದರೂ ಬಹು ಜನರ ಅಂಗೀಕಾರದಿಂದ ಕಲ್ಪಿತ ಗೌರವವನ್ನು ಹೊಂದಿರುವದರಿಂದ “ಮಾಯಾ ವಾದ”ವು ಸಾಕ್ಷಾತ್ ಶ್ರೀ ಕೃಷ್ಣನ ವಾಕ್ಯಗಳಿಗೆ ಪರಮವಿರುದ್ಧವೆಂಬುವದನ್ನು ಪ್ರದರ್ಶನಮಾಡುತ್ತಲಿದ್ದೇವೆ.

## ಪ್ರಕೃತ್ಯಾದಿ ಜಗತ್ತು ಅನಾದಿಯು.

**(1) 1. ನತ್ವೇವಾಹಂ ಜಾತುನಾಸಂ ನತ್ವಂ ನೇಮೇ ಜನಾಧಿಪಾಃ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಂ॥**
—(2. 12.)

---

**ಅನವಸ್ಥಾದಯೋ ದೋಷಾಃ ಸತ್ತಾಂ ನಿಘ್ನಂತಿ ವಸ್ತುನಃ।**
**ಅದ್ವೈತಿನಾಂ ತೇ ಸುಹೃದಃ ಪ್ರಪಂಚೇ ತತ್ಪ್ರಸಂಜಕಾಃ॥**

ವಾದಿಗಳಿಂದ ನಿರೂಪಿತವಾದ ವಸ್ತುವು ಅಪ್ರಾಮಾಣಿಕವೆಂದು ತೋರಿಸುವದಕ್ಕಾಗಿ ಪ್ರತಿ ವಾದಿಗಳಿಂದ ಪ್ರಯೋಗಿಸಲ್ಪಟ್ಟ ಅನವಸ್ಥಾದಿ ದೋಷಗಳು ಅದ್ವೈತಿಗಳಿಗೆ ಅತ್ಯಂತ ಪ್ರಿಯವಾದ ವುಗಳೇ! ಇತ್ಯಾದಿ ರೀತಿಯಲ್ಲಿ ಹೇಳುತ್ತಾರೆ. ಅವಿದ್ಯೆಯು ಮತ್ತು ಅವಿದ್ಯಾಮಯವಾದ ಪ್ರಪಂಚ ವಿಷಯದಲ್ಲಿ ಹೇಳಲ್ಪಟ್ಟ ಈ ಮಾತು ಪ್ರಪಂಚಾಂತರ್ಗತವಾದ ಅದ್ವೈತಮತದ ವಿಷಯ ದಲ್ಲೂ ಅನ್ವಯಿಸುತ್ತದೆ. ನಮ್ಮ ಮತವು ಯುಕ್ತಿವಿರುದ್ಧವಾದರೆ ಏನು ? ನಮ್ಮ ಮತದ ಮೇಲೆ ಅನವಸ್ಥಾದಿದೋಷಗಳು ಬಂದರೆ ಏನು ಎಂದು ಹೇಳಿದಹಾಗಾಯಿತು. ಈ ಪ್ರಕ್ರಿಯೆಯು ಕೇವಲ ಹಾಸ್ಯಾಸ್ಪದವಾದುದು. ದುರನ್ನಭೋಜನದಲ್ಲಿ ಆಸಕ್ತನಾದ ಪುರುಷನನ್ನು ಕುರಿತು **“ಉಚ್ಛಿಷ್ಟಮಪಿಚಾಮೇಧ್ಯಂ ಭೋಜನಂ ತಾಮಸಪ್ರಿಯಂ”** ಎಂದರೆ ಉಚ್ಛಿಷ್ಟ ಮತ್ತು ಅಪವಿತ್ರಾನ್ನಭಕ್ಷಣವು ತಾಮಸನಿಗೆ ಪ್ರಿಯವಾದುದು; ಎಂದು ಶ್ರೀಕೃಷ್ಣನು ಹೇಳಿರುತ್ತಾನೆ; ಇನ್ನು ಮೇಲೆ ನೀನು ಇಂಥ ಅಮೇಧ್ಯಾಹಾರವನ್ನು ಭಕ್ಷಣಮಾಡಬೇಡ ವೆಂದು ಶಾಸ್ತ್ರಜ್ಞರು ಹೇಳುವರು. ಈ ಮಾತನ್ನು ಕೇಳದೆ ಉಚ್ಛಿಷ್ಟಾದಿ ಭಕ್ಷಣವು ನನಗೆ ಅತ್ಯಂತ ಪ್ರಿಯವಾದುದು ಎಂದು ಒರಟು ಉತ್ತರವನ್ನು ಕೊಟ್ಟರೆ ಪ್ರಾಜ್ಞರು ಏನು ಮಾಡುವ ದಕ್ಕಾದೀತು. ? ಆದುದರಿಂದ ಶಾಸ್ತ್ರಸಿದ್ಧವಾದ ದೋಷಗಳನ್ನು ಒಪ್ಪಿಕೊಂಡು ಪರಿಹಾರೋಪಾ ಯವನ್ನು ಪಂಡಿತರು ಹುಡುಕಬೇಕು.

ಈ ವಾಕ್ಯದಿಂದ ಜೀವರುಗಳು ಅನಾದಿನಿತ್ಯರು ಎಂದು ನಿಶ್ಚಿತವಾಗುವದು. ಅನಾದಿಕಾಲದಿಂದ ನಿರ್ದೇಹರಾಗಿ ಜೀವರುಗಳು ಇರಲಾರರು. ಮುಕ್ತಿಯು ಮುಂದೆ ಪ್ರಾಪ್ತವಾಗತಕ್ಕ ಅವಸ್ಥೆಯಾದುದರಿಂದ ಅಮುಕ್ತರಾದ ಈ ದೇಹಧರೆಲ್ಲರೂ ಅನಾದಿಕಾಲದಿಂದಲೂ ಪ್ರಕೃತಿನಿರ್ಮಿತವಾದ ಶರೀರವನ್ನು ಧರಿಸಿ ಯಾವುದೋ ಒಂದು ಕಾಲದಲ್ಲಿ ಮತ್ತು ಯಾವುದೋ ಒಂದು ದೇಶದಲ್ಲಿ ತತ್ತತ್ಕರ್ಮಜನಿತಸುಖದುಃಖಗಳನ್ನು ಅನುಭವಿಸುತ್ತಿದ್ದರೆಂದು ಸಿದ್ಧವಾಗುವದು. ಪ್ರಾಕೃತ ದೇಹಸಂಬಂಧವು ಮುಕ್ತಿಪರ್ಯಂತವೂ ಅಪರ್ಜನೀಯವೆಂದು ಅರ್ಜುನನಿಗೆ ಹೇಳುತ್ತಾನೆ.

**2. ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರ ಪ್ರಾಪ್ತಿಃ..........॥ — (2. 13.)**

ಬಾಲ್ಯದೇಹವುಳ್ಳವನಿಗೆ ಕೌಮಾರದೇಹವೂ ಕುಮಾರನಿಗೆ ಯೌವನದೇಹವೂ ಯುವಕನಿಗೆ ವೃದ್ಧದೇಹವೂ ಬರುವಂತೆ ಜೀವನಿಗೆ ಒಂದು ದೇಹವು ಹೋದರೆ ಮತ್ತೊಂದು ದೇಹವು ಪ್ರಾಪ್ತವಾಗುತ್ತಲೇ ಇರುವದು ( ಆಮುಕ್ತಿ. ) ಇದರಿಂದ ಜೀವರುಗಳಿಗೆ ಸುಖದುಃಖಭೋಗಸಾಧನಗಳಾದ ದೇಹಾದಿಗಳು ಅನಾದಿಕಾಲದಿಂದಲೂ ಬರುತ್ತಿರುವವೆಂದು ಸಿದ್ಧವಾಗುವದರಿಂದ ಕಾಲ, ಆಕಾಶ, ದೇಹಾದಿಗಳ ಉತ್ಪತ್ತಿಗೆ ಮೂಲಭೂತವಾದ ಜಡಪ್ರಕೃತಿ ಇವು ಅವಶ್ಯವಾಗಿಯೂ ಇದ್ದೇ ಇರಬೇಕು. ಶುಕ್ತಿರಜತದಂತೆ ಇವು ಪ್ರತೀತಿ ಮಾತ್ರ ಕಾಲೀನ ಉತ್ಪತ್ತಿ ಉಳ್ಳವುವೆಂದು ಹೇಳಲಾಗುವುದಿಲ್ಲ. ಆದುದರಿಂದ ಪ್ರಕೃತಿ, ಆಕಾಶಾದಿ* ಅನಾದಿ ಪದಾರ್ಥಗಳಿಗೆ ಮಿಥ್ಯಾತ್ವವು ಸಿದ್ಧಿಸಲಿಲ್ಲ.

ಆಕಾಶಾದಿ ಕೆಲವು ಪದಾರ್ಥಗಳು ನಿತ್ಯವೆಂದೂ ಶ್ರೀಕೃಷ್ಣನು ಹೇಳುತ್ತಾನೆ.

**(2) ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಂ—(2. 17.)**

---

***ಜೀವ ಈಶೋ ವಿಶುದ್ಧಾ ಚಿದ್ಭೇದಸ್ತಸ್ಯಾಸ್ತಯೋರ್ದ್ವಯೋಃ ।**
**ಅವಿದ್ಯಾ ತಚ್ಚಿತೋರ್ಯೋಗಃ ಷಡಸ್ಮಾಕಂ ತ್ವನಾದಯಃ ॥**

ಎಂದು ಅದ್ವೈತಿಗಳೂ ಸಹ ಜೀವ ಈಶ್ವರ, ಶುದ್ಧಬ್ರಹ್ಮ, ಇವುಗಳಿಗೆ ಪರಸ್ಪರ ಭೇದ ಅವಿದ್ಯಾ ಮತ್ತು ಅವಿದ್ಯಾಚಿತ್ಸಂಬಂಧ ಇವು ಆರೂ ಅನಾದಿ ಪದಾರ್ಥಗಳೆಂದು ಒಪ್ಪಿರುತ್ತಾರೆ. ಇವು ಆರೂ ದೇಶ ಕಾಲ ಸಂಬಂಧವುಳ್ಳವುಗಳಾಗಿ ಅನಾದಿಕಾಲದಿಂದಲೂ ಇರುತ್ತವೆ ಎಂದು ಒಪ್ಪಿ ಇವುಗಳು ಭ್ರಾಂತಿಕಲ್ಪಿತವು, "ನಾಸ್ತಿನಾಸೀನ್ನಭವಿಷ್ಯತೀತಿ ತ್ರೈಕಾಲಿಕನಿಷೇಧ ಪ್ರತಿಯೋಗಿತ್ವ" ವುಳ್ಳವು ಅಂದರೆ ಹಿಂದೆಯೂ ಇರಲಿಲ್ಲ, ಈಗಲೂ ಇಲ್ಲ ಮುಂದೆಯೂ ಇರುವದಿಲ್ಲವೆಂಬ ಜ್ಞಾನಕ್ಕೆ ವಿಷಯಗಳು ಎಂದು ಹೇಳುವದು ಯುಕ್ತಿವಿರುದ್ಧವು.

ಅರ್ಜುನ ! (ನಿತ್ಯಪದಾರ್ಥವೇ ಇಲ್ಲ ಎಂಬ ಸಂಶಯವು ನಿನಗೆ ಬೇಡ.) ಯಾವುದು ಸರ್ವತ್ರವ್ಯಾಪ್ತವೋ ಅದು ನಾಶರಹಿತವು (ನಿತ್ಯವು) ಎಂದು ನೀನು ತಿಳಿ. ಸರ್ವತ್ರವ್ಯಾಪ್ತವಾದವುಗಳೆಲ್ಲಾ ನಿತ್ಯವಾಗಿರುವವು. ಎಂಬ ಈ ವ್ಯಾಪ್ತಿಯಿಂದ ಆಕಾಶ, ಕಾಲ, ಅಕಾರಾದಿವರ್ಣಗಳು, ವೇದಗಳು, ಮೂಲಪ್ರಕೃತಿಯು ಮುಂತಾದ ಅನೇಕ ಪದಾರ್ಥಗಳಿಗೆ ನಿತ್ಯತ್ವವು ಸಿದ್ಧಿಸಿತು. ಅಂಪರೆ ಇವು ಬಾಧಜ್ಞಾನದಿಂದ ಯಾವ ಕಾಲದಲ್ಲೂ ನಿವೃತ್ತವಾಗಲಾರವು. ಆದುದರಿಂದ ಇಂಥ ಅನಾದಿನಿತ್ಯ ಪದಾರ್ಥಗಳಿಗೆ ಮಿಥ್ಯಾತ್ವಸಾಧಕವಾದ ಪ್ರಮಾಣಗಳು ಒಂದೂ ಇರುವುದಿಲ್ಲ.

ಅನಿತ್ಯವಾದ ಬ್ರಹ್ಮಾಂಡಾಂತರ್ಗತವಾದ ಪೃಥಿವ್ಯಾದಿಭೂತಗಳಿಗೂ ಘಟಪಟಾದಿ ಕಾರ್ಯಗಳಿಗೂ ಸಹ ಮಿಥ್ಯಾತ್ವಾಂಗೀಕಾರವು ಅನುಚಿತವೆಂಬುದನ್ನು ಶ್ರೀಕೃಷ್ಣನು ಬಹು ಪ್ರಕಾರದಿಂದ ತೋರಿಸಿರುತ್ತಾನೆ.

**(3) ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ !—(2. 28.)**

ಹೇ ಅರ್ಜುನ ! ಜೀವ ಶರೀರಗಳು ಅವ್ಯಕ್ತತತ್ವವೇ ಮೂಲಕಾರಣವಾಗಿ ಉಳ್ಳವುಗಳು. ( ಅವ್ಯಕ್ತಶಬ್ದವು ಪ್ರಕೃತಿವಾಚಕವು. ಮೂಲಪ್ರಕೃತಿಯು ಸತ್ವರಜಸ್ತಮೋಗುಣಾತ್ಮಕವು. ಇದರಿಂದ ಪರಿಣತವಾದ ಮಹದಹಂಕಾರ, ಮನಸ್ಸು, ಜ್ಞಾನೇಂದ್ರಿಯ, ಕರ್ಮೇಂದ್ರಿಯ, ಶಬ್ದಾದಿ ಪಂಚವಿಷಯ, ಆಕಾಶಾದಿ ಪಂಚಮಹಾಭೂತ ಇವುಗಳ ದ್ವಾರಾ ಜೀವರುಗಳ ಸ್ಥೂಲದೇಹವು ಪರಿಣಮಿಸಲ್ಪಡುತ್ತದೆ. ) ವ್ಯಕ್ತಮಧ್ಯಾನಿ ಎಂದರೆ ಜನನಮರಣಗಳಿಗೆ ಮಧ್ಯಕಾಲದಲ್ಲಿ ಸರ್ವರಿಗೂ ಸ್ಪಷ್ಟವಾಗಿ ಗೋಚರವಾಗುತ್ತವೆ. ನಂತರ ಅವ್ಯಕ್ತನಿಧನಾನ್ಯೇವ=ಘಟವು (ಒಡೆದುಹೋದನಂತರ) ನಷ್ಟವಾದನಂತರ ಪುನಃ ಸ್ವಕಾರಣವಾದ ಮೃತ್ತಿನಲ್ಲಿಯೇ (ಮಣ್ಣಿನಲ್ಲಿ) ಐಕ್ಯವನ್ನು ಹೊಂದುವಂತೆ ಈ ಶರೀರಗಳು ನಷ್ಟವಾದನಂತರ ಪಂಚಮಹಾಭೂತಗಳಲ್ಲಿಯೂ, ಆ ಪಂಚಮಹಾಭೂತಗಳು, ಇಂದ್ರಿಯತತ್ವಗಳು, ಅಹಂಕಾರತತ್ವವು, ಮಹತ್ತತ್ವವು ಇವುಗಳ ದ್ವಾರಾ ಪುನಃ ಮೂಲಪ್ರಕೃತಿಯಲ್ಲಿಯೇ ಲಯವನ್ನು ಹೊಂದುತ್ತವೆ.

ಪ್ರಕೃತಿಪರಿಣಾಮವು ಹೀಗೆಯೇ ಆಗುವದೆಂಬುದು ಶ್ರೀಕೃಷ್ಣನ ಇತರ ವಾಕ್ಯಗಳಿಂದ ಸ್ಪಷ್ಟವಾಗುತ್ತದೆ.

**(4) ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ||**
**—(14. 5.)**

ಸತ್ವರಜಸ್ತಮೋಗುಣಗಳೆಂಬ ಮೂರು (ತತ್ವರಾಶಿಗಳು) ಗುಣಗಳು ಮೂಲ ಜಡಪ್ರಕೃತಿಯಿಂದ ಉತ್ಪನ್ನವಾದವುಗಳು (ಪರಿಣತವಾದವು); ಎಂದು ಅರ್ಥವು.

**(5) ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವಚ**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥**
**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
—(7. 6.)

ನನ್ನ ಅಧೀನವಾದ ಜಡಪ್ರಕೃತಿಯು ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ, ಮನಸ್ತತ್ವ, ಬುದ್ಧಿತತ್ವ, (ಮಹತ್ತತ್ವದಿಂದ ಸಹಿತವಾದ) ಅಹಂಕಾರತತ್ವ ಎಂದು ಎಂಟುಪ್ರಕಾರವಾಗಿ ಇರುತ್ತದೆ. (ಎಂಟು ಪ್ರಕಾರವಾಗಿ ಪರಿಣತವಾಗಿರುತ್ತದೆ) ಲೋಕದಲ್ಲಿ ಕಾಣುವ ಸರ್ವ ಜೀವಶರೀರಗಳೂ ಇವುಗಳೇ ಮೂಲಕಾರಣವಾಗಿ ಉಳ್ಳವು ಎಂದು ತಿಳಿ ಎಂದು ಅರ್ಥವು. " ನನ್ನ ಆಧೀನವಾದ " ಎಂದು ಶ್ರೀಕೃಷ್ಣನು ಹೇಳಿರುವದರಿಂದ ಪ್ರಕೃತಿಯು ಪರಿಣಾಮ ಹೊಂದುವ ಸ್ವಭಾವವೂ ಕೂಡ ಪರಮಾತ್ಮನ ಅಧೀನವೆಂದು ಗೊತ್ತಾಗುತ್ತದೆ.

**(6) ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಂ (9. 10.)**
ಅಧಿಪತಿಯಾದ ನನ್ನಿಂದ ಪ್ರೇರಿತವಾಗಿ ಪ್ರಕೃತಿಯು ಚರಾಚರ ಜಗತ್ತನ್ನು ಪ್ರಸವಿಸುತ್ತದೆ. (ಹುಟ್ಟಿಸುತ್ತದೆ). ಇಲ್ಲಿ ಜಡಪ್ರಕೃತಿಯು ನಾನಾ ದೇಹಗಳ ರೂಪವಾಗಿ ಪರಿಣಮಿಸುತ್ತದೆ; ಚೇತನ ಪ್ರಕೃತಿಯು ಸರ್ವ ಜೀವರಿಗೂ ದೇಹ ಸಂಯೋಗವನ್ನು ಮಾಡುತ್ತದೆ ಎಂದು ವಿವೇಕವು.

ಹದಿಮೂರನೆಯ ಅಧ್ಯಾಯದಲ್ಲಿಯೂ ಕೂಡ ಪ್ರಕೃತಿಯು ಇದೇ ರೀತಿಯಲ್ಲಿ ನಿರೂಪಿತವಾಗಿದೆ.

**(7) ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವಚ ।**
**ಇಂದ್ರಿಯಾಣಿ ದಶೈಕಂ ಚ ಪಂಚಚೇಂದ್ರಿಯಗೋಚರಾಃ ।**
—(13. 7.)

(ಇವು ಕ್ಷೇತ್ರಗಳು ಅಂದರೆ ಪರಮಾತ್ಮನಿಂದ ಪ್ರೇರಿತವಾಗಿ ಜೀವನ ಸುಖದುಃಖಾನುಭವಗಳಿಗೆ ಹೇತುಭೂತ ದೇಹೋಪಾದಾನಕವಾದ ಜಡದ್ರವ್ಯಗಳು) ಪಂಚಮಹಾಭೂತಗಳು, ಅಹಂಕಾರತತ್ವವು (ಮಹತ್ತತ್ವದಿಂದ ಸಹಿತವಾದ), ಬುದ್ಧಿತತ್ವವು, ತ್ರಿಗುಣಾತ್ಮಕಪ್ರಕೃತಿಯು, ಹನ್ನೊಂದು ಇಂದ್ರಿಯತತ್ವಗಳು, ಪಂಚತನ್ಮಾತ್ರಾಗಳು (ಇಂದ್ರಿಯ ವಿಷಯಗಳು), ಹೀಗೆ ಇಪ್ಪತ್ತುನಾಲ್ಕು ತತ್ವಗಳೂ ಕ್ಷೇತ್ರವೆನಿಸುವವು.

ಇದು ಸ್ಥಿತಿಕಾಲದ ವಿಭಾಗವಾದುದರಿಂದ ಮೂಲಪ್ರಕೃತಿಗೂ ಇಂದ್ರಿಯಾದಿಗಳಿಗೂ ಇರುವ ಕಾರ್ಯಕಾರಣಭಾವವು ಸ್ಫುಟವಾಗುವದಿಲ್ಲ. ಶ್ರೀ ಕೃಷ್ಣನು ಹೇಳುತ್ತಾನೆ.

(8) **ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ॥**

—(13. 21.)

ಶರೀರೇಂದ್ರಿಯಾದಿ ರೂಪೇಣ ಪರಿಣಾಮ ಹೊಂದುವಸರಲ್ಲಿ ಜಡಪ್ರಕೃತಿಯು ಮೂಲಕಾರಣವು. (ಜೀವನಿಗೆ ಶರೀರೇಂದ್ರಿಯಾದಿಗಳ ಸಂಯೋಗ ಮಾಡುವುದರಲ್ಲಿ ಚೇತನ ಪ್ರಕೃತಿಯು ಕಾರಣಳು.)

ಇಷ್ಟು ವಾಕ್ಯಗಳಿಂದ 1. ಮೂಲ ಪ್ರಕೃತಿಯಿಂದ ಮಹದಹಂಕಾರಾದಿ ದ್ವಾರಾ ಜೀವನ ಶರೀರೇಂದ್ರಿಯಗಳು ಪರಿಣಿತವಾದುವು. 2. ಪರಿಣಾಮಕ್ಕೆ ನಿಯಾಮಕನು ( ಅಂದರೆ ನಿಮಿತ್ತಕಾರಣನು ) ನಾರಾಯಣನು ಎಂಬ ಎರಡು ನಿಶ್ಚಯಗಳು ಏರ್ಪಟ್ಟವು.

ಪ್ರಕೃತಿಯಿಂದ ದೇಹಾದಿಗಳ ಪರಿಣಾಮವೂ ಅವುಗಳಿಗೆ ಪುನಃ ಪ್ರಕೃತಿಯಲ್ಲಿ ಲಯವೆಂಬ ಕಾರ್ಯವೂ ವಿಚ್ಛೇದವೇ ಇಲ್ಲದೆ ಪುನಃ ಪುನಃ ಅನಂತಕಾಲದಲ್ಲೂ ನಡೆಯುತ್ತಿರುವುದೆಂದೂ ಅಂಥ ಪುನಃ ಪುನಃ ಜಗನ್ನಿರ್ಮಾಣಕಾರ್ಯದಲ್ಲಿ ತಾನೇ ನಿಮಿತ್ತಕಾರಣನೆಂದೂ ಶ್ರೀ ಕೃಷ್ಣನು ಹೇಳುತ್ತಾನೆ.

(9) **ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ ।
ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ ।
ಭೂತಗ್ರಾಮಸ್ಸ ಏವಾಯಂ ಭೂತ್ವಾಭೂತ್ವಾಪ್ರಲೀಯತೇ ।
ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥**

—(8. 18. 19.)

ಅರ್ಥವು— ಬ್ರಹ್ಮದೇವರ ಹಗಲು ಪ್ರಾಪ್ತವಾದಾಗ ( ಸೃಷ್ಟಿಕಾಲದಲ್ಲಿ ) ಸಕಲ ಕಾರ್ಯಗಳೂ ಅವ್ಯಕ್ತನಾಮಕ ಭಗವಂತನಿಂದ ಪ್ರೇರಿತವಾಗಿ ಅವ್ಯಕ್ತನಾಮಕತತ್ವದಿಂದ ( ಪರಿಣತವಾಗಿ ) ಹುಟ್ಟುವವು. ಬ್ರಹ್ಮದೇವರ ರಾತ್ರಿಯು ಪ್ರಾಪ್ತವಾದಾಗ ( ಮಹಾಪ್ರಳಯದಲ್ಲಿ ) ಉತ್ಪನ್ನವಾದ ಸರ್ವ ಕಾರ್ಯಗಳೂ ಅವ್ಯಕ್ತನಾಮಕ ತತ್ವದಲ್ಲಿ ಪುನಃ ಲಯವನ್ನು ಹೊಂದುತ್ತವೆ. ( ಸ್ವೋಪಾದಾನ ಕಾರಣದಲ್ಲಿ ಐಕ್ಯ ಹೊಂದುತ್ತವೆ ಎಂದು ಅರ್ಥವು ); ಮತ್ತು ಅವ್ಯಕ್ತನಾಮಕ ಭಗವಂತನಲ್ಲಿ ಲೀನವಾಗುತ್ತವೆ. ಇದೇ ಜನ್ಮಲಯ ವಿಶಿಷ್ಟವಾದ ಕಾರ್ಯಸಮುದಾಯವು ಪರಬ್ರಹ್ಮನ ಪ್ರತಿ ಹಗಲಿನಲ್ಲಿಯೂ ( ಪ್ರತಿಸೃಷ್ಟಿಕಾಲದಲ್ಲೂ ) ಹುಟ್ಟಿ, ಪ್ರತಿ ರಾತ್ರಿ ಕಾಲದಲ್ಲಿಯೂ ( ಪ್ರತಿ ಮಹಾಪ್ರಳಯಾವಸ್ಥೆಯಲ್ಲಿಯೂ ) ಲಯವನ್ನು ಹೊಂದುತ್ತಲೇ ಇರುತ್ತದೆ. ಪುನಃ ಹಗಲಾದಾಗ ಅವಶವಾಗಿ ( ದೈವಾಧೀನವಾಗಿ ) ಹುಟ್ಟುತ್ತದೆ.

ಈ ವಾಕ್ಯಗಳಿಂದ ಈಶ್ವರನ ಸೃಷ್ಟಿವ್ಯಾಪಾರವು ಪ್ರವಾಹತಃ ಅನಂತ ಕಾಲದಲ್ಲಿಯೂ ಪರ್ಯವಸಾನವಾಗದೇ ಯಾವಾಗಲೂ ನಡೆಯುತ್ತಲೇ ಇರುವುದೆಂದು

ನಿಶ್ಚಿತವಾಗುವದು. ನವಮಾಧ್ಯಾಯದಲ್ಲಿಯೂ ಕೃಷ್ಣನು ಹೀಗೆ ನಿರೂಪಿಸಿರುತ್ತಾನೆ.

**(10) ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಂ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಂ ।**
**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥**
—(9. 7-8.)

ಎಲೈ ಕುಂತೀಪುತ್ರನೇ ! ಪ್ರಳಯ ಕಾಲದಲ್ಲಿ ಸರ್ವಭೂತಗಳೂ ನನ್ನ ಅಧೀನವಾದ ಸತ್ವಾದಿಗುಣಾತ್ಮಕ ಪ್ರಕೃತಿಯಲ್ಲಿ ಲಯ ಹೊಂದುತ್ತವೆ. (ಜಡಗಳು ಜಡಪ್ರಕೃತಿಯಲ್ಲಿಯೂ ಚೇತನರು ಚೇತನಪ್ರಕೃತಿಯಲ್ಲಿಯೂ ಲಯಿಸುತ್ತಾರೆಂದು ವಿವೇಕವು.) ಪುನಃ ಆ ಭೂತಗಳನ್ನು ಸೃಷ್ಟಿಕಾಲದಲ್ಲಿ ನಾನು ನಾನಾ ವಿಧವಾಗಿ ಸೃಷ್ಟಿ ಮಾಡುತ್ತೇನೆ. ನನ್ನ ಅಧೀನವಾದ ಜಡಪ್ರಕೃತಿಯನ್ನು ಉಪಾದಾನಕಾರಣವನ್ನಾಗಿ ಸ್ವೀಕರಿಸಿ, ಪ್ರಕೃತಿಯ ಅಧೀನವಾದುದರಿಂದಲೇ ಅಸ್ವತಂತ್ರವಾದ ಈ ನಕಲ ಭೂತಸಮೂಹವನ್ನೂ (ಚೇತನಾಚೇತನಾತ್ಮಕ ಪ್ರಪಂಚವನ್ನೂ) ಪುನಃ ಪುನಃ ಸೃಷ್ಟಿಮಾಡುತ್ತೇನೆ.

ಸೃಷ್ಟಿಪ್ರವಾಹವು ಅನಾದಿ ಮತ್ತು ನಿತ್ಯವೆಂಬುದು ಈ ವಾಕ್ಯಗಳಿಂದ ಸ್ಪಷ್ಟವಾಗುತ್ತದೆ. ಆದುದರಿಂದ ಘಟಾದಿ ಕಾರ್ಯಪದಾರ್ಥಗಳು ಸ್ವರೂಪೇಣ ಅನಿತ್ಯವೇ ಆದರೂ ಅವುಗಳ ಸೂಕ್ಷ್ಮ ಭಾಗವು (ಪ್ರಕೃತಿಪರಮಾಣುಗಳು) ನಿತ್ಯವಾಗಿರುವವು. ಏವಂ ಚ, ಪ್ರಕೃತ್ಯುಪಾದಾನಕವಾದ ಸರ್ವ ಕಾರ್ಯ ಪ್ರಪಂಚವೂ ಸೂಕ್ಷ್ಮ ರೂಪದಿಂದ ನಾಶ ಹೊಂದತಕ್ಕವುಗಳಲ್ಲವೆಂಬುದು ಸಿದ್ಧವಾಯಿತು. ಮತ್ತು **"ವಿಸೃಜಾಮಿ ಪುನಃ ಪುನಃ"** ಇತ್ಯಾದಿ ಶ್ರೀ ಕೃಷ್ಣನ ವಚನಗಳಿಂದ ಈ ಸೃಷ್ಟಿಯು ನಾರಾಯಣನಿಂದ ಉದ್ದೇಶಪೂರ್ವಕವಾಗಿ ಕೃತವಾದ ಜ್ಞಾನೇಚ್ಛಾಪ್ರಯತ್ನಪೂರ್ವಕವಾದ ವ್ಯಾಪಾರವು; ನಾರಾಯಣನು ನಿಮಿತ್ತಕಾರಣನು; ಗುಣತ್ರಯಾತ್ಮಕವಾದ ಪ್ರಕೃತಿಯು ಉಪಾದಾನಕಾರಣವು ಎಂಬುದೂ ನಿರ್ಣೀತವಾಗುವುದು.

ಇಷ್ಟು ಉಪನ್ಯಾಸದಿಂದ ಕಾರ್ಯಕಾರಣಾತ್ಮಕವಾದ ಸರ್ವ ಜಗತ್ತೂ ಸತ್ಯವೆಂದು ಹೇಳುವದಕ್ಕೆ ಐದು ಕಾರಣಗಳು ದೊರೆತವು. **1.** ಪ್ರಕೃತಿ, ಆಕಾಶಾದಿಗಳು ಸ್ವರೂಪೇಣ ಅನಾದಿಯಾದವುಗಳು. ಘಟಾದಿಕಾರ್ಯಗಳ ಉಪಾದಾನವಾದ ಮೂಲಜಡಪ್ರಕೃತಿಯು *ಅನಾದಿಯು; ಪ್ರತೀತಿಕಾಲದಲ್ಲಿ ಮಾತ್ರ ಉತ್ಪನ್ನ

---

*ಶುಕ್ತಿರಜತವು ಅವಿದ್ಯೆ ಎಂಬ ಉಪಾದಾನಕಾರಣಜನ್ಯವಾದುದೆಂದು ಕೆಲವರು ಅದ್ವೈತಿಗಳು ಹೇಳುತ್ತಾರೆ. ಅವಿದ್ಯೆಯು ಸತ್ಯವಾದರೆ ಸತ್ಯಭೂತವಾದ ಅವಿದ್ಯೆಯೆಂಬ ಉಪಾದಾನದಿಂದ

ವಾದುದಲ್ಲ. 2. ಪೃಥಿವ್ಯಾದಿ ಈ ಯಾವತ್ತೂ ಕಾರ್ಯಪ್ರಪಂಚವೂ ನಿಯತ ವಾದ ಕಾರಣಸಾಮಗ್ರಿಗಳಿಂದ ಉತ್ಪನ್ನವಾಪುವು. ಮೂಲಜಡಪ್ರಕೃತಿಯು ಉಪಾದಾನಕಾರಣವೂ, ನಾರಾಯಣನು, ಕಾಲ, ಆಕಾಶಾದಿಗಳು ನಿಮಿತ್ತಕಾರ ಣವೂ ಆಗಿರುವವು. 3. ಸೃಷ್ಟಿಪ್ರವಾಹವು ನಿತ್ಯವಾದುದು. ಯಾವಾಗಲೂ ಪರ್ಯ ವಸಾನವನ್ನು ಹೊಂದುವದಿಲ್ಲ. ಆದುದರಿಂದ ಸೃಷ್ಟ್ಯುಪಯೋಗಿಯಾದ ಪ್ರಕೃ ತ್ಯಾದಿ ಕಾರಣ ಸಮೂಹಗಳು ಪರಬ್ರಹ್ಮನಂತೆ ನಿತ್ಯವಾಗಿಯೇ ಇರುವವು. ಮಹಾ ಪ್ರಳಯದಲ್ಲಿಯೂ ಕೂಡ ಪರಬ್ರಹ್ಮನ ಆಶ್ರಯದಲ್ಲಿ ಲೀನವಾಗಿರುವುವು. ಸೃಷ್ಟಿ ಯಾದ ನಂತರ ವ್ಯಕ್ತವಾಗುವವು. ಇಂಥ ನಿತ್ಯ ಪದಾರ್ಥಗಳೂ "ಮಿಥ್ಯಾ" ಆಗುವುದಾದರೆ ಪರಬ್ರಹ್ಮನೂ ಮಿಥ್ಯಾ ಆಗಬೇಕಾದೀತು! 4. ಈ ಕಾರಣ ಗಳಿಂದಲೇ ಜಗತ್ತು ಇರಲೇ ಇಲ್ಲ ಎಂಬ ಬಾಧಜ್ಞಾನವೂ ಕೂಡ ಯಾರಿಗೂ ಯಾವಾಗಲೂ ಬರುವಹಾಗಿಲ್ಲ. ಜಗತ್ತು ಸೂಕ್ಷ್ಮರೂಪೇಣ ಯಾವಾಗಲೂ ಇರು ವದು ಎಂದು ಶ್ರೀ ಕೃಷ್ಣನು ಹೇಳಿರುವನು. ಹೀಗಿರುವಲ್ಲಿ ಜಗತ್ತು ಇರಲಿಲ್ಲ ಎಂಬ ಜ್ಞಾನವು ಹೇಗೆ ತಾನೇ ಬಂದೀತು? ಬಾಧಜ್ಞಾನಕ್ಕೆ ವಿಷಯುವಾಗದಿರುವದರಿಂದಲೂ ಈ ಜಗತ್ತು ಸತ್ಯವೆಂದು ಸಿದ್ಧವಾಯಿತು. 5. ಮತ್ತು ಸಾಕ್ಷಾಚ್ಛ್ರೀಮ ನಾರಾಯಣನ ಜ್ಞಾನಕ್ಕೆ ವಿಷಯವಾಗಿರುವ ಈ ಜಗತ್ತನ್ನು ದೋಷಜನ್ಯಪ್ರ ತೀತಿಗೆ ವಿಷಯವೆಂದು ಯಾರಿಗೆ ತಾನೇ ಹೇಳುವದಕ್ಕೆ ಬಾಯಿ ಬಂದೀತು? ಪ್ರಮಾತ್ಮಕ ಜ್ಞಾನಸ್ವರೂಪಿಯಾದ ಶ್ರೀ ಹರಿಯು ಈ ಜಗತ್ತನ್ನು ನಾನೇ ಪುನಃ ಪುನಃ ಸೃಷ್ಟಿ ಮಾಡುತ್ತೇನೆ ಎಂದು ಶಪಥಪೂರ್ವಕವಾಗಿ ಅನೇಕವೇಳೆ ಹೇಳಿರು ವದರಿಂದ ಜಗತ್ಸತ್ಯತ್ವವು ಭಗವದ್ವಚನದಿಂದ ಅನುಗ್ರಹೀತವಾಗಿ ವಜ್ರಲೇಪದಂತೆ ಸುಸ್ಥಿರವಾಯಿತು.

ಕಿಂಚ 6. ಪ್ರಯತ್ನಪೂರ್ವಕವಾಗಿ ವಿವಿಧ ಪ್ರಕಾರವಾಗಿ ಸೃಷ್ಟಿ ಮಾಡು ತ್ತೇನೆ ಎಂಬ ಅರ್ಥವುಳ್ಳ **ವಿಸೃಜಾಮಿ** ಎಂಬ ಪದವನ್ನು ಶ್ರೀ ಕೃಷ್ಣನು ಎರಡಾ

---

ಪರಿಣತವಾದ ಶುಕ್ತಿರಜತವು ಸತ್ಯವೇ ಆಗಬೇಕು; ಆಗ ಅದು "ಮಿಥ್ಯಾ" ಎಂದು ಅಂಗೀಕರಿಸು ವದು ಅಯುಕ್ತವಾಗುವದು. ವಸ್ತುತಃ ಶುಕ್ತಿರಜತವು ಮಿಥ್ಯಾ ಎಂಬುದು ಕುರುಬರಿಗೂ ತಿಳಿದ ವಿಷಯವಾಗಿದೆ. ಅವಿದ್ಯೆಯು ಮಿಥ್ಯಾ ಆದರೆ, ಮಿಥ್ಯಾಭೂತಪದಾರ್ಥವು ಮತ್ತೊಂದು ಪದಾರ್ಥ ವಾಗಿ ಪರಿಣಾಮ ಹೊಂದುವದು ಹೇಗೆ? ಕಿಂಚ ಅವಿದ್ಯೆಯು ಮಿಥ್ಯಾ ಆದರೆ ಅದೂ ಭ್ರಾಂತಿ ಕಲ್ಪಿತವು. ಅಂದರೆ ಪ್ರತೀತಿಕಾಲೀನ ಜನ್ಮವುಳ್ಳದ್ದು ಎಂದರ್ಥವು. ಅದು ಶುಕ್ತಿರಜತಕ್ಕೆ ಉಪಾ ದಾನವಾಗುವಂತೆ ಅದಕ್ಕೂ ಉಪಾದಾನಕಾರಣವಾಗಿ ಮತ್ತೊಂದು ಅವಿದ್ಯೆಯನ್ನು ಒಪ್ಪಬೇಕು. ಆ ಅವಿದ್ಯೆಗೆ ಉಪಾದಾನವು ಮತ್ತೊಂದು ಅವಿದ್ಯೆಯು. ಹೀಗೆ ಅವಿದ್ಯಾಪರಂಪರೆಗಳನ್ನು ಒಪ್ಪ ಬೇಕಾಗಿ ಅನವಸ್ಥೆ ಎಂಬ ದೂಷಣೆಯು ಬರುವದು. ಈ ಸಂಕಟ ಪರಿಹಾರಾರ್ಥವಾಗಿ ಕೆಲವರು ಅದ್ವೈತಿಗಳು ಅವಿದ್ಯೆಯನ್ನು ಅನಾದಿ ಎಂದು ಹೇಳುವರು. ಅನಾದಿಯಾದರೆ ಭ್ರಾಂತಿಕಲ್ಪಿತವಾಗ ಲಾರದು. ಅನಾದಿಯಾದರೂ ಮಿಥ್ಯಾ ಆಗುವದಾದರೆ ಪರಬ್ರಹ್ಮನೂ ಮಿಥ್ಯಾ ಆಗಲಿ ಎಂಬ ದ್ವೈತಿ ಗಳ ಆಪಾದನೆಯು ಅಂತೆ ಸಿಡಿಲಿನಂತೆ ದುಸ್ಸಹವಾಗುವದು.

ವರ್ತಿ ಉಪಯೋಗಿಸಿರುತ್ತಾನೆ. ಈ ಅಭಿಪ್ರಾಯವು ಶ್ರೀ ಕೃಷ್ಣನ ಮನಃಪೂರ್ವಕವಾದುದೆಂದು ತೋರಿಸುವ ಅನೇಕ ಶ್ಲೋಕಗಳಿರುವವು.

**(11) ಬೀಜಂಮಾಂ ಸರ್ವಭೂತಾನಾಂ ವಿದ್ಧಿಪಾರ್ಥಸನಾತನಂ ||**
**—(7. 10.)**

ನಾನು ಸರ್ವಭೂತಗಳಿಗೂ ಸನಾತನನಾದ **ಉತ್ಪಾದಕನು** ಅಥವಾ ವ್ಯಂಜಕನು.

**(12) ಮಯಾಧ್ಯಕ್ಷೇಣಪ್ರಕೃತಿಃ ಸೂಯತೇಸಚರಾಚರಂ | –(9.10.)**

ಅಧಿಪತಿಯಾದ ನನ್ನಿಂದ ಪ್ರೇರಿತಳಾಗಿ ಪ್ರಕೃತಿಯು ಚೇತನಾಚೇತನಾತ್ಮಕವಾದ ಈ ಯಾವತ್ತೂ ಜಗತ್ತನ್ನು (ತಾಯಿಯು ಶಿಶುವನ್ನು ಪ್ರಸವಿಸುವಂತೆ) **ಪ್ರಸವಿಸುತ್ತಾಳೆ.**

**(13) ಯಾವತ್ಸಂಜಾಯತೇ ಕಿಂಚಿತ್ಸತ್ವಂಸ್ಥಾವರಜಂಗಮಂ |**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ ||–(13.26.)**

ಚೇತನಾಚೇತನಾತ್ಮಕವಾದ ಈ ಪ್ರಪಂಚದಲ್ಲಿ ಯಾವ ವಸ್ತುವು ಹುಟ್ಟಬೇಕಾದರೂ ಅದು ಚಿತ್‌ಪ್ರಕೃತಿ ಪರಮಾತ್ಮರ **ಸಂಯೋಗದಿಂದ** ಉತ್ಪನ್ನವಾಗುವದೆಂದು ತಿಳಿ. ಈ ಶ್ಲೋಕದ ಅಭಿಪ್ರಾಯವನ್ನು ಶ್ರೀ ಕೃಷ್ಣನು ಹದಿನಾಲ್ಕನೆಯ ಅಧ್ಯಾಯದಲ್ಲಿ ವಿಸ್ತರಿಸಿರುತ್ತಾನೆ.

**(14) ಮಮಯೋನಿರ್ಮಹದ್ಬ್ರಹ್ಮತಸ್ಮಿನ್ಗರ್ಭಂದಧಾಮ್ಯಹಂ |**
**ಸಂಭವಸ್ಸರ್ವಭೂತಾನಾಂ ತತೋಭವತಿಭಾರತ ||-(14.13.)**

ಚಿತ್ಪ್ರಕೃತಿಯು ನನ್ನ ಭಾರ್ಯೆಯು. ಆ ದೇವಿಯಲ್ಲಿ ನಾನು **ಗರ್ಭವನ್ನು ಧಾರಣ ಮಾಡುತ್ತೇನೆ.** (ಜಡಪ್ರಕೃತಿಯಿಂದ ಪರಿಣತವಾದ ತತ್ವಗಳಿಂದ ಕೂಡಿದ ನನ್ನ ಉದರದಲ್ಲಿ ಸ್ಥಿತರಾದ ಜೀವರನ್ನು ರೇತೋರೂಪದಿಂದ ಹೊರಗೆ ಹೊರಡಿಸಿ ಚಿತ್ಪ್ರಕೃತಿಯ ಉದರದಲ್ಲಿ ಸ್ಥಾಪಿಸುತ್ತೇನೆಂದು ಭಾವವು.) ಈ ರೀತಿಯಾಗಿ ಲಕ್ಷ್ಮೀದೇವಿಯಲ್ಲಿ ಗರ್ಭಧಾರಣ ಮಾಡೋಣದರಿಂದ ಸಕಲ ಪ್ರಾಣಿಗಳ ಉತ್ಪತ್ತಿಯೂ ಆಗುತ್ತದೆ.

**(15) ಸರ್ವಯೋನಿಷುಕೌಂತೇಯ ಮೂರ್ತಯಃ ಸಂಭವಂತಿಯಾಃ |**
**ತಾಸಾಂಬ್ರಹ್ಮಮಹದ್ಯೋನಿರಹಂಬೀಜಪ್ರದಃಪಿತಾ ||–(14.4.)**

ದೇವಮನುಷ್ಯಪಶುಪಕ್ಷ್ಯಾದಿ ಯೋನಿಗಳಲ್ಲಿ ಯಾವ ಯಾವ ಪ್ರಾಣಿಗಳು ಹುಟ್ಟುತ್ತವೆಯೋ ಅವುಗಳಿಗೆಲ್ಲಾ ಮಹಾಲಕ್ಷ್ಮಿಯು ಕ್ಷೇತ್ರರೂಪಳಾದ ಕಾರಣಳು (ಭಾರ್ಯೆಯಂತೆ); ನಾನು ಗರ್ಭಾಧಾನ ಮಾಡುವ ತಂದೆಯು.

ಶುಕ್ತಿರೂಪ್ಯಕ್ಕೂ, ರಜ್ಜುಸರ್ಪಕ್ಕೂ ಬೀಜಪ್ರದನಾದ ತಂದೆಯನ್ನೂ, ಗರ್ಭಧಾರಣ ಮಾಡಿ ಪ್ರಸವಿಸುವ ತಾಯಿಯನ್ನೂ ನೋಡಿದವರಾರು ? ಶುಕ್ತಿರೂಪ್ಯದಂತೆ ಜಗತ್ತು ಮಿಥ್ಯಾ; ಈ ಪ್ರಪಂಚವೆಲ್ಲವೂ ಐಂದ್ರಜಾಲಿಕನ ಚಮತ್ಕಾರ ರಚನೆಯಂತೆ ಅವಿದ್ಯಾವಿಜೃಂಭಿತವಾದ ಸುಳ್ಳು ನೋಟವೆಂದು ಹೇಳುವದು ಕಾದಂಬರೀ ಗ್ರಂಥಗಳಿಗೆ ಉಚಿತವಾದ ಸ್ವಕಪೋಲಕಲ್ಪಿತವಾದ ಮಂದಜನ ಮನೋಹರವಾದ ಪ್ರಕ್ರಿಯೆಯೇ ಹೊರತು ಪ್ರಾಮಾಣಿಕವಾದ ಸಿದ್ಧಾಂತೋಕ್ತಿಯಾಗಲಾರದು. ಕಿಂಚ ಲೋಕದಲ್ಲಿರುವ ನಿಮಿತ್ತಮಾತ್ರರಾದ ತಂದೆತಾಯಿಗಳನ್ನೇ ಪುತ್ರರು ದುರ್ಭಾಷಕ್ಕೆ ವಶರಾಗಿ "ನೀನು ನನಗೆ ತಂದೆಯಲ್ಲ; ನೀನು ತಾಯಿಯಲ್ಲ; ನಿನ್ನಿಂದ ನನಗೇನು ?" ಇತ್ಯಾದಿ ನಿಂದೋಕ್ತಿಗಳನ್ನು ಆಡಿದರೆ, "ಸ ಮಾತೃಹಾಭವತಿ; ಪಿತೃಹಾಭವತಿ" ಇತ್ಯಾದಿ ಶ್ರುತ್ಯುಕ್ತ ರೀತಿಯಲ್ಲಿ ಪ್ರಬಲವಾದ ಮಾತೃದ್ರೋಹವೂ ಪಿತೃದ್ರೋಹವೂ ಪ್ರಾಪ್ತವಾಗಿ ಲೋಕದಲ್ಲಿ ಸಜ್ಜನರಿಂದ ನಿಂದಾಸ್ಪದರಾಗುತ್ತಾರೆ. ಹೀಗಿರುವಲ್ಲಿ ಜಗಜ್ಜನಕನಾದ ಶ್ರೀಮನ್ನಾರಾಯಣನನ್ನೂ, ಜಗನ್ಮಾತೆಯಾದ ಲಕ್ಷ್ಮೀದೇವಿಯನ್ನೂ ಕುರಿತು "ಈ ಪ್ರಪಂಚವು ಸುಳ್ಳು; ನೀವು ಏನು ಸೃಷ್ಟಿ ಮಾಡಿ ಕಷ್ಟಪಟ್ಟು ನಮ್ಮನ್ನು ಉದ್ಧರಿಸಿದುದು ?" ಇತ್ಯಾದಿ ರೀತಿಯಲ್ಲಿ ಅರ್ಥ ಕೊಡುವ ಮಾಯಾವಾದವನ್ನು ಶಾಸ್ತ್ರಗ್ರಂಥದಲ್ಲಿ ಪ್ರತಿಪಾದನೆ ಮಾಡಿದರೆ ಭಗವಂತನ ಕೋಪಕ್ಕೆ ನಾವು ಹೇಗೆ ಪಾತ್ರರಾಗದೇ ಇದ್ದೇವು ? "ಮಾತೃದೇವೋಭವ ! ಪಿತೃದೇವೋಭವ !" ಇವೇ ಮುಂತಾದ ಶ್ರುತಿಗಳ ಗೌರವದಿಂದಲಾದರೂ ಜಗನ್ಮಿಥ್ಯಾತ್ವವನ್ನು ಶಾಸ್ತ್ರದಲ್ಲಿ ಒಡಂಬಡಬಾರದು.

ಪರಂತು 7. "ಮಿಥ್ಯಾ" ಪದಾರ್ಥಗಳಿಗೆ ಅರ್ಥಕ್ರಿಯಾಕಾರಿತ್ವವು ಎಲ್ಲಿಯೂ ಕಂಡಿಲ್ಲವೆಂದು ಹಿಂದೆ ನಿರೂಪಿಸಿರುತ್ತೇವೆ. ಪ್ರಕೃತ್ಯುಪಾದಾನಕವಾದ ಈ ಜಗತ್ತಿಗೆ ಅರ್ಥಕ್ರಿಯಾಕಾರಿತ್ವವು ( ಅಂದರೆ ನಾನಾ ವಿಧವಾದ ಪದಾರ್ಥ ನಿರ್ವರ್ತಣದ್ವಾರಾ ಜೀವರುಗಳ ಭೋಗಕ್ಕೆ ಸಾಧನವಾಗುವುದು ) ಇರುತ್ತದೆ ಎಂಬುದನ್ನು ಕೃಷ್ಣನು ಬಹು ಅಧ್ಯಾಯಗಳಲ್ಲಿ ನಿರೂಪಿಸಿರುತ್ತಾನೆ. ಪ್ರಕೃತಿಯು ಮಹದಹಂಕಾರಾದಿ ನಾನಾ ರೂಪೇಣ ಪರಿಣಮಿಸುತ್ತದೆ ಎಂದು ಹಿಂದೆ ನಿರೂಪಿಸಲ್ಪಟ್ಟಿದೆ.

(16) ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।
ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥

—(13. 20.)

( ಚತುರ್ವಿಂಶತಿತತ್ವಾತ್ಮಕವಾದ ) ಪ್ರಕೃತಿಯು ಮತ್ತು ಜೀವನು ಇವೆರಡೂ ಅನಾದಿ ಎಂದು ತಿಳಿ. ಮತ್ತು ಇಚ್ಛಾದ್ವೇಷಾದಿ ವಿಕಾರಗಳೂ ಸತ್ವರಜಸ್ತಮೋಗುಣಗಳೂ ಪ್ರಕೃತಿಯಿಂದ ಉತ್ಪನ್ನವಾದುವು ಎಂದು ತಿಳಿ. ಇದರಿಂದ ಪ್ರಕೃತಿಗೆ ಗುಣತ್ರಯೋತ್ಪತ್ತಿರೂಪ ಅರ್ಥಕ್ರಿಯಾಕಾರಿತ್ವವು ಸಿದ್ಧವಾಯಿತು.

(17) ಪುರುಷಃ ಪ್ರಕೃತಿಸ್ಥೋಹಿ ಭುಂಕ್ತೇ ಪ್ರಕೃತಿಜಾರ್ಗುಣಾರ್ |
ಕಾರಣಂಗುಣಸಂಗೋಽಸ್ಯ ಸದಸದ್ಯೋನಿ ಜನ್ಮಸು ||
—(13. 20.)

ಜೀವನು ಪ್ರಕೃತಿಕಾರ್ಯವಾದ ದೇಹದಲ್ಲಿ ಸ್ಥಿತನಾಗಿ ಪ್ರಕೃತಿಪರಿಣಾಮಗಳಾದ ಸುಖದುಃಖಗಳನ್ನು ಅನುಭವಿಸುತ್ತಾನೆ. ಈ ಜೀವನಿಗೆ ಉತ್ತಮಾಧಮ ನಾನಾ ಯೋನಿಗಳಿಗೆ ಗುಣಗಳ ಸಂಗವೇ ಕಾರಣವು.

ಪ್ರಕೃತಿಗುಣಗಳಿಂದಾಗುವ ಬಂಧನ ಪ್ರಕಾರವನ್ನು ಹದಿನಾಲ್ಕನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣನು ವಿಶದವಾಗಿ ವಿವರಿಸಿರುತ್ತಾನೆ.

(18) ಸತ್ವಂ ರಜಸ್ತಮ ಇತಿಗುಣಾಃ ಪ್ರಕೃತಿಸಂಭವಾಃ |
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಂ ||
ತತ್ರಸತ್ವಂ ನಿರ್ಮಲತ್ವಾತ್ ಪ್ರಕಾಶಕ ಮನಾಮಯಂ |
ಸುಖಸಂಗೇನ ಬಧ್ನಾತಿ ಜ್ಞಾನಸಂಗೇನಚಾನಘ ||
ರಜೋರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಂ |
ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಂ ||
ತಮಸ್ತ್ವಜ್ಞಾನಜಂವಿದ್ಧಿ ಮೋಹನಂ ಸರ್ವದೇಹಿನಾಂ |
ಪ್ರಮಾದಾಲಸ್ಯನಿದ್ರಾಭಿ ಸ್ತನ್ನಿಬಧ್ನಾತಿಭಾರತ ||
ಊರ್ಧ್ವಂಗಚ್ಛಂತಿಸತ್ವಸ್ಥಾ ಮಧ್ಯೇತಿಷ್ಠಂತಿರಾಜಸಾಃ |
ಜಘನ್ಯಗುಣವೃತ್ತಿಸ್ಥಾ ಅಧೋಗಚ್ಛಂತಿತಾಮಸಾಃ ||
—(14. 5-18.)

ಇದರ ಅರ್ಥವು— ಸತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳು ಪ್ರಕೃತಿಯಿಂದ ಉತ್ಪನ್ನವಾದುವುಗಳು. ಇವು ಸ್ವರೂಪೇಣ ನಾಶರಹಿತನಾದ ಜೀವನನ್ನು ಶರೀರದಲ್ಲಿ **ಬಂಧಿಸುತ್ತವೆ.** ಗುಣತ್ರಯಗಳ ಮಧ್ಯದಲ್ಲಿ ಸತ್ವಗುಣವು ಶುದ್ಧವಾದುದರಿಂದ ರೋಗಾದ್ಯುಪದ್ರವನಾಶಕವಾಗಿ ಜೀವನಿಗೆ ತತ್ವಜ್ಞಾನವನ್ನೂ ಸುಖವನ್ನೂ ಉತ್ಪತ್ತಿ ಮಾಡುವುದರ ಮೂಲಕ ಬಂಧಕವಾಗಿರುತ್ತದೆ. ವಿಷಯಾಭಿಲಾಷೆ ಮತ್ತು ವಿಷಯಾಸಕ್ತಿಗಳಿಗೆ ಕಾರಣವಾದ ರಜೋಗುಣವು ರಾಗಾತ್ಮಕವು ( ವಿಷಯಕಾಮಕ್ಕೆ ಮುಖ್ಯ ಕಾರಣವು). ಇದು ನಾನಾವಿಧವಾದ ಲೌಕಿಕ ಉದ್ಯೋಗಗಳಲ್ಲಿ ಆಸಕ್ತನನ್ನಾಗಿ ಮಾಡುವುದರ ಮೂಲಕ ಜೀವನನ್ನು ದೇಹದಲ್ಲಿ ಬಂಧಿಸುತ್ತದೆ. ತಮೋಗುಣವು ಅಜ್ಞಾನಜನಕವು ಮತ್ತು ಸರ್ವ ಜೀವರುಗಳಿಗೂ ಮಿಥ್ಯಾಜ್ಞಾನವನ್ನು ಉಂಟು ಮಾಡುವುದು. ಇದು ಪ್ರಮಾದ

( ವಿಧಿನಿಷೇಧಗಳಲ್ಲಿ ಮನಸ್ಸನ್ನು ಇಡದೇ ಇರೋಣ. ) ಆಲಸ್ಯ ಮತ್ತು ನಿದ್ರಾ ಇವುಗಳನ್ನು ವೃದ್ಧಿ ಮಾಡುವುದರ ಮೂಲಕ ಜೀವನನ್ನು ಬಂಧಿಸುತ್ತದೆ.*

ಸತ್ವಗುಣದಲ್ಲಿ ನಿಷ್ಠಾವುಳ್ಳವರು ಊರ್ಧ್ವಲೋಕಗಳನ್ನು ಹೊಂದುತ್ತಾರೆ. ರಜೋಗುಣಕಾರ್ಯದಲ್ಲಿ ಆಸಕ್ತರಾದವರು ಸ್ವರ್ಗಾದಿಗಳಲ್ಲಿ ವಾಸ ಮಾಡುತ್ತಾರೆ. ನೀಚವಾದ ತಮೋಗುಣದಿಂದ ಬದ್ಧರಾದವರು ನರಕಾದಿ ಅಧೋಗತಿಯನ್ನು ಹೊಂದುತ್ತಾರೆ.

ಹದಿನಾರನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಸತ್ವಗುಣದಿಂದ ಯುಕ್ತರಾದವರ ದೈವೀಸಂಪತ್ತು ಅಂದರೆ ಮೋಕ್ಷಪ್ರಾಪಕವಾದ ಅಭಯ, ಅಂತಃಕರಣಶುದ್ಧಿ ಮುಂತಾದ ಸದ್ಧರ್ಮಗಳನ್ನೂ, ತಮೋಗುಣದಿಂದ ಸಹಿತರಾದವರ ದುರ್ಗತಿಗೆ ಕಾರಣವಾದ ದಂಭ, ದರ್ಪ, ಅಭಿಮಾನ ಇವೇ ಮುಂತಾದ ದುರ್ಗುಣಗಳನ್ನೂ ವಿಸ್ತಾರವಾಗಿ ನಿರೂಪಿಸುತ್ತಾನೆ. ಹದಿನೇಳು ಮತ್ತು ಹದಿನೆಂಟನೆಯ ಅಧ್ಯಾಯದಲ್ಲಿ ಶ್ರದ್ಧಾ, ಆಹಾರ, ಯಜ್ಞ, ತಪಸ್ಸು, ದಾನ, ತ್ಯಾಗ, ಜ್ಞಾನ, ಕರ್ಮ, ಕರ್ತಾ, ಬುದ್ಧಿ, ಧೃತಿ ಮತ್ತು ಸುಖ ಇವುಗಳು ಒಂದೊಂದೂ ಸಾತ್ವಿಕ, ರಾಜಸ, ತಾಮಸ ಭೇದೇನ ಮೂರು ಮೂರು ಪ್ರಕಾರವಾಗಿರುವುವು. ಸಾತ್ವಿಕವು ಪರಿಗ್ರಾಹ್ಯವು; ರಾಜಸತಾಮಸ ಧರ್ಮಗಳು ತ್ಯಾಜ್ಯಗಳು ಎಂದು ಅಧಿಕಾರಿಗಳ ಸಾಧನಸೌಲಭ್ಯಕ್ಕಾಗಿ ತಲೆಯ ಮೇಲೆ ಹೊಡೆದಂತೆ ಒಂದೊಂದನ್ನೂ ಪುನಃ ಒತ್ತಿಒತ್ತಿ ಉಪದೇಶ ಮಾಡಿರುತ್ತಾನೆ. ಹೀಗೆ ನಾನಾ ವಿಧವಾದ ಅರ್ಥಕ್ರಿಯಾಕಾರಿಗಳಾದ ಈ ಪ್ರಪಂಚದ ಪದಾರ್ಥಗಳನ್ನು ಶುಕ್ತಿರಜತದಂತೆ ಮಿಥ್ಯಾ ಎಂದು ಹೇಳುವುದು ಹೇಗೆ ? ಶುಕ್ತಿರಜತದಿಂದ ಯಾವ ದೇವರ ಮಂಟಪವನ್ನು ನಿರ್ಮಾಣ ಮಾಡಬಹುದು ? ರಜ್ಜುಸರ್ಪವು ಯಾರನ್ನು ಕಚ್ಚೀತು ? ಆದುದರಿಂದ ಸರ್ವಥಾ ಅರ್ಥಕ್ರಿಯಾಕಾರಿತ್ವವೆಂಬ ಧರ್ಮದಿಂದ ರಹಿತವಾದ ಶುಕ್ತಿರಜತ ದೃಷ್ಟಾಂತದಿಂದ ಈ ಪ್ರತ್ಯಕ್ಷಾದಿ ಪ್ರಮಾಣಸಿದ್ಧವಾದ ಯಾವತ್ತು ಜಗತ್ತನ್ನೂ ಮಿಥ್ಯಾ ಎಂದು ಹೇಳುವುದು ಆಗ್ರಹಮೂಲಕವೇ ಸರಿ. ಪರಂತು 8. ಸುಖದುಃಖಗಳು ಸಾಕ್ಷಿಪ್ರತ್ಯಕ್ಷಗೋಚರವಾದವುಗಳು. ಅವುಗಳನ್ನು ಹೇಗೆ ತಾನೇ ಸುಳ್ಳೆಂದು ಹೇಳುವುದು? ನಾವು ಅನುಭವಿಸಿದ ಸುಖದ ವಿಷಯದಲ್ಲಾಗಲೀ ದುಃಖದ ವಿಷಯದಲ್ಲಾಗಲೀ ಯಾರಿಗೂ ಯಾವಾಗಲೂ ಬಾಧಜ್ಞಾನವು ಬರುವುದಿಲ್ಲ. 9. ಅಪರೋಕ್ಷಜ್ಞಾನಿಯಾದ ಅರ್ಜುನನೂ ಕೂಡ ತನ್ನ ದಿವ್ಯಚಕ್ಷುಸ್ಸಿನಿಂದ ಈ ಪ್ರಪಂಚವನ್ನು ನೋಡಿರುವುದರಿಂದಲೂ ಜ್ಞಾನಿಗಳಿಗೂ ಜ್ಞಾನಪ್ರದನಾದ ಸಾಕ್ಷಾದ್ಭಗವಂತನು

---

*ಇನ್ನು ಒಂಭತ್ತು ಶ್ಲೋಕಗಳು ಗುಣತ್ರಯಗಳ ಬಂಧನ ವೈಚಿತ್ರ್ಯವನ್ನು ವಿವರಿಸುತ್ತವೆ ವಿಸ್ತರಭಯದಿಂದ ಬರೆಯಲಿಲ್ಲ.

ತಾನೇ ತನ್ನ ಸ್ವರೂಪಭೂತವಾದ ಅತ್ಯಂತ ನಿರ್ದೋಷವಾದ ಚಕ್ಷುಸ್ಸಿನಿಂದ ಈ ಜಗತ್ತನ್ನು ನೋಡುತ್ತಾ, "ಇದನ್ನು ಪುನಃ ಪುನಃ ಸೃಷ್ಟಿಮಾಡುತ್ತೇನೆ. ಸೃಷ್ಟಿ ಪ್ರವಾಹವು ನಿತ್ಯವಾಗಿರುವುದು" ಎಂದು ತನ್ನ ಸ್ವಂತಮುಖದಿಂದ ಹೇಳುತ್ತಿರುವಾಗ ಇದು "ಮಿಥ್ಯಾ" ಅಂದರೆ ಈಗಲೂ ಇಲ್ಲ; ಹಿಂದೆಯೂ ಇರಲಿಲ್ಲ; ಮುಂದೂ ಇರುವುದಿಲ್ಲ ಎಂದು ನಾವು ಹೇಳಬೇಕಾದರೆ ನಮ್ಮ ಎದೆಯು ಅಶ್ಮಸಾರದಂತೆ ದೃಢವಾಗಿರಬೇಕು.

(19) ಶ್ರೀ ಕೃಷ್ಣ ಉವಾಚ— **ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯಸ ಚರಾಚರಂ ಮಮದೇಹೇಗುಡಾಕೇಶ ।** —(11. 7.)

ಸಂಜಯ ಉವಾಚ— **ತತ್ರೈಕಸ್ಥಂ ಜಗತ್ಕೃತ್ಸ್ನಂಪ್ರವಿಭಕ್ತಮನೇಕಧಾ ।**
**ಅಪಶ್ಯದ್ದೇವದೇವಸ್ಯ ಶರೀರೇಪಾಂಡವಸ್ತದಾ ॥**
—(11. 13.)

ಅರ್ಜುನಃ— **ದ್ಯಾವಾಪೃಥಿವ್ಯೋರಿದಮಂತರಂ ಹಿ ವ್ಯಾಪ್ತಂತ್ವಯೈಕೇನದಿಶ ಶ್ಚಸರ್ವಾಃ ॥** —(11. 20.)

ಇದರ ಅರ್ಥವು— ಶ್ರೀ ಕೃಷ್ಣನು ಹೇಳುತ್ತಾನೆ— ಎಲೈ ಗುಡಾಕೇಶ ! ( ಜಿತನಿದ್ರನಾದ ಅರ್ಜುನನೇ ! ) ನಿನಗೆ ಈಗ ತೋರಿಸುವ ನನ್ನ ದೇಹದಲ್ಲಿ ಸ್ಥಾವರಜಂಗಮಾತ್ಮಕವಾದ ಸಕಲ ಪ್ರಪಂಚವನ್ನೂ ಏಕದೇಶದಲ್ಲಿ ಸ್ಥಿತವಾಗಿರುವುದನ್ನು ಈಗ ನೋಡು. ಸಂಜಯನು ಹೇಳುತ್ತಾನೆ— ದೇವದೇವನಾದ ಆ ಪರಮಾತ್ಮನ ವಿಶ್ವರೂಪದಲ್ಲಿ ಅನೇಕ ಪ್ರಕಾರವಾಗಿ ( ಪೃಥಿವ್ಯಾದಿ ಒಂಭತ್ತು ಆವರಣ ರೂಪೇಣ, ಮಹತ್ತತ್ವಾದಿ ಅನೇಕ ಪ್ರಕಾರೇಣ ಮತ್ತು ದೇವ, ದಾನವ, ಮಾನವಾದಿ ಬಹು ಪ್ರಕಾರೇಣ ) ವಿಭಕ್ತವಾದ ಸಂಪೂರ್ಣ ಪ್ರಪಂಚವನ್ನೂ ಆಗ ಅರ್ಜುನನು ನೋಡಿದನು. ಅರ್ಜುನನು ಸ್ತುತಿಸುತ್ತಾನೆ— ಹೇ ಸ್ವಾಮೀ ! ಭೂಮಿ ಮತ್ತು ಅಂತರಿಕ್ಷ ಲೋಕಗಳ ಮಧ್ಯದಲ್ಲಿರುವ ಈ ಸಮಸ್ತ ಪ್ರದೇಶವೂ ಸಮಸ್ತ ದಿಕ್ಕುಗಳೂ ನಿನ್ನೊಬ್ಬನಿಂದಲೇ ವ್ಯಾಪ್ತವಾಗಿವೆ.

ಅಪರೋಕ್ಷ ಜ್ಞಾನಿಯಾದ ಅರ್ಜುನನು ಭೂಲೋಕವನ್ನೂ ಅಂತರಿಕ್ಷ ಲೋಕವನ್ನೂ ಸಮಸ್ತ ದಿಕ್ಕುಗಳನ್ನೂ ಹಾಗೂ ಚರಾಚರಾತ್ಮಕವಾದ ಸಕಲ ಜಗತ್ತನ್ನೂ ನೋಡಿ ಸರ್ವತ್ರವ್ಯಾಪ್ತನಾದ ಪರಮಾತ್ಮನನ್ನು ನೋಡಿರುವನು. ಪರಮಾತ್ಮಾತಿರಿಕ್ತ ಜಗತ್ತು ಅವನ ಕಣ್ಣೆದುರಿಗೆ ನಿಲ್ಲಲಾರದೆ ಅದೃಶ್ಯವಾಗಿ ಹೋಗಲಿಲ್ಲ. ಶುಕ್ತಿರಜತಭ್ರಮೆಯಲ್ಲಿ ಅಧಿಷ್ಠಾನವಾದ ಶುಕ್ತಿಜ್ಞಾನವು ಬಂದಾಗ ರಜತವು ಇಲ್ಲವೆಂದು ಸ್ಫುಟವಾಗಿ ತಿಳಿಯುವದು. ಹೀಗೆ ಪ್ರಪಂಚವು. ಮಿಥ್ಯಾ ಆಗಿದ್ದರೆ ಪ್ರಪಂಚಭ್ರಮಕ್ಕೆ ಅಧಿಷ್ಠಾನನಾದ ಬ್ರಹ್ಮನ ಜ್ಞಾನವು ಅರ್ಜುನನಿಗೆ ದಿವ್ಯಚಕ್ಷುಸ್ಸಿನಿಂದ ಬಂದಾಗ ಸಕಲ ಪ್ರಪಂಚವೂ ಸುಳ್ಳೆಂಬುದು ಅವನಿಗೆ ಸ್ಫುಟ

ವಾಗಿ ಗೊತ್ತಾಗಬೇಕಾಗಿತ್ತು. ಇದಕ್ಕೆ ವಿರುದ್ಧವಾಗಿ ಪ್ರಪಂಚವು ಅತ್ಯಂತ ಸತ್ಯವೆಂಬ ಜ್ಞಾನವೇ ಪ್ರಾಪ್ತವಾದುದರಿಂದ ಜಗತ್ಸತ್ಯತ್ವದಲ್ಲಿ ಗುರುಶಿಷ್ಯರಾದ ಕೃಷ್ಣಾರ್ಜುನರಿಬ್ಬರೂ ಸಾಕ್ಷಿ ಹೇಳುವವರಾದರು.

ಕಿಂಚ 10. ಸಂಸಾರಬಂಧವು ಶುಕ್ತಿರಜತದಂತೆ ಮಿಥ್ಯಾ ಆದರೆ ಅದರ ನಿವೃತ್ತ್ಯರ್ಥವಾಗಿ ಯಾರುತಾನೇ ಏನು ಪ್ರಯತ್ನ ಮಾಡಬೇಕು ? "ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ" ಎಂಬಲ್ಲಿ ಶ್ರೀಕೃಷ್ಣನು ಅಧಿಕಾರಿಗಳು ಬಹು ಕಷ್ಟಪಟ್ಟು ಜ್ಞಾನವನ್ನು ಸಂಪಾದಿಸಿ, ಪಂಚಾಗ್ನಿ ತಪಶ್ಚರ್ಯಾದಿಗಳನ್ನು ಮಾಡಿ ಪವಿತ್ರರಾಗಿ, ಪರಬ್ರಹ್ಮನ ಪ್ರಸಾದದಿಂದ ಮುಕ್ತರಾಗುತ್ತಾರೆಂದು ಹೇಳಿರುತ್ತಾನೆ. ಜಗದ್ಬಂಧವು ಮಿಥ್ಯಾ ಆಗಿದ್ದರೆ ಸ್ವಯಂ ನಿವೃತ್ತವಾಗುತ್ತಿತ್ತು. ಮತ್ತೊಬ್ಬರ ಪ್ರಸಾದಾಪೇಕ್ಷೆಯು ಇರುತ್ತಿರಲಿಲ್ಲ. ಜ್ಞಾನಮಾತ್ರದಿಂದ ರಜತಭ್ರಮವು ನಿವೃತ್ತವಾಗುವಂತೆ ಬ್ರಹ್ಮಜ್ಞಾನಮಾತ್ರದಿಂದ ಜಗದ್ಬಂಧನಿವೃತ್ತಿಯು ಆಗುವದಿಲ್ಲ. ಶ್ರೀ ಕೃಷ್ಣನು ಹೇಳುತ್ತಾನೆ—

**(20) ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂತರಂತಿ ತೇ**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ ||**

ಇದರ ಅರ್ಥವು—ನನಗೇ ಯಾರು ಶರಣಾಗತರಾಗುತ್ತಾರೋ ಅವರೇ ಈ ದುಸ್ತರವಾದ ನನ್ನ ಇಚ್ಛಾಧೀನವಾದ ಪ್ರಕೃತಿಬಂಧವನ್ನು ದಾಟುತ್ತಾರೆ. (ನನ್ನ ಭಕ್ತನು) ನನ್ನ ಪ್ರಸಾದದಿಂದ ಶಾಶ್ವತವಾದ ನಾಶರಹಿತವಾದ ಮುಕ್ತಿಸ್ಥಾನವನ್ನು ಹೊಂದುತ್ತಾನೆ.

ಈ ರೀತಿಯಾಗಿ ಪ್ರಕೃತಿಬಂಧವನ್ನು ಅತಿಕ್ರಮಣಮಾಡಬೇಕಾದರೆ ನಿಷ್ಕಾಮಕರ್ಮಾನುಷ್ಠಾನ, ಗುರುಸೇವಾ, ಶ್ರವಣ, ಮನನ, ಧ್ಯಾನ, ವಿಷ್ಣುವಿನಲ್ಲಿ ಶರಣಾಗತಿಪೂರ್ವಕವಾಗಿ ಅನನ್ಯವಾದ ಭಕ್ತಿಭಾವ, ಕಾಮಕ್ರೋಧಾದಿ ಪರಿಹಾರಾರ್ಥವಾಗಿ ತೀಕ್ಷ್ಣವಾದ ಉಗ್ರ ತಪಸ್ಸು ಇವೇ ಮುಂತಾದ ಬಹು ನಿಯಮಗಳನ್ನು ಶಾಸ್ತ್ರವು ಹೇಳುತ್ತಿರುವುದು. ಬಂಧವು ಮಿಥ್ಯಾಭೂತವಾದರೆ ಸ್ವಯಂನಿವೃತ್ತವಾಗುವುದರಿಂದ ಈ ಯಾವತ್ತು ಪ್ರಯಾಸವು ಮೌಢ್ಯಮೂಲಕವೆಂದೇ ಹೇಳಬೇಕಾಯಿತು. ಪ್ರೇಕ್ಷಾವಂತರಲ್ಲಿ ಶಿಖಾಮಣಿಯಾದ ಶ್ರೀಕೃಷ್ಣನು ಉಪದೇಶಮಾಡಿ, ಅರ್ಜುನನು "ಸರ್ವಮೇತದೃತಂ ಮನ್ಯೇ" ಎಂದರೆ ನೀನು ಹೇಳಿದುದೆಲ್ಲಾ ಯಥಾರ್ಥವೇ ಸರಿ ಎಂದು ಹೇಳಿರುವುದರಿಂದ ಜಗನ್ಮಿಥ್ಯಾತ್ವವು ಭಗವದ್ಗೀತಾ ವಾಕ್ಯಗಳಿಗೆ ಪರಮವಿರುದ್ಧವಾದ ತತ್ತ್ವವಿರುತ್ತದೆ. ಜಗತ್ತು ಸ್ವರೂಪೇಣ ಅವ್ಯಯವು; ಅದು ಜೀವನಿಗೆ ಬಂಧಕವು; ಬಂಧಪರಿಹಾರಾರ್ಥವಾಗಿ "ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರೇವ ಚ" ಇತ್ಯಾದಿ ಶ್ಲೋಕೋಕ್ತ ಅನೇಕ

ಮನೋಧರ್ಮಗಳ ಸಂಪಾದನೆಯು ಆವಶ್ಯಕವು; ಮತ್ತು ಪರಮಾತ್ಮನಲ್ಲಿ ಶರಣಾಗತಿಯೇ ಪರಮಮುಖ್ಯಸಾಧನವು ಎಂಬ ಅರ್ಥವನ್ನು ನಿರೂಪಿಸುವ ಶ್ರೀಕೃಷ್ಣನ ಹದಿನೈದನೆಯ ಅಧ್ಯಾಯದ ವಾಕ್ಯಗಳನ್ನು ಉದಾಹರಿಸಿ ಈ ಉಪನ್ಯಾಸವನ್ನು ಮುಗಿಸುವೆವು.

(21) ಶ್ರೀಭಗವಾನುವಾಚ:—ಊರ್ಧ್ವಮೂಲಮಧಃ ಶಾಖಮಶ್ವತ್ಥಂ ಪ್ರಾಹುರವ್ಯಯಂ ।

**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂವೇದ ಸ ವೇದವಿತ್ ॥**
**ಆಶ್ವತ್ಥಮೇನಂ ಸುವಿರೂಢಮೂಲಮಸಂಗಶಸ್ತ್ರೇಣ ದೃಢೇನ ಛಿತ್ವಾ ।**
**ತತಃ ಪರಂ ತತ್ಪರಿಮಾರ್ಗಿತವ್ಯಂ ಯಸ್ಮಿರ್ಗತಾ ನ ನಿವರ್ತಂತಿ ಭೂಯಃ ।**
**ತಮೇವಚಾದ್ಯಂ ಪುರುಷಂ ಪ್ರಪದ್ಯೇ ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ।**
**ನಿರ್ಮಾನಮೋಹಾ ಜಿತಸಂಗದೋಷಾ ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।**
**ದ್ವಂದ್ವೈರ್ವಿಮುಕ್ತಾಸ್ಸುಖದುಃಖಸಂಜ್ಞೈರ್ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥**—(15. 1-5.)

ಇದರ ಅರ್ಥವು :— ಶ್ರೀ ಕೃಷ್ಣನು ಹೇಳುತ್ತಾನೆ :— ಪ್ರತ್ಯಕ್ಷಾದಿ ಪ್ರಮಾಣ ಸಿದ್ಧವಾದ ಈ ಜಗದ್ವೃಕ್ಷವು ಪರಮಾತ್ಮ, ಚೇತನ ಪ್ರಕೃತಿ ಮತ್ತು ಅಚೇತನ ಪ್ರಕೃತಿಗಳೆಂಬ ಮೂರು ಉತ್ಕೃಷ್ಟ ಆಧಾರಗಳು ಉಳ್ಳದ್ದು. (ವೃಕ್ಷಕ್ಕೆ ಬೇರಿನಂತೆ ಜಡಪ್ರಕೃತಿಯು ಜಗದ್ವೃಕ್ಷಕ್ಕೆ ಆಧಾರವು; ಬೇರಿಗೂ ಆಶ್ರಯವಾದ ಭೂಮಿಯಂತೆ ಚೇತನ ಪ್ರಕೃತಿಯು ಆಶ್ರಯಳಾಗಿದ್ದಾಳೆ; ಭೂ ದೇವತೆಯು ವಿಲಕ್ಷಣವಾಗಿದ್ದು ವೃಕ್ಷಕ್ಕೆ ಆಶ್ರಯವಾಗಿರುವಂತೆ ಜಗದ್ವೃಕ್ಷಕ್ಕೆ ಪರಮಾತ್ಮನು ವಿಲಕ್ಷಣ ಆಶ್ರಯನು.) ವಿಷ್ಣು, ಚೇತನಪ್ರಕೃತಿಗಳಿಂದ ನೀಚರಾದ ಮಹದಹಂಕಾರಾದಿ ತತ್ವಗಳು ಮತ್ತು ಇವುಗಳ ಅಭಿಮಾನಿ ದೇವತೆಗಳು ಪ್ರಸಿದ್ಧ ವೃಕ್ಷದ ಶಾಖೆಯಂತೆ ಜಗದ್ವೃಕ್ಷದಲ್ಲಿರುತ್ತಾರೆ. ಜಗದ್ವೃಕ್ಷಕ್ಕೆ ವೇದಗಳು ಪ್ರಸಿದ್ಧ ವೃಕ್ಷದ ಪತ್ರಗಳಂತೆ ಇರುತ್ತವೆ. (ಲೋಕದಲ್ಲಿ ಪ್ರಸಿದ್ಧವೃಕ್ಷದಲ್ಲಿ ಹೇಗೆ ಎಲೆಗಳು ಹುಟ್ಟಿದ ನಂತರವೇ ಫಲೋತ್ಪತ್ತಿಯಾಗುವುದೋ, ಹಾಗೆಯೇ, ವೇದಾರ್ಥ ಜ್ಞಾನವಾದನಂತರ ಸಾಧನೆಯನ್ನು ಆಚರಿಸಿದವನಿಗೆ ಕಾಮಮೋಕ್ಷರೂಪವಾದ ಫಲಪ್ರಾಪ್ತಿಯಾಗುವುದರಿಂದ ವೇದಗಳು ಪತ್ರಗಳಂತೆ ಎಂದು ನಿರೂಪಿತವಾ

ಯಿತು.) ಇಂಥ ಜಗದ್ವೃಕ್ಷವು 'ಅಶ್ವತ್ಥಂ' ಎಂದರೆ ಅತಿ ಚಂಚಲವಾಗಿ ಪ್ರತಿಕ್ಷಣವೂ ವಿಕಾರವನ್ನು ಹೊಂದುತ್ತಿರುವದು ಎಂದೂ, ಹಾಗಾದರೂ **ಪ್ರವಾಹತಃ ಅವ್ಯಯವು** ಅಂದರೆ ನಾಶರಹಿತವಾಗಿ ಅನಾದಿ ನಿತ್ಯವಾಗಿರುವದೆಂದೂ ಜ್ಞಾನಿಗಳು ಹೇಳುತ್ತಾರೆ............ಇಂಥ ಪ್ರಬಲವಾದ ವಿಷ್ಣುವೇ ಮೊದಲಾದ ಆಶ್ರಯವುಳ್ಳ ಪ್ರತಿಕ್ಷಣವೂ ವಿಕಾರವನ್ನು ಹೊಂದತಕ್ಕ ಈ ಜಗದ್ವೃಕ್ಷವನ್ನು ವೈರಾಗ್ಯವೆಂಬ ಸಾಣೆಯಿಂದ ಹರಿತವಾದ, ದೃಢವಾದ ಜ್ಞಾನಾಖ್ಯ ಖಡ್ಗದಿಂದ ಛಿತ್ವಾ—ಭೇದನಮಾಡಿ (ಅಂದರೆ ಈ ಜಗತ್ತಿಗೆ ಮೂಲಭೂತನು ಲೋಕವಿಲಕ್ಷಣನಾದ ಪರಮಾತ್ಮನು; ಜಗತ್ತು ಬಹುಪ್ರಕಾರವಾಗಿರುವದು; ಪ್ರತಿದಿವಸವೂ ವಿಕಾರವನ್ನು ಹೊಂದುತ್ತಲಿರುವದು; ಆದರೆ ಜಗತ್ಪ್ರವಾಹವು ನಾಶರಹಿತವಾಗಿ ಸರ್ವದಾ ಇರುವದು ಎಂದು ವಿವೇಚನೆ ಮಾಡಿ ತಿಳಿದುಕೊಂಡು), ತದನಂತರ ಯಾವ ಪರಬ್ರಹ್ಮನಲ್ಲಿ ಪ್ರವಿಷ್ಟರಾದರೆ ಪುನಃ ಸಂಸಾರಕ್ಕೆ ಬರುವದಿಲ್ಲವೋ ಅಂಥ ಪರಬ್ರಹ್ಮನನ್ನು ಶ್ರವಣಮನನಾದಿಗಳಿಂದ ಹುಡುಕಬೇಕು. (ಇಂಥ ಜ್ಞಾನಪ್ರಾಪ್ತಿಗೆ ಉಪಾಯವನ್ನೂ ಕೃಷ್ಣನು ಹೇಳುತ್ತಾನೆ—) ಅನಾದಿಯಾದ ಈ ಸಂಸಾರ ಪ್ರವಾಹವು ಯಾವಾತನಿಂದ ಉಂಟಾಯಿತೋ ಅಂಥ ಪುರಾಣಪುರುಷನನ್ನೇ ಶರಣು ಹೊಂದಬೇಕು. ಮತ್ತು ಅಭಿಮಾನದಿಂದಲೂ ಮಿಥ್ಯಾಜ್ಞಾನದಿಂದಲೂ ರಹಿತರಾಗಿ, ವಿಷಯಾಸಕ್ತಿ ಎಂಬ ದೋಷವನ್ನು ಜಯಿಸಿ ಭಗವತ್ಕಥಾಶ್ರವಣಾದಿಗಳಲ್ಲಿ ನಿರತರಾಗಿ ಸಂಪೂರ್ಣವಾಗಿ ವಿಷಯಾಭಿಲಾಷೆಯನ್ನು ತೊರೆದು, ಸುಖದುಃಖಾದಿ ದ್ವಂದ್ವಗಳಿಂದ ರಹಿತರಾದ ರಜೋಗುಣ ತಮೋಗುಣ ಕಾರ್ಯಗಳಿಂದ ಶೂನ್ಯರಾದ ಅಧಿಕಾರಿಗಳು ನಿತ್ಯವಾದ ಪರಮಾತ್ಮನ ವೈಕುಂಠಾದಿ ಲೋಕವನ್ನು ಹೊಂದುತ್ತಾರೆ.

ಈ ರೀತಿಯಾಗಿ ವಿಧಿವಿಹಿತವಾದ ನಿಯತಸಾಧನೆಯಿಂದ ಪ್ರಸನ್ನನಾದ ಪರಮಾತ್ಮನಿಂದಲೇ ದಾಟಲ್ಪಡಬೇಕಾದುದರಿಂದ ಈ ಸಂಸಾರ ಚಕ್ರವು ಅತ್ಯಂತ ಸತ್ಯವಾದುದೇ ಸರಿ. ಶುಕ್ತಿರಜತವನ್ನು ನಾಶಮಾಡುವದಕ್ಕೆ ತಪಸ್ಸಿನಿಂದ ಪ್ರಸನ್ನನಾದ ಮಹಾಪುರುಷನ ಯತ್ನವು ಬೇಕಾಗಿಲ್ಲ.

ii

ಶ್ರೀ ಶ್ರೀಗಳವರು—ಶ್ರೀ ಕೃಷ್ಣನು ಜಗತ್ಸತ್ಯತ್ವವನ್ನು ಪ್ರಾಮಾಣಿಕವಾದ ನಾನಾ ಯುಕ್ತಿಗಳಿಂದ ಪ್ರತಿಪಾದನೆ ಮಾಡಿರುವದಲ್ಲದೆ ಜಗತ್ತು ಈಗಲೂ ಇಲ್ಲ. ಹಿಂದೆಯೂ ಇರಲಿಲ್ಲ. ಮುಂದೂ ಇರುವದಿಲ್ಲ ಎಂಬ "ಮಿಥ್ಯಾವಾದ" ವನ್ನು ಕಂಠತಃ ಸ್ಪಷ್ಟವಾಗಿಯೂ ನಿಂದಿಸುತ್ತಾನೆ.

**(1) ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।**
**—(16. 7.)**

**ಅಸತ್ಯಮಪ್ರತಿಷ್ಠಂತೇ ಜಗದಾಹುರನೀಶ್ವರಂ ॥ —(16. 8.)**

ಇದರ ಅರ್ಥವು— ಅಸುರಜನರು ವಿಧಿವಿಹಿತ ವಿಷಯದಲ್ಲಿ ಪ್ರವರ್ತಿಸುವದನ್ನೂ ನಿಷಿದ್ಧ ವಿಷಯದ ಪರಿತ್ಯಾಗವನ್ನೂ ತಿಳಿದವರಲ್ಲ, ಮತ್ತು ಈ ಅಸುರರು ಜಗತ್ತು ಅಸತ್ಯವು ಅಂದರೆ ಸತ್ವರಹಿತವು, ಶುಕ್ತಿರಜತದಂತೆ ಮಿಥ್ಯಾಭೂತವು ಎಂದು ಹೇಳುವರು; ಮತ್ತು ಸತ್ಯಶಬ್ದವಾಚ್ಯನಾದ ವಿಷ್ಣುವಿನಿಂದ ಸೃಷ್ಟವಾದುದಲ್ಲ ಎಂದೂ, ಬಹುಕಾಲ ಈ ಜಗತ್ತು ಇರತಕ್ಕದ್ದಲ್ಲ; ಅದು ಜ್ಞಾನದಿಂದ ಬಾಧ್ಯವು ಅಥವಾ ಪ್ರತಿಷ್ಠಾನಾಮಕ ವಿಷ್ಣುವಿನಿಂದ ರಕ್ಷಿತವಾಗಿಲ್ಲವೆಂದೂ ಮತ್ತು ಈಶ್ವರ ರಹಿತವೆಂದೂ ಹೇಳುತ್ತಾರೆ.

**ಪ್ರಶ್ನೆ**— ಸ್ವಾಮೀ ! ಶಂಕರಭಾಷ್ಯದಲ್ಲಿ ಈ ಶ್ಲೋಕಕ್ಕೆ ಏನು ಅರ್ಥಮಾಡಿರುತ್ತಾರೆ ?

**ಉತ್ತರ**— "ಅಸತ್ಯಂ" ಎಂಬ ಪದಕ್ಕೆ ನಾವು ಹೇಳಿದಂತೆಯೇ **ಶಂಕರಾಚಾರ್ಯರು— "ಯಥಾವಯಮನೃತಪ್ರಾಯಾಃ ತಥೇದಂ ಜಗತ್ಸರ್ವಮಸತ್ಯಂ"** ಎಂದೂ **"ಅಸತ್ಯಂಸತ್ಯವರ್ಜಿತಂ"** ಎಂದು **ನೀಲಕಂಠವ್ಯಾಖ್ಯಾನದಲ್ಲೂ** ಅರ್ಥ ಮಾಡಿರುತ್ತಾರೆ.

**ಪ್ರಶ್ನೆ**—ಬೌದ್ಧಮತದ ತತ್ವವನ್ನು ವ್ಯಾವೃತ್ತಿಮಾಡುವದಕ್ಕೆ ಶಂಕರಾಚಾರ್ಯರು ಹಾಗೆ ಅರ್ಥಮಾಡಿರಬಹುದು. ಬೌದ್ಧರಷ್ಟೇ ಜಗತ್ತು ಅಸತ್ಯವೆಂದು ಹೇಳುವರು !

**ಉತ್ತರ**— ಹಾಗೆ ಸರ್ವಥಾ ಆಗಲಾರದು. **ಜಗತ್ತಿನ ವಿಷಯದಲ್ಲಿ** ಬೌದ್ಧತತ್ವಕ್ಕೂ ನಮ್ಮ ತತ್ವಕ್ಕೂ ಸ್ವಲ್ಪವೂ ಭೇದವಿಲ್ಲವೆಂದು ಶಂಕರಾಚಾರ್ಯರೇ ಸ್ಪಷ್ಟವಾಗಿ ಅಂಗೀಕರಿಸಿರುತ್ತಾರೆ. ಇಗೋ ಅವರ ವಾಕ್ಯವು— "ಜ್ಞಾನಜ್ಞೇಯ ಜ್ಞಾತೃ ಭೇದ ರಹಿತಂ ಪರಮಾರ್ಥತತ್ವಂ ಅದ್ವಯಮೇತನ್ನ ಬುದ್ಧೇನಭಾಷಿತಂ । **ಯದ್ಯಪಿಬಾಹ್ಯಾರ್ಥನಿರಾಕರಣಂ ಜ್ಞಾನಮಾತ್ರಕಲ್ಪನಾ ಚ ಅದ್ವಯವಸ್ತು ಸಾಮೀಪ್ಯಮುಕ್ತಂ** ಇದಂತು ಪರಮಾರ್ಥತತ್ವಂ ಅದ್ವೈತಂ ವೇದಾಂತೇಷ್ವೇವವಿಜ್ಞೇಯಮಿತ್ಯರ್ಥಃ ॥

ಇದರ ತಾತ್ಪರ್ಯವು— ಅಂಬರಾದಿ ಸಕಲ ಬಾಹ್ಯ ಪ್ರಪಂಚವನ್ನು ನಿರಾಕರಣೆಮಾಡಿ ಸಕಲವೂ ಜ್ಞಾನದಲ್ಲಿ ಕಲ್ಪಿತವೆಂದು (ಭ್ರಾಂತಿಯಿಂದ ಆರೋಪಿತವಾದುದು; ಮಿಥ್ಯಾ) ಎಂದು ಎರಡು ತತ್ವಗಳೂ ಹೇಳುವದರಿಂದ ಈ ವಿಷಯದಲ್ಲಿ ಅದ್ವೈತಮತಕ್ಕೂ ಬೌದ್ಧಮತಕ್ಕೂ ಸ್ವಲ್ಪವೂ ಭೇದವಿರುವದಿಲ್ಲ. ಆದರೆ ಜ್ಞಾನಜ್ಞೇಯ ಜ್ಞಾತೃಭೇದರಹಿತನಾದ ಅದ್ವಿತೀಯನಾದ ಬ್ರಹ್ಮನನ್ನು ಬುದ್ಧನು

ಈ ರೀತಿಯಲ್ಲಿ ಜಗತ್ತು ಸತ್ವರಹಿತವೆಂದು ಇಬ್ಬರೂ ಒಪ್ಪಿಕೊಂಡಿರುವುದ ರಿಂದ ಈ ಶ್ಲೋಕ ವ್ಯಾಖ್ಯಾನದಲ್ಲಿ ಶಂಕರಾಚಾರ್ಯರು ತಮ್ಮನ್ನು ತಾವೇ ಖಂಡನೆ ಮಾಡಿಕೊಂಡಾಯಿತು.

**ಪ್ರಶ್ನೆ**— ಸ್ವಾಮೀ ! ಅದು ಹೇಗೆ ? ಜಗತ್ತು ಅಸತ್ಯವೆಂದು ಅದ್ವೈತಿಗಳು ಎಲ್ಲಿ ಹೇಳುತ್ತಾರೆ. ಜಗತ್ತು ಸದಸದ್ವಿಲಕ್ಷಣವು ಎಂದೇ ಅವರ ಸಿದ್ಧಾಂತವು.

**ಉತ್ತರ**— ಹೌದು ! ಸತ್ತು ಹೋದವನನ್ನು, ವೈಕುಂಠಯಾತ್ರೆಯನ್ನು ಮಾಡಿದನು ಎಂದು ಮೃದುವಾಗಿ ಹೇಳುವುದರಿಂದ ಅವನು ಭೂಲೋಕದಲ್ಲಿ ಬದುಕಿರುತ್ತಾನೆ ಎಂದು ಅರ್ಥವು ಬರುವುದಿಲ್ಲ. ಉಪ್ಪು ಬೇಕು ಎಂದು ಹೇಳುವುದಕ್ಕೆ ಬದಲಾಗಿ ರಾತ್ರಿ ವೇಳೆಯಲ್ಲಿ ಕೆಲವರು ಸಕ್ಕರೆ ಬಡಿಸಬೇಕೆಂದು ಹೇಳುವರು; ಅದ ರಿಂದ ಉಪ್ಪಿಗೆ ಮಾಧುರ್ಯರಸವು ಪ್ರಾಪ್ತವಾಗುವುದಿಲ್ಲ. ಜಗತ್ತನ್ನು ನೀವು ಸತ್ಯವು, ಅಸತ್ಯವು, ಸದಸದಾತ್ಮಕವು, ಸದಸದ್ವಿಲಕ್ಷಣವು; ಘಟವು ಅಥವಾ ಡಿತ್ಥ ಇವೇ ಮುಂತಾದ ಬೇಕಾದ **ಹೆಸರು**ಗಳಿಂದ ಕರೆಯಬಹುದು. "ನಹಿ ನಾಮ್ನಿ ವಿಪ್ರತಿಪತ್ತಿಃ." ಪದಾರ್ಥಗಳಿಗೆ ಹೆಸರನ್ನು ಇಡುವುದು ಸ್ವಲ್ಪಮಟ್ಟಿಗೆ ಶಾಸ್ತ್ರಕಾರರ ಅಧೀನವು. ಆದರೆ **ಪದಾರ್ಥಗಳು** ಬದಲಾಯಿಸಲಾರವು. ಈ ಜಗತ್ತು ಶುಕ್ತಿರಜತದಂತೆ ಹಿಂದೆಯೂ ಇರಲಿಲ್ಲ, ಈಗಲೂ ಇಲ್ಲ, ಮುಂದೂ ಇರುವುದಿಲ್ಲ ಎಂಬ ಲಕ್ಷಣವುಳ್ಳದ್ದು ಎಂದು ಅವರು ಒಪ್ಪಿರುತ್ತಾರೆ. ದೇಶ ಕಾಲ ಸಂಬಂಧವುಳ್ಳ ವಸ್ತುವಿಗೆ ಲೋಕದಲ್ಲಿ ಸತ್ (ಇರುವುದು) ಎಂದೂ, ಹಾಗೆ ಇರುವಂತೆ ತೋರಿದರೂ ಕೂಡ ಪರೀಕ್ಷೆಯಾದ ನಂತರ ಯಾವ ಕಾಲದಲ್ಲಿಯೂ ಯಾವ ದೇಶದಲ್ಲಿಯೂ ಇಲ್ಲದಿದ್ದರೆ ಆ ವಸ್ತುವನ್ನು "ಅಸತ್" ಎಂತಲೂ ಲೋಕ ದಲ್ಲಿ ಕರೆಯುವರು. ಜಗತ್ತು "ಅಸತ್" ಅಥವಾ "ಅಸತ್ಯವು" ಎಂದು ಹೇಳು ವದು ಆಸುರಮತವೆಂದು ಶ್ರೀ ಕೃಷ್ಣನು ನಿಂದಿಸಿರುವುದರಿಂದ ಅದ್ವೈತಿಗಳು ಹೇಳುವಂತೆ ಪ್ರಪಂಚವು ಪ್ರತೀತಿಕಾಲದಲ್ಲಿಯೂ ಇಲ್ಲ, ಹಿಂದೆಯೂ ಇರಲಿಲ್ಲ, ಮುಂದೂ ಇರಲಿಲ್ಲ ಎಂದು ನಾವು ಅಂಗೀಕರಿಸಕೂಡದು.

**ಪ್ರಶ್ನೆ**— ಸ್ವಾಮೀ ! ಈಗ (ಪ್ರತೀತಿಕಾಲದಲ್ಲಿ) ಜಗತ್ತಿನಲ್ಲಿ "ಸತ್ತಾ" ಇಲ್ಲ ಎಂದು ಅದ್ವೈತಿಗಳು ಅಂಗೀಕರಿಸಿರುವರೇ ?

**ಉತ್ತರ**— ಹೌದು ! ತ್ರೈಕಾಲಿಕ ನಿಷೇಧಪ್ರತಿಯೋಗಿತ್ವಂ "ಮಿಥ್ಯಾತ್ವಂ" ಎಂದು ಅವರ ಪರಿಷ್ಕಾರವು. ಮೂರು ಕಾಲದಲ್ಲಿಯೂ ಇಲ್ಲ ಎಂಬ ಜ್ಞಾನಕ್ಕೆ ವಿಷಯವಾದುದು ಮಿಥ್ಯಾ ಎನ್ನಿಸುವದು ಎಂದು ಇದರ ಅರ್ಥವು.

**ಪ್ರಶ್ನೆ**— ವ್ಯಾವಹಾರಿಕ ಸತ್ತಾವುಳ್ಳದ್ದು ಎಂದು ಹೇಳುವರಲ್ಲವೇ ?

**ಉತ್ತರ**— ನಾವು ಹಿಂದೆಯೇ ನಿರೂಪಿಸಿದೆವು. ಶಿಶುವು ಸತ್ತು ಹೋಗಿದ್ದಾಗ ಶಿಶುವು ಏನಾದನೆಂದು ಪ್ರಶ್ನೆ ಮಾಡಲ್ಪಟ್ಟ ಒಬ್ಬಾನೊಬ್ಬ ಗೃಹಸ್ಥನು ಚಿರಂಜೀವಿಯು ಆಗಿರುವನು ಎಂದು ಉತ್ತರ ಕೊಟ್ಟನು. ಇದರಿಂದ ಮೃತ ಶಿಶುವಿಗೆ ಪ್ರಾಣಗಳು ಬರಲಾರವು. ಹಾಗೆಯೇ ಪ್ರಕೃತದಲ್ಲಿ ಅಜ್ಞಜನರಿಗೆ ಜಗತ್ತಿನಲ್ಲಿ "ಸತ್ವ" ವೇ ಇಲ್ಲವೆಂದು ಹೇಳಿದರೆ ಬಹಳ ಜುಗುಪ್ಸೆಯುಂಟಾಗಿ ಶಾಸ್ತ್ರದಲ್ಲಿ ದ್ವೇಷ ಹುಟ್ಟೀತೆಂಬ ಶಂಕೆಯಿಂದ ಅದೇ ಅರ್ಥವನ್ನೇ ಗಂಭೀರವಾದ ರೀತಿಯಲ್ಲಿ " ವ್ಯಾವಹಾರಿಕಸತ್ತಾ ಉಂಟು " ಎಂದು ಅದ್ವೈತ ಗ್ರಂಥಕಾರರು ಹೇಳಿರುತ್ತಾರೆ. ಯಾತಕ್ಕೆಂದರೆ ಸತ್ತಾ ಎಂದರೆ ಇರೋಣವು; ವ್ಯಾವಹಾರಿಕ ಎಂದರೆ ಇಲ್ಲದೆ ಇರುವದು ಎಂದು ಅರ್ಥವು ತಥಾಚ, ಇಲ್ಲದೇ ಇರುವ ಸತ್ತಾ ಇಲ್ಲದೇ ಇರುವ ಇರೋಣವು = ಇಲ್ಲದೇ ಇರುವಿಕೆ = **ಅಸತ್ತು** ಎಂದು ಪ್ರಾಪ್ತವಾಗುವದರಿಂದ ಜಗತ್ತು ಅಸತ್ತು ಎಂದರೂ ವ್ಯಾವಹಾರಿಕ ಸತ್ತಾ ಉಳ್ಳದ್ದು ಎಂದರೂ ಒಂದೇ ಆಗುವದು. ಶಿಶುವು ಸತ್ತನು ಎಂದರೂ ಕಳೆದು ಹೋದ ಪ್ರಾಣವುಳ್ಳವನು ಎಂದರೂ ಒಂದೇ ಅರ್ಥವಾಗುವುದಷ್ಟೇ !

**ಪ್ರಶ್ನೆ**— ಹಾಗಾದರೆ ಘಟವು ಇರುತ್ತದೆ ಪಟವು ಇರುತ್ತದೆ ಎಂದು ನಾವು ತಿಳಿಯುವುದೆಲ್ಲಾ ಭ್ರಾಂತಿಯು !

**ಉತ್ತರ**—ಹೌದು ! ಎಲ್ಲರೂ ಭ್ರಾಂತರೆಂದೇ ಹೇಳುವರು. ಜಗದ್ವಿಷಯದಲ್ಲಿ "ಸತ್ತಾ" ವಗಾಹಿಯಾದ ( ಜಗತ್ತು ಇದೆ ಎಂದು ತಿಳಿಯುವ ) ಎಲ್ಲ ಜ್ಞಾನವೂ ಅಪ್ರಮಾಣವೇ ! ಕೆಲವರು ಮಾತ್ರ ಜಗದ್ವಿಷಯಕವಾದ ನಮ್ಮ ಜ್ಞಾನಗಳಿಗೆಲ್ಲಾ ವ್ಯಾವಹಾರಿಕ ಪ್ರಾಮಾಣ್ಯವುಂಟು ಎಂದು ಹೇಳುತ್ತಾರೆ. ಆದರೆ ವ್ಯಾವಹಾರಿಕ ಪ್ರಾಮಾಣ್ಯವೆಂದು ಅಪ್ರಾಮಾಣ್ಯಕ್ಕೇ ಅಜ್ಞಜನರ ಉದ್ದಿಶ್ಯವಾಗಿ ಇಡಲ್ಪಟ್ಟ ಬೇರೇ ಹೆಸರು.

**ಪ್ರಶ್ನೆ**— ಹಾಗಾದರೆ ವ್ಯಾವಹಾರಿಕ ಪ್ರಾಮಾಣ್ಯವೆಂದರೂ ಅಪ್ರಾಮಾಣ್ಯವೆಂದರೂ ಅರ್ಥಭೇದವು ಸ್ವಲ್ಪವೂ ಇಲ್ಲವೇ ?

**ಉತ್ತರ**— ಅದ್ವೈತಗ್ರಂಥಕಾರರೇ ಈ ನಿರ್ಣಯವನ್ನು ಒಪ್ಪಿರುತ್ತಾರೆ.

ತಥಾಹಿ:— **ವೇದಾಂತಕಲ್ಪತರುಪರಿಮಳೇ**—

**" ಅಹಂ ಪ್ರತ್ಯಯಸ್ಯ ಕರ್ತೃತ್ವಭೋಕ್ತೃತ್ವಾದಿ ವಿಷಯಸ್ಯಾತ್ಮನ್ಯದ್ವೈತ ವಾಕ್ಯಜಾತೇನ ಬಾಧೇತು ತನ್ಮೂಲಸ್ಯ ಪ್ರಮಾಣಸ್ಯ ನಕ್ವಚಿದಪಿಚಾರಿತಾರ್ಥ್ಯಂ । ನಚ ವ್ಯಾವಹಾರಿಕವಿಷಯಾಲಂಬನತಯಾ ತತ್ರೈವ ಚಾರಿತಾರ್ಥ್ಯಂ ಸ್ಯಾದಿತಿ ವಾಚ್ಯಂ । ವ್ಯಾವಹಾರಿಕ ವಿಷಯಸ್ಯ ಶುಕ್ತಿರೂಪ್ಯಾದಿವತ್ಕದಾಚಿದ್ಬಾಧ್ಯತ್ವಾಭ್ಯುಪಗಮಾದ್ಬಾಧ್ಯವಿಷಯೇಚ ವ್ಯಾವಹಾರಿ**

**ಕಂ ಪ್ರಾಮಾಣ್ಯಮಿತಿ ವ್ಯವಹಾರಸ್ಯಾದ್ವೈತಪರಿಭಾಷಾಮಾತ್ರ ಸಿದ್ಧತ್ವಾದಿತ್ಯಾಶಂಕ್ಯ ನಿರ್ದೋಷತ್ವೇನ ಕ್ಲೃಪ್ತಶಾಸ್ತ್ರಸ್ಯೈವ ವಿಷಯಾಂತರ ಪ್ರದರ್ಶನೇನ ಚಾರಿತಾರ್ಥ್ಯಮುಪಪಾದನೀಯಂ ನತು ದೋಷಮೂಲಸ್ಯಾಹಂ ಪ್ರತ್ಯಯಸ್ಯತಸ್ಯ.... ಭ್ರಾಂತಿತ್ವೋಪಪತ್ತೇರಿತಿ ವಿವೇಚನಾಯ ತಸ್ಯದೋಷಮೂಲತ್ವಂ ದರ್ಶಯಿತುಂ ಪ್ರವೃತ್ತಮುತ್ತರ ಗ್ರಂಥ ಮವತಾರಯತಿ— ಏವಂತಾವದಿತಿ.**"

ಇದರ ತಾತ್ಪರ್ಯವು— ವೇದಾಂತಕಲ್ಪತರು ಪರಿಮಳಕಾರರು ಹೇಳುತ್ತಾರೆ— "ಅಹಂಕರ್ತಾ, ಅಹಂಭೋಕ್ತಾ ( ನಾನು ಕರ್ತನು; ನಾನು ಸುಖದುಃಖಭೋಕ್ತೃವಾದ ಜೀವನು ) ಇತ್ಯಾದಿ ಜ್ಞಾನಗಳಿಗೆ ವಿಷಯವಾದ ಕರ್ತೃತ್ವ ಭೋಕ್ತೃತ್ವವು ಸತ್ಯವಾದರೆ ಜೀವಚೈತನ್ಯವು ಬ್ರಹ್ಮವಾಗಲಾರದು. ( ತತ್ವಮಸಿ ಮುಂತಾದ) ಅದ್ವೈತ ವಾಕ್ಯಗಳಾದರೋ ಜೀವನೇ ಬ್ರಹ್ಮನು ಎಂದು ಹೇಳುವವು. ಹೀಗೆ ನಾನು ಕರ್ತನು ಭೋಕ್ತನು ಎಂದು ಬೋಧಿಸುವ ಅನುಭವಕ್ಕೂ ಬ್ರಹ್ಮನು ನಿಷ್ಕ್ರಿಯನು ಚಿನ್ಮಾತ್ರನು ಇತ್ಯಾದಿ ರೀತಿಯಲ್ಲಿ ಬೋಧಿಸುವ ಅದ್ವೈತವಾಕ್ಯಗಳಿಗೂ ಪರಸ್ಪರ ವಿರೋಧ ಬಂದರೆ, ಇವೆರಡರಲ್ಲಿ ಯಾವುದು ಪ್ರಮಾಣವು, ಯಾವುದು ಅಪ್ರಮಾಣವು (ಸುಳ್ಳು ಹೇಳುವದು) ಎಂದು ಹೇಳಬೇಕು ? ಅದ್ವೈತವಾಕ್ಯ ಸಮೂಹಗಳೇ ಪ್ರಬಲವೆಂದು ನಾವು ತೀರ್ಮಾನಮಾಡಿದರೆ, ಅಹಂಕರ್ತಾ ಭೋಕ್ತಾ ಇತ್ಯಾದಿ ಪ್ರತ್ಯಯಗಳಿಗೆ ( ಜ್ಞಾನಗಳಿಗೆ ) ವಿಷಯಗಳಾದ ಕರ್ತೃತ್ವ ಭೋಕ್ತೃತ್ವಾದಿಗಳು ಸರ್ವಥಾ ಸುಳ್ಳು ಎಂದು ಪ್ರಾಪ್ತವಾಗಿ, ಅಹಂಕರ್ತಾ ಭೋಕ್ತಾ ಇತ್ಯಾದಿ ಪ್ರತ್ಯಯಗಳಿಗೆ ಯಾವ ರೀತಿಯಾಗಿಯೂ ಸಾರ್ಥಕ್ಯವನ್ನು ( ಪ್ರಾಮಾಣ್ಯವನ್ನು ) ಹೇಳಿದಹಾಗಾಗಲಿಲ್ಲ. ಅಹಂಕರ್ತಾ ಭೋಕ್ತಾ ಎಂಬ ಪ್ರತ್ಯಯಗಳು ವ್ಯಾವಹಾರಿಕ ವಿಷಯಕಗಳು ಅಂದರೆ ವ್ಯಾವಹಾರಿಕ ಕರ್ತೃತ್ವಾದಿಗಳನ್ನು ಬೋಧಿಸುವವು; ಅದ್ವೈತವಾಕ್ಯಗಳಾದರೋ ಪಾರಮಾರ್ಥಿಕ ನಿಷ್ಕ್ರಿಯತ್ವಾದಿಗಳನ್ನು ಬೋಧಿಸುವವು; ಅಂತೂ ಉಭಯವೂ ಪ್ರಮಾಣಗಳೇ ಆಗಲಿ ಎಂದು ಹೇಳುಬಹುದಲ್ಲಾ ಎಂದರೆ **ಅದೂ ಕೂಡುವುದಿಲ್ಲ.** ಅಹಂಕರ್ತಾ ಭೋಕ್ತಾ ಇತ್ಯಾದಿ ಪ್ರತ್ಯಯ ವಿಷಯಗಳಾದ ಕರ್ತೃತ್ವ ಭೋಕ್ತೃತ್ವಾದಿಗಳು ವ್ಯಾವಹಾರಿಕಗಳು ಅಂದರೆ ಇಲ್ಲದೇ ಇರುವವು ಎಂದೇ ಅರ್ಥವು; ಯಾತಕ್ಕೆಂದರೆ, ವ್ಯಾವಹಾರಿಕವಿಷಯಗಳಾದ ಕರ್ತೃತ್ವಾದಿಗಳು ಶುಕ್ತಿರೂಪ್ಯದಂತೆ ಯಾವಾಗಲಾದರೂ ಒಂದು ಕಾಲದಲ್ಲಿ **ಬಾಧ್ಯವಾಗುವವು** (ಹಿಂದೂ ಇರಲಿಲ್ಲ; ಈಗಲೂ ಇಲ್ಲ, ಮುಂದೆಯೂ ಇರುವದಿಲ್ಲ ಎಂಬ ಜ್ಞಾನಕ್ಕೆ ವಿಷಯವಾಗುವವು ) ಎಂದು ನಾವು ಒಪ್ಪಿಕೊಂಡಿರುವದರಿಂದ ಬಾಧ್ಯವಾದ ಕರ್ತೃತ್ವಭೋಕ್ತೃತ್ವಾದಿಗಳ ವಿಷಯಕವಾದ ಜ್ಞಾನಗಳಿಗೆ ವ್ಯಾವಹಾರಿಕ

ಪ್ರಾಮಾಣ್ಯವುಂಟು ಎಂದು ಹೇಳುವದು **ನಾವು ಅದ್ವೈತಮತದವರು** ಮಾಡಿಕೊಂಡ **ಪರಿಭಾಷಾ** ( ಅಪ್ರಮಾಣವಾದುದಕ್ಕೇ ವ್ಯಾವಹಾರಿಕ ಪ್ರಾಮಾಣ್ಯವೆಂದು ಹೆಸರು; ಇಲ್ಲದೇ ಇರುವ ಪದಾರ್ಥವನ್ನು ವ್ಯಾವಹಾರಿಕ ಸತ್ತಾ ಉಳ್ಳದ್ದು ಎಂದು ಕರೆಯಬೇಕೆಂದು ಮಾಡಿರುವ **ಸಂಕೇತವು** ) ಮಾತ್ರ ವಾಗುವದೇ ಹೊರತು, ಕರ್ತೃತ್ವಭೋಕ್ತೃತ್ವವೆಂಬ ವಿಷಯಗಳಿಗೆ ಸತ್ವವಾಗಲೀ ಮತ್ತು ಅಹಂಕರ್ತಾ ಭೋಕ್ತಾ ಎಂಬ ಕರ್ತೃತ್ವ ಭೋಕ್ತೃತ್ವ ವಿಷಯಕ ವಾದ ಜ್ಞಾನಗಳಿಗೆ ಪ್ರಾಮಾಣ್ಯವಾಗಲೀ ಪ್ರಾಪ್ತವಾಗಲಿಲ್ಲ. ಹೀಗೆ ಶಂಕಿಸಿ ಕೊಂಡು ವೇದಾಂತ ಕಲ್ಪತರುಕಾರರು **" ಹಾಗೆಯೇ ಆಗಿಕೊಂಡು ಹೋಗಲಿ ! "** ನೀವು ಹೇಳಿದುದೆಲ್ಲಾ ನಿಜವೇ ! ಆದರೆ ನಿರ್ದೋಷವಾದುದ ರಿಂದ ಅತ್ಯಂತ ಪ್ರಾಮಾಣಿಕವೆಂದು ಸಂಪ್ರತಿಪನ್ನವಾದ ಒಂದು ಶಾಸ್ತ್ರಕ್ಕೆ ಮತ್ತೊಂದರಿಂದ ಬಾಧ (ವಿರೋಧ) ಬಂದರೆ ಅದು ಸರ್ವಥಾ ಅಪ್ರಮಾಣವು (ಸುಳ್ಳು ಹೇಳುವದು ಎಂದು ಹೇಳಲಾಗುವದಿಲ್ಲ.* ಅಂಥ ಸಂದರ್ಭದಲ್ಲಿ ಯಾವುದಾ ದರೂ ಅರ್ಥಾಂತರ ಕಲ್ಪನೆಯನ್ನು ಮಾಡಿ ಆ ಶಾಸ್ತ್ರಕ್ಕೆ ಸಾರ್ಥಕ್ಯವನ್ನು (ಬೇರೇ ಅರ್ಥದಲ್ಲಿ ಪ್ರಾಮಾಣ್ಯವನ್ನು ) ಹೇಳಬೇಕು ದೋಷಮೂಲವಾದ ಅಹಂ ಕರ್ತಾ ಭೋಕ್ತಾ ಇತ್ಯಾದಿ ಪ್ರತ್ಯಯಗಳಿಗೆ ನಿರ್ದುಷ್ಟವಾದ ಅದ್ವೈತವಾಕ್ಯಗಳಿಂದ ವಿರೋಧವು ಬಂದರೆ ನಾವು ಅರ್ಥಾಂತರವನ್ನು ಕಲ್ಪನೆ ಮಾಡಿ ಬೇರೆ ಗತಿಯನ್ನು ಹೇಳಬೇಕಾಗಿಲ್ಲ. ಅಂದರೆ ಅವು ಸರ್ವಥಾ ಅಪ್ರಾಮಾಣಿಕಗಳೇ; ಅವುಗಳಿಗೆ ವಿಷಯಗಳಾದ ಕರ್ತೃತ್ವಾದಿಗಳು ಸುಳ್ಳೇ. ಅಹಂಕರ್ತಾ ಭೋಕ್ತಾ ಇತ್ಯಾದಿ ಪ್ರತ್ಯಯಗಳಿಗೆ ಭ್ರಾಂತಿತ್ವವೇ ಯುಕ್ತಿಸಿದ್ಧವಾಗಿರುವದು " ಎಂದು ಹೇಳ ಬೇಕಾಗಿ, ಅಹಂ ಕರ್ತಾ ಭೋಕ್ತಾ ಇತ್ಯಾದಿ ಪ್ರತ್ಯಯಗಳಿಗೆ ದೋಷಮೂಲತ್ವ ವನ್ನು ತೋರಿಸುವದಕ್ಕಾಗಿ ಉತ್ತರಗ್ರಂಥವನ್ನು " ಏವಂ ತಾವತ್" ಇತ್ಯಾದಿ ವಾಕ್ಯಗಳಿಂದ ವೇದಾಂತ ಕಲ್ಪತರುಕಾರರು ಅವತರಿಸುತ್ತಾರೆ."

ಈ ವಾಕ್ಯಗಳ ಪರ್ಯಾಲೋಚನೆಯಿಂದ ಮೂರು ಕಾಲದಲ್ಲಿಯೂ ಇಲ್ಲದೇ ಇರುವ ಪದಾರ್ಥವನ್ನೇ ವ್ಯಾವಹಾರಿಕ ಸತ್ತಾ ಉಳ್ಳದ್ದು ಎಂದು ಕರೆಯಬೇಕು, ಎಂದು ಅದ್ವೈತ ಶಾಸ್ತ್ರದ ಪರಿಭಾಷಾ ಇರುತ್ತದೆ ಎಂದು ಅವರ ಮಾತಿನಿಂದಲೇ ಸ್ಪಷ್ಟವಾಗಿ ತಿಳಿದುಬರುತ್ತದೆ. ಈ ಮತದ ಪ್ರಕಾರ ಪ್ರಪಂಚವೂ ಪ್ರಪಂಚಾಂತರ್ಗತ

---

* " ಉದಿತೇಹೋತವ್ಯಂ " (ಉದಯಾನಂತರ ಹೋಮ ಮಾಡಬೇಕು) ಎಂಬ ನಿರ್ದುಷ್ಟ ಶಾಸ್ತ್ರಕ್ಕೆ " ಅನುದಿತೇಹೋತವ್ಯಂ " ಎಂಬ ಮತ್ತೊಂದು ನಿರ್ದುಷ್ಟ ವಾಕ್ಯದಿಂದ ವಿರೋಧವು ಬಂದರೆ ಉದಿತೇಹೋತವ್ಯಂ ಎಂಬ ಶಾಸ್ತ್ರವು ಅಪ್ರಮಾಣವು ಎಂದು ಹೇಳಕೂಡದು. ಆ ವಾಕ್ಯಕ್ಕೆ ಯಾವುದಾದರೂ ಒಂದು ವಿಷಯವನ್ನು ಕೊಟ್ಟು ವಿಕಲ್ಪೇನ ಮಾಡಬಹುದು ಎಂದು ಹೇಳಿ ಗತಿಯನ್ನು ಕಲ್ಪಿಸಬೇಕು.

ವಾದ ಸಕಲ ವ್ಯವಹಾರಗಳೂ ಅತ್ಯಂತ ಸುಳ್ಳೇ! ಎಂದರೆ ಹಿಂದೂ ಇರಲಿಲ್ಲ, ಈಗಲೂ ಇಲ್ಲ, ಮುಂದೂ ಇರುವದಿಲ್ಲ. ಈ ಶಾಸ್ತ್ರದ ರೀತಿಯಿಂದ ನಾವು ಈ ಸಭೆಯಲ್ಲಿ ಉಪದೇಶ ಮಾಡುತ್ತಿರುವದು ಸುಳ್ಳು, ನೀವು ಶ್ರವಣಮಾಡುತ್ತಿರುವದು ಸುಳ್ಳು, ಈ ಸಭೆ, ನಮ್ಮ ವ್ಯಾಪಾರಗಳೇ ಮುಂತಾದ ಸಮಸ್ತವೂ ಇಲ್ಲವೇ ಇಲ್ಲ. ಈ ವಿಷಯವನ್ನೇ ಪದ್ಯರೂಪವಾಗಿ ಪೂರ್ವಿಕರು ವಿನೋದ ಮಾಡಿರುತ್ತಾರೆ.

**ಮೃಗತೃಷ್ಣಾಂಭಸಿ ಸ್ನಾತಃ ಖಪುಷ್ಪಕೃತಶೇಖರಃ ।**
**ಅಹೋ ವಂಧ್ಯಾಸುತೋ ಯಾತಿ ಶಶಶೃಂಗಧನುರ್ಧರಃ ॥**

ಅರ್ಥವು—ಮರೀಚಿಕಾ ಪ್ರವಾಹದಲ್ಲಿ ಸ್ನಾನ ಮಾಡಿ ಗಗನಾರವಿಂದರಚಿತವಾದ ಕಿರೀಟವನ್ನು ಶಿರಸ್ಸಿನಲ್ಲಿ ಧರಿಸಿ ಶಶಶೃಂಗದಿಂದ ಮಾಡಲ್ಪಟ್ಟ ಧನುಸ್ಸನ್ನು ಧಾರಣ ಮಾಡಿ ಅಗೋ! ವೀರಾಗ್ರಣಿಯಾದ ವಂಧ್ಯಾಪುತ್ರನು ರಣರಂಗಕ್ಕೆ ಬರುತ್ತಿದ್ದಾನೆ.

ಜಗನ್ಮಿಥ್ಯಾತ್ಮವು ಅತ್ಯಂತ ನಿರ್ದುಷ್ಟವಾದ ಶ್ರೀ ಕೃಷ್ಣನ ಪ್ರತ್ಯಕ್ಷ ವಿರೋಧದಿಂದಲೂ, " ಪಶ್ಯಾಮಿದೇವಾಂಸ್ತವದೇವದೇಹೇ " ಎಂದು ಸ್ತುತಿಸುವ ಬ್ರಹ್ಮಾಪರೋಕ್ಷ ಜ್ಞಾನಿಯಾದ ಅರ್ಜುನನ ನಿರ್ದುಷ್ಟಪ್ರತ್ಯಕ್ಷ ವಿರೋಧದಿಂದಲೂ ಪರಾಹತವಾಗಿರುತ್ತವೆ. ಪರಬ್ರಹ್ಮನಾದ ಶ್ರೀ ಕೃಷ್ಣನ ಪ್ರತ್ಯಕ್ಷವೂ ಮತ್ತು "ಅನಘನೆಂದು" ಕೃಷ್ಣನಿಂದ ಕರೆಯಲ್ಪಟ್ಟು, ಆತನ ಪರಮಾನುಗ್ರಹದಿಂದ ಜ್ಞಾನಿಯಾದ, ಅರ್ಜುನನ ಪ್ರತ್ಯಕ್ಷವೂ ಭ್ರಾಂತಿರೂಪವೆಂದು ಹೇಳುವದು ಬಹು ಸಾಹಸದ ಪ್ರಯತ್ನವಿರುತ್ತದೆ. ಮತ್ತು ಜಗತ್ತು ಮಿಥ್ಯಾ, ಪ್ರತ್ಯಕ್ಷ ಸಾಮಾನ್ಯವೂ ಭ್ರಾಂತಿರೂಪವು ಎಂದು ಹೇಳಿದರೆ ಅಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಹೇಳುವ ಬೌದ್ಧರ ಮತವನ್ನೇ ಅಂಗೀಕರಿಸಿದಂತಾಗುವದು.

## iii

**ಪ್ರಶ್ನೆ**— " **ಯೋಮಾಮೇವಮಸಂಮೂಢೋಜಾನಾತಿ ಪುರುಷೋತ್ತಮಂ । ಸಸರ್ವವಿತ್ ॥** " ಎಂದು ಹದಿನೈದನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಹೇಳಿರುತ್ತಾನೆ. ಪುರುಷೋತ್ತಮನನ್ನು ತಿಳಿದವರು ಸರ್ವವನ್ನೂ ತಿಳಿದವರು ಎಂದು ಇದರ ಅರ್ಥವು. ಇದರಿಂದ ಪುರುಷೋತ್ತಮನೇ ಸರ್ವವು; ಪುರುಷೋತ್ತಮಭಿನ್ನವಾದ ಜಗತ್ತು ಅಸತ್ಯವು ಎಂದು ಅರ್ಥವಾಗುವುದಿಲ್ಲವೇ ?

**ಉತ್ತರ**— ಶ್ರೀ ಶ್ರೀಗಳವರು— ಪುರುಷೋತ್ತಮನು ಜಗದಭಿನ್ನನೆಂದಾಗಲೀ, ಪುರುಷೋತ್ತಮಭಿನ್ನವಾದ ಜಗತ್ತು ಮಿಥ್ಯಾ ಎಂದಾಗಲೀ ಈ ವಾಕ್ಯಕ್ಕೆ ಅರ್ಥವಾಗುವದಿಲ್ಲ. ಯಾತಕ್ಕೆಂದರೆ "ಯೋಮಾಮೇವಮಸಂಮೂಢಃ" ಎಂದು ಶ್ರೀ ಕೃಷ್ಣನು ನನ್ನನ್ನು **ಹೀಗೆ** ಅಂದರೆ ಪೂರ್ವೋಕ್ತ ರೀತಿಯಲ್ಲಿ, **ಉತ್ತಮಃ**

**ಪುರುಷಸ್ತ್ವನ್ಯಃ** ಎಂದರೆ ನಾನು ಕ್ಷರಾಕ್ಷರ ಪುರುಷರಿಗಿಂತ ಭಿನ್ನನು ಮತ್ತು ಉತ್ತಮನೂ ಎಂದು ತಿಳಿದವನು ಸರ್ವವನ್ನೂ ತಿಳಿದಂತಾಗುವದು ಎಂದು ಹೇಳಿರುವದರಿಂದ 1. ಅದೇ ಸರ್ವಶಾಸ್ತ್ರಾರ್ಥದ ಮುಖ್ಯ ಸಾರವಾದುದರಿಂದ ಇದನ್ನು ತಿಳಿದವನು ಸರ್ವವನ್ನೂ ತಿಳಿದಂತೆಯೇ ಆಯಿತು ಎಂದು ಅವನ ಅಭಿಪ್ರಾಯವಿರುತ್ತದೆ. 2. ಅಥವಾ ಈ ಜ್ಞಾನಫಲದಲ್ಲಿಯೇ ಇತರ ಜಗದ್ವಿಷಯಕಜ್ಞಾನದಿಂದ ಆಗುವ ಫಲಗಳೆಲ್ಲವೂ ಅಂತರ್ಭೂತವಾಗಿವೆ ಎಂದು ಅರ್ಥವಾಗುವದು. ಈ ಅರ್ಥವೇ ಶ್ರೀ ಕೃಷ್ಣನಿಗೆ ಬಹಳ ಹೃದ್ಯವಾಗಿರುವದೆಂದು ಎರಡನೆಯ ಮತ್ತು ಎಂಟನೆಯ ಅಧ್ಯಾಯದ ಅವನ ಮಾತುಗಳಿಂದಲೇ ತಿಳಿದು ಬರುವದು :—

**ಯಾವಾನರ್ಥ ಉದಪಾನೇ ಸರ್ವತಸ್ಸಂಪ್ಲುತೋದಕೇ ।**
**ತಾವಾನ್ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥**
—(2. 46.)

ಭಾವಿ, ಹಳ್ಳ, ಕುಂಟೆಯೇ ಮೊದಲಾದ ಸಣ್ಣ ಜಲಾಶಯಗಳಲ್ಲಿ ಏನು (ಸ್ನಾನಪಾನಾದಿ ರೂಪ) ಪ್ರಯೋಜನವು ಆಗುತ್ತದೆಯೋ, ಆ ಪ್ರಯೋಜನವು ಸಮೃದ್ಧ ಜಲವುಳ್ಳ ಗಂಗಾ, ಕಾವೇರ್ಯಾದಿ ಮಹಾಜಲಾಶಯಗಳಲ್ಲಿ ಹೇಗೆ ಅಂತರ್ಭೂತವಾಗಿದೆಯೋ, ಹಾಗೆಯೇ ಸರ್ವವೇದೋಕ್ತಕಾಮ್ಯಕರ್ಮಗಳನ್ನು ಮಾಡುವವರಿಗೆ ಪ್ರಾಪ್ತವಾಗುವ ಸ್ವರ್ಗಾದಿ (ಸುಖವು) ಫಲಗಳು ಪರಬ್ರಹ್ಮನನ್ನು ಸಾಕ್ಷಾತ್ತಾಗಿ ನೋಡುವ ಅಪರೋಕ್ಷ ಜ್ಞಾನಿಯ ಫಲದಲ್ಲಿ (ಜ್ಞಾನಜನ್ಯ ಮೋಕ್ಷ ಸುಖದಲ್ಲಿ) ಅಂತರ್ಭವಿಸುತ್ತವೆ. ಏವಂಚ, ಪುರುಷೋತ್ತಮನ ಜ್ಞಾನದಿಂದಾಗುವ ಫಲದಲ್ಲಿ ಇತರ ಸರ್ವ ಜಗತ್‌ಜ್ಞಾನದಿಂದಾಗುವ ಫಲವೆಲ್ಲವೂ ಅಡಗಿ ಹೋಗಿದೆ ಎಂದು ಅರ್ಥವಾಗುವದು. ಪುನಃ ಎಂಟನೆಯ ಅಧ್ಯಾಯದಲ್ಲಿಯೂ ಹೀಗೆಯೇ ಹೇಳಲ್ಪಟ್ಟಿರುತ್ತದೆ.

**ವೇದೇಷು ಯಜ್ಞೇಷು ತಪಸ್ಸುಚೈವ ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಂ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ ಯೋಗೀ ಪರಂ ಸ್ಥಾನಮುಪೈತಿ ಚಾದ್ಯಂ ॥** —(8.28.)

ಇದರ ಅರ್ಥವು— ಪೂರ್ವೋಕ್ತಜ್ಞಾನಿಯು ಭಗವಂತನ ಸ್ವರೂಪವನ್ನೂ ಆತನ ಸೃಷ್ಟ್ಯಾದಿ ಕರ್ತೃತ್ವಗಳನ್ನೂ, ಉತ್ಕ್ರಾಂತಿ ಪ್ರಕಾರ ಮಾರ್ಗಾದಿಗಳನ್ನೂ ತಿಳಿದವನಾಗಿ, ಸಕಲ ವೇದಾಧ್ಯಯನ ಮಾಡುವದರಿಂದಾಗುವ ಪುಣ್ಯವನ್ನೂ ಜ್ಯೋತಿಷ್ಟೋಮಾದಿ ಯಾಗಗಳನ್ನು ಆಚರಿಸುವದರಿಂದಾಗುವ ಪುಣ್ಯವನ್ನೂ, ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸನ್ನು ಆಚರಿಸುವದರಿಂದಾಗುವ ಪುಣ್ಯವನ್ನೂ ಮತ್ತು ವಿಧ್ಯುಕ್ತರೀತಿಯಲ್ಲಿ ಸತ್ಪಾತ್ರದಾನದಿಂದಾಗುವ ಪುಣ್ಯವನ್ನೂ

ಅತಿಕ್ರಮಿಸುತ್ತಾನೆ. (ಅಂದರೆ, ಅಧ್ಯಯನ, ಯಜ್ಞ, ತಪಸ್ಸು, ದಾನಗಳಿಂದಾಗುವ ಪುಣ್ಯಫಲಗಳೆಲ್ಲಕ್ಕಿಂತಲೂ ಜ್ಞಾನಿಯು ತನ್ನ ಜ್ಞಾನಪ್ರಭಾವದಿಂದಲೇ ಅಧಿಕವಾದ ಪುಣ್ಯವನ್ನು ಸಂಪಾದಿಸುತ್ತಾನೆ ಎಂದರ್ಥವು.) ಮತ್ತು ಶಾಶ್ವತವಾದ ಮುಕ್ತಿಸ್ಥಾನವನ್ನೂ ಹೊಂದುತ್ತಾನೆ.

ಈ ಸಮಾಖ್ಯಾ ವಾಕ್ಯಗಳ ಬಲದಿಂದ ಪುರುಷೋತ್ತಮನನ್ನು ಈ ರೀತಿ ತಿಳಿದವರು ಸರ್ವವನ್ನೂ ತಿಳಿದವರು; ಎಂಬುದಕ್ಕೆ ಸರ್ವ ಜ್ಞಾನದ ಫಲವೂ ಪುರುಷೋತ್ತಮ ವಿಷಯಕ ಜ್ಞಾನದ ಫಲದಲ್ಲಿ ಅಂತರ್ಭಾವವನ್ನು ಹೊಂದಿರುತ್ತದೆ ಎಂದೇ ಅರ್ಥ ಮಾಡಬೇಕು. 3. ಅಥವಾ ಪ್ರಧಾನನಾದ ಪುರುಷೋತ್ತಮನನ್ನು ತಿಳಿದ ಮೇಲೆ ಸರ್ವವನ್ನೂ ತಿಳಿದ ಪ್ರಾಯವೇ ಎಂಬ ಅರ್ಥವನ್ನಾದರೂ ಮಾಡಬಹುದು. ಈ ರಾಜಧಾನಿಗೆ ಪ್ರಧಾನರು ಮಹಾರಾಜರು. ಅವರನ್ನು ತಿಳಿದ ಮೇಲೆ ಅವರ ಅಧೀನರಾದ ಇತರರನ್ನು ತಿಳಿದಂತೆಯೇ ಆಯಿತೆಂದು ಲೋಕವ್ಯವಹಾರವಿರುವದು. ಹೀಗೆ ಈ ಶ್ಲೋಕಕ್ಕೆ ಅನೇಕ ಅರ್ಥಗಳು ಸಂಭವಿಸುತ್ತಿರುವಲ್ಲಿ ಇವುಗಳೆಲ್ಲವನ್ನೂ ಬಿಟ್ಟು ಸರ್ವ ಪ್ರಮಾಣಗಳಿಗೂ ವಿರುದ್ಧವಾದ ಪುರುಷೋತ್ತಮಾತಿರಿಕ್ತ ಪ್ರಪಂಚವೆಲ್ಲವೂ ಮಿಥ್ಯಾ ಎಂದು ಕಲ್ಪನೆ ಮಾಡುವದು ಸರ್ವಥಾ ಉಚಿತವಾದುದಲ್ಲ.

ಮತ್ತು ಇದೇ ಪ್ರಕರಣಗಳಲ್ಲಿ "**ಯೋಗೀಪರಂಸ್ಥಾನಮುಪೈತಿಚಾದ್ಯಂ**" ಎಂದೂ "**ಶಾಶ್ವತಂ ಪದಮವ್ಯಯಂ**" ಎಂದೂ "**ಸ್ಥಾನಂ ಪ್ರಾಪ್ಸ್ಯಸಿಶಾಶ್ವತಂ**" ಎಂದೂ ಮುಕ್ತಲೋಕವು ನಿತ್ಯವೆಂದು ಹೇಳಿ "**ಪ್ರತಿಷ್ಠಾಹಮಮೃತಸ್ಯ**" ಎಂಬ ವಾಕ್ಯದಿಂದ ನಿತ್ಯವಾದ ಮುಕ್ತಲೋಕಗಳಿಗೂ ಮತ್ತು ಮುಕ್ತಜೀವರಿಗೂ ನಾನು ನಿಯಾಮಕನೆಂದು ಸಾಕ್ಷಾಚ್ಛ್ರೀಕೃಷ್ಣನು ಹೇಳುತ್ತಿರುವಾಗಲೇ, ಅವನ ವ್ಯತಿರಿಕ್ತವಾಗಿ ಸಕಲ ಪ್ರಪಂಚವೂ ಸುಳ್ಳೆಂದು ಹೇಳುವದು ಭಯಂಕರವಾದ ಪ್ರಮಾಣಗಳ ಅತಿಕ್ರಮವಿರುತ್ತದೆ. ಕಿಂಚ "ಸರ್ವಸ್ಯ ಧಾತಾರಂ ಅನುಸ್ಮರೇದ್ಯಃ ಪರಂಪುರುಷಮುಪೈತಿ ದಿವ್ಯಂ" ಮತ್ತು "ಸರ್ವಮಿದಂ ವಿದಿತ್ವಾಪರಂಸ್ಥಾನ ಮುಪೈತಿಚಾದ್ಯಂ" ಎಂಬ ಶ್ರೀ ಕೃಷ್ಣನ ವಾಕ್ಯಗಳಿಂದ ಪರಮಾತ್ಮನು ಸರ್ವಕ್ಕೂ ಧಾರಕನು ಮತ್ತು ಪೋಷಕನು ಎಂದು ಧ್ಯಾನ ಮಾಡುವವನೇ ಪರಮ ಪುರುಷನನ್ನು ಹೊಂದುವನು; ಅಧಿಯಜ್ಞಾದಿರೂಪಿಯು ಮತ್ತು ಸೃಷ್ಟ್ಯಾದಿ ಕರ್ತನು ಶ್ರೀ ಹರಿಯು ಎಂದು ತಿಳಿದವನೇ ಸನಾತನವಾದ ಪರಂಧಾಮವನ್ನು ಹೊಂದುವನು (ಮುಕ್ತನಾಗುವನು) ಎಂದು ತಿಳಿದು ಬರುವದರಿಂದ, ಮೋಕ್ಷಾಪೇಕ್ಷಿಗಳಾದ ಸರ್ವರೂ, ಜಗತ್ತು **ಇರುವುದು** ಅದಕ್ಕೆ ಶ್ರೀ ಕೃಷ್ಣನು ಸೃಷ್ಟ್ಯಾದಿಕರ್ತನು ಎಂದು ಚಿಂತಿಸಬೇಕೇ ಹೊರತು ಜಗತ್ತು ಇಲ್ಲವೇ ಇಲ್ಲ ಎಂದು ಹೇಳಕೂಡದು; ಯಾತಕ್ಕೆಂದರೆ ಈ ಶ್ಲೋಕಗಳಿಂದ ಜಗನ್ಮಿಥ್ಯಾತ್ವ ಜ್ಞಾನವು ಮೋಕ್ಷೋಪಯೋಗಿಯಲ್ಲವು ಎಂದು ಸಿದ್ಧವಾಗುವದು. ಮತ್ತು

ಜಗತ್ತು ಮಿಥ್ಯಾ ಎಂದು ವಾಕ್ಯೋಚ್ಚಾರಣ ಮಾಡುವಾಗಲೇ ನಿರೀಶ್ವರವಾದಕ್ಕೆ ಕಾಲು ಚಾಚಿದಂತಾಯಿತು. ಜಗತ್ತು ಇದ್ದರಲ್ಲವೇ ಅದರ ಸೃಷ್ಟ್ಯರ್ಥವಾಗಿ ಒಬ್ಬ ಈಶ್ವರನು ಬೇಕು. ಶುಕ್ತಿರೂಪ್ಯದಂತೆ ಜಗತ್ತೇ ಇಲ್ಲದ ಮೇಲೆ ಅದನ್ನು ಸೃಷ್ಟಿಸುವ, ಮತ್ತು ಪಾಲಿಸುವ ಪುರುಷನೆಲ್ಲಿಂದ ಬಂದಾನು ? ಆದುದರಿಂದ ಪ್ರಪಂಚಮಿಥ್ಯಾತ್ವವನ್ನು ಪ್ರತಿಪಾದನೆ ಮಾಡುವವನು ಒಂದೇ ವಾಗ್ವಜ್ರದಿಂದ ಜಗಜ್ಜನ್ಮಾದಿ ಕಾರಣತ್ವರೂಪಮಹಿಮೋಪೇತನಾದ ಪರಮೇಶ್ವರನ ಸಿರಸ್ಸನ್ನು ನೆಲದಲ್ಲಿ ಕೆಡಗುವದಕ್ಕೆ ಯತ್ನಿಸಿದಂತಾಯಿತು. ಆದರೆ ಈ ಮಹದತಿಕ್ರಮವು ಶ್ರೀ ಕೃಷ್ಣನ ಅತ್ಯಂತ ಕೋಪಕ್ಕೆ ಪಾತ್ರವಾದುದೆಂದು "ಅಸತ್ಯಮಪ್ರತಿಷ್ಠಂತೇ ಜಗದಾಹುರನೀಶ್ವರಂ" ಎಂಬ ಶ್ಲೋಕದ ನಂತರ ಪ್ರಾಪ್ತವಾಗುವ ಫಲಕಥನ ಪರವಾಕ್ಯಗಳಿಂದ ತಿಳಿದುಬರುತ್ತದೆ.

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।**
**ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥**

—(16. 9.)

ಇದರ ಅರ್ಥವು— ಅಸುರರು ಜಗತ್ತು ಸತ್ವರಹಿತವಾದುದು; ಆದುದರಿಂದಲೇ ಪಾಲಕರಹಿತವಾದುದು; ಮತ್ತು ಸ್ವಾಮಿಯಾದ ಈಶ್ವರರಹಿತವೆಂದು ಹೇಳುತ್ತಾರೆ. ಇಂಥ ವಿಪರೀತ ಜ್ಞಾನವನ್ನು ಆಶ್ರಯಿಸಿ ದುಷ್ಟಚಿತ್ತರೂ, ಅಲ್ಪಬುದ್ಧಿಗಳೂ ಆಗಿ, ಘೋರವಾದ ಕರ್ಮದಲ್ಲಿ ನಿರತರೂ ಆದ, ಈ ಪ್ರಪಂಚದ ಶತ್ರುಗಳು ( ಪ್ರಪಂಚವು ಅಸತ್ಯವೆನ್ನುವದರಿಂದಲೂ ಪ್ರಪಂಚದ ಶತ್ರುಗಳು ) ತಮ್ಮ ನಾಶಾರ್ಥವಾಗಿಯೇ ( ಪಾಪಸಂಪಾದನ ದ್ವಾರಾ ನರಕವನ್ನು ಹೊಂದುವದಕ್ಕೆ ) ಲೋಕದಲ್ಲಿ ಹುಟ್ಟುತ್ತಾರೆ. ಶ್ರೀ ಕೃಷ್ಣನು ಇಂಥ ಘೋರ ಫಲವನ್ನು ಹೇಳಿರುವದರಿಂದ ಭಗವತ್ಕೋಪಭೀರುಗಳಾದ ಸರ್ವಸಜ್ಜನರೂ ಭಗವಂತನ ಸೃಷ್ಟ್ಯಾದಿ ಮಹದೈಶ್ವರ್ಯಗಳಿಗೆ ಭಂಜಕವಾದ ಪ್ರಪಂಚಕ್ಕೆ ಮಿಥ್ಯಾತ್ವವನ್ನು ಪ್ರತಿಪಾದನೆ ಮಾಡುವ ತತ್ವದಲ್ಲಿ ಮನಸ್ಸು ಕೊಡದೇ ಸತ್ಯವಾದ ಮತ್ತು ಪ್ರವಾಹ ರೂಪೇಣ ನಿತ್ಯವಾದ ಈ ಸಕಲ ಜಗತ್ತಿಗೂ ತನ್ನ ಅಪ್ರತಿಹತ ಮಹಚ್ಛಕ್ತಿಯಿಂದ ಒಬ್ಬನೇ ನಿಯಾಮಕನಾದ ಶ್ರೀ ಕೃಷ್ಣನನ್ನು ಸರ್ವಭಾವೇನ ( ಪಿತೃತ್ವೇನ, ಸ್ವಾಮಿತ್ವೇನ ಸುಹೃತ್ವೇನ, ಬಂಧುತ್ವೇನ, ಸಖಿತ್ವೇನ, ಗತಿತ್ವೇನ ) ನಂಬಿ ಶರಣು ಹೊಂದಬೇಕು.



# III

# ಜೀವಬ್ರಹ್ಮರ ಭೇದಸಮರ್ಥನವು.

24 ರಿಂದ 31—7—1930 ರಲ್ಲಿ.

ಪ್ರಾಶ್ನಿಕರು— **ಧರ್ಮಾಧಿಕಾರಿಗಳು ವಿದ್ವಾಂಸರು ಮತ್ತು ವಿದ್ಯಾರ್ಥಿಗಳು.**

**ಪ್ರಶ್ನೆ**— ಸ್ವಾಮೀ! ಸತ್ಯವಾದ ಜಗತ್ತಿಗೆ ಸರ್ವೋತ್ತಮನಾದ ವಿಷ್ಣುವು ನಿಯಾಮಕನೆಂದು ಇದುವರೆಗೆ ತಮ್ಮಿಂದ ನಿರೂಪಿತವಾಯಿತು. ಈ ದಿವಸ "**ತತ್ವತೋ ಭಿನ್ನಾ ಜೀವಗಣಾಃ**" ಎಂಬ ತಮ್ಮಿಂದ ಉದಾಹೃತವಾದ ಶ್ಲೋಕಭಾಗದ ವಿಷಯದಲ್ಲಿ ಗೀತಾವಾಕ್ಯಗಳ ಸಮ್ಮತಿಯನ್ನು ಕೊಟ್ಟು ವಿಶದವಾಗಿ ಉಪನ್ಯಾಸ ಮಾಡಬೇಕು. ಅದ್ವೈತ ಮತವಲ್ಲಿ ಭೇದವೆಂಬ ಪದಾರ್ಥವೇ ಇರುವದಿಲ್ಲ. ಭೇದವು ಮಿಥ್ಯಾಭೂತವಾದುದು. ಜೀವ ಚೈತನ್ಯವು ಪರಬ್ರಹ್ಮನೇ ಆಗಿರುವದು. ಭಾಸ್ಕರ ಮತದಲ್ಲಿ ಜೀವಜೀವರಿಗಾಗಲೀ, ಜೀವ ಪರಮಾತ್ಮನಿಗಾಗಲೀ ಭೇದವು ಕೇವಲ ಉಪಾಧಿನಿರ್ಮಿತವಾದುದು. ಉಪಾಧಿಗಳು ನಾಶವಾದ ನಂತರ ಭೇದವು ನಾಶವಾಗಿ ಅತ್ಯಂತಾಭೇದವೇ ಪ್ರಾಪ್ತವಾಗುವದು. ಮತ್ತು ಅನೇಕ ಪಾಶ್ಚಾತ್ಯತತ್ವಜ್ಞರು ಜೀವರುಗಳು ಪರಬ್ರಹ್ಮನ ಸಾಕ್ಷಾದಂಶಗಳಾಗಿರುವದರಿಂದ ಜೀವಬ್ರಹ್ಮರಿಗೆ ಭೇದವು ಸರ್ವಥಾ ಇರುವದಿಲ್ಲವೆಂದು ನಿಶ್ಚಯಿಸಿರುತ್ತಾರೆ. ಜೀವಬ್ರಹ್ಮರ ಅಭೇದವು ಪ್ರಾಮಾಣಿಕವಾದರೆ ಬಹು ದಿವಸ ಉಪನ್ಯಾಸಗಳಲ್ಲಿ ತಮ್ಮಿಂದ ಸ್ಥಾಪಿತವಾದ ವಿಷ್ಣುಸರ್ವೋತ್ತಮತ್ವವು ಸಿಡಿಲಿನ ಘಾತದಿಂದ ನೆಲಕ್ಕೆ ಉರುಳುವ ವೃಕ್ಷದಂತೆ ಭಗ್ನವಾಗಿ ಬೀಳುವದು. ಹೇಗೆಂದರೆ, ನಾರಾಯಣನೇ ಪರಬ್ರಹ್ಮನು; ಆತನೇ ಸರ್ವೋತ್ತಮ ವಸ್ತುವು ಎಂದು ತಮ್ಮಿಂದ ನಿರೂಪಿತವಾಯಿತು. ಆದರೆ ಸರ್ವಜೀವರುಗಳೂ ಪರಬ್ರಹ್ಮನಿಂದ ಅಭಿನ್ನನಾದರೆ, ಒಬ್ಬನು ಉತ್ತಮನು ಮತ್ತೊಬ್ಬನು ಅಧಮನು ಎಂಬ ವ್ಯವಸ್ಥೆಗೇ ಅವಕಾಶವಿಲ್ಲ. ಅತ್ಯಂತ ಭಿನ್ನರಾದ ಇಬ್ಬರು ಚೇತನರಿದ್ದರೇನೇ ಸ್ವಾಮಿ ಭೃತ್ಯನ್ಯಾಯವೂ, ನಿಯಮ್ಯನಿಯಾಮಕಭಾವವೂ ಸಂಭವಿಸುವದು; ಒಬ್ಬನು ಉತ್ತಮನು ಮತ್ತೊಬ್ಬನು ಅವರನು ಎಂಬ ವ್ಯವಸ್ಥೆಯೂ ನ್ಯಾಯಪ್ರಾಪ್ತವಾಗುವದು. ಅತ್ಯಂತಾಭಿನ್ನರಾದ ಅನೇಕ ಜೀವರುಗಳು ಇರುವದಾದರೆ ವಿಷ್ಣುವು ಒಬ್ಬನೇ ಸರ್ವೋತ್ತಮನೆಂದು ಪ್ರತಿಪಾದನೆ ಮಾಡುವದು ಕಟ್ಟುಕಥೆಗಳಿಗೆ ಉಚಿತವಾದ ವಿನೋದೋಕ್ತಿಯಾಗುವದೇ ಹೊರತು ಶಾಸ್ತ್ರಾರ್ಥವಾಗಲಾರದು. "ಸ್ವಮೂರ್ತಿಗಣಮಧ್ಯಗಃ" ಎಂದು ಹೇಳಿರುವಂತೆ ತಾನೇ

ಒಂದು ರೂಪವಿಶೇಷದಿಂದ ಮಧ್ಯದಲ್ಲಿ ಸಿಂಹಾಸನಾರೂಢನಾಗಿ ತನ್ನ ಇತರ ರೂಪ ವಿಶೇಷಗಳಿಂದಲೇ ಆರಾಧಿತನಾಗಿ ಸರ್ವೋತ್ಕೃಷ್ಟನೆಂದು ಸ್ತೂಯಮಾನನಾದ ವಿಷ್ಣುವಿಗೆ ತನ್ನ ಇತರ ರೂಪಾಪೇಕ್ಷಯಾ ಪ್ರಾಪ್ತವಾದ ಉತ್ತಮತ್ವವು ವಾಸ್ತವವಾದುದಲ್ಲ. ಮತ್ತು ಕೇವಲ ಅಜ್ಞಜನ ಮೋಹಕವಾದ ಪ್ರದರ್ಶನವಾಗಿರುತ್ತದೆ. ಹಾಗೆಯೇ ಸರ್ವ ಚೇತನರೂ ನಾರಾಯಣನಿಂದ ಅಭಿನ್ನರಾದರೆ, ನಾರಾಯಣನು ಮಾತ್ರ ಸರ್ವೋತ್ತಮನು; ಇತರ ಚೇತನರು ಆವನ ಭೃತ್ಯರು ಎಂಬ ತಮ್ಮ ಉಪಪಾದನೆಯು ವಿನೋದೋಕ್ತಿಗೆ ಸದೃಶವಾಗುವದು. ಮತ್ತು ಕೆಲವರು, ಏಕಜೀವವಾದಿಗಳು ಜೀವ ಬಾಹುಳ್ಯವನ್ನೇ ಒಪ್ಪದಿರುವುದರಿಂದ ಜೀವ ಭೇಧವನ್ನು ಹೇಗೆ ತಾನೇ ಒಪ್ಪುವರು ? ಆದುದರಿಂದ ಜೀವಬ್ರಹ್ಮ ಭೇದವನ್ನೂ ಜೀವ ಜೀವ ಭೇದವನ್ನೂ ತಮ್ಮಿಂದ ಪ್ರತಿಜ್ಞಾತವಾದ ರೀತಿಯಲ್ಲಿ ಕೇವಲ ಭಗವದ್ಗೀತೆಯ ವಾಕ್ಯಗಳ ಆಧಾರದಿಂದಲೇ ಸಾವಕಾಶವಾಗಿ ನಿರೂಪಿಸಬೇಕು.

**ಉತ್ತರ :—** ಶ್ರೀ ಶ್ರೀಗಳವರು:— ಕೌರವ ಪಾಂಡವ ಸೇನಾ ಮಧ್ಯ ಪ್ರದೇಶದಲ್ಲಿ ಸ್ಥಿತನಾದ, ಕೌರವ ಸೈನ್ಯ ವಿದಾರಕನಾದ ಶ್ರೀ ಕೃಷ್ಣನ ವಾಕ್ಯಗಳು ಜೀವ ಬ್ರಹ್ಮರ ಅಭೇದವೆಂಬ ಶತ್ರು ಹೃದಯವನ್ನು ಭೇದಿಸುವ ಯುಕ್ತಿಗಳೆಂಬ ವಿಷದಗ್ಧವಾದ ಅಗ್ರ ಭಾಗಗಳುಳ್ಳ ತೀಕ್ಷ್ಣವಾದ ನಾರಾಚಗಳಾಗಿರುತ್ತವೆ. ಭಗವದ್ಗೀತೆಯಲ್ಲಿ ಅಭೇದ ಸಾಧಕವಾದ ಒಂದು ವಾಕ್ಯವೂ ಇರುವದಿಲ್ಲ. ಪಾಂಚಜನ್ಯವನ್ನು ಹಸ್ತದಲ್ಲಿ ಧರಿಸಿದ ಜಗನ್ನಾಥನು ಹದಿನೆಂಟು ಅಧ್ಯಾಯಗಳಲ್ಲಿಯೂ ವೇದಾಂತ ನಿರ್ಣೀತವಾದ ಉಪಪತ್ತಿಗಳಿಂದ ಸಹಿತವಾಗಿ ಜೀವ ಬ್ರಹ್ಮರಿಗೆ ಭೇದವನ್ನೇ ತನ್ನ ಸಿದ್ಧಾಂತವನ್ನಾಗಿ ಉದ್ಘೋಷಿಸಿರುತ್ತಾನೆ. ಭಗವದ್ಗೀತೆಯಲ್ಲಿ ಭೇದಸಾಧಕ ಪ್ರಮಾಣಗಳು ಎರಡು ವಿಧವಾಗಿರುತ್ತವೆ. ಕೆಲವು ವಾಕ್ಯಗಳಲ್ಲಿ ಶ್ರೀ ಕೃಷ್ಣನು ತನ್ನಲ್ಲಿರುವ ಜೀವಭೇದವನ್ನು ಸ್ಪಷ್ಟವಾಗಿ ಕಂಠತಃ ನಿರೂಪಿಸಿರುತ್ತಾನೆ. ಮತ್ತು ಕೆಲವು ವಾಕ್ಯಗಳಲ್ಲಿ ವೇದಾಂತ ನಿರ್ಣೀತವಾದ ಭೇದ ಕರ್ಮಗಳನ್ನು ಪ್ರದರ್ಶನೆ ಮಾಡಿ ಜೀವ ಬ್ರಹ್ಮರು ಪರಸ್ಪರವಾಗಿ ಅತ್ಯಂತ ಭಿನ್ನರೆಂದು ಉಪಪಾದನೆ ಮಾಡಿ ತೋರಿಸಿರುತ್ತಾನೆ. ಇವುಗಳಲ್ಲಿ ಸಾಕ್ಷಾದ್ಭೇದ ಪ್ರತಿಪಾದಕ ವಾಕ್ಯಗಳನ್ನು ಮೊದಲು ಉದಾಹರಿಸುತ್ತೇವೆ.

## 2.

1. **ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।**
**ಯಸ್ಸಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥**—(8. 29.)

ಇದರ ಅರ್ಥವು :— ಅವ್ಯಕ್ತನಾಮಕ ಭಗವಂತನಾದರೋ ಉತ್ಪತ್ತಿ ಉಳ್ಳ ಸಮಸ್ತ ಪ್ರಾಣಿ ಸಮೂಹಕ್ಕಿಂತಲೂ **ಅನ್ಯಃ ಅಂದರೆ ಅತ್ಯಂತ ಭಿನ್ನನು;**

ಮತ್ತು ಪರಃ ಎಂದರೆ ಉತ್ತಮನು; ಆತನು ಸ್ವತಂತ್ರನು ಮತ್ತು ಸನಾತನು. ಮಹಾ ಪ್ರಳಯದಲ್ಲಿ ಸರ್ವ ಪ್ರಾಣಿಗಳು ನಷ್ಟವಾದರೂ ಆತನು ನಾಶವನ್ನು ಹೊಂದುವುದಿಲ್ಲ.

ಇಲ್ಲಿ ಹೇಳಿರುವ "ಅವ್ಯಕ್ತ" ಶಬ್ದವಾಚ್ಯವಾದ ವಸ್ತುವು ಶ್ರೀ ಕೃಷ್ಣನೇ ಎಂಬುದು ಮುಂದಿನ ಶ್ಲೋಕದಿಂದಲೇ ತಿಳಿದು ಬರುತ್ತದೆ.

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂಗತಿಂ ।**
**ಯಂ ಪ್ರಾಪ್ಯನನಿವರ್ತಂತೇ ತದ್ಧಾಮಪರಮಂ ಮಮ ॥**
—(8. 21.)

ಇದರ ಅರ್ಥವು :— ಅವ್ಯಕ್ತನಾಮಕ ಭಗವಂತನೇ ಅಕ್ಷರನೆನ್ನಿಸುವನು; ಅವನನ್ನೇ ಪರಮಪ್ರಾಪ್ಯನೆಂದು ಹೇಳುತ್ತಾರೆ. ( ಅವ್ಯಕ್ತನು ಯಾರೆಂದರೆ, ಅಕ್ಷರನು ಎಂದು ಶ್ರೀ ಕೃಷ್ಣನು ಹೇಳಿದನು. ಅಕ್ಷರನು ಯಾರೆಂದರೆ ಪರಮಪ್ರಾಪ್ಯನೆಂದು ಹೇಳಿದನು, ಪುನಃ ಆ ಪರಮಪ್ರಾಪ್ಯನು ನಾನೇ ಎಂದು ಹೇಳಿ ವ್ಯಕ್ತಿನಿಶ್ಚಯವನ್ನು ಉತ್ತರಾರ್ಧದಲ್ಲಿ ಮಾಡುತ್ತಾನೆ. ) ಯಾವುದನ್ನು ಹೊಂದಿದ ಮೇಲೆ ಪುನರಾವೃತ್ತಿಯು ಇಲ್ಲವೋ ಅದು ಪರಮಪ್ರಾಪ್ಯವಾದ ನನ್ನ ಸ್ವರೂಪವು.

ಮೋಕ್ಷಪ್ರದವಾದ ಸ್ವರೂಪವುಳ್ಳ ಶ್ರೀ ಕೃಷ್ಣನೇ ಅವ್ಯಕ್ತಶಬ್ದ ವಾಚ್ಯವಾದ ವಸ್ತುವು. ಅವ್ಯಕ್ತನು ಉತ್ಪನ್ನರಾದ ಸರ್ವಚೇತನರಿಗಿಂತಲೂ ಅನ್ಯನು ಎಂದರೆ ಭಿನ್ನನು ಎಂದು ಸ್ಪಷ್ಟವಾಗಿ ಹೇಳಿರುವದರಿಂದ ಈ ವಾಕ್ಯವು ಜೀವಬ್ರಹ್ಮರ ಭೇದ ಸಾಧನೆಯಲ್ಲಿ ಸ್ಫುಟವಾದ ಪ್ರಮಾಣವಾಗಿರುತ್ತದೆ.

2 **ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ।**
**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ॥**
—(15. 16-17.)

ಇದರ ಅರ್ಥವು :— ಲೋಕದಲ್ಲಿ ( ಭಗವಧೀನವಾದ ಪ್ರಪಂಚದಲ್ಲಿ ಕ್ಷರ ಪುರುಷರು ಮತ್ತು ಅಕ್ಷರ ಪುರುಷರೆಂಬ ಎರಡು ವಿಧವಾದ ಚೇತನರು ಇದ್ದಾರೆ. ( ಬ್ರಹ್ಮಾದಿ ) ಸರ್ವ ( ಉತ್ಪನ್ನ ದೇಹವುಳ್ಳ ) ಜೀವರುಗಳೂ ಶರೀರ ನಾಶವುಳ್ಳವರಾದ ಕಾರಣ ಕ್ಷರಪುರುಷರೆನ್ನಿಸುವರು. ಆಕಾಶದಂತೆ ನಿರ್ವಿಕಾರಳಾದ ಲಕ್ಷ್ಮೀದೇವಿಯು ಶರೀರ ನಾಶರಹಿತಳಾದುದರಿಂದ ಅಕ್ಷರ ಪುರುಷಳೆನ್ನಿಸುವಳು. ಪುರುಷ ಶ್ರೇಷ್ಠನಾದ ಪರಬ್ರಹ್ಮನಾದರೋ ಕ್ಷರಾಕ್ಷರ ಪುರುಷರುಗಳಿಗಿಂತ **ಅನ್ಯಃ ಅಂದರೆ ಭಿನ್ನನು.** ಆದುದರಿಂದಲೇ "ಪರಮಾತ್ಮಾ" ಎಂದರೆ ಪರಮಚೇತನನು ( ಉತ್ತಮ ಚೇತನನು ) ಎಂದು "ಚೇತನಶ್ಚೇತನಾನಾಂ" ಇತ್ಯಾದಿ ಶ್ರುತಿಗಳಲ್ಲಿ ನಿರೂಪಿತನಾಗಿರುವನು.

ಈ ವಾಕ್ಯದಲ್ಲಿ ಶ್ರೀ ಕೃಷ್ಣನು ವಿನಾಶಿ ದೇಹವುಳ್ಳ ಅನೇಕ ಚೇತನರೂ ಮತ್ತು ದೇಹನಾಶರಹಿತವಾದ ಚೇತನವೂ ಉಂಟೆಂದು ಹೇಳಿ ಪರಮಚೇತನನಾದ ನಾನು ಪೂರ್ವೋಕ್ತ ಉಭಯವಿಧ ಚೇತನರಿಗಿಂತಲೂ ಅನ್ಯನೆಂದು ಸಾಕ್ಷಾದ್ಭೇದವಾಚಕವಾದ ಅನ್ಯ ಶಬ್ದಪ್ರಯೋಗದಿಂದಲೇ ತಿಳಿಸಿ ಉಕ್ತಾರ್ಥದಲ್ಲಿ ದಾರ್ಢ್ಯಾರ್ಥವಾಗಿ ಶ್ರುತಿ ಸಮ್ಮತಿಯನ್ನೂ ಕೊಟ್ಟಿರುತ್ತಾನೆ. ಮತ್ತು "ಯೋ ಲೋಕತ್ರಯಮಾವಿಶ್ಯಬಿಭರ್ತ್ಯವ್ಯಯ ಈಶ್ವರಃ" ಇತ್ಯಾದಿ ವಾಕ್ಯಗಳಿಂದ ಭೇದಕ ಧರ್ಮಗಳನ್ನೂ ನಿರೂಪಿಸುತ್ತಾನಾದ್ದರಿಂದ ಈ ಗೀತಾ ವಾಕ್ಯಗಳು ನಿರವಕಾಶವಾದ ಜೀವಬ್ರಹ್ಮರಿಗೆ ಭೇದಸಾಧಕವಾದ ಪ್ರಮಾಣವಾಗಿರುತ್ತವೆ. ಕಿಂಚ "ದ್ವಾವಿಮೌ ಪುರುಷೌ ಲೋಕೇ" ಎಂದರೆ ಭಗವದಧೀನವಾದ ಪ್ರಪಂಚದಲ್ಲಿ ಎರಡು ಪ್ರಕಾರವಾದ ಚೇತನರಿರುವರು ಎಂದು ಹೇಳಿ, "ಕ್ಷರಃ ಸರ್ವಾಣಿ **ಭೂತಾನಿ**" ಎಂದರೆ ಸರ್ವ ಪ್ರಾಣಿಗಳೂ ಕ್ಷರಪುರುಷರು ಎಂದು ಹೇಳುವಾಗ, "ಭೂತಾನಿ" ಎಂಬ ಬಹುವಚನಾಂತ ಶಬ್ದವನ್ನು ಪ್ರಯೋಗ ಮಾಡಿರುತ್ತಾನೆ, ಅಕ್ಷರಪುರುಷಳನ್ನು ನಿರ್ದೇಶ ಮಾಡುವಾಗ ಏಕವಚನಾಂತ ಶಬ್ದವನ್ನು ಪ್ರಯೋಗ ಮಾಡಿರುತ್ತಾನೆ. ಇದರಿಂದ ಭಗವದ್ಭಿನ್ನವಾದ ಪ್ರಪಂಚದಲ್ಲಿ ಪರಸ್ಪರ ಭಿನ್ನರಾದ ದೇಹನಾಶವನ್ನು ಹೊಂದತಕ್ಕ ಅನೇಕ ಚೇತನರು ಇರುವರೆಂದೂ, ಅವರುಗಳಿಂದ ಭಿನ್ನವಾದ ದೇಹನಾಶರಹಿತವಾದ ಒಂದು ಚೇತನವು ಇರುವದು ಎಂದೂ; ಈ ಉಭಯ ವರ್ಗದ ಚೇತನರಿಗಿಂತಲೂ ಅನ್ಯನಾದವನು ಪರಮಚೇತನನೆಂದು ಪ್ರಸಿದ್ಧನಾದ ಶ್ರೀ ಕೃಷ್ಣನೆಂದೂ ನಿರ್ಧರಿಸಬೇಕು.

ಈ ರೀತಿಯಾಗಿ ಶ್ರೀ ಕೃಷ್ಣನು ಸಾಕ್ಷಾದ್ಭೇದಬೋಧಕವಾದ "**ಅನ್ಯ**" ಶಬ್ದವನ್ನು ಉಪಯೋಗಿಸಿ ಪರಬ್ರಹ್ಮನಾದ ತನಗೂ ಮತ್ತು ಜೀವ ವರ್ಗಕ್ಕೂ ಅತ್ಯಂತ ಭೇದವು ಉಂಟೆಂದು ನಿರೂಪಿಸಿರುತ್ತಾನೆ. ಇದಲ್ಲದೆ ಜೀವಬ್ರಹ್ಮರ ಅಭೇದಕ್ಕೆ ಸರ್ವಥಾ ವಿರೋಧಿಗಳಾದ ವಿರುದ್ಧ ಧರ್ಮಗಳನ್ನು ಅನೇಕ ವಾಕ್ಯಗಳಲ್ಲಿ ಪ್ರದರ್ಶಿಸಿರುತ್ತಾನೆ. ಅವುಗಳನ್ನು ಸಂಕ್ಷೇಪವಾಗಿ ಉಪಪಾದನೆ ಮಾಡಿ ತೋರಿಸುತ್ತೇವೆ.

## 3.

1. ಅನಾದಿನಿತ್ಯರಾದ ಸರ್ವ ಪ್ರಕಾರದಿಂದಲೂ ಸ್ವರೂಪೇಣ ನಾಶರಹಿತರಾದ ಅನಂತ ಚೇತನರು ಉಂಟೆಂದು ಶ್ರೀ ಕೃಷ್ಣನು ಹೇಳುತ್ತಾನೆ.

(1) **ನತ್ವೇವಾಹಂ ಜಾತುನಾಸಂ ನ ತ್ವಂ ನೇಮೇ ಜನಾಧಿಪಾಃ ।**
**ನಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಂ** ॥ –(2.12)

ಇದರ ಅರ್ಥವು:— (ಶ್ರೀ ಕೃಷ್ಣನಾದ) ನಾನು, ನೀನು, ಮತ್ತು ಇಲ್ಲಿ ಮಿಲಿತರಾದ ರಾಜರುಗಳು ಇವರೆಲ್ಲರೂ ಹಿಂದೆ ಯಾವುದಾದರೂ ಒಂದು ಕಾಲದಲ್ಲಿ

ಇಲ್ಲದೇ ಇರಲಿಲ್ಲ ( ಹಿಂದೆ ಇದ್ದೇ ಇದ್ದರು. ) ಮತ್ತು ನಾವೆಲ್ಲರೂ ಇನ್ನು ಮುಂದೆ ಉತ್ತರ ಕಾಲದಲ್ಲಿ ಇಲ್ಲದೇ ಇರುವುದಿಲ್ಲ. ( ಭವಿಷ್ಯತ್ಕಾಲದಲ್ಲಿಯೂ ) ಇದ್ದೇ ಇರುತ್ತೇವೆ.

ವರ್ತಮಾನ ಕಾಲದಲ್ಲಿ ಇರುವುದು ಪ್ರತ್ಯಕ್ಷಸಿದ್ಧವಾದುದರಿಂದ ಶ್ರೀ ಕೃಷ್ಣನು ನಾವೆಲ್ಲರೂ ಈಗಲೂ ಇರುತ್ತೇವೆ ಎಂದು ಹೇಳಲಿಲ್ಲ. ಈ ಪ್ರಕಾರ ಭೂತ ಭವಿಷ್ಯದ್ವರ್ತಮಾನವೆಂಬ ಕಾಲತ್ರಯ ಸಂಬಂಧವುಳ್ಳ (ಅನಾದಿನಿತ್ಯರಾದ) ಅನೇಕ ಚೇತನರು ಇರುತ್ತಾರೆಂಬುದು ಶ್ರೀ ಕೃಷ್ಣನ ವಾಕ್ಯದಿಂದ ಸಿದ್ಧವಾಯಿತು. ಸಕಲ ಜೀವಾಭಿನ್ನವಾದ ಪರಬ್ರಹ್ಮತತ್ವವು ಒಂದೇ ಆಗಿದ್ದರೆ "ಅಹಂ" ಎಂದೂ, "ತ್ವಂ" ಎಂದೂ, "ಇಮೇಜನಾಧಿಪಾಃ" ಎಂದೂ ಪ್ರತ್ಯೇಕವಾಗಿ ಅನೇಕ ಚೇತನ ರಾಶಿಗಳಿಗೆ ನಿತ್ಯತ್ವವನ್ನು ಸಾಧನೆ ಮಾಡುವ ವ್ಯರ್ಥ ಪ್ರಯಾಸವನ್ನು ತತ್ವಜ್ಞಚೂಡಾಮಣಿಯಾದ ಶ್ರೀ ಕೃಷ್ಣನು ಯಾತಕ್ಕೆ ತೆಗೆದುಕೊಳ್ಳುತ್ತಿದ್ದನು ? *

ದೇಹ ನಾಶವಾದರೂ ಜೀವ ಸ್ವರೂಪವು ನಾಶ ಹೊಂದುವುದಿಲ್ಲವೆಂದು ಶ್ರೀ ಕೃಷ್ಣನು ಅನೇಕ ಶ್ಲೋಕಗಳಿಂದ ಉಪಪಾದನೆ ಮಾಡಿ ತೋರಿಸುತ್ತಾನೆ.

(2) **ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ।**
**ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥**
—(2. 13.)

ಅರ್ಥವು :— ಜೀವನಿಗೆ ಬಾಲ್ಯದೇಹವು ಹೋಗಿ ಕೌಮಾರದೇಹವೂ, ಕೌಮಾರ ದೇಹವು ಹೋಗಿ ಯೌವನ ದೇಹವೂ, ಯೌವನ ದೇಹವು ಹೋಗಿ ವಾರ್ಧಕ್ಯ ದೇಹವೂ ಬರುವಂತೆ ಮರಣಾನಂತರ ಈ ದೇಹವು ಹೋಗಿ ಮತ್ತೊಂದು ದೇಹವು ( ಕರ್ಮವಶವಾಗಿ ) ಪ್ರಾಪ್ತವಾಗುತ್ತದೆ. ( ಜೀವನ ಸ್ವರೂಪವಾದರೋ ಸರ್ವಥಾ ನಾಶವಾಗತಕ್ಕದ್ದಲ್ಲ. ) ಇದನ್ನು ತಿಳಿದ ಪಂಡಿತನು ದೇಹ ನಾಶವನ್ನು ಕುರಿತು ಶೋಕವನ್ನು ಹೊಂದುವುದಿಲ್ಲ.

ಪೂರ್ವ ಶ್ಲೋಕದಲ್ಲಿ ಶ್ರೀ ಕೃಷ್ಣನು ತಾನೂ ಮತ್ತು ಸರ್ವ ಚೇತನರೂ ಅನಾದಿನಿತ್ಯರೆಂದು ಪ್ರತಿಪಾದನೆ ಮಾಡಿ ಒಂದು ದೇಹ ತ್ಯಾಗಾನಂತರ ಮತ್ತೊಂದು

* ಶಂಕರಾಚಾರ್ಯರೂ ಕೂಡ ಈ ಶ್ಲೋಕವನ್ನು "**ತ್ರಿಷ್ವಪಿಕಾಲೇಷುನಿತ್ಯಾಃ**" **ಎಂದರೆ ಮೂರು ಕಾಲದಲ್ಲಿಯೂ ನಿತ್ಯರು** ಎಂದು ಭೇದಪರವಾಗಿಯೇ ಅರ್ಥ ಮಾಡಿ, ನಂತರ್ ಸ್ವಮತಾಭಿನಿವೇಶದಿಂದ "ಆತ್ಮಸ್ವರೂಪೇಣೇತ್ಯರ್ಥಃ । ದೇಹಭೇದಾನುವೃತ್ತ್ಯಾ ಬಹುವಚನಂ । ನಾತ್ಮಭೇದಾಭಿಪ್ರಾಯೇಣ ।" ಎಂದು ಬರೆದಿರುವರು. ಅದರ ಅರ್ಥವು :— "ಆತ್ಮಸ್ವರೂಪ ವಿವಕ್ಷೆಯಿಂದ ನಿತ್ಯತ್ವವು ಹೇಳಿರುತ್ತದೆ. ದೇಹಭೇದ ವಿವಕ್ಷೆಯಿಂದ ಬಹುವಚನ ಪ್ರಯೋಗವು; ಆತ್ಮಬಾಹುಳ್ಯವಿರುವುದೆಂಬ ಅಭಿಪ್ರಾಯದಿಂದಲ್ಲ." ಮೂಲ ಗೀತಾಶ್ಲೋಕಗಳಲ್ಲಿ ಇವರ ಈ ಸ್ವಂತ ಅಭಿಪ್ರಾಯಕ್ಕೆ ಯಾವ ಆಧಾರವೂ ಇರುವುದಿಲ್ಲ. ಪ್ರತ್ಯೇಕವಾಗಿ ನಿತ್ಯರಾದ ಅನೇಕ ಆತ್ಮರುಗಳೇ ಹೇಳಲ್ಪಟ್ಟಿದ್ದಾರೆ.

ದೇಹದ ಪ್ರಾಪ್ತಿಯು ಜೀವಚೇತನಕ್ಕೆ ಮಾತ್ರವೇ ಎಂದು ತೋರಿಸಬೇಕಾಗಿ ತಾನು ಮತ್ತು ಇತರ ಚೇತನರೂ ಪೂರ್ವ ಶ್ಲೋಕದಲ್ಲಿ ಪ್ರಸಕ್ತರಾಗಿದ್ದರೂ ಕೂಡ, ತನ್ನನ್ನು ವ್ಯಾವೃತ್ತಿ ಮಾಡಿಕೊಂಡು, ಉತ್ಪನ್ನ ದೇಹವುಳ್ಳವನಿಗೆ ಎಂಬ ಅರ್ಥವನ್ನು ಕೊಡುವ **"ದೇಹಿನಃ"** ಎಂಬ ಪದವನ್ನು ಪ್ರಯೋಗ ಮಾಡಿರುತ್ತಾನೆ. ಇದರಿಂದ ನಾನಾ ದೇಹಪ್ರಾಪ್ತಿಯು ಜೀವನಿಗೆ ಹೊರತು ಪರಮಚೇತನನಾದ ಶ್ರೀ ಕೃಷ್ಣನಿಗಿಲ್ಲವೆಂದು ಸಿದ್ಧವಾಗುವದು. ಮುಂದೆ "ಶರೀರಿಣಃ" ಎಂಬ ವಿಶೇಷಣದಿಂದ ಈ ವಿಷಯವನ್ನೇ ವಿಶದ ಮಾಡುವನು.

(3) **ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
—(2. 18.)

ಅರ್ಥವು:— ಸ್ವರೂಪೇಣನಿತ್ಯನಾದ ಉತ್ಪನ್ನವಾದ ಶರೀರವುಳ್ಳ ಈ ಜೀವನ ದೇಹಗಳು ನಾಶ ಹೊಂದತಕ್ಕವುಗಳೇ. ಜೀವ ಸ್ವರೂಪವು ನಿತ್ಯವಾದುದು; ಸರ್ವಥಾ ನಾಶ ಹೊಂದತಕ್ಕುದಲ್ಲವೆಂದು ನಿರೂಪಿಸುತ್ತಾನೆ:—

(4) **ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ।** —(2. 17.)

ಅರ್ಥವು :— ನಾಶಹೀನನಾದ ಈ ಜೀವವನ್ನು ಯಾರೂ ನಾಶ ಮಾಡಲಾರರು.

(5) **ನ ಜಾಯತೇ ಮ್ರಿಯತೇ ವಾ ಕದಾಚಿತ್.......ಹನ್ಯಮಾನೇ ಶರೀರೇ ॥** —(2. 20.)

ಅರ್ಥವು :— ಜೀವನು ( ಸ್ವರೂಪೇಣ ) ಉತ್ಪನ್ನನಾಗುವದಿಲ್ಲ. ಸ್ವರೂಪದಿಂದ ಸಾಯುವದಿಲ್ಲ. ( ಜೀವನಿಗೆ ಜನನ ಮರಣ ವ್ಯವಹಾರವು ಶರೀರೋತ್ಪತ್ತಿ ನಾಶಮೂಲಕವೆಂದು ಭಾವವು. ) ಶರೀರವು ನಾಶವಾದರೂ ಜೀವನಿಗೆ ಜನನ ಮರಣಗಳಿಲ್ಲ.

(6) **ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಂ ।**
—(2. 21.)

ಅರ್ಥವು :— ಈ ಜೀವನು ಸ್ವರೂಪೇಣ ಸದಾ ನಾಶಹೀನನಾದುದರಿಂದ, ಉತ್ಪತ್ತಿರಹಿತನಾಗಿಯೂ ಸ್ವರೂಪ ವಿಕಾರಶೂನ್ಯನಾಗಿಯೂ ಇರುವನೆಂದು ತಿಳಿಯಬೇಕು.

ಜೀವನು 'ಅವಿನಾಶಿಯು' ಎಂದರೆ ಸ್ವರೂಪೇಣ ನಾಶ ಹೊಂದತಕ್ಕವನಲ್ಲ ಎಂದು ಹೇಳಿ, ಶ್ರೀ ಕೃಷ್ಣನು ಅಷ್ಟರಲ್ಲೇ ತೃಪ್ತನಾಗದೆ, "ನಿತ್ಯಂ ಅವಿನಾಶಿನಂ" ಎಂಬಲ್ಲಿ ನಿತ್ಯಂ ಎಂಬ ವಿಶೇಷಣವನ್ನೂ ಕೊಟ್ಟಿರುತ್ತಾನೆ. ಜೀವ ಸ್ವರೂಪವು ನಿತ್ಯವು ಎಂದರೆ ಮುಂದೆ ಯಾವ ಕಾಲದಲ್ಲಿಯೂ ನಾಶ ಹೊಂದತಕ್ಕದ್ದಲ್ಲ;

ಎಂದು ಹೇಳಿರುವದರಿಂದ ಜೀವನಿಗೆ ಮತ್ತೊಬ್ಬ ಜೀವನಿಂದಾಗಲೀ, ಪರಮಾತ್ಮ ನಿಂದಾಗಲೀ, ಐಕ್ಯವು ಪ್ರಾಪ್ತವಾಗಿ ತನ್ನ ಸ್ವರೂಪನಾಶವು ಎಂದಿಗೂ ಆಗ ಲಾರದು ಎಂದು ನಿಶ್ಚಿತವಾಗುವದು. ಜೀವಸ್ವರೂಪಕ್ಕೆ ಯಾವ ರೀತಿಯಾದ ವಿಕಾರವೂ ಬರಲಾರದೆಂದು ಇನ್ನೂ ಕೆಲವು ಯುಕ್ತಿಗಳಿಂದಲೂ ದೃಢೀಕರಿಸುತ್ತಾನೆ.

(7) **ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ।**
**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ**
**ಏವಚ ॥** —(2. 23–24.)

ಈ ಜೀವವನ್ನು ಶಸ್ತ್ರಗಳು ಕತ್ತರಿಸುವದಿಲ್ಲ; ಅಗ್ನಿಯು ಇವನನ್ನು ಸುಡುವದಿಲ್ಲ; ಜಲವು ಇವನನ್ನು ತೊಯ್ಯಿಸುವದಿಲ್ಲ; ಗಾಳಿಯು ಇವನನ್ನು ಒಣಗಿ ಸುವದಿಲ್ಲ. (ಯಾತಕ್ಕೆಂದರೆ,) ಈ ಜೀವನು ಛೇದನ ಯೋಗ್ಯವಾದ ಪದಾರ್ಥವೇ ಅಲ್ಲ; ದಾಹಾರ್ಹನಲ್ಲ: ಜಲದಿಂದ ಒದ್ದೆಯಾಗತಕ್ಕ ಪದಾರ್ಥವಲ್ಲ; ಮತ್ತು ವಾಯುವಿನಿಂದ ಒಣಗತಕ್ಕವನಲ್ಲ. ಹೀಗೆ ಹೇಳಿರುವದರಿಂದ ಜೀವ ಸ್ವರೂಪವು ಶಸ್ತ್ರಾಸ್ತ್ರಗಳಿಂದಾಗುವ ವಧೆಯಿಂದಾಗಲೀ, ದೇವತೆಗಳ ನಿಮಿತ್ತದಿಂದಾಗಲೀ ವಿಕಾರ ವನ್ನು ಹೊಂದಿ ಮತ್ತೊಂದು ವಸ್ತುವಿನಲ್ಲಿ ಲೀನವಾಗಿ ಹೋಗುವದು ( ಐಕ್ಯವನ್ನು ಹೊಂದುವದು ) ಎಂದು ಹೇಳಲಾಗುವದಿಲ್ಲ. ಪರಮಾತ್ಮನೂ ಸಹ ವಿಕಾರರಹಿತ ನೆಂದೂ ಶ್ರೀ ಕೃಷ್ಣನು ಹೇಳುತ್ತಾನೆ.

1. **............ಅವಿಕಾರ್ಯೋಽಯಮುಚ್ಯತೇ ।** —(2. 25.)

ಪರಮಾತ್ಮನು ( ಶ್ರೀ ಕೃಷ್ಣನು ) ಸರ್ವ ಪ್ರಕಾರದಿಂದಲೂ ವಿಕಾರವನ್ನು ಹೊಂದಿಸಲ್ಪಡತಕ್ಕವನಲ್ಲ.

2. **ಅಜೋಽಪಿಸನ್ನವ್ಯಯಾತ್ಮಾ ।** —(2. 25.)

ಪರಮಾತ್ಮನು ಜನನರಹಿತನು. ಆತನು ನಾಶರಹಿತವಾದ ದೇಹವುಳ್ಳ ವನು.

3. **ಪರಮಾತ್ಮಾಯಮವ್ಯಯಃ ।** —(13. 32.)

ಈ ಪರಮಾತ್ಮನು ( ಶ್ರೀ ಕೃಷ್ಣನು ) ಅವ್ಯಯನು.

ಹೀಗಿರುವದರಿಂದ ನಮ್ಮ ವಿವಾದವು ಈ ರೀತಿಯಾಗಿ ಪರಿಣಮಿಸಿತು.

1. ಪರಮಾತ್ಮನೂ ವಿಕಾರರಹಿತನು ನಾಶ ಹೊಂದತಕ್ಕ ಸ್ವರೂಪ ಉಳ್ಳವ ನಲ್ಲ. ಜೀವಾತ್ಮನೂ ಸ್ವರೂಪೇಣ ನಾಶ ಹೊಂದತಕ್ಕವನಲ್ಲ. ಸ್ವರೂಪ ವಿಕಾರ ವಾಗದಂತೆ ಭಿನ್ನವಾದ ವಿರುದ್ಧ ಧರ್ಮಗಳುಳ್ಳ ಎರಡು ವಸ್ತುಗಳಿಗೆ ತಾದಾತ್ಮ್ಯವು ಪ್ರಾಪ್ತವಾಗಲಾರದು.

ಚಿನ್ನದ ಬಂದಿಯನ್ನೂ ಚಿನ್ನದ ಡಾಬನ್ನೂ ಕರಗಿಸಿದರೆ ಎರಡು ಆಭರಣ ಗಳೂ ತಮ್ಮ ಮೃದು ಸ್ವಭಾವದಿಂದ ತಮ್ಮ ತಮ್ಮ ಆಕಾರವನ್ನು ಕಳೆದುಕೊಂಡು ಬಿಟ್ಟು, ಅಗ್ನಿತಾಪದಿಂದ ಕರಗಿ ಪರಸ್ಪರ ಬೆರೆತು ಒಂದೇ ಗಡ್ಡೆಯಾಗಿ ಪರಿಣಮಿಸು ವವು. ಘನವಾದ ಎರಡು ವಜ್ರದ ಘಟ್ಟಿಗಳಂತೆ ಇರುವ ಜೀವಾತ್ಮ ಪರಮಾತ್ಮರು ಉಭಯರೂ ನಿರ್ವಿಕಾರರಾಗಿ ಅಚ್ಛೇದ್ಯರಾಗಿರುವಾಗ ತಮ್ಮ ಧರ್ಮಗಳನ್ನು ಕಳೆದು ಕೊಂಡು ಒಂದೇ ಚೈತನ್ಯವಾಗಿ ಹೋಗುವುದು ಹೇಗೆ ?

2. ಮತ್ತೊಂದು ಅನುಪಪತ್ತಿಯೂ ಉಂಟು.

1. ***ನ ಹ್ಯನ್ಯೋ ಅನ್ಯಾತ್ಮನಾ ಭವತಿ ।**

ಎಂಬ ಶಾಸ್ತ್ರಸಿದ್ಧವಾದ ನ್ಯಾಯವನ್ನು ನಿಷ್ಕಾರಣವಾಗಿ ಪರಿತ್ಯಾಗ ಮಾಡ ಬೇಕಾಗುವುದು. ಒಂದು ವಸ್ತುವು ತನ್ನಿಂದ ಅತ್ಯಂತ ಭಿನ್ನವಾದ ಮತ್ತೊಂದು ವಸ್ತುವಿನ ತಾದಾತ್ಮ್ಯವನ್ನು ಯಾವ ಕಾರಣದಿಂದಲೂ ಹೊಂದಲಾರದು. ಹಾಗೆ ಹೊಂದುವುದಾದರೆ ಹವಳವು ಕೆಂಪು ಮಣ್ಣಾಗಲಿ ! ವಜ್ರವು ಸೀಸವಾಗಲಿ ! ಜಡವು ಜೀವನವಾಗಲಿ ! ಚೇತನನು ಜಡವಾಗಲಿ ! ಎಂಬ ಸರ್ವ ಅನಿಷ್ಟ ಆಪಾದನೆಗಳೂ ಪ್ರಾಪ್ತವಾಗುವುವು. ಚಿನ್ನ, ಬೆಳ್ಳಿ, ಮೊದಲಾದುವುಗಳು ಮೂಸೆಯಲ್ಲಿಟ್ಟು ಕರಗಿಸಿ ದರೆ ಒಂದೇ ಗಟ್ಟಿಯಾಗುವುವು. ಆದರೆ ಅಲ್ಲಿ **ನಿಬಿಡತರ ಸಂಯೋಗವು** ಪ್ರಾಪ್ತ ವಾಯಿತೇ ಹೊರತು ತಾದಾತ್ಮ್ಯವು ( ಐಕ್ಯವು ) ಉಂಟಾಗಲಿಲ್ಲ. ಆದುದರಿಂದಲೇ ಒಂದು ಬೆಳ್ಳಿ ಗಡ್ಡೆಯು ಸಹಿತವಾಗಿ ಮತ್ತೊಂದು ಬೆಳ್ಳಿ ಗಡ್ಡೆಯನ್ನು ಒಟ್ಟುಗೂಡಿ ಕರಗಿಸಿದರೆ ಎರಡು ಗಡ್ಡೆಯ ತೂಕವೂ ಇರುವುದೇ ಹೊರತು ಒಂದೇ ಗಡ್ಡೆಯ ತೂಕದಷ್ಟು ಬೆಳ್ಳಿಯಾಗುವುದಿಲ್ಲ. ಎರಡು ಗಡ್ಡೆಗಳಿಗೂ ತಾದಾತ್ಮ್ಯವು (ಐಕ್ಯವು) ಪ್ರಾಪ್ತವಾಗಿದ್ದರೆ, ತೂಕವೃದ್ಧಿಯು ಉಂಟಾಗಕೂಡದು. ನದಿಗಳು ಸಮುದ್ರದಲ್ಲಿ ಏಕೀಭಾವವನ್ನು ಹೊಂದುವವೆಂದು ವ್ಯವಹಾರವಿರುವದು. ಇದು ಗೌಣ ವ್ಯವ ಹಾರವು. ನದಿಯು ಸಮುದ್ರವೇ ಆಗಿ ಹೋದರೆ ಸ್ವಲ್ಪವೂ ವೃದ್ಧಿಯು ಆಗದೆ ಸಮುದ್ರಮುಖದಲ್ಲಿ ಪ್ರವಾಹವೃದ್ಧಿಯು ಕಾಣಿಸದೇ ಹೋಗಬೇಕಾದೀತು ! ನದೀ ಸಮುದ್ರಗಳಿಗೆ ಮಿಶ್ರಣ ಮಾತ್ರವೆಂಬುದು ಸರ್ವ ಜನ ಸಮ್ಮತವು.* 2.

---

1. *ಶಂಕರಾಚಾರ್ಯರೂ ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿ **" ನ ಹ್ಯನ್ಯಸ್ಯಾನ್ಯಭಾವ ಉಪಪದ್ಯತೇ"** ಎಂದು ಬರೆದಿರುತ್ತಾರೆ. ಭಿನ್ನವಾದ ಒಂದು ವಸ್ತುವಿಗೆ ಮತ್ತೊಂದು ವಸ್ತುತಾದಾತ್ಮ್ಯವು ಕೂಡುವುದಿಲ್ಲ ಎಂದರ್ಥವು. ಈ ರೀತಿಯಾಗಿ ಶಾಸ್ತ್ರೀಯ ನ್ಯಾಯವನ್ನು ಅಂಗೀಕರಿಸಿ ಭಿನ್ನರಾದ ಜೀವಬ್ರಹ್ಮರಿಗೆ ಐಕ್ಯವನ್ನು ಒಪ್ಪಿದುದು ಆಶ್ಚರ್ಯವು.

2. *ನದೀ ಸಮುದ್ರ ದೃಷ್ಟಾಂತವು ಭೇದಸಾಧಕವೆಂದು ಅದ್ವೈತಿಗಳೂ ಒಪ್ಪಿರುತ್ತಾರೆ. ತಥಾಹಿ ಸೂತ್ರ ಭಾಷ್ಯೆ (–1. 4. 22 ರಲ್ಲಿ) **ಭಾಮತೀ– "ನದೀಪಾಥಃ ಪರಮಾಣೂ ನಾಂತು ಸಮುದ್ರಪಾಥಃ ಪರಮಾಣುಭ್ಯಃ ಪೂರ್ವಾವಸ್ಥಿತೇಭ್ಯೋ ಭೇದ ಏವ ನಾಭೇದಃ । ಏವಂ ಸಮುದ್ರಾದಪಿ ತೇಷಾಂ ಭೇದ ಏವ ॥ "**ಅರ್ಥವು—

ಪರಂತು 3. ಪರಬ್ರಹ್ಮನು ಜೀವತಾದಾತ್ಮ್ಯವನ್ನು ಹೊಂದಬಹುದೆಂಬ ಸಂಭಾವನೆಯೂ ಅತ್ಯಂತ ಅನುಚಿತವು. ಹೇಗೆಂದರೆ— ಪರಮಾತ್ಮನು ನೀಚ ಜೀವತಾದಾತ್ಮ್ಯವನ್ನು ಹೊಂದುವನು ಎಂದರೆ ನೀಚ ಜೀವನೇ ಆಗುವನು ಎಂದರ್ಥವು, ಆಗ ಆತನ ಅಚಿಂತ್ಯಶಕ್ತಿಯೂ, ಸರ್ವಜ್ಞತ್ವವೂ, ಪೂರ್ಣತ್ವವೂ, ಸರ್ವಗತತ್ವವೂ ಕೂಡಲೇ ಅದೃಶ್ಯವಾಗಬೇಕು. *ಅಚಿಂತ್ಯಶಕ್ತಿಯು ಅಲ್ಪಶಕ್ತಿಯಾಗಲಿ! ಸರ್ವ ವಿಷಯಕ ಜ್ಞಾನವು ಸ್ವಲ್ಪ ವಿಷಯಕ ಜ್ಞಾನವಾಗಲಿ; ಪೂರ್ಣತ್ವವು ಅಪೂರ್ಣತ್ವವಾಗಲಿ! ಸರ್ವಗತತ್ವವು ಅಲ್ಪ ವ್ಯಾಪ್ತಿರೂಪವಾಗಲಿ! ಇವೇ ಮುಂತಾದ ಆಪಾದನೆಗಳು, ಕೋಟಿ ಮೈಲುಗಳು ಒಂದಂಗುಲವಾಗಲಿ, ಕಲ್ಲು ಆಕಾಶವಾಗಲಿ ಇತ್ಯಾದಿ ಮಾತುಗಳಂತೆ ಅತ್ಯಂತ ವಿರುದ್ಧವಾದುವುಗಳು. ವಿರುದ್ಧ ಧರ್ಮಗಳುಳ್ಳ ಪದಾರ್ಥಗಳು ಏಕೀ ಭಾವವನ್ನು ಹೊಂದುವುದು ಅಸಂಭಾವಿತವು ಮತ್ತು ಅಚಿಂತ್ಯ ಶಕ್ತಿಯು ಸ್ವಯಂ ನಾಶವಾಗದೆ ಅಲ್ಪ ಶಕ್ತಿಯಾಗಲಾರದು. ಪೂರ್ಣತ್ವವು ಅಪೂರ್ಣತ್ವವಾಗುವುದಾದರೆ ಪೂರ್ಣತ್ವವು ನಾಶವಾಗಬೇಕು ಹೀಗೆ ಭಗವದ್ಧರ್ಮಗಳ ಸ್ವರೂಪ ನಾಶವು ಪ್ರಾಪ್ತವಾಗದೆ ಜೀವತಾದಾತ್ಮ್ಯವು ಭಗವಂತನಿಗೆ ಪ್ರಾಪ್ತವಾಗಲಾರದು ಪರಬ್ರಹ್ಮನಾದ ಶ್ರೀ ಕೃಷ್ಣನ ಸ್ವರೂಪವು, ದೇಹವು ಮತ್ತು ಇಂದ್ರಿಯಗಳೂ ಕೂಡ ಶಬ್ದದೇಕಪ್ರಕಾರವಾಗಿ ನಿತ್ಯವಾಗಿರುವು

---

ನದೀ ಜಲ ಪರಮಾಣುಗಳಿಗೆ ಪೂರ್ವದಿಂದಲೂ ಸಮುದ್ರದಲ್ಲಿದ್ದ ಜಲ ಪರಮಾಣುಗಳಿಂದ **ಭೇದವೇ** ಹೊರತು ಅಭೇದವು ಇರುವುದಿಲ್ಲ. ಹಾಗೆಯೇ ಸಮುದ್ರಕ್ಕೂ (ಅದರಲ್ಲಿ ಮಿಳಿತವಾದ) ನದೀ ಪರಮಾಣುಗಳಿಗೂ ಭೇದವೇ ಇರುತ್ತದೆ, ಕಲ್ಪತರು ಪರಿಮಳದಲ್ಲಿಯೂ ಹೀಗೆಯೇ ಹೇಳಿರುತ್ತದೆ. P. 422. ತಮ್ಮ ಮೂಲ ಗ್ರಂಥಗಳನ್ನು ನೋಡದೆ ಕೆಲವರು ಅದ್ವೈತಿಗಳು ಈ ದೃಷ್ಟಾಂತವು ಅಭೇದಸಾಧಕವೆಂದು ನಂಬಿರುತ್ತಾರೆ.

* ಈ ನ್ಯಾಯವು ಅದ್ವೈತ ಮತದಲ್ಲಿ ಛಾಂದೋಗ್ಯಭಾಷ್ಯದ **ಆನಂದಗಿರಿ** ಟೀಕಾ ಗ್ರಂಥಕರ್ತರಿಂದಲೇ ಸೂಚಿತವಾಗಿರುವದು. "ಕಾಮೋಸ್ಮಿ ಭರತರ್ಷಭ" ಎಂಬ ಗೀತಾ ಶ್ಲೋಕ ವ್ಯಾಖ್ಯಾನಾವಸರದಲ್ಲಿ **( ಕಾಮಸ್ಯ ಬ್ರಹ್ಮೈಕ್ಯೇ ) ಬ್ರಹ್ಮಣೋऽನಾದಿತ್ವಂ ಹೀಯತೇ, ಚೇತನ ಶೇಷತ್ವಾಚ್ಚ ಕಾಮಸ್ಯ ಬ್ರಹ್ಮಣಃ ಸ್ವಾತಂತ್ರ್ಯಂ ಹೀಯತೇ** ಎಂದು ಬರೆದಿರುತ್ತಾರೆ. ( ಕಾಮವು ಬ್ರಹ್ಮಾಭಿನ್ನವಾದರೆ ) ಬ್ರಹ್ಮನು ಸಾದಿಯಾದ ಕಾಮೈಕ್ಯವುಳ್ಳವನಾದರೆ, ಬ್ರಹ್ಮನೂ ಸಾದಿ ( ಜನ್ಯ ) ಯಾಗಬೇಕು. ಬ್ರಹ್ಮನು ಮನಸ್ಸಿಗೆ ಅಧೀನವಾದ ಕಾಮೈಕ್ಯವನ್ನು ಹೊಂದಿದರೆ ಬ್ರಹ್ಮನೂ ಮನಸ್ಸಿಗೆ ಅಧೀನತೆಯನ್ನು ಹೊಂದಬೇಕು ಎಂದು ಹೇಳಿರುತ್ತಾರೆ. ಪ್ರಕೃತದಲ್ಲಿ ಜೀವನ ವಿಷಯದಲ್ಲೂ ಈ ನ್ಯಾಯವನ್ನು ಅತಿದೇಶ ಮಾಡಬಹುದು. ಬ್ರಹ್ಮನು ಜನ್ಯದೇಹವುಳ್ಳ ಜೀವೈಕ್ಯವನ್ನು ಹೊಂದಿದರೆ ಬ್ರಹ್ಮನೂ ಜನ್ಯದೇಹವುಳ್ಳವನಾಗಬೇಕು; ಬ್ರಹ್ಮನು ಅಲ್ಪನಾದ ( ಮತ್ತು ಅಣುವಾದ ) ಜೀವೈಕ್ಯವನ್ನು ಹೊಂದಿದರೆ ಬ್ರಹ್ಮನೂ ಅಲ್ಪನೂ, ಅಣುವೂ ಆಗಬೇಕು. ಬ್ರಹ್ಮನು ಪರತಂತ್ರನಾದ ಜೀವೈಕ್ಯವನ್ನು ಹೊಂದಿದರೆ ಬ್ರಹ್ಮನೂ ಪರತಂತ್ರನಾಗಬೇಕು; ಇತ್ಯಾದಿ ಸರ್ವ ದೋಷಗಳೂ ಐಕ್ಯವನ್ನು ಒಪ್ಪಿಕೊಂಡರೆ ಬರುವುದೆಂದು ಅದ್ವೈತಿಗಳು ತೋರಿಸಿರುತ್ತಾರೆ.

ವೆಂದು **" ಅವ್ಯಯಾತ್ಮಾ " " ಜನ್ಮಕರ್ಮ ಚ ಮೇ ದಿವ್ಯಂ "** ಇತ್ಯಾದಿ ಅನೇಕ ಗೀತಾವಾಕ್ಯಗಳೂ ಮತ್ತು **" ಸ್ವಾಭಾವಿಕೀ ಜ್ಞಾನಬಲ ಕ್ರಿಯಾಚ"** ಮುಂತಾದ ಅನೇಕಶ್ರುತಿಗಳೂ ಹೇಳುತ್ತವೆ. **"ಸತ್ಯೋಸ್ಯೋ ಅಸ್ಯಮಹಿಮಾ ''** ಎಂಬಶ್ರುತಿಯೂ ಕೂಡ ಭಗವದ್ಧರ್ಮಗಳು ಮಿಥ್ಯಾಭೂತ ವಾಗಲಾರವೆಂದು ಹೇಳುತ್ತದೆ. ಕಿಂಚ 4. ಸಂಸಾರತಾಪದಿಂದ ನಿರಾಶನಾಗಿ ಸುರಾ ಪಾನ ಸುವರ್ಣಸ್ತೇಯಾದಿಗಳನ್ನು ಆಚರಿಸಿ ಅತ್ಯಂತ ವಿಪತ್ತಿನಲ್ಲಿ ಸಿಕ್ಕಿಬಿದ್ದಿರುವ ತತ್ವಜ್ಞಾನಶೂನ್ಯನಾದ ಮೂರ್ಖನು ಆತ್ಮಹನನವನ್ನು ಇಚ್ಛಿಸಬಹುದು. ಆದರೆ ನಿತ್ಯವ್ಯಕ್ತವಾದ ಸ್ವರೂಪಭೂತವಾದ ಪೂರ್ಣಸುಖಾನುಭವವನ್ನು ಹೊಂದಿರುವ ಮತ್ತು ತನ್ನ ನಿತ್ಯಸುಖವನ್ನು ಅವಿದ್ಯಾದಿರೂಪವಾದ ಮೂಷಿಕಹಾವಳಿಯಿಂ ದಲೂ, ದುರಾಗ್ರಹದಿಂದ ತಾದಾತ್ಮ್ಯವನ್ನು ಕೋರುವ ಅಧಮಜೀವರುಗಳ ನಿರಂ ತರ ಪೀಡೆಯಿಂದಲೂ ರಕ್ಷಿಸಿಕೊಳ್ಳುವದಕ್ಕೆ ಸಾಧಕವಾದ ·ಪೂರ್ಣಶಕ್ತಿ ಮತ್ತು ಸರ್ವಜ್ಞತ್ವರೂಪ ಪ್ರಬಲ ಅಮಾತ್ಯರಿಂದ ಸಹಿತನಾದ, ರಾಜಾಧಿರಾಜನಾದ ಪರ ಮಾತ್ಮನು ತನ್ನ ಸ್ವರಾಜ್ಯವಾದ (ಸ್ವರೂಪಭೂತವಾದ) ಪೂರ್ಣಸುಖವನ್ನು ನೀಚಜೀವನಿಗೆ ದಾನಮಾಡಿ ವನವಾಸಕ್ಕೆ ಹೋಗಲಾರನು. ಶ್ರೀರಾಮನು ವನವಾ ಸಕ್ಕೆ ಹೋದರೂ ಛಾಯೆಯಂತೆ ಅನುಸರಿಸಿದ ತನ್ನ ಪತ್ನಿಯನ್ನು ಪರಿತ್ಯಾಗಮಾಡ ಲಿಲ್ಲ. ಹೀಗಿರುವಲ್ಲಿ ಪ್ರೇಕ್ಷಾವಂತರಿಗೆ ಚೂಡಾಮಣಿಯಾದ ಪರಬ್ರಹ್ಮನು ನನಗೆ ಪೂರ್ಣಸುಖವು ಬೇಡ. ನನಗೆ ಅಲ್ಪಸುಖವುಬೇಕು ಎಂದು ದುರ್ಬುದ್ಧಿಗೆ ವಶನಾಗಿ ತನ್ನ ಸ್ವರೂಪವನ್ನೇ ಕಳೆದುಕೊಂಡು ಆತನ ಆಧಿಪತ್ಯ ವಿವಕ್ಷೆಯಿಂದ ನರಕವೇದನೆ ಗಿಂತಲೂ ದುಸ್ಸಹವಾದ ನೀಚ ಜೀವತಾದಾತ್ಮ್ಯವನ್ನು ಹೊಂದುವನೆಂಬುದು ಅತ್ಯಂತ ಅಪಹಸನೀಯ ಪ್ರಕ್ರಿಯೆಯು.

ಜೀವಸ್ವರೂಪವು ಪರಮಾತ್ಮನಿಂದ ಭಿನ್ನವಾಗಿ ನಿತ್ಯವಾಗಿರುವದೆಂದೂ ಮತ್ತು 5. ಜೀವಸ್ವಭಾವಕ್ಕೆ ಪರಮಾತ್ಮನು ಸದಾ ನಿಯಾಮಕನಾಗಿ ರಕ್ಷಕನಾಗಿ ರುವನೆಂದೂ ಶ್ರೀಕೃಷ್ಣನು ಹೇಳುತ್ತಾನೆ.

**11. ಅಜೋ ನಿತ್ಯಶ್ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯ ಮಾನೇ ಶರೀರೇ** (2. 20.)

**12. ನಿತ್ಯಃಸರ್ವಗತಃಸ್ಥಾಣುರಚಲೋಽಯಂ ಸನಾತನಃ** I 2. 24.)

**13. ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ** —(2. 30.)

ಇದರ ತಾತ್ಪರ್ಯವು:— ಈ ಜೀವನು ಅಜನೂ, ನಿತ್ಯನೂ, ಶಾಶ್ವತನೂ ಆದ ಈಶ್ವರನಿಗೆ ಪ್ರತಿಬಿಂಬನಾದುದರಿಂದ ತಾನೂ ) ಸ್ವರೂಪೇಣಜನ್ಮರಹಿತನು; ಸ್ವರೂಪನಾಶವಾಗುವ ವಿಕಾರವನ್ನು ಹೊಂದದೆ ಏಕಪ್ರಕಾರವಾಗಿರುವವನು;

(ಹಾಗಾದರೂ ಭಗವಂತನ ಸಾಮ್ಯವು ಬರಲಿಲ್ಲವೆಂದು ಹೇಳುತ್ತಾನೆ:—) ಜೀವನು ಪುರಾಣನು; ಶರೀರವನ್ನು ಬಿಟ್ಟು ಶರೀರಾಂತರವನ್ನು ಹೊಂದುತ್ತಲೇ ಇರುವನು. ಆದರೆ ಶರೀರವು ನಾಶವಾಗುತ್ತಿದ್ದರೂ ಸ್ವರೂಪವು ನಾಶವಾಗುವದಿಲ್ಲ (ಇಷ್ಟೇ ಇವನ ಸಾಮರ್ಥ್ಯವು). 12. ಈ ಜೀವನು ನಿತ್ಯನು, ಸರ್ವಗತನಾದ ಪರಮಾತ್ಮನಲ್ಲಿ ಇರುವವನೂ, ಮತ್ತು ಅಣುವು; *(ಈಶ್ವರಾಶ್ರಿತತ್ವದಿಂದ) ಚಲನರಹಿತನು ಮತ್ತು ವಿಧಿಬದ್ಧನು. 13. (ಜೀವನಿತ್ಯತ್ವವು ಸ್ವಾಭಾವಿಕವಾದುದರಿಂದ ಈಶಾಧೀನವಲ್ಲವೆಂಬ ಶಂಕೆಯು ಅಯುಕ್ತವೆಂದು ಹೇಳುತ್ತಾನೆ:—) ಜೀವನ ಸೂಕ್ಷ್ಮದೇಹದಲ್ಲೂ ಸ್ಥೂಲ ದೇಹದಲ್ಲೂ ಮತ್ತು ಸ್ವರೂಪದೇಹದಲ್ಲೂ ಅಯಂ = ಎಂದರೆ ಪೂರ್ವಶ್ಲೋಕದಲ್ಲಿ ಪ್ರಕೃತನಾದ ಅಚಿಂತ್ಯ ಶಕ್ತಿಯುಳ್ಳ ಪರಮಾತ್ಮನು ರಕ್ಷಕನಾಗಿರುತ್ತಾನೆ. ಆದುದರಿಂದ ಜೀವನು ಸರ್ವದಾ ಅವಧ್ಯನು. (ನಿಯಾಮಕನಾದ ಈಶ್ವರನ ಇಚ್ಛೆಯಿಲ್ಲದೆ ಯಾವದೇಹಪಾತವೂ ಆಗಲಾರದೆಂದು ಭಾವವು.)

ಈ ವಾಕ್ಯದಿಂದ "ನಿತ್ಯಂನಿತ್ಯಾತ್ಮನಾ ಯತಃ;" ಸ್ವಭಾವೋ ಜೀವಏವಚ ಇತ್ಯಾದಿ ಪ್ರಮಾಣವಚನೋಕ್ತ ರೀತಿಯಲ್ಲಿ ನಿತ್ಯತ್ವರೂಪವಾದ ಜೀವನ ಸ್ವಭಾವವನ್ನು ನಾಶಹೊಂದಿಸದೆ (ತನ್ನ ಅಥವಾ ಅನ್ಯಚೇತನರ ತಾದಾತ್ಮ್ಯವನ್ನು ಹೊಂದಿಸದೆ) ರಕ್ಷಿಸುತ್ತಿರುವನೆಂದು ನಿಶ್ಚಿತವಾಗುವದು. †

ಈ ರೀತಿಯಾಗಿ 1. ಜೀವಸ್ವರೂಪವು ನಿತ್ಯವೂ ನಿರ್ವಿಕಾರವೂ ಆದುದರಿಂದಲೂ, 2. ಪರಮಾತ್ಮಸ್ವರೂಪವು ದೇಹಾದಿಗಳೂ ಕೂಡನಿತ್ಯವೂ ನಿರ್ವಿಕಾರವೂ ಆದುದರಿಂದಲೂ 3. ನಹ್ಯನ್ಯೋಽನ್ಯಾತ್ಮನಾಭವತಿ ಎಂಬ ಶಾಸ್ತ್ರಸಿದ್ಧವಾದ ನ್ಯಾಯವನ್ನು ಭಿನ್ನವಾದ ಜೀವಬ್ರಹ್ಮರಿಗೆ ಐಕ್ಯವನ್ನು ಒಪ್ಪುವದರಿಂದ ಅತಿಕ್ರಮಿಸಬೇಕಾಗುವದರಿಂದಲೂ, 4. ಅಲ್ಪಜೀವನ ತಾದಾತ್ಮ್ಯವನ್ನು ಹೊಂದಿ

---

* ಸರ್ವಗತಸ್ಥಶ್ಚಾಸೌ ಅಣುಶ್ಚ ಎಂದು ಸರ್ವಗತಸ್ಥಾಣುಃ; ಎಂಬ ಸಮಸ್ತ ಪದದ ವಿಗ್ರಹವು. ಸರ್ವಗತನಾದ ಹರಿಯಲ್ಲಿ ಸ್ಥಿತನಾಗಿರುವವನು. ಮತ್ತು ಅಣುವು ಎಂದರ್ಥವು. **"ನಿತ್ಯಂ ಸರ್ವಗತೇ ವಿಷ್ಣೌ ಅಣುರ್ಜೀವೋವ್ಯಸ್ಥಿತಃ"** ಎಂಬ ವಿಷ್ಣುಪುರಾಣದ ಸಮಾಖ್ಯಾ ವಚನದಿಂದ ಈ ವ್ಯಾಖ್ಯಾನವು ಅತ್ಯಂತ ಪ್ರಾಮಾಣಿಕವೆಂದು ನಿಶ್ಚಯಿಸಬಹುದು. "ಮತ್ಸ್ಥಾನಿ ಸರ್ವಭೂತಾನಿ" ಎಂದು ಶ್ರೀಕೃಷ್ಣನು ಹೇಳಿರುತ್ತಾನೆ. ತಕಾರಕ್ಕೆ ದಕಾರಾದೇಶವನ್ನು ಮಾಡಿದರೆ ಸನಾತನಃ ಎಂಬುದು ಸನಾದನಃ ಎಂದಾಗುವದು. ವಿಧಿನಿಷೇಧಗಳಿಂದ ಬದ್ಧನು ಎಂದು ಅದರ ಅರ್ಥವು.

† ರಸೋಽಹಮಪ್ಸು; ಶಬ್ದಃಖೇ. ತೇಜಶ್ಚಾಸ್ಮಿವಿಭಾವಸೌ ಇತ್ಯಾದಿ ಬಹು ಸ್ಥಳಗಳಲ್ಲಿ ಪದಾರ್ಥಗಳ ಅನಾದಿನಿತ್ಯಸ್ವಭಾವಗಳಿಗೂ ನಿಯಾಮಕನಾಗಿ ಪರಬ್ರಹ್ಮನು ರಕ್ಷಣೆ ಮಾಡಿರುತ್ತಿರುವದು ಸ್ಪಷ್ಟವಾಗಿ ಶ್ರೀಕೃಷ್ಣನಿಂದಲೇ ಹೇಳಲ್ಪಟ್ಟಿರುತ್ತದೆ.

ದರೆ ತಾನೂ ಅಲ್ಪನೇ ಆಗಬೇಕಾಗುವುದರಿಂದಲೂ, 5. ಪರಮಾತ್ಮನು ಪ್ರೇಕ್ಷಾವಂತನಾದುದರಿಂದ ತನ್ನ ಸ್ವರೂಪಸುಖವನ್ನು ನೀಚಜೀವನ ತಾದಾತ್ಮ್ಯದಿಂದ ಕಳೆದುಕೊಳ್ಳಬಾರದೆಂಬ ಸರ್ವಚೇತನ ಸ್ವಾಭಾವಿಕವಾದ ಇಚ್ಛೆಯುಳ್ಳವನಾಗಿ ಆ ವಿಷಯದಲ್ಲಿ ಅದರ ಪರಿರಕ್ಷಣೆಗೆ ಬೇಕಾಗುವ ಪೂರ್ಣ ಶಕ್ತಿಯುಳ್ಳವನಾಗಿರುವದರಿಂದಲೂ, 6. ಮತ್ತು ತನಗಿಂತ ಭಿನ್ನರಾದ ಜೀವರ ಸ್ವಭಾವಪ್ರವೃತ್ತ್ಯಾದಿಗಳಿಗೆ ನಿಯಾಮಕನಾಗಿ ಅವರ ಅಂತರ್ಗತನಾಗಿ ರಕ್ಷಿಸುತ್ತಿರುವನೆಂದು "ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ;" "ಮತ್ತಃ ಸರ್ವಂ ಪ್ರವರ್ತತೇ" ಇತ್ಯಾದಿ ಅನೇಕ ವಾಕ್ಯಗಳಲ್ಲಿ ಶ್ರೀ ಕೃಷ್ಣನು ಹೇಳಿರುವದರಿಂದಲೂ ಜೀವಜೀವೈಕ್ಯವಾಗಲೀ ಜೀವಬ್ರಹ್ಮೈಕ್ಯವಾಗಲೀ ಅನಾದ್ಯನಂತ ಕಾಲದಲ್ಲಿ ಯಾವಾಗಲೂ ಸಂಭವಿಸಲಾರದು.

## 4.

**ಪ್ರಶ್ನೆ**— ಸ್ವಾಮೀ ! ಜೀವಬ್ರಹ್ಮರ ಐಕ್ಯವನ್ನು ನಿಷೇಧಿಸುವ ಭಗವದ್ವಚನಗಳು ಯಾವವು ?

**ಉತ್ತರ**— ಪರಬ್ರಹ್ಮನು ಗುಣಬದ್ಧನಾದ ಜೀವನಲ್ಲವು ಮತ್ತು ಪರಬ್ರಹ್ಮನು ಜೀವನೆಂಬುದು ಮೂಢರ ತತ್ವವು; ಎಂದು ಕೆಲವು ವಾಕ್ಯಗಳು ಹೇಳುತ್ತವೆ. ಜೀವನು ಬ್ರಹ್ಮನೆಂದು ತಿಳಿದರೆ ಅನರ್ಥವುಂಟೆಂದೂ ಕೆಲವು ವಾಕ್ಯಗಳು ಹೇಳುತ್ತವೆ. ತಥಾಹಿ—

**(1) ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಂ ॥**
—(7. 13.)

ಅರ್ಥವು— ಈ ಜಗತ್ತಿನಲ್ಲಿರುವ ಸರ್ವ ಅಜ್ಞಾನಿಗಳ ಸಮೂಹವೂ ತ್ರಿಗುಣಕಾರ್ಯಗಳಾದ ಪದಾರ್ಥಗಳಿಂದ ಮೋಹಿತವಾಗಿ (ತ್ರಿಗುಣಕಾರ್ಯವಾದ ದೇಹದಿಂದ ಬದ್ಧರಾದ ಜೀವರ ದರ್ಶನದಿಂದ ಮೋಹಿತವಾಗಿ). ಈ ತ್ರಿಗುಣಭಿನ್ನನಾಗಿಯೂ, ತ್ರಿಗುಣಬದ್ಧನಲ್ಲದೆಯೂ, ತ್ರಿಗುಣವಿಕಾರರಹಿತ ದೇಹವುಳ್ಳವನೂ ಆದ, ಅತಏವ (ದೇಹದಿಂದಲೂ) ನಾಶರಹಿತನಾದ ನನ್ನನ್ನು ತಿಳಿಯುವುದಿಲ್ಲ. ಲೋಕದಲ್ಲಿ ಬ್ರಹ್ಮಾದಿ ಜೀವರ ದೇಹಗಳು ತ್ರಿಗುಣಮಯವಾಗಿರುವಂತೆ ಶ್ರೀಕೃಷ್ಣನ ಶರೀರವೂ ತ್ರಿಗುಣಮಯವಾದುದು; ಬ್ರಹ್ಮಾದಿಗಳು ಜೀವರಾಗಿರುವಂತೆ ಶ್ರೀ ಕೃಷ್ಣನೂ ಗುಣಮಯ ದೇಹವುಳ್ಳ ಒಬ್ಬ ಜೀವನು ಎಂದು ಅಜ್ಞಜನರು ತಿಳಿಯುತ್ತಾರೆ; ವಸ್ತುತಃ ಶ್ರೀ ಕೃಷ್ಣನು ತ್ರಿಗುಣನಿರ್ಮಿತವಲ್ಲದ ಅವ್ಯಯವಾದ ದಿವ್ಯದೇಹವುಳ್ಳ ಪರಮಚೇತನನು; ಎಂದು ಭಾವವು.

(2) ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।
ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಂ ॥
—(7. 24.)

ಅರ್ಥವು— ದುರ್ಬುದ್ಧಿಯುಳ್ಳವರು ಇತರ (ಸರ್ವಜೀವ) ವಿಲಕ್ಷಣವಾದ, ಉತ್ತಮಾಂತರ ರಹಿತವಾದ, ಸರ್ವಪ್ರಕಾರದಿಂದಲೂ (ಸ್ವರೂಪೇಣ ಮತ್ತು ದೇಹತಃ) ನಾಶರಹಿತವಾದ, ನನ್ನ ಯಥಾರ್ಥ ಸ್ಥಿತಿಯನ್ನು ತಿಳಿಯದೆ, ಅವ್ಯಕ್ತಂ = ಎಂದರೆ ಅವ್ಯಕ್ತಸ್ವರೂಪನಾದ ಅಥವಾ ಜನ್ಯದೇಹರಹಿತನಾದ ನನ್ನನ್ನು "ನಾನು" "ನಾನು" ಎಂದು ಪ್ರತೀತಿ ವಿಷಯನಾಗಿ ಸರ್ವದಾ ವ್ಯಕ್ತನಾದ (ಅಥವಾ ಕಾರ್ಯದೇಹವುಳ್ಳ) ಜೀವನು ಎಂದು ತಿಳಿಯುತ್ತಾರೆ. ಅವ್ಯಕ್ತನಾದ ಪರಬ್ರಹ್ಮನನ್ನು ಸರ್ವದಾ ವ್ಯಕ್ತನಾದ ಅಹಂಪದಾರ್ಥನಾದ ಜೀವನೆಂದು ತಿಳಿಯುವವರು ವಿಪರೀತ ಜ್ಞಾನಿಗಳು ಎಂದು, ಬ್ರಹ್ಮನೇ ಜೀವನೆಂದು ತಿಳಿಯುವವರನ್ನು ಶ್ರೀ ಕೃಷ್ಣನು ನಿಂದಿಸಿರುತ್ತಾನೆ.

**(3) ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ ।**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಂ ॥11॥**
**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥12॥**
**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಂ ॥13॥**
**ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥**
—(9. 11–14.)

ಇದರ ಅರ್ಥವು— 11. ತಾಮಸಜನರು ಸರ್ವದಾ ಏಕಪ್ರಕಾರವಾಗಿರುವ, ಮಹತ್ತಾದ, ಅಚಿಂತ್ಯಶಕ್ತಿಯುಳ್ಳ, ಪರಂ ಎಂದರೆ ಜೀವವಿಲಕ್ಷಣವಾದ (ಅಥವಾ ಉತ್ತಮವಾದ) ನನ್ನ ಯಥಾರ್ಥಸ್ವರೂಪವನ್ನು ತಿಳಿಯದೆ ಮನುಷ್ಯ ದೇಹದಂತೆ ರೂಪವನ್ನು ತಾಳಿರುವ ನನ್ನನ್ನು ಮನುಷ್ಯದೇಹವುಳ್ಳ ಜೀವನೆಂದು ತಿಳಿದು ಅವಮಾನ ಮಾಡುತ್ತಾರೆ ಎಂದರೆ ಅಧಮನನ್ನಾಗಿ ತಿಳಿಯುತ್ತಾರೆ. (ಜೀವವಿಲಕ್ಷಣನಾದ ಜೀವರಿಗಿಂತ ಉತ್ತಮನಾದ ಪರಮಚೇತನನನ್ನು ಸಾಮಾನ್ಯ ಮನುಷ್ಯರಂತೆ ಇವನೂ ಒಬ್ಬ ಜೀವನು ಎಂದು ತಿಳಿಯುವದು ಪರಮಾತ್ಮನಿಗೆ ಅವಮಾನ ಮಾಡಿದ ಹಾಗಾಯಿತು. ಮಹಾರಾಜರನ್ನು ಗುಲಾಮನೆಂದು ತಿಳಿದರೆ ಅವರಿಗೆ ಅವಮಾನ ಮಾಡಿದ ಹಾಗಾಗುವುದು.) ಪರಮಾತ್ಮನನ್ನು ಅಲ್ಪತ್ವೇನ ತಿಳಿದವರಿಗೆ ಅನರ್ಥವುಂಟೆಂದು ಭಗವಂತನು ಹೇಳುತ್ತಾನೆ.— 12. ಇಂಥ ಭಗವದ್ದ್ವೇಷಿಗಳ

ಅಭಿಲಾಷೆಗಳೆಲ್ಲಾ ವ್ಯರ್ಥವಾಗುವವು; ( ಅವರಿಂದ ಅಭಿಲಷಿತವಾದ ಸ್ವರ್ಗಾದಿ ಸುಖಗಳು ಪ್ರಾಪ್ತವಾಗಲಾರವು. ) ಅವರ ಯಜ್ಞಾದಿ ಕರ್ಮಗಳು ನಿಷ್ಫಲವಾಗುವವು. ದುರರ್ಥದಿಂದ ಯುಕ್ತವಾಗಿರುವದರಿಂದ ಅವರ ಜ್ಞಾನವೆಲ್ಲವೂ ವ್ಯರ್ಥವೇ. ಅವರು ಪರಮಾತ್ಮನಿಗೆ ವಿರುದ್ಧಮನಸ್ಸುಳ್ಳವರು. ಅವರು ರಾಕ್ಷಸ ಸಂಬಂಧಿಯಾದ ಮಿಥ್ಯಾಜ್ಞಾನಜನಕವಾದ ಅಸುರಸ್ವಭಾವವನ್ನು ಹೊಂದಿದವರು. ( ಈ ಶ್ಲೋಕದಲ್ಲಿ ಪರಮಾತ್ಮನು ಅಧಮಜೀವನೆಂದು ತಿಳಿದವರ ಆಶೆಗಳು, ಕರ್ಮಗಳು, ತತ್ವಜ್ಞಾನವೇ ಮೊದಲಾದ ಸಕಲ ಭಾಗ್ಯವೂ ವ್ಯರ್ಥವು ಎಂದರೆ ಆಮುಷ್ಮಿಕ ಶ್ರೇಯಸ್ಸಿಗೆ ಕಾರಣವಾಗಲಾರದೆಂದು ಹೇಳಿ ಆ ರೀತಿಯಾದ ಜ್ಞಾನವು ಬುದ್ಧಿಭ್ರಂಶಕರವಾದ ಅಸುರಸ್ವಭಾವವನ್ನು ಹೊಂದಿರುವ ರಾಕ್ಷಸರಿಗೇ ಬರುವುದೆಂದು ನಾಮನಿರ್ದೇಶ ಮಾಡಿರುತ್ತಾನೆ.) (ಹಾಗಾದರೆ ದೇವಸ್ವಭಾವವುಳ್ಳ ಜನರು ನನ್ನನ್ನು ಯಾವ ರೀತಿಯಾಗಿ ತಿಳಿಯುವರೆಂದರೆ ಹೇಳುತ್ತಾನೆ—) 13. ದೇವತಾ ಸಂಬಂಧಿಯಾದ ( ಮುಕ್ತಿಯೋಗ್ಯವಾದ ) ಸ್ವಭಾವವನ್ನು ಹೊಂದಿರುವ ಮಹಾತ್ಮರಾದರೋ ಅನನ್ಯ ಮನಸ್ಕರಾಗಿ, ನನ್ನನ್ನು ಸರ್ವ ಪ್ರಾಣಿಗಳಿಗೆ ಉತ್ಪಾದಕನೆಂದೂ ಮತ್ತು ಚತುರ್ವಿಧ ನಾಶರಹಿತನೆಂದೂ ತಿಳಿದು ಸೇವಿಸುತ್ತಾರೆ. 14. ನಿರಂತರ ನನ್ನ ನಾಮಸಂಕೀರ್ತನ ಮಾಡುವವರಾಗಿ ಅಚಂಚಲವಾದ ನಿಯಮಗಳಿಂದ ನನ್ನ ಪೂಜಾದಿಗಳಲ್ಲಿ ಯತ್ನ ಮಾಡುವವರಾಗಿ ಭಕ್ತಿಯಿಂದ ನನ್ನನ್ನು ನಮಸ್ಕರಿಸುತ್ತಾ ಸರ್ವದಾ ನನ್ನ ರೂಪದಲ್ಲಿ ಇಡಲ್ಪಟ್ಟ ಮನಸ್ಸುಳ್ಳವರಾಗಿ ನನ್ನನ್ನು ಉಪಾಸನೆ ಮಾಡುತ್ತಾರೆ.

ಶ್ರೀ ಕೃಷ್ಣನು ಈ ವಾಕ್ಯಗಳಿಂದ ಜೀವನು ಬ್ರಹ್ಮನಲ್ಲವೆಂಬಲ್ಲಿ ಸಾಧಕವಾದ ಕೆಲವು ಯುಕ್ತಿಗಳನ್ನು ಸೂಚಿಸಿರುತ್ತಾನೆ. ಅಸುರಸ್ವಭಾವವುಳ್ಳ ಜನರೇ ಅವನನ್ನು ಅಧಮ ಜೀವನೆಂದು ತಿಳಿಯುವರು. 2. ಆ ಜ್ಞಾನ ನಿಮಿತ್ತದಿಂದ ಅವರ ಯಜ್ಞಾದಿಗಳು ನಿಷ್ಫಲವಾಗುವವು. 3. ದೈವೀಸ್ವಭಾವವುಳ್ಳ ಈ ಸಜ್ಜನರು ಅವನನ್ನು ಚತುರ್ವಿಧ ನಾಶರಹಿತನಾದ ಸೃಷ್ಟಿಕರ್ತನಾದ ಬ್ರಹ್ಮನೆಂದೇ ತಿಳಿಯುವರು. 4. ಪರಬ್ರಹ್ಮನು ಭೂತಾದಿಯು; ಎಂದರೆ ಒಬ್ಬ ಜೀವನಿಂದ ಮತ್ತೊಬ್ಬ ಜೀವನಿಗೆ ಉತ್ಪತ್ತಿಯು; ಅವನಿಂದ ಮತ್ತೊಬ್ಬನಿಗೆ ಉತ್ಪತ್ತಿಯು ಎಂದು ಹೇಳುತ್ತಾ ಹೋದರೆ ಅನವಸ್ಥೆಯು ಬರುವದು. ಅದರ ಪರಿಹಾರಾರ್ಥವಾಗಿ ಜನ್ಯ ದೇಹರಹಿತನಾದ ಒಬ್ಬ ವಿಲಕ್ಷಣ ಉತ್ಪಾದಕನನ್ನು ಕೊನೆಯಲ್ಲಿ ಒಪ್ಪಬೇಕು. ಆತನೂ ಜೀವನಾದರೆ ಮತ್ತೊಬ್ಬನಿಂದ ದೇಹವನ್ನು ಹೊಂದಬೇಕಾಗುವದರಿಂದ ಅವನು ವಿಲಕ್ಷಣ ಚೇತನನಾಗಬೇಕು. ಅಂಥ ನಾಶರಹಿತವಾದ ನಿತ್ಯದೇಹವುಳ್ಳವನು ಪರಮಾತ್ಮನು. ಈ ಅಭಿಪ್ರಾಯವನ್ನು ಅವ್ಯಯಂ ಎಂಬ ವಿಶೇಷಣವು ಸೂಚಿಸುವದು. ಪರಬ್ರಹ್ಮನು ವಿಲಕ್ಷಣ ಚೇತನನಾದುದರಿಂದ ಅವನು ಜೀವಭಿನ್ನನೆಂದು ಸಿದ್ಧಿಸುವದು. ಉತ್ಪಾದಕ ಉತ್ಪಾದ್ಯಗಳಿಗೆ ಪಿತೃಪುತ್ರರಿಗಿರುವಂತೆ

ಭೇದವು ನಿಶ್ಚಿತವಾಗಿರುವದು. ಭೂತ ಜನಕವಾದ ಪರಮಾತ್ಮನು ತಾನೇ ದೇಹ ಸಂಬಂಧವನ್ನು ಉಂಟುಮಾಡಿ ಸೃಷ್ಟಿಸುವ ಜೀವನಾಗಲಾರನು.* ತನಗೆ ತಾನೇ ತಂದೆಯೆಂಬುದು ಅಪ್ರಸಿದ್ಧವು.†

(4) ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।
ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ।
................ಇತ್ಯಜ್ಞಾನವಿಮೋಹಿತಾಃ ।
ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ।
ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥
ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।
ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ
ಗತಿಂ ॥ —(16. 7-20.)

ಇದರ ತಾತ್ಪರ್ಯವು— ಅಸುರ ಜನರು ವಿಧ್ಯುಕ್ತ ಆಚರಣೆಯಲ್ಲಿ ಪ್ರವರ್ತಿಸುವದನ್ನೂ ಮತ್ತು ವಿಧಿನಿಷಿದ್ಧ ವಿಷಯಗಳಲ್ಲಿ ನಿವರ್ತಿಸುವದನ್ನೂ ಕೂಡ ತಿಳಿಯಲಾರರು. ಅವರು ನಾನು ಪರಮೇಶ್ವರನು; ನಾನು ಸ್ವತಂತ್ರ ಭೋಗ

---

* "ಆತ್ಮಾ ವೈ ಪುತ್ರನಾಮಾಸಿ" ಇತ್ಯಾದಿ ಶ್ರುತಿಗಳಲ್ಲಿ ತಂದೆಯೇ ಮಗನಾಗಿ ಹುಟ್ಟುವನೆಂದು ಇರುವುದರಿಂದ ಪಿತೃಪುತ್ರರಿಗೆ ತಾದಾತ್ಮ್ಯವು ಆಗಬಹುದೆಂದು ಭ್ರಮಿಸಕೂಡದು. ತಂದೆಯೇ ಪುತ್ರಜೀವನಾದರೆ ಮಾತೃಗಾಮಿತ್ವವನ್ನು ಮಹಾದೋಷವೆಂದು ನಿಂದಿಸುವ ಶಾಸ್ತ್ರವನ್ನು ಸುಡಬೇಕಾಗುವದು. ಆದುದರಿಂದ ತಂದೆಯಿಂದ ಅತ್ಯಂತ ಭಿನ್ನನಾದ ಪುತ್ರಜೀವನು ತಂದೆಯ ರೇತಸ್ಸಿನಿಂದ ಪರಿಣತವಾದ ದೇಹವುಳ್ಳವನೆಂದು ಶ್ರುತಿಯು ಗೌಣವಾದ ಅರ್ಥವುಳ್ಳದ್ದಾಗಿರುವದು. ಆದುದರಿಂದ ಪ್ರಕೃತದಲ್ಲಿಯೂ ಜಗತ್ಪಿತನಾದ ಪರಬ್ರಹ್ಮನಿಗೂ ಜನ್ಯರಾದ ಭೂತಜೀವರಿಗೂ ಅಭೇದವು ಸಂಭವಿಸಲಾರದು.

ಈ ಶ್ಲೋಕದ ಮುಂದಿನ ಶ್ಲೋಕವು.

†ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ ।
ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಂ ॥ —(9. 15.)

ಎಂದರೆ ಕೆಲವರು ಉಪಾಸಕರು ನನ್ನನ್ನು ಏಕತ್ವವಿಶಿಷ್ಟನೆಂದೂ (ಒಬ್ಬನೇ ಎಂದೂ), ಮತ್ತು ಪೃಥಕ್ತ್ವೇನ=ಎಂದರೆ ಭಿನ್ನವಾಗಿ ಬಹು ಪ್ರಕಾರವಾದ ಅನಂತ ರೂಪಗಳುಳ್ಳವನೆಂದೂ ಉಪಾಸನೆ ಮಾಡುತ್ತಾರೆ; ಎಂದು ಇರುವದರಿಂದ ಪರಬ್ರಹ್ಮನು ಸ್ವರೂಪೇಣ ಒಬ್ಬನೇ ಆಗಿರುವನು; ಮತ್ತು ಜೀವರೂಪೇಣ ಅನಂತ ಜೀವಾಕಾರಗಳನ್ನು ತಾಳಿರುವನು ಎಂದು ಅರ್ಥ ಮಾಡಬಹುದೆಂದು ಭ್ರಮಿಸುವರು. ಇದು ಅಸಂಗತವು; ಯಾತಕ್ಕೆಂದರೆ 1. ನನ್ನನ್ನು ಜೀವನೆಂದು ತಿಳಿಯುವವರು ಅಸುರರೆಂದು ಬಹು ಪ್ರಕಾರವಾಗಿ ಹಿಂದಿನ ಶ್ಲೋಕಗಳಲ್ಲಿ ಶ್ರೀ ಕೃಷ್ಣನು ನಿಂದಿಸಿರುತ್ತಾನೆ; 2. ಈ ಭಿನ್ನವಾದ ಅನಂತ ರೂಪಗಳು ಯಾವುವೆಂಬುದನ್ನು ಶ್ರೀ ಕೃಷ್ಣನು ತಾನೇ ಇದರ ಮುಂದಿನ ಶ್ಲೋಕಗಳಲ್ಲಿ ನಿರೂಪಿಸಿರುತ್ತಾನೆ.

ವುಳ್ಳವನು; ನಾನು ಕೃತಕೃತ್ಯನು; ಸ್ವತಂತ್ರ ಬಲವುಳ್ಳವನು; ಸ್ವತಂತ್ರ ಸುಖ ವುಳ್ಳವನು ಇತ್ಯಾದಿ ವಿಪರೀತ ಜ್ಞಾನವುಳ್ಳವರಾಗಿರುವರು. ಮತ್ತು ಸ್ವಶರೀರ ದಲ್ಲಿಯೂ ಪರಶರೀರಗಳಲ್ಲಿಯೂ ನಿಯಾಮಕನಾಗಿರುವ ನನ್ನನ್ನು ಅತ್ಯಂತ ದ್ವೇಷ ಮಾಡುವವರಾಗಿ (ಈಶ್ವರನೇ ಸರ್ವಪ್ರೇರಕನಾದರೆ ಈಗ ಸುಮ್ಮನೆ ಕುಳಿತಿರುವ ನನ್ನಿಂದ ವ್ಯಾಪಾರವನ್ನು ಮಾಡಿಸಲಿ; ಅಥವಾ ಭೋಜನಾದಿಗಳನ್ನು ಮಾಡುವ ನನ್ನನ್ನು ತಡೆಯಲಿ; ಹಾಗೆ ಮಾಡದೆ ಇರುವದರಿಂದ ಈಶ್ವರನು ಸರ್ವನಿಯಾಮಕ ನಲ್ಲ ಎಂದು ಹೇಳುತ್ತಾ, ಈಶ್ವರನ ಸ್ವಾತಂತ್ರ್ಯವನ್ನು ಅಪಲಾಪ ಮಾಡುವದರ ಮೂಲಕ ದ್ವೇಷ ಮಾಡುವವರಾಗಿ,) ನನ್ನ ವಿಷಯದಲ್ಲಿ ಅಧಿಕ ಅಸೂಯೆಯನ್ನು ಮಾಡುತ್ತಾರೆ. (ನಿರ್ದೋಷನಾದ ನನ್ನಲ್ಲಿ ದೋಷವನ್ನೂ, ಗುಣಪೂರ್ಣನಲ್ಲ ಗುಣಹೀನತ್ವವನ್ನೂ ತಿಳಿಯುತ್ತಾರೆ.) ಈ ರೀತಿಯಾಗಿ ನನ್ನನ್ನು ದ್ವೇಷಿಸುವ, ಕ್ರೂರರೂ, ಅಶುಭ ಫಲಾರ್ಹರೂ ಆದ ನರಾಧಮರನ್ನು ಸಂಸಾರದಲ್ಲಿ, ಅದ ರಲ್ಲಿಯೂ ತಾಮಸಯೋನಿಯಲ್ಲಿ ಪುನಃ ಪುನಃ ಹುಟ್ಟಿಸುತ್ತೇನೆ. ತಾಮಸಸ್ವಭಾವ ವುಳ್ಳ ಈ ಜನರು ಅನೇಕ ಜನ್ಮಗಳಲ್ಲಿ ಅಸುರಸಂಬಂಧಿ ದೇಹವನ್ನು ಹೊಂದಿದವ ರಾಗಿನನ್ನನ್ನು ಸರ್ವಥಾ ಹೊಂದದೆ ಅಧಮಾಂಗತಿಂ ಎಂದರೆ ನಿತ್ಯನರಕಲಕ್ಷಣ ವಾದ ಸ್ಥಾನವನ್ನು ಹೊಂದುತ್ತಾರೆ.

ಈ ಶ್ಲೋಕಗಳಲ್ಲಿ ನಾನೇ ಈಶ್ವರನು ಎಂಬ ಜ್ಞಾನವು. 1. ಅಸುರ ಸ್ವಭಾವಜನ್ಯವೆಂದೂ, 2. ಸ್ವದೇಹ ಪರದೇಹಗಳಲ್ಲಿ ನಿಯಾಮಕನಾಗಿ ಸ್ಥಿತನಾದ

---

**ಅಹಂ ಕ್ರತುರಹಂ ಯಜ್ಞಃ ಸ್ವಧಾಮಹಮೌಷಧಂ ।**
**ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂಹುತಂ ॥**

ಇತ್ಯಾದಿ —(9. 16.)

ಅರ್ಥವು— ಕ್ರತುವಿನಲ್ಲಿ ನಾನು; ಯಜ್ಞದಲ್ಲಿ ನಾನು; "ಸ್ವಧಾ" ದಲ್ಲಿ ನಾನು; ಯಜ್ಞೋಪಯೋಗಿ ವನಸ್ಪತಿಗಳಲ್ಲಿ ನಾನು; ಯಜ್ಞಾಂಗ ಮಂತ್ರಗಳಲ್ಲಿ ನಾನು; ಆಜ್ಯದಲ್ಲಿ ನಾನು; ಅಗ್ನಿಯಲ್ಲಿ ನಾನು; ಹೋಮದಲ್ಲಿ ನಾನು; (ಹೀಗೆ ಬಹು ರೂಪಗಳಿಂದ ನಾನು ಯಜ್ಞಾದಿಗಳಲ್ಲಿ ಸನ್ನಿಹಿತನಾಗಿರುವೆನು.) ಇದೇ ಮುಂತಾದ ಶ್ಲೋಕಗಳಲ್ಲಿ ನಿಯಾಮಕ ಬಹು ರೂಪಗಳನ್ನು ಹೇಳಿರುವುದರಿಂದ ಶ್ರೀ ಕೃಷ್ಣನೇ ಭಿನ್ನನಾಗಿ ಬಹು ಜೀವಭಾವವನ್ನು ಹೊಂದುವ ನೆಂದು ಪೂರ್ವ ಶ್ಲೋಕದಲ್ಲಿರುವ "ಪೃಥಕ್ತ್ವೇನ ಬಹುಧಾವಿಶ್ವತೋ ಮುಖಂ" ಎಂಬ ಪದಗ ಳಿಗೆ ಅರ್ಥ ಮಾಡಬಾರದು. ಕಿಂಚ, ಒಂದೇ ಭಗವಂತನ ವಿಶ್ವರೂಪವು ಬಹುಪ್ರಕಾರವುಳ್ಳದ್ದಾ ಗಿಯೂ ವಿಶ್ವತೋಮುಖವಾಗಿಯೂ ಇರುವಂತೆಯೇ ಅರ್ಜುನನು ನೋಡಿರುವನು. ಆದುದರಿಂದ ಪ್ರಕರಣೋಚಿತವಾಗಿ "ಪೃಥಕ್ತ್ವೇನ" ಇತ್ಯಾದಿ ಪದಗಳಿಗೆ **ಜೀವವಿಲಕ್ಷಣವಾದ** ಬಹು ಪ್ರಕಾರವಾದ (ನಾನಾವರ್ಣಗಳುಳ್ಳ) ಅನಂತರೂಪಗಳುಳ್ಳವನು ಪರಬ್ರಹ್ಮನು (ಶ್ರೀ ಕೃಷ್ಣನು): ಎಂದು ಅರ್ಥ ಮಾಡಬೇಕು.

ಪರಮಾತ್ಮದ್ವೇಷರೂಪವಾದ ಆಚರಣೆಯಿಂದೂ, 3. " ಇತ್ಯಜ್ಞಾನ ವಿಮೋಹಿತಾಃ " ಎಂದಿರುವದರಿಂದ ಯಥಾರ್ಥಜ್ಞಾನವಲ್ಲವೆಂದೂ, 4. ಮತ್ತು ಅಧಮ ಗತಿರೂಪವಾದ ಘೋರ ಅನರ್ಥಗಳಿಗೆ ಕಾರಣವಾಗುವದೆಂದೂ ಹೇಳಿರುವದರಿಂದ, ಈಶ್ವರಾಭೇದವು ಮೋಕ್ಷಾರ್ಥಿಗಳಿಗೆ ಸರ್ವಥಾ ಉಚಿತವಲ್ಲವೆಂದು ಸ್ಪಷ್ಟವಾಗುವದು.

**ಪ್ರಶ್ನೆ**— ಸ್ವಾಮೀ ! ಈ ಶ್ಲೋಕದಲ್ಲಿ "ಈಶ್ವರೋಽಹಂ" ಎಂದರೆ ನಾನು ಸಮರ್ಥನು ಎಂದು ಇಷ್ಟೇ ಅರ್ಥವನ್ನು ಮಾಡಿದರೆ ಸಾಕು. ನಾನೇ ಪರಮೇಶ್ವರನು; ಬ್ರಹ್ಮಭಿನ್ನನು ಎಂದು ಯಾತಕ್ಕೆ ಅರ್ಥ ಮಾಡಬೇಕು.

**ಉತ್ತರ**— 1. " **ಸಿದ್ಧೋಽಹಂ, ಬಲವಾನ್** " ಇತ್ಯಾದಿ ಪದಗಳೂ ತಾನು ಸಮರ್ಥನು ಎಂಬ ಅರ್ಥವನ್ನು ಕೊಡುವದರಿಂದ ಈಶ್ವರೋಽಹಂ ಎಂಬಲ್ಲಿಯೂ ನಾನು ಸಮರ್ಥನು ಎಂಬ ಅರ್ಥವನ್ನು ಮಾಡಿದರೆ ಶ್ರೀಕೃಷ್ಣನ ವಾಕ್ಯಗಳಲ್ಲಿ ಪುನರುಕ್ತಿದೋಷವನ್ನು ಹೇಳಿದಂತಾಗುವದು. ಆದುದರಿಂದ ಇಲ್ಲಿ ನಾನು ಪರಮೇಶ್ವರನು; ನಾನೇ ಸ್ವತಂತ್ರನು ಎಂದೇ ಅರ್ಥ ಮಾಡಬೇಕು.

2. ನಾನು ಸಮರ್ಥನು ; ನಾನು ಭೋಗವುಳ್ಳವನು ಇತ್ಯಾದಿ ಜ್ಞಾನವು ಯಥಾರ್ಥವೇ ಆಗಿರುವದರಿಂದ ಅವುಗಳಿಂದ ಅಧೋಗತಿಯು ಆಗಲಾರದು. ಶ್ರೀ ಕೃಷ್ಣನು ದುಷ್ಟಫಲವನ್ನು ಹೇಳಿರುವದರಿಂದ ನಾನು ಸ್ವತಂತ್ರನಿಯಾಮಕನು; ಸ್ವತಂತ್ರ ಸಾಮರ್ಥ್ಯವುಳ್ಳವನು ಎಂದಾದರೂ ಕೊನೆಯಪಕ್ಷದಲ್ಲಿ ಅರ್ಥ ಮಾಡಬೇಕು. ಸ್ವತಂತ್ರ್ಯಸಾಮರ್ಥ್ಯವು ಪರಬ್ರಹ್ಮನ ಲಕ್ಷಣವಾದುದರಿಂದ, ಪರಬ್ರಹ್ಮನ ಲಕ್ಷಣವನ್ನು ತನ್ನಲ್ಲಿ ಹೇಳಿಕೊಂಡರೂ ಪರಬ್ರಹ್ಮನು ನಾನೇ ಎಂದು ಹೇಳಿದ ಹಾಗೆಯೇ ಆಗುವದು. ಮೈಸೂರು ರಾಜ್ಯವು ನನಗಿರುವದು ಎಂದು ಹೇಳಿಕೊಂಡರೂ ನಾನೇ ಮೈಸೂರು ರಾಜನು ಎಂದು ಅರ್ಥವಾಗುವದು.

3. ಕಿಂಚ "**ತಾನಹಂದ್ವಿಷತಃ**" ಎಂದರೆ ಈ ರೀತಿ ನನ್ನಲ್ಲಿ ದ್ವೇಷಮಾಡುವಂಥ ಜನರನ್ನು ನಾನು ನರಕದಲ್ಲಿ ಹಾಕುತ್ತೇನೆಂದು ಶ್ರೀಕೃಷ್ಣನು ಹೇಳಿರುತ್ತಾನೆ. ನಾನು ಸಮರ್ಥನು ಎಂಬ ಜ್ಞಾನವು ಕೃಷ್ಣನ ದ್ವೇಷರೂಪವಾಗಿ ಹೇಗೆ ಆಗುವದು ? ನಾನು ಬಂಡೆಕಲ್ಲು ಎಂದು ಭ್ರಮಿಸಿದರೆ ನನಗೆ ಅದರಿಂದ ಪ್ರಯೋಜನವೇನೂ ಇಲ್ಲದಿದ್ದರೂ ದೈವದ್ವೇಷವಾಗಲಾರದು. ಶ್ರೀ ಕೃಷ್ಣನು ಪೂರ್ವೋಕ್ತ ಆಚರಣೆಗಳೆಲ್ಲಾ ನನ್ನ ದ್ವೇಷಿಗಳ ಆಚರಣೆಗಳು ಎಂದೇ ಹೇಳಿರುವರಿಂದ ಈಶ್ವರೋಽಹಂ ಎಂದರೆ ನಾನೇ ಪರಬ್ರಹ್ಮನು ಎಂದಾಗಲೀ ಅಥವಾ ಸರ್ವಸ್ವತಂತ್ರನು ಎಂದಾಗಲೀ ಅರ್ಥ ಮಾಡಬೇಕು. ಇದು ಕೃಷ್ಣದ್ವೇಷವೇ ಆಗುವುದು; ದುಷ್ಟಫಲಗಳಿಗೂ ಕಾರಣವಾಗಬಹುದು. (ನಾನೇ ಚಕ್ರವರ್ತಿಯು ಎಂದು ಹೇಳಿಕೊಂಡರೂ, ಈ ದೇಶಗಳಿಗೆಲ್ಲಾ ನಾನೇ ನಿಯಾಮಕನು ಎಂದು

ಹೇಳಿಕೊಂಡರೂ, ಚಕ್ರವರ್ತಿ ದ್ವೇಷರೂಪವಾದ ಆಚರಣೆಯು ಆಗುವದು.) 4. ಮತ್ತು ಶಂಕರಾಚಾರ್ಯರೂ ಕೂಡ ಭಗವದ್ಗೀತೆಯ ಹದಿನೆಂಟನೆಯ ಅಧ್ಯಾಯದಲ್ಲಿ "ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ" ಎಂಬ ಶ್ಲೋಕದಲ್ಲಿರುವ ಈಶ್ವರ ಶಬ್ದಕ್ಕೆ **"ಈಶನಶೀಲೋ ನಾರಾಯಣಃ"** ಎಂದು ಅರ್ಥ ಮಾಡಿರುವರು. ಮತ್ತು ಈ ಸ್ಥಳದಲ್ಲಿ ಈಶ್ವರಶಬ್ದದಿಂದ ಪರಬ್ರಹ್ಮನನ್ನು ತೆಗೆದುಕೊಳ್ಳಬಾರದೆಂದು ಹೇಳಿರುವುದಿಲ್ಲ. (ಈ ಪದಕ್ಕೆ ವ್ಯಾಖ್ಯಾನವೇ ಮಾಡಿರುವುದಿಲ್ಲ.) ಗೀತೆಯಲ್ಲಿರುವ ಈಶ್ವರಶಬ್ದವು ಸರ್ವನಿಯಾಮಕನಾದ ನಾರಾಯಣನನ್ನು ಬೋಧಿಸುವುದು ಎಂದು ಅವರು ಅಲ್ಲಿ ಮಾಡಿರುವ ವ್ಯಾಖ್ಯಾನವು ಇಲ್ಲಿಗೂ ಅನ್ವಯಿಸುವದು. 5. ಮತ್ತು ಭಗವದ್ಗೀತೆಯಲ್ಲಿ ಎಲ್ಲಿಯೂ ಈಶ್ವರಶಬ್ದವು ಸಾಮರ್ಥ್ಯವುಳ್ಳವನು ಎಂಬ ಸಾಮಾನ್ಯ ಅರ್ಥದಲ್ಲಿ ಬಂದಿರುವದಿಲ್ಲ. ಸ್ವತಂತ್ರಶಕ್ತಿಯುಳ್ಳವನು; ಅಚಿಂತ್ಯಸಾಮರ್ಥ್ಯೋಪೇತನು ಇತ್ಯಾದಿ ಅರ್ಥಗಳಲ್ಲಿ ಬ್ರಹ್ಮವಾಚಕವಾಗಿಯೇ ಪ್ರಯುಕ್ತವಾಗಿರುವದು. "ಭೂತಾನಾಮೀಶ್ವರೋಪಿಸನ್" —(4. 6.); "ಸರ್ವಲೋಕ ಮಹೇಶ್ವರಂ" —(5. 29.); "ಮಮಭೂತ ಮಹೇಶ್ವರಂ" —(9. 11.); "ವಿಶ್ವೇಶ್ವರ ವಿಶ್ವರೂಪ" —(11. 16.); "ತಿಷ್ಠಂತಂ ಪರಮೇಶ್ವರಂ" —(13. 27.); "ಸಮವಸ್ಥಿತಮೀಶ್ವರಂ" —(13. 28.); "ಯಚ್ಚಾಪ್ಯುತ್ಕ್ರಾಮತೀಶ್ವರಃ" —(15. 8.); "ಬಿಭರ್ತ್ಯವ್ಯಯ ಈಶ್ವರಃ" —(15. 17.); "ಈಶ್ವರಃ ಸರ್ವಭೂತಾನಾಂ"—(18. 61.); ಈ ಸ್ಥಳಗಳಲ್ಲೆಲ್ಲಾ ಈಶ್ವರಶಬ್ದವು ಪರಬ್ರಹ್ಮ (ಶ್ರೀ ಕೃಷ್ಣ) ನನ್ನು ಬೋಧಿಸುವದೇ ಹೊರತು ಅನ್ಯಾರ್ಥದಲ್ಲಿ ಪ್ರಯುಕ್ತವಾಗಿರುವದಿಲ್ಲ. ಮತ್ತು 6. ಅಸುರಸ್ವಭಾವವನ್ನು ವರ್ಣಿಸುವ ಈ ಪ್ರಕರಣದಲ್ಲಿ ಬೇರೆ ಅರ್ಥದಲ್ಲಿ ಈಶ್ವರ ಶಬ್ದವನ್ನು ಉಪಯೋಗಿಸುವದಕ್ಕೆ ನಿಮಿತ್ತವೂ ಇರುವುದಿಲ್ಲ. ಆದುದರಿಂದ ನಾನೇ ಪರಬ್ರಹ್ಮನು ಎಂಬ ಮತವನ್ನೇ ಶ್ರೀ ಕೃಷ್ಣನು ಈ ಶ್ಲೋಕಗಳಿಂದ ತನ್ನ ದ್ವೇಷಕ್ಕೂ ನಂತರ ನಿತ್ಯವಾದ ನರಕಗಳಿಗೂ ಕಾರಣವಾಗುವದೆಂದು ನಿಂದಿಸಿರುತ್ತಾನೆ ಎಂದು ಹೇಳಬೇಕು.

**ಪ್ರಶ್ನೆ**— ಸ್ವಾಮೀ! ನಾನೇ ಪರಮೇಶ್ವರನು; ನಾನೇ ನಾರಾಯಣನು; ನಾನೇ ಪರಬ್ರಹ್ಮನು ಇತ್ಯಾದಿ ರೀತಿಯಾಗಿ ಉಪಾಸನೆ ಮಾಡಬೇಕೆಂದು ಅದ್ವೈತ ಮತದಲ್ಲಿ ಹೇಳಿರುತ್ತಾರೆಯೇ?

**ಉತ್ತರ**— ಹೇಳಿರುತ್ತಾರೆ. ಇಗೋ! **ಶಂಕರಾಚಾರ್ಯರು** "ಸ್ವಾತ್ಮನಿರೂಪಣದಲ್ಲಿ" ಹೀಗೆ ಬರೆದಿರುತ್ತಾರೆ—

**ಹರಿರಹಮಸ್ಮಿ ಹರೋಽಹಂ ವಿಧಿರಹಮೇವಾಸ್ಮಿ ಕಾರಣಂ ತೇಷಾಂ**

ಅರ್ಥವು— ನಾನೇ ಹರಿಯು; ನಾನೇ ಹರನು; ನಾನೇ ಬ್ರಹ್ಮನು; ನಾನೇ ಅವರಿಗೆಲ್ಲಾ ಕಾರಣನು.

ಈ ಅಭಿಪ್ರಾಯವನ್ನೇ ಕೃಷ್ಣನು ನಿಂದಿಸಿರುತ್ತಾನೆ. ಆದುದರಿಂದಲೇ ನಾವೂ ಇಷ್ಟು ಖಂಡಿತವಾಗಿ ಈ ತತ್ವವು ಬಹು ಪ್ರಮಾಣವಾಕ್ಯಗಳಿಗೆ ವಿರುದ್ಧ ವಾಗಿರುವದೆಂಬುದನ್ನು ತೋರಿಸಬೇಕಾಯಿತು. ಕಿಂಚ ಸಕಲ ಜೀವರುಗಳೂ "ಬ್ರಹ್ಮ" ತತ್ವವೇ ಆಗಿದ್ದರೆ "ಕಿಂ ತದ್ಬ್ರಹ್ಮ?" ಎಂಬ ಅರ್ಜುನನ ಪ್ರಶ್ನೆಗೆ ಉತ್ತರ ರೂಪವಾಗಿ ಶ್ರೀ ಕೃಷ್ಣನು ನೀನೇ ಮೊದಲಾದ ಸಕಲ ಚೇತನರೂ "ಬ್ರಹ್ಮ" ಪದಾರ್ಥವು ಎಂದು ಉತ್ತರ ಕೊಡದೆ ಲಕ್ಷ್ಮಿಯೇ ಮೊದಲಾದ ಸಕಲ ಚೇತನರನ್ನೂ ವ್ಯಾವೃತ್ತಿ ಮಾಡಿ ಪರಮಾಕ್ಷರನು ಬ್ರಹ್ಮನು ಎಂಬ ಉತ್ತರವನ್ನು ಯಾತಕ್ಕೆ ಕೊಟ್ಟನು?

(5) ಅರ್ಜುನ ಉವಾಚ— **ಕಿಂ ತದ್ಬ್ರಹ್ಮ.... ಪುರುಷೋತ್ತಮ ।**
—(8. 1.)

ಶ್ರೀಭಗವಾನುವಾಚ— **ಅಕ್ಷರಂ ಬ್ರಹ್ಮ ಪರಮಂ ।** —(8. 3.)

ಅರ್ಥವು— ಅರ್ಜುನನು ಕೇಳುತ್ತಾನೆ— ಹೇ ಪುರುಷೋತ್ತಮ ! ಬ್ರಹ್ಮ ವಸ್ತುವು ಯಾವುದು ? ಶ್ರೀ ಕೃಷ್ಣನು ಹೇಳುತ್ತಾನೆ— ಪರಮಾಕ್ಷರನು ಬ್ರಹ್ಮನು.

(6) **ಕರ್ಶಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ ।**
**ಮಾಂ ಚೈವಾಂತಃಶರೀರಸ್ಥಂ ತಾನ್ ವಿದ್ಧ್ಯಸುರನಿಶ್ಚಯಾನ್ ॥**
(17. 7.)

ಅರ್ಥವು— ಶರೀರದಲ್ಲಿ ನಿಯಾಮಕರಾಗಿ ವಾಸಮಾಡುವ (ಲಕ್ಷ್ಮೀ ಬ್ರಹ್ಮ ರುದ್ರಾದಿ) ದೇವತಾ ಸಮೂಹವನ್ನೂ ಮತ್ತು ಅಂತರ್ಯಾಮಿಯಾಗಿ ಶರೀರದಲ್ಲಿ ರುವ ನನ್ನನ್ನೂ ಕರ್ಶಯಂತಃ = ಎಂದರೆ ಅಲ್ಪಗುಣವುಳ್ಳವನೆಂದು (ಜೀವನಿಗಿಂತ ಭಿನ್ನನಾಗಿ ಪೂರ್ಣಗುಣನಾಗಿ ಅಂತರ್ಯಾಮಿಯಾಗಿರುವನು ಎಂದು ತಿಳಿಯದೆ ಬ್ರಹ್ಮನು ಶರೀರದಲ್ಲಿರುವ ಜೀವನೇ ಎಂದು) ತಿಳಿಯುತ್ತಾರೆಯೋ, ಅಂಥ ವಿಮೂಢರನ್ನು ಅಸುರಸಂಬಂಧಿ ನಿಶ್ಚಯವುಳ್ಳವರೆಂದು ತಿಳಿ.

ಈ ನಮ್ಮ ಶರೀರದಲ್ಲಿ ಜೀವನೂ ಇರುವನು; ಪರಮಾತ್ಮನಾದ ಕೃಷ್ಣನೂ ಇರುವನು. ಜೀವನು ಶರೀರಜನ್ಯದುಃಖಾದಿಗಳನ್ನು ಅನುಭವಿಸುತ್ತಿರುವನು. ಪರ ಮಾತ್ಮನು ಅಂತರ್ಯಾಮಿಯಾಗಿ ನಿಯಾಮಕನಾಗಿರುವ ಗುಣಪೂರ್ಣಬ್ರಹ್ಮನು. ಹೀಗಿರುವಲ್ಲಿ ಶರೀರದಲ್ಲಿರುವ ಜೀವನನ್ನೇ ಬ್ರಹ್ಮನೆಂದು ತಿಳಿದರೆ ಪರಮಾತ್ಮನನ್ನು (ರಾಜನನ್ನು ಚಂಡಾಲನೆಂದು ತಿಳಿದಂತೆ) ಮನಸಾ "ಕರ್ಶನ" ಮಾಡಿದಂತಾ ಗುವುದು; ಎಂದು ತಾತ್ಪರ್ಯವು. (ಪೂರ್ಣನಾದ ಪರಮಾತ್ಮನಿಗೆ ಪ್ರಸಿದ್ಧವಾದ

ದೇಹಕರ್ಶನವು ( ಕೃಶನನ್ನಾಗಿ ಮಾಡುವುದು ) ಅಶಕ್ಯವಾದುದರಿಂದ ಮನಸ್ಸಿನಿಂದ ಅವನು ಅಧಮನೆಂದು ತಿಳಿಯೋಣಪರಿಂದ ಅವನನ್ನು ಕರ್ಶನಮಾಡಿದ ಹಾಗಾಯಿತು. ) ಹದಿನೆಂಟನೆಯ ಅಧ್ಯಾಯದಲ್ಲಿಯೂ ಅಲ್ಪನಾದ ಜೀವನನ್ನು ಪೂರ್ಣನಾದ ಬ್ರಹ್ಮನೆಂದು ತಿಳಿಯುವುದು ತಾಮಸವೆಂದು ಹೇಳುತ್ತಾನೆ.

(7) **ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ವಿಕಂ ॥**
**ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಂ ।**
**ಅತತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಂ ॥**
—(18. 20-22.)

ತಾತ್ಪರ್ಯವು— ಮೊದಲನೆಯ ಶ್ಲೋಕದಲ್ಲಿ ಸಾತ್ವಿಕಜ್ಞಾನದ ಲಕ್ಷಣವನ್ನು ಶ್ರೀ ಕೃಷ್ಣನು ಹೇಳುತ್ತಾನೆ— ಪರಸ್ಪರ ಭಿನ್ನವಾದ **ಅನಂತ ಪ್ರಾಣಿಗಳಲ್ಲಿ** ಒಬ್ಬನೇ ಒಬ್ಬನು ಅವ್ಯಯನಾದ ಪರಮಾತ್ಮನು ವಾಸಸ್ಥಾನಗಳ ಭೇದನಿಮಿತ್ತವಾಗಿ ಭೇದ ಹೊಂದದೇ ಇರುವನೆಂದು ತಿಳಿಯುವ ಜ್ಞಾನವು ಸಾತ್ವಿಕವು. ಇದರಿಂದಲೂ ಮತ್ತು **"ಸಮಂಹಿ ಸರ್ವಭೂತೇಷು"** ಇತ್ಯಾದಿ ಸಮಾಖ್ಯಾ ಶ್ಲೋಕಗಳಿಂದಲೂ ಸರ್ವತ್ರಸಮನಾಗಿ ಅನೇಕ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನನ್ನು ( ಶ್ರೀ ಕೃಷ್ಣನನ್ನು ) ತಿಳಿಯುವುದು ಸಾತ್ವಿಕ ಜ್ಞಾನವೆಂದು ನಿಶ್ಚಿತವಾಗುವುದು. ಇದರಿಂದ ಜೀವನಲ್ಲಿ ಜೀವಭಿನ್ನನಾದ ಪರಮಾತ್ಮನು ಇರುವನೆಂದು ಸಿದ್ಧಿಸುವುದು. ತಾಮಸ ಜ್ಞಾನದ ಲಕ್ಷಣವನ್ನು ಎರಡನೆಯ ಶ್ಲೋಕದಲ್ಲಿ ಶ್ರೀಕೃಷ್ಣನು ಹೇಳುತ್ತಾನೆ.— ಅಲ್ಪನಾದ ಜೀವನ ವಿಷಯದಲ್ಲಿ ಕೃತ್ಸ್ನವತ್ ಎಂದರೆ ಪೂರ್ಣವಾದ ಬ್ರಹ್ಮನಂತೆ ಯಾವ ಜ್ಞಾನವು ಗ್ರಹಿಸುವುದೋ, ( ಜೀವನಲ್ಲಿ ಬ್ರಹ್ಮಾಭೇದವಿಷಯಕವಾದ ಜ್ಞಾನವು ಯಾವುದೋ ); ಯಾವ ಜ್ಞಾನವು ಯುಕ್ತಿರಹಿತವಾಗಿರುವದೋ; ಅತತ್ವಾರ್ಥವತ್ ಎಂದರೆ ಅಸತ್ಯವಿಷಯಕವೋ ಮತ್ತು ಬಹು ( ಅಜ್ಞಾನದಿಂದ ಮಿಶ್ರವಾಗಿರುವದರಿಂದ ) ಅಲ್ಪವೋ ಅದು ತಾಮಸ ಜ್ಞಾನವೆನಿಸುವದು.

ಈ ರೀತಿಯಾಗಿ ಸಪ್ತ ಅಕ್ಷೌಹಿಣೀ ಸೇನಾನಾಯಕರಾದ ಪಾಂಡವರಿಗೆ ಸ್ವಾಮಿಯಾದ ಶ್ರೀ ಕೃಷ್ಣನು ಏಳಾವರ್ತಿ ಸ್ಪಷ್ಟವಾಗಿ ಜೀವಬ್ರಹ್ಮರಿಗೆ ಅಭೇದ ಪ್ರತಿಪಾದಕವಾದ ಮತವನ್ನು ತನ್ನ ಹೃದಯಪೂರ್ವಕವಾಗಿ ಧಿಕ್ಕರಿಸಿರುತ್ತಾನೆ. ಇದೂ ಅಲ್ಲದೆ ಜೀವಬ್ರಹ್ಮರಿಗೆ ಸರ್ವಥಾ ಭೇದಸಾಧಕವಾದ ಅತ್ಯಂತ ಸತ್ಯವಾದ ಪರಸ್ಪರ ವಿರುದ್ಧ ಧರ್ಮಗಳನ್ನು ಪ್ರತಿಪಾದನೆ ಮಾಡಿ ಮುಕ್ತಿಯಲ್ಲಿಯೂ ಭೇದವು ನಾಶವಾಗುವದಿಲ್ಲವೆಂದು ಅನೇಕ ಪ್ರಕರಣಗಳಲ್ಲಿ ತೋರಿಸಿರುತ್ತಾನೆ.

## 5.

**ಪ್ರಶ್ನೆ**— ಸ್ವಾಮೀ ! ಮುಕ್ತಿಯಲ್ಲಿ ಜೀವಬ್ರಹ್ಮರಿಗೆ ಭೇದ ಉಂಟೆಂದು ಶ್ರೀ ಕೃಷ್ಣನು ಎಲ್ಲಿ ಹೇಳಿರುತ್ತಾನೆ ? ಮತ್ತು ಜ್ಞಾನ್ಯವಸ್ಥೆಯಲ್ಲಿ ಅರ್ಜುನನು ಜೀವಬ್ರಹ್ಮರಿಗೆ ಭೇದವನ್ನು ಅಂಗೀಕರಿಸಿರುವನೇ ? ಈ ವಿಷಯವನ್ನು ವಿಶದ ವಾಗಿ ವಿವರಿಸಬೇಕು.

**ಉತ್ತರ**— ಶ್ರೀ ಶ್ರೀಗಳವರು— "ಮುಕ್ತಿ" ಯೆಂಬ ಅವಸ್ಥೆಯು ಯಥಾರ್ಥವು; ಮತ್ತು ಅನೇಕರು ಸಂಸಾರದಿಂದ ಮುಕ್ತರಾಗಿರುವರು ಎಂದು ನಿಶ್ಚಿತವಾದರೆ ಮುಕ್ತಿಯಲ್ಲಿ ಭೇದವುಂಟೋ ಅಥವಾ ಅಭೇದವೋ ಎಂಬ ಚರ್ಚೆ ಯನ್ನು ನಾವು ಮಾಡಬಹುದು; ಆದುದರಿಂದ ಇಲ್ಲಿ ಉಪೋದ್ಘಾತರೂಪವಾಗಿ ಒಂದೆರಡು ಮಾತುಗಳು ಆವಶ್ಯಕವು. ಅದ್ವೈತಮತದಲ್ಲಿ ಮುಕ್ತಿಯು ಅನಾದಿ ಕಾಲದಲ್ಲಿ ಇದುವರೆಗೆ ಯಾರಿಗೂ ಆಗಿರುವದಿಲ್ಲವೆಂದು ನಿಶ್ಚಯಿಸಬೇಕು. ಅದ್ವೈತಿ ಗಳಲ್ಲಿ ಅನೇಕರು ಏಕಜೀವವಾದಿಗಳು. ಅವರು ಹೇಳುವದೇನೆಂದರೆ;— ಒಂದೇ ಜೀವನು ಸಂಸಾರದಲ್ಲಿರುವವನು; ಅವನ ಅಜ್ಞಾನಕಲ್ಪಿತವಾಗಿ ನಿರ್ಜೀವರಾದ ದೇಹಗಳಾಗಿ ನಾವೆಲ್ಲರೂ ಓಡಾಡುತ್ತಿರುವಂತೆ ಕಾಣುತ್ತೇವೆ. ವಸ್ತುತಃ, ಯಾರ ಅಜ್ಞಾನದಿಂದ ಜಗತ್ತು ಕಲ್ಪಿತವಾಗಿರುವುದೋ ಆ ಒಬ್ಬ ಜೀವನ ದೇಹದಲ್ಲಿಯೇ ಜೀವವು ಇರುವದು. ಇತರ ದೇಹಗಳಲ್ಲಿ ( ನಮ್ಮೆಲ್ಲರ ದೇಹಗಳಲ್ಲಿಯೂ ) ಜೀವವೇ ಇಲ್ಲ. ಆ ಏಕಜೀವನಿಗೆ ಮುಕ್ತಿಯಾದರೆ, ಸ್ವಪ್ನದಿಂದ ಪುರುಷನು ಎಚ್ಚರವನ್ನು ಹೊಂದಿದಾಗ ಸಕಲ ಸ್ವಾಪ್ನಪ್ರಪಂಚವೂ, ಸ್ವಪ್ನದಲ್ಲಿ ಕಂಡ ಜೀವರಾಶಿಗಳೂ ಮಾಯವಾಗುವಂತೆ ನಾವೆಲ್ಲರೂ ಅದೃಶ್ಯರಾಗುವೆವು; ಎಂದು ಹೇಳುತ್ತಾರೆ. ಅಂತೂ ಒಬ್ಬ ಜೀವನಿಗೆ ಮುಕ್ತಿಯಾದರೆ ಎಲ್ಲರೂ ಅದೃಶ್ಯರಾಗಿ ಸಂಸಾರೋಪರ ಮವು ಪ್ರಾಪ್ತವಾಗುವದು. ಪ್ರಕೃತದಲ್ಲಿ ಸಂಸಾರವು ಇನ್ನೂ ಶಾಂತವಾಗಿಲ್ಲ ವಾದುದರಿಂದ, ಅನಿರ್ದಿಷ್ಟನಾದ ಆ ಏಕಜೀವನಿಗೆ ಇನ್ನೂ ಮುಕ್ತಿಯು ಆಗಿಲ್ಲ. ಅವನ ಅಜ್ಞಾನಕಲ್ಪಿತರಾದ ನಿರ್ಜೀವರಾದ ಇತರರಿಗೆ ಮುಕ್ತಿಪ್ರಸಕ್ತಿಯೇ ಇಲ್ಲ ವೆಂಬುದು ಸಿದ್ಧವಾಯಿತು.

ಇನ್ನು ಕೆಲವರು ಅದ್ವೈತಿಗಳು ಬಹು ಜೀವವಾದಿಗಳು. ಈ ಮತದ ರೀತಿ ಯಿಂದಲೂ ಯಾರಿಗೂ ಇದುವರೆಗೆ ಮುಕ್ತಿಯಾಗಿರುವುದಿಲ್ಲ. 1. ಹೇಗೆಂದರೆ :— ಅವಿದ್ಯಾವಿಮೋಹಿತರಾದ ಜೀವಚೇತನರಿಗಿಂತ ಮಾಯಾವೃತರಾದ ಬ್ರಹ್ಮವಿಷ್ಣು ರುದ್ರಾದಿ ಈಶ್ವರಚೇತನರು ಜ್ಞಾನದಿಂದ ಪ್ರಬಲರು ಎಂದು ಅವರು ಅಂಗೀಕರಿ ಸಿರುತ್ತಾರೆ. ( ಅದ್ವೈತಮತದ ರೀತ್ಯಾ ) ಜ್ಞಾನಿಗಳಿಗೆ ಗುರುವಾದ ವಿಷ್ಣುವಿ ಗಷ್ಟೇ ಅದ್ವೈತತತ್ವವು ಸ್ಫುಟವಾಗಿ ತಿಳಿದಿರಬೇಕು. ಅಂಥ ವಿಷ್ಣುವೂ ಕೂಡ ಅನಾದಿ ಕಾಲದಿಂದಲೂ ಬ್ರಹ್ಮೈಕ್ಯರೂಪ ಮುಕ್ತಿಯನ್ನು ಹೊಂದದೆ ಪ್ರತ್ಯಕ್ಷ

ವಾಗಿ ಅರ್ಜುನನ ರಥದಲ್ಲಿ ಕುಳಿತಿರುವದರಿಂದ ಬಹುಭ್ರಾಂತಿಯುಕ್ತರಾದ ಇತರ ಜೀವರುಗಳು ಯಾರೂ ಇದುವರೆಗೆ ಮುಕ್ತರಾಗಿಲ್ಲವೆಂಬುದು ಕೈಮುತ್ಯನ್ಯಾಯ ದಿಂದ ಸಿದ್ಧವು. 2. ಕಿಂಚ ಶಂಕರಾಚಾರ್ಯರು ಕೂಡ ಐಕ್ಯಜ್ಞಾನವು ಆದ ಕ್ಷಣವೇ ದೇಹಾದಿಗಳು ನಷ್ಟವಾಗಿ ಬ್ರಹ್ಮೈಕ್ಯವು ಪ್ರಾಪ್ತವಾಗುವದು; ಪ್ರಾರಬ್ಧ ಕರ್ಮಾದಿಗಳು ಪ್ರತಿಬಂಧಕವಾಗಿ ಇರುವದು ಸುಳ್ಳು ಎಂದು ಬರೆದಿರುತ್ತಾರೆ.

ತಥಾಹಿ— **ಅಪರೋಕ್ಷಾನುಭೂತಿಯಲ್ಲಿ**

**ಉತ್ಪನ್ನೇಽಸ್ಯಾತ್ಮವಿಜ್ಞಾನೇ ಪ್ರಾರಬ್ಧಂ ನೈವ ಮುಂಚತಿ ।**
**ಇತಿ ಯಚ್ಛ್ರೂಯತೇ ಶಾಸ್ತ್ರಾತ್ತನ್ನಿರಾಕ್ರಿಯತೇಽಧುನಾ ॥** †

ಎಂದು ಪ್ರತಿಜ್ಞೆಮಾಡಿ,

---

† ಈ ವಚನಗಳಿಂದ ಪ್ರಬಲವಾದ ಎರಡು ವಿಷಯಗಳು ತಿಳಿದು ಬರುತ್ತವೆ. 1. ಶಾಸ್ತ್ರದಲ್ಲಿ ಎಂದರೆ ವೇದಾಂತಸೂತ್ರಗಳಲ್ಲಿ ಪ್ರಾರಬ್ಧವು ಉಂಟೆಂದು ಹೇಳಿರುತ್ತದೆ ಎಂದು ಶಂಕರಾಚಾರ್ಯರು ಒಪ್ಪಿಕೊಂಡು ಅದು ಈಗ ನಮ್ಮಿಂದ ನಿರಾಕರಿಸಲ್ಪಡುವದು ಎಂದು ಆರಂಭಿಸಿರುವದರಿಂದ ಇವರ ಅಭಿಪ್ರಾಯವು ಬ್ರಹ್ಮಸೂತ್ರಗಳಿಗೆ ವಿರುದ್ಧವೆಂದು ಅವರ ವಚನದಿಂದಲೇ ಸ್ಪಷ್ಟವಾಗುತ್ತದೆ. ಆ ಶಾಸ್ತ್ರಕ್ಕೆ ಬೇರೇ ತಾತ್ಪರ್ಯವನ್ನು ಕಲ್ಪಿಸುತ್ತೇನೆ ಎಂದು ಹೇಳದೆ ಅದನ್ನು ನಿರಾಕರಣೆ ಮಾಡುತ್ತೇನೆ ಎಂದು ಪ್ರತಿಜ್ಞೆ ಮಾಡಿರುವುದರಿಂದ, ವೇದಾಂತಶಾಸ್ತ್ರವೂ ಒಂದೊಂದು ವೇಳೆ ಸುಳ್ಳು ಹೇಳಬಹುದೆಂದು ಅವರು ಒಪ್ಪಿದ ಹಾಗಾಯಿತು. ಇಂಥ ಬಹು ಸ್ಥಳಗಳ ಪರಾಮರ್ಶೆ ಮಾಡಿಯೇ ಘನತೆ ಹೊಂದಿದ ಕೀರ್ತಿವುಳ್ಳ ಅದ್ವೈತ ತತ್ವಜ್ಞರಲ್ಲಿ ಅದ್ವಿತೀಯನೆಂದು ಸುಪ್ರಸಿದ್ಧನಾದ ಪಂಡಿತಾಗ್ರಣಿಯಾದ ಡಾಸ್ಸ ಎಂಬಾತನೂ ಕೂಡ ಆನಂದಮಯ ಪ್ರಕರಣದಲ್ಲಿ ಶಂಕರಾಚಾರ್ಯರು ಉದ್ದೇಶಪೂರ್ವಕವಾಗಿ ಸೂತ್ರಕಾರರಿಗೆ ವಿರುದ್ಧವಾದ ಅರ್ಥವನ್ನೇ ಬರೆದಿರುವರೆಂದು ತೋರಿಸಿರುತ್ತಾನೆ—

We can suppose that Shankara disagrees with Badarayana here, that he therefore interprets the sutras first in Badarayana's sense, and then rejects this interpretation, in order to give another in its place in the sense of which he finally interprets the sutras as the standard authority of the school consciously changing their original meaning— Paul Deussen in his System of the Vedanta.

ಅರ್ಥವು— ( ಈ ಆನಂದಮಯದ ಪ್ರಕರಣದ ಸೂತ್ರಾರ್ಥಗಳಿಗೂ ಶಂಕರಾಚಾರ್ಯರ ಭಾಷ್ಯದಿಂದ ತೋರಿ ಬರುತ್ತಿರುವ ಅರ್ಥಗಳಿಗೂ ವಿರೋಧವಿರುವದರಲ್ಲಿ ಸಂಶಯವಿಲ್ಲ. ಇದಕ್ಕೆ ಕಾರಣವೇನು ? ಇದನ್ನು ಶಂಕರಾಚಾರ್ಯರು ಮಾಡಲೇ ಇಲ್ಲ. ಇದು ಪ್ರಕ್ಷಿಪ್ತವೆಂದಾದರೂ ಊಹಿಸಬಹುದು; ಅಥವಾ ಶಂಕರಾಚಾರ್ಯರು ತಮ್ಮ ಅಭಿಪ್ರಾಯವನ್ನು ಹೇಳದೆ ಯಾರೋ ಮತ್ತೊಬ್ಬರ ಅಭಿಪ್ರಾಯವನ್ನು ಈ ಸೂತ್ರದಲ್ಲಿ ಬರೆದಿರಬಹುದು ಎಂದು ಊಹಿಸಬಹುದು;

**ತತ್ವಜ್ಞಾನೋದಯಾದೂರ್ಧ್ವಂ ಪ್ರಾರಬ್ಧಂ ನೈವ ವಿದ್ಯತೇ ।**
**ಅಜ್ಞಾನಿಜನಬೋಧಾರ್ಥಂ ಪ್ರಾರಬ್ಧಂ ವಕ್ತಿ ವೈ ಶ್ರುತಿಃ ॥**

ಎಂದು ಹೇಳಿರುತ್ತಾರೆ.

**ವಿವೇಕಚೂಡಾಮಣಿಯಲ್ಲಿಯೂ** ಕೂಡ ಹೀಗೆ ಬರೆದಿರುತ್ತಾರೆ—
**ಸಮಾಧಾತುಂ ಬಾಹ್ಯದೃಷ್ಟ್ಯಾ ಪ್ರಾರಬ್ಧಂವದತಿ ಶ್ರುತಿಃ ।**
**ನತು ದೇಹಾದಿ ಸತ್ಯತ್ವಬೋಧನಾಯ ವಿಪಶ್ಚಿತಾಂ ॥**

ಅರ್ಥವು— ಆತ್ಮಜ್ಞಾನವು (ಬ್ರಹ್ಮೈಕ್ಯಜ್ಞಾನವು) ಉತ್ಪನ್ನವಾದರೂ ಪ್ರಾರಬ್ಧಕರ್ಮವು ಇನ್ನೂ ಬಿಡುವದಿಲ್ಲ ಎಂದು ಏನು ಶಾಸ್ತ್ರದಲ್ಲಿ ಹೇಳಿರುವದೋ ಅದು ಈಗ ನಿರಾಕರಿಸಲ್ಪಡುವದು. ತತ್ವಜ್ಞಾನೋತ್ಪತ್ತ್ಯನಂತರದಲ್ಲಿ ಪ್ರಾರಬ್ಧವು ಇರುವದಿಲ್ಲ: ಶ್ರುತಿಯು ಅಜ್ಞಾನಿಜನಗಳ ಉದ್ದಿಶ್ಯ ಪ್ರಾರಬ್ಧವು ಉಂಟೆಂದು

---

ಅಥವಾ ) ನಾವು ಹೀಗೆ ಊಹಿಸಬಹುದು; ಶಂಕರಾಚಾರ್ಯರು ಈ ಸ್ಥಳದಲ್ಲಿ ಬಾದರಾಯಣರ ಅಭಿಪ್ರಾಯವನ್ನು ಒಪ್ಪುವದಿಲ್ಲ; ಆದುದರಿಂದ ಅವರು ಮೊದಲು, ಪೂರ್ವಪಕ್ಷವನ್ನು ಉಪಪಾದನೆ ಮಾಡುವ ಪ್ರಕರಣದಲ್ಲಿ, ಬಾದರಾಯಣರ ಸೂತ್ರಾರ್ಥವನ್ನು ನಿರೂಪಿಸಿ ಅನಂತರ ತಮ್ಮ ಅಭಿಪ್ರಾಯಾನುಸಾರವಾಗಿ ತಮ್ಮ ಮತಕ್ಕೆ ಅತ್ಯಂತಆಧಾರವಾಗುವ ರೀತಿಯಲ್ಲಿ ಸೂತ್ರವ್ಯಾಖ್ಯಾನ ಮಾಡಬೇಕಾಗಿ ಬಾದರಾಯಣರಿಗೆ ಇಷ್ಟವಾದ ಸೂತ್ರಾರ್ಥವನ್ನು ತಿರಸ್ಕರಿಸಿರುತ್ತಾರೆ; ಮತ್ತು **ಉದ್ದೇಶಪೂರ್ವಕವಾಗಿ** ಆ ಸೂತ್ರಗಳಿಗೆ ಬಾದರಾಯಣರಿಂದ ಅ ಭಿಪ್ರೇತವಾದ ಮೊದಲ ನೆಯ ಅರ್ಥವನ್ನು ಬದಲಾಯಿಸಿರುತ್ತಾರೆ. ಡಾರ್ಸ ಸಾಹೇಬರಿಗೆ ಈ ಕೊನೆಯ ನಿಶ್ಚಯದಲ್ಲಿಯೇ ಹೆಚ್ಚು ಸಮ್ಮತಿಯಿರುವದು.

ಅದ್ವೈತಿಗಳಿಂದ ರಚಿತವಾದ **ಶಂಕರದಿಗ್ವಿಜಯದ** 16 ನೆಯ ಸರ್ಗದ 103 ನೆಯ ಶ್ಲೋಕದ ವ್ಯಾಖ್ಯಾನದಲ್ಲಿ ಉದಾಹೃತವಾದ ಶ್ಲೋಕದಿಂದಲೂ ಶಂಕರಾಚಾರ್ಯರು ಸೂತ್ರಾರ್ಥವನ್ನು ಅತಿಕ್ರಮಿಸಿ ವ್ಯಾಖ್ಯಾನಮಾಡುತ್ತಾರೆಂಬುದು ಸ್ಪಷ್ಟವಾಗುವದು.

**“ ವ್ಯಾಸೋಪದಿಷ್ಟಸೂತ್ರಾಣಾಂ ದ್ವೈತವಾಕ್ಯಾತ್ಮನಾಂ ಶಿವೇ ।**
**ಅದ್ವೈತಮೇವ ಸೂತ್ರಾರ್ಥಂ ಪ್ರಾಮಾಣ್ಯೇನ ಕರಿಷ್ಯತಿ ।**
**ಅವಿಮುಕ್ತೇ ಸಮಾಸೀನಂ ವ್ಯಾಸಂ ವಾಕ್ಯೈರ್ವಿಜಿಗ್ಯಚ ॥**

ಅರ್ಥವು:— ಶಂಕರಾಚಾರ್ಯರು ಜೀವಬ್ರಹ್ಮರ ಭೇದಾರ್ಥದಲ್ಲಿಯೇ ತಾತ್ಪರ್ಯವುಳ್ಳ ವೇದವ್ಯಾಸರ ಸೂತ್ರಗಳಿಗೆ ಕಾಶೀಕ್ಷೇತ್ರದಲ್ಲಿ ಸ್ಥಿತರಾದ ವ್ಯಾಸರನ್ನು ವಾಕ್ಯಾರ್ಥದಲ್ಲಿ ಜಯಿಸಿ ಅದ್ವೈತವನ್ನೇ ಸೂತ್ರಾರ್ಥವೆಂದು ಹೇಳುತ್ತಾರೆ, ಮೂಲಸೂತ್ರಕಾರರಾದ ವ್ಯಾಸರನ್ನೇ ಗೆದ್ದು ಅವರಿಗೆ ವಿರುದ್ಧವಾದ ಅರ್ಥಗಳನ್ನು ಅವರ ಸೂತ್ರಗಳಿಗೇ ಮಾಡಿರುವ ವ್ಯಾಖ್ಯಾನಕಾರನು ಎಷ್ಟು ಪ್ರಾಮಾಣಿಕನೆಂಬುದನ್ನು ಚರ್ಚಿಸಿ ಪ್ರಯೋಜನವಿಲ್ಲ, *H. S.*

(ಸುಳ್ಳು) ಹೇಳುವದು, ಅಜ್ಞಾನಿಗಳ ದೃಷ್ಟಿಯನ್ನು ಅನುಸರಿಸಿ ಶ್ರುತಿಯು ಪ್ರಾರಬ್ಧವು ಉಂಟೆಂದು ಹೇಳುತ್ತದೆ.

ಇದರಿಂದಲೂ, ಐಕ್ಯಜ್ಞಾನವು ಇದುವರೆಗೂ ಯಾರಿಗೂ ಹುಟ್ಟಿ ಮುಕ್ತರಾದವರಿಲ್ಲವೆಂದು ನಿರ್ಣಯಿಸಬಹುದು. ಐಕ್ಯತತ್ತ್ವೋಪದೇಶಕ ಶಿಖಾಮಣಿಗಳಾದ ಶಂಕರಾಚಾರ್ಯರಿಗೇ ದೇಹಬಂಧವು ಕಳಚಿ ಹೋಗಿ ಬ್ರಹ್ಮಭಾವವು ಪ್ರಾಪ್ತವಾಗಲಿಲ್ಲ. *ಶುಕವಾಮದೇವಾದಿ ಋಷಿಗಳೂ, ವಿಷ್ಣುಬ್ರಹ್ಮರುದ್ರಾದಿ ದೇವತೆಗಳೂ ಇನ್ನೂ ಸದೇಹರಾಗಿ ಪರಿದೃಶ್ಯಮಾನರಾಗಿರುವದರಿಂದ ಅವರಿಗೂ ಈ ಉದಾಹೃತ ಶ್ಲೋಕಗಳ ರೀತಿಯಿಂದ ಐಕ್ಯಜ್ಞಾನವು ಪ್ರಾಪ್ತವಾಗಿರುವುದಿಲ್ಲ. ಏವಂಚ ಏಕಜೀವವಾದದಲ್ಲಿಯೂ, ಬಹು ಜೀವವಾದದಲ್ಲಿಯೂ ಅವರ ನ್ಯಾಯದಿಂದಲೇ ಆಲೋಚನೆ ಮಾಡಿದರೆ ಅನಾದಿ ಸೃಷ್ಟಿಪ್ರವಾಹದಲ್ಲಿ ಇದುವರೆಗೆ ಯಾರೂ ಮುಕ್ತರಾದವರಿಲ್ಲ.

ಉತ್ತರ ಕಾಲದಲ್ಲಿಯಾದರೂ ಇಂಥ ಮುಕ್ತ್ಯವಸ್ಥೆಯು ಬರಬಹುದೆಂದು ಪ್ರಮಾಣವಿರುವದಿಲ್ಲ. ಹೇಗೆಂದರೆ ಸರ್ವಚೇತನರೂ ವಿಶೇಷೇಣ ಶ್ರೀ ಕೃಷ್ಣನೂ ನಿತ್ಯರೆಂದು,

(1) **ನಚೈವ ನಭವಿಷ್ಯಾಮಃ ಸರ್ವೇ ವಯಮತಃ ಪರಂ ।** —(2. 12.)
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥** —(2. 17.)
**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।** —(2. 18.)
**ಅಜೋ ನಿತ್ಯಶ್ಶಾಶ್ವತೋಽಯಂ ಪುರಾಣೋ.... ॥** —(2. 20.)
**ವೇದಾವಿನಾಶಿನಂ ನಿತ್ಯಂ.... ।** —(2. 21.)
**ನಿತ್ಯಸ್ಸರ್ವಗತಸ್ಥಾಣುಃ.... ॥** —(2. 24.)
**ದೇಹೀ ನಿತ್ಯಮವಧ್ಯೋಽಯಂ.... ॥** —(2. 30 )

ಇತ್ಯಾದಿ ಅನೇಕ ವಾಕ್ಯಗಳಲ್ಲಿ ಹೇಳಲ್ಪಟ್ಟಿರುತ್ತದೆ. ಮತ್ತು ನವಮಾಧ್ಯಾಯದಲ್ಲಿ "ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌವಿಸೃಜಾಮ್ಯಹಂ" ಎಂದು ಹೇಳಿರುವದರಿಂದ ಸೃಷ್ಟಿಪ್ರವಾಹವೂ ಕೂಡ ನಿತ್ಯವಾಗಿರುವುದೆಂದು ತಿಳಿದು ಬರುತ್ತದೆ. ಆದುದರಿಂದ ವಿಷ್ಣುಬ್ರಹ್ಮರುದ್ರಾದಿಗಳ ಮಾಯೋಪಾಧಿಕವಾದ ಈಶ್ವರಭಾವವಾಗಲೀ ಅವಿದ್ಯೋಪಾಧಿಕವಾದ ಅಸ್ಮದಾದಿಗಳ ಜೀವಭಾವವಾಗಲೀ ನಷ್ಟವಾಗಿ

---

***"ಶುಕೋ ಮುಕ್ತಃ ವಾಮದೇವೋ ಮುಕ್ತಃ ಇತ್ಯಾದಯಸ್ತ್ವರ್ಥವಾದಾ ಏವ"** ಎಂದರೆ ಶುಕವಾಮದೇವಾದಿಗಳು ಮುಕ್ತರಾಗಿರುವರೆಂಬುದು ಸ್ತುತಿಪರವಾದ ಮಾತೇ ಹೊರತು ಯಥಾರ್ಥಪ್ರಮೇಯವಲ್ಲವೆಂದು ಅಪ್ಪಯ್ಯ ದೀಕ್ಷಿತರೇ ಬರೆದಿರುತ್ತಾರೆ.

ನಮಗೆ ಬ್ರಹ್ಮೈಕ್ಯ ಜ್ಞಾನದಿಂದ ದೇಹಬಂಧಾದಿಗಳು ಕಳಚಿ ಹೋಗಿ, ಬ್ರಹ್ಮೈಕ್ಯ ರೂಪವಾದ ಮುಕ್ತಿಯು ಬರಲಾರದೆಂದು ಖಂಡಿತವಾಗಿಯೂ ನಿಶ್ಚಯಿಸಬಹುದು. ಈ ರೀತಿಯಾಗಿ ಬ್ರಹ್ಮೈಕ್ಯರೂಪವಾದ ಮುಕ್ತಿಯು ಶಶವಿಷಾಣದಂತೆ ಅಪ್ರಸಿದ್ಧ ವಾಗಿ ಹೋದುದರಿಂದ ಮುಮುಕ್ಷುಗಳಾದ ನಾವೆಲ್ಲರೂ 1. ಬ್ರಹ್ಮೈಕ್ಯಭಿನ್ನ ವಾದ ಯಾವುದಾದರೂ ಒಂದು ರೀತಿಯಾದ (ಜೀವಭಾವವು ನಿತ್ಯವಾದುದರಿಂದ ನಾಶವಾಗದಿದ್ದರೂ ನಮಗೆ ಬಹು ಸುಖಪ್ರದವಾದ) ಮುಕ್ತ್ಯವಸ್ಥೆಯನ್ನೂ ಮತ್ತು 2. ಬ್ರಹ್ಮೈಕ್ಯಜ್ಞಾನಕ್ಕಿಂತ ಭಿನ್ನವಾದ ಮುಕ್ತಿಹೇತುಭೂತವಾದ ಜ್ಞಾನ ವನ್ನೂ ಅವಶ್ಯವಾಗಿಯೂ ಒಪ್ಪಬೇಕು. ಹಾಗಲ್ಲದೆ, ಮುಕ್ತಿಯು ಯಾರಿಗೂ ಇಲ್ಲದೆ ಇದ್ದರೆ ಹೋಗಲಿ, ಎಂದು ಹೇಳುವುದು ಶ್ರೀ ಕೃಷ್ಣನಿಗೆ ಪರಮವಿರುದ್ಧ ವಾದ ಅಭಿಪ್ರಾಯವಿರುತ್ತದೆ. ಶ್ರೀ ಕೃಷ್ಣನು ಹೇಳುತ್ತಾನೆ.—

**(2) ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥**

—(4. 10.)

ಅರ್ಥವು— ವಿಷಯಸ್ನೇಹವನ್ನೂ, ಭಯಕ್ರೋಧಗಳನ್ನೂ ಪರಿತ್ಯಾಗ ಮಾಡಿ ನಾನೇ (ಶ್ರೀ ಕೃಷ್ಣನೇ) ಪ್ರಧಾನನೆಂದು ತಿಳಿದವರಾಗಿ ನನ್ನನ್ನೇ ಆಶ್ರಯಿಸಿ ಅನೇಕ ಸಜ್ಜನರು ಜ್ಞಾನದಿಂದಲೂ, ತಪಸ್ಸಿನಿಂದಲೂ ಪವಿತ್ರರಾಗಿ, (ಕರ್ಮಬಂಧ ವನ್ನು ಪರಿಹರಿಸಿಕೊಂಡು,) ನನ್ನಲ್ಲಿ ಸಾಯುಜ್ಯವೆಂಬ ಸ್ಥಿತಿಯನ್ನು ಹೊಂದು ತ್ತಾರೆ (ಮುಕ್ತರಾಗುತ್ತಾರೆ). ನನ್ನನ್ನು (ಶ್ರೀ ಕೃಷ್ಣನನ್ನು) ಹೊಂದದೇ ಇರುವುದೇ ಸಂಸಾರಕ್ಕೆ ಕಾರಣವು (ನಿರ್ಗುಣಬ್ರಹ್ಮನನ್ನು ಹೊಂದದೇ ಇರು ವದು ಕಾರಣವಲ್ಲ) ಎಂದೂ ಹೇಳುತ್ತಾನೆ :—

**ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ** ।—(9. 3.)

ನನ್ನನ್ನು ಹೊಂದದೇ ಇರುವವರು ಜನನಮರಣರೂಪವಾದ ಸಂಸಾರಕ್ಕೆ ಪುನಃ ಪುನಃ ಬರುತ್ತಾರೆ.

**ಪ್ರಶ್ನೆ**— ಸ್ವಾಮೀ ! "ಮದ್ಭಾವಮಾಗತಾಃ" ಎಂದರೆ ನನ್ನ ಭಾವ ವನ್ನು ಹೊಂದಿದರೆಂದು ಇರುವುದರಿಂದ ಅನೇಕರು ಬ್ರಹ್ಮೈಕ್ಯವನ್ನು ಹಿಂದೆ ಹೊಂದಿರುವರೆಂದು ಅರ್ಥವು ಯಾತಕ್ಕೆ ಆಗಬಾರದು ?

**ಉತ್ತರ**— ಕೃಷ್ಣನಲ್ಲಿ ಐಕ್ಯವನ್ನು ಹೊಂದುವದು ಮುಕ್ತಿಯು ಎಂದು ಅದ್ವೈತಿಗಳೂ ಒಪ್ಪುವದಿಲ್ಲ. ನಾವೂ ಒಪ್ಪುವದಿಲ್ಲ. ಕೃಷ್ಣಭಿನ್ನನಾದ ಬೇರೆ ಬ್ರಹ್ಮನಲ್ಲಿ ಐಕ್ಯವು ಪೂರ್ವೋಕ್ತನ್ಯಾಯಗಳಿಂದ ಸಂಭವಿಸಲಾರದು. ಕಿಂಚ ಕೃಷ್ಣನಲ್ಲಿ ಇದುವರೆಗೆ ಐಕ್ಯವು ಯಾವ ಜೀವನಿಗೂ ಆಗಿರುವುದಿಲ್ಲ. ಆದುದ ರಿಂದ ಮಮಭಾವಃ ಮದ್ಭಾವಃ ಎಂದು ವಿಗ್ರಹ ಮಾಡದೆ, ಮಯಿಭಾವಃ

( ಸ್ಥಿತಿಃ ) ಮದ್ಭಾವಂ ಎಂದು ವಿಗ್ರಹಮಾಡಬೇಕು. ಭಗವಂತನಲ್ಲಿ ಪ್ರವೇಶವೇ ಮುಕ್ತಿಯೇ ಹೊರತು ವಿಷ್ಣ್ವೈಕ್ಯವು ಮುಕ್ತಿಯಲ್ಲವೆಂದು **"ವಿಶತೇ ತದನಂತರಂ"** ಎಂದೂ **" ವಿಶಂತಿ ಯದ್ಯತಯೋ ವೀತರಾಗಾಃ"** ಎಂದರೆ ಕಾಮಾದಿ ರಹಿತರಾದ ಜ್ಞಾನಿಗಳು ಯಾರಲ್ಲಿ ( ಮುಕ್ತಿಯಲ್ಲಿ ) **ಪ್ರವೇಶಿಸುವರೋ** ( ಅದು ನನ್ನ ಸ್ವರೂಪವು ) ಎಂದು ಅರ್ಥಕೊಡುವ ಎಂಟನೆಯ ಅಧ್ಯಾಯದ ಶ್ರೀ ಕೃಷ್ಣನ ವಾಕ್ಯದಿಂದಲೂ ನಿಶ್ಚಿತವಾಗುವದು. ಮತ್ತು ಮುಕ್ತಿಯು ಅದ್ವೈತಿಗಳು ಹೇಳುವಂತೆ ಸಿದ್ಧವಾದ ಪರಬ್ರಹ್ಮಭಾವವಲ್ಲ; ಮತ್ತೇನೆಂದರೆ ಮುಂದೆ **( ಸಾಧನಾನಂತರ )** **ಪ್ರಾಪ್ತವಾಗುವ** ಒಂದು ಸ್ಥಾನವಿಶೇಷವೆಂದು ಶ್ರೀ ಕೃಷ್ಣನವಾಕ್ಯಗಳಿಂದ ತೋರಿಬರುವದು. ಮುಕ್ತಿಪರವಾದ ಶ್ರೀಕೃಷ್ಣನ ವಾಕ್ಯಗಳನ್ನು ಪರಿಶೀಲನೆಮಾಡೋಣ.

(3) **ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂಧೀರಂ ಸೋಽಮೃತತ್ವಾಯ ಕಲ್ಪತೇ ॥**
—(2. 15.)

ಯಾರು........ವೈಷಯಿಕ ಸುಖದುಃಖಗಳಿಂದ ಚಿತ್ತವಿಕಾರವನ್ನು ಹೊಂದುವದಿಲ್ಲವೋ ಅಂಥ ಜ್ಞಾನಿಯು ಮುಕ್ತನಾಗುತ್ತಾನೆ.

(4) **ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಂ ॥**
(2. 51.)

ವಿವೇಕಿಗಳು ನಿಷ್ಕಾಮಧರ್ಮದಿಂದ ಜ್ಞಾನವನ್ನು ಹೊಂದಿ ಜನನಮರಣಾದಿ ಬಂಧದಿಂದ ವಿನಿರ್ಮುಕ್ತರಾಗಿ ನಿರ್ದುಃಖವಾದ ಸ್ಥಾನವನ್ನು **ಹೊಂದುತ್ತಾರೆ.** (ಮುಕ್ತರಾಗುತ್ತಾರೆ)

(5)....**ಸಶಾಂತಿಮಾಪ್ನೋತಿ ನ ಕಾಮಕಾಮಿ ।**— (2. 70.)

ವಿಷಯ ಸುಖಗಳಿಂದ ಚಿತ್ತವಿಕಾರವನ್ನು ಹೊಂದದ ಜ್ಞಾನಿಯು ಮುಕ್ತಿಯನ್ನು **ಹೊಂದುತ್ತಾನೆ.** (ವಿಷಯಾಭಿಲಾಷೆಯುಳ್ಳವನು ಮುಕ್ತಿಯನ್ನು ಹೊಂದುವದಿಲ್ಲ.)

(6) **ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ** —(2. 71. )
ಮಮತಾಹಂಕಾರರಹಿತನಾದ ಜ್ಞಾನಿಯು ಮುಕ್ತಿಯನ್ನು **ಹೊಂದುತ್ತಾನೆ.**

(7) **ಸ್ಥಿತ್ವಾಸ್ಯಾಮಂತಕಾಲೇಪಿ ಬ್ರಹ್ಮನಿರ್ವಾಣಮೃಚ್ಛತಿ ।**
—(2. 73.)

ಮರಣಕಾಲದಲ್ಲಿ ವಿಷಯಸಂಗರಹಿತನಾಗಿ ಭಗವಂತನ ಸ್ಮೃತಿಯುಕ್ತನಾದ ಪುರುಷನು ಪ್ರಾಕೃತಶರೀರರಹಿತನಾದ ಬ್ರಹ್ಮನನ್ನು **ಹೊಂದುತ್ತಾನೆ.** (ಮುಕ್ತನಾಗುತ್ತಾನೆ.)

**(8) ಬಹವೋಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ।**
—(4. 10.)

ಬಹುಜನರು ಜ್ಞಾನಿಗಳಾಗಿ ನನ್ನಲ್ಲಿ ನಿರ್ದುಃಖಾನಂದಾನುಭವಾತ್ಮಕವಾದ ಸ್ಥಿತಿಯನ್ನು ಹೊಂದಿರುತ್ತಾರೆ.

**(9) ಬ್ರಹ್ಮೈವ ತೇನ ಗಂತವ್ಯಂ ।** —(4. 24.)

ಬ್ರಹ್ಮಾರ್ಪಣಬುದ್ಧಿಯಿಂದ ಕರ್ಮ ಮಾಡುವವನಿಂದ **ಹೊಂದಲ್ಪಡತಕ್ಕವನೂ** ಬ್ರಹ್ಮನೇ.

**(10) ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ।**
—(4. 39.)

ಜ್ಞಾನವನ್ನು ಪಡೆದ ನಂತರ ಶೀಘ್ರದಲ್ಲಿ ಅತ್ಯುತ್ತಮವಾದ ಸುಖವನ್ನು ( ಮೋಕ್ಷವನ್ನು ) **ಹೊಂದುತ್ತಾನೆ.**

**(11) ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ।**
—(5. 17.)

ಜ್ಞಾನದಿಂದ ನಷ್ಟವಾದ ಪಾಪವುಳ್ಳವರು ಪುನರಾವೃತ್ತಿರಾಹಿತ್ಯರೂಪವಾದ ಮುಕ್ತಿಯನ್ನು **ಹೊಂದುತ್ತಾರೆ.**

**(12) ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ ॥**
—(5. 21.)

ಸಮಾಧಿಯೋಗದಲ್ಲಿ ಪರಬ್ರಹ್ಮನ ( ಶ್ರೀ ಕೃಷ್ಣನ ) ಧ್ಯಾನ ಮಾಡುವ ಯೋಗಿಯು **ನಾಶರಹಿತವಾದ ಸುಖವನ್ನು ಅನುಭವಿಸುತ್ತಾನೆ.** ಪರಿಸಮಾಪ್ತಿಯಿಲ್ಲದ, ನಿರಂತರ ಸುಖದ ಅನುಭವವೇ ಮುಕ್ತಿಯೆಂದೂ, ಸುಖರೂಪನಾದ ಬ್ರಹ್ಮನೇ ಆಗುವುದು ಮುಕ್ತಿಯಲ್ಲವೆಂದೂ ಇದರಿಂದ ಸಿದ್ಧವಾಗುವುದು.

**(13) ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ।**
—(5. 24.)

ಪೂರ್ವೋಕ್ತಯೋಗಿಯು ಬ್ರಹ್ಮಜ್ಞಾನವನ್ನು ಹೊಂದಿ ನಿರ್ವಾಣ (ಪ್ರಾಕೃತ ಶರೀರ ರಹಿತನಾದ) ಬ್ರಹ್ಮನನ್ನು **ಹೊಂದುತ್ತಾನೆ.**

**ಪ್ರಶ್ನೆ—** " ಬ್ರಹ್ಮಭೂತಃ " ಎಂದರೆ ಬ್ರಹ್ಮನೇ ಆಗಿ ಎಂದಲ್ಲವೇ ಅರ್ಥವು.

**ಉತ್ತರ**— ಹಾಗೆ ಅರ್ಥ ಮಾಡಿದರೆ 1. "ಬ್ರಹ್ಮನಿರ್ವಾಣಂ ಅಧಿಗಚ್ಛತಿ" ಎಂಬ ಶ್ಲೋಕಭಾಗದ ಯೋಜನೆಯು ದುರ್ಘಟವಾಗುವುದು. ಬ್ರಹ್ಮನೇ ಆಗಿ ನಿರ್ವಾಣಬ್ರಹ್ಮನನ್ನು **ಹೊಂದುವನು** ಎಂದು ಹೇಳುವುದು ಅಸಂಗತವಾಗುವುದು. ಬ್ರಹ್ಮನಾಗಿ ಹೋದ ಮೇಲೆ ಪುನಃ ನಿರ್ವಾಣಬ್ರಹ್ಮನನ್ನು ಹೊಂದುವನು ಎಂದು ಯಾತಕ್ಕೆ ಹೇಳಬೇಕು ? 2. ಶಂಕರಾಚಾರ್ಯರೂ ಕೂಡ ಹದಿನೆಂಟನೆಯ ಅಧ್ಯಾಯದಲ್ಲಿ "ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ" ಎಂಬ ಶ್ಲೋಕದಲ್ಲಿರುವ "ಬ್ರಹ್ಮ ಭೂತಃ" ಎಂಬ ಪದಕ್ಕೆ ಬ್ರಹ್ಮನಾಗಿ ಎಂದು ಅರ್ಥ ಮಾಡದೆ "**ಬ್ರಹ್ಮಪ್ರಾಪ್ತಃ**" ಎಂದರೆ ಬ್ರಹ್ಮನನ್ನು ಹೊಂದಿದವನು ಎಂದು (ಇಂಥ ಬಾಧಕಗಳಿದ್ದುದರಿಂದಲೇ) ಅರ್ಥ ಮಾಡಿರುವರು. ಬ್ರಹ್ಮಾನಂದೀಯದಲ್ಲೂ ಕೂಡ ಬ್ರಹ್ಮಜ್ಞಾನವುಳ್ಳವನಾಗಿ ಎಂದು ಅರ್ಥ ಮಾಡಿರುತ್ತಾರೆ. ಆದುದರಿಂದ ಬ್ರಹ್ಮಣಿಭೂತಃ = ಬ್ರಹ್ಮಭೂತಃ ಎಂದರೆ ಬ್ರಹ್ಮನಲ್ಲಿ ಇಡಲ್ಪಟ್ಟ ಮನಸ್ಸುಳ್ಳವನು ಎಂದು ಅರ್ಥ ಮಾಡುವುದೇ ಉಚಿತವು.

(14) **ಲಭಂತೇ ಬ್ರಹ್ಮನಿರ್ವಾಣಂ ಋಷಯಃ ಕ್ಷೀಣಕಲ್ಮಷಾಃ ।**
—(2. 25.)

ನಷ್ಟವಾದ ಪಾಪವುಳ್ಳ ಜ್ಞಾನಿಗಳು ನಿರ್ವಾಣ ಬ್ರಹ್ಮನನ್ನು **ಪಡೆಯುತ್ತಾರೆ.**

(15) **ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ।**
—(6. 15.)

ಯೋಗಿಯು ದೇಹತ್ಯಾಗೋತ್ತರ ಕಾಲೀನವಾದ ಮತ್ಸಂಸ್ಥಾಂ ಎಂದರೆ **ನನ್ನಲ್ಲಿ** ಸ್ಥಿತಿರೂಪವಾದ ಮುಕ್ತಿಯನ್ನು **ಹೊಂದುತ್ತಾನೆ.** ಈ ವಾಕ್ಯದಲ್ಲಿ ಪರಮಾತ್ಮನಲ್ಲಿ ಇರುವುದೇ ಮುಕ್ತಿಯೇ ಹೊರತು ಪರಮಾತ್ಮನೇ ಆಗಿ ಹೋಗುವುದು ಮುಕ್ತಿಯಲ್ಲವೆಂದು ಶ್ರೀ ಕೃಷ್ಣನು ಸ್ಪಷ್ಟವಾಗಿ ಹೇಳಿರುತ್ತಾನೆ. ಯದ್ಯಪಿ ನಾವೆಲ್ಲರೂ ಈಗಲೂ ಪರಮಾತ್ಮನಲ್ಲಿಯೇ ಇದ್ದೇವೆ. ಆದರೂ ಪರಮಾತ್ಮನ ಅತ್ಯರ್ಥಪ್ರಸಾದಕ್ಕೆ ಪಾತ್ರರಾಗಿ ಸ್ಥಾನವಿಶೇಷಗಳಲ್ಲಿ ಇರುವುದೇ ಇಲ್ಲಿ ವಿವಕ್ಷಿತವು.

(16) **........ತತೋ ಯಾತಿ ಪರಾಂ ಗತಿಂ ।** —(6. 45.)

( ಯೋಗಿಯು ಜ್ಞಾನಿಯಾಗಿ ) ಉತ್ತಮ ಗತಿಯನ್ನು ( ಮುಕ್ತಿಯನ್ನು ) ಕುರಿತು **ಹೋಗುತ್ತಾನೆ;** ಅಥವಾ ಹೊಂದುತ್ತಾನೆ.

(17) **ಅಂತಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಲೇವರಂ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥**
—(8. 5.)

ಅಂತ್ಯಕಾಲದಲ್ಲಿ ನನ್ನನ್ನು ಸ್ಮರಣೆ ಮಾಡಿ ಶರೀರವನ್ನು ಬಿಟ್ಟರೆ ಅವನು ನನ್ನಲ್ಲಿ ಉತ್ತಮಸ್ಥಿತಿಯನ್ನು **ಹೊಂದುತ್ತಾನೆ.** ಇದರಲ್ಲಿ ಸಂಶಯವಿಲ್ಲ. (ಪರಮಾತ್ಮನ ಅನುಗ್ರಹದಿಂದ ನಿತ್ಯಾಭಿವ್ಯಕ್ತವಾದ ಆನಂದವನ್ನು ಅನುಭವಿಸುವುದೇ ಇಲ್ಲಿ ವಿವಕ್ಷಿತವಾದ ಉತ್ತಮವಾದ ಸ್ಥಿತಿಯು.)

**ಪ್ರಶ್ನೆ**— ಸ್ವಾಮೀ ! ಇಲ್ಲಿ ಮದ್ಭಾವಂ ಯಾತಿ ಎಂದರೆ ನನ್ನ ಸ್ವರೂಪವನ್ನು ಹೊಂದುತ್ತಾನೆ ಎಂದರೆ ನಾನೇ ಆಗುತ್ತಾನೆ ಎಂದು ಯಾತಕ್ಕೆ ಅರ್ಥ ಮಾಡಬಾರದು ?

**ಉತ್ತರ**— ನಿತ್ಯರಾದ ಜೀವರಿಗೆ ಕೃಷ್ಣೈಕ್ಯವು ಬರಲಾರದೆಂಬಲ್ಲಿ ಬಹು ಯುಕ್ತಿಗಳನ್ನು ಹಿಂದೆಯೇ ನಿರೂಪಿಸಿರುತ್ತೇವೆ. 2. ಮತ್ತು ಮುಂದಿನ ಶ್ಲೋಕದಲ್ಲಿ ಕೃಷ್ಣನು ಹೇಳುತ್ತಾನೆ.—

**ಯಂ ಯಂ ವಾಽಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಂ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ॥** —(8. 6.)

ಅರ್ಥವು— ಜೀವನು ಮರಣಕಾಲದಲ್ಲಿ ಯಾವ ಯಾವ ಪದಾರ್ಥವನ್ನು ಸ್ಮರಿಸುತ್ತಾ ದೇಹವನ್ನು ಬಿಡುತ್ತಾನೆಯೋ, ಸದಾ ಆ ಪದಾರ್ಥದಲ್ಲೇ ಇಡಲ್ಪಟ್ಟ ಮನಸ್ಸಿನ ವಾಸನಾಪ್ರಭಾವದಿಂದ ಆಯಾಯ ಪದಾರ್ಥವನ್ನೇ ಹೊಂದುತ್ತಾನೆ.

ಹೀಗೆ ಹೇಳಿರುವುದರಿಂದ, ಕೃಷ್ಣನನ್ನು ಸ್ಮರಿಸುತ್ತಾ ಸತ್ತರೆ, ಆ ಮನಸ್ಸಿನ ವಾಸನಾ ಪ್ರಭಾವದಿಂದ ಕೃಷ್ಣನನ್ನು ಹೊಂದಬಹುದು. ಕೃಷ್ಣನೇ ಆಗುವುದು. ಅಸಂಭಾವಿತವು. ಮರಣಕಾಲದಲ್ಲಿ ಇಂದ್ರನನ್ನು ಸ್ಮರಿಸುತ್ತಾ ಸತ್ತರೆ ಇಂದ್ರನ ದೇಹಕ್ಕೆ ಸದೃಶವಾದ ( ದೇವತಾ ) ದೇಹವು ಬರಬಹುದು. ಇಂದ್ರನೇ ಆಗಲಾರನು. ಹೀಗೆಯೇ ಶಂಖಚಕ್ರಾದಿಧಾರಿಯಾದ ಶ್ರೀ ಕೃಷ್ಣನನ್ನು ಸ್ಮರಣೆ ಮಾಡಿಕೊಂಡು ಸತ್ತರೆ, ಕೃಷ್ಣನ ರೂಪಕ್ಕೆ ಸದೃಶವಾದ ರೂಪವು ಬರಬಹುದು. ಇದೇ ಸಾರೂಪ್ಯಮುಕ್ತಿಯೆನಿಸುವುದು. ಆದುದರಿಂದ ಮಯಿಭಾವಃ ಮದ್ಭಾವಃ ಎಂದಾಗಲೀ, ಮಮಭಾವ (ರೂಪಂ) ಇವಭಾವೋಯಸ್ಯಸಃ ಎಂದಾಗಲೀ ವಿಗ್ರಹ ಮಾಡಿ ಅರ್ಥವನ್ನು ಮಾಡಬೇಕೇ ಹೊರತು ಪ್ರಮಾಣವಿರುದ್ಧವಾದ ಐಕ್ಯಾರ್ಥಕ್ಕೆ* ಇಲ್ಲಿ ಅವಕಾಶವಿರುವುದಿಲ್ಲ. ಇದರಿಂದಲೇ " ಮದ್ಭಕ್ತ ಏತದ್ವಿಜ್ಞಾಯ

*ಮದ್ಭಾವಂ ಎಂಬ ಪದಕ್ಕೆ ಐಕ್ಯಪರವಾಗಿ ಅರ್ಥ ಮಾಡಿದರೆ ಲಕ್ಷಣಾವೃತ್ತಿಯನ್ನು ಸ್ವೀಕರಿಸಬೇಕೆಂದು ಅದ್ವೈತಿಗಳಿಗೆ ಸಮ್ಮತವಾದ ಅಭಿಪ್ರಾಯವು. ಮಯಿಭಾವಃ ಎಂಬ ವಿಗ್ರಹದಿಂದ ಮಾಡಿದ ಅರ್ಥವು ಮುಖ್ಯವೃತ್ತಿಯಿಂದ ಮಾಡಿದುದಾಗಿಯೂ ಮತ್ತು ಬಾಧಕರಹಿತವಾದುದರಿಂದ ಪ್ರಾಮಾಣಿಕವಾಗಿಯೂ ಇರುತ್ತದೆ.

ಮದ್ಭಾವಾಯೋಪಪದ್ಯತೇ" ಎಂಬ ಹದಿಮೂರನೆಯ ಅಧ್ಯಾಯದ ಶ್ಲೋಕವನ್ನೂ ವ್ಯಾಖ್ಯಾನ ಮಾಡಿದಂತಾಯಿತು. ಮತ್ತು ಎಂಟನೆಯ ಅಧ್ಯಾಯದ ಮುಂದಿನ ಎರಡು ಶ್ಲೋಕಗಳಲ್ಲಿಯೂ ತನ್ನಲ್ಲಿ ಸ್ಥಿತಿಯೇ ಮುಕ್ತಿಯೆಂದು ಶ್ರೀ ಕೃಷ್ಣನು ತೋರಿಸುತ್ತಾನೆ :—

(18) **ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯತ್ಯಸಂಶಯಂ ।**
—(8. 7.)

ನನ್ನಲ್ಲಿಯೇ ಇಡಲ್ಪಟ್ಟ ಮನಸ್ಸುಳ್ಳ ಜ್ಞಾನಿಯು ಸಂಶಯವಿಲ್ಲದೆ ನನ್ನನ್ನೇ **ಹೊಂದುವನು.**

(19) **ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ।**
—(8. 8.)

( ವಿಷಯಗಳಲ್ಲಿ ಸಂಚಾರರಹಿತವಾದ ಅನನ್ಯಮನಸ್ಕನಾದ ಯೋಗಿಯು ) ಪರಮಾತ್ಮನನ್ನು ಧ್ಯಾನ ಮಾಡುವವನಾಗಿ ಕ್ರೀಡಾದಿಗುಣವಿಶಿಷ್ಟನಾದ ಪರಮ ಪುರುಷನನ್ನು **ಹೊಂದುತ್ತಾನೆ.**

(20) **....ಸ ತಂ ಪರಂ ಪುರುಷಮುಪೈತಿದಿವ್ಯಂ ॥** —(8. 10.)

ಪೂರ್ವೋಕ್ತಜ್ಞಾನಿಯು ದಿವ್ಯನಾದ ಪರಮಪುರುಷನನ್ನು **ಹೊಂದುತ್ತಾನೆ.**

(21) **........ವಿಶಂತಿ ಯದ್ಯತಯೋ ವೀತರಾಗಾಃ ।** —(8. 11.)

ಕಾಮಾದಿರಹಿತರಾದ ಜ್ಞಾನಿಗಳು (ಮುಕ್ತಿಯಲ್ಲಿ) ಯಾವ ಪರಮಾತ್ಮನನ್ನು **ಪ್ರವೇಶಿಸುತ್ತಾರೆಯೋ** ಅಂಥ (ನನ್ನ) ಸ್ವರೂಪವನ್ನು ಹೇಳುತ್ತೇನೆ.

(22) **........ಸ ಯಾತಿ ಪರಮಾಂ ಗತಿಂ ।** —(8. 13.)

( ಪ್ರಣವವನ್ನು ಜಪಿಸುತ್ತಾ ನನ್ನನ್ನು ಧ್ಯಾನ ಮಾಡಿ ದೇಹ ಬಿಡುವ ಯೋಗಿಯು) ಅತ್ಯುತ್ತಮವಾದ ಗತಿಯನ್ನು ( ಮುಕ್ತಿಯನ್ನು ) **ಹೊಂದುತ್ತಾನೆ.**

ಮುಕ್ತಿಯು ಜನನಮರಣರಹಿತವಾದ, ಸುಖಾನುಭವರೂಪವಾದ ಪರಮಾತ್ಮನಿಂದ ಭಿನ್ನವಾಗಿ ಪರಮಾತ್ಮಾಧೀನವಾದ, ನಿತ್ಯವಾದ ಸ್ಥಿತಿಯೆಂದು ಸ್ಪಷ್ಟವಾಗಿ ಗೀತೆಯಲ್ಲಿ ಇದೇ ಅಧ್ಯಾಯದ ಹದಿನೈದನೆಯ ಶ್ಲೋಕದಿಂದ ನಿಶ್ಚಿತವಾಗುವುದು—

(23) **ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಂ ।**
**ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥**
—(8. 15.)

ಜ್ಞಾನಿಗಳು ನನ್ನನ್ನು ಹೊಂದಿ ಪರಮ ಸಂಸಿದ್ಧಿ ( ಮುಕ್ತಿ ) ಯನ್ನು **ಪಡೆದವರಾಗಿ** ದುಃಖಕ್ಕೆ ಆಶ್ರಯವಾದ ಅನಿತ್ಯವಾದ ಪುನರ್ಜನ್ಮವನ್ನು ಹೊಂದುವದಿಲ್ಲ.

ಇದರಿಂದ 1. ನನ್ನನ್ನು ( ಶ್ರೀ ಕೃಷ್ಣನನ್ನು ) ಹೊಂದುವುದೇ **ಪರಮ** ಸಂಸಿದ್ಧಿಯು; 2. ಅದಕ್ಕಿಂತ ಭಿನ್ನವಾದ ನಿರ್ಗುಣಬ್ರಹ್ಮನ ಪ್ರಾಪ್ತಿಯಲ್ಲವು; 3. ಅದು ಶಾಶ್ವತವಾದ ಮತ್ತು ದುಃಖಸಂಪರ್ಕರಹಿತವಾದ ಸ್ಥಾನವು; 4. ಅಲ್ಲಿಂದ ಜನನಮರಣರೂಪಸಂಸಾರಕ್ಕೆ ಪುನರಾವೃತ್ತಿಯು ಇಲ್ಲವು; 5. ಮತ್ತು "ಗತಾಃ" "ನಾಪ್ನುವಂತಿ" ಎಂಬ ಬಹುವಚನಾಂತ ಶಬ್ದಗಳ ಪ್ರಯೋಗದಿಂದ ಮುಕ್ತಿಯಲ್ಲೂ ಪರಸ್ಪರ ಭಿನ್ನರಾಗಿ ಸಂಸಾರಕ್ಕೆ ಪುನಃ ಬರದಿರುವ ಚೇತನರು ಅನೇಕರಿರುವರು ಎಂದೂ ಸಿದ್ಧವಾಗುವದು. ಇಷ್ಟು ಪ್ರಮೇಯವೂ ಇನ್ನೂ ಸ್ಪಷ್ಟವಾಗಿ ಹದಿನಾಲ್ಕನೆಯ ಅಧ್ಯಾಯದ ಶ್ರೀ ಕೃಷ್ಣನ ವಾಕ್ಯದಿಂದ ನಿಶ್ಚಿತವಾಗುವದು.—

(24) **ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯಂತೇ ಪ್ರಳಯೇ ನ ವ್ಯಥಂತಿ ಚ ॥**
—(14. 2.)

ನನ್ನಿಂದ ಉಪದಿಷ್ಟವಾದ ತತ್ವಜ್ಞಾನವನ್ನು ಆಶ್ರಯಿಸಿ, ನನ್ನ ಸಾಧರ್ಮ್ಯವನ್ನು (ಸಾರೂಪ್ಯಮುಕ್ತಿಯನ್ನು) ಹೊಂದಿದವರಾಗಿ ಸೃಷ್ಟಿಕಾಲದಲ್ಲಿ ಹುಟ್ಟುವದಿಲ್ಲ; ಪ್ರಳಯಕಾಲದಲ್ಲಿಯೂ ದೇಹನಾಶದಿಂದ ವ್ಯಥೆಯನ್ನು ಹೊಂದುವದಿಲ್ಲ.

ಈ ಶ್ಲೋಕದಲ್ಲಿ ಶ್ರೀಕೃಷ್ಣನು ನಾನೇ ಆಗಿ ಎಂದು ಹೇಳದೇ ನನ್ನ ಸಮಾನಧರ್ಮವನ್ನು ಹೊಂದಿದವರಾಗಿ ಎಂದು ಹೇಳಿರುವದರಿಂದ ಮುಕ್ತಿಯಲ್ಲಿ ಭೇದವು ಸಿದ್ಧವಾಯಿತು. ಹಾಗಾದರೆ ಸರ್ವಸಾಮ್ಯವು ಮುಕ್ತರಿಗೆ ಬರಬಹುದೆಂಬ ಶಂಕೆಯನ್ನು ಪರಿಹರಿಸುವದಕ್ಕಾಗಿ ತಾನು ಹೇಳಿದ ಸಾಧರ್ಮ್ಯವು ಯಾವ ವಿಷಯದಲ್ಲಿ ಎಂಬುದನ್ನು " ಸರ್ಗೇಽಪಿ ನೋಪಜಾಯಂತೇ ಪ್ರಳಯೇ ನ ವ್ಯಥಂತಿ ಚ" ಎಂದು ಉತ್ತರಾರ್ಧದಲ್ಲಿ ವಿವರಿಸಿರುತ್ತಾನೆ. ಸೃಷ್ಟಿಕಾಲದಲ್ಲಿ ಜನನಾಭಾವ, ಪ್ರಳಯಕಾಲದಲ್ಲಿ ಮರಣಾಭಾವ, ಮತ್ತು ವ್ಯಥಾಭಾವ (ದುಃಖರಾಹಿತ್ಯ) ಇಷ್ಟು ವಿಷಯಗಳಲ್ಲಿ ಸಾಮ್ಯವುಂಟು. ಮತ್ತು ಸಾಧರ್ಮ್ಯಮಾಗತಾಃ ಎಂಬ ಬಹುವಚನಪ್ರಯೋಗದಿಂದಲೂ ಪರಮಾತ್ಮನನ್ನು ಹೊಂದಿ ನಿರ್ದುಃಖರಾದ ಅನೇಕ ಮುಕ್ತರಿರುವರು ಎಂದು ಸಿದ್ಧವಾಗುವದು. ಎಂಟನೇಯ ಅಧ್ಯಾಯದಲ್ಲಿಯೂ ಇನ್ನೂ ಅನೇಕ ಇಂತಹ ವಚನಗಳು ಇರುತ್ತವೆ.

(25) **ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ।**
—(8. 16.)

ಹೇ ಕೌಂತೇಯ ! ನನ್ನನ್ನು ಹೊಂದಿದವನಿಗೆ (ಮುಕ್ತನಿಗೆ) ಪುನರ್ಜನ್ಮವು ಇರುವದಿಲ್ಲ.

(26) **ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ** —(8. 21.)

ಯಾರನ್ನು ಹೊಂದಿದಮೇಲೆ (ಸಂಸಾರಕ್ಕೆ) ಪುನರಾವೃತ್ತಿ ಇಲ್ಲವೋ ಅದು ನನ್ನ ಸ್ವರೂಪವು; ಅಥವಾ ಅದು ನನ್ನ ಲೋಕವು.

(27) **ಯೋಗೀ ಪರಂ ಸ್ಥಾನಮುಪೈತಿ ಚಾದ್ಯಂ॥**—(8. 28.)

ಜ್ಞಾನಿಯು ಸನಾತನವಾದ ಅತ್ಯುತ್ತಮವಾದ ಸ್ಥಾನವನ್ನು (ಮುಕ್ತಿಯನ್ನು) **ಹೊಂದುತ್ತಾನೆ.**

(28) **ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮು ಪೈಷ್ಯತಿ ॥**—(9. 28.)

ಕರ್ಮಫಲಗಳನ್ನು ನನ್ನಲ್ಲಿ ಸಮರ್ಪಿಸಿ, ವಿಹಿತಾನುಷ್ಠಾನದಲ್ಲಿ ಮನಸ್ಸುಳ್ಳ ಜ್ಞಾನಿಯು ಕರ್ಮಬಂಧದಿಂದ ಅತ್ಯಂತ ವಿಮುಕ್ತನಾಗಿ ನನ್ನನ್ನು **ಹೊಂದುತ್ತಾನೆ.** ಇದರಿಂದಲೂ ಶ್ರೀಕೃಷ್ಣನನ್ನು ಹೊಂದುವದೇ ಮುಕ್ತಿಯೆಂದು ಸಿದ್ಧವಾಗುವದು.

(29) **ಜ್ಞಾತುಂ ದ್ರಷ್ಟುಂ ಚ ತತ್ವೇನ ಪ್ರವೇಷ್ಟುಂ ಚ ಪರಂತಪ!** —(11 55.)

ಭಕ್ತಿಯಿಂದಲೇ ನನ್ನನ್ನು ( ಶ್ರೀಕೃಷ್ಣನನ್ನು ) ತಿಳಿಯುವದಕ್ಕೂ ನೋಡುವದಕ್ಕೂ, ನಂತರ **ಪ್ರವೇಶಿಸುವದಕ್ಕೂ,** ( ಮುಕ್ತನಾಗುವದಕ್ಕೂ ) ಸಾಧ್ಯವಾಗುವದು. ಇದರಿಂದ ಭಗವಂತನಲ್ಲಿ ಪ್ರವೇಶವೇ ಮುಕ್ತಿಯೆಂದು ಸಿದ್ಧವಾಗುವದು.

(30) **ನಿರ್ವೈರಃ ಸರ್ವಭೂತೇಷು ಯಸ್ಸಮಾಮೇತಿ ಪಾಂಡವ!** —(11. 55.)

ನನ್ನ ಭಕ್ತನಾಗಿ, ಜ್ಞಾನಿಯಾಗಿ, ಸರ್ವ ಪ್ರಾಣಿಗಳಲ್ಲಿಯೂ ದ್ವೇಷವರ್ಜಿತನಾದವನು ನನ್ನನ್ನು (ಶ್ರೀಕೃಷ್ಣನನ್ನು) **ಹೊಂದುತ್ತಾನೆ.**

(31) **ಸಮಂ ಪಶ್ಯನ್ ಹಿ ಸರ್ವತ್ರ....ತತೋ ಯಾತಿ ಪರಾಂ ಗತಿಂ!** —(13. 29).

ಸರ್ವತ್ರಸಮನೆಂದು ಭಗವಂತನನ್ನು (ಶ್ರೀಕೃಷ್ಣನನ್ನು) ತಿಳಿದ ಜ್ಞಾನಿಯು ಮುಕ್ತಿಯನ್ನು **ಹೊಂದುತ್ತಾನೆ.**

(32) **ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ।**
—(13. 31.)

ಪರಮಾತ್ಮನು ವಿಷಮಾಧಿಷ್ಠಾನಗಳಲ್ಲಿದ್ದರೂ ಸಮನು ಮತ್ತು ಅವನೇ ಸರ್ವಕರ್ತೃ ಸೃಷ್ಟಿಕರ್ತನು ಎಂದು ತಿಳಿದವನು ಪರಬ್ರಹ್ಮನನ್ನು **ಸಂಪದ್ಯತೇ*** ಎಂದರೆ ಹೊಂದುತ್ತಾನೆ.

(33) **ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ।**
—(14. 20.)

ತ್ರಿಗುಣಬಂಧದಿಂದ ರಹಿತನಾದವನು ಜನನ, ಮರಣ, ಜರಾ, ದುಃಖಗಳಿಂದ ವಿಮುಕ್ತನಾಗಿ ಮೋಕ್ಷವನ್ನು **ಹೊಂದುತ್ತಾನೆ.**

(34) **ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ।**
—(14. 26.)

ಜ್ಞಾನಿಯು ಗುಣತ್ರಯಗಳನ್ನು ಅತಿಕ್ರಮಿಸಿ, ಬ್ರಹ್ಮನಲ್ಲಿ ಉತ್ತಮಸ್ಥಿತಿ (ಮುಕ್ತಿ) ಯನ್ನು ಹೊಂದುವುದಕ್ಕೆ ಸಮರ್ಥನಾಗುವನು.

ಬ್ರಹ್ಮಭೂತಾಯ ಕಲ್ಪತೇ ಎಂದರೆ ಬ್ರಹ್ಮನೇ ಆಗುವುದಕ್ಕೆ ಸಮರ್ಥನಾಗುವನು ಎಂಬ ಅರ್ಥವು ಆಪಾತತಃ ತೋರುವುದು. ಆದರೆ "**ಬ್ರಹ್ಮಣೋಹಿ ಪ್ರತಿಷ್ಠಾಹಂ**" ಎಂಬ ಉತ್ತರ ಶ್ಲೋಕದಿಂದ, ಈ ಶ್ಲೋಕದ ಬ್ರಹ್ಮ ಶಬ್ದವು ಪರಬ್ರಹ್ಮನನ್ನು ಬೋಧಿಸಿದರೆ ಅಸಂಗತವಾಗುವುದರಿಂದ, ಲಕ್ಷ್ಮಿಯನ್ನು ಬೋಧಿಸುವುದೆಂದು ಸ್ಪಷ್ಟವಾಗುವದು. ಜ್ಞಾನಿಯು ಲಕ್ಷ್ಮಿಯನ್ನು ಹೊಂದಿದ ನಂತರ ನನ್ನನ್ನು ಹೊಂದುತ್ತಾನೆಂದರ್ಥವು. ಕಿಂಚ "ಮದ್ಭಾವಾಯೋಪಪದ್ಯತೇ" ಎಂಬ ಶ್ಲೋಕ ವ್ಯಾಖ್ಯಾನಾವಸರದಲ್ಲಿ ನಾವು ನಿರೂಪಿಸಿರುವಂತೆ ಬಾಧಿತವಾದ ಬ್ರಹ್ಮಭಾವವು ಜೀವನಿಗೆ ಬರಲಾರದು. ಹದಿನೈದನೆಯ ಅಧ್ಯಾಯದಲ್ಲಿ ಮುಕ್ತಿಯು ನಾಶರಹಿತವಾದ ಸ್ಥಾನದಲ್ಲಿ ಸ್ಥಿತಿಯೆಂದು ವ್ಯಕ್ತವಾಗಿರುವುದು.

(35) **ಯಸ್ಮಿನ್‌ಗತಾ ನ ನಿವರ್ತಂತಿ ಭೂಯಃ ।** —(15. 5.)

ಪರಬ್ರಹ್ಮನಲ್ಲಿ (ಶ್ರೀ ಕೃಷ್ಣನಲ್ಲಿ) ಪ್ರವಿಷ್ಟರಾದವರು ಪುನಃ ಸಂಸಾರಕ್ಕೆ ಹಿಂತಿರುಗಿ ಬರುವುದಿಲ್ಲ.

(36)....**ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ।** —(15. 5)

---

*ಬೃಹದಾರಣ್ಯಕೋಪನಿಷತ್ತಿನ ಶಂಕರಭಾಷ್ಯದಲ್ಲಿ ಹೀಗೆ ಬರೆದಿರುತ್ತಾರೆ:— "**ಸಂಪತ್ತಿಶ್ಚೇತ್ತದಾಪತ್ತಿರ್ನಸ್ಯಾತ್**" ಹೊಂದುವುದಾದರೆ ಅವನಾಗಲಾರನು ಎಂದು ಅರ್ಥವು. ಬ್ರಹ್ಮನನ್ನು ಸಂಪಾದಿಸುತ್ತಾನೆ (ಹೊಂದುತ್ತಾನೆ) ಎಂದು ಹೇಳಿದರೆ ಬ್ರಹ್ಮನು ಆಗಿರುತ್ತಾನೆ ಎಂದು ಹೇಳಲಾಗುವುದಿಲ್ಲ ಎಂದು ತಾತ್ಪರ್ಯವು. ಇಂಥ ಲೋಕಸಿದ್ಧ ನ್ಯಾಯಗಳನ್ನು ಒಪ್ಪಿಯೂ ಈ ವಾಕ್ಯಗಳೆಲ್ಲಾ ಅಭೇದಸಾಧಕವೆಂದು ಹೇಳುವುದು ಆಶ್ಚರ್ಯವು.

( ಕಾಮಾದಿರಹಿತನಾದ ) ಜ್ಞಾನಿಗಳು ನಾಶರಹಿತನಾದ ಭಗವಂತನನ್ನು ( ಶ್ರೀ ಕೃಷ್ಣನನ್ನು ) ಅಥವಾ ನಾಶರಹಿತವಾದ ( ವೈಕುಂಠಾದಿ ) **ಸ್ಥಾನವನ್ನು** ಹೊಂದುತ್ತಾರೆ.

**(37) ಯದ್ಗತ್ವಾ ನನಿವರ್ತಂತೇ ತದ್ಧಾಮ ಪರಮಂ ಮಮ ।**
—(15. 6.)

ಯಾವುದನ್ನು ಹೊಂದಿದ ಮೇಲೆ ಪುನಃ ಸಂಸಾರಬಂಧವನ್ನು ಹೊಂದುವುದಿಲ್ಲವೋ ಅಂಥಾದ್ದು ಪರಮೋತ್ತಮವಾದ ನನ್ನಸ್ವರೂಪವು ಅಥವಾ (ವೈಕುಂಠಾದಿ) ಸ್ಥಾನವು.

**(38) ಭಕ್ತ್ಯಾಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ವತಃ ।**
**ತತೋ ಮಾಂತತ್ವತೋ ಜ್ಞಾತ್ವಾ ವಿಶತೇ ತದನಂತರಂ ॥**
—(18. 55.)

ಭಕ್ತಿಯಿಂದ ನನ್ನನ್ನು ತಿಳಿದು, ಜ್ಞಾನಿಯಾಗಿ ನಂತರ ನನ್ನಲ್ಲಿ ( ಶ್ರೀಕೃಷ್ಣನಲ್ಲಿ ) **ಪ್ರವೇಶಿಸುತ್ತಾನೆ.**

**(39) ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ ।**
—(18. 56.)

ನನ್ನ **ಪ್ರಸಾದದಿಂದ** ನಿರ್ವಿಕಾರವಾದ ಮತ್ತು ಸರ್ವವಿಧವಾದ ನಾಶರಹಿತವಾದ ಸ್ಥಾನವನ್ನು ( ಅಥವಾ ನನ್ನ ರೂಪವನ್ನು ) ನನ್ನ ಭಕ್ತನು **ಪಡೆಯುತ್ತಾನೆ.** 1. **ಶಾಶ್ವತಂ** ಮತ್ತು **ಅವ್ಯಯಂ** ಎಂಬ ಎರಡು ವಿಶೇಷಣಗಳನ್ನು ಹಾಕಿರುವುದರಿಂದ ಈ ಮುಕ್ತಿಯು **ಪರಮುಕ್ತಿಯೇ** ಹೊರತು ಇನ್ನು **ಬೇರೆ** ಅವಾಂತರ ಸುಖಪ್ರದವಾದ ಸ್ಥಾನವಲ್ಲವು ಎಂದು ನಿಶ್ಚಿತವಾಗುವುದು. ಮತ್ತು 2. " **ಪದಂ ಅವಾಪ್ನೋತಿ** " ಎಂದರೆ ಸ್ಥಾನವನ್ನು ಪಡೆಯುತ್ತಾನೆ ಎಂದು ಹೇಳಿರುವುದರಿಂದ ಬ್ರಹ್ಮಭಾವದ ಅಭಿವ್ಯಕ್ತಿಯೇ ಮುಕ್ತಿಯಲ್ಲ; ಮತ್ತೇನೆಂದರೆ ಬ್ರಹ್ಮನಿಂದ ಭಿನ್ನವಾದ ಒಂದು ವಸ್ತುವೆಂದು ಸಿದ್ಧಿಸುವುದು. 3. " **ಮತ್ಪ್ರಸಾದಾತ್** " ಎಂದರೆ ನನ್ನ ಅನುಗ್ರಹದಿಂದ ಎಂದು ಹೇಳಿರುವದರಿಂದ ಪರಮಾತ್ಮನೇ ( ಶ್ರೀ ಕೃಷ್ಣನೇ ) ಮುಕ್ತಿಪ್ರದನು. ಆತನ ಪ್ರಸಾದಕ್ಕೆ ಪಾತ್ರನಾದ ಜೀವನು ಸರ್ವದಾ ಆವನ ಕಿಂಕರನೆಂದೂ ಸಿದ್ಧವಾಗುವುದು.

ಈ ರೀತಿಯಾಗಿ ಮುಕ್ತಿಯನ್ನು ವರ್ಣಿಸುವ ಸಕಲ ವಾಕ್ಯಗಳೂ ಜೀವಬ್ರಹ್ಮರ ಭೇದವನ್ನೇ ಉದ್ಘೋಷಿಸುತ್ತಿರುವುವು. ಮುಕ್ತಿಯು ಜೀವನಿಂದ ಸಾಧಾನಾನುಷ್ಠಾನಂತರ ಪ್ರಾಪ್ಸ್ಯಮಾನವಾದ " ಪರಮ ಸಂಸಿದ್ಧಿ " ಯೆಂದೂ, ಜೀವನಿಗೆ ಮುಕ್ತಿಯಲ್ಲ ಭಗವಂತನಲ್ಲಿ ಪ್ರವೇಶವೂ ಮತ್ತು ಶಾಶ್ವತಸ್ಥಾನದಲ್ಲಿ ವಾಸವೂ ಉಂಟೆಂದೂ; ಮತ್ತು ಸಾಕ್ಷಾಚ್ಛ್ರೀಕೃಷ್ಣನ ಅನುಗ್ರಹದಿಂದಲೇ

ಲಭ್ಯವಾಗುವದೆಂದೂ ಹೇಳಿರುವದರಿಂದ ಅದ್ವೈತಾದಿಮತಗಳಲ್ಲಿ ಹೇಳಿರುವ ನಿರ್ಗುಣಬ್ರಹ್ಮನಿಂದ ಸ್ವತಏವ ( ಮತ್ತೊಬ್ಬರ ಪ್ರಸಾದವನ್ನು ಅಪೇಕ್ಷಿಸದೇ ) ಏಕೀಭಾವವನ್ನು ಹೊಂದುವದಾಗಲೀ, ಉಪಾಧಿನಾಶಾನಂತರ ಪ್ರವೇಶಾದಿಗಳಿಲ್ಲದೆ, ಅತ್ಯಂತಾಭೇದ ಪ್ರಾಪ್ತವಾಗುವದಾಗಲೀ ಮುಕ್ತಿಯಿಲ್ಲವೆಂದು ಮುಕ್ತಿಪ್ರದನಾದ ವಾಸುದೇವನ ಮತವಾಗಿರುತ್ತದೆ.

ಜ್ಞಾನಿಯಾದ ಅರ್ಜುನನೂ ತನ್ನ ದಿವ್ಯದೃಷ್ಟಿಯಿಂದ ಭಗವಂತನ ಅದ್ಭುತ ಸ್ವರೂಪವನ್ನು ನೋಡಿದಾಗ "ದೇವಾನ್" "ಸುರಸಿದ್ಧಸಂಘಾನ್" ಎಂದರೆ ಅನೇಕ ದೇವತೆಗಳನ್ನು ಸುರರ ಮತ್ತು ಸಿದ್ಧಾದಿಗಳ ಸಮೂಹವನ್ನು ಪರಮಾತ್ಮನಿಂದ ಭಿನ್ನರಾಗಿ ಇರುವವನ್ನೇ ನೋಡಿರುವನು. ಪರಮಾತ್ಮನು ಎಲ್ಲಾ ಮನುಷ್ಯರಂತೆ ಒಬ್ಬ ಸಾಮಾನ್ಯನಾದ ಅಥವಾ ಸ್ವಲ್ಪ ಹೆಚ್ಚು ಪರಾಕ್ರಮವುಳ್ಳ ಒಬ್ಬ ವೀರನಿರಬಹುದೆಂಬ ಆತನ ಭ್ರಾಂತಿಯು ನಷ್ಟವಾಗಿ ಮಹಾಪುರುಷನಾದ ಶ್ರೀಕೃಷ್ಣನ ಸ್ವರೂಪವನ್ನು ತಿಳಿಯದೆ ಮಾಡಿದ ಅವಜ್ಞೆಯನ್ನು ಕ್ಷಮಿಸಬೇಕೆಂದು ಬೇಡಿಕೊಂಡಿರುತ್ತಾನೆ.

(40) **ಸಖೇತಿ ಮತ್ವಾ ಪ್ರಸಂಭಂಯದುಕ್ತಂ ಹೇಕೃಷ್ಣ ಹೇ ಯಾದವ ಹೇ ಸಖೇತಿ ।**
**ಅಜಾನತಾ ಮಹಿಮಾನಂ ತವೇದಂ ಮಯಾ ಪ್ರಮಾದಾತ್ಪ್ರಣ ಯೇನ ವಾಪಿ ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಂ ॥**—(11. 40-44)

ಹೇ ಸ್ವಾಮೀ ! ನಿನ್ನ **ಮಹಿಮೆಯನ್ನು** ತಿಳಿಯದೆ, ನಿನ್ನನ್ನು ಸಾಮಾನ್ಯ ಸ್ನೇಹಿತನೆಂದು ತಿಳಿದು ನಾನು ಪ್ರಮಾದದಿಂದಲೂ, ಕ್ವಚಿತ್ ಪ್ರೀತಿವಿಶೇಷದಿಂದಲೂ, ನಿನ್ನನ್ನು ಹೇ ಕೃಷ್ಣ ! ಹೇ ಯಾದವ ! ಎಲೈ ಮಿತ್ರನೇ ! ಇತ್ಯಾದಿ ರೀತಿಯಲ್ಲಿ ಕರೆದು ನಿನ್ನನ್ನು ಅವಜ್ಞೆಮಾಡಿರುವದನ್ನು ನೀನು ಕ್ಷಮಿಸು. ಹೇ ! ದೇವ ! ತಂದೆಯು ಪುತ್ರನು, ಮಿತ್ರನು ಮಿತ್ರನ ಅಪರಾಧವನ್ನೂ, ಪತಿಯು ಪತ್ನಿಯ ಅಪರಾಧವನ್ನೂ ಕ್ಷಮಿಸುವಂತೆ ನೀನು ನನ್ನ ಅಪರಾಧವನ್ನು ಸಹಿಸಿಕೊಳ್ಳಬೇಕು.

(41) **ನಮೋನಮಸ್ತೇಸ್ತು ಸಹಸ್ರಕೃತ್ವಃ ಪುನಶ್ಚ ಭೋಯೋಪಿ ನಮೋ ನಮಸ್ತೇ ॥** —(11. 39.)

ಹೇ ದೇವ ! ನಿನಗೆ ಅನಂತ ಪ್ರಣಾಮುಗಳನ್ನು ಮಾಡುತ್ತೇನೆ. ಮತ್ತೂ ಮತ್ತೂ ನಿನಗೆ ನಮಸ್ಕಾರವು.

ಜ್ಞಾನಿಯಾದ ಅರ್ಜುನನು ಜಗತ್ತನ್ನೂ, ಜೀವನನ್ನೂ, ಪರಬ್ರಹ್ಮನನ್ನೂ ಅವರುಗಳಿಗೆ ಪರಸ್ಪರ ಭೇದವನ್ನೂ ನೋಡಿರುವನು; **"ಮಹಿಮಾನಂತ ವೇದಂ"** ಎಂದು ಪರಮಾತ್ಮನ ಸೃಷ್ಟ್ಯಾದಿ ಕರ್ತೃತ್ವ, ನಿತ್ಯತ್ವ, ವಿಭುತ್ವ, ಅಚಿಂತ್ಯಶಕ್ತಿಯೇ ಮೊದಲಾದ ಅನೇಕ ಧರ್ಮಗಳನ್ನೂ ನೋಡಿರುವನು. ಅದ್ವೈತ ಮತದಲ್ಲಿ ಶುಕ್ತಿ ಎಂಬ ಅಧಿಷ್ಠಾನದಲ್ಲಿ ರಜತವು ಕಲ್ಪಿತವಾಗಿರುವಂತೆ ಈ ಯಾವತ್ತು ಪ್ರಪಂಚವೂ, ಜೀವಭಾವವೂ, ಸರ್ವಜ್ಞತ್ವಾದಿ ಈಶ್ವರನ ಗುಣಗಳೂ ಅಧಿಷ್ಠಾನವಾದ ನಿರ್ಗುಣಬ್ರಹ್ಮನಲ್ಲಿ ಕಲ್ಪಿತವಾಗಿರುವುವು; ಮತ್ತು ಪರೀಕ್ಷಾನಂತರ ಅಧಿಷ್ಠಾನವಾದ ಶುಕ್ತಿಯ ಸಮೀಚೀನ (ಶುಕ್ತಿತ್ವೇನ) ಜ್ಞಾನವು ಹುಟ್ಟಿದ ಮೇಲೆ ಕಲ್ಪಿತವಾದ ರಜತವು ಅದೃಶ್ಯವಾಗುವಂತೆ ಅಧಿಷ್ಠಾನವಾದ ಪರಬ್ರಹ್ಮನ ಜ್ಞಾನವು ಉತ್ಪನ್ನವಾದಾಗ ಕಲ್ಪಿತವಾದ ಪ್ರಪಂಚವೂ, ಜೀವಭಾವವೂ, ಪರಸ್ಪರ ಭೇದವೂ, ಸರ್ವಜ್ಞತ್ವ, ಸೃಷ್ಟಿಕರ್ತೃತ್ವಾದಿ ಭಗವನ್ಮಹಿಮೆಗಳೂ ಅದೃಶ್ಯವಾಗುವುವು. ಅವರ ಪ್ರಕ್ರಿಯೆಯು ಹೀಗಿರುವುದು.† ಪ್ರಕೃತದಲ್ಲಿ ಅಂಥ ಅಧಿಷ್ಠಾನವಾದ ಆದಿಮಧ್ಯಾಂತರಹಿತವಾದ ಅಪರಿಚ್ಛಿನ್ನವಾದ ಭಗವದ್ರೂಪವನ್ನು ಅರ್ಜುನನು ನೋಡಿದನು. ಆಗ ಆತನು ಪ್ರಪಂಚ, ಜೀವ, ಭಗವನ್ಮಹಿಮೆಗಳು, ಮತ್ತು ಪಂಚಭೇದಗಳನ್ನು ಸತ್ಯವಾಗಿಯೇ ಕಂಡನೇ ಹೊರತು ಅವು ಶುಕ್ತಿರಜತದಂತೆ ಅದೃಶ್ಯವಾಗಲಿಲ್ಲ. ಆದುದರಿಂದ ಪರಸ್ಪರ ಭಿನ್ನರಾದ ಮತ್ತು ಬ್ರಹ್ಮನಿಂದ ಅತ್ಯಂತ ಭಿನ್ನರಾದ ಅನೇಕ ಜೀವರುಗಳು ಉಂಟು ಎಂಬಲ್ಲಿ **ಅರ್ಜುನನ ದಿವ್ಯದೃಷ್ಟಿಯೂ** ಪ್ರಮಾಣವಾಗಿರುವುದು. ಇದೇ ಯುಕ್ತಿಯಿಂದ ಜ್ಞಾನಾನಂತರ ಉಪಾಧಿಗಳು ನಾಶವಾಗಿ ಜೀವೇಶ್ವರರಿಗೆ ಅತ್ಯಂತಾ ಭೇದವೇ ಪ್ರಕಟವಾಗುವುದೆಂದು ಹೇಳುವ ಭಾಸ್ಕರಮತವೂ, ಜೀವರುಗಳು ಬ್ರಹ್ಮನ

---

† ಕೇನೋಪನಿಷತ್ತಿನ ಶಾಂಕರಭಾಷ್ಯದ **ಆನಂದಗಿರಿಟೀಕಾ**ಕಾರರು ಹೀಗೆ ಬರೆದಿರುತ್ತಾರೆ– **ಲೋಕೇಶುಕ್ತ್ಯಾದಿತತ್ತ್ವಂ ವಿಜಾನತಾಂ ಯತೋಽಧ್ಯಸ್ತಂರೂಪ್ಯಾದ್ಯವಿಜ್ಞಾತಂ ಭವತಿ। ಅಜಾನತಾಮೇವತ್ವಧ್ಯಸ್ತಂ ವಿಜ್ಞಾತಂ ಭವತೀತಿ ಪ್ರಸಿದ್ಧಿಂ।** ಲೋಕದಲ್ಲಿ (ಶುಕ್ತಿ ಮೊದಲಾದವನ್ನು ನೋಡಿ ಇದು ರಜತವು ಇತ್ಯಾದಿ ರೀತಿಯಾಗಿ ಭ್ರಮವನ್ನು ಹೊಂದಿದವರಿಗೆ) ಶುಕ್ತ್ಯಾದಿ (ಅಧಿಷ್ಠಾನ) ಗಳನ್ನು ಯಥಾರ್ಥವಾಗಿ (ಶುಕ್ತಿತ್ವೇನ) ತಿಳಿದರೆ ಭ್ರಮದಲ್ಲಿ ತೋರುತ್ತಿದ್ದ ರಜತಾದಿಗಳು ಅದೃಶ್ಯವಾಗುವುವು. ಅಧಿಷ್ಠಾನದ ಯಥಾರ್ಥಜ್ಞಾನವಾದ ಮೇಲೆ ಆರೋಪಿತ ರಜತವು ಜ್ಞಾನಕ್ಕೆ ಗೋಚರವಾಗುವುದಿಲ್ಲ; ಎಂದು ಅರ್ಥವು ಇದೇ ರೀತಿಯಾಗಿ ಜಗತ್ತು, ಭೇದ, ಭಗವನ್ಮಹಿಮೆಗಳು ಇವೆಲ್ಲವೂ ಅಧಿಷ್ಠಾನಭೂತನಾದ ಬ್ರಹ್ಮನಲ್ಲಿ ಆರೋಪಿತವಾಗಿರುವುವು. ಅಧಿಷ್ಠಾನ ರೂಪನಾದ ನಿರ್ಗುಣಬ್ರಹ್ಮನ ಯಥಾರ್ಥಜ್ಞಾನವು ಆದರೆ ಜಗತ್ತು, ಭೇದ, ಭಗನ್ಮಹಿಮೆಗಳು ಇವೆಲ್ಲವೂ ಮಾಯವಾಗುವುವು (ಕಾಣುವುದೇ ಇಲ್ಲ) ಎಂದು ಹೇಳುತ್ತಾರೆ.

ಸತ್ಯಭೂತವಾದ ಅಲ್ಪಶಕ್ತಿಯುಳ್ಳ ಸಾಕ್ಷಾದಂಶಗಳೆಂದು ಹೇಳುವ ಅಪೂರ್ಣ ಬ್ರಹ್ಮವಾದರೂ ಕೃಷ್ಣಾರ್ಜುನರಿಗೆ ಪರಮವಿರುದ್ಧವೆಂದು ತಿಳಿಯಬೇಕು.

## ೮.

ಶ್ರೀ ಕೃಷ್ಣನು ಜೀವಪರಮಾತ್ಮರಿಗೆ ಭೇದಸಾಧಕವಾದ ಅನೇಕ ಯುಕ್ತಿಗಳನ್ನೂ ನಿರೂಪಿಸಿರುತ್ತಾನೆ. ಸರ್ವಜ್ಞತ್ವಾಲ್ಪಜ್ಞತ್ವವೇ ಮುಂತಾದ ವಿರುದ್ಧ ಧರ್ಮಗಳು ಅತ್ಯಂತ ಭೇದಕ್ಕೆ ಸಾಧಕಗಳೆಂದು ಶಂಕರಾಚಾರ್ಯರೂ ಒಪ್ಪಿರುತ್ತಾರೆ. ತಥಾಹಿ :—

**ಸರ್ವಸಿದ್ಧಾಂತಸಾರಸಂಗ್ರಹೇ—**
**ಕಥಮೇಕತ್ವ ಮನಯೋರ್ಘಟೇತೇ ವಿಪರೀತಯೋಃ ।**
**ವಿರುದ್ಧಧರ್ಮಾಕ್ರಾಂತತ್ವಾತ್ಪರಸ್ಪರ ವಿಲಕ್ಷಣೌ ।**
**ಜೀವೇಶೌವಹ್ನಿತುಹಿನಾವಿವ ಶಬ್ದಾರ್ಥತೋಪಿಚ ॥**

ವಿರುದ್ಧ ಲಕ್ಷಣಗಳುಳ್ಳ ಜೀವೇಶ್ವರರಿಗೆ ಐಕ್ಯವು ಹೇಗೆ ಸಂಭವಿಸುವುದು ? ವಿರುದ್ಧಧರ್ಮಗಳಿಂದ ಯುಕ್ತರಾದುದರಿಂದ ಜೀವೇಶ್ವರರು ಅಗ್ನಿಹಿಮಗಳಂತೆ ಪರಸ್ಪರ ವಿಲಕ್ಷಣರೇ.

ಆದರೆ ಈ ವಿರುದ್ಧಧರ್ಮಗಳು ಮಿಥ್ಯಾಭೂತವಾದುವುಗಳು (ಸುಳ್ಳು.) ಇವು ಬ್ರಹ್ಮಜ್ಞಾನವಾದ ನಂತರ (ಶುಕ್ತಿಜ್ಞಾನವನ್ನು ಹೊಂದಿದವನಿಗೆ ಕಲ್ಪಿತ ರಜತವು ತೋರದೇ ಇರುವಂತೆ) ಅದೃಶ್ಯವಾಗುವುದರಿಂದ ಜೀವಬ್ರಹ್ಮರುಗಳ ಐಕ್ಯವು ಸಿದ್ಧಿಸುವುದೆಂದು ಅವರ ಅಭಿಮಾನವು.* ಪರಮಾತ್ಮನ ಧರ್ಮಗಳು

---

***ನಿರ್ದೋಷ ಶ್ರುತಿ ಸಾಕ್ಷಿಭ್ಯಾಂ ಪ್ರಮಿತೇ ಬ್ರಹ್ಮಜೀವಯೋಃ ।**
**ಗುಣಪೂರ್ತ್ಯಲ್ಪಗುಣತೇ ಮಿಥ್ಯೇತಿಚನಯುಜ್ಯತೇ ॥**

ಅಪೌರುಷೇಯವಾದ ನಿರ್ದುಷ್ಟ **ಅಥರ್ವಶಿರಶ್ರುತಿಯು " ಅತಃಕಸ್ಮಾದುಚ್ಯತೇ ಪರಂ ಬ್ರಹ್ಮೇತಿ ? ಯಸ್ಮಾದುಚ್ಚಾರ್ಯಮಾಣ ಏವ ಬೃಹತಿ, ಬೃಹಯತಿ, ತಸ್ಮಾದುಚ್ಯತೇ ಪರಂ ಬ್ರಹ್ಮೇತಿ "** ಎಂದು ಹೇಳಿರುವುದು. ಅರ್ಥವು :— ಪರಬ್ರಹ್ಮನು ಬ್ರಹ್ಮನೆಂದು ಏತಕ್ಕೆ ಕರೆಯಲ್ಪಡುವನು ? ಯಾವ ಕಾರಣದಿಂದ ತಾನು ಪರಿಪೂರ್ಣನಾಗಿರುವನೋ ಮತ್ತು ಸಕಲವನ್ನೂ ಪೂರ್ಣವಾಗಿ ವ್ಯಾಪಿಸಿಕೊಂಡೇ ಇರುವನೋ ಅದರಿಂದ ಪರಬ್ರಹ್ಮನೆನಿಸುವನು. **"ಬೃಹತ್ವಂ ಬ್ರಹ್ಮಪದಪ್ರವೃತ್ತಿನಿಮಿತ್ತಂ"** ಎಂದು ಅದ್ವೈತಿಗಳೂ ಒಪ್ಪಿರುತ್ತಾರೆ. ಆದರೆ ಈ ಪೂರ್ಣತ್ವವನ್ನು "ಗುಣಗಳಿಂದ ಪರಿಪೂರ್ತಿಯನ್ನು ಹೊಂದಿರುವುದು " ಎಂದು ಅರ್ಥ ಮಾಡದೆ **ವಸ್ತುಭೇದರಹಿತವಾಗಿರುವುದು** ಎಂದು ಅರ್ಥ ಮಾಡಿರುವರು. ಈ ಅರ್ಥಕ್ಕೆ ಸಹಾಯಕವಾದ ಎಂದು ಶ್ರುತಿಯೂ ಇಲ್ಲ. ಮತ್ತು **" ಅಥಕಸ್ಮಾದುಚ್ಯತೇ ಬ್ರಹ್ಮ........ಬೃಹಂತೋಹ್ಯಸ್ಮಿನ್ಗುಣಾಃ "** ಎಂಬ

" **ಅವ್ಯಯಾತ್ಮಾ** " ಇತ್ಯಾದಿ ಶ್ರೀ ಕೃಷ್ಣನ ವಾಕ್ಯಗಳಿಂದಲೂ, " **ಅನಂತ ವೀರ್ಯಾಮಿತವಿಕ್ರಮಸ್ತ್ವಂ** " ಇತ್ಯಾದಿ ಅರ್ಜುನನ ದಿವ್ಯಜ್ಞಾನೋತ್ಪತ್ತಿಯಾದ ನಂತರದಲ್ಲಿ ಮಾಡಿದ ಸ್ತುತಿಯಿಂದಲೂ ಮಿಥ್ಯಾಭೂತವಲ್ಲವೆಂದು ಸಿದ್ಧಿಸುವುದು. ಜೀವನೂ **ನಿತ್ಯನಾಗಿ ಮುಕ್ತಿಯಲ್ಲಿ** ಹರಿಪ್ರಸಾದಕಾಂಕ್ಷಿಯಾಗಿ ಇರುವುದರಿಂದ ಜೀವನ ಧರ್ಮಗಳೂ ಮಿಥ್ಯಾಭೂತವಾಗಲಾರವು. ಆದುದರಿಂದ ಜೀವಪರಮಾತ್ಮರಿಗೆ ವಿರುದ್ಧಧರ್ಮಗಳನ್ನು ಶ್ರೀ ಕೃಷ್ಣನ ವಾಕ್ಯಗಳಿಂದ ಪ್ರದರ್ಶನೆ ಮಾಡಿದರೆ, ಅದ್ವೈತ ಮತದಲ್ಲಿ ಹೇಳಿರುವ ರೀತಿಯಲ್ಲಿ ಜೀವಬ್ರಹ್ಮರ ಐಕ್ಯವು ಶ್ರೀ ಕೃಷ್ಣನಿಗೆ ಸಮ್ಮತವಲ್ಲ; ಆದುದರಿಂದಲೇ ಸಕಲ ಶಾಸ್ತ್ರಗಳಿಂದಲೂ ಬಹಿರ್ಭೂತವಾದುದೆಂದು ನಿಶ್ಚಿತವಾಗುವುದು.

ವಿರುದ್ಧಧರ್ಮಗಳು ನಾಶ ಹೊಂದಿ ಐಕ್ಯವು ಪ್ರಕಟವಾಗುವುದೆಂದು ಹೇಳುವ ಭಾಸ್ಕರ ಮತದವರೂ ಕೂಡ ವಿರುದ್ಧ ಧರ್ಮಗಳು ಭೇದಸಾಧಕವೆಂದು ಅಂಗೀಕರಿಸಿರುವರು. ನಿತ್ಯರಾದ ಜೀವೇಶ್ವರರ ಧರ್ಮಗಳು ನಾಶರಹಿತವೆಂದು ನಾವು ತೋರಿಸಿರುತ್ತೇವೆ. ಆದುದರಿಂದ ಶ್ರೀ ಕೃಷ್ಣನ ವಾಕ್ಯಗಳಿಂದ ಜೀವಬ್ರಹ್ಮರ ವಿರುದ್ಧ ಧರ್ಮಗಳನ್ನು ಪ್ರತಿಪಾದನೆ ಮಾಡಿ ತೋರಿಸುವುದರಿಂದ ಇವರ ಮತವೂ ಅಪ್ರಾಮಾಣಿಕವೆಂದು ನಿಶ್ಚಿತವಾಗುವುದು. ಆದುದರಿಂದ, ವಿಷ್ಣು ಸರ್ವೋತ್ತಮತ್ವ ಸ್ಥಾಪನೆಯಲ್ಲಿ ನಮ್ಮಿಂದ ಪ್ರದರ್ಶಿತವಾದ ಜೀವೇಶ್ವರರ ವಿರುದ್ಧ ಧರ್ಮಗಳನ್ನು ಬಹು ಸಂಕ್ಷೇಪವಾಗಿ ವಿವರಿಸುತ್ತೇವೆ.

ತಥಾಹಿ—

## 1. ಸರ್ವಜ್ಞತ್ವ ಅಲ್ಪಜ್ಞತ್ವಗಳು.

**(1) ತಾನ್ಯಹಂವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ।**

—(4. 5.)

---

ಮತ್ತೊಂದು ಶ್ರುತಿಯು " **ಅಥಕಸ್ಮಾದುಚ್ಯತೇ ಬ್ರಹ್ಮ.... ಬೃಹಂತೋಹ್ಯಸ್ಮಿನ್ ಧರ್ಮಾಃ** " ಎಂಬ ಅದ್ವೈತಸಿದ್ಧಿಕಾರರು ಉದಾಹರಿಸಿರುವ ಶ್ರುತಿಯೂ, " ಬ್ರಹ್ಮನೆಂದು ಬ್ರಹ್ಮನಿಗೆ ಯಾಕೆ ಹೆಸರು ? ಆತನಲ್ಲಿ **ಗುಣಗಳು** ಪರಿಪೂರ್ಣವಾಗಿರುವುದರಿಂದ " ಎಂದು ಹೇಳುವುದರಿಂದ **ಗುಣಪೂರ್ಣ**ನಾದ-ದರಿಂದಲೇ ಪರಬ್ರಹ್ಮನಿಗೆ ಬ್ರಹ್ಮನೆಂದು ಹೆಸರು. ವಸ್ತು ಭೇದರಹಿತನಾದುದರಿಂದಲ್ಲ ಎಂದು ಸಿದ್ಧವಾಗುವುದು. ಈ ರೀತಿಯಾಗಿ ನಿರ್ದುಷ್ಟವಾದ ಶ್ರುತಿಯು ಬ್ರಹ್ಮನು ಗುಣಪೂರ್ಣನೆಂದು ಹೇಳುವದು. ನಿರ್ದುಷ್ಟವಾದ ಸಾಕ್ಷಿ ಪ್ರತ್ಯಕ್ಷವು ನಾನು ಪರಿಪೂರ್ಣನಾದ ಬ್ರಹ್ಮತ ಎಂದು ಸದಾ ಹೇಳುತ್ತಲೇ ಇರುವುದು. ಈ ರೀತಿಯಲ್ಲಿ ನಿರ್ದೋಷವಾದ ವೇದದಿಂದ ಪ್ರಮಿತವಾದ ಬ್ರಹ್ಮನ ಪೂರ್ಣತ್ವವಾಗಲೀ, ನಿರ್ದೋಷವಾದ ಸಾಕ್ಷಿಗೋಚರವಾದ ಜೀವನ ಅಪೂರ್ಣತ್ವ, ಅಸ್ವಾತಂತ್ರ್ಯಾದಿಗಳಾಗಲೀ ಮಿಥ್ಯಾ ಎಂದು ಹೇಳುವುದು ಅನುಚಿತವು. ದೋಷಮೂಲಕವಾದ ಜ್ಞಾನಕ್ಕೆ ವಿಷಯವಾಗುವ ಶುಕ್ತಿರಜತವು ಮಿಥ್ಯಾ ಆಗಬಹುದು. ದೋಷರಹಿತ ಕರಣಮೂಲಕವಾದ ಜ್ಞಾನಕ್ಕೆ ವಿಷಯಗಳಾದ ಪೂರ್ಣತ್ವ ಅಲ್ಪತ್ವಗಳು ಹೇಗೆ ತಾನೇ ಸುಳ್ಳೆನಿಸುವವು ?

(2) ವೇದಾಹಂಸಮತೀತಾನಿ ವರ್ತಮಾನಾನಿ ಚಾರ್ಜುನ ।
ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥
—(7. 26.)

ಇವೇ ಮೊದಲಾದ ವಾಕ್ಯಗಳಿಂದ ಅರ್ಜುನೋಪಲಕ್ಷಿತರಾದ ಸರ್ವ ಜೀವರೂ ಅಲ್ಪಜ್ಞರೆಂದೂ ಶ್ರೀ ಕೃಷ್ಣನು ಸರ್ವಜ್ಞನೆಂದೂ ಸಿದ್ಧವಾಗುವುದು.

## 2. ಪೂರ್ಣತ್ವ-ದುಃಖಿಗಳು.

(1) ನಾನವಾಪ್ತಮವಾಪ್ತವ್ಯಂ.... । —(3. 22.)

(2) ಪುರುಷಃ ಪ್ರಕೃತಿಸ್ಥೋಹಿಭುಂಕ್ತೇಪ್ರಕೃತಿಜಾನ್‌ಗುಣಾನ್ ।
—(13. 22.)

## 3. ಸಂಸಾರತಾರಕತ್ವ-ಬದ್ಧತ್ವಗಳು.

(1) ಮತ್ಪ್ರಸಾದಾತ್ತರಿಷ್ಯಸಿ.... । —(3. 22.)

(2) ಮತ್ಪ್ರಸಾದಾತ್ಪರಾಂ ಶಾಂತಿಂಸ್ಥಾನಂ ಪ್ರಾಪ್ಸ್ಯಸಿಶಾಶ್ವತಂ ।
—(18. 62.)

**4. ಗಮ್ಯಗಂತೃಭಾವವು.** ಪರಮಾತ್ಮನು ಮುಕ್ತಿಯಲ್ಲಿ ಜೀವನಿಂದ ಗಮ್ಯನು. ಜೀವನು ಪ್ರವೇಶ ಮಾಡುವನು.

ತತೋಮಾಂತತ್ವತೋ ಜ್ಞಾತ್ವಾ ವಿಶತೇ ತದನಂತರಂ ।
—(18. 55.)

**ಆಧಾರಾಧೇಯಭಾವವು.** ಪರಮಾತ್ಮನು ಆಧಾರನು. ಜೀವನು ಆಧೇಯನು ಎಂದು ಶ್ರೀ ಕೃಷ್ಣನು ಹೇಳುತ್ತಾನೆ :—

ಮಯಿಸರ್ವಮಿದಂ ಪ್ರೋತಂ ಸೂತ್ರೇಮಣಿಗಣಾಇವ । —(7. 7)

## 6. ನಿಯಮ್ಯನಿಯಾಮಕಭಾವವು.

(1) ಮತ್ತಃ ಸರ್ವಂಪ್ರವರ್ತತೇ । —(10. 8.)

(2) ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ ।
ಭ್ರಾಮಯನ್ಸರ್ವ ಭೂತಾನಿ ಯಂತ್ರಾರೂಢಾನಿ
ಮಾಯಯಾ ॥ —(18. 61.)

**7. ಸೃಜ್ಯಸ್ರಷ್ಟೃಭಾವವು.** ಪರಮಾತ್ಮನು ದೇಹಸಂಬಂಧವನ್ನು ಕೊಟ್ಟು ಜೀವನನ್ನು ಸೃಷ್ಟಿಸುವವನು. ಜೀವನು ಸೃಜ್ಯನು.

**ಅಹಂಸರ್ವಸ್ಯಪ್ರಭವಃ । —(10. 8.)**

## 8. ಸ್ವಾಮಿಭೃತ್ಯಭಾವವು.

**ದೇವ ದೇವ ಜಗತ್ಪತೇ । —(10. 15.)**

## 9. ವಿಭುತ್ವ-ಅಣುತ್ವವು.

**ಆದಿದೇವಮಜಂ ವಿಭುಂ । —(10. 12.)**

**ಸರ್ವಂಸಮಾಪ್ನೋಷಿ ತತೋಽಸಿ ಸರ್ವಃ । —(11. 40.)**

ಇತ್ಯಾದಿ ವಾಕ್ಯಗಳಿಂದ ಪರಮಾತ್ಮನು ವ್ಯಾಪ್ತನೆಂದು ಸಿದ್ಧವಾಗುವುದು. ಜೀವನು ಅಣುವೆಂಬುದನ್ನು ಶ್ರೀ ಕೃಷ್ಣನು ಎರಡನೆಯ ಅಧ್ಯಾಯದಲ್ಲಿ ಹೇಳಿರುತ್ತಾನೆ.

ಮತ್ತು

**ತಥಾ ಶರೀರಾಣಿ ವಿಹಾಯ ಜೀರ್ಣಾನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ —(2. 22.)**

ಇತ್ಯಾದಿ ಶ್ಲೋಕಗಳಲ್ಲಿ ಒಂದು ದೇಹದಿಂದ ಮತ್ತೊಂದು ದೇಹವನ್ನು ಕುರಿತು ಜೀವನು ಪ್ರಯಾಣ ಮಾಡುತ್ತಿರುವನೆಂದು ಶ್ರೀ ಕೃಷ್ಣನು ಹೇಳಿರುವುದರಿಂದ, ಜೀವನು ವ್ಯಾಪ್ತನಲ್ಲವೆಂಬುದು ಸಿದ್ಧವಾಗುವುದು. ಎಂಟನೆಯ ಅಧ್ಯಾಯದಲ್ಲಿ " ಉತ್ಕ್ರಾಂತಿಗತ್ಯಾಗತೀನಾಂ " ಇತ್ಯಾದಿ ಸೂತ್ರೋಕ್ತಯುಕ್ತಿಯನ್ನು ಸೂಚಿಸುವಂಥ, ಜ್ಞಾನಿಯ ಉತ್ಕ್ರಮಣ ಪ್ರಕಾರವನ್ನು ನಿರೂಪಿಸಿರುತ್ತಾನೆ. ಬ್ರಹ್ಮರಂಧ್ರದ ದ್ವಾರಾ ಉತ್ಕ್ರಮಣ ಹೊಂದುವ ಯೋಗಜೀವನು ಅಣುವಾಗಿರಬೇಕೆಂದು ಸುಲಭವಾಗಿ ನಿಶ್ಚಯಿಸಬಹುದು. ಯದ್ಯಪಿ ಪರಮಾತ್ಮನೂ ಅಣುವು; ಆದರೆ ಜೀವನಂತೆ ಕೇವಲ ಅಣುಮಾತ್ರನಲ್ಲ. "ಅಣೋರಣೀಯಾನ್ ಮಹತೋ ಮಹೀಯಾನ್ " ಇತ್ಯಾದಿ ಶ್ರುತ್ಯುಕ್ತರೀತ್ಯಾ ಶ್ರೀ ಹರಿಯು ಸೂಕ್ಷ್ಮಗಳಿಗಿಂತ ಸೂಕ್ಷ್ಮನೂ, ಸ್ಥೂಲ ಪದಾರ್ಥಗಳಿಗಿಂತ ಸ್ಥೂಲನಾಗಿಯೂ ಇರುವನು. ವಿಭುವಾದ ನಾರಾಯಣನೇ ತನ್ನ ಅಚಿಂತ್ಯಶಕ್ತಿಯಿಂದ ಅಣುವಾದ ಜೀವನಲ್ಲಿ ಅಣುರೂಪದಿಂದ ಇರುವನು; ಆದರೆ ಅವನ ವ್ಯಾಪ್ತಿಯು ಅಷ್ಟೇ ಅಲ್ಲ. ಜೀವನು ಸರ್ವದಾ ಅಣುವು.

**10-13.** ಮತ್ತೂ ನಾಲ್ಕು ಯುಕ್ತಿಗಳಿಂದ ಜೀವಬ್ರಹ್ಮರಿಗೆ ಅತ್ಯಂತ ಭೇದವೇ ಹೊರತು ಅದ್ವೈತಿಗಳು ಹೇಳುವಂತೆ ಅಭೇದವು ಇರುವುದಿಲ್ಲವೆಂದು ಶ್ರೀ ಕೃಷ್ಣನು ಎಂಟನೆಯದೇ ಮುಂತಾದ ಅಧ್ಯಾಯಗಳಲ್ಲಿ ತೋರಿಸಿರುತ್ತಾನೆ. ಅದ್ವೈತಿಗಳು ಹೇಳುವಂತೆ ಬ್ರಹ್ಮೈಕ್ಯಜ್ಞಾನದಿಂದ ಅವಿದ್ಯಾನಿವೃತ್ತಿಯುಂಟಾಗಿ ತತ್ಕಾಲದಲ್ಲಿ ದೇಹಬಂಧಾದಿಗಳು ಕಳಚಿಹೋಗಿ ಬ್ರಹ್ಮೈಕ್ಯವು ಪ್ರಾಪ್ತವಾಗುವು

ದಾದರೆ, ಬ್ರಹ್ಮಜ್ಞಾನಿಯ **ಉತ್ಕ್ರಮಣ ಪ್ರಕಾರ,** ಪುನರಾವೃತ್ತಿರಹಿತರಾಗುವವರು ಹೋಗಬೇಕಾದ ಉತ್ತರಾಯಣ **ಮಾರ್ಗಕಥನ,** ಮತ್ತು ಹದಿನೈದನೆಯ ಅಧ್ಯಾಯದಲ್ಲಿ, **ಅವರು** ಹೊಂದುವ **ನಿತ್ಯಸ್ಥಾನದ ವರ್ಣನೆಯು,** ಮತ್ತು **ಕರ್ಮವಿಧಿಗಳು** ಈ ನಾಲ್ಕು ವಿಷಯಗಳನ್ನೂ ಶ್ರೀ ಕೃಷ್ಣನು ಬೋಧಿಸಿದುದು ಅಸಂಗತವೇ ಆಗಬೇಕಾಗುವುದು. **"ವೇದವಿದೇವಚಾಹಂ"** ಎಂದು ಶ್ರೀ ಕೃಷ್ಣನೇ ಹೇಳಿರುವುದರಿಂದ ವೇದವೇತ್ತೃಗಳಲ್ಲಿ ಪ್ರಧಾನನಾದ ಶ್ರೀ ಕೃಷ್ಣನ ಈ ವಾಕ್ಯಗಳ ಪರ್ಯಾಲೋಚನೆಯಿಂದ ಜೀವಬ್ರಹ್ಮರಿಗೆ ಅಭೇದವು ಎಂದಿಗೂ ಪ್ರಾಪ್ತವಾಗಲಾರದೆಂದು ಸಿದ್ಧಿಸುವುದು. ಶ್ರೀ ಕೃಷ್ಣನು ಹೇಳುತ್ತಾನೆ.—

(1) **ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗ**
**ಧಾರಣಾಂ ॥**

**ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ ದೇಹಂ ಸಯಾತಿ ಪರಮಾಂಗತಿಂ ॥**
—(8. 12–13.)

ವಾಯು ಸಂಚಾರ ಮಾಡುವ ಸುಷುಮ್ನೇತರ ನಾಡಿಗಳನ್ನು ನಿರೋಧಿಸಿ, ( ಹೃದಯದಲ್ಲಿರುವ ) ಹೃನ್ನಾಮಕ ನಾರಾಯಣನಲ್ಲಿ ಮನಸ್ಸು ಸ್ಥಿರವಾಗಿಟ್ಟು, ಸ್ವದೇಹಸ್ಥಿತವಾದ ಪ್ರಾಣವಾಯುವನ್ನು ಬ್ರಹ್ಮರಂಧ್ರದಲ್ಲಿ ಇರಿಸಿ, ನಿರಂತರ ಧ್ಯಾನದಲ್ಲಿರತನಾಗಿ, ಪ್ರಣವವನ್ನು ಜಪಿಸುತ್ತಾ, ಪ್ರಣವಪ್ರತಿಪಾದ್ಯನಾದ ನನ್ನನ್ನು ಧ್ಯಾನ ಮಾಡುತ್ತಾ ದೇಹವನ್ನು ಬಿಡುವ ಅಧಿಕಾರಿಯು ಪರಮಗತಿಯನ್ನು ಅಂದರೆ ಪರಮಮುಕ್ತಿಯನ್ನು ಹೊಂದುತ್ತಾನೆ.

ಬ್ರಹ್ಮೈಕ್ಯಜ್ಞಾನ ಮಾತ್ರದಿಂದ ಬ್ರಹ್ಮೈಕ್ಯರೂಪಮುಕ್ತಿಯು ಪ್ರಾಪ್ತವಾಗುವ ಪಕ್ಷಕ್ಕೆ ಈ ಉತ್ಕ್ರಮಣ ಪ್ರಕಾರಕಥನವು ವ್ಯರ್ಥವಾಗುವುದು. ಇದು ಅಶಾಶ್ವತವಾದ ಅವಾಂತರಮುಕ್ತಿಪರವೆಂದು ಹೇಳಬೇಕಾಗಿಲ್ಲ. **"ಸಯಾತಿಪರಮಾಂಗತಿಂ"** ಎಂದರೆ ಜ್ಞಾನಿಯು ಪರಮಮುಕ್ತಿಯನ್ನೇ ಹೊಂದುತ್ತಾನೆ ಎಂದು ಹೇಳಿರುವುದರಿಂದ ಈ ವಾಕ್ಯಗಳು ಜ್ಞಾನಿಗಿಂತಲೂ ಭಿನ್ನನಾದ ಪ್ರಣವಪ್ರತಿಪಾದ್ಯನಾದ ಪರಬ್ರಹ್ಮನು ( ಶ್ರೀ ಕೃಷ್ಣನು ) ಮುಕ್ತಿನಿಯಾಮಕನಾಗಿರುವನೆಂದು ಸ್ಥಿರಪಡಿಸುವವು.* **"ಮುಕ್ತಾನಾಂ ಪರಮಾಗತಿಃ"** ಎಂಬ ಶ್ರೀ ಕೃಷ್ಣನ ಹೆಸರೇ ಈ ಅರ್ಥವನ್ನು ಸೂಚಿಸುವುದು.

---

* ಪ್ರಣವಪ್ರತಿಪಾದ್ಯನು ಸಾಕ್ಷಾತ್ಪರಬ್ರಹ್ಮನೇ ಆಗಿರುವನು ಎಂದು ಶಂಕರಾಚಾರ್ಯರೇ ನಿರ್ಣಯ ಮಾಡಿರುತ್ತಾರೆ.

(2) ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।
ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥
ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಂ ।
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋಜನಾಃ ।
ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।
ತತ್ರ ಚಾಂದ್ರಮಸಂಜ್ಯೋತಿ ರ್ಯೋಗೀ ಪ್ರಾಪ್ಯ ನಿವರ್ತತೇ ।
ಶುಕ್ಲ ಕೃಷ್ಣೇ ಗತೀಹ್ಯೇತೇ ಜಗತಃ ಶಾಶ್ವತೇ ಮತೇ ।
ಏಕಯಾಯಾತ್ಯನಾವೃತ್ತಿ ಮನ್ಯಯಾಽಽ ವರ್ತತೇ ಪುನಃ ॥
—(8. 23-26.)

ಎಲೈ ಭರತಶ್ರೇಷ್ಠನೇ ! ಜ್ಞಾನಯೋಗಿಗಳೂ ಕರ್ಮಯೋಗಿಗಳೂ ಯಾವ ಯಾವ ಕಾಲಾಭಿಮಾನಿ ದೇವತೆಗಳಿಂದ ಅಧಿಷ್ಠಿತವಾದ ಮಾರ್ಗದಲ್ಲಿ ಪ್ರಯಾಣ ಮಾಡಿ, (ಒಂದು ಮಾರ್ಗದಲ್ಲಿ ಹೋದವರು) ಅಪುನರಾವೃತ್ತಿಯನ್ನೂ, (ಮತ್ತೊಂದು ಮಾರ್ಗದಲ್ಲಿ ಹೋದವರು ) ಪುನರಾವೃತ್ತಿಯನ್ನೂ ಹೊಂದುತ್ತಾರೆಯೋ, ಅಂಥ ಮಾರ್ಗನಿಯಾಮಕರಾದ ಕಾಲಾಭಿಮಾನಿ ದೇವತಾಭೇದವನ್ನು ಹೇಳುತ್ತೇನೆ ಕೇಳು. ಅಗ್ನಿದೇವತೆಯು, ಅರ್ಚಿನಾಮಕ ದೇವತೆಯು, ಅಹರಭಿಮಾನಿದೇವತೆಯು, ಶುಕ್ಲಪಕ್ಷಾಭಿಮಾನಿದೇವತೆಯು, ಷಣ್ಮಾಸಾಭಿಮಾನಿದೇವತೆಯು, ಉತ್ತರಾಯಣಾಭಿಮಾನಿ ದೇವತೆಯು ಇವರುಗಳಿಂದ ಪಾಲಿಸಲ್ಪಟ್ಟ ಮಾರ್ಗದಲ್ಲಿ ಪ್ರಯಾಣ ಮಾಡಿದ **ಬ್ರಹ್ಮಜ್ಞಾನಿಗಳು** ಪರಬ್ರಹ್ಮನನ್ನು ಹೊಂದುತ್ತಾರೆ.

ಮೇಘಾಭಿಮಾನಿದೇವತೆಯು, ರಾತ್ರ್ಯಭಿಮಾನಿದೇವತೆಯು, ಕೃಷ್ಣಪಕ್ಷಾಭಿಮಾನಿದೇವತೆಯು, ( ಆಷಾಢಾದಿ ) ಷಣ್ಮಾಸಾಭಿಮಾನಿದೇವತೆಯು, ದಕ್ಷಿಣಾಯನಾಭಿಮಾನಿದೇವತೆಯು ಇವರುಗಳಿಂದ ಅಧಿಷ್ಠಿತ ಮಾರ್ಗದಲ್ಲಿ ಪ್ರಯಾಣ ಮಾಡಿದ ಕರ್ಮಯೋಗಿಗಳು ಚಂದ್ರಾದಿಗಳು ವಾಸಮಾಡುವ, ತೇಜಃಪ್ರಚುರವಾದ ಸ್ವರ್ಗಾದಿ ಲೋಕವನ್ನು ಹೊಂದಿ, ಅಲ್ಲಿ ಅಲ್ಲಿ ತಾವು ಮಾಡಿದ ಪುಣ್ಯಗಳಿಗೆ ಫಲರೂಪವಾದ ಸೌಖ್ಯವನ್ನು ಅನುಭವಿಸಿ, " ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ " ಎಂದು ಹೇಳಿರುವ ಮೇರೆಗೆ ಪುನಃ ಭೂಲೋಕಕ್ಕೆ ಜನನಾರ್ಥವಾಗಿ ಹಿಂತಿರುಗಿ ಬರುತ್ತಾರೆ.

ಹೀಗೆ ಬ್ರಹ್ಮಜ್ಞಾನಿಗಳೂ ಕರ್ಮಯೋಗಿಗಳೂ ಪ್ರಯಾಣ ಮಾಡುವ ಉತ್ತರಾಯಣ ದಕ್ಷಿಣಾಯನ ಮಾರ್ಗಗಳೆರಡೂ ಏಕಪ್ರಕಾರವಾಗಿರುವುವು. ( ಅಂದರೆ ಕರ್ಮಯೋಗಿಗಳು ದಕ್ಷಿಣಾಯನಮಾರ್ಗದಲ್ಲೇ ಹೋಗಬೇಕು; ಬ್ರಹ್ಮಜ್ಞಾನಿಗಳು ಉತ್ತರಾಯಣ ಮಾರ್ಗದಲ್ಲೇ ಮೋಕ್ಷವನ್ನು ಕುರಿತು ಹೋಗಬೇಕು ಎಂಬ ನಿಯಮವು ವ್ಯತ್ಯಾಸವಿಲ್ಲದೆ ಯಾವಾಗಲೂ ಇರುವುವು.) ಇದು ಜ್ಞಾನಿ

ಸಮ್ಮತವು. ಒಂದು ಮಾರ್ಗದಿಂದ ಹೋದವನು ಪುನರಾವೃತ್ತಿಯನ್ನು ಹೊಂದುವು ದಿಲ್ಲ. ಮತ್ತೊಂದು ಮಾರ್ಗದಿಂದ ಹೋದವನು ಪುನಃ ಲೋಕಕ್ಕೆ ಬರುತ್ತಾನೆ.

ಬ್ರಹ್ಮೈಕ್ಯಜ್ಞಾನ ಮಾತ್ರದಿಂದ ಬ್ರಹ್ಮೈಕ್ಯರೂಪಮುಕ್ತಿಯು ಆಗಿ ಹೋಗುವ ದಾದರೆ, ಅಪುನರಾವೃತ್ತಿಯೋಗ್ಯರು ಹೋಗುವ ಉತ್ತರಾಯಣಮಾರ್ಗಕಥನವು ಅನುಪಪನ್ನವಾಗುವದು. ಇದು ಬ್ರಹ್ಮೈಕ್ಯಜ್ಞಾನವಾಗದ, ಅಪಕ್ವರಾದ ಯೋಗಿ ಗಳು ಅವಾಂತರ ಮುಕ್ತಿಯನ್ನು ಕುರಿತು ಹೋಗುವ ಮಾರ್ಗವೆಂಬುದು ಪ್ರಮಾಣ ರಹಿತವಾದ ಅಭಿನಿವೇಶದ ಮಾತಾಗಿರುತ್ತದೆ. ಕಿಂಚ, ಶ್ರೀ ಕೃಷ್ಣ ವಾಕ್ಯಗಳಿಗೆ ವಿರುದ್ಧವೂ ಆದುದು :—

**ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮ ವಿದೋಜನಾಃ ।**
—(8. 24.)

ಎಂದರೆ ಬ್ರಹ್ಮಜ್ಞಾನಿಗಳು ಉತ್ತರಾಯಣ ಮಾರ್ಗದಲ್ಲಿ ಹೋಗಿ ಬ್ರಹ್ಮ ನನ್ನು ಹೊಂದುತ್ತಾರೆ, ಎಂದು ಸ್ಪಷ್ಟವಾಗಿ 1. ಆ ಮಾರ್ಗದಲ್ಲಿ ಹೋಗುವ ಅಧಿ ಕಾರಿಗಳು ಬ್ರಹ್ಮಜ್ಞಾನಿಗಳು ಎಂದೂ, 2. ಅದರಿಂದ ಹೋದವರಿಗೆ ಪ್ರಾಪ್ಯವಾದ ವಸ್ತುವು **ಬ್ರಹ್ಮನು,** ಅಶಾಶ್ವತ ಸುಖವಲ್ಲವೆಂದೂ ಹೇಳಿರುತ್ತಾನೆ. ಕಿಂಚ 3. ಬ್ರಹ್ಮ ಜ್ಞಾನ ಹೀನರಿಗೆ ದಕ್ಷಿಣಾಯನ ಮಾರ್ಗವನ್ನೂ ಹೇಳಿರುತ್ತಾನೆ. ಇದರಿಂದ ಬ್ರಹ್ಮೈಕ್ಯಕ್ಕಿಂತ ಅತ್ಯಂತ ಭಿನ್ನವಾದ ಬೇರೆ ಒಂದು ಮುಕ್ತಿಯು ಇರುವುದೆಂದೂ, ಬ್ರಹ್ಮೈಕ್ಯಜ್ಞಾನಕ್ಕಿಂತ ಭಿನ್ನವಾದ ಬ್ರಹ್ಮಜ್ಞಾನದಿಂದ ಅದು ಸಾಧ್ಯವಾಗುವ ದೆಂದೂ ಸಿದ್ಧವಾಯಿತು. ಶ್ರೀ ಕೃಷ್ಣನು **ನನ್ನ ಪ್ರಾಪ್ತಿಯೇ** ಪರಮ ಮುಕ್ತಿ ಯೆಂದು ಹೇಳಿರುವನು. ಪುನಃ ಹೇಳುವನು.—

**ಆ ಬ್ರಹ್ಮಭವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥**
—(8. 16.)

**ಅವ್ಯಕ್ತೋಽಕ್ಷರಇತ್ಯುಕ್ತಸ್ತಮಾಹುಃ ಪರಮಾಂ ಗತಿಂ ।**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥**
—(8. 21.)

ಈ ಶ್ಲೋಕಾರ್ಥಗಳು ಹಿಂದಿನ ಪುಟಗಳಲ್ಲಿ ಈಗಾಗಲೇ ವಿವೃತವಾಗಿರುವವು. ಇವುಗಳಿಂದ ಶ್ರೀ ಕೃಷ್ಣನಿಂದ ಭಿನ್ನನಾದ ಪರಮ ಪ್ರಾಪ್ಯನಾದ ನಿರ್ಗುಣಬ್ರಹ್ಮನು ಸುತರಾಂ ಇಲ್ಲವೆಂದು ನಿಶ್ಚಿತವಾಗುವುದು.

(3) **............ಗಚ್ಛಂತ್ಯಮೂಢಾಃ ಪದಮವ್ಯಯಂತತ್ ।**
**ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ॥**

**ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ||**
—(15. 5-6.)

ಜ್ಞಾನಿಗಳು ಅವ್ಯಯವಾದ ಎಂದರೆ ಸರ್ವಥಾ ನಾಶರಹಿತವಾದ ನನ್ನ ಲೋಕವನ್ನು ಹೊಂದುತ್ತಾರೆ. ನನ್ನ ಸ್ಥಾನವನ್ನು ಸೂರ್ಯ ಚಂದ್ರ, ಅಗ್ನ್ಯಾದಿಗಳು ಪ್ರಕಾಶಪಡಿಸುವುದಿಲ್ಲ. ( ತಾನೇ ವಿಲಕ್ಷಣವಾದ ಇನ್ನೂ ಅತಿಶಯಿತವಾದ ತೇಜಸ್ಸಿನಿಂದ ಸ್ವಯಂಪ್ರಕಾಶಮಾನವಾಗಿರುವುವೆಂದು ಅರ್ಥವು. ) ಯಾವ ಸ್ಥಾನವನ್ನು ಹೊಂದಿದ ಮೇಲೆ ಪುನಃ ಹಿಂತಿರುಗಿ ಸಂಸಾರಬಂಧವನ್ನು ಹೊಂದುವುದಿಲ್ಲವೋ ಅಂಥ **ಪರಮಧಾಮವು** (ಪರಮಪ್ರಾಪ್ಯವಾದ ಸ್ಥಾನವು) ನನ್ನದು.

ಈ ಶ್ಲೋಕವನ್ನು ಭಗವತ್ಸ್ವರೂಪ ಪರವಾಗಿ ಅರ್ಥ ಮಾಡಿದರೂ ಇದೇ ಅಭಿಪ್ರಾಯವು ಬರುವದು. ವೈಕುಂಠಾದಿ ನಿತ್ಯಲೋಕಗಳು ಮಹಾಪ್ರಳಯದಲ್ಲೂ ನಾಶ ಹೊಂದದೆ ನಿತ್ಯವಾಗಿರುವವೆಂದು ಪುರಾಣಗಳಲ್ಲಿ ಸುಪ್ರಸಿದ್ಧವು. ಮುಕ್ತರು ವಾಸ ಮಾಡತಕ್ಕ ದೇಶವಿಶೇಷವನ್ನು ಹೇಳಿ ಅದೇ ಪರಮಪ್ರಾಪ್ಯವಾದ ಸ್ಥಾನವೆಂದು ಶ್ರೀ ಕೃಷ್ಣನೂ ಹೇಳಿರುವದರಿಂದ, ಬ್ರಹ್ಮೈಕ್ಯವು ಮುಕ್ತಿಯಲ್ಲವೆಂದೂ, ಅತಏವ ಬ್ರಹ್ಮೈಕ್ಯಜ್ಞಾನವು ಮುಕ್ತಿಗೆ ಕಾರಣವಾಗುವದಿಲ್ಲವೆಂದೂ ಸ್ಥಿರವಾಗುವದು ಕಿಂಚ.

(4) **“ ಕುರುಕರ್ಮೈವತಸ್ಮಾತ್ತ್ವಂ ”**
**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು |**
**ಮಾಮೇವೈಷ್ಯಸಿ ಯುಕ್ತ್ವೈವ ಮಾತ್ಮಾನಂ ಮತ್ಪರಾಯಣಃ ||** —(9. 34.)

ಇತ್ಯಾದಿ ಶ್ಲೋಕಗಳಲ್ಲಿ “ ನೀನು ಕರ್ಮ **ಮಾಡು;** ನನ್ನಲ್ಲಿ ಭಕ್ತಿ **ಮಾಡು** ” ಎಂದು ವಿಧಾನ ಮಾಡಿರುವನು. ಮತ್ತು ಈ ರೀತಿ ನನ್ನನ್ನು ಉಪಾಸನೆ ಮಾಡಿದರೆ ಮೋಕ್ಷವು ಪ್ರಾಪ್ತಿಯಾಗುವದೆಂದು **ಫಲವನ್ನು ಹೇಳಿರುವನು.** ಈ ಕರ್ಮವಿಧಾನವು ಮತ್ತು ಫಲಕಥನವು ಸಂಸಾರಿಯಾದ ಜೀವನ ವಿಷಯದಲ್ಲಿ ಸಲ್ಲುವದೇ ಹೊರತು ಪೂರ್ಣಕಾಮನಾದ ಪರಮಾತ್ಮನಿಗೆ ಕೂಡಲಾರದು. ಇದರಿಂದಲೂ ಶ್ರೀ ಕೃಷ್ಣನು ಸಂಸಾರಿಯಾದ ಅರ್ಜುನಾದಿ ಜೀವರುಗಳಿಂದ ಅತ್ಯಂತ ಭಿನ್ನನಾದ, ಕರ್ಮವಿಧಿಗೆ ಬದ್ಧನಲ್ಲದ ಮತ್ತು ಮುಂದೆ ಹೊಂದಲ್ಪಡತಕ್ಕ ಮೋಕ್ಷರೂಪಪ್ರಯೋಜನರಹಿತನಾದ, ನಿತ್ಯಮುಕ್ತನಾದ ಪರಬ್ರಹ್ಮನೆಂದು ಸಿದ್ಧವಾಗುವದು.

ಶಂಕರಾಚಾರ್ಯರ ಮಾತುಗಳಿಂದಲೇ ಈ ಅಭಿಪ್ರಾಯವು ವಜ್ರಲೇಪದಂತೆ ಸುಸ್ಥಿರವಾಗುವುದು. ಜ್ಞಾನಿಯ ಉತ್ಕ್ರಮಣ, ಪ್ರಯಾಣಮಾರ್ಗ, ವಾಸ

ಮಾಡುವ ದೇಶವಿಶೇಷಕಥನವು ಇವೆಲ್ಲವೂ ಜೀವಬ್ರಹ್ಮರಿಗೆ ಭೇದಸಾಧಕವೇ ಆಗುವ ದೆಂದು ಬರೆದಿರುತ್ತಾರೆ. ತಥಾಹಿ :— **ಬೃಹದಾರಣ್ಯಕೋಪನಿಷಚ್ಛಾಂಕರ ಭಾಷ್ಯಂ :—**

**" ಅಸತಿಭೇದೇ ಕಸ್ಯಕುತೋಗತಿಃ ಸ್ಯಾತ್ । ತದಭಾವೇ (ಭೇದಾಭಾವೇ) ಚ ದಕ್ಷಿಣೋತ್ತರ ಮಾರ್ಗವಿಶೇಷಾನುಪಪತ್ತಿರ್ಗಂತವ್ಯದೇಶಾನುಪಪತ್ತಿಶ್ಚೇತಿ । ಭಿನ್ನಸ್ಯತುಪರಸ್ಮಾದಾತ್ಮನಃ ಸರ್ವಮೇತದುಪಪನ್ನಂ । ಕರ್ಮಜ್ಞಾನಸಾಧನೋಪದೇಶಾಶ್ಚ । ಭಿನ್ನಶ್ಚೇದ್ಬ್ರಹ್ಮಣಃ ಸಂಸಾರೀಸ್ಯಾದ್ಯುಕ್ತಸ್ತಂ ಪ್ರತ್ಯಭ್ಯುದಯ ನಿಶ್ರೇಯಸ ಸಾಧನಯೋಃ ಕರ್ಮಜ್ಞಾನಯೋರುಪದೇಶೋ ನೇಶ್ವರಸ್ಯಾಪ್ತಕಾಮತ್ವಾತ್ ॥**

ಈ ವಾಕ್ಯಗಳು ಪೂರ್ವಪಕ್ಷದ ಶಂಕಾಗ್ರಂಥದಲ್ಲಿ ಬಂದಿರುತ್ತವೆ. ಇದರ ಅರ್ಥವು :— " ಜೀವಬ್ರಹ್ಮರಿಗೆ ಭೇದವಿಲ್ಲದಿದ್ದರೆ ( ಜೀವನೇ ಬ್ರಹ್ಮನಾಗಿದ್ದರೆ), ಯಾರಿಗೆ ಯಾವ ಸಾಧನದಿಂದ ಮುಕ್ತಿಯಾಗಬೇಕು ? 1-2. ಜೀವನು ಬ್ರಹ್ಮನಿಂದ ಭಿನ್ನನಲ್ಲದಿದ್ದರೆ, ದಕ್ಷಿಣೋತ್ತರ ಮಾರ್ಗಭೇದದ ಕಥನವು, ಉಭಯ ಮಾರ್ಗದಿಂದ ಹೊಂದಲ್ಪಡುವ ಭಿನ್ನ ಸ್ಥಾನಕಥನವು, ಇವೆರಡೂ ಯುಕ್ತಿವಿರುದ್ಧವಾಗುವವು. ಪರಮಾತ್ಮನಿಂದ ಸಂಸಾರಿಯು ಭಿನ್ನನಾಗಿದ್ದರೆ, ಇವೆಲ್ಲವೂ ( ಮಾರ್ಗ, ಮುಕ್ತಿಸ್ಥಾನ ಕಥನಾದಿಗಳು ) ಸಮಂಜಸವಾಗುವವು. 3. ಮತ್ತು ಕರ್ಮರೂಪಸಾಧನ ಮತ್ತು ಜ್ಞಾನರೂಪಸಾಧನಗಳ ಉಪದೇಶವೂ ಉಪಪನ್ನವಾಗುವದು. 4. ಸಂಸಾರಿಯು ಬ್ರಹ್ಮನಿಂದ ಭಿನ್ನನಾಗಿದ್ದರೇನೇ ಅವನನ್ನು ಕುರಿತು ನಿನಗೆ ಸ್ವರ್ಗವಾಗುವದು; ನಿನಗೆ ಮೋಕ್ಷವು ಪ್ರಾಪ್ತವಾಗುವದು; ಎಂಬ ಸ್ವರ್ಗಮುಕ್ತಿರೂಪ ಫಲೋಪದೇಶಗಳು ಸಾರ್ಥಕವಾಗುವವು. ಸ್ವರ್ಗ ಮುಕ್ತಿಗಳಿಗೆ ಸಾಧಕವಾದ ಕರ್ಮಜ್ಞಾನಗಳೆಂಬ ಸಾಧನೋಪದೇಶವೂ (ಅಪೂರ್ಣನಾದ) ಜೀವನಿಗೆ ಯೋಗ್ಯವೇ ಹೊರತು, ಆಪ್ತಕಾಮನಾದ ಈಶ್ವರನಿಗೆ ಉಚಿತವಾಗಲಾರದು."

ಈ ರೀತಿಯಲ್ಲಿ ಜೀವಬ್ರಹ್ಮರಿಗೆ ಅಭೇದವನ್ನು ಒಪ್ಪಿದರೆ ಪ್ರಾಪ್ತವಾಗುವ ಸರ್ವ ಅನುಪಪತ್ತಿಗಳನ್ನೂ ಅವರೇ ತೋರಿಸಿರುತ್ತಾರೆ.

**ಪ್ರಶ್ನೆ**— ಸ್ವಾಮೀ ! ಇದು ಅವರಿಗೆ ಪೂರ್ವಪಕ್ಷಗ್ರಂಥವಾದ ಮೇಲೆ ಇದಕ್ಕೆ ಯಾವ ಸಮಾಧಾನವನ್ನು ಹೇಳಿ ಭೇದವನ್ನು ನಿರಾಕರಣೆ ಮಾಡಿ ಅದ್ವೈತವನ್ನು ಸಮರ್ಥನೆ ಮಾಡಿರುತ್ತಾರೆ ?

**ಉತ್ತರ**— ಉತ್ತರವನ್ನು ಹೇಳಿದರೆ ನೀವು ನಗುತ್ತೀರಿ. ಆದರೂ ಇರತಕ್ಕದ್ದನ್ನು ಹೇಳಲೇಬೇಕು. " ಅಹಂಬ್ರಹ್ಮಾಸ್ಮಿ " ಎಂಬ ಸ್ಪಷ್ಟಶ್ರುತಿಯು ಜೀವ

ಬ್ರಹ್ಮರಿಗೆ ಅಭೇದವನ್ನು ಹೇಳುವದರಿಂದ ನಿಮ್ಮ ಗೋಪಾಲಬಾಲನ ಮಾತುಗಳೆಲ್ಲಾ ಸುಳ್ಳುಭೇದ, ಸುಳ್ಳುವಿಧಿ, ಸುಳ್ಳುಸಾಧನ, ಸುಳ್ಳುಮಾರ್ಗ, ಸುಳ್ಳು ಫಲಗಳನ್ನು ಹೇಳುವವೆಂದು ಹೇಳಿರುತ್ತಾರೆ.

**ಪ್ರಶ್ನೆ**— ಇದಕ್ಕೆ ಪರಿಹಾರವೇನು ?

**ಉತ್ತರ**— ಸಾವಕಾಶವಾಗಿ ಇನ್ನು ಮೇಲೆ ತತ್ವಮಸ್ಯಾದಿ ಶ್ರುತ್ಯರ್ಥಗಳನ್ನು ವಿಚಾರ ಮಾಡಿ, " ಅಹಂಬ್ರಹ್ಮಾಸ್ಮಿ " ಇವೇ ಮುಂತಾದ ಶ್ರುತಿಗಳಿಗೆ ಭೇದದಲ್ಲೇ ತಾತ್ಪರ್ಯವಿರುವದೆಂದು ತೋರಿಸುತ್ತೇವೆ. ಕಿಂಚ " ಶಿಷ್ಯಸ್ತೇಹಂ ಶಾಧಿಮಾಂತ್ವಾಂಪ್ರಪನ್ನಂ " ಎಂದು, ಅರ್ಜುನನು ಶಿಷ್ಯನಾಗಿ ಶ್ರೀ ಕೃಷ್ಣನಲ್ಲಿ ಶರಣಾಗತನಾಗಿರುವಾಗ, ಆಪ್ತತಮನಾದ ಶ್ರೀ ಸ್ವಾಮಿಯು ಸುಳ್ಳು ತತ್ವವನ್ನು ಬೋಧಿಸುವದಕ್ಕೆ ನಿಮಿತ್ತವಿಲ್ಲ. ಮತ್ತು ಬ್ರಹ್ಮಸ್ವರೂಪವನ್ನು ದಿವ್ಯಚಕ್ಷುಸ್ಸಿನಿಂದ ಅರ್ಜುನನು ನೋಡಿರುವದರಿಂದಲೂ ಕೃಷ್ಣೋಕ್ತಿಗಳು ಪ್ರಮಾಣತಮವೆಂದು ನಿಶ್ಚಿತವಾಗುವದು. " ವೇದೈಶ್ಚಸರ್ವೈರಹಮೇವವೇದ್ಯಃ " ಎಂದು ಹೇಳಿದ ಮೇರೆಗೆ " ಅಹಂಬ್ರಹ್ಮಾಸ್ಮಿ, ತತ್ವಮಸಿ, ನೇಹನಾನಾಸ್ತಿಕಿಂಚನ, ಪ್ರಜ್ಞಾನಂಬ್ರಹ್ಮ, ಅಯಮಾತ್ಮಾಬ್ರಹ್ಮ " ಮುಂತಾದ ಸರ್ವಶ್ರುತ್ಯರ್ಥಗಳನ್ನೂ ಸಮಗ್ರವಾಗಿ ತಿಳಿದಿರುವ ಜಗದ್ಗುರುವಾದ ಶ್ರೀ ಕೃಷ್ಣನು ತಾನೇ **ಲೋಕೇ ವೇದೇಚಕಥಿತಃ ಪುರುಷೋತ್ತಮಃ** ಎಂದರೆ " ನಾನು ಭಾರತಾದಿ ಪೌರುಷೇಯ ಗ್ರಂಥಗಳಲ್ಲಿಯೂ, ವೇದಗಳಲ್ಲಿಯೂ ಪುರುಷೋತ್ತಮನು (ಪರಮಚೇತನನು ) ಎಂದು ಪ್ರಸಿದ್ಧನಾಗಿರುವೆನು " ಎಂದು ಹೇಳಿರುತ್ತಾನೆ. ಹೀಗಿರುವಲ್ಲಿ, ಸಾವಕಾಶವಾದ* ( ಅನೇಕ ರೀತಿಯಾಗಿ ಅರ್ಥ ಮಾಡುವದಕ್ಕೆ ಸಂಭವವಿರುವ ) ಒಂದೆರಡು ಶ್ರುತಿವಾಕ್ಯಗಳಿಂದ, ನಿರವಕಾಶವಾದ ( ಭೇದಪರವಾಗಿಯೇ ಅರ್ಥವುಳ್ಳ, ಬೇರೆ ಅರ್ಥ ಮಾಡುವದಕ್ಕೆ ಅವಕಾಶವಿಲ್ಲದಿರುವ ) ಅನಂತವೇದವಾಕ್ಯಗಳೂ, ಗೀತಾದಿ ಸ್ಮೃತಿ ವಾಕ್ಯಗಳೂ ಸುಳ್ಳು ಹೇಳುವವು, ಎಂದು ಹೇಳುವದು ಬಹು ಸಾಹಸದ ಪ್ರಯತ್ನವಿರುತ್ತದೆ.

**14.** ಕಿಂಚ, **ದ್ವಾಸುಪರ್ಣಾ** ಇತ್ಯಾದಿ ಶ್ರುತಿಸೂಚಿತ ಜೀವಬ್ರಹ್ಮರ ಭೇದಕಧರ್ಮಗಳನ್ನು ಸಹ ಶ್ರೀ ಕೃಷ್ಣನು ಹದಿನೈದನೆಯ ಅಧ್ಯಾಯದಲ್ಲಿ ತೋರಿಸಿರುತ್ತಾನೆ.

---

*ವಸ್ತುತಃ **ಮುಖ್ಯವೃತ್ತಿಯಿಂದ** ಅದ್ವೈತವನ್ನು ಬೋಧಿಸುವ ಒಂದು ಶ್ರುತಿಯೂ ಇರುವುದಿಲ್ಲ. ಶಂಕರಾಚಾರ್ಯರೂ ಕೂಡ **ಮುಖ್ಯವೃತ್ತಿಯಿಂದ** ಅದ್ವೈತವನ್ನು ಒಂದು ಶ್ರುತಿಯೂ ಹೇಳುವುದಿಲ್ಲವೆಂದು ಸ್ಪಷ್ಟವಾಗಿ ಬರೆದಿರುತ್ತಾರೆ. ಸುಪ್ರಖ್ಯಾತವಾದ ತತ್ವಮಸಿ ವಾಕ್ಯವೂ ಕೂಡ ಮುಖ್ಯವೃತ್ತಿಯಿಂದ ಅದ್ವೈತವನ್ನು ಬೋಧಿಸುವುದಿಲ್ಲವೆಂದು " ಐಕ್ಯಂ ತಯೋರ್ಲಕ್ಷಿತಯೋರ್ನವಾಚ್ಯಯೋಃ" ಇತ್ಯಾದಿ ಶ್ಲೋಕಗಳಲ್ಲಿ ಹೇಳಿರುತ್ತಾರೆ.

(1) **ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವಚ ।
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ।
ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಂ ।
ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥**
—(15. 9.10.)

ಪರಮಾತ್ಮನು ( ಶ್ರೀ ಕೃಷ್ಣನು ) ಜೀವರುಗಳ ಶ್ರೋತ್ರ, ನೇತ್ರ, ತ್ವಕ್, ರಸನ, ಘ್ರಾಣೇಂದ್ರಿಯುಗಳನ್ನು ಮತ್ತು ಮನಸ್ಸನ್ನೂ ಸಹ ಪ್ರವೇಶ ಮಾಡಿ, ಶಬ್ದಾದಿವಿಷಯಭೋಗವನ್ನು ಮಾಡುತ್ತಾನೆ. ಒಂದೇ ಶರೀರದಲ್ಲಿ ಜೀವಪರ ಮಾತ್ಮರಿಬ್ಬರೂ ಇದ್ದು, ಇಬ್ಬರೂ ವಿಷಯಭೋಗಗಳನ್ನು ಮಾಡುವುದಾದರೆ, ಪರ ಮಾತ್ಮನಿಗೆ ಜೀವಸಾಮ್ಯವು ಬಂದಹಾಗಾಯಿತೆಂದರೆ ಹೇಳುತ್ತಾನೆ:— ಜೀವ ನನ್ನು ತೆಗೆದುಕೊಂಡು ಲೋಕಾಂತರವನ್ನು ಕುರಿತು ಪ್ರಯಾಣ ಮಾಡುವ, ಮತ್ತು ಜೀವಸಹಿತನಾಗಿ ಶರೀರದಲ್ಲಿ ಸ್ಥಿತನಾಗಿರುವ, **ಗುಣಾನ್ವಿತಂ ಭುಂಜಾನಂ** ಎಂದರೆ ಶುಭವಿಷಯವನ್ನೇ ಭೋಗ ಮಾಡುವ ಪರಮಾತ್ಮನನ್ನು ವಿಮೂಢರು ತಿಳಿಯಲಾರರು. ಜ್ಞಾನದೃಷ್ಟಿಯುಳ್ಳವರು ತಿಳಿಯುತ್ತಾರೆ.

ಹೀಗೆ ಜೀವಬ್ರಹ್ಮರಿಗೆ ಪಾರಮಾರ್ಥಿಕವಾದ ಬಹುವಿರುದ್ಧಧರ್ಮಗಳನ್ನು ಶ್ರೀ ಕೃಷ್ಣನು ತೋರಿಸಿರುವದರಿಂದ ಅದ್ವೈತತತ್ವವು ಆತನಿಗೆ ಸರ್ವಥಾ ಸಮ್ಮತ ವಲ್ಲವೆಂದು ನಿರೂಪಿಸಿರುತ್ತೇವೆ.

## 7.

**ಪ್ರಶ್ನೆ**— ಸ್ವಾಮೀ ! "ಪಾಂಡವಾನಾಂ ಧನಂಜಯಃ" ಎಂದರೆ ನಾನೇ ಧನಂಜಯನೆಂದು ಅರ್ಥವಾಗುವುದು. ಹೀಗಿರುವಲ್ಲಿ ಅಭೇದಸಾಧಕವಾದ ಒಂದು ವಚನವೂ ಇಲ್ಲವೆಂದು ತಾವು ಹೇಳುವುದು ಹೇಗೆ ?

**ಉತ್ತರ**— ದಶಮಾಧ್ಯಾಯದ ಈ ಪ್ರಕರಣವೆಲ್ಲಾ ಅತ್ಯಂತ ಭೇದಪರ ವೆಂದು ಅರ್ಜುನನ ಪ್ರಶ್ನೆಯ ಪರಾಮರ್ಶದಿಂದಲೇ ಗೊತ್ತಾಗುವದು.

(1) **ವಕ್ತುಮರ್ಹಸ್ಯಶೇಷೇಣದಿವ್ಯಾಹ್ಯಾತ್ಮವಿಭೂತಯಃ ।
ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂವ್ಯಾಪ್ಯ ತಿಷ್ಠಸಿ ।
ಕೇಷು ಕೇಷು ಚ ಭಾವೇಷು ಚಿಂತ್ಯೋಸಿ ಭಗವನ್ಮಯಾ ॥**
—(10. 16-17.)

ಹೇ ಭಗವನ್ ! ಸಕಲ **ವಸ್ತುಗಳನ್ನೂ ವ್ಯಾಪಿಸಿಕೊಂಡು ಸ್ಥಿತ ನಾಗಿರುವ** ನಿನ್ನ ವಿಭೂತಿರೂಪಗಳನ್ನು ನನಗೆ ಉಪದೇಶ ಮಾಡಬೇಕು. ಯಾವ ಯಾವ **ಪದಾರ್ಥಗಳಲ್ಲಿ** ನೀನು ನನ್ನಿಂದ ಧ್ಯಾನ ಮಾಡಲ್ಪಡುವಿ ?

ಯಾವ ಪದಾರ್ಥದಲ್ಲಿ ನೀನು ಯಾವ ರೂಪದಿಂದ ಸ್ಥಿತನಾಗಿರುವಿ ? ಎಂಬ ಪ್ರಶ್ನೆಗೆ ಉತ್ತರರೂಪವಾಗಿ ಆಯುಧಗಳಲ್ಲಿ ನಾನು ವಜ್ರಾಯುಧವು; ನಾನು ಮೇರು ಪರ್ವತವು; ಎಂದು ಹೇಳಿರುವದರಿಂದ ಶ್ರೀಕೃಷ್ಣನು ವಜ್ರಾಯುಧದಲ್ಲಿ ವಜ್ರನಾಮಕ ನಾಗಿ ಅನೇಕ ಆಯುಧಗಳಿಗಿಂತಲೂ ಅದಕ್ಕೆ ಉತ್ತಮತ್ವಪ್ರದನಾಗಿರುವನೆಂತಲೂ ಮೇರುವಿನಲ್ಲಿ ಒಂದು ರೂಪದಿಂದ ಇದ್ದು ಅದಕ್ಕೆ ಸಕಲ ಪರ್ವತಗಳಿಗಿಂತಲೂ ಆಧಿಕ್ಯ ಪ್ರದನಾಗಿ ಸ್ಥಿತನಾಗಿರುವನೆಂತಲೂ ಅರ್ಥ ಮಾಡಬೇಕು. ಹಾಗೆಯೇ ಪಾಂಡವ ರಲ್ಲಿ ನಾನು ಧನಂಜಯನು ಎಂದರೆ, ಧನಂಜಯನಲ್ಲಿ ಒಂದು ರೂಪದಿಂದ ಇದ್ದು ಅವನಿಗೆ ವಿಶೇಷ ಕೀರ್ತಿಪ್ರದನಾಗಿ ಇರುವೆನೆಂದು ಅರ್ಥ ಮಾಡಬೇಕು. ಧನಂಜಯ ನಲ್ಲಿ ಶ್ರೀ ಕೃಷ್ಣನು ವಿಶೇಷ ವಿಭೂತಿರೂಪದಿಂದ ಇದ್ದುದು **"ನಿಮಿತ್ತಮಾತ್ರಂಭವ ಸವ್ಯಸಾಚಿನ್"** ಎಂಬ ಶ್ರೀಕೃಷ್ಣನ ಗೀತಾವಾಕ್ಯದಿಂದಲೇ ಗೊತ್ತಾಗುವುದು; ಆದರೆ ಭಾಗವತದಲ್ಲಿ ಇದು ಸುಪ್ರಸಿದ್ಧವು. ಉತ್ತರಗೋಗ್ರಹಣದಲ್ಲಿ ( ವಿರಾಟ ನಗರದಲ್ಲಿ ) ಪುಕ್ಕಲು ಹುಡುಗನನ್ನು ಸಾರಥಿಯನ್ನಾಗಿ ಮಾಡಿಕೊಂಡು, ಭೀಷ್ಮ ದ್ರೋಣಾದಿಗಳಿಂದ ಸಹಿತವಾದ ಸಕಲ ಕೌರವ ಸೇನೆಯನ್ನೂ ಮಥನ ಮಾಡಿದ ಅರ್ಜುನನು, ಶ್ರೀ ಕೃಷ್ಣನು ತನ್ನ ಅವತಾರವನ್ನು ಸಮಾಪ್ತಿ ಮಾಡಿ ಪರಂಧಾ ಮಕ್ಕೆ ತೆರಳಿದ ನಂತರ, ಕೃಷ್ಣಾಜ್ಞೆಯನ್ನು ಶಿರಸಾಧಾರಣ ಮಾಡಿ, ದ್ವಾರಕಾಪುರಿ ಯಿಂದ ಕೃಷ್ಣ ಪತ್ನಿಯರನ್ನು ಹಸ್ತಿನಾವತಿಗೆ ಕರೆದುಕೊಂಡು ಹೋಗುತ್ತಿರಲು ದುರ್ಬಲರಾದ ದೊಣ್ಣೆ ಕಳ್ಳರಿಂದ ಪರಾಜಿತನಾಗಿ ಗಾಂಡೀವ ಧನುಸ್ಸಿಗೆ ನಾಣೇರಿಸ ಲಾರದೆ ಅಣ್ಣನಾದ ಯುಧಿಷ್ಠಿರನ ಬಳಿಗೆ ಬಂದು **"ಅಬಲೇವವಿನಿರ್ಜಿತೋಽಸ್ಮಿ"** ಎಂದು ಪ್ರಲಾಪ ಮಾಡಿರುತ್ತಾನೆ. ನಾನು ಸ್ತ್ರೀಯಂತೆ ಸೋತು ಹೋದೆನು ಎಂದು ಅರ್ಥವು.

ಇದರಿಂದ, ಶ್ರೀ ಕೃಷ್ಣನು ಭೂಭಾರಹರಣಾರ್ಥವಾಗಿ ಅರ್ಜುನನಲ್ಲಿ ವಿಶೇಷ ಸಾನ್ನಿಧ್ಯವನ್ನು ಇಟ್ಟಿದ್ದು, ತನ್ನ ಅವತಾರ ಪರಿಸಮಾಪ್ತಿಯಲ್ಲಿ ಪುನಃ ಅದನ್ನು ತೆಗೆದುಕೊಂಡು ಹೋದನೆಂದು ಸಿದ್ಧವಾಗುವದು. ಶ್ರೀ ಕೃಷ್ಣನು ತನ್ನ ಅನೇಕ ವಿಭೂತಿ ರೂಪಗಳನ್ನು ಅರ್ಜುನನಿಗೆ ಉಪದೇಶ ಮಾಡಿ, ಉಪಸಂಹಾರವಾಕ್ಯದ ದಲ್ಲಿಯೂ ಕೂಡ ಭೇದವನ್ನೇ ಹೇಳಿರುತ್ತಾನೆ :—

(2) **ನತದಸ್ತಿ ವಿನಾಯತ್ಸ್ಯಾನ್ಮಯಾ ಭೂತಂ ಚರಾಚರಂ ।**
—(10. 39.)

ಎಲೈ ಅರ್ಜುನನೇ ! ಚರಾಚರಾತ್ಮಕವಾದ ಜಗತ್ತಿನಲ್ಲಿ **ನನ್ನಿಂದ ಸಹಿತ ವಾಗದೇ ಇರುವ** ಒಂದು ವಸ್ತುವೂ ಇಲ್ಲ. ಎಲ್ಲಾ ವಸ್ತುಗಳಲ್ಲಿಯೂ ಒಂದೊಂದು ರೂಪದಿಂದ ಇರುತ್ತೇನೆಂದು ಅರ್ಥವು.

ಇದರಿಂದ ಸೂರ್ಯ, ಇಂದ್ರ, ಚಂದ್ರ, ಮೇರು, ಧನಂಜಯ ಮುಂತಾದು ವುಗಳೆಲ್ಲಾ **" ಮಮದಿವ್ಯಾನಾಂ ವಿಭೂತೀನಾಂ "** ಎಂಬಲ್ಲಿ ಹೇಳಿರು

ವಂತೆ ಲೋಕವಿಲಕ್ಷಣವಾದ ಪರಮಾತ್ಮನ ವಿಭೂತಿರೂಪಗಳಿಗೆ ಅಧಿಷ್ಠಾನಗಳೆಂದು ನಿರ್ಣಯಿಸಬೇಕು.

ಅದ್ವೈತಮತದ ರೀತಿಯಿಂದಲೂ ಈ ವಾಕ್ಯಕ್ಕೆ ಐಕ್ಯಾರ್ಥವು ಸಂಭವಿಸುವದಿಲ್ಲ. ಕೃಷ್ಣಧನಂಜಯರಿಗೆ ಐಕ್ಯವು ವಿಶಿಷ್ಟೈಕ್ಯರೂಪದಿಂದ ಅದ್ವೈತಿಗಳಿಗೆ ಸಮ್ಮತವಲ್ಲವು. ಮತ್ತು "**ಕಾಮೋಽಸ್ಮಿ ಭರತರ್ಷಭ**" ಎಂದರೆ ಆಪಾತತಃ ನಾನೇ ಕಾಮನು ಎಂಬ ಅರ್ಥವನ್ನು ಕೊಡುವ ಗೀತಾವಾಕ್ಯಕ್ಕೆ ನಾನು ಕಾಮಸ್ವಾಮಿಯು ಎಂದೇ ಅರ್ಥಮಾಡಬೇಕೆಂದು ಶಂಕರಾಚಾರ್ಯರೇ ತಮ್ಮ ಛಾಂದೋಗ್ಯಭಾಷ್ಯದಲ್ಲಿ* ತೀರ್ಮಾನಮಾಡಿರುತ್ತಾರೆ. ಹೀಗೆ ಬಾಧಕವಿದ್ದಲ್ಲಿ ಐಕ್ಯವನ್ನು ಒಪ್ಪಬಾರದೆಂದು ಉಭಯಮತರೀತಿಯಿಂದಲೂ ಪ್ರಾಪ್ತವಾದುದರಿಂದ ಶಿಷ್ಯನಾದ ಮತ್ತು ಜ್ಞಾನಿಯಾದ ನಂತರವೂ ಪುನಃ ಪುನಃ ನಮಸ್ಕಾರಮಾಡುತ್ತಿರುವ ಅರ್ಜುನನಿಗೂ, ಗುರುವಾದ ಶ್ರೀ ಕೃಷ್ಣನಿಗೂ ಐಕ್ಯವು ಬಾಧಿತವಾಗಿರುವದರಿಂದ, ಪ್ರಕರಣೋಚಿತವಾಗಿ ನಾನು ಧನಂಜಯನಲ್ಲಿ ಒಂದು ವಿಭೂತಿರೂಪದಿಂದ ಇದ್ದೇನೆ ಎಂದೇ ಅರ್ಥಮಾಡಬೇಕು. "ರಾಮಶ್ಶಸ್ತ್ರಭೃತಾಮಹಂ" ಎಂದರೆ ಧನುರ್ಧಾರಿಗಳಲ್ಲಿ ಪರುಶರಾಮನು ನಾನು ಎಂಬಲ್ಲಿ ಇಂಥ ವಿರೋಧವು ಯಾವುದೂ ಇರುವದಿಲ್ಲ. ಮತ್ತು ನಾರಾಯಣನೇ ಪರಶುರಾಮನೆಂದು ಸ್ಪಷ್ಟ

---

*** ಅದ್ವೈತಿಗಳ ಛಾಂದೋಗ್ಯ ಭಾಷ್ಯ ಟೀಕಾ:— ಕಾಮಸಾಮಾನಾಧಿಕರಣ್ಯೇ ಬಾಧಕೋಪಲಂಭಾತ್........ತಸ್ಯ (ಕಾಮಸ್ಯ) ಕಾರ್ಯತ್ವಾತ್ತದೈಕ್ಯೇ ಬ್ರಹ್ಮಣೋಽನಾದಿತ್ವಂ ಬಾಧ್ಯತೇ। ಚೇತನ ಶೇಷತ್ವಾಚ್ಚ ಕಾಮಸ್ಯ ತದೈಕ್ಯೇಬ್ರಹ್ಮಣಃ ಸ್ವಾತಂತ್ರ್ಯಂ ಹೀಯತೇ।....ಕಥಂತರ್ಹಿಕಾಮೋಽಸ್ಮೀತಿತಾದಾತ್ಮ್ಯಸ್ಮೃತಿರಿತ್ಯಾಶಂಕ್ಯಾಹ "ತಸ್ಮಾದಿತಿ"। ಕಾಮೇಶ್ವರಯೋಃ ಸಾಮಾನಾಧಿಕರಣ್ಯಾಸಂಭವಾತ್........ಸ್ಮೃತಾವಪಿ ಬ್ರಹ್ಮಪಾರತಂತ್ರ್ಯಮಾತ್ರಂ ಕಾಮಸ್ಯವಿವಕ್ಷಿತಂ॥**

ತಾತ್ಪರ್ಯವು:— "ಕಾಮಸಾಮಾನಾಧಿಕರಣ್ಯ (ತಾದಾತ್ಮ್ಯ)ವನ್ನು ಈಶ್ವರನಿಗೆ ಒಪ್ಪಿದರೆ ಬಾಧಕವು ಇರುವದು. ಪ್ರಕೃತಿ ಕಾರ್ಯವಾದ (ಜನ್ಯವಾದ) ಕಾಮಕ್ಕೆ ಬ್ರಹ್ಮತಾದಾತ್ಮ್ಯವನ್ನು ಒಪ್ಪಿಕೊಂಡರೆ ಬ್ರಹ್ಮನಿಗೆ ಅನಾದಿತ್ವವು ಭಗ್ನವಾಗುವದು. ಮತ್ತು ಸರ್ವಚೇತನಾಧೀನವಾದ ಕಾಮವು ಬ್ರಹ್ಮನೇ ಆದರೆ, ಬ್ರಹ್ಮನು, ಸರ್ವಚೇತನಾಧೀನನೆಂದು ಪ್ರಾಪ್ತವಾಗಿ ಬ್ರಹ್ಮನ ಸ್ವಾತಂತ್ರ್ಯವು ನಷ್ಟವಾಗುವದು. ಹಾಗಾದರೆ **ಕಾಮೋಽಸ್ಮಿ** ಎಂಬ ತಾದಾತ್ಮ್ಯವನ್ನು ಹೇಳುವ ಸ್ಮೃತಿಗೆ ಏನು ಕಲ್ಪಿಸಬೇಕೆಂದರೆ ಕಾಮಕ್ಕೂ, ಬ್ರಹ್ಮನಿಗೂ ಸಾಮಾನಾಧಿಕರಣ್ಯವು (ತಾದಾತ್ಮ್ಯವು) ಸಂಭವಿಸುವದಿಲ್ಲವಾದುದರಿಂದ ಈ ಸ್ಮೃತಿಗೆ ಕಾಮವು **ಬ್ರಹ್ಮಪರತಂತ್ರವು** ಎಂದರೆ ಬ್ರಹ್ಮಾಧೀನವು ಎಂದು ಅರ್ಥಮಾಡಬೇಕು."

ಪ್ರಮಾಣಗಳು ಇರುವವು. ಆದುದರಿಂದ ಅಲ್ಲಿ ಭೇದಕಲ್ಪನೆಯೂ ಆವಶ್ಯಕವಿಲ್ಲ. "ಆದಿತ್ಯಾನಾಮಹಂ ವಿಷ್ಣುಃ" "ಸಿದ್ಧಾನಾಂ ಕಪಿಲೋಮುನಿಃ" "ವೃಷ್ಣೀನಾಂ ವಾಸುದೇವೋಽಸ್ಮಿ" "ಮುನೀನಾಮಪ್ಯಹಂ ವ್ಯಾಸಃ" ಎಂಬ ನಾಲ್ಕು ಸ್ಥಳಗಳಲ್ಲಿಯೂ ಕೂಡ ನಾನು ಆದಿತ್ಯರಮಧ್ಯದಲ್ಲಿ ವಿಷ್ಣು (ಉರುಕ್ರಮ) ನಾಮಕ ಆದಿತ್ಯನು; ಸಿದ್ಧರಮಧ್ಯದಲ್ಲಿ ನಾನೇ ಸಾಕ್ಷಾತ್ಕಪಿಲನು; ಸರ್ವಮುನಿಗಳಿಗಿಂತಲೂ ಶ್ರೇಷ್ಠನಾದ ವೇದವ್ಯಾಸನು ನಾನೇ; ಎಂದೇ ಅರ್ಥಮಾಡಬೇಕು.

**2.** ಪ್ರಶ್ನೆ— ಸ್ವಾಮೀ;

(1) **ಬ್ರಹ್ಮಭೂತಃ ಪ್ರಸನ್ನಾತ್ಮಾ ನಶೋಚತಿನಕಾಂಕ್ಷತಿ ।**
—(18. 54.)

ಎಂಬ ಶ್ಲೋಕವು ಬ್ರಹ್ಮನಾದವನು ಶೋಕಾದಿರಹಿತನಾಗುವನು ಎಂಬ ಅರ್ಥವನ್ನು ಬೋಧಿಸುವದರಿಂದ, ಇದು ಅದ್ವೈತಕ್ಕೆ ಸಾಧಕವೆಂದು ಯಾತಕ್ಕೆ ಹೇಳಬಾರದು ?

**ಉತ್ತರ**— ಈ ಶ್ಲೋಕದ ಉತ್ತರಾರ್ಧವೇ ಅಭೇದಶಂಕೆಯನ್ನು ನುಂಗುವ ಮಹದ್ಭೂತವಾಗಿರುವದು.

(2) **ಸಮಃ ಸರ್ವೇಷು ಭೂತೇಷು ಮದ್ಭಕ್ತಿಂಲಭತೇಪರಾಂ ।**
—(18. 54.)

ಎಂಬುದು ಉತ್ತರಾರ್ಧವು. ವಿಶಿಷ್ಟಶ್ಲೋಕಾರ್ಥವೇನೆಂದರೆ :—ಬ್ರಹ್ಮಭೂತಃ = ಬ್ರಹ್ಮಣಿಭೂತಃ, = ಬ್ರಹ್ಮನಲ್ಲಿ ಸದಾ ಸ್ಥಿತನಾದವನು; ಎಂದರೆ ಸದಾ ಬ್ರಹ್ಮಧ್ಯಾನ ಮಾಡುವವನು; ಪ್ರಸನ್ನವಾದ ಎಂದರೆ ವಿಷಯಾಭಿಲಾಷೆಗಳಿಂದ ರಹಿತವಾದ ಮನಸ್ಸುಳ್ಳವನಾಗುವನು. ಅತ ಏವ ಶೋಕವನ್ನು ಹೊಂದುವದಿಲ್ಲ; ಅಪೇಕ್ಷೆಯನ್ನೂ ಮಾಡುವದಿಲ್ಲ. **ಹೀಗಿರುವವನು** ಸರ್ವಪ್ರಾಣಿಗಳಲ್ಲಿ ದ್ವೇಷಾಸೂಯೆಗಳಿಂದ ವರ್ಜಿತನಾಗಿ **ನನ್ನಲ್ಲಿ ಉತ್ಕೃಷ್ಟಭಕ್ತಿಯನ್ನು ಹೊಂದುತ್ತಾನೆ.**

ಈ ರೀತಿ "ಬ್ರಹ್ಮಭೂತ" ನಾದವನಿಗೆ ಭಗವದ್ಭಕ್ತಿರೂಪಫಲವು ಉತ್ತರಾರ್ಧದಲ್ಲಿ ಹೇಳಿರುವದರಿಂದ, ಬ್ರಹ್ಮನಾದವನು ಎಂಬ ಐಕ್ಯಾರ್ಥವನ್ನು ಈ ಪದಕ್ಕೆ ಮಾಡಬಾರದು ಇದರಿಂದಲೇ "ಬ್ರಹ್ಮಭೂತೋಽಧಿಗಚ್ಛತಿ" ಇತ್ಯಾದಿ ಅನೇಕ ವಾಕ್ಯಗಳನ್ನೂ ವ್ಯಾಖ್ಯಾನಮಾಡಿದ ಹಾಗಾಯಿತು. ಬ್ರಹ್ಮನೇ ಆದನು ಎಂದು ಹೇಳಿ ನಂತರ ಪುನಃ ಮತ್ತೊಂದನ್ನು ಹೊಂದುತ್ತಾನೆ ಎಂದು ಹೇಳುವದು ಅಸಂಗತೋಕ್ತಿಯಾಗುವದು.

ಈ ಜಿಜ್ಞಾಸೆಯಿಂದ ಮತ್ತೊಂದು ನಿರ್ಣಯವು ಏರ್ಪಟ್ಟಿತು. ಅಭೇದಾಭಿಪ್ರಾಯವು ಮನಸ್ಸಿನಲ್ಲಿ ಸರ್ವಥಾ ಇಲ್ಲದಿದ್ದರೂ, ಶಾಸ್ತ್ರಕಾರರು ಆಪಾತತಃ ಅಭೇದ ಪ್ರತೀತಿಯು ಬರುವಂತೆ "ಬ್ರಹ್ಮಭೂತಃ ಪ್ರಸನ್ನಾತ್ಮಾ" "ಬ್ರಹ್ಮಭೂತೋಧಿಗಚ್ಛತಿ" "ಪಾಂಡವಾನಾಂಧನಂಜಯಃ" "ಕಾಮೋಸ್ಮಿ"; "ಮದ್ಭಾವಾಯೋಪಪದ್ಯತೇ" ಇತ್ಯಾದಿ ವಾಕ್ಯಗಳಲ್ಲಿ (ಸಾಮಾನಾಧಿಕರಣ್ಯಸಹಿತವಾದ) ಪ್ರಯೋಗಗಳನ್ನು ಮಾಡಿರುತ್ತಾರೆ. ವಿಚಾರಮಾಡಿದರೆ ಈ ವಾಕ್ಯಗಳು ಸರ್ವಥಾ ಭೇದವನ್ನೇ ಬೋಧಿಸುವವು. ಅಭೇದವನ್ನು ಬೋಧಿಸುವದಿಲ್ಲ. ಆದುದರಿಂದ ಇವು **ಸಾವಕಾಶವೆನ್ನಿಸುವವು. ಬ್ರಹ್ಮಸಂಪದ್ಯತೇ ತದಾ; ಉತ್ತಮಃ ಪುರುಷಸ್ತ್ವನ್ಯಃ** ಇತ್ಯಾದಿ ಭೇದವಾಕ್ಯಗಳಾದರೋ ತೀಕ್ಷ್ಣವಾದ ವೈದ್ಯನ ಚೂರಿಯಂತೆ ಅಪ್ರತಿಹತವಾಗಿ ಅಭೇದಪಕ್ಷವನ್ನು ಖಂಡನೆಮಾಡುವದರಲ್ಲಿಯೂ, ಭೇದವನ್ನು ಸ್ಥಾಪಿಸುವದರಲ್ಲಿಯೂ ಸಮರ್ಥವಾಗಿರುವವು; ಎಂದರೆ ಭೇದವಾಕ್ಯಗಳು ಅಭೇದಪರವಾದ ಶಂಕೆಯನ್ನೂ ಹುಟ್ಟಿಸಲಾರವು. ಅವುಗಳಿಗೆ ಬೇರೆ ಅರ್ಥವೇ ಸಂಭವಿಸುವದಿಲ್ಲ. ಆದುದರಿಂದ ಅವು **ನಿರವಕಾಶವೆನಿಸುವವು.** ಹೀಗಿರುವಲ್ಲಿ, ನಾವು ಸುಮ್ಮನೆ ಇಲ್ಲದಿರುವ ಭಾರವನ್ನು ತಲೆಯಮೇಲೆ ಹಾಕಿಕೊಂಡು ಸಂಕಟಪಡುವ ಮಂದನಂತೆ, ಭೇದವಾಕ್ಯಗಳೆಲ್ಲಾ ಸುಳ್ಳು ಭೇದವನ್ನು ಹೇಳುವವು ಎಂದು ನಿಷ್ಕಾರಣವಾಗಿ ಕಲ್ಪನೆಮಾಡಿ, ಆದಕ್ಕೇನುಗತಿ ? ದೋಷಾದಿ ಕಾರಣಗಳಿಲ್ಲದೆ, ಯಾವದೂ ಸುಳ್ಳಾಗಲಾರದಲ್ಲಾ ಎಂದು ಪುನಃ ಪಶ್ಚಾತ್ತಾಪವನ್ನು ಹೊಂದಿ, ಇವೆಲ್ಲವೂ ಅವಿದ್ಯಾಮೂಲಕವಾದರೆ ನಮ್ಮ ಕಲ್ಪನೆಯೆಲ್ಲವೂ ಸಮಂಜಸವಾಗುವದೆಂದು ಮತ್ತೊಂದು ಸುಳ್ಳು ಕಲ್ಪನೆಮಾಡಿ, ಆ ಅವಿದ್ಯೆಯು ಯಾರಿಗೆ ? ಏನು ? ಎಂದು ಕೂಲಂಕಷವಾದ ಪ್ರಶ್ನೆಯನ್ನು ತತ್ವಬುಭುತ್ಸುವು ಮಾಡಿದರೆ ಪುನಃ ಧೈರ್ಯಗೆಡದೆ, "ನದೀಮೂಲ ! ಋಷಿಮೂಲ ! ಇವುಗಳನ್ನೆಲ್ಲಾ ಹೆಚ್ಚು ವಿಚಾರಮಾಡಬಾರದು." ಎಂಬ ಲೌಕಿಕ ಗಾದೆಗೆ ಅನುಗುಣವಾಗಿ ಅವಿದ್ಯಾಮೂಲವು ಅನಿರ್ವಚನೀಯವು ಎಂದು ಪುನಃ ಕಲ್ಪನೆಮಾಡಿ; ಅಲ್ಲಿಗೂ ಸುಮ್ಮನಿರದೆ, ಒಬ್ಬ ಖಂಡಿತವಾದಿಯು ಅನಿರ್ವಚನೀಯವೆಂದರೆ ಹೇಳುವದಕ್ಕಾಗುವದಿಲ್ಲವೆಂದರ್ಥವು: ಇದರಿಂದ ನಿಮ್ಮ ಮತವು ಪ್ರಾಮಾಣಿಕವಾಗಲಾರದು ಮತ್ತು ಹೀಗೆ ನೀವು ಅವಿದ್ಯೆಯನ್ನು ಅಂಗೀಕರಿಸಿ ವಾದಮಾಡಿದರೆ ಅನವಸ್ಥಾದಿ ದೋಷಗಳು ಬರುವವು ಎಂದು ಸಭೆಯಲ್ಲಿ ಹೇಳಿಬಿಟ್ಟರೆ ಆಗ ಪರ್ಯವಸಾನದಲ್ಲಿ "ಆಗಲಿ ! ಬರಲಿ ! ಅನವಸ್ಥಾದಿದೋಷಗಳು ನಮಗೆ ಅತ್ಯಂತಪ್ರಿಯವಾದವುಗಳು ! ಅವು ನಮ್ಮ ಬಂಧುಗಳು. ಇದರ ಮೇಲೆ ನೀವೇನು ಮಾಡುವಿರಿ ?" ಎಂಬ ಒರಟು ಉತ್ತರದಿಂದ ವಾದವನ್ನು ಕೊನೆಗಾಣಿಸಬೇಕಾಗುವದು. ಇಂಥ ಅಪ್ರಾಮಾಣಿಕ ಪ್ರಮೇಯಪರಂಪರಾಕಲ್ಪನೆಯನ್ನೇ ಪೂರ್ವಿಕರು "ಅಬದ್ಧಂ

ಪಠಿತ್ವಾಕುಚೋದ್ಯೇನ ಪರಿಹರತಿ" ಎಂಬ ನ್ಯಾಯಾನುಗುಣವಾಗುವುದೆಂದು ನಿಂದಿಸಿರುತ್ತಾರೆ. ಆದುದರಿಂದ ನಿರವಕಾಶವಾದ ಭೇದವಾಕ್ಯಗಳು ಖಂಡಿತವಾದಿಯಾದ ಮಿತ್ರನಂತೆ "ಅಪ್ರಿಯಸ್ಯಚತಥ್ಯಸ್ಯ ವಕ್ತಾಶ್ರೋತಾಚದುರ್ಲಭಃ" ಎಂಬ ನ್ಯಾಯಾನುಸಾರವಾಗಿ, ಜೀವನಿಗೆ ನಿತ್ಯದಲ್ಲೂ ಬಹು ಹಿತವಾಗುವ ಪರಬ್ರಹ್ಮಾಧೀನತ್ವವನ್ನು ಬೋಧಿಸುವವೆಂದು ನಿಶ್ಚಯಿಸುವದು ಸರ್ವಶಾಸ್ತ್ರ ಸಮ್ಮತವಾದ ಅರ್ಥವೆಂದು ನಾವು ನಿರೂಪಿಸಿರುತ್ತೇವೆ.

**3.** **ಪ್ರಶ್ನೆ**— ಸ್ವಾಮೀ !

(1) **ಯಸ್ತ್ವಾತ್ಮರತಿರೇವಸ್ಯಾ ದಾತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವಚಸಂತುಷ್ಟ ಸ್ತಸ್ಯಕಾರ್ಯಂ ನವಿದ್ಯತೇ ॥**
—(3. 17.)

ಈ ಶ್ಲೋಕವು ಅಭೇದಬೋಧಕವೆಂದು ಅನೇಕರು ನಂಬಿರುವರು. ಇದರ ಅರ್ಥವನ್ನು ವಿವರಿಸಬೇಕು.

**ಉತ್ತರ**— 1. **ಆತ್ಮನ್ಯೇವಚಸಂತುಷ್ಟಃ** ಎಂದರೆ **ಆತ್ಮನಲ್ಲಿ** ಸ್ಥಿತನಾದುದರಿಂದಲೇ ಸಂತೋಷ (ಉತ್ತಮ ಸುಖ) ಹೊಂದಿದವನು ಎಂಬ ಅರ್ಥವುಳ್ಳ ಈ ಪದಗಳು ಸ್ಪಷ್ಟವಾಗಿ ಧ್ಯಾನ ಮಾಡತಕ್ಕ ಜ್ಞಾನಿಗೂ ಪರಮಾತ್ಮನಿಗೂ ಭೇದವನ್ನೇ ಹೇಳುತ್ತಿರುವವು. 2. ಮತ್ತು ಅಭೇದಬೋಧಕವಾದ ಒಂದು ಪದವೂ ಇಲ್ಲಿ ಇಲ್ಲ. ಆದುದರಿಂದ ಈ ಶ್ಲೋಕದ ಅರ್ಥವನ್ನು ಭೇದಪರವಾಗಿಯೇ ಮಾಡಬೇಕು. ಹೇಗೆಂದರೆ— ಯಾವ ಜ್ಞಾನಿಯು ಆತ್ಮನಲ್ಲಿಯೇ ರತಿವುಳ್ಳವನೋ, ಎಂದರೆ ಆತ್ಮದರ್ಶನದಿಂದುಂಟಾದ ಸುಖವುಳ್ಳವನೇ ಹೊರತು ಅನ್ಯವಿಷಯಗಳಲ್ಲಿ ಸರ್ವಥಾ ಆಸಕ್ತಿರಹಿತನೋ ಮತ್ತು ಆತ್ಮನ್ಯೇವಚ ಸಂತುಷ್ಟಃ= ಆತ್ಮದರ್ಶನದಿಂದ ಉತ್ತಮ ಸುಖವನ್ನು ಹೊಂದಿ (ಆ ಕಾರಣದಿಂದ), ಆತ್ಮತೃಪ್ತಃ= ಪರಮಾತ್ಮಪ್ರಸಾದದಿಂದ ಅನ್ಯವಿಷಯಗಳಲ್ಲಿ ಅವು ಅಲ್ಪಗಳು, ಅವು ಏತಕ್ಕೆ, ಎಂಬ ಅಲಂಬುದ್ಧಿಯನ್ನು ಹೊಂದಿದವನೋ, ಅಂಥ ಅಸಂಪ್ರಜ್ಞಾತ ಸಮಾಧಿಸ್ಥನಾದ ಜ್ಞಾನಿಯು (ತನ್ನ ಸಮಾಧಿಯನ್ನು ಬಿಟ್ಟು) ಬಾಹ್ಯಕರ್ಮವನ್ನು ಮಾಡಬೇಕಾಗಿಲ್ಲ ಎಂದು ಶ್ಲೋಕಾರ್ಥವು. ಪರಮಾತ್ಮದರ್ಶನದಿಂದ ಜ್ಞಾನಿಯು ಸುಖಿಯಾಗುವನೆಂದು ಇಲ್ಲಿರುವದೇ ಹೊರತು ಆತ್ಮನೇ ಆಗಿ ಹೋಗುವನೆಂದು ಇಲ್ಲಿ ಹೇಳಿಲ್ಲ. 3. ಮತ್ತು "ರತಿಃ" ಎಂದರೆ ಆಸಕ್ತಿಯು ದಾರಾ, ಧನ, ಆಟ, ವಿದ್ಯಾ, ಅಥವಾ ಪರಮಾತ್ಮ ಇವೇ ಮುಂತಾದ ಯಾವುದಾದರೂ ತನ್ನಿಂದ ಭಿನ್ನವಾದ ಒಂದು **ವಿಷಯದಲ್ಲಿ** ಸಂಭವಿಸುವದು; ಹಾಗೆಯೇ "**ತೃಪ್ತಿಃ**" ಎಂದರೆ ಇನ್ನು ಸಾಕು ಅಧಿಕವಾಗಿ ಬೇಡ ಎಂಬ ಅಲಂಬುದ್ಧಿಯು ಒಂದು ಕಡೆಯಿಂದ ಸುಖವು ಪ್ರಾಪ್ತವಾದುದನ್ನೂ, ಅಲ್ಪಸುಖವನ್ನು ಕೊಡುವ ಇತರ ವಿಷಯ ಸದ್ಭಾವವನ್ನೂ ಬೋಧಿಸುವುದು. **4.** ತನ್ನಲ್ಲಿಯೇ ರತಿಯು, ತನ್ನ

ಲ್ಲಿಯೇ ಅಲಂಬುದ್ಧಿಯನ್ನು ಹೊಂದುವದು ಎಂದು ಅರ್ಥ ಮಾಡಿದರೆ ಉತ್ತರಾರ್ಧಕ್ಕೆ ವಿರೋಧವಾಗುವದಲ್ಲದೆ ಅದ್ವೈತಮತದ ರೀತಿಯಿಂದ ಪ್ರಬಲವಾದ **ಕರ್ತೃಕರ್ಮವಿರೋಧವೂ** ಪ್ರಾಪ್ತವಾಗುವದು. 5. ಪರಂತು ಜ್ಞಾನಿಯು ಆತ್ಮೈಕ್ಯವನ್ನು ಹೊಂದಿದ ಮೇಲೆ ಪುನಃ ದೇಹಾದಿಗಳಿಂದ ಸಹಿತವಾಗಿ ಭೂಲೋಕದಲ್ಲಿ ಕಂಡು ಬರುವುದೇ ಅದ್ವೈತಮತದ ರೀತಿಯಿಂದ ಅಶಕ್ಯವು. ಐಕ್ಯಜ್ಞಾನವು ಅದ್ವೈತಶಾಸ್ತ್ರ ಪ್ರಕಾರ ಇದುವರೆಗೆ ಯಾರಿಗೂ ಬಂದಿಲ್ಲವೆಂದು ನಾವು ನಿರೂಪಿಸಿರುತ್ತೇವೆ. ಆದುದರಿಂದ ಬ್ರಹ್ಮಜ್ಞಾನಿಯು ಕರ್ಮ ಮಾಡಬೇಕಾಗಿಲ್ಲವೆಂದು ಹೇಳುವದು ಕೇವಲ ಅಪ್ರಸಕ್ತ ವಚನವಾಗುವದು. 6. ಮತ್ತು ಇಲ್ಲಿ ಹೇಳಿರುವ ಆತ್ಮತೃಪ್ತಿಯು ಅತ್ಯುತ್ತಮ ವಸ್ತುಲಾಭದಿಂದಲೇ ಎಂಬುದು ಇದೇ ಅಧ್ಯಾಯದ ಉತ್ತರ ಶ್ಲೋಕದಿಂದಲೂ, ಆರನೆಯ ಅಧ್ಯಾಯದ ಸಮಾಖ್ಯಾವಾಕ್ಯದಿಂದಲೂ ನಿಶ್ಚಯವಾಗುವದು.

(2) **ನಚಾಸ್ಯಸರ್ವಭೂತೇಷುಕಶ್ಚಿದರ್ಥವ್ಯಪಾಶ್ರಯಃ ।**
—(3. 18.)

(3) **ಯತ್ರಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿತುಷ್ಯತಿ ।**
**ಸುಖಮಾತ್ಯಂತಿಕಂ ಯತ್ತದ್ಬುದ್ಧಿ ಗ್ರಾಹ್ಯಮತೀಂದ್ರಿಯಂ ।**
**ವೇತ್ತಿಯತ್ರನಚೈವಾಯಂ ಸ್ಥಿತಶ್ಚಲತಿತತ್ವತಃ ।**
**ಯಂ ಲಬ್ಧ್ವಾಚಾಪರಂಲಾಭಂ ಮನ್ಯತೇನಾಧಿಕಂತತಃ ।**
—(6. 20-22.)

ಅಸಂಪ್ರಜ್ಞಾತ ಸಮಾಧಿಸ್ಥನಾದ ಯೋಗಿಯು ಆತ್ಮನಾ = ಪರಮಾತ್ಮ ಪ್ರಸಾದದಿಂದ ಅಥವಾ ಮನಸ್ಸಿನಿಂದ, ಆತ್ಮಾನಂ ಎಂದರೆ ಭಗವಂತನನ್ನು ನೋಡುವವನಾಗಿ, ಆತ್ಮನಿ = ಆ ಭಗವಂತನಲ್ಲಿ ( ಅಥವಾ ಆತ್ಮಾ ಎಂದರೆ ದೇಹವೆಂದೂ ಅರ್ಥವಾಗುವದರಿಂದ, ಸ್ವದೇಹದಲ್ಲಿಯೇ) ಸುಖವನ್ನು ಹೊಂದಿ, ಅತೀಂದ್ರಿಯವಾದ, ಬುದ್ಧಿಗ್ರಾಹ್ಯವಾದ ಆತ್ಯಂತಿಕ ಸುಖವನ್ನು ಅನುಭವಿಸುತ್ತಾನೆ. ಧ್ಯಾನದಲ್ಲಿ ಸ್ಥಿತನಾದ ಇಂಥ ಯೋಗಿಯು ತತ್ವತಃ ಎಂದರೆ ಧ್ಯೇಯವಾದ ಭಗವದ್ರೂಪದ ದೆಸೆಯಿಂದ ಸ್ವಲ್ಪವೂ ಚಲಿಸುವುದಿಲ್ಲ. ( ಹಾಗೆ ಮತ್ತೊಂದು ವಿಷಯವನ್ನು ಕುರಿತು ಯೋಗಿಯ ಮನಸ್ಸು ಯಾತಕ್ಕೆ ಚಲಿಸುವದಿಲ್ಲವೆಂದರೆ :— ) ಆ ಸಮಾಧಿಯೋಗವನ್ನು ಹೊಂದಿದ ನಂತರ ಜ್ಞಾನಿಗೆ ( ತಾನು ನೋಡುತ್ತಿರುವ) ಆ ಭಗವಂತನಿಂದ **ಅಧಿಕವಾದ ಯಾವ ಲಭ್ಯಪದಾರ್ಥವೂ** ಲೋಕದಲ್ಲಿರುವದಿಲ್ಲ; ಹೀಗೆ ಹೇಳಿರುವದರಿಂದ "ಯಸ್ತ್ವಾತ್ಮರತಿ ರೇವಸ್ಯಾತ್ " ಎಂಬ ಶ್ಲೋಕವನ್ನು ಭೇದಪರವಾಗಿಯೇ ವ್ಯಾಖ್ಯಾನ ಮಾಡಬೇಕು.

**4.** ಪ್ರಶ್ನೆ— ಸ್ವಾಮೀ !

(1) **ಇದಂಶರೀರಂಕೌಂತೇಯಕ್ಷೇತ್ರಮಿತ್ಯಭಿಧೀಯತೇ ।**
**ಏತದ್ಯೋವೇತ್ತಿತಂಪ್ರಾಹುಃ ಕ್ಷೇತ್ರಜ್ಞಮಿತಿತದ್ವಿದಃ ।**
**ಕ್ಷೇತ್ರಜ್ಞಂಚಾಪಿಮಾಂ ವಿದ್ಧಿ ಸರ್ವಕ್ಷೇತ್ರೇಷುಭಾರತ ॥**
—(13. 23.)

ಎಲೈ ಕೌಂತೇಯನೇ ! ಈ ಶರೀರವು ಕ್ಷೇತ್ರವೆನಿಸುವದು. ಇದನ್ನು ತಿಳಿದವನು ಕ್ಷೇತ್ರಜ್ಞನೆಂದೆನಿಸುವನು. ಸರ್ವ ಕ್ಷೇತ್ರಗಳಲ್ಲಿಯೂ ಇರುವ ಅಂಥ **ಕ್ಷೇತ್ರಜ್ಞನು ನಾನು.** ಹೀಗೆ ಇರುವುದರಿಂದ ಶರೀರದಲ್ಲಿರುವ ಜೀವನೇ ಬ್ರಹ್ಮನು ಎಂದು ಸಿದ್ಧವಾಗುವದಿಲ್ಲವೇ ?

**ಉತ್ತರ—** ಈ ಶ್ಲೋಕದಲ್ಲಿ ಕ್ಷೇತ್ರಪದಕ್ಕೆ ಆರು ಅಡಿ ಪ್ರಮಾಣವುಳ್ಳ ನಮ್ಮ ದೇಹಮಾತ್ರವೆಂದು ಅರ್ಥವಲ್ಲ. ಈ ಪದದ ಅರ್ಥವನ್ನು ಶ್ರೀ ಕೃಷ್ಣನೇ ಮಾಡಿರುತ್ತಾನೆ.—

(2) **ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವಚ ।**
**ಇಂದ್ರಿಯಾಣಿದಶೈಕಂಚ ಪಂಚಚೇಂದ್ರಿಯಗೋಚರಾಃ ॥**
**ಇಚ್ಛಾದ್ವೇಷಃ ಸುಖಂದುಃಖಂ ಸಂಘಾತಶ್ಚೇತನಾಧೃತಿಃ ।**
**ಏತತ್ಕ್ಷೇತ್ರಂಸಮಾಸೇನ ಸವಿಕಾರಮುದಾಹೃತಂ ॥**
—(13. 5-6.)

ಪೃಥಿವೀ, ಜಲ, ಅಗ್ನಿ, ವಾಯು, ಆಕಾಶವೆಂಬ ಪಂಚ ಮಹಾಭೂತಗಳು; ಮಹತ್ತತ್ವದಿಂದ ಸಹಿತವಾದ ಅಹಂಕಾರತತ್ವವು; ಬುದ್ಧಿತತ್ವವು; ಅವ್ಯಕ್ತ ತತ್ವವು; ಹನ್ನೊಂದು ಇಂದ್ರಿಯತತ್ವಗಳು ಮತ್ತು ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ಇಂದ್ರಿಯ ವಿಷಯಗಳು; ಹೀಗೆ **ಇಪ್ಪತ್ತುನಾಲ್ಕು ತತ್ವಗಳು ಕ್ಷೇತ್ರವೆನಿಸುವವು.**

ಈ ರೀತಿಯಲ್ಲಿ ಶರೀರವೆಂದರೆ ಕ್ಷೇತ್ರವು, ಕ್ಷೇತ್ರವೆಂದರೆ ಇಪ್ಪತ್ತು ನಾಲ್ಕು ತತ್ವಸಮೂಹವು; ಇವುಗಳನ್ನು ತಿಳಿದವನು ಕ್ಷೇತ್ರಜ್ಞನು ಅಂಥ ಕ್ಷೇತ್ರಜ್ಞನು ನಾನು ಎಂದು ಶ್ರೀ ಕೃಷ್ಣನು ಹೇಳಿರುವದರಿಂದ ಸಾಮಾನ್ಯವಾದ ಒಂದು ಘಟವನ್ನೇ ಸಾಕಲ್ಯೇನ ತಿಳಿಯುವದಕ್ಕೆ ಶಕ್ತಿಹೀನನಾಗಿರುವ ಜೀವನು ಹೇಗೆ ತಾನೇ ಅವ್ಯಕ್ತತತ್ವಾಂತವಾದ ಜಗತ್ತನ್ನು ತಿಳಿದ ಕ್ಷೇತ್ರಜ್ಞನಾದಾನು ? ಆದುದರಿಂದ ಇಲ್ಲಿ ಶರೀರಪದವು ಯೌಗಿಕವು, ಎಂದರೆ

**ಹಿಂಸಾಹೇತುಶ್ಚಜೀವಸ್ಯ ಪರೇಣಪ್ರೇರ್ಯತೇ ಚಯತ್ ।**

ಎಂಬ ಪ್ರಮಾಣಶ್ಲೋಕದಲ್ಲಿ ಕೂಡ ಪ್ರದರ್ಶಿತವಾದ ಶೄಹಿಂಸಾಯಾಂ, ಈರ ಪ್ರೇರಣೇ ಎಂಬ ಎರಡು ಧಾತುಗಳಿಂದ ನಿಷ್ಪನ್ನವಾಗಿ "ಪರಮಾತ್ಮನಿಂದ

ಪ್ರೇರ್ಯವಾದ ಮತ್ತು ಜೀವನಿಗೆ ಸುಖದುಃಖಗಳಿಗೆ ಕಾರಣವಾದ ಇಪ್ಪತ್ತು ನಾಲ್ಕು ತತ್ವರಾಶಿಗಳು ಎಂದು ಅರ್ಥವಾಗುವದು. 2. ಅಲ್ಲದೆ "ಸರ್ವಕ್ಷೇತ್ರೇಷು ಭಾರತ" ಎಂದರೆ ಸರ್ವಕ್ಷೇತ್ರಗಳಲ್ಲಿಯೂ ಇದ್ದು ಕ್ಷೇತ್ರಸ್ವರೂಪವನ್ನು ನಾನು ತಿಳಿದವನಾದುದರಿಂದ ನಾನು ಕ್ಷೇತ್ರಜ್ಞನು ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ. ತನ್ನ ಶರೀರವನ್ನೇ ತಿಳಿಯಲಾರದೆ ವೈದ್ಯರ ಅಧೀನನಾದ ಒಬ್ಬೊಬ್ಬ ಜೀವನಿಗೆ ಸರ್ವಕ್ಷೇತ್ರಗಳ ವಾಸವೂ, ಸರ್ವಕ್ಷೇತ್ರಗಳ ಜ್ಞಾನವೂ ಹೇಗೆ ಸಂಭವಿಸುವುದು ? ಆದುದರಿಂದ, ಶರೀರವೆಂದರೆ ಭಗವಂತನಿಂದ ಪ್ರೇರ್ಯವಾದ ಕ್ಷೇತ್ರವೆಂದು ಹೆಸರುಳ್ಳ ಅವ್ಯಕ್ತಾಂತ ಸಮಸ್ತ ವಸ್ತುಗಳು. ಅವುಗಳನ್ನು ತಿಳಿದವನು ಕ್ಷೇತ್ರಜ್ಞನು; ಅಂಥ ಕ್ಷೇತ್ರಜ್ಞನು ನಾನು; ಎಂದು ಈ ಶ್ಲೋಕಗಳಿಗೆ ಅರ್ಥ ಮಾಡಬೇಕು.

ಈ ರೀತಿಯಲ್ಲಿ, ಶ್ರೀಮದ್ಭಗವದ್ಗೀತೆಯಲ್ಲಿ ಒಂದು ಅಭೇದಸಾಧಕವಚನವೂ ಇಲ್ಲವಾದುದರಿಂದ, ಪರಸ್ಪರಭಿನ್ನರಾದ ಅನೇಕ ಜೀವರುಗಳಿಂದ ಅತ್ಯಂತ ಭಿನ್ನನಾದ ನಾರಾಯಣನು (ತಾನು) ಪುರುಷೋತ್ತಮನೆಂಬುದೇ ಶ್ರೀ ಕೃಷ್ಣನ ಅಭಿಪ್ರಾಯವೆಂದು ನಿಶ್ಚಯಿಸಬೇಕು.

## 8.

ಇನ್ನು ವಾಕ್ಯತಾತ್ಪರ್ಯನಿರ್ಣಾಯಕ ಉಪಕ್ರಮಾದಿ ಲಿಂಗಗಳ ಪರಾಮರ್ಶೆಯಿಂದಲೂ, ಭಗವದ್ಗೀತಾವಾಕ್ಯಗಳಿಗೆ ಜೀವಬ್ರಹ್ಮರ ಭೇದ ಮತ್ತು ವಿಷ್ಣುಸರ್ವೋತ್ತಮತ್ವ ಇವುಗಳಲ್ಲಿಯೇ ತಾತ್ಪರ್ಯವಿರುವುದೇ ಹೊರತು, ಅವುಗಳು ಅಭೇದದ ಸುದ್ದಿಯನ್ನೇ ಅರಿಯವೆಂಬುದು ನಿಶ್ಚಿತವಾಗುವದು. ತಥಾಹಿ—

**1. ಉಪಕ್ರಮದಲ್ಲಿ,**

(1) **ಧರ್ಮಕ್ಷೇತ್ರೇಕುರುಕ್ಷೇತ್ರೇಸಮವೇತಾಯುಯುತ್ಸವಃ ।**
—(1. 1.)

ಎಂದು ಇರುವುದು. ಧರ್ಮಸಾಧನ ಭೂಮಿಯಾದ ಕುರುಕ್ಷೇತ್ರದಲ್ಲಿ ಯುದ್ಧೇಚ್ಛುಗಳಾದ ಕುರುಪಾಂಡವರು ಮಿಳಿತರಾದರು, ಎಂದು ಅರ್ಥವು. ಇಲ್ಲಿ ಅನೇಕ ಪರಸ್ಪರ ಭಿನ್ನರಾದ ಜೀವರುಗಳು ಇದ್ದರೆಂದು ಹೇಳಿರುತ್ತದೆ. ಇವರುಗಳು ಪರಸ್ಪರ ದ್ವೇಷದಿಂದ ಯುದ್ಧಾರ್ಥವಾಗಿ ಪ್ರಾಪ್ತವಾಗಿರುವದರಿಂದ, ಇವರಿಗೆ ಐಕ್ಯವು ಸರ್ವಥಾ ಸಂಭವಿಸಲಾರದೆಂದು ಯುಕ್ತಿಯೂ ಹೇಳಿರುವದು. ಜೀವಬ್ರಹ್ಮರ ಭೇದವನ್ನೂ ಇದೇ ಶ್ಲೋಕದಲ್ಲಿಯೇ ಹೇಳಿದಂತೆಯೇ ಆಯಿತು. ಹೇಗೆಂದರೆ— ಸರ್ವಜೀವರುಗಳೂ ಬ್ರಹ್ಮನಿಂದ ಅತ್ಯಂತ ಅಭಿನ್ನರಾದರೆ :— **ತದಭಿನ್ನಾಭಿನ್ನಸ್ಯತದಭಿನ್ನತ್ವಂ** ಎಂಬ ನ್ಯಾಯದಿಂದ, ಜೀವರುಗಳೂ ಪರಸ್ಪರ ಅಭಿನ್ನರೇ ಆಗಬೇಕು. ಕೃಷ್ಣನೂ ರಾಮನೂ ನಾರಾಯಣಾಭಿನ್ನರಾದರೆ, ಕೃಷ್ಣ

ರಾಮರು ಪರಸ್ಪರ ಅಭಿನ್ನರಾಗಬೇಕು ಎಂದು ಈ ನ್ಯಾಯದ ಅರ್ಥವು. ಪ್ರಕೃತದಲ್ಲಿ ಹೀಗಲ್ಲದೆ, ಪರಸ್ಪರಭಿನ್ನರಾದ ಅನೇಕ ಜೀವರುಗಳು ಉಂಟೆಂದು ಹೇಳಿರುವುದರಿಂದ, ಜೀವಬ್ರಹ್ಮರೂ ಸಹ ಪರಸ್ಪರ ಭಿನ್ನರಾಗಿಯೇ ಇರಬೇಕು. ಮತ್ತು ಯುದ್ಧದಲ್ಲಿ ಒಬ್ಬನು ಮತ್ತೊಬ್ಬನನ್ನು ಸಂಹರಿಸಿ ಸುಖಿಯಾಗಬೇಕೆಂದು ಇಚ್ಛೆಯುಳ್ಳವನಾದುದರಿಂದ, ಸುಖದುಃಖಗಳು ಪ್ರತಿಯೊಬ್ಬ ಜೀವನಿಗೂ ಪ್ರತ್ಯೇಕವಾಗಿ ಇರುವುವೆಂದು ಸಿದ್ಧವಾಗುವುದು. ಹಾಗಿಲ್ಲದೆ, ಪರಸ್ಪರ ಐಕ್ಯವು ಇದ್ದ ಪಕ್ಷದಲ್ಲಿ, ಒಬ್ಬನ ಸುಖವು ಇತರರಿಗೂ ಮತ್ತು ಒಬ್ಬನ ದುಃಖವೂ ಸರ್ವರಿಗೂ ಆಗಬೇಕು. ಕಿಂಚ ಪಾಂಡವದುರ್ಯೋಧನಾದಿಗಳಿಗೆ ಐಕ್ಯವಿದ್ದರೆ, ದುರ್ಯೋಧನನ ಸಂಹಾರರೂಪವಾದ ಅವರ ಯುದ್ಧಕಾರ್ಯದಲ್ಲಿ, ಪಾಂಡವರು ತಮ್ಮನ್ನೇ ತಾವು ದ್ವೇಷಮಾಡಿ ಆತ್ಮಹನನವನ್ನು ಮಾಡಿಕೊಂಡಂತಾಗುವದು. ಹಾಗಿಲ್ಲದೆ, "ಇದು ಧರ್ಮಯುದ್ಧವು; ಶತ್ರುವಾದ ದುರ್ಯೋಧನನು ಸತ್ತರೆ ದುಃಖಪಡಕೂಡದು." ಎಂದು ಗೀತೋಪದೇಶದ ಉಪಕ್ರಮವಾಕ್ಯದಲ್ಲಿಯೇ ಶ್ರೀ ಕೃಷ್ಣನು ಹೇಳುತ್ತಾನೆ—

(2) **ಅಶೋಚ್ಯಾನನ್ವಶೋಚಸ್ತ್ವಂ |** —(2. 11.)

ಅರ್ಜುನ! ನೀನು ಶೋಕಕ್ಕೆ ಅರ್ಹರಲ್ಲದ ಧಾರ್ತರಾಷ್ಟ್ರರನ್ನು ಕುರಿತು ಶೋಕಪಡುತ್ತಿದ್ದೀಯೆ.

ಇನ್ನೂ ಹಿಂದೆಯೇ, ಅಜ್ಞಾನದಿಂದ ಸಹಿತನಾದ ಅರ್ಜುನ ಜೀವನು ಜ್ಞಾನಾರ್ಥವಾಗಿ ಪರಬ್ರಹ್ಮನಾದ ಶ್ರೀ ಕೃಷ್ಣನಲ್ಲಿ ಶರಣಾಗತನಾಗಿರುತ್ತಾನೆ.

(3) **ಶಿಷ್ಯಸ್ತೇಽಹಂ ಶಾಧಿಮಾಂತ್ವಾಂ ಪ್ರಪನ್ನಂ |** —(2. 7.)

ಹೇ ಮಧುಸೂದನ! (ಧರ್ಮಸಂಕಟದಲ್ಲಿ ಸಿಕ್ಕಿ ಬಿದ್ದು) ಶಿಷ್ಯನಾಗಿ ನಿನ್ನಲ್ಲಿ ಶರಣಾಗತನಾಗಿರುತ್ತೇನೆ. ನನ್ನನ್ನು ಶಿಕ್ಷಿಸು ಎಂದರೆ ನನಗೆ ಶ್ರೇಯಸ್ಕರವಾದ ಮಾರ್ಗವನ್ನು ಉಪದೇಶ ಮಾಡು.

**2. ಉಪಸಂಹಾರದಲ್ಲಿ**ಯೂ ಜೀವಬ್ರಹ್ಮರಿಗೆ ಸಯುಕ್ತಿಕವಾದ ಭೇದವೇ ಪ್ರತಿಪಾದಿಸಲ್ಪಟ್ಟಿರುವುದು.

(1) **ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ |**
**ತಮೇವಶರಣಂಗಚ್ಛ ಸರ್ವಭಾವೇನ ಭಾರತ |**
**ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ |**

ಪರಬ್ರಹ್ಮನು ಸರ್ವ ಪ್ರಾಣಿಗಳ ಹೃದಯ ಪ್ರದೇಶದಲ್ಲಿ ನಿಯಾಮಕನಾಗಿ ಸ್ಥಿತನಾಗಿರುವನು. ಹೇ ಅರ್ಜುನ! ನೀನು ಅವನನ್ನೇ ಸರ್ವಪ್ರಕಾರವಾಗಿಯೂ ಶರಣು ಹೊಂದು. ಅವನ ಪ್ರಸಾದದಿಂದ ಉತ್ತಮವಾದ ಜ್ಞಾನವನ್ನೂ ಶಾಶ್ವತವಾದ ವೈಕುಂಠಾದಿ ಸ್ಥಾನವನ್ನೂ ಹೊಂದುತ್ತೀಯೆ.

ಈ ರೀತಿಯಾಗಿ ಶ್ರೀ ಕೃಷ್ಣನು ತನ್ನ ವಿಸ್ತಾರವಾದ ಉಪದೇಶವನ್ನು ಮುಗಿಸಿ, ಉಪಸಂಹಾರದಲ್ಲಿ ತನ್ನಿಂದ ಉಪದಿಷ್ಟವಾದ ತತ್ವಸಾರವನ್ನು ಪುನಃ ಸಂಕ್ಷೇಪವಾಗಿ ನಿರೂಪಣೆ ಮಾಡುತ್ತಾನೆ :—

(2) **ಸರ್ವಗುಹ್ಯತಮಂಭೂಯಃ ಶೃಣುಮೇಪರಮಂವಚಂ ।**
**ಇಷ್ಟೋಽಸಿಮೇದೃಢಮಿತಿತತೋವಕ್ಷ್ಯಾಮಿತೇಹಿತಂ ।**
**ಮನ್ಮನಾಭವಮದ್ಭಕ್ತೋಮದ್ಯಾಜೀಮಾಂ ನಮಸ್ಕುರು ।**
**ಮಾಮೇವೈಷ್ಯಸಿಸತ್ಯಂತೇ ಪ್ರತಿಜಾನೇಪ್ರಿಯೋಽಸಿಮೇ ।**
**ಸರ್ವಧರ್ಮಾನ್ಪರಿತ್ಯಜ್ಯಮಾಮೇಕಂ ಶರಣಂವ್ರಜ ।**
**ಅಹಂತ್ವಾಸರ್ವಪಾಪೇಭ್ಯೋಮೋಕ್ಷಯಿಷ್ಯಾಮಿಮಾಶುಚಃ ॥**
—(18. 64-66)

ಅರ್ಜುನ ! ಪುನಃ ಅತ್ಯಂತ ಗೋಪ್ಯವಾದ, ಪರಮಂ ಎಂದರೆ ಅತಿ ಯಥಾರ್ಥವಾದ ನನ್ನ ಮಾತನ್ನು ಕೇಳು. ನನಗೆ ನೀನು ಬಹು ಪ್ರಿಯನಾಗಿರುತ್ತೀಯಾದುದರಿಂದ ನಿನಗೆ ಹಿತವನ್ನು ಹೇಳುತ್ತೇನೆ. ನೀನು ನನ್ನಲ್ಲಿಯೇ ಇಡಲ್ಪಟ್ಟ ಮನಸ್ಸುಳ್ಳವನಾಗು; ನನ್ನ ಭಕ್ತನಾಗು; ನನ್ನ ಉದ್ದೇಶ್ಯಕವಾದ ಯಾಗವನ್ನು ಮಾಡು; ನನ್ನನ್ನು ನಮಸ್ಕರಿಸು; ನೀನು ನನ್ನನ್ನೇ ಹೊಂದುವವನಾಗುತ್ತೀಯೆ. ಇದು ಸತ್ಯವೆಂದು ಪ್ರತಿಜ್ಞೆ ಮಾಡುತ್ತೇನೆ. ನೀನು ನನಗೆ ಪ್ರಿಯನಾಗಿರುತ್ತೀ.

ಸರ್ವ ಅವೈಷ್ಣವ ಧರ್ಮಗಳನ್ನು ಪರಿತ್ಯಾಗ ಮಾಡಿ ನಾನೇ ಪ್ರಧಾನನೆಂದು ತಿಳಿದು ನನ್ನನ್ನು ಶರಣು ಹೊಂದು. ನಾನು ನಿನ್ನನ್ನು ಸರ್ವ ಪಾಪಗಳಿಂದಲೂ ಬಿಡಿಸಿ ಬಿಡುತ್ತೇನೆ. ನೀನು ಶೋಕಪಡಬೇಡ.

"ನೀನು ಶೋಕಪಡಬೇಡ" ಎಂಬ ಶ್ರೀ ಕೃಷ್ಣನ ಮಾತು **ಜೀವಾ ಏವತು ದುಃಖಿನಃ** " ಎಂಬ ಶ್ರುತಿಯನ್ನು ಸ್ಮರಣೆಗೆ ತಂದು ಕೊಡುತ್ತದೆ. ಅರ್ಜುನನೂ ಕೂಡ, ಪರಬ್ರಹ್ಮನಾದ ಶ್ರೀ ಕೃಷ್ಣನಿಗೂ ತನಗೂ ಅತ್ಯಂತ ಭೇದವನ್ನೇ ಅಂಗೀಕರಿಸಿರುತ್ತಾನೆ.

(3) **ನಷ್ಟೋ ಮೋಹಃ ಸ್ಮೃತಿರ್ಲಬ್ಧಾತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಽಸ್ಮಿಗತಸಂದೇಹಃ ಕರಿಷ್ಯೇವಚನಂ ತವ ।** —(18. 73.)

ಎಲೈ ಅಚ್ಯುತನೇ ? ನನ್ನ ಬಂಧುಸ್ನೇಹಜನಿತ ಮಿಥ್ಯಾಜ್ಞಾನವು ನಷ್ಟವಾಯಿ. ನಿನ್ನ ಪ್ರಸಾದದಿಂದ ನನ್ನ ಪೂರ್ವಜ್ಞಾನವು ಪ್ರಾಪ್ತವಾಯಿತು. ಸಂದೇಹರಹಿತನಾಗಿ ಯುದ್ಧದಲ್ಲಿ ಸ್ಥಿತನಾಗಿರುತ್ತೇನೆ. ನಿನ್ನ ಆಜ್ಞೆಯಂತೆ ನಡೆಯುತ್ತೇನೆ.

ಅರ್ಜುನನು ಶ್ರೀ ಕೃಷ್ಣನ ಕೈಂಕರ್ಯವನ್ನೇ ಒಪ್ಪಿದಂತಾಯಿತು. ಭಗವದ್ಗೀತೆಯ ಅಂತ್ಯ ಶ್ಲೋಕದಲ್ಲಿಯೂ, **"ಯತ್ರ ಯೋಗೀಶ್ವರಃ ಕೃಷ್ಣೋಯತ್ರ**

**ಪಾರ್ಥೋಧನುರ್ಧರಃ** ” ಎಂದು ಕೃಷ್ಣಾರ್ಜುನರ ಹೆಸರುಗಳನ್ನು ಬೇರೆ ಬೇರೆ ಗ್ರಹಣಮಾಡಿ ಕೃಷ್ಣನಿಗೆ ಉತ್ತಮತ್ವ ಸಾಧಕವಾದ “ ಯೋಗೀಶ್ವರಃ ” ಎಂಬ ವಿಶೇಷಣವನ್ನು ಕೊಟ್ಟಿರುವದರಿಂದ, ಉಪಸಂಹಾರದಲ್ಲಿ ಭೇದವೇ ಸಿದ್ಧ ವಾಗುವದೇ ಹೊರತು ಅಭೇದಗಂಧಕ್ಕೆ ಸರ್ವಥಾ ಅವಕಾಶವಿರುವದಿಲ್ಲ.

**3. ಅಭ್ಯಾಸವೂ** ಜೀವಬ್ರಹ್ಮರ ಭೇದದಲ್ಲಿಯೇ ಇರುವದು. ದಾರ್ಢ್ಯಾರ್ಥವಾಗಿಯೂ, ನಾಭಿಪ್ರಾಯವಾಗಿ (ಮನಃಪೂರ್ವಕವಾಗಿ) ಹೇಳಿದುದೆಂದು ತೋರಿಸುವದಕ್ಕಾಗಿಯೂ, ಉಕ್ತಪ್ರಮೇಯವನ್ನು ಪುನಃ ಪುನಃ ಹೇಳುವದು ಅಭ್ಯಾಸವೆನಿಸುವುದು.

(1) **ಯೋಬುದ್ಧೇಃ ಪರತಸ್ತುಸಃ** । —(3. 42.)

(2) **ಪರಸ್ತಸ್ಮಾತ್ತುಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ** ।
—(8. 20.)

(3) **ಉತ್ತಮಃ ಪುರುಷಸ್ತ್ವನ್ಯಃ** । —(15. 17.)

ಇತ್ಯಾದಿ ಬಹು ಸ್ಥಳಗಳಲ್ಲಿ ಪರಮಾತ್ಮನು ಜೀವರುಗಳಿಂದ ಭಿನ್ನನೆಂದು ಪುನಃ ಪುನಃ ಪ್ರತಿಪಾದಿಸಲ್ಪಟ್ಟಿರುವದು. ಮತ್ತು ಅಲ್ಲಿ ಅಲ್ಲಿ ಭೇದಸಾಧಕವಾದ ಸ್ವಾಮಿಭೃತ್ಯಭಾವವು, ನಿಯಾಮಕನಿಯಮ್ಯಭಾವವು, ಮತ್ತು ಆಧಾರಾಧೇಯ ಭಾವವೇ ಮೊದಲಾದ ಬಹು ಯುಕ್ತಿಗಳನ್ನು ಹೇಳಿರುತ್ತಾನೆ. ಆದುದರಿಂದ ಅಭ್ಯಾಸವೂ ಜೀವಬ್ರಹ್ಮರ ಭೇದಕ್ಕೇ ಸಾಧಕವಾಗಿರುವದು.

**4. ಅಪೂರ್ವತಾ** ಎಂಬ ಲಿಂಗವೂ ಕೂಡ ಜೀವಬ್ರಹ್ಮರಿಗೆ ಭೇದವನ್ನೇ ತೋರಿಸಿ ಕೊಡುವದು. ಪ್ರಮಾಣಾಂತರದಲ್ಲಿ ಹೇಳದೇ ಇರುವ ಹೊಸ ವಿಷಯ ವನ್ನು ಪ್ರತಿಪಾದನೆ ಮಾಡಿದರೆ, ಆ ನೂತನ ವಿಷಯೋಪನ್ಯಾಸದಲ್ಲಿ ಗ್ರಂಥಕಾರ ನಿಗೆ ಅಧಿಕ ತಾತ್ಪರ್ಯವಿರುತ್ತದೆ ಎಂದು ತಿಳಿದು ಬರುವದು. ಇದಕ್ಕೆ ಅಪೂರ್ವತೆ ಎಂದು ಹೆಸರು. ಭೇದವು ಸಾಮಾನ್ಯ ಪ್ರತ್ಯಕ್ಷದಿಂದ ಸಿದ್ಧವಾಗಿರುವದರಿಂದ ಭೇದ ವನ್ನು ಹೇಳುವ ಯಾವ ಶಾಸ್ತ್ರಕ್ಕೂ ಅಪೂರ್ವತೆಯು ಇಲ್ಲವಾದುದರಿಂದ ಭೇದ ಪ್ರತಿಪಾದಕವಾದ ಸರ್ವ ವೇದ ಭಾಗಗಳೂ ಅಪ್ರಮಾಣಗಳೆಂದು ಅದ್ವೈತಿಗಳು ಹೇಳುತ್ತಾರೆ. ಆದರೆ ಇದು ಕೇವಲ ಅಭಿಮಾನದ ಮಾತು. 1. ಅಪೂರ್ವತೆಯು ಇಲ್ಲದ ವಾಕ್ಯಗಳೆಲ್ಲಾ ಅಪ್ರಮಾಣಗಳಾಗುವುದಾದರೆ ಮೊದಲಾವರ್ತಿ ಹೇಳಿದ **ತತ್ತ್ವಮಸಿ** ಎಂಬ ವಾಕ್ಯವು ಪ್ರಮಾಣವಾದರೂ, ಎರಡನೆಯ, ಮೂರನೆಯ, ಹಾಗೂ ಒಂಭತ್ತನೆಯ ಸಲದವರೆಗೆ ಉಪದಿಷ್ಟವಾದ ತತ್ವಮಸಿ ವಾಕ್ಯಗಳು ಅಪ್ರಮಾಣವೆಂದು ಒಪ್ಪಬೇಕಾಗುವದು. 2. ಅಪೂರ್ವತೆಯಿಂದಲೇ ವಾಕ್ಯಪ್ರಾ ಮಾಣ್ಯವನ್ನು ನಿಶ್ಚಯಿಸುವದಾದರೆ **ಅಸದೇವೇದಮಗ್ರ ಆಸೀತ್** ಎಂಬ

ಶ್ರುತಿಯು **"ಶೂನ್ಯವು ಮೊದಲಿತ್ತು"** ಎಂದು ಅಪೂರ್ವವಾಗಿ ಹೇಳುವದರಿಂದ ಅದ್ವೈತಿಗಳೂ ಕೂಡ ಶೂನ್ಯವೇ ಜಗತ್ಕಾರಣವೆಂದು ಒಪ್ಪಬೇಕಾದೀತು! **3.** ಅಪೂರ್ವತೆಯಿಂದಲೇ ವಾಕ್ಯವು ಪ್ರಮಾಣವಾಗುವದಾದರೆ, ಅಭ್ಯಾಸವು ತಾತ್ಪರ್ಯನಿರ್ಣಾಯಕಲಿಂಗವೆಂಬ ಶಾಸ್ತ್ರಜ್ಞರ ನಿಶ್ಚಯವನ್ನು ಪರಿತ್ಯಾಗ ಮಾಡಬೇಕು. **4.** ಪರಂತು ಗುರುವು ನಾಲ್ಕು ಮೂರು ಏಳು ಎಂದು ಹೇಳಿದ ನಂತರ ಶಿಷ್ಯನ ನಾಲ್ಕು ಮೂರೇಳು ಎಂಬ ವಾಕ್ಯಕ್ಕೆ ಅಪೂರ್ವತೆಯು ಇಲ್ಲದುದರಿಂದ ಅಪ್ರಾಮಾಣ್ಯವು ಪ್ರಾಪ್ತವಾಗಿ ಲೋಕ ವ್ಯವಹಾರವೇ ಕಷ್ಟಕರವಾಗಬೇಕಾಗುವದು. 5. ಕಿಂಚ **"ಯತ್ಪುನರುಕ್ತಂ ತದಪ್ರಮಾಣಂ"** ಎಂಬ ಬೌದ್ಧರ ಅನುಭವ ವಿರುದ್ಧವಾದ ನ್ಯಾಯವೇ ಪ್ರಾಪ್ತವಾಗುವದು. ಒಂದು ಸಾರಿ ಹೇಳಿದುದನ್ನೇ ಪುನಃ ಹೇಳಿದರೆ ಅದು ಅಪ್ರಮಾಣವೆನಿಸುವುದೆಂದು ಬೌದ್ಧರು ಹೇಳಿರುವರು. ಈ ಅಭಿಪ್ರಾಯದ ದೋಷವನ್ನು ಕುರುಬರು ಕೂಡ ಕಂಡು ಹಿಡಿಯಬಹುದು.

ಇದೆಲ್ಲಾ ಹಾಗಿರಲಿ. ವಸ್ತುತಃ, ಅಭೇದಾರ್ಥಕ್ಕೆ ಹೇಗೆ ಅಪೂರ್ವತೆಯು ಇರುವುದೋ, ಹಾಗೆಯೇ **ಭೇದಾಗಮಕ್ಕೂ ಅಪೂರ್ವತೆಯು ಇದ್ದೇ ಇರುವದು.** ಭೇದವು ಪ್ರತ್ಯಕ್ಷಸಿದ್ಧವಾದುದರಿಂದ ಭೇದಾಗಮವು ಹೇಗೆ ಅಪೂರ್ವ ವಿಷಯವನ್ನು ಹೇಳಿದಹಾಗಾಯಿತೆಂದು ಶಂಕಿಸಕೂಡದು. ಜೀವಜಡ ಭೇದವೂ, ಜಡಗಳ ಪರಸ್ಪರಭೇದವೂ ಪ್ರತ್ಯಕ್ಷಸಿದ್ಧವಾದರೂ, **ಜೀವಬ್ರಹ್ಮರ ಭೇದವು ಪ್ರತ್ಯಕ್ಷಸಿದ್ಧವಾಗಿರುವದಿಲ್ಲ.** ಭೇದಜ್ಞಾನವು ಬರಬೇಕಾದರೆ, ಯಾವುದರಿಂದ ಭೇದವನ್ನು ಹೇಳಬೇಕೋ ಅಂಥ ಪ್ರತಿಯೋಗಿ ಜ್ಞಾನವು ಆವಶ್ಯಕವು. ಪ್ರಕೃತದಲ್ಲಿ, ಬ್ರಹ್ಮನಿಂದ ನಾನು ಭಿನ್ನನು ಎಂಬಲ್ಲಿ ಬ್ರಹ್ಮನು ಪ್ರತಿಯೋಗಿಯು; ಇಂಥ ಭೇದಜ್ಞಾನಕ್ಕೆ ಪ್ರತಿಯೋಗಿಯಾದ ಬ್ರಹ್ಮನ ಜ್ಞಾನವು (ಬ್ರಹ್ಮನು ಉಂಟು ಎಂದು ತಿಳಿಯುವದು) **ವೇದದಿಂದಲೇ** ಬರಬೇಕು. ಪ್ರತ್ಯಕ್ಷದಿಂದಲೂ ಅನುಮಾನದಿಂದಲೂ ಬ್ರಹ್ಮಜ್ಞಾನವು ಬರುವದಿಲ್ಲವೆಂಬುದು ಸರ್ವವೇದಾಂತಿಗಳಿಗೂ ಸಮ್ಮತವು. ವೇದದಿಂದಲೇ **ಪ್ರಥಮತಃ** ಬ್ರಹ್ಮನು ಉಂಟೆಂದು ತಿಳಿದ ಮೇಲೆಯೇ ನಾನು ಬ್ರಹ್ಮನಲ್ಲ; "ನಾನು ಬ್ರಹ್ಮಭಿನ್ನನು" ಎಂಬ ಜೀವಬ್ರಹ್ಮರ ಭೇದಜ್ಞಾನವು ಹುಟ್ಟುವದರಿಂದ ಭೇದಾಗಮಕ್ಕೆ ಅಪೂರ್ವತೆಯು ಬಂದೇ ಬಂದಿತು.

ಆದರೆ, ಭಗವದ್ಗೀತೆಯಲ್ಲಿ ಪರಬ್ರಹ್ಮನಾದ ಶ್ರೀ ಕೃಷ್ಣನು ಪ್ರತ್ಯಕ್ಷಸಿದ್ಧನಾಗಿರುವುದರಿಂದ, ಪ್ರತ್ಯಕ್ಷದಿಂದಲೇ ಪ್ರತಿಯೋಗಿಜ್ಞಾನವು ಬಂದು ಹೋಗಿರುವದು; ಹೀಗೆಯೇ ನಾನು ಕೃಷ್ಣನಲ್ಲ ಎಂಬ ಜ್ಞಾನವೇ ನಾನು ಬ್ರಹ್ಮನಲ್ಲ ಎಂಬ ಜ್ಞಾನರೂಪವಾದುದರಿಂದ, ಪ್ರತ್ಯಕ್ಷದಿಂದಲೇ ಜೀವಬ್ರಹ್ಮರ ಭೇದ ಜ್ಞಾನವು ಹುಟ್ಟಿರುವದರಿಂದ, ಭೇದಬೋಧಕವಾದ ಶ್ರೀ ಕೃಷ್ಣನ ವಾಕ್ಯಗಳಿಗೆ ಅಪೂರ್ವತೆಯು ಬರಲಿಲ್ಲವೆಂದು ಶಂಕಿಸಕೂಡದು. ನಾನು ಕೃಷ್ಣನಲ್ಲ ಎಂಬ

ಜ್ಞಾನವು ಬೇರೆ. ನಾನು ಬ್ರಹ್ಮನಲ್ಲ ಎಂಬ ಜ್ಞಾನವು ಬೇರೆ. ಕೃಷ್ಣನು ಜ್ಞಾನ ವಿಷಯನಾಗಿದ್ದರೂ, ಕೃಷ್ಣನು ಪರಬ್ರಹ್ಮನು ಎಂದು ತಿಳಿಯುವವರೆಗೂ, ನಾನು (ಜೀವನು) ಪರಬ್ರಹ್ಮನಲ್ಲ ಎಂಬ ಜ್ಞಾನವು ಹುಟ್ಟುವದಕ್ಕೆ ಅವಕಾಶವಿಲ್ಲ. ಆದುದ ರಿಂದಲೇ, ದುರ್ಯೋಧನನಿಗೆ ನಾನು ಕೃಷ್ಣನಲ್ಲ ಎಂಬ ಜ್ಞಾನವು ಬಂದರೂ, ನಾನು ಸರ್ವ ನಿಯಾಮಕನಾದ ಬ್ರಹ್ಮನಲ್ಲ ಎಂಬ ಜ್ಞಾನವು ಹುಟ್ಟಲೇ ಇಲ್ಲ. ಶ್ರೀ ಕೃಷ್ಣನ ದರ್ಶನವಾದರೂ, ಕೃಷ್ಣನು ಪರಬ್ರಹ್ಮನೆಂಬ ಜ್ಞಾನವು ವೇದದಿಂದಲೋ ಅಥವಾ ಕೃಷ್ಣನ ವಾಕ್ಯದಿಂದಲೋ ಪ್ರಥಮತಃ ಬರಬೇಕಾಗಿರುವದರಿಂದ, ಕೃಷ್ಣನು "**ಮತ್ತಃ ಪರತರಂನಾನ್ಯತ್**" ಎಂದು ಹೇಳಿ ನಾನೇ ಬ್ರಹ್ಮನು ಎಂದು ತಿಳಿಸಿದ ಮೇಲೆಯೇ ನಾನು ಬ್ರಹ್ಮನಲ್ಲ ಎಂಬ ಜ್ಞಾನವು ಅರ್ಜುನಾದಿ ಜೀವರು ಗಳಿಗೆ ಹುಟ್ಟುವದು.

(1) **ಅವಜಾನಂತಿಮಾಂ ಮೂಢಾಮಾನುಷೀಂತನುಮಾಶ್ರಿತಂ ।**
**ಪರಂಭಾವಮಜಾನಂತೋ ಮಮಭೂತಮಹೇಶ್ವರಂ ॥**
—(9. 11.)

ಇತ್ಯಾದಿ ವಾಕ್ಯಗಳಿಂದ ಕೃಷ್ಣನು ತಾನೂ ಒಬ್ಬ ಸಾಮಾನ್ಯ ಮನುಷ್ಯ ನೆಂಬ ಭ್ರಮವನ್ನು ನಿವಾರಣೆ ಮಾಡಿ, ತಾನು ಪರಬ್ರಹ್ಮನೆಂದು ಹೇಳಿರುತ್ತಾನೆ. ಆದುದರಿಂದ ಶ್ರೀ ಕೃಷ್ಣನ "**ಪರಸ್ತಸ್ಮಾತ್ತುಭಾವೋಽನ್ಯೋ**" ಇತ್ಯಾದಿ ಭೇದ ವಾಕ್ಯಗಳು ಅಪೂರ್ವವಾಗಿ ಜೀವರುಗಳಿಗೆ ನಾನು ಬ್ರಹ್ಮನಲ್ಲ ಎಂಬ ಜ್ಞಾನವನ್ನು ಹುಟ್ಟಿಸುತ್ತವೆ. ಇದುವರೆಗೂ ನಾನು ಕೃಷ್ಣನಲ್ಲ ಎಂಬ ಜ್ಞಾನವು ಮಾತ್ರ ಪ್ರತ್ಯಕ್ಷ ಸಿದ್ಧವಾಗಿತ್ತು. ಕೃಷ್ಣನು ಬ್ರಹ್ಮನೆಂದು ತಿಳಿದ ಮೇಲೆ **ನಾನು ಬ್ರಹ್ಮನಲ್ಲ** ಎಂಬ ಜ್ಞಾನವು ಅಪೂರ್ವವಾಗಿಯೇ ಹುಟ್ಟುವದರಿಂದ ಭಗವದ್ಗೀತೆಯ ಭೇದವಾಕ್ಯಕ್ಕೆ ಅಪೂರ್ವತೆಯೂ ಪ್ರಾಪ್ತವಾಯಿತು.

ಅಷ್ಟೇ ಅಲ್ಲ! ಶ್ರೀ ಕೃಷ್ಣನು ವಿಶ್ವರೂಪದರ್ಶನವನ್ನು ಮಾಡಿಸಿದಾಗ, ತನಗೂ ಪರಮಾತ್ಮನಿಗೂ ಇರುವ ನಿಜವಾದ ಅಂತರವನ್ನು ಬಹು ಸ್ಪಷ್ಟ ವಾಗಿ ಅರ್ಜುನನು ಕಂಡನು. ನಿರವಧಿಕವಾದ ಭಗವಂತನ ಐಶ್ವರ್ಯವನ್ನು ನೂತನ ವಾಗಿ ಕಂಡು, ನೂತನವಾದ (**ಅಪೂರ್ವವಾದ**) ಅಧಿಕ ಭೇದಜ್ಞಾನವನ್ನು ಹೊಂದಿದನೆಂದು ಸಂಜಯನು ಹೇಳಿರುತ್ತಾನೆ. ಸಾಮಾನ್ಯವಾದ ಭೇದಜ್ಞಾನವು ನಾನು ಪರಬ್ರಹ್ಮನೆಂಬ ಶ್ರೀ ಕೃಷ್ಣನ ಮಾತಿನಿಂದಲೇ ಅರ್ಜುನನಿಗೆ ಹುಟ್ಟಿತ್ತು. ಆದರೆ ವಿಶ್ವರೂಪಿಯಾದ ಶ್ರೀ ಕೃಷ್ಣನ ನಿಜ ವೈಭವವನ್ನು ಸಾಕ್ಷಾತ್ ನೋಡಿದ ನಂತರ, ಆತನ ಭೇದಜ್ಞಾನವು ಇನ್ನೂ ಆಳವೂ, ವಿಸ್ತೃತವೂ ಆಯಿತು. ಆದುದ ರಿಂದಲೇ ವಿಸ್ಮಿತನಾದನು ಮತ್ತು ಭೀತನಾದನು. ಪೂರ್ವದಲ್ಲಿದ್ದ ಭೇದಜ್ಞಾನವೇ ಅರ್ಜುನನಿಗೆ ಇದ್ದರೆ ಆತನು ಆಶ್ಚರ್ಯವನ್ನು ಹೊಂದುತ್ತಿರಲಿಲ್ಲ; ಮತ್ತು ತಾನು

ಮಾಡಿದ ಅವಜ್ಞೆಯನ್ನು ಕ್ಷಮಿಸಬೇಕೆಂದು ಬೇಡಿಕೊಂಡು ಪುನಃ ಪುನಃ ಪ್ರಣಾಮ ಗಳನ್ನು ಮಾಡುತ್ತಿರಲಿಲ್ಲ. ಅರ್ಜುನನು ಹೇಳುತ್ತಾನೆ.

**(1) ಅದೃಷ್ಟಪೂರ್ವಂ ಹೃಷಿತೋಸ್ಮಿ ದೃಷ್ಟ್ವಾ ಭಯೇನಚಪ್ರವ್ಯಥಿತಂ ಮನೋಮೇ ॥** —(11.45.)

ಹೇ ಸ್ವಾಮೀ ! ಪೂರ್ವದಲ್ಲಿ ನೋಡಲ್ಪಡದಿರುವ ನಿನ್ನ ರೂಪವನ್ನು ನೋಡಿ ಆಶ್ಚರ್ಯ ಬುದ್ಧಿಯಿಂದ ರೋಮಾಂಚಿತಗಾತ್ರನಾಗಿರುತ್ತೇನೆ. ನನ್ನ ಮನಸ್ಸು ಭಯದಿಂದ ಬಹಳ ವ್ಯಾಕುಲವಾಗಿದೆ.

ಈ ರೀತಿಯಲ್ಲಿ ಭಗವದ್ಗೀತೆಯಿಂದ ಉತ್ಪನ್ನವಾದ ನಾನು ಬ್ರಹ್ಮನಲ್ಲ ಎಂಬ ಸಾಮಾನ್ಯ ಭೇದಜ್ಞಾನಕ್ಕೂ, ಮತ್ತು ಪರಬ್ರಹ್ಮನ **ರೂಪವಿಶೇಷ** ಪ್ರತಿ ಯೋಗಿಕವಾದ ಭೇದಜ್ಞಾನಕ್ಕೂ ಅಪೂರ್ವತೆಯೇ ಇರುವುದರಿಂದ, ಅಪೂರ್ವತೆ ಇಲ್ಲದಿರುವ ಪ್ರಯುಕ್ತ ಭೇದಶಾಸ್ತ್ರಕ್ಕೆ ಅಪ್ರಾಮಾಣ್ಯವೆಂದು ಅದ್ವೈತಿಗಳು ಮಾಡುವ ನಿಂದೆಯು ಕೇವಲ ಮೌಢ್ಯಮೂಲವಾದುದು.

**5. ಫಲ**ವೆಂಬ ತಾತ್ಪರ್ಯನಿರ್ಣಾಯಕಲಿಂಗವೂ ಭಗವದ್ಗೀತೆಯಲ್ಲಿ ಭೇದ ವಾಕ್ಯಗಳಿಗೇ ಇರುತ್ತದೆ. ಹದಿನೈದನೆಯ ಅಧ್ಯಾಯದಲ್ಲಿ, ಶ್ರೀ ಕೃಷ್ಣನು **"ಉತ್ತಮಃ ಪುರುಷಸ್ತ್ವನ್ಯಃ"** ಎಂದು ತಾನು ಸರ್ವಜೀವರಿಂದ ಭಿನ್ನ ನೆಂದು ಹೇಳಿ, ಈ ರೀತಿಯಾಗಿ ತನ್ನ ಸರ್ವ ಜೀವವೈಲಕ್ಷಣ್ಯವನ್ನು ( ಪುರುಷೋ ತ್ತಮತ್ವವನ್ನು ) ತಿಳಿದವರಿಗೆ ಆಗುವ ಪ್ರಯೋಜನವನ್ನು ನಿರೂಪಿಸಿರುತ್ತಾನೆ.

**(3) ಏತದ್ಬುಧ್ವಾಬುದ್ಧಿಮಾನ್‌ಸ್ಯಾತ್ ಕೃತಕೃತ್ಯಶ್ಚಭಾರತ ।** —(15. 20.)

ನನ್ನ ಪುರುಷೋತ್ತಮತ್ವವನ್ನು ಪರೋಕ್ಷದಿಂದ ತಿಳಿದು, ಅಪರೋಕ್ಷ ಜ್ಞಾನಿಯಾಗುತ್ತಾನೆ; ನಂತರ ಮುಕ್ತನೂ ಆಗುತ್ತಾನೆ. ಇಲ್ಲಿ ಭೇದಜ್ಞಾ ನಕ್ಕೆ ಅಪರೋಕ್ಷ ಜ್ಞಾನದ್ವಾರಾ ಮೋಕ್ಷರೂಪ ಮಹಾಫಲವು ಹೇಳಿರು ತ್ತದೆ. ಸಕಲ ಪುರುಷಾರ್ಥಗಳಲ್ಲಿಯೂ ಮೋಕ್ಷವು ಶ್ರೇಷ್ಠವಾದುದು. ಅಂಥ ಮೋಕ್ಷಕ್ಕೆ ಸಾಧಕವಾದ ಜ್ಞಾನವು ಅತ್ಯಂತ ಯಥಾರ್ಥವಾಗಬೇಕು. ಮೋಕ್ಷೋಪ ಯೋಗಿಯಾದ ಯಥಾರ್ಥ ಜ್ಞಾನಕ್ಕೆ ವಿಷಯವಾದುದರಿಂದಲೂ ಭೇದವು ಸತ್ಯ ವೆಂದು ನಿಶ್ಚಿತವಾಗುವುದು.

**೬. ಅರ್ಥವಾದ.** ಸ್ತುತಿ, ನಿಂದಾ, ಪರಕೃತಿ, ಪುರಾಕಲ್ಪವೆಂಬ ನಾಲ್ಕು ಪ್ರಕಾರವಾದ ಅರ್ಥವಾದವೂ ಭೇದವಾಕ್ಯಗಳಿಗೆ ಇರುತ್ತದೆ.

**(1) ಪಶ್ಯಂತಿ ಜ್ಞಾನಚಕ್ಷುಷಃ ।** —(15. 10.)

**(2) ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।**
**ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ।**
**ಕರ್ಮಭಿಃ ॥ —(13. 31.)**

ಎಂಬಲ್ಲಿ ಶ್ರೀ ಕೃಷ್ಣನು ತನ್ನನ್ನೇ ಸರ್ವೋತ್ತಮನನ್ನಾಗಿ ತಿಳಿದ ಭೇದ ಜ್ಞಾನಿಯನ್ನು ಅವನಿಗಾಗುವ ಫಲಕಥನ ಪೂರ್ವಕವಾಗಿ ಪ್ರಶಂಸೆ ಮಾಡಿರುತ್ತಾನೆ. ಅರ್ಥವು:— 1. ಜ್ಞಾನಸದೃಷ್ಟಿಯುಳ್ಳವರೇ ಶರೀರದಲ್ಲಿದ್ದು ಶುಭಫಲಮಾತ್ರವನ್ನು ಭೋಗ ಮಾಡುವ ಪರಮಾತ್ಮನನ್ನು ತಿಳಿಯುತ್ತಾರೆ. 2. ಶ್ರದ್ಧೆಯಿಂದ, ಅಸೂಯಾರಹಿತರಾಗಿ (ಕಷ್ಟಕರವಾದ ಕರ್ಮಗಳನ್ನು ವಿಧಿಸಿರುವನೆಂದು ಪರಮಾತ್ಮನಲ್ಲಿ ದ್ವೇಷ ಮಾಡದೆ), ನಿಯತಕರ್ಮಗಳನ್ನು ಆಚರಿಸಿ, ನನ್ನಲ್ಲಿ ಸಮರ್ಪಿಸುವ ಜ್ಞಾನಿಗಳು ಕರ್ಮಬಂಧದಿಂದ ಮುಕ್ತರಾಗುತ್ತಾರೆ. ತನ್ನ ಸರ್ವೋತ್ತಮತ್ವಜ್ಞಾನಹೀನರಾದವರನ್ನು ಕೃಷ್ಣನು ನಿಂದಿಸುತ್ತಾನೆ—

**(3) ಯೇತ್ವೇತದಭ್ಯಸೂಯಂತೋ ನಾನುತಿಷ್ಠಂತಿಮೇಮತಂ ।**
**ಸರ್ವಜ್ಞಾನವಿಮೂಢಾಂಸ್ತಾನ್ವಿದ್ಧಿನಷ್ಟಾನಚೇತಸಃ ॥**
**—(3. 32.)**

ನನ್ನ ಮತವನ್ನು ಅನುಷ್ಠಾನ ಮಾಡದವರು ವಿಶೇಷ ಮಿಥ್ಯಾಜ್ಞಾನಿಗಳು, ಅವಿವೇಕಿಗಳು ಮತ್ತು ನರಕಾದ್ಯನರ್ಥಭಾಗಿಗಳು.

**(4) ಕರ್ಮಣೈವಹಿ ಸಂಸಿದ್ಧಿ ಮಾಸ್ಥಿತಾಜನಕಾದಯಃ ॥**
**—(3. 10.)**

**(6) ಬಹವೋ ಜ್ಞಾನತಪಸಾ ಪೂತಾಮದ್ಭಾವಮಾಗತಾಃ ।**
**—(4. 10.)**

ಜನಕಾದಿ ರಾಜರ್ಷಿಗಳು ಯಜ್ಞನಾಮಕ ವಿಷ್ಣುಪ್ರೀತಿಕರವಾದ ಕರ್ಮದಿಂದಲೇ ಜ್ಞಾನಸಿದ್ಧಿಯನ್ನು ಹೊಂದಿದರು. ಜ್ಞಾನದಿಂದಲೂ ತಪಸ್ಸಿನಿಂದಲೂ ಪವಿತ್ರರಾಗಿ ಅನೇಕರು ಮುಕ್ತರಾದರು. ಈ ವಾಕ್ಯಗಳಿಂದ ಪರಕೃತಿಪುರಾಕಲ್ಪಗಳನ್ನೂ ನಿರೂಪಣೆ ಮಾಡಿ ಸರ್ವಯಜ್ಞಭೋಕ್ತೃವೂ ಕರ್ಮಫಲನಿಯಾಮಕನೂ ಆದ ಬ್ರಹ್ಮನಿಗೂ, ವಿಧಿಬದ್ಧನಾದ ಜೀವನಿಗೂ ಇರುವ ಭೇದವು ಅತ್ಯಂತ ಪ್ರಾಮಾಣಿಕವೆಂದು ಶ್ರೀ ಕೃಷ್ಣನು ತೋರಿಸಿರುತ್ತಾನೆ.

**7. ಉಪಪತ್ತಿ** ಎಂದರೆ ಯುಕ್ತಿಯು. ಇದು ಅತಿ ಮುಖ್ಯವಾದ ವಾಕ್ಯತಾತ್ಪರ್ಯ ನಿರ್ಣಾಯಕಲಿಂಗವು. ಭೇದಪರವಾಗಿ ಗೀತಾವಾಕ್ಯಗಳಿಗೆ ಅರ್ಥ ಮಾಡುವುದಕ್ಕೆ ಯುಕ್ತಿಗಳಿರುವವೇ ಅಥವಾ ಜೀವಬ್ರಹ್ಮರ ಅಭೇದಪರವಾಗಿ ಅರ್ಥ

ಮಾಡುವುದಕ್ಕೆ ಯುಕ್ತಿಗಳಿರುವವೇ ಎಂದು ವಿಮರ್ಶೆ ಮಾಡಿ ನೋಡಿದರೆ, ಅಭೇದಾರ್ಥವನ್ನು ಸ್ವೀಕರಿಸುವದಕ್ಕೆ ಒಂದು ಯುಕ್ತಿಯೂ ಗೀತಾವಾಕ್ಯಗಳಲ್ಲಿರುವದಿಲ್ಲ. ಜೀವಪರಮಾತ್ಮರು ಭಿನ್ನರೆಂಬಲ್ಲಿ ಶ್ರೀ ಕೃಷ್ಣನು ಅನಂತ ಯುಕ್ತಿಗಳನ್ನು ಹೇಳಿರುತ್ತಾನೆ. ಸರ್ವಜ್ಞತ್ವಾಲ್ಪಜ್ಞತ್ವಾದಿ ರೂಪವಿರುದ್ಧ ಧರ್ಮಗಳು, ಸ್ವಾಮಿಭೃತ್ಯಭಾವವೇ ಮೊದಲಾದ ಪೂರ್ವೋಕ್ತ ಸಂಬಂಧ ವಿಶೇಷಗಳು, ಮತ್ತು ಪರಮಾತ್ಮನ ಸರ್ವಾಂತರ್ಯಾಮಿತ್ವವೂ ಜೀವನು ಬ್ರಹ್ಮನಿಂದ ಅತ್ಯಂತ ಭಿನ್ನನೆಂದು ನಿಶ್ಚಯ ಮಾಡುವದರಲ್ಲಿಯೇ ಯುಕ್ತಿಗಳಾಗಿರುತ್ತವೆ.

ಈ ರೀತಿಯಾಗಿ ಸಪ್ತತಾತ್ಪರ್ಯ ನಿರ್ಣಾಯಕ ಲಿಂಗಗಳೂ ಸಪ್ತದುರ್ಗಗಳಂತೆ ಜೀವಬ್ರಹ್ಮರ ಭೇದವೆಂಬ ಮಹಾರಾಜನಿಂದ ಸಹಿತವಾದ ಗೀತಾ ರಾಜಧಾನಿಯನ್ನು ರಕ್ಷಿಸುತ್ತಿರುವುವಾದುದರಿಂದ ಅಭೇದವೆಂಬ ಶತ್ರುಪ್ರವೇಶಕ್ಕೆ ಸ್ವಲ್ಪವೂ ಅವಕಾಶವನ್ನು ಕೊಡಲಾರವು.

## 9.

ಶ್ರೀ ಶ್ರೀಗಳವರು— ಹೆಚ್ಚು ಹೇಳುವುದರಿಂದೇನು ! ಗೀತಾಶಾಸ್ತ್ರದ ಪ್ರವೃತ್ತಿ ಪ್ರಕಾರವನ್ನು ವಿಮರ್ಶೆ ಮಾಡೋಣದರಿಂದಲೇ, ಅಭೇದಾರ್ಥವು ಶ್ರೀ ಕೃಷ್ಣನ ಹೃದಯದಿಂದ ದೂರೋತ್ಸಾರಿತವಾದುದೆಂದು ನಿಶ್ಚಿತವಾಗುವದು. ಬಂಧು ಸ್ನೇಹದಿಂದಲೂ, ಗುರ್ವಾದಿಗಳ ಹನನನಿಮಿತ್ತಕವಾದ ಪಾಪಶಂಕೆಯಿಂದಲೂ, ಘೋರ ಕರ್ಮರೂಪವಾದ ಯುದ್ಧವನ್ನು ಮಾಡುವದಿಲ್ಲವೆಂದು ಹೇಳಿ ತೂಷ್ಣೀಂಭಾವವನ್ನು ವಹಿಸಿದ ಅರ್ಜುನನ್ನು ಕುರಿತು ಶ್ರೀ ಕೃಷ್ಣನ ತತ್ವವು ಅದ್ವೈತವಾಗಿದ್ದರೆ ಹೀಗೆ ಹೇಳುತ್ತಿದ್ದನು. ಎಲೈ ಅರ್ಜುನನೇ ! ನೀನು ಸಾಕ್ಷಾತ್ಪರಬ್ರಹ್ಮನಾಗಿರುತ್ತೀಯೇ ! ನಿನ್ನ ದೇಹವು ನಿನ್ನ ಗಾಂಡೀವಧನುಸ್ಸು, ನಿನ್ನ ಬಾಣಗಳು, ನಿನ್ನ ಎದುರಿಗೆ ಪರಿದೃಶ್ಯರಾದ ಯೋಧರ ದೇಹಾದಿಗಳು ಮತ್ತು ಈ ಭಯಂಕರ ಪಟಾಟೋಪವೆಲ್ಲವೂ ಶುಕ್ತಿರೂಪ್ಯದಂತೆ ಅತ್ಯಂತ ಮಿಥ್ಯಾಭೂತವಾದವುಗಳು. ನಮ್ಮ ಯುದ್ಧಾದಿಗಳು. ಭಯವು, ಪ್ರಾಪ್ಸ್ಯಮಾನವಾದ ರಾಜ್ಯಾದಿಫಲಗಳು, ಅಥವಾ ಸ್ವರ್ಗಾದಿಗಳು ಇವೆಲ್ಲವೂ ಮಿಥ್ಯಾ. ನೀನು ಏತಕ್ಕೆ ವೃಥಾ ಕಂಬನಿಗರೆಯುವಿ ? ”

ಈ ಉಪದೇಶವು ನಾಟಕಶಾಲೆಯ ವಿದೂಷಕನ ಮಾತಿನಂತೆ ವಿನೋದ ಜನಕವಾಗುವದೇ ಹೊರತು- ಘೋರ ಯುದ್ಧದಲ್ಲಿ ಶತ್ರುಸಂಹಾರರೂಪವಾದ ಭಯಂಕರ ಕಾರ್ಯದಲ್ಲಿ ಉತ್ತೇಜನ ಕೊಡಲಾರವು. ಈ ರೀತಿ ಸುಳ್ಳು ಯುದ್ಧದಲ್ಲಿ, ಸುಳ್ಳು ಯೋಧರನ್ನು, ಸುಳ್ಳು ಧನುರ್ಬಾಣಗಳಿಂದ, ಮಿಥ್ಯಾಸಂಹಾರವನ್ನು ಮಾಡಿ, ಸುಳ್ಳು ಕೃಷ್ಣನ ಸುಳ್ಳು ಪ್ರಸಾದದಿಂದ, ಸುಳ್ಳು ರಾಜ್ಯದ ಪ್ರಾಪ್ತಿಯು ಯಾವ ಪ್ರಾಜ್ಞನಿಂದ ಅಪೇಕ್ಷಿತವು ? ಮತ್ತು ಜಗತ್ತೆಲ್ಲವೂ ಮಿಥ್ಯಾ ಎಂದು ತಿಳಿದ

ಯಾವ ಪ್ರೇಕ್ಷಾವಂತನು ಅತಿ ಭಯಂಕರವಾದ ಘೋರ ಯುದ್ಧದಲ್ಲಿ ಬಹು ಪ್ರಯತ್ನ ಪೂರ್ವಕವಾಗಿ ಆಸಕ್ತನಾಗುವನು ? ಅದ್ವೈತತತ್ವವನ್ನು ಉಪದೇಶ ಮಾಡುವ ಗುರುವಿಗೆ ಮೌನವು ಉಚಿತವು. ಶ್ರವಣ ಮಾಡಿದ ಶಿಷ್ಯನಿಗೆ ನಿಷ್ಪ್ರವೃತ್ತಿಯು ( ಮೋಟು ಮರದಂತೆ ಅಚಲನಾಗಿರುವದು ) ಉಚಿತವು. ಬುದ್ಧನೂ ಅಂತ್ಯತತ್ವ ಸ್ವರೂಪವನ್ನು ಶಿಷ್ಯರಿಗೆ ಹೇಳಿ, ಹೆಚ್ಚು ವಿಚಾರ ಬಂದಾಗ ಮೌನವನ್ನು ಧರಿಸಿರುವನು. ಶಂಕರಾಚಾರ್ಯರೂ ಸಹ ಮೂರಾವರ್ತಿ ಶಿಷ್ಯನು ಅದ್ವೈತತತ್ವದ ನಿಜ ಸ್ವರೂಪ ವಿಷಯದಲ್ಲಿ ಪ್ರಶ್ನೆ ಮಾಡಿದಾಗ ಗುರುಗಳು ಮೌನವನ್ನು ಧರಿಸಿದರೆಂದು ತಮ್ಮ ಭಾಷ್ಯದಲ್ಲಿ ಬರೆದಿರುತ್ತಾರೆ.* ಇದು ಅದ್ವೈತ ಗುರುಗಳಿಗೆ ಉಚಿತವೇ ! ಅದ್ವೈತತತ್ವವನ್ನು ಶ್ರವಣ ಮಾಡಿದ (ಅತ ಏವ ಜ್ಞಾನ ಮಾರ್ಗವನ್ನು ಅವಲಂಬಿಸಿದ) ಶಿಷ್ಯನಿಗೂ ಶಂಕರಭಾಷ್ಯದಲ್ಲಿ ಹೇಳಿರುವಂತೆ ಕರ್ಮ ಪರಿತ್ಯಾಗ**ವು** ಉಚಿತವು. ಕರ್ಮನಿವೃತ್ತಿಯು ಅದ್ವೈತಜ್ಞಾನಕ್ಕೆ ಭೂಷಣವು.

ಜಗನ್ಮಿಥ್ಯಾತ್ವ ಜ್ಞಾನವು ಹೇಗೆ ಕರ್ಮಪ್ರವೃತ್ತಿಗೆ ವಿರೋಧಿಯೋ, ಹಾಗೆಯೇ ನಾನು ಬ್ರಹ್ಮನೆಂಬ ಜ್ಞಾನವೂ ಕೂಡ ನಿಷ್ಪ್ರವೃತ್ತಿಗೇ ಕಾರಣವಾಗುವದು. ವಿಧಿಬದ್ಧನಾದ ಮೋಕ್ಷಫಲಾಕಾಂಕ್ಷಿಯಾದ ಜೀವನು ಸ್ವವರ್ಣಾಶ್ರಮ ಧರ್ಮಗಳನ್ನು ಮಾಡುವದು ಸಂಭಾವಿತವು. ನಾನು ಈಗಲೂ ಪರಿಪೂರ್ಣನಾದ ಬ್ರಹ್ಮನು ಎಂದು **ತಿಳಿದು ಹೋದ ಮೇಲೆ** ಅದ್ವೈತಮತದರೀತ್ಯಾ ಅಜ್ಞರ ಉದ್ದಿಶ್ಯ ಏರ್ಪಟ್ಟ ಯುದ್ಧಾದಿ ಕರ್ಮಾದಿಗಳನ್ನು ಮಾಡುವದು ಅಸಂಭಾವಿತವು. ಅದರಲ್ಲೂ ಬ್ರಹ್ಮೈಕ್ಯದ ಲೇಶ ಅನುಭವವನ್ನು ಹೊಂದಿದ ಅರ್ಜುನನಂಥ ಜ್ಞಾನಿಯು ಕರ್ಮ ಮಾರ್ಗದಲ್ಲಿ ಪ್ರವರ್ತಿಸುವದು ಸರ್ವಥಾ ಅಸಂಭಾವಿತವು.**

ಹೀಗೆ ಅದ್ವೈತಮತದ ರೀತಿಯಿಂದ ಬ್ರಹ್ಮಜ್ಞಾನವಾಗಲೀ ಜಗದ್ಭ್ರಾನ್ತಿಜ್ಞಾನವಾಗಲೀ ಪ್ರಬಲವಾದ ಕರ್ಮಮಾರ್ಗದಲ್ಲಿ ಪ್ರವೃತ್ತಿಗೆ ಪ್ರತಿಬಂಧಕಗಳಾಗುವವೇ ಹೊರತು ಉತ್ಸಾಹವೃದ್ಧಿಯನ್ನು ಉಂಟು ಮಾಡಲಾರವು. ಶ್ರೀ ಕೃಷ್ಣನಾದರೋ

---

* (3. 2 17.) ಶಾಂಕರಭಾಷ್ಯದಲ್ಲಿರುತ್ತದೆ.

** " ನಾನು ಬ್ರಹ್ಮನೇ ಆದರೂ, ಈ ದಿವಸ ನನ್ನ ಬ್ರಹ್ಮಭಾವವು ಅಭಿವ್ಯಕ್ತವಾಗಿಲ್ಲ. ನನ್ನ ಬ್ರಹ್ಮಭಾವವು ವ್ಯಕ್ತವಾಗುವುದಕ್ಕಾಗಿ ನಾನು ಕರ್ಮ ಮಾಡಬೇಕು." ಎಂದು ಅದ್ವೈತಿಗಳು ಹೇಳಿದರೆ, ಈ ಮತವು ಯುದ್ಧಾದಿಗಳಲ್ಲಿ ಪ್ರವೃತ್ತಿಗೆ ಕಾರಣವಾಗಬಹುದು. ಆದರೆ ಇದನ್ನು ಅದ್ವೈತಿಗಳು ಅಂಗೀಕರಿಸಲಾರರು. 1. ನಿರ್ವಿಶೇಷನಾದ ಮತ್ತು ಸ್ವಪ್ರಕಾಶನಾದ ಬ್ರಹ್ಮನಿಗೆ ಅಭಿವ್ಯಕ್ತಿ ಎಂಬ ಅವಸ್ಥಾವಿಶೇಷವನ್ನು ಅದ್ವೈತಿಗಳು ಒಪ್ಪುವದಿಲ್ಲ. 2. ನನ್ನ ಬ್ರಹ್ಮಭಾವವು ಈ ದಿವಸ ಅಭಿವ್ಯಕ್ತವಾಗಿಲ್ಲವೆಂಬುದೂ ಅವರ ಮತದ ರೀತ್ಯಾ ಸುಳ್ಳು. ನಾನು **ಈಗಲೂ** ಪರಿಪೂರ್ಣನಾದ, ನಿತ್ಯಾಭಿವ್ಯಕ್ತನಾದ ಪರಬ್ರಹ್ಮನಿದ್ದೇನೆ ಎಂಬುದೇ ಅದ್ವೈತಜ್ಞಾನಾಕಾರವು. ಇಂಥ ಜ್ಞಾನವು ಹೇಗೆ ತಾನೇ ಸ್ವಕರ್ಮಾಚರಣೆಯಲ್ಲಿ ಉತ್ಸಾಹವನ್ನು ಕೊಡುವುದು ?

ಅರ್ಜುನನಿಗೆ ತತ್ವೋಪದೇಶವನ್ನು ಮಾಡಿ ಪುನಃ ಪುನಃ "ಹೀಗೆ ತತ್ವವು ಇರುವದರಿಂದ ನೀನು ಯುದ್ಧವನ್ನು ಮಾಡು" ಎಂದು ವಿಧಿಸುತ್ತಿರುವನು.

(1) **ಉತ್ತಿಷ್ಠ ಪರಂತಪ ।**—(2. 3.)
ಎಳ್ಳೈ ಪರಂತಪನೇ ಯುದ್ಧದಲ್ಲಿ ಸನ್ನದ್ಧನಾಗು.

(2) **........ತಸ್ಮಾದ್ಯುಧ್ಯಸ್ವಭಾರತ ।** —(2. 18.)
ಆದುದರಿಂದ ಯುದ್ಧವನ್ನು ಮಾಡು.

(3) **ಸುಖಿನಃ ಕ್ಷತ್ರಿಯಾಃ ಪಾರ್ಥಲಭಂತೇಯುದ್ಧಮೀದೃಶಂ ।**
—(2. 32.)

ಬಹು ಪುಣ್ಯವಂತರಾದ ಕ್ಷತ್ರಿಯರಿಗೆ ಇಂಥ ಯುದ್ಧವು ದೊರಕುವದು. ಜೀವಚೈತನ್ಯವೇ ಪರಬ್ರಹ್ಮನಾದರೆ ಯುದ್ಧವು ದೊರಕದಿದ್ದರೆ ಆಗುವ ನಷ್ಟವೇನು ?

(4) **ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯಕೃತನಿಶ್ಚಯಃ ।**
—(2. 37.)

ಆದುದರಿಂದ ಯುದ್ಧಾರ್ಥವಾಗಿ ಮನಸ್ಸನ್ನು ಸ್ಥಿರಪಡಿಸಿಕೊಂಡು ಸನ್ನದ್ಧನಾಗು.

(5) **ತತೋಯುದ್ಧಾಯ ಯುಜ್ಯಸ್ವ ।** —(2. 38.)
ಆದುದರಿಂದ ಯುದ್ಧಾರ್ಥವಾಗಿ ಸಿದ್ಧನಾಗು.

(6) **ಯುಧ್ಯಸ್ವವಿಗತಜ್ವರಃ ।** —(3. 30.)
ನಿರ್ಭಯನಾಗಿ ಯುದ್ಧ ಮಾಡು.

(7) **ಉತ್ತಿಷ್ಠ ಭಾರತ ।** —(4. 42.)
ಅರ್ಜುನ ! ಯುದ್ಧಕ್ಕೆ ಏಳು !

(8) **ಮಾತೇಸಂಗೋಽಸ್ತ್ವ ಕರ್ಮಣಿ ।**
ನಿನಗೆ ಸ್ವಕರ್ಮಪರಿತ್ಯಾಗದಲ್ಲಿ ಸ್ನೇಹ ಬೇಡ.

ಈ ರೀತಿಯಾಗಿ ಕೈಯಲ್ಲಿ ಚಾವಟಿಯನ್ನು ಹಿಡಿದಿರುವ ಪಾರ್ಥಸಾರಥಿಯಾದ ಶ್ರೀ ಕೃಷ್ಣನ ವಿಧಿವಾಕ್ಯಗಳಿಂದ ಆತನು ಉಪದೇಶ ಮಾಡಿದ ತತ್ವವು ಯುದ್ಧಾದಿ ಸ್ವಕರ್ಮಗಳಿಗೆ ಉಪೋದ್ಬಲಕವೇ ಹೊರತು, ಸ್ವಲ್ಪವಾದರೂ ಉತ್ಸಾಹ ನಾಶಕವಲ್ಲವೆಂದು ಸಿದ್ಧವಾಗುವದು. ಅದ್ವೈತಿಗಳು ಹೇಳುವಂತೆ, ಬ್ರಹ್ಮನು ಸತ್ಯವು; ಬ್ರಹ್ಮಾತಿರಿಕ್ತ ಪ್ರಪಂಚವು ಮಿಥ್ಯಾ; ಕರ್ಮಾದಿಗಳು ಅಜ್ಞರ ಉದ್ದಿಶ್ಯ ಹೇಳಿದುದು ಎಂದು ಶ್ರೀ ಕೃಷ್ಣನು ಉಪದೇಶ ಮಾಡಿದ್ದರೆ, ಮೊದಲೇ

ಆರಿ ಹೋಗುತ್ತಿರುವ ಅಗ್ನಿಗೆ ತಣ್ಣೀರನ್ನು ಎರಚಿದಂತೆ, ಅರ್ಜುನನು ಮಿಥ್ಯಾಭೂತ ವಾದ ಈ ಹಾಳು ಪ್ರಪಂಚವೂ, ಜಯವೂ, ರಾಜ್ಯವೂ ಏನಾದರೇನು ? ಎಂದು ಕೃತನಿಶ್ಚಯನಾಗಿ ರಥದಲ್ಲಿ ಕುಳಿತಿರುವುದನ್ನು ಬಿಟ್ಟು, ದೀರ್ಘಾಕಾರವಾಗಿ ದೇಹ ವನ್ನು ಚಾಚಿ ನಿದ್ರೆ ಮಾಡಬಹುದಾಗಿತ್ತು.* ಅರ್ಜುನನು ಇನ್ನೂ ಅಜ್ಞಾನಿ ಯಾದುದರಿಂದ ಯುದ್ಧ ಮಾಡಿದನೆಂಬುದು ಅಸಂಗತವು. ಶ್ರೀ ಕೃಷ್ಣನಂಥ ಜಗ ದ್ಗುರುವಿನಿಂದ ಅತಿ ಪ್ರೀತಿಪೂರ್ವಕವಾದ ಉಪದೇಶವನ್ನು ಹೊಂದಿ, ದಿವ್ಯದೃಷ್ಟಿ ಯನ್ನು ಪಡೆದು, ಆತನಿಂದ ಪರಮಾನುಗ್ರಹಪೂರ್ವಕವಾಗಿ, ಹೇ ಅನಘ ! ಎಂದು ಕರೆಯಲ್ಪಟ್ಟ, ಇಂದ್ರಾವತಾರನೆಂದು ಸುಪ್ರಖ್ಯಾತನಾದ ಅರ್ಜುನನೂ ತತ್ವಜ್ಞಾನ ವನ್ನು ಪಡೆಯದೆ, †ಉಪದೇಶವು ಆದ ಉತ್ತರಕ್ಷಣದಲ್ಲಿಯೇ, ಅದ್ವೈತಮತದ ರೀತ್ಯಾ ಮಿಥ್ಯಾಭೂತವು ಮತ್ತು ಮೋಕ್ಷೋಪಯೋಗಿಯಲ್ಲವೆಂದು ಸುನಿಶ್ಚಿತ ವಾದ, ಭಯಂಕರ ಕರ್ಮದಲ್ಲಿ ಉದ್ಯುಕ್ತನಾದನೆಂದು ಹೇಳುವದು ಅತ್ಯಂತ ವಿರುದ್ಧವಾದ ಪ್ರಕ್ರಿಯೆಯು.

ದ್ವೈತಮತದಲ್ಲಾದರೋ " ದುರ್ಜನರಾದ ಧಾರ್ತರಾಷ್ಟ್ರರನ್ನು ಕಡಿ ! ಹೊಡಿ ! ಬಡಿ ! " ಮುಂತಾದ ವೀರ್ಯವರ್ಧಕವಾದ ಉಪದೇಶವು ತತ್ವಾನು ಗುಣವೇ ಆಗಿರುವದು. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಗಳೆಂಬ ಷಡ್ವರ್ಗಗಳನ್ನೂ ಸಹ **ಸ್ವರೂಪೇಣ** ಪರಿತ್ಯಜಿಸಬೇಕೆಂದು ದ್ವೈತಿಗಳು ಹೇಳುವುದಿಲ್ಲ. ಸದ್ವಿಷಯಗಳಲ್ಲಿ ಕಾಮವೂ, ದುರ್ವಿಷಯಗಳಲ್ಲಿ ಕ್ರೋಧವೂ, ಅಪಾ ತ್ರರಿಗೆ ದಾನ ಮಾಡುವದರಲ್ಲಿ ಲೋಭವೂ, ಪರಮಾತ್ಮನಲ್ಲಿ ಅತ್ಯಂತ ಪ್ರೀತಿಯೆಂಬ ಮೋಹವೂ, ನಾನು ಪುರುಷೋತ್ತಮನ ಭೃತ್ಯನೆಂಬ ಮದವೂ, ಬ್ರಹ್ಮದ್ವೇಷಿಗಳ ಏಳಿಗೆಯಲ್ಲಿ ಮಾತ್ಸರ್ಯವೂ ಆವಶ್ಯಕವೇ ಆಗಿರುವವು. ಹೀಗೆಯೇ ಪ್ರಕೃತದಲ್ಲಿ ಭೂಭಾರಹರಣಾರ್ಥವಾಗಿ ಅವತರಿಸಿದ ಪರಬ್ರಹ್ಮನಾದ ಶ್ರೀಮನ್ನಾರಾಯಣನ ಸೇವಾರೂಪವಾದ ಧರ್ಮಯುದ್ಧದಲ್ಲಿ, ದುರ್ಯೋಧನಾದಿ ದುರ್ಜನರ ಹನನರೂಪ ವಾದ ಸ್ವವರ್ಣಾಶ್ರಮೋಚಿತ ಕರ್ಮವನ್ನು, ಬಂಧುಸ್ನೇಹದಿಂದ ಅಧರ್ಮವೆಂದು ವಿಪರೀತವಾಗಿ ತಿಳಿದು, ಪರಿತ್ಯಾಗ ಮಾಡಿದ ಅರ್ಜುನನು ಅಪರಾಧಿಯಾದನು. ಅರ್ಜುನನಿಗೆ ಮಹಾಪುಣ್ಯ ನಾಶವೂ, ಪಾಪಪ್ರಾಪ್ತಿಯೂ ಪ್ರಸಕ್ತನಾದುದರಿಂದ,

---

* ನಿದ್ರೆಯಲ್ಲಿ ಬ್ರಹ್ಮೈಕ್ಯಾನುಭವವು ಬರುವುದು; ಸೌಷುಪ್ತಿಕ ಸುಖವು ಪರಬ್ರಹ್ಮಾನಂದವೇ ಎಂದು ಅದ್ವೈತತತ್ವದ ರಹಸ್ಯಪ್ರಕ್ರಿಯೆಯು ಕೆಲವರು ಅದ್ವೈತಿಗಳು ಅಷ್ಟಕ್ಕೂ ತೃಪ್ತರಾಗದೆ ತಮ್ಮ ಯಾವತ್ತು ವಿಷಯಾನುಭವಜನಿತಾನಂದವೂ ಬ್ರಹ್ಮಾನಂದವೆಂದೇ ಹೇಳುವರು.

† **"ಪಾರ್ಥಾಕ್ಷಿಪೋಷೇಣ"** ಇತ್ಯಾದಿ ಭಾಗವತ ಶ್ಲೋಕಗಳಲ್ಲಿ ದೇಹಾತ್ಮಭ್ರಮರ ಹಿತರಾದ, ದೇವಮಾಯೆಯನ್ನು ದಾಟಿರುವ ಶುಕ, ವಾಮದೇವಾದಿ ಅನೇಕ ಜ್ಞಾನಿಗಳ ಮಧ್ಯ ದಲ್ಲಿ ಅರ್ಜುನನೂ ಒಬ್ಬನೆಂದು ಪರಿಗಣನೆ ಮಾಡಿರುತ್ತಾರೆ.

ಭಕ್ತಾರ್ತಿಭಂಜಕನಾದ ಶ್ರೀ ಕೃಷ್ಣನು ಆತನಿಗೆ ಸಮಸ್ತ ಪರಾಪರತತ್ವಗಳನ್ನೂ ಉಪದೇಶ ಮಾಡಿದನು. ಅದು ಹೇಗೆಂದರೆ "ಎಲೈ ಅರ್ಜುನನೇ ! ನಾನು ಪರಬ್ರಹ್ಮನು; ನೀನೇ ಮೊದಲಾದ ಈ ಯೋಧರೆಲ್ಲರೂ ವಿಧಿಬದ್ಧರಾದ ಚೇತನರು. ಜೀವರುಗಳು ಸ್ವರೂಪೇಣ ನಿತ್ಯರು. ಅವರನ್ನು ನಿನ್ನ ಬಾಣಗಳು ಸಂಹರಿಸುವುದಿಲ್ಲವಾದುದರಿಂದ ನೀನು ಅವರ ಉದ್ದಿಶ್ಯ ಶೋಕಪಡಬೇಡ, ಅವರ ದೇಹನಾಶವು ಆವಶ್ಯಕವು. ಅವರು ದುರ್ಜನನ ಪಕ್ಷಪಾತಿಗಳಾಗಿ ನನ್ನ ವಿಧಿಯನ್ನು ಅತಿಕ್ರಮಿಸಿ ವಿಷ್ಣುವೈಷ್ಣವದ್ವೇಷಿಗಳಾಗಿರುವದರಿಂದ ಅವರಿಗೆ ದೇಹನಾಶರೂಪವಾದ ದಂಡವು ನನಗೆ ಇಷ್ಟಕರವು. "ಜಹಿಶತ್ರುಂ ಮಹಾಬಾಹೋ ! " ನೀನು ನನ್ನ ದ್ವೇಷಿಗಳಾದ ಅವರಲ್ಲಿ ಅಭಿಮಾನ ಮಾಡಿ ಅವರನ್ನು ಸಂಹಾರ ಮಾಡದೆ ಇದ್ದರೆ, ( ರಾಜದ್ರೋಹಿಯಲ್ಲಿ ಪ್ರೀತಿ ಮಾಡುವ ಪ್ರಜೆಯು ರಾಜದ್ವೇಷಿಯಾಗುವಂತೆ ) ನೀನೂ ನನ್ನ ದ್ವೇಷಿಯಾಗುವಿ. ನೀನು ಅವರನ್ನು ಸಂಹಾರ ಮಾಡಿದರೆ, (ರಾಜಾಜ್ಞಾನುಸಾರ ರಾಜದ್ರೋಹಿಯನ್ನು ಶಿಕ್ಷಿಸುವ ರಾಜಭಟನಂತೆ ) ನನ್ನ ಪ್ರೀತಿಗೆ ಪಾತ್ರನಾಗುವಿ. ನನ್ನ ಪ್ರೀತಿಯಿಂದ ನಿನಗೆ ಬಹಳ ಲಾಭವುಂಟು. ನೀನು ವರ್ಣಾಶ್ರಮೋಚಿತ ಯುದ್ಧವನ್ನು ಮಾಡಿ, ನನಗೆ ಅರ್ಪಿಸಿ ನನ್ನಲ್ಲಿ ಶರಣಾಗತನಾದರೆ "ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ." ನಾನು ನಿನ್ನ ಸರ್ವ ಪಾಪಗಳನ್ನೂ ಭಸ್ಮ ಮಾಡಿ ನಿನಗೆ ಜ್ಞಾನಾದಿಗಳನ್ನು ಕೊಟ್ಟು ಶಾಶ್ವತ ಸ್ಥಾನದಲ್ಲಿ ಸುಖಪಡಿಸುವೆನು. ನನಗೆ ಯಾರಲ್ಲೂ ಪಕ್ಷಪಾತವಿಲ್ಲ: "ಯೇ ಯಥಾಮಾಂ ಪ್ರಪದ್ಯಂತೇ ತಾಂಸ್ತಥೈವಭಜಾಮ್ಯಹಂ." ಸೇವಾನುಗುಣವಾಗಿ ನಾನು ಫಲ ಕೊಡತಕ್ಕವನು. ನೀನು ಯುದ್ಧಪರಿತ್ಯಾಗ ಮಾಡಿದರೆ ನಿನಗೆ ಬಹಳ ಹಾನಿಯುಂಟು. " ಸ್ವಧರ್ಮಂ ಕೀರ್ತಿಂ ಚ ಹಿತ್ವಾಪಾಪ ಮವಾಪ್ಸ್ಯಸಿ " ಪಾಪವನ್ನು ಹೊಂದುವಿ. ನಿನ್ನ ಯಾವತ್ತು ದೇಹಬಲವನ್ನು ಉಪಯೋಗಿಸಿ, ದುಷ್ಟರನ್ನು ಸಂಹಾರ ಮಾಡಿ, ಆ ಪುಣ್ಯಫಲವನ್ನು "ಕುರುಷ್ವಮದರ್ಪಣಂ" ಎಂದರೆ ನನಗೆ ಅರ್ಪಿಸು. ನನ್ನ ಆಜ್ಞೆಯನ್ನು ಮೀರದೆ ದುಷ್ಟ ಬಂಧುಗಳಲ್ಲಿ ಮೋಹವನ್ನು ಬಿಟ್ಟು, " ಯುಧ್ಯಸ್ವ ವಿಗತಜ್ವರಃ " ಪಾಪಶಂಕೆಯಿಲ್ಲದೆ ನಿರ್ಭಯನಾಗಿ ಯುದ್ಧ ಮಾಡು. "

ಇಂಥ ಉಪದೇಶವು ಮತ್ತೂ ಅಧಿಕವಾಗಿ, ವಿಷ್ಣು ಪ್ರೀತಿಕರವಾದ ಉದ್ಯೋಗಗಳಲ್ಲಿ ಮನುಷ್ಯನನ್ನು ಆಸಕ್ತನನ್ನಾಗಿ ಮಾಡುವದು. ಅರ್ಜುನನೂ ಕೂಡ ದುರ್ಜನರಲ್ಲಿ ಪ್ರೀತಿ ಮಾಡಿದ ತನ್ನ ಅಪರಾಧವನ್ನು ಒಪ್ಪಿಕೊಂಡು ಸಂತೋಷದಿಂದ ಯುದ್ಧದಲ್ಲಿ ಪ್ರವೃತ್ತನಾಗಿದ್ದಾನೆ.

**ನಷ್ಟೋಮೋಹಃ ಸ್ಮೃತಿರ್ಲಬ್ಧಾತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಽಸ್ಮಿಗತಸಂದೇಹಃ ಕರಿಷ್ಯೇವಚನಂತವ ॥** —(18. 73.)

ಎಲೈ ಅಚ್ಯುತನೇ! ನನ್ನ ವಿಪರೀತ ಜ್ಞಾನವು ಹೋಯಿತು. ನನ್ನ ಪೂರ್ವಜ್ಞಾನವು ಪ್ರಾಪ್ತವಾಯಿತು. ನಾನು ನಿವೃತ್ತಸಂದೇಹನಾಗಿ ಯುದ್ಧಸನ್ನದ್ಧನಾಗಿರುವೆನು. ನಿನ್ನ ಅಪ್ಪಣೆಯನ್ನು ನಡೆಸುತ್ತೇನೆ. ಫಲಿತಾಂಶವೇನೆಂದರೆ, ನನಗಿಂತ ಶ್ರೇಷ್ಠನಾದ, ಸತ್ಕರ್ಮಗಳಿಗೆ ಫಲಪ್ರದನಾದ ಪರಬ್ರಹ್ಮನು ಒಬ್ಬನು ನನ್ನಿಂದ ಭಿನ್ನನಾಗಿರುವನೆಂದು ತಿಳಿದರೆ, ವಿಧವಿಧವಾದ ಸ್ವಧರ್ಮಾನುಷ್ಠಾನಗಳಲ್ಲಿ ಅಧಿಕಾರಿಗಳಿಗ ಆಸಕ್ತಿಯುಂಟಾಗುವದು. ನಾನೇ ಬ್ರಹ್ಮನು ನನ್ನ ಕರ್ಮಾದಿಗಳು ಮಿಥ್ಯಾಭೂತವು ಎಂಬ ತತ್ವಜ್ಞಾನವು ಸಹಜವಾದ ಜಾಡ್ಯದ ವೃದ್ಧಿಯನ್ನುಂಟು ಮಾಡುವದರಲ್ಲಿ ಸಂದೇಹವಿಲ್ಲ.

## 10.

**ಪ್ರಶ್ನೆ—** ಸ್ವಾಮೀ! ಶಂಕರಾಚಾರ್ಯರು ಕರ್ಮಪರಿತ್ಯಾಗವು ಉಚಿತವೆಂದು ಗೀತಾಭಾಷ್ಯದಲ್ಲಿ ಹೇಳಿರುತ್ತಾರೆಯೇ ?

**ಉತ್ತರ—** " **ಮುಮುಕ್ಷೋಃ ಸರ್ವಕರ್ಮ ಸಂನ್ಯಾಸವಿಧಾನಾತ್** " ಎಂದು ತಮ್ಮ ಗೀತಾಭಾಷ್ಯದಲ್ಲಿ ಸರ್ವ ಮುಮುಕ್ಷುಗಳಿಗೂ ಕರ್ಮಪರಿತ್ಯಾಗವು ವಿಧಿಸಲ್ಪಟ್ಟಿರುವದೆಂದು ಬರೆದಿರುತ್ತಾರೆ. ಈ ವಾಕ್ಯದ ಪರ್ಯಾಲೋಚನೆಯಿಂದ ವೇದಾಂತ ( ಬ್ರಹ್ಮಸೂತ್ರ ) ಶ್ರವಣಕ್ಕೆ ಆರಂಭಿಸಿದವನಿಗೆ ವಿಧ್ಯುಕ್ತಕರ್ಮಪರಿತ್ಯಾಗವು ಶಂಕರಾಚಾರ್ಯರಿಗೆ ಸಮ್ಮತವೆಂದು ತೋರುವದು. ಹೇಗೆಂದರೆ, ನಿತ್ಯಾನಿತ್ಯವಸ್ತುವಿವೇಕ, ಇಹಾಮುತ್ರಫಲಭೋಗವೈರಾಗ್ಯ, ಶಮದಮಾದಿಸಾಧನಸಂಪತ್ತು, ಮತ್ತು **ಮುಮುಕ್ಷುತ್ವ** ವೆಂಬ ನಾಲ್ಕು ಧರ್ಮಗಳುಳ್ಳವನು ವೇದಾಂತ ಶಾಸ್ತ್ರಾಭ್ಯಾಸಕ್ಕೆ ಅಧಿಕಾರಿಯೆಂದು ಶಾಂಕರಭಾಷ್ಯದಲ್ಲಿ ಹೇಳಿರುತ್ತಾರೆ. ಈ ನಾಲ್ಕರಲ್ಲಿ **ಮುಮುಕ್ಷಾ** ಎಂದರೆ ಮೋಕ್ಷೇಚ್ಛೆಯು ಒಂದು ಧರ್ಮವಾಗಿರುವದು. ಆದುದರಿಂದ, ಮುಮುಕ್ಷುವಿಗೆ ಕರ್ಮಪರಿತ್ಯಾಗವು ಉಚಿತವೆಂಬ ಶಂಕರಾಚಾರ್ಯರ ಮಾತಿನಿಂದ, ಅದ್ವೈತ ವೇದಾಂತಾಭ್ಯಾಸದಲ್ಲಿ ಪ್ರವಿಷ್ಟರಾದ ಸರ್ವ ಬ್ರಾಹ್ಮಣರೂ ನಿತ್ಯನೈಮಿತ್ತಿಕ ಕರ್ಮಗಳನ್ನು ಪರಿತ್ಯಾಗ ಮಾಡಬಹುದೆಂದು ಅವರ ಅಭಿಪ್ರಾಯವೆಂದು ಸಿದ್ಧವಾಗುವದು. ಇಷ್ಟೇ ಅಲ್ಲ! ಮುಮುಕ್ಷುತ್ವಾದಿ ಧರ್ಮಗಳಿಂದ ರಹಿತರಾದ ಗೃಹಸ್ಥರಿಗೂ ಕೂಡ ನಿತ್ಯಕರ್ಮಗಳನ್ನು ಪರಿತ್ಯಾಗ ಮಾಡುವದರಿಂದ ಯಾವ ಹಾನಿಯೂ ಇರುವದಿಲ್ಲವೆಂದು ತೋರಿಸುವ ಯುಕ್ತಿಯನ್ನು ಸ್ಪಷ್ಟವಾಗಿ ಗೀತಾಭಾಷ್ಯದ ತೃತೀಯಾಧ್ಯಾಯಲ್ಲಿ ಬರೆದಿರುತ್ತಾರೆ. ಆ ವಾಕ್ಯಗಳನ್ನು ಉದಾಹರಿಸಿ ಗುಣದೋಷ ವಿಮರ್ಶೆಯನ್ನು ಸಾವಧಾನವಾಗಿ ಮೋಕ್ಷಸಾಧನ ನಿರೂಪಣಾವಸರದಲ್ಲಿ ಮಾಡುತ್ತೇವೆ. ಸದ್ಯದಲ್ಲಿ, ಅದ್ವೈತಮತದರೀತ್ಯಾ **ಮುಮುಕ್ಷುಮಾತ್ರನಿಗೆ** ಸ್ವಕರ್ಮ ಪರಿತ್ಯಾಗವು ವಿಹಿತವಾಗಿರುವದರಿಂದ, ತತ್ವಜ್ಞಾನಿ ಶಿಖಾಮಣಿ

ಯಾದ ಅರ್ಜುನನಿಗೆ ಕ್ಷತ್ರಿಯೋಚಿತವಾದ ಯುದ್ಧ ಕರ್ಮಪರಿತ್ಯಾಗದಿಂದ ಏನೂ ಬಾಧಕವಿಲ್ಲವೆಂದು ಅವರ ಮತದ ರೀತ್ಯಾ ನಿರ್ವಿವಾದವಾಗಿ ಸಿದ್ಧವಾಗುವದು. ಹೀಗೆ ಕರ್ಮಮಾರ್ಗದಲ್ಲಿ ಪ್ರವೃತ್ತಿಯಿಂದ ಫಲವಿಲ್ಲವೆಂದೂ, ಕರ್ಮಪರಿತ್ಯಾಗದಿಂದ ಪ್ರತ್ಯವಾಯವಿಲ್ಲವೆಂದೂ ಅರ್ಜುನನು ತಿಳಿಯುವವನಾದರೆ, ಆತನು ಸಮುನ್ನದ್ಧವಾದ, ಭಯಂಕರ ಯುದ್ಧದಲ್ಲಿ, ಅಭಿವೃದ್ಧವಾದ ಉತ್ಸಾಹದಿಂದ ಯುದ್ಧ ಮಾಡಿದುದು, ನಿಷ್ಕಾರಣವಾದ ಅಕಾಂಡಕಾಂಡವದಂತೆ ಅಸಂಗತವಾಗುವದು. ಆದುದರಿಂದ, ಶ್ರೀ ಕೃಷ್ಣನು ನಿಷ್ಪ್ರವೃತ್ತಿಗೆ ಕಾರಣವಾದ ಅದ್ವೈತತತ್ವವನ್ನು ಅರ್ಜುನನಿಗೆ ಉಪದೇಶ ಮಾಡಿಲ್ಲವೆಂದು ನಿಶ್ಚಯಿಸಬೇಕು.

ಈ ರೀತಿಯಾಗಿ 1. "**ಅನ್ಯ**" ಶಬ್ದದಿಂದ ಸಹಿತವಾದ ಸಾಕ್ಷಾಜ್ಜೀವಬ್ರಹ್ಮರ ಭೇದಬೋಧಕ ವಚನಗಳು; 2. ಜೀವಬ್ರಹ್ಮರುಗಳ ಪ್ರತ್ಯೇಕವಾದ ನಿತ್ಯವಾದ ಅವಸ್ಥಿತಿಯು; 3. ನಹ್ಯನ್ಯೋನ್ಯಾತ್ಮನಾಭವತಿ ಇತ್ಯಾದಿ ಪೂರ್ವಪ್ರದರ್ಶಿತ ನ್ಯಾಯಗಳು; 4. ಭೇದಸಾಧಕವಾದ ಸರ್ವಜ್ಞತ್ವಾಲ್ಪಜ್ಞತ್ವಾದಿ ರೂಪ ಅನೇಕ ವಿರುದ್ಧ ಧರ್ಮಗಳು; 5. ಭಿನ್ನರಾದ ಜೀವಪರಮಾತ್ಮರುಳ್ಳ ಮುಕ್ತ್ಯವಸ್ಥಾಕಥನವು; 6. ಭೇದಾವಗಾಹಿಯಾದ ಅಪರೋಕ್ಷಜ್ಞಾನವರ್ಣನೆಯು; 7. ಅಭೇದನಿಷೇಧಕವಾದ ಸಾಕ್ಷಾದ್ವಚನಗಳು; 8. ಅಭೇದಬಾಧಕಗಳಾದ ಅನುಭವಭೇದವೇ ಮೊದಲಾದ ಯುಕ್ತಿಗಳು; 9. ಉಪಕ್ರಮಾದಿ ಲಿಂಗಸದ್ಭಾವವು; ಮತ್ತು 10. ಯುದ್ಧೋಪದೇಶ ಪ್ರಕರಣದಲ್ಲಿ ಉತ್ಸಾಹಭಂಜಕವಾದ ಅಭೇದತತ್ವದ ಅನೌಚಿತ್ಯವು; ಇಷ್ಟು ವಿಷಯಗಳ ವಿಮರ್ಶೆಯಿಂದ, ಭಗವದ್ಗೀತೆಯನ್ನು ಉಪದೇಶಿಸಿದ ಪರಮಚೇತನನಾದ ಶ್ರೀ ಕೃಷ್ಣನಿಗೆ, "ಜೀವಚ್ಚೈತನ್ಯವೇ ಪರಬ್ರಹ್ಮಚ್ಚೈತನ್ಯವು. ಉತ್ತಮಾಧಮ ಭಾವದಿಂದ ಸಹಿತವಾದ ಬಹುಚೇತನರು ಇಲ್ಲ." ಎಂಬ ಅದ್ವೈತ ತತ್ವವು ಅತ್ಯಂತ ವಿರುದ್ಧಪ್ರಕ್ರಿಯೆಯೆಂದೂ; ಮತ್ತು ನಿತ್ಯವೂ, ಅತ್ಯಂತ ಸತ್ಯವೂ, ಆದ ಪಂಚಭೇದಗಳು ಆತನಿಗೆ ಪ್ರಿಯತಮವಾದ ಮತವೆಂದೂ ಸಿದ್ಧವಾಗುವದು. ಇಷ್ಟು ಪ್ರಮಾಣಗಳನ್ನು ಅತಿಕ್ರಮಿಸಿ ಅಭೇದವು ಗೀತಾರ್ಥವು. ಶ್ರೀ ಕೃಷ್ಣನಿಗೆ ಸಮ್ಮತವೆಂದು ಹೇಳುವವನು ಮಿತಿಮೀರಿದ ಭ್ರಾಂತನು ಅಥವಾ ಪ್ರಬಲವಾದ ದುರಾಗ್ರಹಕ್ಕೆ ವಶನಾದವನೆಂದು ನಿಸ್ಸಂಶಯವಾಗಿ ಹೇಳಬಹುದು.* ಆದುದರಿಂದ "**ಪ್ರತಿಜಾನೇಪ್ರಿಯೋಸಿಮೇ**" ಎಂದು

* ಶ್ರೀಪಾದ ವಡೆಯರ ಈ ನಿರ್ಣಯವು ಸಕಲ ಪಾಶ್ಚಾತ್ಯ ವಿದ್ವಾಂಸರಿಂದಲೂ ಅನುಮೋದಿಸಲ್ಪಟ್ಟಿದೆ. ಭಗವದ್ಗೀತೆಯು ಅಭೇದಸಾಧಕವಲ್ಲ ಮತ್ತು ಕರ್ಮಾಕರಣವನ್ನು ಬೋಧಿಸುವದಿಲ್ಲವೆಂಬ ವಿಷಯದಲ್ಲಿ ಅವರು ನಿರ್ವಿವಾದರಾಗಿರುತ್ತಾರೆ. ಪಾಶ್ಚಾತ್ಯ ಪಂಡಿತಾಗ್ರಣಿಯಾಗಿ ಆಕ್ಸಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಸಂಸ್ಕೃತ ಮಹೋಪಾಧ್ಯಾಯ ಪದವಿಯಲ್ಲಿ ಆರೂಢನಾದ **ಮ್ಯಾಕ್ಡೊನೆಲ್** ಎಂಬ ಗ್ರಂಥಕರ್ತನ ಅಭಿಪ್ರಾಯವು ಹೀಗಿರುತ್ತದೆ.

Sankera......was the principal exponent of the Adwaita doctrine or Strict Monism...His Gita Bhashya or commentry on

ಭಕ್ತರಲ್ಲಿ ಅಧಿಕವಾದ ಪ್ರೀತಿಯಿಂದ "ನಾನೇ ಪುರುಷೋತ್ತಮನು; ನನ್ನಲ್ಲಿ ಶರಣು ಹೊಂದು ಎಂದು ಶಪಥ ಮಾಡಿ ಹೇಳುವ ಶ್ರೀ ಕೃಷ್ಣನ ವಾಕ್ಯಗಳನ್ನು ನಂಬಿ, ಆತನೇ ಸರ್ವಜೀವವಿಲಕ್ಷಣನಾದ ಪರಬ್ರಹ್ಮನೆಂದು ಭಕ್ತಿಯಿಂದ ಉಪಾಸನೆ ಮಾಡುವವನು ಶೀಘ್ರದಲ್ಲಿಯೇ, ಸಂಸಾರಸಾಗರವನ್ನು ಗೋವತ್ಸಪದದಂತೆ, ಅನಾಯಾಸದಿಂದ ದಾಟುವದರಲ್ಲಿ ಸಂಶಯವಿಲ್ಲ.

---

the Bhagavadgita is rather an independent religio-philosophic treatise than a commentary in the strict sense. From the Gita, he tries to adduce proofs for his own doctrine...especially in its esoteric part relating to thc performance of social duties :— India's Past. By A. A. Macdonell; Emeritus professor of Sanskrit in the University of Oxford.

ಇದರ ಅರ್ಥವು:— ಶಂಕರಾಚಾರ್ಯರು ಅದ್ವೈತತತ್ವದ ಅಥವಾ ಐಕ್ಯವಾದದ ಪ್ರತಿಪಾದಕರಲ್ಲಿ ಪ್ರಧಾನರು. ಗೀತಾಭಾಷ್ಯವೆಂಬ ಅವರ ಗೀತಾವ್ಯಾಖ್ಯಾನವು ಒಂದು **ಸ್ವತಂತ್ರವಾದ** ಧರ್ಮ ಮತ್ತು ತತ್ವಮೀಮಾಂಸಾ ಗ್ರಂಥವೇ ಹೊರತು ಸರಿಯಾದ ವ್ಯಾಖ್ಯಾನವೆನಿಸುವುದಿಲ್ಲ. ಅವರು ಗೀತೆಯಿಂದ **ತಮ್ಮ ಸ್ವಂತತತ್ವಗಳಿಗೆ** ಅನುಕೂಲವಾಗುವಂತೆ ರುಜುವಾತುಗಳನ್ನು ತೋರಿಸುವದಕ್ಕೆ ಪ್ರಯತ್ನ ಮಾಡುತ್ತಾರೆ. (ಗೀತೆಯ ಅಭಿಪ್ರಾಯವು ಇರುವಂತೆ ವ್ಯಾಖ್ಯಾನ ಮಾಡಿಲ್ಲವೆಂದು ಭಾವವು.) ಅದರಲ್ಲಿಯೂ ವರ್ಣಾಶ್ರಮ ಧರ್ಮಪ್ರವೃತ್ತಿಗೆ ಸಂಬಂಧವಾದ ಬಹಿರಂಗ ಭಾಗದಲ್ಲಿ, ಗೀತೆಯಲ್ಲಿ ( ಸ್ವಲ್ಪವೂ ರುಜುವಾತು ಇಲ್ಲದಿದ್ದರೂ ), ತಮ್ಮ ಸ್ವಂತ ತತ್ವಗಳಿಗೆ ರುಜುವಾತು ತೋರಿಸುವದಕ್ಕೆ ಪ್ರಯತ್ನ ಮಾಡುತ್ತಾರೆ.

ಘನತೆ ಹೊಂದಿದ ಕೀರ್ತಿಯುಳ್ಳ, ಕಲ್ಕತ್ತಾ ವಿಶ್ವವಿದ್ಯಾನಿಲಯದ ವೈಸ್‌ಛಾನ್ಸಲರ್ ಪದವಿಯಲ್ಲಿರುವ ಡಾಕ್ಟರ್ ಉರ್ಕು ಹಾರ್ಟ್ ಎಂಬ ವಿದ್ವಾಂಸನೂ ಭಗವದ್ಗೀತೆಗೆ ದ್ವೈತದಲ್ಲಿಯೇ ತಾತ್ಪರ್ಯವಿರುವದೆಂದು ನಿಶ್ಚಯಿಸಿರುತ್ತಾನೆ :—

"Such a work as the Gita would naturally give encouragement to dualistic tendencies."—p. 44. The Vedanta and Modern Thought by W. S. Urquhart. M. A; D. Litt.

ಅರ್ಥವು:— ಗೀತೆಯಂಥ ಗ್ರಂಥವು, ಸಹಜವಾಗಿಯೂ, ದ್ವೈತರೀತಿಯಿಂದ ತತ್ವಪ್ರತಿಪಾದನೆಗೆ ಉತ್ತೇಜನ ಕೊಡುವದು.— (H. S.)



# IV

# ಜೀವಪಾರತಂತ್ರ್ಯ ಸಮರ್ಥನವು.



1 ಮತ್ತು 2—8—1930 ರಲ್ಲಿ

**ಸಭಿಕರು— ಧರ್ಮಾಧಿಕಾರಿಗಳು, ವಿದ್ವಾಂಸರು ಮತ್ತು ವಿದ್ಯಾರ್ಥಿಗಳು.**

ಶ್ರೀ ಶ್ರೀಗಳವರು— **"ಹರೇರನುಚರಾಃ"** ಎಂದರೆ ಸರ್ವಜೀವರಾಶಿಗಳೂ ವಿಷ್ಣುವಿನ ಅನುಯಾಯಿಗಳು, ಎಂಬ ನಮ್ಮಿಂದ ಪ್ರತಿಜ್ಞಾತವಾದ ಶ್ಲೋಕ ಭಾಗೋಕ್ತಪ್ರಮೇಯವನ್ನು ಈ ದಿವಸ ನಿರೂಪಿಸುತ್ತೇವೆ.

**ಪ್ರಶ್ನೆ**— ಸ್ವಾಮೀ ! ಮುಖ ನೋಡುವಾಗಲೇ ಈತನು ಹನುಮಂತನು ಎಂದು ತಿಳಿಯುವಂತೆ, ಆ ಕಡೆ ಈ ಕಡೆ ನೋಡಿದರೆ ಸಾಕು; ಎಲ್ಲಾ ಜೀವರುಗಳೂ ವಿಷ್ಣುಭೃತ್ಯರಲ್ಲವೆಂದು ಸಿದ್ಧವಾಗುವದು. ಶೈವಶಾಕ್ತೇಯಾದಿ ಅನೇಕ ಮತಾನುಯಾಯಿಗಳು ಸುತರಾಂ ವಿಷ್ಣುಭೃತ್ಯರಲ್ಲ. ದುರ್ಯೋಧನನು ವಿಷ್ಣುದಾಸನಲ್ಲವೆಂಬುದು ಸರ್ವಸಮ್ಮತವು.

ಶ್ರೀ ಶ್ರೀಗಳವರು— ನಮ್ಮ ವಾಕ್ಯಗಳ ಭಾವವು ನಿಮಗೆ ತಿಳಿಯಲಿಲ್ಲ. ಎಲ್ಲಾ ಜೀವರೂ ಹರಿಯ ಅನುಚರರೆಂದರೆ ಅವರೆಲ್ಲಾ ವಿಷ್ಣುಭಕ್ತರು, ಭಕ್ತಿಯಿಂದ ವಿಷ್ಣುಸೇವೆಯಲ್ಲಿರತರಾದವರು, ಎಂದು ನಮ್ಮ ತಾತ್ಪರ್ಯವಲ್ಲ. ಮತ್ತೇನೆಂದರೆ, ಮೈಸೂರು ದೇಶದವರೆಲ್ಲಾ ಮಹಾರಾಜರ ಅನುಚರರು ಎಂದರೆ ಈ ದೇಶದ ಪ್ರಜೆಗಳೆಲ್ಲಾ ಅವರ ಅಧೀನರು; ಅವರ ಆಳ್ವಿಕೆಗೆ ಒಳಪಟ್ಟವರು ಎಂದು ಅರ್ಥವಾಗುವಂತೆ, ಸರ್ವಚೇತನರೂ ಸರ್ವಶಕ್ತನೂ, ಸ್ವತಂತ್ರನೂ ಆದ ಪರಮಾತ್ಮನ ವಶದಲ್ಲಿರುವರು; ಅವನಿಂದ ನಿಯಮ್ಯರಾಗಿ, ಅವನ ಅಧೀನದಲ್ಲಿ ನಾನಾ ವ್ಯಾಪಾರಗಳನ್ನು ಮಾಡುವವರಾಗಿದ್ದಾರೆಯೇ ಹೊರತು, ಅವನನ್ನು ಲಕ್ಷಿಸದೆ ಯಾವ ಒಂದು ವ್ಯಾಪಾರವನ್ನು ಮಾಡುವುದಕ್ಕೂ ಸ್ವತಂತ್ರರಲ್ಲ; ಮತ್ತು ಪರಮಾತ್ಮನನ್ನು ನೀನು ಹೀಗೆಯೇ ಮಾಡಬೇಕು ಎಂದು ನಿಯಮಿಸುವುದಕ್ಕೂ ಸಮರ್ಥರಲ್ಲ ಎಂದು ತಾತ್ಪರ್ಯವು.

**ಪ್ರಶ್ನೆ**— ಸ್ವಾಮೀ ! ಸರಿ ಹೋಯಿತು. ಸಕಲ ಚೇತನರೂ ವಿಷ್ಣುವಿನ ವಶರೆಂದು ಹೇಳುವ ಗೀತಾವಾಕ್ಯಗಳು ಯಾವವು ?

**ಉತ್ತರ**— ಬಹಳ ಆಶ್ಚರ್ಯವು ! ಬೆಳಗಾಗುವವರೆಗೂ ರಾಮಾಯಣ ವನ್ನು ಕೇಳಿ ರಾಮನಿಗೆ ಸೀತೆಯು ಏನಾಗಬೇಕು ಎಂದು ಪ್ರಶ್ನೆ ಮಾಡಿದ ಹಾಗಾಯಿತು. 1. ವಿಷ್ಣುವೇ ಸರ್ವೋತ್ತಮನೆಂಬಲ್ಲಿ **ದ್ವಾವಿಮೌ ಪುರುಷೌ ಲೋಕೇ** ಇತ್ಯಾದಿ ಸಾಕ್ಷಾದ್ವಚನಗಳನ್ನು ( ಎರಡನೆಯ ಪುಟದಲ್ಲಿಯೇ ) ಉದಾ ಹರಿಸಿರುತ್ತೇವೆ. ಇದರಿಂದ ಸರ್ವಚೇತನರೂ ವಿಷ್ಣುವಿಗಿಂತ ಅಧಮರು; ಆದುದ ರಿಂದ ಅವನ ವಶದಲ್ಲೇ ಇರುವವರು ಎಂದು ಸಿದ್ಧವಾಗುವದು. ಮಹಾರಾಜರು ಎಲ್ಲಾ ಪ್ರಜೆಗಳಿಗಿಂತ ಉತ್ತಮರೆಂದು ಹೇಳಿದರೆ ಪ್ರಜೆಗಳು ಮಹಾರಾಜರಿಗಿಂತ ಅಧಮರು ಎಂದು ಅನುಮಾನದಿಂದ ಸಿದ್ಧವಾಗುವದಿಲ್ಲವೇ ? 2. ಮತ್ತು ಬ್ರಹ್ಮಾದಿ ಸರ್ವಜೀವರೂ ಉತ್ತಮರಲ್ಲವೆಂಬಲ್ಲಿ ( ಹಿಂದಿನ ಪುಟಗಳಲ್ಲಿ ) ಗೀತಾವಾಕ್ಯಗಳನ್ನು ಉದಾಹರಿಸಿರುತ್ತೇವೆ. ಆ ವಾಕ್ಯಗಳು ಬ್ರಹ್ಮಾದಿಗಳು ವಿಷ್ಣುವಿನ ಆಶ್ರಯದಲ್ಲಿರುವ ರೆಂಬಲ್ಲಿ ಪ್ರಮಾಣವಾಗುವವು. 3. ಕಿಂಚ ವಿಷ್ಣುವೇ ಪರಬ್ರಹ್ಮನು ಎಂದರೆ ಸರ್ವೋತ್ತಮ ವಸ್ತುವು ಎಂಬಲ್ಲಿ ಪೂರ್ಣಾನಂದತ್ವ, ಸ್ವಾತಂತ್ರ್ಯವೇ ಮೊದಲಾದ ಯುಕ್ತಿಗಳನ್ನು (ಹತ್ತನೆಯ ಪುಟ ಮೊದಲುಗೊಂಡು) ನಿರೂಪಿಸಿರುತ್ತೇವೆ. ಇವು ಗಳೇ ಒಂದೊಂದೂ ಜೀವರುಗಳ ಅಲ್ಪತೆಯನ್ನೂ, ಅಸ್ವತಂತ್ರತೆಯನ್ನೂ ಸಾಧಿ ಸುವುದಕ್ಕೆ ಸಮರ್ಥವಾಗಿರುವವು. ಕಿಂಬಹುನಾ ! ಪರಮಾತ್ಮನ ಅಚಿಂತ್ಯ ಶಕ್ತಿಯು ಸರ್ವರನ್ನೂ ಅವನ ವಶವನ್ನಾಗಿ ಮಾಡುವದು. 4. ಜೀವರುಗಳು ಸರ್ವಥಾ ಅಸ್ವತಂತ್ರರೆಂಬುದು, "ನೀನು ಕರ್ಮಫಲವನ್ನು ಕೋರಬೇಡ ! ನೀನು ನಿಯತ ವಾದ ಕರ್ಮವನ್ನು ಮಾಡು" ಇತ್ಯಾದಿ ಅವನ ವಿಧಿಗಳಿಂದ ಗೊತ್ತಾಗುವದು. ಸ್ಪಷ್ಟ ವಚನವನ್ನೂ ಶ್ರೀ ಕೃಷ್ಣನೇ ಹೇಳಿರುತ್ತಾನೆ :—

(1) **ನಕರ್ತೃತ್ವಂ ನಕರ್ಮಾಣಿ ಲೋಕಸ್ಯಸೃಜತಿಪ್ರಭುಃ ।**
**ನಕರ್ಮಫಲ ಸಂಯೋಗಂ ಸ್ವಭಾವಸ್ತು ಪ್ರವರ್ತತೇ ।**
**ನಾದತ್ತೇ ಕಸ್ಯಚಿತ್ಪಾಪಂ ನ ಚೈವಸುಕೃತಂವಿಭುಃ ।**
—(5. 14-15.)

ಪ್ರಭುವಾದ ಪರಮಾತ್ಮನು ಜೀವನಿಗೆ ಅಗ್ನಿಹೋತ್ರಾದಿ ಕರ್ಮಾನುಷ್ಠಾನ ದಲ್ಲಿ ಸ್ವಾತಂತ್ರ್ಯವನ್ನು ಕೊಡುವದಿಲ್ಲ; ಕ್ರಿಯಾಜನ್ಯ "ಅದೃಷ್ಟ" ಗಳ ವಿಷಯ ದಲ್ಲಿಯೂ ಸ್ವಾತಂತ್ರ್ಯವನ್ನು ಕೊಡುವದಿಲ್ಲ. ಕರ್ಮಫಲಸಂಯೋಗದಲ್ಲಿಯೂ ಜೀವರಿಗೆ ಸ್ವಾತಂತ್ರ್ಯವನ್ನು ಕೊಡುವದಿಲ್ಲ. ಕರ್ಮಾನುಷ್ಠಾನದಲ್ಲಿ, ಕರ್ಮ ಜನ್ಯ ಅದೃಷ್ಟದಲ್ಲಿ, ಮತ್ತು ಕರ್ಮಫಲ ಪ್ರಾಪ್ತಿಯಲ್ಲಿ ಜೀವರಿಗೆ ಸ್ವಾತಂತ್ರ್ಯವು ಇಲ್ಲದಿದ್ದರೆ ಕರ್ಮವು ನೆರವೇರುವದು ಹೇಗೆ ಎಂದರೆ **ಸ್ವಭಾವಸ್ತು ಪ್ರವರ್ತತೇ***

---

***ಮತ್ತಃ ಸರ್ವಂಪ್ರವರ್ತತೇ** ಎಂದರೆ ನನ್ನಿಂದಲೇ ( ಶ್ರೀ ಕೃಷ್ಣನಿಂದಲೇ ) ಎಲ್ಲವೂ ಪ್ರವರ್ತಿಸುತ್ತದೆ, ಎಂಬ ಶ್ರೀ ಕೃಷ್ಣನ ವಚನಾನುಸಾರ ಇಲ್ಲಿ ಹೇಳಿರುವ "ಸ್ವಭಾವ" ಶಬ್ದವಾಚ್ಯವಾದ ವಸ್ತುವು ಪರಮಾತ್ಮನು, ಅವನೇ ಸ್ವತಂತ್ರನು ಎಂದು ಸಿದ್ಧವಾಗುವದು.

ಸರ್ವಸ್ವತಂತ್ರನಾದ ಪರಮಾತ್ಮನೇ ಕರ್ಮಾನುಷ್ಠಾನ, ಕರ್ಮಜನ್ಯ ಅದೃಷ್ಟ, ಕರ್ಮಫಲ ಸಂಯೋಗಗಳಲ್ಲಿ ಪ್ರವರ್ತಿಸುತ್ತಾನೆ. (ಯಾವಾಗಲೂ ಯಾವ ವಿಷಯ ದಲ್ಲಿಯೂ ಜೀವನಿಗೆ ಸ್ವಾತಂತ್ರ್ಯವನ್ನು ಕೊಡುವದಿಲ್ಲ. ಮತ್ತು ಸರ್ವವಿಷಯ ಗಳಲ್ಲಿಯೂ ಸರ್ವದಾ ತಾನೇ ಸ್ವತಂತ್ರಪ್ರವರ್ತಕನು; ಎಂದು ಭಾವವು. ಭಗವಂತನೇ ಸ್ವತಂತ್ರನಾದರೆ ಪುಣ್ಯಪಾಪ ಲೇಪಗಳು ಅವನಿಗೆ ಬರಲಿ ಎಂದರೆ ಹೇಳುತ್ತಾನೆ :— ) ವಿಭುಃ = ಸಮರ್ಥನಾದ ಪರಮಾತ್ಮನು ( ತಾನು ಸಮರ್ಥ ನಾದುದರಿಂದಲೇ ) ಕರ್ಮಗಳ ಪುಣ್ಯಪಾಪಗಳ ಲೇಪವನ್ನು ಹೊಂದುವದಿಲ್ಲ.

ಈ ಶ್ಲೋಕಗಳನ್ನು ಜೀವಪರವಾಗಿಯೂ ಅರ್ಥ ಮಾಡಬಹುದು. ಹೇಗೆಂದರೆ :— ಜಡಕ್ಕಿಂತಲೂ ಸಮರ್ಥನಾದ ಈ ಜೀವನು ಇತರ ಜನರುಗಳಿಂದ ಸ್ವತಂತ್ರವಾಗಿ ಕರ್ಮವನ್ನು ಮಾಡಿಸುವದಿಲ್ಲ; ತಾನೂ ಸ್ವತಂತ್ರವಾಗಿ ಮಾಡುವದಿಲ್ಲ. ಕರ್ಮಗಳಿಂದುಂಟಾಗುವ ಪುಣ್ಯ ಪಾಪ ಫಲರೂಪವಾದ ಸುಖದುಃಖ ಸಂಬಂಧ ವನ್ನು ಉಂಟು ಮಾಡಲಾರನು. ( ಸ್ವತಂತ್ರವಾಗಿ ಕರ್ಮ ಮಾಡುವವನು; ಕರ್ಮ ಮಾಡಿಸುವವನು ಮತ್ತು ಕರ್ಮಫಲಗಳನ್ನು ಕೊಡುವವನು ಸ್ವತಂತ್ರನಾದ ಈಶ್ವ ರನೇ ಎಂದು ಹೇಳುತ್ತಾನೆ :— ) ಸ್ವಭಾವಸ್ತು ಎಂದರೆ ಅನ್ಯನಿರಪೇಕ್ಷನಾದ ಸ್ವತಂತ್ರನಾದ ಪರಮಾತ್ಮನೇ ಈ ವಿಷಯಗಳಲ್ಲಿ ಪ್ರವರ್ತಿಸುತ್ತಾನೆ. ( ಮತ್ತಃ ಸರ್ವಂ ಪ್ರವರ್ತತೇ ಎಂಬ ಶ್ರೀ ಕೃಷ್ಣನ ವಾಕ್ಯವು ಈ ವಿಷಯದಲ್ಲಿ ಸಮಾಖ್ಯಾ ರೂಪವಾಗಿರುವದು.) ಜಡಾಪೇಕ್ಷೆಯಿಂದ ಸಮರ್ಥನಾದ ಜೀವನು ಮತ್ತೊಬ್ಬನ ಪಾಪವನ್ನು ಅಥವಾ ತಾನು ಮಾಡಿದ ದುಷ್ಕರ್ಮದ ಪಾಪವನ್ನೂ ಸಹ ಸ್ವತಂತ್ರ ನಾಗಿ ಹೊಂದುವದಿಲ್ಲ. ಪುಣ್ಯವನ್ನೂ ಸ್ವತಂತ್ರನಾಗಿ ಹೊಂದುವದಿಲ್ಲ. ( ತಾನು ಮಾಡಿದ ಅಥವಾ ಇತರರಿಂದ ಮಾಡಿಸಿದ ಕರ್ಮಗಳಿಗೆ ಪುಣ್ಯ ಪಾಪಗಳು ಉಂಟಾಗುವದರಲ್ಲಿ ಈಶ್ವರನೇ ಕಾರಣನೆಂದು ಭಾವವು. )

ಈ ವಾಕ್ಯಗಳಿಂದ ಜೀವರುಗಳು ಸರ್ವಥಾ ಅಸ್ವತಂತ್ರರಾದುದರಿಂದ, ಸದಾ ಪರಮಾತ್ಮನ ವಶರಾಗಿಯೇ ಸ್ವಸ್ವವ್ಯಾಪಾರಗಳನ್ನು ಮಾಡುವರೆಂದು ನಿಶ್ಚಿತ ವಾಗುವದು.

ಇದೂ ಅಲ್ಲದೆ ಸರ್ವತ್ರ ಪರಮಾತ್ಮನೇ ನಿಯಾಮಕನಾಗಿರುವದರಿಂದ, ಈ ಜೀವರುಗಳು ಯಾರ ಯಾರ ಸೇವೆಯನ್ನು ಮಾಡಿದರೂ, ವಸ್ತುತಃ ಅದು ತದಂತರ್ಯಾಮಿಯಾದ ಪರಮಾತ್ಮನ ಸೇವೆಯಾಗಿರುವದು. ಫಲವನ್ನು ಕೊಡು ವವನೂ ಅಂತರ್ಯಾಮಿಯಾದ ಪರಮಾತ್ಮನು. "ವೀಣಾಯಾಂ........ಏತಂತೇಗಾ ಯಂತಿ " ಎಂಬ ಛಾಂದೋಗ್ಯಶ್ರುತಿಯು ರಾಜಾಸ್ಥಾನಗಳಲ್ಲಿ ಗಾಯಕರು ಏನು ವೀಣಾವಾದನಗಳನ್ನು ಮಾಡುವರೋ, ಅದು ರಾಜಾಂತರ್ಗತನಾದ ಪರಬ್ರಹ್ಮನ ಉದ್ದಿಶ್ಯ ಮಾಡಿದ ಸ್ತುತಿಯೆನಿಸುವದು ಎಂದು ಹೇಳುತ್ತದೆ. ಗಾಯನಕ್ಕೆ ಪ್ರೇರಕನೂ

ಪರಮಾತ್ಮನು; ಗಾಯನದಿಂದ ಪ್ರಸನ್ನನಾಗಿ ದ್ರವ್ಯಾದಿಫಲ ಕೊಡುವವನೂ ಪರಮಾತ್ಮನೇ; ರಾಜಾದಿಗಳು ನಿಮಿತ್ತಮಾತ್ರರು ಎಂದು ತಾತ್ಪರ್ಯವು. ಈ ಅಭಿಪ್ರಾಯದಿಂದಲೇ ಅನ್ಯ ದೇವತೆಗಳಿಗೆ ಮಾಡಿದ ಸೇವೆಯೂ ಕೂಡ, ( ಸೇವೆ ಮಾಡುವ ಜನರು ತಿಳಿಯದಿದ್ದರೂ ) ನನ್ನ ಸೇವೆಯು ಆಗುವದು ಎಂದು ಶ್ರೀ ಕೃಷ್ಣನು ಹೇಳುತ್ತಾನೆ. ಅನ್ಯ ದೇವತೆಗಳನ್ನು ಉದ್ದೇಶ ಮಾಡಿ ಸೇವೆ ಮಾಡುವವರಿಗೆ ಪ್ರವರ್ತಕನೂ, ಮಾಡಿದ ಸೇವೆಗಳಿಗೆ ಆಯಾಯ ದೇವತೆಗಳಲ್ಲಿ ನಿಂತು ಫಲಪ್ರದನಾಗುವವನೂ ಪರಮಾತ್ಮನೇ ಆಗಿರುವನು.

(2) **ಯೋಯೋಯಾಂಯಾಂತನುಂ ಭಕ್ತಃ ಶ್ರದ್ಧಯಾಽರ್ಚಿತು ಮಿಚ್ಛತಿ ।**
**ತಸ್ಯತಸ್ಯಾಚಲಾಂಶ್ರದ್ಧಾಂ ತಾಮೇವವಿದಧಾಮ್ಯಹಂ ।**
**ಸ ತಯಾ ಶ್ರದ್ಧಯಾಯುಕ್ತ ಸ್ತಸ್ಯಾರಾಧನ ಮೀಹತೇ ।**
**ಲಭತೇ ಚ ತತಃ ಕಾಮಾ ನ್ಮಯೈವವಿಹಿತಾನ್‌ಹಿತಾನ್‌*** ॥
—(7. 21-22.)

ನವಮಾಧ್ಯಾಯದಲ್ಲಿ ಶ್ರೀ ಕೃಷ್ಣನು ಹೀಗೆ ಹೇಳಿರುತ್ತಾನೆ :—

(3) **ಯೇಽಪ್ಯನ್ಯದೇವತಾಭಕ್ತಾಯಜಂತೇ ಶ್ರದ್ಧಯಾನ್ವಿತಾಃ ।**
**ತೇಽಪಿಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಂ†** ॥
—(9. 23.)

ಆದರೂ **ನತುಮಾಮಭಿಜಾನಂತಿ** ಎಂದರೆ ಪೂಜೆ ಮಾಡುವ ಜೀವರುಗಳು ತಾವು ಪರಮಾತ್ಮನ ವಶರಾಗಿಯೇ ಕರ್ಮ ಮಾಡಿ, ಪರಮಾತ್ಮನಿಗೇ ಸಮರ್ಪಿಸುತ್ತಿರುವೆವೆಂದು ತಿಳಿಯಲಾರರು ಎಂದು ಹೇಳಿರುತ್ತಾನೆ. " ಆಕಾಶಾತ್ಪತಿತಂತೋಯಂ ಯಥಾಗಚ್ಛತಿಸಾಗರಂ । ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ ॥" ಎಂಬ ಸಂಧ್ಯಾವಂದನ ಸ್ತುತಿಯೂ ಇದೇ ಅರ್ಥವನ್ನು ಹೇಳುತ್ತದೆ.

**ಪ್ರಶ್ನೆ**— ಸ್ವಾಮೀ ! ಇದು ಎಲ್ಲಿ ಕಂಡು ಬಂದಿರುವದು ? ನಾನು ರಾಜಸೇವೆಯನ್ನು ಮಾಡುತ್ತಾ ರಾಜಸೇವಕನಲ್ಲವೆಂದು ತಿಳಿದುಕೊಂಡಿರುವದಕ್ಕಾಗುವುದೇ ?

**ಉತ್ತರ**— ಹಳ್ಳಿಯ ಗೌಡರುಗಳ ವ್ಯಾಪಾರ ಪರೀಕ್ಷೆಯನ್ನು ಮಾಡಿರಿ. ರೈತರು ಶಾನುಭೋಗರಿಗೆ ಕಂದಾಯ ದ್ರವ್ಯವನ್ನು ಕೊಡುವಾಗ ನಾವು ಈ

---

* ಈ ಶ್ಲೋಕವ್ಯಾಖ್ಯಾನವು ಹಿಂದಿನ ಪುಟದಲ್ಲಿ ಬಂದಿರುತ್ತದೆ.

† ಈ ಶ್ಲೋಕವ್ಯಾಖ್ಯಾನವು ಹಿಂದಿನ ಪುಟಗಳಲ್ಲಿರುತ್ತದೆ.

ವ್ಯಾಪಾರದಿಂದ ಮಹಾರಾಜರನ್ನು ತೃಪ್ತಿಪಡಿಸುತ್ತಿರುವೆವೆಂದು ತಿಳಿಯದೆ, ಅಮ ಲ್ದಾರರ ಅಥವಾ ಶಾನುಭೋಗರ ಮನಸ್ತೃಪ್ತಿಯಾಯಿತೆಂದು ತಿಳಿದಿರುವರು. ಹಾಗೆಯೇ ಗ್ರಾಮರಕ್ಷಣಾದಿ ಸಕಲ ವ್ಯಾಪಾರಗಳೂ ರಾಜಾಧೀನವಾಗಿ ನಡೆ ಯುತ್ತಿದ್ದರೂ, ಪಟೇಲನೇ ಗ್ರಾಮರಕ್ಷಕನು ಎಂದು ತಿಳಿದಿರುವರು. ಎಷ್ಟೋ ಜನ ಹುಡುಗರಿಗೆ ತಮಗೆ ಪಾಲಕರಾದ ಒಬ್ಬ ಮಹಾರಾಜರು ಇದ್ದಾರೆಂಬುದೂ ತಿಳಿಯದು.

ಈ ರೀತಿಯಲ್ಲಿ ಪ್ರವೃತ್ತಿಯಲ್ಲಿಯೂ, ಫಲ ಹೊಂದುವದರಲ್ಲಿಯೂ ಜೀವರು ಅಸ್ವತಂತ್ರರಾದುದರಿಂದ ಪರಮಾತ್ಮನ ಅನುಚರರೆಂದು ನಿರ್ಣಯ ಮಾಡಬೇಕು. ಶ್ರೀ ಕೃಷ್ಣನು ಹೇಳುತ್ತಾನೆ :—

(4) **ನೈವಕಿಂಚಿತ್ಕರೋಮೀತಿಯುಕ್ತೋಮನ್ಯೇತತತ್ವವಿತ್ ।**
**ಪಶ್ಯಞ್ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ಗಚ್ಛನ್ಸ್ವಪನ್ಶ್ವಸನ್ ।**
**ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿಧಾರಯನ್ ।**
**ಬ್ರಹ್ಮಣ್ಯಾಧಾಯಕರ್ಮಾಣಿ ಸಂಗಂತ್ಯಕ್ತ್ವಾ ಕರೋತಿಯಃ ।**
**ಲಿಪ್ಯತೇನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥**

—(5. 8-10.)

ತಾತ್ಪರ್ಯವು :— ಯೋಗಾನುಷ್ಠಾನ ಮಾಡುವ ತತ್ವಜ್ಞಾನಿಯು ಕಣ್ಣಿ ನಿಂದ ರೂಪಾದಿಗಳನ್ನು ನೋಡುವಾಗ, ಕಿವಿಯಿಂದ ಶಬ್ದವನ್ನು ಕೇಳುವಾಗ, ಸ್ಪರ್ಶೇಂದ್ರಿಯದಿಂದ ಪದಾರ್ಥಗಳನ್ನು ಮುಟ್ಟುವಾಗ, ಮೂಸಿ ನೋಡುವಾಗ, ಭಕ್ಷಣ ಮಾಡುವಾಗ, ಪಾದದಿಂದ ಸಂಚಾರ ಮಾಡುವಾಗ, ಶಯನ ಮಾಡುವಾಗ, ಶ್ವಾಸ ಬಿಡುವಾಗ, ಮಾತಾಡುವಾಗ, ಮಲಾದಿ ವಿಸರ್ಜನ ಮಾಡುವಾಗ, ಕೈಯಿಂದ ಪದಾರ್ಥಗಳನ್ನು ಹಿಡಿಯುವಾಗ, ಕಣ್ಣು ರೆಪ್ಪೆಗಳನ್ನು ತೆರೆಯುವಾಗ ಮತ್ತು ಮುಚ್ಚುವಾಗಲೂ ಕೂಡ, ( ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ಸರ್ವ ವ್ಯಾಪಾರ ಗಳನ್ನು ಮಾಡುವಾಗಲೂ ) ಚಕ್ಷುರಾದಿ ಇಂದ್ರಿಯಗಳು ಪರಮಾತ್ಮನಿಂದ ಪ್ರೇರಿತವಾಗಿಯೇ ರೂಪ, ಶಬ್ದ, ಸ್ಪರ್ಶಾದಿ ವಿಷಯಗಳಲ್ಲಿ ಪ್ರವರ್ತಿಸುತ್ತವೆ; ನಾನು " **ನೈವ ಕಿಂಚತ್ಕರೋಮಿ** " ಎಂದರೆ **ಸ್ವತಂತ್ರವಾಗಿ** ಒಂದು ವ್ಯಾಪಾರ ವನ್ನೂ ಮಾಡುವವನಲ್ಲ ಎಂದು ತಿಳಿಯಬೇಕು. ಈ ರೀತಿಯಾಗಿ ಸರ್ವಕರ್ಮ ಗಳನ್ನೂ **ಬ್ರಹ್ಮಣ್ಯಾಧಾಯ** ಎಂದರೆ ಪರಬ್ರಹ್ಮನೇ ಸ್ವತಂತ್ರಪ್ರವರ್ತಕನು ಮತ್ತು ಫಲದಾತೃವು ಎಂದು ತಿಳಿದು ಪರಮಾತ್ಮನಲ್ಲಿ ಸಮರ್ಪಿಸುವವನು ಮತ್ತು ಕರ್ಮ ಫಲೇಚ್ಛಾರಹಿತನಾದವನು, ಕಮಲಪತ್ರವು ಜಲದಿಂದ ಹೇಗೆ ಲಿಪ್ತವಾಗುವು ದಿಲ್ಲವೋ ಹಾಗೆಯೇ, ತನ್ನಲ್ಲಿರುವ ಪಾಪಗಳಿಂದ ಲಿಪ್ತನಾಗುವುದಿಲ್ಲ; ಎಂದರೆ

ಜ್ಞಾನವನ್ನು ಹೊಂದಿ, ಪಾಪಗಳು ಸುಟ್ಟು ಹೋದ ನಂತರ ಮುಕ್ತನಾಗುತ್ತಾನೆಂದು ಅರ್ಥವು.

## 2.

**ಪ್ರಶ್ನೆ**— ಸ್ವಾಮೀ ! ಜೀವರುಗಳಿಗೆ ಯಾವ ಶಕ್ತಿಯೂ ಇಲ್ಲದೆ ಕೇವಲ ಜಡತುಲ್ಯರಾದರೆ ಅವರನ್ನು ಉದ್ದೇಶ ಮಾಡಿ ವಿಧಿನಿಷೇಧಗಳು ಹೇಗೆ ಪ್ರವೃತ್ತವಾದವು ? ಮತ್ತು ಸರ್ವಥಾ ಶಕ್ತಿರಹಿತರಾದ ನಮಗೆ ಪಾಪನಿಮಿತ್ತವಾಗಿ ದುಃಖವನ್ನು ಪರಮಾತ್ಮನು ಕೊಡುವದು ಅನ್ಯಾಯುವಾಗುವದಿಲ್ಲವೇ ?

**ಉತ್ತರ**— ಜೀವನು ಕರ್ತನಲ್ಲ, ಕಲ್ಲಿನಂತೆ ಜಡನೆಂದು ಹೇಳಿದರೆ ನೀವು ಹೇಳುವ ಎರಡು ದೋಷಗಳೂ ಬರುವವು. ನಾವು ಹಾಗೆ ಹೇಳುವದಿಲ್ಲ. ಈ ಅಭಿಪ್ರಾಯವನ್ನು ತಿಳಿಯದೇ, ಅನೇಕರು "ಎಲ್ಲಾ ದೇವರೇ ಮಾಡಿಬಿಡುವದಾದರೆ ನಮ್ಮ ಪ್ರಯತ್ನವು ಏನೂ ಇರುವದಿಲ್ಲ. ಹೀಗಿರುವಲ್ಲಿ ನಮಗೆ ಧರ್ಮವಿಧಾನಗಳನ್ನು ಮಾಡಿ, ಅದನ್ನು ಮಾಡದಿದ್ದರೆ ದುಃಖವನ್ನು ಕೊಡುವದು ಉಚಿತವಲ್ಲ" ಎಂದು ನಮ್ಮ ಶಾಸ್ತ್ರದ ಮೇಲೆ ದೋಷಾರೋಪಣೆಯನ್ನು ಮಾಡಿರುವರು. ಶ್ರೀ ಕೃಷ್ಣನು **ಜೀವರು ಕರ್ತರು ಎಂದರೆ ಸ್ವಾಭಾವಿಕವಾದ ಕ್ರಿಯಾಕರಣ ಸಾಮರ್ಥ್ಯವನ್ನು ಹೊಂದಿರುವರು** ಎಂದು ತೋರಿಸುವದಕ್ಕಾಗಿ; **"ಪ್ರಭುಃ" "ವಿಭುಃ"** ಎಂಬ ವಿಶೇಷಣಗಳನ್ನು ಉಪಯೋಗಿಸಿರುತ್ತಾನೆ. ವಿದ್ಯುಚ್ಛಕ್ತಿ ದೀಪಗಳು ಸ್ವಾಭಾವಿಕವಾಗಿ ಕೆಲವು ಒಂದು ಮೇಣಬತ್ತಿ ಕಾಂತಿಯುಳ್ಳವು, ಕೆಲವು ಹತ್ತು ಮೇಣಬತ್ತಿ ಶಕ್ತಿಯುಳ್ಳವು, ಕೆಲವು ನೂರು ಮೇಣಬತ್ತಿ ಶಕ್ತಿಯುಳ್ಳವು; ಹೀಗೆ ಇರುವಂತೆ, ಜೀವರುಗಳು ಸ್ವರೂಪತಃ ಕೆಲವರು ನೂರು ಆನೆಯ ಬಲವುಳ್ಳವರು, ಕೆಲವರು ಸಾವಿರ ಆನೆಯ ಬಲವುಳ್ಳವರು, ಕೆಲವರು ಲಕ್ಷ ಆನೆಯ ಬಲವುಳ್ಳವರು. ಈ **ಶಕ್ತಿಯು** ಅನಾದಿನಿತ್ಯವಾಗಿ ಜೀವನ ಜ್ಞಾನಾನಂದಾದಿಗಳಂತೆ ಜೀವನಸ್ವರೂಪಭೂತವಾಗಿಯೇ ಇರುವದು. ಆದುದರಿಂದ ಜೀವನು ಸಂಧ್ಯಾದಿ ಕರ್ಮಗಳನ್ನು ಮಾಡುವದರಲ್ಲಿ **ಸಮರ್ಥನಾಗಿರುವನು.** ಹಾಗಿದ್ದರೂ ಈ ಬಲವನ್ನು ಸ್ವತಂತ್ರವಾಗಿ ( ಪರಮಾತ್ಮನನ್ನು ಅಪೇಕ್ಷಿಸದೆ ) ಉಪಯೋಗಿಸುವದಕ್ಕೆ ಬರುವದಿಲ್ಲ. ಆದುದರಿಂದ ಜೀವನು ಒಂದು ವೇಳೆ ಸಂಧ್ಯಾದಿಕರ್ಮಗಳನ್ನು ಮಾಡಬೇಕಾದರೆ, ಜೀವನೂ ಪ್ರಯತ್ನಪೂರ್ವಕವಾಗಿ ವ್ಯಾಪಾರ ಮಾಡಬೇಕು; ಅದೇ ಕಾಲದಲ್ಲಿ ಪರಮಾತ್ಮನೂ ನಿಯಾಮಕತನದಿಂದ ಅದೇ ವ್ಯಾಪಾರವನ್ನು ಮಾಡಬೇಕು. ಒಂದು ವ್ಯಾಪಾರವನ್ನು ಇಬ್ಬರು ಮಾಡಿದಂತಾಯಿತೇ ಹೊರತು ಜೀವನು ಮಾಡಲಿಲ್ಲವೆಂದಾಗುವದಿಲ್ಲ. ಜೀವನು ಅಸ್ವತಂತ್ರನಾಗಿ ಮಾಡಿದುದರಿಂದ, ( ರಾಜಾಜ್ಞಾಧಾರಕನಾದ ಭಟನು ದೇಶರಕ್ಷಣೆ ಮಾಡಿದಂತೆ ) ಅಲ್ಪಪುಣ್ಯವನ್ನು ಹೊಂದುವನು; ಪರಮಾತ್ಮನು ಸ್ವತಂತ್ರನಾಗಿ ಮಾಡಿದುದರಿಂದ ಹೆಚ್ಚು ಫಲವನ್ನು ಹೊಂದುವನು. ವಸ್ತುತಃ, ಒಂದೊಂದು ಕಾರ್ಯವು ನೆರವೇರಬೇಕಾದರೂ **ಐದು**

ಕಾರಣಗಳಿರುತ್ತವೆ ಎಂದು **ಪಂಚೈತಾನಿಮಹಾಬಾಹೋ** ಇತ್ಯಾದಿ ವಾಕ್ಯಗಳಲ್ಲಿ ಶ್ರೀ ಕೃಷ್ಣನು ಹೇಳಿರುವದರಿಂದ, ಜೀವರುಗಳು ಪ್ರಯತ್ನ ಮಾಡದೆ ಸುಮ್ಮನೆ ಮಲಗಿರಲೆಂಬುದು ತಾಮಸ ಜನರ ಮಾತು. ಈ ವಿಷಯವನ್ನು ನಾವು ಪೂರ್ವದಲ್ಲೇ ನಿರೂಪಿಸಿರುತ್ತೇವೆ. "ಕರ್ತಾಶಾಸ್ತ್ರಾರ್ಥವತ್ತ್ವಾತ್" ಇತ್ಯಾದಿ ಬ್ರಹ್ಮಸೂತ್ರಗಳೂ, "ಪ್ರಯತ್ನಮೇಕಮುಗ್ರತೋ ವಿಧಾಯಭೂತಿಮಾಪ್ನುಮಃ" ಇತ್ಯಾದಿ ಭೀಮಸೇನ ದೇವರ ವಚನಗಳೂ "ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀಃ" ಮುಂತಾದ ಭಾರತನೀತಿಗಳೂ ಈ ವಿಷಯದಲ್ಲಿ ಪ್ರಮಾಣಗಳಾಗಿರುವುವು. ಸ್ವಾತಂತ್ರ್ಯವು ಮಾತ್ರ ಪರಮಾತ್ಮ ಮಾತ್ರವೃತ್ತಿಯಾದ ಧರ್ಮವು.

## 3.

ಪರಬ್ರಹ್ಮನ ಆಧೀನನಾಗಿರುವುದರಿಂದಲೇ, ಜೀವನು ವಿಧಿಬಂಧಕ್ಕೆ ವಿಷಯನಾಗಿರುವನು. ಪರಾಧೀನತೆಯು ವಿಧಿಬದ್ಧತೆಯ ವಿಷಯದಲ್ಲಿ ಭೂಷಣವಾಗಿರುತ್ತದೆ. ಆದುದರಿಂದಲೇ ರಾಜನು ಪ್ರಜೆಗಳನ್ನು ನಿಯಮಿಸುವಂತೆ, ಶ್ರೀ ಕೃಷ್ಣನು ತನ್ನ ವಶರಾದ ಸರ್ವ ಚೇತನರಿಗೂ ವಿಧಿಸುತ್ತಾನೆ :—

(1) **ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇಕಾಮಕಾರತಃ ।**
**ನಸಸಿದ್ಧಿಮವಾಪ್ನೋತಿನಸುಖಂನ ಪರಾಂಗತಿಂ ॥**
**ತಸ್ಮಾಚ್ಛಾಸ್ತ್ರಂಪ್ರಮಾಣಂತೇ ಕಾರ್ಯಾಕಾರ್ಯವ್ಯವಸ್ಥಿತೌ ॥**
**ಜ್ಞಾತ್ವಾಶಾಸ್ತ್ರ ವಿಧಾನೋಕ್ತಂ ಕರ್ಮಕರ್ತುಮಿಹಾರ್ಹಸಿ ॥**
**—(16. 23.24.)**

ಯಾವ ಜೀವನು ಶಾಸ್ತ್ರೋಕ್ತವಿಧಿಯನ್ನು ಪರಿತ್ಯಾಗ ಮಾಡಿ ತನ್ನ ಇಚ್ಛಾನುಸಾರ ಪ್ರವರ್ತಿಸುವನೋ ಅವನು ಬ್ರಹ್ಮಜ್ಞಾನವನ್ನು ಹೊಂದುವುದಿಲ್ಲ. ಅವನಿಗೆ ಇಹಲೋಕದಲ್ಲೂ ಸುಖವಿಲ್ಲ ( ನಾಯಿ, ಕುರಿ, ಕೋಳಿ, ಸಿಂಹ, ವ್ಯಾಘ್ರಾದಿ ನಾನಾ ಯೋನಿಗಳು ಬರುವುದೆಂದು ಭಾವವು ); ಮತ್ತು ಉತ್ತಮಗತಿಯೂ ಇಲ್ಲವು. ಆದುದರಿಂದ ಎಲೈ ಅರ್ಜುನನೇ ! ನೀನೇ ಮೊದಲಾದ ಪ್ರೇಕ್ಷಾವಂತರಾದ ಅಧಿಕಾರಿಗಳಿಗೆ ಇದು ಕರ್ತವ್ಯವು, ಇದು ಅಕರ್ತವ್ಯವು ಎಂದು ವ್ಯವಸ್ಥೆ ಮಾಡುವುದರಲ್ಲಿ ವೇದಾದಿರೂಪವಾದ ಶಾಸ್ತ್ರವೇ ಪ್ರಮಾಣವು (ಆಧಾರವು). ಆದುದರಿಂದ ಶಾಸ್ತ್ರವಿಧಿಗಳಿಗೆ ಸಮ್ಮತವಾದ ಕರ್ಮವನ್ನು* ತಿಳಿದುಕೊಂಡು ನೀನು ಕರ್ತವ್ಯಕರ್ಮವನ್ನು ಮಾಡಬೇಕು.

---

*ಶಾಸ್ತ್ರೋಕ್ತಂ ಎಂದು ಇಷ್ಟೇ ಹೇಳದೆ ಶ್ರೀ ಕೃಷ್ಣನು ಶಾಸ್ತ್ರವಿಧಾನೋಕ್ತಂ ಎಂದು ಹೇಳಿರುವನು. ಆಪಾತತಃ ಶಾಸ್ತ್ರವು ಕೆಲವು ವೇಳೆ ವಿರುದ್ಧ ವಿಷಯಗಳನ್ನು ಹೇಳುವುದಾಗಿ ಕಂಡರೂ, ಅದರ ವಿಧಾನವು ಎಂದರೆ ಅಭಿಪ್ರೇತವಾದ ವಿಧಿಯು ಒಂದೇ ಆಗಿರುವುದು; ಅದನ್ನು ಪೂರ್ವಪರ ವಿಚಾರ ಮಾಡಿ ತಿಳಿದುಕೊಂಡು ಕರ್ಮ ಮಾಡು ಎಂದರ್ಥವು.

ಇಂಥ **ಕರ್ಮವಿಧಿಗಳಿಂದ** ಜೀವರ "ಅನುಚರತ್ವವು ಎಂದರೆ ವಿಷ್ಣ್ವಧೀನತ್ವವು ನಿಸ್ಸಂಶಯವಾಗಿ ಸಿದ್ಧವಾಗುವುದು.

ತಮ್ಮಲ್ಲಿರುವ " ಅನುಚರತ್ವ " ವನ್ನು ಎಂದರೆ ವಿಧಿಬದ್ಧತೆಯನ್ನು ಮರೆತು ಕರ್ಮದಲ್ಲಿ ಪ್ರವೃತ್ತರಾದವರನ್ನು ಶ್ರೀ ಕೃಷ್ಣನು ನಿಂದಿಸುತ್ತಾನೆ. ಅವರ ಯಜ್ಞಾದಿಗಳು ತಾಮಸಗಳೆಂದೂ ಹೇಳುತ್ತಾನೆ :—

(2) **ವಿಧಿಹೀನಂ....ಯಜ್ಞಂತಾಮಸಂಪರಿಚಕ್ಷತೇ** । —(18. 13.)

( ಪರಮಾತ್ಮನ ಆಜ್ಞಾರೂಪವಾದ ) ವೇದವಿದಿವಿಹಿತವಲ್ಲದಿರುವ ಯಜ್ಞವು ತಾಮಸವೆಂದು ಜ್ಞಾನಿಗಳು ಹೇಳುತ್ತಾರೆ.

(3) **ನಿಯತಸ್ಯ ತು ಸನ್ಯಾಸಃ ಕರ್ಮಣೋನೋಪಪದ್ಯತೇ** ।
**ಮೋಹಾತ್ತಸ್ಯ ಪರಿತ್ಯಾಗ ಸ್ತಾಮಸಃ ಪರಿಕೀರ್ತಿತಃ** ।
—(18. 7.)

ವಿಧಿವಿಹಿತವಾದ ಕರ್ಮದ ಪರಿತ್ಯಾಗವು ಉಚಿತವಲ್ಲ. ಮಿಥ್ಯಾಜ್ಞಾನಕ್ಕೆ ವಶನಾಗಿ ಅದನ್ನು ಪರಿತ್ಯಜಿಸುವುದು ತಾಮಸ ತ್ಯಾಗವೆನ್ನಿಸುವುದು.

## 4.

ನಾನು ಈಶ್ವರನ ಅನುಚರನಲ್ಲ ಮತ್ತು ಸ್ವತಂತ್ರನೆಂದು ತಿಳಿದವನನ್ನು ಶ್ರೀ ಕೃಷ್ಣನು ಬಹಳವಾಗಿ ಧಿಕ್ಕರಿಸುತ್ತಾನೆ :—

(1) **ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ಸುಖೀ** ।
**ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋಮಯಾ** ।
**ಯಕ್ಷ್ಯೇದಾಸ್ಯಾಮಿಮೋದಿಷ್ಯೇ ಇತ್ಯಜ್ಞಾನವಿಮೋಹಿತಾಃ** ।
**ಅನೇಕಚಿತ್ತವಿಭ್ರಾಂತಾ ಮೋಹಜಾಲ ಸಮಾವೃತಾಃ** ।
**ಪ್ರಸಕ್ತಾಃ ಕಾಮಭೋಗೇಷು ಪತಂತಿನರಕೇಽಶುಚೌ** ॥
**ಆತ್ಮಸಂಭಾವಿತಾಸ್ಸ್ತಬ್ಧಾ ಧನಮಾನಮದಾನ್ವಿತಾಃ** ।
**ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಂ** ।
**ಅಹಂಕಾರಂ ಬಲಂ ದರ್ಪಂ ಕಾಮಂಕ್ರೋಧಂಚ ಸಂಶ್ರಿತಾಃ** ।
**ಮಾಮಾತ್ಮ ಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ** ।
**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್** ।
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವಯೋನಿಷು** ।
**ಆಸುರೀಂಯೋನಿಮಾಪನ್ನಾ ಮೂಢಾಜನ್ಮನಿ ಜನ್ಮನಿ** ।
**ಮಾಮಪ್ರಾಪ್ಯೈವ ಕೌಂತೇಯ ತತೋಯಾಂತ್ಯಧಮಾಂಗತಿಂ**॥
—(16. 14-20)

ನಾನು ಸ್ವತಂತ್ರನಾದ ಈಶ್ವರನು, ನಾನು ಸ್ವತಂತ್ರಭೋಗ ಉಳ್ಳವನು, ನಾನು ಕೃತಕೃತ್ಯನು, ಸ್ವತಂತ್ರ ಬಲವುಳ್ಳವನು, ಸ್ವತಂತ್ರಸುಖಿಯು, ಸ್ವತಂತ್ರವಾಗಿ ಬಲಾದಿಸಂಪನ್ನನು, ಸತ್ಕುಲೀನನು, ನನಗೆ ಸಮಾನರಾದವರು ಯಾರು ಇದ್ದಾರೆ ? ನಾನು ಸ್ವತಂತ್ರವಾಗಿ ಯಾಗಾದಿಗಳನ್ನು ಆಚರಿಸುತ್ತೇನೆ, ದಕ್ಷಿಣಾದಿಗಳನ್ನು ಕೊಡುತ್ತೇನೆ, ಸ್ವತಂತ್ರವಾಗಿ ಸಂತೋಷವನ್ನು ಹೊಂದುತ್ತೇನೆ; ಈ ರೀತಿ ವಿಪರೀತ ಜ್ಞಾನವುಳ್ಳವರಾಗಿ, ನಾನಾ ವಿಧವಾದ ಚಿಂತೆಗಳಿಂದ ವಿಶೇಷ ಭ್ರಾಂತರಾಗಿ, ದಾರಾ, ಪುತ್ರ, ಮಿತ್ರ, ದೇಶ, ಕೋಶಾದಿಗಳಲ್ಲಿ ದುಷ್ಟಮೋಹವೆಂಬ ಬಲೆಯಿಂದ ಆವೃತರಾಗಿ, ವಿಷಯಭೋಗಗಳಲ್ಲಿ ಅತ್ಯಂತ ಆಸಕ್ತರಾಗಿ, ಪರಮ ಕಶ್ಮಲವಾದ ನರಕದಲ್ಲಿ ಬೀಳುತ್ತಾರೆ. ನಾವು ಶ್ರೇಷ್ಠರು, ನಮಗೆ ಸಮಾನರು ಯಾರೆಂದು ತಮ್ಮನ್ನು ತಾವೇ ಬಹುಮಾನ ಮಾಡಿಕೊಳ್ಳುತ್ತಾ, ಗುರುಹಿರಿಯರಲ್ಲಿ ನಮ್ರರಾಗದೆ, ಧನನಿಮಿತ್ತಕವಾದ ಗರ್ವ ಮತ್ತು ದರ್ಪಗಳಿಂದ ಯುಕ್ತರಾಗಿ. **ಅವಿಧಿಪೂರ್ವಕಂ** ಎಂದರೆ ವಿಧಿವಿಹಿತಕ್ರಮವನ್ನು ಬಿಟ್ಟು, ತಮ್ಮ ಮಹತ್ವವನ್ನು ಮಾತ್ರ ಪ್ರಕಟ ಮಾಡಬೇಕೆಂಬ ಉದ್ದೇಶದಿಂದ ಹೆಸರುಮಾತ್ರವುಳ್ಳ ಯಜ್ಞ* ಗಳನ್ನು ಮಾಡುತ್ತಾರೆ. " ಅಹಂಕಾರಂ " ಎಂದರೆ ಸ್ವತಂತ್ರವಾಗಿ ನಾನೇ ಕರ್ಮವನ್ನು ಮಾಡುವವನೆಂಬ ಅಭಿಮಾನವನ್ನೂ, ನಾನೇ ಸಮರ್ಥನೆಂಬ ಜ್ಞಾನವನ್ನೂ, ದರ್ಪವನ್ನೂ, ಕಾಮಕ್ರೋಧಗಳನ್ನೂ ಹೊಂದಿದವರಾಗಿ ಸ್ವದೇಹದಲ್ಲಿಯೂ, ಪರದೇಹಗಳಲ್ಲಿಯೂ ನಿಯಾಮಕನಾಗಿರುವ ನನ್ನನ್ನು ಅತ್ಯಂತ ದ್ವೇಷ† ಮಾಡುವವರಾಗಿ, ನಿರ್ದೋಷನಾದ ನನ್ನಲ್ಲಿ ದೋಷಗಳನ್ನು ಚಿಂತಿಸುವವರಾಗಿ ಇರುತ್ತಾರೆ. **ತಾನ್** ಎಂದರೆ ಈ ಪೂರ್ವೋಕ್ತ ವಿಷ್ಣುವಿನಲ್ಲಿ ಭೃತ್ಯಭಾವವನ್ನು ಹೊಂದದ ವಿಪರೀತಜ್ಞಾನ ಮತ್ತು ಕರ್ಮವುಳ್ಳ, ಕ್ರೂರರಾದ, ನನ್ನ ದ್ವೇಷಿಗಳಾದ, ‡ ಅಯೋಗ್ಯರಾದ, ನರಾಧಮರನ್ನು ಸಂಸಾರದಲ್ಲಿ ಪುನಃ ಪುನಃ

---

*ಅವರು ಮಾಡುವ ಯಾಗಗಳಿಗೆ "ಯಜ್ಞ" ವೆಂಬ ಹೆಸರುಮಾತ್ರವೇ ಹೊರತು, ಪರಮಾತ್ಮನ ಪ್ರೀತಿ ದ್ವಾರಾ ಯಜ್ಞಫಲವು ಬರಲಾರದು, ಯಾತಕ್ಕೆಂದರೆ, ನಿಖಿಲಯಜ್ಞಭೋಕ್ತನಾದ ವಿಷ್ಣುವಾಗಲೀ ವಿಷ್ಣುಭಕ್ತರಾದ ದೇವತೆಗಳಾಗಲೀ ತಾಮಸರು ಕೊಡುವ ಹವಿರ್ಭಾಗಗಳನ್ನು ಸ್ವೀಕರಿಸುವುದಿಲ್ಲ.

† ಈಶ್ವರನೇ ಎಲ್ಲವನ್ನೂ ಮಾಡಿಸುವುದಾದರೆ, ಈಗ ಸುಮ್ಮನೆ ಕುಳಿತಿರುವ ನನ್ನನ್ನು ಎಬ್ಬಿಸಿ ಓಡಾಡಿಸಲಿ; ಈಗ ಭೋಜನಾದಿಗಳನ್ನು ಮಾಡುತ್ತಿರುವ ನನ್ನನ್ನು ಮತ್ತೂ ನನ್ನ ಮಿತ್ರನನ್ನು ತಡೆಯಲಿ, ಎಂದು ಯುಕ್ತಿರಹಿತವಾದ ತರ್ಕಗಳಿಂದ ಈಶ್ವರನು ನಿಯಾಮಕನಲ್ಲವೆಂದು ಹೇಳುವುದೇ ಸ್ವದೇಹ ಪರದೇಹವರ್ತಿಯಾದ ಈಶ್ವರನ ದ್ವೇಷವೆನ್ನಿಸುವುದು.

‡ಸ್ವಾಮಿಯಾದ ವಿಷ್ಣುವಿಗೆ ಮಾತ್ರ ಇರುವ ಸ್ವಾತಂತ್ರ್ಯವನ್ನು ತನ್ನಲ್ಲಿ ಆರೋಪಿಸಿಕೊಂಡು ಆತನ ವಿಧಿಗಳನ್ನು ಮೀರಿ ಕರ್ಮಾದಿಗಳನ್ನು ಮಾಡುವುದರಿಂದ, ಪೂರ್ವೋಕ್ತ ವ್ಯಾಪಾರವುಳ್ಳವರು ಅವನ ದ್ವೇಷಿಗಳೆಂದೆನಿಸುವರು.

ದುರ್ಯೋನಿಗಳಲ್ಲಿ ಹುಟ್ಟಿಸುತ್ತೇನೆ. ಎಲೈ ಅರ್ಜುನನೇ ! ತಾಮಸಸ್ವಭಾವವುಳ್ಳ ಈ ಜನರು ಅನೇಕ ಜನ್ಮಗಳಲ್ಲಿ ಅಸುರಸಂಬಂಧಿಯಾದ ತಾಮಸ ದೇಹವನ್ನು ಹೊಂದಿದವರಾಗಿ ನನ್ನನ್ನು ಹೊಂದದೆಯೇ **ಅಧಮಾಂಗತಿಂ** ಎಂದರೆ ನಿತ್ಯನರಕ ಲಕ್ಷಣವಾದ ಸ್ಥಾನವನ್ನು ಹೊಂದುತ್ತಾರೆ.

ಈ ರೀತಿಯಾಗಿ, ಶ್ರೀ ಕೃಷ್ಣನು ಪುನಃ ಪುನಃ ಕರ್ಮವಿಧಾನ ಮಾಡಿರುವುದ ರಿಂದಲೂ, ತಮ್ಮಲ್ಲಿರುವ ಅನುಚರತ್ವವನ್ನು ತಿಳಿಯದೆ ಸ್ವಾತಂತ್ರ್ಯವನ್ನು ಆರೋ ಪಿಸಿಕೊಂಡಿರುವ ದುರ್ಜನರಿಗೆ ತಮಸ್ಸೆಂಬ ಘೋರ ಫಲವನ್ನು ಹೇಳಿರುವುದ ರಿಂದಲೂ, ಸರ್ವಚೇತನರೂ " ಹರೇರನುಚರಾಃ " ಎಂದರೆ ಹರಿಯ ಅಧೀನರು ಎಂದು ಹೇಳಿದ ನಮ್ಮ ಪ್ರತಿಜ್ಞೆಯು ಅತ್ಯಂತ ಪ್ರಾಮಾಣಿಕವೆಂದು ಶ್ರೀ ಕೃಷ್ಣನ ವಾಕ್ಯಗಳಿಂದಲೇ ನಿರ್ಣೀತವಾಯಿತು. ಇದರಿಂದಲೇ ಪಾರಮಾರ್ಥಿಕವಾಗಿ ನಾನು ಅನುಚರನಲ್ಲ; ನಾನೇ ಬ್ರಹ್ಮನು ಎಂದು ಪ್ರತಿಪಾದನೆ ಮಾಡುವ ಅದ್ವೈತತತ್ವವು ಶ್ರೀ ಕೃಷ್ಣನಿಗೆ ಅತ್ಯಂತ ವಿರುದ್ಧವಾಗಿರುವುದೆಂದೂ ನಿಶ್ಚಿತವಾಗುವುದು; ಮತ್ತು ಅನುಚರರಿಗೆ ವಿಹಿತವಾದ ಕರ್ಮವಿಧಿಗಳ ಪರಿತ್ಯಾಗವು ತಾಮಸವೆಂದೂ ಕೃಷ್ಣನು ಸ್ಪಷ್ಟವಾಗಿ ಹೇಳಿರುತ್ತಾನೆ.

## 5.

**ಪ್ರಶ್ನೆ**— ಸ್ವಾಮೀ ! ಜ್ಞಾನಿಯು ಮಾತ್ರ ಕರ್ಮವನ್ನು ಮಾಡಕೂಡ ದೆಂದು ಅದ್ವೈತಿಗಳು ಹೇಳುತ್ತಾರೆ. ಅಜ್ಞಾನಾವಸ್ಥೆಯಲ್ಲಿ ಅವರ ಮತದರೀತ್ಯಾ ಕರ್ಮ ಮಾಡಬಹುದಷ್ಟೇ !

**ಉತ್ತರ**— ಹಾಗೆ ಹೇಳಿದರೆ ಜ್ಞಾನಿಯು ಪರಮಾತ್ಮನ ಅನುಚರನಲ್ಲ; ಅಜ್ಞಾನಿಯು ಪರಮಾತ್ಮನ ಅನುಚರನು ಎಂದು ಹೇಳಿದಂತಾಯಿತು. ಇಲ್ಲಿ ಸ್ವಲ್ಪ ಸೂಕ್ಷ್ಮವಾದ ಚರ್ಚೆಯು ಆವಶ್ಯಕವು. ನೋಡಿರಿ ! 1. ನಾನು ಬ್ರಹ್ಮನ ಅನುಚರನೆಂಬ **ಭ್ರಾಂತಿಯಿಂದ** ಅದ್ವೈತಿಯು ವೇದವಿಹಿತ ಕರ್ಮದಲ್ಲಿ ಪ್ರವೃತ್ತ ನಾಗುತ್ತಾನೆ. ವಸ್ತುತಃ ಜೀವನೇ ಬ್ರಹ್ಮನು. ಜೀವನು ಯಾರಿಗೂ ಅನುಚರ ನಲ್ಲವೆಂಬುದು ಅವರ ಸಿದ್ಧಾಂತವು. ಜ್ಞಾನವಾದ ನಂತರ ಈ ಭ್ರಾಂತಿಯು ನಿವೃತ್ತವಾಗಿ ನಾನು ನಿಜವಾಗಿಯೂ ಬ್ರಹ್ಮನು; ಯಾರಿಗೂ ಅನುಚರನಲ್ಲ; ಇದು ವರೆಗೂ ಮೂಢತನದಿಂದ ಕರ್ಮಗಳನ್ನು ಮಾಡುತ್ತಿದ್ದೆನು ಎಂದು ತಿಳಿದು ಕೊಳ್ಳುವನಾದುದರಿಂದ, ತದನಂತರ ಯಾವ ಕರ್ಮವನ್ನೂ ಮಾಡುವುದಿಲ್ಲ. ಶ್ರೀ ಕೃಷ್ಣನಾದರೋ ವಿಧ್ಯುಕ್ತಕರ್ಮಗಳನ್ನು ಮಾಡುವವನು ಸಾತ್ವಿಕನು, ವಿಧಿ ವಿಹಿತವಾದುದನ್ನು ಪರಿತ್ಯಾಗ ಮಾಡುವವನು ತಾಮಸನು ಎಂದು ಸ್ಪಷ್ಟವಾಗಿ ಹೇಳಿರುವನು. ಆದುದರಿಂದ, ಅದ್ವೈತಿಗಳ ಅಭಿಪ್ರಾಯದಲ್ಲಿ ಭ್ರಾಂತನೆಂದು

ಹೇಳಲ್ಪಡುವ ಕರ್ಮಿಯು ಶ್ರೀ ಕೃಷ್ಣನ ಅಭಿಪ್ರಾಯದಲ್ಲಿ ಸಾತ್ವಿಕನು (ಪ್ರೇಕ್ಷಾವಂತನು) ಎನ್ನಿಸುವನು; ಮತ್ತು ಅದ್ವೈತಿಗಳ ಅಭಿಪ್ರಾಯದಲ್ಲಿ ಯಾರು ಜ್ಞಾನಿಯೋ ಅತಏವ ಕರ್ಮಪರಿತ್ಯಾಗ ಮಾಡಿರುವನೋ ಅವನು ಶ್ರೀ ಕೃಷ್ಣನ ಅಭಿಪ್ರಾಯದಲ್ಲಿ ತಾಮಸನು ಮತ್ತು ಅಧೋಗತಿಗೆ ಯೋಗ್ಯನು ಎಂದು ಪ್ರಾಪ್ತವಾಯಿತು. 2. ಕಿಂಚ, ಬ್ರಹ್ಮೈಕ್ಯ ಜ್ಞಾನದಿಂದ ನಾನು ಮತ್ತೊಬ್ಬನ ಅನುಚರನು ಎಂಬ ಭ್ರಾಂತಿಯು ನಿವೃತ್ತವಾಗುವುದರಿಂದ ಜ್ಞಾನಿಯು ಕರ್ಮವನ್ನು ಬಿಡಬಹುದಾದರೆ, ಸರ್ವರೂ ಕರ್ಮವನ್ನು ಪರಿತ್ಯಾಗ ಮಾಡಬೇಕೆಂದು ಸಿದ್ಧವಾಗುವದು. ಹೇಗೆಂದರೆ ವಿಸ್ತಾರವಾದ ಒಂದು ನವಳು (ಬಂಜರು) ಭೂಮಿಯನ್ನು ಇದು ಅತಿ ಫಲವತ್ತಾದ ಪ್ರದೇಶವೆಂದು ನಂಬಿದ ಒಬ್ಬ ಭ್ರಾಂತನು ಅದನ್ನು ಉತ್ತು, ಅದರಲ್ಲಿ ಸಸಿಗಳನ್ನು ನೆಟ್ಟು, ಬಹು ದ್ರವ್ಯವನ್ನು ಖರ್ಚು ಮಾಡಿ, ವ್ಯವಸಾಯವನ್ನು ಮಾಡುವನು. ಒಂದು ವರ್ಷದ ನಂತರ ಯಾವ ಫಲವೂ ಪ್ರಾಪ್ತವಾಗದುದನ್ನು ನೋಡಿ, ಆ ರೈತನು ನಾನು ಭ್ರಾಂತನಾಗಿ ಈ ಹಾಳು ಭೂಮಿಗೆ ಇಷ್ಟು ಧನವನ್ನು ಖರ್ಚು ಮಾಡಿ ನಷ್ಟವನ್ನು ಹೊಂದಿದೆನು; ಎಂದು ಜ್ಞಾನವನ್ನು ಹೊಂದಿ, ತಾನು ಅದರ ವ್ಯವಸಾಯವನ್ನು ಪರಿತ್ಯಾಗ ಮಾಡುವುದಲ್ಲದೆ, ತನ್ನ ಗ್ರಾಮಸ್ಥರಾದ ಇತರ ಜನರಿಗೂ ಉಪದೇಶ ಮಾಡುತ್ತಾನೆ. "ಅಣ್ಣಂದಿರುಗಳಿರಾ! ಇಂದ್ರನೀಲದ ಕಾಂತಿಯಂತೆ ಶೋಭಾಯಮಾನವಾದ ಈ ಮಹಾ ಮೈದಾನವು ಫಲವತ್ತಾದ ಭೂಪ್ರದೇಶವೆಂದು ಭ್ರಮಿಸಬೇಡಿರಿ! ನಾನು ಮೋಸ ಹೋದೆನು. ನೀವು ಹೊಟ್ಟೆಗಿಲ್ಲದೆ ಅಲೆದರೂ ಚಿಂತೆಯಿಲ್ಲ; ಇದ್ದ ಒಂದೆರಡು ಕಾಸುಗಳನ್ನು ಈ ಹಾಳು ಭೂಮಿಯ ಉದ್ದಿಶ್ಯ ಕಳೆದುಕೊಳ್ಳಬೇಡಿರಿ" ಎಂದು ಹೇಳುವನು. ಆಗ ಅವನ ಯಥಾರ್ಥ ಉಪದೇಶವನ್ನು ನಂಬದ ಮೂಢರು ಕೃಷಿಕಾರ್ಯದಲ್ಲಿ ಆಸಕ್ತರಾದರೆ ಆಗಿಕೊಂಡು ಹೋಗಲಿ! ಆತನನ್ನು ಆಪ್ತನು, ಸುಳ್ಳು ಹೇಳುವವನಲ್ಲವೆಂದು ನಂಬಿದವರೆಲ್ಲರೂ ಆ ಭೂಮಿಯ ವ್ಯವಸಾಯದಿಂದ ನಿವೃತ್ತರಾಗುತ್ತಾರೆ. ಹೀಗೆಯೇ, ಅದ್ವೈತಮತದಲ್ಲಿ ಜೀವರುಗಳು ಅನುಚರರೆಂಬುದು ಭ್ರಾಂತಿರೂಪವಾಗಿರುವುದರಿಂದ, ಅವರ ಮತರೀತ್ಯಾ ಈಗ ಮೌಢ್ಯದಿಂದ ಕರ್ಮ ಮಾರ್ಗದಲ್ಲಿ ಬಹು ಪ್ರಯಾಸಪಡುತ್ತಿರುವ ಮಂದಭಾಗ್ಯರೆಲ್ಲರೂ, ತಮಗೆ ಆಪ್ತತಮರಾದ ಶ್ರೀ ಶಂಕರಾಚಾರ್ಯರ ಅದ್ವೈತವಾಣಿಯನ್ನು ಕೇಳಿ, ಯಾವತ್ತೂ ಕರ್ಮಗಳು "ಅನುಚರತ್ವ" ಭ್ರಾಂತಿಮೂಲಕವು, ವಸ್ತುತಃ ಚೇತನನು ಬ್ರಹ್ಮಸ್ವರೂಪನು ಎಂದು ಅವರ ಉಪದೇಶವನ್ನು ಪಡೆದ ನಂತರ, ಅವರ ಮಾತನ್ನು ನಂಬಿ ಅವಶ್ಯವಾಗಿ ಕರ್ಮಾದಿಗಳಿಂದ ನಿವೃತ್ತರಾಗಬೇಕಾಗುವುದು. ಶಂಕರಾಚಾರ್ಯರು ಸ್ಪಷ್ಟವಾಗಿ ಸಕಲ ಧರ್ಮಾನುಷ್ಠಾನವೂ ಭ್ರಾಂತಿಮೂಲವೆಂದು ನಿರೂಪಿಸುತ್ತಾರೆ.—

1. **ನವರ್ಣಾ ನವರ್ಣಾಶ್ರಮಾಚಾರಧರ್ಮಾಃ।**

2. **ನಶಾಸ್ತಾ ನಶಾಸ್ತ್ರಂ ನಶಿಷ್ಯೋ ನಶಿಕ್ಷಾ।**

**3. ಇದಂನುಸತ್ಯಂ ಮಮನಾಸ್ತಿವಿಕ್ರಿಯಾ ವಿಕಾರಹೇತುರ್ನಹಿಮೇಽದ್ವಯತ್ವತಃ ।**
**ನಪುಣ್ಯಪಾಪೇನಚ ಮೋಕ್ಷಬಂಧನೇನಚಾಸ್ತಿವರ್ಣಾಶ್ರಮಿತಾ ಶರೀರತಃ ॥**

**4. ನವೇದಾನಯಜ್ಞಾನತೀರ್ಥಂಬ್ರುವಂತಿ ।**

**5. ಅವಿದ್ಯಾವದ್ವಿಷಯಾಣ್ಯೇವ........ಶಾಸ್ತ್ರಾಣಿಚ ।**

ಅರ್ಥವು— "ಬ್ರಾಹ್ಮಣಾದಿ ವರ್ಣಗಳು ಸತ್ಯವಲ್ಲ. ( ಭ್ರಾಂತಿಕಲ್ಪಿತವು. ) ವರ್ಣಾಶ್ರಮಾಚಾರಧರ್ಮಗಳು ಸತ್ಯವಲ್ಲ ( ಭ್ರಾಂತಿಕಲ್ಪಿತವು. ) ಶಾಸನ ಮಾಡುವ ಗುರುವು ಸತ್ಯನಲ್ಲ ( ಭ್ರಾಂತಿಯಿಂದ ಇರುವಂತೆ ಕಾಣುವನು. ) ವಿಧಿ ನಿಷೇಧಗಳನ್ನು ಹೇಳುವ ಶಾಸ್ತ್ರವು ಸತ್ಯವಲ್ಲ. ( ಭ್ರಾಂತಿಕಲ್ಪಿತವು. ) ಶಿಷ್ಯನು ಸತ್ಯ ನಲ್ಲ. ಶಿಕ್ಷೆಯು ( ನಾವು ಮಾಡುತ್ತಿರುವ ಉಪದೇಶವು ) ಸತ್ಯವಲ್ಲ ( ಭ್ರಾಂತಿ ಕಲ್ಪಿತವು. ) ಇದು ಮಾತ್ರ ಸತ್ಯವು; ಏನೆಂದರೆ ನಾನು ಅದ್ವಯನಾದ ಬ್ರಹ್ಮ ನಾದುದರಿಂದ ವಿಕಾರಹೇತುವಾದ ಪರಿಣಾಮಗಳು ನನಗೆ ಆಗಲಾರವು; ನನಗೆ ಪುಣ್ಯವೂ ಇಲ್ಲ; ಪಾಪವೂ ಇಲ್ಲ; ಮೋಕ್ಷವೂ ಇಲ್ಲ; ಬಂಧುಗಳೂ ಇಲ್ಲ; (ಮಿಥ್ಯಾ) ಶರೀರನಿಮಿತ್ತಕವಾಗಿ ವ್ರಾಪ್ತವಾದ **ವರ್ಣಾಶ್ರಮ ಧರ್ಮಾನುಷ್ಠಾನವೂ ನನಗಿರುವುದಿಲ್ಲ.** ವೇದಗಳು ಇರುವುದಿಲ್ಲ (ಮಿಥ್ಯಾ); ಯಜ್ಞಗಳು ಇರುವುದಿಲ್ಲ; ಪಾವನಕರವಾದ ತೀರ್ಥಗಳಿರುವುದಿಲ್ಲ. ಸರ್ವ ವಿಧಿನಿಷೇಧಪರವಾದ ಶಾಸ್ತ್ರಗಳೂ ಸುಳ್ಳೇ ಹೇಳುವುದಾದರೂ, ಅವಿದ್ಯೆಯಿಂದ ಅಜ್ಞರು ಸತ್ಯಬೋಧಕವೆಂದು ತಿಳಿದಿರು ವರು. ಅಂಥವರ ಉದ್ದಿಶ್ಯವಾಗಿಯೇ ಆ ಶಾಸ್ತ್ರಗಳು ಇರುತ್ತವೆ."

ಹೀಗೆ ಹೇಳಿರುವದರಿಂದ 3. ಅದ್ವೈತತತ್ವವು ತಿಳಿದ ದಿನವೇ ಸಕಲರೂ ಭ್ರಾಂತಿಮೂಲಕವಾದ ವರ್ಣಾಶ್ರಮ ಧರ್ಮಾನುಷ್ಠಾನಗಳನ್ನು ಪರಿತ್ಯಾಗ ಮಾಡ ಬೇಕು. ಹಾಗೆ ಮಾಡದವನು ಮಂದನು; ಜ್ಞಾನಿಗಳಿಂದ ಶೋಚನೀಯನು. ಯದ್ಯಪಿ "ಶುಕ್ತಿರೂಪ್ಯ" ಭ್ರಮವುಳ್ಳ ಪುರುಷನು ಬೆಳ್ಳಿಯು ಸಿಕ್ಕುವುದೆಂಬ ಆಶೆಯಿಂದ ಪ್ರವರ್ತಿಸುವನು. ಆದರೆ **ಭ್ರಾಂತಿ ಕಾಲದಲ್ಲಿಯೂ ಕೂಡ** ಶುಕ್ತಿ ರೂಪ್ಯವಾಗಲೀ, ಬಿಸಿಲು ಕುದುರೆಯಾಗಲೀ ಪ್ರವೃತ್ತಿಗೆ **ಯೋಗ್ಯವಲ್ಲ.** ಬಾಧಜ್ಞಾನವು ಬಂದ ನಂತರ ಪುರುಷಪ್ರವೃತ್ತಿಯು ತಾನಾಗಿಯೇ ನಿಂತು ಹೋಗುವುದು. ಭ್ರಾಂತಿ ಕಾಲದಲ್ಲಿಯೂ ಕೂಡ ಪ್ರವರ್ತಿಸದೇ ಇರುವುದು ಮೇಲು. ಶುಕ್ತಿರೂಪ್ಯವನ್ನು ನೋಡಿ ಅದು ಬೆಳ್ಳಿಗಟ್ಟಿಯೆಂದು ಭ್ರಾಂತನಾಗಿ, ಅದರಿಂದ ತನ್ನ ಪತ್ನಿಗೆ ದಿವ್ಯವಾದ ಡಾಬನ್ನು ಮಾಡಬೇಕೆಂದು ಪ್ರಯತ್ನ ಮಾಡುತ್ತಿರುವ, ಅಥವಾ ಬಿಸಿಲುಗುದುರೆಯನ್ನು ನೋಡಿ ತೃಷಾಪರಿಹಾರವನ್ನು ಬಯಸಿ ಓಡಿ ಹೋಗುತ್ತಿರುವ ಪುರುಷನನ್ನು ಕುರಿತು ಅಭಿಜ್ಞರು ಹೇಳುವರು. "ಎಲೈ

ಮೂಢನೇ ! ಅಲ್ಲಿ ಫಲವು ಏನೂ ದೊರಕಲಾರದು. ಬೆಳ್ಳಿಯಾಗಲೀ, ನೀರಾಗಲೀ ನಿನ್ನ ಉದ್ದಿಷ್ಟಸ್ಥಳದಲ್ಲಿ ಇರುವುದಿಲ್ಲ. ನೀನು ವೃಥಾ ಏತಕ್ಕೆ ಪ್ರಯಾಸಪಡುತ್ತೀ ? " ಈ ಮಾತನ್ನು ಕೇಳಿ ಆತನು ವಿವೇಕಿಯಾದರೆ, ತನ್ನ ಪ್ರಯತ್ನವನ್ನು ಬಿಟ್ಟು, ಸ್ವಸ್ಥಚಿತ್ತನಾಗುವನು. ಹಾಗೆ ಪ್ರವೃತ್ತಿಯಿಂದ ನಿವೃತ್ತನಾದ ಪುರುಷನನ್ನು ನೋಡಿ ಪ್ರಾಜ್ಞರೆಲ್ಲರೂ ಶ್ಲಾಘಿಸುವರು. " ಈತನು ಬಹು ಸೂಕ್ಷ್ಮ ಬುದ್ಧಿಯುಳ್ಳವನು; ತನ್ನ ಪ್ರಯತ್ನವು ಭ್ರಾಂತಿಮೂಲಕವೆಂದು ಉಪದಿಷ್ಟವಾದ ಕ್ಷಣದಲ್ಲಿಯೇ ಶಾಂತಚಿತ್ತನಾದನು. ಈತನು ವಿವೇಕಿಯು; " ಹೀಗೆ ಕೊಂಡಾಡುವರು. ಆ ರೀತಿ ಆಚರಿಸದೆ, ಸಂಶಯಚಿತ್ತನಾಗಿ, ಪುನಃ ಮರಳುಕಾಡಿನಲ್ಲಿ ಓಡಾಡುತ್ತಿರುವುದನ್ನು ನೋಡಿ ಜನರು ಅವನನ್ನು ಮೂಢನೆಂದು ನಿಂದಿಸುವುದಲ್ಲದೆ, ಅಪಹಾಸವನ್ನು ಮಾಡುವರು. ಹೀಗೆಯೇ ಪ್ರಕೃತದಲ್ಲಿ ಅನುಚರತ್ವಭ್ರಾಂತಿಯಿಂದ, ನಾನು ವಿಧಿಬದ್ಧಜೀವನೆಂದು ತಿಳಿದು, ಕಾಯಕ್ಲೇಶಕರವಾದ ತಪಸ್ಸಿನಲ್ಲಿ ರತನಾದ ಪುರುಷನು ಅದ್ವೈತಮತವನ್ನವಲಂಬಿಸಿ, ತಾನು ವಸ್ತುತಃ ಅನುಚರನಲ್ಲವೆಂದು ತಿಳಿದ ಕ್ಷಣವೇ ಕರ್ಮಾದಿಗಳನ್ನು ಪರಿತ್ಯಾಗ ಮಾಡುವನು. ಅದ್ವೈತತತ್ತ್ವೋಪದೇಶಕನಾದ ಗುರುವು ತನ್ನ ಶಿಷ್ಯನ ಪ್ರಾಜ್ಞತೆಯನ್ನೂ ವಿವೇಕವನ್ನೂ ನೋಡಿ ಆನಂದಪಡುವನು ಮತ್ತು ಸಭೆಗಳಲ್ಲಿ ಶ್ಲಾಘಿಸುವನು. ಹಾಗಿಲ್ಲದೆ ತತ್ತ್ವವನ್ನು ಒಪ್ಪಿಕೊಂಡು, ಇನ್ನೂ ಕರ್ಮಾದಿಗಳನ್ನು ಅನುಷ್ಠಾನ ಮಾಡುತ್ತಿದ್ದರೆ ಗುರುವು ತನ್ನ ಉಪದೇಶವನ್ನು ಆಚರಣೆಗೆ ತರದಿರುವ ಮಂದನಾದ ಶಿಷ್ಯನನ್ನು ನೋಡಿ ಖಿನ್ನನಾಗಬೇಕು.

" ದಂಡೋದಮಯತಾಮಸ್ಮಿ " ಎಂದು ಹೇಳುವ ಶ್ರೀ ಕೃಷ್ಣನಾದರೋ ಕರ್ಮ ಪರಿತ್ಯಾಗ ಮಾಡುವವರು ದಂಡಧಾರಕನಾದ ತನ್ನ ಕೋಪಕ್ಕೆ ಪಾತ್ರರಾಗಿ ನರಕಾದ್ಯನರ್ಥಗಳನ್ನು ಅನುಭವಿಸುವರೆಂದೂ, ಕರ್ಮಾನುಷ್ಠಾನ ಮಾಡುವವರು ಜ್ಞಾನಾದಿಪುರುಷಾರ್ಥಗಳನ್ನು ಹೊಂದುವರೆಂದೂ ಪುನಃ ಪುನಃ ಉಪದೇಶ ಮಾಡಿರುತ್ತಾನೆ. ಮತ್ತು ತಾನು ಕರ್ಮ ಮಾಡದೆ ಹೋದರೆ, ಸ್ವತಂತ್ರನಾದ ತನ್ನನ್ನು ನೋಡಿಕೊಂಡು ವಿಧಿಬದ್ಧರಾದ ಜೀವರೂ ಕರ್ಮ ಪರಿತ್ಯಾಗ ಮಾಡಿದರೆ ವರ್ಣಸಾಂಕರ್ಯಾದಿ ಬಹಳ ಅನರ್ಥಗಳು ಬರಬಹುದೆಂಬ ಭಾವದಿಂದ ಶ್ರೀ ಕೃಷ್ಣನು ನಾನೂ ಸಹ ಕರ್ಮ ಮಾರ್ಗದಲ್ಲಿ ಪ್ರವೃತ್ತನಾಗಿದ್ದೇನೆ ಎಂದು ಹೇಳುತ್ತಾನೆ :—

(1) **ನಮೇಪಾರ್ಥಾಸ್ತಿ ಕರ್ತವ್ಯಂ........ವರ್ತಏವಚ ಕರ್ಮಣಿ ।**
**ಯದಿಹ್ಯಹಂ ನವರ್ತೇಯಂ ಜಾತುಕರ್ಮಣ್ಯ ತಂದ್ರಿತಃ ।**
**ಮಮವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥಸರ್ವಶಃ ।**
**ಉತ್ಸೀದೇಯುರಿಮೇಲೋಕಾ ನಕುರ್ಯಾಂಕರ್ಮಚೇದಹಂ ।**
**ಸಂಕರಸ್ಯಚ ಕರ್ತಾಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥**
**—(3. 22-24.)**

ನಾನು ಕರ್ಮಬದ್ಧನಲ್ಲ. ಆದರೂ ಕರ್ಮದಲ್ಲಿ ಪ್ರವರ್ತಿಸುತ್ತೇನೆ. ನಾನು ಆಲಸ್ಯ ಮಾಡಿ ಕರ್ಮಗಳನ್ನು ಆಚರಿಸದಿದ್ದರೆ, ಸರ್ವ ಮನುಷ್ಯರೂ ನನ್ನ ಮಾರ್ಗವನ್ನೇ ಅನುಸರಿಸಿ ಬಿಡುವರು. ಆದ್ದರಿಂದ ನಾನು ಕರ್ಮ ಮಾಡದಿದ್ದರೆ, ಈ ಲೋಕವೆಲ್ಲವೂ ನರಕವನ್ನು ಹೊಂದಬೇಕಾಗುವದು. ಕಿಂಚ ಕರ್ಮಲೋಪದಿಂದ ಬ್ರಹ್ಮಕ್ಷತ್ರಾದಿವರ್ಣಭೇದವು ನಾಶವಾಗಿ ವರ್ಣಸಾಂಕರ್ಯವನ್ನೂ ನಾನು ಉಂಟುಮಾಡಿದಂತಾಗುವುದು. ಈ ರೀತಿ ನಾನೇ ಸಕಲ ಪ್ರಜೆಗಳನ್ನೂ ಕೊಂದ ಹಾಗಾಗುವುದು.

ಕಿಂಚ 4. ಜ್ಞಾನಿಯು ಕರ್ಮ ಮಾಡಬೇಕಾದುದಿಲ್ಲ ಎಂಬ ಶಂಕರಾಚಾರ್ಯರ ಮಾತು ಕೇವಲ ಅಪ್ರಸಕ್ತಕಥನವು. ಹೇಗೆಂದರೆ ಅಪರೋಕ್ಷಜ್ಞಾನಿಯು ಕರ್ಮ ಮಾಡಬೇಕಾದುದಿಲ್ಲ ಎಂದು ಹೇಳಿದರೆ* ಸರ್ವರೂ ಕರ್ಮಪರಿತ್ಯಾಗ ಮಾಡಬೇಕು ಎಂದು ಕಂಠತಃ ಹೇಳಿದಂತಾಗುವುದು. ಆದುದರಿಂದ ಬ್ರಹ್ಮೈಕ್ಯ ಸಾಕ್ಷಾತ್ಕಾರ ಹೊಂದಿದ ಜ್ಞಾನಿಗಳು ಕರ್ಮ ಮಾಡಬೇಕಾದುದಿಲ್ಲ ಎಂದು ಶಂಕರಾಚಾರ್ಯರು ಹೇಳಬೇಕು. ಇದು ಅವರ ಶಾಸ್ತ್ರರೀತ್ಯಾ ಕೇವಲ ಅಪ್ರಸಕ್ತ ವಿಚಾರವು. ಹೇಗೆಂದರೆ ಬ್ರಹ್ಮೈಕ್ಯಜ್ಞಾನವು ಆದ ಕ್ಷಣದಲ್ಲಿಯೇ ಶುಕ್ತಿರಜತ ಭ್ರಮವನ್ನು ಹೊಂದಿದವನಿಗೆ ಅಧಿಷ್ಠಾನವಾದ ಶುಕ್ತಿಜ್ಞಾನವು ಬಂದ ಕ್ಷಣದಲ್ಲಿ ರಜತವು ಅದೃಶ್ಯವಾಗುವಂತೆ, ಜ್ಞಾನಿಗೆ ದೇಹಾದಿ ಸಕಲಮಿಥ್ಯಾಭೂತವಾದ ಬಂಧುಗಳೂ ಮಾಯವಾಗಿ ಹೋಗಿ, ಆತನು ಬ್ರಹ್ಮೈಕ್ಯವನ್ನು ಹೊಂದಬೇಕು. ಪುನಃ ಸಂಸಾರದಲ್ಲಿ ಆತನ ಅವಸ್ಥಾನವು ಒಂದು ಕ್ಷಣವೂ ಸಂಭವಿಸಲಾರದು.** ಪ್ರಾರಬ್ಧ ಕರ್ಮಾದಿಗಳು ಬ್ರಹ್ಮೈಕ್ಯಜ್ಞಾನವಾದ ನಂತರ ಇರಲಾರವು ಎಂದು ಅವರೇ ಹೇಳಿರುತ್ತಾರೆ.† ಆದುದರಿಂದ ಜ್ಞಾನಿಯು ಕರ್ಮ ಪರಿತ್ಯಾಗ ಮಾಡಬೇಕೆಂಬ ಅವರ ವಿಧಿಯು ವೇದಾಂತವನ್ನು ವ್ಯಾಸಂಗ ಮಾಡುತ್ತಿರುವ ಅಥವಾ ಶ್ರವಣ ಮಾಡಿರುವ ಪರೋಕ್ಷಜ್ಞಾನಿಯ ವಿಷಯವೆಂದೇ ಒಪ್ಪಬೇಕು. ಇದರಿಂದ ಪ್ರಾಜ್ಞರು

* "ಮುಮುಕ್ಷೋಃ "ಕರ್ಮಸಂನ್ಯಾಸವಿಧಾನಾತ್" ಎಂದು ಮುಮುಕ್ಷುಸಾಮಾನ್ಯರು ಕರ್ಮಪರಿತ್ಯಾಗ ಮಾಡಬಹುದೆಂದು ತೀರ್ಮಾನ ಮಾಡಿರುತ್ತಾರೆ. ಸನ್ಯಾಸಿಗಳಂತೂ ಕರ್ಮವಿಧಿಯನ್ನು ಮೀರಿದವರು ಎಂದು ಹೇಳಿರುತ್ತಾರೆ. ಹೀಗಿದ್ದರೂ, ದೇವರ ದಯದಿಂದ, ಅದ್ವೈತ ಮತಾನುಯಾಯಿಗಳಾದ ಮುಮುಕ್ಷುಗಳು ತಮ್ಮ ಗುರುಗಳಾದ ಶಂಕರಾಚಾರ್ಯರ ಅಪ್ಪಣೆಯನ್ನು ಮೀರಿ, ವಿಧ್ಯುಕ್ತಕರ್ಮಾನುಷ್ಠಾನ ಮಾಡುತ್ತಿರುವರು. ಅನ್ಯಥಾ ವೈದಿಕ ಆಚರಣೆಗಳು ಸರ್ವಥಾ ಲುಪ್ತವಾಗಿ ವರ್ಣಸಾಂಕರ್ಯವು ಬಂದು ಹೋಗುತ್ತಿತ್ತು.

** ಶ್ರೀಪಾದ ಒಡೆಯರ ಈ ಅಭಿಪ್ರಾಯವನ್ನೇ ಜಿ. ಡಾಂಡಾಯ್ ನಾಮಕ ವಿದ್ವಾಂಸನು ಆಂಗ್ಲೇಯ ಭಾಷೆಯಲ್ಲಿ ಈ ರೀತಿ ಬರೆದಿರುತ್ತಾನೆ :—

† The complete destruction of the main dream is only expected after death;......Any experience of Monism...is experience of the dead. In other words perfect knowledge and life are

ಕರ್ಮಾನುಷ್ಠಾನ ಮಾಡಕೂಡದೆಂದು ಶಂಕರಾಚಾರ್ಯರ ಅಭಿಪ್ರಾಯವಾದಂತೆ ತೋರುತ್ತದೆ.‡

ಇದು ಶ್ರೀ ಕೃಷ್ಣನಿಗೆ ಅತ್ಯಂತ ವಿರುದ್ಧವಾದ ಅಭಿಪ್ರಾಯವಿರುತ್ತದೆ. ಅನುಚರಭಾವವು ಸಂಸಾರದಲ್ಲಿ ಇರುವುದಲ್ಲದೆ ಮುಕ್ತಿಯಲ್ಲಿಯೂ ಅನುಸರಿಸಿ ಕೊಂಡು ಬರುವುದೆಂದು ಅನೇಕ ಗೀತಾವಾಕ್ಯಗಳಲ್ಲಿ ಸ್ಪಷ್ಟವಾಗಿರುವುದು.

---

incompatible. Either the Vidwan has complete Vidya; then he is Brahman; the world has altogether disappeared from his sight; he is completely released; But from this state there is no return; or the Vidwan is still alive; then he has not comp lete Vidya. He still sees the world···(His) state implies duality.

G. Dandoy S. G. Calcutta.

ಅರ್ಥವು :— ಪೂರ್ಣವಾದ ಬ್ರಹ್ಮಜ್ಞಾನವು— ಪ್ರಧಾನವಾದ ಜಗತ್ಸ್ವಪ್ನದ ಸಂಪೂರ್ಣ ನಾಶವು— ದೇಹತ್ಯಾಗಾನಂತರದಲ್ಲಿಯೇ ಆಗುವುದೆಂದು ( ಅದ್ವೈತಿಗಳಿಂದ ) ನಿರ್ಣಯಿಸಲ್ಪಟ್ಟಿದೆ. ( ಯಾತಕ್ಕೆಂದರೆ ಸರ್ವವೂ ಮಿಥ್ಯಾ ಆದುದರಿಂದ ಬ್ರಹ್ಮೈಕ್ಯ ಜ್ಞಾನದಲ್ಲಿ ತನ್ನ ದೇಹವು ತೋರುವುದು ಅಸಂಭಾವಿತವು. ಆದ್ದರಿಂದ ಐಕ್ಯ ಜ್ಞಾನವುಳ್ಳವನಿಗೆ ಸ್ವದೇಹಾದಿಗಳ ಅದರ್ಶನವು ಅವರ್ಜನೀಯವು). ಹೀಗೆ ಯಾವ ಐಕ್ಯಾನುಭವವಾದರೂ ದೇಹನಾಶ ಹೊಂದಿದ ಮೃತನ ಅನುಭವವೇ ಆಗಬೇಕು. ಹಾಗೆಂದರೆ, ಬ್ರಹ್ಮೈಕ್ಯಜ್ಞಾನವೂ, ಬದುಕಿರೋಣವೂ ಪರಸ್ಪರ ವಿರುದ್ಧವಾದುವುಗಳು. ಜ್ಞಾನಿಯು ಅಥವಾ ಸಮಗ್ರ ಬ್ರಹ್ಮಜ್ಞಾನವನ್ನು ಹೊಂದುವನು; ಅಂದರೆ ಬ್ರಹ್ಮನೇ ಆಗುವನು; ಸರ್ವಪ್ರಪಂಚವೂ ಅವನ ದೃಷ್ಟಿಗೆ ಅದೃಷ್ಯವಾಗಿ ಹೋಗುವುದು. ಅವನು ಸಂಪೂರ್ಣ ಮುಕ್ತನು; ಆ ಸ್ಥಿತಿಯಿಂದ ಆತನಿಗೆ ಪುನರಾವೃತ್ತಿಯಿಲ್ಲವು; ಅಥವಾ 2. ವಿದ್ವಾಂಸನು ಇನ್ನೂ ಬದುಕಿದ್ದಾನೆ. ಹಾಗಾದರೆ ಅವನಿಗೆ ಪೂರ್ಣವಾದ ಜ್ಞಾನವು ( ಬ್ರಹ್ಮೈಕ್ಯಜ್ಞಾನವು ) ಬಂದಿಲ್ಲ. ಅವನು ಇನ್ನೂ ಪ್ರಪಂಚವನ್ನು ನೋಡುತ್ತಾನೆ. ಅವನ ಸ್ಥಿತಿಯು ಅವನಿಗೆ ದ್ವೈತಜ್ಞಾನವಿರುವುದೆಂದೇ ಸೂಚಿಸುವುದು.

‡ ಶ್ರೀ ಶ್ರೀಗಳವರ ಈ ಅಭಿಪ್ರಾಯವು ಅದ್ವೈತ ಪಕ್ಷಪಾತಿಗಳಾದ ಆಂಗ್ಲೇಯ ವೇದಾಂತ ವಿದ್ವದಗ್ರಣಿಗಳಾದ ಕಲ್ಕತ್ತೆಯ ವಿಶ್ವವಿದ್ಯಾನಿಲಯದಲ್ಲಿ ಜಾರ್ಜ್ ಚಕ್ರವರ್ತಿಯವರ ವೇದಾಂತ ಮಹೋಪಾಧ್ಯಾಯ ಪೀಠದಲ್ಲಿ ಸ್ಥಿತರಾದ, ಬಹು ಗ್ರಂಥಗಳನ್ನು ರಚಿಸಿರುವ ಯಸ್. ರಾಧಾಕೃಷ್ಣರಿಂದಲೂ ಅನುಮೋದಿಸಲ್ಪಟ್ಟಿದೆ :—

"The Controversy with Mandana Misra shows that Shankara was opposed to the exclusive supremacy of the Vedic Ritualism." Indian Philosophy by S. Radhakrishnan, M.A., King George V Professor of Philosophy, Calcutta.

ಅರ್ಥವು :— ಶಂಕರ ಮಂಡನ ಮಿಶ್ರರ ಸಂವಾದವು ಶಂಕರಾಚಾರ್ಯರು ವೈದಿಕಕರ್ಮಾನುಷ್ಠಾನಗಳಿಗೆ ಅತಿಶಯವಾದ ಆಧಿಕ್ಯವನ್ನು ಕೊಡುವುದರಲ್ಲಿ ವಿರೋಧಿಗಳಾಗಿದ್ದರೆಂದು ತೋರಿಸುತ್ತದೆ.

ಜ್ಞಾನಿಗಳೂ ಕೂಡ ಧ್ಯಾನ ಪ್ರವಚನರೂಪ ವಿಶೇಷ ಕರ್ಮಗಳಲ್ಲಿ ಆಸಕ್ತರಾಗ ಬೇಕು ಎಂದು ಶ್ರೀ ಕೃಷ್ಣನು ಹೇಳುತ್ತಾನೆ :—

**(2) ಯೋಗಾರೂಢಸ್ಯತಸ್ಯೈವಶಮಃಕಾರಣಮುಚ್ಯತೇ।—(6. 3.)**

ಅಪರೋಕ್ಷ ಜ್ಞಾನಿಯಾದ ಮುನಿಗೆ ಪರಮಾತ್ಮಧ್ಯಾನವು (ಮುಕ್ತಿ) ಸುಖಾತಿ ಶಯಕ್ಕೆ ಕಾರಣವಾಗುತ್ತದೆ. ಪ್ರವಚನ ಕರ್ಮದಲ್ಲೂ ಜ್ಞಾನಿಗೆ ಅಧಿಕಾರವೆಂಬುದು ಶ್ರೀ ಕೃಷ್ಣನ ಮಾತಿನಿಂದ ಅನುಮಿತವಾಗುವುದು :—

**(3) ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ।**
**ಉಪದೇಕ್ಷ್ಯಂತಿತೇಜ್ಞಾನಂ ಜ್ಞಾನಿನಸ್ತತ್ವದರ್ಶಿನಃ॥**
**—(4. 34.)**

ಅರ್ಜುನ ! ದಂಡಪ್ರಣಾಮ, ವಿನಯಾನ್ವಿತವಾದ ಪ್ರಾರ್ಥನಾ ಮತ್ತು ನಾನಾ ವಿಧವಾದ ಸೇವೆಗಳಿಂದ ಈ ತತ್ವವನ್ನು ಜ್ಞಾನಿಗಳಿಂದ ತಿಳಿ. ( ಜ್ಞಾನಿ ಗಳು ನಿರಪೇಕ್ಷರಾಗಿ ಸ್ಥಾಣುವಿನಂತೆ ಇರುವರಾದರೆ ಸಂಸಾರಿಯಾದ ನನ್ನ ಸಂಗಡ ಮಾತಾಡುವರೆ ? ಎಂದರೆ ಹೇಳುತ್ತಾನೆ :— ) ಯಥಾರ್ಥ ತತ್ವವನ್ನು ತಿಳಿದ ಜ್ಞಾನಿಗಳು ನಿನಗೆ ಜ್ಞಾತವ್ಯತತ್ವವನ್ನು ಅವಶ್ಯವಾಗಿಯೂ ಉಪದೇಶ ಮಾಡುತ್ತಾರೆ. ( ಜ್ಞಾನಿಗಳು ಪ್ರವಚನ ಕರ್ಮದಲ್ಲಿ ಅನಾದರ ಮಾಡುವರಲ್ಲ ವೆಂದು ಭಾವವು. ) ಪುನಃ :—

**(4) ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ।**
**—(4. 20.)**

ಲೋಕಮರ್ಯಾದಾ ರಕ್ಷಣಾರ್ಥವಾಗಿಯಾದರೂ ( ಸಾಮಾನ್ಯ ) ಕರ್ಮ ಗಳನ್ನೂ ( ಕೂಡ ) ನೀನು ಜ್ಞಾನಿಯಾದರೂ ಮಾಡಬೇಕು. ಬ್ರಹ್ಮಚರ್ಯಾ ಶ್ರಮವನ್ನು ಬಿಟ್ಟು, ಗೃಹಸ್ಥಾಶ್ರಮವನ್ನು ಸ್ವೀಕರಿಸಿ, ಔಪಾಸನಾದಿ ಬೇರೆ ಕರ್ಮ ಗಳನ್ನು ಮಾಡುವ ಗೃಹಸ್ಥನಿಗೆ ಭಿಕ್ಷಾನ್ನಭೋಜನ ಮತ್ತು ಮೌಂಜಿಬಂಧನ ನಿವೃತ್ತಿಯಿಂದ ದೋಷವು ಇಲ್ಲದಂತೆ, ಅಪರೋಕ್ಷ ಜ್ಞಾನವನ್ನು ಹೊಂದಿದ ಜ್ಞಾನಿಗೆ ಧ್ಯಾನ ಪ್ರವಚನಾದಿ ಮಹಾ ಕರ್ಮಗಳಲ್ಲಿ ವಿಶೇಷ ಅಧಿಕಾರವೂ, ಸಂಧ್ಯಾ ವಂದನಾದಿ ಸಾಮಾನ್ಯ ಕರ್ಮಗಳ ಪರಿತ್ಯಾಗದಿಂದ ದೋಷಾಭಾವವೂ ಶಾಸ್ತ್ರೋಕ್ತ ವಾಗಿರುವುದು. ಹೀಗಿದ್ದರೂ, ಜ್ಞಾನಿಯು ಜನಸಂಘದಲ್ಲಿ ವಾಸ ಮಾಡುತ್ತಿದ್ದರೆ ತಾನೂ ಸಕಲ ಕರ್ಮಗಳನ್ನೂ ಆಚರಿಸಿ ಪ್ರಜೆಗಳಿಗೆ ಶಿಕ್ಷಿಸಬೇಕು. ಇಂಥ ಪ್ರಜಾ ಶಿಕ್ಷಣರೂಪವಾದ ಕರ್ಮವು ನಿಷ್ಫಲವಾಗಿದ್ದರೆ, ಜ್ಞಾನಿಯು ಕಾಯಕ್ಲೇಶಗಳನ್ನು ಸಹಿಸಿ ಯಾತಕ್ಕೆ ಅದನ್ನು ಮಾಡುವನು ? ಆದುದರಿಂದ ಕರ್ಮ ಮಾಡಿ ಪ್ರಜೆ ಗಳನ್ನು ಶಿಕ್ಷಿಸುವುದರಿಂದ ಪರಮಾತ್ಮನ ಪ್ರಸಾದವಿಶೇಷವೂ, ಮುಕ್ತಿಯಲ್ಲಿ ಸುಖಾತಿಶಯವೂ ಉಂಟೆಂದು ಶ್ರೀ ಕೃಷ್ಣನ ವಿಧಿಯಿಂದಲೇ ಸಿದ್ಧವಾಗುವುದು. ಶ್ರೀ ಕೃಷ್ಣನು ಹೇಳುತ್ತಾನೆ :—

(5) **ಕುರ್ಯಾದ್ವಿದ್ವಾಂಸ್ತಥಾಽಸಕ್ತಶ್ಚಿಕೀರ್ಷುರ್ಲೋಕಸಂಗ್ರಹಂ ।**
—(4. 25.)

ವಿದ್ವಾಂಸನು ಅಜ್ಞಾನಿಗಳಿಗೆ, ಅವರಿಗೆ ವಿಹಿತವಾದ ಸಾಮಾನ್ಯಕರ್ಮಗಳಲ್ಲಿ ಪ್ರವೃತ್ತಿಯನ್ನುಂಟು ಮಾಡುವುದಕ್ಕಾಗಿ, ಫಲಾಪೇಕ್ಷೆರಹಿತನಾಗಿ (ಸಾಮನ್ಯ) ಕರ್ಮಗಳನ್ನು (ಕೂಡ) ಆಚರಿಸಬೇಕು. ಜ್ಞಾನಿಯು ಹೀಗೆ ಅವಶ್ಯವೂ ಮಾಡಬೇಕೆಂದು ಶ್ರೀ ಕೃಷ್ಣನು ವಿಧಿಸುತ್ತಾನೆ :—

(6) **ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ಯುಕ್ತಸ್ಸಮಾಚರನ್ ।**
—(3. 26.)

ಭಗವಂತನಲ್ಲಿ ಮನೋಯೋಗವುಳ್ಳವನಾಗಿ ಜ್ಞಾನಿಯು ಸರ್ವ ಕರ್ಮಗಳನ್ನೂ ಆಚರಿಸುತ್ತಾ, ಇತರರೂ ಕರ್ಮದಲ್ಲಿ ಆಸಕ್ತರಾಗುವಂತೆ ಮಾಡಬೇಕು.

ಈ ವಾಕ್ಯಗಳಿಂದ ಧ್ಯಾನ, ಪ್ರವಚನ, ಅವಿದ್ವಜ್ಜನಶಿಕ್ಷಣ ಇವೇ ಮುಂತಾದುವುಗಳು ಜ್ಞಾನಿಯಿಂದ ಅನುಷ್ಠೇಯವಾದ ಧರ್ಮಗಳು. ಇವುಗಳಿಂದ ಪ್ರಸನ್ನನಾಗಿ ಪರಮಾತ್ಮನು ಮುಕ್ತಿಯಲ್ಲಿ ಸುಖಾತಿಶಯವನ್ನು ಕೊಡುತ್ತಾನೆಂದು ನಿಶ್ಚಿತವಾಗುವುದು. ಆದುದರಿಂದ ಅನುಚರಭಾವವು ಜ್ಞಾನಿಗೂ ತಪ್ಪಿದುದಲ್ಲ.

## ೬.

ಮುಕ್ತಿಯಲ್ಲೂ ಜೀವರುಗಳಿಗೆ ಸ್ವಾಭಾವಿಕವಾದ ಅನುಚರಭಾವವು ಇದ್ದೇ ಇರುವುದೆಂಬುದು **ಮುಕ್ತಾನಾಂ ಪರಮಾ ಗತಿಃ** ಎಂಬ ಶ್ರೀ ಕೃಷ್ಣನ ಹೆಸರೇ ತಿಳಿಸುವುದು.* **ಬ್ರಹ್ಮಣೋಹಿಪ್ರತಿಷ್ಠಾಽಹಮಮೃತಸ್ಯಾವ್ಯಯಸ್ಯಚ** ಇತ್ಯಾದಿ ವಾಕ್ಯಗಳು ದೃಢೀಕರಿಸುವುವು.

ಜ್ಞಾನಿಯಾದ ಅರ್ಜುನನೂ ಸರ್ವಪ್ರಾಣಿಗಳನ್ನೂ, ವಿಶ್ವರೂಪಿಯಾದ ಪರಮಾತ್ಮನ ಆಶ್ರಯದಲ್ಲಿ, ಕೈಮುಗಿದುಕೊಂಡು ಅನುಚರರಾಗಿರುವ ಹಾಗೆಯೇ ನೋಡಿರುತ್ತಾನೆ.

1. **ಅಮೀಹಿತ್ವಾಂಸುರಸಂಘಾವಿಶಂತಿ ಕೇಚಿದ್ಭೀತಾಃ ಪ್ರಾಂಜಲಯೋಗೃಣಂತಿ ।**
**ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ ಸ್ತುವಂತಿತ್ವಾಂಸ್ತುತಿಭಿಃ ಪುಷ್ಕಲಾಭಿಃ ॥** —(11. 21.)

---

* **"ಉತಾಮೃತತ್ವಸ್ಯೇಶಾನಃ"** ಎಂಬ ಶ್ರುತಿಯೂ **"ಮುಕ್ತೋಪಸೃಪ್ಯತ್ವವ್ಯಪದೇಶಾತ್"** ಮುಂತಾದ ಬ್ರಹ್ಮಸೂತ್ರಗಳೂ ಮುಕ್ತಿಯಲ್ಲೂ ಸರ್ವಚೇತನರೂ ಪರಬ್ರಹ್ಮನ ಅಧೀನರಾಗಿಯೇ ಇರುವರೆಂದು ಹೇಳುವುವು.

ಹೇ ದೇವ ! ಸಕಲ ದೇವತಾಸಮೂಹವೂ† ನಿನ್ನನ್ನು ಪ್ರವೇಶಿಸುತ್ತಾರೆ. ಕೆಲವರು ಕೈಜೋಡಿಸಿಕೊಂಡು ಭೀತರಾಗಿ ನಿನ್ನನ್ನು ಸ್ತುತಿಸುತ್ತಾರೆ. ಮಹರ್ಷಿಗಳ ಮತ್ತು ಸಿದ್ಧರ ಸಮೂಹಗಳು ಸ್ವಸ್ತಿ ! ಎಂದು ಹೇಳುತ್ತಾ ನಿನ್ನನ್ನು ಪುಷ್ಕಲವಾದ ( ಗುಣಪೂರ್ಣನೆಂದು ಪ್ರತಿಪಾದಿಸುವ ) ಸ್ತೋತ್ರಗಳಿಂದ ಸ್ತುತಿಸುತ್ತಾರೆ.

ಈ ರೀತಿಯಾಗಿ ವಿಷ್ಣುಸರ್ವೋತ್ತಮತ್ವಸಾಧಕವಾದ ಸಾಕ್ಷಾದ್ವಚನಗಳು ಮತ್ತು ಯುಕ್ತಿಗಳು; ಜೀವದಾಸ್ಯವನ್ನು ಪ್ರತಿಪಾದಿಸುವ ವಚನಗಳು ಮತ್ತು ಶಾಸ್ತ್ರ ವಿಧಾನವೇ ಮೊದಲಾದ ಯುಕ್ತಿಗಳು; ಜ್ಞಾನಿಗೂ ಕರ್ಮವಿಧಾನ ಮಾಡುವ ಶ್ರೀ ಕೃಷ್ಣನ ವಾಕ್ಯಗಳು; ಮುಕ್ತಿ ಮತ್ತು ಬ್ರಹ್ಮಾಪರೋಕ್ಷ ಜ್ಞಾನವರ್ಣನೆಯು; ಮತ್ತು ಅನುಚರ ಭಾವವನ್ನು ಅಂಗೀಕರಿಸದಿದ್ದರೆ ಇರುವ ಅನುಪತ್ತಿ ಸಮುದಾಯವು; ಇಷ್ಟರ ವಿಮರ್ಶೆಯಿಂದ ಅನಾದ್ಯನಂತ ಕಾಲದಲ್ಲೂ ರಮಾ ಬ್ರಹ್ಮಾದಿ ಸಕಲ ಚೇತನರೂ ಶ್ರೀಮನ್ನಾರಾಯಣನ ವಶರಾಗಿರುವರೇ ಹೊರತು, ಯಾವ ಪ್ರವೃತ್ತಿಯಲ್ಲಿಯೂ ಸ್ವಾತಂತ್ರ್ಯವುಳ್ಳವರಲ್ಲವೆಂಬುದು ದೇವೋತ್ತಮನಾದ ಶ್ರೀ ಕೃಷ್ಣನ ಅಭಿಪ್ರಾಯವಿರುತ್ತದೆ ಎಂದು ಸಿದ್ಧವಾಗುವುದು.

---

†**ಪಶ್ಯಾಮಿದೇವಾನ್** ಎಂದು ನಾನು ದೇವತೆಗಳನ್ನು ನೋಡುತ್ತೇನೆ ಎಂದು ಪೂರ್ವದಲ್ಲೇ ಅರ್ಜುನನು ಹೇಳಿರುವುದರಿಂದ, ಈಗ ಪುನಃ ದೇವತಾಸಮೂಹವನ್ನು ನೋಡುತ್ತೇನೆಂಬ ವಾಕ್ಯವು **ಮುಕ್ತವರ್ಗ**ವನ್ನು ಬೋಧಿಸುವುದೆಂದು ತಿಳಿಯಬೇಕು, "ಪ್ರವೇಶೋ ನಿರ್ಗಮಶ್ಚೈವ ಮುಕ್ತಾನಾಂ ಸ್ವೇಚ್ಛಯಾಭವೇತ್" ಇತ್ಯಾದಿ ಪ್ರಮಾಣವಚನಗಳಿಂದಲೂ ಇದು ಸಿದ್ಧವಾಗುವುದು,



# V

# ತಾರತಮ್ಯ ಸಮರ್ಥನವು.



2 ರಿಂದ 5—8—1930 ರಲ್ಲಿ

**ಸಭಿಕರು— ಧರ್ಮಾಧಿಕಾರಿಗಳು, ವಿದ್ವಾಂಸರು ಮತ್ತು ವಿದ್ಯಾರ್ಥಿಗಳು.**

## I

ಶ್ರೀ ಶ್ರೀಗಳವರು— ಈ ದಿವಸ ಪ್ರಮಾಣಪ್ರಮಿತರಾದ ಅನಂತಚೇತನರು ಸಮಾನರಾಗಿರದೆ, **" ನೀಚೋಚ್ಚಭಾವಂಗತಾಃ "** ಎಂದರೆ ಬಹು ಪ್ರಕಾರವಾದ ತಾರತಮ್ಯದಿಂದ ಸಹಿತರಾಗಿರುವರು ಎಂಬ ವಿಷಯವನ್ನು ಶ್ರೀ ಕೃಷ್ಣನ ಸರ್ವೋತ್ಕೃಷ್ಟ ವಾಕ್ಯಗಳಿಂದ ನಿರೂಪಿಸುತ್ತೇವೆ. ಆದರೆ ಅಷ್ಟರಿಂದಲೇ ಜೀವ ತಾರತಮ್ಯವು ಕೇವಲ ಆಗಮಗಮ್ಯವಾದ ಪ್ರಮೇಯವೆಂದು ನೀವು ತಿಳಿಯ ಬಾರದು. ಅನೇಕ ವಿಧರಾದ ಚೇತನರಿರುವುದೂ ಮತ್ತು ಒಂದೊಂದು ವಿಧ ಚೇತನ ಸಮೂಹದಲ್ಲಿಯೂ ಬಹು ತರತಮಭಾವವಿರುವುದೂ ಸಹ ಅನುಭವದಿಂದಲೇ ಸಿದ್ಧವಾಗುವುದು.

**ಪ್ರಶ್ನೆ**— ಸ್ವಾಮೀ ! ಲೋಕದಲ್ಲಿ ಒಬ್ಬನು ಸಾರ್ವಭೌಮನು, ಮತ್ತೊಬ್ಬನು ಮಂತ್ರಿಯು, ಮತ್ತೊಬ್ಬನು ಭಿಕ್ಷುಕನು ಹೀಗೆ ದ್ರವ್ಯನಿಬಂಧನವಾದ ತಾರ ತಮ್ಯವು ಪ್ರತ್ಯಕ್ಷ ಗೋಚರವಾಗಿರುವುದು. ಒಬ್ಬನು ವೃದ್ಧನು, ಮತ್ತೊಬ್ಬನು ಕುಮಾರನು ಹೀಗೆ ವಯಸ್ಸಿನ ತಾರತಮ್ಯವೂ ಕಣ್ಣಿಗೆ ಕಾಣುವುದು. ಆದರೆ "ಅಹಂ" ಪದಾರ್ಥಗಳಾದ ಜೀವರುಗಳು **ಸ್ವರೂಪೇಣ** ಉಚ್ಚ ನೀಚಭಾವದಿಂದ ಸಹಿತರಾಗಿರುವರೆಂಬುದು ಹೇಗೆ ?

ಶ್ರೀ ಶ್ರೀಗಳವರು— ವಯಸ್ಸಿನ ತಾರತಮ್ಯ ಮತ್ತು ಧನತಾರತಮ್ಯವಲ್ಲದೆ ಬೇರೆ ಯಾವ ವಿಧವಾದ ಉತ್ತಮಾಧಮಭಾವವೂ ಲೋಕದಲ್ಲಿ ಕಾಣುವುದಿಲ್ಲವೋ ?

**ಉತ್ತರ**— ವಿದ್ಯಾರ್ಥಿಗಳು— ಧನವಂತನು ದೊಡ್ಡವನು, ಗರೀಬನು ಅಲ್ಪನು. ಇನ್ನು ಯಾವ ತಾರತಮ್ಯವು ಇರುವದು ಮಹಾಸ್ವಾಮೀ ?

ಶ್ರೀ ಶ್ರೀಗಳವರು— ಹಾಗಲ್ಲ. ಅಧಿಕಾರ ತಾರತಮ್ಯವು ಕಂಡು ಬರು ವುದು. ಮತ್ತು ಕರ್ಮ ತಾರತಮ್ಯವೂ ಕಂಡು ಬರುವುದು. ಕೆಲವರು ಹೆಚ್ಚು

ದೇಶಸೇವೆಯನ್ನು ಮಾಡುವರು. ಹೆಚ್ಚು ಇಂದ್ರಿಯ ಜಯಾದಿಗಳನ್ನು ಸಂಪಾದಿಸಿ ತಪಸ್ವಿಗಳಲ್ಲಿ ಅಗ್ರಗಣ್ಯರಾಗಿರುವರು. ಇತರರು ಸಂಸಾರದಲ್ಲಿ ಆಸಕ್ತರಾಗಿ ಸ್ವಾರ್ಥಪರರಾಗಿರುವರು. ಹೀಗೆ ಉತ್ಕೃಷ್ಟಾಪಕೃಷ್ಟ ಕರ್ಮದಿಂದ ಸಹಿತರಾದ ಅನೇಕ ಜೀವರುಗಳು ಈ ಲೋಕದಲ್ಲಿ ಇರುವರು. ಇನ್ನೂ ಹೆಚ್ಚು ವಿಮರ್ಶೆ ಮಾಡಿದರೆ ಜ್ಞಾನತಾರತಮ್ಯವೂ ಕಂಡು ಬರುವುದು. ಕೆಲವರು ಬಹು ಬುದ್ಧಿಶಾಲಿಗಳಾಗಿ, ಬಹು ಬೇಗ ವಿದ್ಯಾವಂತರಾಗಿ ಗ್ರಂಥ ರಚನೆಯಲ್ಲಿ ಸಮರ್ಥರಾಗುವರು. ಇತರರು ಬುದ್ಧಿಮಾಂದ್ಯದಿಂದ ಸಹಿತರಾಗಿರುವರು. ಇಷ್ಟೇ ಅಲ್ಲದೆ ಜನರ ಕರ್ಮಗಳೂ, ಜ್ಞಾನಸಂಪಾದನೆಯೂ ಏಕಪ್ರಕಾರವಾಗಿರುವುದಿಲ್ಲ. ಕೆಲವರು ರಾಜ್ಯ ಪರಿಪಾಲನೆ ಮಾಡುವರು. ಕೆಲವರು ಕೈಗಾರಿಕೆ ಕೆಲಸದಲ್ಲಿ ಆಸಕ್ತರಾಗಿರುವರು. ಕೆಲವರು ವ್ಯವಸಾಯ ಮಾಡುವವರು. ಕೆಲವರು ತಪಶ್ಚರ್ಯೆಯಲ್ಲಿ ನಿರತರಾದವರು. ಈ ಒಂದೊಂದು ವಿಧದಲ್ಲಿಯೂ ಉತ್ತಮಾಧಮಭಾವವು ಇದ್ದೇ ಇರುವುದು. ಜ್ಞಾನಸಂಪಾದನೆಯಲ್ಲಿಯೂ ಸಹ ಕೆಲವರು ಸಂಗೀತವಿದ್ಯೆಯಲ್ಲಿ, ಕೆಲವರು ಗಣಿತಶಾಸ್ತ್ರದಲ್ಲಿ, ಕೆಲವರು ವೇದಾಂತ ಶಾಸ್ತ್ರದಲ್ಲಿ ಮತ್ತೆ ಕೆಲವರು ಸರ್ವ ಶಾಸ್ತ್ರಗಳಲ್ಲಿಯೂ ಪಾಂಡಿತ್ಯವನ್ನು ಹೊಂದಿದವರಾಗಿ ಇರುವರು ಮತ್ತು ಪೂರ್ವೋಕ್ತವಾದ ಒಂದೊಂದು ವಿದ್ಯಾ ಸಂಪಾದನೆಯಲ್ಲಿಯೂ, ಕೆಲವರು ಮೊದಲನೇ ತರಗತಿಯವರು, ಕೆಲವರು ಎರಡನೆಯ ದರ್ಜೆಗೆ ಸೇರಿದವರೆಂದು ತಾರತಮ್ಯವು ಇದ್ದೇ ಇರುವುದಷ್ಟೇ! ಇಷ್ಟೇ ಅಲ್ಲ! ದುರ್ಮಾರ್ಗದಲ್ಲಿಯೂ ತಾರತಮ್ಯವು ಇರುವುದು. ಕೆಲವರು ಭಯದಿಂದ ಕಳ್ಳತನ ಮಾಡುವರು. ಕೆಲವರು ಹಗಲು ಕಳ್ಳರು. ಕೆಲವರು ಸೈನ್ಯಸಮೇತರಾಗಿ ದೇಶವಿಧ್ವಂಸನವನ್ನೇ ಮಾಡುವರು. ವೇದವಿಧಿಯನ್ನು ಮೀರಿ ನಡೆಯುವವರೆಲ್ಲರೂ ಒಂದೇ ಪ್ರಕಾರವಾಗಿರುವುದಿಲ್ಲ. ಕೆಲವರು ವೇದವು ಸುಳ್ಳೆನ್ನುತ್ತಾ ಅಷ್ಟರಲ್ಲೇ ಸುಮ್ಮನಾಗುವರು. ಮತ್ತೆ ಕೆಲವರು ವಿಗ್ರಹಾದಿಗಳನ್ನು ನಾಶ ಮಾಡಿ ಇತರರಿಗೂ ಸಹ ವೇದಾತಿಕ್ರಮವು ಉಚಿತವೆಂದು ಬೋಧಿಸುವರು. ವೇದವಿರುದ್ಧ ಜ್ಞಾನದಲ್ಲಿಯೂ ಹೀಗೆಯೇ ತಾರತಮ್ಯವು ಇರುವುದು. ಆದುದರಿಂದ ಒಳ್ಳೆಯವರು ಕೆಟ್ಟವರು ಎಂಬ ವಿವೇಕವೂ, ಮತ್ತು ಒಳ್ಳೆಯವರಲ್ಲಿಯೂ ಕೆಟ್ಟವರಲ್ಲಿಯೂ ಬಹಳ ಅವಾಂತರ ತಾರತಮ್ಯವೂ ಲೋಕಾನುಭವಸಿದ್ಧವಾಗಿರುವುದನ್ನು ಅಪಲಾಪ ಮಾಡಕೂಡದು.

**ಪ್ರಶ್ನೆ**— ಸ್ವಾಮೀ! ತಾವು ಹೇಳಿದುದು ನಿಜ! ಆದರೆ ಈ ಕರ್ಮವೈಚಿತ್ರ್ಯ ತಾರತಮ್ಯಗಳು ಮತ್ತು ಜ್ಞಾನದಲ್ಲಿರುವ ವೈಚಿತ್ರ್ಯತಾರತಮ್ಯಗಳು ಇವುಗಳಿಂದ ಜೀವರುಗಳ ಸ್ವರೂಪವು ನಾನಾ ವಿಧವಾಗಿ ತಾರತಮ್ಯದಿಂದ ಯುಕ್ತವಾಗಿರುವುದೆಂದು ಹೇಳುವುದು ಹೇಗೆ?

ಶ್ರೀ ಶ್ರೀಗಳವರು— ಕೆಲವರು ಪ್ರಾಯೇಣ **ಸದಾ** ವೇದವಿರುದ್ಧ ಕರ್ಮದಲ್ಲಿಯೂ ಕೆಲವರು **ಸದಾ** ಸತ್ಕರ್ಮದಲ್ಲಿಯೂ ಆಸಕ್ತರಾಗಿರುವರು; ಇದಕ್ಕೆ ಕಾರಣವೇನು ?

ವಿದ್ಯಾರ್ಥಿಗಳು— ಪಶುಗಳಂತೆ ಜ್ಞಾನಹೀನರಾದುದರಿಂದ ಸದಾ ದುಷ್ಕರ್ಮದಲ್ಲಿ ಆಸಕ್ತರಾಗುತ್ತಾರೆ. ಉತ್ತಮರ ಸಂಗದಿಂದ ಜ್ಞಾನಸಂಪನ್ನರಾದವರು ಸತ್ಕರ್ಮದಲ್ಲಿ ಆಸಕ್ತರಾಗುತ್ತಾರೆ.

ಶ್ರೀ ಶ್ರೀಗಳವರು—ಇಂಥ ಜ್ಞಾನ ವೈಚಿತ್ರ್ಯಕ್ಕೆ ಕಾರಣವೇನು ? ವೇದವನ್ನು ಸರ್ವದಾ ಮೀರಿಯೇ ನಡೆಯುವ ದುರ್ಬುದ್ಧಿಯು ಅವರಿಗೆ ಬಂದು ಇತರರಿಗೆ ಸದ್ವಿದ್ಯೆಯಲ್ಲಿಯೇ ಪ್ರವೃತ್ತಿಯುಂಟಾಗುವುದಕ್ಕೆ ಕಾರಣವೇನು ?

ವಿದ್ಯಾರ್ಥಿಗಳು— ಹಾಗೇ ವಿಚಾರ ಮಾಡುತ್ತಾ ಹೋದರೆ ಅವರವರ ಪೂರ್ವಕೃತ ಕರ್ಮವು ಕಾರಣವು.

ಶ್ರೀ ಶ್ರೀಗಳವರು— ಪೂರ್ವಕೃತ ಕರ್ಮವೆಂದರೆ, ಪಿತ್ರಾರ್ಜಿತವಾದ ಜಮೀನಿನಂತೆ ಒಂದು ಬೇರೆ ಆಸ್ತಿಯೆಂದು ತಿಳಿಯಬಾರದು. ಪೂರ್ವಜನ್ಮದಲ್ಲಿ ಈ ಚೇತನನು **ಮಾಡಿದ** ಆಚರಣೆಯು ಎಂದರ್ಥವು. ಆ ಪೂರ್ವಜನ್ಮದಲ್ಲಿಯೂ ದುಷ್ಕರ್ಮಗಳನ್ನೇ ಕೆಲವು ಚೇತನರು ಆಚರಿಸುತ್ತಿದ್ದರು ಎಂದೂ, ಹೀಗೆಯೇ ಜನ್ಮ ಜನ್ಮಗಳಲ್ಲಿಯೂ ದುರಾಚಾರಗಳಲ್ಲಿರತರಾದವರು ಇರುತ್ತಾರೆಂಬುದೂ ಈ ನ್ಯಾಯದಿಂದ ಸಿದ್ಧವಾಗುವುದರಿಂದ, ಅಂತತಃ ಕರ್ಮಾನುಷ್ಠಾನಕ್ಕೆ ಆಯಾಯ ಚೇತನರ **ಸ್ವಭಾವವೇ** ಕಾರಣವು. ಒಳ್ಳೆಯ ಚೇತನರು ಸದಾ ಒಳ್ಳೆಯ ಕರ್ಮಗಳನ್ನೂ, ಕೆಟ್ಟ ಚೇತನರು ಸದಾ ಕೆಟ್ಟ ಕೆಲಸಗಳನ್ನೂ ಮಾಡುತ್ತಿರುವರೆಂಬುದು ಅನುಮಾನದಿಂದ ಸಿದ್ಧವಾಗುವುದು. ಆದುದರಿಂದ ಚೇತನದ್ವೈವಿಧ್ಯವನ್ನು ನೀವು ಅವಶ್ಯವಾಗಿಯೂ ಅಂಗೀಕರಿಸಬೇಕು.

ವಿದ್ಯಾರ್ಥಿಗಳು— ಸ್ವಾಮೀ ! ಉತ್ಕೃಷ್ಟಕರ್ಮಗಳನ್ನು ಮಾಡುವುದರಿಂದ ಸ್ವಭಾವವು ಉತ್ಕೃಷ್ಟವೆಂದೂ, ಅಧಮಕರ್ಮವನ್ನು ಮಾಡುವುದರಿಂದ ಸ್ವಭಾವವು ಅಧಮವೆಂದೂ ನಿಶ್ಚಯಿಸುವುದರಲ್ಲಿ ಗೀತೆಯಲ್ಲಿ ಪ್ರಮಾಣವೇನು ?

ಶ್ರೀ ಶ್ರೀಗಳವರು— ಶ್ರೀ ಕೃಷ್ಣನ ಆಶ್ರಯದಿಂದಲೇ ಸರ್ವ ಪ್ರಮೇಯಗಳನ್ನೂ ಸಾಧಿಸಿ ಕೊಡುವೆವು. ಸ್ವಭಾವವೇ ಕರ್ಮಗಳ ವೈಚಿತ್ರ್ಯಕ್ಕೆ ಮುಖ್ಯ ಕಾರಣವೆಂಬುದು ಕೃಷ್ಣಾರ್ಜುನರ ಈ ಸಂವಾದದಿಂದ ವಿದಿತವಾಗುವುದು.—

(1) ಅರ್ಜುನ ಉವಾಚ— **ಯೇ ಶಾಸ್ತ್ರವಿಧಿಮುತ್ಸೃಜ್ಯಯಜಂತೇ ಶ್ರದ್ಧಯಾನ್ವಿತಾಃ ।**

**ತೇಷಾಂನಿಷ್ಠಾತುಕಾಕೃಷ್ಣ ಸತ್ವಮಾಹೋರಜಸ್ತಮಃ ।**

ಶ್ರೀ ಭಗವಾನುವಾಚ— **ತ್ರಿವಿಧಾಭವತಿಶ್ರದ್ಧಾದೇಹಿನಾಂಸಾಸ್ವಭಾವಜಾ ।**

**ಸಾತ್ವಿಕೀರಾಜಸೀಚೈವ ತಾಮುಸೀಚೇತಿತಾಂಶೃಣು ।**

**ಸತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಸ್ಸ ಏವ ಸಃ ॥**
—(17. 1-3.)

ಅರ್ಜುನನು ಪ್ರಶ್ನೆ ಮಾಡುತ್ತಾನೆ :— ಹೇ ಸ್ವಾಮೀ ! ಶಾಸ್ತ್ರವಿಧಿಯನ್ನು ತಿಳಿಯದೆ, ಶ್ರದ್ಧಾಮಾತ್ರದಿಂದ ಯಾರು ಯಜ್ಞವನ್ನು ಮಾಡುತ್ತಾರೆಯೋ, ಅವರ ಸ್ಥಿತಿಯು ಎಂಥಾದ್ದು ? ಅವರು ಸಾತ್ವಿಕಸ್ಥಿತಿಯುಳ್ಳವರೇ ? ರಾಜಸಸ್ಥಿತಿಯುಳ್ಳವರೇ ? ಅಥವಾ ತಾಮಸಸ್ಥಿತಿಯುಳ್ಳವರೇ ? ( ಅವರು ಸಾತ್ವಿಕರೇ, ರಾಜಸರೇ, ತಾಮಸರೇ ? )

ಶ್ರೀ ಕೃಷ್ಣನು ಹೇಳುತ್ತಾನೆ :— ಅರ್ಜುನ ! ದೇಹಿಗಳ ಶ್ರದ್ಧೆಯು (ಆಸ್ತಿಕ್ಯ ಬುದ್ಧಿಯು ) ಮೂರು ಪ್ರಕಾರವಾಗಿರುವುದು. **ಈ ಶ್ರದ್ಧೆಯು ಸ್ವಭಾವ ನಿಮಿತ್ತದಿಂದಲೇ ಉತ್ಪನ್ನವಾದುದು.** ( ಜೀವಸ್ವರೂಪಭೂತವಾದ ಶ್ರದ್ಧೆಯೇ ಮನೋವೃತ್ತಿಯಾದ ಶ್ರದ್ಧೆಗೆ ಕಾರಣವಾಗುವುದೆಂದು ತಾತ್ಪರ್ಯವು ). ಅದು ಸಾತ್ವಿಕ, ರಾಜಸ, ತಾಮಸ ಭೇದದಿಂದ ಮೂರು ಪ್ರಕಾರವಾಗಿರುವುದು. ಅದನ್ನು ಕೇಳು. ಎಲೈ ಅರ್ಜುನನೇ ! ಸರ್ವದೇಹಿಗಳಿಗೂ ಶ್ರದ್ಧೆಯು **ಸತ್ವಾನುರೂಪಾ** ಎಂದರೆ ಜೀವಸ್ವರೂಪಾನುಗುಣವಾಗಿ ಇರುವುದು. ಈ ಜೀವನು **ಶ್ರದ್ಧಾತ್ಮಕನೇ** ಎಂದರೆ ಶ್ರದ್ಧಾಸ್ವರೂಪನೇ ಆಗಿರುವನು. ಅದರಲ್ಲಿ ( ಸಾತ್ವಿಕ, ರಾಜಸ, ತಾಮಸ ಶ್ರದ್ಧೆಗಳಲ್ಲಿ ) ಯಜ್ಞ ಮಾಡುವ ದೇಹಿಯು ಯಾವ ಶ್ರದ್ಧೆಯನ್ನು ಹೊಂದಿರುವನೋ ಅವನು ಆ ಶ್ರದ್ಧಾರೂಪನಾಗಿಯೇ ಇರುವನು. ಎಂದರೆ ಸಾತ್ವಿಕಶ್ರದ್ಧಾ ಉಳ್ಳವನು ಸ್ವರೂಪತಃ ಸಾತ್ವಿಕನೇ. ರಾಜಸಶ್ರದ್ಧೆಯುಳ್ಳವನು ರಾಜಸನೇ. ತಾಮಸಶ್ರದ್ಧೆಯನ್ನು ಹೊಂದಿದವನು ತಾಮಸನೇ ಎಂದರ್ಥವು.

ವೇದವಿಧಿಯನ್ನು ತಿಳಿಯದೆ, ಶ್ರದ್ಧಾಮಾತ್ರದಿಂದ ಯಜ್ಞ ಮಾಡುವವರು ಸಾತ್ವಿಕರೋ ( ಮುಕ್ತಿಯೋಗ್ಯರೋ ), ರಾಜಸರೋ ( ನಿತ್ಯಸಂಸಾರಿಗಳೋ ), ಅಥವಾ ತಾಮಸರೋ ( ತಮೋಯೋಗ್ಯರೋ ) ಎಂದು ಅರ್ಜುನನ ಪ್ರಶ್ನೆಯು. ವೇದ ವಿಧಿಯನ್ನು ತಿಳಿಯದಿದ್ದರೂ ಸಾತ್ವಿಕಶ್ರದ್ಧಾಸಂಪನ್ನನು ಸಾತ್ವಿಕಸ್ವಭಾವವುಳ್ಳವನೇ; ರಾಜಸಶ್ರದ್ಧೆಯುಳ್ಳವನು ರಾಜಸನು; ತಾಮಸಶ್ರದ್ಧಾವಂತನು ತಾಮಸನು ಎಂದು ಶ್ರೀ ಕೃಷ್ಣನ ಉತ್ತರವು. ಜೀವಸ್ವರೂಪವೇ ತ್ರಿವಿಧವಾಗಿರುವುದೆಂದು ಈ ವಾಕ್ಯಗಳಿಂದ ಸಿದ್ಧವಾಗುವುದು.

ಹದಿನಾರನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಸ್ಪಷ್ಟವಾಗಿ ಜೀವಸ್ವಭಾವ ಸಂಬಂಧಿಯಾದ ಸಂಪತ್ತುಗಳ ದ್ವೈವಿಧ್ಯವು ಇರುವುದೆಂದು ಹೇಳುತ್ತಾನೆ.—

(2) **ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।**
—(16. 6.)

ಈ ಲೋಕದಲ್ಲಿ ಪ್ರಾಣಿಗಳ ಸೃಷ್ಟಿಯು, ಅಥವಾ ಪ್ರಾಣಿಸ್ವಭಾವವು ದೇವಸಂಬಂಧಿ ( ಮುಕ್ತಿಯೋಗ್ಯ ಚೇತನರ ಸೃಷ್ಟಿಯು ) ಮತ್ತು ಅಸುರಸಂಬಂಧಿ ( ತಮೋಯೋಗ್ಯರ ಸೃಷ್ಟಿಯು ) ಎಂದು ಎರಡು ಪ್ರಕಾರವಾಗಿರುವುದು. ಎರಡು ವಿಧವಾದ ಚೇತನರು ಈ ಲೋಕದಲ್ಲಿ ಇರುತ್ತಾರೆ ಎಂದು ಇದರಿಂದ ಸಿದ್ಧವಾಗುವುದು. ಯದ್ಯಪಿ ಸಾತ್ವಿಕರಾಜಸ ತಾಮಸಭೇದೇನ ಸ್ವಭಾವವು ತ್ರಿವಿಧವಾಗಿರುವುದು. ಹಾಗಿದ್ದರೂ ಕೂಡ, ರಾಜಸ ಸ್ವಭಾವವು, ಸಾತ್ವಿಕ ಮತ್ತು ತಾಮಸ ಈ ಉಭಯವಿಧ ಸ್ವಭಾವಗಳ ಲಕ್ಷಣವನ್ನು ಹೊಂದಿರುವುದರಿಂದ ಅದನ್ನು ಪೃಥಕ್‌ನಿರ್ದೇಶ ಮಾಡಲಿಲ್ಲ.

ಈ ರೀತಿಯಾಗಿ, ಅಸುರ ಸಂಬಂಧಿ ಸ್ವಭಾವವನ್ನು ಹೊಂದಿದವರು ಕೆಲವರು, ದೇವಸಂಬಂಧಿ ಸ್ವಭಾವವನ್ನು ಹೊಂದಿದವರು ಕೆಲವರು ಎಂದು ಹೇಳಿ, ಶ್ರೀ ಕೃಷ್ಣನು ಅವರುಗಳ ಸ್ವಾಭಾವಿಕ ಗುಣಗಳನ್ನು ವಿವರಿಸುತ್ತಾನೆ.

(3) ಶ್ರೀ ಭಗವಾನುವಾಚ—

**ಅಭಯಂ ಸತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮುಶ್ಚಯಜ್ಞಶ್ಚ ಸ್ವಾಧ್ಯಾಯಸ್ತಪಆರ್ಜವಂ ।**
**ಅಹಿಂಸಾ ಸತ್ಯಮುಕ್ರೋಧಸ್ತ್ಯಾಗಃ ಶಾಂತಿರಪೈಶುನಂ ।**
**ದಯಾಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಂ ।**
**ತೇಜಃ ಕ್ಷಮಾಧೃತಿಶ್ಶೌಚಮುದ್ರೋಹೋ ನಾತಿಮಾನಿತಾ ।**
**ಭವಂತಿಸಂಪದಂ ದೈವೀ ಮುಭಿಜಾತಸ್ಯಭಾರತ ॥**
**ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥಸಂಪದಮಾಸುರೀಂ ।**
—(16. 1-4.)

ಶ್ರೀ ಕೃಷ್ಣನು ಹೇಳುತ್ತಾನೆ— ಅಭಯಂ = ಸಜ್ಜನರಿಗೆ ಭಯಪ್ರದನಾಗದೆ, ತಾನೂ ದುರ್ಜನರಿಂದ ಭಯ ಹೊಂದದೇ ಇರುವುದು; ಸತ್ವಸಂಶುದ್ಧಿಃ = ದುರ್ವಿಷಯ ಧ್ಯಾನರಹಿತವಾದ ಅಂತಃಕರಣವನ್ನು ಹೊಂದಿರುವುದು; ಜ್ಞಾನಯೋಗ ವ್ಯವಸ್ಥಿತಿಃ = ಪರಬ್ರಹ್ಮನ ಜ್ಞಾನವನ್ನು ಹೊಂದುವುದಕ್ಕೆ ಉಪಾಯರೂಪವಾದ ಶ್ರವಣಮನನಾದಿಗಳಲ್ಲಿ ನಿಷ್ಠೆಯು; ದಾನಂ = ಸತ್ಪಾತ್ರರಲ್ಲಿ ವಿಧ್ಯುಕ್ತ ರೀತಿಯಲ್ಲಿ ದ್ರವ್ಯತ್ಯಾಗವು; ಯಜ್ಞಶ್ಚ = ವಿಧ್ಯುಕ್ತರೀತಿಯಲ್ಲಿ ಯಾಗಾದ್ಯನುಷ್ಠಾನವು; ಸ್ವಾಧ್ಯಾಯಃ = ವಿಧ್ಯುಕ್ತರೀತಿಯಲ್ಲಿ ಗುರುಗಳಿಂದ ವೇದಾಧ್ಯಯನವನ್ನು ಮಾಡುವುದು: ತಪಃ = ವೇದವಿಹಿತ ರೀತಿಯಲ್ಲಿ, ಬ್ರಹ್ಮಚರ್ಯಾದಿ ತಪೋಽನುಷ್ಠಾನವು; ಆರ್ಜವಂ = ಸ್ವವಿಹಿತ ವಿಷಯದಲ್ಲಿ ಮನೋವಾಕ್ಕರ್ಮಗಳಲ್ಲಿ ಏಕರೀತಿಯಾಗಿರುವುದು; ಅಹಿಂಸಾ = ಹಿಂಸಾ ಪರಿತ್ಯಾಗವು; ಸತ್ಯಂ = ವೇದೋಕ್ತರೀತಿಯಲ್ಲಿ

ಯಥಾರ್ಥ ವಚನವು; ಅಕ್ರೋಧಃ = ಸಜ್ಜನರಿಗೆ ಉಪದ್ರವಕಾರಣವಾದ ಕೋಪವನ್ನು ಹೊಂದದಿರುವುದು; ತ್ಯಾಗಃ = ಸದ್ವಿಷಯಗಳಲ್ಲಿ ಔದಾರ್ಯವು; ಶಾಂತಿಃ = ಬುದ್ಧಿಯ ಭಗವನ್ನಿಷ್ಠತೆಯು; ಅಪೈಶುನಂ = ಸಜ್ಜನರ ನಾಶವನ್ನು ಇಚ್ಛಿಸಿ, ಸಜ್ಜನರ ಅಪರಾಧವನ್ನು ರಾಜಾಸ್ಥಾನಾದಿಗಳಲ್ಲಿ ಚಾಡಿ ಹೇಳದಿರುವುದು; ದಯಾ ಭೂತೇಷು = ಸರ್ವ ಸಜ್ಜನರ ದುಃಖಾಸಹನವು; ಅಲೋಲುತ್ವಂ = ವಿಷಯಗಳಲ್ಲಿ ರಾಗಾಭಾವವು; ಮಾರ್ದವಂ = ತನ್ನನ್ನು ಹಿಂಸೆ ಮಾಡುವವರಲ್ಲಿಯೂ ಕೂಡ ವಿರೋಧರಹಿತನಾಗಿರುವುದು; ಹ್ರೀಃ = ಅಕಾರ್ಯದಲ್ಲಿ ಲಜ್ಜೆಯು; ಅಚಾಪಲಂ = ಸನ್ಮಾರ್ಗದಿಂದ ಚಂಚಲನಾಗದೆ ಸ್ಥಿರವಾಗಿರುವುದು; ತೇಜಃ = ದುರ್ಜನರಿಂದ ಅಪರಾಜಯವು; ಕ್ಷಮಾ = ಸಜ್ಜನಾಪರಾಧದಿಂದ ಕ್ರೋಧವನ್ನೇ ಹೊಂದದಿರುವುದು, ಧೃತಿಃ = ಸಾತ್ವಿಕ ಮಾರ್ಗದಲ್ಲಿ ನಿರ್ಭಯನಾಗಿರುವುದು; ಶೌಚಂ = ವಿಧ್ಯುಕ್ತ ರೀತಿಯಲ್ಲಿ ಮೃತ್ತಿಕಾದಿಗಳಿಂದ ಬಾಹ್ಯಶೌಚಾಚರಣೆಯು; ಮತ್ತು ಭಗವತ್ಸ್ಮೃತ್ಯಾದಿಗಳಿಂದ ಅಂತಃಶುದ್ಧಿಯು; ಇವು ದೈವೀಸಂಪದಂ = ಮುಕ್ತಿಯೋಗ್ಯಸಂಬಂಧಿ ಸ್ವಭಾವವನ್ನು ಹೊಂದಿದವರಿಗೆ ಬರುತ್ತವೆ.

ದಂಭಃ = ತಾನು ಅಲ್ಪನೆಂದು ತಿಳಿದಿದ್ದರೂ ಮಹತ್ವವನ್ನು ಪ್ರದರ್ಶನೆ ಮಾಡುವುದು; ದರ್ಪಃ = ಭಯನಿಮಿತ್ತವು ಇದ್ದರೂ ಮದದಿಂದ ನಿರ್ಭಯನಂತೆ ಪ್ರದರ್ಶನ ಮಾಡುವುದು; ಅಭಿಮಾನಃ = ವಿಧ್ಯತಿಕ್ರಮವು; ಕ್ರೋಧಃ = ಸಜ್ಜನರಿಗೆ ಹಿಂಸಾಕರವಾದ ಕೋಪವು; ಪಾರುಷ್ಯಂ = ನಿಷ್ಠುರೋಕ್ತಿಯು; ಅಜ್ಞಾನಂ = ಮಿಥ್ಯಾಜ್ಞಾನವು ಇವು ಅಸುರಸಂಬಂಧಿ ಸಂಪತ್ತನ್ನು (ತಮೋಯೋಗ್ಯಸ್ವಾಭಾವಿಕ ಲಕ್ಷಣಗಳನ್ನು) ಹೊಂದಿದವರಿಗೆ ಬರುತ್ತವೆ.

ಈ ಗುಣಗಳು ಕರ್ಮವಶಾತ್ ಬಂದಂಥ ಧರ್ಮಗಳು, ಸ್ವಭಾವಜನ್ಯವಲ್ಲವೆಂದು ಭ್ರಮಿಸಕೂಡದು. ಶ್ರೀ ಕೃಷ್ಣನ ಫಲಕಥನರೂಪವಾದ ಶ್ಲೋಕಗಳು **ನಿತ್ಯವಾಗಿಯೂ** ಈ ಧರ್ಮಗಳಿಂದ ಸಹಿತರಾದ ಉಭಯವಿಧಚೇತನರೂ ಇರುವರೆಂದು ಸೂಚಿಸುತ್ತವೆ.

**(4) ದೈವೀಸಂಪದ್ವಿಮೋಕ್ಷಾಯನಿಬಂಧಾಯಾಸುರೀಮತಾ ।**

—(16. 5.)

ದೇವಸಂಬಂಧಿ ಸಂಪತ್ತು (ಚತುರ್ವಿಧವಾದ) ಮುಕ್ತಿಗೆ ಕಾರಣವಾಗುವುದು; ಅಸುರಸಂಬಂಧಿ ಸಂಪತ್ತು ನಿಬಂಧಾಯ ಎಂದರೆ ಪುನರಾವೃತ್ತಿರಹಿತವಾದ ನಿತ್ಯದುಃಖಕ್ಕೆ ಕಾರಣವಾಗುವುದು; ಈ ವಾಕ್ಯವು ಸ್ವಲ್ಪ ಅಸ್ಪಷ್ಟವಾಗಿರುವುದು; ಶ್ರೀ ಕೃಷ್ಣನು ಆಸುರಸಂಪತ್ತನ್ನು ಹನ್ನೆರಡು ಶ್ಲೋಕಗಳಲ್ಲಿ ವರ್ಣನೆ ಮಾಡಿ ಸ್ಪಷ್ಟವಾಗಿ ಫಲವನ್ನು ಹೇಳುತ್ತಾನೆ :—

(5) ಪ್ರವೃತ್ತಿಂಚ ನಿವೃತ್ತಿಂಚ ಜನಾನವಿದುರಾಸುರಾಃ ।*
ನಶೌಚಂನಾಪಿಚಾಚಾರೋ ನಸತ್ಯಂತೇಷು ವಿದ್ಯತೇ ॥
ಅಸತ್ಯಮುಪ್ರತಿಷ್ಠಂ ತೇ ಜಗದಾಹುರನೀಶ್ವರಂ ।
ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಂ ॥
ಏತಾಂದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯಜಗತೋಽಹಿತಾಃ ॥
ಕಾಮಮಾಶ್ರಿತ್ಯದುಷ್ಪೂರಂದಂಭಮಾನಮದಾನ್ವಿತಾಃ ।
ಮೋಹಾದ್ಗೃಹೀತ್ವಾಽಸದ್ಗ್ರಾಹಾನ್ ಪ್ರವರ್ತಂತೇಽಶುಚಿ
ವ್ರತಾಃ ॥
ಚಿಂತಾಮಪರಿಮೇಯಾಂಚ ಪ್ರಳಯಾಂತಾಮುಪಾಶ್ರಿತಾಃ ।
ಕಾಮೋಪಭೋಗಪರಮಾಏತಾವದಿತಿ ನಿಶ್ಚಿತಾಃ ॥
ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।
ಈಹಂತೇಕಾಮಭೋಗಾರ್ಥ ಮನ್ಯಾಯೇನಾರ್ಥ ಸಂಚಯಾನ್ ॥
ಇದಮದ್ಯ ಮಯಾಲಬ್ಧಂ ಇಮಂ ಪ್ರಾಪ್ಸ್ಯೇ ಮನೋರಥಂ ।
ಇದಮಸ್ತೀದಮಪಿಮೇ ಭವಿಷ್ಯತಿ ಪುನರ್ಧನಂ ॥

---

* ಅರ್ಥವು :— ಅಸುರಸಂಬಂಧಿ ಸ್ವಭಾವವುಳ್ಳ ಜನರು ವಿಧಿವಿಹಿತ ವಿಷಯಗಳಲ್ಲಿ ಪ್ರವೃತ್ತಿಯನ್ನೂ, ನಿಷಿದ್ಧಪರಿತ್ಯಾಗವನ್ನೂ ತಿಳಿಯಲಾರರು. ( ಅನುಷ್ಠಾನ ಮಾಡುವುದಿಲ್ಲವೆಂದರ್ಥವು). ಅವರುಗಳಲ್ಲಿ ಬಾಹ್ಯಾಂತಃ ಶೌಚಗಳೂ, ವೇದೋಕ್ತ ಆಚಾರಗಳು ಮತ್ತು ಸತ್ಯವೂ ಇರುವುದಿಲ್ಲ. ಅವರು ಜಗತ್ತು ಅಸತ್ಯವು. ಮಿಥ್ಯಾಭೂತವಾದುದು; ಅಥವಾ ಸತ್ಯನಾಮಕ ವಿಷ್ಣುವಿನಿಂದ ನಿಜವಾಗಿ ಸೃಷ್ಟಿಸಲ್ಪಟ್ಟಿಲ್ಲ ಎಂದು ಹೇಳುತ್ತಾರೆ. ಜಗತ್ತು ಅಪ್ರತಿಷ್ಠಂ ಎಂದರೆ (ಬ್ರಹ್ಮ) ಜ್ಞಾನದಿಂದ ಬಾಧ್ಯವು ಅಥವಾ ಪ್ರತಿಷ್ಠಾನಾಮಕ ವಿಷ್ಣುವಿನ ಆಧಾರರಹಿತವಾದುದು ಎಂದು ಹೇಳುತ್ತಾರೆ. ಜಗತ್ತು ಅನೀಶ್ವರಂ = ಸತ್ಯಭೂತನಾದ ಸ್ವಾಮಿರಹಿತವೆಂದು ಹೇಳುತ್ತಾರೆ. ಜಗತ್ತು ಪ್ರಕೃತ್ಯಾದಿ ಕಾರಣಗಳಿಂದ ಅಥವಾ "ಅನ್ನಾದ್ಭವಂತಿಭೂತಾನಿ" ಇತ್ಯಾದಿ ತೃತೀಯ ಅಧ್ಯಾಯದಲ್ಲಿ ಉಕ್ತ ರೀತಿಯಲ್ಲಿ ಹುಟ್ಟಿಲ್ಲವೆಂದು ಹೇಳುತ್ತಾರೆ. ( ಪ್ರತೀತಿಕಾಲದಲ್ಲಿ ಮಾತ್ರ ಇರುವಂತೆ ತೋರುವುದೇ ಹೊರತು, ಪೂರ್ವದಿಂದಲೂ ವಿದ್ಯಮಾನವಾದ ಕಾರಣಸಾಮಗ್ರಿಗಳಿಂದ ಹುಟ್ಟಿರುವುದೆಂದು ಹೇಳುವುದಿಲ್ಲ ಎಂದರ್ಥವು ). ಮತ್ತೇನೆಂದರೆ ಕಾಮಹೈತುಕಂ = ಬುದ್ಧಿಮಾತ್ರ ಕಲ್ಪಿತವು; ಅಥವಾ ಕಿಮನ್ಯತ್ = ಸದಸದ್ವಿಲಕ್ಷಣವು, ಕಾಮಹೈತುಕಂ = ಅವಿದ್ಯಾಪರಿಣಾಮವು, ಎಂದು ಹೇಳುತ್ತಾರೆ. ಇಂಥ ಜ್ಞಾನವನ್ನು ಆಶ್ರಯಿಸಿ ದುಷ್ಟಚಿತ್ತರಾಗಿ, ಅಲ್ಪಜ್ಞಾನವನ್ನು ಹೊಂದಿದ, ಉಗ್ರಕರ್ಮದಲ್ಲಿ ಆಸಕ್ತರಾದ ಈ ಅಸುರರು ಜಗತ್ತಿನ ಕ್ಷೇಮನಾಶಕರಾಗಿ, ತಾವೂ ನರಕಾದ್ಯನರ್ಥಗಳನ್ನು ಹೊಂದುವುದಕ್ಕಾಗಿಯೇ ಭೂಮಿಯಲ್ಲಿ ಹುಟ್ಟುತ್ತಾರೆ. ಎಷ್ಟು ಪ್ರಾಪ್ತವಾದರೂ, ಪರಿಪೂರ್ತಿಯಾಗದ ದುಷ್ಟಕಾಮವನ್ನು ಆಶ್ರಯಿಸಿ, ದಂಭ, ಮಾನ, ಮದಗಳಿಂದ ಸಹಿತರಾಗಿ, ಮಿಥ್ಯಾಜ್ಞಾನ ಸ್ವಭಾವದಿಂದ ಶಾಸ್ತ್ರಕ್ಕೆ ವಿಪರೀತವಾದ ಅರ್ಥಗಳನ್ನೇ

ಅಸೌಮಯಾ ಹತಶ್ಶತ್ರುರ್ಹನಿಷ್ಯೇಚಾಪರಾನಪಿ ।
ಈಶ್ವರೋಽಹ ಮಹಂಭೋಗೀ ಸಿದ್ಧೋಽಹಂಬಲವಾನ್ಸುಖೀ ॥
ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋಮಯಾ ।
ಯಕ್ಷ್ಯೇದಾಸ್ಯಾಮಿಮೋದಿಷ್ಯೇ ಇತ್ಯಜ್ಞಾನವಿಮೋಹಿತಾಃ ॥
ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ ।
ಪ್ರಸಕ್ತಾಃ ಕಾಮಭೋಗೇಷು ಪತಂತಿನರಕೇಽಶುಚೌ ॥
ಆತ್ಮಸಂಭಾವಿತಾಃಸ್ತಬ್ಧಾಃ ಧನಮಾನಮದಾನ್ವಿತಾಃ ।
ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಂ ॥

---

ತಿಳಿದುಕೊಂಡು, ವಿಧಿವಿರುದ್ಧ ನಿಯಮಗಳಲ್ಲಿ ಪ್ರವರ್ತಿಸುತ್ತಾರೆ. ಅಗಾಧವಾದ, ಮರಣಾಂತವಾದ ಆಲೋಚನೆಗಳಲ್ಲಿ ಮಗ್ನರಾಗಿ, ವಿಷಯಭೋಗೈಕರತರಾಗಿ, ಐಹಿಕಸುಖವೇ ಸಮಸ್ತವೂ, ಇನ್ನು ಮೇಲೆ ಯಾವುದೂ ಇಲ್ಲವೆಂದು ನಿಶ್ಚಯಿಸಿ, ಅನಂತ ಆಶಾಪಾಶಗಳಿಂದ ಬದ್ಧರಾಗಿ, ಕಾಮ ಕ್ರೋಧಗಳಿಂದ ಪೂರ್ಣರಾಗಿ, ತಮ್ಮ ವಿಷಯಭೋಗಾರ್ಥವಾಗಿ, ಅನ್ಯಾಯ.ವಾಗಿ ದ್ರವ್ಯಾರ್ಜನೆ ಯನ್ನು ಮಾಡುತ್ತಾರೆ. ( ಇವರ ಚಿಂತಾಪ್ರಕಾರವೂ ಅತಿ ದುಷ್ಟವಾದುದು:— ) ಈ ಧನವು ಈ ದಿವಸ ನನ್ನಿಂದ ಲಬ್ಧವಾಯಿತು, ನನ್ನ ಈ ಮನೋರಥವನ್ನು ಹೊಂದುತ್ತೇನೆ. ಇಷ್ಟು ಧನವು ನನ್ನಲ್ಲಿರುವುದು. ಇನ್ನೂ ಅಧಿಕ ಧನವು ಪುನಃ ನನಗೆ ಬರುವುದು. ಈ ನನ್ನ ಶತ್ರುವು ನನ್ನಿಂದ ಸಂಹೃತನಾದನು. ಇನ್ನು ಇತರರನ್ನೂ ಸಂಹಾರ ಮಾಡಿ ಬಿಡುತ್ತೇನೆ. ನಾನು ಸ್ವತಂತ್ರನು ಅಥವಾ ನಾನೇ ಬ್ರಹ್ಮನು; ಸ್ವತಂತ್ರ ಭೋಗವುಳ್ಳವನು; ಕೃತಕೃತ್ಯನು; ಸಮರ್ಥನು; ಸುಖ ಪೂರ್ಣನು. ನಾನು ಧನಾದಿಸಂಪನ್ನನು, ಸತ್ಕುಲಪ್ರಸೂತನು; ನನಗೆ ಸಮಾನರು ಯಾರು ಇರು ತ್ತಾರೆ ? ನಾನೇ ಯಜ್ಞ ಮಾಡುತ್ತೇನೆ ದಾನ ಮಾಡುತ್ತೇನೆ ಆನಂದದಿಂದ ಇರುತ್ತೇನೆ, ಇತ್ಯಾದಿ ಪ್ರಕಾರವಾದ ಮಿಥ್ಯಾಜ್ಞಾನದಿಂದ ವಿಮೋಹಿತರಾಗಿ, ನಾನಾ ದುಷ್ಟ ಆಲೋಚನೆಗಳಿಂದ ಪೂರ್ಣ ವಾದ ಮನಸ್ಸುಳ್ಳವರಾಗಿ ಪುತ್ರಮಿತ್ರಾದಿ ವಿಷಯಕ ಮೋಹವೆಂಬ ಬಲೆಯಿಂದ ಸುತ್ತಲ್ಪಟ್ಟವ ರಾಗಿ, ವಿಷಯಭೋಗಗಳಲ್ಲಿ ಅತ್ಯಂತ ಆಸಕ್ತವಾದ ಮನಸ್ಸುಳ್ಳವರಾಗಿ, ಅತಿ ಕಶ್ಮಲವಾದ ನರಕ ದಲ್ಲಿ ಬೀಳುತ್ತಾರೆ. ತಮ್ಮಲ್ಲಿ ತಾವೇ ದೊಡ್ಡವರೆಂದು ತಿಳಿದುಕೊಂಡ, ಗುರುಹಿರಿಯರಲ್ಲಿ ಅವಿ ನೀತರಾದ, ಧನನಿಮಿತ್ತಕವಾದ ಗರ್ವದರ್ಪಗಳಿಂದ ಪೂರ್ಣರಾದ ಈ ಅಸುರ ಜನರು ದಂಭದಿಂದ ವೇದವಿಧಿಯನ್ನು ಮೀರಿ, (ವಿಷ್ಣುಭಕ್ತ್ಯಾದಿ ಗುಣಗಳಿಂದ ರಹಿತರಾಗಿ), ನಾಮಮಾತ್ರವಾದ ಯಜ್ಞ ಗಳನ್ನು ಮಾಡುತ್ತಾರೆ, ಅಹಂಕಾರ, ಬಲ, ದರ್ಪಗಳಿಂದ ಸಹಿತರಾಗಿ, ಕಾಮಕ್ರೋಧಗಳಿಂದ ಯುಕ್ತರಾಗಿ, ಸ್ವದೇಹದಲ್ಲಿಯೂ, ಪರದೇಹಗಳಲ್ಲಿಯೂ ನಿಯಾಮಕನಾಗಿರುವ ನನ್ನನ್ನು ದ್ವೇಷ ಮಾಡುತ್ತಾರೆ. ( ಜೀವಭಿನ್ನನಾದ ಈಶ್ವರನು ದೇಹಗಳಲ್ಲಿ ನಿಯಾಮಕನಾಗಿರುವದಿಲ್ಲವೆಂದು ಅಪ ಲಾಪ ಮಾಡುತ್ತಾರೆ ). ಮತ್ತು ನಿರ್ದೋಷನಾದ ನನ್ನಲ್ಲಿ ದೋಷವನ್ನು ಆರೋಪಿಸುತ್ತಾರೆ. ( ಇಂಥ ದ್ವೇಷಿಗಳನ್ನು ನಾನು ನರಕದಲ್ಲಿಟ್ಟು, ಅಸುರ ಯೋನಿಗಳಲ್ಲಿ ಪುನಃ ಪುನಃ ಹುಟ್ಟಿಸಿ, ಅವರ ದ್ವೇಷವೃದ್ಧಿಯಾದ ನಂತರ, ಅಂತ್ಯದಲ್ಲಿ ಅವರನ್ನು ಅಂಧಂತಮಸ್ಸೆಂಬ ನಿತ್ಯನರಕದಲ್ಲಿ ಹಾಕುತ್ತೇನೆ ).

**ಅಹಂಕಾರಂ ಬಲಂದರ್ಪಂ ಕಾಮಂಕ್ರೋಧಂಚ ಸಂಶ್ರಿತಾಃ ।**
**ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥**

ಎಂದು ಅಸುರಸ್ವಭಾವಸಂಬಂಧಿಗಳ ಸ್ವಾಭಾವಿಕ ಆಚರಣೆಗಳನ್ನು ವರ್ಣನೆ ಮಾಡಿ,

**ತಾನಹಂದ್ವಿಷತಃ ಕ್ರೂರಾನ್‌ಸಂಸಾರೇಷುನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವಯೋನಿಷು ॥**
**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ ತತೋಯಾಂತ್ಯಧಮಾಂಗತಿಂ॥**
—(16. 7-20.)

ಎಂದು ಫಲವನ್ನು ಹೇಳಿರುತ್ತಾನೆ.

ಅರ್ಥವು— ಅಸುರಸಂಬಂಧಿ ಸ್ವಭಾವವುಳ್ಳವರು ವಿಧಿವಿಹಿತ ವಿಷಯಗಳಲ್ಲಿ ಪ್ರವೃತ್ತಿಯನ್ನೂ ವಿಧಿನಿಷಿದ್ಧಗಳ ಪರಿತ್ಯಾಗವನ್ನೂ ತಿಳಿಯಲಾರರು........ಅವರು " ನಾನೇ ಈಶ್ವರ " ನೆನ್ನುವರು........ಇಂಥ ದ್ವೇಷಿಗಳನ್ನು ನಾನು ಪುನಃ ಪುನಃ ಅಸುರಸಂಬಂಧಿ ಯೋನಿಗಳಲ್ಲಿ ಇಡುತ್ತೇನೆ. ಈ ತಾಮಸ ಸ್ವಭಾವವುಳ್ಳವರು ಜನ್ಮ ಜನ್ಮದಲ್ಲಿಯೂ ಅಸುರಸಂಬಂಧಿ ಯೋನಿಯನ್ನು ಹೊಂದಿ, **ನನ್ನನ್ನು ಸರ್ವಥಾ (ಯಾವ ಕಾಲದಲ್ಲಿಯೂ) ಹೊಂದದೆಯೇ, ಕೊನೆಗೆ** ಅತಿ ನಿಕೃಷ್ಟವಾದ ಸ್ಥಾನವನ್ನು ನಿತ್ಯ ( ನರಕವನ್ನು ) ಹೊಂದುತ್ತಾರೆ.

ಈ ರೀತಿ, ಪುನರಾವೃತ್ತಿ ರಹಿತವಾದ ನಿತ್ಯನರಕಸ್ಥಾನವು ಪ್ರಾಪ್ತವಾಗುವುದೆಂದು ಈ ಶ್ಲೋಕದಿಂದ ತೋರುವ ಫಲವು, ಅಕಸ್ಮಾತ್ ಆಚರಿತವಾದ ಕರ್ಮಕ್ಕೆ ಉಚಿತವಲ್ಲವಾದುದರಿಂದ, ಅಸುರಸಂಬಂಧಿ ಸ್ವಭಾವವುಳ್ಳ, ದುರ್ಗತಿಗೆ ಯೋಗ್ಯರಾದ ಚೇತನರೇ ಬೇರೆ ಇರುತ್ತಾರೆ; ಸದ್ಗತಿಗೆ ಯೋಗ್ಯರಾದ ದೇವಸಂಬಂಧಿ ಸ್ವಭಾವವುಳ್ಳ ಚೇತನರೇ ಬೇರೆ ಇರುತ್ತಾರೆ ಎಂದು ಸಿದ್ಧವಾಗುವುದು. "ಶ್ರದ್ಧಾಮಯೋಽಯಂ ಪುರುಷಃ " " ಶ್ರದ್ಧಾಸಾಸ್ವಭಾವಜಾ " ಇತ್ಯಾದಿ ವಾಕ್ಯಗಳು ಈ ವಿಷಯವನ್ನು ನಿಸ್ಸಂಶಯವಾಗುವಂತೆ ದೃಢೀಕರಿಸುತ್ತವೆ.

**ಪ್ರಶ್ನೆ**— ಸ್ವಾಮೀ ! "ಅಧಮಾಂಗತಿಂ" ಎಂದರೆ ಅತ್ಯಂತ ದುರ್ಗತಿಯನ್ನು ಎಂದು ಅರ್ಥ ಮಾಡದೆ, ನಿತ್ಯನರಕವನ್ನು ಹೊಂದುತ್ತಾರೆ ಎಂದು ಅರ್ಥ ಮಾಡುವುದಕ್ಕೆ ಕಾರಣವೇನು ?

ಶ್ರೀ ಶ್ರೀಗಳವರು— 1. " ಪತಂತಿನರಕೇಽಶುಚೌ " ಎಂದೂ " ಆಸುರೀಷ್ವೇವಯೋನಿಷು " ಎಂದೂ ಸಾಮಾನ್ಯವಾದ ದುಷ್ಫಲವನ್ನು ಶ್ರೀ ಕೃಷ್ಣನು ಹಿಂದೆಯೇ ಹೇಳಿರುವುದರಿಂದ ಇಲ್ಲಿ ಹೇಳಿರುವ ಅದಕ್ಕಿಂತ ಹೆಚ್ಚಾದ ದುರ್ಗತಿಯು

ನಿತ್ಯನರಕವೇ ಆಗಬೇಕು. 2. ಕಿಂಚ “ **ಮಾಮಪ್ರಾಪ್ಯೈವಕೌಂತೇಯ** ” ಎಂಬ ವಾಕ್ಯದಿಂದ ಶ್ರೀ ಕೃಷ್ಣನನ್ನು ಸರ್ವಥಾ ಎಂದರೆ ಅನಾದ್ಯನಂತ ಕಾಲದಲ್ಲಿ ಯಾವಾಗಲೂ. ಹೊಂದದೇ ಇರುವ ಚೇತನರು ಕೆಲವರು ಇರುವರೆಂದು ಸಿದ್ಧ ವಾಗುವುದು. ಎಲ್ಲರೂ ಮುಕ್ತಿಯೋಗ್ಯರಾಗಿದ್ದರೆ, ಯಾವುದಾದರೂ ಒಂದು ದಿನ ಶ್ರೀ ಕೃಷ್ಣನ ಪ್ರಾಪ್ತಿಯು ಆಗದೇ ಹೋಗಲಾರದು. ಆದುದರಿಂದ ಶ್ರೀ ಕೃಷ್ಣನ ಈ ವಾಕ್ಯದಿಂದ **ಸರ್ವಥಾ ಕೃಷ್ಣಪ್ರಾಪ್ತಿರಹಿತರಾದ** ನಿತ್ಯನರಕವನ್ನು ಹೊಂದುವ, ಕೆಲವು ಚೇತನರು ಇರಲೇಬೇಕೆಂದು ಸಿದ್ಧವಾಗುವುದು. ಈ ರೀತಿ ಈ ವಾಕ್ಯಗಳ ಪರ್ಯಾಲೋಚನೆಯಿಂದ ದೇವಸ್ವಭಾವವುಳ್ಳ ಚೇತನರು ಕೆಲವರು, ಅಸುರಸ್ವಭಾವವುಳ್ಳ ಚೇತನರು ಕೆಲವರು ಸರ್ವದಾ ಭಿನ್ನಲಕ್ಷಣಗಳಿಂದಲೇ ಸಹಿತ ರಾಗಿ ಇರುವರೆಂದು ನಿಶ್ಚಿತವಾಗುವುದು.

## 2.

**ಪ್ರಶ್ನೆ**— ಸ್ವಾಮೀ ! ಒಳ್ಳೆಯ ಚೇತನರು ಸದಾ ವಿಧಿವಿಹಿತ ವ್ಯಾಪಾರ ಗಳನ್ನೇ ಮಾಡುತ್ತಿರುವರೆಂದೂ, ದುಷ್ಟ ಚೇತನರು ಸದಾ ದುರಾಚರಣೆಯಲ್ಲಿ ರತ ರಾಗಿರುವರೆಂದೂ ಹೇಳುವುದಾದರೆ, ಅತ್ಯುತ್ತಮ ಚೇತನರಾದ ಅಜಾಮಿಳ ಮಾಧ ವಾದಿಗಳು ವಿಧಿವಿರುದ್ಧವಾದ ಕರ್ಮಗಳನ್ನು ಆಚರಿಸಲು ಕಾರಣವೇನು ?

**ಉತ್ತರ**— ಇದು ಸಮೀಚೀನ ಪ್ರಶ್ನೆಯು. ಕೇಳಿರಿ. ಸಚ್ಚೇತನರು ಸದಾ ಸತ್ಕರ್ಮಗಳನ್ನೇ ಸ್ವಾಭಾವಿಕವಾಗಿ ಆಚರಿಸುತ್ತಾರೆ. ಹಿಮಕ್ಕೆ ಕೈತ್ಯ ನಿವಾರಕತ್ವವು ಹೇಗೆ ಸ್ವಾಭಾವಿಕವೋ, ಸೂಜಿಗಲ್ಲಿಗೆ ಲೋಹವನ್ನು ಆಕರ್ಷಿಸು ವುದು ಹೇಗೆ ಸ್ವಭಾವದಿಂದ ಪ್ರಾಪ್ತವಾದುದೋ, ಚೆಂಡಿಗೆ ಅಪ್ಪಳಿಸಿ ಹೊಡೆ ದರೆ ಮೇಲಕ್ಕೆ ಪುಟಿ ಏಳುವುದು ಹೇಗೆ ಸ್ವಾಭಾವಿಕವೋ, ಹಾಗೆಯೇ ಸುಚೇತ ನರು ಸ್ವಾಭಾವಿಕವಾಗಿ ಸತ್ಕರ್ಮಗಳನ್ನೇ ಆಚರಿಸುತ್ತಾರೆ. ಆದರೆ **ಅಲ್ಪಶಕ್ತ ರಾದ** ಈ ಜೀವರುಗಳಿಗೆ **ಸಂಗವಶಾತ್** ಅಥವಾ **ದುಶ್ಶಾಸ್ತ್ರಾಭ್ಯಾಸದಿಂದ** ದುರ್ಬುದ್ಧಿಯು ಬರುವುದುಂಟು. ಇಂಥ ಸಂದರ್ಭದಲ್ಲಿ, ಒಳ್ಳೆಯ ಜೀವರುಗಳೂ ಕೂಡ ಭ್ರಮಕ್ಕೆ ವಶರಾಗಿ, ದುಷ್ಟಕರ್ಮಗಳನ್ನು ಮಾಡುವರು. ಆದರೆ ದುಸ್ಸಂಗವು ನಿವೃತ್ತವಾಗಿ ಸಜ್ಜನೋಪದೇಶವು ಪ್ರಾಪ್ತವಾದ ಒಡನೆಯೇ ಇವರುಗಳ ಮನೋಮಾಲಿನ್ಯವು ನಾಶವಾಗಿ, ತಮ್ಮ ಸ್ವಭಾವಾನುಗುಣವಾದ ವೃತ್ತಿಜ್ಞಾನ ದಿಂದಲೇ, ಪಶ್ಚಾತ್ತಾಪ ಪೂರ್ವಕವಾಗಿ ಸತ್ಕರ್ಮಗಳನ್ನು ಆಚರಿಸುವರು. ಇದಕ್ಕೆ ವಿರುದ್ಧಕ್ರಮದಲ್ಲಿ ದುರ್ಜನರ ಚರಿತ್ರೆಯನ್ನೂ ಹೀಗೆಯೇ ತಿಳಿಯಬೇಕು. ಸ್ವಾಭಾ ವಿಕ ಗುಣವು ಪ್ರತಿಬದ್ಧವಾದರೆ ಸ್ವಲ್ಪ ದಿವಸಗಳು ಪ್ರಕಾಶಿಸಲಾರದು. ಅಷ್ಟೇ ವಿನಹ ಸಜ್ಜನ ಚೇತನರು ಬಹು ಕಾಲ ದುಷ್ಕರ್ಮವನ್ನು ಆಚರಿಸುವುದೂ,

ದುರ್ಜನ ಚೇತನರು ಬಹುಕಾಲ ವಿಧ್ಯುಕ್ತ ಆಚರಣೆಯನ್ನು ಮಾಡುವುದೂ, ಅಸಂಭಾವಿತವು.

**ಪ್ರಶ್ನೆ**— ಸ್ವಾಮೀ! ಈ ವಿಷಯವನ್ನು ಶ್ರೀ ಕೃಷ್ಣನು ಎಲ್ಲಿ ಹೇಳಿರುತ್ತಾನೆ?

**ಉತ್ತರ**— ಶ್ರೀ ಶ್ರೀಗಳವರು— ಎರಡನೆಯ ಮತ್ತು ಆರನೆಯ ಅಧ್ಯಾಯ ಗಳಲ್ಲಿ ಹೇಳಿರುತ್ತಾನೆ.—

(1) **ಧ್ಯಾಯತೋವಿಷಯಾನ್ಪುಂಸಃ ಸಂಗಸ್ತೇಷೂಪಜಾಯತೇ ।**
**ಸಂಗಾತ್ಸಂಜಾಯತೇಕಾಮಃ ಕಾಮಾತ್ಕ್ರೋಧೋಭಿಜಾಯತೇ ।**
**ಕ್ರೋಧಾದ್ಭವತಿಸಂಮೋಹಃ ಸಂಮೋಹಾತ್ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ॥**
—(2. 62-63.)

ಅರ್ಥವು— ದುಷ್ಟವಾದ ವಿಷಯಗಳನ್ನು ಧ್ಯಾನ ಮಾಡುವ ಚೇತನನಿಗೆ ಅವುಗಳಲ್ಲಿ ಆಸಕ್ತಿಯು ಹುಟ್ಟುವುದು. ಆ ಆಸಕ್ತಿಯಿಂದ ದುರಿಚ್ಛೆಯು ಉತ್ಪನ್ನ ವಾಗುವುದು; ಇಂಥ ಕಾಮವು ಮತ್ತೊಬ್ಬನ ಯತ್ನದಿಂದ ಪ್ರತಿರುದ್ಧವಾದರೆ, ಅವನ ವಿಷಯದಲ್ಲಿ ಉಲ್ಬಣವಾದ ಕ್ರೋಧವು ಉತ್ಪನ್ನವಾಗುವುದು; ಕ್ರೋಧ ದಿಂದ ಅಕಾರ್ಯೇಚ್ಛೆಯು ಪ್ರಾಪ್ತವಾಗುವುದು; ಅಕಾರ್ಯೇಚ್ಛೆಯಿಂದ ವಿಧಿ ನಿಷೇಧಗಳ ಜ್ಞಾನವು ನಷ್ಟವಾಗುವುದು; ಇಂಥ ಸ್ಮೃತಿವಿಭ್ರಮದಿಂದ ಅಕಾರ್ಯ ವನ್ನು ಮಾಡಬಾರದೆಂಬ ಪೂರ್ವದಲ್ಲಿದ್ದ ಯಥಾರ್ಥ ಜ್ಞಾನವು ಸರ್ವಾತ್ಮನಾ ನಾಶ ವಾಗುವುದು. ಯಥಾರ್ಥ ಜ್ಞಾನನಾಶದಿಂದ, ಪ್ರಣಶ್ಯತಿ ಎಂದರೆ ನರಕಾದ್ಯನರ್ಥ ಗಳನ್ನು ಹೊಂದುತ್ತಾನೆ.

ಹೀಗೆ ಒಳ್ಳೆಯ ಚೇತನರಿಗೆ ಅವರ ಸ್ವಭಾವಾನುಗುಣವಾದ, ಯಥಾರ್ಥ ಜ್ಞಾನಸಹಿತವಾದ ಮನಸ್ಸೇ ಇರುವುದು. ಆದರೆ ಪ್ರಬಲವಾದ, ಮೋಹಕವಾದ ವಿಷಯಸನ್ನಿಕರ್ಷದಿಂದಲೂ ದುರ್ಜನ ಸಂಗದಿಂದಲೂ, ಆ ಜ್ಞಾನವು ಸ್ವಲ್ಪ ಕಾಲ ಪ್ರಚಲಿತವಾಗುವುದು. ಸತ್ಸಂಗವು ಪ್ರಾಪ್ತವಾದ ಒಡನೆಯೇ, ಅಥವಾ ಮಾಡಿದ ದುಷ್ಕರ್ಮಗಳಿಗೆ ಶಿಕ್ಷೆಯನ್ನು ಅನುಭವಿಸಿದ ನಂತರ, ಸದ್ಬುದ್ಧಿಯು ಪುನಃ ಬಂದೇ ಬರುವುದು. ದುಷ್ಟ ಚೇತನರಿಗೆ ಪುನಃ ಪುನಃ ಅಸುರಸಂಬಂಧಿ ಕರ್ಮದಲ್ಲಿಯೇ ಆಸಕ್ತಿಯು ವೃದ್ಧಿಯಾಗುತ್ತಿರುವುದೆಂದು, ಶ್ರೀ ಕೃಷ್ಣನು ಹೇಳಿರುವುದನ್ನು ಹಿಂದೆಯೇ ನಿರೂಪಿಸಿರುತ್ತೇವೆ.

ಈ ವಿಷಯವು ಅರ್ಜುನನ ಚರಿತ್ರಪರಾಮರ್ಶೆಯಿಂದಲೇ ತಿಳಿದು ಬರುವುದು. ಭೂಭಾರಹರಣಾರ್ಥವಾಗಿ ಅವತರಿಸಿರುವ ಪರಬ್ರಹ್ಮನಾದ ಶ್ರೀ ಕೃಷ್ಣನ ಸೇವೆ

ಯನ್ನು ಧರ್ಮಯುದ್ಧದಲ್ಲಿ, ದುಷ್ಟ ಕ್ಷತ್ರಿಯರ ಹನನರೂಪವಾದ ಸತ್ಕರ್ಮ ದ್ವಾರಾ ನೆರವೇರಿಸಬೇಕೆಂದು, ಉತ್ಸಾಹಶೀಲನಾದ ಅರ್ಜುನನು ಯುದ್ಧಾರಂಭ ಸಮಯದಲ್ಲಿ ಶತ್ರುಗಳ ನಿಶ್ಚಯವನ್ನು ತಿಳಿಯಬೇಕಾಗಿ, ಉಭಯಸೇನೆಗಳ ಮಧ್ಯ ಪ್ರದೇಶದಲ್ಲಿ ತನ್ನ ರಥವನ್ನು ನಿಲ್ಲಿಸಬೇಕೆಂದು ಸಾರಥಿಯಾದ ಜನಾರ್ದನನನ್ನು ಪ್ರಾರ್ಥಿಸಿದನು :—

(2) **ಸೇನಯೋರುಭಯೋರ್ಮಧ್ಯೇರಥಂಸ್ಥಾಪಯಮೇಽಚ್ಯುತ ।**
**ಯೋತ್ಸ್ಯಮಾನಾನವೇಕ್ಷ್ಯೇಽಹಂಯಏತೇಽತ್ರಸಮಾಗತಾಃ ।**
**ಧಾರ್ತರಾಷ್ಟ್ರಸ್ಯದುರ್ಬುದ್ಧೇರ್ಯುದ್ಧೇಪ್ರಿಯಚಿಕೀರ್ಷವಃ ।**
—(1. 21-23.)

ಎಲೈ ಅಚ್ಯುತನೇ ! ಉಭಯ ಸೇನೆಗಳ ಮಧ್ಯಪ್ರದೇಶದಲ್ಲಿ ನನ್ನ ರಥವನ್ನು ನಿಲ್ಲಿಸು. ದುರ್ಬುದ್ಧಿಯಾದ ಧೃತರಾಷ್ಟ್ರ ಪುತ್ರನಿಗೆ ಹಿತವನ್ನು ಮಾಡಬೇಕೆಂದು ಇಚ್ಛಿಸಿ ಯುದ್ಧಾರ್ಥವಾಗಿ ಇಲ್ಲಿ ಮಿಳಿತರಾದವರನ್ನು ನಾನು ನೋಡುತ್ತೇನೆ.

ಹೀಗೆ ಯುದ್ಧಾರಂಭದಲ್ಲಿ ಪಾರ್ಥನಿಗೆ ಆತನ ಸ್ವಭಾವಾನುಗುಣವಾದ, ದುರ್ಯೋಧನನೂ ಅವನ ಅನುಯಾಯಿಗಳೂ ಹನನಯೋಗ್ಯರೆಂಬ ಯಥಾರ್ಥ ವಾದ ಜ್ಞಾನವೇ ಇದ್ದಿತು. ಆದರೆ **ಬಂಧುದರ್ಶನ**ದಿಂದಲೂ ಅವರ ಸಂಗಡ ಆಚರಿಸಿದ ಸಲ್ಲಾಪಾದಿ ಸ್ಮೃತಿಯಿಂದಲೂ ಸಹ ಅವನ ಜ್ಞಾನವು ಚಲಿಸಿತು. ಹಾಗಾದರೂ ಶ್ರೀ ಕೃಷ್ಣನ ಉಪದೇಶದಿಂದ ಸ್ವಲ್ಪ ಕಾಲದಲ್ಲಿಯೇ ಆ ದುರ್ಬು ದ್ಧಿಯು ನಿವೃತ್ತವಾಗಿ, ಪುನಃ ಯುದ್ಧಸನ್ನದ್ಧನಾದನು. ಅರ್ಜುನನು ಹೇಳು ತ್ತಾನೆ :—

(3) **ನಷ್ಟೋಮೋಹಃ ಸ್ಮೃತಿರ್ಲಬ್ಧಾತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಽಸ್ಮಿಗತಸಂದೇಹಃ ಕರಿಷ್ಯೇವಚನಂತವ ॥** —(18. 73.)

ಎಲೈ ಅಚ್ಯುತನೇ ! ನನಗೆ ಪೂರ್ವದಲ್ಲಿದ್ದ ವಿಪರೀತ ಜ್ಞಾನವು ನಷ್ಟ ವಾಯಿತು. ನಿನ್ನ ಪ್ರಸಾದದಿಂದ ನನಗೆ ನನ್ನ ಪೂರ್ವಜ್ಞಾನವು ಪ್ರಾಪ್ತವಾಯಿತು. ನನ್ನ ಸಂದೇಹಗಳು ಪರಿಹೃತವಾದುವು. ನಾನು ನಿನ್ನ ಅಪ್ಪಣೆಯನ್ನು ನಡೆ ಯಿಸುತ್ತೇನೆ.

ಒಳ್ಳೆಯ ಚೇತನನಾದುದರಿಂದಲೇ ಅರ್ಜುನನಿಗೆ ಪ್ರಾಪ್ತವಾದ ದುರ್ಬುದ್ಧಿಯು ಸ್ವಲ್ಪ ಉಪದೇಶದಿಂದ ನಿವೃತ್ತವಾಯಿತು. ದುಷ್ಟ ಚೇತನನಾದುದರಿಂದಲೇ ಪಾಂಡವ ದ್ವೇಷರೂಪವಾದ ದುರ್ಬುದ್ಧಿಯು ಭೀಷ್ಮ, ದ್ರೋಣ, ಪರಶುರಾಮ ದೇವರ, ನಾರದರೇ ಮೊದಲಾದ ಋಷಿಗಳ, ವಿದುರ, ಧೃತರಾಷ್ಟ್ರ, ಗಾಂಧಾರಿ, ಮತ್ತು ಶ್ರೀ ಕೃಷ್ಣನ ಪುನಃ ಪುನಃ ಮಾಡಿದ ಉಪದೇಶದಿಂದಲೂ ಚಲಿಸದೆ

ದುರ್ಯೋಧನನು ಕೊನೆಗೆ ನಾಶವನ್ನೇ ಹೊಂದಿದನು. ಸಜ್ಜನರು ಯಾವಾಗಲೂ ಸತ್ಕರ್ಮ ಮಾಡುವವರೆಂಬ ಸಾಮಾನ್ಯ ನ್ಯಾಯವು ಇರುವುದರಿಂದಲೇ, ಅರ್ಜುನನ "ನನಗೆ ಇಂಥ ದುರ್ಬುದ್ಧಿಯು ಪ್ರಾಪ್ತವಾಯಿತಲ್ಲಾ ! ನಾನು ಮುಕ್ತಿಯೋಗ್ಯ ಚೇತನನೋ ಅಲ್ಲವೋ ?" ಎಂಬ ಶಂಕೆಯನ್ನು ಶ್ರೀ ಕೃಷ್ಣನು ತನ್ನ ಮಧುರವಾದ ವಾಗಮೃತದಿಂದ ಪರಿಹರಿಸಿರುತ್ತಾನೆ.

(4) **ಮಾಶುಚಃ ಸಂಪದಂದೈವೀಮಭಿಜಾತೋಸಿ ಪಾಂಡವ ।**
—(16. 5.)

ಎಲೈ ಅರ್ಜುನನೇ ! ನೀನು ಶೋಕವನ್ನು ಹೊಂದಬೇಡ. ನೀನು ದೇವ ಸಂಬಂಧಿಯಾದ ಎಂದರೆ ಮುಕ್ತಿಯೋಗ್ಯವಾದ ಸ್ವಭಾವವನ್ನು ಹೊಂದಿದವನು.

ಆರನೆಯ ಅಧ್ಯಾಯದಲ್ಲಿಯೂ ಕೂಡ ಶ್ರೀ ಕೃಷ್ಣನು, ದುರ್ವಿಷಯ ಸ್ನೇಹ ವಶನಾಗಿ, ಸನ್ಮಾರ್ಗದಿಂದ ಚಲಿತನಾದ, ಒಳ್ಳೆಯ ಚೇತನನು ಪುನಃ ಉತ್ತಮರಾದ ಯೋಗಿಗಳ ಕುಲದಲ್ಲಿ ಹುಟ್ಟಿ, ಅವರ ಸಂಗಪ್ರಭಾವದಿಂದ ತನ್ನ ಪೂರ್ವ ಜ್ಞಾನವನ್ನು ಪಡೆದು, ಊರ್ಜಿತವಾದ ಸತ್ಕರ್ಮದಲ್ಲಿಯೇ ಆಸಕ್ತನಾಗುವನೆಂದು ಹೇಳುತ್ತಾನೆ :—

(5) **ಅಥವಾಯೋಗಿನಾಮೇವಕುಲೇಭವತಿಧೀಮತಾಂ ।**
**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಂ ।**
**ಯತತೇಚತತೋಭೂಯಃ ಸಂಸಿದ್ಧೌ ಕುರುನಂದನ ।**
—(6. 42–43.)

ಭಗವತ್ಸಂಬಂಧಿ ಯೋಗಾನುಷ್ಠಾನದಿಂದ ಚ್ಯುತನಾದ, ಒಳ್ಳೆಯ ಚೇತನನು ಜನ್ಮಾಂತರದಲ್ಲಿ ಜ್ಞಾನಿಗಳಾದ ಯೋಗಿಗಳ ವಂಶದಲ್ಲಿ ಅವತರಿಸುವನು. ಅಲ್ಲಿ ( ಅಂಥ ಜ್ಞಾನಿಸಂಗ ಪ್ರಭಾವದಿಂದ ) ತನ್ನ ಪೂರ್ವ ಜನ್ಮದಲ್ಲಿ ಭ್ರಷ್ಟನಾಗುವುದಕ್ಕೆ ಮೊದಲು ಇದ್ದಂಥ ಜ್ಞಾನವನ್ನು ಪುನಃ ಸಂಪಾದಿಸುತ್ತಾನೆ. ತದನಂತರ, ಆ ಪೂರ್ವಜನ್ಮದಲ್ಲಿದ್ದ ಜ್ಞಾನಕ್ಕಿಂತಲೂ ಅಧಿಕವಾಗಿ ಜ್ಞಾನ ಸಂಪೂರ್ತಿಯನ್ನು ಹೊಂದುವುದಕ್ಕೆ ಪ್ರಯತ್ನ ಮಾಡುತ್ತಾನೆ. ಹೀಗೆ ಯೋಗೋಪಾಯದಿಂದ ಚಲಿತವಾದ ಜ್ಞಾನವುಳ್ಳ ಸಜ್ಜನನಿಗೆ ಅದೇ ಜನ್ಮದಲ್ಲಿ, ಅಥವಾ ಜನ್ಮಾಂತರದಲ್ಲಿ ಭಗವತ್ಸಂಬಂಧಿ ತತ್ವಜ್ಞಾನವು ಪ್ರಾಪ್ತವಾಗಿ, ಬ್ರಹ್ಮದರ್ಶನವು ಆಗುವುದು ನಿಶ್ಚಯವು.

ಅಸುರಸ್ವಭಾವವನ್ನು ಹೊಂದಿದವರಾದರೋ,

(6) **ಮಾಮಪ್ರಾಪ್ಯೈವಕೌಂತೇಯ ತತೋಯಾಂತ್ಯಧಮಾಂಗತಿಂ ।**

ನನ್ನನ್ನು (ಶ್ರೀ ಕೃಷ್ಣನನ್ನು ) ಯಾವ ಕಾಲದಲ್ಲೂ ಹೊಂದದೆ, ಅಂತ್ಯದಲ್ಲಿ ( ಅಂಧಂತಮಸ್ಸೆಂದು ಪ್ರಸಿದ್ಧವಾದ ) ನಿತ್ಯವಾದ ನೀಚ ಸ್ಥಾನವನ್ನು ಹೊಂದುತ್ತಾರೆ.

ಈ ರೀತಿಯಾಗಿ ಕೆಲವರು "ನೀಚ" ಚೇತನರೂ, ಕೆಲವರು " ಉಚ್ಚ " ಚೇತನರೂ ಇರುವರೆಂದು ಶ್ರೀ ಕೃಷ್ಣನ ವಾಕ್ಯಗಳಿಂದ ನಿಶ್ಚಿತವಾಯಿತು.

## 3.

ಈ ಉಭಯ ಸ್ವಭಾವವುಳ್ಳ " ನೀಚೋಚ್ಚ " ಚೇತನರೂ ಕೆಲವರು ಇರುವರೆಂದೂ ಸಹ ನವಮಾಧ್ಯಾಯದಲ್ಲಿ ಶ್ರೀ ಕೃಷ್ಣನು ನಿರೂಪಿಸಿರುತ್ತಾನೆ :—

**(1) ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।**
**ತೇಪುಣ್ಯಮಾಸಾದ್ಯಸುರೇಂದ್ರಲೋಕಮಶ್ನಂತಿದಿವ್ಯಾನ್‌ದಿವಿ ದೇವಭೋಗಾನ್ ॥**
**ತೇತಂಭುಕ್ತ್ವಾಸ್ವರ್ಗಲೋಕಂವಿಶಾಲಂ ಕ್ಷೀಣೇಪುಣ್ಯೇಮರ್ತ್ಯ ಲೋಕಂವಿಶಂತಿ ।**
**ಏವಂತ್ರಯೀಧರ್ಮ ಮನುಪ್ರಪನ್ನಾಗತಾಗತಂ ಕಾಮಕಾಮಾ ಲಭಂತೇ ।** —(9. 20-21.)

ಅರ್ಥವು:— ತ್ರೈವಿದ್ಯರು ಎಂದರೆ ವೇದದಲ್ಲಿ ಅಪಾತತಃ ಪ್ರತೀಯಮಾನವಾದ ಸ್ವರ್ಗಾದ್ಯುದ್ದೇಶಕವಾದ ಕಾಮ್ಯಕರ್ಮದಲ್ಲಿ ಆಸಕ್ತರಾದವರು ( ನಿತ್ಯ ಸಂಸಾರಿಗಳು ) ನನ್ನನ್ನು ಯಜ್ಞಗಳಿಂದ ಆರಾಧಿಸಿ, ಯಜ್ಞದಲ್ಲಿ ಹುತಶೇಷವಾದ ಸೋಮರಸವನ್ನು ಪಾನ ಮಾಡುವುದರಿಂದ ನಷ್ಟವಾದ ಪಾಪವುಳ್ಳವರಾಗಿ, ಸ್ವರ್ಗ ಲೋಕವನ್ನು ಇಚ್ಛಿಸಿ ನನ್ನನ್ನು ಪ್ರಾರ್ಥಿಸುತ್ತಾರೆ. ಅವರು ಪುಣ್ಯಲಭ್ಯವಾದ ಸ್ವರ್ಗ ಲೋಕವನ್ನು ಹೊಂದಿ, ಅಲ್ಲಿ ಅಲೌಕಿಕವಾದ ಭೋಗಗಳನ್ನು ಅನುಭವಿಸುತ್ತಾರೆ. ಅವರು ಅಲ್ಲಿ ವಿಪುಲವಾದ ಸ್ವರ್ಗಸುಖವನ್ನು ಅನುಭವಿಸಿ, ತಾವು ಸಂಪಾದಿಸಿದ ಪುಣ್ಯದ ಕ್ಷಯವು ಆದ ನಂತರ ಪುನಃ ಭೂಲೋಕಕ್ಕೆ ಬರುತ್ತಾರೆ. ಹೀಗೆಯೇ ಪುನಃ ಪುನಃ ವೇದದ ಆಪಾತತಃ ತೋರುವ ಸ್ವರ್ಗಾದ್ಯುದ್ದೇಶಕ ಕಾಮ್ಯ ಕರ್ಮಗಳನ್ನು ಆಚರಿಸುವವರು ನಾನಾ ವಿಧವಾದ ಭೋಗೇಚ್ಛುಗಳಾಗಿ ಗತಾಗತಂ ಲಭಂತೇ— ಎಂದರೆ ಸ್ವರ್ಗಕ್ಕೆ ಹೋಗುವುದು, ಪುನಃ ಭೂಲೋಕಕ್ಕೆ ಬರುವುದು, ಹೀಗೆ ಮರಳಿ ಮರಳಿ ಪುನರಾವೃತ್ತಿಯನ್ನು ಹೊಂದುತ್ತಲೇ ಇರುವರು.

ಈ ಶ್ಲೋಕದಲ್ಲಿ ಶ್ರೀ ಕೃಷ್ಣನು ವರ್ಣಿಸುವ ಜನರು ನಿಷಿದ್ಧ ಕಾಮವುಳ್ಳವರಲ್ಲವಾದುದರಿಂದ, ತಮೋಯೋಗ್ಯರಲ್ಲವೆಂದೂ, ನಿಷ್ಕಾಮ ಆರಾಧನೆಯಲ್ಲಿ ಆಸಕ್ತರಲ್ಲವಾದುದರಿಂದ ಮುಕ್ತಿಯೋಗ್ಯರಲ್ಲವೆಂದೂ ನಿಶ್ಚಿತವಾಗುವುದು. ಪರಿಶೇಷ

ದಿಂದ ಇದು ಸರ್ವದಾ ಕಾಮ್ಯಕರ್ಮಗಳಲ್ಲಿ ರತರಾದ ನಿತ್ಯ ಸಂಸಾರಿಗಳ ಪರವೆಂದು ತಿಳಿಯಬೇಕು.*

**ಪ್ರಶ್ನೆ**— ಸ್ವಾಮೀ ! ಮುಕ್ತಿಯೋಗ್ಯರೂ ಪದೇ ಪದೇ ಸಂಗದೋಷದಿಂದ ಕಾಮ್ಯಕರ್ಮಗಳಲ್ಲಿ ಆಸಕರಾಗುತ್ತಿರುವುದು ಪ್ರಮಿತವಾಗಿರುವುದರಿಂದ ಇದು ನಿತ್ಯ ಸಂಸಾರಿಗಳ ಪರವೆಂದು ಹೇಗೆ ನಿರ್ಣಯಿಸುವುದು ?

**ಉತ್ತರ**— ಈ ಶ್ಲೋಕದ ಮುಖ್ಯಾರ್ಥವಾದ **ನಿರಂತರ ಕಾಮ್ಯಕರ್ಮ ರತಿಯು** ನಿತ್ಯ ಸಂಸಾರಿಗಳಿಗೇ ಕೂಡುವುದು. ಮುಕ್ತಿಯೋಗ್ಯರಿಗೆ ಕೂಡುವುದಿಲ್ಲ. ದ್ವಿತೀಯಾಧ್ಯಾಯದಲ್ಲಿಯೂ ಕೂಡ ಇಂಥ ಜನರನ್ನು ಶ್ರೀ ಕೃಷ್ಣನು ವರ್ಣಿಸಿರುತ್ತಾನೆ.—

(2) **ಯಾಮಿಮಾಂಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿವಾದಿನಃ ।**
**ಕಾಮಾತ್ಮಾನಃ ಸ್ವರ್ಗಪರಾಜನ್ಮಕರ್ಮಫಲಪ್ರದಾಂ ।**
**ಕ್ರಿಯಾವಿಶೇಷ ಬಹುಲಾಂ ಭೋಗೈಶ್ವರ್ಯಗತಿಂಪ್ರತಿ ।**
**ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಂ ।**
**ವ್ಯವಸಾಯಾತ್ಮಿಕಾಬುದ್ಧಿಃ ಸಮಾಧೌನವಿಧೀಯತೇ ॥**
—(2. 42-44.)

ಅರ್ಥವು:— ಎಲೈ ಪಾರ್ಥನೇ ! ಅಜ್ಞರಾದ, ವೇದದಲ್ಲಿ ಆಪಾತತಃ ಪ್ರತೀತವಾದ ಅರ್ಥದಲ್ಲೇ ಆಸಕ್ತರಾದ, ಯಾವತ್ತು ವೇದಗಳು ಪುಷ್ಪಸದೃಶವಾದ ಅಲ್ಪ ಅಸ್ಥಿರ ಸುಖವುಳ್ಳ ಸ್ವರ್ಗಾದಿ ಫಲಕವಾದ ಪುನರ್ಜನ್ಮಾದಿಗಳಿಗೆ ಕಾರಣವಾದ ಕರ್ಮಾದಿಗಳನ್ನು ಪ್ರತಿಪಾದಿಸುವುವೆಂದು ಹೇಳುವ, ಸ್ವರ್ಗಾದಿ ಲೌಕಿಕ ಸುಖಕ್ಕಿಂತ ಭಿನ್ನವಾದ ಮೋಕ್ಷಸುಖವು ಇಲ್ಲವೆಂದು ಹೇಳುವ, **ಕಾಮಾತ್ಮಾನಃ** = ಕಾಮ್ಯಫಲದಲ್ಲಿಯೇ ಇಡಲ್ಪಟ್ಟ ಮನಸ್ಸುಳ್ಳ, ಸ್ವರ್ಗವೇ ಪರಮಪುರುಷಾರ್ಥವೆಂದು ಹೇಳುವ ಜನರು, ವೇದವು ಭೋಗ ಮತ್ತು ಐಶ್ವರ್ಯಪ್ರಾಪ್ತಿಗೆ ಕಾರಣವಾದ ಕ್ರಿಯಾವಿಶೇಷಗಳಿಂದ ಪೂರ್ಣವಾಗಿರುವುದೆಂದು ಹೇಳುತ್ತಾರೆ. ಇಂಥ ವೇದದ ಆಪಾತಾರ್ಥದಿಂದಲೇ ಮೋಹಿತವಾದ ಚಿತ್ತವುಳ್ಳ ಜನರಿಗೆ, ಮನಃ ಸಮಾಧಾನಕ್ಕೆ ಬೇಕಾದ, ಪ್ರಮಾಣಗಳಿಂದ ನಿರ್ಣೀತವಾದ ನಿಶ್ಚಯಾತ್ಮಕಜ್ಞಾನವು ಹುಟ್ಟುವುದಿಲ್ಲ.

---

* ಸ್ವರ್ಗಪ್ರಚುರರು, ನಿರಯಪ್ರಚುರರು, ಭೂಪ್ರಚುರರು ಎಂದು ನಿತ್ಯಸಂಸಾರಿಗಳು ತ್ರಿವಿಧರಾಗಿರುವರು. ಈ ಶ್ಲೋಕದಲ್ಲಿ ಶ್ರೀ ಕೃಷ್ಣನು ಹೇಳಿರುವ ನಿತ್ಯಸಂಸಾರಿಗಳು ಸ್ವರ್ಗಪ್ರಚುರರೆಂದು ತಿಳಿಯಬೇಕು.

ಈ ಶ್ಲೋಕಗಳಲ್ಲಿ ವರ್ಣಿಸಿರುವ **ಕಾಮಾತ್ಮರು** ಎಂದರೆ ಕಾಮ್ಯಕರ್ಮ ರತರು ಅಥವಾ ಲೌಕಿಕಭೋಗೇಚ್ಛೆಯೇ ಸ್ವರೂಪವಾಗಿ ಉಳ್ಳವರು ನಿತ್ಯ ಸಂಸಾರಿಗಳೆಂದು ಶಾಸ್ತ್ರದಲ್ಲಿ ವ್ಯವಹರಿಸಲ್ಪಡುವರು.

ವಾಸುದೇವನೇ ಸರ್ವಾಂತರ್ಯಾಮಿಯೆಂದು ತಿಳಿಯದೆ, ಅನ್ಯ ದೇವತೆಗಳನ್ನು ಫಲಪ್ರದರೆಂದು ತಿಳಿದು ಭಜಿಸುವ ಕೆಲವು ಜನರನ್ನು ಶ್ರೀ ಕೃಷ್ಣನು ಏಳನೆಯ ಅಧ್ಯಾಯದಲ್ಲಿ ವರ್ಣಿಸಿರುತ್ತಾನೆ.

(3) **ಕಾಮೈಸ್ತೈ ಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯ ದೇವತಾಃ ।**
**ತಂತಂನಿಯಮಮಾಸ್ಥಾಯ ಪ್ರಕೃತ್ಯಾನಿಯತಾಃಸ್ವಯಾ ।**
**ಲಭತೇಚತತಃಕಾಮಾರ್ನ್ ಮಯ್ಯೈವವಿಹಿತಾರ್ನ್ಹಿತಾರ್ನ್ ।**
**ಅಂತವತ್ತುಫಲಂತೇಷಾಂ ತದ್ಭವತ್ಯಲ್ಪಮೇಧಸಾಂ ।**
**ದೇವಾರ್ನ್ದೇವಯಜೋಯಾಂತಿ ಮದ್ಭಕ್ತಾಯಾಂತಿ**
**ಮಾಮಪಿ** ॥ —(7. 20-24.)

ಈ ಶ್ಲೋಕಾರ್ಥವು ಪೂರ್ವದಲ್ಲೇ ನಿರೂಪಿತವಾಗಿದೆ. ಈ ಶ್ಲೋಕೋಕ್ತ ರೀತಿಯಲ್ಲಿ ಪೂಜೆ ಮಾಡುವವರು ಕಾಮ್ಯಕರ್ಮಿಗಳಾದ ತ್ರೈವಿದ್ಯರೇ ಆಗುವರು. ಆದರೆ ಕೆಲವು ವೇಳೆ ಮೂಢ ಜನರ ಸಂಗದಿಂದ ಸಾತ್ವಿಕರಾದ ಮೋಕ್ಷಯೋಗ್ಯರೂ ಸಹ ಇಂಥ ಪೂಜೆಗಳನ್ನು ಮಾಡುವುದುಂಟು. ಆದುದರಿಂದಲೇ

(4) **ದೇವಾರ್ನ್ದೇವಯಜೋಯಾಂತಿ ಮದ್ಭಕ್ತಾಯಾಂತಿಮಾಮಪಿ ।**
—(7. 23.)

ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ.

ಇದರ ಅರ್ಥವು :— ದೇವತೆಗಳನ್ನು ಮಾತ್ರ ವಿಧ್ಯುಕ್ತರೀತಿಯಲ್ಲಿ ಆರಾಧಿಸುವವರು ದೇವತೆಗಳ ಲೋಕವನ್ನು ( ಸ್ವಲ್ಪ ಕಾಲ ) ಹೊಂದುತ್ತಾರೆ. ನನ್ನ ( ವಿಷ್ಣುವಿನಲ್ಲಿ ) ಭಕ್ತರಾಗಿ ದೇವತೆಗಳನ್ನು ವಿಧ್ಯುಕ್ತ ರೀತಿಯಲ್ಲಿ ಉಪಾಸನೆ ಮಾಡುವವರು ನನ್ನನ್ನೂ ಹೊಂದುತ್ತಾರೆ.

ಹೀಗೆ ಹೇಳಿರುವುದರಿಂದ, ವಿಷ್ಣುಭಕ್ತಿರಹಿತರಾದ ಈ ದೇವಯಾಜಿಗಳು ನಿತ್ಯ ಸಂಸಾರಿಗಳೆಂದು ನಿಶ್ಚಿತವಾಗುವುದು.* "ದೇವಾರ್ನ್ಯಾಂತಿ" ಎಂದು ದೇವತೆ

---

*ಉತ್ತಮ ದೇವತೆಗಳ ಆರಾಧನೆಯನ್ನು ಹೇಳಿರುವುದರಿಂದಲೂ "ತಂತಂನಿಯಮಾಸ್ಥಾಯ" ಎಂದು ವಿಧ್ಯುಕ್ತ ಪೂಜೆಯನ್ನು ಮಾಡುವವರೆಂದು ಹೇಳಿರುವುದರಿಂದಲೂ, ದೇವತೆಗಳ ಲೋಕ ಪ್ರಾಪ್ತಿರೂಪ ಫಲಕಥನದಿಂದಲೂ, ಈ ನಿತ್ಯಸಂಸಾರಿಗಳೂ ಸ್ವರ್ಗಪ್ರಚುರರೆಂದೇ ತೋರುವುದು. **"ಯಕ್ಷರಕ್ಷಾಂಸಿರಾಜಸಾಃ"** —(17. 4.) ಎಂಬ ಶ್ಲೋಕದಲ್ಲಿ **ರಾಜಸರು** ಯಕ್ಷ ರಾಕ್ಷಸರನ್ನು ಪೂಜಿಸುವರೆಂದು ಹೇಳಿರುತ್ತದೆ. ನಿತ್ಯಸಂಸಾರಿಗಳು ನಿರಯಪ್ರಚುರರೆಂದು ನಿಶ್ಚಯಿಸಬಹುದು.

ಗಳ ಲೋಕವ್ಯಾಪ್ತಿಯು ಹೇಳಿರುವುದರಿಂದ ಇವರು ತಮೋಯೋಗ್ಯರಲ್ಲ. ಅನ್ಯ ದೇವತಾಪೂಜೆಯನ್ನು ಮಾಡಿದರೂ ಶ್ರೀ ಕೃಷ್ಣನಲ್ಲಿ ಭಕ್ತಿ ಮಾಡಿದವರಿಗೆ ಆಯಾಯ ದೇವತೆಗಳ ಪ್ರಸಾದದ್ವಾರಾ ಪರಮಾತ್ಮನ ಪ್ರಾಪ್ತಿಯೂ ಆಗುವುದು; ಅದು ಸಂಗವಶಾತ್ ಕಾಮಿಗಳಾದ ಮುಕ್ತಿಯೋಗ್ಯರ ಚರಿತ್ರೆಯು. ಈ ಕೊನೆಯ ಶ್ಲೋಕದಲ್ಲಿ ಶ್ರೀ ಕೃಷ್ಣನು ಉಭಯರಿಗೂ ಆಗುವ ಫಲವನ್ನು ಪ್ರತ್ಯೇಕವಾಗಿ ನಿರೂಪಿಸಿರುತ್ತಾನೆ.

ಈ ರೀತಿಯಾಗಿ ಭಿನ್ನ ಭಿನ್ನ ಲಕ್ಷಣಗಳಿಂದ ಸಹಿತರಾದ ತ್ರಿವಿಧಜೀವರು ಇರುವರೆಂದು ಶ್ರೀ ಕೃಷ್ಣನ ವಾಕ್ಯಗಳಿಂದ ಸಿದ್ಧವಾಗುವುದು. ಇವರೆಲ್ಲರೂ ತಮ್ಮ ಸ್ವರೂಪಾನುಗುಣವಾದ ಮನೋವೃತ್ತಿಯಿಂದ ಸಹಿತರಾಗಿ **ಪ್ರಕೃತ್ಯಾ ನಿಯತಾಃ ಸ್ವಯಾ** ಎಂದು ಹೇಳಿರುವುದರಿಂದ, ಪ್ರಾಯೇಣ ಸ್ವರೂಪಾನುಗುಣವಾದ ಕರ್ಮಗಳನ್ನೇ ಆಚರಿಸುತ್ತಾ ಸಂಸಾರದಲ್ಲಿ ನಮಗೆಲ್ಲರಿಗೂ ಅನುಭವಕ್ಕೆ ಬರುವಂತೆ ಪರಿದೃಶ್ಯಮಾನರಾಗಿರುವರು. **ಪ್ರಾಯೇಣ ಸಾತ್ವಿಕ ಗುಣವು ಮುಕ್ತಿಯೋಗ್ಯರಿಗೂ, ಪ್ರಾಯೇಣ ರಾಜಸವೃತ್ತಿಯು ನಿತ್ಯಸಂಸಾರಿಗಳಿಗೂ, ಪ್ರಾಯೇಣ ತಾಮಸವೃತ್ತಿಯು ದುರ್ಯೋಧನಾದಿ ದೈತ್ಯರಿಗೂ ಪ್ರಾಪ್ತವಾಗಿರುವುದು.** ಈ ಯಾವತ್ತು ಜೀವರಾಶಿಗಳೂ ಈ ರೀತಿಯಾಗಿ ತಮ್ಮ ಸ್ವಭಾವದಿಂದಲೂ, ಪ್ರಾಯೇಣ ಸ್ವಭಾವಾನುಸಾರಿಯಾದ ಪೂರ್ವಸಂಸ್ಕಾರದಿಂದಲೂ ಪ್ರೇರಿತರಾಗಿ, ಸ್ವಯೋಗ್ಯವಾದ ಕರ್ಮಾದ್ಯನುಷ್ಠಾನಗಳಲ್ಲಿ ಆಸಕ್ತರಾಗಿರುವರು. " ಪ್ರಕೃತ್ಯಾ ನಿಯತಾಃ ಸ್ವಯಾ" ಎಂದರೆ ತಮ್ಮ ತಮ್ಮ ಸ್ವರೂಪಸ್ವಭಾವದಿಂದಲೂ ಮತ್ತು ಪೂರ್ವ ಸಂಸ್ಕಾರದಿಂದಲೂ ಪ್ರೇರಿತರಾಗಿ ದೇವತೆಗಳನ್ನು ಆರಾಧಿಸುತ್ತಾರೆ ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ. ತೃತೀಯಾಧ್ಯಾಯದ ಶ್ರೀ ಕೃಷ್ಣನ ವಾಕ್ಯವು ಬಹು ಸ್ಪಷ್ಟವಾಗಿದೆ. ಶ್ರೀ ಕೃಷ್ಣನು ಹೇಳುತ್ತಾನೆ :—

(2) **ಸದೃಶಂ ಚೇಷ್ಟತೇಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂಯಾಂತಿಭೂತಾನಿ ನಿಗ್ರಹಃ ಕಿಂಕರಿಷ್ಯತಿ ॥**—(3. 33.)

ಅರ್ಥವು :— ತತ್ತ್ವೋಪದೇಶದಿಂದ ಉತ್ಪನ್ನವಾದ ಜ್ಞಾನವುಳ್ಳವನಾದರೂ ಸ್ವಭಾವಾನುಗುಣವಾಗಿಯೇ ಜೀವನು ಕರ್ಮ ಮಾಡುತ್ತಾನೆ. ( ಉಪದೇಶಜನ್ಯ ಜ್ಞಾನಾನುಗುಣವಾಗಿ ಕರ್ಮವನ್ನು ಮಾಡುವುದಿಲ್ಲ. ಆದುದರಿಂದ ಸ್ವರೂಪತಃ ದುರ್ಜನರಾದವರಲ್ಲಿ ಉಪದೇಶವು ವ್ಯರ್ಥವು ಎಂದು ಭಾವವು ). ಸರ್ವ ಪ್ರಾಣಿಗಳೂ ಸ್ವಭಾವವನ್ನೇ ಅನುಸರಿಸಿ ಕರ್ಮಗಳನ್ನು ಮಾಡುತ್ತಾರೆ. ಮನೋನಿಗ್ರಹವು ಆ ವಿಷಯದಲ್ಲಿ ಏನೂ ಮಾಡಲಾರದು.

ಇಷ್ಟು ಉಪನ್ಯಾಸದಿಂದ ಪ್ರಯತ್ನಾದಿಗಳಿಂದ ಸಂಪಾದಿತವಲ್ಲದ, ವಿವಿಧವಾದ ಆಚರಣೆಗಳಿಗೆ ಮೂಲ ಕಾರಣವಾದ ಜೀವ ಸ್ವಭಾವವೂ ಮೂರು ಪ್ರಕಾರವಾಗಿ ನಿತ್ಯವಾಗಿರುವುದೆಂದು ಸಿದ್ಧವಾಗುವುದು.

## 4.

ಸಾತ್ವಿಕಾದಿ ಸ್ವಭಾವಾನುಸಾರಿಯಾದ ಆಚರಣೆಗಳನ್ನು ಶ್ರೀ ಕೃಷ್ಣನು ಹದಿನಾರನೆಯ ಅಧ್ಯಾಯದಲ್ಲಿ ನಿರೂಪಿಸಿರುತ್ತಾನೆ. ಹದಿನೇಳನೆಯ ಮತ್ತು ಹದಿನೆಂಟನೆಯ ಅಧ್ಯಾಯಗಳಲ್ಲಿ ಇವುಗಳನ್ನು ವಿಸ್ತರಿಸುತ್ತಾನೆ :—

(1) **ಯಜಂತೇಸಾತ್ವಿಕಾದೇವಾನ್ ಯಕ್ಷರಕ್ಷಾಂಸಿರಾಜಸಾಃ ।**
**ಪ್ರೇತಾನ್ ಭೂತಗಣಾಂಶ್ಚಾನ್ಯೇಯಜಂತೇತಾಮಸಾಜನಾಃ ॥**
—(17. 4.)

ಸಾತ್ವಿಕರು (ಮುಕ್ತಿಯೋಗ್ಯರು) ವಿಷ್ಣುವನ್ನು ಉದ್ದೇಶ ಮಾಡಿ, ದೇವತೆಗಳನ್ನು ಯಜ್ಞದಲ್ಲಿ ಆರಾಧಿಸುತ್ತಾರೆ. ರಾಜಸರು ( ನಿತ್ಯಸಂಸಾರಿಗಳು ) ಯಕ್ಷ ರಾಕ್ಷಸರನ್ನು ಆರಾಧಿಸುತ್ತಾರೆ. ಪಿಶಾಚಗಳನ್ನೂ ಮತ್ತು ಭೂತಗಣಗಳನ್ನೂ ತಾಮಸರು (ತಮೋಯೋಗ್ಯರು) ಯಜ್ಞದಲ್ಲಿ ಆರಾಧಿಸುತ್ತಾರೆ.*

ಆಸುರಸಂಬಂಧಿ ಸ್ವಭಾವವುಳ್ಳವರ ಲಕ್ಷಣಗಳನ್ನು ಶ್ರೀ ಕೃಷ್ಣನು ಸ್ಪಷ್ಟವಾಗಿ ವರ್ಣಿಸುತ್ತಾನೆ :—

(2) **ಅಶಾಸ್ತ್ರ ವಿಹಿತಂ ಘೋರಂ ತಪ್ಯಂತೇಯೇ ತಪೋಜನಾಃ ।**
**ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥**
**ಕರ್ಶಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ ।**
**ಮಾಂಚೈವಾಂತಃ ಶರೀರಸ್ಥಂತಾನ್ ವಿದ್ಧ್ಯಾಸುರನಿಶ್ಚಯಾನ್ ॥**
—(17. 5-6.)

ಯಾವ ಜನರು ವೇದಾದಿ ಶಾಸ್ತ್ರಗಳಿಗೆ ವಿರುದ್ಧವಾದ ಮತ್ತು ದುರಾಗಮಗಳಿಂದ ವಿಹಿತವಾದ, ಅತಿ ಕಷ್ಟಕರವಾದ, ತಪಸ್ಸನ್ನು ದಂಬಾಹಂಕಾರಗಳಿಂದಲೂ, ಕಾಮರಾಗಗಳಿಂದಲೂ ( ಎಂದರೆ ದುರಾಸಕ್ತಿ, ದುರಾಗ್ರಹಗಳಿಂದಲೂ ), ಮಾಡುತ್ತಾರೆಯೋ; ಮತ್ತು ಶರೀರದಲ್ಲಿ ಸರ್ವ ಕಾರ್ಯಪ್ರೇರಕರಾಗಿ ನಿಯಾಮಕರಾಗಿರುವ

---

* ತಾಮಸರು ಬ್ರಹ್ಮರುದ್ರೇಂದ್ರರುಗಳ ಹೆಸರು ಹೇಳಿ ಹೋಮ ಮಾಡಿದರೂ, ಆ ಹೋಮವನ್ನು ಬ್ರಹ್ಮಾದಿ ದೇವತೆಗಳ ಹೆಸರುಳ್ಳ ರಾಕ್ಷಸರು ಸ್ವೀಕಾರ ಮಾಡುವರೇ ಹೊರತು, ಸಾಕ್ಷಾದ್ವಿಷ್ಣುದಾಸರಾದ ದೇವತೆಗಳು ಅಭಕ್ತನಿಂದ ಮಾಡಲ್ಪಟ್ಟ ಆ ಯಾಗದ ಹವಿರ್ಭಾಗಗಳನ್ನು ಮುಟ್ಟುವುದಿಲ್ಲ. ಈ ವಿಷಯವು ವಿಸ್ತಾರವಾಗಿ ವರಾಹಾದಿ ಪುರಾಣಗಳಲ್ಲಿ ವರ್ಣಿಸಲ್ಪಟ್ಟಿರುತ್ತದೆ. "ಅಶ್ರದ್ಧಯಾಹುತಂ......ಅಸದಿತ್ಯುಚ್ಯತೇಪಾರ್ಥ" "ಯಜಂತೇ ನಾಮಯಜ್ಞೈಸ್ತೇ......ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ" ಇತ್ಯಾದಿ ವಾಕ್ಯಗಳಲ್ಲಿ ಶ್ರೀ ಕೃಷ್ಣನೂ ಸೂಚಿಸಿರುತ್ತಾನೆ. ದುರ್ಯೋಧನ, ಜರಾಸಂಧಾದಿಗಳ ಯಾಗದ ಫಲವೂ ಇದರಿಂದ ಉಕ್ತಪ್ರಾಯವೇ ಆಯಿತು.

ತತ್ವಾಭಿಮಾನಿ ದೇವತೆಗಳನ್ನೂ ಮತ್ತು ಸರ್ವನಿಯಾಮಕನಾಗಿ ಶರೀರದಲ್ಲಿ ಸ್ಥಿತ ನಾದ ನನ್ನನ್ನೂ ಅಲ್ಪ ಗುಣವುಳ್ಳವನನ್ನಾಗಿ ತಿಳಿಯುವ ಅವಿವೇಕಿಗಳು ಯಾರೋ, ಅವರು ನಿಶ್ಚಯವಾಗಿ ಅಸುರಸಂಬಂಧಿ (ತಮೋಯೋಗ್ಯ) ಸ್ವಭಾವವನ್ನು ಹೊಂದಿ ದವರೆಂದು ತಿಳಿ.

ದೇವಸಂಬಂಧಿ ( ಮುಕ್ತಿಯೋಗ್ಯ ) ಸ್ವಭಾವವನ್ನು ಹೊಂದಿದವರನ್ನು ಶ್ರೀ ಕೃಷ್ಣನು ಪೂರ್ವದಲ್ಲಿಯೇ ನಿರೂಪಿಸಿರುತ್ತಾನೆ. ಇನ್ನು ಮೇಲೆ ಸಾತ್ವಿಕ ರಾಜಸ ತಾಮಸ ಸ್ವಭಾವವುಳ್ಳವರ ಆಹಾರಾದಿ ಅನೇಕ ಭೇದಗಳನ್ನು ಹದಿನೇಳ ನೆಯ ಅಧ್ಯಾಯದ ಉತ್ತರ ಶ್ಲೋಕಗಳಲ್ಲಿಯೂ, ಹದಿನೆಂಟನೆಯ ಅಧ್ಯಾಯದ ಅನೇಕ ಶ್ಲೋಕಗಳಿಂದಲೂ ಶ್ರೀ ಕೃಷ್ಣನು ಭಕ್ತ ಜನರು ತಮಗೆ ದುಸ್ಸಂಗಾದಿ ಗಳಿಂದ ಪ್ರಾಪ್ತವಾದ ತಾಮಸ ಧರ್ಮಗಳನ್ನು ಪರಿತ್ಯಾಗ ಮಾಡಿ ಸಾತ್ವಿಕ ಧರ್ಮ ಗಳನ್ನು ಆಚರಿಸಲೆಂಬ ಅಭಿಪ್ರಾಯದಿಂದ ವರ್ಣಿಸುತ್ತಾನೆ :—

**(3) ಆಹಾರಸ್ತ್ವಪಿಸರ್ವಸ್ಯ ತ್ರಿವಿಧೋಭವತಿಪ್ರಿಯಃ ।**
**ಯಜ್ಞಸ್ತಪಸ್ತಥಾದಾನಂತೇಷಾಂ ಭೇದಮಿಮಂಶೃಣು ॥**
—(17. 7.)

ಸಾತ್ವಿಕಾದಿ ಜನರಿಗೆ ಪ್ರಿಯವಾದ ಆಹಾರವೂ ಕೂಡ ಮೂರು ಪ್ರಕಾರ ವಾಗಿರುವುದು. ಹಾಗೆಯೇ ಅವರುಗಳ ಯಜ್ಞ, ತಪಸ್ಸು ಮತ್ತು ದಾನವೂ ತ್ರಿವಿಧ ವಾಗಿರುವುದು. ಶ್ರವಣ ಮಾಡು.

ಶ್ರೀ ಕೃಷ್ಣನು ಮೂರು ಶ್ಲೋಕಗಳಿಂದ **ಆಹಾರ** ಭೇದವನ್ನು ನಿರೂಪಿಸು ತ್ತಾನೆ.—

**(4) ಆಯುಸ್ಸತ್ವಬಲಾರೋಗ್ಯ ಸುಖಪ್ರೀತಿವಿವರ್ಧನಾಃ ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾಹೃದ್ಯಾ ಆಹಾರಾಃ ಸಾತ್ವಿಕಪ್ರಿಯಾಃ ।**
**ಕಟ್ವಮ್ಲಲವಣಾತ್ಯುಷ್ಣ ತೀಕ್ಷ್ಣ ರೂಕ್ಷವಿದಾಹಿನಃ ।**
**ಆಹಾರಾರಾಜಸಸ್ಯೇಷ್ಟಾದುಃಖಶೋಕಾಮಯಪ್ರದಾಃ ॥**
**ಯಾತಯಾಮಂಗತರಸಂ ಪೂತಿಪರ್ಯುಷಿತಂಚಯತ್ ।**
**ಉಚ್ಛಿಷ್ಟಮಪಿಚಾಮೇಧ್ಯಂ ಭೋಜನಂ ತಾಮಸಪ್ರಿಯಂ ॥**
—(17. 8-10.)

ಆಯುಸ್ಸು, ಸಾಧುಗುಣ (ಚಿತ್ತಶುದ್ಧಿ), ಬಲ, ಆರೋಗ್ಯ, ಸೇವನಾನಂತರ ಬಹುಕಾಲೀನ ಸುಖ, ಭಕ್ಷಣ ಕಾಲದಲ್ಲಿಯೂ (ಇಂದ್ರಿಯ ಮತ್ತು ಮನಸ್ಸುಗಳಿಗೆ) ಸುಖ ಇವುಗಳನ್ನು ವೃದ್ಧಿ ಹೊಂದಿಸುವ, ಮಿತವಾದ, ಷಡ್ರಸಯುಕ್ತವಾದ, ರಸವತ್ತಾಗಿಯೂ, ಸ್ನಿಗ್ಧವಾಗಿಯೂ, ಸ್ಥಿರವಾಗಿಯೂ, ಮನೋಹರವಾಗಿಯೂ

ಇರುವ ಆಹಾರವು ಸಾತ್ವಿಕರಿಗೆ ( ಮುಕ್ತಿಯೋಗ್ಯ ಸ್ವಭಾವವುಳ್ಳವರಿಗೆ, ಸಾತ್ವಿಕ ಗುಣಕಾರ್ಯವಾದ ದೇಹವುಳ್ಳವರಿಗೆ,) ಪ್ರಿಯವಾದವುಗಳು.*

ಅತಿ ಖಾರವಾಗಿಯೂ, ಅತಿ ಹುಳಿಯಾಗಿಯೂ, ಅತಿ ಲವಣಸಹಿತ ವಾಗಿಯೂ, ಅತ್ಯುಷ್ಣವಾಗಿಯೂ, ಅತಿ ತೀಕ್ಷ್ಣವಾಗಿಯೂ, ಬಹಳ ನೀರಸ ವಾಗಿಯೂ, ಭಕ್ಷಣ ಕಾಲದಲ್ಲಿ ಬಾಯನ್ನು ಸುಟ್ಟು ಸಂತಾಪವನ್ನು ಕೊಡುವುದಾಗಿಯೂ ಇರುವ ಆಹಾರಗಳು ರಾಜಸಸ್ವಭಾವವುಳ್ಳವರಿಗೆ ಪ್ರಿಯವಾದ ಆಹಾರಗಳು, ಯಾತಯಾಮವು, ( ಪಾಕಾನಂತರ ಒಂದು ಯಾಮ ಕಳೆದಿರುವುದು), ಗತರಸವು ( ನಷ್ಟವಾದ ರುಚಿಯುಳ್ಳದ್ದು ), ದುರ್ಗಂಧಸಹಿತವಾಗಿರುವುದು, ಹಳಸಿ ಹೋದುದು ಮತ್ತು ಯಾವ ಯಾವದು ಉಚ್ಛಿಷ್ಟವೋ ( ನೀಚರಿಂದ ಭಕ್ಷಿತವಾದ ಶೇಷ, ಅಥವಾ ಎಂಜಲೋ ) ಮತ್ತು **ಅಪವಿತ್ರವೋ**† ಅವೆಲ್ಲವೂ ತಾಮಸ ಸ್ವಭಾವವುಳ್ಳವರಿಗೆ (ತಮೋಯೋಗ್ಯರಿಗೆ, ತಾಮಸ ಗುಣಕಾರ್ಯವಾದ ದೇಹವುಳ್ಳವರಿಗೆ ) ಪ್ರಿಯವಾದ ಆಹಾರಗಳು.

---

* **ಉಚ್ಛಿಷ್ಟಭೋಜಿನೋ ದಾಸಾಸ್ತವಮಾಯಾಂ ಜಯೇಮಹಿ** ಎಂಬ ಉದ್ಧವನ ವಚನಾನುಸಾರ ವಿಧ್ಯುಕ್ತವಾಗಿ ಭಗವದರ್ಪಿತವಾದರೇನೇ ಪೂರ್ವೋಕ್ತ ಆಹಾರಗಳು ಸಾತ್ವಿಕವೆನ್ನಿಸುವುವು ಎಂದು ತಿಳಿಯಬೇಕು. ಈ ಅಭಿಪ್ರಾಯವು "ಆಯುಸ್ಸತ್ವ ವಿವರ್ಧನಾಃ" ಎಂಬ ವಿಶೇಷಣಗಳಿಂದ ಸೂಚಿತವಾಗುವುದು. ಭಗವದರ್ಪಿತವಲ್ಲದ ಆಹಾರವು ಆಯುರ್ವೃದ್ಧಿಯನ್ನಾಗಲೀ, ಚಿತ್ತಶುದ್ಧಿಯನ್ನಾಗಲೀ ಉಂಟು ಮಾಡಲಾರದು. ಭಗವದನರ್ಪಿತಾನ್ನಭೋಜನದಿಂದ ಆಯುರ್ನಾಶವೂ, ಅಂತಃಕರಣ ಮಾಲಿನ್ಯವೂ ಅವಶ್ಯವಾಗಿ ಉಂಟಾಗುವುವು.

ಶ್ರೀಕೃಷ್ಣನೂ ಸಹ—

**ಯಜ್ಞಶಿಷ್ಟಾಶಿನಸ್ಸಂತೋಮುಚ್ಯಂತೇ ಸರ್ವಕಿಲ್ಬಿಷೈಃ ।**
**ಭುಂಜತೇತೇತ್ವಘಂ ಪಾಪಾಯೇಪಚಂತ್ಯಾತ್ಮಕಾರಣಾತ್ ॥**
—(3. 13.)

ಎಂದು ಹೇಳಿರುತ್ತಾನೆ.

ಈ ಶ್ಲೋಕಾರ್ಥವೇನೆಂದರೆ— ಪರಮಾತ್ಮ ಮತ್ತು ದೇವತೆಗಳ ಆರಾಧನಾ ನಂತರ ಅವಶಿಷ್ಟವಾದ ಅನ್ನವನ್ನು ಭೋಜನ ಮಾಡುವವರು ಸರ್ವ ಪಾಪಗಳಿಂದಲೂ ಮುಕ್ತರಾಗುತ್ತಾರೆ. ಸ್ವಾರ್ಥವಾಗಿ ಯಾರು ಪಾಕ ಮಾಡುತ್ತಾರೆಯೋ ಅವರು ಪಾಪವನ್ನೇ ಭೋಜನ ಮಾಡತಕ್ಕವರು; ಅಂದರೆ ದೇವರ ನೈವೇದ್ಯ, ವೈಶ್ವದೇವ, ಬಲಿಹರಣ, ಅತಿಥಿಸತ್ಕಾರ ಇವುಗಳಿಲ್ಲದೆ; ಕೇವಲ ಉದರ ಪೂರ್ತಿಗಾಗಿ ಪಾಕ ಮಾಡಿದ ಅನ್ನಭೋಜನವು ಬಹು ಪಾಪಗಳನ್ನು ಉಂಟು ಮಾಡುವುದು ಎಂದು ಅರ್ಥವು. ಯಜ್ಞೋವಿಷ್ಣುಃ ಎಂದು ಶಂಕರಾಚಾರ್ಯರೂ, ಯಜ್ಞಶಬ್ದಾರ್ಥವು ವಿಷ್ಣುವೆಂದು ಈ ಅಧ್ಯಾಯದಲ್ಲಿ ಅರ್ಥ ಮಾಡಿರುತ್ತಾರೆ.

† **"ಅಮೇಧ್ಯಂ"** ಎಂದರೆ ಅಪವಿತ್ರಾನ್ನವು ತಾಮಸರಿಗೆ ಪ್ರಿಯವು ಎಂದು ಹೇಳಿರುವುದರಿಂದ ಪೂರ್ವೋಕ್ತ ಆಹಾರಗಳಲ್ಲದೆ ಇನ್ನೂ ಸಕಲ **ಭಗವದನರ್ಪಿತವಾದ** ಉತ್ತಮ ಭಕ್ಷಣ ದ್ರವ್ಯಗಳೂ, ಮತ್ತು **ವಿಧಿವಿರುದ್ಧವಾಗಿ** ಪ್ರಾಪ್ತವಾದ ವಿಕ್ರೀತಾನ್ನ ( **ಕೊಂಡು** ಕೊಂಡ ಅನ್ನ ) ವೇ ಮೊದಲಾದ ಆಹಾರಗಳೂ ತಾಮಸವೆಂದೇ ನಿರ್ಧರಿಸಬೇಕು. ಭಗವದರ್ಪಿತ

ಶ್ರೀ ಕೃಷ್ಣನು ಸಾತ್ವಿಕಾದಿ **ಯಜ್ಞತ್ರೈವಿಧ್ಯ**ವನ್ನು ವಿವರಿಸುತ್ತಾನೆ—

(5) **ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋಯ ಇಜ್ಯತೇ ।**
**ಯಷ್ಟವ್ಯಮೇವೇತಿಮನಃ ಸಮಾಧಾಯಸ ಸಾತ್ವಿಕಃ ।**
**ಅಭಿಸಂಧಾಯತು ಫಲಂದಂಭಾರ್ಥಮಪಿಚೈವಯತ್ ।**
**ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಂ ।**
**ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಂ ।**
**ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥**
—(17. 11-13.)

ಸ್ವರ್ಗಾದಿ ಫಲಾಕಾಂಕ್ಷಾರಹಿತರಾಗಿ, ವಿಧಿಜ್ಞಾನಪೂರ್ವಕವಾಗಿ, ಅವಶ್ಯವಾಗಿ ಮಾಡಿಯೇ ತೀರಬೇಕೆಂದು ಶ್ರದ್ಧಾಪೂರ್ವಕವಾಗಿ, ಪರಮಾತ್ಮನಲ್ಲಿ ಮನಸ್ಸನ್ನು ಇಟ್ಟು ಮಾಡಿದ ಯಜ್ಞವು ಸಾತ್ವಿಕವು (ಮುಕ್ತಿಯೋಗ್ಯ ಸ್ವಭಾವಾನುಗುಣ ವಾದುದು; ಸಾತ್ವಿಕ ಗುಣಕಾರ್ಯವು).

ಎಲೈ ಭರತಶ್ರೇಷ್ಠನೇ! ಸ್ವರ್ಗಾದಿ ಫಲಗಳನ್ನು ಆಕಾಂಕ್ಷೆ ಮಾಡಿ, ತನ್ನ ಮಹತ್ವವನ್ನು ಪ್ರದರ್ಶನೆ ಮಾಡುವ ಉದ್ದೇಶದಿಂದ ಸಹ ಮಾಡಿದ ಯಜ್ಞವು ರಾಜಸವು (ನಿತ್ಯಸಂಸಾರಿಗಳು ಮಾಡುವುದು.) ವಿಧ್ಯುಕ್ತ ರೀತಿಯನ್ನು ಬಿಟ್ಟು,* ಅನ್ನದಾನ ವರ್ಜಿತವಾಗಿ, ವಿಹಿತ ಮಂತ್ರಪಠನಾದಿಗಳಿಲ್ಲದೆ, ದಕ್ಷಿಣಾದಾನದಿಂದ ರಹಿತವಾಗಿ ಮಾಡಿದ ಶ್ರದ್ಧಾವಿರಹಿತವಾದ ಯಜ್ಞವು ತಾಮಸವೆಂದು ಜ್ಞಾನಿಗಳು ಹೇಳುತ್ತಾರೆ.

ತಪಸ್ಸಿನಲ್ಲೂ ತ್ರೈವಿಧ್ಯವುಂಟೆಂದು ಶ್ರೀ ಕೃಷ್ಣನು ಹೇಳುತ್ತಾನೆ :—

(6) **ದೇವದ್ವಿಜ ಗುರುಪ್ರಾಜ್ಞ ಪೂಜನಂ ಶೌಚಮಾರ್ಜವಂ ।**
**ಬ್ರಹ್ಮಚರ್ಯ ಮಹಿಂಸಾ ಚ ಶಾರೀರಂ ತಪಉಚ್ಯತೇ ॥**

---

ವಾದ ವಿಧಿವಿಹಿತವಾದ, ಮತ್ತು ವಿಧ್ಯುಕ್ತರೀತಿಯಲ್ಲಿ ಪಕ್ವವಾದ ಆಹಾರ ದ್ರವ್ಯಗಳು ಸಾತ್ವಿಕವೆಂದೂ, ಭಗವದನರ್ಪಿತವಾದ ಮತ್ತು ವಿಧಿನಿಷಿದ್ಧವಾದ ಭಕ್ಷಣ ದ್ರವ್ಯಗಳು ತಾಮಸವೆಂದೂ ಫಲಿತಾಂಶವು. ಸಾತ್ವಿಕಾನ್ನದಿಂದ ಪುಣ್ಯವೃದ್ಧಿಯೂ ಅಂತಃಕರಣಶುದ್ಧಿಯೂ ಉಂಟಾಗುವುವು. ತಾಮಸಾದ್ಯನ್ನಗಳಿಂದ ಪಾಪವೃದ್ಧಿಯೂ, ದುರ್ಬುದ್ಧಿಯೂ, ವಿಷಯಾಸಕ್ತಿಯೂ ಉಂಟಾಗುವುವು.

* **"ವಿಧಿಹೀನಂ"** ಎಂದರೆ ವಿಧ್ಯುಕ್ತ ರೀತಿಯನ್ನು ಬಿಟ್ಟು ಎಂಬ ವಿಶೇಷಣವು ಪ್ರತಿಯೊಂದು ತಾಮಸ ಕಾರ್ಯಕ್ಕೂ ಅನ್ವಯಿಸುವುದು. ವಿಧ್ಯುಕ್ತ ರೀತಿಯಲ್ಲಿ ಮಂತ್ರಪಠನ ಮಾಡದೆ, ವಿಧ್ಯುಕ್ತರೀತಿಯಲ್ಲಿ ದಕ್ಷಿಣಾದಿಗಳನ್ನು ಕೊಡದೆ, ಸಾತ್ವಿಕ ಶ್ರದ್ಧಾದಿಂದ ರಹಿತವಾದ ಯಜ್ಞವು ತಮೋಯೋಗ್ಯ ಸ್ವಭಾವವುಳ್ಳವರು ಮಾಡುವುದು. ಜರಾಸಂಧನ ಮನಸ್ಸಿನಲ್ಲಿ ಸಂಕಲ್ಪಿತವಾದ ನರಮೇಧಯಜ್ಞವೂ, ದುರ್ಯೋಧನನ ಪೌಂಡರೀಕಯಾಗವೂ ಎಷ್ಟು ಗುಣಗಳಿಂದ ಯುಕ್ತವಾಗಿದ್ದರೂ, ವಿಷ್ಣುಭಕ್ತ್ಯಾದಿ ವಿಧ್ಯುಕ್ತಧರ್ಮಗಳಿಂದ ರಹಿತವಾಗಿ, ಪಾಂಡವ ದ್ವೇಷಾದಿ ದುರುದ್ದೇಶದಿಂದ ಊರ್ಜಿತವಾದುದರಿಂದ ತಾಮಸವೆಂದೇ ನಿಶ್ಚಯಿಸಬೇಕು.

ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯ ಹಿತಂಚಯತ್ ।
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥
ಮನಃಪ್ರಸಾದ ಸ್ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।
ಭಾವಸಂಶುದ್ಧಿರಿತ್ಯೇತತ್ತಪೋಮಾನಸಮುಚ್ಯತೇ ॥
ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ರಿವಿಧಂ ನರೈಃ ।
ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ವಿಕಂ ಪರಿಚಕ್ಷತೇ ॥
ಸತ್ಕಾರಮಾನಪೂಜಾರ್ಥಂ ತಪೋದಂಭೇನಚೈವಯತ್ ।
ಕ್ರಿಯತೇತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಂ ॥
ಮೂಢ ಗ್ರಾಹೇಣಾತ್ಮನೋಯತ್ಪೀಡಯಾ ಕ್ರಿಯತೇತಪಃ ।
ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಂ ॥
—(17. 14-19.)

( ಸರ್ವಾಂತರ್ಯಾಮಿಯಾದ ಪರಮಾತ್ಮನಲ್ಲಿ ಭಕ್ತಿಪೂರ್ವಕವಾಗಿ )* ಅವರವರ ಯೋಗ್ಯತಾನುಸಾರ ದೇವಬ್ರಾಹ್ಮಣರುಗಳ ಪೂಜೆಯು, ಹರಿಸ್ಮರಣ ಪೂರ್ವಕವಾಗಿ ವಿಧ್ಯುಕ್ತ ರೀತಿಯಲ್ಲಿ ಮೃತ್ತಿಕಾದಿಗಳಿಂದ ಬಾಹ್ಯಶೌಚವು, ಉತ್ತಮರಲ್ಲಿ ವಿನಯವು, ಬ್ರಹ್ಮಚರ್ಯವು ( ಗುಹ್ಯೇಂದ್ರಿಯ ನಿಗ್ರಹವು ), ಅಹಿಂಸೆಯು, ಇವು ಶರೀರಸಂಬಂಧಿ ತಪಸ್ಸು ಎನ್ನಿಸುವುದು. ಜ್ಞಾನಿಗಳಿಗೆ ಉದ್ವೇಗಕರವಲ್ಲದ, ಸತ್ಯವಾದ, ಮತ್ತು ಶ್ರವಣ ಸಮಯದಲ್ಲಿ ಪುನಃ ಪುನಃ ಕೇಳಬೇಕೆಂದು ಸಜ್ಜನರಿಗೆ ಅಪೇಕ್ಷೆಯನ್ನು ಹುಟ್ಟಿಸುವ, ಕಾಲಾಂತರದಲ್ಲಿಯೂ ಸುಖಕರವಾದ ಮಾತುಗಳನ್ನಾಡುವುದು ಮತ್ತು ಗುರುಮುಖೇನ ವೇದಾಧ್ಯಯನಾದಿಗಳನ್ನು ಮಾಡುವುದೂ ವಾಙ್ಮಯ ತಪಸ್ಸೆನ್ನಿಸುವುದು. ಮನಃಪ್ರಸಾದವು ( ಮನಸ್ಸು ವಿಷಯಗಳಲ್ಲಿ ಹೋಗದೇ ಇರೋಣವು ), ಸಾಧುಭಾವವು, ಶಾಸ್ತ್ರ ಮನನವು, ಪರಮಾತ್ಮನಲ್ಲಿ ಸರ್ವದಾ ಸ್ಥಿತಿಯು, ಅಂತಃಕರಣಶುದ್ಧಿಯು ( ನಾನಾ ಕಾಮರಾಹಿತ್ಯವು ), ಇದು ಮಾನಸಿಕ ತಪಸ್ಸೆನ್ನಿಸುವುದು. ( ಇನ್ನು ಮೇಲೆ ಸಾತ್ವಿಕಾದಿ ತಪೋಭೇದದಿಂದ

* ಹರಿಭಕ್ತಿಪೂರ್ವಕವಾಗಿ ಎಂಬ ಈ ವಿಶೇಷಣವು ಒಂದೊಂದು ( ಮುಕ್ತಿಯೋಗ್ಯರು ಆಚರಿಸುವ ) ಸಾತ್ವಿಕಕರ್ಮಕ್ಕೂ ಅಪೇಕ್ಷಿತವೆಂದು **"ಓಂತತ್ಸದಿತಿ ನಿರ್ದೇಶೋ"** ಇತ್ಯಾದಿ ಇದೇ ಅಧ್ಯಾಯದ ಅಂತ್ಯ ಶ್ಲೋಕದಿಂದ ನಿಶ್ಚಿತವಾಗುತ್ತದೆ. **"ಕರ್ಮಚೈವತದರ್ಥೀಯಂಸತ್"** ಎಂಬುದು ಸ್ಪಷ್ಟವಚನವು. ಪರಮಾತ್ಮನ ಪ್ರೀತ್ಯರ್ಥವಾದ ಕರ್ಮವು ಸಾತ್ವಿಕವು ಎಂದರ್ಥವು. "ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ" ಎಂದು ತೃತೀಯಾಧ್ಯಾಯದಲ್ಲೂ ಶ್ರೀ ಕೃಷ್ಣನು ಹೇಳಿರುತ್ತಾನೆ. ಶಂಕರಾಚಾರ್ಯರೂ ಇಲ್ಲಿ ಯಜ್ಞಶಬ್ದಾರ್ಥವು ವಿಷ್ಣುವೆಂದು ಹೇಳಿರುತ್ತಾರೆ.

ಜೀವಭೇದವನ್ನು ತೋರಿಸುತ್ತಾರೆ :— ) ಫಲಾಕಾಂಕ್ಷೆಯಿಂದ ರಹಿತರಾದ, ಭಗವದರ್ಪಣಾದಿ ಉಪಾಯಗಳಿಂದ ಸಹಿತರಾದ ಅಧಿಕಾರಿಗಳಿಂದ ಉತ್ಕೃಷ್ಟವಾದ ಶ್ರದ್ಧೆಯಿಂದ ಆಚರಿಸಲ್ಪಟ್ಟ ಈ ಮೂರು ವಿಧ ತಪಸ್ಸೂ ಸಾತ್ವಿಕವೆನ್ನಿಸುವುದು. ( ಮುಕ್ತಿಯೋಗ್ಯ ಸ್ವಭಾವಾನುಗುಣವಾದುದು; ಸಾತ್ವಿಕ ಗುಣಕಾರ್ಯವು ). ಸತ್ಕಾರ, ಬಹುಮಾನ, ಪೂಜಾದಿಗಳನ್ನು ಹೊಂದುವುದಕ್ಕೋಸ್ಕರ, ತನ್ನ ಮಹತ್ವ ಪ್ರದರ್ಶನಾರ್ಥವಾಗಿಯೂ ಆಚರಿಸಲ್ಪಟ್ಟು, ಬಹು ಬೇಗ ಕ್ಷೀಣ ಹೊಂದಿ ಪುನಃ ಸಂಸಾರಕ್ಕೆ ಬೀಳಿಸುವ ತಪಸ್ಸು ರಾಜಸವು ( ಮಧ್ಯಮ ಮನುಷ್ಯರ ಸ್ವಭಾವಾನು ಗುಣವಾದುದು, ರಾಜಸ ಗುಣಕಾರ್ಯವು. ) ಅವಿವೇಕ ಸಹಿತ ದುರಾಗ್ರಹದಿಂದ, ತನಗೂ ಬಹು ಹಿಂಸಾಪ್ರದವಾಗಿ, ಶತ್ರುವಿನ ನಾಶವನ್ನು ಬಯಸಿ ಆಚರಿಸಲ್ಪಡುವ ತಪಸ್ಸು ತಾಮಸವು ( ತಮೋಯೋಗ್ಯ ಸ್ವಭಾವಾನುಗುಣವಾದುದು, ತಾಮಸ ಗುಣಕಾರ್ಯವು. )

ಶ್ರೀ ಕೃಷ್ಣನು ಸಾತ್ವಿಕಾದಿ ತ್ರಿವಿಧ ಜೀವರುಗಳ ದಾನವೈಲಕ್ಷಣ್ಯವನ್ನೂ ನಿರೂಪಿಸುತ್ತಾನೆ.—

**(7) ದಾತವ್ಯಮಿತಿಯದ್ದಾನಂ ದೀಯತೇಽನುಪಕಾರಿಣೇ ।**
**ದೇಶಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ವಿಕಂ ಸ್ಮೃತಂ ॥**
**ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯವಾಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂಸ್ಮೃತಂ ॥**
**ಅದೇಶಕಾಲೇಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಆಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಂ ॥**

—(17. 20-22.)

ಅವಶ್ಯವಾಗಿ ಕೊಡಬೇಕೆಂಬ ಆಸ್ತಿಕ್ಯಬುದ್ಧಿಯಿಂದ, ಪಾತ್ರನಿಂದ ಯಾವ ಪ್ರತಿಫಲವನ್ನೂ ಅಪೇಕ್ಷಿಸದೇ; ವಿಧ್ಯುಕ್ತ ದೇಶಕಾಲಗಳಲ್ಲಿ ಸತ್ಪಾತ್ರನಿಗೆ ಕೊಡಲ್ಪಟ್ಟ ನ್ಯಾಯಾರ್ಜಿತ ದ್ರವ್ಯದಾನವು ಸಾತ್ವಿಕವೆನ್ನಿಸುವುದು. ( ಮುಕ್ತಿಯೋಗ್ಯ ಸ್ವಭಾವಾನುಗುಣವಾದುದು; ಸಾತ್ವಿಕ ಗುಣಕಾರ್ಯವು. ) ಯಾವುದು ಪ್ರತ್ಯುಪಕಾರವನ್ನು ನಿರೀಕ್ಷಣೆ ಮಾಡಿ, ಅಥವಾ ಸ್ವರ್ಗಾದಿ ಫಲಗಳನ್ನು ಅಪೇಕ್ಷಿಸಿ ಮಾಡಿದ, ಅನ್ಯಾಯಾರ್ಜಿತವಾದ ದ್ರವ್ಯದ ತ್ಯಾಗವೋ ಅದು ರಾಜಸವೆನ್ನಿಸುವುದು. ಅಶುಚಿದೇಶದಲ್ಲಿಯೂ, ನಿಷಿದ್ಧಕಾಲದಲ್ಲಿಯೂ, ಅಪಾತ್ರರಿಗೆ ಕೊಡಲ್ಪಟ್ಟ ದಾನವು ಮತ್ತು ನಮಸ್ಕಾರಾದಿ ಸತ್ಕಾರರಹಿತವಾಗಿ ಅವಮಾನಪೂರ್ವಕವಾಗಿ ಮಾಡಿದ ದ್ರವ್ಯತ್ಯಾಗವು ತಾಮಸವು ( ತಮೋಯೋಗ್ಯ ಸ್ವಭಾವಾನುಗುಣವಾದುದು, ತಾಮಸ ಗುಣಕಾರ್ಯವು. )

ಮುಕ್ತಿಯೋಗ್ಯರ ಮತ್ತು ತಮೋಯೋಗ್ಯರ ಪ್ರಬಲವಾದ ಧರ್ಮವೈಲಕ್ಷಣ್ಯವನ್ನು ಶ್ರೀ ಕೃಷ್ಣನು ಸಂಗ್ರಹವಾಗಿ ಹದಿನೇಳನೆಯ ಅಧ್ಯಾಯದ ಅಂತ್ಯ ಶ್ಲೋಕಗಳಲ್ಲಿ ನಿರೂಪಿಸಿರುತ್ತಾನೆ.—

**(8) ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣ ಸ್ತ್ರಿವಿಧಃ ಸ್ಮೃತಃ ।**
**ಬ್ರಾಹ್ಮಣಾಸ್ತೇನವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥**
**ತಸ್ಮಾದೋಮಿತ್ಯುದಾಹೃತ್ಯ ಯಜ್ಞ ದಾನ ತಪಃ ಕ್ರಿಯಾಃ ।**
**ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಂ ।**
**ತದಿತ್ಯನಭಿಸಂಧಾಯ ಫಲಂ ಯಜ್ಞತಪಃ ಕ್ರಿಯಾಃ ।**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ।**
**ಯಜ್ಞೇತಪಸಿದಾನೇ ಚ ಸ್ಥಿತಿಃ ಸದಿತಿಚೋಚ್ಯತೇ ।**
**ಕರ್ಮಚೈವತದರ್ಥೀಯಂ ಸದಿತ್ಯೇವಾಭಿಧೀಯತೇ ॥**
**ಅಶ್ರದ್ಧಯಾಹುತಂದತ್ತಂ ತಪಸ್ತಪ್ತಂ ಕೃತಂಚಯತ್ ।**
**ಅಸದಿತ್ಯುಚ್ಯತೇ ಪಾರ್ಥನಚತತ್ಪ್ರೇತ್ಯನೋ ಇಹ ॥**

—(17. 23-28.)

ಪರಬ್ರಹ್ಮನಿಗೆ **ಓಂ**† ಎಂತಲೂ, **ತತ್**‡ ಎಂತಲೂ, **ಸತ್**§ ಎಂತಲೂ ಮೂರು ಹೆಸರುಗಳುಂಟು. ಅಂಥ ಪರಬ್ರಹ್ಮನಿಂದ ಬ್ರಾಹ್ಮಣರೂ, ವೇದಗಳೂ, ಯಜ್ಞಗಳೂ ಸೃಷ್ಟಿ ಕಾಲದಲ್ಲಿ ಸೃಷ್ಟಿಸಲ್ಪಟ್ಟವು.* ಆದುದರಿಂದ ಓಂ ಎಂದು ಭಗವನ್ನಾಮದ ಉಚ್ಚಾರಪೂರ್ವಕವಾಗಿಯೇ ಬ್ರಹ್ಮವಾದಿಗಳ ಸರ್ವ ಯಜ್ಞಾದಿ ವಿಧ್ಯುಕ್ತಕ್ರಿಯೆಗಳೂ ನಡೆಯುವುವು. ( ಇದರಿಂದ ಓಂಕಾರಾರ್ಥ ಜ್ಞಾನದಿಂದ ಸಹಿತವಾದ ಭಗವಂತನ ನಾಮೋಚ್ಚಾರಣಪೂರ್ವಕವಾಗಿ ಮಾಡಿದ ವಿಧ್ಯುಕ್ತ ಕರ್ಮಾದ್ಯನುಷ್ಠಾನವು ಸಾತ್ವಿಕವು ಎಂದರೆ ಮುಕ್ತಿಯೋಗ್ಯರ ಆಚರಣೆಯು ಎಂದು ಸಿದ್ಧವಾಗುವುದು. ) ವೇದೈಕಗಮ್ಯನಾದ ಪರಬ್ರಹ್ಮನು ನನಗೆ ಆಶ್ರಯದಾತನಾಗಲಿ ಎಂದು ಇತರ ಫಲಾಪೇಕ್ಷೆರಹಿತವಾಗಿ, **ತತ್** ಎಂದು ಭಗವನ್ನಾಮ

---

†**ಓಂ** ಎಂದರೆ ಸರ್ವ ಜಗದಾಧಾರನು ಎಂದರ್ಥವು; ಅಥವಾ ಸರ್ವ ಜಗತ್ತಿನಲ್ಲೂ ಅಂತರ್ಯಾಮಿತನದಿಂದೆ ಪ್ರವಿಷ್ಟನಾದವನು ಅಥವಾ ಸರ್ವ ರಕ್ಷಕನು ಎಂದರ್ಥವಾಗುವುದು.

‡**ತತ್** ಎಂದರೆ ಗುಣಭರಿತನಾದವನು ಎಂದು ಅಥವಾ ಪರೋಕ್ಷನು ಎಂದರೆ ವೇದೈಕಗಮ್ಯನು ಎಂದಾಗಲೀ ಅರ್ಥವಾಗುವುದು.

§**ಸತ್** ಎಂದರೆ ನಿರ್ದ್ದೋಷ ಸರ್ವ ಶುಭಗುಣ ಪೂರ್ಣನು ಎಂದರ್ಥವು.

*ವೇದಗಳಿಗೆ **ಅಭಿವ್ಯಕ್ತಿಯೇ** ಸೃಷ್ಟಿಯು.

ಮೋಚ್ಚಾರಣ ಪೂರ್ವಕವಾಗಿ ತಪಸ್ಸು, ದಾನವೇ ಮೊದಲಾದ ನಾನಾ ಕ್ರಿಯೆಗಳು ಮೋಕ್ಷಕಾಂಕ್ಷಿಗಳಾದ ಮುಕ್ತಿಯೋಗ್ಯರಿಂದ ಆಚರಿಸಲ್ಪಡುವುವು. (ಮುಖ್ಯವಾಗಿ) ಯಜ್ಞದ ವಿಷಯದಲ್ಲಾಗಲೀ, ತಪೋವಿಷಯದಲ್ಲಾಗಲೀ, ದಾನವಿಷಯದಲ್ಲಾಗಲೀ **ಭಗವನ್ನಿಷ್ಠತೆಯು** (ಎಂದರೆ, ಭಗವಂತನೇ ಸ್ವತಂತ್ರಪ್ರೇರಕನು, ಭಗವಂತನೇ ಫಲದಾತೃವು ಎಂಬ ನಿಶ್ಚಯವು) ಮತ್ತು ಭಗವತ್ಪ್ರೀತ್ಯರ್ಥವಾಗಿ ಮಾಡಿದ ಕರ್ಮವೂ ಸಹ ಸಚ್ಛಬ್ದವಾಚ್ಯವಾದುದು. ಭಗವಂತನಲ್ಲಿ ಶ್ರದ್ಧೆಯಿಲ್ಲದೆ ಮಾಡಿದ ಹೋಮವು, ದಾನವು, ತಪಸ್ಸು, ಕರ್ಮವು ಇವುಗಳೂ ಕೂಡ "ಅಸತ್" ಎಂದರೆ ತಮೋಯೋಗ್ಯ ಸಂಬಂಧಿ ಧರ್ಮವೆನ್ನಿಸುವುದು. ಎಲೈ ಪಾರ್ಥನೇ! ಅಂಥ ಕರ್ಮವು ಇಹಲೋಕದಲ್ಲಿಯಾಗಲೀ, ಪರಲೋಕದಲ್ಲಿಯಾಗಲೀ ಕಲ್ಯಾಣಪ್ರದವಾಗುವುದಿಲ್ಲ.

ಇನ್ನು ಮೇಲೆ ಶ್ರೀ ಕೃಷ್ಣನು ಮುಕ್ತಿಯೋಗ್ಯ, ನಿತ್ಯಸಂಸಾರಿ, ತಮೋಯೋಗ್ಯರ ಸ್ವಾಭಾವಿಕವಾದ ತ್ಯಾಗ, ಸನ್ಯಾಸ, ಜ್ಞಾನ, ಕರ್ಮ, ಬುದ್ಧಿ, ಧೃತಿ, ಸುಖ ಇವುಗಳ ಪ್ರಭೇದವನ್ನು ನಿರೂಪಿಸುತ್ತಾನೆ. ಯದ್ಯಪಿ ಈ ಧರ್ಮಗಳೆಲ್ಲಾ ಸತ್ವರಜಸ್ತಮೋ ಗುಣಗಳ ಸಂಗದಿಂದ ಜೀವರುಗಳಿಗೆ ಬಂದೊದಗುವುವು. ಆದರೆ ಸೂಕ್ಷ್ಮವಾಗಿ ವಿಚಾರ ಮಾಡಿದರೆ ಈ ಗುಣಸಂಗದ ವೈಚಿತ್ರ್ಯಕ್ಕೂ, ಅದರಿಂದ ಉತ್ಪನ್ನವಾದ ಕರ್ಮಾದಿಗಳ ವೈಚಿತ್ರ್ಯಕ್ಕೂ ಜೀವರುಗಳ ಸ್ವಭಾವವೈಚಿತ್ರ್ಯವೇ ಪ್ರಧಾನಕಾರಣವಾದುದರಿಂದ ಈ ಪ್ರಕರಣದಲ್ಲಿ ಸಾತ್ವಿಕವೆಂದರೆ ಮುಕ್ತಿಯೋಗ್ಯ ಸಂಬಂಧವಾದ ಧರ್ಮವೆಂದೂ, ರಾಜಸವೆಂದರೆ ನಿತ್ಯಬದ್ಧರಾದ ಮನುಷ್ಯರ ಸಂಬಂಧಿ ಆಚರಣೆಯೆಂದೂ, ತಾಮಸವೆಂದರೆ ತಮೋಯೋಗ್ಯಸಂಬಂಧಿ ಅನುಷ್ಠಾನಗಳೆಂದೂ ಹೇಳುವುದು ಉಚಿತವೇ. ಶ್ರೀ ಕೃಷ್ಣನ ಈ ಪ್ರಮೇಯವನ್ನು ಉಪಸಂಹಾರ ಮಾಡುವ ಎರಡರ್ಥವುಳ್ಳ ಶ್ಲೋಕವೇ ತ್ಯಾಗಾದಿಗಳ ತ್ರೈವಿಧ್ಯವು ಕೇವಲ ಗುಣನಿಮಿತ್ತವಲ್ಲ, ಮತ್ತೇನೆಂದರೆ ಸ್ವಭಾವಸಿದ್ಧವಾದ ಸಾತ್ವಿಕಾದಿ ಜೀವಭೇದ ಪ್ರಯುಕ್ತವೆಂದು ಸೂಚಿಸುವುದು.

(9) **ನತದಸ್ತಿ ಪೃಥಿವ್ಯಾಂ ವಾ ದಿವಿದೇವೇಷು ವಾಪುನಃ ।**
**ಸತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃಸ್ಯಾತ್ತ್ರಿಭಿರ್ಗುಣೈಃ ॥**
—(18. 40.)

ಅರ್ಜುನ! ಭೂಲೋಕದಲ್ಲಿ, ಅಥವಾ ದೇವಲೋಕದಲ್ಲಿ ದೇವತೆಗಳಲ್ಲಿಯೂ ಸಹ ಪ್ರಕೃತಿಜೈಃ = **ಜೀವಸ್ವಭಾವಾನುಸಾರಿಯಾದ** ಅಥವಾ **ಜಡಪ್ರಕೃತಿ**ಯಿಂದ ಉತ್ಪನ್ನವಾದ, ಏಭಿಃ **ತ್ರಿಭಿರ್ಗುಣೈಃ** = ಈ **ಪ್ರಸಿದ್ಧವಾದ ಜೀವಸ್ವಾಭಾವಿಕ** ಧರ್ಮತ್ರಯಗಳಿಂದ ಅಥವಾ ಜಡವಾದ ಗುಣತ್ರಯಗಳಿಂದ,

ಮುಕ್ತಂ ಸತ್ವಂನಾಸ್ತಿ = ರಹಿತನಾದ ಜೀವನು ಇಲ್ಲ, ಅಥವಾ ಬದ್ಧನಲ್ಲದ ಪ್ರಾಣಿಯಿಲ್ಲ.†

ಇನ್ನು ಸಾತ್ವಿಕಾದಿ ಜೀವಸ್ವಭಾವಾನುಗುಣವಾದ ತ್ಯಾಗಾದಿಗಳ ತ್ರೈವಿಧ್ಯ ವನ್ನು ಶ್ರೀ ಕೃಷ್ಣನು ನಿರೂಪಿಸುತ್ತಾನೆ :—

(10) **ತ್ಯಾಗೋ ಹಿ ಪುರುಷವ್ಯಾಘ್ರ್ರತ್ರಿವಿಧಃ ಸಂಪ್ರಕೀರ್ತಿತಃ ।**
**ನಿಯತಸ್ಯತುಸಂನ್ಯಾಸಃ ಕರ್ಮಣೋನೋಪಪದ್ಯತೇ ।**
**ಮೋಹಾತ್ತಸ್ಯಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥**
**ದುಃಖಮಿತ್ಯೇವಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।**
**ಸ ಕೃತ್ವಾರಾಜಸಂತ್ಯಾಗಂ ನೈವತ್ಯಾಗಫಲಂ ಲಭೇತ್ ।**
**ಕಾರ್ಯಮಿತ್ಯೇವಯತ್ಕರ್ಮನಿಯತಂ ಕುರುತೇಽರ್ಜುನ ।**
**ಸಂಗಂತ್ಯಕ್ತ್ವಾಫಲಂ ಚೈವ ಸತ್ಯಾಗಃ ಸಾತ್ವಿಕೋಮತಃ ॥**
**—(18. 4-9)**

ಎಲೈ ಪುರುಷಶ್ರೇಷ್ಠನೇ ! ತ್ಯಾಗವು ಸಾತ್ವಿಕ, ರಾಜಸ, ತಾಮಸವೆಂದು, ಮೂರು ಪ್ರಕಾರವೆಂದು ಹೇಳಲ್ಪಟ್ಟಿರುತ್ತದೆ. ವರ್ಣಾಶ್ರಮೋಚಿತವಾದ ಕರ್ಮ ಗಳ ಪರಿತ್ಯಾಗವು ಯುಕ್ತವಲ್ಲ. ಮಿಥ್ಯಾಜ್ಞಾನದಿಂದ ವಿಧ್ಯುಕ್ತ ವರ್ಣಾಶ್ರಮ ಧರ್ಮಗಳ ಪರಿತ್ಯಾಗವು ತಾಮಸವು ( ತಮೋಯೋಗ್ಯರ ಸ್ವಭಾವಾನುಗುಣ ವಾದುದು; ತಮೋಗುಣಕಾರ್ಯವು; ) ಎನ್ನಿಸುವುದು. ಕರ್ಮ ಮಾಡುವುದು ದುಃಖಸಾಧನವೆಂದು ದೇಹಾಯಾಸ ಭಯದಿಂದ ಕರ್ಮಗಳನ್ನು ಪರಿತ್ಯಾಗ ಮಾಡು ವುದು ರಾಜಸತ್ಯಾಗವೆನ್ನಿಸುವುದು. ಈ ಭಾವದಿಂದ ಕರ್ಮಪರಿತ್ಯಾಗ ಮಾಡಿದ

---

†ಪ್ರಪಂಚದಲ್ಲಿ ಸರ್ವತ್ರ ಪೂರ್ವೋಕ್ತ ಮೂರು ವಿಧದಲ್ಲಿ ಯಾವುದಾದರೂ ಒಂದು ಸ್ವಾಭಾ ವಿಕ ಗುಣದಿಂದ ಸಹಿತನಾಗದ ಜೀವಸ್ವರೂಪವು ಇರುವುದಿಲ್ಲ ಎಂದು ಒಂದರ್ಥವು. ಪ್ರಪಂಚದಲ್ಲಿ ಜೀವರುಗಳು ಮುಕ್ತಿಯೋಗ್ಯರೋ, ನಿತ್ಯಸಂಸಾರಿಗಳೋ, ತಮೋಯೋಗ್ಯರೋ ಆಗಿರುವರು ಎಂದರ್ಥವು. ಪ್ರಪಂಚದಲ್ಲಿ ಜಡ ಪ್ರಕೃತಿಯಿಂದ ಉತ್ಪನ್ನವಾದ ಗುಣತ್ರಯಗಳಿಂದ ಬದ್ಧರಾಗದ ಪ್ರಾಣಿಯು ಇರುವುದಿಲ್ಲ ಎಂದು ಎರಡನೆಯ ಅರ್ಥವು. " ಸತ್ವಾನುರೂಪಾಸರ್ವಸ್ಯ ಶ್ರದ್ಧಾಭವತಿ ಭಾರತ । ಶ್ರದ್ಧಾಮಯೋಽಯಂ ಪುರುಷೋಯೋ ಯಚ್ಛ್ರದ್ಧಸ್ಸಏವಸಃ ॥ " " ಪ್ರಕೃತ್ಯಾ ನಿಯತಾಃ ಸ್ವಯಾ " "ಸದೃಶಂಚೇಷ್ಟತೇಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ " ಇತ್ಯಾದಿ ಶ್ಲೋಕಗಳೂ, " ಸತ್ವಂ ಜೀವಃ ಕ್ವಚಿತ್ಪ್ರೋಕ್ತಃ " ಇತ್ಯಾದಿ ಬಹು ಪ್ರಮಾಣಗಳೂ ಮೊದಲನೆಯ ಅರ್ಥಕ್ಕೆ ಸಾಧಕ ವಾಗಿರುತ್ತವೆ. " ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ । ನಿಬಧ್ನಂತಿ " ಇತ್ಯಾದಿಗಳು ಪ್ರಥಮಾರ್ಥಕ್ಕೆ ಅವಿರುದ್ಧವಾಗಿ ದ್ವಿತೀಯಾರ್ಥಕ್ಕೆ ಸಾಧಕವಾಗಿರುತ್ತವೆ. ಮತ್ತು ತ್ರಿವಿಧ ಜೀವರು ಇಲ್ಲ; ಸರ್ವರೂ ನನ್ನನ್ನು ಹೊಂದುತ್ತಾರೆ; ಎಂದು ಶ್ರೀ ಕೃಷ್ಣನು ಎಲ್ಲಿಯೂ ಹೇಳಿಲ್ಲ.

ವನು ಭಗವತ್ಪ್ರೀತಿರೂಪವಾದ ತ್ಯಾಗ ಫಲವನ್ನು ಹೊಂದಲಾರನು. ವರ್ಣಾಶ್ರಮೋಚಿತವಾದ ಕರ್ಮವು ಅವಶ್ಯವಾಗಿ ಮಾಡಲ್ಪಡತಕ್ಕದ್ದು, ( ಅದು ಈಶ್ವರ ಪ್ರೀತಿಸಾಧನವು ) ಎಂದು ತಿಳಿದು ವಿಧ್ಯುಕ್ತ ಕರ್ಮವನ್ನು ಅಹಂತಾಮಮತೆಗಳಿಂದ ಮತ್ತೂ ಫಲಾಪೇಕ್ಷೆಯಿಂದ ರಹಿತವಾಗಿ ಮಾಡುವುದು ಸಾತ್ವಿಕತ್ಯಾಗವೆನ್ನಿಸುವದು ( ಮುಕ್ತಿಯೋಗ್ಯರ ಸ್ವಭಾವಾನುಗುಣವಾದುದು; ಸಾತ್ವಿಕಗುಣ ಕಾರ್ಯವು. )

ಸಾತ್ವಿಕಾದಿ ಜೀವರುಗಳ ಜ್ಞಾನ ತ್ರೈವಿಧ್ಯವನ್ನು ಶ್ರೀ ಕೃಷ್ಣನು ಹೀಗೆ ಹೇಳಿರುತ್ತಾನೆ :—

(11) **ಸರ್ವಭೂತೇಷುಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷುತಜ್ಜ್ಞಾನಂ ವಿದ್ಧಿಸಾತ್ವಿಕಂ ॥**
**ಪೃಥಕ್ತ್ವೇನತುಯಜ್ಜ್ಞಾನಂ ನಾನಾಭಾವಾನ್ಪೃಥಗ್ವಿಧಾನ್ ।**
**ವೇತ್ತಿಸರ್ವೇಷುಭೂತೇಷು ತಜ್ಜ್ಞಾನಂ ವಿದ್ಧಿರಾಜಸಂ ॥**
**ಯತ್ತು ಕೃತ್ಸ್ನವದೇಕಸ್ಮಿನ್ಕಾರ್ಯೇಸಕ್ತಮಹೈತುಕಂ ।**
**ಅತತ್ವಾರ್ಥವದಲ್ಪಂಚತತ್ತಾಮಸಮುದಾಹೃತಂ ॥**

—(18. 20-22.)

ವಿಭಕ್ತೇಷು = ಎಂದರೆ ಪರಸ್ಪರ ಭಿನ್ನರಾದ ಮತ್ತು ತಾರತಮ್ಯೋಪೇತರಾದ ಜೀವ ಜಡಾತ್ಮಕ **ಸರ್ವ ಪದಾರ್ಥಗಳಲ್ಲಿಯೂ** ಇರುವ ಭಾವಂ = ನಿತ್ಯನಾದ ಬ್ರಹ್ಮನು ಅವಿಭಕ್ತಂ = ಎಂದರೆ ಅಧಿಷ್ಠಾನಭೇದ ನಿಮಿತ್ತವಾಗಿ ಸ್ವಗತ ಭೇದವನ್ನು ಹೊಂದದೆ ಇರುವವನು, ( ಸರ್ವತ್ರ ಬ್ರಹ್ಮನು ನಿರ್ದೋಷಗುಣ ಪೂರ್ಣನು) ಮತ್ತು ಅವ್ಯಯನು ಎಂದರೆ ಅಧಿಷ್ಠಾನವು ನಾಶ ಹೊಂದಿದರೂ ತಾನು ನಾಶ ಹೊಂದತಕ್ಕವನಲ್ಲ ಎಂದು ಯಾವ ಜ್ಞಾನವು ತಿಳಿಯುತ್ತದೆಯೋ (ವಿಷಯೀಕರಿಸುತ್ತದೆಯೋ ) ಅದು ಸಾತ್ವಿಕವು ( ಮೋಕ್ಷಯೋಗ್ಯ ಸ್ವಭಾನುಗುಣವಾದುದು; ಸಾತ್ವಿಕ ಗುಣಕಾರ್ಯವು). ವಿಭಿನ್ನವಾದ, ತಾರತಮ್ಯೋಪೇತವಾದ, ಅನೇಕ ಅಧಿಷ್ಠಾನಗಳಲ್ಲಿರುವ ಪರಮಾತ್ಮನು ಸರ್ವತ್ರ ನಿರ್ದೋಷಗುಣಪೂರ್ಣನಾಗಿ ಸಮನಾಗಿರುವನು ಎಂದು ಫಲಿತಾರ್ಥವು. ಯಾವ ಜ್ಞಾನವು ಸರ್ವ ಜೀವ ಜಡ ಪದಾರ್ಥಗಳನ್ನು ಪರಸ್ಪರವಾಗಿ ಭಿನ್ನವೆಂದು ತಿಳಿಯುವುದೋ ಮತ್ತು ಪರಮಾತ್ಮನನ್ನು ಸರಿಯಾಗಿ ತಿಳಿಯುವುದಿಲ್ಲವೋ ( ಯಥಾರ್ಥವಾಗಿ ಲೌಕಿಕ ವಿಷಯಗಳನ್ನು ಮಾತ್ರ ವಿಷಯೀಕರಿಸಿ, ಪ್ರಧಾನತತ್ವವಾದ ಪರಬ್ರಹ್ಮನ ವಿಷಯದಲ್ಲಿ ಸಂದಿಗ್ಧವಾಗಿದೆಯೋ ) ಅದು ರಾಜಸ ಜ್ಞಾನವೆನ್ನಿಸುವದು. ಒಬ್ಬ ಜೀವನ ವಿಷಯದಲ್ಲಿ ಪರಿಪೂರ್ಣನಾದ ಬ್ರಹ್ಮನೆಂದು ತಿಳಿಯುವ, ಅಥವಾ ಒಬ್ಬ ಜೀವನೇ ಸಂಪೂರ್ಣ ಜಗದಾತ್ಮಕನು ( ಎಂದರೆ ಒಂದೇ ಚೈತನ್ಯವು ಇರುವದು, ಆಚೈತನ್ಯಾತ್ಮಕವೇ

ಸರ್ವ ಜಗತ್ತೂ ಆಗಿರುವುದು ) ಎಂದು ತಿಳಿಯುವ, ಅಥವಾ ಒಬ್ಬ ಜೀವನೇ ಈ ಪೂರ್ಣ ಜಗದಾತ್ಮಕನು, ಎಂದರೆ ಈ ಯಾವತ್ತೂ ಜಗತ್ತು ಏಕಜೀವನಿಂದ ಸಹಿತ ವಾದುದು ಎಂದು ತಿಳಿಯುವ, ಯುಕ್ತಿಶೂನ್ಯವಾದ, ಅಸತ್ಯವಿಷಯಕವಾದ ಜ್ಞಾನವು ತಾಮಸವು ( ತಮೋ ಯೋಗ್ಯ ಸ್ವಭಾವಾನುಗುಣವಾದುದು: ತಾಮಸ ಗುಣಕಾರ್ಯವು. )

ಇಲ್ಲಿ ಉದಾಹೃತವಾದ ಇಪ್ಪತ್ತನೆಯ ಶ್ಲೋಕದಲ್ಲಿ ಸರ್ವತ್ರ ಇರುವ ಪರ ಮಾತ್ಮನು ಅಭಿನ್ನನು ಎಂದು ತಿಳಿಯುವ ಜ್ಞಾನವು ಸಾತ್ವಿಕವು ಎಂದು ನಮ್ಮಿಂದ ನಿರೂಪಿತವಾಯಿತು. ಈ ಅರ್ಥವಲ್ಲಿ **1. ಸಮಂಪಶ್ಯನ್‌ಹಿಸರ್ವತ್ರಸಮ ವಸ್ಥಿತಮೀಶ್ವರಂ 2. ಸಮಂಹಿಸರ್ವಭೂತೇಷುತಿಷ್ಠಂತಂ ಪರಮೇಶ್ವರಂ 3. ಅವಿಭಕ್ತಂ ವಿಭಕ್ತೇಷು ವಿಭಕ್ತಮಿವಚಸ್ಥಿತಂ "** ಇತ್ಯಾದಿ ಅನೇಕ ಗೀತಾವಾಕ್ಯಗಳು ಸಮಾಖ್ಯಾ ರೂಪಗಳಾಗಿರುವುವು. ಮತ್ತು ಈ ಮೂಲ ಶ್ಲೋಕವೇ ನಿರವಕಾಶವಾಗಿ " ವಿಭಕ್ತವಾದ ಸರ್ವ ಭೂತಗಳಲ್ಲಿ ಅವಿಭಕ್ತವಾದ ಒಂದು ವಸ್ತುವನ್ನು ತಿಳಿಯುವ ಜ್ಞಾನವು ಸಾತ್ವಿಕವು " ಎಂದು ಸ್ಪಷ್ಟವಾಗಿ ಹೇಳುತ್ತದೆ. ಆದುದರಿಂದ ಇದರಿಂದ ಜೀವಬ್ರಹ್ಮರ ಭೇದಜ್ಞಾನವೇ ಸಾತ್ವಿಕ ವೆಂದು ಸಿದ್ಧವಾಯಿತು.

ಆದರೆ ಇಲ್ಲಿ ಆಶ್ಚರ್ಯವೇನೆಂದರೆ, ಶಂಕರಾಚಾರ್ಯರು ಶ್ಲೋಕಾರ್ಥ ವನ್ನು ಪ್ರಾಯೇಣ ಹೀಗೆಯೇ ನಿರೂಪಿಸಿ- ಅದ್ವೈತಾತ್ಮಜ್ಞಾನವು ಸಾತ್ವಿಕವು ಎಂದು ಕೊನೆಯಲ್ಲಿ ಅತ್ಯಂತ ಅಸಂಗತವಾದ ಸ್ವಂತ ನಿಶ್ಚಯವನ್ನು ಬರೆದಿರುತ್ತಾರೆ. ಇದು ಅವರ ಮಾತು :— **ಸರ್ವಭೂತೇಷು ಅವ್ಯಕ್ತಾದಿ ಸ್ಥಾವರಾಂತೇಷು ಭೂತೇಷು, ಯೇನಜ್ಞಾನೇನ ಏಕಂಭಾವಂ ವಸ್ತು....ಅವ್ಯಯಂ ನವ್ಯೇತಿ ಸ್ವಾತ್ಮನಾ ಸ್ವಧರ್ಮೇಣವಾ, ಕೂಟಸ್ಥಂ ಇತ್ಯರ್ಥಃ ಈಕ್ಷತೇ ಪಶ್ಯತಿ; ಯೇನಜ್ಞಾನೇನ, ತಂಚಭಾವಂ ಅವಿಭಕ್ತಂ ಪ್ರತಿದೇಹಂ, ವಿಭಕ್ತೇಷು ದೇಹಭೇದೇಷು ನ ವಿಭಕ್ತಂ.... ( ಪಶ್ಯತಿ ) ತತ್ ಅದ್ವೈತಾತ್ಮವಿಷಯಂ ಸಾತ್ವಿಕಂವಿದ್ಧಿ.**

ಅರ್ಥವು— "ಅವ್ಯಕ್ತತತ್ವವು ಮೊದಲುಗೊಂಡು ಸ್ಥಾವರಾಂತವಾದ ಸಕಲ **ಭೂತಗಳಲ್ಲಿಯೂ** ಯಾವ ಜ್ಞಾನವು, ತನ್ನ ಸ್ವರೂಪದಿಂದಲಾಗಲೀ, ಸ್ವಧರ್ಮ ದಿಂದಲಾಗಲೀ ನಾಶ ಹೊಂದದ ನಿರ್ವಿಕಾರವಾದ **ಒಂದು ವಸ್ತುವನ್ನು** ತಿಳಿ ಯುತ್ತದೆಯೋ, ಮತ್ತು ಆ ವಸ್ತುವು ಪ್ರತಿ ದೇಹದಲ್ಲಿಯೂ ಭಿನ್ನವಾಗಿರದೇ, ಭಿನ್ನ ದೇಹಗಳಲ್ಲಿದ್ದರೂ ಭೇದರಹಿತವಾಗಿರುವುದೆಂದು ತಿಳಿಯುವುದೋ ಅಂಥ **ಅದ್ವೈತಾತ್ಮಾ** ವಗಾಹಿಯಾದ ಜ್ಞಾನವು ಸಾತ್ವಿಕವು."

ಈ ವ್ಯಾಖ್ಯಾನವು ಬಹು ದೋಷಗಳಿಂದ ಯುಕ್ತವಾಗಿರುವುದು. 1. ವಿಭಕ್ತ ವಾದ ಅನೇಕ ಭೂತಗಳಲ್ಲಿ ಪರಮಾತ್ಮನು ಅಭಿನ್ನನಾಗಿ ಇರುವನು ಎಂಬ

ಜ್ಞಾನವು ಭೇದಜ್ಞಾನವೇ ಆಯಿತು. ಭೇದರಹಿತವಾದ ಅದ್ವೈತಾತ್ಮಜ್ಞಾನವಾಗಲಿಲ್ಲ. 2. ಮತ್ತು ಅದ್ವೈತಮತದ ರೀತ್ಯಾ ಈ ಅರ್ಥವು ಅತ್ಯಂತ ಅಸಂಗತವಾದುದು. ಅದ್ವೈತಾತ್ಮವಿಷಯಕವಾದ ಜ್ಞಾನದಲ್ಲಿ ಅವ್ಯಕ್ತಾದಿ ಸ್ಥಾವರಾಂತ ಭೂತಗಳು **ಒಂದೂ ಇಲ್ಲವೆಂದೇ** ತೋರುವುದು. ವಿಭಿನ್ನವಾದ ಭೂತಗಳಲ್ಲಿ ಆತ್ಮನು ಇರುವನೆಂದು ತೋರುವುದಿಲ್ಲ. **ತತ್ವಮಸ್ಯಾದಿವಾಕ್ಯೋತ್ಥಂ ಸಮ್ಯಗ್ಧೀಜನ್ಮಮಾತ್ರತಃ । ಅವಿದ್ಯಾಸಹಕಾರ್ಯೇಣನಾಸೀದಸ್ತಿಭವಿಷ್ಯತಿ ॥** ಎಂದು ಅದ್ವೈತಿಗಳು ಹೇಳಿರುತ್ತಾರೆ. ಇದರ ಅರ್ಥವು :— "ತತ್ವಮಸ್ಯಾದಿ ವಾಕ್ಯಗಳಿಂದ ಸಮೀಚೀನ ( ಅದ್ವೈತಾತ್ಮವಿಷಯಕ ) ಜ್ಞಾನವು ಉತ್ಪನ್ನವಾದ ಕ್ಷಣವೇ ಅವ್ಯಕ್ತಾದಿ ಸ್ಥಾವರಾಂತವಾದ ಕಾರ್ಯಗಳಿಂದ ಸಹಿತವಾದ ಅವಿದ್ಯೆಯು ಹಿಂದೂ ಇರುವುದಿಲ್ಲ, ಈಗಲೂ ಇಲ್ಲ, ಮುಂದೂ ಇರುವುದಿಲ್ಲ." ಸರ್ವವೂ ವಿಲೀನವಾಗಿ ಹೋಗುವುದೆಂದು ಅರ್ಥವು. ಕೇನೋಪನಿಷಚ್ಛಾಂಕರಭಾಷ್ಯದ **ಆನಂದಗಿರಿ ಟೀಕೆಯಲ್ಲಿಯೂ** ಹೀಗಿರುತ್ತದೆ :— "**ಲೋಕೇಶುಕ್ತ್ಯಾದಿತತ್ವಂ ವಿಜಾನತಾಂ ಯುತೋಽಧ್ಯಸ್ತಂ ರೂಪ್ಯಾದ್ಯವಿಜ್ಞಾತಂಭವತಿ. ಅಜಾನತಾಮೇವತ್ವಧ್ಯಸ್ತಂ ವಿಜ್ಞಾತಂ ಭವತೀತಿಪ್ರಸಿದ್ಧಂ. ತಥಾಬ್ರಹ್ಮಣಿ ಜ್ಞೇಯತ್ವಸ್ಯಾಧ್ಯಸ್ತತ್ವಾದೇವ ತತ್ವವಿದೋನಜ್ಞಾತಂ ಬ್ರಹ್ಮಪಶ್ಯಂತಿ.** P. 17.

ಇದರ ಅರ್ಥವು— "ಲೋಕದಲ್ಲಿ ಶುಕ್ತಿರಜತ ಭ್ರಮದಲ್ಲಿ ಅಧಿಷ್ಠಾನವಾದ ಶುಕ್ತಿಯನ್ನು ( ಶುಕ್ತಿತ್ವೇನ ) ತಿಳಿದವನಿಗೆ ಆರೋಪಿತವಾದ ರಜತವು ತೋರುವುದಿಲ್ಲ. ( ಶುಕ್ತಿತ್ವೇನ ) ಶುಕ್ತಿಜ್ಞಾನವಿಲ್ಲದವನಿಗೆ ಆರೋಪಿತವಾದ ರೂಪ್ಯಜ್ಞಾನವು ಬರಬಹುದು. ಹೀಗೆ ಬ್ರಹ್ಮಜ್ಞಾನಿಗಳು ಬ್ರಹ್ಮನನ್ನು ಸರಿಯಾಗಿ ತಿಳಿದರೆ, ಅವರಿಗೆ ಆರೋಪಿತವಾದ ಜ್ಞೇಯತ್ವಾದಿ ಧರ್ಮಗಳು ತೋರುವುದೇ ಇಲ್ಲ."

ಹೀಗೆ ಅದ್ವೈತಮತದಲ್ಲಿ ಸಮೀಚೀನವಾದ ಅದ್ವೈತಾತ್ಮಜ್ಞಾನವು ಬಂದಾಗ ಸರ್ವಜ್ಞತ್ವ, ಸೃಷ್ಟಿಕರ್ತೃತ್ವ, ಜ್ಞೇಯತ್ವಾದಿ ಬ್ರಹ್ಮಧರ್ಮಗಳೇ ತೋರದೆ ಹೋದ ಮೇಲೆ, ಅವ್ಯಕ್ತಾದಿ ಸ್ಥಾವರಾಂತವಾದ ಸಕಲ ಭೂತಗಳು ತೋರುವುದು ಸರ್ವಥಾ ಅಸಂಭಾವಿತವು. ಹೀಗಿರುವಲ್ಲಿ ಸರ್ವ ಭೂತಗಳಲ್ಲಿ ಅದ್ವೈತಾತ್ಮನನ್ನು ತಿಳಿಯುವುದು ಗಗನಾರವಿಂದದಲ್ಲಿ ಮಾಧುರ್ಯವನ್ನು ತಿಳಿಯುವುದು ಹೇಗೋ ಹಾಗೆಯೇ ಅತ್ಯಂತ ಅಸಂಭಾವಿತವು. ಅದ್ವೈತಮತದಲ್ಲಿ ಸರ್ವ ಭೂತಗಳೂ ಅದ್ವೈತಾತ್ಮನಲ್ಲಿ ಆರೋಪಿತವಾಗಿರುವುದರಿಂದ, ಅದ್ವೈತಾತ್ಮ ಜ್ಞಾನವಾದರೆ ಸರ್ವ ಭೂತ ಜ್ಞಾನವಾಗಲಾರದು. ಸರ್ವ ಭೂತಗಳ ಜ್ಞಾನವು ಬಂದರೆ ಅದ್ವೈತಾತ್ಮ ಜ್ಞಾನವು ಬರಲಾರದು. ಆದುದರಿಂದ ಅದ್ವೈತಾತ್ಮವಿಷಯಕವಾದ ಜ್ಞಾನವು ಸಾತ್ವಿಕವೆಂದು ಗೀತಾ ಶ್ಲೋಕವು ಹೇಳುತ್ತದೆ ಎಂಬ ಶಂಕರಾಚಾರ್ಯರ ನಿಶ್ಚಯವು ಅತ್ಯಂತ ಅಸಂಗತವಾದುದು.

**2.** ಶ್ರೀ ಕೃಷ್ಣನು ಸ್ಪಷ್ಟವಾಗಿ ಸರ್ವ ಭೂತಗಳಲ್ಲಿ ಒಂದು ( ಆತ್ಮ) ವಸ್ತುವನ್ನು ತಿಳಿಯುವ ಜ್ಞಾನವು ಸಾತ್ವಿಕವೆಂದು ಹೇಳಿರುತ್ತಾನೆ. ಇದರಿಂದ ಭೂತಗಳಿಗೂ ಆತ್ಮನಿಗೂ ಭೇದವೇ ಪ್ರಾಪ್ತವಾಗುವುದರಿಂದ ಭೇದಜ್ಞಾನವೇ ಸಾತ್ವಿಕವೆಂದು ಶ್ರೀ ಕೃಷ್ಣನ ನಿಶ್ಚಯವಿರುತ್ತದೆ. "ಭೂತ" ಪದವು ಕೇವಲ ಜಡತತ್ವಗಳನ್ನು ನಿರೂಪಿಸುವುದಿಲ್ಲ.

1. **ದ್ವೌಭೂತಸರ್ಗೌಲೋಕೇಸ್ಮಿನ್ ।** —(16. 6.)
ಪ್ರಾಣಿಗಳ ಸೃಷ್ಟಿಯು ಎರಡು ಪ್ರಕಾರವಾಗಿರುವುದು.

2. **ಕ್ಷರಃ ಸರ್ವಾಣಿಭೂತಾನಿ ।** —(15. 16.)
ಸರ್ವ ಪ್ರಾಣಿಗಳೂ ಕ್ಷರಪುರುಷರು.

3. **ಯತಃ ಪ್ರವೃತ್ತಿರ್ಭೂತಾನಾಂ ।** —(18. 46.)
ಪ್ರಾಣಿಗಳಿಗೆ ಪರಮಾತ್ಮನಿಂದ ಪ್ರವೃತ್ತಿಯುಂಟಾಗುವುದು.

4. **ಸರ್ವಾಣಿಭೂತಾನಿ ನತ್ವಂ ಶೋಚಿತುಮರ್ಹಸಿ ।** —(2. 30.)
ಸರ್ವಪ್ರಾಣಿಗಳನ್ನೂ ಕುರಿತು ನೀನು ಶೋಕಪಡಬೇಡ.

5. **ಅಕೀರ್ತಿಂ ಚಾಪಿಭೂತಾನಿ ಕಥಯಿಷ್ಯಂತಿತೇಽವ್ಯಯಾಂ ।**
—(2. 34.)
ಪ್ರಾಣಿಗಳು ನಿನ್ನ ಶಾಶ್ವತವಾದ ಅಪಕೀರ್ತಿಯನ್ನು ಕಥನ ಮಾಡುತ್ತಾರೆ.

6. **ಯಾ ನಿಶಾಸರ್ವಭೂತಾನಾಂ ತಸ್ಯಾಂಜಾಗರ್ತಿಸಂಯಮೀ ।**
**ಯಸ್ಯಾಂ ಜಾಗ್ರತಿಭೂತಾನಿ ಸಾನಿಶಾ ಪಶ್ಯತೋಮುನೇಃ ॥**
—(2. 69.)

7. **ಅನ್ನಾದ್ಭವಂತಿ ಭೂತಾನಿ ।** —(3. 14.)

8. **ಪ್ರಕೃತಿಂ ಯಾಂತಿಭೂತಾನಿ ।** —(3. 33.)

9. **ಭೂತಾನಾ ಮೀಶ್ವರೋಪಿಸನ್ ।** —(4. 6.)

10. **ಸುಹೃದಂ ಸರ್ವಭೂತಾನಾಂ ಜ್ಞಾತ್ವಾಮಾಂ ಶಾಂತಿಮೃಚ್ಛತಿ ।**
—(5. 29.)

11. **ಸಮಃ ಸರ್ವೇಷುಭೂತೇಷು ಮದ್ಭಕ್ತಿಂ ಲಭತೇಪರಾಂ ।**
—(18. 54.)

12. **ಭವಂತಿಭಾವಾಭೂತಾನಾಂ ಮತ್ತಏವ ಪೃಥಗ್ವಿಧಾಃ ।**
—(10. 5.)

ಇತ್ಯಾದಿ ಬಹು ಸ್ಥಳಗಳಲ್ಲಿ "ಭೂತಂ" ಎಂದರೆ ಪ್ರಾಣಿಯು ಎಂಬ ಅರ್ಥವು ನಿರವಕಾಶವಾಗಿ ಬರುವುದು. ಭಗವದ್ಗೀತೆಯಲ್ಲಿ ಭೂತಶಬ್ದದಿಂದ

ಕೇವಲ ಜಡವನ್ನು ತೆಗೆದುಕೊಳ್ಳಬೇಕಾಗುವ ಸ್ಥಳಗಳು ಅತಿ ವಿರಳವಾಗಿರುವುವು. ಇಷ್ಟು ವಿವಾದವು ಯಾತಕ್ಕೆ ? ಇದೇ ಅರ್ಥವನ್ನು ನಿರೂಪಿಸುವ ಹದಿನೆಂಟನೆಯ ಅಧ್ಯಾಯದಲ್ಲಿ, ಪ್ರಾಣಿಯು ಎಂಬ ನಿರವಕಾಶವಾದ ಅರ್ಥದಲ್ಲಿಯೇ " ಭೂತ " ಶಬ್ದವನ್ನು ಪ್ರಯೋಗ ಮಾಡಿ, ಸಮಸ್ತ ಭೂತಗಳಲ್ಲಿಯೂ ಒಬ್ಬನೇ ಈಶ್ವರನು ನಿಯಾಮಕನಾಗಿರುತ್ತಾನೆ ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ :—

**13. ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ ।**
**ಭ್ರಾಮಯರ್ನಸರ್ವಭೂತಾನಿ ಯಂತ್ರಾರೂಢಾನಿಮಾಯಯಾ ॥**
**—(18. 61.)**

ಪರಮಾತ್ಮನು **ಸರ್ವ ಪ್ರಾಣಿಗಳ ಹೃದಯಪ್ರದೇಶದಲ್ಲಿ** ದೇಹಾರೂಢರಾದ ಸರ್ವ ಪ್ರಾಣಿಗಳನ್ನೂ ನಾನಾ ವ್ಯಾಪಾರಗಳಲ್ಲಿ ಪ್ರವರ್ತಿಸುವವನಾಗಿ ಕುಳಿತಿರುತ್ತಾನೆ.

ಇಲ್ಲಿ ಭೂತಶಬ್ದದಿಂದ ಜಡಗಳನ್ನು ತೆಗೆದುಕೊಳ್ಳುವುದಕ್ಕಾಗುವುದಿಲ್ಲ. ಜಡಗಳಿಗೆ ಹೃದಯ ಪ್ರದೇಶವೆಲ್ಲಿಂದ ಬಂತು ? ಕರ್ಮದಲ್ಲಿ ಪ್ರವೃತ್ತಿಯು ತಾನೇ ಹೇಗೆ ಬರುವುದು ? ಶ್ರೀ ಕೃಷ್ಣನು ಸರ್ವ ಪ್ರಾಣಿಗಳಲ್ಲೂ ಪರಮಾತ್ಮನು ಒಬ್ಬನೇ ಇರುವನು ಎಂದು ಹೇಳಿರುತ್ತಾನಾದುದರಿಂದ, ಸರ್ವ ಪ್ರಾಣಿಗಳಲ್ಲಿಯೂ ಒಬ್ಬನೇ ಪರಮಾತ್ಮನು ಅಧಿಷ್ಠಾನಗಳು ಭಿನ್ನವಾದರೂ ತಾನು ಅಭಿನ್ನನಾಗಿಯೇ ಇರುವನು ಎಂಬ ಜ್ಞಾನವು ಸಾತ್ವಿಕವು " ಎಂದೇ ಈ ಶ್ಲೋಕಾರ್ಥವನ್ನು ಮಾಡಬೇಕು.

**ಪ್ರಶ್ನೆ—** " ಯತ್ತುಕೃತ್ಸ್ನವದೇಕಸ್ಮಿ‌ನ್ ಕಾರ್ಯೇಸಕ್ತಂ " ಎಂಬ ವಾಕ್ಯದಲ್ಲಿ ಒಂದು ಕಾರ್ಯದಲ್ಲಿ " ಸರ್ವ " ದರಂತೆ ಅಥವಾ " ಪೂರ್ಣ " ದಂತೆ ತಿಳಿಯುವ ಜ್ಞಾನವು ತಾಮಸವು ಎಂದು ಇರುವುದು. ಒಂದು ಕಾರ್ಯವನ್ನು ಕೃತ್ಸ್ನವು ( ಸರ್ವವು ) ಎಂದು ತಿಳಿಯುವ ಜ್ಞಾನವು ತಾಮಸವು ಎಂದು ಅರ್ಥ ಮಾಡಬಹುದು. ಒಬ್ಬ ಜೀವನು ಪೂರ್ಣಬ್ರಹ್ಮನು ಎಂದು ತಿಳಿಯುವ ಜ್ಞಾನವು ತಾಮಸವು ಎಂದು ಅರ್ಥ ಮಾಡುವುದರಲ್ಲಿ ಕಾರಣವೇನು ?

**ಉತ್ತರ—** ಒಂದು ಕಾರ್ಯದಲ್ಲಿ "ಪೂರ್ಣ" ದಂತೆ ತಿಳಿಯುವ ಜ್ಞಾನವು ತಾಮಸವು ಎಂದೇ ನಾವೂ ಅರ್ಥ ಮಾಡುತ್ತೇವೆ. ಆದರೆ ಇಲ್ಲಿ "ಕಾರ್ಯ" ವೆಂಬ ಪದಕ್ಕೆ, ಜೀವನೆಂಬ ಅರ್ಥವನ್ನು ಮಾಡಬೇಕಾಗಿರುವುದರಿಂದ ಒಂದು ಜೀವನ ವಿಷಯದಲ್ಲಿ " ಕೃತ್ಸ್ನವತ್ " ಜ್ಞಾನವು ಜೀವನೇ ಬ್ರಹ್ಮನು ಎಂಬ ಜ್ಞಾನವು; ಅಥವಾ ಒಂದು ಚೇತನವೇ ಸರ್ವವೂ ( ಒಂದು ಚೇತನಾತಿರಿಕ್ತವಾಗಿ ಯಾವುದೂ ಇಲ್ಲ ) ಎಂಬ ಜ್ಞಾನವು; ಅಥವಾ ಏಕಜೀವವೇ ಎಲ್ಲವೂ ( ಬಹುಜೀವರುಗಳಿಲ್ಲ ) ಇತ್ಯಾದಿ ರೀತಿಯಾದ ಜ್ಞಾನವು ತಾಮಸವು ಎಂದು ಅರ್ಥವಾಗುವದು.

**ಪ್ರಶ್ನೆ—** ಇಲ್ಲಿ ಕಾರ್ಯಪದಕ್ಕೆ " ಜೀವ " ನೆಂದು ಅರ್ಥ ಮಾಡುವುದಕ್ಕೆ ಕಾರಣಗಳೇನು ?

**ಉತ್ತರ—** 1. ಸರ್ವಜೀವರುಗಳಲ್ಲಿಯೂ ಒಬ್ಬ ಬ್ರಹ್ಮನು ಇರುವನು ಎಂದು ತಿಳಿಯುವದು ಸಾತ್ವಿಕಜ್ಞಾನವು ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ. ತಾಮಸಜ್ಞಾನವು ಅದಕ್ಕೆ ವಿರುದ್ಧವಾದುದಾಗಬೇಕು. ಅದಕ್ಕೆ ವಿರುದ್ಧವು ಯಾವುದು ? ಎಲ್ಲಾ ಪ್ರಾಣಿಗಳಲ್ಲೂ ಇರುವವನು ಒಬ್ಬ ಬ್ರಹ್ಮನು ಎಂಬುದಕ್ಕೆ ಒಂದೇ ಪ್ರಾಣಿಯು ಬ್ರಹ್ಮನು; ಒಂದೊಂದು ಪ್ರಾಣಿಯೂ ಬ್ರಹ್ಮನು ಇತ್ಯಾದಿ ರೀತಿಯಾದ ಜ್ಞಾನವಷ್ಟೇ ವಿರುದ್ಧವಾಗುವದು ! ಆದುದರಿಂದ ಈ ಶ್ಲೋಕದ ಕಾರ್ಯ ಶಬ್ದವೂ "ಸರ್ವಭೂತೇಷು" ಎಂಬ ಶ್ಲೋಕದ ಭೂತಶಬ್ದವೂ ಸಮಾನಾರ್ಥವುಳ್ಳವು, ಎಂದರೆ ಉಭಯತ್ರ ಪ್ರಾಣಿಯು, ಜೀವನು ಎಂದು ಅರ್ಥವು. 2. ಕಿಂಚ ಇದು ಚೇತನಪ್ರಕರಣವು; ಆದುದರಿಂದ ಒಬ್ಬ ಚೇತನನ ವಿಷಯದಲ್ಲಿ ಪೂರ್ಣಬ್ರಹ್ಮನಂತೆ ಜ್ಞಾನವು ತಾಮಸವು ಎಂದೇ ಅರ್ಥ ಮಾಡಬೇಕು. ಅದು ಹೇಗೆಂದರೆ, ತಾಮಸಜ್ಞಾನವು ಕೃಷ್ಣದ್ವೇಷರೂಪವಾಗಿ ಅಧೋಗತಿಗೆ ಕಾರಣವಾಗುವದೆಂದು ಶ್ರೀ ಕೃಷ್ಣನು ಹದಿನಾರನೆಯ ಮತ್ತು ಹದಿನೇಳನೆಯ ಅಧ್ಯಾಯಗಳಲ್ಲಿ ಹೇಳಿರುತ್ತಾನೆ. ಹೀಗಿರುವಲ್ಲಿ, ಒಂದು ಕಾರ್ಯವನ್ನು ಸರ್ವವೆಂದು ತಿಳಿಯುವದು ತಾಮಸಜ್ಞಾನವು ಎನ್ನುವದಕ್ಕೆ ಒಂದು ಗಡಿಗೆಯನ್ನು ಪರ್ವತದಂತೆ ತಿಳಿಯುವ ಜ್ಞಾನವು ತಾಮಸವು ಎಂದು ಅರ್ಥ ಮಾಡುವದು ಹೇಗೆ ಉಚಿತವಾಗುವದು ? ಒಂದು ಬಂಡೆಕಲ್ಲನ್ನು ದೊಡ್ಡ ಬೆಟ್ಟವೆಂದು ತಿಳಿಯುವನು ಭ್ರಾಂತನೆಂದೆನಿಸುವನು. ಆದರೆ ಅದು ಅಧೋಗತಿಗೆ ಕಾರಣವಾಗುವಂಥ ತಾಮಸಜ್ಞಾನವಲ್ಲ. ಒಬ್ಬ ಚೇತನನನ್ನು ಪೂರ್ಣಬ್ರಹ್ಮನೆಂದು ತಿಳಿದರೆ, ಪರಬ್ರಹ್ಮದ್ವೇಷರೂಪವಾದ ಅಂಥ ಜ್ಞಾನವು ನರಕಾದ್ಯನರ್ಥಗಳಿಗೆ ಕಾರಣವಾಗಬಹುದು. ಆದುದರಿಂದ ಇಲ್ಲಿ ವಿವಕ್ಷಿತವಾದ ತಾಮಸಜ್ಞಾನವು ಚೇತನವಿಷಯಕವಾದುದು ಎಂದು ನಿಶ್ಚಯಿಸಬೇಕು. ಆದುದರಿಂದ ಒಂದು ಕಾರ್ಯದಲ್ಲಿ ಕೃತ್ಸ್ನದಂತೆ ಜ್ಞಾನವು ಎಂದರೆ ಒಂದು ಚೇತನನಲ್ಲಿ ಪೂರ್ಣಬ್ರಹ್ಮನಂತೆ ಜ್ಞಾನವು ಇತ್ಯಾದಿ ರೀತಿಯಲ್ಲಿಯೇ ಅರ್ಥ ಮಾಡಬೇಕು. 3. ಇಲ್ಲಿ ಜೀವನನ್ನು "ಕಾರ್ಯ" ಪದದಿಂದ ಕರೆದಿರುವುದಕ್ಕೆ ಕಾರಣವುಂಟು " ಅನ್ಯಥಾಕರಣೀಯತ್ವಾತ್ಕಾರ್ಯಃ " ಎಂಬ ವ್ಯುತ್ಪತ್ತಿಯಿಂದ ಸಂಸಾರವಸ್ಥೆಯಿಂದ ಬಿಡಿಸಲ್ಪಟ್ಟು ಮುಕ್ತ್ಯವಸ್ಥೆಯನ್ನು ಹೊಂದಿಸಲ್ಪಡುವವನಾದುದರಿಂದ ಜೀವನು ಕಾರ್ಯನೆನ್ನಿಸುವನು. ಕಾರ್ಯದೇಹವುಳ್ಳವನಾದುದರಿಂದಲಾದರೂ ಕಾರ್ಯವೆಂದು ಜೀವನನ್ನು ಕರೆಯಬಹುದು. ಈ ಗೀತಾ ಶ್ಲೋಕಾರ್ಥವನ್ನು ವಿವರಿಸುವ ಪದ್ಮಪುರಾಣ ವಚನವು ಮೊದಲನೆಯ ಅರ್ಥದಲ್ಲಿ ಸಹಾಯಕವಾಗಿರುತ್ತದೆ.

**ಅನ್ಯಥಾಕರಣೀಯತ್ವಾತ್ಕಾರ್ಯಾಖ್ಯಂಜೀವಮೇವಯಃ ।**
**ಅಕಾರ್ಯಂ ಬ್ರಹ್ಮಜಾನಾತಿ ಸಏವಾಖಿಲಮಿತ್ಯಪಿ ।**

**ಏಕಜೀವಪರಿಜ್ಞಾನಾತ್ಕೃತ್ಸ್ನಜ್ಞೋಽಸ್ಮೀತಿಮನ್ಯತೇ ।**
**ಸಮುಖ್ಯತಾಮಸಜ್ಞಾನೀ......................॥ ಪಾದ್ಮೇ ॥**

ಅರ್ಥವು— " ಸಂಸಾರಾವಸ್ಥೆಯಿಂದ ಮುಕ್ತನಾಗಿ ಮಾಡಲ್ಪಡುವದರಿಂದ ಕಾರ್ಯನೆಂದು ಕರೆಯಲ್ಪಡುವ ಜೀವನನ್ನು ಅಕಾರ್ಯನಾದ ( ಅವಸ್ಥಾಭೇದವಿಲ್ಲದೆ ಶಶ್ವದೇಕ ಪ್ರಕಾರವಾಗಿರುವ ) ಬ್ರಹ್ಮನೆಂದು ತಿಳಿಯುವವನು; ಅಥವಾ ಒಂದು ಜೀವನನ್ನು ತಿಳಿಯುವದರಿಂದ ಸರ್ವವನ್ನೂ ತಿಳಿದಂತಾಯಿತೆಂದು ತಿಳಿಯುವವನು; ಇವರು ತಾಮಸಜ್ಞಾನವುಳ್ಳವರು. "

ಜೀವನಿಗೆ ಮುಕ್ತಿಯು ಮುಂದೆ ಬರುವದೆಂಬುದರಲ್ಲಿ " ಶಾಂತಿಮಾಪ್ನೋತಿ ನೈಷ್ಠಿಕೀಂ. " "ವಿಶತೇತದನಂತರಂ " " ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ " ಇತ್ಯಾದಿ ಶ್ರೀ ಕೃಷ್ಣನ ಅನೇಕ ವಾಕ್ಯಗಳು ಆಧಾರವಾಗಿರುತ್ತವೆ. 4. ಅಥವಾ " ಕಾರ್ಯೇ " ಎಂಬ ಪದಕ್ಕೆ " ದೇಹೇ " ಎಂದರೆ ದೇಹ ವಿಷಯದಲ್ಲಿ ಎಂದೇ ಅರ್ಥ ಮಾಡಬೇಕೆಂದು ನಿರ್ಬಂಧವಿರುವ ಪಕ್ಷಕ್ಕೆ, ಈ ಶ್ಲೋಕವನ್ನು ಮತ್ತೊಂದು ವಿಧವಾಗಿ ಯೋಜನೆ ಮಾಡಿ ಅರ್ಥ ಹೇಳಬಹುದು. "ಯತ್ತುಕೃತ್ಸ್ನವದೇಕಸ್ಮಿನ್ " ಎಂದೂ " ಕಾರ್ಯೇಽಸಕ್ತಂ " ಎಂದೂ ಬಿಡಿಸಿ ಅರ್ಥ ಮಾಡಬಹುದು. ಆಗ ಅನಾಯಾಸವಾಗಿ ಯಾವ ಜ್ಞಾನವು ಒಂದು ಚೇತನ ವಿಷಯದಲ್ಲಿ ಪೂರ್ಣನಾದ ಬ್ರಹ್ಮನಂತೆ ತಿಳಿಯುವದೋ ಮತ್ತು ದೇಹದಲ್ಲಿ ಅಭಿಮಾನದಿಂದ ಆಸಕ್ತವಾಗಿರುವದೋ ಅದು ತಾಮಸವು ಎಂದು ಅರ್ಥವಾಗುವದು. "ಈಶ್ವರೋಽಹಂ" ಮಾಮಾತ್ಮಪರದೇಹೇಷುಪ್ರದ್ವಿಷಂತಃ " ಎಂಬ ಮತ್ತು " ಸಕ್ತಾಃ ಕರ್ಮಣ್ಯವಿದ್ವಾಂಸೋ " ಪ್ರಕೃತೇರ್ಗುಣಸಂಮೂಢಾಃ ಸಜ್ಜಂತೇ ಗುಣಕರ್ಮಸು " ಇತ್ಯಾದಿ ಶ್ರೀ ಕೃಷ್ಣನ ವಾಕ್ಯಗಳು ಈ ವಿಷಯದಲ್ಲಿ ಆಧಾರವಾಗಿರುವವು. ಹೀಗೆ ಜೀವಬ್ರಹ್ಮರ ಭೇದ ಜ್ಞಾನವು ಸಾತ್ವಿಕವೆಂದೂ, ಜೀವನೇ ಬ್ರಹ್ಮನೆಂಬ ಜ್ಞಾನವು ತಾಮಸವು ಎಂದೂ ಸಿದ್ಧವಾಯಿತು.

ಕರ್ಮತ್ರೈವಿಧ್ಯವು ಶ್ರೀ ಕೃಷ್ಣನಿಂದ ಈ ರೀತಿ ನಿರೂಪಿಸಲ್ಪಟ್ಟಿರುವದು.

(12) **ನಿಯತಂ ಸಂಗರಹಿತ ಮರಾಗದ್ವೇಷತಃಕೃತಂ ।**
**ಅಫಲ ಪ್ರೇಪ್ಸುನಾ ಕರ್ಮಯತ್ತತ್ಸಾತ್ವಿಕ ಮುಚ್ಯತೇ ।**
**ಯತ್ತುಕಾಮೇಪ್ಸುನಾ ಕರ್ಮಸಾಹಂಕಾರೇಣವಾಪುನಃ ।**
**ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಂ ।**
**ಅನುಬಂಧಂ ಕ್ಷಯಂಹಿಂಸಾಮನಪೇಕ್ಷ್ಯಚ ಪೌರುಷಂ ।**
**ಮೋಹಾದಾರಭ್ಯತೇ ಕರ್ಮಯತ್ತ ತ್ತಾಮಸಮುಚ್ಯತೇ ॥**
—(18. 23-25)

ನಿಯತವಾದ, *ಕರ್ಮಕರಣದಲ್ಲಿ ಸ್ವಾತಂತ್ರ್ಯಾಭಿಮಾನವಿಲ್ಲದೆ, ರಾಗದ್ವೇಷಗಳನ್ನು ಬಿಟ್ಟು, ಫಲಾಪೇಕ್ಷೆರಹಿತನಾದವನಿಂದ ಮಾಡಲ್ಪಟ್ಟ ಕರ್ಮವು ಸಾತ್ವಿಕವು (ಮುಕ್ತಿಯೋಗ್ಯ ಜೀವಸ್ವಭಾವಾನುಗುಣವಾದುದು: ಸಾತ್ವಿಕ ಗುಣಕಾರ್ಯವು); ಸ್ವರ್ಗಾದಿ ಫಲಾಪೇಕ್ಷೆಯಿಂದ ಸಹಿತನಾದ ಮತ್ತು ಕರ್ತೃತ್ವಾಭಿಮಾನದಿಂದ ಯುಕ್ತನಾದ ಪುರುಷನಿಂದ ಮಾಡಲ್ಪಟ್ಟ, ಅಲ್ಪ ಫಲಕ್ಕೋಸ್ಕರ ಬಹಳಾಯಾಸದಿಂದ ಯುಕ್ತವಾದ ಕರ್ಮವು ರಾಜಸವೆನ್ನಿಸುವದು. ಈ ಕರ್ಮ ಮಾಡಿದರೆ ಇದರಿಂದ ಮತ್ತೊಂದು ಉತ್ಕೃಷ್ಟಕರ್ಮವು ಪ್ರತಿಬದ್ಧವಾಗುವದು ಎಂದು ಪರ್ಯಾಲೋಚಿಸದೆ, ತಾನು ಮಾಡುವ ಕರ್ಮದಿಂದ ಪರರಿಗೆ ಕ್ಷಯವೂ (ನಾಶವೂ), ಹಿಂಸೆಯೂ ಆಗುವದನ್ನೂ ಗಣನೆಗೆ ತರದೆ, ತನ್ನ ಸಾಮರ್ಥ್ಯವು ಆ ಕಾರ್ಯ ಪರಿಸಮಾಪ್ತಿಗೆ ಆಗುವಷ್ಟು ಇಲ್ಲವೆಂಬುದನ್ನೂ ವಿಮರ್ಶೆ ಮಾಡದೆ, ಮೋಹದಿಂದ ಎಂದರೆ ನಾನೇ ಸ್ವತಂತ್ರಕರ್ತನೆಂಬ ಮಿಥ್ಯಾಜ್ಞಾನದಿಂದ ಆರಬ್ಧವಾದ ಕರ್ಮವು ತಾಮಸವೆನ್ನಿಸುವದು; (ತಮೋಯೋಗ್ಯ ಸ್ವಭಾವಾನುಗುಣವಾದುದು; ತಾಮಸ ಗುಣಕಾರ್ಯವು.)

---

* ಹರಿಸರ್ವೋತ್ತಮತ್ವಜ್ಞಾನಪೂರ್ವಕವಾಗಿ, ಭಗವದ್ಭಕ್ತಿಪೂರ್ವಕವಾಗಿ, ಭಗವದರ್ಪಣ ಬುದ್ಧಿಯಿಂದ ಮಾಡಲ್ಪಡುವ ವೇದೋಕ್ತಸ್ವವರ್ಣಾಶ್ರಮೋಚಿತವಾದ ಕರ್ಮವು ನಿಯತಕರ್ಮವೆನ್ನಿಸುವದು. ಇಂಥ ನಿಯತಕರ್ಮವು ವೇದವಿಧಿ ಬದ್ಧರಲ್ಲದ ಮುಕ್ತರಿಗೆ ಸಂಭವಿಸುವುದಿಲ್ಲವಾದುದರಿಂದ ಈ ಪ್ರಕರಣಗಳು ಜೀವಸ್ವಭಾವ ಗುಣಗಳನ್ನು ಹೇಳುವುದಿಲ್ಲವೆಂದು ಭ್ರಮಿಸಕೂಡದು. ಮುಕ್ತರೂ ಸಹ ವೇದೋಕ್ತವಿಹಿತ ಕರ್ಮಗಳನ್ನು ಭಗವದ್ಭಕ್ತಿಪೂರ್ವಕವಾಗಿ ಫಲಾಪೇಕ್ಷೆಯಿಂದ ರಹಿತರಾಗಿ ನಿರಂತರವೂ ಅನುಷ್ಠಾನ ಮಾಡುತ್ತಲೇ ಇರುವರು. 1. **ನಿರಂತರ,** 2. ಸಂಪೂರ್ಣ **ಫಲಾಪೇಕ್ಷೆಯಿಂದ ರಹಿತರಾಗಿ, 3. ಅಹಂತಾಮಮತಾದಿಗಳನ್ನು ಪೂರ್ಣವಾಗಿ ಬಿಟ್ಟು, 4. ನಿಯಮೇನ,** ಭಗವದ್ಧ್ಯಾನಪೂರ್ವಕವಾಗಿ ಕರ್ಮ ಮಾಡುವವರು ಮುಖ್ಯವಾಗಿ ಮುಕ್ತರೇ ಆಗಿರುವದರಿಂದ ಈ ಶ್ಲೋಕಗಳು ಮುಖ್ಯವಾಗಿ ಸಾತ್ವಿಕ ಜೀವಸ್ವರೂಪಾನುಗುಣವಾದ ಕರ್ಮಾಚರಣೆಯನ್ನು ಪ್ರತಿಪಾದಿಸುವವು. ಅಮುಖ್ಯವಾಗಿ ಸಾತ್ವಿಕ ಗುಣದಿಂದ ಸಹಿತರಾದವರ ಕರ್ಮವನ್ನು ನಿರೂಪಿಸುವವು. ಹಾಗಾದರೆ ಮುಕ್ತಿಯಲ್ಲಿಯೂ ಕರ್ಮಬಂಧವು ತಪ್ಪದೇ ಇದ್ದ ಮೇಲೆ ಮುಕ್ತಿಯು ಹೇಗೆ ಪುರುಷಾರ್ಥವಾಗುವದು ಎಂದು ಶಂಕಿಸಕೂಡದು. ಮುಕ್ತರು ಕರ್ಮ **ಬದ್ಧರಲ್ಲ.** ಅವರು ಕರ್ಮ ಪರಿತ್ಯಾಗ ಮಾಡಿದರೆ ಪರಮಾತ್ಮನು ಅವರನ್ನು ದಂಡಿಸುವುದಿಲ್ಲ. ಹೀಗಿದ್ದರೂ ಕಾಮಿನಿಯು ಪ್ರಣಯಭರದಿಂದ ತನ್ನ ಭರ್ತನನ್ನು ಸೇವಿಸುವಂತೆ ತಾಯಿಯು ಪ್ರೀತಿಯಿಂದ ಪುತ್ರ ರಕ್ಷಣೆಯಲ್ಲಿ ತತ್ಪರಳಾಗುವಂತೆ ಪರಮಾತ್ಮನಲ್ಲಿರುವ ಉಜ್ವಲವಾದ ತಮ್ಮ ಭಕ್ತಿಯಿಂದಲೇ ಸರ್ವ ಮುಕ್ತರೂ ತಮಗೆ ಇಷ್ಟವಾದ ವಿಧವಿಧವಾದ ಕರ್ಮಗಳನ್ನು ಮಾಡಿ ಪರಮಾತ್ಮನನ್ನು ಓಲೈಸುವರು, ಆನಂದದಿಂದ ಗಾಯನ ಮಾಡುವವನಿಗೆ ಆಯಾಸವು ಇಲ್ಲದಿರುವಂತೆ, ಮುಕ್ತರಿಗೆ ಕರ್ಮಾನುಷ್ಠಾನದಿಂದ ಆಯಾಸವು ಇಲ್ಲ. ಸುಖೋದ್ರೇಕವೇ ಇರುವದು. ಈ ಪ್ರಮೇಯಗಳೆಲ್ಲಾ "ಬ್ರಹ್ಮಾತ್ವೋಪವದತಿಜಾತವಿದ್ಯಾಂ" ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗುವುದು.

ಕರ್ಮಾಚರಣೆಯಲ್ಲಿ ತತ್ಪರರಾದ ಕರ್ತೃತ್ರೈವಿಧ್ಯವನ್ನು ಶ್ರೀ ಕೃಷ್ಣನು ನಿರೂಪಿಸುತ್ತಾನೆ :—

(13) **ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹ ಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ವಿಕ ಉಚ್ಯತೇ ॥**
**ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃ ಕರ್ತಾರಾಜಸಃ ಪರಿಕೀರ್ತಿತಃ ।**
**ಅಯುಕ್ತಃಪ್ರಾಕೃತಃಸ್ತಬ್ಧಃ ಶಠೋನೈಕೃತಿಕೋಽಲಸಃ ।**
**ವಿಷಾದೀದೀರ್ಘಸೂತ್ರೀಚ ಕರ್ತಾತಾಮಸಉಚ್ಯತೇ ॥**
—(18. 26-28.)

ಕರ್ಮಫಲದಲ್ಲಿ ಸ್ನೇಹರಹಿತನಾಗಿ, ಕರ್ಮ ಮಾಡುವದರಲ್ಲಿ ನಾನು ಸ್ವತಂತ್ರ ಕರ್ತನೆಂದು ತಿಳಿಯದೆ, ಧೈರ್ಯೋತ್ಸಾಹಗಳಿಂದ ಯುಕ್ತನಾಗಿ, ತಾನು ಮಾಡ ತಕ್ಕ ಕಾರ್ಯಕ್ಕೆ ಲೌಕಿಕ ಫಲಗಳು ಅವರ್ಜನೀಯವಾಗಿ ಬಂದರೆ ಸಂತೋಷಪಡದೆ, ಬರದಿದ್ದರೆ ದುಃಖವನ್ನು ಹೊಂದದೆ, ನಿರ್ವಿಕಾರನಾಗಿರುವ ಕರ್ತನು ಸಾತ್ವಿಕನು ( ಮುಕ್ತಿಯೋಗ್ಯ ಸ್ವಭಾವವುಳ್ಳವನು; ಸಾತ್ವಿಕ ಗುಣವುಳ್ಳವನು ); ಕೀರ್ತ್ಯಾದಿ ಕಾಮವುಳ್ಳ, ( ಸ್ವರ್ಗಾದಿ ) ಕರ್ಮಫಲದಲ್ಲಿ ಅಪೇಕ್ಷೆಯುಳ್ಳ ಕರ್ಮಫಲಪ್ರಾಪ್ತಿಗೆ ಬೇಕಾಗುವಷ್ಟು ಧನವ್ಯಯವನ್ನು ಮಾಡದ, ( ಪಶ್ವಾದಿಗಳ ) ಹಿಂಸಾ ಮಾಡುವ ಸ್ವಭಾವವುಳ್ಳ, ಅಶುಚಿಯಾದ ಮತ್ತು ಕರ್ಮಫಲವು ಪ್ರಾಪ್ತವಾದರೆ ಆನಂದ ಭರಿತನೂ, ಫಲಪ್ರಾಪ್ತವಾಗದಿದ್ದರೆ ವಿಷಾದಗ್ರಸ್ತನೂ ಆಗುವ, ಕರ್ತನು ರಾಜಸ ನೆನ್ನಿಸುವನು. ಭಗವದರ್ಪಣಾದಿ ಕರ್ಮಫಲಪ್ರಾಪ್ತ್ಯುಪಾಯಗಳಿಂದ ರಹಿತನಾದ, ಪುಣ್ಯಹೀನನಾದ ಅಥವಾ ಅಜ್ಞನಾದ, ಗುರುಹಿರಿಯರಲ್ಲಿ ನಮ್ರನಾಗದ, ಗೂಢ ದ್ವೇಷದಿಂದ ಕರ್ಮ ಮಾಡುವ ನೀಚ ಕರ್ಮದಲ್ಲಿ ನಿರತನಾದ, ಕರ್ಮಕರ್ತವ್ಯ ಕಾಲದಲ್ಲಿ ಆಲಸ್ಯ ಮಾಡುವ, ವಿಷಾದದಿಂದ ಸಹಿತನಾದ ( ಸ್ವಲ್ಪ ದುಃಖವಾದರೆ ತಲೆಯ ಮೇಲೆ ಕೈಯಿಟ್ಟುಕೊಂಡು, ಸರ್ವಕಾರ್ಯಗಳನ್ನೂ ಪರಿತ್ಯಾಗ ಮಾಡಿಕೂಡುವ ), ಪರರ ಅಲ್ಪದೋಷಗಳನ್ನೂ ಸಹ ಬಹುಕಾಲ ಸ್ಮರಣೆಯಲ್ಲಿಟ್ಟುಕೊಂಡು, ಅನುಚಿತ ವೇಳೆಯಲ್ಲಿ ಅದನ್ನು ಉದ್ಘೋಷಿಸಿ, ಅವರಿಗೆ ಹಾನಿಯುನ್ನುಂಟು ಮಾಡುವ ಕರ್ತನು ತಾಮಸನು ( ತಮೋಯೋಗ್ಯ ಸ್ವಭಾವವುಳ್ಳವನು; ತಾಮಸ ಗುಣವುಳ್ಳವನು ).

ಶ್ರೀ ಕೃಷ್ಣನು ಉತ್ತರ ಶ್ಲೋಕಗಳಲ್ಲಿ ಬುದ್ಧಿತ್ರೈವಿಧ್ಯವನ್ನು ನಿರೂಪಿಸುತ್ತಾನೆ :—

(14) **ಪ್ರವೃತ್ತಿಂಚನಿವೃತ್ತಿಂಚ ಕಾರ್ಯಾಕಾರ್ಯೇಭಯಾಭಯೇ ।**
**ಬಂಧಂಮೋಕ್ಷಂಚಯಾವೇತ್ತಿ ಬುದ್ಧಿಃಸಾಪಾರ್ಥಸಾತ್ವಿಕೀ ।**
**ಯಯಾಧರ್ಮಮಧರ್ಮಂಚ ಕಾರ್ಯಂಚಾಕಾರ್ಯಮೇವಚ ।**
**ಅಯಥಾವತ್ಪ್ರಜಾನಾತಿ ಬುದ್ಧಿಃಸಾಪಾರ್ಥರಾಜಸೀ ॥**

**ಅಧರ್ಮಂಧರ್ಮಮಿತಿಯಾಮನ್ಯತೇತಮಸಾವೃತಾ ।**
**ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥತಾಮಸೀ ॥**
—(18. 30–32.)

ಸಂಸಾರಹೇತುಭೂತವಾದ ಧರ್ಮಗಳು ಯಾವುವು, ಸಂಸಾರತಾರಕವಾದ ಧರ್ಮಗಳು ಯಾವುವು ಎಂದು ತಿಳಿಯುವ, ಕರ್ತವ್ಯಾಕರ್ತವ್ಯಗಳನ್ನು ವಿವೇಕದಿಂದ ತಿಳಿಯುವ, ಮತ್ತು ಕರ್ತವ್ಯಕರ್ಮಾನುಷ್ಠಾನ, ತದಭಾವಗಳಿಂದ ಆಗುವ ಅಭಯ ಕಾರಣವನ್ನೂ ಭಯಸ್ಥಾನಗಳನ್ನೂ ತಿಳಿಯುವ, ಮತ್ತೂ **ಬಂಧಂಮೋಕ್ಷಂ ಚಯಾವೇತ್ತಿ** * ಬಂಧಪ್ರಕಾರವನ್ನೂ, ಅದರಿಂದ ಬಿಡುಗಡೆಯಾಗುವ ಪ್ರಕಾರ ವನ್ನೂ, ತಿಳಿಯುವ ಬುದ್ಧಿಯು ಸಾತ್ವಿಕವು ( ಮೋಕ್ಷಯೋಗ್ಯ ಜೀವಸ್ವಭಾವಾನು ಗುಣವಾದುದು; ಸಾತ್ವಿಕ ಗುಣಕಾರ್ಯವು. ) ಯಾವ ಬುದ್ಧಿಯು ಅಧರ್ಮವನ್ನೂ ಧರ್ಮವನ್ನೂ, ಕಾರ್ಯಾಕಾರ್ಯಗಳನ್ನೂ ನಿಯಮೇನ ಯಥಾರ್ಥವಾಗಿ ತಿಳಿಯದೆ, ಸ್ವಲ್ಪ ಯಥಾರ್ಥವಾಗಿಯೂ ಸ್ವಲ್ಪ ಅಯಥಾರ್ಥವಾಗಿಯೂ ತಿಳಿಯುವುದೋ ಆ ಬುದ್ಧಿಯು ರಾಜಸವೆನ್ನಿಸುವದು. ಧರ್ಮವನ್ನು ಅಧರ್ಮವೆಂದು ತಿಳಿಯುವ ಮತ್ತು ಮಿಥ್ಯಾಜ್ಞಾನದಿಂದ ಸಹಿತವಾದುದರಿಂದ ಸರ್ವ ಪ್ರಮೇಯಗಳನ್ನೂ ವಿಪ ರೀತವಾಗಿ ನಿಶ್ಚಯಿಸುವ ಬುದ್ಧಿಯು ತಾಮಸವೆನ್ನಿಸುವದು ( ತಮೋಯೋಗ್ಯ ಜೀವಸ್ವಭಾವಾನುಗುಣವಾದುದು; ತಾಮಸ ಗುಣಕಾರ್ಯವು ).

ಇನ್ನು ಮುಂದೆ ಶ್ರೀ ಕೃಷ್ಣನು ಧೃತಿಭೇದವನ್ನು ನಿರೂಪಿಸುತ್ತಾನೆ :—

(15) **ಧೃತ್ಯಾಯಯಾಧಾರಯತೇಮನಃ ಪ್ರಾಣೇಂದ್ರಿಯಕ್ರಿಯಾಃ ।**
**ಯೋಗೇನಾವ್ಯಭಿಚಾರಿಣ್ಯಾಧೃತಿಃ ಸಾಪಾರ್ಥಸಾತ್ವಿಕೀ ॥**
**ಯಯಾತುಧರ್ಮಕಾಮಾರ್ಥಾನ್ ಧೃತ್ಯಾಧಾರಯತೇಽರ್ಜುನ ।**
**ಪ್ರಸಂಗೇನಫಲಾಕಾಂಕ್ಷೀ ಧೃತಿಃಸಾ ಪಾರ್ಥರಾಜಸೀ ॥**
**ಯಯಾಸ್ವಪ್ನಂ ಭಯಂಶೋಕಂ ವಿಷಾದಂ ಮದಮೇವಚ ।**
**ನವಿಮುಂಚತಿದುರ್ಮೇಧಾಃ ಧೃತಿಃ ಸಾಪಾರ್ಥತಾಮಸೀ ॥**
—(18. 33-35.)

---

* ಶ್ರೀ ಕೃಷ್ಣನು ಸತ್ಯವಾದ ಬಂಧಮೋಕ್ಷಗಳನ್ನು ತಿಳಿಯುವ ಬುದ್ಧಿಯು ಸಾತ್ವಿಕವೆಂದು ಹೇಳಿರುವನು. ಶಂಕರಾಚಾರ್ಯರು " **ನಬಂಧೋನಮೋಕ್ಷಃ** " ಎಂದು ಬಂಧ ಮೋಕ್ಷಗಳನ್ನು ಸತ್ಯವೆಂದು ತಿಳಿಯಬಾರದೆಂದು ಹೇಳಿರುವರು. ಶ್ರೀ ಕೃಷ್ಣನು ಬ್ರಹ್ಮವಿಚಾರಕ್ಕೆ ಮೊದಲಿರುವ ಬುದ್ಧಿಯನ್ನು ವರ್ಣಿಸಿರುವನೆಂದು ತಿಳಿಯಬಾರದು. **ವಿಚಾರ ಮಾಡುವುದೇ** ಬುದ್ಧಿ ಕಾರ್ಯವು. ಅದರಲ್ಲಿಯೂ ಸಾತ್ವಿಕ ಬುದ್ಧಿಯು ಸುಳ್ಳನ್ನು ವಿಷಯೀಕರಿಸಲಾರದು. ಬಂಧಮೋಕ್ಷ ಗಳನ್ನು ಭಿನ್ನಭಿನ್ನವಾಗಿ ಚೆನ್ನಾಗಿ ತಿಳಿಯುವ ಬುದ್ಧಿಯು ಸಾತ್ವಿಕವೆಂದು ಶ್ರೀ ಕೃಷ್ಣನೇ ಹೇಳಿರುವುದ ರಿಂದ, ಬಂಧುಮಿಥ್ಯಾತ್ವಾದಿಗಳನ್ನು ಹೇಳುವ ಮತವು ಆತನಿಗೆ ಪರಮವಿರುದ್ಧವೆಂದು ತಿಳಿದು ಬರುತ್ತದೆ.

ಎಲೈ ಪಾರ್ಥನೇ! ವಿಧಿವಿಹಿತ ವಿಷಯದಲ್ಲಿ ಮನಸ್ಸಿನ, ಪ್ರಾಣಗಳ ಮತ್ತು ಇಂದ್ರಿಯಗಳ ವ್ಯಾಪಾರಗಳನ್ನು ಹಿಡಿದು ನಿಲ್ಲಿಸುವ, ಅನನ್ಯವಾದ ಭಗವದ್ಭಕ್ತಿ ರೂಪವಾದ ಉಪಾಯದಿಂದ ಸಹಿತವಾದ, ಧೈರ್ಯವು ಸಾತ್ವಿಕವೆನ್ನಿಸುವದು (ಮುಕ್ತಿಯೋಗ್ಯಸ್ವಭಾವಾನುಗುಣವಾದುದು, ಸಾತ್ವಿಕ ಗುಣಕಾರ್ಯವು). ಧರ್ಮ ಕಾಮ ವಿಷಯಕ ಉದ್ಯೋಗದಲ್ಲಿ ಮನ ಆದಿ ಇಂದ್ರಿಯಗಳ ಕ್ರಿಯೆಗಳನ್ನು ಧರಿಸಿರುವ, ಅಭಿಮಾನದಿಂದ ಕರ್ಮಫಲದಲ್ಲಿ ಅಪೇಕ್ಷೆಯುಳ್ಳ ಧೃತಿಯು ರಾಜಸ ಧೃತಿಯೆನ್ನಿಸುವದು. ದುಷ್ಟ ಬುದ್ಧಿಗೆ ವಶನಾದ ಪುರುಷನು, ಯಾವ ಧೈರ್ಯವನ್ನು ಅವಲಂಬಿಸಿ ಅತಿನಿದ್ರಾ, ಭಯ, ಶೋಕ, ವಿಷಾದ, ಮದಗಳನ್ನು ಬಿಡುವುದಿಲ್ಲವೋ ಅಂಥ ಧೃತಿಯು ತಾಮಸವು (ತಮೋಯೋಗ್ಯ ಸ್ವಭಾವಾನುಗುಣವಾದುದು; ತಾಮಸ ಗುಣಕಾರ್ಯವು).

ಮುಂದಿನ ಶ್ಲೋಕಗಳಲ್ಲಿ, ಶ್ರೀ ಕೃಷ್ಣನು ಸಾತ್ವಿಕಾದಿ ಜೀವರುಗಳ ಸಂಸಾರದಲ್ಲಿ ಅನುಭವಿಸುವ ಸುಖದ ತ್ರೈವಿಧ್ಯವನ್ನು ನಿರೂಪಿಸುತ್ತಾನೆ :—

**(16) ಯತ್ತದಗ್ರೇವಿಷಮಿವ ಪರಿಣಾಮೇಽಮೃತೋಪಮಂ ।**
**ತತ್ಸುಖಂಸಾತ್ವಿಕಂಪ್ರೋಕ್ತಮಾತ್ಮಬುದ್ಧಿಪ್ರಸಾದಜಂ ॥**
**ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಂ ।**
**ಪರಿಣಾಮೇ ವಿಷಮಿವ ತತ್ಸುಖಂರಾಜಸಂಸ್ಮೃತಂ ॥**
**ಯದಗ್ರೇಚಾನುಬಂಧೇಚ ಸುಖಂಮೋಹನಮಾತ್ಮನಃ ।**
**ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಂ ॥**
—(18. 37–39.)

ಆರಂಭದಲ್ಲಿ ಆಯಾಸಸಾಧ್ಯವಾದುದರಿಂದ ವಿಷದಂತೆ ಕಂಡು ಬಂದರೂ, ಬ್ರಹ್ಮಜ್ಞಾನ ಮತ್ತು ಮನಃ ಪ್ರಸಾದ (ವಿಷಯಗಳಲ್ಲಿ ಮನಸ್ಸು ಹೋಗದೇ ಇರುವುದು,) ಇವುಗಳಿಂದ ಉತ್ಪನ್ನವಾಗಿ, ಪರಿಣಾಮದಲ್ಲಿ ಅಮೃತಸದೃಶವಾಗಿ, ಅತ್ಯಂತ ಹಿತಕರವಾದ ಸುಖವು ಸಾತ್ವಿಕವು (ಮೋಕ್ಷಯೋಗ್ಯರು ಅನುಭವಿಸುವ ಸ್ವಭಾವಾನುಗುಣವಾದ ಸುಖವು; ಸಾತ್ವಿಕ ಗುಣಕಾರ್ಯವು). ಶಬ್ದಾದಿ ವಿಷಯಗಳಿಗೂ ಶ್ರೋತ್ರಾದಿ ಇಂದ್ರಿಯಗಳಿಗೂ ಸನ್ನಿಕರ್ಷದಿಂದ ಉತ್ಪನ್ನವಾಗಿ, ಆರಂಭದಲ್ಲಿ ಬಹು ಹಿತಕರವಾಗಿ, ಪರಿಣಾಮದಲ್ಲಿ ಬಹು ದುಃಖಕರವಾದ ಸುಖವು ರಾಜಸವೆಂದು ಹೇಳಲ್ಪಡುವದು. ಯಾವುದು ಆರಂಭ ಕಾಲದಲ್ಲಿಯೂ ಪರಿಣಾಮದಲ್ಲಿಯೂ ಆತ್ಮಮೋಹಕವೋ, ಎಂದರೆ ತನ್ನನ್ನೇ ಪರವಶನನ್ನಾಗಿ ಮಾಡುವುದೋ ಅಂಥ ನಿದ್ರಾ, ಆಲಸ್ಯ, ಪ್ರಮಾದಗಳಿಂದ ಉತ್ಪನ್ನವಾದ ಸುಖವು ತಾಮಸವು (ತಮೋಯೋಗ್ಯರು ಸಂಸಾರದಲ್ಲಿ ಅನುಭವಿಸುವ ಸುಖವು; ತಾಮಸ ಗುಣಕಾರ್ಯವು).

ಈ ವಾಕ್ಯಗಳ ಪರ್ಯಾಯಲೋಚನೆಯಿಂದ ತ್ರಿವಿಧರಾದ ಜೀವರುಗಳು ಸ್ವರೂಪಸಿದ್ಧವಾದ ಧರ್ಮಗಳಿಂದ ಸಹಿತರಾಗಿ ಸಂಸಾರದಲ್ಲಿಯೂ ಕೂಡ ಪ್ರಾಯೇಣ ಸ್ವಭಾವಾನುಗುಣವಾದ ಆಹಾರ, ಬುದ್ಧಿ, ಕರ್ಮಾದಿಗಳಿಂದ ಯುಕ್ತ ರಾಗಿರುವರೆಂದು ನಿಶ್ಚಿತವಾಗುವದು.

ಮುಕ್ತಿಯೋಗ್ಯರ ಪ್ರಬಲವಾದ ವೈಲಕ್ಷಣ್ಯವು ನವಮಾಧ್ಯಾಯದಲ್ಲಿ ಶ್ರೀ ಕೃಷ್ಣ ನಿಂದ ನಿರೂಪಿತವಾಗಿರುತ್ತದೆ. ಅಸುರಸ್ವಭಾವವನ್ನು ಹೊಂದಿದವರು ( ತಮೋ ಯೋಗ್ಯರು ) ಪರಮಾತ್ಮನನ್ನು ತಿಳಿಯುವ ಪ್ರಕಾರವನ್ನು ಶ್ರೀ ಕೃಷ್ಣನು ಹೇಳು ತ್ತಾನೆ :—

(17) **ಅವಜಾನಂತಿಮಾಂ ಮೂಢಾ ಮಾನುಷೀ ತನುಮಾಶ್ರಿತಂ ।**
**ಪರಂಭಾವಮಜಾನಂತೋ ಮಮಭೂತಮಹೇಶ್ವರಂ ।**
**ಮೋಘಾಶಾ ಮೋಘಕರ್ಮಾಣೋಮೋಘಜ್ಞಾನಾ**
**ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥**
—(9. 11-12.)

ಈ ಶ್ಲೋಕಗಳು ಪೂರ್ವದಲ್ಲೇ ವಿವೃತವಾಗಿರುವವು. ಇಲ್ಲಿ ಶ್ರೀಕೃಷ್ಣ ನನ್ನು ಸರ್ವೋತ್ತಮನಾದ ಪರಬ್ರಹ್ಮನೆಂದು ತಿಳಿಯದೆ, ಮನುಷ್ಯಮಾತ್ರನೆಂದು ತಿಳಿಯುವವರು ಬುದ್ಧಿಭ್ರಂಶಕರವಾದ ಅಸುರ **ಸ್ವಭಾವವನ್ನು** ಹೊಂದಿದವರು ಎಂದು ಸ್ಪಷ್ಟವಾಗಿ ಬಂದಿರುತ್ತದೆ.

ಮುಕ್ತಿಯೋಗ್ಯರು ಪರಮಾತ್ಮನನ್ನು ತಿಳಿಯುವ ಪ್ರಕಾರವು ಉತ್ತರ ಶ್ಲೋಕ ಗಳಲ್ಲಿ ಶ್ರೀ ಕೃಷ್ಣನಿಂದ ನಿರೂಪಿತವಾಗಿರುವದು—

(18) **ಮಹಾತ್ಮಾನಸ್ತುಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಂ ।**
**ಸತತಂ ಕೀರ್ತಯಂತೋಮಾಂ ಯತಂತಶ್ಚ ದೃಢವ್ರತಾಃ ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥**
—(9. 13-14.)

ಈ ಶ್ಲೋಕಗಳ ವ್ಯಾಖ್ಯಾನವೂ ಪೂರ್ವದಲ್ಲಿಯೇ ಮಾಡಲ್ಪಟ್ಟಿರುವದು. ಇಲ್ಲಿ ಶ್ರೀ ಕೃಷ್ಣನನ್ನು ಅನನ್ಯವಾಗಿ ಭಜನೆ ಮಾಡುವವರು ದೈವೀ ಸ್ವಭಾವವನ್ನು ಹೊಂದಿದವರು ಎಂದರೆ ಮುಕ್ತಿಯೋಗ್ಯಚೇತನರೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿ ರುತ್ತದೆ.

ಇದರಿಂದ ಮುಕ್ತಿಯೋಗ್ಯರು ಸಂಸಾರಾವಸ್ಥೆಯಲ್ಲಿಯೂ ಕೂಡ ಕೃಷ್ಣೋ ಪಾಸ್ತಿಯಲ್ಲಿ ಲೋಲುಪರಾಗಿ ಭಗವದ್ಭಕ್ತ್ಯಾದಿಸದ್ಗುಣಗಳಿಂದ ಯುಕ್ತರಾಗಿರುತ್ತಾರೆ;

ತಮೋಯೋಗ್ಯರು ಸಂಸಾರಾವಸ್ಥೆಯಲ್ಲಿ ಕೂಡ ವಿಷ್ಣು ಮಾಹಾತ್ಮ್ಯವನ್ನು ತಿಳಿಯ ಲಾರದೆ, ಪರಬ್ರಹ್ಮನನ್ನು ಅವಮಾನ ಮಾಡುತ್ತಾರೆ ಎಂದು ಸಿದ್ಧವಾಯಿತು. ಶ್ರೀ ಕೃಷ್ಣನು ಅಂಥ ದುರ್ಜನರ ಅಭಿಲಾಷೆಗಳೊಂದೂ ಕೈಗೂಡಲಾರವೆಂದು ಸ್ಪಷ್ಟವಾಗಿ ಹೇಳಿರುತ್ತಾನೆ. ಈ ಉಭಯವಿಧ ಚೇತನರನ್ನೂ ಕಂಡು ಹಿಡಿಯುವ ಪಕ್ಷೆ ನಾವು ಬಹುದೂರ ಹೋಗಬೇಕಾಗಿಲ್ಲ. ಯೋಗಿಗಳಿಗೂ ಬಹು ಪ್ರಯತ್ನ ದಿಂದ ಗಮ್ಯನಾದ ಸಾಕ್ಷಾಜ್ಜಗನ್ನಾಥನು ತಾನೇ ರಾಯಭಾರಿಯಾಗಿ ಬಂದು, ವಿಶ್ವ ರೂಪವನ್ನು ತೋರಿಸಿದರೂ ಸಹ ವಿಮೂಢನಾದ ದುರ್ಯೋಧನನು ಅವನ ದಿವ್ಯ ವಾದ ಅಪ್ರಾಕೃತಸ್ವರೂಪವನ್ನು ತಿಳಿಯಲಾರದೆ, ಹದಿನಾಲ್ಕು ಲೋಕಗಳನ್ನೂ ಕರ್ಮಬಂಧದಲ್ಲಿ ಬಿಗಿದಿರುವ ಪರಬ್ರಹ್ಮನನ್ನು ಮಾರುದ್ದ ಸೆಣಬಿನ ಹಗ್ಗದಿಂದ ಬಂಧಿಸುವದಕ್ಕೆ ಯತ್ನ ಮಾಡಿದನು; ಮತ್ತು ಯುದ್ಧಭೂಮಿಯಲ್ಲಿಯೂ ಸಹ ಅವ್ಯಯನಾದ ಶ್ರೀ ಕೃಷ್ಣನ ನಾಶವನ್ನು ಇಚ್ಛಿಸಿದನು. ಈ ಲಕ್ಷಣಗಳಿಂದಲೇ ದುರ್ಯೋಧನಾದಿಗಳು ಅಸುರಸ್ವಭಾವವನ್ನು ಹೊಂದಿದ ತಮೋಯೋಗ್ಯರೆಂದು ನಿಶ್ಚಯಿಸಬಹುದು. ಇತಿಹಾಸ, ಪುರಾಣಗಳಲ್ಲಿಯೂ ಕೂಡ ಕಲ್ಯಾದಿ ದೈತ್ಯರೇ ದುರ್ಯೋಧನಾದಿಗಳಾಗಿ ಹುಟ್ಟಿದ್ದರೆಂದು ಸ್ಪಷ್ಟ ವಚನಗಳಿರುತ್ತವೆ.

ಕೃಷ್ಣಭಕ್ತರಾದ ಅರ್ಜುನಾದಿ ಪಾಂಡವರಾದರೋ, ಶ್ರೀ ಕೃಷ್ಣನ ದಿವ್ಯ ಪ್ರಭಾವವನ್ನು ತಿಳಿದವರಾದುದರಿಂದ, ದೈವೀಪ್ರಕೃತಿಯನ್ನು ಆಶ್ರಯಿಸಿದವರೆಂದು ನಿಶ್ಚಿತವಾಗುವದು. ಅರ್ಜುನನು ಶ್ರೀ ಕೃಷ್ಣನನ್ನು ಪರಬ್ರಹ್ಮನೆಂದೇ ಕರೆದಿರು ವನು.—

(19) **ಪರಂಬ್ರಹ್ಮಪರಂಧಾಮ ಪವಿತ್ರಂ ಪರಮಂಭವಾನ್ ।**
—(10. 12.)

ಹೇ ಸ್ವಾಮೀ! ನೀನು ಪರಬ್ರಹ್ಮನು. ಉತ್ತಮಾಶ್ರಯನು, ಪವಿತ್ರನು. ಸರ್ವೋತ್ತಮನು. ಶ್ರೀ ಕೃಷ್ಣನೂ ಕೂಡ,

(20) **ಸಂಪದಂದೈವೀಮಭಿಜಾತೋಽಸಿಪಾಂಡವ ।** —(16. 5.)

ಎಂದರೆ ನೀನು ಮುಕ್ತಿಯೋಗ್ಯ ಸ್ವಭಾವವನ್ನು ಹೊಂದಿದವನು; ಎಂದು ಹೇಳಿರುತ್ತಾನೆ.

ಈ ರೀತಿಯಾಗಿ ತ್ರಿವಿಧಚೇತನರು, ಅವರ ಬ್ರಹ್ಮಜ್ಞಾನ ವೈಲಕ್ಷಣ್ಯವು ಆಹಾರ, ಶ್ರದ್ಧಾದಿ ಸ್ವಾಭಾವಿಕ ಧರ್ಮವೈಚಿತ್ರ್ಯವು ಮತ್ತು ಅವರಿಗಾಗುವ ಫಲ ಭೇದವೂ ಸಹ ನಿರೂಪಿಸಲ್ಪಟ್ಟಿತು.

## 5.

ಇನ್ನು "ಉಚ್ಚ" ಚೇತನರ ತಾರತಮ್ಯವನ್ನು ಶ್ರೀ ಕೃಷ್ಣನ ವಾಕ್ಯ ಗಳಿಂದ ಸಾಧಿಸಬೇಕಾಗಿರುವದು. ಅಭೀಷ್ಟ ತತ್ವಗಳನ್ನು ಕೊಡುವದರಲ್ಲಿ ಕಲ್ಪವೃಕ್ಷ

ದೋಪಾದಿಯಲ್ಲಿರುವ ಹದಿನೈದನೆಯ ಅಧ್ಯಾಯದ ಅಂತ್ಯಶ್ಲೋಕಗಳು ಪುರುಷೋತ್ತಮನಾದ ಶ್ರೀ ಕೃಷ್ಣನು ಚೇತನ ತಾರತಮ್ಯಕ್ಕೆ ಮೂರ್ಧನ್ಯಸ್ಥಾನದಲ್ಲಿ ಇರುವವನೆಂದು ನಿರೂಪಿಸುತ್ತವೆ. ಮತ್ತು ಇವೇ ವಾಕ್ಯಗಳಿಂದ ಕೂಟಸ್ಥಳಾದ ಅವ್ಯಾಕೃತಾಕಾಶಾಭಿಮಾನಿಯಾದ ಲಕ್ಷ್ಮೀದೇವಿಯು ಪರಮಾತ್ಮನಿಗಿಂತ ಅವರಳು ಎಂದೂ ಮತ್ತು ಉತ್ಪನ್ನಶರೀರವುಳ್ಳ ಬ್ರಹ್ಮಾದಿ ದೇವತೆಗಳು ಆಕೆಗಿಂತಲೂ ಅಧಮರೆಂದೂ ಸಿದ್ಧವಾಗುವದು.

(1) **ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ।**
**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
—(15. 16-17)

ಈ ವಾಕ್ಯಗಳಿಂದ ಸರ್ವ ಚೇತನೋತ್ತಮನು ಪರಮ ಚೇತನನಾದ ಶ್ರೀಮನ್ನಾರಾಯಣನೆಂದು ಸಿದ್ಧಿಸುವದು.

(2) **ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ ಲೋಕತ್ರಯೇಽಪ್ಯಪ್ರತಿಮಪ್ರಭಾವ ।** —(11. 43.)

(3) **ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।** —(7. 7.)

(4) **ಯೋ ಬುದ್ಧೇಃ ಪರತಸ್ತು ಸಃ ।** —(3. 42.)

ಎಂಬ ವಾಕ್ಯಗಳಿಂದಲೂ ಪ್ರಪಂಚದಲ್ಲಿರುವ ಸಕಲ ಚೇತನರಿಗಿಂತಲೂ ಪರಮಾತ್ಮನು ಶ್ರೇಷ್ಠನು ಎಂದು ಸಿದ್ಧವಾಗುವದು.

ಪರಮಾತ್ಮಾತಿರಿಕ್ತ ಸರ್ವಚೇತನರಿಗಿಂತಲೂ ಲಕ್ಷ್ಮೀದೇವಿಯು ಶ್ರೇಷ್ಠಳೆಂತಲೂ ಈ ಪ್ರಕರಣದಲ್ಲಿಯೇ ಇರುವದು.

(5) **ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿ ಚೋತ್ತಮ ।**
—(15. 18.)

ಎಂಬಲ್ಲಿ ಶ್ರೀ ಕೃಷ್ಣನು ನಾನು ಕ್ಷರಪುರುಷರಿಗಿಂತ ಉತ್ತಮನು; **ಅಕ್ಷರಾದಪಿ** ಎಂದರೆ ಅಕ್ಷರಪುರುಷಳಿಗಿಂತಲೂ ಕೂಡ ಉತ್ತಮನು ಎಂದು ನಿರೂಪಿಸುವಾಗ, ಲಕ್ಷ್ಮೀದೇವಿಯು ಕ್ಷರಪುರುಷಳಿಗಿಂತ ಉತ್ತಮಳೆಂಬುದನ್ನು ಸೂಚಿಸಿರುತ್ತಾನೆ.

(6) **ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ।** —(7. 5.)

ಈ ವಾಕ್ಯದಲ್ಲಿ ಚೇತನಪ್ರಕೃತಿಯು ಭಗವದಧೀನನಳಾಗಿಯೂ, ಸರ್ವ ತತ್ವಾಭಿಮಾನಿದೇವತೆಗಳಿಗಿಂತ ಶ್ರೇಷ್ಠಳಾಗಿಯೂ ಇರುವಳೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿರುವದು. "ಕ್ಷೇತ್ರ ಕ್ಷೇತ್ರಜ್ಞಸಂಯೋಗಾತ್" "ಮಮಯೋನಿರ್ಮಹ ದ್ಬ್ರಹ್ಮ" "ಬ್ರಹ್ಮಭೂಯಾಯಕಲ್ಪತೇ" "ಬ್ರಹ್ಮಣೋಹಿ ಪ್ರತಿಷ್ಠಾಽಹಂ" ಇತ್ಯಾದಿ ಸ್ಥಳಗಳಲ್ಲಿ ಲಕ್ಷ್ಮೀದೇವಿಯು ಜಗನ್ಮಾತೆಯೆಂತಲೂ, ಆಕೆಯ ದ್ವಾರಾ ಸರ್ವರಿಗೂ ಮುಕ್ತಿಯಾಗುವದೆಂತಲೂ, ಬ್ರಹ್ಮಾದಿ ಸರ್ವ ಜೀವರುಗಳಿಗಿಂತ ಆಕೆಯು ಉತ್ತಮಳೆಂಬಲ್ಲಿ ಯುಕ್ತಿಸಹಿತವಾಗಿ ಹೇಳಲ್ಪಟ್ಟಿರುವುದು, ಆದುದ ರಿಂದಲೇ,

(7) **ಯೋ ಬುದ್ಧೇಃಪರತಸ್ತುಸಃ** | —(3. 42.)

ಎಂಬ ಶ್ಲೋಕದಲ್ಲಿ ಪರಮಾತ್ಮನು ಬುದ್ಧಿನಾಮಕ ಸರಸ್ವತೀದೇವಿಗಿಂತ ಉತ್ತಮನು ಎಂದು ಹೇಳಿದ್ದರೂ, ಬುದ್ಧಿಗಿಂತ ಬುದ್ಧಿಪತಿಯಾದ ಬ್ರಹ್ಮದೇವರು ಉತ್ತಮರು; ಬ್ರಹ್ಮದೇವರಿಗೂ ತಾಯಿಯಾದ ಲಕ್ಷ್ಮೀದೇವಿಯು ಬ್ರಹ್ಮದೇವನಿ ಗಿಂತ ಉತ್ತಮಳು ಎಂದು (ಏಳನೆಯದೇ ಮೊದಲಾದ ಅಧ್ಯಾಯ ಶ್ಲೋಕಗಳ ಬಲದಿಂದ), ಅಧ್ಯಾಹಾರ ಮಾಡಿ ಅಂಥ ಅವ್ಯಕ್ತನಾಮಕ ಲಕ್ಷ್ಮೀದೇವಿಗಿಂತ ಪರತಃ = ಶ್ರೇಷ್ಠನಾದವನು, ಸಃ = ಪರಬ್ರಹ್ಮನು (ಶ್ರೀ ಕೃಷ್ಣನು) ಎಂದು ಯೋಜನೆಯನ್ನು ಮಾಡಬೇಕು. ಈ ಗೀತಾವಾಕ್ಯಕ್ಕೆ ಮೂಲಭೂತವಾದ ಕಾಠಕ ಶ್ರುತಿಯೂ ಕೂಡ ಹೀಗೆಯೇ ಅರ್ಥ ಮಾಡಬೇಕೆಂದು ನಿಶ್ಚಯ ಮಾಡುವದರಲ್ಲಿ ಸಹಾಯವಾಗಿರುತ್ತದೆ.

**ಬುದ್ಧೇರಾತ್ಮಾ ಮಹಾನ್ ಪರಃ | ಮಹತಃ ಪರಮವ್ಯಕ್ತಂ ಅವ್ಯಕ್ತಾ ತ್ಪುರುಷಃಪರಃ | ಪುರುಷಾನ್ನಪರಂಕಿಂಚಿತ್ ಸಾಕಾಷ್ಠಾ ಸಾಪರಾಗತಿಃ ||**

ಅರ್ಥವು :— ಬುದ್ಧಿಗಿಂತ (ಬುದ್ಧಿತತ್ವಾಭಿಮಾನಿಯಾದ ಸರಸ್ವತೀದೇವಿ ಗಿಂತ) ಮಹತ್ತತ್ವಾಭಿಮಾನಿಯಾದ ಬ್ರಹ್ಮದೇವರು ಶ್ರೇಷ್ಠರು. ಮಹತ್ತತ್ವಾಭಿ ಮಾನಿಯಾದ ಬ್ರಹ್ಮದೇವರಿಗಿಂತ ಅವ್ಯಕ್ತತತ್ವಾಭಿಮಾನಿಯಾದ ಲಕ್ಷ್ಮೀದೇವಿಯು ಶ್ರೇಷ್ಠಳು; ಅವ್ಯಕ್ತನಾಮಕ ಲಕ್ಷ್ಮೀದೇವಿಗಿಂತ ಪರಬ್ರಹ್ಮನು ಶ್ರೇಷ್ಠನು. ಪರ ಬ್ರಹ್ಮನಿಗಿಂತ ಶ್ರೇಷ್ಠರು ಯಾರೂ ಇಲ್ಲ. ಅವನೇ ತಾರತಮ್ಯಕ್ಕೆ ಕೊನೆಯು ಅವಧಿಯು; ಅತ್ಯುತ್ತಮನಾದಗಮ್ಯನು, ವಿಷ್ಣುವಿಗಿಂತ ಭಿನ್ನನಾದ ಮತ್ತು ಶ್ರೇಷ್ಠನಾದ ನಿರ್ಗುಣಬ್ರಹ್ಮನು ಇಲ್ಲವೆಂದು ಈ ಗೀತಾವಾಕ್ಯದಿಂದ ಸಿದ್ಧವಾಗು ವದು. ಹೇಗೆಂದರೆ—"ಬುದ್ಧೇಃ ಪರತಸ್ತುಸಃ" ಎಂಬ ವಾಕ್ಯದಲ್ಲಿ ಶ್ರೀ ಕೃಷ್ಣನು ಸರ್ವ ದೇವತೆಗಳಿಂದಲೂ ತಾನೇ ಶ್ರೇಷ್ಠನೆಂದು ನಿರೂಪಿಸಿದನು. ಆ ಗೀತಾ ವಾಕ್ಯಕ್ಕೆ ಮೂಲಭೂತವಾದ ಶ್ರುತಿಯು ಇನ್ನೂ ಸ್ಪಷ್ಟವಾಗಿ "ಪುರುಷಾನ್ನ ಪರಂ ಕಿಂಚಿತ್" ಎಂದರೆ ಪೂರ್ಣನಾದ ವಿಷ್ಣುವಿಗಿಂತ ಅಧಿಕ ವಸ್ತುವು ಮತ್ತೊಂದು

ಇಲ್ಲ ಎಂದು ಹೇಳಿ "ಸಾಪರಾಗತಿಃ", ಅವನೇ ಪರಮಗತಿಯು ಎಂದು ಹೇತು ಗರ್ಭವಾದ ಸ್ತುತಿಯನ್ನು ಮಾಡಿರುವುದು. ಪುರುಷನಾಮಕ ವಿಷ್ಣುವೇ ಮೋಕ್ಷ ದಲ್ಲಿ ಗಮ್ಯನು ಎಂದರ್ಥವು. ಮುಕ್ತಿಪ್ರಾಪ್ಯನಪ್ಪೇ ಪರಬ್ರಹ್ಮನು ! ಆದುದರಿಂದ ಮುಕ್ತಿಗಮ್ಯನಾದ ಶ್ರೀ ಕೃಷ್ಣನೇ ಸರ್ವಶ್ರೇಷ್ಠನಾದ ಪರಬ್ರಹ್ಮನೆಂದು ನಿರ್ಣಯಿಸ ಬೇಕು.

ಈ ರೀತಿಯಲ್ಲಿ ತಾರತಮ್ಯದಲ್ಲಿ ಸರ್ವಶ್ರೇಷ್ಠನು ವಿಷ್ಣುವು; ನಂತರ ಲಕ್ಷ್ಮೀ ದೇವಿಯು, ನಂತರ ಬ್ರಹ್ಮದೇವರು, ನಂತರ ಸರಸ್ವತಿದೇವತೆಯು ಕ್ರಮವಾಗಿ ಉಪರರೆಂದು ನಿಶ್ಚಿತವಾಗುವದು.*

(1) **ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವಚ ।**
**ಇಂದ್ರಿಯಾಣಿ ದಶೈಕಂ ಚ ಪಂಚಚೇಂದ್ರಿಯಗೋಚರಾಃ ।**
—(13. 6.)

ಎಂಬಲ್ಲಿ ಶ್ರೀ ಕೃಷ್ಣನು ದೇವತೆಗಳನ್ನು ಅವರಿಂದ ಅಭಿಮನ್ಯವಾದ ತತ್ವದ ನಾಮಗಳಿಂದ ಸಾಮಾನ್ಯವಾಗಿ ನಿರ್ದೇಶ ಮಾಡಿರುತ್ತಾನೆ. "ಭೂತಂ ಭೂತಾಭಿ ಮಾನೀ ಚ ತದ್ದೇಹೋಽಂತರ್ನಿಯಾಮಕಃ" ಇತ್ಯಾದಿ ಶ್ಲೋಕೋಕ್ತ ನ್ಯಾಯಾನು ಸಾರವಾಗಿ ಪ್ರತಿಯೊಂದು ಶಬ್ದವೂ **ಮುಖ್ಯವಾಗಿ ಚೇತನನನ್ನು ಬೋಧಿಸು ವುದು;** ಅಮುಖ್ಯವಾಗಿ ಜಡವನ್ನು ಬೋಧಿಸುವುದು; ಆದುದರಿಂದ ಇಪ್ಪತ್ತು ನಾಲ್ಕು ತತ್ವಗಳನ್ನು ನಿರ್ದೇಶ ಮಾಡಿರುವ ಈ ಶ್ಲೋಕಗಳಲ್ಲಿ ಆಯಾಯ ತತ್ವಾಭಿ ಮಾನಿ ದೇವತೆಗಳಿಂದ ಸಹಿತವಾದ ಜಡತತ್ವರಾಶಿಗಳನ್ನು ಮಹಾ ಭೂತಾದಿ ಪದ ಗಳಿಂದ ತೆಗೆದುಕೊಳ್ಳಬೇಕು.† ಆದುದರಿಂದ ಶ್ಲೋಕಾರ್ಥವು ಶ್ರೀಮದಾಚಾರ್ಯ ರಿಂದ ಸಪ್ರಮಾಣವಾಗಿ ಹೀಗೆ ನಿರೂಪಿತವಾಗಿರುವದು.

ಕ್ಷೇತ್ರವು ಪಂಚಮಹಾಭೂತಗಳು, ಮಹತ್ತತ್ವ, ಅಹಂಕಾರತತ್ವವು, ಬುದ್ಧಿ ತತ್ವವು, ಅವ್ಯಕ್ತತತ್ವವು, ಹತ್ತು ಇಂದ್ರಿಯತತ್ವಗಳು, ಪಂಚತನ್ಮಾತ್ರಗಳು ಹೀಗೆ

---

* **ಅಗ್ನಿರ್ವೈದೇವಾನಾಮವಮಃ ವಿಷ್ಣುಃಪರಮಃ ।**
**ತದಂತರೇಣ ಅನ್ಯಾಸ್ಸರ್ವಾದೇವತಾಃ ॥**
ಎಂಬ ಶ್ರುತಿಯು ಈ ಅರ್ಥವನ್ನೇ ಬೋಧಿಸುವುದು.

† **ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ।**
ಇತ್ಯಾದಿ ಬ್ರಹ್ಮಸೂತ್ರಗಳಲ್ಲಿ ಈ ವಿಷಯವು ನಿರ್ಣೀತವಾಗಿರುವುದು. **"ಯಃ ಪೃಥಿ ವ್ಯಾಂತಿಷ್ಠನ್"** ಎಂಬುದೇ ಮೊದಲಾದ ಬೃಹದಾರಣ್ಯಕ ಶ್ರುತಿಯಲ್ಲಿ ಪೃಥಿವ್ಯಾದಿಪದಗಳಿಂದ ಭೂದೇವತೆಯೇ ಮೊದಲಾದ ದೇವತೆಗಳನ್ನು ತೆಗೆದುಕೊಳ್ಳಬೇಕೆಂದು ಶಂಕರಾಚಾರ್ಯರೂ ಸಹ ಅರ್ಥ ಮಾಡಿರುವರು.

ಇಪ್ಪತ್ತು ನಾಲ್ಕು ರೂಪವಾಗಿರುವುದು. ಭಗವನ್ನಿವಾಸಭೂತರಾದುದರಿಂದಲೂ, ಜಡಕ್ಷೇತ್ರಾಭಿಮಾನಿಗಳಾದುದರಿಂದಲೂ ಕ್ಷೇತ್ರಶಬ್ದವಾಚ್ಯರಾದ ತತ್ವಾಭಿಮಾನಿ ದೇವತೆಗಳು ಯಾರೆಂದರೆ :—

1. ಪೃಥಿವೀ ಅಭಿಮಾನಿಯು ಭೂದೇವತೆಯು; 2. ಜಲದ ಅಭಿಮಾನಿಯು ವರುಣನು; 3. ತೇಜಸ್ತತ್ವಾಭಿಮಾನಿಯು ಅಗ್ನಿಯು; 4. ವಾಯ್ವಭಿಮಾನಿ ದೇವತೆಯು ಮುಖ್ಯ ವಾಯುಪುತ್ರನಾದ ಮರೀಚಿವಾಯುವು; 5. ಆಕಾಶಾಭಿಮಾನಿಯು ಗಣೇಶನು; 6-10. ಶಬ್ದಾದಿ ಪಂಚತನ್ಮಾತ್ರಗಳಿಗೆ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನರೆಂಬ ಪಂಚಮರುತ್ತುಗಳು ಅಭಿಮಾನಿಗಳು; 11. ಶ್ರೋತ್ರಾಭಿಮಾನಿಯು ಚಂದ್ರನು ಮತ್ತು ದಿಗ್ದೇವತೆಗಳು; 12. ಚಕ್ಷುರಭಿಮಾನಿಯು ಸೂರ್ಯನು; 13. ಸ್ಪರ್ಶೇಂದ್ರಿಯಾಭಿಮಾನಿಯು ಅಹಂಕಾರ ಪ್ರಾಣನೆಂಬ ವಾಯುಪುತ್ರನು; 14. ರಸನೇಂದ್ರಿಯಾಭಿಮಾನಿಯು ವರಣನು; 15. ಘ್ರಾಣಾಭಿಮಾನಿಗಳು ಅಶ್ವಿನೀದೇವತೆಗಳು; 16. ವಾಗಿಂದ್ರಿಯಾಭಿಮಾನಿಯು ಅಗ್ನಿಯು; 17. ಹಸ್ತಾಭಿಮಾನಿಯು ದಕ್ಷನು, ಮತ್ತು ವಾಯುಸುತರಾದ ಮರುತ್ತುಗಳು; 18. ಪಾದಾಭಿಮಾನಿಗಳು ವಿಷ್ಣುವಿನ ಆವೇಶಸಹಿತರಾದ ಯಜ್ಞ, ಶಂಭುನಾಮಕರಾದ ಶಚೀಪುತ್ರರು; 19. ಪಾಯು ಇಂದ್ರಿಯಾಭಿಮಾನಿಯು ಯಮನು; 20. ಉಪಸ್ಥೇಂದ್ರಿಯಾಭಿಮಾನಿಯು ಮಹಾದೇವರು; 21. ಮನಸ್ತತ್ವಾಭಿಮಾನಿಯು ಇಂದ್ರ, ಕಾಮಾನಿರುದ್ಧಾದಿಗಳು; 22. ಅಹಂಕಾರತತ್ವಾಭಿಮಾನಿ ದೇವತೆಯೂ ಮಹಾದೇವರು; 23. ಮಹತ್ತತ್ವಾಭಿಮಾನಿಯು ಚತುರ್ಮುಖ ಬ್ರಹ್ಮದೇವರು; 24. ಅವ್ಯಕ್ತತತ್ವಾಭಿಮಾನಿ ದೇವತೆಯು ಲಕ್ಷ್ಮೀದೇವಿಯು ಹೀಗೆ ಇಪ್ಪತ್ತುನಾಲ್ಕು ತತ್ವಾಭಿಮಾನಿ ದೇವತೆಗಳು ಕ್ಷೇತ್ರಶಬ್ದ ವಾಚ್ಯರಾಗಿರುವರು. ಮತ್ತು ಕ್ಷೇತ್ರವಿಕಾರಗಳಾದ ಇಚ್ಛಾ, ದ್ವೇಷ, ಸುಖ, ದುಃಖ, ಸಂಘಾತ (ದೇಹ), ಚೇತನಾ (ಚಿತ್ತವ್ಯಾಪ್ತಿ), ಧೃತ್ಯಾದಿಗಳಿಗೂ **ನಿಯಾಮಕರಾದುದರಿಂದ** ವಿಕಾರಶಬ್ದವಾಚ್ಯರಾಗಿರುವರು. ಆದುದರಿಂದ,

**(9) ಏತತ್ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಂ ।**
—(13. 7.)

ಎಂಬ ಶ್ಲೋಕಕ್ಕೆ ಈ ರೀತಿಯಾಗಿ ಅರ್ಥ ಮಾಡಬೇಕು.— ಎಲೈ ಅರ್ಜುನನೇ! ಕ್ಷೇತ್ರವು ಇಪ್ಪತ್ತು ನಾಲ್ಕು ಭಗವನ್ನಿವಾಸಭೂತರಾದ, ಮತ್ತು ಪಂಚಭೂತಾದಿ ತತ್ವನಿಯಾಮಕರಾದ ದೇವತೆಗಳು, ಇಚ್ಛಾದಿ ವಿಕಾರನಿಯಾಮಕರಾದ ದೇವತೆಗಳಿಂದ ಸಹಿತವಾಗಿ ನನ್ನಿಂದ ನಿನಗೆ ನಿರೂಪಿಸಲ್ಪಟ್ಟಿತು; ಮತ್ತು 2. ಇಪ್ಪತ್ತು ನಾಲ್ಕು ತತ್ವಗಳು ಇಚ್ಛಾದ್ವೇಷಾದಿವಿಕಾರಗಳಿಂದ ಸಹಿತವಾಗಿ ನನ್ನಿಂದ ನಿನಗೆ ನಿರೂಪಿಸಲ್ಪಟ್ಟವು. ಈ ರೀತಿಯಾಗಿಯೇ ಅರ್ಥ ಮಾಡಬೇಕೆಂದು **ತದಧೀನ**

**ತ್ವಾದರ್ಥವತ್; ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ** ಇತ್ಯಾದಿ ಬ್ರಹ್ಮಸೂತ್ರಗಳಲ್ಲಿ ನಿರ್ಣೀತವಾಗಿರುವುದು.

ಇದೇ ರೀತಿಯಲ್ಲಿ ಈ ಕೆಳಗೆ ಉದಾಹೃತವಾದ ಏಳನೆಯ ಅಧ್ಯಾಯದ ಶ್ಲೋಕಗಳಿಂದಲೂ ದೇವತಾ ಸಮುದಾಯವನ್ನು ತಿಳಿಯಬಹುದು.

(10) **ಭೂಮಿರಾಪೋಽನಲೋವಾಯುಃ ಖಂಮನೋಬುದ್ಧಿರೇವಚ ।**
**ಅಹಂಕಾರ ಇತೀಯಂಮೇಭಿನ್ನಾಪ್ರಕೃತಿರಷ್ಟಧಾ ॥**
—(7. 4.)

ಈ ಶ್ಲೋಕಗಳಿಂದ ಅನೇಕ ದೇವತಾಸದ್ಭಾವವು ಸಿದ್ಧವಾದರೂ ಅವರುಗಳ ಪರಸ್ಪರ ತಾರತಮ್ಯವು ಸ್ಪಷ್ಟವಾಗುವದಿಲ್ಲ. ಹತ್ತು, ಹನ್ನೊಂದನೆಯ ಅಧ್ಯಾಯಗಳಿಂದ ಇಂದ್ರನು ದೇವಶ್ರೇಷ್ಠನೆಂದು ಆಪಾತತಃ ತೋರುವುದು.

(11) 1. **ದೇವಾನಾಮಸ್ಮಿವಾಸವಃ ॥** —(10. 22.)
ದೇವತೆಗಳಲ್ಲಿ ಇಂದ್ರನಿಗೆ ಆಧಿಕ್ಯಪ್ರದನಾಗಿ ನಾನು ಇಂದ್ರನಲ್ಲಿದ್ದೇನೆ.

2. **ಮಯಾಪ್ರಸನ್ನೇನತವಾರ್ಜುನೇದಂ ರೂಪಂಪರಂದರ್ಶಿತ ಮಾತ್ಮಯೋಗಾತ್ ।**
**...............ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಂ ॥**
**ನ ವೇದಯಜ್ಞಾಧ್ಯಯನೈರ್ನದಾನೈರ್ನಚಕ್ರಿಯಾಭಿರ್ನತಪೋಭಿರುಗ್ರೈಃ ।**
**ಏವಂರೂಪಶ್ಶಕ್ಯ ಅಹಂನೃಲೋಕೇದ್ರಷ್ಟುಂತ್ವದನ್ಯೇನ ಕುರುಪ್ರವೀರ ।** —(11. 47-48.)

ಎಲೈ ಅರ್ಜುನನೇ ! ನಿನ್ನ ವಿಷಯದಲ್ಲಿ ಪ್ರಸನ್ನನಾದ ನಾನು ನಿನ್ನ ಹೊರತು ಯಾರೂ ನೋಡದಿರುವ ಈ ರೂಪವನ್ನು ನನ್ನ ಸ್ವರೂಪಭೂತವಾದ ಸಾಮರ್ಥ್ಯದಿಂದ ನಿನಗೆ ತೋರಿಸಿರುತ್ತೇನೆ. ಎಲೈ ಕುರುಶ್ರೇಷ್ಠನೇ ! ವೇದಾಧ್ಯಯನದಿಂದಾಗಲೀ, ಯಜ್ಞಾದಿ ಇತರ ಸಾಧನಗಳಿಂದಾಗಲೀ ಈ ರೂಪವುಳ್ಳ ನನ್ನನ್ನು ನಿನ್ನ ಹೊರತು ಇತರರು ನೋಡುವುದಕ್ಕೆ ಶಕ್ತರಲ್ಲ.

ಈ ವಾಕ್ಯಗಳಿಂದ ಅರ್ಜುನನು ಎಂದರೆ ಇಂದ್ರನು ಸರ್ವ ದೇವತೆಗಳಿಗಿಂತ ಶ್ರೇಷ್ಠನೆಂದು ತೋರುವುದು. ಆದರೆ ಮನಸ್ತತ್ವಾಭಿಮಾನಿಯಾದ ಇಂದ್ರನು ಇತರ ಸರ್ವ ದೇವತೆಗಳಿಗಿಂತಲೂ ಶ್ರೇಷ್ಠವಾದರೂ, ಮಹದಹಂಕಾರಾದಿತತ್ವಾಭಿಮಾನಿಗಳಾದ ಬ್ರಹ್ಮರುದ್ರರು ಮತ್ತು ಅವರ ಪತ್ನಿಯರಿಗಿಂತಲೂ ಅಧಮನೆಂಬುದು

ದೇವತಾ ತಾರತಮ್ಯವನ್ನು ನಿರೂಪಿಸುವ ತೃತೀಯಾಧ್ಯಾಯದ ಅಂತ್ಯ ಶ್ಲೋಕಗಳಿಂದ ವ್ಯಕ್ತವಾಗುವುದು.

(12) **ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾಬುದ್ಧಿರ್ಯೋಬುದ್ಧೇಃ ಪರತಸ್ತು ಸಃ ॥**
—(3. 42.)

ಇಲ್ಲಿ, ಇಂದ್ರಿಯಾಭಿಮಾನಿ ದೇವತೆಗಳಿಗಿಂತ ಮನೋಽಭಿಮಾನಿ ದೇವತೆಗಳು ಶ್ರೇಷ್ಠರು ಎಂದು ಇದ್ದರೂ, ಇವಕ್ಕೆ ಮೂಲಭೂತವಾದ ಕಾಠಕಶ್ರುತ್ಯನುಸಾರವಾಗಿ " ಇಂದ್ರಿಯೇಭ್ಯಃ ಪರಾಹ್ಯರ್ಥಾಃ ಅರ್ಥೇಭ್ಯಶ್ಚಪರಂಮನಃ " ಎಂದು ಅಧ್ಯಾಹಾರಪೂರ್ವಕವಾಗಿ ಶ್ಲೋಕಾರ್ಥವನ್ನು ಯೋಜನೆ ಮಾಡಬೇಕು.:— ಶರೀರಮಾನಿದೇವತೆಗಳಿಗಿಂತ ಇಂದ್ರಿಯಾಭಿಮಾನಿ ದೇವತೆಗಳು ( ಚಂದ್ರಾದಿಗಳು ) ಶ್ರೇಷ್ಠರು. ಇಂದ್ರಿಯಾಭಿಮಾನಿ ದೇವತೆಗಳಿಗಿಂತ ಅರ್ಥಾಭಿಮಾನಿಗಳಾದ ಸೌಪರ್ಣಿ ವಾರುಣೀ ಪಾರ್ವತೀಶಚ್ಯಾದಿಗಳು ಶ್ರೇಷ್ಠರು. ಇವರುಗಳಿಗಿಂತ ಮನೋಭಿಮಾನಿಗಳಾದ ಗರುಡಶೇಷ, ರುದ್ರೇಂದ್ರಾದಿಗಳು ಶ್ರೇಷ್ಠರು. ಮನೋಽಭಿಮಾನಿ ದೇವತೆಗಳಿಗಿಂತ ಬುದ್ಧಿಗೆ ಅಭಿಮಾನಿಯಾದ ಸರಸ್ವತಿಯು ಶ್ರೇಷ್ಠಳು. ಬುಧ್ಯಭಿಮಾನಿಗಿಂತ ಮಹತ್ತತ್ವಾಭಿಮಾನಿಯಾದ ಚತುರ್ಮುಖ ಬ್ರಹ್ಮದೇವರು ಶ್ರೇಷ್ಠರು. ಮಹತ್ತತ್ವಾಭಿಮಾನಿಗಿಂತ ಅವ್ಯಕ್ತತತ್ವಾಭಿಮಾನಿಯಾದ ಲಕ್ಷ್ಮೀದೇವಿಯು ಶ್ರೇಷ್ಠಳು. ಅವ್ಯಕ್ತಾಭಿಮಾನಿಗಿಂತ ಪರಬ್ರಹ್ಮನು ಶ್ರೇಷ್ಠನು.

ಈ ರೀತಿಯಾಗಿ ವಿಷ್ಣುವು, ಲಕ್ಷ್ಮೀದೇವಿಯು, ಚತುರ್ಮುಖ ಬ್ರಹ್ಮದೇವರು, ಸರಸ್ವತೀದೇವಿಯು, ಗರುಡ ಶೇಷ ರುದ್ರರು, ಸೌಪರ್ಣೀ ವಾರುಣೀ ಪಾರ್ವತಿಗಳು, ಇಂದ್ರನು, ದಕ್ಷಾದಿ ದೇವತೆಗಳು ಕ್ರಮವಾಗಿ ಅವರೋಹಣ ಕ್ರಮದಲ್ಲಿ ತಾರತಮ್ಯೋಪೇತರೆಂದು ಪ್ರಾಪ್ತವಾಗುವುದು. ಹೀಗಿರುವುದರಿಂದ ಅರ್ಜುನನನ್ನು ಕುರಿತು, " ನಿನ್ನ ಹೊರತು ಯಾರೂ ಈ ರೂಪವನ್ನು ನೋಡಲಾರರು " ಎಂಬ ಶ್ರೀ ಕೃಷ್ಣನ ಮಾತುಗಳಿಗೆ "ಬ್ರಹ್ಮರುದ್ರಾದಿ ಉತ್ತಮ ದೇವತೆಗಳು ವಿನಹ, ನಿನ್ನಿಂದ ಅಧಮರಾದ ದಕ್ಷಾದಿ ದೇವತೆಗಳು ನಿನಗೆ ನಾನು ತೋರಿಸಿರುವ ಈ ರೂಪವನ್ನು ನೋಡಲಾರರು" ಎಂದು ಅರ್ಥ ಮಾಡಬೇಕು. ಸ್ವರ್ಗಲೋಕಾಧಿಪತಿಯಾದ ಇಂದ್ರನಿಗೆ ಉಮಾದೇವಿಯು ಗುರುವೆಂಬುದು ಕೇನೋಪನಿಷತ್ತಿನಿಂದಲೇ ತಿಳಿದು ಬರುವುದು. "ರುದ್ರಂ ಸಮಾಶ್ರಿತಾದೇವಾಃ ರುದ್ರೋ ಬ್ರಹ್ಮಾಣಮಾಶ್ರಿತಃ ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂಕಂಚಿದುಪಾಶ್ರಿತಃ " ಎಂಬ ಅನ್ಯತ್ರೋಕ್ತ ಶ್ರೀ ಕೃಷ್ಣ ವಚನಗಳು ಸ್ಪಷ್ಟವಾಗಿಯೂ ತಾರತಮ್ಯವನ್ನು ನಿರೂಪಿಸುವವು.

## ೬.

ಒಬ್ಬನೇ ಈಶ್ವರನು ಬ್ರಹ್ಮ, ವಿಷ್ಣು, ರುದ್ರರೆಂಬ ಮೂರು ರೂಪಗಳನ್ನು ಸೃಷ್ಟಿ ಸ್ಥಿತಿ ಸಂಹಾರರೂಪವಾದ ಕಾರ್ಯಭೇದವನ್ನು ನಿಮಿತ್ತ ಮಾಡಿಕೊಂಡು,

ಹೊಂದಿರುವನೆಂದು ಅದ್ವೈತಿಗಳ ಮತವು. ತ್ರಿಮೂರ್ತಿಗಳಿಗೆ ಐಕ್ಯವನ್ನು ಹೇಳುವದು ಬಹು ಪ್ರಮಾಣಗಳಿಗೆ ವಿರುದ್ಧವು. 1. ತ್ರಿಮೂರ್ತಿಗಳು ಒಂದೇ ಚೇತನನ ಮೂರು ರೂಪಗಳಾಗಿದ್ದರೆ, ಒಬ್ಬನಿಗೆ ಸುಖವಾದರೆ ತತ್ಕಾಲದಲ್ಲಿ ಮತ್ತಿಬ್ಬರಿಗೂ ಸುಖವಾಗಬೇಕು; ಒಬ್ಬನಿಗೆ ದುಃಖವಾದರೆ ಮತ್ತಿಬ್ಬರೂ ಅದೇ ದುಃಖವನ್ನು ಅನುಭವಿಸಬೇಕು. ಚೇತನೈಕ್ಯವು ಇದ್ದರೆ ಸುಖ ದುಃಖ ಭೋಗಸಾಂಕರ್ಯವು ಅವರ್ಜನೀಯವು. * 2. ಮತ್ತು ಪತ್ನೀಭೇದ, ವಾಸಸ್ಥಾನಗಳ ಭೇದ, ರುದ್ರಾದಿಗಳ ಸೇವೆಯಿಂದ ಅಲ್ಪ ಫಲ ಮತ್ತು ವಿಷ್ಣು ಪೂಜೆಯಿಂದ ಮೋಕ್ಷಫಲ ಹೀಗೆ ಪ್ರಾಪ್ತವಾಗುವ ಫಲಭೇದ, ಬ್ರಹ್ಮದೇವರಿಗೆ ವಿಷ್ಣುವಿನ ನಾಭಿಕಮಲದಿಂದ ಉತ್ಪತ್ತಿ, ರುದ್ರದೇವರಿಗೆ ಬ್ರಹ್ಮದೇವರ ಲಲಾಟದಿಂದ ಉತ್ಪತ್ತಿ ಇತ್ಯಾದಿಗಳನ್ನು ನಿರೂಪಿಸುವ ಶ್ರುತಿ, ಸ್ಮೃತಿ ಇತಿಹಾಸ ಪುರಾಣಗಳು ನಾರಾಯಣನ ಪುತ್ರ ಪೌತ್ರಸ್ಥಾನೀಯರಾದ ಬ್ರಹ್ಮರುದ್ರಾದಿಗಳಿಗೆ ನಾರಾಯಣೈಕ್ಯವನ್ನು ಒಡಂಬಡಲಾರವು. "ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವೇಸ್ಥಿತಃ" ಇತ್ಯಾದಿ ಪ್ರಮಾಣವಚನಗಳಿಂದ ನಾರಾಯಣನೇ ಚತುರ್ಮುಖ ಬ್ರಹ್ಮನಲ್ಲಿ ಬ್ರಹ್ಮನಾಮಕನಾಗಿಯೂ, ರುದ್ರನಲ್ಲಿ ರುದ್ರನಾಮಕನಾಗಿಯೂ ಒಂದೊಂದು ರೂಪದಿಂದ ಸ್ಥಿತನಾಗಿದ್ದು ಸೃಷ್ಟಿ ಸಂಹಾರರೂಪವಾದ ಕಾರ್ಯಗಳನ್ನು ನಿರ್ವಹಿಸುವನೆಂದು ತಿಳಿದು ಬರುತ್ತದೆ. "ಗಾಮಾವಿಶ್ಯಚಭೂತಾನಿ ಧಾರಯಾಮ್ಯಹಮೋಜಸಾ" "ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ" ಇತ್ಯಾದಿ ಶ್ರೀ ಕೃಷ್ಣನ ವಾಕ್ಯಗಳೂ ಈ ವಿಷಯದಲ್ಲಿ ಪ್ರಮಾಣವಾಗಿರುತ್ತವೆ. ಮತ್ತು ಭಗವದ್ಗೀತೆಯಲ್ಲಿ ಅಸುರಮಾಯಾನಿವಾರಕವಾದ ಅಸ್ತ್ರವಿದ್ಯಾಪಾರಂಗತನಿಂದ ಪ್ರಯುಕ್ತವಾದ ವಿಜ್ಞಾನಾಸ್ತ್ರದಂತಿರುವ, ತ್ರಿಮೂರ್ತ್ಯೈಕ್ಯ ಭ್ರಮವನ್ನು ಪರಿಹರಿಸುವದರಲ್ಲಿ ನಿಸ್ಸೀಮ ಶಕ್ತಿಯುಳ್ಳ, ಒಂದು ವಾಕ್ಯವು ದಿವ್ಯದೃಷ್ಟಿಯಿಂದ ಭಗವತ್ಸ್ವರೂಪವನ್ನು ಸಾಕ್ಷಾತ್ತಾಗಿ ನೋಡುತ್ತಿರುವ ಅರ್ಜುನನ ಮುಖದಿಂದ ಉದ್ಗತವಾಗಿರುವುದು.

---

*ಸ್ಥಾನಭೇದಾದಿಗಳು ಪಾಪಧಿಕವು ವಸ್ತುತಃ ಚೈತನ್ಯವು ಒಂದೇ ಎಂದು ಹೇಳುವುದಾದರೆ ಈ ರೀತಿಯಲ್ಲಿ ಸರ್ವ ಜೀವೈಕ್ಯವನ್ನೂ ಅಂಗೀಕರಿಸಿರುವ ಅದ್ವೈತಿಗಳು, ತ್ರಿಮೂರ್ತ್ಯೈಕ್ಯವನ್ನು ಮಾತ್ರ ಹೇಳುವುದಕ್ಕೆ ಕಾರಣವಿರುವುದಿಲ್ಲ. ಯಾತಕ್ಕೆಂದರೆ ಅದ್ವೈತ ಮತದಲ್ಲಿ ಚೈತನ್ಯವು ಒಂದೇ; ಭೇದವು ಅಂತಃಕರಣರೂಪವಾದ ಉಪಾಧಿಭೇದದಿಂದ ಇರುವಂತೆ ತೋರುವುದು. ಹೀಗಿರುವಲ್ಲಿ ಸರ್ವೈಕ್ಯವನ್ನೂ ಒಪ್ಪಿ, ತ್ರಿಮೂರ್ತ್ಯೈಕ್ಯವನ್ನು ಮಾತ್ರ ಪ್ರತ್ಯೇಕವಾಗಿ ಶಾಸ್ತ್ರದಲ್ಲಿ ಪ್ರತಿಪಾದಿಸಿರುವುದರಿಂದ ಸೌಭರ್ಯಾದಿ ಋಷಿಗಳಿಗೆ ನಾನಾ ರೂಪಗಳು ಇರುವಂತೆ ವಿಷ್ಣು, ಬ್ರಹ್ಮ, ರುದ್ರರು, ಒಬ್ಬನೇ ಈಶ್ವರನ ಮೂರು ರೂಪಗಳೆಂದು ಅವರ ತಾತ್ಪರ್ಯವಿರಬೇಕು. ಹಾಗೆ ಹೇಳಿದರೆ ಸುಖ ದುಃಖ ಭೋಗಸಾಂಕರ್ಯಾದಿ ಪೂರ್ವೋಕ್ತ ದೋಷಗಳು ಬಂದೇ ಬರುವವು.

ಅರ್ಜುನನು ಹೇಳುತ್ತಾನೆ :—

(1) **ಪಶ್ಯಾಮಿದೇವಾಂಸ್ತವದೇವದೇಹೇ ಸರ್ವಾನ್.......... .... ।**
**ಬ್ರಹ್ಮಾಣಮೀಶಂಕಮಲಾಸನಸ್ಥಂ ಋಷೀಂಶ್ಚ ಸರ್ವಾನುರ**
**ಗಾಂಶ್ಚ ದಿವ್ಯಾನ್ ।** —(11. 15.)

ಎಲೈ ಸ್ವಾಮಿಯೇ ! ನಿನ್ನ **ದೇಹದಲ್ಲಿ,** ಸರ್ವ ದೇವತೆಗಳನ್ನೂ...........
**ಬ್ರಹ್ಮಾಣಂ** = ಬ್ರಹ್ಮ ದೇವರನ್ನೂ, **ಈಶಂಕಮಲಾಸನಸ್ಥಂ** = ಚತುರ್ಮುಖ ಬ್ರಹ್ಮ ದೇವರಲ್ಲಿ ( ತೊಡೆಯ ಮೇಲೆ ) ಕುಳಿತಿರುವ ಈಶ್ವರನನ್ನೂ,... ........ ನೋಡುತ್ತೇನೆ.

**ವಿಷ್ಣುಂಸಮಾಶ್ರಿತೋ ಬ್ರಹ್ಮಾಬ್ರಹ್ಮಣೋಽಂಕಗತೋಹರಃ ।**
**ಹರಸ್ಯಾಂಗವಿಶೇಷೇಷುದೇವಾಸ್ಸರ್ವೇಪಿಸಂಸ್ಥಿತಾಃ ॥**

ಎಂಬ ಪದ್ಮಪುರಾಣ ವಚನವೂ ಈ ಗೀತಾಶ್ಲೋಕಕ್ಕೆ ಸಮಾಖ್ಯಾರೂಪವಾಗಿರುವದು. ರುದ್ರಾಣಾಂಶಂಕರಶ್ಚಾಸ್ಮಿ ಎಂಬ ಶ್ರೀ ಕೃಷ್ಣನ ವಾಕ್ಯದಿಂದಲೂ ರುದ್ರದೇವರಿಗೆ ಆಧಿಕ್ಯಪ್ರದನಾಗಿ ಒಂದು ರೂಪದಿಂದ ಆವರಲ್ಲಿ ಪರಮಾತ್ಮನು ಸ್ಥಿತನಾಗಿರುವನೆಂದು ನಿಶ್ಚಿತವಾಗುವುದು.

## 7.

ಬ್ರಹ್ಮಾದಿ ಚೇತನರು ಸಮಾನರಾಗಿರುವುದಿಲ್ಲ; ಮತ್ತು ತಾರತಮ್ಯೋಪೇತರಾಗಿರುವರು; ಎಂಬುದು ಬ್ರಹ್ಮ ಸಾಕ್ಷಾತ್ಕಾರಾರ್ಥವಾಗಿ ಆಯಾಯ ಚೇತನರಿಗೆ ವಿಹಿತವಾದ ಸಾಧನ ತಾರತಮ್ಯದಿಂದಲೂ ವ್ಯಕ್ತವಾಗುವುದು. ಸರ್ವ ಚೇತನರೂ ಸಮಾನರಾಗಿದ್ದರೆ, ಸಮಾನ ತಪಸ್ಸು, ಶ್ರವಣ, ಮನನಾದಿ ಸಾಧನಗಳಿಂದ ಸಮಾನ ಬ್ರಹ್ಮ ಸಾಕ್ಷಾತ್ಕಾರವನ್ನು ಹೊಂದಿ, ಸಮಾನವಾದ ಸುಖವನ್ನು ಮುಕ್ತಿಯಲ್ಲಿ ಅನುಭವಿಸಬೇಕು. ಶ್ರೀ ಕೃಷ್ಣನು ಸಾಧನ ತಾರತಮ್ಯವನ್ನೂ, ಬ್ರಹ್ಮ ಸಾಕ್ಷಾತ್ಕಾರ ತಾರತಮ್ಯವನ್ನೂ ಸ್ಪಷ್ಟವಾಗಿ ನಿರೂಪಿಸಿರುತ್ತಾನೆ. ಶ್ರೀ ಕೃಷ್ಣನು ಹೇಳುತ್ತಾನೆ.—

(1) **ಧ್ಯಾನೇನಾತ್ಮನಿಪಶ್ಯಂತಿಕೇಚಿದಾತ್ಮಾನಮಾತ್ಮನಾ ।**
**ಅನ್ಯೇಸಾಂಖ್ಯೇನಯೋಗೇನ ಕರ್ಮಯೋಗೇನಚಾಪರೇ ।**
**ಅನ್ಯೇತ್ವೇವಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೇ ।**
**ತೇಪಿಚಾತಿತರಂತ್ಯೇವಮೃತ್ಯುಂಶ್ರುತಿಪರಾಯಣಾಃ ॥**
—(13. 25-26.)

ಅರ್ಥವು :— ಕೆಲವರು ( ಋಷ್ಯಾದಿಗಳು, ಶ್ರವಣಸಹಕೃತವಾದ ಸ್ವಪ್ರತಿಭೆಯಿಂದ ಪರಮಾತ್ಮನನ್ನು ತಿಳಿದವರಾಗಿ ) ಧ್ಯಾನದಿಂದ ಪರಮಾತ್ಮನನ್ನು ಸ್ವದೇಹ

ದಲ್ಲಿ ನೋಡುತ್ತಾರೆ. ಮತ್ತು (ಧ್ಯಾನ ಪ್ರಯತ್ನವಿಲ್ಲದೆ), ಕೆಲವರು (ದೇವತೆಗಳು, ವಿಷ್ಣು ಪ್ರಸಾದ ಲಬ್ಧವಾದ) ಪ್ರತಿಭಾರೂಪವಾದ ಜ್ಞಾನದಿಂದಲೇ ಪರಮಾತ್ಮನನ್ನು ನೋಡುತ್ತಾರೆ. ಇನ್ನು ಕೆಲವರು (ಸ್ವಲ್ಪ ಶ್ರವಣಸಹಕೃತವಾದ ಸ್ವಪ್ರತಿಭೆಯಿಂದ ಪರಮಾತ್ಮನನ್ನು ತಿಳಿದು) ಅಶ್ವಮೇಧಾದಿ ಕರ್ಮರೂಪವಾದ ಉಪಾಯದಿಂದ ಪರಮಾತ್ಮನನ್ನು ನೋಡುತ್ತಾರೆ. ಮತ್ತೂ ಕೆಲವರು ಈ ರೀತಿ (ಸ್ವಪ್ರತಿಭೆಯಿಂದ ಮತ್ತು ಸಾಕ್ಷಾತ್ ಧ್ಯಾನಾದಿ ಉಪಾಯಗಳಿಂದ) ಪರಮಾತ್ಮನನ್ನು ತಿಳಿಯಲಾರದೆ, ಅನ್ಯರಿಂದ ಪರಮಾತ್ಮ ಸ್ವರೂಪವನ್ನು ಶ್ರವಣ ಮಾಡಿ, ಮನನ ಧ್ಯಾನರೂಪವಾದ ಉಪಾಸನೆಯನ್ನು ಮಾಡುತ್ತಾರೆ. ಶ್ರವಣೋಪಾಯವೇ ಪ್ರಚುರರಾದ ಇಂಥವರೂ ಕೂಡ ಪರಮಾತ್ಮನನ್ನು ದರ್ಶನ ಮಾಡಿ ಸಂಸಾರವನ್ನು ದಾಟಿಯೇ ದಾಟುತ್ತಾರೆ.

ಈ ವಾಕ್ಯಗಳಲ್ಲಿ ಪರಮಾತ್ಮದರ್ಶನ ಮತ್ತು ಸಂಸಾರತರಣ (ಮುಕ್ತಿ) ರೂಪವಾದ ಒಂದೇ ಫಲದ ಉದ್ದಿಶ್ಯ, ನಾಲ್ಕು ವಿಧವಾದ ಉಪಾಸಕರು ಹೇಳಲ್ಪಟ್ಟಿರುವದು. ಕೆಲವರು ಧ್ಯಾನ ಪ್ರಯತ್ನವುಳ್ಳವರು. ಕೆಲವರು ಸಾಕ್ಷಾತ್ ತಮ್ಮ ಪ್ರತಿಭಾಲಬ್ಧ ಜ್ಞಾನದಿಂದ ಉಪಾಸನೆ ಮಾಡುವವರು; ಆದುದರಿಂದ ಇವರು ಪ್ರಬಲರು. ಕೆಲವರು ಕಠಿಣವಾದ ಧ್ಯಾನರೂಪ ಪ್ರಯತ್ನವನ್ನು ಮಾಡಲಾರದೆ, ಮತ್ತು ಸಾಕ್ಷಾತ್ ದೇವರ ದರ್ಶನವನ್ನು ಮಾಡಿಸುವ ಮಹಾಜ್ಞಾನರೂಪ ಪ್ರತಿಭೆಯನ್ನು ಹೊಂದದೆ, ಸ್ವಪ್ರತಿಭೆಯಿಂದ ಬ್ರಹ್ಮನ ಸ್ವರೂಪವನ್ನು ತಿಳಿದು ಭಗವದ್ದರ್ಶನಾರ್ಥವಾಗಿ ಪ್ರಚುರವಾದ ಕರ್ಮೋಪಾಯ ಉಳ್ಳವರು; ಆದುದರಿಂದ ಇವರು ಹಿಂದೆ ಹೇಳಿರುವ ಉಭಯವರ್ಗದ ಚೇತನರಿಗಿಂತಲೂ ದುರ್ಬಲರು. ಈ ಮೂರು ಪಂಗಡದವರೂ ಪ್ರತಿಭಾಬಲವನ್ನು ಹೊಂದಿದವರು. ನಾಲ್ಕನೆಯ ಗುಂಪಿಗೆ ಸೇರಿದ ಶ್ರುತಿಪರಾಯಣರು ಪ್ರತಿಭೆಯಿಂದ ವಿಷ್ಣು ಸದ್ಭಾವವನ್ನು ತಿಳಿಯಲಾರದೆ, ಕ್ರಮವಾಗಿ ಶ್ರವಣ, ಮನನಾದಿಗಳನ್ನು ಮಾಡಿ ಧ್ಯಾನ ಮಾಡಿ ಪರಮಾತ್ಮನನ್ನು ನೋಡುವರು. ಆದುದರಿಂದ ಇವರು ಸರ್ವಾಪೇಕ್ಷೆಯೂ ಅವರರು. ಈ ನಾಲ್ಕು ಪಂಗಡದವರೂ ಕ್ರಮವಾಗಿ ಋಷಿಗಳು, ದೇವತೆಗಳು, ನಾಭಿಯೇ ಮೊದಲಾದ ಚಕ್ರವರ್ತಿಶ್ರೇಷ್ಠರು, ಮತ್ತು ಇತರರು ಮನುಷ್ಯಾದಿಗಳು ಎಂದು ಶಾಸ್ತ್ರದಲ್ಲಿ ನಿಶ್ಚಿತವಾಗಿರುವುದು. " ಋಷಯೋ ಅಂತಃ ಪ್ರಕಾಶಾಃ " ಇತ್ಯಾದಿ ಶ್ರುತಿಗಳಲ್ಲಿ ಬ್ರಹ್ಮಸಾಕ್ಷಾತ್ಕಾರದ ತಾರತಮ್ಯವೂ ವಿದಿತವಾಗಿರುವುದು. ಹನ್ನೊಂದನೆಯ ಅಧ್ಯಾಯದಲ್ಲಿ ಅರ್ಜುನನಿಗೆ ಹೇಳಿರುವ ಶ್ರೀ ಕೃಷ್ಣನ " ದೃಷ್ಟವಾನಸಿ ಮಾಂ ಯಥಾ " ಇತ್ಯಾದಿ ಮಾತುಗಳಿಂದ ಅರ್ಜುನನಿಗೆ ಆಗಿರುವಷ್ಟು ಬ್ರಹ್ಮಸಾಕ್ಷಾತ್ಕಾರವು ಇತರ ಅಲ್ಪ ದೇವತೆಗಳಿಗೆ ಸಹ ಆಗಲಾರದೆಂದು ಸ್ಪಷ್ಟವಾಗುವುದು.

ಮುಕ್ತಿಯಲ್ಲಿಯೂ ಕೂಡ, ಭಗವತ್ಪ್ರಾಪ್ತಿಯು ಏಕ ಪ್ರಕಾರವಾಗಿರುವದಿಲ್ಲ. ಸಾಯುಜ್ಯ, ಸಾರೂಪ್ಯ, ಸಾಮೀಪ್ಯ, ಸಾಲೋಕ್ಯ ಎಂದು ಮುಕ್ತಿಯು

ಚತುರ್ವಿಧವು ಎಂದು ಶ್ರುತಿಗಳಲ್ಲಿ ನಿಶ್ಚಿತವಾಗಿರುವುದು. ಶ್ರೀ ಕೃಷ್ಣನೂ "ವಿಶತೇತದನಂತರಂ" ಎಂಬಲ್ಲಿ ಸಾಯುಜ್ಯ ಮುಕ್ತಿಯನ್ನೂ, "ಮಮಸಾಧರ್ಮ್ಯಮಾಗತಾಃ" ಎಂಬಲ್ಲಿ ಸಾರೂಪ್ಯಮುಕ್ತಿಯನ್ನೂ, "ಶಾಶ್ವತಂ ಪದಮವ್ಯಯಂ" ಇತ್ಯಾದಿ ಸ್ಥಳಗಳಲ್ಲಿ ಸಾಮೀಪ್ಯ, ಸಾಲೋಕ್ಯ ಮುಕ್ತಿಪ್ರಾಪ್ತಿಯನ್ನೂ ನಿರೂಪಿಸಿರುತ್ತಾನೆ. ಇವುಗಳು ಕ್ರಮವಾಗಿ ಒಂದರಿಂದ ಒಂದು ಕಡಿಮೆಯು ಎಂಬುದು ಪ್ರಮಾಣಪ್ರಮಿತವಾಗಿರುವುದರಿಂದ ಅವುಗಳನ್ನು ಹೊಂದತಕ್ಕ ಚೇತನರೂ ಸಹ ಸ್ವಭಾವದಿಂದಲೇ ನ್ಯೂನಾಧಿಕಭಾವದಿಂದ (ತಾರತಮ್ಯದಿಂದ) ಯುಕ್ತರಾಗಿರಬೇಕೆಂದು ಅನುಮಾನದಿಂದ ಸಿದ್ಧವಾಗುವುದು.

## ೮.

ಚೇತನರಲ್ಲಿ ತಾರತಮ್ಯವನ್ನು ಒಪ್ಪದೆ ಎಲ್ಲರೂ ಸಮಾನರೆಂದು ಹೇಳುವವರು, ಅಥವಾ ಒಂದೇ ಚೇತನವು ಇರುವುದರಿಂದ ಭೇದಶಂಕೆಯನ್ನೂ ಮಾಡಬಾರದೆಂದು ಆಗ್ರಹದಿಂದ ವಾದ ಮಾಡುವವರು, ಅನೇಕ ಅನಿಷ್ಟಗಳನ್ನು ಅಂಗೀಕರಿಸಬೇಕಾಗುವುದು. ಮುಖ್ಯವಾದ ಒಂದು ದೋಷವನ್ನು ತೋರಿಸಿ ಈ ಉಪನ್ಯಾಸವನ್ನು ಉಪರಮ ಹೊಂದಿಸುವೆವು. ಸರ್ವ ಚೇತನರೂ ಸಮಾನರು, ಅಥವಾ ಚೇತನವು ಒಂದೇ ಎಂದು ಹೇಳುವುದಾದರೆ, ಬಹು ವೈಚಿತ್ರ್ಯದಿಂದಲೂ ತಾರತಮ್ಯದಿಂದಲೂ ಸಹಿತವಾಗಿ ಈ ಜಗತ್ತನ್ನು ಸೃಷ್ಟಿ ಮಾಡಿರುವ ಪರಮಾತ್ಮನು **ವೈಷಮ್ಯನೈರ್ಘೃಣ್ಯಾದಿ** ದೋಷಯುಕ್ತನಾಗಿರಬೇಕಾಗುವುದು. ಜೀವರುಗಳ ಕರ್ಮವೈಚಿತ್ರ್ಯತಾರತಮ್ಯಗಳನ್ನು ನಿಮಿತ್ತ ಮಾಡಿ ಪರಮಾತ್ಮನು ಅನೇಕ ಜೀವರುಗಳಿಗೆ ವಿಚಿತ್ರವಾಗಿ ತಾರತಮ್ಯೋಪೇತವಾಗಿ ಫಲವನ್ನು ಕೊಡುವನೆಂದು ಯದ್ಯಪಿ ಹೇಳಬಹುದು. ಆದರೂ ಇದು ಸಮಗ್ರವಾದ ಉತ್ತರವಲ್ಲ. ಜೀವರುಗಳು ವಿಚಿತ್ರರಾಗಿದ್ದರಷ್ಟೇ ವಿಚಿತ್ರ ಕರ್ಮಗಳನ್ನು ಮಾಡುವರು! ಜೀವರುಗಳು ತಾರತಮ್ಯೋಪೇತರಾಗಿದ್ದರಷ್ಟೇ ತಾರತಮ್ಯೋಪೇತವಾದ ಕರ್ಮಗಳನ್ನು ಮಾಡುವರು! ಕರ್ಮವು ಪೆಟ್ಟಿಗೆಯಲ್ಲಿರುವ ಧನದಂತೆ, ಅಥವಾ ನಾಲಿಕೆಳಗಿರುವ ಜಮೀನಿನಂತೆ, ಜೀವನಿಂದ ಬಹುದೂರ ಇರುವ ಬಹಿರ್ಭೂತವಾದ ಆಸ್ತಿಯಲ್ಲ. ಮತ್ತೇನೆಂದರೆ, ಜೀವನು ತನ್ನ ಸ್ವರೂಪಭೂತವಾದ ಇಂದ್ರಿಯಗಳಿಂದ ಜಡ ಶರೀರವನ್ನು ಪ್ರೇರಣೆ ಮಾಡಿ **ಮಾಡಿರುವ** ವ್ಯಾಪಾರವು. ಹೀಗಿರುವಲ್ಲಿ ಒಬ್ಬ ಜೀವನು ಉತ್ತಮ ವ್ಯಾಪಾರವನ್ನು ಮಾಡುವುದರಲ್ಲಿಯೂ, ಮತ್ತೊಬ್ಬ ಜೀವನು ಅಧಮ ವ್ಯಾಪಾರವನ್ನು ಮಾಡುವುದರಲ್ಲಿಯೂ ಪ್ರಯತ್ನ ಮಾಡುವುದರಲ್ಲಿ ಜೀವರುಗಳ ಸ್ವರೂಪವೈಚಿತ್ರ್ಯ ತಾರತಮ್ಯಗಳೇ ಕಾರಣವೆಂದು ಅಂತತಃ ಒಪ್ಪಬೇಕಾಗುವುದು. ಅನಾದ್ಯವಿದ್ಯೆಯಿಂದ *

---

* ಅವಿದ್ಯೆಯು ಅನಾದಿ ಎಂದು ಹೇಳುವುದರಿಂದ ತೊಂದರೆಯು ಪರಿಹೃತವಾಗಲಿಲ್ಲ. ಆಗಲೂ ಜೀವಸ್ವಭಾವಕ್ಕೂ ಅವಿದ್ಯಾದಿ ಬಂಧಗಳಿಗೂ ಕಾರ್ಯಕಾರಣಭಾವವು ಅಶಕ್ಯವಾದರೂ,

ಅನಭಿವ್ಯಕ್ತವಾದ ಸ್ವರೂಪಜ್ಞಾನವುಳ್ಳವರಾಗಿ ಬಾಹ್ಯಜ್ಞಾನಕ್ಕೆ ವಶರಾಗಿ ನಾನಾ ಉತ್ತಮಾಧಮ ವ್ಯಾಪಾರಗಳನ್ನು ಸಮಾನರಾದ ಜೀವರುಗಳೇ ಮಾಡುವರೆಂದೂ ಹೇಳಲಾಗುವುದಿಲ್ಲ. ಹಾಗಾಗುವದಾದರೆ, ಅವಿದ್ಯೆಯು ಸರ್ವರನ್ನೂ **ಏಕರೀತಿಯಿಂದ** ಬಂಧಿಸಿ, ಸರ್ವರೂ ಏಕಾಕಾರವಾದ ವ್ಯಾಪಾರಗಳಲ್ಲಿ ಪ್ರವರ್ತಿಸಬೇಕಾಗುವುದು. ಉತ್ತಮಾಧಮ ವ್ಯಾಪಾರಗಳಾಗಲೀ, ವಿಚಿತ್ರ ವ್ಯಾಪಾರಗಳಾಗಲೀ ಲೋಕದಲ್ಲಿ ಇರದೇ ಹೋಗಬೇಕಾದೀತು ! ಲೋಕದಲ್ಲಿ ಅತಿ ವೈಚಿತ್ರ್ಯವೂ, ಬಹು ತಾರತಮ್ಯವೂ ಕಂಡು ಬಂದಿರುವವು. ಇಂಥ ಸ್ವರೂಪಭೂತವಾದ ವೈಚಿತ್ರ್ಯತಾರತಮ್ಯಾನುಗುಣವಾಗಿ ಪ್ರಾಪ್ತವಾಗಿರುವ ಅವಿದ್ಯಾ, ಕಾಮ, ಕರ್ಮಾದಿಗಳನ್ನು ನಿಮಿತ್ತ ಮಾಡಿ, ಪರಮಾತ್ಮನು ಪ್ರಪಂಚದಲ್ಲಿ ನಾನಾ ವೈಚಿತ್ರ್ಯ ತಾರತಮ್ಯಗಳನ್ನು ನಿರ್ಮಾಣ ಮಾಡುವನೆಂದು ಹೇಳಿದರೆ, ಲೋಕದಲ್ಲಿ ಸ್ತೇನನನ್ನು ಬಂಧಿಸಿ, ನಿರಪರಾಧಿಯಾದವನನ್ನು ಬಿಡುಗಡೆ ಮಾಡುವ ನ್ಯಾಯಾಧಿಪತಿಯಂತೆ, ಆತನು ನಿಷ್ಪಕ್ಷಪಾತನೆಂದೇ ಎನ್ನಿಸುವನು; ಮತ್ತು "ವೈಷಮ್ಯನೈರ್ಘೃಣ್ಯೇ ನಸಾಪೇಕ್ಷತ್ವಾತ್" ಎಂಬ ಬ್ರಹ್ಮ ಸೂತ್ರಾರ್ಥವೂ ಸಮಂಜಸವಾಗುವದು. ಹಾಗಿಲ್ಲದಿದ್ದರೆ, ಸಮಾನರಾದ ಜೀವರುಗಳಿಗೆ ವಿಷಮ ಫಲವನ್ನು ಕೊಡುವ, ಮತ್ತು ವಿಚಿತ್ರ ಫಲವನ್ನು ಕೊಡುವ ಪರಮಾತ್ಮನು ಪಕ್ಷಪಾತಿಯು ಅಥವಾ ಕುಹಕಪುರುಷನು ಎಂದೆನಿಸುವನು.

2. ಮತ್ತು ಇಹಲೋಕದಲ್ಲಿ ವಿಷಮ ಸಾಧನೆಗಳು ಇದ್ದರೂ, ಜೀವಸಾಮ್ಯವನ್ನು ಮುಕ್ತಿಯಲ್ಲಿ ಪ್ರಕಟನೆ ಮಾಡಿ, ಮುಕ್ತಿಯಲ್ಲಿ ಸರ್ವ ಜೀವರಿಗೂ ಸಮ ಸುಖವನ್ನು ಪರಮಾತ್ಮನು ಕೊಡುವನೆಂದು ಹೇಳಿದರೂ, ಆತನಿಗೆ ವೈಷಮ್ಯದೋಷವು ತಪ್ಪಲಿಲ್ಲ. ಹೇಗೆಂದರೆ ಹತ್ತು, ಇಪ್ಪತ್ತು ಕಲ್ಪಗಳ ಪರ್ಯಂತ ಕಷ್ಟಪಟ್ಟು ಸಾಧನೆ ಮಾಡಿದ ಪುರುಷನೂ, ಒಂದೇ ಕಲ್ಪದಲ್ಲಿ ಅಲ್ಪಕಷ್ಟದಿಂದ ಮುಕ್ತನಾದವನೂ, ಸಮಾನವಾದ ಸುಖವನ್ನು ಅನುಭವಿಸುವುದಾದರೆ, ವಿಷಮ ಸಾಧನೆಗಳಿಗೆ ಸಮ ಫಲವನ್ನು ಕೊಡುವ ಪರಬ್ರಹ್ಮನು "**ನ್ಯಾಯಃ**" ಮತ್ತು "**ಧರ್ಮೋಧರ್ಮವಿದುತ್ತಮಃ**" ಇತ್ಯಾದಿ ತನ್ನ ಸುಪ್ರಸಿದ್ಧ ನಾಮಗಳನ್ನು ತೊರೆದು ಅನ್ಯಾಯ ಮಾಡುವುದರಲ್ಲಿ ಅಗ್ರಗಣ್ಯನೆಂದೆನಿಸಬೇಕಾಗುವದು.

3. ಕಿಂಚ ಜೀವಸಾಮ್ಯವನ್ನು ಪ್ರಧಾನವಾಗಿಟ್ಟುಕೊಂಡು, ಸಾಧನ ತಾರತಮ್ಯವನ್ನು ಗಣನೆಗೆ ತರದೇ ಹೋಗುವದೂ ಒಂದು ನ್ಯಾಯವಾಗುವುದಾದರೆ, ಲೋಕದಲ್ಲಿಯೂ ಕೂಡ ಜೀವಸಾಮ್ಯವು ಸದಾ ಇರುವದನ್ನು ನಿಮಿತ್ತ ಮಾಡಿ,

---

ಪ್ರಯೋಜ್ಯಪ್ರಯೋಜಕ ಭಾವವು ಇದ್ದೇ ಇರುವುದು. ಜೀವಸ್ವಭಾವಾನುಗುಣವಾಗಿರತಕ್ಕದ್ದು ಬಂಧವು. ಹಾಗಿಲ್ಲದಿದ್ದರೆ "ಬ್ರಹ್ಮ" ಜೀವನಿಗೆ "ಇಂದ್ರ" ಜೀವನ ಬಂಧವು ಬರಲಿ ಇತ್ಯಾದಿ ನಾನಾ ಆಪಾದನೆಗಳು ಪ್ರಾಪ್ತವಾಗುವವು.

ಧರ್ಮಶಾಸ್ತ್ರಕಾರರು, ಬ್ರಾಹ್ಮಣಾದಿ ವರ್ಣಗಳಲ್ಲಿ **ಸಾಮ್ಯವನ್ನು** ಉಂಟು ಮಾಡು ವುದೇ ಕ್ಷತ್ರಿಯರಿಗೆ ಪರಮಧರ್ಮವೆಂದು ವಿಧಿಸಬೇಕಾಗಿದ್ದಿತು. ವಿದ್ಯಾ ಕರ್ಮಗಳ ತಾರತಮ್ಯಾನುಸಾರವಾಗಿ ಮಹಾರಾಜನು ಪ್ರಜೆಗಳಿಗೆ ಆಶ್ರಯ ಕೊಟ್ಟು ಪಾಲಿಸ ಬೇಕೆಂದು ಧರ್ಮ ಶಾಸ್ತ್ರದ ನಿರ್ಣಯವಿರುತ್ತದೆ. ಸರ್ವ ಜೀವರುಗಳೂ ಸಮಾನ ರಾಗಿದ್ದರೆ, ಅಕಿಂಚಿತ್ಕರವಾದ ಕರ್ಮಾದಿಗಳ ತಾರತಮ್ಯವನ್ನು ಗಣನೆಗೆ ತಾರದೆ, ಲೋಕದಲ್ಲಿಯೂ ಕೂಡ ತತ್ವದ್ವರ್ಣಸ್ಥ ಜನರಲ್ಲಿ ಸಾಮ್ಯೋತ್ಪಾದನವೇ ಶಾಸ್ತ್ರಾನು ಗ್ರಹೀತವಾದ ನಿರ್ಣಯವಾಗುತ್ತಿತ್ತು.

**4.** ಕಿಂಚ ಫಲಸಾಮ್ಯವು ಮುಕ್ತಿಯಲ್ಲಿ ಸಿದ್ಧವಾಗಿರುವುದೆಂಬ ಮತವು ಲೋಕದಲ್ಲೂ ಸಮುನ್ನದ್ಧವಾದ ಉತ್ಸಾಹಸಹಿತವಾದ ಸಾಧನೆಗಳಿಗೆ ಕಾರಣ ವಾಗಲಾರದು. ಎಂದಾದರೂ ಒಂದು ದಿನ ಸರ್ವರಿಗೂ ಸಮಾನ ಮುಕ್ತಿಯು ಸಿದ್ಧವಾಗಿರುವುದೆಂದು ತಿಳಿದ ಪುರುಷನು ಗೃಹಾಪತ್ಯ ಪುತ್ರಾದಿಗಳನ್ನು ಪರಿತ್ಯಾಗ ಮಾಡಿ, ಕಷ್ಟಕರವಾದ ಸಾಧನೆಯನ್ನು ಈಗಲೇ ಮಾಡಬೇಕೆಂಬ ನಿರ್ಬಂಧಕ್ಕೆ ವಶನಾಗಲಾರನು. ಭಕ್ತಾಗ್ರಣಿಯಾದ ಪ್ರಹ್ಲಾದನಾದರೋ **" ಆಬಾಲ್ಯಾತ್ ಹರಿಭಕ್ತಿಃ "** ಎಂದರೆ ಬಾಲ್ಯ ಮೊದಲುಗೊಂಡು ಒಂದು ಕ್ಷಣವೂ ಹರಿಪಾದ ವನ್ನು ಬಿಡಬಾರದೆಂದು ಹೇಳಿರುತ್ತಾನೆ. " ಕೌಮಾರ ಆಚರೇತ್ ಪ್ರಾಜ್ಞಃ ಧರ್ಮಾ ಭಾಗವತಾನಿಹ " ಎಂಬ ಪ್ರಮಾಣ ವಚನವೂ ಇದೇ ಅರ್ಥವನ್ನು ನಿರೂಪಿಸುತ್ತದೆ.

5. ಶ್ರೀ ಕೃಷ್ಣನೂ ಸಹ ತಾನು ವೈಷಮ್ಯಾದಿದೋಷಶೂನ್ಯನೆಂದೂ, ಸಾಧನಾನುಗುಣವಾಗಿ ತರತಮಭಾವದಿಂದ ಫಲವನ್ನು ವಿತರಣೆ ಮಾಡತಕ್ಕವ ನೆಂದೂ ಹೇಳಿರುತ್ತಾನೆ :—

(1) **ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಂ ॥**
—(9. 29.)

ಅರ್ಥವು :— ಎಲೈ ಅರ್ಜುನನೇ ! ನಾನು ಸರ್ವ ಪ್ರಾಣಿಗಳ ವಿಷಯ ದಲ್ಲಿಯೂ ಸಮನು ಎಂದರೆ ವೈಷಮ್ಯಾದಿ ದೋಷಗಳುಳ್ಳವನಲ್ಲ, ಅಧಿಕಾರಿಯು ತನ್ನ ದ್ವೇಷಕ್ಕಿಂತ ಅಧಿಕವಾಗಿ ನನ್ನಿಂದ ದ್ವೇಷಿಸಲ್ಪಡುವುದಿಲ್ಲ; ಮತ್ತು ಭಕ್ತನು, ತನ್ನ ಪ್ರೀತಿಗಿಂತ ಅಧಿಕವಾಗಿ ನನ್ನಿಂದ ಪ್ರೀತಿಸಲ್ಪಡುವುದಿಲ್ಲ. (ಅವರವರ ದ್ವೇಷ ಪ್ರೀತಿಗಳಿಗೆ ಅನುಗುಣವಾಗಿ ತತ್ತತ್ಸದೃಶ ಫಲಗಳನ್ನು ಕೊಡುವುದರಿಂದಲೇ ನಾನು ಸಮನು ಎಂದು ಭಾವವು. ಇದನ್ನೇ ಉತ್ತರಾರ್ಧದಲ್ಲಿ ವಿವರಿಸುತ್ತಾನೆ.) ಯಾರು ನನ್ನನ್ನು ಭಕ್ತಿಯಿಂದ ಸೇವಿಸುತ್ತಾರೆಯೋ ಅವರು ನನ್ನಲ್ಲಿಯೇ ಇರು ತ್ತಾರೆ ಎಂದರೆ ಸರ್ವದಾ ನನ್ನಲ್ಲಿಯೇ ಇಡಲ್ಪಟ್ಟ **ಚಿತ್ತವುಳ್ಳವರಾಗಿರುತ್ತಾರೆ**

ಅಥವಾ ಸರ್ವದಾ ನನ್ನ ಅಧೀನರಾಗಿರುತ್ತಾರೆ. ನಾನೂ ಕೂಡ ಸರ್ವದಾ ಅವರಲ್ಲಿಯೇ ಇರುತ್ತೇನೆ; ಎಂದರೆ ಸರ್ವದಾ ಅವರ ವಶನಾಗಿ, ಅವರಲ್ಲಿ ಅನುಗ್ರಹೋನ್ಮುಖನಾಗಿರುತ್ತೇನೆ ಎಂದು ಅರ್ಥವು.

**ಪ್ರಶ್ನೆ**— ಸ್ವಾಮೀ ! ಈ ಶ್ಲೋಕದಲ್ಲಿ ನಾನು ಸರ್ವರಲ್ಲೂ ಸಮನು ! ನನಗೆ ದ್ವೇಷಯೋಗ್ಯರೂ ಪ್ರೀತಿಪಾತ್ರರೂ ಯಾರೂ ಇಲ್ಲವೆಂದು ಸ್ಪಷ್ಟವಾಗಿ ಶ್ರೀ ಕೃಷ್ಣನು ಹೇಳಿರುತ್ತಾನೆ. ಹೀಗಿರುವಲ್ಲಿ ದ್ವೇಷ ಮಾಡುವವರ ದ್ವೇಷಕ್ಕಿಂತ ಹೆಚ್ಚು ದ್ವೇಷ ಮಾಡುವುದಿಲ್ಲ; ಪ್ರೀತಿ ಮಾಡುವವರ ಪ್ರೀತಿಗಿಂತ ಹೆಚ್ಚು ಪ್ರೀತಿ ಮಾಡುವುದಿಲ್ಲ ಎಂಬ ತಮ್ಮ ವಿಚಿತ್ರ ಕಲ್ಪನೆಗೆ ಕಾರಣವೇನು ?

ಶ್ರೀ ಶ್ರೀಗಳವರು— ವಾಕ್ಯತಾತ್ಪರ್ಯ ನಿರ್ಣಯಜ್ಞರು ಹೀಗೆಯೇ ಅರ್ಥ ಮಾಡುವರು. 1. ಇದು ಕೌರವದ್ವೇಷಿಯೂ ಪಾಂಡವಪ್ರಿಯನೂ ಆದ, ತನ್ನ ಭಕ್ತ ಪರವಶತೆಯನ್ನು ಮೂರು ಲೋಕಕ್ಕೂ ತೋರಿಸುವುದಕ್ಕಾಗಿ ತನ್ನ ಭೃತ್ಯನ ಸಾರಥ್ಯಕರ್ಮದಲ್ಲಿ ಉದ್ಯುಕ್ತನಾದ, ಶ್ರೀ ಕೃಷ್ಣನ ಮಾತು. ದ್ವೇಷಕಾರ್ಯವನ್ನೂ, ಪ್ರೀತಿ ಕಾರ್ಯವನ್ನೂ ಮಾಡುತ್ತಿರುವ ಪರಮಾತ್ಮನು ನನಗೆ ದ್ವೇಷ ಪ್ರೀತಿಗಳಿಲ್ಲವೆಂದು ಹೇಳಿದರೆ ಆ ಪದಗಳಿಗೆ ಪ್ರಕರಣೋಚಿತವಾದ ಅರ್ಥವನ್ನು ಕಲ್ಪಿಸತಕ್ಕದ್ದು ಆವಶ್ಯಕವು. 1. ಕಿಂಚ, ಲೋಕದಲ್ಲೂ ದ್ವೇಷಪ್ರೀತಿಗಳಿಗೆ ಅನುಗುಣವಾಗಿ ಫಲಪ್ರದನಾದ ಯಮನು ಸಮವರ್ತೀ ಎಂಬ ಪ್ರಸಿದ್ಧ ಹೆಸರುಳ್ಳವನಾಗಿರುವನು. ದುರ್ಜನರನ್ನು ದಂಡ ಮಾಡಿ, ಸಾಧುಗಳಿಗೆ ಸುಖಪ್ರದನಾದ ಯಮನನ್ನು ಧರ್ಮರಾಜನೆಂದೂ, ವೈಷಮ್ಯರಹಿತನೆಂದೂ ಸ್ತುತಿಸುತ್ತಾರೆ. 3. ಮತ್ತು ಶ್ರೀ ಕೃಷ್ಣನ ಈ ವಾಕ್ಯಕ್ಕೆ "ನಾನು ಸರ್ವಾತ್ಮನಾ ದ್ವೇಷರಹಿತನು, ಸರ್ವಾತ್ಮನಾ ಪ್ರೀತಿರಹಿತನು" ಎಂದು ಅರ್ಥ ಮಾಡಿದರೆ, "ಯೇ ಭಜಂತಿತುಮಾಂ ಭಕ್ತ್ಯಾಮಯಿತೇ ತೇಷುಚಾಪ್ಯಹಂ" ಎಂಬ ಉತ್ತರಾರ್ಧವು ಉನ್ಮತ್ತ ಪ್ರಲಾಪಕ್ಕೆ ಸದೃಶವಾಗುವುದು. ನಾನು ಪ್ರೀತಿರಹಿತನು ಎಂದು ಹೇಳಿ, ನಾನು ನನ್ನ ಭಕ್ತರಲ್ಲಿ ಅತಿಶಯಿತ ಪ್ರೀತಿ ಉಳ್ಳವನು ಎಂದು ಹೇಳುವುದು ವಿರುದ್ಧೋಕ್ತಿಯಾಗುವುದಿಲ್ಲವೇ ? 3. ಆದುದರಿಂದ ಲೋಕದಲ್ಲಿ ಪ್ರಾಕೃತ ಜನರಿಗೆ ಇರುವಂಥ ದುಷ್ಟವಾದ, ಮೋಹನಿಮಿತ್ತಕವಾದ ಪ್ರೀತಿ ದ್ವೇಷಗಳು ಪರಮಾತ್ಮನಿಗೆ ಇಲ್ಲ; ಮತ್ತು ತತ್ವಜ್ಜೀವರುಗಳ ಸ್ವಭಾವಯೋಗ್ಯತಾ, ಕರ್ಮಾದಿಗಳ ಅನುಸಾರವಾದ ನ್ಯಾಯವಾದ ಪ್ರೀತಿ ದ್ವೇಷಗಳು ಪರಮಾತ್ಮನಿಗೆ ಉಂಟು ಎಂದು ಈ ಶ್ಲೋಕಕ್ಕೆ ಅರ್ಥ ಮಾಡಬೇಕು.

5. ಪರಂತು ಸರ್ವಥಾ ದ್ವೇಷ ಪ್ರೀತಿಗಳಿಂದ ರಹಿತವಾದ, ಹೃದಯಶೂನ್ಯವಾದ ಬಂಡೆಯ ಕಲ್ಲಿನಂತಿರುವ ಪರಬ್ರಹ್ಮ ವಸ್ತುವನ್ನು ಯಾವ ಪ್ರೇಕ್ಷಾವಂತನಾದ ಯೋಗಿಯು ಹೃದಯಕಮಲದಲ್ಲಿ ಆಲಂಗಿಸಿಕೊಂಡು ಆನಂದವನ್ನು

ಹೊಂದುವನು ? " ಪ್ರಹಸನ್ನಿವಭಾರತ " ಎಂದು ಸಂಜಯನು ಹೇಳುವಂತೆ ಮಂದಹಾಸ ಸಹಿತನಾದ, ಅರವಿಂದನಯನನು ತನ್ನ ಭಕ್ತರು ತನಗೆ ಪ್ರಾಣಕ್ಕಿಂತ ಪ್ರಿಯರೆಂದು ಹೇಳುತ್ತಾನೆ.—

(2) **ಮಯ್ಯರ್ಪಿತಮನೋಬುದ್ಧಿರ್ಯೋಮದ್ಭಕ್ತಸ್ಸಮೇಪ್ರಿಯಃ ।**
—(12. 13-14.)

ಯಾವನು ಸರ್ವ ಪ್ರಾಣಿಗಳಲ್ಲಿ ದ್ವೇಷರಾಹಿತ್ಯಾದಿ ಗುಣವುಳ್ಳವನಾಗಿ........ ನನ್ನಲ್ಲಿಯೇ ಇಡಲ್ಪಟ್ಟ ಮನಸುಳ್ಳ ಭಕ್ತನೋ ಅವನು ನನ್ನ ಪ್ರೀತಿವಿಷಯನು.

(3) **ಹರ್ಷಾಮರ್ಷಭಯೋದ್ವೇಗೈರ್ಮುಕ್ತೋಯಸ್ಸಚಮೇ ಪ್ರಿಯಃ ॥** —(12. 15.)

ಹರ್ಷ ( ಅಧರ್ಮಾರ್ಥವಾಗಿ ಮನಃಪ್ರವೃತ್ತಿ ), ರೋಷ ಭಯೋದ್ವೇಗಾದಿಗಳಿಂದ ರಹಿತವಾದ ನನ್ನ ಭಕ್ತನು ನನಗೆ ಪ್ರೀತಿವಿಷಯನು.

(4) **ಸರ್ವಾರಂಭಪರಿತ್ಯಾಗೀಯೋಮದ್ಭಕ್ತಸ್ಸಮೇಪ್ರಿಯಃ ।**
—(12. 16.)

ಭಗವಂತನಿಗೆ ವಿರುದ್ಧವಾದ ಸಕಲ ಉದ್ಯೋಗಗಳನ್ನು ಪರಿತ್ಯಾಗ ಮಾಡಿ ನನ್ನ ( ಶ್ರೀ ಕೃಷ್ಣನ ) ಭಕ್ತನಾದವನು ನನಗೆ ಪ್ರೀತಿ ವಿಷಯನು.

(5) **ಶುಭಾಶುಭಪರಿತ್ಯಾಗೀ ಭಕ್ತಿಮಾನ್ಯಸ್ಸಮೇಪ್ರಿಯಃ ।**
—(12. 17.)

ಭಗವತ್ಪ್ರಾಪ್ತಿಗೆ ಸಾಧಕವಾಗದಿರುವ ಸರ್ವ ಕಾಮ್ಯ ಶುಭಗಳನ್ನೂ ಮತ್ತು ಸರ್ವ ಅಶುಭಗಳನ್ನೂ ಪರಿತ್ಯಾಗ ಮಾಡಿ ನನ್ನಲ್ಲಿ ಭಕ್ತಿಯುಳ್ಳವನು ನನಗೆ ಪ್ರೀತಿ ವಿಷಯನು.

(6) **ಅನಿಕೇತಸ್ಸ್ಥಿರಮತಿರ್ಭಕ್ತಿಮಾನ್ಮೇಪ್ರಿಯೋನರಃ ।**
—(12. 19.)

ಭಗವದಿತರರನ್ನು ಆಶ್ರಯಿಸದೆ, ಕುತರ್ಕಗಳಿಂದ ಚಾಂಚಲ್ಯರಹಿತವಾದ ಜ್ಞಾನವುಳ್ಳ ನನ್ನ ಭಕ್ತನು ನನಗೆ ಪ್ರೀತಿ ವಿಷಯನು.

(7) **ಯೇತು........ಮತ್ಪರಮಾಭಕ್ತಾಸ್ತೇಽತೀವಮೇ ಪ್ರಿಯಾಃ ।**
—(12. 20.)

ಭಗವತ್ಸಂಬಂಧಿಯಾದ, ಮುಕ್ತಿಸಾಧನವಾದ, ನನ್ನಿಂದ ಉಪದಿಷ್ಟವಾದ ಈ ತತ್ವವನ್ನು, ಆಸ್ತಿಕ್ಯಬುದ್ಧಿಯಿಂದ ಸಹಿತವಾಗಿ, ನನ್ನನ್ನೇ ಸರ್ವೋತ್ತಮನೆಂದು

ತಿಳಿದು, ಯಾರು ಉಪಾಸನೆ ಮಾಡುತ್ತಾರೆಯೋ ಅಂಥ ಭಕ್ತರು ನನಗೆ ಅತ್ಯಂತ ಪ್ರೀತಿ ವಿಷಯರು.

(8) **ಪ್ರಿಯೋಽಹಿಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ।**
—(7. 17.)

ಜ್ಞಾನಿಗೆ ನಾನು ಅತ್ಯಂತ ಪ್ರೀತಿ ವಿಷಯನು. ನನಗೆ ಆ ಜ್ಞಾನಿಯು ಅತ್ಯಂತ ಪ್ರೀತಿ ವಿಷಯನು.

(9) **........ಜ್ಞಾನೀತ್ವಾತ್ಮೈವಮೇಮತಂ ।** —(7. 18.)

ಜ್ಞಾನಿಯು ನಾನೇ, ನನ್ನ ದೇಹವೇ ಎಂದು ನನ್ನ ಮತವು. **"ಮಮ ಪ್ರಾಣಾಹಿ ಪಾಂಡವಾಃ"** ಎಂಬ ಶ್ರೀ ಕೃಷ್ಣನ ವಾಕ್ಯವು ಇದಕ್ಕೆ ಸಮಾಖ್ಯಾ ರೂಪವಾಗಿರುವುದು. ಜ್ಞಾನಿಯು ನನಗೆ ಅತ್ಯಂತ ಪ್ರಿಯನು ಎಂದರ್ಥವು.

(10) **ಇಷ್ಟೋಽಸಿಮೇದೃಢಮಿತಿ ತತೋವಕ್ಷ್ಯಾಮಿತೇಹಿತಂ ।**
—(18. 64.)

ಅರ್ಜುನ ! ನೀನು ನನಗೆ ನಿಶ್ಚಯವಾಗಿಯೂ ಪ್ರೀತಿ ವಿಷಯನಾದುದರಿಂದ ನಿನಗೆ ಹಿತವನ್ನು ಹೇಳುವೆನು.

(11) **........ಪ್ರತಿಜಾನೇ ಪ್ರಿಯೋಽಸಿ ಮೇ ।** —(18. 65.)

ಅರ್ಜುನ ! ನೀನು ನನಗೆ ಪ್ರೀತಿವಿಷಯನು. ಆದುದರಿಂದ ನೀನು ನನ್ನಲ್ಲಿ ಭಕ್ತಿ ಮಾಡು. ನೀನು ನನ್ನನ್ನೇ ಹೊಂದುತ್ತೀಯೆ ಎಂದು ಪ್ರತಿಜ್ಞೆ ಮಾಡುತ್ತೇನೆ.

(12) **ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋಭುವಿ ॥**
—(18. 67-68.)

ನನ್ನಿಂದ ಉಪದಿಷ್ಟವಾದ ಈ ತತ್ವವನ್ನು **ನನ್ನ ಭಕ್ತರಿಗೆ** ಯಾರು ದಾನ ಮಾಡುತ್ತಾರೆಯೋ, ಮನುಷ್ಯರಲ್ಲಿ ಅಂಥವನಿಗಿಂತ ಹೆಚ್ಚು ಇಷ್ಟ ಕಾರ್ಯ ವನ್ನು ನನಗೆ ಮಾಡಿದವರಿಲ್ಲ. ಆದುದರಿಂದ ಅವನಿಗಿಂತ ನನಗೆ ಹೆಚ್ಚು ಪ್ರೀತಿ ಪಾತ್ರನು ಹಿಂದೆ ಇರಲಿಲ್ಲ. ಈಗಲೂ ಇಲ್ಲ. ಮುಂದೂ ಇರುವುದಿಲ್ಲ. ಈ ರೀತಿ ಶ್ರೀ ಪರಮಾತ್ಮನ ಭಕ್ತರೂ, ಜ್ಞಾನಿಗಳೂ ತನಗೆ ಪ್ರೀತಿಪಾತ್ರರೆಂದು **ತಿಳಿಸಿ,** ಅಲ್ಲಲ್ಲಿ ತಾನು ಅವರನ್ನು ಸರ್ವಥಾ ರಕ್ಷಿಸುತ್ತಿರುವೆನೆಂದೂ ಹೇಳುತ್ತಾನೆ :—

(13) **........ನಮೇಭಕ್ತಃ ಪ್ರಣಶ್ಯತಿ ।** —(9. 31.)

ಅರ್ಜುನ ! ನನ್ನ ಭಕ್ತನು ಎಂದಿಗೂ ನರಕಾದ್ಯನರ್ಥಗಳನ್ನು ಹೊಂದುವುದಿಲ್ಲ.

(14) **ಅನನ್ಯಾಶ್ಚಿಂತಯಂತೋಮಾಂ ಯೇಜನಾಃಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ**
**ವಹಾಮ್ಯಹಂ । —(9. 21.)**

ಅನನ್ಯ ಮನಸ್ಕರಾಗಿ ಸಂತತ ನನ್ನನ್ನು ಯಾರು ಉಪಾಸನೆ ಮಾಡುತ್ತಾರೆಯೋ ಅಂಥವರ ಯೋಗಕ್ಷೇಮವನ್ನು ನಾನು ಧರಿಸುತ್ತೇನೆ. ಎಂದರೆ ಅವರಿಗೆ ಇರುವ ಜ್ಞಾನಭಕ್ತ್ಯಾದಿಗಳನ್ನು ರಕ್ಷಿಸುತ್ತಾ, ಮುಂದೆ ಮೋಕ್ಷಾದಿ ಪುರುಷಾರ್ಥಗಳು ಪ್ರಾಪ್ತವಾಗುವಂತೆ ಮಾಡುತ್ತೇನೆ ಎಂದರ್ಥವು.

(15) **ಯೇತು ಸರ್ವಾಣಿ ಕರ್ಮಾಣಿ ಮಯಿಸನ್ನ್ಯಸ್ಯಮತ್ಪರಾಃ ।**
**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನಚಿರಾತ್ ಪಾರ್ಥ ಮಯ್ಯಾವೇಶಿತ ಚೇತಸಾಂ ।**
**—(12. 6-7.)**

ನನ್ನಲ್ಲಿ ಸರ್ವ ಸತ್ಕರ್ಮಗಳನ್ನೂ ಸಮರ್ಪಿಸಿ, ನನ್ನನ್ನೇ ಸರ್ವೋತ್ತಮನೆಂದು ತಿಳಿದು, ನನ್ನಲ್ಲೇ ಇಡಲ್ಪಟ್ಟ ಮನಸ್ಸುಳ್ಳವರನ್ನು ನಾನು ಶೀಘ್ರದಲ್ಲಿಯೇ ಮೃತ್ಯುರೂಪ ಸಂಸಾರಸಾಗರದಿಂದ ಉದ್ಧಾರ ಮಾಡುವವನಾಗುತ್ತೇನೆ. ಭಕ್ತರು ಪ್ರೀತಿಯಿಂದ ಕೊಟ್ಟದ್ದನ್ನು ಸ್ವೀಕರಿಸುತ್ತೇನೆಂದೂ ಹೇಳುತ್ತಾನೆ :—

(16) **ಪತ್ರಂ ಪುಷ್ಪಂ ಫಲಂ ತೋಯಂ ಯೋಮೇಭಕ್ತ್ಯಾ**
**ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥**
**—(9. 26.)**

ಅನಿಷಿದ್ಧವಾದ ತುಲಸ್ಯಾದಿ ಪತ್ರಗಳು, ಕಮಲಾದಿ ಪುಷ್ಪಗಳು, ಫಲ ಉದಕ, ಇವುಗಳನ್ನು ಸಹ ನನಗೆ ಭಕ್ತಿಯಿಂದ ಯಾರು ನಿವೇದನ ಮಾಡುತ್ತಾರೆಯೋ, ಅಂಥ ವಿಷಯವಿರಕ್ತನಿಂದ ಭಕ್ತಿಪೂರ್ವಕವಾಗಿ ಕೊಡಲ್ಪಟ್ಟ ಪತ್ರಾದಿಗಳನ್ನು ನಾನು ಸ್ವೀಕರಿಸುತ್ತೇನೆ.

ಶ್ರೀ ಕೃಷ್ಣನು ಇಂಥ ಭಕ್ತರಲ್ಲೂ ತಾರತಮ್ಯವನ್ನು ನಿರೂಪಿಸುತ್ತಾನೆ.

(17) **ಚತುರ್ವಿಧಾಭಜಂತೇ ಮಾಂಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀಚಭರತರ್ಷಭ ॥**
**ತೇಷಾಂ ಜ್ಞಾನೀನಿತ್ಯಯುಕ್ತಃ ಏಕಭಕ್ತಿರ್ವಿಶಿಷ್ಯತೇ ।**
**—(7. 16-17.)**

ಎಲೈ ಭರತಶ್ರೇಷ್ಠನೇ ! ನಾಲ್ಕು ವಿಧರಾದ ಪುಣ್ಯವಂತರು ನನ್ನನ್ನು ಸೇವಿಸುತ್ತಾರೆ:— ರೋಗಾದಿಗಳಿಂದ ಪೀಡಿತರಾದವನು, ತತ್ವಜ್ಞಾನಾಪೇಕ್ಷೆಯುಳ್ಳವನು, ಧನಾಭಿಲಾಷೆಯುಳ್ಳವನು, ಮತ್ತು ತತ್ವಜ್ಞಾನ ಸಂಪನ್ನನಾದ ಜ್ಞಾನಿಯು. ಇವರುಗಳ ಮಧ್ಯದಲ್ಲಿ ಸದಾ ಭಗವಧ್ಧ್ಯಾನದಲ್ಲಿ ಆಸಕ್ತನಾದ, ನನ್ನನ್ನೇ ಪ್ರಧಾನನೆಂದು ತಿಳಿದು ಭಕ್ತಿಯನ್ನು ಹೊಂದಿರುವ ಜ್ಞಾನಿಯು ಶ್ರೇಷ್ಠನು. ನವಮಾಧ್ಯಾಯದಲ್ಲಿ ಭಕ್ತ ತಾರತಮ್ಯವನ್ನು ಶ್ರೀ ಕೃಷ್ಣನು ಸ್ಫುಟವಾಗಿ ವಿವರಿಸುತ್ತಾನೆ.

(18) **ಮಾಂಹಿಪಾರ್ಥವ್ಯಪಾಶ್ರಿತ್ಯಯೇಽಪಿಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿಯಾಂತಿಪರಾಂಗತಿಂ ।**
**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾಭಕ್ತಾರಾಜರ್ಷಯಸ್ತಥಾ ॥**
—(9. 32-33.)

ಎಲೈ ಪಾರ್ಥನೇ ! ನನ್ನನ್ನು ಆಶ್ರಯಿಸಿ ಸ್ತ್ರೀ, ವೈಶ್ಯ, ಶೂದ್ರಾದಿ ಅಧಮಯೋನಿಗಳಲ್ಲಿ ಹುಟ್ಟಿದವರೂ ಕೂಡ ಉತ್ತಮ ಗತಿಯನ್ನು ಹೊಂದುತ್ತಾರೆ. ಇನ್ನು ಉತ್ತಮರಾದ ಬ್ರಾಹ್ಮಣರೂ ರಾಜರ್ಷಿಗಳೂ ಭಕ್ತರಾಗಿ ಮೋಕ್ಷವನ್ನು ಹೊಂದುವರೆಂದು ಹೇಳುವುದೇನು ? *

ಪ್ರಶ್ನೆ— ಸ್ವಾಮೀ ! ಭಕ್ತರಲ್ಲಿ ಪರಮಾತ್ಮನು ಪ್ರೀತಿ ಮಾಡುವನೆಂದೂ, ಅದರಲ್ಲೂ ತಾರತಮ್ಯವು ಇರುವುದೆಂದೂ ನಿರೂಪಿತವಾಯಿತು. ಪ್ರೀತಿಯು ಸದ್ಗುಣವು. ಪರಮಾತ್ಮನಿಗೆ ಅದು ಇರಲಿ. ಕ್ರೂರವಾದ ದ್ವೇಷವು ಪರಮಾತ್ಮನಿಗೆ ಇರುವುದು ಹೇಗೆ ? ಶ್ರೀ ಕೃಷ್ಣನು ತನಗೆ ದ್ವೇಷವುಂಟೆಂದು ಎಲ್ಲಿ ಹೇಳಿರುತ್ತಾನೆ ?

ಶ್ರೀ ಶ್ರೀಗಳವರು— ದೋಷಹೀನರಲ್ಲಿ ದ್ವೇಷವು ದುರ್ಗುಣವೆನ್ನಿಸುವುದು. ದೋಷಿಗಳ ದ್ವೇಷವು ನಿರ್ದೋಷನಾದ ಪರಮಾತ್ಮನಿಗೆ ಉಚಿತವೇ ಸರಿ. ಮಲಾದಿಗಳನ್ನು ಕಂಡರೆ ಮೂಗು ಮುಚ್ಚಿಕೊಳ್ಳುವುದು ತಪ್ಪೇ ! ದುಷ್ಟ ಶಬ್ದವನ್ನು ಕೇಳಿದಾಗ ಮನುಷ್ಯರು ಅದರಲ್ಲಿ ಅಪ್ರೀತಿಯಿಂದ ಕಿವಿ ಮುಚ್ಚಿಕೊಳ್ಳುವರು. ಇದು ಉತ್ತಮ ಗುಣವೆಂದು ಲೋಕದಲ್ಲಿ ಪ್ರಸಿದ್ಧವಾಗಿರುವುದು. ಹೀಗೆಯೇ ಗುಣಪೂರ್ಣನಾದ ಪರಮಾತ್ಮನು ದುರ್ಜನರಲ್ಲಿ ದ್ವೇಷವನ್ನು ಎಂದರೆ ಅಪ್ರೀತಿಯನ್ನು ಮಾಡುವನು; ಮತ್ತು ಅವರಿಗೆ ದುರ್ಗತಿಯನ್ನೂ ಕೊಡುವನು. ಈ ವಿಷಯವನ್ನು ಹದಿನಾರನೆಯ ಅಧ್ಯಾಯದಲ್ಲಿ ತಾನೇ ನಿರೂಪಿಸಿರುತ್ತಾನೆ.

(19) **ತಾನಹಂದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮ ಶುಭಾನಾಸುರೀಷ್ವೇವಯೋನಿಷು ।**
**ಮಾಮಪ್ರಾಪ್ಯೈವ ಕೌಂತೇಯ ತತೋಯಾಂತ್ಯ**
**ಧಮಾಂಗತಿಂ ॥** —(16. 18-20.)

ಈ ಶ್ಲೋಕಾರ್ಥಗಳು ಪೂರ್ವದಲ್ಲೇ ವ್ಯಾಖ್ಯಾತವಾಗಿರುವುವು.

---

* ಈ ಶ್ಲೋಕಕ್ಕೆ ಇನ್ನೂ ಸೂಕ್ಷ್ಮವಾದ ಅರ್ಥವಿರುವುದು.

ಈ ಶ್ಲೋಕಗಳಲ್ಲಿ ನನ್ನನ್ನು ದ್ವೇಷ ಮಾಡುವವರಿಗೆ ದುರ್ಗತಿಯನ್ನು ನಾನೇ ಕೊಡುವೆನೆಂದು ಶ್ರೀ ಕೃಷ್ಣನು ಸ್ಪಷ್ಟವಾಗಿ ಹೇಳಿರುತ್ತಾನೆ. ಆದುದರಿಂದ "ಸಮೋಽಹಂ ಸರ್ವಭೂತೇಷು ನಮೇದ್ವೇಷ್ಯೋಽಸ್ತಿನಪ್ರಿಯಃ" ಎಂಬ ಶ್ರೀ ಕೃಷ್ಣನ ವಾಕ್ಯಗಳಿಗೆ ಮೂರು ರೀತಿಯಲ್ಲಿ ಅರ್ಥವನ್ನು ಹೇಳಬಹುದು. 1. ನಾನು ಲೌಕಿಕ ಜನರಂತೆ ಅಭಿಮಾನದಿಂದ ದ್ವೇಷ ಪ್ರೀತಿಗಳನ್ನು ಮಾಡುವವನಲ್ಲ ಎಂದು ಒಂದು ಅರ್ಥವು. 2. ಅಥವಾ ದ್ವೇಷಿಗಳ ದ್ವೇಷದಿಂದ ನನಗೆ ಹಾನಿಯೂ, ಭಕ್ತರ ಪತ್ರಾದಿ ದಾನದಿಂದ ನನಗೆ ಆನಂದವೃದ್ಧಿಯೂ ಇಲ್ಲದೆ ನಾನು ಸರ್ವದಾ ಆನಂದ ಪೂರ್ಣನಾಗಿರುವುದರಿಂದ, ನನಗೆ ಈ ವಿವಕ್ಷೆಯಿಂದ ದ್ವೇಷಕ್ಕೆ ವಿಷಯರೂ, ಪ್ರೀತಿಗೆ ವಿಷಯರೂ ಇಲ್ಲವೆಂದರ್ಥವು. 3. ಅಥವಾ ಅಧಿಕಾರಿಗಳ ಸ್ವರೂಪ ಯೋಗ್ಯತಾ ಕರ್ಮಾದಿಗಳನ್ನು ಅತಿಕ್ರಮಿಸಿ ಅನುಗ್ರಹ ನಿಗ್ರಹಗಳನ್ನು ನಾನು ಮಾಡುವವನಲ್ಲ. ನಾನು ವೈಷಮ್ಯರಹಿತನು ಎಂದರ್ಥವು.* ಈ ಅರ್ಥವನ್ನು ಮಾಡುವುದರಲ್ಲಿ ಶ್ರೀ ಕೃಷ್ಣನ ವಾಕ್ಯವೇ ಆಧಾರವಾಗಿರುವುದು.

(20) **ಯೇಯಥಾಮಾಂಪ್ರಪದ್ಯಂತೇ ತಾಂಸ್ತಥೈವಭಜಾಮ್ಯಹಂ ।**
—(4. 11.)

ಯಾರು ಯಾರು ನನ್ನನ್ನು ಯಾವ ಪ್ರಕಾರವಾಗಿ ಸೇವೆ ಮಾಡುತ್ತಾರೆಯೋ, ನಾನೂ ಅವರನ್ನು ಅವರುಗಳ ಭಜನಾನುಸಾರ ಸೇವಿಸುತ್ತೇನೆ. ಎಂದರೆ ಪ್ರೀತಿ ಮಾಡುವವರಲ್ಲಿ ಪ್ರೀತಿ ಮಾಡುತ್ತೇನೆ. ದ್ವೇಷಿಗಳನ್ನು ದ್ವೇಷಿಸುತ್ತೇನೆ. ಅವರ ಸೇವಾನುಸಾರವಾಗಿ ಫಲಪ್ರದನಾಗುತ್ತೇನೆ, ಎಂದು ಅರ್ಥವು.

ಇಷ್ಟು ಉಪನ್ಯಾಸದಿಂದ ಐದಾರು ವಿಷಯಗಳು ಸಿದ್ಧವಾದುವು. ಅನಾದಿ ನಿತ್ಯರಾದ ತ್ರಿವಿಧ ಚೇತನರು ಭಿನ್ನ ಭಿನ್ನ ಫಲ ಯೋಗ್ಯತೆಯನ್ನು ಹೊಂದಿ, ಭಿನ್ನ ಭಿನ್ನವಾದ ಉಪಾಸನೆಯಲ್ಲಿ ತತ್ಪರರಾಗಿ ಭಗವದಧೀನವಾದ ಈ ಪ್ರಪಂಚದಲ್ಲಿ ಇರುತ್ತಾರೆ. ಕೆಲವರು ನಿಷ್ಕಾಮತೆಯಿಂದ, ಕೃಷ್ಣೋಪಾಸ್ತಿಯಲ್ಲಿ ರತರಾದ, ಸಾತ್ವಿಕ ಆಹಾರ, ಶ್ರದ್ಧಾ, ಜ್ಞಾನಾದಿಗಳಿಂದ ಸಹಿತರಾದ ಮುಕ್ತಿಯೋಗ್ಯರು; ಕೆಲವರು "ಈಶ್ವರೋಽಹಂ" ಇತ್ಯಾದಿ ದುಷ್ಟೋಪಾಸನೆಯಲ್ಲಿ ಆಸಕ್ತರಾಗಿ, ಜನ್ಮ ಜನ್ಮದಲ್ಲಿ ಅಭಿವೃದ್ಧವಾದ ಕೃಷ್ಣದ್ವೇಷದಿಂದ ಸಹಿತರಾದ ತಮೋಯೋಗ್ಯರು. ಮತ್ತು ಕೆಲವರು ಕಾಮ್ಯಕರ್ಮಿಗಳಾದ, ವೇದದ ಆಪಾತಾರ್ಥದಲ್ಲಿ ರತರಾದ ತ್ರೈವಿದ್ಯರು. ಮುಕ್ತಿಯೋಗ್ಯರಿಗೆ ಪರಮಾತ್ಮನಲ್ಲಿ ಪ್ರವೇಶಾದಿ ರೂಪವಾದ ಪರಮ ಮುಕ್ತಿಯೂ, ತಮೋಯೋಗ್ಯರಿಗೆ ಕೃಷ್ಣಪ್ರಾಪ್ತಿ ರಹಿತವಾದ ಅಧಮಗತಿಯು

* "ಸಮೋಽಹಂ" ಇತ್ಯಾದಿ ರೀತಿಯಾದ ಶ್ರೀ ಕೃಷ್ಣನ ಅನ್ಯತ್ರ ಇರುವ ವಾಕ್ಯಗಳಿಗೆ **"ನಿರ್ದೋಷಂಹಿಸಮಂಬ್ರಹ್ಮ"** ಇತ್ಯಾದಿ ಶ್ಲೋಕಗಳಲ್ಲಿ ಮತ್ತೊಂದು ವ್ಯಾಖ್ಯಾನವೂ ಸೂಚಿತವಾಗಿರುವುದು. ಆದರೆ ಈ ಶ್ಲೋಕದಲ್ಲಿ ಅದು ಪ್ರಕೃತವಾಗಿರುವುದಿಲ್ಲ.

ಎಂದರೆ ಅಂಧಂತಮಸ್ಸೆಂದು ಶ್ರುತಿ ಪುರಾಣಗಳಲ್ಲಿ ಸಿದ್ಧವಾದ ನಿತ್ಯ ನರಕವೂ, ತ್ರೈವಿದ್ಯರಿಗೆ ನಿತ್ಯವೂ ಸಂಸಾರಪ್ರಾಪ್ತಿಯೂ ಫಲರೂಪವಾಗಿ ಹೇಳಲ್ಪಟ್ಟಿರುತ್ತದೆ. ಈ ಯಾವತ್ತು ಅಧಿಕಾರಿಗಳು ಸಮಾನರಾಗಿ ಇರದೆ, ಬಹು ತರ ತಮಭಾವದಿಂದ ಸಹಿತರಾಗಿದ್ದು ಸಾಧನಾನುಷ್ಠಾನದಲ್ಲೂ ತಾರತಮ್ಯೋಪೇತರಾಗಿಯೇ ಇರುವ ರೆಂದೂ ತಿಳಿದು ಬರುತ್ತದೆ.

ಮತ್ತು ಜ್ಞಾನಿಯಾದ ಅರ್ಜುನನೂ ಕೂಡ ತನ್ನ ದಿವ್ಯದೃಷ್ಟಿಯಲ್ಲಿ ಬ್ರಹ್ಮ ರುದ್ರಾದಿ ಸಕಲ ಪ್ರಾಣಿಗಳನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ವಿಭಿನ್ನ ಫಲಗಳನ್ನು ಹೊಂದುತ್ತಿರುವಂತೆಯೇ ನೋಡಿರುವನು :—

**(21) ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ ಸರ್ವೇಸಹೈವಾವನಿ ಪಾಲಸಂಘೈಃ ।**
**ವಕ್ತ್ರಾಣಿ ತೇ ತ್ವರಮಾಣಾವಿಶಂತಿ ದಂಷ್ಟ್ರಾಕರಾಲಾನಿ ಭಯಾನಕಾನಿ । —(11. 26.)**

ಇತ್ಯಾದಿ ಶ್ಲೋಕಗಳಿಂದ ಭೂಭಾರಹರಣಾರ್ಥವಾಗಿ ಅವತರಿಸಿರುವ ಶ್ರೀ ಕೃಷ್ಣನ ದ್ವೇಷಕ್ಕೆ ಪಾತ್ರರಾಗಿ, ಈ ಯಾವತ್ತು ದುಷ್ಟ ಕ್ಷತ್ರಿಯರು ಕೃಷ್ಣನಿಂದ "ನಿಹತ" ರಾಗಿರುತ್ತಾರೆಂದು ನಿಶ್ಚಿತವಾಗುವುದು. ಪಾಂಡವರನ್ನು ಮಾತ್ರ ಭಕ್ತವತ್ಸಲನಾದ ಪರಮಾತ್ಮನು ರಕ್ಷಿಸಿರುತ್ತಾನೆ. ಮುಕ್ತಿಯಲ್ಲೂ ತರತಮ ಭಾವವು ನಾಶ ಹೊಂದತಕ್ಕದ್ದಲ್ಲವೆಂಬಲ್ಲಿ ಸಾಯುಜ್ಯಾದಿ ಮುಕ್ತಿ ಸ್ಥಾನವನ್ನು ವರ್ಣಿಸುವ ಶ್ಲೋಕಗಳು ಪ್ರಮಾಣವಾಗಿರುತ್ತವೆ. ಮುಕ್ತಿಯಲ್ಲಿ ಸಾಮ್ಯವನ್ನು ಹೇಳಿದರೆ ಪರಮಾತ್ಮನಲ್ಲಿ ವೈಷಮ್ಯಾದಿ ದೋಷಪ್ರಾಪ್ತಿಯನ್ನೂ ಒಪ್ಪಬೇಕಾಗು ವುದರಿಂದ "**ಸಾಮ್ಯವಾದವು**" ಯುಕ್ತಿಪರಾಹತವಾಗುವುದು. ಮತ್ತು ಪ್ರಪಂಚ ದಲ್ಲಿರುವ ಅನಂತ ದುರವಸ್ಥೆಗಳಿಗೆ ಕಾರಣವನ್ನು ನಿರೂಪಿಸುವುದರಲ್ಲಿ ಅಶಕ್ತ ವಾಗಿರುವುದು. ಆದುದರಿಂದ, ಈ ಯಾವತ್ತು ಜಗತ್ತಿನಲ್ಲಿರುವ ವೈಚಿತ್ರ್ಯ ತಾರ ತಮ್ಯಗಳಿಗೆ ಅನಾದ್ಯನಂತ ಕಾಲದಿಂದಲೂ ತಾನೊಬ್ಬನೇ ನಿಯಾಮಕನಾಗಿ, ಪರಮಚೇತನನಾದುದರಿಂದಲೇ ಚೇತನ ತಾರತಮ್ಯಕ್ಕೆ ಶಿಖರ ಸ್ಥಾನದಲ್ಲಿರುವ, ಸರ್ವೇಶ್ವರನಾದ ಶ್ರೀಮನ್ನಾರಾಯಣನನ್ನು, ಸಕಲ ಮುಕ್ತಿಯೋಗ್ಯರೂ ದುಸ್ಸಂಗ ಮತ್ತು ದುಶ್ಶಾಸ್ತ್ರಾಭ್ಯಾಸ ದೋಷದಿಂದ ತಮ್ಮ ಮನಸ್ಸಿನಲ್ಲಿ ಪ್ರಾಪ್ತವಾಗಿರುವ ಮನೋವಿಕಾರಗಳನ್ನು ಇಂಥ ಉಪದೇಶಗಳಿಂದ ಪರಿಹರಿಸಿಕೊಂಡು, ತಮ್ಮ ಸ್ವಭಾವಾನುಗುಣವಾದ ನಿಷ್ಕಾಮವಾದ ಸಾತ್ವಿಕ ಧರ್ಮಗಳಿಂದ ಸೇವಿಸಿ, ತಮ್ಮ ಯೋಗ್ಯತಾನುಗುಣವಾದ ಸ್ವೈಜ ಸುಖವನ್ನು ಮುಕ್ತಿಯಲ್ಲಿ ಅನುಭವಿಸುವರೆಂಬಲ್ಲಿ ಸಂಶಯವಿಲ್ಲ. **ಪ್ರತಿಜಾನೇ ಪ್ರಿಯೋಽಸಿಮೇ** ಎಂಬ ಶ್ರೀ ಕೃಷ್ಣನ ಪ್ರತಿಜ್ಞಾ ಪೂರ್ವಕವಾದ ವಚನವು ಸತ್ಯವೆಂದು ಪುನಃ ಶಪಥಪೂರ್ವಕವಾಗಿ ನಿರೂಪಿಸಿರು ತ್ತೇವೆ.



# VI

# ಮುಕ್ತಿಸ್ವರೂಪ ನಿರೂಪಣವು.



5 ರಿಂದ 7—8—1930 ರಲ್ಲಿ

**ಸಭಿಕರು— ಧರ್ಮಾಧಿಕಾರಿಗಳು, ವಿದ್ವಾಂಸರು ಮತ್ತು ವಿದ್ಯಾರ್ಥಿಗಳು.**

**ಪ್ರಶ್ನೆ**— ಸ್ವಾಮೀ ! ತಾವು ಈ ದಿವಸ, ಶ್ರೀಮನ್ಮಧ್ವಮತದಲ್ಲಿ ಪ್ರತಿಪಾದಿತವಾದ ಮುಕ್ತಿ ಸ್ವರೂಪವನ್ನು ಶ್ರೀ ಕೃಷ್ಣನ ವಾಕ್ಯಗಳಿಂದಲೇ ಸಾವಕಾಶವಾಗಿ ನಿರೂಪಿಸಬೇಕು ?

ಶ್ರೀ ಶ್ರೀಗಳವರು— **ಮುಕ್ತಿರ್ನೈಜಸುಖಾನುಭೂತಿಃ** ಎಂಬ ಶ್ಲೋಕ ಭಾಗದಲ್ಲಿ, ನಿರ್ಗಳಿತವಾದ ಮುಕ್ತಿ ಲಕ್ಷಣವನ್ನು ವ್ಯಾಸರಾಯರು ನಿರೂಪಿಸಿರುವರು. ಇನ್ನೂ ವಿಶದವಾಗಿ ಹೇಳಿದರೆ, ಅವಿದ್ಯಾಬಂಧ ನಿವೃತ್ತಿ ಪೂರ್ವಕವಾದ ಸ್ವರೂಪಾನಂದಾವಿರ್ಭಾವವು ಮುಕ್ತಿಯೆನ್ನಿಸುವುದು. ಇದು ಚತುರ್ವಿಧ ಪುರುಷಾರ್ಥಗಳಲ್ಲಿ ಪ್ರಧಾನವೆಂದು ಸುಪ್ರಸಿದ್ಧವಾದುದು.

**ಪ್ರಶ್ನೆ**— ಸ್ವಾಮೀ ! ಸ್ವಲ್ಪ ಅವಕಾಶ ಕೊಡಬೇಕು. " ಅವಿದ್ಯಾಸ್ತಮಯೋಮೋಕ್ಷಃ ಸಾ ಸಂಸಾರ ಉದಾಹೃತ " ಎಂಬ ಅದ್ವೈತಿಗಳ ವಾಕ್ಯೋಕ್ತ ರೀತಿಯಲ್ಲಿ. ಅವಿದ್ಯಾ ನಿವೃತ್ತಿಪೂರ್ವಕವಾದ ಸ್ವರೂಪಭೂತವಾದ ಬ್ರಹ್ಮಾನಂದ ಪ್ರಕಟನೆಯೇ ಮುಕ್ತಿಯೆಂದು ಅದ್ವೈತ ಮತದಲ್ಲಿ ಹೇಳಿರುತ್ತದೆ. 1. ಅವಿದ್ಯಾ ಬಂಧನಿವೃತ್ತಿ. 2. ಮತ್ತು ಸ್ವರೂಪಾನಂದಾವಿರ್ಭಾವವು ಇವೆರಡು ದಳಗಳಿಂದ ಸಹಿತವಾದ ವಿಶಿಷ್ಟ ಮುಕ್ತಿಯು ಉಭಯಮತ ಸಂಪ್ರತಿಪನ್ನವಾದುದರಿಂದ "ಮುಕ್ತಿ" ಯಲ್ಲಾದರೂ ದ್ವೈತಾದ್ವೈತ ವಾದಗಳಿಗೆ ಕಲಹವು ಶಾಂತಿಯಾಗುವಂತೆ ತೋರುತ್ತದೆ.

ಶ್ರೀ ಶ್ರೀಗಳವರು— " ಮುಕ್ತಿ " ವಿಷಯದಲ್ಲಿ ದ್ವೈತಿಗಳಿಗೂ ಅದ್ವೈತಿಗಳಿಗೂ ಅತಿ ಭಯಂಕರವಾದ ವಿವಾದವು ನಡೆದಿರುತ್ತದೆ. ಮುಕ್ತಿ ಎಂದರೆ ಬಂಧದಿಂದ ಬಿಡುಗಡೆಯೆಂದು ಯೌಗಿಕವಾದ ಅರ್ಥವು; ಸ್ವರೂಪಾನಂದದ ಆವಿರ್ಭಾವವೆಂದು **ಮುಕ್ತಿರ್ಹಿತ್ವಾನ್ಯಥಾರೂಪಂ ಸ್ವರೂಪೇಣವ್ಯವಸ್ಥಿತಿಃ** ಇತ್ಯಾದಿ

ಭಾಗವತ ಪ್ರಯೋಗಾನುಸಾರ ರೂಢಿಯಿಂದ ಪ್ರಾಪ್ತವಾದ ಅರ್ಥವು. ಈ ಉಭಯಾರ್ಥಗಳೂ ದ್ವೈತಿಗಳಿಂದ ಪ್ರತಿಪಾದಿತವಾದ ಮುಕ್ತಿಯಲ್ಲಿ ಸಮಗ್ರವಾಗಿ ಇರುವುವು. ಅನಾದಿಯಾದ, ಸತ್ಯಭೂತವಾದ ಬಹು ದುಃಖಪ್ರದವಾದ, ಅವಿದ್ಯಾದಿ ಬಂಧದಿಂದ ಆವೃತನಾದ ಈ ಜೀವನು ಬ್ರಹ್ಮಜ್ಞಾನವನ್ನು ಸಂಪಾದಿಸಿ ಪರಮಾತ್ಮನ ಅನುಗ್ರಹವನ್ನು ಹೊಂದಿದ ನಂತರ, ಪ್ರಸನ್ನನಾದ ಪರಮಾತ್ಮನು "ಏನಂ ಮೋಚಯಾಮಿ" ಎಂಬ ತನ್ನ ಸಂಕಲ್ಪಾನುಸಾರವಾಗಿ ಈ ಜೀವನನ್ನು ಸಂಕೋಲೆಯಂತೆ ಬಂಧಿಸಿರುವ, ಅವಿದ್ಯಾದಿ ಆವರಣಗಳನ್ನು ತೆಗೆದು ಬಿಡುವನು. ಅನಂತರ ಜೀವನು ಪರಮಾತ್ಮನ ಪರಿಪೂರ್ಣವಾದ ಅನುಗ್ರಹಕ್ಕೆ ಪಾತ್ರನಾಗಿ ಅಭಿವ್ಯಕ್ತವಾದ ತನ್ನ ಸ್ವರೂಪಭೂತವಾದ ಆನಂದವನ್ನೇ ಅನುಭವಿಸುತ್ತಾ, ನಿತ್ಯವಾದ ವೈಕುಂಠಾದಿ ಸ್ಥಾನಗಳಲ್ಲಿ ಪರಮಾತ್ಮನ ಅಧೀನತೆಯಲ್ಲಿಯೇ ರಮಿಸುತ್ತಿರುವನು. ಇದು ದ್ವೈತ ಮತದಲ್ಲಿ ಪ್ರಮಾಣಗಳಿಂದ ನಿಶ್ಚಿತವಾದ ಮುಕ್ತಿಸ್ವರೂಪವು. ಇದೇ ಪ್ರಧಾನಪುರುಷಾರ್ಥವು.

ಅದ್ವೈತ ಮತದಲ್ಲಿ 1. ಮುಕ್ತಿವಿಷಯಕವಾದ ಪ್ರಶ್ನೋತ್ತರಗಳಿಗೇ ಅವಕಾಶವಿರುವುದಿಲ್ಲ. ನಿತ್ಯಮುಕ್ತನಾದ ಪರಬ್ರಹ್ಮನು ಒಂದೇ ನಿಜತತ್ತ್ವವೆಂದು ಅದ್ವೈತ ಮತದ ಸಿದ್ಧಾಂತವು. ಸಚ್ಚಿದಾನಂದ ಸ್ವರೂಪನಾದ ಬ್ರಹ್ಮನಿಂದ ಅತಿರಿಕ್ತ ಚೈತನ್ಯವಾಗಲೀ, ಜಡವಾಗಲೀ, ಈಗ ಇರುವುದಿಲ್ಲ, ಹಿಂದೆಯೂ ಇರಲಿಲ್ಲ, ಮುಂದೂ ಇರುವುದಿಲ್ಲ. ಹೀಗಿರುವಾಗ ಯಾರಿಗೆ ಮುಕ್ತಿಯಾಗಬೇಕು ? ಜಡಕ್ಕೆ ಮುಕ್ತಿಯಾಗುವುದೆಂದು ಯಾವ ವಾದಿಯು ಧೈರ್ಯದಿಂದ ಹೇಳುವನು ? ಚೇತನನಿಗೆ ಮುಕ್ತಿಯು ಎಂದು ಸರ್ವರೂ ಒಪ್ಪಿರುತ್ತಾರೆ. ಅದರಲ್ಲಿ ನಿತ್ಯಮುಕ್ತನಾದ ಒಂದೇ ಚೇತನನು ಇರುವುದಾದರೆ ಮುಕ್ತಿಯನ್ನು ಹೊಂದುವ ಅಧಿಕಾರಿಗಳೇ ಇಲ್ಲದುದರಿಂದ ಅದ್ವೈತ ಮತದಲ್ಲಿ ಮುಕ್ತಿವಾರ್ತೆಯೇ ಲುಪ್ತವಾಗಬೇಕು. ಹೀಗಿರುವಲ್ಲಿ ಉಭಯದಳಾತ್ಮಕವಾದ ಮುಕ್ತಿಯನ್ನು ಅದ್ವೈತಿಗಳು ಒಪ್ಪುವುದಕ್ಕಾಗುವುದೇ ? 2. ಬ್ರಹ್ಮಚೈತನ್ಯನಿಗೆ ಮುಕ್ತಿಯಾಗುವುದೆಂದು ಹೇಳುವುದು ಸರ್ವಥಾ ಅನುಚಿತವು. ಹೇಗೆಂದರೆ ಪರಬ್ರಹ್ಮನು ನಿತ್ಯಮುಕ್ತನು. ಮುಕ್ತನಿಗೆ ಮುಕ್ತಿಯಾಗುವುದು ಎಂಬುದು ಅಸಂಗತವು. ಸಿದ್ಧನಾದ ಮುಕ್ತಿಯನ್ನು ಸಾಧ್ಯವೆಂದು ಹೇಳುವುದು ಸರಿಯಲ್ಲ. 3. ಬ್ರಹ್ಮಚೈತನ್ಯವು ನಿತ್ಯಮುಕ್ತನಾದರೂ, ತನ್ನ ಆನಂದವು ಅವಿದ್ಯಾವೃತವಾಗಿರುವುದರಿಂದ ಆನಂದಾವಿರ್ಭಾವವು ಇನ್ನೂ ಪ್ರಾಪ್ತವಾಗಿಲ್ಲ. ಅವಿದ್ಯಾನಿವೃತ್ತಿ ದ್ವಾರಾ ಅಂಥ ಸ್ವರೂಪಭೂತವಾದ ಆನಂದದ ಆವಿರ್ಭಾವವು ಪ್ರಾಪ್ತವಾಗುವುದು. ಅದೇ ಮುಕ್ತಿಯು ಎಂದು ಅದ್ವೈತಿಗಳು ಹೇಳಲಾಗುವುದಿಲ್ಲ. ಹೇಗೆಂದರೆ ಅದ್ವೈತ ಮತದಲ್ಲಿ ಬ್ರಹ್ಮನೇ ಆನಂದನು. ಆನಂದ = ಬ್ರಹ್ಮನು. ಹೀಗಿರುವಲ್ಲಿ ಆನಂದಾವಿರ್ಭಾವವು ಈಗ ಇರುವುದಿಲ್ಲ, ಮುಂದೆ ಆಗುವುದು ಎಂಬ ವಾಕ್ಯಕ್ಕೆ **ಈಗ ಬ್ರಹ್ಮನು ಆವಿರ್ಭವಿಸಿರುವುದಿಲ್ಲ** ಮುಂದೆ ಬ್ರಹ್ಮನು ಆವಿರ್ಭವಿಸುವನು ಎಂದು ಅರ್ಥವಾಗುವುದು. ಇದು

ಅದ್ವೈತಿಗಳಿಗೆ ಸಮ್ಮತವಾದ ತತ್ತ್ವವಲ್ಲ. 4. ಅಥವಾ ಬ್ರಹ್ಮನಿಗೆ ಆನಂದದ ಅನುಭವವು ಈಗ ಇರುವುದಿಲ್ಲ, ಮುಂದೆ ಬರುವುದು ಎಂದು ನಿಮ್ಮ ಪ್ರಶ್ನಾಭಿಪ್ರಾಯ ವಿರಬಹುದು. ಅದೂ ಅದ್ವೈತತತ್ತ್ವವಲ್ಲ. ಆನಂದಾನುಭವರೂಪನಾದ ಬ್ರಹ್ಮನು ಇರುವನೆಂಬುದು ಅದ್ವೈತ ಮತವಲ್ಲ. ಯಾತಕ್ಕೆಂದರೆ, ಆನಂದಾನುಭವವೆಂದರೆ ಆನಂದದ ಅನುಭವವು (ಆನಂದವಿಷಯಕ ಅನುಭವವು) ಎಂದರ್ಥವು. ಹಾಗೆಂದರೆ, ಆನಂದವೆಂಬ ವಿಷಯವನ್ನು ಭೋಗಿಸುವ ಬ್ರಹ್ಮನು ಎಂಬ ಅರ್ಥವಾಗುವುದು. ಆಗ ದ್ವೈತವು ಪ್ರಾಪ್ತವಾಗುವುದು, ಮತ್ತು ಕರ್ತೃಕರ್ಮ ವಿರೋಧವೂ ಬರುವುದೆಂದು ಅದ್ವೈತಿಗಳು ಆನಂದನೇ ಬ್ರಹ್ಮನು ಎಂದು ತೀರ್ಮಾನ ಮಾಡಿರುತ್ತಾರೆ. 5. ಪರಂತು ಈ ಉಭಯ ಪಕ್ಷದಲ್ಲೂ ಮತ್ತೊಂದು ಸಾಮಾನ್ಯವಾದ ದೋಷವು ಇದ್ದೇ ಇರುವುದು. ಬ್ರಹ್ಮನು ನಿತ್ಯಮುಕ್ತನು ಎಂದು ಹೇಳಿ, ಈಗ ಅವಿದ್ಯಾವೃತ ನಾಗಿರುವನು. ಈಗ ಮುಕ್ತನಲ್ಲ ಎಂದು ಹೇಳುವುದು ಹೇಗೆ? ಆದುದರಿಂದ ಬ್ರಹ್ಮನು ನಿತ್ಯಮುಕ್ತನೆಂದು ಹೇಳಿದರೆ ಅವಿದ್ಯಾವೃತನಾಗುವನು ಎಂದು ಹೇಳ ಕೂಡದು; ಬ್ರಹ್ಮನು ಅವಿದ್ಯಾವೃತನಾಗಿರುವನು ಎಂದು ಹೇಳಿದರೆ ನಿತ್ಯಮುಕ್ತ ನೆಂಬ ಮತವನ್ನು ಪರಿತ್ಯಾಗ ಮಾಡಬೇಕು. ನಿತ್ಯಮುಕ್ತತ್ವವೂ ಅವಿದ್ಯಾವೃತತ್ವವೂ ಒಂದು ವಸ್ತುವಿನಲ್ಲಿ ಬರಲಾರವು. 6. ಕಿಂಚ, ಸ್ವರೂಪಾನಂದದ ಆವಿರ್ಭಾವವು ಮುಕ್ತಿಯು ಎಂಬ ಮಾತು ನಿರ್ವಿಶೇಷ ಬ್ರಹ್ಮವಾದವಾದ ಅದ್ವೈತ ಮತದಲ್ಲಿ ಅಸಮಂಜಸವಾಗುವುದು. ಆವಿರ್ಭಾವ, ಅನಾವಿರ್ಭಾವವೆಂಬ ವಿಶೇಷ (ಧರ್ಮ) ಗಳು ಬ್ರಹ್ಮ ಸ್ವರೂಪಭೂತವಾದ ಆನಂದದಲ್ಲಿರುವುದೆಂದು ಅದ್ವೈತಿಗಳು ಒಪ್ಪಿರುವುದಿಲ್ಲ. ಅಷ್ಟೇ ಅಲ್ಲ! ಅವಿದ್ಯೆಯಿಂದ ಆವ್ರಿಯಮಾಣತ್ವವೆಂಬ (ಆವರಿಸಲ್ಪಡುವುದೆಂಬ) ಧರ್ಮವೂ ಅವನಲ್ಲಿಲ್ಲ. 7. ಪರಂತು ಪರಿಪೂರ್ಣವಾದ ಬ್ರಹ್ಮಾನಂದವು ಅವಿದ್ಯಾವೃತವಾಗುವುದಾದರೆ ಅದಕ್ಕೆ ಪೂರ್ಣತ್ವವೇ ಸಂಭವಿಸಲಾರದು. 8. ಮತ್ತು ಬ್ರಹ್ಮನು ಅವಿದ್ಯಾವೃತನು ಎಂಬ ಉಕ್ತಿಯು ಸೂರ್ಯನು ಅಂಧಕಾರದಿಂದ ಆವೃತನಾದನು ಎಂಬಂತೆ ಅತ್ಯಂತ ಅಪಹಸನೀಯಪ್ರಕ್ರಿಯೆಯು.

ಈ ರೀತಿಯಾಗಿ ಅದ್ವೈತಮತದರೀತ್ಯಾ ಸ್ವರೂಪಾನಂದಾವಿರ್ಭಾವವು, ಅವಿದ್ಯಾದಿ ಬಂಧನಿವೃತ್ತಿಯು ಎಂಬ ಮುಕ್ತಿಯ ಎರಡು ದಳಗಳಲ್ಲಿ ಒಂದು ಭಗ್ನವಾಗಿ ಹೋಯಿತು. ಇನ್ನು ಅವಿದ್ಯಾನಿವೃತ್ತಿಯು ಮುಕ್ತಿಯು ಎಂಬ ಲಕ್ಷಣವೂ ಅದ್ವೈತ ಮತದ ರೀತಿಯಲ್ಲಿ ಸಂಭವಿಸಲಾರದು. ಹೇಗೆಂದರೆ 9. ಅವಿದ್ಯಾನಿವೃತ್ತಿಯು ಜಡಕ್ಕೋ ಅಥವಾ ಚೇತನನಿಗೋ? ಅಂತಃಕರಣಾದಿ ಜಡ ಗಳಿಗೆ ಆವರಕವಾದ ಅವಿದ್ಯೆಯು ನಿವೃತ್ತವಾಗುವುದು; ಅದು ಮುಕ್ತಿಯು ಎಂದು ಹೇಳುವುದಾದರೆ, ಅಂತಃಕರಣವು ಮುಕ್ತವಾಯಿತು, ಘಟವು ಮುಕ್ತ ವಾಯಿತು ಇತ್ಯಾದಿ ವ್ಯವಹಾರಗಳು ಪರಿದೃಶ್ಯಮಾನವಾಗಬೇಕು. ಲೋಕದಲ್ಲಿ ಹಾಗಿಲ್ಲ. ಮುಕ್ತಿ ಎಂಬುದು **ಚೇತನನಿಗೆ** ಆವರಕವಾದ ಅವಿದ್ಯೆಯ ನಿವೃತ್ತಿಯು ಎಂದು ಹೇಳಿದರೂ ಅದ್ವೈತ ಮತದಲ್ಲಿ ಬಹು ದೋಷಗಳು ಬರುವುವು. ಒಂದೇ

ಬ್ರಹ್ಮಚೈತನ್ಯವು ಅವಿದ್ಯಾಬದ್ಧವಾಗಲಾರದೆಂದು ನಾವು ನಿರೂಪಿಸಿರುತ್ತೇವೆ. ಹೀಗೆ ಅವಿದ್ಯೆಗೆ ಬಂಧಕತ್ವವೇ ದುರ್ನಿರೂಪವಾದುದರಿಂದ ಅವಿದ್ಯಾನಿವೃತ್ತಿಯು ಮುಕ್ತಿಯೆನ್ನಿಸಲಾರದು. 10. ಅಥವಾ ವ್ಯಾಪ್ತನಾದ ಬ್ರಹ್ಮಚೈತನ್ಯನಿಗೆ **ಬಂಧಕವಾಗದಂತೆ** ಅವಿದ್ಯೆಯು. ಆಕಾಶದಲ್ಲಿ ಮೇಘದಂತೆ ಇದ್ದು, ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುತ್ತಿರುವುದು; ಇದೇ "ಅವಿದ್ಯಾನಿವೃತ್ತಿಯು" ಎಂದೆನಿಸುವುದಾದರೆ, ಅಂಥ ಅವಿದ್ಯಾನಿವೃತ್ತಿಯನ್ನು ಪುರುಷಾರ್ಥವೆಂದು ಯಾವ ಚೇತನನೂ ತಿಳಿಯಲಾರನು. ನಮಗೆ ಸ್ವಲ್ಪವೂ ತೊಂದರೆ ಕೊಡದಂತೆ ಇರುವ, ಮನೆಯ ಹಂಚಿನ ಮೇಲಿನ ಒಂದು ಹುಲ್ಲುಕಡ್ಡಿಯು ಮತ್ತೊಂದು ಹಂಚಿನ ಮೇಲಕ್ಕೆ ಹಾರಿ ಹೋಗಿ ಕುಳಿತರೆ ನಮಗೇನಾಯಿತು ? ಇದೇ ರೀತಿಯಲ್ಲಿ, ವ್ಯಾಪ್ತ ಬ್ರಹ್ಮ ಚೈತನ್ಯನ ಆಶ್ರಯದಲ್ಲಿರುವ ಅವಿದ್ಯೆಯು ಸ್ಥಳದಿಂದ ಸ್ಥಳಕ್ಕೆ ಓಡಾಡುತ್ತಿದ್ದರೆ, ಅಥವಾ ಸ್ವರೂಪೇಣ ನಾಶವನ್ನು ಹೊಂದಿದರೂ ಸಹ, ಯಾವ ಚೇತನನಿಗೂ ಬಂಧಪ್ರಸಕ್ತಿಯೇ ಇಲ್ಲದಿರುವುದರಿಂದ ಅಂಥ ಅವಿದ್ಯಾನಿವೃತ್ತಿಯು ಮುಕ್ತಿ ಎಂದೆನಿಸಲಾರದು. ತನ್ನಿಂದ ಅಪ್ರಿಯಮಾಣನಾದ ಚೇತನನಲ್ಲಿ ಯಾವ ವಿಶೇಷವನ್ನೂ ಸಮರ್ಪಣೆ ಮಾಡದೇ ಇರುವ ಅವಿದ್ಯೆಯ ಓಡಾಟವು, ( ಚೇತನನ ಬಂಧನಿವೃತ್ತಿರೂಪವಾಗಿಲ್ಲದುದರಿಂದಲೇ ) ಮುಕ್ತಿ ಎಂದೆನಿಸಲಾರದು. 11. ಮತ್ತು ಅದ್ವೈತ ಮತದಲ್ಲಿ ಬ್ರಹ್ಮನಿಗೆ ಅವಿದ್ಯಾಬದ್ಧತೆಯು ಹೇಗೆ ಕೂಡುವುದಿಲ್ಲವೋ, ಹಾಗೆಯೇ ಅವಿದ್ಯೆಗೂ ಬ್ರಹ್ಮ ಬಂಧಕತ್ವವು ಕೂಡುವುದಿಲ್ಲ. ನಿತ್ಯಮುಕ್ತನಾದ ಜ್ಞಾನಾನಂದ ಸ್ವರೂಪನಾದ ಬ್ರಹ್ಮನನ್ನು **ಸ್ವಯಂ ಮಿಥ್ಯಾಭೂತವಾದ** ಅವಿದ್ಯೆಯು ಹೇಗೆ ತಾನೇ ಬಂಧಿಸುವುದಕ್ಕೆ ಸಮರ್ಥವಾದೀತು ?* ಹೀಗೆ ಸರ್ವ ಪ್ರಕಾರದಿಂದಲೂ

---

* ಅನಾದಿಯಾದ ಅವಿದ್ಯೆ (ಮಾಯೆ) ಯಿಂದ ಬ್ರಹ್ಮ ಚೈತನ್ಯರೂಪವಾದ ಆನಂದವು ಆವೃತವಾಗಿರುವುದೆಂಬ ಈ ವಾದವು ಶ್ರೀಭಾಷ್ಯಕಾರರಾದ ರಾಮಾನುಜಾಚಾರ್ಯರಿಂದಲೂ ನಿಪುಣತರವಾಗಿ ಖಂಡಿಸಲ್ಪಟ್ಟಿದೆ. ಅವರು ಏಳು ಅನುಪಪತ್ತಿಗಳನ್ನು ಹೇಳಿರುವರು. 1. **ಆಶ್ರಯಾನುಪಪತ್ತಿ;** ಅವಿದ್ಯೆಯು ಎಲ್ಲಿದ್ದು ಬಂಧವನ್ನು (ಸಂಸಾರಭ್ರಾಂತಿಯನ್ನು) ಉಂಟು ಮಾಡುವುದು. ಜೀವನಲ್ಲಿ ಎಂದು ಹೇಳಲಾಗುವುದಿಲ್ಲ. ಯಾತಕ್ಕೆಂದರೆ ಜೀವನೂ ಸಹ ಅವಿದ್ಯಾಕಲ್ಪಿತನು. ಆದುದರಿಂದ ಬ್ರಹ್ಮನ ಆಶ್ರಯದಲ್ಲಿಯೇ ಇದ್ದು ನಾನು ಸಂಸಾರಿಯಾದ ಜೀವನು ಎಂಬ ಭ್ರಾಂತಿಯನ್ನು ಬ್ರಹ್ಮನಿಗೇ ಉಂಟು ಮಾಡುವುದು ಎಂದು ಹೇಳಬೇಕು. ಇದು ಅಸಂಭಾವಿತವು. ಸೂರ್ಯನಲ್ಲಿ ಅಂಧಕಾರವು ಹೇಗೆ ಇರುವುದು ಅಸಂಭಾವಿತವೋ, ಹಾಗೆಯೇ ಸ್ವಪ್ರಕಾಶಜ್ಞಾನಸ್ವರೂಪನಾದ ಪರಬ್ರಹ್ಮನು ಅವಿದ್ಯೆಗೆ ಆಶ್ರಯನಾಗಲಾರನು. ಆದುದರಿಂದ "ಅವಿದ್ಯಾ" ವಾದವು ಅಪ್ರಾಮಾಣಿಕವು.

2. **ತಿರೋಧಾನಾನುಪಪತ್ತಿ.** ಅವಿದ್ಯೆಯು ಬ್ರಹ್ಮನನ್ನು ಯಾವ ರೀತಿಯಿಂದಲೂ ಆವರಿಸಲಾರದು. ಯಾತಕ್ಕೆಂದರೆ, ಅವಿದ್ಯೆಯು ಬ್ರಹ್ಮನನ್ನಾಗಲೀ, ಬ್ರಹ್ಮನ ಆನಂದವನ್ನಾಗಲೀ ಸ್ವಪ್ರಕಾಶತ್ವವನ್ನಾಗಲೀ ತಿರೋಧಾನ ಹೊಂದಿಸಲಾರದು. (ಮುಚ್ಚಲಾರದು.) **ನಿತ್ಯನಾದ** ಮತ್ತು

ನಿತ್ಯವಾದ ಸ್ವಪ್ರಕಾಶತ್ವಾದಿ ಧರ್ಮಗಳುಳ್ಳ ಬ್ರಹ್ಮನು ಆವರಿಸಲ್ಪಡುವದಕ್ಕೆ (ಅಥವಾ ಬಂಧಿಸಲ್ಪಡು ವುದಕ್ಕೆ ) ಯೋಗ್ಯನಾಗದ ವಸ್ತುವಾದುದರಿಂದ ಅವಿದ್ಯೆಯು ಬ್ರಹ್ಮನನ್ನು ಆವರಿಸುವುದು ಎಂದು ಹೇಳುವ ವಾದವು ಅಪ್ರಾಮಾಣಿಕವು.

3 **ಸ್ವರೂಪಾನುಪಪತ್ತಿ.** ಅವಿದ್ಯೆಯು "ಸತ್" ಪದಾರ್ಥವಾದರೆ ಬ್ರಹ್ಮನೊಬ್ಬನೇ "ಸತ್" ಪದಾರ್ಥವು ಎಂದು ಹೇಳುವ ಅದ್ವೈತ ಮತಕ್ಕೆ ಭಂಗವು ಬರುವುದು. ಅವಿದ್ಯೆಯು "ಅಸತ್" ಪದಾರ್ಥವಾದರೆ ಅದಕ್ಕೆ ಬಂಧಕತ್ವವು ಕೂಡುವುದಿಲ್ಲ. ಕಿಂಚ ಅವಿದ್ಯೆಯು ಬ್ರಹ್ಮ ಭಿನ್ನ ವಾದರೆ, ಬ್ರಹ್ಮಭಿನ್ನವಾದ ಸರ್ವವೂ "ಮಿಥ್ಯಾ" ಆದುದರಿಂದ, ತಾನೂ ಮಿಥ್ಯಾ ಆಗಿ, ಪರಬ್ರಹ್ಮನನ್ನು ಬಂಧಿಸಿ ಅವನಿಗೆ ಭ್ರಾಂತಿಯನ್ನು ಹುಟ್ಟಿಸಲಾರದು. ಅವಿದ್ಯೆಯು ಬ್ರಹ್ಮಾತ್ಮಕವೇ ಆಗಿ ಹೋದರೆ, ಬ್ರಹ್ಮನೇ ಅವಿದ್ಯಾ ಸ್ವರೂಪನು = ಬ್ರಹ್ಮನೇ ಅಜ್ಞಾನನು = ಬ್ರಹ್ಮನೇ ಸ್ವರೂಪತಃ ಭ್ರಾಂತನು ಎಂದು ಪ್ರಾಪ್ತವಾಗುವುದು. ಆಗ ಬ್ರಹ್ಮನು ನಿತ್ಯನಾದಂತೆ, ಬ್ರಹ್ಮಸ್ವರೂಪವಾದ ಅವಿದ್ಯೆಯೂ ನಿತ್ಯವಾಗಿ ಅದರ ನಿವೃತ್ತಿಯು ದುರ್ಘಟವಾಗಿ, ಮೋಕ್ಷವಾರ್ತೆಯೇ ಲುಪ್ತವಾಗ ಬೇಕಾದೀತು ! ಅವಿದ್ಯಾಸ್ವರೂಪವು ಅದ್ವೈತ ಮತದಲ್ಲಿ ಹೇಳುವುದಕ್ಕೆ ಬರುವುದಿಲ್ಲವಾದುದರಿಂದ "ಅವಿದ್ಯಾ" ವಾದವು ಅಪ್ರಾಮಾಣಿಕವು.

4. **ಅನಿರ್ವಚನೀಯಾನುಪಪತ್ತಿ.** ಅವಿದ್ಯೆಯು 'ಸತ್' ಪದಾರ್ಥವೂ 'ಅಸತ್' ಪದಾರ್ಥವೂ ಅಲ್ಲವೆಂದು ಅದ್ವೈತಿಗಳು ಹೇಳುತ್ತಾರೆ. ಇದು ತಪ್ಪು. ಸದಸದ್ವಿಲಕ್ಷಣವಾದ ವಸ್ತುವು ಅಪ್ರಸಿದ್ಧವಾದುದರಿಂದ, ಸದಸದ್ವಿಲಕ್ಷಣವಾದ ಅವಿದ್ಯೆಯೂ ವಂಧ್ಯೆಯ ಪುತ್ರನಂತೆ ಅಪ್ರಾಮಾಣಿಕವು

5. **ಪ್ರಮಾಣಾನುಪಪತ್ತಿ.** ಇಂಥ ವಿಧವಾದ ಬ್ರಹ್ಮನನ್ನು ಬಂಧಿಸುವ ಅವಿದ್ಯೆಯು ಇರುವುದು ಎಂಬಲ್ಲಿ ಯಾವ ಪ್ರಮಾಣವೂ ಇರುವುದಿಲ್ಲವಾದುದರಿಂದ ಅವಿದ್ಯೆಯು ಅಪ್ರಾಮಾಣಿಕವು.

6. **ನಿವರ್ತಕಾನುಪಪತ್ತಿ.** ನಿಷ್ಪ್ರಕಾರಕವಾದ ಬ್ರಹ್ಮಜ್ಞಾನದಿಂದ ಅವಿದ್ಯೆಯು ನಾಶ ವಾಗುವುದೆಂದು ಅದ್ವೈತಿಗಳು ಹೇಳುತ್ತಾರೆ. ನಿರ್ಗುಣ ಬ್ರಹ್ಮನೆಂಬ ಪದಾರ್ಥವೇ ಅಪ್ರಾಮಾಣಿಕವು. ನಿರ್ಗುಣಬ್ರಹ್ಮವಿಷಯಕವಾದ ನಿಷ್ಪ್ರಕಾರಕವಾದ ಬ್ರಹ್ಮಜ್ಞಾನವೂ ಅತ್ಯಂತ ಅಪ್ರಸಿದ್ಧವಾದುದ ರಿಂದ, ಅದ್ವೈತಿಗಳ ಅವಿದ್ಯಾವಾದವು ಅಪ್ರಾಮಾಣಿಕವು.

7. **ನಿವೃತ್ತ್ಯನುಪಪತ್ತಿ.** ಅವಿದ್ಯಾನಾಶ ಮಾತ್ರದಿಂದ ಸಂಸಾರ ನಿವೃತ್ತಿಯಾಗಿ ಮುಕ್ತಿ ಯಾಗುವುದೆಂಬುದೂ ಸುಳ್ಳು. ಅದು ಕೇವಲ ನಿಷ್ಪ್ರಕಾರಕ ಜ್ಞಾನದಿಂದ ಓಡಿ ಹೋಗಲಾರದು. ಪರ ಮಾತ್ಮನ ಅನುಗ್ರಹದಿಂದಲೇ ಅವಿದ್ಯೆಯು ಬಿಟ್ಟು ಹೋಗಬೇಕು. ಹೀಗೆ ಸಂಸಾರಬಂಧವು ಅವಿದ್ಯಾ ನಿವೃತ್ತಿ ಮಾತ್ರದಿಂದ ನಾಶ ಹೊಂದುವುದಿಲ್ಲವಾದುದರಿಂದ, ಅವಿದ್ಯೆಯೇ ಸಂಸಾರವು, ಅದರ ನಿವೃತ್ತಿಯೇ ಮುಕ್ತಿಯು ಎಂಬ **"ಅವಿದ್ಯಾ"** ವಾದವು ಅತ್ಯಂತ ಅಪ್ರಾಮಾಣಿಕವು.

ಈ ವಿಷಯಗಳ ನಿರೂಪಣೆಯಲ್ಲಿ ರಾಮಾನುಜಾಚಾರ್ಯರು ಮಾಡಿರುವ ಚರ್ಚೆಯು ಸೂಕ್ಷ್ಮವಾಗಿರುವುದೆಂದೂ, ಅವರು ಪ್ರದರ್ಶಿಸಿರುವ ಅನುಪಪತ್ತಿಗಳು ನ್ಯಾಯವಾಗಿಯೂ ಅವಿದ್ಯಾ ವಾದವನ್ನು ತಿರಸ್ಕರಿಸುವುದರಲ್ಲಿ ಅತ್ಯಂತ ಸಮರ್ಥವಾಗಿರುವುವೆಂದೂ **ಥಿಬೋ; ಉರ್ಕ್ಯ**

ಅನುಪಪನ್ನವಾದುದರಿಂದ, "ಅವಿದ್ಯಾನಿವೃತ್ತಿ" ಎಂಬುದೂ ನಹ ಅದ್ವೈತ ಮತದಲ್ಲಿ ಮುಕ್ತಿ ಎಂದೆನಿನಲಾರದು. ಅದ್ವೈತ ವಾದದಲ್ಲಿ ದಳದ್ವಯಾತ್ಮಕವಾದ ಮುಕ್ತಿಯು ಪಕ್ಷದ್ವಯ ರಹಿತವಾದ ಪಕ್ಷಿಯ ಅವಸ್ಥೆಯನ್ನು ಹೊಂದಿರುವುದು. ಪ್ರಕ್ರಿಯೆಯೇ ಹಾಗಿರುವುದು; ನಾವೇನು ಮಾಡೋಣ.

**ಪ್ರಶ್ನೆ**— ಸ್ವಾಮೀ ! ಬ್ರಹ್ಮಚೈತನ್ಯವು ಒಂದೇ ಎಂದು ಇಟ್ಟುಕೊಂಡು, ತಾವು ಇಷ್ಟೆಲ್ಲಾ ಅನುಪಪತ್ತಿಗಳನ್ನು ತೋರಿಸಿರುತ್ತೀರಿ. "ನಾನು" "ನಾನು" ಎಂಬ ಜ್ಞಾನಗೋಚರರಾದ ಜೀವರುಗಳಾದ ನಮಗೇ ಮುಕ್ತಿಯು. ನಮಗೇ ಅವಿದ್ಯಾಬಂಧವು; ಅದರ ನಿವೃತ್ತಿಯಿಂದ ನಮಗೇ ಬ್ರಹ್ಮೈಕ್ಯ ಪ್ರಾಪ್ತಿರೂಪವಾದ ಮುಕ್ತಿಯು ಎಂದು ಯಾತಕ್ಕೆ ಹೇಳಬಾರದು ?

---

**ಹಾರ್ಟ್; ಓಟೋ** ಮುಂತಾದ ಪಾಶ್ಚಾತ್ಯ ಗ್ರಂಥಕರ್ತರೂ ಸ್ಪಷ್ಟವಾಗಿ ಬರೆದಿರುತ್ತಾರೆ. **ಓಟೋ** ಸಾಹೇಬನ ವರ್ಣನೆಯು ಮನೋಹರವಾಗಿರುತ್ತದೆ :—

"And now begins the struggle of proposition against proposition, assertion against assertion, a struggle in the truest sense, breast to breast, and knee to knee, a struggle of the utmost intensity without pause to take breath, until limb by limb the opponent is overcome and crushed to the earth. Siddhanta of Ramanuja by Otto.

( ಅದ್ವೈತ ತತ್ವವಾದ ಮಾಯಾವಾದಕ್ಕೂ ರಾಮಾನುಜಾಚಾರ್ಯರಿಗೂ ) ಈಗ ಯುದ್ಧವು ಆರಂಭವಾಗುತ್ತದೆ. ವಿಷಯ ವಿಷಯಗಳಿಗೇ ಪರಸ್ಪರ ಯುದ್ಧವು; (ಅದ್ವೈತಿಗಳ) ಒಂದೊಂದು ವಾಕ್ಯಕ್ಕೂ ( ರಾಮಾನುಜಾಚಾರ್ಯರ ) ಪ್ರತಿ ವಾಕ್ಯದಿಂದ ಯುದ್ಧವು. ಇದು ತಮಾಷೆ ಕಲಹ ವಲ್ಲ. ಸತ್ಯವಾದ ನಿಜವಾದ ಯುದ್ಧವು. ಎದೆಗೆ ಎದೆಯನ್ನು ಕೊಟ್ಟು, ಮಂಡಿಗೆ ಮಂಡಿಯನ್ನು ಚಾಚಿ ನಡೆಸಿದ ಅತ್ಯಂತ ಘೋರ ಯುದ್ಧವು, ( ಅತಿ ಸೂಕ್ಷ್ಮವಾಗಿ ಸಮಂಜಸವಾಗಿ ನಡೆದ ವಿಷಯ ಚರ್ಚೆಯು ಎಂದರ್ಥವು. ) ಶ್ವಾಸ ಬಿಡುವುದಕ್ಕೂ ಅವಸರವಿಲ್ಲದಂತೆ ನಡೆಸಿದ, ಈ ನಿರಂತರ ಸಂಗ್ರಾಮದಲ್ಲಿ, ಒಂದು ಅವಯವದ ನಂತರ ಒಂದು ಅವಯವವು ಕ್ರಮವಾಗಿ ಜಯಿಸಲ್ಪಟ್ಟು ಕೊನೆಗೆ ಪೂರ್ವಪಕ್ಷಿಯು ( ಅದ್ವೈತಿಗಳ ಮಾಯಾವಾದವು ) ನೆಲ ಸಮನಾಗಿ ಮಾಡ ಲ್ಪಟ್ಟಿರುವನು.

ರಾಮಾನುಜಾಚಾರ್ಯರು ಶಂಕರಾಚಾರ್ಯರ ಮಾಯಾವಾದದಲ್ಲಿರುವ ಒಂದೊಂದು ವಾಕ್ಯ ವನ್ನೂ ಪ್ರತ್ಯೇಕವಾಗಿ, ಅತಿ ಸೂಕ್ಷ್ಮವಾಗಿ ಮತ್ತು ಪ್ರಾಮಾಣಿಕವಾಗಿಯೇ ಚರ್ಚಿಸಿ, ಒಂದೊಂದು ವಿಷಯದ ಮತ್ತು ಒಂದೊಂದು ವಾಕ್ಯದ ದೋಷವನ್ನು ತೋರಿಸಿ ಅದನ್ನು ಪ್ರಾಮಾಣಿಕವಾಗಿಯೇ ನಿರಾಕರಣೆ ಮಾಡಿರುತ್ತಾರೆ ಎಂದು ಅರ್ಥವು.

ಶ್ರೀ ಶ್ರೀಗಳವರು— ಬಂಡೆಯಕಲ್ಲನ್ನು ಕಟ್ಟಿಕೊಂಡು ಈಜಾಡುವುದು ಅಶಕ್ಯವಾಗುವಂತೆ, ನಿತ್ಯಮುಕ್ತವಾದ ಸ್ವಪ್ರಕಾಶ ಬ್ರಹ್ಮಚೈತನ್ಯವು ಒಂದೇ ಸತ್ಯವಾದುದು ಎಂದು ಹೇಳುವ ಅದ್ವೈತ ತತ್ವವನ್ನು ಅವಲಂಬಿಸಿ, ನೀವು ಯಾವ ರೀತಿಯಿಂದಲಾದರೂ ಮುಕ್ತಿ ಸ್ವರೂಪವನ್ನು ಪ್ರತಿಪಾದನೆ ಮಾಡುವುದು ದುರ್ಘಟವೇ ಆಗುವುದು 1. "ನಾನು" "ನಾನು" ಎಂಬ ವಸ್ತುವಿಗೇ ಬಂಧವು ಮತ್ತು ಮುಕ್ತಿಯು ಎಂದು ಹೇಳುವುದು ದ್ವೈತಿಗಳಿಗೆ ಅತ್ಯಂತ ಸಮ್ಮತವಾದುದು. ಆದರೆ ಅದ್ವೈತ ಮತದ ರೀತಿಯಿಂದ ಇದು ಕೂಡುವುದಿಲ್ಲ. ಹೇಗೆಂದರೆ ಅವರ ಮತದ ಪ್ರಕಾರ "ನಾನು" ಎಂಬ ಪದಾರ್ಥವು **ಅಹಂಕಾರ ವಿಶಿಷ್ಟ ಚೈತನ್ಯವು.** ಜಡವಾದ ಅಹಂಕಾರವು + ಬ್ರಹ್ಮಚೈತನ್ಯವು ಇವೆರಡೂ ಸೇರಿದ ವಸ್ತುವೇ "ನಾನು" ಎಂಬ ಜ್ಞಾನಕ್ಕೆ ವಿಷಯನಾದ ಜೀವನು ಎಂದು ಹೇಳುತ್ತಾರೆ. ಇದರಲ್ಲಿ ಬಂಧವು ಯಾರಿಗೆ ಅಥವಾ ಮುಕ್ತಿಯು ಯಾರಿಗೆ? ಚೈತನ್ಯಾಂಶಕ್ಕೇ ಅವಿದ್ಯಾ (ಅದರ ಪರಿಣಾಮವಾದ, ಅಂತಃಕರಣ, ಅಹಂಕಾರಾದಿ) ನಿವೃತ್ತಿರೂಪವಾದ ಮುಕ್ತಿಯು ಆಗುವುದೆಂದು ಹೇಳುವುದಾದರೆ, ವ್ಯಾಪ್ತ ಬ್ರಹ್ಮಚೈತನ್ಯನಿಗೆ ಬಂಧವಾಗಲೀ ಮುಕ್ತಿಯಾಗಲೀ ಸಂಭವಿಸಲಾರದೆಂಬಲ್ಲಿ ನಾವು ಮೇಲೆ ಹೇಳಿದ ಏಳೆಂಟು ದೋಷಗಳೂ ಒಂದೊದಗುವುವು. ಜಡವಾದ ಅಹಂಕಾರ ಅಥವಾ ಅಂತಃಕರಣಕ್ಕೇ ಮುಕ್ತಿಯು ಎಂದು ಹೇಳುವುದಾದರೆ, ಕಲ್ಲಿಗೂ ಬಂಧ ಮುಕ್ತಿಗಳು ಯಾತಕ್ಕೆ ಆಗಬಾರದು? ಬ್ರಹ್ಮಚೈತನ್ಯದ ಸಂಬಂಧವು ಕಲ್ಲಿನಲ್ಲಿಲ್ಲ; ಅಹಂಕಾರಾದಿರೂಪವಾದ ಅಂತಃಕರಣಕ್ಕೆ ಇರುವುದು ಎಂದು ಹೇಳಲಾಗುವುದಿಲ್ಲ. ಕಲ್ಲಿಗೂ ಬ್ರಹ್ಮಚೈತನ್ಯಕ್ಕೂ ಎಷ್ಟು ಸಂಬಂಧವೋ, ಅಷ್ಟೇ ಸಂಬಂಧವು ಅಸಂಗನಾದ ಸ್ವಪ್ರಕಾಶನಾದ ಬ್ರಹ್ಮನಿಗೂ ಅಂತಃಕರಣಾದಿ ಜಡ ದ್ರವ್ಯಗಳಿಗೂ ಇರುವುದು. 2. ನಿರ್ವಿಶೇಷ ಬ್ರಹ್ಮನು ಯಾವ ರೀತಿಯಿಂದಲೂ "ನಾನು" "ನಾನು" ಎಂಬ ಅನುಭವವಿಷಯನಾದ ಸುಖ ದುಃಖ ಭೋಕ್ತೃವಾದ ಜೀವಭಾವವನ್ನು ಹೊಂದಲಾರನು. ಆದುದರಿಂದ "ನಾನು" ಎಂಬ ಅನುಭವಸಿದ್ಧವಾದ ಜೀವರುಗಳು ನಿತ್ಯಾವಿರ್ಭೂತ ನಿಜಾನಂದ ಸ್ವರೂಪನಾದ ಬ್ರಹ್ಮನಿಂದ ಅತ್ಯಂತ **ಭಿನ್ನರಾದ ಅಲ್ಪರಾದ ನಾವುಗಳೇ** ಎಂದು ಅಂಗೀಕರಿಸಿದರೆ ಸಂಸಾರ ಮತ್ತು ಅವಿದ್ಯಾದಿ ಬಂಧವೂ ಸಂಭವಿಸಬಹುದು ಇದರಿಂದ ಬಿಡುಗಡೆ ರೂಪವಾದ ಮುಕ್ತಿಯೂ ನ್ಯಾಯಪ್ರಾಪ್ತವಾಗುವುದು. "ನಾನು" ಎಂಬ ವಸ್ತುವಿಗೆ ಬ್ರಹ್ಮೈಕ್ಯ ಪ್ರಾಪ್ತಿಯು ಮುಕ್ತಿಯು ಎಂದಷ್ಟೇ ನೀವು ಹೇಳಿದಿರಿ! ಹಾಗೆಂದರೇನು? ನಿಮ್ಮ ಅಭಿಪ್ರಾಯವನ್ನು ವಿವರಿಸಿ.

ಪ್ರಶ್ನಕಾರರು— "ನಾನು" "ನಾನು" ಎಂಬ ಜೀವಭಾವವನ್ನು ತೊರೆದು ಚಿನ್ಮಾತ್ರನಾದ ಬ್ರಹ್ಮನಲ್ಲಿ ಐಕ್ಯವನ್ನು ಹೊಂದುವುದೇ ಮುಕ್ತಿಯು ಎಂದು ನಮ್ಮ ಮಾತಿನ ಅಭಿಪ್ರಾಯವು

ಶ್ರೀ ಶ್ರೀಗಳವರು— ಚಿನ್ಮಾತ್ರನಲ್ಲಿ ಐಕ್ಯವನ್ನು **ಹೊಂದುವುದು** ಮುಕ್ತಿಯೆಂದು ನೀವು ಹೇಳಕೂಡದು. 3. ಚೇತನನು ಚಿನ್ಮಾತ್ರನಾಗಿಯೇ ಈಗಲೂ ಇರುವನು. 4. ಕಥಂಚಿತ್ ನಾನು ಎಂಬ ಜೀವಭಾವದ ನಾಶವು ಮುಕ್ತಿಯು ಎಂದು ನೀವು ಹೇಳಬೇಕು. ಅದ್ವೈತ ತತ್ವವು ಇಲ್ಲಿಗೆ ಬಂದು ಇಳಿಯಿತು. ಎಂದರೆ ನನ್ನ ನಾಶವು ನನಗೆ ಮುಕ್ತಿಯು ಎಂದು ಪ್ರಾಪ್ತವಾಯಿತು. ಇದು ಪ್ರಮಾಣ ವಿರುದ್ಧವಾದ ಪ್ರಕ್ರಿಯೆಯು ಎಂದು ಹೇಳುವದು ಹಾಗಿರಲಿ. ಲೌಕಿಕ ನೀತಿಯೇ ಈ ಮತವನ್ನು ನಿಂದಿಸುವದು.

**ಸರ್ವನಾಶೇಸಮುತ್ಪನ್ನೇ ಅರ್ಧಂತ್ಯಜತಿಪಂಡಿತಃ |**
**ಆತ್ಮನಾಶೇಸಮುತ್ಪನ್ನೇ ಸರ್ವಂತ್ಯಜತಿಪಂಡಿತಃ ||**

ಎಂದರೆ ತನ್ನ ಸರ್ವ ಧನವೂ ಶತ್ರುವಿನಿಂದ ನಾಶವಾಗುವ ಸ್ಥಿತಿಯು ಪ್ರಾಪ್ತವಾದರೆ ವಿವೇಕಿಯು ಅರ್ಧವನ್ನು ಶತ್ರುವಿಗೆ ಕೊಟ್ಟು ಶಾಂತಿ ಮಾಡಿಕೊಳ್ಳುವನು. ತಾನೇ ನಾಶವಾಗುವ ಸ್ಥಿತಿಯು ಪ್ರಾಪ್ತವಾದರೆ, ತನ್ನ ಸರ್ವಸ್ವವನ್ನೂ ಪರಿತ್ಯಾಗ ಮಾಡಿ ಆತ್ಮರಕ್ಷಣೆಯನ್ನು ಮಾಡಿಕೊಳ್ಳುವನು. "ಆತ್ಮಾರ್ಥಂಹಿಸರ್ವಂ" ಎಂದರೆ ಉತ್ತಮ ದೇಹ, ಧನಾದಿ ಸಕಲ ಪದಾರ್ಥಗಳೂ **ನನ್ನ** ಸುಖಾರ್ಥವಾಗಿ ನನ್ನಿಂದ ಅಪೇಕ್ಷಿತವಾಗಿರುವವು. ದೇಶಸೇವೆ, ಗುರುಸೇವೆ, ದೈವಸೇವೆಯನ್ನು ಮಾಡುವವನೂ ಸಹ ಅಂಥ ಸೇವೆಯಿಂದ **ತನಗೆ** ಸುಖವಾಗುವದೆಂದು ಮಾಡುತ್ತಾನೆ. ಪ್ರಾಣ ತ್ಯಾಗ ಮಾಡಿ ತನ್ನ ಮೂಳೆಯನ್ನು ದೇವತೆಗಳಿಗೆ ದಾನ ಮಾಡಿದ ದಧೀಚ ಮುನಿಯೂ ಕೂಡ "**ತನಗೆ**" ಪರಮಾತ್ಮ ಪ್ರಸಾದದಿಂದ ಸುಖವಾಗುವದೆಂದು ತಿಳಿದನು. ಕೆಲವರು ನಿರಪೇಕ್ಷವಾಗಿ ಸತ್ಕರ್ಮಗಳನ್ನು ಮಾಡುವರು. ಅಂಥವರೂ ಕೂಡ **ತಾವು** ಪರಮಾತ್ಮನ ಆಜ್ಞಾರೂಪವಾದ ವಿಧಿಯನ್ನು ನೆರವೇರಿಸಿದ ಪ್ರಯುಕ್ತವಾಗಿ ಒಂದು ಮನಸ್ತೃಪ್ತಿಯು **ತಮಗೆ** ಬರುವದೆಂದು ಉಗ್ರವಾದ ತಪಶ್ಚರ್ಯೆಗಳಲ್ಲಿ ರತರಾಗಿರುತ್ತಾರೆ. ಬ್ರಹ್ಮೈಕ್ಯವೋ ಅಥವಾ ಯಾವ ವಿಧವಾದ ಮುಕ್ತಿಯಾದರೂ ಸರಿ, **ನನಗೆ** ಹಿತವಾಗಿರುವದಾದರೆ **ನನಗೆ** ಬೇಕು. ಹೀಗಿರುವದರಿಂದ "**ನನ್ನ**" ನಾಶರೂಪವಾದ ಮುಕ್ತಿಯನ್ನು ನಾನು ಇಚ್ಛಿಸಲಾರೆನು. 5. ಪುರುಷಾರ್ಥವೆಂಬ ಮುಕ್ತಿಯ ಹೆಸರೇ ಈ ಅರ್ಥವನ್ನು ಸೂಚಿಸುವದು. ಪುರುಷಾರ್ಥವೆಂದರೆ ಚೇತನರಿಗೆ ಇಷ್ಟವಾದುದು, ಜೀವರುಗಳ ಇಚ್ಛೆಗೆ ವಿಷಯವಾದುದು ಎಂದು ಅರ್ಥವು. ಬ್ರಹ್ಮೈಕ್ಯವು ಮುಕ್ತಿಯು ಎಂದು ಹೇಳುವವರು ಮುಂದಿನ ವಾಕ್ಯದಲ್ಲಿಯೇ ಅದು ಪುರುಷಾರ್ಥವಲ್ಲವೆಂದು ಒಪ್ಪಬೇಕಾಗುವದು. ಹೇಗೆಂದರೆ ನಾನು ಇದುವರೆವಿಗೂ ಸಂಸಾರದಲ್ಲಿ ಬಹು ಕಷ್ಟಪಟ್ಟಿರುತ್ತೇನೆ. ನನಗೆ ಬ್ರಹ್ಮೈಕ್ಯವು ಪ್ರಾಪ್ತವಾದರೆ ಈ ಕಷ್ಟವು ನಿವೃತ್ತವಾಗಿ ಸುಖಾನುಭವವು ಬರುವದು ಎಂದು ತಿಳಿದರೆ, ಅಂಥ ಬ್ರಹ್ಮೈಕ್ಯವನ್ನು ನಾವೆಲ್ಲರೂ ಅಪೇಕ್ಷಿಸಬಹುದು. ಸರ್ವ ಪ್ರಕಾರದಿಂದಲೂ ತನ್ನ

ಸ್ವರೂಪ ನಾಶರೂಪವಾದ ಬ್ರಹ್ಮೈಕ್ಯವನ್ನು ಯಾವ ಪ್ರಾಜ್ಞನು ಅಪೇಕ್ಷಿಸುವನು ? ಮತ್ತು ಸರ್ವಥಾ ಅನುಸಂಧಾನರಹಿತವಾದ ಬಂಡೆಯ ಕಲ್ಲಿನಂತೆ ಅಚಲವಾದ ಬ್ರಹ್ಮಭಾವವನ್ನು ಯಾವ ಪ್ರೇಕ್ಷಾವಂತನು ಅಪೇಕ್ಷಿಸುವನು ? † ಆದುದರಿಂದ ಬ್ರಹ್ಮೈಕ್ಯವು ಪುರುಷಾರ್ಥವೆನ್ನಿಸುವದಾದರೆ ಬ್ರಹ್ಮ ಸಂಬಂಧದಿಂದ ಜನಿತವಾದ ಆನಂದವು ಬ್ರಹ್ಮನನ್ನು ಹೊಂದಿದ ಜೀವನಭೋಗಕ್ಕೆ ವಿಷಯವಾಗಬೇಕು. ವಿಷಯ ವಿಷಯಿಭಾವದಿಂದ ರಹಿತವಾದ ಆನಂದಾತ್ಮತೆಯು ಮತ್ತು "ನಾನು" ಎಂಬ ಆತ್ಮನಾಶ ಮಾತ್ರದಲ್ಲಿ ಪರ್ಯವಸಾನವಾಗುವ ಐಕ್ಯಪ್ರಾಪ್ತಿಯು. ಇವೆರಡೂ ಮುಮುಕ್ಷುಗಳಿಂದ ಪ್ರಾರ್ಥಿತವಾಗಲಾರವು. ಆದುದರಿಂದ ಅಂಥ ಮೋಕ್ಷವು ಪುರುಷಾರ್ಥವಲ್ಲವೆಂದು ಸಿದ್ಧವಾಗುವದು.

ಪರಂತು 6. ಬಂಧವಿದ್ದರಲ್ಲವೇ ಮುಕ್ತಿ ವಿಚಾರವು. ಪರಮಾರ್ಥವಾಗಿ ವಿಚಾರ ಮಾಡಿದರೆ ಬಂಧವು ಈಗಲೂ ಇಲ್ಲ ಹಿಂದೆಯೂ ಇಲ್ಲ ಮುಂದೆಯೂ ಇರುವದಿಲ್ಲ ಎಂದು ಸ್ಪಷ್ಟವಾಗಿ ಅದ್ವೈತ ಗ್ರಂಥದಲ್ಲಿ ಹೇಳಿರುತ್ತದೆ. "ನವೈಬಂಧೋ ನಾಪಿಮೋಕ್ಷಃ" ಎಂಬ ಶಂಕರಾಚಾರ್ಯರ ಮಾತುಗಳು ಈ ವಿಷಯದಲ್ಲಿ ನಿಸ್ಸಂಶಯ ವಾಗಿರುವವು.

---

† ಮೋಕ್ಷದಲ್ಲಿ ನಾನು ಸುಖವಾಗಿರುತ್ತೇನೆ ಎಂಬ ಜ್ಞಾನವು ಇಲ್ಲದುದರಿಂದ ಅದು ಪುರುಷಾರ್ಥವಾಗಲಾರದು ಎಂಬುದು ದ್ವೈತಿಗಳ ಖಂಡನೆಯು. ಒಂದು ಅದ್ವೈತ ಗ್ರಂಥದಲ್ಲಿ "ನಾನು ಸುಖವಾಗಿದ್ದೇನೆ" ಎಂಬ ಅನುಸಂಧಾನರಹಿತವಾದರೂ ಐಕ್ಯ ರೂಪವಾದ ಮುಕ್ತಿಯು ಪುರುಷರಿಂದ ಅಪೇಕ್ಷಿತವಾಗಬಹುದು ಎಂದು ದೃಷ್ಟಾಂತಪೂರ್ವಕವಾಗಿ ಉಪಪಾದಿಸಿರುತ್ತಾರೆ :—

" ಮೋಕ್ಷೇಸುಖೀ ಭವಾಮೀತ್ಯನುಸಂಧಾನಾಭಾವೇನ ಜಡಾದ್ವೈಲಕ್ಷಣ್ಯೇನ ಚ ಜಡಭಾವೇ ಇವ ಮನುಷ್ಯಾಣಾಮಿಚ್ಛಾನೋತ್ಪತ್ತುಮರ್ಹತೀತಿನವಾಚ್ಯಂ । ವೈಷಯಿಕೇ ಮಾನುಷಾನಂದೇಪಿ ಪರಮಾನಂದೈಕತಾನಾತ್ಮಕತಾಂ ಪರಾಂಕಾಷ್ಠಾಂಪ್ರಾಪ್ತೇಭೋಕ್ತೃಭೋಗ್ಯಭೋಗಭಾವಾನಾಮುಪಕ್ಷಯೇಣ ಸುಖೀತ್ಯನುಸಂಧಾನಾಭಾವಸ್ಯ ರಸಿಕಾಗ್ರಣೀನಾಮನುಭವಸಿದ್ಧತ್ವಾತ್ । ಅತ ಏವೋಕ್ತಂ ಅಮರುಕಶತಕೇ ರತೇ ಕಯಾಚಿನ್ನಾಯಿಕಯಾಸಖೀಂಪ್ರತಿ :—

........ಏತಾವತ್ಸಖಿವೇದ್ಮಿಕೇವಲಮುಪಂತಸ್ಯಾಂಗಸಂಗೇಪುನಃ ।
ಕೋಽಸೌಕಾಸ್ಮಿರತಂಚಕೀದೃಶಮಿತಿಸ್ವಲ್ಪಾಪಿಮೇನಸ್ಮೃತಿಃ ॥

ಇತ್ಯಾದಿ.

ತಾತ್ಪರ್ಯವು :— ( ಅದ್ವೈತಿಗಳ ) ಮೋಕ್ಷದಲ್ಲಿ ನಾನು ಸುಖವಾಗಿರುತ್ತೇನೆ ಎಂಬ ಅನುಸಂಧಾನವು ಇಲ್ಲದಿದ್ದರೆ, ಜಡದಿಂದ ವೈಲಕ್ಷಣ್ಯವು ಬರದೆ, ಜಡತ್ವವು ( ಕಲ್ಲೇ ಆಗಿ ಹೋಗುವದು ) ಹೇಗೆ ಮನುಷ್ಯರಿಗೆ ಇಷ್ಟವಲ್ಲವೋ ಹಾಗೆಯೇ ಇಂಥ ಮುಕ್ತಿಯೂ ಜೀವರುಗಳಿಂದ ಅಪೇಕ್ಷಿತವಾಗಲಾರದು; ಎಂದು ಹೇಳಕೂಡದು. ವೈಷಯಿಕ ಸುಖದಲ್ಲಿಯೇ ಸುಖವನ್ನು ಅನುಭವಿಸುವವನು, ಸುಖಪ್ರದಳಾದ ಕಾಂತೆಯು; ಭೋಗವು ಈ ರೀತಿಯಾದ ಭೋಕ್ತೃ, ಭೋಗ್ಯ, ಭೋಗ

ಗಳೆಂಬ ಮೂರು ಪದಾರ್ಥಗಳೂ ಉಪಕ್ಷಯವನ್ನು ಹೊಂದಿ ಐಕ್ಯವು ಪ್ರಾಪ್ತವಾಗುವುದು, ಮಿಥುನ ಸೌಖ್ಯದ ಪರಾಕಾಷ್ಠತೆಯನ್ನು ಬಲ್ಲ ರಸಿಕಾಗ್ರರಿಗೆ ಅನುಭವಸಿದ್ಧವಾಗಿರುವುದು. ಭರತ ಶಾಸ್ತ್ರದಲ್ಲಿ ಒಬ್ಬಳು ನಾಯಕಿಯು ತನ್ನ ಪತಿಯ ಸಂಗದಿಂದುಂಟಾದ ಸೌಖ್ಯವನ್ನು ತನ್ನ ಸಖಿಗೆ ವರ್ಣಿಸುತ್ತಾಳೆ. "ಎಲೈ ಸಖಿಯೇ ನಾನು ನನ್ನ ಭರ್ತನ ಅಂಗಸಂಗವಾದುದೊಂದನ್ನು ಬಲ್ಲೆನು. ನಂತರ ಆತನು ಯಾರೋ, ನಾನು ಯಾರೋ, ಆ ಸುಖವು ಯಾವುದೋ, ಎಂಥಾದ್ದೋ ಸ್ವಲ್ಪವೂ ನನಗೆ ತಿಳಿಯದು" ಎಂದು ಹೇಳಿರುತ್ತಾಳೆ. ಹೀಗೆ ಸಾಮಾನ್ಯವಾದ ವೈಷಯಿಕ ಸುಖವೇ ಭೋಕ್ತೃ ಭೋಗ್ಯಭೋಗವೆಂಬ ತ್ರಿಪುಟಿಯಿಂದ ರಹಿತವಾದರೂ ಸರ್ವ ರಸಿಕರಿಂದಲೂ ಅಪೇಕ್ಷಿತವಾಗಿರು ವಾಗ, ಮಹಾ ಬ್ರಹ್ಮಾನಂದಭಾವವು ಹೇಗೆತಾನೆ ವಿದ್ವಜ್ಜನರಿಂದ ಅನಪೇಕ್ಷಿತವಾಗಿರುವುದು ? ಆದುದ ರಿಂದ ಬ್ರಹ್ಮೈಕ್ಯರೂಪವಾದ ಮುಕ್ತಿಯು ಪುರುಷಾರ್ಥವೇ ಸರಿ " ಹೀಗೆ ಹೇಳಿರುತ್ತದೆ.

ಶಂಕರಾಚಾರ್ಯರೂ ಸಹ ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿ ಹೀಗೆ ಬರೆದಿರುತ್ತಾರೆ :—

**ತತ್ರ್ತತ್ರಯಥಾಲೋಕೇಪ್ರಿಯಯೇಷ್ಟಯಾಸ್ತ್ರಿಯಾ........ಸಮ್ಯಕ್ಪರಿಷ್ವಕ್ತಃ ಕಾಮಯಂತ್ಯಾಕಾಮುಕಃ ಸನ್ನ ಬಾಹ್ಯಮಾತ್ಮನಃ........ ಕಿಂಚಿದಪಿವೇದ। ಮತ್ತೋಽನ್ಯದ್ವಸ್ತ್ವಸ್ತೀತಿ। ನಚಾಂತರಮಯಮಹಮಸ್ಮಿಸುಖೀದುಃಖೀ ವೇತಿ। ಅಪರಿಷ್ವಕ್ತಸ್ತುತಯಾಪ್ರವಿಭಕ್ತೋಽಜಾನಾತಿಸರ್ವಮೇವಬಾಹ್ಯ ಮಾಭ್ಯಂತರಂಚ। ಪರಿಷ್ವಂಗೋತ್ತರಕಾಲಂತ್ವೈಕತ್ವಾಪತ್ತೇರ್ನಜಾನಾತಿ। ಏವಮೇವ ಆತ್ಮನಾ... ....ಏಕೀಭೂತಃ ನ ಬಾಹ್ಯಂಕಿಂಚನ ವಸ್ತ್ವಂತರಂ ನಾಪ್ಯಾಂತರಮಾತ್ಮನ್ಯಯಮಹಮಸ್ಮಿ ಸುಖೀದುಃಖೀವೇತಿವೇದ.** P. 607.

ಅರ್ಥವು :— ಹೇಗೆ ಲೋಕದಲ್ಲಿ ಕಾಮಿನಿಯಾದ ಸ್ತ್ರೀಯಿಂದ ಆಲಿಂಗಿತನಾದ ಕಾಮುಕ ಪುರುಷನು ನನಗಿಂತ ಭಿನ್ನವಸ್ತುವಿರುವುದೆಂದಾಗಲೀ, ನನಗಿಂತ ಈಕೆಯು ಭಿನ್ನವಸ್ತುವೆಂದಾಗಲಿ, ಇವಳು ಕಾಂತೆಯು, ನಾನು ನಾನು ಎಂದಾಗಲಿ, ನಾನು ಸುಖಿಯಾಗಿರುತ್ತೇನೆ ದುಃಖಿಯಾಗಿರುತ್ತೇನೆ ಎಂದಾಗಲೀ ತಿಳಿಯುವುದಿಲ್ಲ. ಅನಾಲಿಂಗಿತನಾದಾಗ ಅವಳಿಂದ ಭಿನ್ನನಾಗಿ ಬಾಹ್ಯಾಭ್ಯಂತರವಾದ ಸರ್ವವನ್ನೂ ತಿಳಿಯುತ್ತಾನೆ. **ಆಲಿಂಗನವಾದ ನಂತರ ಐಕ್ಯವನ್ನು ಹೊಂದುವುದ ರಿಂದ ಯಾವುದನ್ನೂ ತಿಳಿಯುವುದಿಲ್ಲ.** ಹೀಗೆಯೇ ಆತ್ಮೈಕ್ಯವನ್ನು ಹೊಂದಿದವನು ತನ್ನನ್ನೂ, ಪರಮಾತ್ಮನನ್ನೂ, ಭೇದವನ್ನೂ ಮತ್ತು ನಾನು ಸುಖಿಯಾಗಿರುತ್ತೇನೆ ಎಂದು ಕೂಡ ತಿಳಿಯುವುದಿಲ್ಲ. ಬ್ರಹ್ಮೈಕ್ಯವಾದದ ದುಸ್ಥಿತಿಯು ಇಲ್ಲಿಗೆ ಇಳಿಯಿತು. ಈ ವಾಕ್ಯಗಳಲ್ಲಿ ಶಂಕರಾಚಾರ್ಯರು ಪ್ರಣಯ ಭರದಿಂದ ಸಂಗಮವನ್ನು ಹೊಂದುವ ದಂಪತಿಗಳು ಐಕ್ಯವನ್ನು ಹೊಂದುವರೆಂದು ಸ್ಪಷ್ಟವಾಗಿ ಬರೆದಿರುತ್ತಾರೆ. ಮತ್ತು ಇವಳು ನನ್ನ ಕಾಂತೆಯು, ನಾನು ಭೋಗಿಸುವವನು, ನಾನು ಸುಖಿಯಾಗಿರುತ್ತೇನೆ, ನಾವಿಬ್ಬರೂ ಭಿನ್ನರು ಎಂಬ ಜ್ಞಾನವು ಸರ್ವಾತ್ಮನಾ ಇರುವುದಿಲ್ಲ ಎಂದೂ ಬರೆದಿರುತ್ತಾರೆ. ಈ ಎರಡು ವಿಷಯಗಳ ವ್ಯವಸ್ಥೆಯನ್ನು ಮಾಡುವುದಕ್ಕೆ ಮಿಥುನಸೌಖ್ಯದಲ್ಲಿ ಅತ್ಯಂತರತರಾದ ನಟಿಪುರುಷರನ್ನು ಸಾಕ್ಷಿ ಕರೆಯಬೇಕಾಯಿತು. ಆದರೆ ಅಷ್ಟು ಪ್ರಯಾಸವು ಅವಶ್ಯಕವಿಲ್ಲ. ದೇವರ ದಯದಿಂದ ಪ್ರತಿಯೊಬ್ಬ ಗ್ರಹಸ್ಥನೂ ಭೋಗ ಕಾಲದಲ್ಲಿ

ತನ್ನ ಪತ್ನಿಯಿಂದ ಐಕ್ಯವನ್ನು ಹೊಂದುವುದಿಲ್ಲವೆಂದು ತಿಳಿದಿರುತ್ತಾನೆ. ಮತ್ತು ಭೋಗ ಕಾಲದಲ್ಲಿ ನಾನು ಸುಖಿಯಾಗಿರುತ್ತೇನೆ ಎಂಬ ಜ್ಞಾನವುಳ್ಳವನಾಗಿಯೇ ಇರುತ್ತಾನೆ. ನಾನು ನಾನು; ಈಕೆಯು ನನ್ನ ಕಾಂತೆಯು ಎಂದು ಸ್ಫುಟವಾಗಿ ತಿಳಿದಿರುತ್ತಾನೆ. ಆದರೆ ಕಾಂತೆಯಿಂದ ಭಿನ್ನವಾದ ಯಾವ ವಸ್ತುಜ್ಞಾನವೂ ಇರುವುದಿಲ್ಲ. 2. ಅಷ್ಟು ವಿಚಾರವು ಯಾತಕ್ಕೆ ? ಪತಿಪತ್ನಿಯರಿಗೆ ಲೋಕದಲ್ಲಿರುವ ಐಕ್ಯದಂತೆ ಜೀವಬ್ರಹ್ಮರ ಐಕ್ಯವು ಇರುವುದಾದರೆ, ದ್ವೈತಿಗಳು ಅತಿ ಸಂತೋಷ ದಿಂದ ಈ ನಿರ್ಣಯವನ್ನು ಒಪ್ಪುವುದರಲ್ಲಿ ಸಂಶಯವಿಲ್ಲ, ಆದರೂ ವಸ್ತುತಃ ಭೋಕ್ತೃಭೋಗ್ಯ ಭೋಗಗಳೆಂಬ ವಿವೇಕ ಜ್ಞಾನವು ಭೋಗ ಕಾಲದಲ್ಲಿ ತೋರುವುದಿಲ್ಲವೆಂದು ಹೇಳುವುದು ಅನುಭವ ವಿರುದ್ಧವು. 3. ಶ್ರೀ ಕೃಷ್ಣನು ಸ್ತ್ರೀಸಂಗ ಸುಖಕ್ಕಿಂತ ಹೆಚ್ಚು ಸುಖದಲ್ಲಿ ಮಗ್ನನಾದ ಸಮಾಧಿ ಯೋಗಿಯು **“ ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಂ ವೇತ್ತಿ** ಎಂದು ಹೇಳಿರುತ್ತಾನೆ ಧ್ಯಾನಾರೂಢನು ಅನುಭವದಿಂದಲೇ ತಿಳಿಯುವುದಕ್ಕೆ ಅರ್ಹವಾದ ಅತೀಂದ್ರಿಯವಾದ **ಸುಖವನ್ನು** ವೇತ್ತಿ = ತಿಳಿಯುತ್ತಾನೆ, ಅನುಭವಿಸುತ್ತಾನೆ ಎಂದು ಅರ್ಥವು. ಅತ್ಯಂತ ಪ್ರೀತಿಯಿಂದ ನಾವು ಒಂದು ಭೋಗ್ಯದ್ರವ್ಯದಲ್ಲಿ ಆಸಕ್ತವಾದರೆ ತದತಿರಿಕ್ತವಾದ ಪದಾರ್ಥ ಗಳ ಸ್ಮೃತಿಯು ಇರುವುದಿಲ್ಲ. ಸಂಪೂರ್ಣವಾದ ಮನಸ್ಸಿನಿಂದ ಭೋಗ್ಯವಸ್ತುವಿನಲ್ಲಿ ಆಸಕ್ತರಾಗಿ ಉತ್ಪನ್ನವಾದ ಸೌಖ್ಯವನ್ನು ಅನುಭವಿಸುತ್ತಲೇ ಇರುತ್ತೇವೆ. ಅಷ್ಟೇವಿನಃ ಭೋಗ್ಯದ್ರವ್ಯಜ್ಞಾನವೇ ನಾಶವಾಗುವುದಿಲ್ಲ. 3 ಅಮರುಶತಕದ ಕವಿತೆಯು ಲಜ್ಜೆಯಿಂದ ಸುಖಾತಿಶಯವನ್ನು ವರ್ಣಿಸುವ ನಾಯಕಿಯ ಮಾತು. 4. ಕಿಂಚ “ಅಸೌ” “ಅಹಂ” “ರತಿಃ” ಇತ್ಯಾದಿ ಪ್ರತ್ಯೇಕ ನಿರ್ದೇಶದಿಂದ ಭೇದಜ್ಞಾನವು ಭೋಗ ಕಾಲದಲ್ಲಿ ಅವಳಿಗೂ ಇದ್ದಿತೆಂದು ತಿಳಿದು ಬರುವುದು. ಸುಷುಪ್ತಿ ವೈಷ ಯಿಕ ಭೋಗವೇ ಮೊದಲಾದ ಸಮಸ್ತ ಅವಸ್ಥೆಗಳಲ್ಲಿ ಭೋಗ್ಯಜ್ಞಾನವು, ನಾನು ಭೋಕ್ತನು ಎಂಬ ಜ್ಞಾನವೂ ಇರುವುದೆಂದು ಉತ್ತರಕಾಲೀನ ಪರಾಮರ್ಶ ಮತ್ತು ವರ್ಣನೆಗಳಿಂದ ಗೊತ್ತಾಗುವುದು. ಆದುದರಿಂದ ಜೀವಭಾವನಾಶಕವಾದ ತಾದಾತ್ಮ್ಯವಾಗಲೀ, ಜಡಭಾವ ಪ್ರಾಪ್ತಿಗೆ ಸದೃಶವಾದ ಸರ್ವಥಾ ಅನುಸಂಧಾನರಹಿತವಾದ ಬ್ರಹ್ಮೈಕ್ಯ ಪ್ರಾಪ್ತಿಯಾಗಲೀ ಪುರುಷಾರ್ಥವಲ್ಲವೆಂದು ಸಿದ್ಧ ವಾಗುವುದು. ಪ್ರಮಾಣಪ್ರಮಿತವಾದ ದುಃಖಪ್ರಚುರವಾದ ಪ್ರಪಂಚವನ್ನು ಮಿಥ್ಯಾ ಎಂದು ಹೇಳಿ “ಆತ್ಮನಾಶವನ್ನೇ” ಮುಕ್ತಿಯೆಂದು ಪ್ರತಿಪಾದನೆ ಮಾಡುವ ಅದ್ವೈತಾರ್ಥವಾದ ವಾದದಲ್ಲಿ ಬಹಳ ಜುಗುಪ್ಸೆಯನ್ನು ಹೊಂದಿ, ಸುಪ್ರಸಿದ್ಧನಾದ **ಬೋಸ್** ನಾಮಕಗ್ರಂಥಕರ್ತನು (ಹಿಂದೂ ತತ್ವವು ಅದ್ವೈತಾರ್ಥವುಳ್ಳದ್ದೇ ಎಂದು ಭ್ರಮಿಸಿ) ಹೀಗೆ ಬರೆದಿರುತ್ತಾನೆ .—

"Hindu Philosophy is Pessimism. It begins with a recognition of human sorrow, goes out in vain in quest of a proper remedy, and ultimately arrives at annihilation as the goal where human misery terminates only in the extinction of life."
—Hindu philosophy by Bose.

ಅರ್ಥವು— “ ಹಿಂದೂ ( ಅದ್ವೈತ ) ತತ್ವವು ನೈರಾಶ್ಯವಾದವು. ( ಯಾವುದರಿಂದಲೂ ಎಲ್ಲೂ ಸುಖವಾಗುವುದಿಲ್ಲವೆಂಬ ಜ್ಞಾನವನ್ನು ಹುಟ್ಟಿಸತಕ್ಕ ತತ್ವವು ) ಅದು ಮಾನುಷಪ್ರಪಂಚವು

ಇಷ್ಟು ತತ್ವವಿಚಾರದಿಂದ, ಅದ್ವೈತ ಮತದ ರೀತಿಯಿಂದ ಆನಂದಾವಿರ್ಭಾವವು ಮುಕ್ತಿಯೆಂದಾಗಲೀ, ಅವಿದ್ಯಾ ನಿವೃತ್ತಿಯು ಮುಕ್ತಿಯು ಎಂದಾಗಲೀ ಹೇಳುವದಕ್ಕಾಗುವುದಿಲ್ಲ. ಭೋಕ್ತೃಭೋಗ್ಯ ಭೋಗಭೇದರಹಿತವಾದ ಆನಂದದ ತಾದಾತ್ಮ್ಯವು, ಅಥವಾ " ಅಹಂ " ಪದಾರ್ಥವಾದ ಜೀವಭಾವದ ನಾಶದಿಂದಲೇ ಪ್ರಾಪ್ತವಾಗುವ ಬ್ರಹ್ಮೈಕ್ಯವು ಪುರುಷಾರ್ಥವೆನ್ನಿಸಲಾರದು. ಹೀಗಿರುವಲ್ಲಿ ಅಂಥ ಮುಕ್ತಿಗೆ ಪ್ರಧಾನಪುರುಷಾರ್ಥವೆಂಬ ಹೆಸರು ಅತ್ಯಂತ ಅಸಂಗತವಾಗುವದು. ಮತ್ತು ಪರಮಾರ್ಥವಾಗಿ ವಿಚಾರಿಸಿದರೆ, ಬಂಧವೇ ಇಲ್ಲದಿರುವುದರಿಂದ ಬಂಧ ನಿವೃತ್ತಿರೂಪವಾದ ಮುಕ್ತಿಯೂ ಇಲ್ಲವೇ ಇಲ್ಲ. ಹೀಗೆ ಅದ್ವೈತ ಮತದಲ್ಲಿ ಮುಕ್ತಿ ಸ್ವರೂಪವೇ ದುರ್ನಿರೂಪವಾಗಿರುವಾಗ ಅದರ ಲಕ್ಷಣಗಳು, ಅದರ ಅವಾಂತರ ಪ್ರಭೇದಕಥನವು ಇವೇ ಮುಂತಾದ ವಿಷಯಗಳ ಉಪನ್ಯಾಸಕ್ಕೆ ಅವಕಾಶವೆಲ್ಲಿಂದ ಬಂತು ?

## 2.

**"ಮುಕ್ತಾನಾಂ ಪರಮಾಗತಿಃ"** ಎಂಬ ಸುಪ್ರಸಿದ್ಧ ನಾಮವುಳ್ಳ ಶ್ರೀ ಕೃಷ್ಣನಾದರೋ ಮುಕ್ತಿಯು ನಿಖಿಲಾಪೇಕ್ಷಿತವಾದ ಪುರುಷಾರ್ಥವೆಂದು ಹೇಳುತ್ತಾನೆ:—

(1) **ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ।** —(8. 11.)

ಭಗವತ್ಪದ ಪ್ರಾಪ್ತಿರೂಪ ಮುಕ್ತಿಯನ್ನು ಇಚ್ಛಿಸುವವರಾಗಿ ಕಾಮಾದಿ ರಹಿತವಾದ ಯತಿಗಳು ಶ್ರವಣ ಮನನಾದಿ ರೂಪವಾದ ಬ್ರಹ್ಮವಿಚಾರವನ್ನು ಮಾಡುತ್ತಾರೆ.

ಮೋಕ್ಷ ಸುಖವು ಸಕಲ ಲೌಕಿಕ ಸುಖಗಳಿಗಿಂತಲೂ ಉತ್ತಮವೆಂಬುದನ್ನು ಎರಡಾವರ್ತಿ ಕೈಮುತ್ಯ ನ್ಯಾಯದಿಂದ ಶ್ರೀ ಕೃಷ್ಣನು ತೋರಿಸಿರುತ್ತಾನೆ :—

---

ದುಃಖಪ್ರಚುರವೆಂದು ಆರಂಭದಲ್ಲಿ ಅಂಗೀಕರಿಸಿ, ಅದಕ್ಕೆ ಅನುಗುಣವಾದ ಔಷಧವನ್ನು ನಿರರ್ಥಕವಾಗಿ ಹುಡುಕುವುದಕ್ಕೆ ಹೊರಟಿರುವುದು. ( ಅಂದರೆ ಯಾವುದು ದುಃಖನಾಶಕವೆಂದು ಅದ್ವೈತಿಗಳು ಹೇಳುತ್ತಾರೆಯೋ ಅಂಥ ಆತ್ಮೈಕ್ಯವು ಅಂಥಾದ್ದಲ್ಲವಾದುದರಿಂದ ಈ ಹುಡುಕುವ ಕೆಲಸವು ತತ್ವವಿಚಾರವು— ನಿಷ್ಪ್ರಯೋಜನವೇ ಎಂದು ಭಾವವು). ಮತ್ತು ಕೊನೆಯಲ್ಲಿ ಯಾವ **ಜೀವ ನಾಶದಲ್ಲಿಯೇ** ಸಮಸ್ತ ದುಃಖಗಳೂ ಪರಿಸಮಾಪ್ತಿಯಾಗಬೇಕೋ ಅಂಥ ಸರ್ವ ನಾಶವನ್ನೇ ಅಂತ್ಯಗತಿಯೆಂದು ನಿಶ್ಚಯಿಸಿರುವುದು. "

ಬೋಸ್ ಮಹಾಶಯರಿಗೆ ಇದೇ ಹಿಂದೂತತ್ವವಲ್ಲವೆಂದು ಹೇಳಬೇಕಾಗಿರುವುದು. ಅದು ಹಾಗಿರಲಿ. ಇದರಿಂದ ಅದ್ವೈತಿಗಳಿಂದ ಅಂಗೀಕೃತವಾದ ಆತ್ಮೈಕ್ಯವು ಪುರುಷಾರ್ಥವಲ್ಲವೆಂದು ನಿಶ್ಚಿತವಾಗುವುದು.

(2) **ಯಾವಾನರ್ಥ ಉದಪಾನೇ ಸರ್ವತಸ್ಸಂಪ್ಲುತೋದಕೇ ।**
**ತಾವಾನ್ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ।**
—(2. 46.)

(3) **ವೇದೇಷು ಯಜ್ಞೇಷು ತಪಸ್ಸು ಚೈವದಾನೇಷುಯತ್ಪುಣ್ಯ ಫಲಂಪ್ರದಿಷ್ಟಂ ।**
**ಅತ್ಯೇತಿತತ್ಸರ್ವಮಿದಂ ವಿದಿತ್ವಾಯೋಗೀಪರಂ ಸ್ಥಾನಮುಪೈತಿ ಚಾದ್ಯಂ ।** —(8. 28.)

ಈ ಶ್ಲೋಕಗಳು ( ಈಗಾಗಲೇ ಹಿಂದಿನ ಪುಟಗಳಲ್ಲಿ ) ವ್ಯಾಖ್ಯಾತ ವಾಗಿರುವವು.

ಮೋಕ್ಷ ಸುಖಾನುಭವ ಪ್ರಕಾರವನ್ನು ಸಮಾಧಿಯೋಗದ ಪರಿಪಾಕಾವಸ್ಥೆ ಯನ್ನು ಹೊಂದಿದ ಬ್ರಹ್ಮಾಪರೋಕ್ಷ ಜ್ಞಾನಿಯ ಸುಖಾನುಭವದ ದೃಷ್ಟಾಂತದಿಂದ ತಿಳಿಯಬಹುದು. ಶ್ರೀ ಕೃಷ್ಣನು ಹೇಳುತ್ತಾನೆ.—

(4) **ಯಸ್ತ್ವಾತ್ಮರತಿರೇವಸ್ಯಾದಾತ್ಮತೃಪ್ತಶ್ಚಮಾನವಃ ।**
**ಆತ್ಮನ್ಯೇವಚ ಸಂತುಷ್ಟಃ** ............॥ —(3. 17.)

( ಈ ಶ್ಲೋಕಾರ್ಥವು 147 ನೇ ಪುಟದಲ್ಲಿರುತ್ತದೆ. ) ಷಷ್ಠಾಧ್ಯಾಯದ ವರ್ಣನೆಯು ಇನ್ನೂ ವಿಸ್ತಾರವಾದುದು :—

(5) **ಯತ್ರಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿತುಷ್ಯತಿ ।** —(6. 20.)
**ಸುಖಮಾತ್ಯಂತಿಕಂಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಂ ।**
**ವೇತ್ತಿಯತ್ರ ನ ಚೈವಾಯಂ ಸ್ಥಿತಶ್ಚಲತಿತತ್ವತಃ ।**
**ಯಂಲಬ್ಧ್ವಾಚಾಪರಂಲಾಭಂ ಮನ್ಯತೇನಾಧಿಕಂತತಃ ।**
**ಯಸ್ಮಿನ್ಸ್ಥಿತೋ ನ ದುಃಖೇನ ಗುರುಣಾಪಿವಿಚಾಲ್ಯತೇ ॥**
—(6. 20-22.)

(ಈ ಶ್ಲೋಕಗಳು 148 ನೆಯ ಪುಟದಲ್ಲಿ) ವಿವೃತವಾಗಿರುವವು. ದಂಪತಿಗಳಿಗೆ ಆಲಿಂಗನ ಕಾಲದಲ್ಲಿ ಐಕ್ಯವು ಪ್ರಾಪ್ತವಾಗುವಂತೆ ಜೀವಬ್ರಹ್ಮರುಗಳಿಗೆ ಐಕ್ಯವು ಇರುವುದೆಂದು ಶಂಕರಾಚಾರ್ಯರು ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿ ಬರೆದಿರು ತ್ತಾರೆ. ಇಲ್ಲಿ ನಿರೂಪಿತವಾಗಿರುವ ಸಮಾಧಿಯೋಗಿಯು ಮತ್ತು ಧ್ಯೇಯ ಪರ ಮಾತ್ಮನ ಆಲಿಂಗನವು ಅದಕ್ಕಿಂತಲೂ ನಿಬಿಡತರವಾದುದು. ಹೇಗೆಂದರೆ ದಂಪತಿ ಗಳ ಗಾಢಾಲಿಂಗನವೂ ಕೂಡ ಭೇರೀತಾಡನನಾದದಿಂದ ಅಥವಾ ಘಟಸರ್ಪದರ್ಶನ ದಿಂದ ಬಿಟ್ಟು ಹೋಗುತ್ತದೆ. ಜ್ಞಾನಿಯ ಬ್ರಹ್ಮಾಲಿಂಗನವು "ನ ದುಃಖೇನಗುರು

ಣಾಪಿ ವಿಚಾಲ್ಯತೇ" ಎಂದರೆ ಪ್ರಬಲವಾದ ದುಃಖ ಹೇತುವಿನಿಂದಲೂ ಚಲಿಸುವದಿಲ್ಲ. ವಾಲ್ಮೀಕ್ಯಾದಿ ಋಷಿಗಳು ಸಮಾಧಿಯೋಗದಲ್ಲಿದ್ದಾಗ, ಅವರ ದೇಹವನ್ನೆಲ್ಲಾ ಹುಳು ಗಳು ತಿಂದು ಸುತ್ತಲೂ ಹುತ್ತವು ಬೆಳೆದಿತ್ತು. ಪರೀಕ್ಷಿದ್ರಾಜನು ಸಮಾಧಿಧ್ಯಾನ ದಲ್ಲಿ ಆಸಕ್ತರಾದ ಶಮೀಕ ಋಷಿಗಳ ಕೊರಳಿಗೆ ಸತ್ತ ಸರ್ಪವನ್ನು ಸುತ್ತಿದರೂ ಸಹ ಅವರು ಎಚ್ಚರವನ್ನು ಹೊಂದಲಿಲ್ಲ. ನಿದ್ರೆಯಲ್ಲಿ ಅದ್ವೈತಿಗಳು ಉಂಟೆಂದು ಹೇಳುವ ಬ್ರಹ್ಮೈಕ್ಯಕ್ಕಿಂತಲೂ ಇದು ವಿಲಕ್ಷಣವಾದ ಸುಖರೂಪವಾದ ಸ್ಥಿತಿಯಾಗಬೇಕು. ಇಂಥ ಸ್ಥಿತಿಯಲ್ಲೂ ಕೂಡ "**ಆತ್ಯಂತಿಕಂ ಬುದ್ಧಿಗ್ರಾಹ್ಯಂ ಸುಖಂವೇತ್ತಿ**" ಎಂದು ಶ್ರೀ ಕೃಷ್ಣನು ಹೇಳಿರುವದರಿಂದ, ಅತ್ಯತಿಶಯವಾದ ಬಾಹ್ಯವಸ್ತು ಜ್ಞಾನ ರಾಹಿತ್ಯದಿಂದ ಸಹಿತವಾದ, ಪರಮಾತ್ಮದರ್ಶನಜನಿತ ಸುಖದ ಅನುಭವವೇ ಮುಕ್ತಿಯು; ಇದಕ್ಕಿಂತ ಭಿನ್ನವಾದ ಭೋಗಕರ್ತನಾದ ಜೀವಭಾವದ ನಾಶವು ಮುಕ್ತಿಯಲ್ಲವೆಂದು ಈ ದೃಷ್ಟಾಂತಗಳಿಂದ ಸಿದ್ಧಿಸುವದು. ಯೋಗಿಯು ಎಂಥ ಸ್ಥಿತಿಯನ್ನು ಹೊಂದಿ ಆನಂದವನ್ನು ಅನುಭವಿಸುವನೋ, ಅಂಥ ಸ್ಥಿತಿಯು ಇನ್ನೂ ಅಧಿಕವಾಗಿ ಬಂಧರಹಿತನಾದ ಜೀವನಿಗೆ **ನಿರಂತರ** ಇರುವುದೆಂದು ದ್ವೈತಿ ಗಳ ಮತವು. ಇನ್ನೂ ಸ್ಪಷ್ಟವಾದ ಸಮಾಧಿಸ್ಥಿತಿಯ ವರ್ಣನೆಯು ಇಲ್ಲಿಯೇ ಇರುತ್ತದೆ.—

**(6) ಪ್ರಶಾಂತಮನಸಂಹ್ಯೇನಂ ಯೋಗಿನಂ ಸುಖಮುತ್ತಮಂ ।**
**ಉಪೈತಿಶಾಂತರಜಸಂ ಬ್ರಹ್ಮಭೂತಮಕಲ್ಮಷಂ ॥** —(6. 27.)

ಸ್ವತಃ ವಿಷಯಗಳಲ್ಲಿ ಅಪ್ರವೃತ್ತವಾದ ಮನಸ್ಸುಳ್ಳ, ರಜಸ್ತಮೋಗುಣ ಶೂನ್ಯನಾದ, ಪಾಪರಹಿತನಾದ, **ಬ್ರಹ್ಮಭೂತನಾದ** = ಬ್ರಹ್ಮನಲ್ಲಿ ಸ್ಥಿತನಾದ ಯೋಗಿಯನ್ನು ಉತ್ತಮಂಸುಖಂ ಉಪೈತಿ = ಉತ್ತಮಸುಖವು ಬಂದು ಸೇರುತ್ತದೆ. ಈ ವಾಕ್ಯದಲ್ಲಿ ಬ್ರಹ್ಮಭೂತನಾದವನನ್ನು ಉತ್ತಮ ಸುಖವು ಬಂದು ಸೇರುವುದು ಎಂದು ಹೇಳಿರುವುದರಿಂದ, ಈ ಅವಸ್ಥೆಯಲ್ಲಿ ಬ್ರಹ್ಮೈಕ್ಯವು ಪ್ರಾಪ್ತವಾಗುತ್ತದೆ ಎಂದು ಹೇಳುವುದಾದರೆ, ಜ್ಞಾನಿಗೆ ಸುಖವು ಬಂದು ಸೇರುವುದಕ್ಕೆ ( ಸುಖ ವಿಷಯಕ ಅನುಭವಕ್ಕೆ ) ವಿರೋಧವಲ್ಲದ ಬ್ರಹ್ಮಪ್ರಾಪ್ತಿಯನ್ನು ಹೇಳಬೇಕು. ಅಂಥ ಬ್ರಹ್ಮಪ್ರಾಪ್ತಿಯು, ಬಾಹ್ಯಜ್ಞಾನದಿಂದ ರಹಿತವಾದ ಕೇವಲ ಬ್ರಹ್ಮದರ್ಶನ ದಲ್ಲಿ ಆಸಕ್ತವಾಗಿರುವ ಅವಸ್ಥೆಯು. ಈ ಅವಸ್ಥೆಯಲ್ಲಿ ಬ್ರಹ್ಮನು ಜ್ಞಾನಿಗಿಂತ ಭಿನ್ನನಾಗಿಯೇ ಇರುವನೆಂಬುದು ಉತ್ತರ ಶ್ಲೋಕದಿಂದ ಇನ್ನೂ ಸ್ಪಷ್ಟವಾಗಿ ವಿದಿತ ವಾಗುವುದು. ಶ್ರೀ ಕೃಷ್ಣನು ಹೇಳುತ್ತಾನೆ :—

**(7) ಯುಂಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ।**
—(6. 28.)

ರಾಗಾದಿರಹಿತನಾದ, ಸದಾ ಈ ರೀತಿಯಲ್ಲಿ ಧ್ಯಾನಯೋಗನಿರತನಾದ ಯೋಗಿಯು, ಆತ್ಮಾನಂ ಯುಂಜರ್ = ಪರಮಾತ್ಮನನ್ನು ಧ್ಯಾನ ಮಾಡತಕ್ಕವನಾಗಿ ಅಥವಾ ಹೊಂದಿದವನಾಗಿ, ಅನಾಯಾಸದಿಂದ **ಬ್ರಹ್ಮಸಂಸ್ಪರ್ಶಂ ಅತ್ಯಂತಂ ಸುಖಂ** = ಬ್ರಹ್ಮ ಸಂಬಂಧದಿಂದ ಪ್ರಾಪ್ತವಾದ ಅತ್ಯುತ್ತಮ ಸುಖವನ್ನು **ಅಶ್ನುತೇ**= ಅನುಭವಿಸುತ್ತಾನೆ.

ಈ ಅವಸ್ಥೆಯಲ್ಲಿ ಸುಖಭೋಕ್ತನಾದ ಯೋಗಿ ಜೀವನು, ಭೋಗ್ಯವಾದ ಬ್ರಹ್ಮ ಸಂಯೋಗದಿಂದ ಅಭಿವ್ಯಕ್ತವಾದ ಅತ್ಯುತ್ತಮ ಸುಖವು, ಮತ್ತು ಇಂಥ ಸುಖವನ್ನು ಅನುಭವಿಸುವ ಜ್ಞಾನಿಯ ಭೋಗವು ಇವೂ ಮೂರೂ ಪ್ರತ್ಯೇಕ ವಾಗಿ ನಿರೂಪಿತವಾಗಿರುವುವು. ವಿಷಯ ವಿಷಯಿಭಾವದಿಂದ ರಹಿತವಾದ ಭೋಕ್ತೃ ಭೋಗ್ಯಭೋಗ್ಯೈಕ್ಯವು ಪ್ರಾಪ್ತವಾಗುವುದೆಂದು ಇಲ್ಲಿ ಹೇಳಿರುವುದಿಲ್ಲ. ಕಾಂತಾ ಪರಿರಂಭಣದಲ್ಲೂ, ಕಾಮಿನೀಸಂಸ್ಪರ್ಶಜನಿತ ಉತ್ತಮ ಸುಖವು ಮನೆಯಲ್ಲಿ ಕಳ್ಳರು ಬಂದರೂ ತಿಳಿಯಲಾರದಷ್ಟು ಬಾಹ್ಯವಸ್ತು ಜ್ಞಾನಶೂನ್ಯನಾದ, ಅತಿಶಯಿತವಾಗಿ ಕಾಂತೆಯಲ್ಲಿಯೇ ಆಸಕ್ತವಾದ ಚಿತ್ತವುಳ್ಳ, ಕಾಮುಕನಿಗೆ ಒಂದು ಸೇರುವುದು. ಆದುದರಿಂದ ಹೀಗೆಯೇ " **ಯಥಾಪ್ರಿಯಯಾಸ್ತ್ರಿಯಾ ಸಂ ಪರಿಷ್ವಕ್ತೋ ನ ಬಾಹ್ಯಂ ಕಿಂಚನವೇದನಾಂತರಂ** " ಎಂಬ ಶ್ರುತಿಯಲ್ಲಿರುವ ದೃಷ್ಟಾಂತ ವಾಕ್ಯಕ್ಕೆ ಅರ್ಥ ಮಾಡಬೇಕು. ಕಾಮುಕನು ಕಾಮಿನೀಸಂಗ ಕಾಲದಲ್ಲಿ ಬಾಹ್ಯ ವಾದ ಘಟಪಟಗಳನ್ನಾಗಲೀ, ಅಂತರವಾದ ಎಂದರೆ ಮನೋಗತವಾದ ಇತರ ವಿಷಯಕ ಚಿಂತೆಗಳನ್ನಾಗಲೀ ತಿಳಿಯುವುದಿಲ್ಲ. ಕೇವಲ ಸ್ತ್ರೀ ಧ್ಯಾನದಲ್ಲಿ ಆಸಕ್ತ ನಾಗಿ ತತ್ಸಂಗಜನಿತ ಸುಖವನ್ನು ಭೋಗ ಮಾಡುತ್ತಿರುತ್ತಾನೆ. ಹೀಗೆಯೇ ಪರಮಾತ್ಮನಿಂದ ಆಲಿಂಗಿತನಾದವನು ಕೇವಲ ಪರಮಾತ್ಮ ಧ್ಯಾನದಲ್ಲಿ ಮಗ್ನನಾಗಿ ತತ್ಸ್ಪರ್ಶದಿಂದ ಪ್ರಾಪ್ತವಾದ ಅತಿಶಯಿತವಾದ ಆನಂದವನ್ನು ಭೋಗಿಸುತ್ತಿರು ತ್ತಾನೆ ಎಂದು ದಾರ್ಷ್ಟಾಂತಿಕ ವಾಕ್ಯವಾದ " **ಏವ ಮೇವಾಯಂ ಪುರುಷಃ ಪ್ರಾಜ್ಞೇನಾತ್ಮನಾಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರಂ** " ಎಂಬ ಶ್ರುತಿಗೆ ಅರ್ಥವನ್ನು ಮಾಡಬೇಕು.

ಸುಖವಿಷಯಕ ಅನುಭವವೇ ಪರಮುಮುಕ್ತಿಯೆಂದು ಶ್ರೀ ಕೃಷ್ಣನು ಅತಿ ಸ್ಪಷ್ಟವಾಗಿ ನಿರೂಪಿಸುತ್ತಾನೆ :—

(8) **ಸಬ್ರಹ್ಮಯೋಗ ಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ ।**
—(5. 21.)

ಪರಬ್ರಹ್ಮನ ಧ್ಯಾನದಲ್ಲಿ ಆಸಕ್ತವಾದ ಚಿತ್ತವುಳ್ಳ ಜ್ಞಾನಿಯು **ಅಕ್ಷಯಂ** ನಾಶರಹಿತವಾದ, ನಿತ್ಯವಾದ, **ಸುಖಂ ಅಶ್ನುತೇ** = ಸುಖವನ್ನು ಭೋಗಿಸುತ್ತಾನೆ.

ನಾಶರಹಿತವಾದ ನಿರಂತರ ಸುಖಭೋಗವು ಸಂಸಾರಾವಸ್ಥೆಯಲ್ಲಿ ಇಲ್ಲದುದರಿಂದ ಇದು ಮುಕ್ತ್ಯವಸ್ಥೆಯ ವರ್ಣನೆಯು ಎಂದು ಸಿದ್ಧವಾಗುವುದು. ಹೀಗೆ ಮುಕ್ತಿಯಲ್ಲಿ ಭೋಕ್ತೃ ಭೋಗ್ಯ ಭೋಗವಿವೇಕವು ಇರುವುದು ಎಂದೂ, “ಅಹಂ” ಪದಾರ್ಥಕ್ಕೆ ನಾಶವು ಇಲ್ಲವೆಂದೂ, ಮತ್ತು ಅಹಂಪದಾರ್ಥವಾದ ಜೀವನಿಗೆ ಸಂಸಾರದಲ್ಲಿರುವಂಥ ದುಃಖ ಸಂಬಂಧವು ತಪ್ಪಿ, ವಿಚ್ಛೇದವಿಲ್ಲದ ನಿರಂತರ ಸುಖವು ಭೋಗಕ್ಕೆ ಬಂದು ಒದಗುತ್ತಿರುವುದೆಂದೂ ಈ ವಾಕ್ಯದಿಂದ ನಿಶ್ಚಿತವಾಗುವುದು. “ಮುಕ್ತಿರ್ಹಿತ್ವಾನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ” ಎಂಬ ಭಾಗವತ ಶ್ಲೋಕವು ಇದೇ ಅರ್ಥವನ್ನು ಬೋಧಿಸುವುದು. ಜೀವನು ಪದೇಪದೇ ದುಃಖ ಭೋಗದಿಂದ ಸಹಿತವಾದ ಸ್ಥಿತಿಯನ್ನು ಪರಿತ್ಯಜಿಸಿ ಕೇವಲ ಸುಖಾನುಭವರೂಪವಾದ ತನ್ನ ಸ್ವರೂಪ ( ಸ್ವಾಭಾವಿಕ ) ಸ್ಥಿತಿಯನ್ನು ಹೊಂದುತ್ತಾನೆ; ಇದು ಮುಕ್ತಿಯು ಎಂದು ಈ ಶ್ಲೋಕದ ಅರ್ಥವು. ಅದ್ವೈತ ಮತದಲ್ಲಿ ನಿರ್ವಿಕಾರನಾದ ಬ್ರಹ್ಮಚೇತನನಿಗೆ ಅನ್ಯಥಾ ರೂಪಪ್ರಾಪ್ತಿಯೇ ಇಲ್ಲವಾದುದರಿಂದ, ಅದರಿಂದ ಬಿಡುಗಡೆಯಾಗಲೀ ಪುನಃ ಸ್ವಾಭಾವಿಕ ರೂಪವನ್ನು ಹೊಂದುವುದಾಗಲೀ ಅಸಂಭಾವಿತವು. ಬ್ರಹ್ಮಾತಿರಿಕ್ತ ಚೇತನರು ಇರುವುದೇ ಇಲ್ಲ. “ಅಹಂ” ಪದಾರ್ಥರಾದ ಜೀವರುಗಳು ಸಂಸಾರದಲ್ಲಿ ಪ್ರಾಪ್ತವಾಗಿರುವ ಅನ್ಯಥಾಕಾರವನ್ನು ಪರಿತ್ಯಜಿಸಿ ಸ್ವಾಭಾವಿಕ ಸ್ಥಿತಿಯನ್ನು ಹೊಂದುವರೆಂದು ಅರ್ಥ ಮಾಡುವುದಾದರೆ, ನಮ್ಮಿಂದ ನಿರೂಪಿತವಾದ ಅರ್ಥವೇ ಪ್ರಾಮಾಣಿಕವಾಗಿಯೂ, ಗೀತಾವಾಕ್ಯಗಳಿಗೆ ಅನುಗುಣವಾಗಿಯೂ ಇರುವುದು. ಸ್ವರೂಪತಃ ಸುಖರೂಪನಾದ ಜೀವನಿಗೆ ನಿರಂತರ ಸುಖಾನುಭವವು ಸ್ವಾಭಾವಿಕ ಸ್ಥಿತಿಯಾಗುವುದು; ಆದರೆ ಜೀವನು ಸ್ವರೂಪತಃ ಅಬ್ರಹ್ಮನಾದುದರಿಂದ ಬ್ರಹ್ಮತ್ವಪ್ರಾಪ್ತಿಯು ಸ್ವಾಭಾವಿಕ ಸ್ಥಿತಿಯೆಂದೆನಿಸಲಾರದು. ಆದುದರಿಂದ ಜೀವನಿಗೆ ಜೀವತ್ವನಾಶದಿಂದ ರಹಿತವಾದ ಸ್ವರೂಪ ಸುಖಭೋಗವೇ ಮುಕ್ತಿಯೆಂದು ಸಿದ್ಧವಾಗುವುದು.

ಜೀವನು ಮುಕ್ತಿಯಲ್ಲಿ ಸ್ವರೂಪಭೂತವಾದ ಆನಂದದ ಆವಿರ್ಭಾವವನ್ನು ಹೊಂದುವನು; ಎಂದರೆ ಬಂಧನಿವೃತ್ತಿಯಾದ ನಂತರ, ಅಭಿವ್ಯಕ್ತವಾದ ತನ್ನ ಸ್ವರೂಪ ಸುಖವನ್ನೇ ಭೋಗಿಸುವನು ಎಂಬ ಪ್ರಮೇಯವೂ ಕೂಡ ಶ್ರೀ ಕೃಷ್ಣನ ವಾಕ್ಯದಿಂದಲೇ ಸೂಚಿತವಾಗಿರುವುದು. ಅಕ್ಷಯಂ ಸುಖಮಶ್ನುತೇ ಎಂದರೆ ನಾಶರಹಿತವಾದ ( ನಿತ್ಯವಾದ ) ಸುಖವನ್ನು ಮುಕ್ತನು ಅನುಭವಿಸುತ್ತಾನೆ ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ. ಈ ಸುಖವು ಬ್ರಹ್ಮಸ್ವರೂಪಭೂತವಾದ ಸುಖವಲ್ಲ. ಬ್ರಹ್ಮ ಸ್ವರೂಪಾನಂದವನ್ನು ಜೀವನು ಭೋಗಿಸುವುದು ಅಸಂಭಾವಿತವು. ಬ್ರಹ್ಮ ಸ್ವರೂಪಭೂತವಾದ ಆನಂದವನ್ನು ಬ್ರಹ್ಮನು ಅನುಭವಿಸುವನು. ಬ್ರಹ್ಮಭಿನ್ನನಾದ ಜೀವಚೇತನನಿಗೆ ಅದರ ಭೋಗವು ಕೂಡುವುದಿಲ್ಲ. ಇದು ಜಡ ಸುಖವು ಎಂದು ಹೇಳುವುದೂ ಕಷ್ಟವಾಗಿರುತ್ತದೆ. ಜಡ ಸುಖವು “ ಅಕ್ಷಯ್ಯ ” ವಾಗಿರಲಾರದು. ಜಡ ಸುಖಗಳು ಉತ್ಪನ್ನವಾಗಿ ನಾಶವಾಗುವ ಸ್ವಭಾವವುಳ್ಳವು. ಆದುದರಿಂದ

ಪರಿಶೇಷದಿಂದ ಜೀವನು ತನ್ನ ಸ್ವರೂಪಭೂತವಾದ ನಾಶರಹಿತವಾದ ನಿತ್ಯಸುಖವನ್ನೇ ಅನುಭವಿಸುವನು; ಅಂಥ ಸ್ವರೂಪ ಸುಖದ ಅಭಿವ್ಯಕ್ತಿಗೆ ಬ್ರಹ್ಮಸಂಬಂಧವೂ ಮತ್ತು ಸಾತ್ವಿಕವಾದ ಜಡ ದ್ರವ್ಯಸಂಯೋಗವೂ ಕಾರಣವಾಗಬಹುದು.

ಪುನಃ ಶ್ರೀ ಕೃಷ್ಣನು ಹೇಳುತ್ತಾನೆ.—

(9) **ಯುಕ್ತಃ ಕರ್ಮಫಲಂತ್ಯಕ್ತ್ವಾಶಾಂತಿಮಾಪ್ನೋತಿನೈಷ್ಠಿಕೀಂ ।**
—(5. 12.)

ಭಗವದರ್ಪಣ ಬುದ್ಧಿಯಿಂದ ಕರ್ಮಾನುಷ್ಠಾನ ಮಾಡುವ ಯೋಗಿಯು ಕರ್ಮಫಲದಲ್ಲಿ ಸ್ನೇಹವನ್ನು ಪರಿತ್ಯಾಗ ಮಾಡಿ, ನೈಷ್ಠಿಕೀಂಶಾಂತಿಂ, ಎಂದರೆ ಸ್ವಾಭಾವಿಕವಾದ ಅತ್ಯುತ್ತಮ ಸುಖವನ್ನು, ಎಂದರೆ ಸ್ವರೂಪಾನಂದಾವಿರ್ಭಾವ ಲಕ್ಷಣ ಮುಕ್ತಿಯನ್ನು ಹೊಂದುತ್ತಾನೆ.

## 3.

**ಪ್ರಶ್ನೆ**— ಸ್ವಾಮೀ ! ಅವಿದ್ಯಾದಿ ಬಂಧನಿವೃತ್ತಿಯೂ ಮುಕ್ತಿಪದಾರ್ಥವೆಂದು ತಮ್ಮಿಂದ ನಿರೂಪಿತವಾಯಿತು. ಜ್ಞಾನಸ್ವರೂಪನಾದ ಜೀವಚೇತನನಿಗೆ ಅವಿದ್ಯಾದಿ ಬಂಧಗಳು ಬರುವುದು ಹೇಗೆ ? ಜ್ಞಾನಸ್ವರೂಪನಾದ ಪರಬ್ರಹ್ಮನಿಗೆ ಅಂಧಕಾರದಂತಿರುವ ಅವಿದ್ಯೆಯು ಆವರಣವಾಗುವದು ಅಸಂಭಾವಿತವೆಂದು ತಾವು ಪೂರ್ವದಲ್ಲಿ ಹೇಳಿರುವ ದೋಷವು ದ್ವೈತ ಮತದಲ್ಲೂ ಪ್ರಾಪ್ತವಾಯಿತಲ್ಲವೇ ?

ಶ್ರೀ ಶ್ರೀಗಳವರು— ಪೂರ್ಣ ಪ್ರಕಾಶಸ್ವರೂಪನಾದ ಸೂರ್ಯನಿಗೆ ಅಂಧಕಾರವು ಆವರಿಸುವುದು ಅಸಂಭಾವಿತವು. ಆದರೆ, ಬಹು ಧೂಮಸಹಿತವಾದ ಅಲ್ಪ ಪ್ರಕಾಶವುಳ್ಳ ಮಿಣುಕು ದೀಪಕ್ಕೆ ಅಂಧಕಾರವು ಆವರಿಸಬಹುದು; ಎಂದರೆ ಪ್ರಬಲವಾದ ಅಂಧಕಾರವನ್ನು ಅಲ್ಪವಾದ ಸೀಮೆಯೆಣ್ಣೆಯ ದೀಪವು ನಾಶ ಮಾಡುವುದರಲ್ಲಿ ಸಾಮರ್ಥ್ಯಹೀನವಾದುದರಿಂದ ಅದು ಘಟಪಟಾದಿ ವಸ್ತುಗಳನ್ನು ಪ್ರಕಾಶಪಡಿಸಲಾರದು. ಹೀಗೆಯೇ ಅಲ್ಪಜ್ಞಾನ ಮತ್ತು ಅಲ್ಪ ಶಕ್ತಿಯುಳ್ಳ ಜೀವನು ಅನಾದಿ ಕಾಲದಿಂದ ಭಯಂಕರವಾದ ತ್ರಿಗುಣಾತ್ಮಕ ಪ್ರಕೃತಿಯೇ ಮೊದಲಾದ ಬಂಧಕ್ಕೆ ವಶನಾಗಿ ತನ್ನ ಸ್ವರೂಪ ಜ್ಞಾನವನ್ನು ( ನಾನು ಇದ್ದೇನೆ ಎಂದು ) ಮಾತ್ರ ಉಳ್ಳವನಾಗಿ ತನ್ನ ಸ್ವರೂಪಭೂತವಾದ ಧರ್ಮಗಳನ್ನು ಸಹ ತಿಳಿದುಕೊಳ್ಳುವುದಕ್ಕೆ ಸಮರ್ಥನಾಗಿರುವುದಿಲ್ಲ. ಕವಚವನ್ನು ಧರಿಸಿರುವ ಪುರುಷನು ತನ್ನ ದೇಹವನ್ನು ಸಾಮಾನ್ಯವಾಗಿ ತಿಳಿದರೂ, ತನ್ನ ಎದೆಯ ಮೇಲಿರುವ ಮಚ್ಚೆಯನ್ನು ಹೇಗೆ ಕವಚವನ್ನು ತೆಗೆಯುವವರೆವಿಗೂ ನೋಡಲಾರನೋ, ಹಾಗೆಯೇ ಜೀವನೂ ಸಹ ತನ್ನ ಸ್ವರೂಪ, ಕ್ರಿಯಾಶಕ್ತಿ, ಭೋಗಶಕ್ತಿಗಳನ್ನು ಸಾಮಾನ್ಯ

ವಾಗಿ ತಿಳಿವರೂ ತನ್ನ ಧರ್ಮಗಳಾದ ಜ್ಞಾನ ಆನಂದಾದಿಗಳನ್ನು ತಾನೇ ತಿಳಿಯಲಾರನು. ಶ್ರೀ ಕೃಷ್ಣನು ಹೇಳುತ್ತಾನೆ.

(1) **ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿಜಂತವಃ ।**
—(5. 15.)

ಜೀವನ ಸ್ವರೂಪಭೂತವಾದ ಜ್ಞಾನವು ಅಜ್ಞಾನದಿಂದ ( ಅವಿದ್ಯಾದಿಬಂಧಗಳಿಂದ ) ಆವೃತವಾಗಿರುವುದು. ಆದುದರಿಂದ **ಜಂತವಃ** = ಎಂದರೆ ಅಲ್ಪರಾದ ಜೀವಚೇತನರು ಮುಹ್ಯಂತಿ = ತಮ್ಮ ಅಂತರ್ನಿಯಾಮಕನಾದ ಭಗವಂತನನ್ನು ತಿಳಿಯಲಾರರು, ಅಸ್ವಾತಂತ್ರ್ಯಾದಿ ತಮ್ಮ ಸ್ವರೂಪಭೂತವಾದ ಧರ್ಮಗಳನ್ನು ಸಾಕ್ಷಾತ್ತಾಗಿ ತಿಳಿಯಲಾರರು.

ಜೀವನ ಸ್ವರೂಪೇಂದ್ರಿಯವು ಅಂತರ್ನಿಯಾಮಕನಾದ ಪರಮಾತ್ಮನನ್ನು ತಿಳಿಯುವುದಕ್ಕೂ, ಜ್ಞಾನ, ಆನಂದಾದಿ ತನ್ನ ಸ್ವರೂಪ ಧರ್ಮಗಳನ್ನು ತಿಳಿಯುವುದಕ್ಕೂ ಸಮರ್ಥವಾದರೂ, ಪ್ರಬಲವಾದ ಬಾಹ್ಯವಾದ, ಭಾವರೂಪ ಅಜ್ಞಾನದಿಂದ ಆವೃತವಾಗಿ ಪರಮಾತ್ಮನನ್ನೂ ತನ್ನ ಸ್ವರೂಪ ಧರ್ಮಗಳನ್ನು ತಿಳಿಯುವುದರಲ್ಲಿ ಅಸಮರ್ಥವಾಗಿರುವುದು.

**ಪ್ರಶ್ನೆ**— ಸ್ವಾಮೀ ! ಇಂಥ ಅಜ್ಞಾನಾದಿ ಬಂಧನಿವೃತ್ತಿಯು ಆದ ನಂತರ ಜೀವನು ತನ್ನ ಸ್ವರೂಪ ಜ್ಞಾನದಿಂದಲೇ ಪರಬ್ರಹ್ಮನನ್ನು ತಿಳಿಯುವನೋ ?

ಶ್ರೀ ಶ್ರೀಗಳವರು— ಹೌದು. ಅದೇ ಮುಕ್ತಿಯು. ಹಾಗೆಯೇ ಶ್ರೀ ಕೃಷ್ಣನು ಹೇಳುತ್ತಾನೆ :—

(2) **ಜ್ಞಾನೇನ ತು ತದಜ್ಞಾನಂ ಯೇಷಾಂನಾಶಿತಮಾತ್ಮನಃ ।**
**ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿತತ್ಪರಂ ॥**
—(5. 16.)

ಜ್ಞಾನಸ್ವರೂಪನಾದ ಜೀವನಿಗೆ ಆವರಕವಾದ ಅಜ್ಞಾನವು ಪರೋಕ್ಷವೃತ್ತಿ ಜ್ಞಾನದಿಂದ ಯಾರಿಗೆ ನಾಶ ಮಾಡಲ್ಪಟ್ಟಿರುವುದೋ, (ಎಂದರೆ ಅವಿದ್ಯಾನಾಶವನ್ನು ಹೊಂದಿ ಯಾರು ಮುಕ್ತರಾಗುವರೋ) ಅಂಥವರ ಸ್ವರೂಪ ಜ್ಞಾನವು ತೇಜೋಮೂರ್ತಿಯಾದ ಸೂರ್ಯನಂತೆ, ಪರಬ್ರಹ್ಮನನ್ನು ವಿಷಯೀಕರಿಸುತ್ತದೆ ( ತಿಳಿಯುತ್ತದೆ ).

ವೃತ್ತಿಜ್ಞಾನ ( ವೃತ್ತಿರೂಪವಾದ ಬ್ರಹ್ಮಾಪರೋಕ್ಷಜ್ಞಾನ ) ಪ್ರಭಾವದಿಂದ ಅವಿದ್ಯಾನಾಶವು ಉಂಟಾದ ಮೇಲೆ, ಭಗವದನುಗ್ರಹಕ್ಕೆ ಪಾತ್ರನಾಗಿ, ಈ ಜೀವನು ಆವಿರ್ಭೂತ ಸ್ವರೂಪ ಜ್ಞಾನವುಳ್ಳವನಾಗಿ, ಭಗವಂತನನ್ನು ಸಾಕ್ಷಾತ್ತಾಗಿಯೇ

ತಿಳಿಯುವವನು ಎಂದರ್ಥವು. ಮುಕ್ತರೆಲ್ಲರೂ ತಮ್ಮ ಸ್ವರೂಪಭೂತವಾದ ಜ್ಞಾನದಿಂದಲೇ ಶ್ರೀ ಪರಮಾತ್ಮನನ್ನು ತಿಳಿಯುತ್ತಾರೆ. ಸ್ವರೂಪ ಜ್ಞಾನವು ಅಂತರ್ನಿಯಾಮಕನಾದ ಸಾಕ್ಷಾತ್ಪರಬ್ರಹ್ಮನನ್ನೇ ವಿಷಯೀಕರಿಸಿದ ಮೇಲೆ ಅಸ್ವಾತಂತ್ರ್ಯಾದಿ ತಮ್ಮ ಸ್ವರೂಪಭೂತ ಧರ್ಮಗಳನ್ನು ಪ್ರಕಾಶಪಡಿಸುವುದೆಂದು ಕೈಮುತ್ಯನ್ಯಾಯದಿಂದ ಸಿದ್ಧವಾಗುವುದು. ಈ ರೀತಿಯಾಗಿ ಶ್ರೀ ಕೃಷ್ಣನ ವಾಕ್ಯಗಳಿಂದಲೇ ಅವಿದ್ಯಾದಿ ಬಂಧನಿವೃತ್ತಿಯೂ ಮುಕ್ತಿ ಶಬ್ದಾರ್ಥವೆಂದು ನಿಶ್ಚಿತವಾಯಿತು.

**ಪ್ರಶ್ನೆ**— ಸ್ವಾಮೀ ! ಜೀವನು ಸ್ವಾಭಾವಿಕವಾಗಿ ಜ್ಞಾನಸ್ವರೂಪನು ಎಂದು ತಮ್ಮಿಂದ ನಿರೂಪಿತವಾಯಿತು. ಇಂಥ ಸ್ವರೂಪ ಜ್ಞಾನವು ಈಗ ಸಂಸಾರಾವಸ್ಥೆಯಲ್ಲಿ ಅವಿದ್ಯಾದಿ ಆವರಣಗಳಿಂದ ಪ್ರತಿಬದ್ಧವಾಗಿ ಪರಬ್ರಹ್ಮನನ್ನಾಗಲೀ, ಅಸ್ವಾತಂತ್ರ್ಯಾದಿ ಸ್ವಕೀಯ ಧರ್ಮಗಳನ್ನಾಗಲೀ ಪ್ರಕಾಶಪಡಿಸಲಾರದು. ಅಷ್ಟೇ ಅಲ್ಲ. ಅಂಧಕಾರದಂತಿರುವ ಅವಿದ್ಯೆಯನ್ನು ನಾಶ ಹೊಂದಿಸುವುದಕ್ಕೂ ಸಮರ್ಥವಲ್ಲ. ಅಜ್ಞಾನನಾಶಕತ್ವವು ಜ್ಞಾನಕ್ಕೆ ಸ್ವಾಭಾವಿಕವಾದ ಧರ್ಮವು. ಸ್ವರೂಪ ಜ್ಞಾನಕ್ಕೆ ಅಜ್ಞಾನ ನಾಶಕತ್ವ ಗುಣವು ಇರುವುದಾದರೆ ಅವಿದ್ಯಾದಿ ಆವರಣಗಳನ್ನು ತನ್ನ ಸ್ವಪ್ರತಿಭೆಯಿಂದಲೇ ಈಗಲೂ ನಾಶ ಮಾಡಬೇಕು. ತದರ್ಥವಾಗಿ ವೃತ್ತಿ ಜ್ಞಾನವನ್ನು ಅಪೇಕ್ಷಿಸುವುದಕ್ಕೆ ಕಾರಣವಿಲ್ಲ. ಅಜ್ಞಾನ ನಾಶಕತ್ವರೂಪ ಸಾಮರ್ಥ್ಯವಿಲ್ಲದಿದ್ದರೆ ಅದು **ಜ್ಞಾನ**ವೆಂದು ಕರೆಯಲ್ಪಡುವುದಕ್ಕೇ ಅರ್ಹವಾದ ಪದಾರ್ಥವಲ್ಲ. ಅಂಧಕಾರವನ್ನು ಪರಿಹರಿಸದಿರುವ ಪದಾರ್ಥವು ದೀಪವೆಂದೆನಿಸುವುದೇ ? ಹೀಗಿರುವಲ್ಲಿ ಮುಕ್ತಿಯಲ್ಲೂ ಪರಬ್ರಹ್ಮನನ್ನು ತಾನೇ ಅದು ಹೇಗೆ ಸಾಕ್ಷಾತ್ಕರಿಸುವುದು ? ಆದುದರಿಂದ ಜೀವನು ಜ್ಞಾನಸ್ವರೂಪನು ಎಂಬ ತಮ್ಮ ನಿರೂಪಣೆಯು ಬಹು ಸಂಶಯಾಸ್ಪದವಾಗಿರುವುದು. ಜೀವನು ಜ್ಞಾನಸ್ವರೂಪನಾಗಿದ್ದರೆ ಅವಿದ್ಯಾ ನಾಶಾರ್ಥವಾಗಿ ಜ್ಞಾನಾಂತರವನ್ನು ಅಪೇಕ್ಷಿಸಲಾರನು.

**ಉತ್ತರ**— ಲೋಕಾನುಭವ ವಿಚಕ್ಷಣರು ಹೀಗೆ ಸಂದೇಹಪಡಲಾರರು. ಒಂದು ಕಥೆಯನ್ನು ಕೇಳಿರಿ. ಗರಡಿಸಾಧನೆಯನ್ನು ಮಾಡಿ ಬಲಸಂಪನ್ನನಾದ ಒಬ್ಬ ಮಲ್ಲನು ವೃಷಭದಂತೆ ಠೀವಿಯಿಂದ ಸಂಚರಿಸುತ್ತಾ, ತನ್ನ ಭುಜಗಳನ್ನು ಕಟಾಕ್ಷದಿಂದ ನೋಡಿಕೊಳ್ಳುತ್ತಾ, ರಾಜಮಾರ್ಗದಲ್ಲಿ ರಾಜದರ್ಶನಾರ್ಥವಾಗಿ ಪ್ರಯಾಣ ಮಾಡುತ್ತಿದ್ದನು. ಆಗ ಅವನ ದುರದೃಷ್ಟದಿಂದ ಪೂರ್ವದಲ್ಲಿಯೇ ಅಶನಿಘಾತದಿಂದ ಶಿಥಿಲವಾದ ತಳಪಾಯವುಳ್ಳ ಒಂದು ದೊಡ್ಡ ಮಹಡಿ ಮನೆಯ ಗೋಡೆಯು ಅವನ ಮೈಮೇಲೆ ಬಿತ್ತು. ಗೋಡೆಯು ಮಲ್ಲನ ಮೈಮೇಲೆ ಬಿದ್ದು ತಾನೂ ಛಿನ್ನಭಿನ್ನವಾಗಿ ಒಡೆದು ಹೋಯಿತು. ಮಲ್ಲನು ಮಣ್ಣಿನಿಂದ ಮುಚ್ಚಲ್ಪಟ್ಟನು. ಆದರೂ ಆಜಾನುದೀರ್ಘವಾದ ಅವನ ಎರಡು ಬಾಹುಗಳು ಮಣ್ಣಿನಿಂದ ಮುಚ್ಚಲ್ಪಡದೆ ಹೊರಗೆ ಉಳಿದವು. ಸ್ವಲ್ಪ ಕಾಲ ಮೂರ್ಛೆ ಹೊಂದಿದ ಮಲ್ಲನು

ಎಚ್ಚತ್ತು, ಬಹು ಶ್ರಮದಿಂದ ತನ್ನ ಎರಡೂ ಹೊರಗಿರುವ ಕೈಗಳಿಂದ ತನ್ನ ಮೈಮೇಲಿರುವ ಮಣ್ಣುಗುಪ್ಪೆಗಳನ್ನು ತೆಗೆಯುವುದಕ್ಕೆ ಆರಂಭಿಸಿದನು. ಮಲ್ಲನು ಬಲಿಷ್ಠನಾದರೂ ಈ ಕಾರ್ಯವು ಅವನಿಂದ ದುರ್ಘಟವಾಯಿತು. ಸ್ವಲ್ಪ ಕಾಲ ದಲ್ಲಿಯೇ ದಯಾಳುಗಳಾದ ಪಥಿಕರೂ, ಪಥಿಕರಿಂದ ನಡೆದ ಅನಾಹುತವನ್ನು ತಿಳಿದು ರಾಜನಿಂದ ಆಜ್ಞಪ್ತರಾಗಿ ಕ್ಷಿಪ್ರದಲ್ಲಿ ಪ್ರಾಪ್ತರಾದ ರಾಜಭಟರೂ ಸೇರಿ ಮಲ್ಲನ ಬೆನ್ನಿನ ಮೇಲಿರುವ ಭಾರವನ್ನು ಉಪಾಯದಿಂದ ಕ್ರಮವಾಗಿ ತೆಗೆದರು. ಭಾರವು ಕಮ್ಮಿಯಾದ ಹಾಗೆಲ್ಲಾ ಮಲ್ಲನು ತನ್ನ ದೇಹಬಲವನ್ನು ಉಪಯೋಗಿಸುವುದಕ್ಕೆ ಆರಂಭಿಸಿದನು. ಕೊನೆಗೆ ಇನ್ನೂ ಒಂದೆರಡು ಕಲ್ಲುತುಂಡುಗಳು ತನ್ನನ್ನು ಅದುಮಿ ಕೊಂಡಿರುವಾಗಲೇ ಧೀರನಾದ ಮಲ್ಲನು ಈ ಅವಮಾನವನ್ನು ಸಹಿಸಲಾರದೆ ಆ ಯಾವತ್ತು ಭಾರವನ್ನು ಝಾಡಿಸಿ ಆಚೆಗೆ ತಳ್ಳಿ ಎದ್ದು, ರಾಹುಮುಕ್ತನಾದ ಸೂರ್ಯನಂತೆ ಹೊರಗೆ ನಿಂತನು. ಮಹಾರಾಜರು ಮೈಮೇಲೆ ಮನೆಯೇ ಬಿದ್ದರೂ ಮರಣವನ್ನು ಹೊಂದದ ತಮ್ಮ ಸಂಸ್ಥಾನದ ಮಲ್ಲನ ಬಲಪರಾಕ್ರಮಗಳಿಂದಲೂ ರಾಜಭಕ್ತಿಯಿಂದಲೂ ಸುಪ್ರೀತರಾಗಿ ಬಹುಮಾನ ಕೊಟ್ಟು, ಯಾವಜ್ಜೀವವೂ ಕಾರ್ಪಣ್ಯವಿಲ್ಲದೆ ಜೀವಿಸುವುದಕ್ಕೆ ಅನುಕೂಲವಾಗುವಂತೆ ವೇತನವನ್ನು ಕಲ್ಪಿಸಿ ದರು. ಮೊದಲೇ ಧೀರನಾದ ಮಲ್ಲನು ರಾಜಬಹುಮಾನದಿಂದ ಕೃತಕೃತ್ಯನಾಗಿ ಕೊಬ್ಬಿದ ಮದ್ದಾನೆಯಂತೆ ರಾಜಧಾನಿಯಲ್ಲಿ ಸುಖದಿಂದ ಸಂಚರಿಸುತ್ತಿದ್ದನು.

ಮುಕ್ತಿಯೋಗ್ಯ ಜೀವನ ಚರಿತ್ರೆಯೂ ಹೀಗೆಯೇ ಇರುವುದು. ಸ್ವರೂಪ ದಿಂದಲೇ ಜೀವನು ಜ್ಞಾನ, ಆನಂದ, ಬಲಾದಿ ಬಹು ಗುಣಸಂಪನ್ನನಾಗಿ ಪರ ಮಾತ್ಮನ ಅಧೀನವಾಗಿಯೇ ಅನಾದಿ ಕಾಲದಿಂದಲೂ ಇರುವನು. ಆದರೆ ಇವನ ಪರಾಕ್ರಮಕ್ಕೂ ಮೀರಿದ, ಎಂದರೆ ಇವನ ಸ್ವರೂಪಜ್ಞಾನದಿಂದ ನಾಶವಾಗ ದಷ್ಟು ಪ್ರಬಲವಾದ, ಮತ್ತು ಇವನ ಸ್ವರೂಪಜ್ಞಾನವನ್ನೂ ಪ್ರತಿಬದ್ಧವನ್ನಾಗಿ ಮಾಡುವಷ್ಟು ಸಾಮರ್ಥ್ಯೋಪೇತವಾದ ಪ್ರಕೃತಿ, ಅವಿದ್ಯಾ, ಕಾಮ, ಕರ್ಮಾದಿ ರೂಪವಾದ ಅನೇಕ ಆವರಣಗಳಿರುವುವು. ಅಷ್ಟೇ ಅಲ್ಲ ! ಬಂಧಕವಾದ ಈಶ್ವರೇ ಚ್ಛೆಯೇ ಒಂದು ಆವರಣವಾಗಿರುವುದು. ಈ ಆವರಣಗಳಿಂದ, ಕವಚದಿಂದ ಆವೃತ ನಾದವನಿಗೆ ತನ್ನ ಶರೀರವೇ ಕಾಣದಂತೆ, ಜೀವನಿಗೆ ತನ್ನ ಸ್ವರೂಪ ಧರ್ಮಗಳ ಜ್ಞಾನವೇ ಆಗಲಾರದು. ಸ್ವರೂಪಸುಖವೂ ಅಭಿವ್ಯಕ್ತವಾಗಲಾರದು. ಮತ್ತು ಸ್ವರೂಪ ಜ್ಞಾನದಿಂದ ಪರಮಾತ್ಮನನ್ನೂ, ತನ್ನ ಅಸ್ವಾತಂತ್ರ್ಯಾದಿ ಧರ್ಮಗಳನ್ನೂ ತಿಳಿಯಲಾರನು. " ಅಹಂ " " ಅಹಂ " ಎಂದರೆ "ನಾನು ಇದ್ದೇನೆ " ಎಂಬ ಜ್ಞಾನವು ಒಂದು ಇರುವುದು. ನಾನು ಇದ್ದೇನೋ ಇಲ್ಲವೋ ಎಂಬ ಸಂಶಯವು ಯಾರಿಗೂ ಯಾವ ಕಾಲದಲ್ಲೂ ಬರಲಾರದು. ಜಾಗ್ರತ್ಸ್ವಪ್ನಸುಷುಪ್ತಿ ಮೂರ್ಛಾ ಮರಣಾದಿ ಸರ್ವ ಅವಸ್ಥೆಗಳಲ್ಲಿಯೂ " ನಾನು ಇದ್ದೇನೆ " ಎಂಬ ಸ್ವರೂಪ ಜ್ಞಾನವು ಸ್ವಲ್ಪವೂ ಲೋಪವನ್ನು ಹೊಂದದಂತೆ ತೃಣಾಂತ ಸರ್ವ ಜೀವರು

ಗಳಿಗೂ ಇರುವುದು.* ಇಂಥ "ಅಹಂ" ಜ್ಞಾನವು ಪಂಚೇಂದ್ರಿಯಗಳಿಂದ ಜನ್ಯವಾದುದಲ್ಲ. ಮನಸ್ಸಿನ ಆಲೋಚನೆಯಿಂದಲಾಗಲೀ ಅನುಮಾನದಿಂದಲಾಗಲೀ ಹುಟ್ಟಿದ್ದಲ್ಲ. ಆಗಮಗಳಿಂದಲೂ ಉತ್ಪನ್ನವಾದುದಲ್ಲ. ಇದು ಸಾಕ್ಷಾತ್ಸ್ವರೂಪಭೂತವಾದ ಜ್ಞಾನವು. ತನ್ನ ಸ್ವರೂಪಭೂತವಾದ ಮನಸ್ಸಿನಿಂದ "ನಾನು ಇದ್ದೇನೆ" ಎಂದು ಜೀವನು ನಿಸ್ಸಂಶಯವಾಗಿ ತನ್ನನ್ನು ತಾನೇ ತಿಳಿಯುತ್ತಾನೆ † ಆದರೂ ಜ್ಞಾನ ಆನಂದಾದಿ ತನ್ನ ವಿಶೇಷ ಧರ್ಮಗಳನ್ನು ತಿಳಿಯಲಾರನು. ಮತ್ತು ಪ್ರಕೃತ್ಯಾದಿ ಆವರಣಗಳಲ್ಲಿ ಸಿಕ್ಕಿ ಬಿದ್ದು, ಪ್ರಕೃತಿ ಕಾರ್ಯನಿರ್ಮಿತವಾದ ನಾನಾ ದೇಹಗಳಲ್ಲಿ ವಿಷಯ ಸಂಯೋಗಾದಿಗಳಿಂದ ಉತ್ಪನ್ನವಾದ ಸುಖ ದುಃಖಗಳನ್ನು ತನ್ನ ಸ್ವರೂಪೇಂದ್ರಿಯಗಳಿಂದಲೇ ಅನುಭವಿಸುತ್ತಾ ಇರುತ್ತಾನೆ. ಈ ಭೋಗ ಶಕ್ತಿಯೂ ಜೀವನ ಸ್ವರೂಪಭೂತವಾದುದು; ಮತ್ತು ಸರ್ವ ಚೇತನರಿಗೂ ಸರ್ವಾವಸ್ಥೆಗಳಲ್ಲಿಯೂ ಸರ್ವ ಕಾಲದಲ್ಲಿಯೂ ಜೊತೆಯಲ್ಲಿಯೇ ಇರುವುದು ಹಾಗೂ ತನ್ನ ದೇಹಾದಿಗಳನ್ನು **ಪ್ರೇರಣೆ** ಮಾಡುವುದಕ್ಕೆ ಬೇಕಾಗುವ ಕ್ರಿಯಾಶಕ್ತಿಯು ಅತ್ಯಲ್ಪವಾಗಿ ( ಪ್ರತಿರುದ್ಧವಾದ ಮಲ್ಲನ ದೇಹಬಲದಂತೆ ) ಪ್ರಕಟವಾಗಿರುವುದು.

ಈ ರೀತಿಯಾಗಿ ತನ್ನ ಸ್ವರೂಪ ಧರ್ಮಗಳ ಜ್ಞಾನವಿಲ್ಲದೆ, ಸ್ವರೂಪಸುಖಾನುಭವರಹಿತನಾಗಿ ಕುತ್ಸಿತವಾದ ದೇಹಬಂಧದಲ್ಲಿ ಸಿಕ್ಕಿ ಬಿದ್ದಿರುವ ಜೀವನು ಕಾರುಣಿಕರಾದ ಪಥಿಕರಂತಿರುವ ಕೃಷ್ಣವೇದವ್ಯಾಸರು, ಬ್ರಹ್ಮಾದಿ ದೇವತೆಗಳು ಮತ್ತು ಶ್ರೀಮದಾನಂದತೀರ್ಥರೇ ಮೊದಲಾದ ಗುರುಗಳಿಂದ ಉಪದಿಷ್ಟವಾದ ಯಥಾರ್ಥವಾದ ಬಾಹ್ಯ ಜ್ಞಾನವುಳ್ಳವನಾಗಿ, ತನ್ನ ನಿಜ ಸುಖವನ್ನು ಪಡೆಯಬೇಕೆಂಬ ಉತ್ಸಾಹದಿಂದ ಸಹಿತನಾಗಿ, ಅತ್ಯಲ್ಪವಾದ ಸ್ವರೂಪಭೂತವಾದ ತನ್ನ ಕ್ರಿಯಾಕರಣ ಶಕ್ತಿಯಿಂದ ಮನ ಆದಿ ಇಂದ್ರಿಯಗಳನ್ನು ಪ್ರೇರಿಸಿ ಸಂಧ್ಯಾದಿ ನಿತ್ಯಕರ್ಮಗಳು, ಶ್ರವಣ, ಮನನ, ಭಗವದ್ಭಕ್ತಿಯೋಗವೇ ಮೊದಲಾದ ಪರಬ್ರಹ್ಮನ ಪ್ರಸಾದ ಜನಕವಾದ ಸ್ವಭಾವಾನುಗುಣವಾದ ಆಚರಣೆಯಲ್ಲಿ ರತನಾಗುತ್ತಾನೆ. ಈ ರೀತಿಯಾದ ಸದಾಚಾರದಿಂದಲೂ, ಜ್ಞಾನ ಭಕ್ತಿಗಳಿಂದ ಸಹಿತವಾದ ತಪಸ್ಸಿನಿಂದಲೂ ಪ್ರೀತನಾದ ಪರಮಾತ್ಮನು ತತ್ವನಿಯಾಮಕರಾದ ದೇವತೆಗಳ ವಿಜ್ಞಾಪನೆಯನ್ನೂ ಆದರಿಸಿ, "ವಿನಂಮೋಚಯಾಮಿ" ಎಂದು ಸಂಕಲ್ಪಪೂರ್ವಕವಾಗಿ ಈ ಜೀವನಿಗೆ

---

* ಬೋಸ್ ನಾಮಕ ಸುಪ್ರಸಿದ್ಧನಾದ ಬಂಗಾಳಾ ದೇಶದ ಭೌತಿಕ ಶಾಸ್ತ್ರಜ್ಞನು, ವೃಕ್ಷಗಳೂ ಕೂಡ. ಕೊಡಲಿಯನ್ನು ಹಿಡಿದುಕೊಂಡು ಎದುರಿಗೆ ಬರುವ ಪುರುಷನನ್ನು ನೋಡಿ, ಭೀತಿಯಿಂದ ಸಂಕೋಚವನ್ನು ಹೊಂದುತ್ತವೆ ಎಂದು ಪರೀಕ್ಷಾಪೂರ್ವಕವಾಗಿ ತೋರಿಸಿರುತ್ತಾನೆ.

† ಶಂಕರಾಚಾರ್ಯರೂ ಸಹ ದ್ವೈತಿಗಳು ಹೇಳುವಂತೆಯೇ "ನಾನು" ಇರುತ್ತೇನೆಯೋ ಇಲ್ಲವೋ ಎಂದು ಯಾರು ಯಾವಾಗಲೂ ಸಂಶಯವನ್ನು ಹೊಂದುವುದಿಲ್ಲವೆಂದು ಅಂಗೀಕರಿಸಿರುತ್ತಾರೆ.

ಬ್ರಹ್ಮಾಪರೋಕ್ಷಜ್ಞಾನವನ್ನು ಕೊಟ್ಟು, ಪ್ರಕೃತಿ ಬಂಧವನ್ನು ಬಿಡಿಸಿ ನಿರಂತರ ನಿಜಾನಂದಾನುಭವವನ್ನು ಅನುಗ್ರಹಿಸುವನು. ಎಂದರೆ ಆಯಾಯ ಜೀವನಿಗೆ ತನ್ನ ತನ್ನ ಸ್ವರೂಪಭೂತವಾದ ಜ್ಞಾನಸುಖಾದಿ ಸರ್ವ ಧರ್ಮಗಳನ್ನೂ ಅಭಿವ್ಯಕ್ತವಾಗುವಂತೆ ಮಾಡಿ ಶಾಶ್ವತವಾದ ವೈಕುಂಠಾದಿ ಉತ್ತಮ ಸ್ಥಾನಗಳಲ್ಲಿ ಅವರಿಗೆ ವಾಸವನ್ನೂ ಕಲ್ಪಿಸುವನು. ಮತ್ತು ನಿಜಭೃತ್ಯಭಾವದಿಂದ ಸಹಿತರಾದ ಮುಕ್ತರಿಂದ ಈಡ್ಯನಾಗಿ ಸರ್ವ ಕಾಲದಲ್ಲೂ ಸರ್ವೇಶ್ವರನಾಗಿರುವನು.

ಪ್ರಕೃತಿಬಂಧದಿಂದ ನಾನಾ ದುಃಖಗಳನ್ನು ಅನುಭವಿಸಿದರೂ ಜೀವಸ್ವರೂಪವು ಮರಣ ಹೊಂದದ ನಿತ್ಯವಸ್ತುವಾದುದರಿಂದ ಸ್ವರೂಪನಾಶವಾಗತಕ್ಕ ಯಾವ ವಿಕಾರವನ್ನೂ ಹೊಂದಲಿಲ್ಲ. ಸ್ವಲ್ಪ ಭಾರವನ್ನು ಮೇಲಿಟ್ಟು ಅಮುಕಿದರೆ ರಬ್ಬರಿನ ಚೆಂಡು ಸಂಕೋಚಭಾವವನ್ನು ಹೊಂದುವುದು. ಭಾರವನ್ನು ತೆಗೆದು ಬಿಟ್ಟರೆ ದುಂಡಾಗಿ ತನ್ನ ಪೂರ್ವಸ್ಥಿತಿಯನ್ನು ಹೊಂದುವುದು. ಇದೇ ರೀತಿ ಸಂಸಾರಾವಸ್ಥೆಯಲ್ಲಿ ದುಃಖಭೋಗಗಳಿಂದ ಅನಿಷ್ಟವಾದ ಸಂಕೋಚಭಾವವನ್ನು ಪದೇ ಪದೇ ಹೊಂದುತ್ತಿದ್ದ ಈ ಜೀವನು ಪ್ರಕೃತಿಬಂಧವು ನಿರ್ಮುಕ್ತವಾದ ನಂತರ ಮೇಘ ಸಮೂಹವನ್ನು ನಾಶ ಮಾಡಿ ಮೇಲೆ ಉದಯಿಸುವ ಸೂರ್ಯನಂತೆ, ಅಥವಾ ಮಣ್ಣಿನ ರಾಶಿಯನ್ನು ಕೊಡವಿಕೊಂಡು ಮೇಲಕ್ಕೇಳುವ ಮಲ್ಲನಂತೆ, **ತನ್ನ ನಿಜ ಸ್ವರೂಪದ ಆವಿರ್ಭಾವವನ್ನು ಸಮಗ್ರವಾಗಿ ಹೊಂದಿ ಸ್ವಯೋಗ್ಯವಾದ ಸುಖದಿಂದ ಪೂರ್ಣನಾಗಿರುವನು.**

ಇಲ್ಲಿ ತಾನೇ ವಿಚಾರವು! "ಅಹಂ" ಪದಾರ್ಥನಾದ ಈ ಚೇತನನು ಸ್ವಭಾವತಃ ಪರಬ್ರಹ್ಮನೇ ಆಗಿದ್ದರೆ, ಪ್ರಕೃತಿಬಂಧದಿಂದ ಅನಭಿವ್ಯಕ್ತವಾದ ಬ್ರಹ್ಮತ್ವವುಳ್ಳವನಾಗಿ ಪ್ರಕೃತಿಬಂಧವು ವಿನಿರ್ಮುಕ್ತವಾದ ನಂತರ ಪುನಃ ತನ್ನ ಸ್ವಾಭಾವಿಕವಾದ ಬ್ರಹ್ಮತ್ವವನ್ನು ಹೊಂದುವನು ಎಂದು ಹೇಳಬಹುದಾಗಿತ್ತು.*

---

*ಯದ್ಯಪಿ ಇದು ಅದ್ವೈತತತ್ವವಲ್ಲ. ನಿರ್ವಿಕಾರನಾದ ಬ್ರಹ್ಮನು ಅನಭಿವ್ಯಕ್ತನಾಗಿರುವುದು, ನಂತರ ಅಭಿವ್ಯಕ್ತನಾಗುವದು ಎಂಬ ಅವಸ್ಥಾವಿಶೇಷವನ್ನು ಅದ್ವೈತಿಗಳು ಕಂಠತಃ ಒಪ್ಪಲಾರರು. ಈ ಸಂಕಟ ಪರಿಹಾರಾರ್ಥವಾಗಿ ಅವರು ಪ್ರಕೃತಿಬಂಧಾದಿಗಳು ಮಿಥ್ಯಾ ( ಇರುವದೇ ಇಲ್ಲ ) ಎಂದು ವಾದಿಸುತ್ತಾರೆ. ಜಗನ್ಮಿಥ್ಯಾತ್ವವು " ವಿಶ್ವಂಸತ್ಯಂ " ಮುಂತಾದ ಆಗಮಗಳಿಂದ ನಾನು ಸುಖಿ ದುಃಖಿವನ್ನು ಅನುಭವಿಸುವವನು ಇತ್ಯಾದಿ ಚೇತನಾನುಭವಗಳಿಂದ ಮತ್ತು ಪ್ರತ್ಯಕ್ಷಾದಿ ಪ್ರಮಾಣಗಳಿಂದ ಹತವಾದ ದುಸ್ತತ್ವವು. ಆದುದರಿಂದ ಜಗತ್ತು ಸತ್ಯವಾದ ಮೇಲೆ, ಸತ್ಯಬಂಧದಲ್ಲಿ ಸಿಕ್ಕಿ ಬಿದ್ದಿರುವ "ಬ್ರಹ್ಮ" ನೆಂಬ ಒಬ್ಬ ಚೇತನನು ಇರುವನು ಎಂಬ ಸ್ಥಿತಿಗೆ ಅದ್ವೈತಮತವು ಪ್ರಾಪ್ತವಾಯಿತು. ಅಂಥ ಚೇತನನು " ನಾನು ಇದ್ದೇನೆ " ಎಂದು ಸಾಮಾನ್ಯವಾಗಿ ತನ್ನನ್ನು ಈಗ ತಿಳಿಯುತ್ತಾನೆಯೇ ಹೊರತು " ನಾನು ಬ್ರಹ್ಮನು " ಎಂದು ಈಗ ತಿಳಿಯಲಾರನು ಎಂಬುದು ಅನುಭವಸಿದ್ಧವಾಗಿರುವದರಿಂದ ಚೇತನನ ಬ್ರಹ್ಮತ್ವವು ಈಗ ಪ್ರಕಟವಾಗಿರುವ

ಅಥವಾ ರಾಮಾನುಜಾಚಾರ್ಯರ ಮತವು ನಿಜವಾಗಿದ್ದರೆ, ಪ್ರಕೃತಿಬಂಧದಿಂದ ಪ್ರತಿರುದ್ಧವಾದ **ಪರಬ್ರಹ್ಮಸಾಮ್ಯವು** ಬಂಧನಿವೃತ್ತಿಯಾದ ನಂತರ ಆವಿರ್ಭವಿಸುವುದೆಂದು ಹೇಳಬಹುದು. ಆದರೆ ಇವೆರಡೂ ದುರಂತ ದೋಷದೂಷಿತವಾದ ದುಸ್ತತ್ತ್ವಗಳು. "ಪೂರ್ಣಮದಃ" "ದೇವಮಹಿಮ್ನಃ ಪರಮಂತಮಾಪ' ಇತ್ಯಾದಿ ಶ್ರುತಿವಿರೋಧವು ಹಾಗಿರಲಿ. ಈ ಮತಗಳ ತುಚ್ಛತೆಯನ್ನು ಒಂದೇ ಒಂದು ಯುಕ್ತಿಯಿಂದ ತಿಳಿಯಬಹುದು. ಹೇಗೆಂದರೆ, ಪರಬ್ರಹ್ಮನೆಂದರೆ ಅನಾದಿನಿಧನವಾದ ಪರಿಪೂರ್ಣ ವಸ್ತುವೆಂದರ್ಥವು. ಅದು ನಿರ್ಗುಣವೋ ಸದ್ಗುಣಭರಿತವೋ ಅದರ ವಿಚಾರವೂ ಹಾಗಿರಲಿ. **ಯಾವ ಪ್ರಕಾರದಲ್ಲಿಯಾದರೂ** ಪರಿಪೂರ್ಣವಾದ ನಿರ್ವಿಕಾರವಾದ ಸ್ವಯಂಪ್ರಕಾಶವಾದ ಬ್ರಹ್ಮವಸ್ತುವು **ಬಂಧಕ್ಕೆ ವಶವಾಗಲಾರದು** ಅಥವಾ **ಅನಭಿವ್ಯಕ್ತತೆಯನ್ನು** ಹೊಂದಲಾರದು. ಇತರ ಸರ್ವ ಧರ್ಮಗಳೂ ಪ್ರತಿಬದ್ಧವಾಗಿ ಅಲ್ಪತೆಯನ್ನು ಹೊಂದಬಹುದು. **ಬ್ರಹ್ಮತ್ವ**ವೆಂಬ ಧರ್ಮವು ಆತ್ಮನಾಶವಾಗದಂತೆ ಅನಭಿವ್ಯಕ್ತತೆಯನ್ನು ಹೊಂದಲಾರದು. ಬ್ರಹ್ಮತ್ವವು ಎಂದರೆ ಪರಿಪೂರ್ಣತೆಯು. ಅದು ಪ್ರತಿರುದ್ಧವಾಯಿತು ಎಂದು ಹೇಳಿದರೆ ವಿದ್ವಾಂಸರು ಹೇಳುವರು.— "ಪ್ರತಿರುದ್ಧವಾಗುವ ಅಂಥ ದುರ್ಬಲ ಧರ್ಮವನ್ನು ಪೂರ್ಣತ್ವವೆಂದು ಕರೆಯಬಹುದೇ ? ಪೂರ್ಣವಾದ ವಸ್ತುವು ಪ್ರತಿರುದ್ಧವಾದ ಸ್ಥಿತಿಯನ್ನು ಹೊಂದಲಾರದು. ಪ್ರತಿರುದ್ಧವಾದರೆ ಅದು ಪೂರ್ಣ ವಸ್ತುವೇ ಅಲ್ಲ. ಅಲ್ಪಬಲವು, ಅಲ್ಪಜ್ಞಾನವು, ಅಲ್ಪಸುಖವು ಪ್ರತಿಬದ್ಧವಾಗಿ ಅನಭಿವ್ಯಕ್ತವಾದ ಅವಸ್ಥೆಯನ್ನು ಹೊಂದಬಹುದು. ಪೂರ್ಣ ಬಲಸ್ವರೂಪವು, ಪೂರ್ಣಜ್ಞಾನಸ್ವರೂಪವು ಅಥವಾ ಪೂರ್ಣಾನಂದಸ್ವರೂಪವು ಯಾವ ಕಾರಣದಿಂದಲೂ ತನ್ನ ಸ್ವರೂಪನಾಶವು ಆಗದಂತೆ ಅವಸ್ಥಾಂತರವನ್ನು ( ಅನಭಿವ್ಯಕ್ತತೆ ಎಂಬ ಬೇರೆ ಅವಸ್ಥೆಯನ್ನು ) ಹೊಂದಲಾರದು," ಎಂದು ಕೇಳುವರು. ಈ ದೂಷಣೆಗೆ ಸಮಾಧಾನವನ್ನು ಮೂರು ಲೋಕದಲ್ಲಿ ಯಾರೂ ಹೇಳಲಾರರು. ಭೀಮಗದೆಯಂತಿರುವ ಈ ದೋಷವು ರಾಮಾನುಜಾಚಾರ್ಯರ " ಬ್ರಹ್ಮಸಾಮ್ಯ " ವಾದದ ಮೇಲೂ ಬಂದೊದಗುವುದು. ಹೇಗೆಂದರೆ, ( ಆನಂದದಲ್ಲಿ ) ಬ್ರಹ್ಮಸಾಮ್ಯವೆಂದರೆ **ಬ್ರಹ್ಮನಂತೆ ಪೂರ್ಣತೆಯು** ಎಂದರ್ಥವು. ಹಾಗಾದ ಮೇಲೆ ಬ್ರಹ್ಮನ ಬ್ರಹ್ಮತ್ವವು ಪ್ರತಿರುದ್ಧವಾಗುವುದು, ಅಥವಾ ಅನಭಿವ್ಯಕ್ತತೆ ಎಂಬ ಅವಸ್ಥೆಯನ್ನು ಹೊಂದುವುದು ಎಂದು ಹೇಳುವ ಮತದಲ್ಲಿ ಪ್ರಾಪ್ತವಾದ ಸರ್ವ ದೋಷವೂ ನಿರ್ವಿವಾದವಾಗಿ

---

ದಿಲ್ಲ ಮುಂದೆ ಪ್ರಕಟವಾಗುವದು ಎಂದೇ ಅವಶ್ಯವಾಗಿ ಒಪ್ಪಬೇಕಾಗುವದು. ಇಂಥ ಫಲಿತಾರ್ಥವು ಇಲ್ಲಿ ನಿರೂಪಿಸಲ್ಪಟ್ಟಿರುವದು. ನಾನು ಎಂಬುದು ಚೇತನವೇ ಅಲ್ಲ. ಅಂತಃಕರಣವೇ "ನಾನು" ಎಂಬ ಪದಾರ್ಥವು ಎಂದು ಹೇಳುವದು ಉಳಿಯಿತು. ಅದು ಶುದ್ಧಸಾಂಖ್ಯವಾದವು. ಶಂಕರಾಚಾರ್ಯರು ತಮ್ಮ ಮತವೂ ಅಷ್ಟರಲ್ಲೇ ಪರ್ಯವಸಾನವಾಗುವದೆಂದು ತಿಳಿಯದೆ ಸಾಂಖ್ಯಮತವನ್ನು ಖಂಡಿಸಿದರು. ಜಡಕ್ಕೆ ಬಂಧವು ಜಡಕ್ಕೆ ಮುಕ್ತಿಯು ಎಂದು ಹೇಳುವ ಈ ಮತದಲ್ಲಿ ಅನಂತ ದೋಷಗಳಿರುತ್ತವೆ.

ಪ್ರಾಪ್ತವಾಗುವುದರಿಂದ ಈ ಮತವೂ ಪ್ರಾಜ್ಞರಿಂದ ಹೇಯವಾದುದು. ಕಿಂಚ ಈ ಮತದ ರೀತಿಯಿಂದ ಸ್ವರೂಪತಃ ಬ್ರಹ್ಮಸಮಾನನಾದ ಒಬ್ಬ ಚೇತನನು ಸಂಸಾರ ಬಂಧದಲ್ಲಿ ಸಿಕ್ಕಿ ಬಿದ್ದು ಬಿಡಿಸಿಕೊಳ್ಳುವುದಕ್ಕೆ ಸಾಮರ್ಥ್ಯವಿಲ್ಲದೇ ತನ್ನ ಸಮಾನನಾದ ವೈಕುಂಠಾದಿ ಲೋಕಗಳಲ್ಲಿರುವ ( ವಿಷ್ಣುವೆಂಬ ) ಮತ್ತೊಬ್ಬ ಚೇತನನನ್ನು ಸಹಾಯಾರ್ಥವಾಗಿ ಕೂಗುವನು. ಆ ವಿಷ್ಣುವೂ ಪ್ರಕೃತಿಬದ್ಧನಾದ ಜೀವನಿಗೆ ಇರುವಷ್ಟೇ ಬಲವುಳ್ಳವನಾದುದರಿಂದ, ಅವನು ತಾನೇ ಮೃತ್ಯುರೂಪವಾದ ಸಂಸಾರಸಾಗರದಿಂದ ತನ್ನ ಸಮಾನರಾದ ಚೇತನರನ್ನು ಉದ್ಧರಿಸುವುದು ಹೇಗೆ ಸಾಧ್ಯವಾಗುವುದು * ಆದುದರಿಂದ ಈ ಮತದ ರೀತಿಯಲ್ಲಿ ಒಬ್ಬರಿಗೂ ಮುಕ್ತಿಯೇ ಇಲ್ಲವೆಂದು ಪ್ರಾಪ್ತವಾಗುವುದರಿಂದ ಇದನ್ನೂ ಸರ್ವಥಾ ನಿರಾಕರಿಸಬೇಕಾಯಿತು.

ಅಥವಾ ಈಗ ಪೂರ್ಣತೆಯು ಜೀವನಿಗೆ ಸರ್ವಥಾ ( ಅನಭಿವ್ಯಕ್ತ ಸ್ಥಿತಿಯಲ್ಲಿಯೂ ಕೂಡ ) ಇರುವುದೇ ಇಲ್ಲ. **ನೂತನವಾಗಿ** ಪ್ರಕೃತಿಬಂಧವು ನಿವೃತ್ತಿಯಾದ ನಂತರ ಜೀವರುಗಳಿಗೆ ಪರಮಾತ್ಮನ ಅನುಗ್ರಹದಿಂದ ಬರುವುದು ಎಂದು ಹೇಳುವುದು ಸರ್ವಥಾ ಅನ್ಯಾಯವಾದುದು. ಅಸತ್ಕಾರ್ಯವಾದಿಗಳಿಗೆ ಉಚಿತ

---

***ಪ್ರಶ್ನೆ**— ಸ್ವಾಮೀ ! ಇದೇನು ತಪ್ಪು ಮಾತು ? ನನ್ನ ಶರೀರದ ಮೇಲೆ ಭಾರವಾದ ಗೋಣಿ ಚೀಲದ ಮೂಟೆಯು ಬಂದು ಬಿದ್ದರೆ, ಕೆಳಗಿರುವ ನಾನು ಎತ್ತುವದು ಕಷ್ಟವಾದರೂ ನನ್ನ ಸಮಾನ ಬಲವುಳ್ಳ ಹೊರಗಿರುವ ಮತ್ತೊಬ್ಬ ನನ್ನ ಮಿತ್ರನು ಅದನ್ನು ತೆಗೆಯಲು ಸಮರ್ಥನಾಗುವನು. ಅಥವಾ ಅವನೂ ನಾನೂ ಇಬ್ಬರೂ ಸೇರಿ ಆ ಭಾರವನ್ನು ನೂಕಬಹುದು. ಹೀಗಿರುವಲ್ಲಿ ಬ್ರಹ್ಮ ಸಮಾನನಾದ ಶರೀರಸ್ಥ ಜೀವಚೇತನನು ಸಂಸಾರ ಬಂಧವನ್ನು ಬಿಡಿಸಿಕೊಳ್ಳುವುದರಲ್ಲಿ ಸಮರ್ಥನಾಗದಿದ್ದರೂ, ಸಂಸಾರದಿಂದ ಹೊರಗಿರುವ ಜೀವಚೇತನನ ಸಮಾನನೇ ಆದ ವೈಕುಂಠಸ್ಥ ವಿಷ್ಣುಚೇತನನು ಎಲ್ಲಾ ಜೀವರುಗಳನ್ನು ಉದ್ಧಾರ ಮಾಡುವದರಲ್ಲಿ ಅನುಪಪತ್ತಿಯು ಏನು ?

**ಉತ್ತರ**— ನಿಮಗೆ ಭಾರವಾದ ಮೂಟೆಯನ್ನು ತಳ್ಳಲು ಸಾಮರ್ಥ್ಯವಿಲ್ಲದಿದ್ದರೆ, ನಿಮ್ಮ ಸಮಾನರಾದ ಮತ್ತೊಬ್ಬರಿಗೂ ಅದನ್ನು ಎತ್ತಿಡುವದು ಸ್ವಲ್ಪ ದುರ್ಘಟವೇ ! ಅದು ಹಾಗಿರಲಿ, ಬ್ರಹ್ಮತ್ವವು (ಪೂರ್ಣತ್ವವು), ಅಥವಾ ಬ್ರಹ್ಮ ಸಮಾನ ಧರ್ಮವು ಪ್ರತಿರುದ್ಧವಾಗುವದೆಂದು ಹೇಳುವದು ವಿರುದ್ಧೋಕ್ತಿಯು. ಬ್ರಹ್ಮ ಸಮಾನ ಧರ್ಮವುಳ್ಳ ಚೇತನರು ದುರ್ಬಲವಾದ ಪ್ರಕೃತಿಬಂಧಕ್ಕೆ ಸಿಕ್ಕಿ ಬಿದ್ದುದು, ಸಿಕ್ಕಿ ಬಿದ್ದರೂ ಅವರ ನಿವೃತ್ತಿಗಾಗಿ ಪುರುಷಾಂತರನನ್ನು ಪ್ರಾರ್ಥಿಸುವದು, ಇವೆಲ್ಲಾ ಅಪಹಸನೀಯ ಪ್ರಕ್ರಿಯೆಯು. **ಮುಕ್ತನಿಗೆ ಆನಂದ ಸಾಮ್ಯವು ಉಂಟು, ಬಲಸಾಮ್ಯವು ಇಲ್ಲವೆಂದು ಹೇಳಕೂಡದು. ಆನಂದವು ಸಮಾನವಾದರೆ ಬಲ ಜ್ಞಾನಾದಿ ಸಕಲ ಐಶ್ವರ್ಯಗಳೂ ಸಮಾನವಾಗಿರಬೇಕು. ಆನಂದಕ್ಕೂ ಐಶ್ವರ್ಯಾದಿಗಳಿಗೂ ಪ್ರಯೋಜ್ಯ ಪ್ರಯೋಜಕಭಾವವನ್ನೂ ಸರ್ವರೂ ಒಪ್ಪಲೇಬೇಕು.**

ವಾದ ಇಂಥ ಸಮಾಧಾನವನ್ನು ರಾಮಾನುಜಾಚಾರ್ಯರೇ ಒಪ್ಪಲಾರರು. ಕಿಂಚ ಒಪ್ಪುವುದಾದರೂ ಇದು ಅಸಂಭಾವಿತ ಪ್ರಕ್ರಿಯೆಯು. ಹೇಗೆಂದರೆ— ವೀರಾಗ್ರಣಿ ಯಾದ ಮಲ್ಲನ ಪರಾಕ್ರಮದಿಂದ ಸಂತುಷ್ಟನಾದ ರಾಜನು ಆತನ ಭಕ್ತಿ ವಿಶ್ವಾಸ ಗಳಿಂದ ಪ್ರಸನ್ನನಾಗಿ ಜಹಗೀರಿಯನ್ನು ಕೊಡಬಹುದು ಅಥವಾ ಪ್ರಬಲವಾದ ಸೇನಾಧಿಪತ್ಯವೇ ಮುಂತಾದ ಅಧಿಕಾರವನ್ನಾದರೂ ಕೊಡಬಹುದು. ತನ್ನ ಉತ್ತಮ ತ್ವಕ್ಕೇ ನಾಶಕವಾದ ತನ್ನ ಸಾಮ್ಯವನ್ನೂ, ಸಮಾನ ಭೋಗವನ್ನೂ ಹೇಗೆ ತಾನೇ ಕೊಡುವನು ? ಇದೇ ರೀತಿಯಲ್ಲಿ ಭಕ್ತನ ಕೈಂಕರ್ಯಭಾವದಿಂದ ಪ್ರಸನ್ನನಾದ ಪರ ಬ್ರಹ್ಮನಾದ ವಿಷ್ಣುವು ಅರ್ಜುನಾದಿಗಳನ್ನು ಸಂಸಾರದಿಂದ ಉದ್ಧರಿಸಿ ಅವರಿಗೆ ಯಥೇಷ್ಟವಾದ ಸುಖಗಳನ್ನು ಕಲ್ಪಿಸುವನು. ಆದರೆ ತನ್ನ **ಬ್ರಹ್ಮತ್ವಕ್ಕೇ** ನಾಶಕ ವಾದ ಸಾಮ್ಯಭೋಗವನ್ನೂ ಕೈಂಕರ್ಯಭಾವರಾಹಿತ್ಯವನ್ನೂ ಅವನು ಕೊಡು ವುದು ತಾನೇ ಹೇಗೆ ? ಕಾಮಾದಿಗಳಿಂದ ವರ್ಜಿತರಾದ ಮುಕ್ತ ಅರ್ಜುನಾದಿ ಚೇತನರೂ ತಮ್ಮ ಸ್ವಭಾವದಲ್ಲಿಲ್ಲದ ಅಂಥ ಬ್ರಹ್ಮ ಸಾಮ್ಯರೂಪವಾದ ಫಲವನ್ನು ಕೇಳುವರು ತಾನೇ ಯಾತಕ್ಕೆ ? ಉತ್ತಮ ಪುತ್ರನು, ಪಿತನು ಅತಿ ಪ್ರಸನ್ನನಾದರೆ ಪಿತನ ತೊಡೆಯ ಮೇಲೆ ಕುಳಿತುಕೊಳ್ಳಲು ಅಪೇಕ್ಷಿಸುವನು. ತಂದೆಯೂ ಸಹ ತನ್ನ ಕುಮಾರನನ್ನು ಆಶೀರ್ವದಿಸುತ್ತಾ, ಅವನ ಯೋಗ್ಯತಾನುಗುಣವಾಗಿ ಅವ ನನ್ನು ಆದರಿಸುವನು. ಆದುದರಿಂದ ಸ್ವರೂಪತಃ ಬ್ರಹ್ಮ ಸಾಮ್ಯವು ಜೀವಚೇತನ ರಲ್ಲಿ ಸ್ವಭಾವದಿಂದಲೇ ಇಲ್ಲದಿದ್ದರೆ, ಪರಬ್ರಹ್ಮನು ನೂತನವಾಗಿ ಅಂಥ ಫಲವನ್ನು ಕೊಡುವುದು ಅಸಂಭಾವಿತವು.

ಹೀಗೆ ಉಭಯ ಮತಗಳೂ ಯುಕ್ತಿಪರಾಹತವಾಗಿರುವುದರಿಂದ, " ಅಹಂ " ಪದಾರ್ಥವಾದ ಜೀವನು ಜೀವನೇ. ಅವನು ಯಾವಾಗಲೂ ಯಾವ ವಿಷಯದಲ್ಲೂ ಬ್ರಹ್ಮತ್ವವನ್ನು ಹೊಂದಲಾರನು. ಯಾತಕ್ಕೆಂದರೆ ಅದು ಅವನ ಸ್ವರೂಪಭೂತ ವಾದ ಆಸ್ತಿಯಲ್ಲ. ಅಲ್ಪಜ್ಞಾನ ಸ್ವರೂಪನೂ ಅಲ್ಪಸುಖ ಸ್ವರೂಪನೂ ಜೀವನು ಆಗಿರುವನು. ಆದುದರಿಂದ ಮುಕ್ತಿಯಲ್ಲಿ ಜೀವಚೇತನನು ತನ್ನ ಸ್ವರೂಪಭೂತವಾದ ಯಾವತ್ತೂ ಸುಖವನ್ನೂ ಜ್ಞಾನವನ್ನೂ ಹೊಂದಿ (ಅಭಿವ್ಯಕ್ತವಾದ ಜ್ಞಾನಾನಂದ ಸ್ವರೂಪನಾಗಿ), ಪರಿಪೂರ್ಣನಾದ, ಇವನ ಮನಸ್ಸಿಗೂ ನಿಲುಕದಷ್ಟು ಜ್ಞಾನಾ ನಂದಾದಿ ವೈಭವಗಳಿಂದ ವಿಶಿಷ್ಟನಾದ ಪರಬ್ರಹ್ಮನನ್ನು ಸೇವಿಸುತ್ತಲೇ ಸುಖಿ ಯಾಗಿರುವನೆಂದು ಹೇಳಬೇಕು ಪರಮಾತ್ಮನು ಪೂರ್ಣ ಶಕ್ತಿಯುಳ್ಳವನಾದುದ ರಿಂದಲೇ, ಬಹು ದುಃಖಸಾಗರದಲ್ಲಿ ಮುಳುಗಿರುವ ಅಲ್ಪಶಕ್ತರಾದ ಜೀವರುಗಳನ್ನು ಉದ್ಧರಿಸುವುದರಲ್ಲಿ ನಿಸ್ಸೀಮನಾಗಿರುವನು. ಶ್ರೀ ಕೃಷ್ಣನು ಹೇಳುತ್ತಾನೆ.—

**(3) ಮಾಮೇವಯೇಪ್ರಪದ್ಯಂತೇ ಮಾಯಾಮೇತಾಂತರಂತಿತೇ ।**

—(7. 14.)

ನನ್ನನ್ನೇ ಯಾರು ಶರಣು ಹೊಂದುತ್ತಾರೋ, ಅಂಥವರೇ ಈ ಪ್ರಕೃತಿ

ಬಂಧವನ್ನು ದಾಟುತ್ತಾರೆ. (ನನ್ನಲ್ಲಿ ಶರಣಾಗತರಾದವರ ಪ್ರಕೃತಿಬಂಧವನ್ನು ನಾನು ಬಿಡಿಸುತ್ತೇನೆಂದು ತಾತ್ಪರ್ಯವು.)

(4) **ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿನಚಿರಾತ್ಪಾರ್ಥ ಮಯ್ಯಾವೇಶಿತ ಚೇತಸಾಂ ॥**
—(12. 7.)

ನನ್ನ ಉಪಾಸಕರನ್ನು ನಾನು ಶೀಘ್ರವಾಗಿ ಮೃತ್ಯುರೂಪವಾದ ಸಂಸಾರದಿಂದ ಉದ್ಧರಿಸುತ್ತೇನೆ.

(5) **ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ ।**
—(18. 58.)

ನನ್ನ ಪ್ರಸಾದದಿಂದ ಜೀವಚೇತನನು ನಾಶರಹಿತವಾದ ಏಕಪ್ರಕಾರವಾಗಿ ರುವ ಸ್ವರೂಪಾನಂದಾವಿರ್ಭಾವರೂಪವಾದ ತನ್ನ ನಿಜ ಸ್ವರೂಪವನ್ನು ಹೊಂದು ತ್ತಾನೆ.

(6) **ಮಚ್ಚಿತ್ತಸ್ಸರ್ವ ದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
—(18. 58.)

ನನ್ನಲ್ಲಿಯೇ ಇಡಲ್ಪಟ್ಟ ಚಿತ್ತವುಳ್ಳವನಾಗಿ ನನ್ನ ಪ್ರಸಾದದಿಂದ ಸರ್ವ ಕ್ಲೇಶಗಳನ್ನೂ ದಾಟುತ್ತೀಯೆ.

(7) **ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ।**
—(18. 66.)

ಎಲೈ ಅರ್ಜುನನೇ! ನಾನು ನಿನ್ನನ್ನು ಸರ್ವ ಪಾಪಗಳಿಂದಲೂ ಬಿಡಿಸಿ ಬಿಡುತ್ತೇನೆ. ನೀನು ದುಃಖಪಡಬೇಡ. ನಿನ್ನ ಶತ್ರುಹನನಾದಿ ರೂಪಸೇವೆಯಿಂದ ಪ್ರಸನ್ನನಾಗಿ ನಿನಗೆ ಸಕಲ ಬಂಧನಿವೃತಿರೂಪವಾದ ಮುಕ್ತಿಯನ್ನು ಕೊಡುತ್ತೇ ನೆಂದು ಭಾವವು. ಜೀವರುಗಳು ಅಲ್ಪಶಕ್ತರು, ಪರಮಾತ್ಮನೊಬ್ಬನೇ ನಿರವಧಿಕ ಸಾಮರ್ಥ್ಯವುಳ್ಳವನೆಂಬುದು ಜೀವರುಗಳ ಬಂಧನಿವೃತ್ತಿ ವ್ಯವಸ್ಥೆಯಿಂದ ಮಾತ್ರವೇ ಗೊತ್ತಾಗುವುದಿಲ್ಲ. ಪ್ರಬಲರಾದ ಕಂಸಾದಿದೈತ್ಯರ ಬಾಧೆಯಿಂದ ಸಜ್ಜನರ ಬಾಧೆ ಯನ್ನು ಪರಿಹರಿಸಲಾರದೆ, ಗೋರೂಪಧಾರಿಣಿಯಾದ ಭೂದೇವಿಯಿಂದ ಪ್ರಾರ್ಥಿತ ರಾಗಿ, ಅಸಮರ್ಥರಾದ ಬ್ರಹ್ಮ ರುದ್ರಾದಿ ದೇವತೆಗಳೆಲ್ಲರೂ ಜಗನ್ನಾಥನಾದ ನಾರಾಯಣನನ್ನು ಶರಣು ಹೊಂದಿರುವರು. ಸಮಸ್ತ ದೇವತೆಗಳಿಂದಲೂ ಅಶಕ್ಯ ವಾದ ಕಾರ್ಯವಾದರೂ ಶ್ರೀ ವಿಷ್ಣುವಿಗೆ ತೃಣಪ್ರಾಯವು. ಅಚಿಂತ್ಯಶಕ್ತನಾದ ಪರಬ್ರಹ್ಮನು ತಾನೇ ಅವತರಿಸಿ ಭೂಭಾರವನ್ನು ಪರಿಹರಿಸಿರುತ್ತಾನೆ. ಅರ್ಜುನಾದಿ ಗಳು ತಾವು ಮಾಡಿದ ಹನನಾದಿ ಕಾರ್ಯದಲ್ಲಿ ಸ್ವತಂತ್ರರಲ್ಲ. ಶ್ರೀ ಕೃಷ್ಣನು ಹೇಳುತ್ತಾನೆ :—

**(8) ..........ನಿಮಿತ್ತಮಾತ್ರಂ ಭವಸವ್ಯಸಾಚಿನ್ । —(11. 34.)**

**(9) ಮಯಾಹತಾಂಸ್ತ್ವಂಜಹಿಮಾವ್ಯಥಿಷ್ಠಾಃ । —(11. 34.)**

ಎಲೈ ಅರ್ಜುನನೇ ! ನಾನೇ ಸ್ವತಂತ್ರನಾಗಿ ಮಾಡುವ ಸಂಹಾರ ಕಾರ್ಯ ದಲ್ಲಿ ನೀನು ನಿಮಿತ್ತ ಮಾತ್ರನಾಗು. ನನ್ನಿಂದಲೇ ಸ್ವತಂತ್ರವಾಗಿ ಸಂಹರಿಸಲ್ಪಟ್ಟವ ರನ್ನು ನೀನು ಸಂಹರಿಸು. ಎಂದರೆ ನಿನಗೆ ಸ್ವತಂತ್ರಶಕ್ತಿಯು ಇಲ್ಲದಿದ್ದರೂ ನಿನ್ನಲ್ಲಿ ನಿಂತು ನಾನು ಶತ್ರು ಸಂಹಾರವನ್ನು ಮಾಡುತ್ತೇನೆ. ನೀನು ವ್ಯಥೆಪಡಬೇಡ ಎಂದು ಅರ್ಥವು.

ಭೂಭಾರಹರಣರೂಪವಾದ ಮಹಾ ಕಾರ್ಯವನ್ನು ನಾನೇ ಮಾಡುವೆನೆಂದು ಶ್ರೀ ಕೃಷ್ಣನು ಹೇಳುತ್ತಾನೆ :—

**(10) ಯದಾಯದಾಹಿಧರ್ಮಸ್ಯ ಗ್ಲಾನಿರ್ಭವತಿಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂಸೃಜಾಮ್ಯಹಂ ॥**
**ಪರಿತ್ರಾಣಾಯಸಾಧೂನಾಂ ವಿನಾಶಾಯಚದುಷ್ಕೃತಾಂ ।**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ ॥**
**—(4. 7-8.)**

ಎಲೈ ಅರ್ಜುನನೇ ! ಯಾವಾಗ ಧರ್ಮಕ್ಕೆ ಹ್ರಾಸವೂ ಅಧರ್ಮಕ್ಕೆ ವೃದ್ಧಿಯೂ ಆಗುವುದೋ ಆಗ ನಾನು ಅವತರಿಸುತ್ತೇನೆ. ಸಾಧುಗಳ ರಕ್ಷಣಾರ್ಥ ವಾಗಿಯೂ ಪಾಪಿಗಳ ವಿನಾಶಾರ್ಥವಾಗಿಯೂ ಧರ್ಮ ಸಂಸ್ಥಾಪನವನ್ನು ಮಾಡುವು ದಕ್ಕೂ ನಾನು ಆಯಾಯ ಕಾಲದಲ್ಲಿ ಅವತರಿಸುತ್ತೇನೆ.

ಈ ರೀತಿಯಾಗಿ "ಭವಪಾಶ್ಚಮೋಚಕಃ" ಎಂಬ ಶ್ರೀಮದಾಚಾರ್ಯರು ಉದಾಹರಿಸಿರುವ ಪ್ರಮಾಣ ವಚನಾನುಸಾರ, ಅನಾದಿಯಾದ ಭವಪಾಶದಲ್ಲಿ ಬದ್ಧರಾದ ತಮಗೆ ಪ್ರಾಪ್ತವಾದ ದುಃಖನಿವೃತ್ತಿಯಲ್ಲಿ ಸ್ವತಃ ಅಸಮರ್ಥರಾದ ಅನಂತ ಚೇತನರುಗಳ ಕಟ್ಟುಗಳನ್ನು ದುರಂತವೀರ್ಯನಾದ ಶ್ರೀಹರಿಯು ತಾನೇ ಸ್ವತಂತ್ರನಾಗಿ ಬಿಚ್ಚಿ, ಮುಕ್ತಸ್ಥಾನದಲ್ಲಿಟ್ಟು, ಅವರ ಸ್ವರೂಪಾನಂದದ ಭೋಗಕ್ಕೂ ಸಹ ನಿಯಾಮಕನಾಗಿರುವನೆಂದು ಸಿದ್ಧವಾಯಿತು.

## 4.

**ಪ್ರಶ್ನೆ**— ಸ್ವಾಮೀ ! ಜೀವನ ಸ್ವರೂಪಭೂತವಾದ ಆನಂದಾನುಭವಕ್ಕೆ ಪ್ರತಿಬಂಧಕಗಳಾದ ಆವರಣಗಳು ಯಾವುವು ? ಮತ್ತು ಪ್ರತಿಬಂಧಕಗಳ ನಿವೃತ್ತಿ ಯಾದ ನಂತರ ಪ್ರಾಪ್ತವಾಗುವ ಮುಕ್ತಿಯು ಎಷ್ಟು ಪ್ರಕಾರವಾಗಿರುವುದು ?

**ಉತ್ತರ**— ಶ್ರೀ ಶ್ರೀಗಳವರು— ಶ್ರೀ ಕೃಷ್ಣನು ಹೇಳುತ್ತಾನೆ :—

(1) **..........ಸರ್ವಮಿದಂ ಜಗತ್ ।**
**ಮೋಹಿತಂನಾಭಿಜಾನಾತಿಮಾಮೇಭ್ಯಃ ಪರಮವ್ಯಯಂ ॥**
**ದೈವೀಹ್ಯೇಷಾಗುಣಮಯೀ ಮಮಮಾಯಾದುರತ್ಯಯಾ ।**
—(7. 13-14.)

ಈ ಯಾವತ್ತು ಪ್ರಾಣಿಗಳು ಮಿಥ್ಯಾ ಜ್ಞಾನದಿಂದ ಸಹಿತವಾಗಿ ಪ್ರಕೃತಿ ವಿಲಕ್ಷಣವಾದ ನನ್ನ ಸ್ವರೂಪವನ್ನು ತಿಳಿಯಲಾರರು. ( ಇದಕ್ಕೆ ಕಾರಣ ವೇನೆಂದರೆ ಹೇಳುತ್ತಾನೆ:—) ಕ್ರೀಡಾದಿ ಗುಣವಿಶಿಷ್ಟನಾದ ನನ್ನ ಸಂಬಂಧಿಯಾದ, ( = ನನ್ನ ಇಚ್ಛೆಯಿಂದ ಸಹಕೃತವಾದ), ನನ್ನ ಅಧೀನವಾದ ತ್ರಿಗುಣಾತ್ಮಕ ಪ್ರಕೃತಿಗೆ ಅಭಿಮಾನಿಯಾದ ಚೇತನಪ್ರಕೃತಿಯು ( ದುರ್ಗಾದೇವಿಯು ) ಮತ್ತು ತ್ರಿಗುಣಾತ್ಮಕವಾದ ಜಡಪ್ರಕೃತಿಯು ನನ್ನ ವಿಷಯಕ ಯಥಾರ್ಥ ಜ್ಞಾನಕ್ಕೆ ಪ್ರತಿಬಂಧಕವಾಗಿರುವುದು; ಮತ್ತು ದುರತ್ಯಯಾ = ದಾಟುವುದಕ್ಕೆ ಅತ್ಯಶಕ್ಯ ವಾದುದು.

ಈ ಶ್ಲೋಕಗಳಿಂದ ಜ್ಞಾನಸ್ವರೂಪನಾದ ಜೀವನು ಪರಬ್ರಹ್ಮನನ್ನು ತಿಳಿಯದೆ ಇರುವುದಕ್ಕೂ, ಪರಮಾತ್ಮನು ಎಲ್ಲರಂತೆ ಒಬ್ಬ ಸಾಮಾನ್ಯ ಮನುಷ್ಯನೆಂದು ವಿಪರೀತವಾಗಿ ತಿಳಿಯುವುದಕ್ಕೂ ಮೂರು ಕಾರಣಗಳು ತೋರಿ ಬರುತ್ತವೆ. ಕ್ರೀಡಾದಿ ಗುಣವಿಶಿಷ್ಟನಾದ ಪರಮಾತ್ಮನ ಇಚ್ಛೆಯು ಒಂದನೆಯ ಕಾರಣವು. ತ್ರಿಗುಣಗಳಿಗೆ ಅಭಿಮಾನಿಯಾದ ದುರ್ಗಾದೇವಿಯು ಎರಡನೆಯ ಕಾರಣವು. ತ್ರಿಗುಣಾತ್ಮಕವಾದ ಜಡ ಪ್ರಕೃತಿಯೇ ಮೂರನೆಯ ಕಾರಣವು. " ಅನಾದಿ ಮಾಯಯಾಸುಪ್ತಃ " ಎಂಬ ಶ್ರುತ್ಯನುಸಾರವಾಗಿ ಈ ಮೂರು ಆವರಣಗಳೂ ಅನಾದಿ ಎಂದು ನಿರ್ಧರಿಸಬೇಕು. ಪ್ರಕೃತಿ ಬಂಧವು ಸರ್ವ ಜೀವರಿಗೂ ಇರುವುದೆಂದು ಇನ್ನೂ ಎರಡು ಕಡೆಗಳಲ್ಲಿ ಶ್ರೀ ಕೃಷ್ಣನು ಹೇಳಿರುತ್ತಾನೆ :—

(2) **ಪುರುಷಃ ಪ್ರಕೃತಿಸ್ಥೋಹಿಭುಂಜಕ್ತೇಪ್ರಕೃತಿಜಾನ್‌ಗುಣಾನ್ ।**
—(13. 22.)

(3) **ನತದಸ್ತಿಪೃಥಿವ್ಯಾಂವಾ ದಿವಿದೇವೇಷುವಾಪುನಃ ।**
**ಸತ್ವಂಪ್ರಕೃತಿಜೈರ್ಮುಕ್ತಂಯದೇಭಿಃಸ್ಯಾತ್ರಿಭಿರ್ಗುಣೈಃ ॥**
—(18. 40.)

(4) **.......ಪ್ರಕೃತಿಸ್ತ್ವಾಂನಿಯೋಕ್ಷ್ಯತಿ ।** —(18. 59.)

ಈ ಶ್ಲೋಕಾರ್ಥಗಳು ( ಈಗಾಗಲೇ ಹಿಂದಿನ ಪುಟಗಳಲ್ಲಿ ) ವಿವೃತವಾಗಿರುವುವು.

ಅಜ್ಞಾನವೂ ಒಂದು ಬಂಧವೆಂದು ಐದನೆಯ ಅಧ್ಯಾಯದ ಶ್ಲೋಕದಿಂದ ನಿಶ್ಚಿತವಾಗುವುದು.

(5) **ಅಜ್ಞಾನೇನಾವೃತಂಜ್ಞಾನಂ ತೇನಮುಹ್ಯಂತಿ ಜಂತವಃ ।**
—(5. 15.)

ಕಾಮವು ಒಂದು ಪ್ರಬಲವಾದ ಬಂಧವೆಂದು ಮೂರನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಹೇಳುತ್ತಾನೆ:—

(6) **ಕಾಮಏಷಕ್ರೋಧಏಷರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹವೈರಿಣಂ ॥**
**ಧೂಮೇನಾವ್ರಿಯತೇವಹ್ನಿ ರ್ಯಥಾದರ್ಶೋಮಲೇನಚ ।**
**ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಂ ॥**
**ಆವೃತಂಜ್ಞಾನಮೇತೇನ ಜ್ಞಾನಿನೋನಿತ್ಯವೈರಿಣಾ ।**
**ಕಾಮರೂಪೇಣಕೌಂತೇಯ ದುಷ್ಪೂರೇಣಾನಲೇನಚ ॥**
—(3. 37-39.)

ಎಲೈ ಅರ್ಜುನನೇ ! ಕಾಮವೇ ಪಾಪಕರ್ಮಗಳಿಗೆ ಪ್ರಬಲವಾದ ಪ್ರವರ್ತಕವು. ಕಾಮವು ರಜೋಗುಣದಿಂದ ಉತ್ಪನ್ನವಾಗುವ ಕ್ರೋಧಕ್ಕೂ ಕಾರಣವು, ಈ ಕಾಮವು ಅನಂತ ವಿಷಯಾಭಿಲಾಷೆಗಳಿಂದ ಪೂರ್ಣವಾದುದು. ಬ್ರಹ್ಮಹತ್ಯಾದಿ ಮಹಾ ಪಾಪಗಳಿಗೆ ಮೂಲಭೂತವಾದುದು. ಕಾಮವೇ ಮೋಕ್ಷಾದಿ ಪುರುಷಾರ್ಥ ಪ್ರಾಪ್ತಿಗೆ ಮುಖ್ಯ ಪ್ರತಿಬಂಧಕವೆಂದು ತಿಳಿ. ಅಗ್ನಿಯು ಧೂಮದಿಂದ ಆವರಿಸಲ್ಪಡುವ ಹಾಗೆ ಮುಕ್ತಿಯೋಗ್ಯ ಚೇತನರು ಈ ಕಾಮದಿಂದ ಆವರಿಸಲ್ಪಟ್ಟಿರುವರು. ಕನ್ನಡಿಯು ಧೂಳಿನಿಂದ ಆವರಿಸಲ್ಪಡುವಂತೆ ಮಧ್ಯಮ ಜೀವರುಗಳು ಈ ಕಾಮದಿಂದ ಆವರಿಸಲ್ಪಟ್ಟಿರುವರು. ಗರ್ಭಸ್ಥ ಶಿಶುವು ಚರ್ಮಮಯವಾದ ಗರ್ಭ ಚೀಲದಿಂದ ಬಿಗಿಯಲ್ಪಟ್ಟಿರುವಂತೆ ತಮೋಯೋಗ್ಯರಾದ ಚೇತನರು ಕಾಮರೂಪ ಆವರಣದಿಂದ ಬಂಧಿಸಲ್ಪಟ್ಟಿರುವರು. (ಕಾಮವು ಕೇವಲ ಜೀವಸ್ವರೂಪವನ್ನು ಮಾತ್ರ ಆವರಿಸಿರುವುದಿಲ್ಲ. ಶಾಸ್ತ್ರಜನ್ಯ ಜ್ಞಾನವನ್ನು ಸಹ ಆವರಿಸಿ ಬ್ರಹ್ಮಾಪರೋಕ್ಷ ಜ್ಞಾನಕ್ಕೆ ಪ್ರತಿಬಂಧಕವಾಗಿರುವುದು ಎಂದು ಹೇಳುತ್ತಾನೆ:— ) ಸದಾ ಅಪರೋಕ್ಷ ಜ್ಞಾನಕ್ಕೆ ಪ್ರತಿಬಂಧಕವಾದ, ಎಷ್ಟು ಪ್ರಾಪ್ತವಾದರೂ ಪರಿಸಮಾಪ್ತಿಯಿಲ್ಲದೆ, ತೃಪ್ತಿರಹಿತವಾದ ಕಾಮವೆಂಬ ಹೆಸರುಳ್ಳ ಈ ಶತ್ರುವಿನಿಂದ ಶಾಸ್ತ್ರಜನ್ಯ ಜ್ಞಾನವುಳ್ಳ ಜ್ಞಾನಿಯ ಜ್ಞಾನವೂ ಕೂಡ ಆವರಿಸಲ್ಪಟ್ಟಿರುವುದು.

ರಾಗದ್ವೇಷಗಳೂ ಮತ್ತು ದ್ವಂದ್ವಮೋಹವೂ ಚೇತನನಿಗೆ ಬ್ರಹ್ಮಜ್ಞಾನವು ಬರುವುದರಲ್ಲಿಯೂ, ತನ್ನ ಸ್ವರೂಪ ಜ್ಞಾನವು ಬರುವುದರಲ್ಲಿಯೂ ಪ್ರತಿಬಂಧಕವೆಂದು ಏಳನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಹೇಳುತ್ತಾನೆ:—

**(7) ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನಭಾರತ ।**
**ಸರ್ವಭೂತಾನಿ ಸಂಮೋಹಂ ಸರ್ಗೇಯಾಂತಿ ಪರಂತಪ ॥**

—(7. 27.)

ಅನುಕೂಲವೆಂದು ತೋರಿದ ವಿಷಯಗಳಲ್ಲೆಲ್ಲಾ ಇಚ್ಛೆಯು, ಪ್ರತಿಕೂಲವೆಂದು ತೋರಿದ ವಿಷಯಗಳಲ್ಲೆಲ್ಲಾ ದ್ವೇಷವು ಇಂಥ ಇಚ್ಛಾದ್ವೇಷಗಳಿಂದ ಉತ್ಪನ್ನವಾದ ಸುಖ ದುಃಖ, ಲಾಭಾಲಾಭ ಶೀತೋಷ್ಣವೆಂಬ ದ್ವಂದ್ವವಿಷಯಕ ಮಿಥ್ಯಾಜ್ಞಾನದಿಂದ ಮತ್ತು ಜೀವೇಶ್ವರರ ವಿರುದ್ಧ ಧರ್ಮಗಳಾದ ಸರ್ವಜ್ಞತ್ವಾಲ್ಪಜ್ಞತ್ವ, ಪೂರ್ಣತ್ವಾಪೂರ್ಣತ್ವ ಇತ್ಯಾದಿ ದ್ವಂದ್ವವಿಷಯಕ ( ವಿರುದ್ಧ ಧರ್ಮಗಳೆಲ್ಲಾ ಸುಳ್ಳು, ನಾನೇ ಪೂರ್ಣನಾದ ಈಶ್ವರನು ಇತ್ಯಾದಿ ರೂಪ ) ಮಿಥ್ಯಾಜ್ಞಾನದಿಂದ ಸರ್ವ ಪ್ರಾಣಿಗಳೂ ಸೃಷ್ಟಿ ಕಾಲದಲ್ಲಿ ವಿಶೇಷವಾಗಿ ಸಂಮೋಹವನ್ನು (ಅಕಾರ್ಯೇಚ್ಛೆಯನ್ನು) ಹೊಂದುವುವು.

ಅನಾದಿಕರ್ಮವೂ ಒಂದು ಬಂಧವೆಂದು ಶ್ರೀ ಕೃಷ್ಣನು ನಿರೂಪಿಸುತ್ತಾನೆ :—

**(8) ಸ್ವಭಾವಜೇನ ಕೌಂತೇಯನಿಬದ್ಧಸ್ಸ್ವೇನಕರ್ಮಣಾ ।**
**ಕರ್ತುಂನೇಚ್ಛಸಿಯನ್ಮೋಹಾತ್ ಕರಿಷ್ಯಸ್ಯವಶೋಪಿತತ್ ॥**

—(18. 60.)

ಎಲೈ ಕುಂತೀಪುತ್ರನೇ ! ಸ್ವಭಾವಾನುಸಾರಿಯಾಗಿ ಉತ್ಪನ್ನವಾದ ಅಥವಾ ಪೂರ್ವ ಸಂಸ್ಕಾರದಿಂದ ಉತ್ಪನ್ನವಾದ ಸ್ವಕೀಯ ಕರ್ಮದಿಂದ ನೀನು ಅತ್ಯಂತವಾಗಿ ಬಂಧಿಸಲ್ಪಟ್ಟಿರುತ್ತಿಯೇ. ಆದುದರಿಂದ ಯಾವ ಕರ್ಮವನ್ನು ನೀನು ಬಂಧುಸ್ನೇಹರೂಪವಾದ ಮೋಹದಿಂದ ಮಾಡುವುದಕ್ಕೆ ಅಪೇಕ್ಷಿಸುವುದಿಲ್ಲವೋ ಅದನ್ನು ಅವಶ್ಯವಾಗಿ ( ಕರ್ಮಾನುಗುಣವಾಗಿ ಪ್ರೇರಿಸುವ ಪರಬ್ರಹ್ಮನ ಅಧೀನವಾಗಿ ) ನೀನು ಮಾಡುವವನಾಗುತ್ತೀಯೆ.

ಈ ರೀತಿಯಾಗಿ, ಸ್ವರೂಪತಃ ಜ್ಞಾನಸ್ವರೂಪನಾದರೂ ಜೀವನು ಅನಾದಿಯಾದ ಅನೇಕ ಬಂಧಗಳಿಂದ ಸಹಿತನಾಗಿ, "ಸುಹೃದಂಸರ್ವಭೂತಾನಾಂ" ಎಂದು ಹೇಳಿರುವಂತೆ ಸರ್ವ ಜೀವರಿಗೂ ಅನಿಮಿತ್ತ ಬಂಧುವಾಗಿ, ತನ್ನ ಹೃದಯ ಪ್ರದೇಶದಲ್ಲಿಯೇ ಸದಾಸ್ಥಿತನಾಗಿ, ತನ್ನ ಯಾವತ್ತು ಸ್ವರೂಪ, ಪ್ರಮಿತಿ, ಪ್ರವೃತ್ತ್ಯಾದಿಗಳಿಗೆ ನಿಯಾಮಕನಾಗಿರುವ ಪರಮೇಶ್ವರನನ್ನು ಕಾಣದೆ, ತನ್ನ ಸ್ವಾಭಾವಿಕವಾದ ಜ್ಞಾನಾನಂದಾದಿಗಳನ್ನೂ ತಿಳಿಯಲಾರದೆ ಸಂಸಾರದಲ್ಲಿ ನಾನಾ ಯೋನಿಗಳನ್ನು ಹೊಂದುತ್ತಾ ಸಂಕಟಪಡುತ್ತಾನೆ. ಪರಮೇಶ್ವರನ ಪ್ರಸಾದದಿಂದ ಈ ಬಂಧವು ನಿವೃತ್ತವಾಗುವುದು. ಅದೇ ಮುಕ್ತಿಯು. ಇಷ್ಟು ವಿಷಯವನ್ನೂ ಸಂಕ್ಷೇಪವಾಗಿ ಶ್ರೀ ಕೃಷ್ಣನು "ಸುಖಂಬಂಧಾತ್ಪ್ರಮುಚ್ಯತೇ," "ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ" ಎಂಬ ವಾಕ್ಯಗಳಲ್ಲಿ ಉಪದೇಶ ಮಾಡಿರುತ್ತಾನೆ. ಇದರಿಂದ

ಜೀವನಿಗೆ ಅನೇಕ ಬಂಧಗಳು ಇರುವುವೆಂದೂ ಪರಮಾತ್ಮಪ್ರಸಾದದಿಂದ ಅವುಗಳು ನಿವೃತ್ತವಾಗುವುವೆಂದೂ ಸಿದ್ಧವಾಗುವುದು.

## 5.

ಮುಕ್ತಿಯು ಚತುರ್ವಿಧವಾಗಿರುವುದೆಂದು ಶಾಸ್ತ್ರದಲ್ಲಿ ನಿಶ್ಚಿತವಾಗಿರುವುದು. "**ದೈವೀಸಂಪದ್ವಿಮೋಕ್ಷಾಯ**" ಇತ್ಯಾದಿ ಸ್ಥಳಗಳಲ್ಲಿ ಶ್ರೀ ಕೃಷ್ಣನು ಮುಕ್ತಿಯಲ್ಲಿ ಅವಾಂತರವೈಚಿತ್ರ್ಯವು ಇರುವುದೆಂದು ಸೂಚಿಸಿರುತ್ತಾನೆ. ಚತುರ್ವಿಧ ಮುಕ್ತಿಪ್ರದನೆಂದು ವಾಸುದೇವನಿಗೆ ಬಿರುದು ಇರುವುದು. ಪರಬ್ರಹ್ಮನ ಶರೀರದಲ್ಲಿ ಪ್ರವೇಶಿಸಿ ಭೋಗವನ್ನು ಅನುಭವಿಸುವುದು ಸಾಯುಜ್ಯ ಮುಕ್ತಿಯೆನ್ನಿಸುವುದು. ಪರಬ್ರಹ್ಮನ ರೂಪದಂತೆ ರೂಪಪ್ರಾಪ್ತಿಯು ಸಾರೂಪ್ಯ ಮುಕ್ತಿಯು. ಸಾಮೀಪ್ಯವೆಂದರೆ ಪರಮಾತ್ಮನ ದರ್ಶನವನ್ನು ಹೊಂದುತ್ತಾ, ವೈಕುಂಠಾದಿ ಲೋಕಗಳಲ್ಲಿ ಅವನ ಸಮೀಪದಲ್ಲಿರುವುದು; ಸಾಲೋಕ್ಯವೆಂದರೆ ಪರಮಾತ್ಮನ ಲೋಕದಲ್ಲಿ ಪರಮಾತ್ಮ ದರ್ಶನದಿಂದ ಸಹಿತವಾದ ಭೋಗವನ್ನು ಹೊಂದುವುದು. ನಾಲ್ಕು ವಿಧವಾದ ಮುಕ್ತರೂ ಬಂಧನಿವೃತ್ತಿಯನ್ನು ಪಡೆದು, ಪರಬ್ರಹ್ಮನನ್ನು ಹೊಂದಿ ಸ್ವರೂಪಾನಂದವನ್ನು ಅನುಭವಿಸುತ್ತಿರುವರು. ಆದುದರಿಂದ ಮುಕ್ತಿಯನ್ನು ವರ್ಣಿಸುವ ಅನೇಕ ವಾಕ್ಯಗಳು ಸಾಮಾನ್ಯಾಕಾರವಾಗಿ ಯಾವ ವಿಧವಾದ ಮುಕ್ತಿಪರವಾಗಿಯಾದರೂ ಯೋಜನೆ ಮಾಡುವುದಕ್ಕೆ ಅನುಕೂಲವಾಗಿರುವುವು ತಥಾಹಿ:—

**ಸಕಲ ಪಾಪಕ್ಷಯವು** ( ಮತ್ತು ಕರ್ಮನಿವೃತ್ತಿಯು ) ಮುಕ್ತಿಯೆಂದು ಅನೇಕ ವಾಕ್ಯಗಳಲ್ಲಿ ಶ್ರೀ ಕೃಷ್ಣನು ಹೇಳಿರುತ್ತಾನೆ —

(1) **ಯಜ್ಞಶಿಷ್ಟಾಶಿನಸ್ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।**
—(3. 13.)

ಭಗವನ್ನಿವೇದನ, ವೈಶ್ವದೇವ, ಬಲಿಹರಣ, ಅತಿಥಿಪೂಜಾ ನಂತರ ಉಳಿದ ಅನ್ನವನ್ನು ಭೋಜನ ಮಾಡುವವನು ( ಜ್ಞಾನವನ್ನು ಹೊಂದಿ ) ಸಕಲ ಪಾಪಗಳಿಂದಲೂ ಮುಕ್ತನಾಗುತ್ತಾನೆ.

(2) **ನ ಮಾಂ ಕರ್ಮಾಣಿಲಿಂಪಂತಿ ನಮೇಕರ್ಮಫಲೇಸ್ಪೃಹಾ ।**
**ಇತಿ ಮಾಂ ಯೋಽಭಿಜಾನಾತಿಕರ್ಮಭಿರ್ನಸಬಧ್ಯತೇ ॥**
—(4. 14.)

ನನಗೆ ( ಶ್ರೀ ಕೃಷ್ಣನಿಗೆ) ಕರ್ಮಲೇಪವು ಇರುವುದಿಲ್ಲ. ಮತ್ತು ಕರ್ಮ ಫಲದಲ್ಲಿ ಅಪೇಕ್ಷೆಯೂ ಇರುವುದಿಲ್ಲವೆಂದು ತಿಳಿದವನು ಕೂಡ ( ಅಪರೋಕ್ಷ ಜ್ಞಾನ ದ್ವಾರಾ ) ಕರ್ಮಗಳಿಂದ ಬಂಧಿಸಲ್ಪಡುವುದಿಲ್ಲ. ಮುಕ್ತನಾಗುತ್ತಾನೆಂದರ್ಥವು.

(3) **ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ।**
—(4. 16.)

ಯಾವುದನ್ನು ತಿಳಿದರೆ ನೀನು (ಅಪರೋಕ್ಷ ಜ್ಞಾನ ದ್ವಾರಾ) ಸಕಲ ಪಾಪಗಳಿಂದಲೂ ಮುಕ್ತನಾಗುವಿಯೋ ಅಂಥ ಕರ್ಮಸ್ವರೂಪವನ್ನು ನಿನಗೆ ಉಪದೇಶ ಮಾಡುತ್ತೇನೆ.

(4) **ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ** ।—(4. 36.)

ಜ್ಞಾನರೂಪವಾದ ನಾವೆಯಿಂದ ನೀನು ಸಕಲ ಪಾಪಗಳನ್ನೂ ದಾಟುತ್ತೀಯೆ. (ಮುಕ್ತನಾಗುವಿ ಎಂದರ್ಥವು.)

(5) **ಇದಂ ತು ತೇ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ।** —(9. 1.)

ಯಾವುದರ ಜ್ಞಾನದಿಂದ ಸಕಲ ಪಾಪಗಳಿಂದಲೂ ಬಿಡಲ್ಪಡುವಿಯೋ (ಮುಕ್ತನಾಗುವಿಯೋ) ಅಂಥ ಗುಹ್ಯ ತತ್ತ್ವೋಪದೇಶವನ್ನು ನಾನು ನಿನಗೆ ಮಾಡುತ್ತೇನೆ.

(6) **ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಂ ।**
**ಅಸಂಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥**
—(10. 3.)

ನಾನು (ಶ್ರೀ ಕೃಷ್ಣನು) ಅಜನು, ಅನಾದಿಯು, ಸರ್ವ ಲೋಕಸ್ವಾಮಿಯು ಎಂದು ತಿಳಿದವನು. ಸರ್ವ ಪಾಪಗಳಿಂದಲೂ ಬಿಡಲ್ಪಡುತ್ತಾನೆ (ಮುಕ್ತನಾಗುತ್ತಾನೆ.)

(7) **ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
—(18. 58.)

ನನ್ನಲ್ಲಿಯೇ ಇಡಲ್ಪಟ್ಟ ಚಿತ್ತವುಳ್ಳವನು ನನ್ನ ಪ್ರಸಾದದಿಂದ ಸಕಲ ಕ್ಲೇಶಗಳನ್ನೂ ಪರಿಹರಿಸಿಕೊಳ್ಳುತ್ತಾನೆ. (ಸಕಲ ಕರ್ಮಕ್ಷಯವನ್ನೂ ಹೊಂದಿ ಮುಕ್ತನಾಗುತ್ತಾನೆಂದರ್ಥವು.)

(8) **ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ।**
—(18. 66.)

ನಾನು ನಿನ್ನನ್ನು ಸರ್ವ ಪಾಪಗಳಿಂದಲೂ ಬಿಡಿಸಿ ಬಿಡುತ್ತೇನೆ. (ನಿನ್ನನ್ನು ಮುಕ್ತನನ್ನಾಗಿ ಮಾಡುತ್ತೇನೆ,) ನೀನು ಶೋಕಪಡಬೇಡ.

**ಬಂಧನಿವೃತ್ತಿಯು** ಮುಕ್ತಿಯೆಂದು ಶ್ರೀ ಕೃಷ್ಣನು ಮೂರು ನಾಲ್ಕು ಸ್ಥಳಗಳಲ್ಲಿ ಹೇಳಿರುತ್ತಾನೆ :—

(9) **ನಿರ್ದ್ವಂದ್ವೋಹಿಮಹಾಬಾಹೋ ಸುಖಂ ಬಂಧಾತ್ಪ್ರಮುಚ್ಯತೇ ।** —(5. 3.)

ದ್ವಂದ್ವ ಪ್ರಯುಕ್ತವಿಕಾರರಹಿತನಾದ ಜ್ಞಾನಿಯು ಸುಖವಾಗಿ ಬಂಧದಿಂದ ಬಿಡಲ್ಪಡುತ್ತಾನೆ.

(10) **ದೈವೀಹ್ಯೇಷಾಗುಣಮಯೀ ಮಮಮಾಯಾದುರತ್ಯಯಾ ।**
**ಮಾಮೇವ ಯೇಪ್ರಪದ್ಯಂತೇ ಮಾಯಾಮೇತಾಂತರಂತಿತೇ ॥**
—(7. 14.)

ನನ್ನ ಇಚ್ಛಾಧೀನವಾದ ತ್ರಿಗುಣಾತ್ಮಕವಾದ ದುರ್ಗಾದೇವಿಯಿಂದ ಅಭಿಮನ್ಯವಾದ ಪ್ರಕೃತಿಬಂಧವು ನನ್ನ ಪ್ರಸಾದ ಹೊರತು ದಾಟುವುದಕ್ಕೆ ಅಶಕ್ಯವು. ನನ್ನನ್ನೇ ಯಾರು ಶರಣು ಹೊಂದುತ್ತಾರೆಯೋ ಅವರೇ ಈ ಪ್ರಕೃತಿಬಂಧವನ್ನು ದಾಟುತ್ತಾರೆ.

(11) **ಭೂತಪ್ರಕೃತಿಮೋಕ್ಷಂ ಚಯೇವಿದು ರ್ಯಾಂತಿ ತೇ ಪರಂ ।**
—(13. 34.)

ಪ್ರಾಣಿಗಳಿಗೆ ಪ್ರಕೃತಿಬಂಧದಿಂದ ಬಿಡುಗಡೆಯಾಗುವ ಪ್ರಕಾರವನ್ನು ತಿಳಿದ ಜ್ಞಾನಿಗಳು ಪರಮಾತ್ಮನನ್ನು ಹೊಂದುತ್ತಾರೆ.

**ಪರಮಾತ್ಮನ ಪ್ರಾಪ್ತಿಯು** ಮುಕ್ತಿಯೆಂದು ಅನೇಕ ಸ್ಥಳಗಳಲ್ಲಿ ಶ್ರೀ ಕೃಷ್ಣನು ಹೇಳಿರುತ್ತಾನೆ :—

(12) **ಸ್ಥಿತ್ವಾಸ್ಯಾಮಂತಕಾಲೇಪಿ ಬ್ರಹ್ಮನಿರ್ವಾಣಮೃಚ್ಛತಿ ।**
—(2. 72.)

ಪೂರ್ವೋಕ್ತರೀತಿಯಲ್ಲಿ ಬ್ರಹ್ಮಧ್ಯಾನ ಮಾಡಿ ದೇಹತ್ಯಾಗ ಮಾಡುವವನು ಪ್ರಾಕೃತಶರೀರ ರಹಿತನಾದ ಬ್ರಹ್ಮನನ್ನು ಹೊಂದುತ್ತಾನೆ.

(13) **ಅಸಕ್ತೋಹ್ಯಾ ಚರ್ರಕರ್ಮ ಪರಮಾಪ್ನೋತಿ ಪೂರುಷಃ ।**
—(3. 19.)

ಫಲಾಪೇಕ್ಷೆಯಿಂದ ರಹಿತನಾಗಿ ನಿಯತಕರ್ಮವನ್ನು ಮಾಡುವವನು (ಜ್ಞಾನದ್ವಾರಾ) ಪರಮಾತ್ಮನನ್ನು ಹೊಂದುತ್ತಾನೆ.

(14) **ಜನ್ಮಕರ್ಮ ಚ ಮೇ ದಿವ್ಯಮೇವಂ ಯೋವೇತ್ತಿ ತತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿಮಾಮೇತಿಸೋಽರ್ಜುನ ॥**
—(14. 9.)

ಲೋಕವಿಲಕ್ಷಣವಾದ ನನ್ನ ಅವತಾರಗಳನ್ನೂ ಸೃಷ್ಟ್ಯಾದಿ ಕರ್ಮಗಳನ್ನೂ ಯಥಾರ್ಥವಾಗಿ ತಿಳಿದವನು........ನನ್ನನ್ನು ಹೊಂದುತ್ತಾನೆ.

(15) **ಯಜ್ಞಶಿಷ್ಟಾಮೃತ ಭುಜೋಯಾಂತಿ ಬ್ರಹ್ಮಸನಾತನಂ ।**
—(4. 31.)

ಯಜ್ಞ ಮಾಡಿ ಹವಿಶ್ಶೇಷವನ್ನು ಭೋಜನ ಮಾಡುವವರು ಅನಾದಿ ನಿತ್ಯನಾದ ಬ್ರಹ್ಮನನ್ನು ಹೊಂದುತ್ತಾರೆ.

(16) **ಯೋಗ ಯುಕ್ತೋಮುನಿರ್ಬ್ರಹ್ಮನಚಿರೇಣಾಧಿಗಚ್ಛತಿ ।**
—(5. 6.)

ವಿಹಿತಕರ್ಮಾನುಷ್ಠಾನರೂಪವಾದ ಉಪಾಯದಿಂದ ಸಹಿತನಾದ ಮನನಶೀಲನಾದ ಯೋಗಿಯು ಕ್ಷಿಪ್ರದಲ್ಲಿ ಬ್ರಹ್ಮನನ್ನು ಹೊಂದುತ್ತಾನೆ.

(17) **ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ।**
—(5. 24.)

ಬ್ರಹ್ಮನಲ್ಲಿ ಸದಾ ಆಸಕ್ತಚಿತ್ತವುಳ್ಳ ಯೋಗಿಯು ಪ್ರಾಕೃತಶರೀರರಹಿತನಾದ ಬ್ರಹ್ಮನನ್ನು ಹೊಂದುತ್ತಾನೆ.

(18) **ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂಗತಿಂ ।**
—(7. 18.)

ಜ್ಞಾನಿಯು ಸರ್ವೋತ್ತಮ ಸ್ಥಿತಿರೂಪವಾದ ಮುಕ್ತಿಯನ್ನು ಉದ್ದೇಶ ಮಾಡಿ ಸಮಾಧಿಯುಕ್ತವಾದ ಮನಸ್ಸುಳ್ಳವನಾಗಿ ನನ್ನನ್ನು ಹೊಂದುವವನಾಗಿದ್ದಾನೆ.

(19) **ಮದ್ಭಕ್ತಾಯಾಂತಿಮಾಮಪಿ ।** —(7. 23.)

ನನ್ನ ಭಕ್ತರು ನನ್ನನ್ನು ಹೊಂದುತ್ತಾರೆ.

(20) **ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯತ್ಯಸಂಶಯಃ ।**
—(8. 7.)

ನನ್ನಲ್ಲಿಯೇ ಸಮರ್ಪಿತವಾದ ಮನೋಬುದ್ಧಿಯುಳ್ಳವನು ನನ್ನನ್ನೇ ಹೊಂದುವನು. ಇದರಲ್ಲಿ ಸಂಶಯವಿಲ್ಲ.

(21) **ಅಭ್ಯಾಸಯೋಗಯುಕ್ತೇನ ಚೇತಸಾನಾನ್ಯಗಾಮಿನಾ ।**
**ಪರಮಂಪುರುಷಂದಿವ್ಯಂ ಯಾತಿಪಾರ್ಥಾನುಚಿಂತಯನ್ ॥**
—(8. 8.)

ಪುನಃ ಪುನಃ ಆವರ್ತನರೂಪವಾದ ಉಪಾಯದಿಂದ ಸಹಿತವಾದ, ಮತ್ತು

ವಿಷಯಾಂತರ ಸಂಚಾರರಹಿತವಾದ ಮನಸ್ಸಿನಿಂದ ಕ್ರೀಡಾದಿ ಗುಣವಿಶಿಷ್ಟನಾದ ಪರಮ ಪುರುಷನನ್ನು ಧ್ಯಾನ ಮಾಡುವವನು ಪರಮಾತ್ಮನನ್ನು ಹೊಂದುತ್ತಾನೆ.

(22) **........ಸತಂಪರಂಪುರುಷಮುಪೈತಿದಿವ್ಯಂ ।** —(8. 10.)

ಪರಮಾತ್ಮನನ್ನು ಸ್ಮರಿಸುತ್ತಾ ಅಂತ್ಯ ಕಾಲದಲ್ಲಿ ಯೋಗ ಬಲದಿಂದ ದೇಹ ತ್ಯಾಗ ಮಾಡುವ ಯೋಗಿಯು ಕ್ರೀಡಾದಿ ಗುಣವಿಶಿಷ್ಟನಾದ ಪರಮ ಪುರುಷನನ್ನು ಹೊಂದುತ್ತಾನೆ.

(23) **ಮಾಮುಪೇತ್ಯಪುನರ್ಜನ್ಮ........ನಾಪ್ನುವಂತಿ.... ।**
—(8. 15.)

ನನ್ನನ್ನು ಹೊಂದಿದವರು ಪುನರ್ಜನ್ಮವನ್ನು ಹೊಂದುವುದಿಲ್ಲ.

(24) **ಮಾಮುಪೇತ್ಯತುಕೌಂತೇಯ ಪುನರ್ಜನ್ಮನವಿದ್ಯತೇ ।**
—(8. 16.)

ಎಲೈ ಕೌಂತೇಯನೇ ! ನನ್ನನ್ನು ಹೊಂದಿದವರಿಗೆ ಪುನರ್ಜನ್ಮವು ಇರುವುದಿಲ್ಲ.

(25) **........ಯಾಂತಿಮದ್ಯಾಜಿನೋಽಪಿಮಾಂ ।** —(9. 25.)

ನನ್ನ ಪೂಜಕರು (ಜ್ಞಾನವನ್ನು ಸಂಪಾದಿಸಿ) ನನ್ನನ್ನು ಹೊಂದುತ್ತಾರೆ.

(26) **ಸನ್ಯಾಸಯೋಗಯುಕ್ತಾತ್ಮಾವಿಮುಕ್ತೋಮಾಮುಪೈಷ್ಯತಿ ।**
—(9. 28.)

ಫಲತ್ಯಾಗರೂಪವಾದ ಸನ್ಯಾಸ, ವಿಹಿತ ಕರ್ಮಾನುಷ್ಠಾನರೂಪವಾದ ಯೋಗ ಇವುಗಳಿಂದ ಸಹಿತವಾದ ಉತ್ತಮ ಮನಸ್ಸುಳ್ಳ ಯೋಗಿಯು ಜ್ಞಾನವನ್ನು ಸಂಪಾದಿಸಿ ಭವಬಂಧದಿಂದ ಬಿಡಲ್ಪಟ್ಟು ನನ್ನನ್ನು ಹೊಂದುತ್ತಾನೆ.

(27) **ಮಾಮೇವೈಷ್ಯತಿಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ।**
—(9. 34.)

ನನ್ನನ್ನೇ ಆಶ್ರಯಿಸಿ, ನನ್ನಲ್ಲಿಯೇ ನಿಯುಕ್ತವಾದ ಮನಸ್ಸುಳ್ಳ ಜ್ಞಾನಿಯು ನನ್ನನ್ನೇ ಹೊಂದುತ್ತಾನೆ.

(28) **ನಿರ್ವೈರಸ್ಸರ್ವಭೂತೇಷು ಯಸ್ಸಮಾಮೇತಿಪಾಂಡವ ।**
—(11. 55.)

ಸಕಲ ಸಜ್ಜನರಲ್ಲಿಯೂ ವಿರೋಧರಹಿತನಾದ ಜ್ಞಾನಿಯು ನನ್ನನ್ನು ಹೊಂದುತ್ತಾನೆ.

(29) **ಯದಾಭೂತಪೃಥಗ್ಭಾವ ಮೇಕಸ್ಥಮನುಪಶ್ಯತಿ ।**
**ತತಏವಚವಿಸ್ತಾರಂ ಬ್ರಹ್ಮಸಂಪದ್ಯತೇತದಾ ॥** —(13. 31.)

ಪರಮಾತ್ಮನಿಂದ ಭಿನ್ನರಾದ ಅನಂತ ಪ್ರಾಣಿಸಮೂಹವು ಒಬ್ಬ ಪರಮಾತ್ಮನಲ್ಲಿ ಆಶ್ರಯಿಸಿಕೊಂಡಿರುವುವೆಂದು ತಿಳಿಯುವವನು ಮತ್ತು ಪರಮಾತ್ಮನಿಂದಲೇ ಪ್ರಾಣಿಗಳಿಗೆ ಸೃಷ್ಟ್ಯಾದಿಗಳು ಆಗುವುವೆಂದು ತಿಳಿಯುವವನು ಪರಬ್ರಹ್ಮನನ್ನು ಹೊಂದುತ್ತಾನೆ.

**(30) ಗಚ್ಛಂತ್ಯಮೂಢಾಃ ಪದಮವ್ಯಯಂತತ್** —(15. 5.)

ಜ್ಞಾನಿಗಳು ಅವ್ಯಯನಾದ ಪರಮಾತ್ಮನನ್ನು ಹೊಂದುತ್ತಾರೆ.

**(31) ಮಾಮೇವೈಷ್ಯಸಿಸತ್ಯಂತೇ ಪ್ರತಿಜಾನೇಪ್ರಿಯೋಽಸಿಮೇ ।**
—(18. 65.)

ನೀನು ನನ್ನ ಭಕ್ತನಾಗಿ ನನ್ನನ್ನು ಸೇವಿಸಿದರೆ ನೀನು ನನ್ನನ್ನೇ ಹೊಂದುತ್ತೀಯೆ. ಇದು ಸತ್ಯವೆಂದು ಪ್ರತಿಜ್ಞೆ ಮಾಡಿ ಹೇಳುತ್ತೇನೆ. ನೀನು ನನಗೆ ಪ್ರಿಯನು.

**(32) ಭಕ್ತಿಂಮಯಿಪರಾಂಕೃತ್ವಾ ಮಾಮೇವೈಷ್ಯತ್ಯಸಂಶಯಃ ।**
—(18. 68.)

ಭಗವದ್ಗೀತೆಯನ್ನು ವಿಷ್ಣು ಭಕ್ತರಿಗೆ ಉಪದೇಶ ಮಾಡುವವನು ಉತ್ಕೃಷ್ಟ ಭಕ್ತಿಯನ್ನು ಹೊಂದಿ ನಿಸ್ಸಂಶಯವಾಗಿ ನನ್ನನ್ನೇ ಹೊಂದುತ್ತಾನೆ.

**ಪುನರ್ಜನ್ಮಾಭಾವವು** ( ಮೃತ್ಯುತರಣವು ಮತ್ತು ಸಂಸಾರನಿವೃತ್ತಿಯು ) ಮುಕ್ತಿಯೆಂದು ಅನೇಕ ಸ್ಥಳಗಳಲ್ಲಿ ಶ್ರೀ ಕೃಷ್ಣನು ನಿರೂಪಿಸಿರುತ್ತಾನೆ :—

**(33) ಸಮದುಃಖಸುಖಂ ಧೀರಂ ಸೋಽಮೃತತ್ವಾಯಕಲ್ಪತೇ ।**
—(2. 15.)

ಲೌಕಿಕ ಸುಖಗಳಿಂದ ಉಬ್ಬದೆ, ದುಃಖಗಳಿಂದ ಕುಗ್ಗದ ವಿಷಯ ಸನ್ನಿಕರ್ಷದಿಂದ ಚಿತ್ತವಿಕಾರರಹಿತನಾದ ಜ್ಞಾನಿಯು ಮರಣರಹಿತವಾದ ಮುಕ್ತಿಯನ್ನು ಹೊಂದುವುದಕ್ಕೆ ಸಮರ್ಥನಾಗುವನು.

**(34) ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ।**
—(5. 17.)

ಬ್ರಹ್ಮಾಪರೋಕ್ಷದಿಂದ ದಗ್ಧ ಪಾಪವುಳ್ಳ ಜ್ಞಾನಿಗಳು ಪುನರ್ಜನ್ಮರಹಿತವಾದ ಮುಕ್ತಿಯನ್ನು ಹೊಂದುತ್ತಾರೆ.

**(35) ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಂ ।**
**ನಾಪ್ನುವಂತಿ........** ॥ —(8. 15.)

ನನ್ನನ್ನು ಹೊಂದಿದ ಮುಕ್ತರು ಪುನರ್ಜನ್ಮವನ್ನು ಹೊಂದುವುದಿಲ್ಲ.

(36) **ಮಾಮುಪೇತ್ಯತುಕೌಂತೇಯ ಪುನರ್ಜನ್ಮನವಿದ್ಯತೇ ।**
—(8. 16.)

ನನ್ನನ್ನು ಹೊಂದಿದ ಮುಕ್ತರಿಗೆ ಪುನರ್ಜನ್ಮವು ಇರುವುದಿಲ್ಲ.

(37) **ಯಂಪ್ರಾಪ್ಯನನಿವರ್ತಂತೇ ತದ್ಧಾಮಪರಮಂಮಮ ।**
—(8. 21.)

ಯಾರನ್ನು ಹೊಂದಿದ ನಂತರ ಪುನಃ ಸಂಸಾರಕ್ಕೆ ಹಿಂತಿರುಗಿ ಬರುವುದಿಲ್ಲವೋ ಅಂಥಾದ್ದು ನನ್ನ ಸರ್ವೋತ್ತಮ ರೂಪವು.

(38) **........ಏಕಯಾಯಾತ್ಯನಾವೃತ್ತಿಂ ।** —(8. 26.)

ಉತ್ತರಾಯಣ ಮಾರ್ಗದಲ್ಲಿ ಪ್ರಯಾಣ ಮಾಡಿದ ಜ್ಞಾನಿಗಳು ಅಪುನರಾವೃತ್ತಿಯನ್ನು ಹೊಂದುತ್ತಾರೆ.

(39) **ತೇಷಾಮಹಂ ಸಮುದ್ಧರ್ತಾಮೃತ್ಯುಸಂಸಾರಸಾಗರಾತ್ ।**
**ಭವಾಮಿ ನಚಿರಾತ್ಪಾರ್ಥಮಯ್ಯಾವೇಶಿತಚೇತಸಾಂ ॥**
—(12. 7.)

ನನ್ನ ಉಪಾಸಕರನ್ನು ನಾನು ಮೃತ್ಯುರೂಪವಾದ ಸಂಸಾರದ ದೆಸೆಯಿಂದ ಉದ್ಧರಿಸುತ್ತೇನೆ. ( ಮುಕ್ತರನ್ನಾಗಿ ಮಾಡುತ್ತೇನೆಂದರ್ಥವು. )

(40) **ಯ ಏವಂವೇತ್ತಿಪುರುಷಂ........ನಸಭೂಯೋಽಭಿಜಾಯತೇ ।**
—(13. 24.)

ಪ್ರಕೃತಿ ಪುರುಷ ಸ್ವರೂಪವನ್ನು ವಿವಿಕ್ತವಾಗಿ ತಿಳಿದ ಜ್ಞಾನಿಯು ಕಾರಣಾಂತರದಿಂದ ದುರಾಚಾರಗಳನ್ನು ಮಾಡಿದರೂ ಪುನರ್ಜನ್ಮವನ್ನು ಹೊಂದುವುದಿಲ್ಲ. ( ಮುಕ್ತನಾಗಿಯೇ ಆಗುತ್ತಾನೆಂದರ್ಥವು. )

(41) **ತೇಪಿಚಾತಿತರಂತ್ಯೇವಮೃತ್ಯುಂಶ್ರುತಿ ಪರಾಯಣಾಃ ।**
—(13. 26.)

ಶ್ರವಣೋಪಾಸನೆಯೇ ಪ್ರಚುರವಾಗಿ ಉಳ್ಳಂಥಾ ಕರ್ಮಯೋಗಿಗಳು ಸಹ ಮೃತ್ಯುವನ್ನು ದಾಟುತ್ತಾರೆ. (ಸಂಸಾರನಿವೃತ್ತಿಯನ್ನು ಹೊಂದುತ್ತಾರೆ. )

(42) **ಸರ್ಗೇಽಪಿನೋಪಜಾಯಂತೇ ಪ್ರಳಯೇನವ್ಯಥಂತಿಚ ।**
—(14. 2.)

ನನ್ನ ಸಾಧರ್ಮ್ಯವನ್ನು ಹೊಂದಿದ ಮುಕ್ತರು ಸೃಷ್ಟಿ ಕಾಲದಲ್ಲಿ ಹುಟ್ಟುವುದಿಲ್ಲ. ಪ್ರಳಯದಲ್ಲಿ ಮರಣಾದಿ ರೂಪವ್ಯಥೆಯನ್ನು ಹೊಂದುವುದಿಲ್ಲ.

(43) **ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ।**
—(14. 20.)

ಗುಣಾತೀತನಾದ ಮುಕ್ತನು ಜನನ, ಮರಣ, ಜರಾ, ದುಃಖಗಳಿಂದ ಬಿಡಲ್ಪಟ್ಟು ಮುಕ್ತಿಯನ್ನು ಹೊಂದುತ್ತಾನೆ.

**(44) ತತಃ ಪರಂ ತತ್ಪರಿಮಾರ್ಗಿತವ್ಯಂಯಸ್ಮಿನ್ಗತಾನನಿವರ್ತಂತಿ ಭೂಯಃ । —(15. 4.)**

ಪರಾಪರತತ್ವ ವಿವೇಕವನ್ನು ಹೊಂದಿದವನು, ಅನಂತರದಲ್ಲಿ ಯಾವನನ್ನು ಹೊಂದಿದವರು ಪುನಃ ಗರ್ಭಯಾತನೆಯನ್ನು ಹೊಂದುವುದಿಲ್ಲವೋ ಅಂಥ ಪರ ಬ್ರಹ್ಮನನ್ನು ಶ್ರವಣ ಮನನಾದಿಗಳಿಂದ ತಿಳಿದುಕೊಳ್ಳಬೇಕು.

ಮುಕ್ತಿಯು **ಸುಖಪ್ರಾಪ್ತಿರೂಪ**ವಾದುದೆಂದು ಕೆಲವು ಶ್ಲೋಕಗಳಲ್ಲಿ ಶ್ರೀ ಕೃಷ್ಣನು ಹೇಳಿರುತ್ತಾನೆ.

**(45) ಯುಕ್ತಃಕರ್ಮಫಲಂತ್ಯಕ್ತ್ವಾ ಶಾಂತಿಮಾಪ್ನೋತಿನೈಷ್ಠಿಕೀಂ । —(5. 12.)**

ಭಗವದರ್ಪಣ ಬುದ್ಧಿಯಿಂದ ಕರ್ಮಾನುಷ್ಠಾನ ಮಾಡುವ ಯೋಗಿಯು ಕರ್ಮಫಲದಲ್ಲಿ ಸ್ನೇಹವನ್ನು ಬಿಟ್ಟು ಸ್ವರೂಪಭೂತವಾದ ಅತ್ಯುತ್ತಮವಾದ ಸುಖವನ್ನು ಹೊಂದುತ್ತಾನೆ. ( ಸ್ವರೂಪಾನಂದವಿರ್ಭಾವ ರೂಪವಾದ ಮುಕ್ತಿಯನ್ನು ಹೊಂದುತ್ತಾನೆ ಎಂದರ್ಥವು. )

**(46) ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ । —(5. 21.)**

ಭಗವಧ್ಯಾನ ಮಾಡುವ ಯೋಗಿಯು ಮುಕ್ತನಾಗಿ ಶಾಶ್ವತವಾದ ನಿತ್ಯ ಸುಖವನ್ನು ಅನುಭವಿಸುತ್ತಾನೆ.

ಕೆಲವು ಶ್ಲೋಕಗಳು ಮುಕ್ತಿಯು ಶಾಂತಿರೂಪವೆಂದೂ, ಮುಕ್ತಿಯು ಪರಮಸಂಸಿದ್ಧಿಯೆಂದೂ, ಪರಮಗತಿಯೆಂದೂ, ಪರಮಶ್ರೇಯಸ್ಸೆಂದೂ ವರ್ಣನೆ ಮಾಡುತ್ತವೆ. ಈ ಧರ್ಮಗಳು ಚತುರ್ವಿಧ ಮುಕ್ತಿಗೂ ಸಾಮಾನ್ಯವಾದುವುಗಳು. ಶ್ರೀ ಕೃಷ್ಣನು ಹೇಳುತ್ತಾನೆ :—

**(47) ಸಶಾಂತಿಮಾಪ್ನೋತಿ ನ ಕಾಮಕಾಮೀ । —(2. 70.)**

ವಿಷಯಾಭಿಲಾಷೆಯಿಂದ ರಹಿತನಾದವನು ಶಾಂತಿಯನ್ನು ಎಂದರೆ ಮೋಕ್ಷವನ್ನು ಹೊಂದುತ್ತಾನೆ. ಭೋಗಾಪೇಕ್ಷೆಯುಳ್ಳವನು ಮುಕ್ತನಾಗಲಾರನು.

**(48) ನಿರ್ಮಮೋ ನಿರಹಂಕಾರಃ ಸಶಾಂತಿಮಧಿಗಚ್ಛತಿ । —(2. 71.)**

ಮಮತಾಹಂಕಾರಗಳಿಂದ ರಹಿತನಾದ ಜ್ಞಾನಿಯು ಶಾಂತಿಯನ್ನು ಎಂದರೆ ಮೋಕ್ಷವನ್ನು ಹೊಂದುತ್ತಾನೆ.

(49) **ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।**
**ನಚಸನ್ಯಸನಾದೇವ ಸಿದ್ಧಿಂಸಮಧಿಗಚ್ಛತಿ ॥** —(3. 4.)

ಕರ್ಮಾಕರಣದಿಂದ **ನೈಷ್ಕರ್ಮ್ಯ**ವೆಂಬ ಹೆಸರುಳ್ಳ ಮುಕ್ತಿಯನ್ನು ಜೀವನು ಹೊಂದುವುದಿಲ್ಲ. ಕೇವಲ ಸನ್ಯಾಸದಿಂದಲೂ **ಸಿದ್ಧಿ**ಯನ್ನು ( ಮೋಕ್ಷವನ್ನು ) ಹೊಂದುವುದಿಲ್ಲ.

(50) **ಪರಸ್ಪರಂಭಾವಯಂತಃ ಶ್ರೇಯಃಪರಮವಾಪ್ಸ್ಯಥ ।**
—(3. 11.)

ದೇವತೆಗಳೂ ನೀವೂ (ಮನುಷ್ಯರೂ) ಅನ್ಯೋನ್ಯ ಪ್ರೀತಿ ಮಾಡುವವರಾಗಿ ಪರಮ ಶ್ರೇಯಸ್ಸನ್ನು (ಮೋಕ್ಷವನ್ನು) ಹೊಂದುತ್ತೀರಿ.

(51) **........ಏವಂಜ್ಞಾತ್ವಾ ವಿಮೋಕ್ಷ್ಯಸೇ ।** —(4. 32.)

ಪೂರ್ವೋಕ್ತ ಬ್ರಹ್ಮೋಪಾಸನೆಯೇ ಮೊದಲಾದ ಸರ್ವ ಯಜ್ಞಗಳೂ ಕರ್ಮರೂಪವೆಂದು ತಿಳಿದು ಸ್ವವಿಹಿತ ಕರ್ಮವನ್ನು ಅನುಷ್ಠಾನ ಮಾಡುವ ನೀನು ಜ್ಞಾನಿಯಾಗಿ ಮುಕ್ತನಾಗುತ್ತೀಯೆ.

(52) **ಜ್ಞಾನಂ ಲಬ್ಧ್ವಾಪರಾಂ ಶಾಂತಿ ಮಚಿರೇಣಾಧಿಗಚ್ಛತಿ ।**
—(4. 39.)

ಜ್ಞಾನವನ್ನು ಸಂಪಾದಿಸಿದ ನಂತರ ಶೀಘ್ರದಲ್ಲಿಯೇ ಶಾಂತಿಯನ್ನು ( ಅತ್ಯುತ್ತಮ ಮೋಕ್ಷ ಸುಖವನ್ನು) ಹೊಂದುತ್ತಾನೆ.

(53) **ಸುಹೃದಂ ಸರ್ವಭೂತಾನಾಂ ಜ್ಞಾತ್ವಾಮಾಂಶಾಂತಿಮೃಚ್ಛತಿ ।**
—(5. 29.)

ನನ್ನ ಭಕ್ತನು ಸರ್ವ ಪ್ರಾಣಿಗಳಿಗೂ ಅನಿಮಿತ್ತ ಬಂಧುವಾದ ನನ್ನನ್ನು ತಿಳಿದು ಶಾಂತಿಯನ್ನು ( ಮೋಕ್ಷವನ್ನು ) ಹೊಂದುತ್ತಾನೆ.

(54) **ಯೋಗೀನಿಯತಮಾನಸಃ ।**
**ಶಾಂತಿಂನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ।**
—(6. 15.)

ಜಿತಮನಸ್ಸುಳ್ಳಯೋಗಿಯು ದೇಹತ್ಯಾಗಾನಂತರದಲ್ಲಿ ಪ್ರಾಪ್ತವಾಗುವ **ನನ್ನಲ್ಲಿ ಸ್ಥಿತಿರೂಪವಾದ** ಶಾಂತಿಯನ್ನು ( ಮೋಕ್ಷವನ್ನು) ಹೊಂದುತ್ತಾನೆ.

(55) **ಅನೇಕ ಜನ್ಮಸಂಸಿದ್ಧಸ್ತತೋ ಯಾತಿಪರಾಂಗತಿಂ ।**
—(6. 45.)

ಯೋಗಿಯು ಬಹು ಜನ್ಮಗಳ ಪ್ರಯತ್ನದಿಂದ ಜ್ಞಾನಸಂಪನ್ನನಾಗಿ ನಂತರ ಪರಮಗತಿಯನ್ನು ( ಮೋಕ್ಷವನ್ನು ) ಹೊಂದುತ್ತಾನೆ.

(56) ........ಸಯಾತಿಪರಮಾಂಗತಿಂ । —(8. 13.)

ಪ್ರಣವವನ್ನು ಜಪಿಸುತ್ತಾ ಪರಬ್ರಹ್ಮನನ್ನು ಧ್ಯಾನ ಮಾಡಿ ದೇಹ ಬಿಡುವ ಯೋಗಿಯು ಪರಮಗತಿಯನ್ನು ( ಮೋಕ್ಷವನ್ನು ) ಹೊಂದುತ್ತಾನೆ.

(57) ನಿವಸಿಷ್ಯಸಿಮಯ್ಯೇವ ಅತಊರ್ಧ್ವಂನ ಸಂಶಯಃ ।
—(12. 8.)

ನನ್ನ ಜ್ಞಾನವಾದ ಮೇಲೆ ನನ್ನಲ್ಲಿ ಸ್ಥಿತಿಯನ್ನು ( ನಿರ್ದುಃಖಾನಂದಾನು ಭವಾತ್ಮಕವಾದ ಮೋಕ್ಷವನ್ನು ) ಹೊಂದುತ್ತೀಯೆ.

(58) ಮದರ್ಥಮಪಿಕರ್ಮಾಣಿ ಕುರ್ವನ್ಸಿದ್ಧಿಮವಾಪ್ಸ್ಯಸಿ ।
—(12. 10.)

ನನ್ನ ಪ್ರೀತ್ಯರ್ಥವಾಗಿ ಕರ್ಮಗಳನ್ನು ಮಾಡುವನಾಗಿ ನೀನು ( ಜ್ಞಾನವನ್ನು ಹೊಂದಿ ) ಸಿದ್ಧಿಯನ್ನು ( ಮೋಕ್ಷವನ್ನು ) ಹೊಂದುತ್ತೀಯೆ.

(59) ........ತ್ಯಾಗಾಚ್ಛಾಂತಿರನಂತರಂ । —(12. 12.)

ಕರ್ಮಫಲ ತ್ಯಾಗಪೂರ್ವಕವಾಗಿ ಭಗವಧ್ಯಾನ ಮಾಡುವ ಜ್ಞಾನಿಯು ಅನಂತರದಲ್ಲಿ ಶಾಂತಿಯನ್ನು ( ಮೋಕ್ಷವನ್ನು ) ಹೊಂದುವನು.

(60) ಯದ್ಜ್ಞಾತ್ವಾಽಮೃತಮಶ್ನುತೇ । —(13. 13.)

ಪರಬ್ರಹ್ಮನನ್ನು ತಿಳಿದ ಮೇಲೆ ಅಧಿಕಾರಿಯು ಮೋಕ್ಷವನ್ನು ಹೊಂದುತ್ತಾನೆ.

(61) ........ತತೋಯಾತಿಪರಾಂಗತಿಂ । —(13. 29.)

ಸರ್ವತ್ರಸಮನಾದ ಭಗವಂತನನ್ನು ತಿಳಿಯುವವನು ನರಕಾದ್ಯನರ್ಥಗಳಿಗೆ ಗುರಿಯಾಗದೆ ಕೊನೆಯಲ್ಲಿ ಪರಮಗತಿಯನ್ನು ( ಮೋಕ್ಷವನ್ನು ) ಹೊಂದುತ್ತಾನೆ.

(62) ಯದ್ಜ್ಞಾತ್ವಾಮುನಯಃ ಸರ್ವೇಪರಾಂಸಿದ್ಧಿಮಿತೋಗತಾಃ ।
—(14. 1.)

ಈ ತತ್ವವನ್ನು ತಿಳಿದು ಸರ್ವ ಮನನಶೀಲರೂ ಸಂಸಾರ ಬಂಧದಿಂದ ಬಿಡಲ್ಪಟ್ಟು ಪರಮಸಿದ್ಧಿಯನ್ನು ( ಮೋಕ್ಷವನ್ನು ) ಹೊಂದಿದರು.

(63) ಏತದ್ಬುಧ್ವಾಬುದ್ಧಿಮಾನ್ಸ್ಯಾತ್ ಕೃತಕೃತ್ಯಶ್ಚಭಾರತ ।
—(15. 20.)

ಪರಮಾತ್ಮನ ಪುರುಷೋತ್ತಮತ್ವವನ್ನು ತಿಳಿದವನು ಅಪರೋಕ್ಷ ಜ್ಞಾನವನ್ನು ಹೊಂದಿ ನಂತರ ಕೃತಕೃತ್ಯನಾಗುತ್ತಾನೆ. ( ಮುಕ್ತನಾಗುತ್ತಾನೆ. )

(64) **........ತತೋಯಾತಿಪರಾಂಗತಿಂ** । —(16. 22.)

ಕಾಮಕ್ರೋಧ ಲೋಭಗಳಿಂದ ರಹಿತನಾದವನು ತನಗೆ ಬೇಕಾದ ಪುರುಷಾರ್ಥ ಸಾಧನೆಯನ್ನು ಮಾಡಿಕೊಂಡು ನಂತರ ಉತ್ತಮ ಗತಿಯನ್ನು ಹೊಂದುತ್ತಾನೆ. ( ಮುಕ್ತನಾಗುತ್ತಾನೆ. )

ಈ ರೀತಿಯಾಗಿ ಪರಮಗತಿ, ಪರಮಪದ, ಪರಮಸಂಸಿದ್ಧಿ, ಶಾಂತಿ, ನೈಷ್ಕರ್ಮ್ಯ, ಪರಮಶ್ರೇಯಸ್ಸು ಇತ್ಯಾದಿ ನಾನಾ ನಾಮಗಳು ಸಕಲ ಕರ್ಮ ಕ್ಷಯ, ಬಂಧನಿವೃತ್ತಿ, ಬ್ರಹ್ಮಪ್ರಾಪ್ತಿ, ಶಾಶ್ವತ ಲೋಕವಾಸ, ಪುನರ್ಜನ್ಮಾಭಾವ, ನಿತ್ಯ ಸುಖಾನುಭವವೇ ಮುಂತಾದ ಅನೇಕ ಧರ್ಮಗಳು ಚತುರ್ವಿಧದಲ್ಲಿ ಯಾವ ವಿಧವಾದ ಮುಕ್ತಿಯನ್ನು ಹೊಂದಿದವರಿಗೂ ತಪ್ಪದೇ ಇರುವುವು. ಆದರೂ ಮೂರು ನಾಲ್ಕು ಸ್ಥಳಗಳಲ್ಲಿ ಪರಮಾತ್ಮನಲ್ಲಿ ಪ್ರವೇಶರೂಪವಾದ **ಸಾಯುಜ್ಯ** ಮುಕ್ತಿಯೂ ಇರುವುದೆಂದು ಶ್ರೀ ಕೃಷ್ಣನು ಸೂಚಿಸಿರುತ್ತಾನೆ :—

(1) **ವಿಶಂತಿ ಯದ್ಯತಯೋ ವೀತರಾಗಾಃ** । —(8. 11.)

ರಾಗಾದಿ ದೋಷರಹಿತರಾದ ಜ್ಞಾನಿಗಳು ಯಾವನನ್ನು ಪ್ರವೇಶಿಸುತ್ತಾರೆಯೋ ( ಅಂಥ ಪರಮಾತ್ಮನ ಸ್ವರೂಪವನ್ನು ಹೇಳುತ್ತೇನೆ. )

(2) **ಭಕ್ತ್ಯಾತ್ವನನ್ಯಯಾಶಕ್ಯ ಅಹಮೇವಂ ವಿಧೋಽರ್ಜುನ ।**
**ಜ್ಞಾತುಂದ್ರಷ್ಟುಂ ಚತತ್ವೇನ ಪ್ರವೇಷ್ಟುಂಚಪರಂತಪ ॥**
—(11. 54.)

ಎಲೈ ಪರಂತಪನೇ ! ಅನನ್ಯ ಭಕ್ತಿಯಿಂದ ನನ್ನನ್ನು ತಿಳಿಯುವುದಕ್ಕೂ, ಪ್ರತ್ಯಕ್ಷವಾಗಿ ನೋಡುವುದಕ್ಕೂ, ನಂತರ ಮುಕ್ತಿಯಲ್ಲಿ ಪ್ರವೇಶಿಸುವುದಕ್ಕೂ ನಿನಗೆ ಸಾಧ್ಯವಾಗುವುದು.

(3) **ತತೋಮಾಂತತ್ವತೋ ಜ್ಞಾತ್ವಾವಿಶತೇತದನಂತರಂ** ।
—(18. 55.)

ಅಧಿಕಾರಿಯು ಭಕ್ತಿಯಿಂದ ನನ್ನನ್ನು ಯಥಾರ್ಥವಾಗಿ ತಿಳಿದ ನಂತರ, ಮುಕ್ತಿಯಲ್ಲಿ ನನ್ನನ್ನು ಪ್ರವೇಶಿಸುತ್ತಾನೆ.

**ಮದ್ಭಾವಮಾಗತಾಃ** —(4. 19.)
**ಮದ್ಭಾವಾಯೋಪಪದ್ಯತೇ** —(14. 19.)
**ಮದ್ಭಾವಂ ಸೋಽಧಿಗಚ್ಛತಿ** —(14. 19.)

ಇತ್ಯಾದಿ ಸ್ಥಳಗಳಲ್ಲಿ ನನ್ನ ಭಾವವನ್ನು ಎಂದರೆ ನನ್ನ ರೂಪದಂತೆ ರೂಪವನ್ನೂ ಭಕ್ತನು ಹೊಂದುತ್ತಾನೆ ಎಂದು **ಸಾರೂಪ್ಯ** ಮುಕ್ತಿಯನ್ನು ಶ್ರೀ ಕೃಷ್ಣನು

ವರ್ಣಿಸಿರುತ್ತಾನೆ. ಆದರೆ ಈ ಶ್ಲೋಕಗಳಲ್ಲಿ ಮಯಿಭಾವಂ ಮದ್ಭಾವಂ ಎಂದು ವಿಗ್ರಹ ಮಾಡಿದರೆ ನನ್ನಲ್ಲಿ ಸ್ಥಿತಿಯನ್ನು ಹೊಂದುತ್ತಾನೆ. ಎಂದೂ ಅರ್ಥವಾಗ ಬಹುದಾದುದರಿಂದ ಈ ವಾಕ್ಯಗಳು ನಿರವಕಾಶವಾಗಿ ಸಾರೂಪ್ಯಮುಕ್ತಿಯನ್ನೇ ವರ್ಣಿಸುವುವೆಂದು ಹೇಳಲಾಗುವುದಿಲ್ಲ. ಹದಿನಾಲ್ಕನೆಯ ಅಧ್ಯಾಯದ ದ್ವಿತೀಯ ಶ್ಲೋಕವು ಬಹಳ ಸ್ಪಷ್ಟವಾಗಿರುತ್ತದೆ. ಶ್ರೀ ಕೃಷ್ಣನು ಹೇಳುತ್ತಾನೆ :—

**(4) ಇದಂ ಜ್ಞಾನಮುಪಾಶ್ರಿತ್ಯಮಮಸಾಧರ್ಮ್ಯಮಾಗತಾಃ ।**
**ಸರ್ಗೇಽಪಿನೋಪಜಾಯಂತೇ ಪ್ರಳಯೇನವ್ಯಥಂತಿಚ ॥**
—(14. 2.)

ನನ್ನಿಂದ ( ಶ್ರೀ ಕೃಷ್ಣನಿಂದ ) ಉಪದಿಷ್ಟವಾದ ತತ್ವವನ್ನು ತಿಳಿದವರು ನನ್ನ ಸಮಾನ ಧರ್ಮವನ್ನು* ಹೊಂದಿದವರಾಗಿ, ( ಚತುರ್ಬಾಹುಗಳನ್ನು ಧರಿಸಿ ಪೀತಾಂಬರ ವನಮಾಲಾದಿಗಳನ್ನು ಧಾರಣ ಮಾಡಿ ವಿಷ್ಣು ರೂಪಕ್ಕೆ ಸದೃಶವಾದ ರೂಪ ಉಳ್ಳವರಾಗಿ), ಸೃಷ್ಟಿ ಕಾಲದಲ್ಲಿ ಪುನಃ ಉತ್ಪನ್ನರಾಗುವುದಿಲ್ಲ; ಪ್ರಳಯ ದಲ್ಲಿ ಮರಣವನ್ನು ಹೊಂದುವುದಿಲ್ಲ.

---

* ಸೃಷ್ಟಿಗೆ ಪೂರ್ವದಲ್ಲಿ ಪದ್ಮನಾಭದೇವರ ನಾಭಿಕಮಲದಿಂದ ಉತ್ಪನ್ನರಾದ ಚತುರ್ಮುಖಿ ಬ್ರಹ್ಮದೇವರು "ತಪ, ತಪ" ಎಂಬ ಪರಮಾತ್ಮನ ಆದೇಶಾನುಸಾರವಾಗಿ ಪ್ರಳಯೋದಕದ ಮಧ್ಯದಲ್ಲಿದ್ದ ಕಮಲದಲ್ಲಿಯೇ ಕುಳಿತು ದಿವ್ಯ ಸಹಸ್ರ ವರ್ಷಗಳ ಪರ್ಯಂತ ಉಗ್ರವಾದ ತಪಶ್ಚರ್ಯೆಯನ್ನು ಮಾಡಿದರು. ಬ್ರಹ್ಮ ದೇವರ ಭಕ್ತಿಪೂರ್ವಕವಾದ ತಪಸ್ಸಿನಿಂದ ಸುಪ್ರೀತನಾದ ವಿಷ್ಣುವು ತನ್ನ ಪರಿವಾರಭೂತರಾದ ಮುಕ್ತ ದೇವತೆಗಳಿಂದ ಸಹಿತನಾಗಿ, ಲಕ್ಷ್ಮಿಯಿಂದ ಒಡಗೂಡಿ, ತನ್ನ ನಿಜ ವೈಭವವನ್ನು ಬ್ರಹ್ಮ ದೇವರಿಗೆ ದರ್ಶನ ಮಾಡಿಸಿದನು. ಪರಮಾತ್ಮನ ಜೊತೆಯಲ್ಲಿ ಬಂದಿದ್ದ ಮುಕ್ತರೆಲ್ಲರೂ ಉತ್ತಮ ಯೋಗ್ಯತೆಯನ್ನು ಹೊಂದಿದವರಾದುದರಿಂದ ಆ ಪರಮಾತ್ಮನ ಸಾರೂಪ್ಯವನ್ನು ಹೊಂದಿದವರು. ಭಾಗವತ ದ್ವಿತೀಯ ಸ್ಕಂಧದ ಒಂಭತ್ತನೆಯ ಅಧ್ಯಾಯದಲ್ಲಿ ಇದು ವರ್ಣಿತವಾಗಿರುವುದು. "**ನಯತ್ರಮಾಯಾ**" ಎಂದರೆ ಮಾಯಾರಹಿತವಾದ ತನ್ನ ಲೋಕವನ್ನು ಶ್ರೀ ವಿಷ್ಣುವು ಬ್ರಹ್ಮ ದೇವರಿಗೆ ತೋರಿಸಿದನು ಎಂದು ಹೇಳಿರುತ್ತದೆ.

**"ತಸ್ಮೈ ಸ್ವಲೋಕಂ ಭಗವಾನ್ ಸಭಾಜಿತಃ ಸಂದರ್ಶಯಾಮಾಸ ಪರಂನಯತ್ಪರಂ । ವ್ಯಪೇತಸಂಕ್ಲೇಶ ವಿಮೋಹಸಾಧ್ವಸಂ ಸಂದೃಷ್ಟ ವದ್ಭಿರ್ವಿಬುಧೈರಭಿಷ್ಟುತಂ ॥9॥ ........ನಯತ್ರಮಾಯಾ ಕಿಮುತಾಪರೇಹ ರೇರನುವ್ರತಾಯತ್ರ ಸುರಾಸುರಾರ್ಚಿತಾಃ ॥10॥ ಶ್ಯಾಮಾವದಾತಾಃ ಶತ ಪತ್ರಲೋಚನಾಃ ಪಿಶಂಗವಸ್ತ್ರಾಃ ಸುರುಚಃಸುಪೇಶಸಃ । ಸರ್ವೇಚತು ರ್ಬಾಹವ ಉನ್ಮಿಷನ್ಮಣಿಪ್ರವೇಕ ನಿಷ್ಕಾಭರಣಾಃ ಸುವರ್ಚಸಃ ॥ 11-14 ॥**

ಇತ್ಯಾದಿ ಶ್ಲೋಕಗಳು ಈ ವಿಷಯದಲ್ಲಿ ಪ್ರಮಾಣವಾಗಿರುತ್ತವೆ.

**ಸಾಮೀಪ್ಯ** ಮುಕ್ತಿಯನ್ನು ಪ್ರತ್ಯೇಕವಾಗಿ ನಿರ್ದೇಶ ಮಾಡಿ ಹೇಳುವ ಸ್ಪಷ್ಟವಾದ ವಾಕ್ಯಗಳಿರುವುದಿಲ್ಲ. ಆದರೂ,

(5) **ಶಾಂತಿಂ ನಿರ್ವಾಣ ಪರಮಾಂ ಮತ್ಸಂಸ್ಥಾಮಧಿಗಚ್ಛತಿ ।**
—(6. 15.)

(6) **ನಿವಸಿಷ್ಯಸಿಮಯ್ಯೇವ ಅತಊರ್ಧ್ವಂ ನಸಂಶಯಃ ॥**
—(12. 8.)

ಇತ್ಯಾದಿ ಕೆಲವು ವಾಕ್ಯಗಳಲ್ಲಿ "ಸಮೀಪದಲ್ಲಿ" ಎಂದು ಅರ್ಥವನ್ನು ಕೊಡುವ ಸಪ್ತಮೀ ವಿಭಕ್ತಿ ಪ್ರತ್ಯಯಾದಿಗಳನ್ನು ಉಪಯೋಗಿಸಿರುತ್ತಾನೆ. ಪ್ರಕೃತಿಬಂಧ ನಿವೃತ್ತಿಯಾದ ನಂತರ ಜ್ಞಾನಿಯು ನನ್ನಲ್ಲಿ ಸ್ಥಿತಿಯನ್ನು ಎಂದರೆ ನನ್ನ ಲೋಕದಲ್ಲಿ ನನ್ನ ಸಮೀಪದಲ್ಲಿ ಸ್ಥಿತಿಯನ್ನು ಹೊಂದುತ್ತಾನೆ; ಎಂದು ತಾತ್ಪರ್ಯವು.

**ಸಾಲೋಕ್ಯ**ಮುಕ್ತರು ವಾಸ ಮಾಡುವ ಸ್ಥಾನವಿಶೇಷವು ಇರುವುದೆಂದು ಸೂಚಿಸುವ ಕೆಲವು ವಾಕ್ಯಗಳನ್ನು ಶ್ರೀ ಕೃಷ್ಣನು ನಿರೂಪಿಸಿರುತ್ತಾನೆ.

(7) **........ಮನೀಷಿಣಃ........ಪದಂಗಚ್ಛಂತ್ಯನಾಮಯಂ ।**
—(2. 51.)

ಜ್ಞಾನಿಗಳು ನಿರ್ದುಃಖವಾದ ಸ್ಥಾನವನ್ನು ಹೊಂದುತ್ತಾರೆ.

(8) **........ಯೋಗೀಪರಂ ಸ್ಥಾನಮುಪೈತಿಚಾದ್ಯಂ ।** —(8. 28.)

ಜ್ಞಾನಿಯು ಸನಾತನವಾದ ಅತ್ಯುತ್ತಮ ಲೋಕವನ್ನು ಹೊಂದುತ್ತಾನೆ.

(9) **ದ್ವಂದ್ವೈರ್ವಿಮುಕ್ತಾ ಸ್ಸುಖದುಃಖಸಂಜ್ಞೈ ರ್ಗಚ್ಛಂತ್ಯ ಮೂಢಾಃ ಪದಮವ್ಯಯಂತತ್ ।** —(15. 5.)

ದ್ವಂದ್ವಾತೀತರಾದ ಜ್ಞಾನಿಗಳು ನಿತ್ಯವಾದ ಸ್ಥಾನವನ್ನು ಹೊಂದುತ್ತಾರೆ.

(10) **ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ ।**
—(18. 56.)

ನನ್ನ ಪ್ರಸಾದದಿಂದ ಜ್ಞಾನಿಯು ಶಾಶ್ವತವಾದ ನಿತ್ಯ ಸ್ಥಾನವನ್ನು ಹೊಂದುತ್ತಾನೆ.

(11) **ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿಶಾಶ್ವತಂ ।**
—(18. 62.)

ಈಶ್ವರನ (ಶ್ರೀ ಕೃಷ್ಣನ) ಪ್ರಸಾದದಿಂದ ಜ್ಞಾನಿಗೆ ಅತ್ಯುತ್ಕೃಷ್ಟ ಸುಖವುಳ್ಳ ಶಾಶ್ವತ ಸ್ಥಾನವು ಪ್ರಾಪ್ತವಾಗುವುದು.

ಈ ಸ್ಥಾನವು ಕರ್ಮಿಗಳಿಗೆ ಪ್ರಾಪ್ತವಾಗತಕ್ಕ ಲೋಕಗಳಿಗಿಂತ ಭಿನ್ನ ವಾಗಿರುವುದೆಂದು ಇದೇ ಅಧ್ಯಾಯದ ಶ್ರೀ ಕೃಷ್ಣನ ವಾಕ್ಯದಿಂದ ನಿಶ್ಚಿತವಾಗುವುದು.

(12) **ಶ್ರದ್ಧಾವಾನನಸೂಯಶ್ಚ ಶೃಣುಯಾದಪಿಯೋನರಃ ।**
**ಸೋಽಪಿ ಮುಕ್ತಃಶುಭಾನ್ ಲೋಕಾನ್ ಪ್ರಾಪ್ನುಯಾತ್ಪುಣ್ಯ**
**ಕರ್ಮಣಾಂ ॥** —(18. 71.)

ಶ್ರದ್ಧೆಯಿಂದ, ಅಸೂಯಾರಹಿತನಾಗಿ, ಗುರುಮುಖದಿಂದ ಭಗವದ್ಗೀತೆ ಯನ್ನು ಶ್ರವಣ ಮಾಡುವವನೂ ಕೂಡ ಪುಣ್ಯ ಕರ್ಮಗಳನ್ನು ಆಚರಿಸುವವರು ಹೊಂದತಕ್ಕ ಸುಖಪ್ರದವಾದ ಲೋಕಗಳನ್ನು ಹೊಂದುತ್ತಾನೆ.

ಈ ವಾಕ್ಯದಿಂದ ಜ್ಞಾನಿ ಪ್ರಾಪ್ಯವಾದ ಪರಮಪದವು ಇತರ ಲೋಕಗಳಿಗಿಂತ ಭಿನ್ನವಾದ ಅವ್ಯಯವಾದ ಉತ್ಕೃಷ್ಟವು ಸ್ಥಾನವೆಂದು ಸಿದ್ಧವಾಗುವುದು.

**ಪ್ರಶ್ನೆ**— ಸ್ವಾಮೀ ! ತಾವು ಉದಾಹರಿಸಿರುವ ಈ ವಾಕ್ಯಗಳಲ್ಲಿ ಸಾಯು ಜ್ಯಾದಿ ನಾಮಗ್ರಹಣ ಮಾಡಿ ಅವುಗಳ ಲಕ್ಷಣವನ್ನು ಶ್ರೀ ಕೃಷ್ಣನು ಎಲ್ಲಿಯೂ ನಿರೂಪಿಸಿರುವುದಿಲ್ಲ. ಇದೆಲ್ಲಾ ಬಹು ಕಲ್ಪನೆಯ ಕೆಲಸದಂತೆ ತೋರುವುದಿಲ್ಲವೇ ?

**ಉತ್ತರ**— ಸಾಯುಜ್ಯಾದಿ ಮುಕ್ತಿ ಸ್ವರೂಪವನ್ನು ಅವುಗಳ ನಾಮ ನಿರ್ದೇಶಪೂರ್ವಕವಾಗಿ ಶ್ರೀ ಕೃಷ್ಣನು ವರ್ಣಿಸಿರುವುದಿಲ್ಲ. ನಾಮೋದ್ದೇಶಪೂರ್ವಕ ವಾದ ಲಕ್ಷಣೋಕ್ತಿಯು ಅಥವಾ ಸ್ಪಷ್ಟವಾದ ವಾಕ್ಯಗಳು ಇರುವುದಿಲ್ಲವೆಂಬುದು ಸತ್ಯವು. ಹದಿನೆಂಟು ಅಧ್ಯಾಯದ ಸಣ್ಣ ಗ್ರಂಥದಲ್ಲಿ ಒಂದೊಂದು ತತ್ವವನ್ನೂ ಪ್ರತ್ಯೇಕಪ್ರತ್ಯೇಕವಾಗಿ ಅದರ ಹೆಸರಿನಿಂದ ಗ್ರಹಣ ಮಾಡಿ ಲಕ್ಷಣಗಳನ್ನು ಹೇಳು ವುದು ಅಶಕ್ಯವು. ಆದುದರಿಂದ ವೇದಾದಿ ಪ್ರಮಾಣಾಂತರಗಳಲ್ಲಿ ನಿರವಕಾಶವಾಗಿ ಸ್ಪಷ್ಟವಾಗಿ ಪ್ರತಿಪಾದಿತವಾದ ಪ್ರಮೇಯವನ್ನು ಶ್ರೀ ಕೃಷ್ಣನು ಇಲ್ಲಿ ಸೂಚಿಸಿರು ತ್ತಾನೆ. ಬಂಧನಿವೃತ್ತಿಪೂರ್ವಕವಾದ ಯೋಗ್ಯತಾನುಗುಣವಾದ ನಿರಂತರ ಸುಖಾನುಭವವು ಮುಕ್ತಿಯು. ಅದ್ವೈತ ಮತದಲ್ಲಿ ಹೇಳಿರುವಂತೆ ಜೀವಭಾವ ನಾಶರೂಪವಾದ ಬ್ರಹ್ಮೈಕ್ಯವಲ್ಲ. ಇಷ್ಟು ಪ್ರಮೇಯವು ನಿರ್ವಿವಾದವಾಗಿ ಭಗ ವದ್ಗೀತಾ ವಾಕ್ಯಗಳಿಂದ ಸಿದ್ಧವಾಗುವುದು.

## ೬.

ಅದ್ವೈತಾದಿ ಸಕಲ ವಾದಗಳಿಗೆ ಪರಮವಿರುದ್ಧವಾದ ಕೇವಲ ದ್ವೈತ ತತ್ವೋಪಪಾದಕವಾದ ಮುಕ್ತಿಯನ್ನೇ ಶ್ರೀ ಕೃಷ್ಣನು ಪ್ರತಿಪಾದಿಸಿರುತ್ತಾನೆಂದು ನಾವು ಪ್ರತಿಜ್ಞಾಪೂರ್ವಕವಾಗಿ ಹೇಳಬಲ್ಲೆವು.

1. **ಸತತೋರ್ಧ್ವಗಮನವು** ಮುಕ್ತಿಯೆಂದು ಜೈನವಾದಿಗಳು ಹೇಳು

ತ್ತಾರೆ. ಅನೇಕ ಗೀತಾ ವಾಕ್ಯಗಳಿಂದ ಈ ಮತವು ಶ್ರೀ ಕೃಷ್ಣನಿಗೆ ಸಮ್ಮತವಲ್ಲವೆಂದು ಸಿದ್ಧಯಿಸಬಹುದು.

**ಪ್ರಶ್ನೆ**— ಸ್ವಾಮೀ ! "ಊರ್ಧ್ವಂಗಚ್ಛಂತಿಸತ್ವಸ್ಥಾಃ" ಎಂದರೆ ಸಾತ್ವಿಕ ಗುಣಸಂಪನ್ನರಾದವರು ಮೇಲಕ್ಕೆ ಹೋಗುತ್ತಾರೆ ಎಂದು ಶ್ರೀ ಕೃಷ್ಣನೇ ಹೇಳಿರುವುದಿಲ್ಲವೇ ?

**ಉತ್ತರ**— ಈ ಶ್ಲೋಕಕ್ಕೆ ಊರ್ಧ್ವ ಲೋಕಗಳನ್ನು ಹೊಂದುತ್ತಾನೆ ಎಂದರ್ಥವು. ಸಾತ್ವಿಕ ಗುಣಸಂಪನ್ನನಾದವನು ಜ್ಞಾನಿಯಾಗಿದ್ದರೆ **"ಅಗ್ನಿ ಜ್ಯೋತಿರಹಃ ಶುಕ್ಲಃಷಣ್ಮಾಸಾ ಉತ್ತರಾಯಣಂ"** ಎಂಬ ಶ್ಲೋಕೋಕ್ತ ಊರ್ಧ್ವ ಲೋಕಗಳನ್ನು ಹೊಂದಿ, "ತತ್ರಪ್ರಯಾತಾಗಚ್ಛಂತಿ ಬ್ರಹ್ಮ" ಎಂದು ಹೇಳಿರುವಂತೆ, ಪರಬ್ರಹ್ಮನನ್ನು ಸೇರುತ್ತಾರೆ ಎಂದು ಅರ್ಥವು. ಅಥವಾ ಸಾತ್ವಿಕ ಗುಣಸಂಪನ್ನನು ಕರ್ಮಿಯಾಗಿದ್ದರೆ, "ಧೂಮೋರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಂ।" ಎಂಬ ಶ್ಲೋಕೋಕ್ತ **ಊರ್ಧ್ವ** ಲೋಕಗಳನ್ನು ಹೊಂದಿ "ತತ್ರಚಾಂದ್ರಮಸಂ ಜ್ಯೋತಿಃ" ಎಂದು ಹೇಳಿರುವ ಚಂದ್ರಾದಿಗಳು ವಾಸ ಮಾಡುವ ಸ್ವರ್ಗ ಲೋಕವನ್ನು ಹೊಂದುತ್ತಾನೆ ಎಂದು ಅರ್ಥವು. ಊರ್ಧ್ವಂ ಗಚ್ಛಂತಿ ಸತ್ವಸ್ಥಾಃ ಎಂಬ ಶ್ಲೋಕದಲ್ಲಿ ಸಾತ್ವಿಕರು ಊರ್ಧ್ವದಲ್ಲಿರುವ ಲೋಕಗಳನ್ನು ಹೊಂದುತ್ತಾರೆ ಎಂದು ಅರ್ಥವಾಗುವುದೇ ಹೊರತು, ಸಂತತ ಆಕಾಶದಲ್ಲಿ ಮೇಲಕ್ಕೆ ಹೋಗುತ್ತಲೇ ಇರುವರು ಎಂಬ ಅರ್ಥವು ಆಗುವುದಿಲ್ಲ. ಭುವರ್ಲೋಕ, ಸುವರ್ಲೋಕ, ಮಹೋಲೋಕ, ಜನೋಲೋಕ, ತಪೋಲೋಕ, ಸತ್ಯಲೋಕವೂ ಮತ್ತು ವೈಕುಂಠಾದಿ ಮುಕ್ತ ಸ್ಥಾನಗಳೂ ಭೂಲೋಕಾಪೇಕ್ಷಯಾ ಮೇಲೆ ಇರುವುವೆಂದು ಶ್ರುತಿ, ಸ್ಮೃತಿ, ಇತಿಹಾಸ, ಪುರಾಣಗಳಲ್ಲಿ ಪ್ರಸಿದ್ಧವಾಗಿರುವುದು. ಇವೆಲ್ಲಾ ಭೋಗ್ಯ ದ್ರವ್ಯಗಳಿಂದ ಸಹಿತವಾದ ಸ್ಥಾನಗಳು. ಆದುದರಿಂದ ಇಲ್ಲಿ ಸುಖವು ಜೀವನಿಗೆ ಆಗುವುದೆಂದು ಹೇಳಬಹುದು. ಸ್ವರೂಪೇಂದ್ರಿಯುಗಳಿಂದ **ಭೋ**ಗ್ಯ ದ್ರವ್ಯಭೋಗದಿಂದ ರಹಿತವಾದ ಸಂತತ ಊರ್ಧ್ವ ಗಮನವು ಸುಖರೂಪವಾಗಿರುವುದೆಂಬಲ್ಲಿ ಪ್ರಮಾಣವೇನು ? ಅಷ್ಟೇ ಅಲ್ಲ ! ಯುಕ್ತಿ ವಿಚಾರ ಮಾಡಿದರೆ ಸುಮ್ಮನೆ ಮೇಲೆ ಮೇಲೆ ಹಾರುತ್ತಿರುವ ಪಕ್ಷಿಯು ಆಯಾಸದಿಂದ ಧೊಪ್ಪನೆ ನೆಲದ ಮೇಲೆ ಬೀಳುವಂತೆ ಸತತೋರ್ಧ್ವ ಗಮನಶಾಲಿಯಾದ ಜೈನಮುಕ್ತನು ಉಸಿರು ಕಟ್ಟಿ ದಮ್ಮು ಹಿಡಿದು ಪತನವನ್ನು ಹೊಂದಿದರೂ ಹೊಂದಬಹುದು; ಅಥವಾ ತನಗೆ ಹಿತಕರವಾದ ಸರ್ವಪ್ರಿಯ ವಸ್ತುಗಳನ್ನೂ, ಪ್ರಿಯರಾದ ಬಾಂಧವರನ್ನೂ, ಜ್ಞಾನಿ ಸಂಗವನ್ನೂ ಪರಿತ್ಯಜಿಸಿ ಸಂತತ ಊರ್ಧ್ವ ಮುಖವಾಗಿ ಒಯ್ಯಲ್ಪಡುವ ಈ ಜೈನಮುಕ್ತನು ಗುರುತರವಾದ ದುಃಖವನ್ನು ಸಹ ಅನುಭವಿಸುವನೆಂದು ಹೇಳಬಹುದು.* ಪರಂತು ಇವೆಲ್ಲಾ ಆಗಮಗಳಿಂದ ಸಿದ್ಧವಾಗತಕ್ಕ ಪ್ರಮೇಯಗಳು.

---

*ಅಥವಾ **"ಊರ್ಧ್ವಪವಿತ್ರಃ"** ಎಂಬ ಶ್ರುತಿಯಲ್ಲಿಯೂ, **"ಊರ್ಧ್ವಮೂಲಂ"** ಎಂಬ ಗೀತಾ ಶ್ಲೋಕದಲ್ಲಿಯೂ "ಊರ್ಧ್ವ" ಶಬ್ದವು ಪರಬ್ರಹ್ಮನು, ವಿಷ್ಣುವು ಎಂಬ ಅರ್ಥದಲ್ಲಿ

ಪ್ರಮಾಣತಮವಾದ ಗೀತಾ ಗ್ರಂಥದಲ್ಲಿ ಶ್ರೀ ಕೃಷ್ಣನು ಸ್ಪಷ್ಟವಾಗಿ ನಿತ್ಯವಾದ ಸ್ಥಾನದ ಪ್ರಾಪ್ತಿಯೇ ಮುಕ್ತನಿಗೆ ಲಭಿಸುವುದೆಂದು ಹೇಳಿರುತ್ತಾನೆ:—

(1) **ಮತ್ಪ್ರಸಾದಾದವಾಪ್ನೋತಿಶಾಶ್ವತಂಪದಮವ್ಯಯಂ** ।
—(18. 56.)

ನನ್ನ ಪ್ರಸಾದದಿಂದ ಭಕ್ತನು ಶಾಶ್ವತವಾದ ನಾಶರಹಿತವಾದ ಲೋಕವನ್ನು ಹೊಂದುತ್ತಾನೆ.

2. ಶೂನ್ಯವಾದಿಗಳಾದ ಬೌದ್ಧರು **ನಿರ್ವಾಣವೇ** ಪರಮ ಮುಕ್ತಿಯೆಂದು ಹೇಳುತ್ತಾರೆ. ಹಾಗೆಂದರೆ ಜೀವ ಜಡಾತ್ಮಕವಾದ ಈ ಯಾವತ್ತು ಪ್ರಪಂಚವೂ ಜ್ಞಾನದಲ್ಲಿ ಕಲ್ಪಿತವಾಗಿರುವುದು. ಇದು ಅತ್ಯಂತ ಅಸತ್ಯವಾದುದು. ಉರಿಯುವ ಪಂಜನ್ನು ಗರಗರನೆ ತಿರುಗಿಸಿದರೆ ಚಕ್ರಾಕಾರವಾಗಿ ಬೆಂಕಿಯು ಇರುವಂತೆ ತೋರುವುದು. ವಸ್ತುತಃ ಬೆಂಕಿಯು ಚಕ್ರಾಕಾರವಾಗಿರುವುದಿಲ್ಲ. ಇಂಥ ಅಲಾತ ಚಕ್ರಭ್ರಮೆಯಂತೆ, ಈ ಸರ್ವ ಜಗತ್ತು ಸತ್ಯವೆಂಬ ಜ್ಞಾನವು ಭ್ರಮವು. ಅಲಾತ ಚಕ್ರಶಾಂತಿಗೆ ಸದೃಶವಾದ ಪ್ರಪಂಚದ ನಾಶರೂಪವಾದ ಮುಕ್ತಿಯು ಜ್ಞಾನದಿಂದಾಗುವುದು. ಕಾದ ಹಂಚಿನ ಮೇಲೆ ಜಲಬಿಂದುವನ್ನು ಹಾಕಿದರೆ ತತ್ಕಾಲದಲ್ಲಿ ಅದೃಶ್ಯವಾಗುವಂತೆ ಈ ಯಾವತ್ತು ಪ್ರಪಂಚವೂ ಇರುವಂತೆ ಈಗ ತೋರುತ್ತಾ, ತಾನಾಗಿ ಜ್ಞಾನವು ಹುಟ್ಟಿದ ನಂತರ ಅದೃಶ್ಯವಾಗುವುದು, ಜೀವಭಾವವೂ ನಾಶವಾಗುವುದು. ಇಂಥ ಶೂನ್ಯಸದೃಶವಾದ ನಿರ್ವಿಶೇಷ ಜ್ಞಾನ ಭಾವವು ನಿರ್ವಾಣವನ್ನಿಸುವುದು. ಇದು ಮುಕ್ತಿಯು ಎಂದು ಬೌದ್ಧರು ಹೇಳುತ್ತಾರೆ.

**ಪ್ರಶ್ನೆ**— ಸ್ವಾಮೀ ! ಶ್ರೀ ಕೃಷ್ಣನೂ ಕೂಡ " ಶಾಂತಿಮಾಪ್ನೋತಿ, " " ನಿರ್ವಾಣಮಧಿಗಚ್ಛತಿ " ಇತ್ಯಾದಿ ಅನೇಕ ಸ್ಥಳಗಳಲ್ಲಿ ಇಂಥ ಮುಕ್ತಿಯನ್ನೂ ಹೇಳಿರುವಂತೆ ತೋರುವುದಿಲ್ಲವೇ ?

**ಉತ್ತರ**— ಶೂನ್ಯಸದೃಶವಾದ ಜ್ಞಾನವನ್ನು ಅಂಗೀಕರಿಸುವ ವಾದಕ್ಕಿಂತ ನಿರರ್ಥಕವಾದ ತತ್ವವು ಮತ್ತೊಂದಿಲ್ಲ. ಸತಾಂಗತಿಯೂ ಸಾಕ್ಷಾತ್ಪರಬ್ರಹ್ಮನೂ ಆದ ಶ್ರೀ ಕೃಷ್ಣನು ನಿರ್ವಿಶೇಷ ಜ್ಞಾನವು ತತ್ವವೆಂತಲೂ, ಶೂನ್ಯತೆಯು ಮುಕ್ತಿಯೆಂತಲೂ ಹೇಳುವನೇ ? ಶ್ರೀ ಕೃಷ್ಣನು ಕೇವಲ ನಿರ್ವಾಣ ಪದವನ್ನು ಮುಕ್ತಿವಾಚಕವಾಗಿ ಉಪಯೋಗಿಸಿರುವುದಿಲ್ಲ. **" ನಿರ್ವಾಣಂ ಬ್ರಹ್ಮ ಅಧಿಗಚ್ಛತಿ "**

---

ಪ್ರಯುಕ್ತವಾಗಿರುವುದು. ಆ ಅರ್ಥವನ್ನು ಇಲ್ಲಿ ಇಟ್ಟುಕೊಂಡರೆ ಊರ್ಧ್ವಂಗಚ್ಛಂತಿ ಎಂದರೆ ಬ್ರಹ್ಮನನ್ನು ಹೊಂದುತ್ತಾರೆ, ವಿಷ್ಣುವನ್ನು ಹೊಂದುತ್ತಾರೆ ಎಂಬ ಅರ್ಥವು ಬರುವುದು. "ಪರಂ ಪುರುಷಮುಪೈತಿ ದಿವ್ಯಂ " "ಗಚ್ಛಂತಿಬ್ರಹ್ಮ" "ಬ್ರಹ್ಮಾಧಿಗಚ್ಛತಿ" ''ಮಾಮೇವೈಷ್ಯಸ್ಯಸಂಶಯಃ" ಎಂದು ಬ್ರಹ್ಮಪ್ರಾಪ್ತಿಯನ್ನೇ ಮುಕ್ತಿಯೆಂದು ವರ್ಣಿಸುವ ಅನೇಕ ಶ್ಲೋಕಗಳು ಈ ಅರ್ಥ ಮಾಡುವುದರಲ್ಲಿ ಅನುಕೂಲವಾಗಿರುವುವು.

ಎಂದೂ, " **ಶಾಂತಿಂ ಮತ್ಸಂಸ್ಥಾಂ** " ಎಂದೂ ಹೇಳಿರುತ್ತಾನೆ. ಜ್ಞಾನಿಯು ನಿರ್ವಾಣ **ಬ್ರಹ್ಮನನ್ನು** ಹೊಂದುತ್ತಾನೆ ಎಂತಲೂ, **ನನ್ನಲ್ಲಿ ಸ್ಥಿತಿರೂಪವಾದ** ಶಾಂತಿಯನ್ನು ಹೊಂದುತ್ತಾನೆಂತಲೂ ಹೇಳಿರುವನು.

ಪರಂತು ಸೃಷ್ಟಿಕರ್ತನಾದ, ಪರಬ್ರಹ್ಮನು ತಾನು ಸೃಷ್ಟಿಸಿದ ಬ್ರಹ್ಮಾಂಡವೂ, ತದರ್ಗಂತವಾದ ಕಾರ್ಯಗಳೂ ಅಸತ್ಯವೆಂದು ಹೇಳುವನೇ? ಸಕಲ ಜಗದ್ರಕ್ಷಕನಾದ ಶ್ರೀಹರಿಯು ತನ್ನ ಕಂಸಹನನಾದಿ ಕಾರ್ಯಗಳೂ, ಕುರುಕ್ಷೇತ್ರ ಯುದ್ಧಾದಿ ಸಕಲ ವ್ಯಾಪಾರವೂ ಅಸತ್ಯವೆಂದು ಹೇಳುವನೇ? ಮತ್ತು ತಾನು ಅಂತರ್ಯಾಮಿ ತನದಿಂದ ಪ್ರವೇಶಿಸಿ ಪ್ರವೃತ್ತ್ಯಾದಿಗಳನ್ನು ಉಂಟು ಮಾಡುತ್ತಾ, ನಿಯಮಿಸುತ್ತಿರುವ ಪ್ರಾಣಿಸಮೂಹವೆಲ್ಲವೂ ಜ್ಞಾನದಲ್ಲಿ ಕಲ್ಪಿತವೆಂದು ಹೇಳುವನೇ? ಪ್ರಕೃತ್ಯಾದಿ ಬಂಧವು ಸುಳ್ಳು, ಕರ್ಮವು ಸುಳ್ಳು, ವೇದಾದಿ ಶಾಸ್ತ್ರಗಳು ಸುಳ್ಳು, ಪ್ರಯತ್ನವು ಸುಳ್ಳು, ಮುಕ್ತಿಯೂ ಸುಳ್ಳು, ಪ್ರತ್ಯಕ್ಷಾದಿ ಪ್ರಮಾಣಗಳೂ ಸುಳ್ಳು ಎಂದು ಹೇಳುವ ಶಾಸ್ತ್ರವು ತಾನೂ ಸುಳ್ಳೆಂದು ಪ್ರಾಜ್ಞರಿಂದ ಉಪೇಕ್ಷಿತವಾಗಿರುತ್ತದೆ. ಅಧಿಕ ವಿಚಾರದಿಂದೇನು? ಈ ಶೂನ್ಯ ವಾದವೂ, ಇದಕ್ಕೆ ಅತ್ಯಂತ ಸದೃಶವಾದ ಅದ್ವೈತವಾದವೂ ತನಗೆ ಭರ್ತನೂ, ಮಾಂಗಲ್ಯದಾತನೂ ಆದ ಪತಿಯನ್ನು ಸಂಹರಿಸಿ ಸ್ವಯಂ ಹತಶೋಭಳಾದ ದುಷ್ಟ ವಿಧವೆಯಂತೆ, ಪ್ರತ್ಯಕ್ಷ, ಅನುಮಾನ, ಆಗಮಗಳೆಂಬ ಅರ್ಥ ವ್ಯವಸ್ಥಾಪಕವಾದ* ಮೂರು ಪ್ರಮಾಣಗಳನ್ನೂ ಅತಿಕ್ರಮಿಸಿ ಮತ್ತು ಹಿಂಸೆ ಮಾಡಿ ತಾವೂ ಅಪ್ರಾಮಾಣಿಕತೆಯನ್ನು ಹೊಂದಿರುವುವು. ಪರಂತು ನಿರ್ವಾಣ ಭಾವವು ಮುಕ್ತಿಯು ಎಂಬ ಮತದಲ್ಲಿ, ಜೀವಭಾವ ನಾಶರೂಪವಾದ ಬ್ರಹ್ಮೈಕ್ಯವು ಮುಕ್ತಿಯಾಗಲಾರದೆಂಬಲ್ಲಿ ನಾವು ತೋರಿಸಿದ ದೋಷಗಳೆಲ್ಲಾ ನವಜೀವನವನ್ನು ಹೊಂದಿ ಪ್ರಾದುರ್ಭವಿಸುವುವು.

---

* ಪ್ರಾಜ್ಞರಾದ ರಾಧಾಕೃಷ್ಣರೂ ಗೌಡಪಾದರ ತತ್ತ್ವನಿರೂಪಣಾವಸರದಲ್ಲಿ ಹೀಗೆಯೇ ಬರೆದಿರುತ್ತಾರೆ.— The general idea pervading Goudapada's work, that bondage and liberation, the individual soul and the world, are all unreal, makes the caustic critic observe that the theory which has nothing better to say than that an unreal soul is trying to escape from an unreal bondage in an unreal world to accomplish an unreal supreme good may itself be an unreality. It is one thing to say that the secret of existence......is a mystery, and another to dismiss the whole changing universe as a mere mirage. ......The greatest condemnation of such a theory is that we are obliged to occupy ourselves with objects, the existence and value of which, we are continually denying in theory." Indian Philosophy Vol. II P. 463.

**3.** ಪೃಥಿವ್ಯಾದಿ ಪ್ರತ್ಯಕ್ಷಸಿದ್ಧವಾದ ಭೂತ ಸಮುದಾಯವೇ ದೇಹವು. ಅದೇ ಆತ್ಮನು, ದೇಹಾತಿರಿಕ್ತ ಆತ್ಮನೂ, ಅತೀಂದ್ರಿಯವಾದ ಲೋಕಗಳೂ ಪುನರ್ಜನ್ಮಾದಿಗಳೂ ಇರುವುದಿಲ್ಲ. **ದೇಹನಾಶವೇ ಮುಕ್ತಿಯು** ಎಂದು ಹೇಳುವ ಚಾರ್ವಾಕಮತವೂ ಶ್ರೀ ಕೃಷ್ಣನ ವಾಕ್ಯಾಗ್ನಿಯಿಂದ ಭಸ್ಮೀಭೂತ ವಾಗಿರುವುದು.

(1) **..........................ಮಾಮನುಸ್ಮರನ್ ।**
**ಯಃ ಪ್ರಯಾತಿತ್ಯಜನ್‌ದೇಹಂಸಯಾತಿಪರಮಾಂಗತಿಂ ॥**
—(8. 13.)

ಎಂದು ಹೇಳಿರುವನು. ನನ್ನನ್ನು ಸ್ಮರಣೆ ಮಾಡಿ ಸತ್ತ ಮೇಲೆ ಪರಮ ಗತಿಯನ್ನು ಹೊಂದುತ್ತಾನೆ ಎಂದು ಅರ್ಥವು.

(2) **ಅಂತಕಾಲೇಚಮಾಮೇವಸ್ಮರನ್‌ಮುಕ್ತ್ವಾಕಳೇವರಂ ।**
**ಯಃ ಪ್ರಯಾತಿಸಮದ್ಭಾವಂಯಾತಿನಾಸ್ತ್ಯತ್ರಸಂಶಯಃ ॥**
—(8. 5.)

(3) **ಸ್ಥಿತ್ವಾಸ್ಯಾಮಂತಕಾಲೇಪಿ ಬ್ರಹ್ಮನಿರ್ವಾಣಮೃಚ್ಛತಿ ।**
—(2. 72.)

ಈ ಶ್ಲೋಕಗಳು ( ಈಗಾಗಲೇ ಹಿಂದಿನ ಪುಟಗಳಲ್ಲಿ ) ವ್ಯಾಖ್ಯಾತವಾಗಿರುವುವು. ಇವುಗಳಲ್ಲಿ ದೇಹನಾಶಾನಂತರ ಜ್ಞಾನಿಗೆ ಪರಮಾತ್ಮನ ಪ್ರಾಪ್ತಿಯು ಆಗುವುದೆಂದೂ, ಅದೇ ಮುಕ್ತಿಯೆಂದೂ ಹೇಳಲ್ಪಟ್ಟಿರುವುದು.

**4.** ನ್ಯಾಯ ಶಾಸ್ತ್ರದಲ್ಲಿ ಮುಕ್ತಿ ಸ್ವರೂಪವು ಹೀಗೆ ವರ್ಣಿಸಲ್ಪಟ್ಟಿರುತ್ತದೆ :- ಪ್ರಪಂಚವು ದುಃಖ ಮತ್ತು ಇಪ್ಪತ್ತು ವಿಧವಾದ ದುಃಖಜನಕವಾದ ಸಾಮಗ್ರಿಗಳಿಂದ ಪೂರ್ಣವಾಗಿರುವುದು. ಇವುಗಳನ್ನು ಒಟ್ಟುಗೂಡಿಸಿ ಇಪ್ಪತ್ತೊಂದು "ದುಃಖ" ಗಳೆಂದು ಕರೆಯುವರು. ಅವರ ಮತದ ಪ್ರಕಾರ ಲೋಕದಲ್ಲಿ ದುಃಖ ಕಾರಣವಲ್ಲದ ವಸ್ತುವು ಒಂದೂ ಇರುವುದಿಲ್ಲ. ಸುಖವೂ ದುಃಖ ಕಾರಣವೇ ಆಗುತ್ತದೆ ಎಂದು ಹೇಳುತ್ತಾರೆ. ಸುಖವು ಬೇಗ ನಾಶವಾಗುವುದಲ್ಲಾ ಎಂಬ ಭೀತಿಯಿಂದಲೂ, ಸುಖ ಕ್ಷಯವಾದ ನಂತರ ದುಃಖ ಪರಿವರ್ತನೆಯು ಅವರ್ಜನೀಯವೆಂಬ ಜ್ಞಾನದಿಂದಲೂ ಜ್ಞಾನಿಗೆ ಸುಖವೂ ದುಃಖ ಕಾರಣವೇ ಆಗುವುದು. ದುಃಖಗಳು ಇಪ್ಪತ್ತೊಂದು ವಿಧವಾಗಿರುತ್ತವೆ. **" ಶರೀರಂ, ಷಡಿಂದ್ರಿಯಾಣಿ, ಷಡ್ವಿಷಯಾಃ, ಷಡ್ಬುದ್ಧಯಃ, ಸುಖಂದುಃಖಂಚೇತಿ ಏಕವಿಂಶತಿಃ "** ಪಾಂಚಭೌತಿಕ ಶರೀರವು, ಚಕ್ಷುಶ್ರೋತ್ರತ್ವಗ್ಜಿಹ್ವಾ ಘ್ರಾಣಗಳು ಮತ್ತು ಮನಸ್ಸು ಎಂಬ ಆರು ಇಂದ್ರಿಯಗಳು, ರೂಪಶಬ್ದ ಸ್ಪರ್ಶರಸಗಂಧಸ್ಮೃತಿರಾಗಗಳೆಂಬ ಈ ಆರು ಇಂದ್ರಿಯಗಳ ವಿಷಯಗಳು, ಈ ಆರು ಇಂದ್ರಿಯಗಳಿಗೂ ವಿಷಯಗಳಿಗೂ ಸನ್ನಿ

ಕರ್ಷದಿಂದ ಉಂಟಾಗುವ ಆರು ವಿಧವಾದ ಅನುಭವಗಳು ( ಜ್ಞಾನಗಳು ), ಸುಖವು, ಹೀಗೆ ಇಪ್ಪತ್ತು ಪದಾರ್ಥಗಳು ದುಃಖವನ್ನು ಉಂಟು ಮಾಡುವುವು. ದುಃಖವೆಂಬ ಪದಾರ್ಥದಿಂದ ಸಹಿತವಾಗಿ ಒಟ್ಟು ಇಪ್ಪತ್ತೊಂದು ದುಃಖಗಳಾಗುವುವು. " **ಏಕವಿಂಶತಿ ದುಃಖಧ್ವಂಸೋ ಮುಕ್ತಿಃ** " ಈ ಇಪ್ಪತ್ತೊಂದು ದುಃಖಗಳ ಆತ್ಯಂತಿಕ ನಾಶವು ಮುಕ್ತಿಯೆನ್ನಿಸುವುದು. ಈ ದುಃಖಧ್ವಂಸವು ಉಂಟಾಗುವ ಕ್ರಮವೂ ಕೂಡ ನ್ಯಾಯಸೂತ್ರದಲ್ಲಿಯೇ ನಿರೂಪಿತವಾಗಿರುವುದು. ಅದು ಮುಂದಿನ ಅಧ್ಯಾಯದ ವಿಷಯವು. ಸದ್ಯದಲ್ಲಿ, ನೈಯಾಯಿಕ ಮತದಲ್ಲಿ, ಆತ್ಯಂತಿಕ ಸಕಲ ದುಃಖ ನಿವೃತ್ತಿಯು ಮುಕ್ತಿಯು ಎಂದು ಸಿದ್ಧವಾಯಿತು.

ಆತ್ಯಂತಿಕ ದುಃಖಾಭಾವವು ಮುಕ್ತಿಯಲ್ಲಿರುವುದೆಂದು ನಾವೂ ಒಪ್ಪಿರುತ್ತೇವೆ.* ಆದರೆ ದುಃಖಾಭಾವವೇ ಮುಕ್ತಿಯು ಮತ್ತು ಸುಖಭೋಗವು ಮುಕ್ತಿಯಲ್ಲಿರುವುದಿಲ್ಲವೆಂಬ ಅಭಿನಿವೇಶವು ಶ್ರೀ ಕೃಷ್ಣನಿಗೆ ಸರ್ವಥಾ ಸಮ್ಮತವಲ್ಲ. ಮುಕ್ತಿಯು ನಿರಂತರ ಸುಖಾನುಭವರೂಪವಾದುದೆಂದು ಶ್ರೀ ಕೃಷ್ಣನು ಹೇಳುತ್ತಾನೆ :—

(1) **ಸ ಬ್ರಹ್ಮಯೋಗ ಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ ।**
—(5. 21.)

ಧ್ಯಾನಯೋಗದಲ್ಲಿರತನಾದ ಜ್ಞಾನಿಯು ನಾಶರಹಿತವಾದ ( ನಿತ್ಯವಾದ ) ಸುಖವನ್ನು ಹೊಂದುತ್ತಾನೆ.

ನೈಯಾಯಿಕರ ಮುಕ್ತಿಯು ನಾಯಿಗಳಿಗೂ ಅಪೇಕ್ಷಿತವಲ್ಲ. ಜ್ಞಾನ ಸುಖದಿಂದ ಪೂರ್ಣರಾದ ಧ್ಯಾನಯೋಗಿಗಳು ಹೇಗೆ ತಾನೇ ಅಪೇಕ್ಷಿಸುವರು ? ಉತ್ತಮ ಸುಖವು ಪ್ರಾಪ್ತವಾಗುವುದಾದರೆ ಜ್ಞಾನಿಗಳೂ ಕೂಡ ಸ್ವಲ್ಪ ದುಃಖವನ್ನು ಸಹಿಸುವರು, ಅಥವಾ ಸುಖಕ್ಕೆ ಸಮಾನವಾದ ದುಃಖವನ್ನಾದರೂ ಸಹಿಸುವರು. ಕೇವಲ ದುಃಖ ನಿವೃತ್ತಿಯು ಮುಕ್ತಿಯಾಗುವುದಾದರೆ, ಪ್ರಾಜ್ಞರು ಶ್ರವಣಾದಿ ಸುಖದಿಂದ ಸಹಿತವಾದ ದುಃಖ ವಿಶಿಷ್ಟವಾಗಿರುವ ಸಂಸಾರವನ್ನೇ ಇಚ್ಛಿಸುವರು. ಸರ್ವಥಾ ಸುಖ ಪ್ರಾಪ್ತಿಯಿಂದ ರಹಿತವಾದ ಮೋಕ್ಷವನ್ನು ಬಯಸಲಾರರು. ಮತ್ತು ಸಂಸಾರದಲ್ಲಿ ಸ್ವಲ್ಪ ಸುಖವು ಇರುವುದು. ಮುಕ್ತಿಯಾದರೆ ಇದು ಸರ್ವಾತ್ಮನಾನಾಶವಾಗುವುದೆಂಬ ಭೀತಿಯಿಂದ ಸಂಸಾರದಲ್ಲೇ ಆದಷ್ಟು ದುಃಖವು ಕಡಿಮೆಯಾಗುವ ಉಪಾಯವನ್ನು ಮಾಡುವರೇ ಹೊರತು, ಈಗ ತಾವು ಅನುಭವಿಸುತ್ತಿರುವ ಸುಖವೂ ನಾಶವಾಗುವಂಥಾ ಮುಕ್ತಿಯನ್ನು ಅಪೇಕ್ಷಿಸಿ ತದರ್ಥವಾಗಿ ಪ್ರಯತ್ನಪಡಲಾರರು. ಆದುದರಿಂದ ಕೇವಲ ದುಃಖಾಭಾವವು ಪ್ರಧಾನ ಪುರುಷಾರ್ಥ

* ನೈಯಾಯಿಕರ ಇಪ್ಪತ್ತೊಂದು ವಿಧ ದುಃಖದ ಪರಿಗಣನೆಯೇ ಮುಂತಾದ ಪ್ರಕ್ರಿಯೆಯು ಸ್ವಲ್ಪ ಶಾಸ್ತ್ರಕ್ಕೆ ವಿರುದ್ಧವೇ.

ವೆನ್ನಿಸಲಾರದು. ಮತ್ತು ಕೇವಲ ದುಃಖಾಭಾವ ರೂಪವಾದ ಮುಕ್ತಿಗಿಂತ ಬಹು ಸುಖ ಸಹಿತವಾದ ಅಲ್ಪ ದುಃಖದಿಂದ ಯುಕ್ತವಾದ ಸ್ವರ್ಗವಾದರೂ ಮೇಲೆಂದು ವಾದಿಸಬಹುದು.

5. ಮೀಮಾಂಸಕ ಮತದಲ್ಲಿ ಸ್ವರ್ಗವೇ ಮುಕ್ತಿಯು. ಇಂಥ ಮತವನ್ನು ಶ್ರೀ ಕೃಷ್ಣನು ದ್ವಿತೀಯಾಧ್ಯಾಯದಲ್ಲಿಯೇ ನಿಂದಿಸಿರುತ್ತಾನೆ :—

(1) **ಯಾಮಿಮಾಂ ಪುಷ್ಪಿತಾಂವಾಚಂ ಪ್ರವದಂತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ।**
**ಕಾಮಾತ್ಮಾನಃ ಸ್ವರ್ಗಪರಾ....ತಯಾಪಹೃತಚೇತಸಾಂ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥**
—(2. 42-44.)

ಈ ಶ್ಲೋಕಗಳು ( ಈಗಾಗಲೇ ಹಿಂದಿನ ಪುಟಗಳಲ್ಲಿ ) ವ್ಯಾಖ್ಯಾತವಾಗಿರುವುವು. ಇವುಗಳಲ್ಲಿ ಶ್ರೀ ಕೃಷ್ಣನು ಸ್ವರ್ಗಕ್ಕಿಂತ ಉತ್ತಮವಾದ ಗಮ್ಯಸ್ಥಾನವಿಲ್ಲವೆಂದು ತಿಳಿಯುವವರು ಅವಿಪಶ್ಚಿತರು ಎಂದರೆ ಅಜ್ಞಾನಿಗಳೆಂದೂ, ಅಂಥವರಿಗೆ ಮೋಕ್ಷೋಪಯೋಗಿಯಾದ ನಿಶ್ಚಯಾತ್ಮಕವಾದ ಯಥಾರ್ಥ ಜ್ಞಾನವು ಹುಟ್ಟುವುದಿಲ್ಲವೆಂದು ಹೇಳಿರುತ್ತಾನೆ.

ಸ್ವರ್ಗ ಲೋಕವು ಅನಿತ್ಯವಾದ ಅಲ್ಪ ಸುಖವನ್ನು ಕೊಡುವ ಸ್ಥಾನವೆಂದು ನವಮಾಧ್ಯಾಯದ ಶ್ರೀ ಕೃಷ್ಣನ ವಾಕ್ಯಗಳಿಂದ ನಿಶ್ಚಿತವಾಗುವುದು. ಶ್ರೀ ಕೃಷ್ಣನು ಹೇಳುತ್ತಾನೆ.—

(2) **ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇ**
**ಮರ್ತ್ಯಲೋಕಂ ವಿಶಂತಿ ।** —(9. 20-21.)

ಸ್ವರ್ಗವನ್ನು ಹೊಂದಿದ ತ್ರೈವಿದ್ಯರು ತಮ್ಮಿಂದ ಸಂಚಿತವಾದ ಪುಣ್ಯಕ್ಷಯವು ಆದ ನಂತರ ಪುನಃ ಭೂಲೋಕಕ್ಕೆ ಜನನಾರ್ಥವಾಗಿ ಬರುತ್ತಾರೆ.

ಅಷ್ಟಮಾಧ್ಯಾಯದಲ್ಲಿ ಶ್ರೀ ಕೃಷ್ಣನು ತನ್ನ ಪ್ರಾಪ್ತಿಯೇ ಮುಕ್ತಿಯೆಂದೂ ತನ್ನ ಪ್ರಾಪ್ತಿರಹಿತವಾದ ಸ್ವರ್ಗಾದಿ ಸಕಲ ಲೋಕ ಪ್ರಾಪ್ತಿಗಳು ಪುನರಾವೃತ್ತಿಗೆ ಕಾರಣವಾಗುವುದೆಂದೂ ಹೇಳುತ್ತಾನೆ.

(3) **ಆಬ್ರಹ್ಮಭವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥**
—(8. 16.)

ಎಲೈ ಅರ್ಜುನನೇ ! ಬ್ರಹ್ಮಸದನ ಮೊದಲುಗೊಂಡು ಸಮಸ್ತ ಲೋಕ ಪ್ರಾಪ್ತಿಯೂ ಪುನರಾವೃತ್ತಿಯುಳ್ಳವುಗಳು. ಆದರೆ **ನನ್ನನ್ನು ಹೊಂದಿದವನಿಗೆ ಮಾತ್ರ ಪುನರ್ಜನ್ಮವು** ಇರುವುದಿಲ್ಲ.

ಇಷ್ಟರಿಂದ ಕ್ಷಯಿಷ್ಣುವಾದ ಸ್ವರ್ಗಲೋಕ ಪ್ರಾಪ್ತಿಯು ಮುಕ್ತಿಯಲ್ಲವೆಂದೂ, ಪರಮಾತ್ಮ ಪ್ರಾಪ್ತಿಯೇ ಮುಕ್ತಿಯೆಂದೂ ಸಿದ್ಧವಾಯಿತು. ಕಿಂಚ ಸೃಷ್ಟಿ ಕಾಲದಲ್ಲಿ ಹುಟ್ಟುತ್ತಾ ಪ್ರಳಯದಲ್ಲಿ ನಾಶವನ್ನು ಹೊಂದತಕ್ಕ ಈ ಅನಿತ್ಯ ಲೋಕಗಳ ಪ್ರಾಪ್ತಿಯು ಹೇಗೆ ತಾನೇ ಭಯರಹಿತವಾದ ಅಮೃತರೆಂದು ಕರೆಯಲ್ಪಡುವ ಮುಕ್ತರಿಗೆ ವಾಸಸ್ಥಾನವಾಗುವುದು ?

**6.** ರಾಮಾನುಜ ಭಾಷ್ಯದಲ್ಲಿ ನಿರೂಪಿತವಾದ ಮುಕ್ತರಿಗೆ ಬ್ರಹ್ಮಾನಂದ ಸಾಮ್ಯವೂ ಜೀವಯೋಗ್ಯ ತಾರತಮ್ಯವನ್ನೂ ಸಾಧನ ತಾರತಮ್ಯವನ್ನೂ ಪ್ರತಿಪಾದನೆ ಮಾಡಿರುವ ಶ್ರೀ ಕೃಷ್ಣನಿಗೆ ಸಮ್ಮತವಲ್ಲವು. **"ದೈವೀಸಂಪದ್ವಿಮೋಕ್ಷಾಯ"** ಇತ್ಯಾದಿ ಶ್ಲೋಕಗಳಲ್ಲಿ ಶ್ರೀ ಕೃಷ್ಣನು ತೈತ್ತರೀಯಶ್ರುತ್ಯುಕ್ತ ಆನಂದ ತಾರತಮ್ಯವು ಮುಕ್ತರಲ್ಲೂ ಇರುವುದೆಂದು ಸೂಚಿಸಿರುತ್ತಾನೆ.

**ಪ್ರಶ್ನೆ**— ಸ್ವಾಮೀ ! "ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ" ಎಂಬ ಶ್ರುತಿಯಲ್ಲಿ ಪರಬ್ರಹ್ಮನನ್ನು ದರ್ಶನ ಮಾಡಿದ ಜ್ಞಾನಿಯು ಲೌಕಿಕ ಪುಣ್ಯ ಪಾಪಗಳಿಂದ ವಿನಿರ್ಮುಕ್ತನಾಗಿ **ಪರಮ ಸಾಮ್ಯವನ್ನು** ಹೊಂದುತ್ತಾನೆ ಎಂದು ಸ್ಪಷ್ಟವಾಗಿರುವುದು. ಶ್ರೀ ಕೃಷ್ಣನೂ ಸಹ ಹೇಳುತ್ತಾನೆ :—

**(1) ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ |**
**ಸರ್ಗೇಽಪಿ ನೋಪಜಾಯಂತೇ ಪ್ರಳಯೇ ನ ವ್ಯಥಂತಿ ಚ ||**
—(14. 2.)

ನನ್ನಿಂದ ಉಪದಿಷ್ಟ ತತ್ವವನ್ನು ತಿಳಿದವರು ನನ್ನ ಸಮಾನ ಧರ್ಮವನ್ನು ಹೊಂದಿದವರಾಗಿ ಸೃಷ್ಟಿ ಕಾಲದಲ್ಲಿ ಪುನಃ ಹುಟ್ಟುವುದಿಲ್ಲ. ಪ್ರಳಯದಲ್ಲಿ ಮರಣಾದಿ ನಿಮಿತ್ತಕವಾದ ವ್ಯಥೆಯನ್ನು ಹೊಂದುವುದಿಲ್ಲ. ಇದರಿಂದಲೂ ಮುಕ್ತನಿಗೆ ಈಶ್ವರ ಸಮಾನ ಧರ್ಮವು ಬರುವುದೆಂದು ಪ್ರಮಿತವಾಗಿರುವುದು. ಹೀಗಿರುವಲ್ಲಿ ಸಾಮ್ಯವಾದವನ್ನು ಶ್ರೀ ಕೃಷ್ಣನು ನಿರಾಕರಣೆ ಮಾಡಿರುವನೆಂದು ಹೇಗೆ ಹೇಳುವುದು ?

**ಉತ್ತರ**— ಪರಮಂ ಸಾಮ್ಯಮುಪೈತಿ ಎಂಬ ಶ್ರುತಿಯೇ ಜೀವನಿಗೆ ಪ್ರಾಪ್ತವಾಗುವ ಪರಮಸಾಮ್ಯವನ್ನು ಹಿಂದಿನ "ಪುಣ್ಯಪಾಪೇವಿಧೂಯ ನಿರಂಜನಃ" ಎಂಬ ವಿಶೇಷಣಗಳಿಂದ ವಿವರಿಸಿರುವುದು. ಜೀವನಿಗೆ ಪ್ರಾಪ್ತವಾಗುವ ಈಶ್ವರ ಸಾಮ್ಯವು ಅನಿಷ್ಟವಾದ ಪುಣ್ಯ ಪಾಪಗಳ ರಾಹಿತ್ಯ ಮತ್ತೂ ದೋಷ ರಾಹಿತ್ಯ ಇವೆರಡು ವಿಷಯಗಳಲ್ಲಿ ಮಾತ್ರವೆಂದೇ ಪ್ರದರ್ಶನೆ ಮಾಡಿ, ಈ ರೀತಿಯಾದ ಸಾಮ್ಯವನ್ನು ( ನಿರ್ದೋಷತ್ವವನ್ನು ) ಹೊಂದುವ ಮುಕ್ತರೂ ಸಹ ತಾರತಮ್ಯೋಪೇತರಾಗಿರುವರೆಂದು, ಉಪೈತಿ ಎಂಬ ಪದದಲ್ಲಿರುವ **ಉಪ** ಎಂಬ **ಉಪ**ಸರ್ಗ

ದಿಂದ ಸೂಚಿಸಿರುವುದು. ಮುಕ್ತರೂ ಯಥಾಯೋಗ್ಯವಾಗಿ ಪರಮಾತ್ಮನ ಸಮೀಪ ವನ್ನು ಹೊಂದುತ್ತಾರೆ ಎಂದು ಅರ್ಥವು. ಭಗವದ್ಗೀತೆಯಲ್ಲಿಯೂ ಕೂಡ ಮುಕ್ತ ರಿಗೆ ಪ್ರಾಪ್ತವಾಗುವ ಶ್ರೀ ಕೃಷ್ಣನ ಸಮಾನ ಧರ್ಮವು ಯಾವ ವಿಷಯದಲ್ಲಿ ಎಂಬು ದನ್ನು " ಸರ್ಗೇಪಿನೋಪಜಾಯಂತೇ ಪ್ರಳಯೇನವ್ಯಥಂತಿಚ " ಎಂಬ ಉತ್ತರಾರ್ಧ ದಲ್ಲಿ ವಿವರಿಸಿರುತ್ತಾನೆ. ಸೃಷ್ಟಿ ಪ್ರಳಯಗಳಿಂದ ವಿಕಾರವಿಲ್ಲದ, ಅಪುನರಾವೃತ್ತಿತ್ವವೇ ಮುಕ್ತರಿಗೆ ಪ್ರಾಪ್ತವಾಗುವ ಈಶ್ವರನ ಸಾಧರ್ಮ್ಯವು.

ಪರಂತು ಪರಮ ಸಾಮ್ಯವು ಜೀವಾತ್ಮನಿಗೆ ಬರಲಾರದೆಂಬುದನ್ನು ರಾಮಾ ನುಜ ಮತಾನುಯಾಯಿಗಳೂ ಸಹ ಆವಶ್ಯಕವಾಗಿ ಒಪ್ಪಬೇಕು. ಪರಮಾತ್ಮನು **ನಿತ್ಯಮುಕ್ತನು;** ಜೀವಾತ್ಮನು **ಕದಾಚಿನ್ಮುಕ್ತನು** ಇಷ್ಟು ತಾರತಮ್ಯವು ಸಿದ್ಧವಾಗಿ ರುವುದಷ್ಟೆ ! ಮೂರು ಕಾಲದಲ್ಲೂ ಮುಕ್ತನಾಗಿರುವ ಪರಬ್ರಹ್ಮನ ಪರಮಸಾಮ್ಯ ವನ್ನು ಜೀವನು ಹೊಂದುವನೆಂದು ಹೇಳಿದರೆ ಜೀವನೂ ಮೂರು ಕಾಲದಲ್ಲೂ ಮುಕ್ತತ್ವರೂಪವಾದ ಧರ್ಮವನ್ನು ಹೊಂದುವನು ಎಂದು ಅರ್ಥ ಮಾಡದೆ, ಯುಕ್ತಿವಿರುದ್ಧವಾದುದರಿಂದ **ಉತ್ತರ ಕಾಲದಲ್ಲಿ ಮಾತ್ರ** ಸಾಮ್ಯವನ್ನು ಹೊಂದು ವನು ಎಂದು **ಅರ್ಥ ಸಂಕೋಚವನ್ನು** ಮಾಡಬೇಕು. ಇಷ್ಟೇ ಅಲ್ಲ ! ಜೀವಾತ್ಮ ನಿಗೆ ಮುಕ್ತನಾದರೂ ಕೂಡ ಲಕ್ಷ್ಮೀಪತಿತ್ವ, ಸೃಷ್ಟಿ ಕರ್ತೃತ್ವ, ಸ್ಥಿತಿ ಕರ್ತೃತ್ವ, ಸಂಹಾರ ಕರ್ತೃತ್ವ, ನಿಯಮನ ಕರ್ತೃತ್ವ, ಮೋಕ್ಷ ಪ್ರದತ್ವವೇ ಮೊದಲಾದ ಅನಂತ ವಿಷ್ಣು ಧರ್ಮಗಳು ಬರುವುದಿಲ್ಲವೆಂದು ಶ್ರೀಭಾಷ್ಯಕಾರರೇ ಒಪ್ಪಿರುತ್ತಾರೆ. ಈ ಧರ್ಮಗಳು ವಿಷ್ಣುವಿಗೆ ಪ್ರಧಾನ ಧರ್ಮಗಳು. ಹೇಗೆಂದರೆ, ಪ್ರಥಮ ಸೂತ್ರ ದಲ್ಲಿ ಬ್ರಹ್ಮ ಜಿಜ್ಞಾಸೆಯನ್ನು ಮಾಡಬೇಕೆಂದು ಸೂತ್ರಕಾರರು ಹೇಳಿದರು; ಆದರ ಮೇಲೆ ಆ ಬ್ರಹ್ಮನು ಯಾರೆಂದು ಪ್ರಶ್ನೆ ಮಾಡಲು " ಜನ್ಮಾದ್ಯಸ್ಯಯತಃ " ಎಂದರೆ ಸೃಷ್ಟಿ ಸ್ಥಿತಿ ಸಂಹಾರಾದಿಗಳನ್ನು ಮಾಡುವವನು ಬ್ರಹ್ಮನು ಎಂದು ಹೇಳಿರುವರು. ಆದುದರಿಂದ ಇವುಗಳು ಪರಬ್ರಹ್ಮನಿಗೆ ಪ್ರಧಾನ ಲಕ್ಷಣಗಳು. ಜೀವಾತ್ಮನು ಪರಮ ಸಾಮ್ಯವನ್ನು ಹೊಂದಬೇಕಾದರೆ, ಇಂಥ ಪ್ರಧಾನವಾದ ವಿಷ್ಣು ಧರ್ಮಗಳನ್ನು ಹೊಂದಬೇಕು. ಏವಂಚ ಜೀವನು ಮುಕ್ತಿಯಲ್ಲಿ ಪರಮ ಸಾಮ್ಯವನ್ನು ಹೊಂದು ತ್ತಾನೆ ಎಂದರೆ ಸೃಷ್ಟ್ಯಾದಿಗಳನ್ನು ಇದುವರೆವಿಗೂ ಮಾಡುವುದಕ್ಕೆ ಅಸಮರ್ಥ ನಾದರೂ ಇನ್ನು ಮುಂದೆ ಅಂಥ ಸಾಮರ್ಥ್ಯವನ್ನು ಹೊಂದುವನು ಎಂದು ಅರ್ಥ ವಾಗುವುದು. ಹಾಗಿದ್ದ ಮೇಲೆ, ಮುಕ್ತರಿಂದಲೇ ಜಗತ್ತಿಗೆ ಸೃಷ್ಟ್ಯಾದಿಗಳು ಒಂದೊಂದು ಸಾರಿಯಾದರೂ ಆಗಬಹುದೆಂದು ಒಪ್ಪಬೇಕಾಗುವುದು. ಕಿಂಚ ಇದು ಲೌಕಿಕ ನ್ಯಾಯದಿಂದಲೂ ಸಮಂಜಸವೇ ಆಗಿರುವುದು. ಹೇಗೆಂದರೆ, ಗೃಹಕೃತ್ಯ ನಿರ್ವಾಹದಲ್ಲಿ ಅಸಮರ್ಥನಾದ ಶಿಶುವನ್ನು, ಪಿತನು ಅನ್ನಾದಿಗಳಿಂದ ಪೋಷಿಸಿ, ಪುತ್ರನು ಸಮರ್ಥನಾದ ನಂತರ ಯಾವತ್ತು ಸಂಸಾರಭರಣ ಕಾರ್ಯ ವನ್ನು ಉತ್ಸಾಹಶಾಲಿಯಾದ ಯೌವನಸ್ಥನಾದ ಪುತ್ರನ ಕೈಲಿ ಇಟ್ಟು, ತಂದೆಯು ತಾನೂ ಆ ಕಾರ್ಯದಲ್ಲಿ ಸಾಮರ್ಥ್ಯೋಪೇತನಾಗಿದ್ದರೂ, ಪುತ್ರ ಕಾರ್ಯವನ್ನು

ಆನಂದದಿಂದ ನೋಡುತ್ತಿರುವನು. ಹೀಗೆಯೇ ಶ್ರೀ ವಿಷ್ಣುವೂ ಸಹ ಸಂಸಾರದಿಂದ ಅಸಮರ್ಥರಾದ ಜೀವರನ್ನು ಉದ್ಧಾರ ಮಾಡಿ ಅವರಿಗೆ ಪರಮ ಸಾಮ್ಯವನ್ನು ಕೊಟ್ಟ ಮೇಲೆ, ಅವರಿಂದಲೇ ಸೃಷ್ಟ್ಯಾದಿಗಳನ್ನು ಮಾಡಿಸಿ ತಾನು ನೋಡುತ್ತಲೇ ಆನಂದಪಡಬೇಕು. ಹಾಗೆ ಶ್ರೀ ಪರಮಾತ್ಮನು ಮಾಡಿಲ್ಲವಾದುದರಿಂದ, ಜೀವರುಗಳು ಮುಕ್ತರಾದರೂ ಇಂಥ ಸಾಮರ್ಥ್ಯವನ್ನು ಹೊಂದಿಲ್ಲವೆಂದು ಅವಶ್ಯವಾಗಿಯೂ ಒಪ್ಪಬೇಕು. "ಪರಮಂ ಸಾಮ್ಯಮುಪೈತಿ" ಎಂಬ ಶ್ರುತಿಗೆ ಸೃಷ್ಟಿಕರ್ತೃತ್ವಾದಿ ರೂಪಗಳ ವಿನಹ ಇತರ ಧರ್ಮಗಳಿಂದ ಸಾಮ್ಯವನ್ನು ಹೊಂದುವನು ಎಂದು ಹೇಳುವಂತೆ, ಸೃಷ್ಟಿ ಸಾಮರ್ಥ್ಯ, ಪೂರ್ಣಾನಂದತ್ವವೇ ಮುಂತಾದ ಧರ್ಮಗಳು ವಿನಹ, ಇತರ ಧರ್ಮಗಳಿಂದ ಜೀವನು ಪರಮಾತ್ಮನ ಸದೃಶನಾಗುವನು ಎಂದು ಹೇಳಿದರೆ ಯಾವ ದೋಷವೂ ಇರುವುದಿಲ್ಲ. ಮತ್ತು ಇತರ ಪ್ರಮಾಣಗಳೂ ಅನುಕೂಲವಾಗುವವು.

3. ಕಿಂಚ ಆನಂದಮಯೋಽಭ್ಯಾಸಾತ್ ಎಂಬ ಬ್ರಹ್ಮಸೂತ್ರದಲ್ಲಿ ಪರಬ್ರಹ್ಮನು ಒಬ್ಬನು ಆನಂದಪೂರ್ಣನೆಂದು ಸೂತ್ರಕಾರರು ನಿರ್ಣಯ ಮಾಡಿರುವರು. ಮುಕ್ತರೆಲ್ಲರೂ ಆನಂದಪೂರ್ಣರಾದರೆ ಅನಂತ ಆನಂದಮಯರು ಶ್ರುತಿಸಿದ್ಧವಾಗಬೇಕಾದೀತು! ಸಂಕೋಚದಿಂದ ಅರ್ಥ ಮಾಡುವುದಾದರೆ ಪ್ರಾಮಾಣಿಕವಾದ ಮಾರ್ಗಕ್ಕೇ ಬಂದಂತಾಯಿತು.

4. ವಸ್ತುತಃ ಶ್ರೀಭಾಷ್ಯಸೂಚಿತವಾದ ನ್ಯಾಯವನ್ನು ವಿಮರ್ಶೆ ಮಾಡಿದರೆ ವಿಷ್ಣುವಿಗಿಂತ ಮುಕ್ತರೇ ಹೆಚ್ಚು ಆನಂದಶಾಲಿಗಳಾಗಬೇಕು. ವಿಷ್ಣುವು ಸೃಷ್ಟ್ಯಾದಿ ಅನಂತ ನಾನಾ ವ್ಯಾಪಾರಗಳನ್ನು ಮಾಡುತ್ತಾ ಎಷ್ಟು ಆನಂದವನ್ನು ಅನುಭವಿಸುವನೋ ಅಷ್ಟೇ ಆನಂದವನ್ನು ನಿರ್ವ್ಯಾಪಾರರಾದ ಮುಕ್ತರು ಅನುಭವಿಸುವರೆಂದು ಅವರ ಸಿದ್ಧಾಂತವು. ಅನಂತವಾದ, ಪ್ರತಿ ಕ್ಷಣದಲ್ಲಿಯೂ ಪ್ರಯತ್ನಾಪೇಕ್ಷಿಯಾದ ಜಗನ್ನಿರ್ಮಾಣ ಕಾರ್ಯವೂ ಇಲ್ಲದೆಯೇ, ನಿರತಿಶಯವಾದ ಬ್ರಹ್ಮನ ಆನಂದಕ್ಕೆ ಸಮಾನವಾದ ಸುಖ ಭೋಗವುಳ್ಳ ಮುಕ್ತರು ಅವನಿಗಿಂತ ಶ್ರೇಷ್ಠರೇ ಆದರು. ಸೇವೆ ಮಾಡಿ ನೂರಾರು ರೂಪಾಯಿಗಳನ್ನು ಹೊಂದುವ ಅಧಿಕಾರಿಗಿಂತ ಮನೆಯಲ್ಲಿಯೇ ಕುಳಿತು ನೂರು ರೂಪಾಯಿಗಳನ್ನು ಸಂಪಾದಿಸುವವನು ಶ್ರೇಷ್ಠನು ಎಂಬ ಲೋಕಾನುಭವಸಿದ್ಧವಾಗಿರುವುದು.

5. ಮುಕ್ತರು ಪೂರ್ಣರಾದರೂ ಇಚ್ಛಾಮಾತ್ರದಿಂದ ಪರಮಾತ್ಮನ ಅಧೀನರಾಗಿ ಕೈಂಕರ್ಯಭಾವವನ್ನು ಹೊಂದುವರೆಂಬ ರಾಮಾನುಜ ತತ್ತ್ವವು ಅಪಹಸನೀಯ ಪ್ರಕ್ರಿಯೆಯು. ಹೇಗೆಂದರೆ, ಒಬ್ಬ ಪುರುಷನು ಸಮಾನನಾದ ತನ್ನ ಮಿತ್ರನಲ್ಲಿ ಬಹು ಪ್ರೀತಿಯುಕ್ತನಾಗಿರುವನು; ಆದರೆ ಕೈಂಕರ್ಯ ಧರ್ಮವನ್ನು ಅವಲಂಬಿಸಲಾರನು. **ಸಾಮ್ಯವು ಮೈತ್ರೀಭಾವಕ್ಕೆ ಕಾರಣವಾಗಿರುವುದು** ಮತ್ತು ಕೈಂಕರ್ಯಕ್ಕೆ ಪ್ರತಿಬಂಧಕವು. ಪ್ರೀತಿಯು ನಾನಾ ವಿಧವಾಗಿರುವುದು.

ಗುರುಗಳಲ್ಲಿ ಪ್ರೀತಿಯು, ಮಿತ್ರನಲ್ಲಿ ಪ್ರೀತಿಯು, ಪತ್ನಿಯಲ್ಲಿ ಪ್ರೀತಿಯು ಮತ್ತು ನಂಬಿದ ಭೃತ್ಯನಲ್ಲಿ ಪ್ರೀತಿಯು ಇವು ನಾಲ್ಕು ಪರಸ್ಪರ ಅತ್ಯಂತ ವಿಲಕ್ಷಣವಾದ ಧರ್ಮಗಳು. ಭೃತ್ಯಾದಿಗಳಲ್ಲಿ ಮಾಡುವ ಪ್ರೀತಿಯು ಗುರುಗಳಲ್ಲಿ ಮಾಡಲ್ಪಟ್ಟರೆ ಅವಜ್ಞೆಯೆನ್ನಿಸುವುದು. ಹೀಗೆಯೇ ಒಬ್ಬರಲ್ಲಿ ತೋರಿಸುವ ಪ್ರೀತಿವಿಶೇಷವನ್ನು ಮತ್ತೊಬ್ಬರಲ್ಲಿ ತೋರಿಸುವುದು ಜೀವ ಸ್ವಾಭಾವಿಕವೂ ಅಲ್ಲ. ಲೋಕದಲ್ಲೂ ಹಾಸ್ಯಾಸ್ಪದವಾಗುವುದು. ಯಾವ ಪುರುಷನೂ ತನ್ನ ಮಿತ್ರನಲ್ಲಿ ಕೈಂಕರ್ಯವನ್ನು **ಮನಃಪೂರ್ವಕವಾಗಿ** ಮಾಡಲಾರನು. ಲೌಕಿಕ ಕಾರಣಗಳಿಂದ, ಲೋಕವಿಡಂಬನಾರ್ಥವಾಗಿಯೋ ಅಥವಾ ತನ್ನ ಮಿತ್ರನ ಪ್ರಯೋಜನಾರ್ಥವಾಗಿಯೋ, ಬಾಹ್ಯ ಕೈಂಕರ್ಯ ಧರ್ಮಗಳನ್ನು ಪ್ರಕಟನೆ ಮಾಡಬಹುದು. ಆದರೆ **ಮನಸ್ಸಿನಲ್ಲಿ** ಸರ್ವಥಾ ಮೈತ್ರೀ ಭಾವರೂಪವಾದ ಪ್ರೀತಿಯನ್ನು ಮಾಡುವನೇ ಹೊರತು ಉತ್ತಮವಾದ ಗುರ್ವಾದಿಗಳಲ್ಲಿ ಮಾಡುವ ಭಕ್ತ್ಯಾದಿ ರೂಪವಾದ ಪ್ರೀತಿಯನ್ನು ಮಾಡಲಾರನು. ಹೀಗಿರುವುದರಿಂದ ಶ್ರೀಭಾಷ್ಯಕಾರರು ಹೇಳುವಂತೆ, ಮುಕ್ತರೂ ಬ್ರಹ್ಮನ ಆನಂದಕ್ಕೆ ಸಮಾನವಾದ ಆನಂದ ಉಳ್ಳವರಾದರೆ ತಮ್ಮ ಸ್ವೇಚ್ಛೆಯಿಂದ **ಕೈಂಕರ್ಯ** ಭಾವವನ್ನು ಹೊಂದಿರುವರೆಂದು ಹೇಳುವುದು ಲೋಕವಿರುದ್ಧವಾದ ಪ್ರಕ್ರಿಯೆಯು. ಮುಕ್ತರು ಆನಂದದಿಂದ ಬ್ರಹ್ಮ ಸಾಮ್ಯವನ್ನು ಹೊಂದಿದರೂ ಜ್ಞಾನ, ಬಲ, ವೀರ್ಯ, ತೇಜಸ್ಸು ಮುಂತಾದ ಗುಣಗಳು ಪರಮಾತ್ಮನಿಗಿರುವಷ್ಟು ಇರುವುದಿಲ್ಲ ಎಂದು ಸಹ ಹೇಳಲಾಗುವುದಿಲ್ಲ. ರಾಮಾನುಜಾಚಾರ್ಯರು ಆನಂದ ಬೇರೆ ಜ್ಞಾನ ಬೇರೆ ಎಂದು ಹೇಳದೆ ಜ್ಞಾನವೇ (ವಸ್ತು ಸಾಕ್ಷಾತ್ಕಾರವೇ) ಆನಂದವೆಂದು ಹೇಳಿ ಬಿಟ್ಟಿರುತ್ತಾರೆ. ಆದುದರಿಂದ ಆನಂದ ಸಾಮ್ಯವನ್ನು ಒಪ್ಪಿದರೆ ಜ್ಞಾನ ಸಾಮ್ಯವನ್ನು ಒಪ್ಪಿದ ಹಾಗಾಯಿತು. ಬಲ ವೀರ್ಯಾದಿ ಸಕಲ ಗುಣಗಳೂ ಮುಕ್ತರಲ್ಲೂ ಪರಬ್ರಹ್ಮನಲ್ಲಿರುವಷ್ಟೇ ಇರುವುವು. ಹೇಗೆಂದರೆ ಆನಂದವು ಐಶ್ವರ್ಯಪ್ರಯೋಜ್ಯವಾದುದು. ಯಾವನಿಗೆ ಎಷ್ಟು ಐಶ್ವರ್ಯವೋ ತದನುಗುಣವಾಗಿ ತನ್ನಿಮಿತ್ತಕವಾದ ಆನಂದವನ್ನು ಆಚೇತನನು ಅನುಭವಿಸುವನು ಎಂದು ಲೋಕಸಿದ್ಧವಾಗುವುದು. ಮುಕ್ತರ ಆನಂದವು ಬ್ರಹ್ಮಾನಂದತುಲ್ಯವಾದರೆ ಮುಕ್ತರ ಬಲ, ವೀರ್ಯಾದಿಗಳೂ ಬ್ರಹ್ಮನ ವೀರ್ಯಾದಿಗಳಿಗೆ ಸಮಾನವೇ ಆಗಿರಬೇಕು. " ಐಶ್ವರ್ಯ ಸಾಮ್ಯಾಭಾವೇ ಆನಂದ ಸಾಮ್ಯಾಭಾವ ಪ್ರಸಂಗಃ " ಆದುದರಿಂದ ಮುಕ್ತರೂ ಬ್ರಹ್ಮನೂ ಸರ್ವ ವಿಷಯದಲ್ಲಿಯೂ ಸಮಾನರೆಂದೂ ಪ್ರಾಪ್ತವಾಯಿತು. ಈ ಮತವು ನಿಜವಾದರೆ ಸರ್ವ ಕಾಮಾದಿಗಳಿಂದ ರಹಿತವಾದ ಮುಕ್ತಿ ಸ್ಥಾನದಲ್ಲಿ, ಮುಕ್ತರೆಲ್ಲರೂ ವಿಷ್ಣುವಿನಲ್ಲಿ ಮೈತ್ರೀ ಭಾವದಿಂದ ಪ್ರೀತಿ ಮಾಡುತ್ತಾ ಇರುವುದು ಉಚಿತವು; ಮತ್ತು ವಿಷ್ಣುವೂ ಅವರಲ್ಲಿ ಮೈತ್ರೀಭಾವದಿಂದ ಪ್ರೀತಿ ಮಾಡುವುದು ಉಚಿತವು. ಅಷ್ಟೇ ವಿನಃ ಮುಕ್ತರು ಮಾತ್ರ ವಿಷ್ಣುವನ್ನು ಧ್ಯಾನ ಮಾಡುವುದು ಮತ್ತು ವಿಷ್ಣುವು ಅವರ ಸೇವೆಯನ್ನು ಸ್ವಾಮಿಭಾವದಿಂದ ಸ್ವೀಕರಿಸುವುದೂ, ಅನುಚಿತವಾಗುವುದು. ಸಾಮ್ಯವಿದ್ದರೆ **ಪರಸ್ಪರ ಧ್ಯಾನವು,**

**ಪರಸ್ಪರ ಸೇವೆಯು** ಆವಶ್ಯಕವು. ವಿಷ್ಣು ಧ್ಯಾನದಲ್ಲಿ ಮುಕ್ತರು ಆಸಕ್ತರಾದರೆ, ವಿಷ್ಣುವೂ ಮುಕ್ತರ ಪ್ರತಿಮಾದಿಗಳನ್ನು ಮಾಡಿಸಿಕೊಂಡು ಅವರನ್ನು ಕುರಿತು ಕೆಲವು ಕಾಲ ಧ್ಯಾನ ಮಾಡುತ್ತಾ, ಅವರಿಗೋಸ್ಕರ ಯಜ್ಞಾದಿಗಳನ್ನು ಅವರ ಸೇವೆಗೆ ಪ್ರತಿಯಾಗಿ ಮಾಡಬೇಕಾಗುವುದು. ಹೀಗೆ ವಿಷ್ಣುವು ಮೈತ್ರೀಭಾವ ದಿಂದ ಮುಕ್ತರ ಸೇವೆಯನ್ನು ಮಾಡುವನೆಂದು ಹೇಳುವಷ್ಟು ಧೈರ್ಯವು ರಾಮಾನು ಜಾಚಾರ್ಯರಿಗೂ ಒದಲಿಲ್ಲ. ಆದುದರಿಂದ ಕೈಂಕರ್ಯ ಭಾವವನ್ನು ಮುಕ್ತಿ ಯಲ್ಲಿ ಒಪ್ಪಿರುವ ರಾಮಾನುಜಾಚಾರ್ಯರು ( ಅದಕ್ಕೆ ವ್ಯಾಪಕವಾದ ) ತಾರತಮ್ಯ ವನ್ನು ಅವರ ನ್ಯಾಯಾನುಸಾರವಾಗಿ ಒಪ್ಪಲೇಬೇಕು.

ಮುಕ್ತಿಯಲ್ಲೂ **ಸ್ವಭಾವಸಿದ್ಧವಾದ** ದಾಸ್ಯಭಾವವೇ ( ಅಧಮತ್ವವೇ ) ಜೀವರಿಗೂ ಇರುವುದೆಂದು ಶ್ರೀ ಕೃಷ್ಣನು ಸ್ಪಷ್ಟವಾಗಿ ಹೇಳುತ್ತಾನೆ :—

**(1) ........ಕೂಟಸ್ಥೋಽಕ್ಷರ ಉಚ್ಯತೇ ।**
**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ॥**
**—(15. 17.)**

**........ಕ್ಷರಮತೀತೋಽಹ ಮಕ್ಷರಾದಪಿ ಚೋತ್ತಮಃ । —(15. 18.)**

ನಿರ್ವಿಕಾರಳಾದ ಲಕ್ಷ್ಮೀದೇವಿಯು ಅಕ್ಷರಪುರುಷಳು. ಪರಮಾತ್ಮನು ಅವಳಿ ಗಿಂತ ಉತ್ತಮ ಪುರುಷನು. ನಾನು ( ಶ್ರೀ ಕೃಷ್ಣನು ) ಕ್ಷರಪುರುಷರಿಗಿಂತಲೂ ಅಧಿಕನು, ಅಕ್ಷರಚೇತನಳಾದ ಲಕ್ಷ್ಮೀದೇವಿಗಿಂತಲೂ ಅಧಿಕನು.

**(2) ಅಪರೇಯ ಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇಪರಾಂ ।**

ಚೇತನಾಚೇತನ ಸರ್ವ ಜಗತ್ತಿಗಿಂತಲೂ ಭಿನ್ನಳಾದ ಚೇತನ ಪ್ರಕೃತಿಯು ಇವುಗಳಿಗಿಂತ ಭಿನ್ನಳೆಂದೂ ನನ್ನ ಅಧೀನಳೆಂದೂ ತಿಳಿ.

ಇವೇ ಮುಂತಾದ ಅನೇಕ ವಾಕ್ಯಗಳಿಂದ ನಿತ್ಯಮುಕ್ತಳಾದುದರಿಂದಲೂ, ಭಗವಂತನಿಗೆ ಅತಿ ಸಮೀಪದಲ್ಲಿರುವುದರಿಂದಲೂ ಮುಕ್ತ ವರ್ಗದಲ್ಲೆಲ್ಲಾ ಶ್ರೇಷ್ಠ ಳಾದ ಲಕ್ಷ್ಮೀದೇವಿಯು ಸ್ವಾಭಾವಿಕವಾಗಿ ಭಗವದ್ದಾಸಿಯು ಎಂದು ಸಿದ್ಧ ವಾಯಿತು. ಲಕ್ಷ್ಮಿಗೂ ಪರಮಾತ್ಮನಿಗೂ ಆನಂದ ಸಾಮ್ಯಾದಿಗಳು ಇದ್ದರೆ ಮೈತ್ರೀಭಾವವು ಕೂಡುತ್ತಿತ್ತು. ಶ್ರೀ ಕೃಷ್ಣನು ನನ್ನ ಅಧೀನಳು ಲಕ್ಷ್ಮಿಯು, ನಾನು ಅಧ್ಯಕ್ಷನು, ನಾನು ಅವಳಿಗೆ ಆಧಾರಭೂತನು, ನಾನು ಅವಳಿಗಿಂತ ಉತ್ತಮನು ಇತ್ಯಾದಿ ರೀತಿಯಲ್ಲಿ ಅರ್ಜುನನಿಗೆ ಉಪದೇಶವನ್ನು ಮಾಡುತ್ತಿರಲಿಲ್ಲ. ಲಕ್ಷ್ಮಿಯು ಸ್ವಾಭಾವಿಕವಾಗಿ ತನ್ನ ಅಧೀನಳೆಂದೇ ಶ್ರೀ ಕೃಷ್ಣನು ಹೇಳಿರುತ್ತಾನೆ. ಕೈಮುತ್ಯನ್ಯಾಯದಿಂದ ಸಕಲ ಮುಕ್ತವರ್ಗವೂ ವಿಷ್ಣುವಿನ ಅಧೀನವೇ ಎಂದು ಸಿದ್ಧವಾಗುವುದು.

ಶ್ರೀ ಕೃಷ್ಣನು ಹೇಳುತ್ತಾನೆ :—

(3) ಬ್ರಹ್ಮಣೋಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯಚ ।
ಶಾಶ್ವತಸ್ಯಚಧರ್ಮಸ್ಯಸುಖಸ್ಯೈಕಾಂತಿಕಸ್ಯಚ ॥

—(14. 27.)

ನಾನು ಲಕ್ಷ್ಮೀದೇವಿಗೆ ಆಧಾರಭೂತನು. ಅವ್ಯಯವಾದ ಮುಕ್ತವರ್ಗಕ್ಕೆ ಆಧಾರಭೂತನು ಶಾಶ್ವತ ಧರ್ಮಕ್ಕೆ ಮತ್ತು ಮುಕ್ತಿಸುಖಕ್ಕೂ ನಿಯಾಮಕನು.

ಇದರಿಂದ ಮುಕ್ತರ ಆನಂದವು ವಿಷ್ಣುವಿನ ಅಧೀನವಾಗಿಯೇ ಇರುವುದೆಂದು ಸಿದ್ಧವಾಗುತ್ತದೆ. ವಿಷ್ಣುವಿಗೆ ಅಧೀನನಾದ ಮುಕ್ತೊಬ್ಬ ಚೇತನನ ಆನಂದವು ವಿಷ್ಣುವಿನ ಆನಂದಕ್ಕೆ ಸಮಾನವಾದುದೆಂದು ಹೇಳುವುದು ಲೋಕ ವಿರುದ್ಧವು, ರಾಜನ ಆನಂದಕ್ಕೆ ಭೃತ್ಯನ ಆನಂದವು ಎಂದೂ ಸಮಾನವಾಗಲಾರದು, ಮತ್ತು ವಿಲಕ್ಷಣವಾಗಿಯೂ ಇರುವುದು. ಸ್ವಾಮಿಭಾವಪ್ರಯುಕ್ತವಾದ ಭೃತ್ಯಸೇವಾದಿ ಜನಿತ ರಾಜನ ಆನಂದವು ವಿಲಕ್ಷಣವು; ಭೃತ್ಯಭಾವಪ್ರಯುಕ್ತ ಸ್ವಾಮಿ ಪ್ರೀತಿ ಜನಿತ ಭೃತ್ಯನ ಆನಂದವು ವಿಲಕ್ಷಣವು. ಹೀಗಿರುವುದರಿಂದ ಸ್ವಾಮಿ-ಭೃತ್ಯ ನ್ಯಾಯೋಚಿತರಾದ ವಿಷ್ಣುವಿಗೂ ಮುಕ್ತರಿಗೂ ಇರುವ ಆನಂದವು ವಿಲಕ್ಷಣವಾಗಿಯೂ ತಾರತಮ್ಯೋಪೇತವಾಗಿಯೂ ಇರುವುದೆಂದೇ ಅಂಗೀಕರಿಸಬೇಕು.

ಅಧಿಕ ದೋಷೋದ್ಘಾಟನೆಯಂದೇನು ? ಮುಕ್ತರ ಆನಂದವು ಬ್ರಹ್ಮಾನಂದಕ್ಕೆ ಸದೃಶವಾಗಿದ್ದರೆ, ಭಾಗವತಕಾರರು "ಅರ್ಥೇಷ್ವಭಿಜ್ಞಃಸ್ವರಾಟ್" ಎಂಬಲ್ಲಿ ಒಬ್ಬನನ್ನು ಸ್ವರಮಣನೆಂದು ಹೇಳದೆ, ಅನಂತ ಜನರು ಸ್ವರಮಣರೆಂದು ಹೇಳಬೇಕಾಗಿತ್ತು. ಹಾಗೆ ಹೇಳದೇ ವಿಷ್ಣುವು ಒಬ್ಬನೇ ಸ್ವರಮಣನೆಂದು ನಿರ್ಣಯ ಮಾಡಿರುವುದರಿಂದ ಮುಕ್ತರೆಲ್ಲರೂ ನಿರ್ದೋಷತ್ವ, ದುಃಖರಾಹಿತ್ಯ, ಅಪುನರಾವೃತ್ತಿತ್ವ, ಶಾಶ್ವತ ಸುಖಾನುಭವ ಇತ್ಯಾದಿ ಸಾಮಾನ್ಯ ಧರ್ಮಗಳಿಂದ ವಿಷ್ಣು ಸಾಮ್ಯವನ್ನು ಹೊಂದುವರು; ಕೆಲವರು ವಿಷ್ಣುರೂಪಕ್ಕೆ ಸದೃಶವಾದ ರೂಪವನ್ನೂ ಹೊಂದುವರು ಎಂದು ಹೇಳಬಹುದು. ಇದೇ ಪರಮ ಸಾಮ್ಯವು. ಇದೇ ಸಾಧರ್ಮ್ಯ ಪ್ರಾಪ್ತಿಯು. ಇದಕ್ಕಿಂತ ಭಿನ್ನವಾದ ಪೂರ್ಣಾನಂದಸಾಮ್ಯವು ಬಹು ಪ್ರಮಾಣ ವಿರುದ್ಧವಾದ ಕುಕಲ್ಪನೆಯು.

**7.** ಸಾಂಖ್ಯಮುಕ್ತಿಯು ಜನಮನೋರಂಜಕವಾದ ಪ್ರಕ್ರಿಯೆಯು.

"ಬಧ್ಯತೇ ಮುಚ್ಯತೇಚ........ಪ್ರಕೃತಿಃ"

ಎಂಬ ಸಾಂಖ್ಯಕಾರಿಕೆಯಲ್ಲಿ ಪ್ರಕೃತಿಗೇ ಬಂಧವು, ಪ್ರಕೃತಿಗೇ ಮೋಕ್ಷವು ಎಂದು ಹೇಳಲ್ಪಟ್ಟಿರುವುದು. ಆತ್ಮನು ( ಪುರುಷನು ) ಪ್ರಕೃತಿ ಸಂಬಂಧರಹಿತನಾದವನು. ಅವನಿಗೆ ಬಂಧವೂ ಇಲ್ಲ. ಮುಕ್ತಿಯೂ ಇಲ್ಲ. ಬದ್ಧನಾಗಿರುವೆನೆಂಬ ಭ್ರಮುವೂ

ಆತ್ಮನಿಗಿರುವುದಿಲ್ಲ. ಪ್ರಕೃತಿಯೇ ಭ್ರಮವನ್ನು ತನ್ನ ಪರಿಣಾಮ ವಿಶೇಷವಾದ ಅಂತಃಕರಣದಲ್ಲಿ ನಿರ್ಮಾಣ ಮಾಡಿ, ತಾನೇ ರಂಗಸ್ಥಳದಲ್ಲಿ ನಾಟ್ಯವು ಮುಗಿದ ನಂತರ ನರ್ತಕಿಯು ರಂಗಮಂಟಪವನ್ನು ಬಿಟ್ಟು ಹೊರಟು ಹೋಗುವಂತೆ, ಪುರುಷ ಸನ್ನಿಧಾನದಿಂದ ದೂರ ಹೋಗುವುದು. ಪುರುಷನಿಗೆ ಪ್ರಕೃತಿ ಸಂಬಂಧ ಪ್ರಯುಕ್ತವಾಗಿ ದುಃಖಭೋಗವಾಗಲೀ, ಬಂಧನಿವೃತ್ತಿಯಿಂದ ದುಃಖಾಭಾವದ ಅಥವಾ ಸುಖದ ಅನುಭವವಾಗಲೀ ಇರುವುದಿಲ್ಲ.

ಈ ವಿಚಿತ್ರ ಕಲ್ಪನೆಯು ಅದ್ವೈತ ಮತದಲ್ಲಿ ಸಮಗ್ರವಾಗಿರುವುದು. ಅದ್ವೈತ ಬ್ರಹ್ಮನು ನಿಸ್ಸಂಗನು; ಆತ್ಮನಿಗೆ ಬಂಧವಿರುವುದಿಲ್ಲ. ಮುಕ್ತಿಯೂ ಇರುವುದಿಲ್ಲ. ಪ್ರಪಂಚವೆಲ್ಲವೂ ಅವಿದ್ಯಾ ಕಾರ್ಯವು, ಅಥವಾ ಪ್ರಕೃತಿ ಕಾರ್ಯವು. ನಾನು ಬದ್ಧನು ಎಂಬ ಭ್ರಮವೂ ಆತ್ಮನಿಗಿರುವುದಿಲ್ಲ; ನಿರ್ಧರ್ಮಕ ಬ್ರಹ್ಮಚೇತನನಿಗೆ ಭ್ರಮ ಉಳ್ಳೋಣವು ಎಲ್ಲಿಂದ ಬಂತು? ಆದುದರಿಂದ "ಅಹಂ" "ನಾನು" ಎಂಬ ಪದಾರ್ಥವು ಅಂತಃಕರಣವೆಂದೇ ಪ್ರಾಪ್ತವಾಯಿತು. ಅಂತಃಕರಣಕ್ಕೇ ಭ್ರಮವು. ಅಂತಃಕರಣದಿಂದಲೇ ಭ್ರಮನಿವೃತ್ತಿಯು; ಬಂಧ ಮುಕ್ತಿಗಳೆರಡೂ ಅಂತಃಕರಣ ವಿವಕ್ಷೆಯಿಂದಲೇ ಹೊರತು ಅದ್ವೈತಾತ್ಮನು ಯಾವ ಪ್ರಕಾರ ದಿಂದಲೂ ಸಂಸಾರಕ್ಕೆ ಇಳಿಯತಕ್ಕವನಲ್ಲ. ಇದನ್ನು ಮನಸ್ಸಿನಲ್ಲಿಟ್ಟೇ ಪೂರ್ವಿಕರು "ಸಾಂಖ್ಯಸೌಗತಭಟ್ಟಾನಾಂ ಸಂಕರಾಚ್ಛಂಕರೋದಯಃ" ಎಂದು ಹೇಳಿರುವರು. ಸಾಂಖ್ಯರು ಅಂಗೀಕರಿಸಿರುವಂತೆ ನಿಷ್ಕ್ರಿಯನಾದ ಅಸಂಗನಾದ ಆತ್ಮನನ್ನೂ, ಸೌಗತರು ಹೇಳುವಂತೆ ಪ್ರತ್ಯಕ್ಷಾದಿ ಪ್ರಮಾಣಸಿದ್ಧವಾದ ಸಕಲ ಜಗತ್ತಿಗೂ ಅಸತ್ಯತ್ವವನ್ನೂ, ಭಾಟ್ಟರಿಂದ ಅಂಗೀಕೃತವಾದ ಕೆಲವು ಲೋಕ ನ್ಯಾಯಗಳನ್ನೂ ಒಟ್ಟುಗೂಡಿಸಿ ಅದ್ವೈತ ಮತವು ಪ್ರತಿಪಾದನೆ ಮಾಡುವುದು ಎಂದು ತಾತ್ಪರ್ಯಾರ್ಥವು. ಆದರೆ ಇಷ್ಟು ಮಾತ್ರ ವೈಲಕ್ಷಣ್ಯವಿರುವುದು; ಸಾಂಖ್ಯರು ಅನಂತ ಆತ್ಮರುಗಳನ್ನು ಒಪ್ಪಿರುವರು. ಅದ್ವೈತಿಗಳು ಒಂದೇ ಆತ್ಮ ವಸ್ತುವೆಂದು ಹೇಳು ವರು. ವಸ್ತುತಃ ಇದು ಅಕಿಂಚಿತ್ಕರವಾದ ವಿಷಯವು. ಬಂಡೆಯ ಕಲ್ಲಿನಂತೆ ಸುಖ ದುಃಖಭೋಗರಹಿತನಾಗಿ "ನಾನು" ಎಂಬ ಜ್ಞಾನಕ್ಕೆ ಗೋಚರವಾಗದ ಬಂಧರಹಿತನಾದ ಮತ್ತು ಮೋಕ್ಷರಹಿತನಾದ ಆತ್ಮನು ಒಂದಾದರೇನು? ಹತ್ತಾದ ರೇನು? "ನಾನು" "ನಾನು" ಎಂಬ ನಾವುಗಳು ಬೇರೆಯಷ್ಟೇ! (ಅಂತಃಕರಣ ವಷ್ಟೆ!)

ಶ್ರೀ ಕೃಷ್ಣನು ಚೇತನನಿಗೇ ಬಂಧವೂ, ಚೇತನನಿಗೇ ಮುಕ್ತಿಯೂ, ಚೇತನ ನಿಗೇ ಬಂಧದಿಂದ ದುಃಖಭೋಗವೂ, ಚೇತನನಿಗೇ ಬಂಧನಿವೃತ್ತಿಯಿಂದ ದುಃಖಾ ಭಾವದ ಅನುಭವವೂ, ಸುಖಭೋಗವೂ ಉಂಟೆಂದು ಹೇಳುತ್ತಾನೆ. ಶ್ರೀ ಕೃಷ್ಣನು ಹೇಳುತ್ತಾನೆ :—

**(1) ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್ ।**

—(13. 22.)

ಚೇತನನು ಪ್ರಕೃತಿನಿರ್ಮಿತ ಶರೀರದಲ್ಲಿ ಸ್ಥಿತನಾಗಿ ಪ್ರಕೃತಿನಿರ್ಮಿತ ಸುಖ ದುಃಖಾದಿಗಳನ್ನು ಭುಂಕ್ತೇ = ಭೋಗಿಸುತ್ತಾನೆ, ಅನುಭವಿಸುತ್ತಾನೆ.

(2) **ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಂ ।**
—(13. 15.)

ಭೂತಾನಾಂ = ಪ್ರಾಣಿಗಳಿಗೆ, ಪ್ರಕೃತಿರೂಪವಾದ ಬಂಧದ ಬೆಸೆಯಿಂದ ಬಿಡುಗಡೆಯನ್ನೂ ಮತ್ತು ಬಿಡುಗಡೆಯ ಉಪಾಯವನ್ನೂ ಯಾರು ತಿಳಿಯುತ್ತಾರೆಯೋ ಅವರು ಪರಮಾತ್ಮನನ್ನು ಹೊಂದುತ್ತಾರೆ. ಪ್ರಾಣಿಗಳಿಗೆ ಬಂಧನಿವೃತ್ತಿಗೆ ಬೇಕಾಗುವ ಸಾಧನೆಗಳನ್ನು ತಿಳಿದು, ಅನುಷ್ಠಾನ ಮಾಡಿ ಪರಮಾತ್ಮನನ್ನು ಹೊಂದುತ್ತಾರೆ ಎಂದು ಅರ್ಥವು.

(3) **ಬಹವೋಜ್ಞಾನತಪಸಾ ಪೂತಾಮದ್ಭಾವಮಾಗತಾಃ ।**
—(4. 10.)

ಅನೇಕ ಚೇತನರು ಜ್ಞಾನದಿಂದಲೂ ತಪಸ್ಸಿನಿಂದಲೂ ಶುದ್ಧರಾಗಿ ಮುಕ್ತರಾದರು.

(4) **ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ ।**
—(5. 21.)

ಧ್ಯಾನಾರೂಢನಾದ ಯೋಗಿಚೇತನನು ಮುಕ್ತನಾಗಿ ನಾಶರಹಿತವಾದ ಸುಖವನ್ನು ಅನುಭವಿಸುತ್ತಾನೆ.

ಜಡವಾದ ಅಂತಃಕರಣವು ಅಥವಾ ಬುದ್ಧಿವಿಶೇಷವೇ " ನಾನು " ಎಂಬ ಅನುಭವಸಿದ್ಧವಾದ ಜೀವಪದಾರ್ಥವು; ಜಡಕ್ಕೇ ಬಂಧವು, ಜಡಕ್ಕೇ ಮುಕ್ತಿಯು ಎಂದು ಅಭಿಪ್ರಾಯಪೂರ್ವಕವಾಗಿ ಪ್ರತಿಪಾದನೆ ಮಾಡುವ ವಾದವು ದೇಹಾತ್ಮವಾದವಾದ ಚಾರ್ವಾಕ ಮತದ ರೂಪಾಂತರವೆಂದೇ ನಿಶ್ಚಯಿಸಬಹುದು. ಅಥವಾ ಅನುಭವಸಿದ್ಧವಾದ ಪದಾರ್ಥಗಳನ್ನೆಲ್ಲಾ ಒಪ್ಪಿಕೊಂಡಿರುವುದರಿಂದ ಜೀವನಿಗೇ ಜಡವೆಂದು ಹೆಸರು ಇಟ್ಟ ಹಾಗಾಯಿತೇ ಹೊರತು ಚೇತನನಿಗೆ ಬಂಧಮೋಕ್ಷಗಳಿಲ್ಲವೆಂದು ಹೇಳಿದ ಹಾಗಾಗಲಿಲ್ಲ.

8. ಇನ್ನು ಬ್ರಹ್ಮೈಕ್ಯವು ಮುಕ್ತಿಯು ಎಂಬ ಅದ್ವೈತವಾದದ ಪರಿಶೀಲನೆಯು ಒಂದು ಉಳಿಯಿತು. ಸಿದ್ಧವಾದ ಬ್ರಹ್ಮಭಾವವನ್ನು ನೂತನವಾಗಿ ಹೊಂದುವುದು ಅಶಕ್ಯವಾದುದರಿಂದ ಬ್ರಹ್ಮೈಕ್ಯ ರೂಪವಾದ ಮುಕ್ತಿಯು ಅದ್ವೈತ ಮತದ ರೀತ್ಯಾ ದುರ್ನಿರೂಪವಾಗಿರುವುದೆಂದು ಹಿಂದೆಯೇ ನಿರೂಪಿಸಿರುತ್ತೇವೆ. ಮತ್ತು ಭೋಕ್ತೃ ಭೋಗ್ಯ ಭೋಗಗಳೆಂಬ ವಿವೇಕರಹಿತವಾದ ಅನುಸಂಧಾನರಹಿತವಾದ ಬ್ರಹ್ಮಭಾವವು ಜಡತ್ವಪ್ರಾಪ್ತಿಯೋಪಾದಿಯಲ್ಲಿ ಪುರುಷಾರ್ಥವೆನ್ನಿಸಲಾರದೆಂದೂ,

ಹಾಗೆಯೇ "ನಾನು ನಾನು" ಎಂಬ ಜೀವಭಾವದ ನಾಶರೂಪವಾದುದರಿಂದ ಯಾರಿಂದಲೂ ಅಪೇಕ್ಷಿತವಾಗುವುದಿಲ್ಲವೆಂದೂ ನಿರೂಪಿಸಲ್ಪಟ್ಟಿತು. ಮುಖ್ಯವಾಗಿ ಜೀವಬ್ರಹ್ಮರು ಒಂದೇ ಎಂಬಲ್ಲಿ **ನಿರವಕಾಶವಾದ ಮುಖ್ಯಾರ್ಥದಿಂದಲೇ ಈ ಪ್ರಮೇಯವನ್ನು ಬೋಧಿಸುವ ಶ್ರುತಿಯು ಒಂದೂ** ಇರುವುದಿಲ್ಲವೆಂದು ಅದ್ವೈತಿಗಳೂ ಹೇಳುತ್ತಾರೆ. ನಾವೂ ಹೇಳುತ್ತೇವೆ. ಬೃಹದಾರಣ್ಯಕೋಪನಿಷ ಚ್ಛಾಂಕರ ಭಾಷ್ಯವು ಈ ವಿಷಯದಲ್ಲಿ ಸ್ಫುಟವಾಗಿರುತ್ತದೆ:—

**"ನ ಕೇವಲಮುಪನಿಷದೋ ಬ್ರಹ್ಮೈಕತ್ವಂ ಪ್ರತಿಪಾದಯಂತ್ಯಃ ಸ್ವಾರ್ಥವಿಘಾತಂ ಕರ್ಮಕಾಂಡವಿಘಾತಂಚ ಕುರ್ವಂತಿ । ಪ್ರತ್ಯಕ್ಷಾದಿ ನಿಶ್ಚಿತಭೇದ ಪ್ರತಿಪತ್ತ್ಯರ್ಥ ಪ್ರಮಾಣೈಶ್ಚ ವಿರುಧ್ಯಂತೇ । ತಸ್ಮಾದಪ್ರಾಮಾಣ್ಯಮೇವೋಪನಿಷದಾಂ ಅನ್ಯಾರ್ಥತಾವಾಸ್ತು ನತ್ವೇವ ಬ್ರಹ್ಮೈಕತ್ವಪ್ರತಿ ಪತ್ತ್ಯರ್ಥತಾ ॥"**

ಅರ್ಥವು— ( ತತ್ವಮಸ್ಯಾದಿ ) ಉಪನಿಷತ್ತುಗಳು ಬ್ರಹ್ಮೈಕ್ಯವನ್ನು ಪ್ರತಿ ಪಾದನೆ ಮಾಡುವುವೆಂದು ಹೇಳಿದರೆ ಸೃಷ್ಟ್ಯಾದಿಗಳನ್ನು ಪ್ರತಿಪಾದಿಸುವ ಇತರ ಉಪನಿಷದ್ಭಾಗಗಳಿಗೂ ಮತ್ತು ಕರ್ಮಕಾಂಡರೂಪವಾದ ಸಕಲ ವೇದಭಾಗ ಗಳಿಗೂ ಮಾತ್ರವೇ ವಿರುದ್ಧವಾಗುವುವೆಂದಲ್ಲ. ಮತ್ತೇನೆಂದರೆ, ಭೇದಜ್ಞಾನವನ್ನೇ ಹುಟ್ಟಿಸುವುದೆಂದು ನಿಶ್ಚಿತವಾದ ಪ್ರತ್ಯಕ್ಷ ಪ್ರಮಾಣಗಳಿಗೂ ಮತ್ತು ಅನುಮಾನ ಪ್ರಮಾಣಗಳಿಗೂ ವಿರುದ್ಧವಾಗಿರುವುವು. ಆದುದರಿಂದ ಐಕ್ಯಬೋಧಕ ಶ್ರುತಿಗಳಿಗೆ ಅಪ್ರಾಮಾಣ್ಯವನ್ನಾಗಲೀ, ಅನ್ಯಾರ್ಥವನ್ನಾಗಲೀ ಯಾತಕ್ಕೆ ಹೇಳಬಾರದು ?

ಇದು ಶಂಕಾಗ್ರಂಥವು. ಇದರಿಂದ ಐಕ್ಯಬೋಧಕ ಪ್ರಮಾಣಗಳು ಇಷ್ಟೇ ಎಂದು ನಿರ್ಣಯ ಮಾಡಿ ಶಂಕರಾಚಾರ್ಯರು ಹೇಳಿದಂತಾಯಿತು. ಹೇಗೆಂದರೆ—

ಸಕಲ ಪ್ರತ್ಯಕ್ಷ ಪ್ರಮಾಣವು = ಜೀವಬ್ರಹ್ಮರ ಭೇದಬೋಧಕವು. ಅನು ಮಾನ ಪ್ರಮಾಣವು = ಭೇದಬೋಧಕವು. ಮಂತ್ರ ಬ್ರಾಹ್ಮಣರೂಪವಾದ ವೇದ ಭಾಗಗಳು = ಭೇದಬೋಧಕಗಳು. ಸೃಷ್ಟ್ಯಾದಿಗಳನ್ನು ಹೇಳುವ ಉಪನಿಷದ್ಭಾಗ ಗಳು = ಭೇದಬೋಧಕಗಳು. ಪೂರ್ವೋಕ್ತ ಸಕಲ ಪ್ರಮಾಣಗಳಿಗೂ ವಿರುದ್ಧ ವಾದ ತತ್ವಮಸಿ, ಅಹಂಬ್ರಹ್ಮಾಸ್ಮಿ ಮುಂತಾದ ನಾಲ್ಕೈದು ವಾಕ್ಯಗಳು = ಐಕ್ಯ ಬೋಧಕಗಳು.

ಈ ರೀತಿಯಾಗಿ ಜೀವಬ್ರಹ್ಮರ ಐಕ್ಯ ವಿಷಯದಲ್ಲಿ ತತ್ವಮಸ್ಯಾದಿ ನಾಲ್ಕೈದು ವಾಕ್ಯಗಳು ಹೊರತು ಇನ್ನು ಯಾವ ಪ್ರಮಾಣವೂ ಇರುವುದಿಲ್ಲ. ಅಷ್ಟೇ ಅಲ್ಲ. ಇರುವ ಪ್ರಮಾಣಗಳೆಲ್ಲಾ ಐಕ್ಯಾರ್ಥಕ್ಕೆ ವಿರುದ್ಧವಾಗಿಯೇ ಇರುವುವೆಂದು ಶಂಕರಾ ಚಾರ್ಯರೇ ಒಪ್ಪಿರುತ್ತಾರೆ. ಇನ್ನು ಈ ನಾಲ್ಕೈದು ವಾಕ್ಯಗಳ ಬಲವನ್ನು ವಿಮರ್ಶೆ ಮಾಡೋಣ.

1. ಅದ್ವೈತಿಗಳೇ ತತ್ವಮಸಿ ಮುಂತಾದ ಐದಾರು ವಾಕ್ಯಗಳು ಜೀವ ಬ್ರಹ್ಮರು ಅಭಿನ್ನರು ಎಂಬ ಅರ್ಥವನ್ನು ಕೊಡುವುದಿಲ್ಲವೆಂದು ಸ್ಪಷ್ಟವಾಗಿ ಬರೆದಿರುತ್ತಾರೆ. ಹೇಗೆಂದರೆ ತತ್ವಮಸಿ ಎಂಬ ವಾಕ್ಯವನ್ನು ತತ್, ತ್ವಂ, ಅಸಿ ಎಂದು ವಿಭಾಗ ಮಾಡಿ ಒಂದೊಂದು ಪದಕ್ಕೂ ಇರುವ ಅರ್ಥವನ್ನು ಯೋಜನೆ ಮಾಡಿದರೆ ಜೀವ ಪರಮಾತ್ಮರು ಅಭಿನ್ನರು ಎಂಬ ಅರ್ಥವು ಬರುವುದು. ಹೀಗೆ ವಿಭಾಗ ಮಾಡಿ ಅರ್ಥವನ್ನು ಮಾಡಬಾರದು; ಮತ್ತೇನೆಂದರೆ ತತ್ವಮಸಿ ಎಂಬ ಅಖಂಡ ವಾಕ್ಯಕ್ಕೆ "ಚಿತ್" ಎಂದು ಅರ್ಥವು ಎಂದು ಅದ್ವೈತಿಗಳು ಹೇಳುತ್ತಾರೆ. ಏನೆಂದರೆ ತತ್ವಮಸಿ ಎಂದರೆ ಜೀವಬ್ರಹ್ಮರು ಅಭಿನ್ನರು ಎಂದು ಅರ್ಥವಲ್ಲ, "**ಬ್ರಹ್ಮ**" ಎಂದು ಇಷ್ಟೇ ಅಖಂಡಾರ್ಥವು ಎಂದು ಅವರ ಸ್ಪಷ್ಟ ಸಮ್ಮತಿಯು ಇರುವುದರಿಂದ ಮರಳಿನ ಮೇಲೆ ಕಟ್ಟಿದ ಮನೆಯಂತೆ ಐಕ್ಯಶಾಸ್ತ್ರವು ನಿರ್ಮೂಲವಾಯಿತು. ಜೀವಬ್ರಹ್ಮರು ಅಭಿನ್ನರು ಎಂಬಲ್ಲಿ ಪ್ರಮಾಣವನ್ನು ಕೇಳಿದಾಗ "ಬ್ರಹ್ಮ" ಎಂದು ಇಷ್ಟು ಮಾತ್ರವೇ ಬೋಧಿಸುವ ವಾಕ್ಯವು ಕೋಮಟಿಯ ಸಾಕ್ಷಿಯಂತೆ ಸಾಧಕವಾಗಲಾರದು. ಇದು ತತ್ವಮಸಿ ವಾಕ್ಯವು ಅಖಂಡಾರ್ಥಪರವೆಂದು ಹೇಳುವ ಅದ್ವೈತಿಗಳ ಮಾತು :—

**ಸಂಸರ್ಗಾಸಂಗಿಸಮ್ಯಗ್ಧೀಹೇತುತಾನಗಿರಾಮಿಯಂ ।**
**ಉಕ್ತಾಖಂಡಾರ್ಥತಾಯದ್ವಾತತ್ಪ್ರಾತಿಪದಿಕಾರ್ಥತಾ ॥**

ಹೀಗೆ ಒಂದು ರೀತಿಯಲ್ಲಿ ಐಕ್ಯಶಾಸ್ತ್ರದ ನಿರಾಧಾರತೆಯು ಪ್ರಕಟಿಸಲ್ಪಟ್ಟಿತು.
2. ತತ್ವಮಸ್ಯಾದಿ ವಾಕ್ಯಗಳು ಅಖಂಡಾರ್ಥಪರವಲ್ಲ ಮತ್ತು ಸಂಸರ್ಗಜನಿತ ಬೋಧವನ್ನು (ಪದಗಳಿಗಿರುವ ಪ್ರತ್ಯೇಕ ಅರ್ಥಗಳ ಸಂಬಂಧಸಹಿತವಾದ ವಾಕ್ಯಾರ್ಥ ಜ್ಞಾನವನ್ನು) ಹುಟ್ಟಿಸುವುವು ಎಂದು ಹೇಳುವುದಾದರೂ ಅದ್ವೈತಿಗಳ ರೀತಿಯಿಂದಲೇ ಈ ವಾಕ್ಯಗಳು ಐಕ್ಯಕ್ಕೆ ಸಾಧಕವಾಗಲಾರವು ಎಂದು ತೋರಿಸಬಹುದು. ಅದು ಹೇಗೆಂದರೆ, ತತ್ವಮಸ್ಯಾದಿ ವಾಕ್ಯಗಳೂ **ಮುಖ್ಯಾರ್ಥದಿಂದ** ಜೀವಬ್ರಹ್ಮರ ಅಭೇದವನ್ನು ಪ್ರತಿಪಾದನೆ ಮಾಡುವುದಿಲ್ಲವೆಂದೂ ಶಂಕರಾಚಾರ್ಯರೇ ಹೇಳಿರುತ್ತಾರೆ. ಇದು ಅವರ ಮಾತು :—

**ಐಕ್ಯಂತಯೋರ್ಲಕ್ಷಿತಯೋರ್ನವಾಚ್ಯಯೋರ್ನಿಗದ್ಯತೇಽನ್ಯೋನ್ಯ**
**ವಿರುದ್ಧಧರ್ಮಿಣೋಃ ॥**

ತತ್ ಪದಾರ್ಥವಾದ ಬ್ರಹ್ಮನೂ, ತ್ವಂಪದಾರ್ಥವಾದ ಜೀವನೂ ಒಂದು ಎಂದು **ಮುಖ್ಯವೃತ್ತಿ**ಯಿಂದ ಜೀವಬ್ರಹ್ಮರ ಅಭೇದವನ್ನು ತತ್ವಮಸ್ಯಾದಿ ಶ್ರುತಿಗಳು ಪ್ರತಿಪಾದಿಸುವುದಿಲ್ಲ. ಮತ್ತೇನೆಂದರೆ ಲಕ್ಷಣಾವೃತ್ತಿಯಿಂದ "ತತ್" ಪದದಿಂದ ಮತ್ತು "ತ್ವಂ" ಪದದಿಂದ **ಲಕ್ಷಿತವಾದ** ಚಿನ್ಮಾತ್ರನು ಒಂದೇ ಎಂದು ಅರ್ಥ ಮಾಡಬೇಕು ಎಂದು ಹೇಳುತ್ತಾರೆ.

ಏವಂಚ ಜೀವಬ್ರಹ್ಮರ ಅಭೇದವನ್ನು **ಮುಖ್ಯವೃತ್ತಿಯಿಂದ** ಬೋಧಿಸುವ **ಒಂದು ಶ್ರುತಿಯೂ ಇರುವುದಿಲ್ಲ,** ಎಂದು ಶಂಕರಾಚಾರ್ಯರ ಸಮ್ಮತಿಯು ಪ್ರಾಪ್ತವಾಯಿತು.

ಲಕ್ಷಣಾವೃತ್ತಿಯಿಂದ ಜೀವಬ್ರಹ್ಮರ ಅಭೇದವನ್ನು ಪ್ರತಿಪಾದನೆ ಮಾಡುವ ವಾಕ್ಯಗಳಿರುತ್ತವೆ. ಅವು ಐಕ್ಯಾರ್ಥಕ್ಕೆ ಆಧಾರವು. ಇವುಗಳ ಬಲದಿಂದ ಮುಖ್ಯವೃತ್ತಿಯಿಂದಲೇ ಭೇದಬೋಧಕವಾದ ಸಕಲ ಪ್ರಮಾಣಗಳನ್ನೂ ನಿರಾಕರಿಸುತ್ತೇವೆ ಎಂದು ಅದ್ವೈತವಾದಿಗಳ ಫಲಿತಸ್ಥಿತಿಯು.

ಇಲ್ಲಿ ಸ್ವಲ್ಪ ವಿಚಾರವು ಆವಶ್ಯಕವು. ಮುಖ್ಯವೃತ್ತಿಯಿಂದ ಬೇರೆ ಒಂದು ವಾಕ್ಯದಲ್ಲಿ ಜೀವಬ್ರಹ್ಮರ ಐಕ್ಯವನ್ನು ತಿಳಿದಿದ್ದರೆ ವಿವಾದಾಸ್ಪದವಾದ ತತ್ವಮಸಿ ಮುಂತಾದ ವಾಕ್ಯಗಳಲ್ಲಿ ಮುಖ್ಯಾರ್ಥಕ್ಕೆ ಬಾಧವನ್ನು ತೋರಿಸಿ ಶಕ್ಯಸಂಬಂಧವನ್ನು ಹೊಂದಿರುವ ಜೀವಬ್ರಹ್ಮೈಕ್ಯಪರವಾಗಿ ಲಕ್ಷಣಾವೃತ್ತಿಯಿಂದ ಅರ್ಥವನ್ನು ಮಾಡಬಹುದು. ಏವಂಚ ಲಕ್ಷಣಾವೃತ್ತಿಯಿಂದ ಐಕ್ಯವನ್ನು ತತ್ವಮಸಿ ಮುಂತಾದ ವಾಕ್ಯಗಳು ಪ್ರತಿಪಾದಿಸುವುವೆಂದು ಹೇಳುವುದಾದರೆ, 1. ಮುಖ್ಯ ವೃತ್ತಿಯಿಂದ ಹಿಂದೆಯೇ ಐಕ್ಯ ಜ್ಞಾನವು ಯಾವುದಾದರೂ ಒಂದು ವಾಕ್ಯದಿಂದ ಹುಟ್ಟಿರಬೇಕು. ಮತ್ತು 2. "ತತ್" "ತ್ವಂ" ಪದಾರ್ಥಗಳಾದ ಅಲ್ಪಜ್ಞಜೀವ, ಸರ್ವಜ್ಞ ಈಶ್ವರರಿಗೂ ಲಕ್ಷ್ಯವಾದ ಚೇತನೈಕ್ಯಕ್ಕೂ ಸಂಬಂಧವು ಇರಬೇಕು. ಪೂರ್ವದಲ್ಲಿ ಮುಖ್ಯವೃತ್ತಿಯಿಂದ ಅಜ್ಞಾತವಾದ ವಸ್ತುವು ಪ್ರಕೃತದಲ್ಲಿ ಲಕ್ಷಣಾವೃತ್ತಿಯಿಂದ ಬೋಧ್ಯವಾಗಲಾರದು.

ಅದ್ವೈತ ಮತದಲ್ಲಿ ತತ್ವಮಸ್ಯಾದಿ ವಾಕ್ಯಗಳಿಗೆ ಲಕ್ಷಣಾವೃತ್ತಿಯಿಂದ "ಚಿನ್ಮಾತ್ರಬ್ರಹ್ಮನು" ಅಥವಾ ಐಕ್ಯವು ಎಂಬ ಅರ್ಥವನ್ನು ಹೇಳಿದರೆ, ಪೂರ್ವೋಕ್ತ ಎರಡು ತೊಂದರೆಗಳೂ ಪಾರ್ಶ್ವದ್ವಯದಲ್ಲಿರುವ ಎರಡು ಖಡ್ಗಗಳಂತೆ ಬಾಧಕವಾಗಿರುವುವು. ಐಕ್ಯ ಬೋಧಕವಾಗಿರುವ ವಾಕ್ಯಗಳು ಇವೈದು ವಿನಃ ಉಳಿದ ಸರ್ವ ವೇದಾದಿ ಪ್ರಮಾಣಗಳೂ ಭೇದಬೋಧಕಗಳೆಂದು ಶಂಕರಾಚಾರ್ಯರೇ ಒಪ್ಪಿ ಬಿಟ್ಟರು. ಈ ಐದು ವಾಕ್ಯಗಳೂ ಲಕ್ಷಣಾವೃತ್ತಿಯಿಂದಲೇ ಬ್ರಹ್ಮನನ್ನು ತಿಳಿಸುವುದಾದರೆ ಇನ್ನು ಯಾವ ಪ್ರಮಾಣದಿಂದ ಮುಖ್ಯ ವೃತ್ತಿಯಿಂದ ಚಿನ್ಮಾತ್ರ ಬ್ರಹ್ಮನನ್ನು ಅಥವಾ ಐಕ್ಯವನ್ನು ತಿಳಿಯುವುದು ? ಆದುದರಿಂದ ಮುಖ್ಯ ವೃತ್ತಿಯಿಂದ ಅನ್ಯತ್ರ ಅಜ್ಞಾತವಾದ "ಚಿನ್ಮಾತ್ರ"ವು ಅಥವಾ ಐಕ್ಯವು ಈ ತತ್ವಮಸ್ಯಾದಿ ವಿವಾದಾಸ್ಪದ ವಾಕ್ಯಗಳಲ್ಲಿ ಲಕ್ಷಣಾವೃತ್ತಿಯಿಂದಲೂ ತಿಳಿಯಲ್ಪಡಲಾರದು. 2. ಮತ್ತು ಮುಖ್ಯಾರ್ಥವಾದ ಜೀವೇಶ್ವರರಿಗೂ ಲಕ್ಷ್ಯಾರ್ಥವಾದ ಚಿನ್ಮಾತ್ರನಿಗೂ ಅಥವಾ ಐಕ್ಯಕ್ಕೂ ಸಂಬಂಧವು ಯಾವುದು ? ಅಸಂಬಂಧವೇ ಸಂಬಂಧವು. ಚಿನ್ಮಾತ್ರ ಬ್ರಹ್ಮನು ಅದ್ವೈತ ಮತದಲ್ಲಿ ಸರ್ವಸಂಬಂಧರಹಿತನು. ಐಕ್ಯವೂ ಬ್ರಹ್ಮಾತ್ಮಕವೆಂದೇ ಅದ್ವೈತಿಗಳು ಹೇಳುತ್ತಾರೆ. ಶಕ್ಯಾರ್ಥಕ್ಕೂ

ಲಕ್ಷ್ಯಾರ್ಥಕ್ಕೂ ಸಂಬಂಧವಿಲ್ಲದಿರುವುದರಿಂದ ತತ್ತ್ವಮಸಿ ಮುಂತಾದ ವಾಕ್ಯಗಳಿಗೆ ಲಕ್ಷಣಾವೃತ್ತಿಯಿಂದಲೂ ಚಿನ್ಮಾತ್ರನೆಂದು ಅಥವಾ ಐಕ್ಯವೆಂದು ಅರ್ಥ ಮಾಡುವುದಕ್ಕೆ ಅವಕಾಶವಿರುವುದಿಲ್ಲ. 3. ಕಿಂಚ ಮುಖ್ಯಾರ್ಥವನ್ನು ಪರಿತ್ಯಾಗ ಮಾಡಿ ಲಾಕ್ಷಣಿಕಾರ್ಥವನ್ನು ಸ್ವೀಕಾರ ಮಾಡುವುದಾದರೆ, ಪ್ರಮಾಣಾಂತರದಲ್ಲಿ ಸಿದ್ಧವಾಗಿರುವ ಭೇದಪರವಾಗಿ ಅರ್ಥ ಮಾಡುವುದು ಉಚಿತವೇ ಹೊರತು, ಯಾವ ಒಂದು ಪ್ರಮಾಣದಲ್ಲೂ ಮುಖ್ಯವೃತ್ತಿಯಿಂದ ಸಿದ್ಧವಾಗದೇ ಇರುವ ಅಭೇದಪರವಾಗಿ ಅರ್ಥ ಮಾಡುವುದಕ್ಕೆ ಕಾರಣವಿರುವುದಿಲ್ಲ. 4. ಮತ್ತು ಭೇದಪರವಾಗಿ ಮುಖ್ಯ ವೃತ್ತಿಯಿಂದಲೇ ಈ ವಾಕ್ಯಕ್ಕೆ ಅರ್ಥ ಮಾಡಬಹುದು. "ಸುಪಾಂಸುಲುಕ್" ಇತ್ಯಾದಿ ವ್ಯಾಕರಣ ಸೂತ್ರಾನುಸಾರವಾಗಿ **ತತ್** ಎಂಬ ಪದಕ್ಕೆ ಐದಾರು ವಿಭಕ್ತಿಗಳ ಅರ್ಥವೂ ಬರುವುದೆಂದು ಪಾಣಿನ್ಯಾಚಾರ್ಯರೇ **ವೈದಿಕ** ಪ್ರಕರಣದಲ್ಲಿ ನಿರೂಪಿಸಿರುತ್ತಾರೆ. ಇದರಿಂದ ಬ್ರಹ್ಮನಿಂದ ನೀನು ಇದ್ದೀ, ಬ್ರಹ್ಮನಿಗೋಸ್ಕರ ನೀನೂ ಇದ್ದೀ, ಬ್ರಹ್ಮನ ದೆಸೆಯಿಂದ ನೀನು ಹುಟ್ಟಿರುತ್ತೀ, ಬ್ರಹ್ಮನ ಭೃತ್ಯನು ನೀನು ಆಗಿರುತ್ತೀ, ಬ್ರಹ್ಮನ ಆಶ್ರಯದಲ್ಲಿ ನೀನು ಇರುತ್ತೀ ಇತ್ಯಾದಿ ರೀತಿಯಲ್ಲಿ ಪ್ರಾಮಾಣಿಕಗಳಾದ ಅನೇಕ ಮುಖ್ಯ ವೃತ್ತಿಯಿಂದಲೇ ಲಬ್ಧವಾದ ಅರ್ಥಗಳು ಸಂಭವಿಸುವುವು. "**ಸನ್ಮೂಲಾಃ ಸರ್ವಾ ಇಮಾಃ ಪ್ರಜಾಃ**" ಇತ್ಯಾದಿ ಶ್ರುತಿಗೆ ಅನುಗುಣವಾಗಿಯೂ ಇರುವುವು. ಐಕ್ಯಾರ್ಥವು ಅಮುಖ್ಯ ವೃತ್ತಿಯಿಂದ ಲಬ್ಧವಾದ ಅರ್ಥವಾಗಿಯೂ ಸರ್ವ ಪ್ರಮಾಣಗಳಿಗೂ ವಿರುದ್ಧವಾಗಿಯೂ ಇರುವುದು. **5.** ಕಿಂಚ ಸ ಆತ್ಮಾ + ಅತತ್ತ್ವಮಸಿ ಎಂದೂ ಪದಚ್ಛೇದವು ಈ ಸ್ಥಳದಲ್ಲಿ ಸಂಭವಿಸುವುದು. ನೀನು ಬ್ರಹ್ಮನಿಂದ ಭಿನ್ನನಾಗಿದ್ದೀ ಎಂದು ಮುಖ್ಯಾರ್ಥವೇ ಲಭಿಸುವುದು. ಒಂಭತ್ತು ದೃಷ್ಟಾಂತಗಳೂ ಭೇದಪರವಾಗಿಯೇ ಇರುವುವೆಂದು ಅದ್ವೈತಿಗಳೂ ಒಪ್ಪಿರುತ್ತಾರಾದ್ದರಿಂದ ದೃಷ್ಟಾಂತಾನುಗುಣ್ಯರೂಪವಾದ ಉಪಪತ್ತಿಯೂ "ಭೇದ" ಪರವಾಗಿ ಅರ್ಥ ಮಾಡುವುದರಲ್ಲಿ ಸಹಾಯವಾಗಿರುವುದು.

ಈ ರೀತಿಯಾಗಿ **ಅಮುಖ್ಯ ವೃತ್ತಿಯಿಂದಲೂ ಜೀವಬ್ರಹ್ಮರು ಅಭಿನ್ನರು ಎಂದು ತೋರಿಸತಕ್ಕ ಒಂದು ಶ್ರುತಿಯೂ ಇರುವುದಿಲ್ಲ** ಎಂದು ಸಿದ್ಧವಾಯಿತು. ಏವಂಚ ನಿರ್ಗುಣ ಬ್ರಹ್ಮನಾಗಲೀ, ಬ್ರಹ್ಮೈಕ್ಯವಾಗಲೀ ಪ್ರಮಾಣಗಳಿಂದ ಪ್ರಮಿತವಾಗಲಿಲ್ಲ. ಮತ್ತು ಗಗನ ಕುಸುಮದಂತೆ ಅಪ್ರಸಿದ್ಧವಾಗಿರುವುದರಿಂದ ಐಕ್ಯಾನುಭವವು ಮುಕ್ತಿಯೆಂಬ ತತ್ತ್ವವು ವಂಧ್ಯಾಪುತ್ರನ ಮದುವೆಯಂತೆ ಕಾದಂಬರೀ ಗ್ರಂಥಗಳಿಗೆ ಉಚಿತವಾದ ಪ್ರಮೇಯವಾಗಿ ಹೋಯಿತು.*

---

*ಬ್ರಹ್ಮನು ಅಜ್ಞೇಯನೆಂದು ಹೇಳುವ ತತ್ತ್ವವು ಸರ್ವ ಪ್ರಕಾರದಲ್ಲೂ ಅಬದ್ಧವೆಂದು ಸಯುಕ್ತಿಕವಾಗಿ ಒಬ್ಬ ಅಮೇರಿಕ ಗ್ರಂಥಕರ್ತನು ತೋರಿಸಿರುತ್ತಾನೆ :—

"It ( the Adwaita Philosophy ) tells us of an omnipresent, eternal, boundless and immutable principle on which all

**ಪ್ರಶ್ನೆ**— ಸ್ವಾಮೀ ! ಜೀವಬ್ರಹ್ಮರ ಐಕ್ಯವು ವೇದಾದಿ ಪ್ರಮಾಣಗಳಿಂದ ಸಿದ್ಧವಾಗತಕ್ಕದ್ದಲ್ಲ. ಬ್ರಹ್ಮನು ಸ್ವಪ್ರಕಾಶನು, ಐಕ್ಯವು ಬ್ರಹ್ಮಾತ್ಮಕವೇ, ಐಕ್ಯಾನುಭವವು ವೇದಾದಿಗಳಿಂದ ಬರಬೇಕಾದುದಿಲ್ಲ. ಅದು ವಿಲಕ್ಷಣವಾಗಿ ಬೇರೆ ರೀತಿಯಿಂದ ಬರುವುದು ಆದುದರಿಂದ ಜೀವಬ್ರಹ್ಮರ ಐಕ್ಯದಲ್ಲಿ ಪ್ರಮಾಣವಿಲ್ಲವೆಂದಾಗಲೀ ಐಕ್ಯಾನುಭವವು ಮುಕ್ತಿಯಲ್ಲವೆಂದಾಗಲೀ ಹೇಗೆ ಹೇಳುವುದು ?

**ಉತ್ತರ**— ಇದು ಚಮತ್ಕಾರದ ಮಾತು. ನಿಜವಾಗಿಯೂ ಅದ್ವೈತ ಶಾಸ್ತ್ರಾಭಿಜ್ಞರೂ ಸಹ ಕೆಲವರು ಪದೇ ಪದೇ ಹೀಗೆಯೇ ಹೇಳುತ್ತಿರುತ್ತಾರೆ. ತತ್ವವಿಮರ್ಶೆ ಮಾಡದ ಜನರಿಗೆ ಈ ಮಾತಿನಲ್ಲಿ ಏನೋ ಅಗಾಧವಾದ ಪ್ರಮೇಯವಿರುವಂತೆ ಆಪಾತಭ್ರಮವೂ ಬರುವುದು. ಆದುದರಿಂದ ಈ ಪ್ರಶ್ನೆಯು ಸಮಯೋಚಿತವೇ ಆಗಿರುವುದು. ವಸ್ತುತತ್ವವೇನೆಂದರೆ, ಅದ್ವೈತಾತ್ಮನು ( ಬ್ರಹ್ಮಾತ್ಮಕವಾದ ಜೀವ ಬ್ರಹ್ಮೈಕ್ಯವು ) ಸ್ವಪ್ರಕಾಶನೆಂದರೆ ಅವೇದ್ಯನೆಂದರ್ಥವು. "ಅವೇದ್ಯತ್ವಂ ಸ್ವಪ್ರಕಾಶತ್ವಂ " ಎಂಬುದು ಅದ್ವೈತಿಗಳ ಪರಿಷ್ಕಾರವು. ಎಂದರೆ ಯಾರಿಗೂ ಯಾವ ಕಾಲದಲ್ಲೂ ಬ್ರಹ್ಮನಾಗಲೀ, ಬ್ರಹ್ಮೈಕ್ಯವಾಗಲೀ ಇರುವುದೆಂದು ತಿಳಿಯಲಾಗುವುದಿಲ್ಲ ಎಂದು ಇದರ ತಾತ್ಪರ್ಯವು. ಇಂಥ ಅವೇದ್ಯವಾದ ಬ್ರಹ್ಮೈಕ್ಯವು ಇರುವುದೆಂದು ಹೇಗೆ ಹೇಳುವುದು ?

ಪ್ರಾಶ್ನಿಕರು— ಸ್ವಾಮೀ ! ವೇದದಿಂದ ಬ್ರಹ್ಮೈಕ್ಯವು ಇರುವುದೆಂದು ಸಾಮಾನ್ಯವಾಗಿ ತಿಳಿದ ಮೇಲೆ ಬ್ರಹ್ಮಾನುಭವವು ತನ್ನಷ್ಟಕ್ಕೆ ತಾನೇ ಸ್ಫುರಿಸುವುದು. ಇದೇ ಅದ್ವೈತಾತ್ಮ ಸಾಕ್ಷಾತ್ಕಾರವು, ಇದೇ ಮುಕ್ತಿಯು ಎಂದು ಯಾತಕ್ಕೆ ಹೇಳಬಾರದು ?

---

speculation is impossible since it is beyond the range of all thoughts and is both unthinkable and unspeakable Then we have a right to say that we do not think that it is omnipresent or that it is eternal and immutable since such stuff is as bad as anything."

ಅರ್ಥವು .— ಈ ಅದ್ವೈತತತ್ವವು ವ್ಯಾಪ್ತನಾದ ನಿತ್ಯವಾದ, ಅಪರಿಚ್ಛಿನ್ನವಾದ, ಅಕ್ಷರವಾದ, ಮತ್ತು ಮನಸ್ಸಿಗೂ ವಾಕ್ಕುಗಳಿಗೂ ಸರ್ವಥಾ ಅಗೋಚರವಾದ, ಆದುದರಿಂದಲೇ ವಿಚಾರಕ್ಕೂ ವಿಷಯವಾಗದ ಒಂದು ತತ್ವವನ್ನು ಹೇಳುತ್ತದೆ. (ಅದು ನಮಗೆ ಸರ್ವಥಾ ಅಜ್ಞೇಯವೆಂದು ಹೇಳಿ ಅದು ವ್ಯಾಪ್ತವು ನಿತ್ಯವು. ಎಂದು ಹೇಳುವುದು ಹೇಗೆ ? ) ಅದು ವ್ಯಾಪ್ತವಲ್ಲ, ನಿತ್ಯವಲ್ಲ ಅನಂತವಲ್ಲ ಎಂದು ಯಾಕೆ ನಾವು ಹೇಳಬಾರದು ? ಯಾತಕ್ಕೆಂದರೆ ಅಂಥ ಸುತರಾಂ ಅವೇದ್ಯವಾದ ಪದಾರ್ಥವು ಹೇಯ ಪದಾರ್ಥಗಳಲ್ಲೆಲ್ಲಾ ಅತ್ಯಂತ ಹೇಯವು.

ಶ್ರೀ ಶ್ರೀಗಳವರು— ವೇದದಿಂದ ಜೀವಬ್ರಹ್ಮರು ಅಭಿನ್ನರೆಂಬ ಜ್ಞಾನವು ಸರ್ವಥಾ ಬರಲಾರದೆಂದು ನಾವು ನಿರೂಪಿಸಿದೆವು. ತತ್ವಮಸ್ಯಾದಿ ವಾಕ್ಯಗಳ ಹೊರತು ಉಳಿದ ಉಪನಿಷದಾದಿ ಸರ್ವ ವೇದಭಾಗಗಳೂ ಭೇದವನ್ನೇ ಬೋಧಿಸುತ್ತವೆ ಎಂದು ಶಾಂಕರಭಾಷ್ಯ ವಚನವೇ ಇರುತ್ತದೆ. ತತ್ವಮಸ್ಯಾದಿ ವಾಕ್ಯಗಳೂ ಸಹ ಲಕ್ಷಣಯಾ ಅಖಂಡಾರ್ಥಬೋಧಕವು ( ಚಿತ್ ಎಂದು ಇಷ್ಟೇ ಬೋಧವನ್ನು ಹುಟ್ಟಿಸುವುವು ) ಎಂದು ಅದ್ವೈತಿಗಳು ಅಂಗೀಕರಿಸಿರುವುದರಿಂದ ಜೀವಬ್ರಹ್ಮರು ಅಭಿನ್ನರು ಎಂಬ ಜ್ಞಾನವನ್ನು ಹುಟ್ಟಿಸತಕ್ಕ ಒಂದು ವಾಕ್ಯವೂ ಇಲ್ಲವೇ ಇಲ್ಲ ಎಂದು ನಾವು ತೋರಿಸಿರುತ್ತೇವೆ. 2. ಮತ್ತು ಲಕ್ಷಣಯಾ ಅಭೇದಜ್ಞಾನವು ಬರುವುದಕ್ಕೆ ಅವಕಾಶವಿರುವುದಿಲ್ಲವೆಂಬಲ್ಲಿ ಯುಕ್ತಿಯನ್ನೂ ನಿರೂಪಿಸಿರುತ್ತೇವೆ. ಪೂರ್ವದಲ್ಲಿ ಸರ್ವಥಾ ಅಜ್ಞಾತವಾದ ತತ್ವವು ಪ್ರಕೃತ ವಾಕ್ಯದಲ್ಲಿ ಲಕ್ಷಣಾವೃತ್ತಿಯಿಂದಲಾದರೂ ತಿಳಿಯಲ್ಪಡುವುದಿಲ್ಲ. ಆದುದರಿಂದ ಅದ್ವೈತ ಮತದರೀತ್ಯಾ "ಬ್ರಹ್ಮ" ಜ್ಞಾನವಾಗಲೀ "ಬ್ರಹ್ಮೈಕ್ಯ" ಜ್ಞಾನವಾಗಲೀ ಯಾವ ರೀತಿಯಿಂದಲೂ ವೇದದಿಂದ ಹುಟ್ಟದಿರುವುದರಿಂದ ಬ್ರಹ್ಮಸ್ಫುರಣವು ಅಥವಾ ಐಕ್ಯಾನುಭವವು ಮುಕ್ತಿಯೆಂದು ಹೇಳುವುದು ಅಸಂಭಾವಿತವು.

ಪ್ರಾಶ್ನಿಕರು— ಸ್ವಾಮೀ ! ಇದು ನನ್ನ ಅಭಿಪ್ರಾಯವು. ವೇದವು ಐಕ್ಯ ಬೋಧಕವಾಗಬೇಕಾದುದಿಲ್ಲ. ಅಜ್ಞೇಯನಾದ ಬ್ರಹ್ಮನನ್ನು ವೇದವು ತಿಳಿಸುವುದೂ ಅಸಂಭಾವಿತವು. ಆದರೆ " ತತ್ವಮಸಿ ಅಹಂ ಬ್ರಹ್ಮಾಸ್ಮಿ " ಇತ್ಯಾದಿ ಉಪನಿಷದ್ವಾಕ್ಯಗಳನ್ನು ಶ್ರವಣ ಮಾಡಿದಾಗ ಅವುಗಳ ವಾಕ್ಯಾರ್ಥ ಪರ್ಯಾಲೋಚನೆಯನ್ನು ಮಾಡದೇ ಇದ್ದರೂ ಒಂದು ವಿಧವಾದ ಆನಂದದ ಪರವಶತೆಯು ಬರುವುದು. ಆ ಉತ್ತಮಾವಸ್ಥೆಯಲ್ಲಿ ಅದ್ವೈತಾತ್ಮನು ಸ್ಫುರಿಸುವನು ! ಅದೇ ಐಕ್ಯಾನುಭವವು. ಆಗ ಪ್ರಪಂಚವು ಒಂದೂ ಇರುವುದಿಲ್ಲ. ನಾನೂ ಬ್ರಹ್ಮಾನಂದದಲ್ಲಿ ವಿಲೀನನಾಗಿ ಹೋಗಿರುವೆನು. ಇಂಥ ಅನುಭವದಿಂದ ಅದ್ವೈತಾತ್ಮನು ಉಂಟೆಂದೂ, ಐಕ್ಯವು ಪ್ರಾಮಾಣಿಕವೆಂದೂ ತಿಳಿಯಬಹುದು.

ಈ ರೀತಿ ಶಂಕರಾಚಾರ್ಯರ ತತ್ವವನ್ನು ಉಪಪಾದನೆ ಮಾಡಿ ಹೇಳಿದರೆ ಒಂದು ವಿಧವಾಗಿ ಮನಸ್ಸಿಗೆ ಬರುವುದೆಂದು ಕೆಲವರು ಪಾಶ್ಚಾತ್ಯರೂ ಹೇಳುತ್ತಾರೆ.

ಶ್ರೀ ಶ್ರೀಗಳವರು— ಶಾಸ್ತ್ರಾನಭಿಜ್ಞರಾದ ಎಷ್ಟೋ ಜನ ಹಿಂದುಗಳೂ ಹೀಗೆಯೇ ತಿಳಿದಿರುವರು. ಆದರೆ ನಿಮ್ಮ ಮಾತು ಇಷ್ಟಕ್ಕೆ ಇಳಿಯಿತು. ಬ್ರಹ್ಮಸ್ಫುರಣದಲ್ಲಿ ಅಥವಾ ಬ್ರಹ್ಮೈಕ್ಯಾನುಭವದಲ್ಲಿ ವೇದಶ್ರವಣವೇ ನಿಮಿತ್ತಕಾರಣವು. ವೇದಾರ್ಥ ಪರಿಜ್ಞಾನವು ಬೇಕಾಗಿಲ್ಲ.

ಪ್ರಾಶ್ನಿಕರು—ಹೌದು ! ವೇದಾರ್ಥ ವಿಚಾರ ಮಾಡಿದರೆ ತಾವು ಹೇಳಿದ ಅನುಪಪತ್ತಿಗಳೆಲ್ಲಾ ತಲೆದೋರಿ ವಾಕ್ಯಾರ್ಥ ನಿರ್ಣಯವೇ ಉತ್ಪನ್ನವಾಗದೆ ವಿಚಾರ

ಶಕ್ತಿಯು ಹೆಚ್ಚಿ ಅನುಭವ ಸಾಮರ್ಥ್ಯವು ಕುಂಠಿತವಾಗುವುದು. ಹೆಚ್ಚು ಬುದ್ಧಿಯು ಆತ್ಮಾನುಭವಕ್ಕೆ ಪ್ರತಿಬಂಧಕವೆಂದು ಕೆಲವರು ಪಾಶ್ಚಾತ್ಯರೂ ಹೇಳಿರುವರು.

ಶ್ರೀ ಶ್ರೀಗಳವರು— ಇದು ಶ್ರವಣ ಮನೋಹರವಾದ ಪ್ರಕ್ರಿಯೆಯು. ಸ್ವಲ್ಪ ವಿಚಾರವು ಆವಶ್ಯಕವು ! "ಮಾನಾಧೀನಾಮೇಯಸಿದ್ಧಿ" ಎಂಬ ಸರ್ವಸಮ್ಮತವಾದ ನ್ಯಾಯವಿರುವುದು. ಒಂದು ವಸ್ತುವು ಇರುವುದೆಂದು ತಿಳಿಯಬೇಕಾದರೆ ಪ್ರತ್ಯಕ್ಷವೋ, ಅನುಮಾನವೋ, ಆಗಮವೋ ಯಾವುದಾದರೂ ಒಂದು ಪ್ರಮಾಣವಿರಬೇಕು. ಯಾವ ಪ್ರಮಾಣದಿಂದಲೂ ತಿಳಿಯಲ್ಪಡದೇ ಇರುವ ವಸ್ತುವು ಶಶವಿಷಾಣದಂತೆ ಅಸತ್ತೆನಿಸುವುದು. ವಸ್ತುಸದ್ಭಾವವನ್ನು ನಿಶ್ಚಯಿಸುವ ಪ್ರಮಾಣಗಳು ಆರು ಇರುವುವೆಂದು ಅದ್ವೈತಿಗಳು ಹೇಳಿರುತ್ತಾರೆ. ಪ್ರತ್ಯಕ್ಷ, ಅನುಮಾನ, ಆಗಮ, ಅರ್ಥಾಪತ್ತಿ, ಉಪಮಾನ, ಅನುಪಲಬ್ಧಿ ಎಂಬ ಆರು ಪ್ರಮಾಣಗಳಿರುವುವು. ಬ್ರಹ್ಮನು ಮತ್ತು ಐಕ್ಯವು ಈ ಆರು ಪ್ರಮಾಣಗಳಿಂದ ಗಮ್ಯವಲ್ಲ ಎಂದು ನೀವು ಒಪ್ಪಿದ ಮೇಲೆ ಅದು ಶಶವಿಷಾಣದಂತೆ "ಅಸತ್" ಆಯಿತೆಂದೂ ನೀವು ಒಪ್ಪಲೇಬೇಕು. 2. ಈ ಆರಕ್ಕಿಂತ ಭಿನ್ನವಾದ ಅನುಭವವೆಂಬ ಒಂದು ಪ್ರಮಾಣವಿರುವುದು. ಅದರಿಂದ ನಾವು ಬ್ರಹ್ಮನನ್ನೂ ಐಕ್ಯವನ್ನೂ ತಿಳಿಯುವೆವು ಎಂದು ನೀವು ಹೇಳಬಹುದು. ಆದರೆ ಬ್ರಹ್ಮವು ಅಥವಾ ಐಕ್ಯವು ಎಂಬ ಒಂದು ವಸ್ತುವು ಇರುವುದೆಂದು ವೇದದಿಂದ ನಿಶ್ಚಯ ಮಾಡಿಕೊಂಡು ಉಪಾಸನೆ ಮಾಡಿ ನಂತರ ಏಳನೆಯದಾದ ಅನುಭವ ಪ್ರಮಾಣದಿಂದ ವೇದೋಕ್ತ ತತ್ವವನ್ನು ತಿಳಿಯುವೆವು ಎಂದು ನೀವು ಹೇಳಲಾಗುವುದಿಲ್ಲ. ಹೇಗೆಂದರೆ ವೇದಾರ್ಥ ಜ್ಞಾನವು ಅನಾವಶ್ಯಕವೆಂದು ನೀವೇ ಹೇಳಿ ಬಿಟ್ಟಿರಿ. ಮತ್ತು ವೇದಾರ್ಥ ವಿಮರ್ಶೆ ಮಾಡಿದರೂ ಐಕ್ಯವು ಅಥವಾ ನಿರ್ಗುಣ ಬ್ರಹ್ಮ ವಸ್ತುವು ವೇದದಿಂದ ಸಿದ್ಧಿಸುವುದಿಲ್ಲವೆಂದು ನಾವೂ ತೋರಿಸಿರುತ್ತೇವೆ. ಆದುದರಿಂದ ವೇದದಿಂದ ಬ್ರಹ್ಮವಸ್ತುವು ಅಥವಾ ಐಕ್ಯವು ಇರುವುದೆಂದು ತಿಳಿಯದಿದ್ದರೂ, ಸಾಕ್ಷಾತ್ತಾಗಿ ಯಾವ ತೊಂದರೆಯೂ ಇಲ್ಲದೆ ಅನುಭವವೆಂಬ ಏಳನೆಯ ಪ್ರಮಾಣದಿಂದ ಬ್ರಹ್ಮಾನುಭವವನ್ನು ಹೊಂದುವೆವು ಎಂದು ನೀವು ಹೇಳಿದರೆ, ನಿಮ್ಮ ಸಪ್ತಮ ಪ್ರಮಾಣದಿಂದ ಸಿದ್ಧವಾದ ಈ ನವೀನ ಮತವು ಅವೈದಿಕವಾಯಿತು. ಇದು ವೇದದಿಂದ ಪ್ರಾಪ್ತವಾದುದಲ್ಲ.

ಪ್ರಾಶ್ನಿಕರು— ಇದು ಏನು ಮಾತು ಮಹಾಸ್ವಾಮೀ ! ನಮ್ಮ ಮತವು ಅವೈದಿಕ ಮತವಾದರೆ ಚಿಂತೆಯಿಲ್ಲ. ಮಿಥ್ಯಾಭೂತವಾದ ವೇದದಿಂದ ನಮಗೆ ಆಗತಕ್ಕ ಉಪಕಾರವು ಅಷ್ಟೇ ಇರುವುದು. ಆದರೂ ನಮ್ಮ ಮತವು **ಅನುಭಾವಿಕ ಮತವು.** ಪ್ರಮಾಣತಮವಾದ ಸಪ್ತಮ ಪ್ರಮಾಣದಿಂದಲೇ ಸಿದ್ಧವಾಗಿರುವುದು.

ಶ್ರೀ ಶ್ರೀಗಳವರು— 1. ಕೇವಲ ಅನುಭವದಿಂದ ನಿರ್ಗುಣ ಬ್ರಹ್ಮನನ್ನೂ ಬ್ರಹ್ಮಾತ್ಮಕವಾದ ಐಕ್ಯವನ್ನೂ ತಿಳಿಯಬಹುದಾಗಿದ್ದರೆ, ದ್ವೈತಾದ್ವೈತ ಕಲಹವು

ಹುಟ್ಟುತ್ತಲೇ ಇರಲಿಲ್ಲ. "ನಾನು" ಎಂಬ ಪದಾರ್ಥವು ಅನುಭವಸಿದ್ಧವಾಗಿರುವುದು. ಕಾಲ, ಆಕಾಶಾದಿಗಳೂ ಅನುಭವಸಿದ್ಧವಾಗಿರುವುವು. ನಾನು ಇದ್ದೇನೋ ಇಲ್ಲವೋ ಎಂಬ ಸಂಶಯವು ಯಾರಿಗೂ ಬರುವುದಿಲ್ಲ. ಈ ವಿಷಯಗಳಲ್ಲಿ ವಾದಿಗಳಿಗೆ ಕಲಹವೂ ಬರುವುದಿಲ್ಲ ಬ್ರಹ್ಮೈಕ್ಯವು ಸರ್ವಾನುಭವಸಿದ್ಧವಾಗಿದ್ದರೆ ಅದ್ವೈತಮತವು ಅಪ್ರಾಮಾಣಿಕವೆಂದು ದ್ವೈತಿಗಳು ಯಾರೂ ಹೇಳುತ್ತಿರಲಿಲ್ಲ. ಭಯಂಕರವಾದ ವಿವಾದವು ನಡೆಯುತ್ತಿರುವುದರಿಂದ ಬ್ರಹ್ಮೈಕ್ಯಾನುಭವವೆಂಬ ಪದಾರ್ಥವು ಅಪ್ರಸಿದ್ಧವೇ ಸರಿ !

2. ಸಾರ್ವಕಾಲಿಕವಾದ ಐಕ್ಯಾನುಭವವು ಇಲ್ಲದಿದ್ದರೆ ಹೋಗಲಿ ! ಯಾರಿಗಾದರೂ ಯಾವುದಾದರೂ ಒಂದು ಕಾಲದಲ್ಲಿ ಐಕ್ಯಾನುಭವವು ಬಂದಿರುವುದೆಂಬಲ್ಲಿ ಸಹ ಪ್ರಮಾಣವಿರುವುದಿಲ್ಲ. ವೇದವು ಪ್ರಮಾಣವಾದರೂ ವೇದವೆಂಬ ಪದಾರ್ಥ ಸದ್ಭಾವವನ್ನು ಶ್ರೋತ್ರೇಂದ್ರಿಯದಿಂದ **ನಾವು** ತಿಳಿಯಬೇಕು. ಹೀಗೆಯೇ ಅನುಭವವು ಪ್ರಮಾಣವಾದರೂ ಅನುಭವವೆಂಬ ಪದಾರ್ಥಸದ್ಭಾವವನ್ನು **ನಾವು** ಪ್ರತ್ಯಕ್ಷಾನುಮಾನಾಗಮಗಳಲ್ಲಿ ಯಾವುದಾದರೂ ಒಂದು ಪ್ರಮಾಣದಿಂದ ತಿಳಿಯಬೇಕು. ಬ್ರಹ್ಮೈಕ್ಯಾನುಭವವೆಂಬ ಪದಾರ್ಥವು ಇರುವುದೆಂದು ಪ್ರತ್ಯಕ್ಷವಿರುವುದಿಲ್ಲ. ಅನುಮಾನವಿರುವುದಿಲ್ಲ. ಬ್ರಹ್ಮೈಕ್ಯವನ್ನೇ ಪ್ರತಿಪಾದನೆ ಮಾಡಲು ಅಸಮರ್ಥವಾಗಿರುವ ಆಗಮವು ಐಕ್ಯಾನುಭವವು ಇರುವುದೆಂದು ಹೇಗೆ ತಿಳಿಸಿಕೊಡುವುದು ? ಬ್ರಹ್ಮನೂ, ಬ್ರಹ್ಮೈಕ್ಯವೂ ಶಶವಿಷಾಣದಂತೆ ಅಪ್ರಸಿದ್ಧವಾದಂತೆ ಐಕ್ಯಾನುಭವವೂ ಶಶವಿಷಾಣದಂತೆ ಅಪ್ರಸಿದ್ಧವಾಯಿತು.

3. ಕಿಂಚ ಈ ತತ್ವವು ಮಹಾವಂಚನೋಪಾಯಗಳಿಗೆ ಆಕರವಾದ ಪ್ರಕ್ರಿಯೆಯು. ನಾನು ಮುಕ್ತನು, ನಾನು ಐಕ್ಯಾನುಭವವುಳ್ಳವನು ಎಂದು ಒಬ್ಬೊಬ್ಬರೂ ಆಕಾಶಕ್ಕೆ ತಲೆಯೆತ್ತಿ ಕಣ್ಣು ಮುಚ್ಚಿಕೊಂಡು ಕುಣಿಯುವುದಕ್ಕೆ ಆರಂಭಿಸಿದರೆ ಲೋಕದ ಸರ್ವ ಧರ್ಮಗಳೂ ವಿನಷ್ಟವಾಗುವುದರಲ್ಲಿ ಸಂಶಯವಿಲ್ಲ. **4.** ಮತ್ತು ಮತ್ತೊಬ್ಬನು ನನಗೆ ಭೇದಾನುಭವವು ಬಂದಿರುವುದು. ನನಗೆ ಬ್ರಹ್ಮದರ್ಶನವಾಯಿತು. ಬ್ರಹ್ಮನು ಭಿನ್ನನು ಎಂದೂ ವಾದಿಸುವುದರಲ್ಲಿ ಸಂಶಯವೇ ಇಲ್ಲ. ಬೌದ್ಧನು ನನಗೆ ನಿರ್ವಾಣದ ಅನುಭವವಾಯಿತೆಂದೂ ಹೇಳುವನು. ಹೀಗೆಯೇ ಆಯಾಯ ವಾದಿಗಳು ತಮತಮಗೆ ಇಷ್ಟವಾದ ತತ್ವವು ಅನುಭವದಿಂದ ಸಿದ್ಧಿಸುವುದೆಂದು ವಾದಿಸುವುದಕ್ಕೆ ಯತ್ನ ಮಾಡಿ ಸ್ವಲ್ಪ ದಿವಸದಲ್ಲಿಯೇ ಈಗಿರುವುದಕ್ಕಿಂತ ಹೆಚ್ಚಾದ ಜಗದಾಂಧ್ಯವು ಪ್ರಾಪ್ತವಾಗುವುದರಲ್ಲಿ ಸಂಶಯವಿಲ್ಲ. **5.** ಪರಂತು ಅದ್ವೈತ ಮತದಲ್ಲಿ ಯಾವ ಪುರುಷನೂ ನನಗೆ ಐಕ್ಯಾನುಭವವು ಬಂದಿರುವುದೆಂದು ಹೇಳಲಾರನು ಐಕ್ಯಾನುಭವವುಳ್ಳವನು ತತ್ಕ್ಷಣದಲ್ಲಿ ದೇಹಾದಿಗಳಿಂದ ರಹಿತನಾಗಿ ವಿಲೀನನಾಗುವನು. ಯಾವನು ತನ್ನ ಅನುಭವವು ಇಂಥಾದ್ದೆಂದು ವರ್ಣಿಸುವುದಕ್ಕೆ ಸಮರ್ಥನೋ ಅವನು ವಿನಷ್ಟನಾಗಿ ಹೋಗು

ವನು. ಯಾವನು ವಾಗಾದಿ ಇಂದ್ರಿಯಗಳುಳ್ಳವನಾಗಿ ಉಪದೇಶ ಮಾಡುವುದಕ್ಕೆ ಸಮರ್ಥನೋ ಅವನು ಐಕ್ಯಾನುಭವವಿಲ್ಲದವನು.* ಆದುದರಿಂದ ಅದ್ವೈತ ಮತ ದಲ್ಲಿ ಐಕ್ಯಾನುಭವ ಸದ್ಭಾವಬೋಧಕವಾದ ಪ್ರಮಾಣವು ಇರುವುದಿಲ್ಲ.

6. ಕಿಂಚ ವೇದದ ವಿಚಾರ ನಿರಪೇಕ್ಷವಾಗಿ ಕೇವಲ ಅನುಭವದಿಂದ ತತ್ವ ವನ್ನು ತಿಳಿಯುವುದು ಅಶಕ್ಯವು. ವೇದಶ್ರವಣ ಮಾತ್ರದಿಂದ ಐಕ್ಯಾನುಭವ ಪ್ರಾಪ್ತಿಯು ಅಸಂಭಾವಿತವು. ವೇದದಿಂದ ಪರಬ್ರಹ್ಮ ಸ್ವರೂಪವನ್ನು ಯಥಾರ್ಥ ವಾಗಿ ತಿಳಿದು ಬಹು ಕಾಲ ಧ್ಯಾನ ಮಾಡಿದ ನಂತರ ಸಮಾಧಿ ಪರಿಪಾಕಾವಸ್ಥೆ ಯಲ್ಲಿ ಬ್ರಹ್ಮ ಸಾಕ್ಷಾತ್ಕಾರವಾಗುವುದು. ತದನಂತರ ಮುಕ್ತಿಯಾಗುವುದೆಂದು ಸರ್ವ ವೈದಿಕರೂ ಸಾಮಾನ್ಯವಾಗಿ ಒಪ್ಪಿರುತ್ತಾರೆ. ತತ್ವಮಸಿ ಮುಂತಾದ ವಾಕ್ಯ

---

*ಜಿ. ಡಾಂಡಾಯ್‌ನಾಮಕ ಗ್ರಂಥಕರ್ತನು ಅನುಭವದಿಂದ ಬ್ರಹ್ಮಾನುಭವವು ಬರುವುದು ಎಂದು ಹೇಳುವ ವಾದವನ್ನು ವಿನೋದೋಕ್ತಿಯಿಂದ ದೂಷಿಸಿರುತ್ತಾನೆ.—

As in the Eastern Apologue so in the Advaita, it is only the Moth who penetrated into the very heart of the fire who,

" Folded its wings till it became
One colour and one substance with the Flame.
He only knew the fire who in it burn'd
And only he could tell who ne'er to tell returned. "

( ಅನುಭವದಿಂದ ಐಕ್ಯವು ಇರುವುದೆಂದು ಮತ್ತೊಬ್ಬರಿಗೆ ತಿಳಿಸುವುದು ಹೇಗೆ ? ಐಕ್ಯಾನು ಭವವುಳ್ಳವನು ಮಾತಾಡಲಾರನು. ಮಾತಾಡುವವನು ಐಕ್ಯಾನುಭವರಹಿತನು. ಹೀಗಿರುವುದರಿಂದ) ಪ್ರಾಚೀನ ಪದ್ಯದಲ್ಲಿ ಹೇಳಿರುವ ಮೇರೆಗೆ ಐಕ್ಯಾನುಭವದಿಂವ ಐಕ್ಯಸದ್ಭಾವವನ್ನು ತಿಳಿಯುವುದು ಪತಂಗಚರಿತ್ರ ಸದೃಶವಾಯಿತು. ಬೆಂಕಿಯ ತತ್ವವು ಏನೆಂದು ತಿಳಿಯಬೇಕೆಂಬ ಕುತೂಹಲದಿಂದ ಕೆಲವು ಪತಂಗಗಳು ತಮ್ಮ ಮುಖಂಡನನ್ನು ಪ್ರಾರ್ಥಿಸಲು, ಆ ಪ್ರಧಾನ ಪತಂಗವು ಒಳ್ಳೆಯದು ನಾನು ತಿಳಿಸಿ ಕೊಡುತ್ತೇನೆ ಎಂದು ಒಪ್ಪಿ ಮುಂದುವರಿದು ಥಟ್ಟನೆ ಉರಿಯುತ್ತಿದ್ದ ಅಗ್ನಿಯ ಮಧ್ಯ ಪ್ರದೇಶದಲ್ಲಿಯೇ ಹೋಗಿ ಬಿತ್ತು. ಅದಕ್ಕೆ ರೆಕ್ಕೆಗಳು ಹತ್ತಿಕೊಂಡು ಉರಿಯಲು ಅದು ಕೆಂಪಾಯಿತು; ಅದು ಅಗ್ನಿಯೇ ಆಗಿ ಹೋಯಿತು ( ಇದಲ್ಲವೇ ಐಕ್ಯಪ್ರಾಪ್ತಿಯು ಮತ್ತು ಐಕ್ಯಾನುಭವವು ! ). ಉರಿಯುವ ಬೆಂಕಿಯಿಂದ ಸುಟ್ಟು ಹೋದ ಆ ಪತಂಗಕ್ಕೆ ಅಗ್ನಿಯು ಎಂಥಾ ದ್ದೆಂದು ತಿಳಿದಿತ್ತು. ಆದರೆ ಇತರರಿಗೆ ಅಗ್ನಿತತ್ವದ ಸ್ವರೂಪವನ್ನು ತಿಳಿಸಿ ಕೊಡಲು ಸಮರ್ಥನಾಗ ಲಿಲ್ಲ. ಯಾವುದು ಅಗ್ನಿಸ್ವರೂಪವನ್ನು ಬಲ್ಲದೋ ಅದು ಮಾತಾಡಲಾರದು. ಅದು ಮರಳಿ ಬಂದು ತನ್ನ ಮಿತ್ರಮಂಡಲಿಗೆ ಅಗ್ನಿ ಸ್ವರೂಪವನ್ನು ನಿರೂಪಣೆ ಮಾಡಲಾರದು. ಹೀಗೆಯೇ ಐಕ್ಯಾನುಭವವು ಉಂಟೆಂದು ನಾವು ಹೇಗೆ ನಂಬುವುದು ? ಪ್ರಮಾಣಾಂತರಗಳಿಂದ ಸರ್ವಥಾ ತಿಳಿಯುವ ಹಾಗಿಲ್ಲ.

ಶ್ರವಣ ಮಾತ್ರದಿಂದ ಐಕ್ಯವು ಸ್ಫುರಿಸಬಹುದಾದರೆ ಮಂತ್ರದಿಂದ ಬ್ರಹ್ಮಸಾಕ್ಷಾತ್ಕಾರವಾಗುವುದೆಂದು ಹೇಳಿದಂತಾಯಿತು. ಆದರೆ "ಆತ್ಮಾವಾ ಅರೇ.... ಮಂತವ್ಯೋ ನಿಧಿಧ್ಯಾಸಿತವ್ಯಃ" ಎಂಬ ಶ್ರುತಿಯು ಮನನ ಧ್ಯಾನಾದಿಗಳನ್ನು ನಿರೂಪಿಸಿ ಯಂತ್ರ ಮಂತ್ರಾದಿಗಳಿಂದ ಮುಕ್ತಿಯಾಗಲೀ ಬ್ರಹ್ಮಜ್ಞಾನವಾಗಲೀ ಬರುವುದಿಲ್ಲವೆಂದು ಹೇಳಿರುತ್ತದೆ. ಶ್ರೀ ಕೃಷ್ಣನೂ ಸಹ :—

**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ।**
—(4. 34.)

ಎಂದು ಹೇಳಿರುತ್ತಾನೆ. ಜ್ಞಾತವ್ಯವಾದ ತತ್ತ್ವವನ್ನು ಜ್ಞಾನಿಗಳು ಉಪದೇಶ ಮಾಡುತ್ತಾರೆ ಎಂದು ಭಗವದ್ಗೀತೆಯಲ್ಲಿ ಹೇಳಿರುವುದೇ ಹೊರತು ಮಂತ್ರಪಠನ ಮಾಡಿ ಐಕ್ಯಾನುಭವವನ್ನು ಹುಟ್ಟಿಸುವರೆಂದು ಹೇಳಿರುವುದಿಲ್ಲ.

**ಪ್ರಶ್ನೆ**— ಸ್ವಾಮೀ ! ಸಂಗೀತಶ್ರವಣದಿಂದ ಒಂದು ವಿಧವಾದ ಸಕಲ ಲೌಕಿಕ ಸ್ಮೃತಿನಾಶವೂ ಆನಂದ ತಾದಾತ್ಮ್ಯವೂ ಬರುವಂತೆ ತತ್ತ್ವಮಸ್ಯಾದಿ ವಾಕ್ಯ ಶ್ರವಣದಿಂದ ಐಕ್ಯಾಪರೋಕ್ಷಾನುಭವವು ಬರುವುದೆಂದು ಯಾತಕ್ಕೆ ಹೇಳಬಾರದು ?

**ಉತ್ತರ**— 7. ಹಾಗಾದರೆ ಅದ್ವೈತಿಗಳು ಇನ್ನು ಮೇಲೆ ವೇದಾಂತ ವ್ಯಾಸಂಗವನ್ನು ಬಿಟ್ಟು, ಸಂಗೀತ ಶಾಸ್ತ್ರವನ್ನು ಅಭ್ಯಾಸ ಮಾಡಿ ಐಕ್ಯಾನುಭವವನ್ನು ಹೊಂದಬೇಕು. ವೇದಘೋಷಕ್ಕಿಂತ ಸಂಗೀತಶ್ರವಣದಿಂದಲೂ ನರ್ತನಾದ್ಯವಲೋಕನದಿಂದಲೂ ಅಧಿಕವಾದ ಆನಂದೋದ್ರೇಕವು ಇರುವುದರಿಂದ ಐಕ್ಯಾನುಭವವನ್ನು ಇಚ್ಛಿಸುವವರು ಕಲಾವಿದ್ಯೆಗಳಲ್ಲಿ ಆಸಕ್ತರಾಗಿ ಕಾಮಿನೀ ಪರಿರಂಭಣದಿಂದ ಆನಂದಾತ್ಮತೆಯನ್ನು ಹೊಂದುವುದಕ್ಕೆ ಪ್ರಯತ್ನಿಸಬೇಕಾಯಿತು. 8. ಪರಂತು ಕಾಮಿನೀ ಪರಿರಂಭಣದಲ್ಲಿಯೂ ಭೋಕ್ತೃ ಭೋಗ್ಯ ಭೋಗ ವಿವೇಕವು ನಾಶವಾಗುವುದಿಲ್ಲ ಮತ್ತು ಆನಂದತಾದಾತ್ಮ್ಯವೂ ಬರುವುದಿಲ್ಲವೆಂದು ನಾವು ಪೂರ್ವದಲ್ಲಿಯೇ ನಿರೂಪಿಸಿರುತ್ತೇವೆ. ಇದೇ ರೀತಿಯಲ್ಲಿ ಸಂಗೀತಶ್ರವಣ ಜನಿತ ಆನಂದದಲ್ಲಿ ಮಗ್ನನಾದ ಮನಸ್ಸುಳ್ಳ ಜೀವನು ಬಾಹ್ಯ ಚಿಂತೆಗಳನ್ನು ತೊರೆದು ಮಧುರವಾದ ಗಾನಜನಿತ ಆನಂದವನ್ನು ಅನುಭವಿಸುತ್ತಲೇ ಇರುವನು. ಆದುದರಿಂದ ಯಾವ ವಿಧದಿಂದ ವಿಮರ್ಶೆ ಮಾಡಿದರೂ ಅದ್ವೈತ ಬ್ರಹ್ಮನು, ಬ್ರಹ್ಮೈಕ್ಯವು ಮತ್ತು ಬ್ರಹ್ಮೈಕ್ಯಾನುಭವವೂ ಸಹ ಇರುವುವೆಂದು ಪ್ರಮಾಣಗಳಿಂದ ಸಿದ್ಧವಾಗುವುದಿಲ್ಲ. ಮತ್ತು ಬಹು ಪ್ರಮಾಣಗಳಿಂದ ಇವುಗಳು ಇಲ್ಲವೇ ಇಲ್ಲವೆಂದೂ ಸ್ಪಷ್ಟವಾಗಿ ಪ್ರಮಿತವಾಗಿರುತ್ತದೆ.

ಆದುದರಿಂದ ದ್ವೈತ ತತ್ತ್ವದಲ್ಲಿ ಪ್ರತಿಪಾದಿತವಾದ ಮುಕ್ತ್ಯನುಭವವೇ ಯಥಾರ್ಥವು ಮತ್ತು ಸರ್ವ ಪ್ರಮಾಣಗಳಿಗೂ ಸಮ್ಮತವಾಗಿರುವುದು. ಅದ್ವೈತ

ಮತದ ಐಕ್ಯಾನುಭವವಾದವೂ, ವಿಶಿಷ್ಟಾದ್ವೈತದ ಆನಂದ ಸಾಮ್ಯವಾದವೇ ಮೊದ ಲಾದ ಸಕಲ ಮತಗಳೂ ಅಪ್ರಾಮಾಣಿಕವಾಗಿರುವುದರಿಂದಲೇ, ಶ್ರೀಮದಾಚಾರ್ಯರು **ಭ್ರಾಂತಿಮೂಲತಯಾ ಸರ್ವಸಮಯಾನಾಮಯುಕ್ತಿತಃ** ಎಂದರೆ ಸಕಲ ಮತಗಳೂ ಕೆಲವು ವಿಷಯಗಳಲ್ಲಿ ಭ್ರಾಂತಿಮೂಲಕವಾಗಿರುವುವು, ಎಂದರೆ ವೇದ ಶಾಸ್ತ್ರ ತಾತ್ಪರ್ಯಾಪರಿಜ್ಞಾನದಿಂದ ಹುಟ್ಟಿರುವುವೆಂದು ನಿರೂಪಿಸಿರುತ್ತಾರೆ. ವೇದತಾತ್ಪರ್ಯ ವಿರುದ್ಧವಾದ ಶಾಸ್ತ್ರಗಳು ತಾಮಸವೆಂದು ಪ್ರಸಿದ್ಧವಾಗಿರುವುದ ರಿಂದ ಅವುಗಳು ಮುಮುಕ್ಷುಗಳಿಂದ ಅಂಗೀಕಾರಾರ್ಹವಲ್ಲವೆಂದು ನಾವು ನಿರೂಪಿ ಸಿರುತ್ತೇವೆ.

ಶ್ರೀ ಕೃಷ್ಣಾರ್ಪಣಮಸ್ತು.

**ಜಯತ್ಯಾನಂದತೀರ್ಥೇಷ್ಟದೇವತಾನರಕೇಸರೀ ।**
**ವಿಪಾಟಿತಾಜ್ಞಾನತಮಃಕಪಾಟೋತ್ಯುರುಹುಂಕೃತಃ ॥**
**ಜಯತ್ಯಮಿತಪೌರುಷಃ ಸ್ವಜನತೇಷ್ಟಚಿಂತಾಮಣಿಃ ।**
**ಅಜೇಶಮುಖವಂದಿತೋಗುಣಗಣಾರ್ಣವಃ ಶ್ರೀಪತಿಃ ॥**



|| ಶ್ರೀಃ ||

ಶ್ರೀಮದ್ಧನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ

ಶ್ರೀ ಲಕ್ಷ್ಮೀಹಯಗ್ರೀವಾಯ ನಮಃ ||

ಜಯತ್ಯಜೋಽಕ್ಷೀಣ ಸುಖಾತ್ಮಬಿಂಬಃ ಸ್ವೈಶ್ವರ್ಯಕಾಂತಿಪ್ರತತಃ ಸದೋದಿತಃ ।
ಸ್ವಭಕ್ತಸಂತಾಪದುರಿಷ್ಟಹಂತಾ ರಾಮಾವತಾರೋ ಹರಿರೀಶಚಂದ್ರಮಾಃ ॥



# ದ್ವೈತ ಸಿದ್ಧಾಂತ ವೈಜಯಂತೀ



## ( ಸಭಾಸಾರಸಂಗ್ರಹ )

## ( Volume III )

ಗೀತೋಪನ್ಯಾಸಗಳು – 2



*Edited by :*

H. SUBBA RAO, M.A.

# Dwait Siddhant Vaijayantee —
## ( SABHA SARA SANGRAHA - VOLUME III )
( Satyadhyanar Geetopanyasagalu 2 )



**Publisher :**
Hon. Gen. Secretary
Satyadhyana Vidyapeetha
302/1, Bheemani Street, Matunga, Bombay - 19 DD



ಶ್ರೀಮತ್ ಸತ್ಯಧ್ಯಾನತೀರ್ಥರ ಜನ್ಮಶತಮಾನೋತ್ಸವ ಮತ್ತು ಶ್ರೀಮತ್ ಸತ್ಯಪ್ರಮೋದತೀರ್ಥರ ಸಿಂಹಾಸನಾರೋಹಣ ರಜತಮಹೋತ್ಸವ ಸವಿನೆನಪಿನ ಪ್ರಕಟನೆ 1

**ದ್ವಿತೀಯ ಮುದ್ರಣ : ೧೯೭೨**





**ಮುದ್ರಕರು :**
ಎಮ್. ಸಿ. ಕುಲಕರ್ಣಿ
ವಿಜಯಲಕ್ಷ್ಮಿ ಆರ್ಟ ಪ್ರಿಂಟರ್ಸ
ಶೇರಿ ಬೀದಿ, ಬೆಳಗಾವಿ.

# ವಿಷಯಾನುಕ್ರಮಣಿಕೆಯು



ವಿಷಯಗಳು ಪುಟ

ವಿಷಯಗಳು | ಪುಟ

॥ श्रीः ॥

ಶ್ರೀಮನ್ಮೂಲರಾಮೋ ವಿಜಯತೇ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಶ್ರೀಲಕ್ಷ್ಮೀಹಯಗ್ರೀವಾಯ ನಮಃ ॥

ಶ್ರೀ ಶ್ರೀಮತ್ಪರಮಹಂಸೇತ್ಯಾದಿ ಬಿರುದಾಂಕಿತರಾದ

**ಶ್ರೀಮದುತ್ತರಾದಿಮಠದ ಸಂಸ್ಥಾನದ ಶ್ರೀಪಾದಂಗಳವರ**
**ಮಹಾಸನ್ನಿಧಾನದಲ್ಲಿ**
**ಮೈಸೂರಿನಲ್ಲಿ ಸೀತಾವಿಲಾಸಛತ್ರದಲ್ಲಿ ನಡೆದ**
**ಶ್ರೀವೇದಾಂತವಿಮರ್ಶಿನೀಮಹಾಸಭೆಯಲ್ಲಿ ಚರ್ಚಿಸಿದ**

# ವಿಷಯಗಳ ಮುಖ್ಯ ಸಾರಾಂಶ.

## VII

# ಮೋಕ್ಷಸಾಧನನಿರೂಪಣವು

6 ರಿಂದ 13—8—1930 ರ ವರೆವಿಗೆ

**ಸಭಿಕರು— ಧರ್ಮಾಧಿಕಾರಿಗಳು, ವಿದ್ವಾಂಸರು**
**ಮತ್ತು ವಿದ್ಯಾರ್ಥಿಗಳು.**

## I

### ಅಪರೋಕ್ಷಜ್ಞಾನಾನಂತರಕೃತಭಕ್ತಿಲಬ್ಧವಿಷ್ಣುಪ್ರಸಾದಕ್ಕೆ ಸಾಕ್ಷಾನ್ಮೋಕ್ಷಸಾಧನತ್ವಸಮರ್ಥನವು.

ಪ್ರಶ್ನೆ— ಸ್ವಾಮೀ! ಈ ದಿವಸ ತಾವು ಪುರುಷಾರ್ಥಪ್ರಧಾನವಾದ ಮೋಕ್ಷಕ್ಕೆ ಸಾಕ್ಷಾತ್ಸಾಧನವು ಯಾವುದೆಂಬುದನ್ನು ಶ್ರೀ ಕೃಷ್ಣನ ಗೀತಾವಾಕ್ಯಗಳಿಂದಲೇ ನಿರ್ಣಯ ಮಾಡಿ ಹೇಳಬೇಕು.

ಶ್ರೀ ಶ್ರೀಗಳವರು— " ಅಮಲಾ ಭಕ್ತಿಶ್ಚ ತತ್ಸಾಧನಂ " ಎಂದು ನಮ್ಮಿಂದ ಪ್ರತಿಜ್ಞಾತವಾದ ಶ್ಲೋಕ ಭಾಗದಲ್ಲಿ ವ್ಯಾಸರಾಯರೇ, ಮುಕ್ತಿಗೆ ದೋಷರಹಿತವಾದ ಭಕ್ತಿಯು ಸಾಕ್ಷಾತ್ಸಾಧನವೆಂದು ನಿರೂಪಿಸಿರುತ್ತಾರೆ. ಆದರೆ

ಇಲ್ಲಿ ತಿಳಿಯಬೇಕಾದ ಒಂದು ಸೂಕ್ಷ್ಮಾಂಶವು ಇರುವುದು. ಮುಕ್ತಿಯು ಸತ್ಯವಾದ ಬಂಧದ ನಿವೃತ್ತಿರೂಪವಾದುದೆಂದು ನಾವು ನಿರೂಪಿಸಿದೆವು. ಬಂಧಕನಾದ ಪರಮಾತ್ಮನ ಅಧೀನವಾದ ಭವಪಾಶವು ಪರಮಾತ್ಮನ ಇಚ್ಛೆಯಿಂದಲೇ ನಿವೃತ್ತವಾಗುವುದೇ ಹೊರತು ಸ್ವಯಂ ನಿವೃತ್ತವಾಗಲಾರದು. ರಾಜಾಧೀನವಾದ ಬಂಧನವನ್ನು ಅನುಭವಿಸುವ ಕಾರಾಗೃಹವಾಸಿಯು ಪುನಃ ರಾಜನ ಇಚ್ಛೆಯಿಂದಲೇ ಬಿಡುಗಡೆ ಹೊಂದಿಸಲ್ಪಡುತ್ತಿರುವುದು ಲೋಕಾನುಭವಸಿದ್ಧವು. ಹಾಗಿಲ್ಲದೆ, ಸಂಕೋಲೆಯು ತನ್ನಷ್ಟಕ್ಕೆ ತಾನೇ ಕಳಚಿ ಹೋಗಿ ಬಂದೀನಿವಾಸಿಯು ಸ್ವತಂತ್ರನಾಗಿ ರಾಜನ ಆಸ್ಥಾನ ಸಭೆಯಲ್ಲಿ ಕಾರ್ಯಾರ್ಥವಾಗಿ ಪ್ರಾಪ್ತನಾಗಲಾರನು. ಆದುದರಿಂದ ಮೋಕ್ಷಕ್ಕೆ ಸಾಕ್ಷಾತ್ಸಾಧನವು ಮುಕ್ತಿಪ್ರದನಾದ ಶ್ರೀಮನ್ನಾರಾಯಣನ ಅತ್ಯರ್ಥ ಪ್ರಸಾದವು.

ಹಾಗಿದ್ದರೂ, **ಅಮಲಾ ಭಕ್ತಿಶ್ಚ ತತ್ಸಾಧನಂ** ಎಂಬ ವ್ಯಾಸರಾಜರ ವಾಕ್ಯವೂ ಯಥಾರ್ಥವೇ. ಹೇಗೆಂದರೆ, ಹರಿಪ್ರಸಾದವು **"ಏನಂ ಮೋಚಯಾಮಿ"** ಎಂಬ ಈಶ್ವರೇಚ್ಛಾರೂಪವಾದುದು. ಅದು ಅಧಿಕಾರಿಯ ಅಧೀನವಲ್ಲ. ಮೋಕ್ಷಾಪೇಕ್ಷಿಗಳಾದ ಅಧಿಕಾರಿಗಳು ಮೋಕ್ಷಾರ್ಥವಾಗಿ ಮಾಡತಕ್ಕ ಪ್ರಯತ್ನದಲ್ಲಿ, ವಿಷಯಕಾಮದಿಂದ ರಹಿತವಾದ ಭಕ್ತಿಯು ಮುಖ್ಯ ಸಾಧನವು. ಇಂಥ ಭಕ್ತಿಯು ಸಾಕ್ಷಾನ್ಮೋಕ್ಷ ಸಾಧನವಾದ ಹರಿಪ್ರಸಾದಕ್ಕೆ ಸಾಕ್ಷಾತ್ಕಾರಣವಾಗುವುದು.

ಹೀಗಿರುವುದರಿಂದ ನಾವು ಪ್ರಥಮತಃ ವಿಷ್ಣುಪ್ರಸಾದವು ಸಾಕ್ಷಾನ್ಮೋಕ್ಷಸಾಧನವೆಂಬುದನ್ನು ನಿರೂಪಿಸುತ್ತೇವೆ. ಶ್ರೀ ಕೃಷ್ಣನು ಹೇಳುತ್ತಾನೆ :—

(1) **ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ||**

—(18. 58.)

ನನ್ನಲ್ಲಿಯೇ ಇಡಲ್ಪಟ್ಟ ಚಿತ್ತವುಳ್ಳವನು ( ಭಕ್ತನು ) ನನ್ನ ( ಶ್ರೀ ಕೃಷ್ಣನ ) ಪ್ರಸಾದದಿಂದ ಸರ್ವದುರ್ಗಗಳನ್ನೂ ದಾಟುವೆ (ವನು); ಮುಕ್ತನಾಗುತ್ತಾನೆಂದರ್ಥವು.

(2) **ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ |**

—(18. 56.)

(ಜ್ಞಾನಿಯು) ನನ್ನ ( ಶ್ರೀ ಕೃಷ್ಣನ ) ಪ್ರಸಾದದಿಂದ ಶಾಶ್ವತವಾದ ವಿಕಾರರಹಿತವಾದ ಸ್ಥಾನವನ್ನು ಹೊಂದುತ್ತಾನೆ; ಮುಕ್ತನಾಗುತ್ತಾನೆಂದರ್ಥವು.

(3) **ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ |**

—(18. 62.)

ವಿಷ್ಣುಪ್ರಸಾದದಿಂದ ನೀನು ಶಾಶ್ವತವಾದ ಉತ್ತಮಸುಖಪ್ರದವಾದ ಸ್ಥಾನವನ್ನು ಹೊಂದುತ್ತೀಯೆ; ಮುಕ್ತನಾಗುತ್ತೀಯೆ ಎಂದರ್ಥವು.

ಈ ಮೂರು ವಾಕ್ಯಗಳಲ್ಲೂ ಪರಮ ಮುಕ್ತಿಯು ಶ್ರೀ ಕೃಷ್ಣನ ಪ್ರಸಾದದಿಂದಲೇ ಬರುವುದೆಂದು ಹೇಳಿರುತ್ತದೆ.

**ಪ್ರಶ್ನೆ**— ಸ್ವಾಮೀ ! ಬ್ರಹ್ಮಜ್ಞಾನವು ಮುಕ್ತಿಗೆ ಸಾಧನವೆಂದು ಸರ್ವಸಮ್ಮತವಾದ ಪ್ರಕ್ರಿಯೆಯು. ಪೂರ್ಣ ಪ್ರಕಾಶಾತ್ಮಕನಾದ ಸೂರ್ಯನು ಉದಯಿಸಿದಾಗ ಅಂಧಕಾರದ ನಿವೃತ್ತಿಯಾಗುವಂತೆ ಅಥವಾ ಹಿಮವು ಕರಗುವಂತೆ, ಜ್ಞಾನೋದಯವಾದರೆ ಅಜ್ಞಾನಾದಿ ಬಂಧಗಳು ಸ್ವಯಂ ನಷ್ಟವಾಗುವುವು. ಅದಷ್ಟೇ ಮುಕ್ತಿಯು ? ಆದುದರಿಂದ ಜ್ಞಾನವು ಹುಟ್ಟುವುದಕ್ಕೆ ಭಗವತ್ಪ್ರಸಾದವು ಅಪೇಕ್ಷಿತವಾದರೂ, ಜ್ಞಾನೋತ್ಪತ್ತಿಯಾದ ನಂತರ ಮುಖ್ಯಾರ್ಥವಾಗಿ ಭಗವಂತನ ಅನುಗ್ರಹವು ಏತಕ್ಕೆ ?

ಶ್ರೀ ಶ್ರೀಗಳವರು— ಭಗವಂತನಾದ ಶ್ರೀ ಕೃಷ್ಣನು ಸರ್ವಸ್ವತಂತ್ರನು ಎಂದು ನಾವು ಪೂರ್ವದಲ್ಲಿಯೇ ನಿರೂಪಿಸಿರುತ್ತೇವೆ. ಹೀಗಿರುವಲ್ಲಿ ಜಡವಾದ ಜ್ಞಾನವು ಸಾಕ್ಷಾತ್ತಾಗಿ ಸ್ವತಂತ್ರ ಸಾಮರ್ಥ್ಯದಿಂದ ಮುಕ್ತಿಯನ್ನು ಕೊಡಿಸುವುದು ಎಂದು ಹೇಳುವುದು ಅಯುಕ್ತವು. ಸೂರ್ಯನು ಅಂಧಕಾರವನ್ನು ನಿವೃತ್ತಿ ಮಾಡುವುದೂ, ಸೂರ್ಯೋದಯದಿಂದ ಹಿಮವು ನಷ್ಟವಾಗುವುದೂ ಸಹ, ಸೂರ್ಯ ಪ್ರಕಾಶದ ಸ್ವಾಭಾವಿಕ ಗುಣಕ್ಕೂ ನಿಯಾಮಕನಾದ, ಭಗವಂತನಾದ ಶ್ರೀ ಕೃಷ್ಣನ ಅಧೀನವಾಗಿರುತ್ತದೆ. ಹೀಗೆಯೇ ಜ್ಞಾನದಿಂದಲೇ ಸಾಕ್ಷಾತ್ತಾಗಿ ಮುಕ್ತಿಯಾಗುವುದೆಂದು ಒಪ್ಪಿದರೂ ಸಹ ಜ್ಞಾನದ ಸಹಜ ಸ್ವಭಾವಕ್ಕೂ ನಿಯಾಮಕನಾದ ಭಗವಂತನ ಪ್ರಸಾದವು ಆವಶ್ಯಕವೆಂದು ಒಪ್ಪಬೇಕು. ವಸ್ತುಗಳ ಸ್ವಾಭಾವಿಕ ಗುಣಗಳಿಗೂ ಭಗವಂತನು ನಿಯಾಮಕನೆಂಬ ತತ್ವವು ಭಗವದ್ಗೀತೆಯಲ್ಲಿ ಬಹು ಸ್ಥಳಗಳಲ್ಲಿ* ಹೇಳಿರುತ್ತದೆ.

**2.** ಇದು " ತುಷ್ಯತು ದುರ್ಜನಃ " ಎಂಬ ನ್ಯಾಯವನ್ನನುಸರಿಸಿ ಹೇಳಿದ ಮಾತು. ವಸ್ತುತಃ ಜ್ಞಾನಿಗೆ ಜ್ಞಾನೋತ್ಪತ್ತಿಯಾದ ಕ್ಷಣವೇ ಶಂಕರಾಚಾರ್ಯರು ಹೇಳುವಂತೆ ಸದ್ಯೋಮುಕ್ತಿಯು ಬರುವುದಾಗಿದ್ದರೆ, ಬ್ರಹ್ಮ ಜ್ಞಾನದಿಂದಲೇ ಮೋಕ್ಷವಾಗುವುದು, ಇನ್ನು ಪ್ರಸಾದವು ಏತಕ್ಕೆಂದು ಕಥಂಚಿತ್ ಪ್ರಶ್ನೆ ಮಾಡ

---

* **"ರಸೋಽಹಮಪ್ಸು ಕೌಂತೇಯ"** ಇತ್ಯಾದಿ ಸಪ್ತಮಾಧ್ಯಾಯಗತ ಶ್ಲೋಕಗಳಲ್ಲಿಯೂ, **" ಅಹಂ ಕ್ರತುರಹಂ ಯಜ್ಞ "** ಇತ್ಯಾದಿ ನವಮಾಧ್ಯಾಯಗತ ಶ್ಲೋಕಗಳಲ್ಲಿಯೂ, **" ಜ್ಞಾನಂ ಜ್ಞಾನವತಾಮಹಂ "** ಇತ್ಯಾದಿ ದಶಮಾಧ್ಯಾಯಗತ ವಾಕ್ಯಗಳಲ್ಲಿಯೂ. ಈ ಪ್ರಮೇಯವು ನಿಶ್ಚಿತವಾಗಿರುವುದು.

ಬಹುದಾಗಿತ್ತು. ಆದರೆ ಅದ್ವೈತಿಗಳು ಹೇಳುವಂತೆ ಜ್ಞಾನಿಯು ಸದ್ಯೋಮುಕ್ತನಾಗಿ ಒಂದು ಕ್ಷಣ ಕಾಲದಲ್ಲೂ ಸಂಸಾರದಲ್ಲಿ ಇರುವುದಿಲ್ಲವೆಂದು ಶ್ರೀ ಕೃಷ್ಣನು ಹೇಳುವುದಿಲ್ಲ. ಜ್ಞಾನಿಯು ಬ್ರಹ್ಮದರ್ಶನವನ್ನು ಹೊಂದಿದ ನಂತರ, ಪರಬ್ರಹ್ಮನ ವಿಶೇಷ ಪ್ರಸಾದಾರ್ಥವಾಗಿ ತಪಸ್ಸು ಮಾಡುತ್ತಾ, ಇನ್ನೂ ತನ್ನ ಪ್ರಾರಬ್ಧಕರ್ಮವು ಪರಿಸಮಾಪ್ತವಾಗುವವರೆಗೂ, ಸಂಸಾರದಲ್ಲಿಯೇ ಅವಸ್ಥಾನವನ್ನು ಹೊಂದುವನೆಂದು ಶ್ರೀ ಕೃಷ್ಣನ ವಾಕ್ಯಗಳಿಂದ ನಿಶ್ಚಿತವಾಗುವುದು. ಅರ್ಜುನನ ಪ್ರಶ್ನೆಯೇ ಜ್ಞಾನಿಗೂ ಸಂಸಾರದಲ್ಲಿ ಅವಸ್ಥಾನವು ಉಂಟೆಂದು ಸೂಚಿಸುವುದು :—

(4) **ಅರ್ಜುನ ಉವಾಚ :—**

**ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಂ ॥**

—(2. 54.)

**ಅರ್ಥವು—** ಅರ್ಜುನನು ಹೇಳುತ್ತಾನೆ :— ಎಲೈ ಕೇಶವನೇ ! ಸಮಾಧಿಯೋಗನಿರತನಾದ ಅಪರೋಕ್ಷ ಜ್ಞಾನಿಯ ಲಕ್ಷಣವೇನು ? ಬ್ರಹ್ಮಾಪರೋಕ್ಷ ಜ್ಞಾನವುಳ್ಳವನು ಇತರರ ಸಂಗಡ ಮಾತಾಡುವುದು ಹೇಗೆ ? ಅವನು ಯಾವುದನ್ನು ಉದ್ದೇಶ ಮಾಡಿ ಆಸನ ಮತ್ತು ಗಮನಾಗಮನಾದಿ ಪ್ರವೃತ್ತಿಗಳನ್ನು ಹೊಂದುವನು ? ( ಬ್ರಹ್ಮದರ್ಶನಾನಂದದಲ್ಲಿ ಮಗ್ನನಾದ ಬ್ರಹ್ಮಜ್ಞಾನಿಯು, ಇತರರ ಸಂಗಡ ಸಂಭಾಷಣಾದಿ ವ್ಯವಹಾರಗಳನ್ನು ಮಾಡುವುದು ಮತ್ತು ಯಾವುದನ್ನಾದರೂ ಅಪೇಕ್ಷಿಸಿ ಪ್ರವೃತ್ತಿಸುವದೂ ಸಹ ಅಸಂಭಾವಿತವೆಂದು ಪ್ರಶ್ನಭಾವವು. )

ಇದರಿಂದ ಬ್ರಹ್ಮಾಪರೋಕ್ಷ ಜ್ಞಾನವನ್ನು ಹೊಂದಿದ ಸಮಾಧಿಯೋಗನಿರತನಾದ ಸ್ಥಿತಪ್ರಜ್ಞನೂ ಸಹ ಇನ್ನೂ ಕೆಲವು ಕಾಲ ಗಮನಾಗಮನಾದಿ ಪ್ರವೃತ್ತಿಗಳಿಂದ ಸಹಿತನಾಗಿ ಸಂಸಾರದಲ್ಲಿ ಇರುವನೆಂದು ಸಿದ್ಧವಾಯಿತು. ಜ್ಞಾನದಿಂದ ತತ್ಕಾಲದಲ್ಲಿ ದೇಹಾದಿಬಂಧಗಳು ನಷ್ಟವಾಗಿ ಮುಕ್ತಿಯಾಗುವದಿಲ್ಲವೆಂದೂ ಸಿದ್ಧವಾಯಿತು. ಜ್ಞಾನಕ್ಕೆ ಸಾಕ್ಷಾನ್ಮುಕ್ತಿದಾತೃತ್ವ ಸಾಮರ್ಥ್ಯವು ಇಲ್ಲವೆಂದೂ ನಿಶ್ಚಿತವಾಯಿತು.

**3.** ಜ್ಞಾನಿಯ ಲಕ್ಷಣವನ್ನು ಬೋಧಿಸುವ ಶ್ರೀ ಕೃಷ್ಣನ ಉತ್ತರವೂ ಸಹ, ಜ್ಞಾನಿಯು **ಮುಂದೆ** ಮುಕ್ತನಾಗುವನು, ಈಗ ಕರ್ಮಶೇಷ ನಿಮಿತ್ತವಾಗಿ ಅವನಿಗೆ ಸ್ವಲ್ಪ ಪ್ರವೃತ್ತಿಗಳು ಉಂಟು ಎಂದು ತಿಳಿಸಿ ಕೊಡುತ್ತದೆ :—

(5) **ಶ್ರೀಭಗವಾನುವಾಚ :—**

**ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥** —(55.)

ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।
ವೀತರಾಗಭಯಕ್ರೋಧಃ ಸ್ಥಿತಧೀಃ ಮುನಿರುಚ್ಯತೇ ॥
ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಂ ।
ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥
ಯದಾ ಸಂಹರತೇ ಚಾಯಂ ಕೂರ್ಮೋಂಗಾನೀವ ಸರ್ವಶಃ ॥
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥
—(58.)

ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।
ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥
ಯತತೋಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।
ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥ —(60.)
ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।
ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥
—(61.)

.... .... .... .... .... ....

ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।
ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥ —(67.)
ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥
(68.)

ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥
ಆಪೂರ್ಯಮಾಣಮಚಲಪ್ರತಿಷ್ಠಂ ಸಮುದ್ರಮಾಪಃ ಪ್ರವಿಶಂತಿ
ಯದ್ವತ್ ।
ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ ಸ ಶಾಂತಿಮಾಪ್ನೋತಿ ನ
ಕಾಮಕಾಮೀ ॥
ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ ।
ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥

**ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯವಿಮುಹ್ಯತಿ ।**
**ಸ್ಥಿತ್ವಾ ಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥**
—(2.55–72.)

**ಅರ್ಥವು:**— "ಎಲೈ ಪಾರ್ಥನೇ! ಮೋಕ್ಷಾಧಿಕಾರಿಯು ಯಾವಾಗ ಮನೋಗತವಾದ ಸರ್ವವಿರುದ್ಧ ಕಾಮಕ್ರೋಧಾದಿಗಳನ್ನು ಪರಿತ್ಯಾಗ ಮಾಡುತ್ತಾನೆಯೋ, ಯಾವಾಗ ಪರಮಾತ್ಮನಲ್ಲಿಯೇ ಇಡಲ್ಪಟ್ಟ ಚಿತ್ತವುಳ್ಳವನಾಗಿ ಪರಮಾತ್ಮ ಪ್ರಸಾದದಿಂದಲೇ ಸಂತುಷ್ಟನಾಗುತ್ತಾನೆಯೋ ಆಗ ಅವನು ಅಪರೋಕ್ಷ ಜ್ಞಾನಿಯು ಎಂದು ಹೇಳಿಸಿಕೊಳ್ಳಲ್ಪಡುತ್ತಾನೆ. ದುಃಖಗಳು ಬಂದೊದಗಿದರೂ ಸಮಾಧಾನ ಮನಸ್ಕನಾಗಿಯೂ, ಸುಖಸಾಧನಗಳು ಪ್ರಾಪ್ತವಾದಾಗ ಅವುಗಳ ವಿಷಯದಲ್ಲಿ ಅಪೇಕ್ಷಾರಹಿತನಾಗಿಯೂ, ಮತ್ತು ರಾಗ ( ದುಷ್ಟ ಪದಾರ್ಥಗಳಲ್ಲಿ ಉತ್ತಮತ್ವ ಬುದ್ಧಿ ), ಭಯ, ಕ್ರೋಧಾದಿಗಳಿಂದ ರಹಿತನಾದವನು ಅಪರೋಕ್ಷ ಜ್ಞಾನಿಯೆನ್ನಿಸುವನು. ಯಾವಾತನು ಸರ್ವ ವಿಷಯಗಳಲ್ಲಿಯೂ ಸ್ನೇಹರಹಿತನಾಗಿರುವನೋ, ಆದುದರಿಂದಲೇ ಶುಭ ವಿಷಯ ಪ್ರಾಪ್ತಿಯಿಂದ ಅತ್ಯಂತ ಆನಂದವನ್ನೂ ಅಶುಭ ವಿಷಯ ಪ್ರಾಪ್ತಿಯಿಂದ ದ್ವೇಷವನ್ನೂ ಹೊಂದುವುದಿಲ್ಲವೋ, ಅವನು ಅಪರೋಕ್ಷ ಜ್ಞಾನಿಯೆನ್ನಿಸುವನು. ಮತ್ತು ಯಾವಾತನು ಯಾವಾಗ ಇಂದ್ರಿಯ ವಿಷಯಗಳಾದ ಶಬ್ದಸ್ಪರ್ಶ ರೂಪ ರಸಗಂಧಗಳಿಂದ ಶ್ರೋತ್ರಾದಿ ಇಂದ್ರಿಯಗಳನ್ನು ಕೂರ್ಮವು ತನ್ನ ಕರಚರಣಗಳನ್ನು ಉಪಸಂಹಾರ ಮಾಡಿಕೊಳ್ಳುವಂತೆ, ವಿಷಯಗಳಲ್ಲಿ ಆಸಕ್ತವಾಗದಂತೆ ಉಪಸಂಹರಿಸುವನೋ, ಅವನು ಅಪರೋಕ್ಷ ಜ್ಞಾನಿಯೆನ್ನಿಸುವನು. ( ಇವುಗಳೆಲ್ಲಾ ಅಪರೋಕ್ಷ ಜ್ಞಾನಿಯ ಲಕ್ಷಣಗಳೆಂದು ತಾತ್ಪರ್ಯವು )

"ವಿಷಯಗಳಲ್ಲಿ ಕಾಮನಿವೃತ್ತಿಯಿಂದ ಜ್ಞಾನವನ್ನು ಸಂಪಾದಿಸುವುದಾದರೆ, ಸರ್ವರೂ ಏತಕ್ಕೆ ಜ್ಞಾನಿಗಳಾಗುವುದಿಲ್ಲವೆಂದರೆ ಹೇಳುತ್ತಾನೆ. * ಜೀವನು ನಿರಾಹಾರನಾಗಿ ಇದ್ದರೆ ಇಂದ್ರಿಯಗಳಲ್ಲಿರುವ ವಿಷಯ ಭೋಗ ಶಕ್ತಿಯು ಕುಂಠಿತವಾಗುವುದು. ಆದರೂ ರಸನೇಂದ್ರಿಯದ ಭೋಗಶಕ್ತಿಯೂ ಮಾನಸಿಕ ವಿಷಯಾಭಿಲಾಷೆಯೂ ನಿವೃತ್ತವಾಗುವುದಿಲ್ಲ. ವಿಷಯ ಕಾಮವು ಪರಬ್ರಹ್ಮದರ್ಶನದಿಂದಲೇ ನಿವೃತ್ತವಾಗುವುದು. (ಆದುದರಿಂದ ಕೇವಲ ನಿರಾಹಾರತ್ವಾದಿ ಪ್ರಯತ್ನಗಳಿಂದಲೂ

---

* ಇದೇ ಮೊದಲು ಮಾಡಿ "**ಯಾ ನಿಶಾ**" ಎಂಬ ಶ್ಲೋಕಪರ್ಯಂತವೂ ಇಂದ್ರಿಯ ಜಯ, ಮನಃಪ್ರಸಾದಾದಿಗಳೂ ಅಪರೋಕ್ಷ ಜ್ಞಾನ ಸಾಧನಗಳೆಂದು ಹೇಳಿ ಅವುಗಳು ಉತ್ಪನ್ನವಾಗುವ ಪ್ರಕಾರವನ್ನೂ, ನಿರಾಹಾರತ್ವ, ಪ್ರತ್ಯಾಹಾರ, ಭಗವಂತನಲ್ಲಿ ಮನೋಯೋಗರೂಪವಾದ ಉಪಾಯಗಳನ್ನೂ ಶ್ರೀ ಕೃಷ್ಣನು ಹೇಳಿರುತ್ತಾನೆ ಈ ಅನುಷ್ಠಾನಗಳಿಂದ ಜ್ಞಾನಿಯು ಬ್ರಹ್ಮದರ್ಶನವನ್ನು ಹೊಂದಿರುವನು, ಪ್ರಸಂಗ ಸಂಗತಿಯಿಂದ ಈ ಶ್ಲೋಕಗಳು ಇಲ್ಲಿ ಉದಾಹೃತವಾಗಿ ವ್ಯಾಖ್ಯಾತವಾಗಿರುವುವು.

ವಿಷಯಕಾಮನಾರಾಹಿತ್ಯವನ್ನು ಹೊಂದುವುದಕ್ಕಾಗುವುದಿಲ್ಲ. ಅತ ಏವ ಎಲ್ಲರೂ ಸುಲಭವಾಗಿ ವಿಷಯಾಪೇಕ್ಷಾರಹಿತರಾಗಿ ಜ್ಞಾನಿಗಳಾಗಲಾರರು ಎಂದು ಭಾವವು.) ಇದರಿಂದ ನಿರಹಾರತ್ವಾದಿ ಅನೇಕ ಪ್ರಯತ್ನಗಳನ್ನು ಮಾಡಿ, ಇಂದ್ರಿಯ ಜಯ ವನ್ನು ಕಷ್ಟದಿಂದ ಸಂಪಾದಿಸಿ, ವಿಷಯಾಪೇಕ್ಷೆಯನ್ನು ಬಿಡಬೇಕೆಂದು ಶ್ರೀ ಕೃಷ್ಣನು ಬೋಧಿಸಿದಂತಾಯಿತು. ಆದರೆ ನಿರಾಹಾರತ್ವಾದಿ ಭಯಂಕರ ಪ್ರಯತ್ನಗಳು ಏತಕ್ಕೆ? ಪ್ರತ್ಯಾಹಾರಾದಿ ಸಾಧಾರಣ ಪ್ರಯತ್ನದಿಂದಲೇ ಇಂದ್ರಿಯ ಜಯವು ಸಾಧ್ಯವಾಗಲಾರದೇ ಎಂಬ ಶಂಕೆಗೆ ಶ್ರೀ ಕೃಷ್ಣನು ಸಮಾಧಾನವನ್ನು ಹೇಳು ತ್ತಾನೆ :— ಎಲೈ ಕೌಂತೇಯನೇ ! ಪ್ರತ್ಯಾಹಾರಾದಿ ಪ್ರಯತ್ನಶೀಲನಾದ ಪರೋಕ್ಷ ಜ್ಞಾನಿಯಾದ ಪುರುಷನಿಗೂ ಕೂಡ ಇಂದ್ರಿಯಗಳು ಪ್ರಮಥನಶೀಲಗಳು; ಎಂದರೆ, ಬಲವಂತವಾಗಿ ಮನಸ್ಸನ್ನು ವಿಷಯಗಳಲ್ಲಿ ಹೋಗುವಂತೆ ಆಕರ್ಷಣೆ ಮಾಡುತ್ತವೆ. (ಆದುದರಿಂದ ನಿರಾಹಾರತ್ವಾದಿ ಮಹಾ ಪ್ರಯತ್ನಗಳಿಂದಲೇ ಇಂದ್ರಿಯ ಜಯ ವನ್ನು ಸಂಪಾದಿಸಿ ವಿಷಯ ಕಾಮವನ್ನು ಪರಿಹರಿಸಿಕೊಳ್ಳಬೇಕು ಎಂದು ಭಾವವು.)
—(60. 11.)

"ನಿರಾಹಾರತ್ವವು ಅಶಕ್ಯ ಸಾಧನವು. ಪ್ರತ್ಯಾಹಾರಾದಿಗಳು ದುರ್ಬಲ ಸಾಧನಗಳು ಕಿಂಚ ಬ್ರಹ್ಮದರ್ಶನದಿಂದಲೇ ಇಂದ್ರಿಯಜಯಾದಿಗಳು, ಇಂದ್ರಿಯ ಜಯದಿಂದ ಬ್ರಹ್ಮಾಪರೋಕ್ಷ ಜ್ಞಾನವು, ಹೀಗೆ ಅನ್ಯೋನ್ಯಾಶ್ರಯವು ಬರುವುದು. ಇತ್ಯಾದಿ ರೀತಿಯಾಗಿ ಪ್ರಾಪ್ತವಾದ ಮಂದರ ಶಂಕೆಯನ್ನು ಶ್ರೀ ಕೃಷ್ಣನು ಪರಿಹರಿ ಸುತ್ತಾನೆ :— ಯದ್ಯಪಿ ಪ್ರತ್ಯಾಹಾರಾದಿ ಪ್ರಯತ್ನಗಳು ಮುಖ್ಯ ಸಾಧನಗಳಲ್ಲ. ಆದರೆ ನಿರಾಹಾರತ್ವಾದಿ ಪ್ರಯತ್ನವು ಅಶಕ್ಯವಲ್ಲ. ಹೀಗಿದ್ದರೂ ಇವುಗಳಿಂದಲೂ ಸಾಧ್ಯವಲ್ಲದ ಇಂದ್ರಿಯ ಜಯವು ಇವುಗಳಿಗೆಲ್ಲಾ ಪ್ರತಿನಿಧಿಯಾದ ಪರಮಾತ್ಮನ ಸರ್ವೋತ್ತಮತ್ವ ಜ್ಞಾನಪೂರ್ವಕವಾದ ನಿರಂತರ ಮನೋಯೋಗದಿಂದ ಬರುವು ದೆಂದು, ಶ್ರೀ ಕೃಷ್ಣನು ಅನ್ಯೋನ್ಯಾಶ್ರಯರಹಿತವಾದ ಸಮಾಧಾನವನ್ನು ಹೇಳು ತ್ತಾನೆ :— ಮೋಕ್ಷಾಧಿಕಾರಿಯು ಸರ್ವೇಂದ್ರಿಯಗಳನ್ನೂ ವಿಷಯಗಳ ದೆಸೆಯಿಂದ ಉಪಸಂಹರಿಸಿ ಮತ್ಪರಃ – ಶ್ರೀ ಕೃಷ್ಣನೇ ಸರ್ವೋತ್ತಮನೆಂದು ತಿಳಿದು, ಯುಕ್ತ ಆಸೀತ – ಪುನಃ ಪುನಃ ಪರಮಾತ್ಮನಲ್ಲಿ ಮನಸ್ಸನ್ನು ಯೋಜನೆ ಮಾಡುತ್ತಾ ಇರ ಬೇಕು. ಯಾರಿಗೆ ಇಂದ್ರಿಯಗಳು ವಶದಲ್ಲಿರುವುವೋ, ಅವನಿಗೆ (ಮನಃಪ್ರಸಾದ ದ್ವಾರಾ) ಬ್ರಹ್ಮಾಪರೋಕ್ಷ ಜ್ಞಾನವು ಉಂಟಾಗುವುದು. (ಏವಂಚ ದುಃಖ ದರ್ಶನಾದಿಗಳಿಂದ ಸ್ವಲ್ಪ ವಿಷಯ ಜಿಹಾಸೆಯುಳ್ಳವನು, ಪರಮಾತ್ಮನ ಪಾದ ಮೂಲದಲ್ಲಿ ಪುನಃ ಪುನಃ ಮನಸ್ಸನ್ನು ಇಡೋಣವೆಂಬ ಯೋಗದಿಂದ ಪೂರ್ಣ ಜಿತೇಂದ್ರಿಯತ್ವವನ್ನೂ, ಮನಸ್ಸು **ಸ್ವತ ಏವ** ವಿಷಯಗಳಲ್ಲಿ ಹೋಗದೆ ಇರೋಣ ವೆಂಬ ಮನಃಪ್ರಸಾದವನ್ನೂ ಹೊಂದಿ, ಕ್ಷಿಪ್ರದಲ್ಲಿ ಬ್ರಹ್ಮಜ್ಞಾನಿಯಾಗುತ್ತಾನೆ ಎಂದು ಭಾವವು.)
—(61.)

ಇಂಥ ಮನೋಯೋಗ ರಹಿತನಾದವನು ಬಹು ಶಾಸ್ತ್ರಜ್ಞಾನಿಯಾದರೂ ಬ್ರಹ್ಮ ದರ್ಶನವನ್ನು ಮಾಡಲು ಸಮರ್ಥನಾಗಲಾರನೆಂಬಲ್ಲಿ ಕಾರಣವನ್ನು ಶ್ರೀ ಕೃಷ್ಣನು ನಿರೂಪಿಸುತ್ತಾನೆ :— ಯಾರ ಇಂದ್ರಿಯಗಳು ಯಥೇಷ್ಟವಾಗಿ ವಿಷಯ ಗಳಲ್ಲಿ ಸಂಚರಿಸುತ್ತಿರುವುವೋ ಅಂಥವರ ಮನಸ್ಸನ್ನು ಶ್ರೀ ಪರಮಾತ್ಮನು ಆ ಇಂದ್ರಿಯಗಳ ಸಂಗಡಲೇ ಹೋಗುವಂತೆ ಮಾಡುತ್ತಾನೆ. ( ಇಂದ್ರಿಯಗಳು ವಿಷಯ ಗಳಲ್ಲಿ ರತವಾದರೆ ಮನಸ್ಸೂ ನಿಯಮೇನ ವಿಷಯಗಳಲ್ಲಿ ರತವಾಗುವುದು, ಎಂದು ಭಾವವು. ) ಈ ಪ್ರಕಾರ ವಿಷಯಾಸಕ್ತವಾದ ಮನಸ್ಸು, ವಾಯುವು ಜಲದಲ್ಲಿ ನಾವೆಯನ್ನು ಉರುಳಿಸುವಂತೆ ಅಧಿಕಾರಿಯ ಪರೋಕ್ಷತತ್ವ ನಿಶ್ಚಯವನ್ನು ಹರಣ ಮಾಡುತ್ತದೆ, ಎಂದರೆ, ಉತ್ಪತ್ತಿಗೆ ಅವಕಾಶ ಕೊಡುವುದಿಲ್ಲ. ಉತ್ಪನ್ನವಾದರೂ ಅಪರೋಕ್ಷ ಜ್ಞಾನೋತ್ಪತ್ತಿಯಲ್ಲಿ ಸಮರ್ಥವಾಗದಂತೆ ಮಾಡುವುದು. ಆದುದ ರಿಂದ ಎಲೈ ಮಹಾಬಾಹುವೇ ! ಯಾವಾತನ ಸರ್ವೇಂದ್ರಿಯಗಳೂ ಇಂದ್ರಿಯ ವಿಷಯಗಳಿಂದ ನಿವರ್ತಿಸಲ್ಪಟ್ಟಿರುವುವೋ ಆತನಿಗೆ ಅಪರೋಕ್ಷ ಜ್ಞಾನವು ಶೀಘ್ರ ದಲ್ಲಿ ಹುಟ್ಟುತ್ತದೆ. ‡ —(67. 68.)

ಮುಖ್ಯವಾದ ಜ್ಞಾನಿ ಲಕ್ಷಣವನ್ನು ಸಂಗ್ರಹವಾಗಿ ಶ್ರೀ ಕೃಷ್ಣನು ಹೇಳು ತ್ತಾನೆ :— ಯಾವ ಪರಮಾತ್ಮ ಸ್ವರೂಪವನ್ನು ಸರ್ವರೂ ಅಂಧಕಾರಸ್ಥ ವಸ್ತುವಿ ನಂತೆ ತಿಳಿಯುವುದಿಲ್ಲವೋ ಅಂಥ ಪರಬ್ರಹ್ಮ ವಿಷಯದಲ್ಲಿ ಜಿತೇಂದ್ರಿಯನಾದ ಜ್ಞಾನಿಯು ಸದಾ ಜಾಗರೂಕನಾಗಿರುತ್ತಾನೆ. ಜ್ಞಾನಿಯು ಸರ್ವದಾ ಭಗವದ್ಧ್ಯಾನ ದಲ್ಲಿ ಆಸಕ್ತನಾಗಿರುತ್ತಾನೆಂದು ಭಾವವು. ಯಾವ ವಿಷಯ ಪ್ರಪಂಚದಲ್ಲಿ ಸರ್ವ ಪ್ರಾಣಿಗಳೂ ಆಸಕ್ತಿಯಿಂದ ಮಗ್ನರಾಗಿರುವರೋ ಆ ವಿಷಯವನ್ನು ಮನನಶೀಲ ನಾದ ಬ್ರಹ್ಮಾಪರೋಕ್ಷ ಜ್ಞಾನಿಯು ಅಂಧಕಾರಸ್ಥ ವಸ್ತುವಿನಂತೆ ತಿಳಿಯುವುದಿಲ್ಲ. —(69.)

"ಜ್ಞಾನಿಯು ವಿಷಯಾನುಭವವನ್ನು ಮಾಡುವ ಪ್ರಕಾರವನ್ನು ಶ್ರೀ ಕೃಷ್ಣನು ವರ್ಣಿಸುತ್ತಾನೆ :— ನಾನಾ ನದೀ ಜಲಗಳಿಂದ ಪೂರಿತವಾದರೂ ಅಚಲ ಪ್ರತಿಷ್ಠ ವಾದ, ಎಂದರೆ, ನದೀ ಪ್ರವೇಶದಿಂದ ಹೆಚ್ಚು ವೃದ್ಧಿಯನ್ನಾಗಲೀ, ಅಪ್ರವೇಶದಿಂದ ಅತ್ಯಂತ ಹ್ರಾಸವನ್ನಾಗಲೀ ಹೊಂದದೇ ನದೀ ಪ್ರವೇಶಾರ್ಥವಾಗಿ ಪ್ರಯತ್ನ ಮಾಡದ, ಏಕ್ಪ್ರದೇಕ ಪ್ರಕಾರವಾದ, ಗಂಭೀರವಾದ ಸಮುದ್ರವನ್ನು ನದಿಗಳು ಪ್ರವೇಶಿಸುವಂತೆ ಯಾವ ಪುರುಷನನ್ನು ವಿಷಯಗಳು ಪ್ರವೇಶಿಸುವುವೋ, ಅಂಥ

‡ ಇಂದ್ರಿಯಜಯ, ಪ್ರಾಯೇಣ ಸರ್ವ ಕಾಮರಾಹಿತ್ಯ, ಆತ್ಮಪ್ರಸಾದದಿಂದಲೇ ತುಷ್ಟಿ ಮುಂತಾದ ಜ್ಞಾನಿ ಲಕ್ಷಣಗಳನ್ನು ಇಲ್ಲಿ ಹೇಳಿರುವದು ಪ್ರಕೃತವು ಇಂದ್ರಿಯಜಯದ ಪ್ರಾಪ್ತಿ ಸಾಧನ, ಅಪರೋಕ್ಷ ಜ್ಞಾನಸಾಧನ ಮುಂತಾದುವುಗಳು ಪ್ರಸಂಗಾತ್ ಹೇಳಿದುದೆಂದು ತಿಳಿಯ ಬೇಕು. ಪ್ರಕರಣ ವಿವರಣ ಸಮಯದಲ್ಲೇ ಈ ಸಮಾಧಾನೋಕ್ತಿಯು ಹೆಚ್ಚು ಸಂಗತವೆಂದು ಇಲ್ಲಿಯೇ ಈ ಶ್ಲೋಕಗಳು ಉದಾಹೃತವಾಗಿ ವ್ಯಾಖ್ಯಾತವಾಗಿರುವುವು.

ಜ್ಞಾನಿಯು ಮೋಕ್ಷವನ್ನು ಹೊಂದುತ್ತಾನೆ. ವಿಷಯಾಪೇಕ್ಷೆಯುಳ್ಳವನು ಮುಕ್ತನಾಗುವುದಿಲ್ಲ. ಯಾವಾತನು ದುರ್ವಿಷಯೇಚ್ಛಾ ರಹಿತನಾಗಿ ಅಹಂತಾಮಮತಾದಿಗಳನ್ನು ಬಿಟ್ಟು ವಿಷಯಗಳನ್ನು ದೇಹಧಾರಣಾರ್ಥವಾಗಿ ಮಾತ್ರ ಭೋಗಿಸುತ್ತಾನೆಯೋ ಅಂಥ ಜ್ಞಾನಿಯು ಮೋಕ್ಷವನ್ನು ಹೊಂದುತ್ತಾನೆ. ಎಲೈ ಪಾರ್ಥನೇ! ಇದು ಬ್ರಹ್ಮಜ್ಞಾನಿಯು ಇರುವ ರೀತಿಯು. ಈ ಸ್ಥಿತಿಯನ್ನು ಹೊಂದಿದವನು ಭವವೇದನೆಯನ್ನು ಹೊಂದುವುದಿಲ್ಲ. ಜ್ಞಾನಿಯು ಮರಣ ಕಾಲದಲ್ಲಿ ಭಗವದ್ಧ್ಯಾನರೂಪವಾದ ಈ ಸ್ಥಿತಿಯಲ್ಲಿದ್ದವನಾಗಿ ಪ್ರಾಕೃತ ಶರೀರರಹಿತನಾದ ಪರಬ್ರಹ್ಮನನ್ನು ಹೊಂದುತ್ತಾನೆ." —(70-72.)

ಏವಂಚ ಪ್ರಾಯೇಣ ಸರ್ವ ಕಾಮ ಪರಿತ್ಯಾಗವು ಜ್ಞಾನಿಯ ಲಕ್ಷಣವು. ಆತನು ಮತ್ತರಾದ ಜನರಂತೆ ಕಿಂಚಿತ್ ಪ್ರವೃತ್ತಿಯುಳ್ಳವನಾಗಿ ವಿಷಯ ಪ್ರಾಪ್ತಿಯಿಂದ ಹಿಗ್ಗದೆ, ವಿಷಯ ಲಾಭವಿಲ್ಲದಿದ್ದರೆ ಕುಗ್ಗದೆ, ಭಗವದ್ಧ್ಯಾನದಲ್ಲಿ ರತನಾಗಿ ಆತ್ಮದರ್ಶನಜನ್ಯ ಸಂತೋಷದಿಂದಲೂ ಭಗವತ್ಪ್ರಸಾದದಿಂದಲೂ, ಪೂರ್ಣನಾಗಿರುತ್ತಾನೆ. ಆದುದರಿಂದಲೇ ವಿಷಯಗಳಲ್ಲಿ ಅಲಂಬುದ್ಧಿಯುಳ್ಳವನಾಗಿ ಇಂದ್ರಿಯ ಜಯ ಮತ್ತು ಮನಃಪ್ರಸಾದಗಳಿಂದ ಜನಿತವಾದ ವೈರಾಗ್ಯ ಭಾಗ್ಯದಿಂದ ಸಂಪನ್ನನಾಗಿರುತ್ತಾನೆ.

**ಪ್ರಶ್ನೆ**— ಸ್ವಾಮೀ! ಇಲ್ಲಿ ಹೇಳಿರುವ ಜ್ಞಾನಿ ಲಕ್ಷಣಗಳು ಬ್ರಹ್ಮಾಪರೋಕ್ಷ ಜ್ಞಾನರಹಿತನಾದ ನಿಷ್ಕಾಮವಾದ ಭಗವದಾರಾಧನೆಯಲ್ಲಿ ತತ್ಪರನಾದ ಭಗವದ್ಭಕ್ತನ ಲಕ್ಷಣಗಳೆಂದು ಏತಕ್ಕೆ ಹೇಳಬಾರದು?

**ಉತ್ತರ**— ಶ್ರೀ ಶ್ರೀಗಳವರು— 1. ಪರಿಪೂರ್ಣವಾದ ನಿಷ್ಕಾಮತೆಯು ಭಗವದ್ದರ್ಶನವಿಲ್ಲದೆ ಬರಲಾರದು. ಇಲ್ಲಿ ಹೇಳಿರುವಂತೆ ಸಕಲ ಲೌಕಿಕ ವ್ಯಾಪಾರಗಳ ವಿಷಯದಲ್ಲೂ "ನಿಶಾ" ಪ್ರಾಯವಾಗಿ ತಿಳಿಯುವುದು, ಎಂದರೆ, ಅತ್ಯಂತ ಉದಾಸೀನತೆಯನ್ನು ಹೊಂದುವುದು; ಇದು ಭಗವದಪರೋಕ್ಷ ಜ್ಞಾನಿಗೇ ಸಂಭವಿಸುವುದು. 2. ಕಿಂಚ "**ಪಶ್ಯತೋ ಮುನೇಃ**", "**ಆತ್ಮನ್ಯೇವಾತ್ಮನಾ ತುಷ್ಟಃ**" ಎಂಬ ವಿಶೇಷಣಗಳ ಬಲದಿಂದ ಇಲ್ಲಿ ವರ್ಣಿಸಲ್ಪಟ್ಟಿರುವ ಜ್ಞಾನಿಯು, ಭಗವದಪರೋಕ್ಷವನ್ನು ಹೊಂದಿರುವ ಜೀವನ್ಮುಕ್ತನೆಂದೇ ಸಿದ್ಧಿಸುವುದು. 3. ಪರಂತು "**ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ**" ಎಂದರೆ ಸಂಪೂರ್ಣ ವಿಷಯಾಭಿಲಾಷೆಯು ಮತ್ತು ರಸನೇಂದ್ರಿಯಾಭಿಲಾಷೆಯೂ ಬ್ರಹ್ಮದರ್ಶನವನ್ನು ಮಾಡಿದ ನಂತರವೇ ಸಮಗ್ರವಾಗಿ ಹೋಗುತ್ತದೆ ಎಂದು ಯುಕ್ತಿಯನ್ನೂ ಹೇಳಿ, ಶ್ರೀ ಕೃಷ್ಣನು "**ಸ್ಥಿತಪ್ರಜ್ಞನು**" ಸಕಲ ವಿಷಯಾಭಿಲಾಷೆಯಿಂದ ರಹಿತನು, ಸಮುದ್ರಕ್ಕೆ ನದೀ ಪ್ರವೇಶಾಪ್ರವೇಶಗಳಿಂದ ಅತ್ಯಂತ ವೃದ್ಧಿ ಹಾನಿಗಳಿಲ್ಲದೆ ಎಂದಿನಂತೆ ಗಂಭೀರವಾಗಿ ಇರುವಂತೆ, ಜ್ಞಾನಿಯು ವಿಷಯಗಳ ಪ್ರಾಪ್ತಿಯಿಂದ ಹಿಗ್ಗದೆ ಅಪ್ರಾಪ್ತಿಯಿಂದ ಕುಗ್ಗದೇ ಇರುವನೆಂದು ಹೇಳಿರುವುದರಿಂದ ಇಂಥ ಲಕ್ಷಣವು

ಅಸಂಪ್ರಜ್ಞಾತ ಸಮಾಧಿಯಲ್ಲಿ ಪರಬ್ರಹ್ಮನನ್ನು ದರ್ಶನ ಮಾಡಿರುವ ಸಾಮಾನ್ಯ ಜ್ಞಾನಿಯಲ್ಲಿ ಅಸಂಭಾವಿತವು. 4. ಪರಂತು ಸ್ಥಿತಪ್ರಜ್ಞನೆಂಬ ಹೆಸರಿನಿಂದ ಜ್ಞಾನಿಯನ್ನು ವರ್ಣನೆ ಮಾಡಿ ಆ ಜ್ಞಾನಿಯು ಅಂತ್ಯದಲ್ಲಿ ಭಗವದನುಸ್ಮೃತಿ ಪ್ರಭಾವದಿಂದ ಮುಕ್ತನಾಗುತ್ತಾನೆ, ಎಂದು ಹೇಳಿರುವುದೇ ಹೊರತು, ಬ್ರಹ್ಮಜ್ಞಾನವನ್ನು ಸಂಪಾದಿಸಿ ಮುಕ್ತನಾಗುವನು ಎಂದು ಹೇಳಲಿಲ್ಲ ಸ್ಥಿತಪ್ರಜ್ಞನು ನಿಷ್ಕಾಮಕರ್ಮಿಯಾಗಿದ್ದರೆ ಅಂತ್ಯ ಶ್ಲೋಕದಲ್ಲಿ ಶ್ರೀ ಕೃಷ್ಣನು ಈ ಬ್ರಾಹ್ಮೀ ಸ್ಥಿತಿಯನ್ನು ಹೊಂದಿದವನು "**ಜ್ಞಾನಂ ಪ್ರಾಪ್ಯ ನಿರ್ವಾಣಂ ಬ್ರಹ್ಮಾಧಿಗಚ್ಛತಿ**" ಎಂದರೆ ಜ್ಞಾನವನ್ನು ಹೊಂದಿ ನಿರ್ವಾಣ ಬ್ರಹ್ಮನನ್ನು ಹೊಂದುತ್ತಾನೆ ಎಂದು ಹೇಳುತ್ತಿದ್ದನು. ಆದುದರಿಂದ ಈ ಪ್ರಕರಣದಲ್ಲಿ ಶ್ರೀ ಕೃಷ್ಣನು ಜೀವನ್ಮುಕ್ತನಾದ ಬ್ರಹ್ಮಾಪರೋಕ್ಷ ಜ್ಞಾನಿಯನ್ನೇ ವರ್ಣಿಸಿರುತ್ತಾನೆ.

**ಪ್ರಶ್ನೆ**— ಸ್ವಾಮೀ ! ಹೀಗೆಯೇ ಇನ್ನೂ ಸ್ಪಷ್ಟವಾಗಿ ಜ್ಞಾನಿಯು ಕೂಡಲೇ ಮುಕ್ತನಾಗದೆ, ಪರಮಾತ್ಮನ ಪೂರ್ಣ ಪ್ರಸಾದಾರ್ಥವಾಗಿ ಕಾದುಕೊಂಡಿರುವನೆಂದು ಶ್ರೀ ಕೃಷ್ಣನು ಮತ್ತೆಲ್ಲಿ ಹೇಳಿರುವನು ?

**ಉತ್ತರ**— ಶ್ರೀ ಶ್ರೀಗಳವರು— 5. ಏಳನೆಯ ಮತ್ತು ಹದಿನೆಂಟನೆಯ ಅಧ್ಯಾಯಗಳಲ್ಲಿ ಜ್ಞಾನವನ್ನು ಹೊಂದಿದವನು ತತ್ಕಾಲದಲ್ಲಿ ಮುಕ್ತನಾಗುವನು ಎಂದು ಹೇಳದೆ, ಪರಮಾತ್ಮನ ಪ್ರೀತಿಗೆ ಪಾತ್ರನಾಗಿ ಇನ್ನೂ ಬದುಕಿರುವನು ಎಂದೇ ಶ್ರೀ ಕೃಷ್ಣನು ಸೂಚಿಸಿರುತ್ತಾನೆ. ಶ್ರೀ ಕೃಷ್ಣನು ಹೇಳುತ್ತಾನೆ :—

(6) "**ತೇಷಾಂ ಜ್ಞಾನೀ ನಿತ್ಯಯುಕ್ತಃ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ।**
**ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಂ ।**
**ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಂ ॥**
—(7. 17-18.)

**ಅರ್ಥ**— ಎಲೈ ಅರ್ಜುನನೇ ! ನಾಲ್ಕು ವಿಧರಾದ ಜನರು ನನ್ನನ್ನು ಭಜಿಸುತ್ತಾರೆ. ಅವರ ಮಧ್ಯದಲ್ಲಿ ಸದಾ ಭಗವದ್ಧ್ಯಾನರತನಾದ, ನನ್ನಲ್ಲಿ ಭಕ್ತಿಯೇ ಪ್ರಧಾನವಾಗಿ ಉಳ್ಳ ಜ್ಞಾನಿಯು ಶ್ರೇಷ್ಠನು. ಜ್ಞಾನಿಗೆ ನಾನು ಅತ್ಯಂತ ಪ್ರಿಯನು. ನನಗೂ ಆತನು ಪ್ರಿಯನು. ಚತುರ್ವಿಧ ಭಕ್ತರೂ ಉತ್ತಮರೇ. ಅದರಲ್ಲೂ ಜ್ಞಾನಿಯನ್ನಾದರೋ ನಾನು ನನ್ನ ದೇಹವೆಂದೇ ತಿಳಿಯುತ್ತೇನೆ. (ನನಗೆ ಪರಮ ಪ್ರೀತಿ ವಿಷಯನೆಂದು ಭಾವವು.) ಏಕೆಂದರೆ ಜ್ಞಾನಿಯು ಅತ್ಯುತ್ತಮ ಗತಿಯನ್ನು (ಮೋಕ್ಷವನ್ನು) ಅಪೇಕ್ಷಿಸುವವನಾಗಿ, ನನ್ನನ್ನು ಕುರಿತು ಉಪಾಸನೆ ಮಾಡುವವನಾಗಿದ್ದಾನೆ.

ಈ ರೀತಿಯಾಗಿ ಜ್ಞಾನಿಯು ನನಗೆ "ಪ್ರಿಯ" ನೆಂದು ಶ್ರೀ ಕೃಷ್ಣನು ಹೇಳಿ

ಜ್ಞಾನಿಯು ಪ್ರಿಯನಾಗುವುದರಲ್ಲಿ ಯುಕ್ತಿಯನ್ನೂ ಹೇಳಿರುತ್ತಾನೆ. ಜ್ಞಾನಿಯು ಅತ್ಯುತ್ತಮ ಗತಿಯಾದ ನನ್ನನ್ನು ಧ್ಯಾನ ಮಾಡುತ್ತಾ ಯೋಗಾರೂಢವಾದ ಮನಸ್ಸುಳ್ಳವನಾಗಿರುತ್ತಾನೆ, ಎಂದು ಶ್ರೀ ಕೃಷ್ಣನು ಹೇಳಿರುವನು. ಜ್ಞಾನಿಯು ಭಗವದಪರೋಕ್ಷ ಜ್ಞಾನ ಪ್ರಭಾವದಿಂದ ಮನ ಆದಿ ಸರ್ವ ಇಂದ್ರಿಯ ಬಂಧಗಳಿಂದಲೂ ರಹಿತನಾಗಿ ಬ್ರಹ್ಮನಲ್ಲಿ ಲೀನವಾಗುವ ಸದ್ಯೋಮುಕ್ತಿಯನ್ನು ಹೊಂದುವುದಾದರೆ ಆತನು **"ಯುಕ್ತಾತ್ಮ"** ನಾಗಿ ಆವನನ್ನೇ ನಂಬಿಕೊಂಡಿರುವುದೆಲ್ಲಿಂದ ಬಂತು ? ಹದಿನೆಂಟನೆಯ ಅಧ್ಯಾಯದಲ್ಲೂ ಶ್ರೀ ಕೃಷ್ಣನು ಹೀಗೆಯೇ ಹೇಳಿರುತ್ತಾನೆ :—

(7) **ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ವತೋ ಜ್ಞಾತ್ವಾ ವಿಶತೇ ತದನಂತರಂ ॥**
—(18. 55.)

ಧ್ಯಾನ ವೈರಾಗ್ಯಗಳಿಂದ ಸಹಿತವಾದ ಭಕ್ತಿಯಿಂದ ಅಧಿಕಾರಿಯು ನನ್ನ ದೇಶತಃ ಕಾಲತಃ ಗುಣತಃ ವ್ಯಾಪ್ತಿಯನ್ನೂ ನನ್ನ ಯಥಾರ್ಥ ರೂಪವನ್ನೂ ಚೆನ್ನಾಗಿ ತಿಳಿದು (ನೋಡಿ) ಹಾಗೆ ನನ್ನನ್ನು ತಿಳಿದ ಮೇಲೆ, **ತತೋ = ಅನಂತರ** (ಎಂದರೆ ಪುನಃ ಉದ್ರಿಕ್ತ ಭಕ್ತಿಯಿಂದ ನನ್ನನ್ನು ಧ್ಯಾನ ಮಾಡಿ) ವಿಶತೇ = ನನ್ನಲ್ಲಿ ಪ್ರವೇಶಿಸುತ್ತಾನೆ, ಮುಕ್ತನಾಗುತ್ತಾನೆ ಎಂದು ಅರ್ಥವು.

ಬ್ರಹ್ಮಜ್ಞಾನವನ್ನು ಸಂಪಾದಿಸಿದ ಮತ್ತು ಗುಣಕಾರ್ಯವನ್ನು ಪ್ರಾಯೇಣ ಮೀರಿದ ಭಕ್ತನು ಲೋಕದಲ್ಲಿ ಇರುವ ರೀತಿಯನ್ನು ಹದಿನಾಲ್ಕನೆಯ ಅಧ್ಯಾಯದಲ್ಲಿಯೂ ಸಹ ಶ್ರೀ ಕೃಷ್ಣನು ವರ್ಣನೆ ಮಾಡಿರುತ್ತಾನೆ. ಇಲ್ಲಿಯೂ ಶ್ರೀ ಕೃಷ್ಣಾರ್ಜುನರ ಸಂವಾದವು ಹೀಗೆ ನಡೆದಿರುತ್ತದೆ :—

(8) **ಅರ್ಜುನ ಉವಾಚ—**

**ಕೈರ್ಲಿಂಗೈಸ್ತ್ರೀನ್ ಗುಣಾನೇತಾನತೀತೋ ಭವತಿ ಪ್ರಭೋ ।**
**ಕಿಮಾಚಾರಃ .... .... .... .... ....? ॥**

**ಶ್ರೀ ಭಗವಾನುವಾಚ—**

**ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ ।**
**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ।**
**ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।**
**ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ ।**
**ಸಮದುಃಖಸುಖಸ್ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ।**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ।**

**ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।**
**ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥**
—(14. 21-25.)

**ಅರ್ಥವು—** (ಈ ಪ್ರಕರಣದಲ್ಲಿ ಗುಣಾತೀತನೆಂದರೆ ಸತ್ವಾದಿ ಗುಣವಿಕಾರ ನಿಮಿತ್ತಕವಾಗಿ ಸ್ವರೂಪ ವಿಕಾರವನ್ನು (ನೀಚೋಚ್ಚತೆಗಳನ್ನು) ಹೊಂದದ ಜ್ಞಾನಿಯು ಎಂದರ್ಥವು.) ಅರ್ಜುನನು ಕೇಳುತ್ತಾನೆ—

ಎಲೈ ಸ್ವಾಮಿಯೇ! ತ್ರಿಗುಣ ವಿಕಾರಗಳನ್ನು ಜಯಿಸಿದ ಜ್ಞಾನಿಯು ಯಾವ ಲಕ್ಷಣಗಳಿಂದ ಇರುತ್ತಾನೆ? ಅವನು ಯಾವ ಆಚಾರವುಳ್ಳವನಾಗಿರುವನು?

ಶ್ರೀ ಕೃಷ್ಣನು ಹೇಳುತ್ತಾನೆ— ಎಲೈ ಪಾಂಡುನಂದನನೇ! ಗುಣಾತೀತ ನಾದ ಜ್ಞಾನಿಯು, ಸ್ಥೂಲವಾದ ಸತ್ವರಜಸ್ತಮೋಗುಣಗಳಿಂದ ಕ್ರಮವಾಗಿ ಪ್ರಾಪ್ತವಾಗುವ ಲೌಕಿಕ ಜ್ಞಾನ, ಲೌಕಿಕ ಪ್ರವೃತ್ತಿ, ಮತ್ತು ಲೌಕಿಕ ವಿಷಯಕ ಅಜ್ಞಾನ, ಇವುಗಳು (ವಿಷ್ಣು ಧ್ಯಾನಕ್ಕೆ ಅವಿರುದ್ಧನಾಗಿ) ಪ್ರಾಪ್ತವಾದರೆ ದ್ವೇಷ ಮಾಡುವುದಿಲ್ಲ; ಇವುಗಳು ಪ್ರಾಪ್ತವಾಗದಿದ್ದರೆ ಅಥವಾ ನಿವೃತ್ತವಾದರೆ (ಕೇವಲ ವಿಷ್ಣು ಧ್ಯಾನಕ್ಕೆ ಅವುಗಳು ಅಪೇಕ್ಷಿತವಲ್ಲವಾದುದರಿಂದ) ಪುನಃ ಅವುಗಳನ್ನು ಹೊಂದಬೇಕೆಂದು ಅಪೇಕ್ಷಿಸುವುದಿಲ್ಲ.* ಉದಾಸೀನನೋಪಾದಿಯಲ್ಲಿ ಇರುವವ ನಾಗಿ, ಎಂದರೆ, ದುರ್ವಿಷಯಗಳಲ್ಲಿ ಉದಾಸೀನನಾಗಿ ವೈಷ್ಣವ ಧರ್ಮಗಳ ವಿಷಯ ದಲ್ಲಿ ಜಾಗರೂಕನಾಗಿಯೇ ಇರುವವನಾಗಿ, ಗುಣಕೃತ ವಿಕಾರಗಳಿಂದ ಚಲನವನ್ನು ಹೊಂದದೆ, ಸತ್ವಾದಿ ಗುಣಗಳೂ ದೇಹೇಂದ್ರಿಯಾದಿಗಳೂ ಪರಮಾತ್ಮನ ಇಚ್ಛೆ ಯಿಂದಲೇ ಪ್ರವೃತ್ತವಾಗುತ್ತವೆ ಎಂದು ತಿಳಿದು ಅವೈಷ್ಣವ ವ್ಯಾಪಾರಾರ್ಥವಾಗಿ ಪ್ರವರ್ತಿಸುವುದಿಲ್ಲ. ಜ್ಞಾನಿಯು ವೈಷಯಿಕ ಸುಖವೂ ಮೋಕ್ಷ ವಿರೋಧಿಯಾದುದ ರಿಂದ ದುಃಖದಂತೆ ಅನಿಷ್ಟವೆಂದೇ ತಿಳಿದಿರುವನು. ಅವನು ನಿರ್ವಿಕಾರನು, ಮಣ್ಣು ಕಲ್ಲುಗಳಿಗೆ ಸಮವಾಗಿ ಭಂಗಾರವನ್ನು ತಿಳಿದವನು. (ದ್ರವ್ಯಾಶಾರಹಿತನೆಂದು

---

* ಜ್ಞಾನಿಯು ಸೂಕ್ಷ್ಮಸತ್ತ್ವರಜಸ್ತಮೋಗುಣಗಳಿಂದ ಕ್ರಮವಾಗಿ ಉಂಟಾಗುವ ವಿಷ್ಣು ವಿಷಯಕ ಪ್ರಕಾಶಪ್ರವೃತ್ತಿ ಮೋಹಗಳಲ್ಲಿ ವಿಷ್ಣು ವಿಷಯಕ ಪ್ರವೃತ್ತಿಗಳನ್ನು ಆದರಪೂರ್ವಕವಾಗಿ ಅಪೇಕ್ಷಿಸುತ್ತಾನೆ. ವಿಷ್ಣುವಿಷಯಕ ಮೋಹವನ್ನು ದ್ವೇಷಿಸುತ್ತಾನೆ, ಎಂದು ತಿಳಿಯಬೇಕು. ಈ ಶ್ಲೋಕಕ್ಕೆ ಪ್ರಕಾರಾಂತರವಾದ ಅರ್ಥವನ್ನೂ ಮಾಡಬಹುದು. ಜ್ಞಾನಿಯು ಸಾಧು ಜನರಿಗೆ ಪುರುಷಾರ್ಥೋಪಯೋಗಿಯಾದ ಪ್ರಕಾಶ ಪ್ರವೃತ್ತಿ ಮೋಹಗಳು ಪ್ರಾಪ್ತವಾದರೆ ದ್ವೇಷ ಮಾಡು ವುದಿಲ್ಲ. ಅಸಾಧು ಜನರಿಗೆ ಉತ್ತಮ ಪ್ರಕಾಶ ಪ್ರವೃತ್ತಿಗಳು ಬರದೆ ಅವರು ನಾಶ ಹೊಂದಿದರೆ ಅವರಿಗೆ ಅವುಗಳು ಪ್ರಾಪ್ತವಾಗಬೇಕು, ದುಷ್ಟರಿಗೆ ಕಲ್ಯಾಣವಾಗಬೇಕು ಎಂದು ಇಚ್ಛಿಸುವುದಿಲ್ಲ. ಜ್ಞಾನಿಯು ಸಾಧು ಜನರ ಏಳಿಗೆಯನ್ನು ಕೋರುತ್ತಾನೆ; ದುರ್ಜನರ ಶ್ರೇಯೋವೃದ್ಧಿಯನ್ನು ಕೋರುವುದಿಲ್ಲ ಎಂದು ಭಾವವು.

ಭಾವವು ) ಲೌಕಿಕ ಪ್ರಿಯಗಳನ್ನು ಅಪ್ರಿಯತುಲ್ಯವಾಗಿ ತಿಳಿದವನು, ಧೀರನು, ನಿಂದಾತುಲ್ಯವಾಗಿ ಆತ್ಮ ಸ್ತುತಿಗಳನ್ನು ತಿಳಿದವನು; ಮಾನಾಪಮಾನಗಳು ಯಾವುದು ಪ್ರಾಪ್ತವಾದರೂ ಸಮವಾದ ವಿಷ್ಣುಭಕ್ತಿಯುಳ್ಳವನು ಮಿತ್ರರಲ್ಲಿಯೂ ಶತ್ರುಗಳಲ್ಲಿಯೂ ಸಮನು, ಎಂದರೆ, ಯಾರು ಪ್ರಾಪ್ತರಾದರೂ ಸಮವಾದ ವಿಷ್ಣುಭಕ್ತಿಯುಳ್ಳವನು. ಗುಣಾತೀತನು ಸರ್ವ ಅವೈಷ್ಣವ ಉದ್ಯೋಗಗಳನ್ನೂ ಪರಿತ್ಯಾಗ ಮಾಡಿರುವನು.

ಈ ರೀತಿಯಾಗಿ ಸಕಲ ದುರುದ್ಯೋಗಗಳನ್ನು ತ್ಯಜಿಸಿ ಜ್ಞಾನಿಯು ಕೇವಲ ಹರಿಪಾದ ವಿನಮ್ರವಾದ ಚಿತ್ತವುಳ್ಳವನಾಗಿರುವನೆಂದು ಹೇಳಲ್ಪಟ್ಟಿರುವುದೇ ಹೊರತು, ತನ್ನ ಜ್ಞಾನಪ್ರಭಾವದಿಂದಲೇ ಸದ್ಯೋಮುಕ್ತಿಯನ್ನು ಹೊಂದುವನೆಂದು ಹೇಳಿರುವುದಿಲ್ಲ.

ಕಿಂಚ 6. ಅಪರೋಕ್ಷ ಜ್ಞಾನಿಗಳು ವಿಲಕ್ಷಣ ಭಕ್ತಿ ಮಾಡುವ ಪ್ರಕಾರ ವನ್ನೂ ಸಹ ಶ್ರೀ ಕೃಷ್ಣನು ದ್ವಾದಶಾಧ್ಯಾಯದಲ್ಲಿ ನಿರೂಪಿಸಿರುತ್ತಾನೆ. ಆ ಶ್ಲೋಕಗಳನ್ನು ಮುಂದೆ ಉದಾಹರಿಸುವೆವು. ಜ್ಞಾನಪ್ರಾಪ್ತಿ ಕ್ಷಣದಲ್ಲಿಯೇ ಮುಕ್ತಿ ಯಾಗುವುದಾದರೆ ಈ ವರ್ಣನೆಯು ನಿರರ್ಥಕವಾಗುವುದು. ಇದರಿಂದಲೂ ಜ್ಞಾನಿಗೆ ಇನ್ನೂ ಸಂಸಾರದಲ್ಲಿ ಸ್ವಲ್ಪ ಅವಸ್ಥಾನವು ಉಂಟೆಂದು ನಿಶ್ಚಯಿಸ ಬಹುದು.

ಪರಂತು 7. ಭಗವದ್ಗೀತೆಯಲ್ಲಿ **"ಬ್ರಹ್ಮಾಣಮೀಶಂ", "ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾಃ", "ಮಹರ್ಷಿಸಿದ್ಧಸಂಘಾಃ"** ಇತ್ಯಾದಿ ಶ್ಲೋಕ ಭಾಗಗಳಲ್ಲಿ ಅನೇಕ ಉತ್ತಮ ದೇವತೆಗಳ ಸದ್ಭಾವವು ಪ್ರಮಿತವಾಗಿರುವುದು. ಸಕಲ ದೇವತೆಗಳು, ಋಷಿಗಳು, ಸಿದ್ಧರು, ಸಾಧ್ಯರು, ಗಂಧರ್ವರು ಇವರೆಲ್ಲರೂ ಬ್ರಹ್ಮಾಪರೋಕ್ಷ ಜ್ಞಾನವನ್ನು ಹೊಂದಿದವರೆಂದು ಶ್ರೀಮದ್ಭಾಗವತದಲ್ಲಿಯೂ ಮತ್ತು " ನೈವ ದೇವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ " ಇತ್ಯಾದಿ ಬಹು ಪ್ರಮಾಣ ವಚನಗಳಿಂದಲೂ ಪ್ರಮಿತವಾಗಿರುತ್ತದೆ. ಇಂಥ ಜ್ಞಾನಿಗಳಾದ ಅನೇಕ ದೇವತೆಗಳೂ ಋಷಿಗಳೂ ಬ್ರಹ್ಮಧ್ಯಾನದಲ್ಲಿ ರತರಾಗಿ, ಹಗಲೂ ಇರುಳೂ ಪರ ಮಾತ್ಮನಾದ ವಿಷ್ಣುವಿನ ಸೇವೆಯಲ್ಲಿ ಆಸಕ್ತರಾಗಿರುವುದರಿಂದಲೂ, ಅಪರೋಕ್ಷ ಜ್ಞಾನವನ್ನು ಹೊಂದಿದ ಮೇಲೂ ಕೆಲವು ಕಾಲ ಸಂಸಾರದಲ್ಲಿ ಅವಸ್ಥಾನವು ಪ್ರಾಮಾಣಿಕವೆಂದು ಸಿದ್ಧವಾಗುವುದು.

ಬಹು ದೂರ ಏತಕ್ಕೆ ಹೋಗಬೇಕು ? 8. ಮೊದಲೇ ಬ್ರಹ್ಮಜ್ಞಾನಿಯಾದ ಅರ್ಜುನನು ಪರಬ್ರಹ್ಮನಾದ ಶ್ರೀ ಕೃಷ್ಣನ ವಿಶ್ವರೂಪದರ್ಶನದಿಂದ ತಿರೋಹಿತ ವಾದ ತನ್ನ ದಿವ್ಯ ಜ್ಞಾನವನ್ನು ಪುನಃ ಪಡೆದನೆಂದು ಹೇಳುವದರಲ್ಲಿ ಸಂದೇಹಕ್ಕೇ ಕಾರಣವಿಲ್ಲ. ಬ್ರಹ್ಮ ಜ್ಞಾನಿಯು ಸದ್ಯೋಮುಕ್ತನಾಗಿ ನಷ್ಟ ಜೀವಭಾವವುಳ್ಳವ

ನಾಗಿ ಸಂಸಾರದಿಂದ ಅದೃಶ್ಯನಾಗುವುದಾದರೆ, ಶ್ರೀ ಕೃಷ್ಣನಿಂದ ಉಪದಿಷ್ಟತತ್ತ್ವವುಳ್ಳ ವಿಶ್ವರೂಪಾಪರೋಕ್ಷ ಜ್ಞಾನವನ್ನು ಹೊಂದಿದ ಅರ್ಜುನನು ಯುದ್ಧರಂಗದಲ್ಲಿ ಸ್ಥಿತವಾದ ತನ್ನ ರಥದಿಂದ ಅದೃಶ್ಯನಾಗಿ ಬ್ರಹ್ಮನಲ್ಲಿ ವಿಲೀನವಾಗಿ ಹೋಗಿ, ರಥಿಕರಹಿತವಾದ ಬೋಳು ರಥವನ್ನು ಶ್ರೀ ಕೃಷ್ಣನು ಹೊಡೆಯಬೇಕಾಗುತ್ತಿತ್ತು ! ಹಾಗೆ ಹೊಡೆಯದೇ ಶ್ರೀ ಕೃಷ್ಣ ಸೇವಾರೂಪವಾದ ಪ್ರಬಲವಾದ ಸ್ವೋಚಿತ ಕರ್ಮದಲ್ಲಿ ಅರ್ಜುನನು ಆಸಕ್ತನಾದುದರಿಂದಲೂ, ಭೀಷ್ಮಾಶ್ವತ್ಥಾಮದ್ರೋಣಾದಿ ಮಹಾ ಜ್ಞಾನಿಗಳೂ ಆಸಕ್ತರಾದುದರಿಂದಲೂ, ಜ್ಞಾನಿಗಳು ವಿಷ್ಣು ಸೇವಾ ನಿಮಿತ್ತವಾಗಿ ಇನ್ನೂ ಸ್ವಲ್ಪ ಕಾಲ ಸಂಸಾರದಲ್ಲಿ ವಾಸ ಮಾಡುವರೆಂದು ನಿಶ್ಚಿತವಾಗುವುದು.*

---

*** ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯತೇ ।**
ಎಂಬ ಶ್ರುತಿಯೂ ಪ್ರಾರಬ್ಧಕರ್ಮವು ಕ್ಷಯವನ್ನು ಹೊಂದುವವರೆವಿಗೂ ಜ್ಞಾನಿಗೆ ಭೂಲೋಕದಲ್ಲಿ ವಾಸವು ಆವಶ್ಯಕವೆಂದೂ **ಅಥ** ಎಂದರೆ ಪ್ರಾರಬ್ಧಕರ್ಮವು ಕ್ಷಯವನ್ನು ಹೊಂದಿದ ಅನಂತರವೇ ಆತನು ಬ್ರಹ್ಮನನ್ನು ಹೊಂದುತ್ತಾನೆಂದೂ ಹೇಳಿರುವುದು. “ತಾವದೇವ ಚಿರಂ” ಎಂದು ಬ್ರಹ್ಮಜ್ಞಾನವಾದ ಅನಂತರ ಬ್ರಹ್ಮಪ್ರಾಪ್ತಿಗೆ ( ಮುಕ್ತಿಗೆ ) ಸ್ವಲ್ಪ ವಿಳಂಬವು ಇರುವುದೆಂದು ಪ್ರಮಿತವಾಗಿರುತ್ತದೆ. “ಸ ಸದ್ಯಃ ಸಂಪತ್ಸ್ಯತೇ” ಎಂದು ಶ್ರುತಿಯು ಹೇಳಿರುವುದಿಲ್ಲ. ಶಂಕರಾಚಾರ್ಯರೂ ಸಹ ಈ ಶ್ರುತಿಗೆ ಪೂರ್ವೋಕ್ತ ರೀತಿಯಲ್ಲಿಯೇ ಅರ್ಥ ಮಾಡಿರುತ್ತಾರೆ.

ಹೀಗಿದ್ದರೂ, ಜ್ಞಾನೋತ್ತರಕ್ಷಣದಲ್ಲಿ ಜ್ಞಾನಿಯು ಐಕ್ಯವನ್ನು ಹೊಂದುವನೆಂದು ಹೇಳುವ ಶಂಕರಾಚಾರ್ಯರೂ ಸಹ ಪರಸ್ಪರ ವಿರುದ್ಧವಾದ ಒಂದೆರಡು ಪ್ರಕ್ರಿಯೆಯನ್ನು ಕಲ್ಪಿಸಿರುವರು. ಬ್ರಹ್ಮಜ್ಞಾನಿಯು ಐಕ್ಯವನ್ನು ಹೊಂದುವನು ಎಂದು ಹೇಳಿ ಕ್ವಚಿತ್ ಮರಣದವರೆವಿಗೂ ಅವಸ್ಥಾನವು ಆತನಿಗೆ ಉಂಟೆಂದು ಒಪ್ಪಿರುವರು. ತತ್ಕಾಲದಲ್ಲಿ ಐಕ್ಯವನ್ನು ಹೊಂದಿ ವಿಲೀನನಾಗಿ ಹೋದವನು ವಿದೇಹ ಮುಕ್ತನು. ಮರಣದವರೆವಿಗೆ ಇದ್ದು ವಿಲೀನನಾದವನು ಜೀವನ್ಮುಕ್ತನು ಎಂದು ಕಲ್ಪಿಸಿರುವರು. ಈ ಪ್ರಭೇದವು ಅನ್ಯಾಯವೇ, ಮರಣದಿಂದ ಗಂತವ್ಯದೇಶಾಂತರವಿದ್ದಿದ್ದರೆ ಈ ಭೇದವು ಮನಸ್ಸಿಗೆ ಬರುತ್ತಿತ್ತು. ಜ್ಞಾನಿಯು ಎಲ್ಲಾ ಸುಳ್ಳು ಎಂದು ತಿಳಿದಿರುವನು. ಮರಣದಿಂದ ಹೊಸದಾಗಿ ತಿಳಿಯಬೇಕಾದುದು ಏನೂ ಇಲ್ಲ. ಉರ್ಕುಹಾರ್ಟ್ ಪಂಡಿತನೂ ಈ ದೋಷವನ್ನೇ ತೋರಿಸುತ್ತಾನೆ :—

“The sage, according to Shankara is thus raised above all conditions of mundane existence. Nothing that is outside of Brahman has any power to disturb him and he has not to wait for the slow temporal processes of improvement in this life and the next. But why, if Sankar's view is correct, should he have to wait even for the end of this present life ? ... ... ... ... ... ... ... But in order to

ಹೀಗೆ 9. ಜ್ಞಾನಿಯ ಸಾಂಸಾರಿಕ ಅವಸ್ಥಾನದಿಂದ ಜಗದ್ಬಂಧವು ಸತ್ಯವೆಂದು ಸಹ ಸಿದ್ಧವಾಗುವುದು. ವಿಯದಾದಿ ಯಾವತ್ತೂ ಪ್ರಪಂಚವು, ಸುಖದುಃಖ, ಕರ್ತೃತ್ವ, ಭೋಕ್ತೃತ್ವ "ಅಹಂ" ಎಂಬ ಜೀವಭಾವಾದಿಗಳೆಲ್ಲಾ "ಮಿಥ್ಯಾ" ಆಗಿದ್ದರೆ ಬ್ರಹ್ಮಜ್ಞಾನವಾದ ಉತ್ತರಕ್ಷಣದಲ್ಲಿಯೇ,

**ತತ್ತ್ವಮಸ್ಯಾದಿವಾಕ್ಯೋತ್ಥಸಮ್ಯಗ್ಧೀ ಜನ್ಮಮಾತ್ರತಃ ।**
**ಅವಿದ್ಯಾಸಹಕಾರ್ಯೇಣ ನಾಸೀದಸ್ತಿ ಭವಿಷ್ಯತಿ ॥**

ಎಂಬ ಅದ್ವೈತಿಗಳ ಶ್ಲೋಕಾಭಿಪ್ರಾಯಾನುಸಾರವಾಗಿ ಬ್ರಹ್ಮನಲ್ಲಿ ಅಧ್ಯಸ್ತವಾದ ಸಕಲ ಪ್ರಪಂಚವೂ ಮಾಯವಾಗಿ ಹೋಗುತ್ತಿತ್ತು. ಪುನಃ ಪ್ರಪಂಚವಾಗಲೀ, ತನ್ನ ದೇಹಾದಿಬಂಧಗಳಾಗಲೀ ಜ್ಞಾನಿಗೆ † ಪರಿದೃಶ್ಯಮಾನವಾಗುತ್ತಿರಲಿಲ್ಲ.

---

accomplish this final merging in Brahman, we do not require, according to Sankara, to imagine at death any semi-angelic flight of the spirit by the path of the Gods."

—W. S. Urquhart, M. A. D. Litt.

**ಅರ್ಥವು:—** ಶಂಕರಾಚಾರ್ಯರ ಅಭಿಪ್ರಾಯದಲ್ಲಿ ಜ್ಞಾನಿಯು ಸಕಲ ವ್ಯಾವಹಾರಿಕ ಪ್ರಪಂಚದ ಧರ್ಮಗಳನ್ನು ಅತಿಕ್ರಮಿಸಿರುವನು. ಬ್ರಹ್ಮಾತಿರಿಕ್ತವಾದ ಯಾವುದೊಂದೂ ಅವನನ್ನು ತೊಂದರೆಗೊಳಿಸಲು ಸಮರ್ಥವಲ್ಲ. ಮತ್ತು ಅವನು ಕಾಲಪ್ರವಾಹದಿಂದ ಬರುವ ಐಹಿಕ ಮತ್ತು ಪಾರಲೌಕಿಕ ಶ್ರೇಯಸ್ಸಿಗೆ ಭಾಗಿಯಾಗಿ ಅದಕ್ಕಾಗಿ ಕಾಯಬೇಕಾದುದಿಲ್ಲ. ಈ ಶಂಕರಾಚಾರ್ಯರ ಅಭಿಪ್ರಾಯವು ನಿಜವಾಗುವುದಾದರೆ ಜ್ಞಾನಿಯು ಏತಕ್ಕೆ ಮರಣ ಕಾಲದವರೆವಿಗೂ ಕಾಯಬೇಕು ? ... ... ... ... ... ... ... ... ಕಿಂಚ ಮರಣಾನಂತರ ದೇವಯಾನ ಮಾರ್ಗದಿಂದ ಗಮನವೇ ಮುಂತಾದ ವೈಮಾನಿಕ ಸಂಚಾರವಾದರೂ ಮರಣದಿಂದ ಬಂದು ಬ್ರಹ್ಮೈಕ್ಯವು ಜ್ಞಾನಿಗೆ ಬರತಕ್ಕದ್ದಾಗಿರುವದಿಲ್ಲ." ಬ್ರಹ್ಮೈಕ್ಯವು ಸರ್ವನಿರಪೇಕ್ಷವೆಂದು ಹೇಳಿ ಕ್ವಚಿತ್ ಜ್ಞಾನಿಯು ಮರಣಪರ್ಯಂತ ಇರುವನೆಂದು ಹೇಳಿದುದು ಸ್ವನ್ಯಾಯವಿರುದ್ಧವೂ ಅನುಚಿತವೂ ಆಗಿರುವುದೆಂದು ಭಾವವು.

†ಶಂಕರಾಚಾರ್ಯರು ಅಪರೋಕ್ಷ ಜ್ಞಾನಿಗಳಾಗಿರಲಿಲ್ಲವೆಂದು ಅದ್ವೈತಮತದ ರೀತಿಯಿಂದಲೇ ಸಿದ್ಧವಾಗುವುದು. ಶಂಕರಾಚಾರ್ಯರು ಅದ್ವೈತ ಸಾಕ್ಷಾತ್ಕಾರವನ್ನು ಹೊಂದಿದ ಬ್ರಹ್ಮಜ್ಞಾನಿಗಳಾಗಿದ್ದರೆ, ಅವರ ಉಪದೇಶ ರೂಪವಾದ ಪ್ರವೃತ್ತಿಯು ಅಸಂಗತವಾಗುವುದು. ಸಂಸಾರದಲ್ಲಿ ಅವರ ಸ್ಥಿತಿಯು, ಗ್ರಂಥ ರಚನಾದಿಗಳು ಎಲ್ಲವೂ ಅಸಂಭಾವಿತವೇ ಆಗುವುದು. ಅವರು ಇನ್ನೂ ಅದ್ವೈತಾತ್ಮನಲ್ಲಿ ಲೀನವಾಗದೆ ಉಪದೇಶಗಳನ್ನು ಮಾಡುತ್ತಿದ್ದುದರಿಂದ ಅವರೂ ಅಜ್ಞರೆಂದು ನಿರ್ವಿವಾದವಾಗಿ ಸಿದ್ಧವಾಗುವುದು. ಹಾಗಿಲ್ಲದೆ ಶಂಕರಾಚಾರ್ಯರು ಜ್ಞಾನಿಗಳೆಂದು ಒಪ್ಪುವುದಾದರೆ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿದ ಜ್ಞಾನಿಗೂ ಸಂಸಾರದಲ್ಲಿ ಅವಸ್ಥಾನವು ಉಚಿತವೆಂದೂ, ಗ್ರಂಥ ರಚನೆ, ಉಪದೇಶಾದಿ ಕಾರ್ಯಗಳಿಂದ ಅವರಿಗೂ ಅಭಿಸಂಧಿಪೂರ್ವಕವಾದ ಪ್ರವೃತ್ತಿಯೂ ಉಚಿತವೆಂದೂ, ಅದರಿಂದ ಅವರಿಗೂ ಪ್ರಯೋಜನವು ಉಂಟೆಂದು ಅವಶ್ಯವಾಗಿ ಒಪ್ಪಬೇಕಾಗುವುದು.

ಅರ್ಜುನನು ಬ್ರಹ್ಮಜ್ಞಾನಿಯಾಗಿ ಆಕ್ಷಣವೇ ಬ್ರಹ್ಮೈಕ್ಯವನ್ನು ಹೊಂದಿ ಬಿಟ್ಟನು; ಮಿಥ್ಯಾಭೂತವಾದ ಅವನ ಬಂಧಗಳೆಲ್ಲಾ ಅವನ ವಿಷಯದಲ್ಲಿ ಮಾಯವಾದವು; ಅವನು ರಥದಲ್ಲಿ ಇರಲೇ ಇಲ್ಲ; ಆದರೂ ಅವನ ಆಕಾರವು ರಥದಲ್ಲಿದ್ದಂತೆ ತೋರು ತ್ತಿತ್ತು; ಅದು ಭ್ರಮವು ಎಂದು ಹೇಳುವುದು ಶಿರಸ್ಸಿನಲ್ಲಿ ಕಿರೀಟವನ್ನು ಧರಿಸಿದ ಕತ್ತಿಯ ಕಲ್ಪನೆಯನ್ನು ಮೀರುವುದು. ಜ್ಞಾನಿಪ್ರಧಾನನಾದ ಪರಮಾತ್ಮನು ಅರ್ಜುನನನ್ನು ನೋಡುತ್ತಾ ಆಲಿಂಗನ ಮಾಡುತ್ತಾ ಪುನಃ ಪುನಃ ಅವನ ಸಂಗಡ ಮಾತಾಡುತ್ತಿದ್ದುದರಿಂದಲೂ, ರಥದಿಂದ ಬಾಣಗಳು ಪುಂಖಾನುಪುಂಖವಾಗಿ ಬರುತ್ತಿದ್ದುದರಿಂದಲೂ, ಇನ್ನೂ ಅರ್ಜುನನು ರಥದಲ್ಲಿಯೇ ಇದ್ದನು. ಅವನು ಇನ್ನೂ ವಿಲೀನವಾಗಿ ಹೋಗಲಿಲ್ಲವೆಂದು ಸಿದ್ಧವಾಗುವದು. ಏಪಂಚ ಜ್ಞಾನಿಗಳು ದೇಹಾದಿ ಬಂಧನಗಳಿಂದಲೂ ಸಹಿತವಾಗಿಯೇ ಇರುವುದರಿಂದಲೂ, ಪ್ರಪಂಚ ದಲ್ಲಿಯೇ ಇದ್ದು ತಮ್ಮ ತಮ್ಮ ನಿಯತಾಧಿಪತ್ಯದಲ್ಲಿ ವಿಷ್ಣು ಸೇವೆಯನ್ನು ಮಾಡಿ ಪರಮಾತ್ಮನಿಗೆ ಅರ್ಪಿಸುತ್ತಿರುವುದರಿಂದಲೂ ಜಗತ್ತು ಸತ್ಯವೆಂದೇ ಸಿದ್ಧವಾಯಿತು.

ಈ ಕಾರಣಗಳಿಂದಲೂ ಮತ್ತು ಸತ್ಯಬಂಧದಿಂದ ಯುಕ್ತವಾಗಿರುವುದ ರಿಂದಲೂ ಜ್ಞಾನಿಗಳಿಗೆ ಜ್ಞಾನ ಪ್ರಾಪ್ತವಾದರೂ ಎಲ್ಲಿಗೂ ಅವರು ಹಾರಿ ಹೋಗ ಲಾರರು. ಅಪರಿಮಿತ ಐಶ್ವರ್ಯವನ್ನು ಸಂಪಾದಿಸಿದ ಒಬ್ಬ ದರಿದ್ರನು ತತ್ಕ್ಷಣವೇ ರಾಜ್ಯವನ್ನು ಅನುಭವಿಸುವ ರಾಜನಾಗುವುದಕ್ಕಾದೀತೇ ! ಹೀಗೆಯೇ ವಿಮಲ ಜ್ಞಾನವನ್ನು ಹೊಂದಿದ ಅಪರೋಕ್ಷ ಜ್ಞಾನಿಯೂ ಕೂಡ ತತ್ಕ್ಷಣವೇ ಮುಕ್ತಿ ಯನ್ನು ಹೊಂದದೇ ಸ್ವಲ್ಪ ಕಾಲ ಕಾದುಕೊಂಡಿರುವುದು ಲೋಕಾನುಭವ ಸಿದ್ಧ ವಾಗಿರುವುದು.

**ಪ್ರಶ್ನೆ:**— ಸ್ವಾಮೀ !

**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ !**

**—(4. 37.)**

**ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ||**

**—(4. 39.)**

ಇತ್ಯಾದಿ ಶ್ಲೋಕಗಳಲ್ಲಿ ಜ್ಞಾನವು ಬಂದ ಕೂಡಲೇ ಕರ್ಮಬಂಧವು ಸುಟ್ಟು ಹೋಗು ವುದು ಎಂದು ಹೇಳಿರುತ್ತದೆ. ಪರಂತು ತಾವು ಹೇಳಿದ ದೃಷ್ಟಾಂತದಿಂದಲೂ ಜ್ಞಾನವು ಬಂದ ಕ್ಷಣದಲ್ಲಿಯೇ ಮುಕ್ತಿಯು ಬರಬೇಕೆಂದು ಸಿದ್ಧವಾಗುವುದು ಹೇಗೆಂದರೆ ರಾಜ್ಯಾದಿಹೀನನಾದ ಒಬ್ಬ ದರಿದ್ರನಿಗೆ ಈ ದಿವಸ ಕುಬೇರನ ಐಶ್ವರ್ಯವು ಪ್ರಾಪ್ತವಾದರೆ, ಆತನು ಧನವ್ಯಯದಿಂದ ಚಕ್ರವರ್ತಿಯ ರಾಜ್ಯ ವನ್ನಾದರೂ ಕೊಂಡುಕೊಂಡು ಬಿಡಬಹುದು. ಅವರವರಿಂದ ಅಪೇಕ್ಷಿತವಾದಷ್ಟು ದ್ರವ್ಯವನ್ನು ಕೊಟ್ಟುಬಿಟ್ಟು ರಾಜ್ಯೈಶ್ವರ್ಯವನ್ನೂ ತಾನೇ ಹೊಂದಬಹುದು.

ದುಡ್ಡಿದ್ದರೆ ಇಹದಲ್ಲಿ ತತ್ಕಾಲದಲ್ಲಿ ದೊರಕದ ಸಾಮಗ್ರಿಯು ಇಲ್ಲ. ಹೀಗೆಯೇ ಜ್ಞಾನದಿಂದ ಪರಮಸಂಸಿದ್ಧಿಯನ್ನು ಹೊಂದಿದ ಬ್ರಹ್ಮಾಪರೋಕ್ಷಿಯು ಬೇಕಾದ ಲೋಕಕ್ಕೂ ಮುಕ್ತಿ ಸ್ಥಾನಕ್ಕೂ ಹೋಗುವುದರಲ್ಲಿ ಅಡ್ಡಿಯೇನು ?

10. **ಉತ್ತರ :—** ಶ್ರೀ ಶ್ರೀಗಳವರು— ನಿಮ್ಮ ದೃಷ್ಟಾಂತ ವಿವರಣವು ಸ್ವಲ್ಪ ಲೋಕಾನುಭವಕ್ಕೆ ವಿರುದ್ಧವಾಗಿರುವುದು ಅಪರಿಮಿತ ಐಶ್ವರ್ಯವು ಈ ದಿನ ನಿಮಗೆ ಪ್ರಾಪ್ತವಾದರೂ ಐಶ್ವರ್ಯವು ಸಾಕ್ಷಾತ್ತಾಗಿ ಜಹಗೀರಿಯನ್ನು ತಂದು ಕೊಡಲಾರದು. ನಿಮ್ಮ ಐಶ್ವರ್ಯವನ್ನು ಜಹಗೀರುದಾರನಿಗೆ ಅರ್ಪಣೆ ಮಾಡಿ ಅವನ ಮನಸ್ಸನ್ನು ಅದರಿಂದ ಸಂತೋಷಪಡಿಸಿ ನಿಮ್ಮ ಐಶ್ವರ್ಯಕ್ಕೆ ಪ್ರತಿಫಲವಾದ ನಿಮ್ಮಿಂದ ಅಪೇಕ್ಷಿತವಾದ ಜಹಗೀರಿಯನ್ನು ನೀವು ಹೊಂದಬೇಕು. ಬಹು ಕಾಲ ದಾರಿದ್ರ್ಯದಿಂದ ಸಂತಪ್ತರಾದ ನೀವು ಅವನು ಹೇಳಿದಷ್ಟು ಹಣವನ್ನು ಕೊಡುವುದಕ್ಕೆ ಒಪ್ಪಿದ ಮೇಲೆ ಅವನು ನಿಮ್ಮಿಂದ ತನಗೆ ಅಭಿಮತವಾದಷ್ಟು ಪೂರ್ಣವಾದ ಧನವನ್ನು ಪಡೆದು ಅದಕ್ಕೆ ಪ್ರತಿಯಾಗಿ ಜಹಗೀರಿಯನ್ನು ನಿಮಗೆ ಒಪ್ಪಿಸುವನು. ಇದೇ ರೀತಿಯಲ್ಲಿ ಜಡವಾದ ಜ್ಞಾನವು ಸಾಕ್ಷಾತ್ತಾಗಿ ಮುಕ್ತಿಯೆಂಬ ಫಲವನ್ನು ಕೊಡಲಾರದು. ಪರಮಾತ್ಮನ ಅನುಗ್ರಹವೂ ಬೇಕು. ಅಪರೋಕ್ಷ ಜ್ಞಾನವೆಂದರೆ ಹೃದಯದಲ್ಲಿ ಪರಮಾತ್ಮನ ದರ್ಶನವೆಂದು ಅರ್ಥವು. ದರ್ಶನವಾದ ಮಾತ್ರಕ್ಕೇ ಮುಕ್ತಿ ಫಲವು ಅದೇ ಕ್ಷಣದಲ್ಲಿ ಬರಬೇಕೆಂಬ ನಿಯಮವಿಲ್ಲ. ಪ್ರಸನ್ನನಾದ ರಾಜನು ಕಾರಾಗೃಹಕ್ಕೆ ಪ್ರಾಪ್ತನಾದರೆ ಬಂಧವನ್ನು ಬಿಡಿಸುವುದು ನಿಶ್ಚಯವೆಂದು ಬಂದಿಯು ನಿಶ್ಚಯಿಸುವನು. ಆ ಕ್ಷಣದಲ್ಲೋ ಅಥವಾ ಹತ್ತು ದಿನಗಳ ಮೇಲೋ ಎಂಬುದು ಸಂಶಯವೇ. ಹೀಗೆಯೇ ದರ್ಶನ ಕೊಟ್ಟ ಪರಮಾತ್ಮನು ಇನ್ನೂ ಹೆಚ್ಚು ಭಕ್ತಿಯನ್ನು ಅಪೇಕ್ಷಿಸಿ ಸ್ವಲ್ಪ ಕಾಲ ವಿಳಂಬ ಮಾಡಿ ಮುಕ್ತಿ ಕೊಡುವನೆಂದು ಪ್ರಮಾಣಪ್ರಮಿತವಾಗಿರುವುದು. ನಮ್ಮ ಅಪರೋಕ್ಷ ಜ್ಞಾನ ಮಾತ್ರದಿಂದಲೇ ನಾವು ಮುಕ್ತಿ ಫಲವನ್ನು ಕೋರಿದರೆ ಜಹಗೀರುದಾರನಂತಿರುವ ಶ್ರೀ ವಿಷ್ಣುವು ಇನ್ನೂ ಸ್ವಲ್ಪ ಹೆಚ್ಚು ಭಕ್ತಿಯಿಂದ ತನ್ನ ಆರಾಧನವನ್ನು ಮಾಡಿದ ಮೇಲೆ ಜಹಗೀರಿನಂತಿರುವ ಮುಕ್ತಿಯನ್ನು ಕೊಡುವನೆಂದು ಹೇಳುವುದು ಲೋಕ ನ್ಯಾಯಾನುಗುಣವೇ ಆಗಿರುವುದು.

ಈ ರೀತಿಯಲ್ಲಿ ಜಗದ್ಬಂಧವು ಸತ್ಯವಾದುದರಿಂದಲೂ, ಮುಕ್ತಿಯೆಂಬ ಪದಾರ್ಥವು ಮತ್ತೊಬ್ಬ ಚೇತನನ ಮನಃಪ್ರಸಾದದಿಂದ ಪ್ರಾಪ್ತವಾಗತಕ್ಕ ಮಹಾ ಫಲವಾದುದರಿಂದಲೂ, ಜ್ಞಾನವು ಸಾಕ್ಷಾತ್ತಾಗಿ ಮತ್ತು ಸ್ವತಂತ್ರವಾಗಿ ಮುಕ್ತಿಯನ್ನು ಕೊಡಲಾರದೆಂದು ನಾವು ನಿರೂಪಿಸಿದೆವು. ಜ್ಞಾನಾಗ್ನಿಯು ಕರ್ಮವನ್ನು ದಹಿಸುವುದೆಂದು ಹೇಳಿದರೂ ಸಹ ಪೂರ್ವೋಕ್ತ ಬಾಧಗಳಿರುವುದರಿಂದ ಪ್ರಾರಬ್ಧ ಕರ್ಮಭಿನ್ನವಾದ ಸಕಲ ಕರ್ಮಗಳನ್ನೂ ಜ್ಞಾನದಿಂದ ಪ್ರಸನ್ನನಾದ ಈಶ್ವರನು ದಹಿಸುವನೆಂದು ಅರ್ಥ ಮಾಡಬೇಕು. **"ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ।"** ಎಂಬ ಶ್ರೀ ಕೃಷ್ಣನ ವಾಕ್ಯವೇ ಹೀಗೆ

ಅರ್ಥ ಮಾಡುವುದರಲ್ಲಿ ನಿಶ್ಚಾಯಕವಾಗಿದೆ. **"ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ||"** ಎಂಬ ಶ್ಲೋಕವೂ ಸಹ ಹೀಗೆ ಅರ್ಥ ಮಾಡುವುದಕ್ಕೆ ಸಹಾಯವಾಗಿರುತ್ತದೆ. ಬ್ರಹ್ಮಜ್ಞಾನವನ್ನು ಹೊಂದಿದ ಅನಂತರ "ಅಚಿರೇಣ" ಎಂದರೆ ಶೀಘ್ರದಲ್ಲಿಯೇ ಮುಕ್ತನಾಗುವನೆಂದರ್ಥವು. ಅನೇಕ ಕಲ್ಪಗಳ ಪರ್ಯಂತ ಸಂಸಾರದಲ್ಲಿ ಅವಸ್ಥಾನವನ್ನು ಹೊಂದದೆ, ಅಪರೋಕ್ಷಜನಿತ ಭಕ್ತಿಯಿಂದ ಪ್ರಸನ್ನನಾದ ಈಶ್ವರನ ಪರಮ ಪ್ರಸಾದದಿಂದ ಜ್ಞಾನಿಯು ಮುಕ್ತನಾಗುವನೆಂದರ್ಥವು. ಇದರಿಂದಲೇ "ನಾನ್ಯಃ ಪಂಥಾ ಅಯನಾಯ ವಿದ್ಯತೇ" ಎಂದರೆ ಬ್ರಹ್ಮಜ್ಞಾನದ ಹೊರತು ಮುಕ್ತಿಗೆ ಬೇರೆ ಉಪಾಯವಿಲ್ಲ ಎಂದು ಹೇಳುವ ಶ್ರುತಿಗೂ ಅರ್ಥವನ್ನು ಹೇಳಿದ ಹಾಗಾಯಿತು. ಮುಕ್ತನಾಗುವವನು ಬ್ರಹ್ಮಜ್ಞಾನವನ್ನು ಹೊಂದಿಯೇ ತೀರಬೇಕು ಎಂದು ಅರ್ಥವೇ ಹೊರತು ಬ್ರಹ್ಮಜ್ಞಾನಕ್ಕೂ ಮುಕ್ತಿಗೂ ಮಧ್ಯೇ ಹರಿಭಕ್ತಿಯೂ, ಈಶ್ವರಪ್ರಸಾದವೂ ಅಪೇಕ್ಷಿತವಲ್ಲವೆಂದು ಅಲ್ಲಿ ಹೇಳಿರುವುದಿಲ್ಲ. ಮತ್ತು "ಯಮೇವೈಷ ವೃಣುತೇ" ಇತ್ಯಾದಿ ಶ್ರುತಿಗಳಲ್ಲಿ ಮುಕ್ತಿಯು ಹರಿಪ್ರಸಾದದಿಂದಲೇ ಮುಖ್ಯವಾಗಿ ಲಭ್ಯವಾಗತಕ್ಕದ್ದೆಂದು ಹೇಳಿರುವುದು.

11. ಈ ವಿಷಯವು ಮುಕ್ತಿ ಸ್ವರೂಪ ಪರಾಮರ್ಶೆಯಿಂದಲೂ ನಿಶ್ಚಿತವಾಗುವುದು. ಮುಕ್ತಿಯು ಪರಬ್ರಹ್ಮನ ಪ್ರಾಪ್ತಿರೂಪವಾದುದೆಂದು ನಾವು ಹಿಂದೆಯೇ ನಿರೂಪಿಸಿರುತ್ತೇವೆ.* ಪರಬ್ರಹ್ಮನ ಪ್ರಸಾದವಿಲ್ಲದೆ ಪರಬ್ರಹ್ಮನನ್ನು ಹೊಂದುವುದು

---

* ಬ್ರಹ್ಮಪ್ರಾಪ್ತಿಯೇ ಮುಕ್ತಿಪದಾರ್ಥದೆಂದು "ಪರಂಬ್ರಹ್ಮ ಅಧಿಗಚ್ಛತಿ", "ಬ್ರಹ್ಮೈವತೇನ ಗಂತವ್ಯಂ" ಇತ್ಯಾದಿ ಅನೇಕ ಗೀತಾವಾಕ್ಯಗಳಿಂದ ಪ್ರಸಿದ್ಧವಾಗಿರುವುದು, (ಈಗಾಗಲೇ ಹಿಂದೆ ಪ್ರಥಮ ಭಾಗದಲ್ಲಿ ಇದು ವಿಶದವಾಗಿರುವುದು. ಅದ್ವೈತಮತದಲ್ಲಿ ಬ್ರಹ್ಮಪ್ರಾಪ್ತಿಯು ಮುಕ್ತಿಯಲ್ಲ. ಎಲ್ಲವೂ ಸುಳ್ಳೇ. ಉರ್ಕ್ಯುಹಾರ್ಟ್ ಪಂಡಿತನು ತನ್ನ ಉಪಪಾದನೆಯ ಸಾಮರ್ಥ್ಯದಿಂದಲೇ ಈ ಮತವನ್ನು ಧಿಕ್ಕರಿಸುತ್ತಾನೆ.—

Under such conditions, how is it possible to speak of a "departing" or going to Brahman ? Says Sankara... ... "The reaching of another place is out of the question." So with great earnestness Sankara argues that the proper interpretation of Sutra IV. 2. 13. is that the soul does not depart."

—W. S. Urquhart, M. A. D. Litt.

**ಅರ್ಥವು :—** "ಬ್ರಹ್ಮಾತಿರಿಕ್ತವಾಗಿ ಯಾವುದೂ ಇಲ್ಲದಿರುವುದರಿಂದ ಬ್ರಹ್ಮನನ್ನು ಕುರಿತು ಪ್ರಯಾಣ ಮಾಡುವುದೆಲ್ಲಿಂದ ಬಂತು ? ಬ್ರಹ್ಮಪ್ರಾಪ್ತಿಯು ಎಲ್ಲಿಂದ ಬಂತು ? ಶಂಕರಾಚಾರ್ಯರು ಹೇಳುತ್ತಾರೆ :— "ಸ್ಥಾನಾಂತರ ಪ್ರಾಪ್ತಿಯು ಇಲ್ಲವೇ ಇಲ್ಲ." ಹೀಗೆ ಹೇಳಿ ಬಹು ಅಭಿಸಂಧಿಪೂರ್ವಕ

ಹೇಗೆ ? ಮಹಾರಾಜರ ಇಚ್ಛೆಯಿಲ್ಲದಿದ್ದರೂ ಕೇವಲ ಟಿಕೀಟಿನ ಸಾಮರ್ಥ್ಯದಿಂದ ದರ್ಬಾರಿಗೆ ಹೋಗಲಾಗುವುದೇ ? ಟಿಕೀಟು ಕೊಡುವುದಕ್ಕೂ ಮಹಾರಾಜರ ಅನುಗ್ರಹವು ಬೇಕು. ಟಿಕೀಟು ಕೊಟ್ಟ ಅನಂತರ ಟಿಕೀಟು ಪಡೆದ ಅಧಿಕಾರಿಯು ನಮ್ಮ ದರ್ಬಾರಿಗೆ ಬಂದು ಸೇರಲಿ ಎಂಬ ಇಚ್ಛೆಯೂ ಮಧ್ಯೇ ಕ್ಷುದ್ರಗಳಿಂದ ವಿಚ್ಛಿನ್ನವಾಗದೇ ಜಾಗರೂಕವಾಗಿರಬೇಕು. ಹಾಗಿಲ್ಲದೆ ಹೋದರೆ, ಟಿಕೀಟು ಹೊಂದಿದವನೂ ಸಹ ಮಹಾರಾಜರ ಇಚ್ಛೆಗೆ ಬರದಿದ್ದರೆ ಅವನ ಸಂಕೇತ ಮಾತ್ರದಿಂದ ಬಾಗಿಲಿನಲ್ಲಿಯೇ ತಡೆಯಲ್ಪಡುವನು. ಹೀಗಿರುವದರಿಂದ ಜ್ಞಾನವು ಮೋಕ್ಷಕಾರಣವೆಂದು ಒಪ್ಪುವವರೂ ಸಹ ಮುಕ್ತಿಯು ಬ್ರಹ್ಮಪ್ರಾಪ್ತಿರೂಪವಾದುದರಿಂದ ಪರಬ್ರಹ್ಮನ ಪ್ರಸಾದವೂ ಅತ್ಯಾವಶ್ಯಕವೆಂದು ಒಪ್ಪಲೇಬೇಕು. ಅಂಥ ಪರಬ್ರಹ್ಮನು ತನ್ನ ಲೋಕಕ್ಕೆ ಬರಬಹುದೆಂಬ ಜ್ಞಾನರೂಪವಾದ ಟಿಕೀಟನ್ನು ಜ್ಞಾನಿಗೆ ದಯಪಾಲಿಸುವಾಗ ಇನ್ನೂ ಕೆಲವು ದಿನಗಳ ಪರ್ಯಂತ ನನ್ನ ಸಂರಾಧನವನ್ನು ಮಾಡಿ ಪೂರ್ಣ ಭಕ್ತನಾಗಿ ನನ್ನನ್ನು ಬಂದು ಸೇರು ಎಂದೇ ಅಪ್ಪಣೆ ಕೊಟ್ಟಿರುತ್ತಾನೆ. ಇದರಿಂದ ಮುಕ್ತಿಗೆ ಬ್ರಹ್ಮಪ್ರಸಾದವು ಮುಖ್ಯ ಕಾರಣವೆಂದೂ ಜ್ಞಾನಾದಿಗಳು ಇತರ ನಿಮಿತ್ತ ಕಾರಣಗಳೆಂದೂ ಸಿದ್ಧವಾಗುವುದು. ಸರಕಾರದಲ್ಲಿಯೂ ಕೂಡ ಅಸಿಸ್ಟೆಂಟ್ ಕಮೀಶನರ್ ಹುದ್ದೆಗೆ ಯೋಗ್ಯನೆಂದು ಪರೀಕ್ಷೆಯಲ್ಲಿ ನಿಶ್ಚಿತನಾದವನಿಗೂ ಸಹ ಎರಡು ವರ್ಷಗಳ ಪ್ರೊಬೇಷನ್ ಕಲಸವನ್ನು ಕೊಡುತ್ತಿರುವರಲ್ಲವೇ ? ಹೀಗೆ ಜ್ಞಾನಿಯೂ ಸ್ವಲ್ಪ ಕಾಲ ತನ್ನಿಂದ ದೃಷ್ಟನಾದ ಪರಮಾತ್ಮನನ್ನು ಉದ್ರಿಕ್ತವಾದ ಭಕ್ತಿಯಿಂದ ಆರಾಧನೆ ಮಾಡಿ, ಪೂರ್ಣ ಸಾಧನಸಂಪನ್ನನಾಗಿ, ಪರಮಾತ್ಮನ ಪರಮ ಪ್ರಸಾದಕ್ಕೆ ಪಾತ್ರನಾಗಿ ಮುಕ್ತನಾಗುವನೆಂಬುವದರಲ್ಲಿ ಬಾಧಕವೇನು ?

---

ವಾಗಿ. "ಚತುರ್ಥಾಧ್ಯಾಯದ 2 13 ನೆಯ ಸೂತ್ರಕ್ಕೆ ಜೀವನು ಲೋಕಾಂತರಕ್ಕೆ ಪ್ರಯಾಣ ಮಾಡುವುದೇ ಇಲ್ಲ ಎಂದು ಹೇಳುವುದೇ ಸರಿಯಾದ ಅರ್ಥವೆಂದು ಹೇಳಿರುತ್ತಾರೆ."

ಈ ರೀತಿ ಉಪಪಾದಿಸಿ ಈ ಪ್ರಕಾರವಾದ ಮೋಕ್ಷ ಸ್ವರೂಪಾದಿ ನಿರೂಪಣದಿಂದ ಮೋಕ್ಷ ಸಾಧನ ನಿರೂಪಣಾದಿ ಶಾಸ್ತ್ರಗಳಿಗೆ ಮೂಲದಲ್ಲಿಯೇ ಕುಠಾರವನ್ನು ಇಟ್ಟಂತೆ ಆಯಿತೆಂದು ಹೇಳಿರುತ್ತಾನೆ:—

"Emphasis upon the identity conception is peculiarly disastrous in respect of the claim of Ethics to unrestricted jurisdiction and paramount importance in human life"

—W. S. Urquhart, M. A. D. Litt.

**ಅರ್ಥವು :—** ಐಕ್ಯವಾದಕ್ಕೆ ಪ್ರಾಮುಖ್ಯತೆಯನ್ನು ಕೊಡೋಣವು ಮುಖ್ಯವಾಗಿ ಮೋಕ್ಷ ಸಾಧನ ಪ್ರತಿಪಾದಕ ಶಾಸ್ತ್ರಕ್ಕೆ ವಿನಾಶಕವಾಗಿರುತ್ತದೆ. ಇದರಿಂದ ಸಾಧನ ಶಾಸ್ತ್ರಕ್ಕೆ ಇರುವ ಮಾನುಷ ವ್ಯವಹಾರದಲ್ಲಿ ಧರ್ಮಾಧರ್ಮ ನಿರ್ಣಯವನ್ನು ಮಾಡುವ ಅಪರಿಮಿತವಾದ ಹಕ್ಕನ್ನೂ ಪ್ರಾಶಸ್ತ್ಯವನ್ನೂ ನಾಶ ಮಾಡಿದಂತಾಯಿತು.

12. ಶ್ರೀ ಕೃಷ್ಣನು ಜ್ಞಾನಿಯಿಂದ ಆಚರಿಸಲ್ಪಡಬೇಕಾದ ಕೆಲವು ವಿಶೇಷ ಧರ್ಮಗಳನ್ನೂ ಸಹ ವಿಧಿಸಿರುತ್ತಾನೆ :—

**(1) ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।**
**ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥**
—(3. 20.)

(ಜ್ಞಾನಿಗಳಾದ) ಜನಕಾದಿಗಳೂ ಕೂಡ (ಜ್ಞಾನೋತ್ತರ ಕಾಲದಲ್ಲಿ ಅನುಷ್ಠಾನ ಮಾಡಿದ) ಕರ್ಮದಿಂದ ಪೂರ್ಣ ಸಿದ್ಧಿಯನ್ನು ಹೊಂದಿದರು. ಎಲೈ ಅರ್ಜುನನೇ ! ಲೋಕಶಿಕ್ಷಣರೂಪವಾದ ಪ್ರಯೋಜನವೂ ಇರುವುದೆಂದು ತಿಳಿದು ನೀನು ಕರ್ಮವನ್ನು ಆಚರಿಸಬೇಕು.

**(2) ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।**
**ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕಸಂಗ್ರಹಂ ॥**
**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಂ ।**
**ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್ ॥**
—(3. 25–26.)

ಅಜ್ಞಾನಿಗಳು ಕರ್ಮಫಲದಲ್ಲಿ ಸ್ನೇಹದಿಂದ ಯುಕ್ತರಾಗಿ ಕರ್ಮಾನುಷ್ಠಾನವನ್ನು ಮಾಡುತ್ತಾರೆ. ಜ್ಞಾನಿಯು ಕರ್ಮಫಲಾಪೇಕ್ಷಾರಹಿತನಾಗಿ ಲೋಕಶಿಕ್ಷಣವನ್ನು ಇಚ್ಛಿಸಿ ಸರ್ವನಿತ್ಯನೈಮಿತ್ತಿಕ ಕರ್ಮಗಳನ್ನೂ ಕೂಡ ಅನುಷ್ಠಾನ ಮಾಡಬೇಕು. ಜ್ಞಾನಿಯು ತಾನು ನಿತ್ಯಕರ್ಮ ಪರಿತ್ಯಾಗವನ್ನು ಮಾಡಿ ಅಜ್ಞಾನಿಗಳ ಮನಸ್ಸಿನಲ್ಲಿ "ಕರ್ಮದಿಂದೇನು ಪ್ರಯೋಜನ" ಎಂಬ ವಿಪರೀತ ಬುದ್ಧಿಯನ್ನು ಹುಟ್ಟಿಸಬಾರದು; ಮತ್ತು ಪರಮಾತ್ಮನಲ್ಲಿ ಮನಸ್ಸನ್ನಿಟ್ಟು ಭಗವದರ್ಪಣಾದಿ ಯೋಗಸಹಿತನಾಗಿ ಸಕಲಕರ್ಮಗಳನ್ನು ಸಮೀಚೀನವಾಗಿ ಆಚರಿಸಬೇಕು.

**(3) ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥**
—(4–34.)

ತತ್ತ್ವ (ಬ್ರಹ್ಮ)ದರ್ಶಿಗಳಾದ ಅಪರೋಕ್ಷ ಜ್ಞಾನಿಗಳು ನಿನಗೆ ಜ್ಞಾತವ್ಯ ತತ್ತ್ವವನ್ನು ಉಪದೇಶ ಮಾಡುತ್ತಾರೆ.

**(4) ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥**
—(6. 3.)

ಯೋಗೋಪಾಯದ ಸಿದ್ಧಿಯನ್ನು ಹೊಂದಿದ ಬ್ರಹ್ಮಜ್ಞಾನಿಗೆ ಶಮವು ಎಂದರೆ, ನಿರಂತರ ಭಗವಂತನಲ್ಲಿ ಬುದ್ಧಿಯನ್ನಿಡೋಣವು ಎಂದರೆ ನಿತ್ಯಭಗವದ್ಧ್ಯಾನವು ಮೋಕ್ಷ ಸುಖಕ್ಕೆ ಕಾರಣವೆನ್ನಿಸುತ್ತದೆ.

ಈ ರೀತಿಯಾಗಿ ಜ್ಞಾನಿಯೂ ಲೋಕಶಿಕ್ಷಾರ್ಥವಾಗಿ ಸ್ಮೃತ್ಯುಕ್ತಕರ್ಮಗಳನ್ನು ಆಚರಿಸುತ್ತಾ, ಶರಣಾಗತರಾದವರಿಗೆ ಸಂಸಾರತಾರಕವಾದ ತತ್ತ್ವವನ್ನುಪದೇಶಿಸುತ್ತಾ, ಧ್ಯಾನದಲ್ಲಿ ವಿಶೇಷವಾಗಿ ಆಸಕ್ತನಾಗಿ ಇರಬೇಕೆಂದು ಶ್ರೀ ಕೃಷ್ಣನು ಹೇಳಿರುತ್ತಾನೆ. ಜ್ಞಾನದಿಂದಲೇ ತತ್ಕಾಲದಲ್ಲಿ ಸಾಕ್ಷಾನ್ಮೋಕ್ಷವು ಬರುವುದಾದರೆ ಈ ವಿಧಾನವು ವ್ಯರ್ಥವಾಗುವುದು. ಆದುದರಿಂದ ಭಗವಂತನ ಪ್ರಸಾದವಿಶೇಷಕ್ಕೆ ಕಾರಣವಾದ ಈ ಆಚರಣೆಗಳಿಂದ ಸಹಿತನಾಗಿ, ನಿಶ್ಚಿತವಾದ ಮುಕ್ತಿಫಲವುಳ್ಳವನಾಗಿ ಕೆಲವು ಕಾಲ ಜ್ಞಾನಿಯೂ ಸಂಸಾರದಲ್ಲಿರುವನೆಂಬ ಸಿದ್ಧವಾಗುವುದು. ಆದುದರಿಂದ **" ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ । "** ಇತ್ಯಾದಿ ಗೀತಾವಾಕ್ಯಗಳು ನಿರವಕಾಶವಾಗಿ ಮುಕ್ತಿಗೆ ಭಗವತ್ಪ್ರಸಾದವೇ ಪ್ರಧಾನ ಕಾರಣವೆಂದು ಬೋಧಿಸುತ್ತವೆ ಎಂಬುದು ಶಾಸ್ತ್ರಸಮ್ಮತವಾದ ನಿರ್ಣಯವು.

ಈ ರೀತಿಯಾಗಿ 1. ಜ್ಞಾನವೇ ಮೊದಲಾದ ಸಕಲ ಪದಾರ್ಥಗಳ ಸ್ವಾಭಾವಿಕ ಧರ್ಮಕ್ಕೂ ಪರಮಾತ್ಮನೇ ನಿಯಾಮಕನಾಗಿರುವುದರಿಂದಲೂ, 2. ಜ್ಞಾನಾನಂತರದಲ್ಲಿ ಜೀವನ್ಮುಕ್ತನು ಶ್ರೀಹರಿಯ ಪೂರ್ಣ ಪ್ರಸಾದಾರ್ಥವಾಗಿ ಉದ್ರಿಕ್ತ ಭಕ್ತಿಯಿಂದ ಭಗವದಾರಾಧನದಲ್ಲಿ ತತ್ಪರನಾಗಿ ಸಂಸಾರದಲ್ಲಿರುವುದು ಉಚಿತವಾಗಿರುವುದರಿಂದಲೂ, 3. ಅಪರೋಕ್ಷ ಜ್ಞಾನಿಗಳಾದ ಬ್ರಹ್ಮಾದಿ ದೇವತೆಗಳು ಇನ್ನೂ ಮುಕ್ತರಾಗದೆ, ಮುಕ್ತಿಯನ್ನು ನಿರೀಕ್ಷಿಸುತ್ತಿರುವುದರಿಂದಲೂ, 4. ವಿಶ್ವರೂಪ ದರ್ಶನ ಮಾಡಿ ಬ್ರಹ್ಮಜ್ಞಾನಿಯಾದ ಅರ್ಜುನನೂ ಸಹ ಇನ್ನೂ ಯುದ್ಧದಲ್ಲಿ ಆಸಕ್ತನಾಗಿರುವುದರಿಂದಲೂ, 5. ಶುಕ್ತಿಜ್ಞಾನದಿಂದ ಅಧ್ಯಸ್ತರಜತವು ಅದೃಶ್ಯವಾಗುವಂತೆ ಜಗದ್ಬಂಧವು ಕೇವಲ ಬ್ರಹ್ಮಜ್ಞಾನದಿಂದ ಮಾಯವಾಗದೆ ಸತ್ಯವಾಗಿ ಇರುವುದರಿಂದಲೂ, 6. ಚೇತನಾಪೇಕ್ಷೆಯಿಲ್ಲದೆ ಜ್ಞಾನವು **ಸಾಕ್ಷಾತ್** ವೈಕುಂಠಾದಿ ಲೋಕವಾಸರೂಪವಾದ ಮುಕ್ತಿಯನ್ನು ಕೊಡುವುದು ಅಸಂಭಾವಿತವಾದುದರಿಂದಲೂ, 7. ಮುಕ್ತಿಯು ಪರಬ್ರಹ್ಮನ ಪ್ರಾಪ್ತಿರೂಪವಾದುದರಿಂದಲೂ, ಪರಬ್ರಹ್ಮನ ಪ್ರಸಾದವೇ ಮುಕ್ತಿಗೆ ಮುಖ್ಯ ಕಾರಣವು. ಜ್ಞಾನಾದಿಗಳು ಸ್ವತಂತ್ರನಾದ ಆತನ ಪ್ರಸಾದಾಭಿ ವ್ಯಕ್ತಿಗೆ ನಿಮಿತ್ತಗಳೆಂದು ಅಂಗೀಕರಿಸಬೇಕು. 8. ಲೋಕಸಂಗ್ರಹಾರ್ಥವಾಗಿ ಕರ್ಮಕರಣ, ಧ್ಯಾನ, ಪ್ರವಚನಾದಿ ಮಹಾ ಸಾಧನೆಗಳನ್ನು ಶ್ರೀ ಕೃಷ್ಣನು ಜ್ಞಾನಿಗೂ ಸಹ ವಿಧಿಸಿರುವುದರಿಂದ ಆತನ ಪರಿಪೂರ್ಣವಾದ ಮುಕ್ತಿ ಹೇತುಭೂತವಾದ ಪ್ರಸಾದವು ಅಪರೋಕ್ಷ ಜ್ಞಾನಾನಂತರದಲ್ಲಿ ಮಾಡಿದ ಭಕ್ತನ ಸೇವೆಯಿಂದಲೇ ಬರುವುದೇ ಹೊರತು ಜ್ಞಾನೋತ್ಪತ್ತ್ಯುತ್ತರಕ್ಷಣದಲ್ಲಿ ಮುಕ್ತಿಯಾಗುವುದು ಎಂಬುದು ಶ್ರೀ ಕೃಷ್ಣನಿಗೆ ಸರ್ವಥಾ ಸಮ್ಮತವಲ್ಲ. ಆದುದರಿಂದ **" ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ । "** ಇತ್ಯಾದಿ ಶ್ರೀ ಕೃಷ್ಣನ ವಾಕ್ಯಗಳು ನಿರವಕಾಶವಾಗಿ ಮುಕ್ತಿಗೆ ಭಗವತ್ಪ್ರಸಾದವೇ ಪ್ರಧಾನ ಕಾರಣವೆಂದು ಬೋಧಿಸುತ್ತವೆ ಎಂಬುದು ನಿರ್ಣೀತವಾದ ಶಾಸ್ತ್ರಾರ್ಥವು.

ಅದ್ವೈತಮತದ ರೀತ್ಯಾ ಈ ಪ್ರಕರಣಾರಂಭವೇ ಅನುಚಿತವು. ಅದ್ವೈತ

ಮತದಲ್ಲಿ ಬ್ರಹ್ಮೈಕ್ಯರೂಪವಾದ ಮುಕ್ತಿಯು "ಬ್ರಹ್ಮಾತ್ಮಕವೇವ" ಎಂದು ಶಂಕರಾಚಾರ್ಯರು ಹೇಳಿರುತ್ತಾರೆ. ಹಾಗಾದ ಮೇಲೆ ಬ್ರಹ್ಮನು ನಿತ್ಯೈಕ ಸ್ವರೂಪನಾದಂತೆ ಮುಕ್ತಿಯು ಹಿಂದೂ ಇದ್ದಿತು, ಈಗಲೂ ಇರುವುದು, ಮುಂದೂ ಇರುವುದು ಎಂದು ಅರ್ಥವಾಗುವುದು. ಮುಕ್ತಿಯು ಬ್ರಹ್ಮಪ್ರಸಾದಾದಿ ಸಾಧನ ಗಳಿಂದ ಪ್ರಾಪ್ಯವಾದ ಒಂದು ಅತಿಶಯವಲ್ಲ ಎಂದು ಸಿದ್ಧವಾಯಿತು. ಆದುದ ರಿಂದ ಈ ವಿವಕ್ಷೆಯಿಂದ ಮೋಕ್ಷಸಾಧನ ನಿರೂಪಣೆಯು ಅಸಂಗತವಾದ ಕಥನವೇ.

ಮುಕ್ತಿಯು ಬ್ರಹ್ಮಭಿನ್ನವಾದ ವಸ್ತುವಾದರೆ ಅದು ಮಿಥ್ಯಾ ಎಂದರೆ ಹಿಂದೂ ಇರಲಿಲ್ಲ, ಈಗಲೂ ಇರಲಿಲ್ಲ, ಮುಂದೂ ಇರುವುದಿಲ್ಲ ಎಂದು ಅದ್ವೈತಸಿದ್ಧಾಂತವು. ಮಿಥ್ಯಾಭೂತವಾದ ಮುಕ್ತಿಗೋಸ್ಕರ ಸಾಧನವನ್ನು ಏತಕ್ಕೆ ಆಚರಿಸಬೇಕು? ತ್ರಿಕಾಲಾವೃತ್ತಿಯಾದ ಪದಾರ್ಥದ ಉದ್ದಿಶ್ಯ ಗುರುತಮವಾದ ಸಾಧನವನ್ನು ಭ್ರಾಂತರು ವಿಧಿಸಬಹುದು. ಪ್ರಾಮಾಣಿಕವಾದ ಶಾಸ್ತ್ರದಲ್ಲಿ ಮೋಕ್ಷಸಾಧನವೆಂದು ನಿರೂಪಣೆಯನ್ನು ಮಾಡುವುದು ಅತ್ಯಂತ ಹಾಸ್ಯಾಸ್ಪದವಾದ ವ್ಯಾಪಾರವೆನ್ನಿಸು ವುದು. ಈ ವಿವಕ್ಷೆಯಿಂದಲೂ ಅದ್ವೈತಮತದ ರೀತ್ಯಾ ಸಾಧನ ವಿಚಾರೋಪ ಕ್ರಮವು ಉನ್ಮತ್ತಪ್ರಲಾಪವೇ ಆಗುವುದು.*

ಶ್ರೀ ಕೃಷ್ಣನಾದರೋ ಅಭಿಪ್ರಾಯಪೂರ್ವಕವಾಗಿ ಮೋಕ್ಷಸಾಧನೆಗಳನ್ನು ಕ್ರಮವಾಗಿ ಪುನಃ ಪುನಃ ನಿರೂಪಿಸಿರುವನು. ಆದುದರಿಂದ ಶ್ರೀ ಕೃಷ್ಣನು ಅದ್ವೈತ ದ್ವೇಷಿಯೆಂದು ನಿಶ್ಚಯಿಸಿ ಸರ್ವ ಕೃಷ್ಣ ಭಕ್ತರೂ ಆತನನ್ನು ಸರ್ವೋತ್ತಮತ್ವ ಜ್ಞಾನಪೂರ್ವಕವಾಗಿ ಸೇವಿಸಿ, ಸಾಕ್ಷನ್ಮೋಕ್ಷ ಸಾಧಕವಾದ ಆತನ ಪ್ರಸಾದಾತಿ ಶಯಕ್ಕೆ ಪಾತ್ರರಾಗಬೇಕೆಂದು ನಿರೂಪಿಸಿರುತ್ತೇವೆ.

---

* ಶ್ರೀಪಾದಂಗಳವರ ಈ ಅಭಿಪ್ರಾಯವು ಪ್ರಾಯೇಣ ಸಕಲ ಆಂಗ್ಲೇಯರಿಂದಲೂ ಅಂಗೀ ಕರಿಸಲ್ಪಟ್ಟಿರುವುದು. ಬಹು ಕೀರ್ತಿಸಂಪನ್ನನಾದ ಮ್ಯಾಕ್ಸಮುಲ್ಲರ ಪಂಡಿತನು ಈ ರೀತಿ ಬರೆ ದಿರುತ್ತಾನೆ :—

"It must be clear to every one who has once mastered the framework of the true Vedantha Philosophy as I have tried to explain it, that there is but little room in it for Psychology Cosmology, nay even for Ethics." —F. Max Muller, K. M.

**ಅರ್ಥವು:**— ನನ್ನಿಂದ ಉಪಪಾದಿತವಾಗಿರುವ ರೀತಿಯಲ್ಲಿ ಅದ್ವೈತತತ್ತ್ವವನ್ನು ಅಭ್ಯಾಸ ಮಾಡಿದವರಿಗೆ ಈ ವಿಷಯವು ವಿಶದವಾಗಿರಬೇಕು; ಏನೆಂದರೆ ಅದ್ವೈತತತ್ವದಲ್ಲಿ ಪ್ರಮಾಣ

ಶ್ರೀಮತ್ಸತ್ಯಧ್ಯಾನತೀರ್ಥರ ಗೀತೋಪದೇಶಗಳು II

## 2. ಎರಡನೆಯ ಅಂಶವು

### ಅಪರೋಕ್ಷಜ್ಞಾನಾನಂತರ ಕೃತವಾದ ಭಕ್ತಿಗೆ ಸಾಕ್ಷಾತ್ ಮೋಕ್ಷಸಾಧನತ್ವಸಮರ್ಥನವು.

ಶ್ರೀ ಶ್ರೀಗಳವರು— **1. " ಅಮಲಾ ಭಕ್ತಿಶ್ಚ ತತ್ಸಾಧನಂ "** ಎಂಬ ಶ್ರೀ ವ್ಯಾಸರಾಯರ ವಾಕ್ಯದಲ್ಲಿ ಕೆಲವು ಸೂಕ್ಷ್ಮವಾದ ಶಾಸ್ತ್ರಾರ್ಥಗಳು ಅಡಿಗಿರುವುವು.

ಯಥಾಹಿ :— ವಸ್ತುತಃ ಬ್ರಹ್ಮಾಪರೋಕ್ಷ ಜ್ಞಾನವೇ ಮೋಕ್ಷ ಕಾರಣವಾದ ಶ್ರೀ ಹರಿಪ್ರಸಾದಕ್ಕೆ ಮುಖ್ಯ ಸಾಧನವು. ಅಪರೋಕ್ಷ ಜ್ಞಾನಾನಂತರದಲ್ಲಿ ಜ್ಞಾನಿಯು ಭಕ್ತಿಯನ್ನು ಮಾಡದಿದ್ದರೂ ಮುಕ್ತನಾಗುವುದು ನಿಶ್ಚಯವು. ಶ್ರೀ ಕೃಷ್ಣನು ಹೇಳುತ್ತಾನೆ :—

**(1) ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ ।**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥**
**—(13. 24.)**

---

ಶಾಸ್ತ್ರಕ್ಕೂ (ಮನಃಶಾಸ್ತ್ರಕ್ಕೂ), ಸೃಷ್ಟಿಯೇ ಮೊದಲಾದ ಸಕಲ ಪ್ರಪಂಚ ವಿಷಯವನ್ನು ಪ್ರತಿಪಾದಿಸುವ ಶಾಸ್ತ್ರಕ್ಕೂ ಮೋಕ್ಷ ಸಾಧನವನ್ನು ನಿರೂಪಿಸುವ ಶಾಸ್ತ್ರಕ್ಕೂ ಸ್ವಲ್ಪವೂ ಅವಕಾಶವಿರುವುದಿಲ್ಲ.

ಘನತೆ ಹೊಂದಿದ ಕೀರ್ತಿಕರ್ ಪಂಡಿತನು ಹೀಗೆಯೇ ಹೇಳಿರುತ್ತಾನೆ. ಆತನು ಮುಕ್ತಿಯೇ ಮುಂತಾದ ಸಕಲ ಪ್ರಪಂಚವೂ ಮಿಥ್ಯಾ ಎಂಬ ಉಪಪಾದನೆಯ ಮೇಲೆ ತನ್ನ ಅಭಿಪ್ರಾಯವನ್ನು ಬರೆಯುತ್ತಾನೆ :—

With reference to the world of Ethical action " Of what value is a toy-elephant to one who understands that it is only a toy." —Kirtikar (106)

**ಅರ್ಥವು :—** ಮೋಕ್ಷಸಾಧನಾನುಷ್ಠಾನಾವಶ್ಯಕತೆಯನ್ನು ವಿಚಾರಿಸಿದರೆ, "ಆನೆ ಗೊಂಬೆಯ ವಿಷಯದಲ್ಲಿ ಇದು ಆಟದ ಆನೆಯು ಎಂದು ತಿಳಿದವನಿಗೆ ಆ ಆನೆಗೊಂಬೆಯು ಏನು ಬೆಲೆಗೆ ತಾನೇ ಬರುವುದು ? " ಸಕಲ ಮೋಕ್ಷಸಾಧನ ಪ್ರಯತ್ನಗಳೂ ಜಗತ್ತು ಮಿಥ್ಯಾ ಎಂದು ತಿಳಿದವರಿಗೆ ವ್ಯರ್ಥವೆಂದು ಭಾವವು.

ಸೂಕ್ಷ್ಮ ವಿಚಾರಶೀಲನಾದ ಉರ್ಕುಹಾರ್ಟ್ ಸಾಹೇಬನು ಅದ್ವೈತ ಮತದ ರೀತ್ಯಾ ಮೋಕ್ಷ ಸಾಧನ ನಿರೂಪಣೆಗೆ ಅವಕಾಶವಿಲ್ಲವೆಂದೂ ಬಹಳ ವಿಶದವಾಗಿ ಬರೆದಿರುತ್ತಾನೆ :—

ಪುರುಷನನ್ನೂ, ಗುಣಗಳಿಂದ ಸಹಿತವಾದ ಪ್ರಕೃತಿಯನ್ನೂ ಯಾವ ಅಧಿಕಾರಿಯು ತಿಳಿಯುತ್ತಾನೆಯೋ ಅಂಥ ಬ್ರಹ್ಮಜ್ಞಾನಿಯು ಪ್ರಮಾದಾದಿಗಳಿಂದ ನಿಷಿದ್ಧಕರ್ಮಗಳನ್ನು ಆಚರಿಸಿದರೂ ಅವನು ಪುನರ್ಜನ್ಮವನ್ನು ಹೊಂದುವುದಿಲ್ಲ. ಅವನು ಮುಕ್ತನಾಗಿಯೇ ಆಗುತ್ತಾನೆಂದರ್ಥವು.

(2) **ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ।**
**ಹತ್ವಾಪಿ ಸ ಇಮಾನ್ ಲೋಕಾನ್ ನ ಹಂತಿ ನ ನಿಬಧ್ಯತೇ ॥**
—(18. 17

ಯಾವ ಅಧಿಕಾರಿಗೆ ನಾನೇ ಸ್ವತಂತ್ರನೆಂಬ ಅಭಿಮಾನವಿಲ್ಲವೋ, ಯಾವಾತನ ಬುದ್ಧಿಯು ಫಲಸ್ನೇಹಾದಿಗಳಿಂದ ಲಿಪ್ತವಾಗುವುದಿಲ್ಲವೋ, ಅಂಥ ಜ್ಞಾನಿಯು ಈ ಲೋಕಗಳನ್ನು ನಾಶ ಮಾಡಿದರೂ ಅವನು ಸಂಸಾರದಲ್ಲಿ ಬದ್ಧನಾಗುವುದಿಲ್ಲ. ಜ್ಞಾನಿಯು ಮುಕ್ತನಾಗಿಯೇ ಆಗುತ್ತಾನೆಂದು ಭಾವವು.

ಈ ವಾಕ್ಯಗಳಿಂದ ಅಪರೋಕ್ಷಜ್ಞಾನಿಯು ಸ್ವೇಚ್ಛಾನಿಯುತನಾಗಿದ್ದರೂ ಕೂಡ ಆತನಿಗೆ ತಪ್ಪದೆ ಮೋಕ್ಷವು ಆಗುವುದು ಎಂದು ಸಿದ್ಧವಾಗುವುದು. ಆದುದರಿಂದ ಅನ್ವಯವ್ಯತಿರೇಕಗಳಿಂದ ಮುಕ್ತಿಗೆ ಪ್ರಯೋಜಕವಾದ ಧರ್ಮಗಳಲ್ಲಿ ಬ್ರಹ್ಮಾಪರೋಕ್ಷ ಜ್ಞಾನವು ಮುಖ್ಯ ಕಾರಣವೆಂದು ನಿಶ್ಚಿತವಾಗುವುದು.

**ಪ್ರಶ್ನೆ**— ಹಾಗಿದ್ದರೆ "ಭಕ್ತಿಶ್ಚ ತತ್ಸಾಧನಂ" ಎಂದು ವ್ಯಾಸರಾಯರು ಏತಕ್ಕೆ ಹೇಳಿದರು ?

---

"Our main problem may be put in the form of an enquiry whether the Ethical life can be maintained in its fulness on the basis of that doctrine of abstract and unmodified identity between ourselves and the characterless absolute, which would seem to be the resultant of Sankara's interpretation of the Vedanta ? ... ... ... ... ... ... ... ...

"Undoubtedly, the strict Vendantist would show a tendency to unswer in the negative this question as to whether Ethics is compatible with a doctrine of abstract identity ... ..."

—W. S. Urquhart, M. A. D. Litt.

**ಅರ್ಥವು :—** ನಾವು ನಮ್ಮ ಉಪಪಾದನೆಯನ್ನು ಒಂದು ಪ್ರಶ್ನರೂಪವಾಗಿ ನಿರೂಪಿಸಬಹುದು. ನಮಗೂ ( ಜೀವನಿಗೂ ) ಶಂಕರಾಚಾರ್ಯರಿಗೆ ಭಾಷ್ಯಾಭಿಪ್ರೇತವಾದ ನಿರ್ಗುಣ ಬ್ರಹ್ಮನಿಗೂ ನಿರ್ಧರ್ಮಕವಾದ ಐಕ್ಯವನ್ನು ಪ್ರತಿಪಾದನೆ ಮಾಡುವ ಅದ್ವೈತ ತತ್ವದಲ್ಲಿ ಮೋಕ್ಷ ಸಾಧನ ನಿರೂಪಣೆಗೆ ಅವಕಾಶವು ಇರುವುದೇ ? ... ... ... ನಿಸ್ಸಂಶಯವಾಗಿಯೂ, ಅದ್ವೈತವಾದದ

ಶ್ರೀ ಶ್ರೀಗಳವರು— ಅದನ್ನೇ ನಿರೂಪಿಸುತ್ತಿದ್ದೇವೆ. ಎರಡು ಮೂರು ಕಾರಣ ಗಳುಂಟು. 1. ಮುಕ್ತಿಯು ಬಂಧನಿವೃತ್ತಿಪೂರ್ವಕವಾದ ಸ್ವರೂಪಾನಂದಾ ವಿರ್ಭಾವವೆಂದು ನಾವು ಹೇಳಿರುತ್ತೇವೆ. ಆದರೆ ಮುಕ್ತಿಯಲ್ಲಿ ಪರಮಾತ್ಮನ ಪ್ರಸಾದ ವಿಶೇಷದಿಂದ ಪ್ರಾಪ್ತವಾದ ಆನಂದದ ಉನ್ಮಾಹವೂ ಅನೇಕ ಜೀವರು ಗಳಿಗೆ ಬರುತ್ತದೆ. ಈ ಆನಂದಾತಿಶಯದಿಂದ ಸಹಿತವಾದ ಸ್ವರೂಪಾನಂದಾ ವಿರ್ಭಾವರೂಪವಾದ ಮುಕ್ತಿಯು ಕೇವಲ ಬ್ರಹ್ಮಾಪರೋಕ್ಷ ಜ್ಞಾನದಿಂದ ಬರ ಲಾರದು. ಮುಕ್ತಿಯಲ್ಲಿರುವ ಸ್ವರೂಪಾನಂದಾವಿರ್ಭಾವಕ್ಕೆ ಬ್ರಹ್ಮಾಪರೋಕ್ಷ ಜ್ಞಾನವೂ, ಆನಂದೋನ್ಮಾಹಕ್ಕೆ ಅಪರೋಕ್ಷ ಜ್ಞಾನವಾದ ಅನಂತರ ಮಾಡಿದ ಭಕ್ತ್ಯತಿಶಯವೂ, ಧ್ಯಾನ ಪ್ರವಚನಾದಿ ವಿಶೇಷ ಸಾಧನೆಗಳೂ ಕಾರಣವಾಗುವುವು. ಇಂಥ ಆನಂದೋನ್ಮಾಹದಿಂದ ಸಹಿತವಾದ ವಿಶಿಷ್ಟ ಮುಕ್ತಿಗೆ "ಭಕ್ತಿಶ್ಚ ಸಾಧನಂ" ಅಪರೋಕ್ಷ ಜ್ಞಾನದಿಂದ ಸಹಿತವಾಗಿ ಮಾಡಿದ ವಿಮಲ ಭಕ್ತಿಯೇ ಕಾರಣವು ಎಂದು ವ್ಯಾಸರಾಜರ ತಾತ್ಪರ್ಯವು. "ಮುಕ್ತಿರ್ನೈಜ ಸುಖಾನುಭೂತಿಃ" ಎಂಬ ಶ್ಲೋಕ ಭಾಗವೇ ಈ ಸೂಕ್ಷ್ಮವನ್ನು ತಿಳಿಸಿ ಕೊಡುವುದು. ನೈಜಸುಖದ ಅನು ಭವವು ಮುಕ್ತಿಯು ಎಂದು ಒಂದರ್ಥವು. ನೈಜಸುಖಕ್ಕೆ ಅನುಸರಿಸಿ ಅಧಿಕವಾಗಿ ಬಂದ ಐಶ್ವರ್ಯವು (ಆನಂದಾತಿಶಯವು) ಮುಕ್ತಿಯು ಎಂದು ಮತ್ತೊಂದರ್ಥವು. ಅಂತೂ ಸ್ವರೂಪಾನಂದಾವಿರ್ಭಾವ ಮತ್ತು ಆನಂದಾತಿಶಯ ಇವೆರಡರಿಂದ ಸಹಿತ ವಾದ ವಿಶಿಷ್ಟ ಮುಕ್ತಿಗೆ ಜ್ಞಾನೋತ್ತರಕಾಲೀನವಾದ ಭಕ್ತಿಯು ಸಾಧನವೆಂದು ಹೇಳಿದುದು ಯಥಾರ್ಥವೇ.

---

ರೀತಿಯಿಂದ ಮೋಕ್ಷಸಾಧನಾನುಷ್ಠಾನಕ್ಕೆ ಅನುಗುಣ್ಯವು ಇರುವುದೇ ? ಎಂಬ ಪ್ರಶ್ನೆಗೆ ಸರಿಯಾದ ಅದ್ವೈತ ವೇದಾಂತಿಯು 'ಇಲ್ಲ' ಎಂದೇ ಉತ್ತರ ಕೊಡುವುದಕ್ಕೆ ಮನಃಪ್ರಾವಣ್ಯವನ್ನು ತೋರಿಸು ವನು.

ಇದೇ ಗ್ರಂಥಕರ್ತನು ಮತ್ತೊಂದು ಕಡೆಯಲ್ಲಿ ನಿರ್ಗುಣ ಬ್ರಹ್ಮವಾದದಲ್ಲಿ ಮಾನುಷಸಾಧನಾದಿ ಪ್ರತಿಪಾದನೆಗೆ ಅವಕಾಶವಿರುವುದಿಲ್ಲವೆಂದು ಹೆಚ್ಚು ಸ್ಪಷ್ಟವಾಗಿ ಬರೆದಿರುತ್ತಾನೆ :—

"Sankara leaves unresolved the dualism which the doctrine suggests as to the relation between God and the World. He does not by transforming the doctrine bring the world into organic relation with the eternal nature of God, but turns away from the difficulty as from an unreal problem of an unreal world."

—W. S. Urquhart, M. A. D. Litt.

**ಅರ್ಥವು :—** ಶಂಕರಾಚಾರ್ಯರು ತಮ್ಮ ಅದ್ವೈತವಾದದ ರೀತ್ಯಾ ಪರಬ್ರಹ್ಮನಿಗೂ ಪ್ರಪಂಚಕ್ಕೂ ಯಾವ ಸಂಬಂಧವೆಂಬ ಪ್ರಶ್ನೆಗೆ ಉತ್ತರವನ್ನು ಹೇಳದೆ, ಯೋಜನೆ ಮಾಡದೆಯೇ

2. ಕಿಂಚ ಕೆಲವು ಚೇತನರು ಅಪರೋಕ್ಷ ಜ್ಞಾನಾನಂತರದಲ್ಲಿ ದುರಾಚರಣೆಗಳನ್ನು ಮಾಡಿದರೆ ಅವರುಗಳ ಸ್ವರೂಪಾನಂದವೂ ಸಹ ಸಮಗ್ರವಾಗಿ ಪರಮಾತ್ಮನಿಂದ ಪ್ರಕಟಿಸಲ್ಪಡುವುದಿಲ್ಲ. ಪರಮಾತ್ಮನು ತನ್ನ ಇಚ್ಛಾವರಣವನ್ನು ಅನಾದ್ಯನಂತ ಕಾಲಕ್ಕೂ ತೆಗೆಯುವುದೇ ಇಲ್ಲ. ಹೀಗಿದ್ದರೂ ದುಃಖ ನಿವೃತ್ತಿಯಿಂದ ಸಹಿತವಾಗಿ ಕಿಂಚಿದೂನವಾಗಿ ಆವಿರ್ಭೂತವಾದ ತಮ್ಮ ಸ್ವರೂಪ ಸುಖವನ್ನು ಅನುಭವಿಸುತ್ತಾ ನಿರ್ಮಲಚಿತ್ತರಾಗಿಯೇ ಇರುವರು. ಆದುದರಿಂದ ಕೆಲವರ ವಿಷಯದಲ್ಲಿ, ಅಪರೋಕ್ಷ ಜ್ಞಾನೋತ್ತರ ಕಾಲದಲ್ಲಿ ಮಾಡಿದ ಭಕ್ತಿಯೇ ಮುಕ್ತಿಗೆ ಎಂದರೆ ಸ್ವರೂಪಾನಂದಾವಿರ್ಭಾವಕ್ಕೆ ಕಾರಣವೆಂದು ಹೇಳಿದರೂ ಯಥಾರ್ಥವೇ ಆಗುವುದು.

3. ಅಥವಾ "ಭಕ್ತಿಶ್ಚ ತತ್ಸಾಧನಂ" ಎಂಬ ವ್ಯಾಸರಾಜರ ವಾಕ್ಯವು ಲಾಕ್ಷಣಿಕ ಪ್ರಯೋಗವು ಎಂದು ಇಟ್ಟುಕೊಂಡರೆ ಯಾವ ತೊಂದರೆಯೂ ಇರುವುದಿಲ್ಲ. ಭಕ್ತಿ ಎಂದರೆ ಬ್ರಹ್ಮಜ್ಞಾನಸಹಿತವಾದ ಸ್ನೇಹವೆಂದು ಮುಖ್ಯಾರ್ಥವು. ಬ್ರಹ್ಮಾಪರೋಕ್ಷ ಜ್ಞಾನವೆಂದು ಲಾಕ್ಷಣಿಕಾರ್ಥವು. ಲಾಕ್ಷಣಿಕ ಪ್ರಯೋಗಕ್ಕೆ ಕಾರಣವು ಉಂಟು. ದ್ವೈತಿಗಳು ಒಪ್ಪುವ ಬ್ರಹ್ಮಾಪರೋಕ್ಷ ಜ್ಞಾನವು ಅದ್ವೈತಿಗಳು ಹೇಳುವಂಥಾ ನಿಷ್ಪ್ರಕಾರವಾದ ಪ್ರೀತಿಪೂರ್ವಕವಲ್ಲದ ನಿರಾಕಾರವಾದ ಜ್ಞಾನವಲ್ಲ. ಅದು ಸಮಾಧಿ ಪರಿಪಾಕದಲ್ಲಿ ಅತಿ ಸ್ನೇಹಪೂರ್ವಕವಾದ ಭಗವಂತನ ದಿವ್ಯ ರೂಪದರ್ಶನವು. ಜ್ಞಾನವು ಮೋಕ್ಷಸಾಧನವೆಂದು ಹೇಳಿದರೆ ಎಲ್ಲಿ ಅದ್ವೈತಿ

---

ಭಿನ್ನವಾಗಿ ಎರಡು ವಾದಗಳನ್ನು ಹಾಗೆಯೇ ಬಿಟ್ಟಿರುತ್ತಾರೆ. ಅವರು ತಮ್ಮ (ನಿರ್ಗುಣಬ್ರಹ್ಮ) ವಾದವನ್ನು ಸ್ವಲ್ಪ ಬದಲಾಯಿಸಿ ಬ್ರಹ್ಮನಿಗೂ ಪ್ರಪಂಚಕ್ಕೂ ಶಕ್ಯನಿರೂಪಣವಾದ ಯಾವುದಾದರೂ ಸರಿಯಾದ ಸಂಬಂಧವನ್ನು ಉಪಪಾದಿಸಿ ಹೇಳಲಾರರು. ಅವರು ಮಿಥ್ಯಾ ಪ್ರಪಂಚ ಸಂಬಂಧಿಯಾದ ಮಿಥ್ಯಾ ಪ್ರಶ್ನೆಯಿಂದಲೋ ಎಂಬಂತೆ ಈ ತೊಂದರೆಯಿಂದ ಹಿಂತಿರುಗುತ್ತಾರೆ.

ಇದು ಇನ್ನೂ ಸ್ಫುಟವಾದ ನಿರೂಪಣೆಯು :—

"In order that Ethics may reach its goal, the annihilation of the self, Ethics itself must disappear."

—W. S. Urquhart.

**ಅರ್ಥವು :—** ಅದ್ವೈತಮತದಲ್ಲಿ ಮೋಕ್ಷಸಾಧನ ಪ್ರತಿಪಾದಕ ಶಾಸ್ತ್ರವು ತನ್ನಿಂದ ಪ್ರತಿಪಾದಿತವಾದ ಆತ್ಮನಾಶರೂಪವಾದ ಅಂತ್ಯ ಫಲವನ್ನು ಹೊಂದಬೇಕಾದರೆ ತಾನೇ ( ಮೋಕ್ಷ ಸಾಧನೆಯನ್ನು ನಿರೂಪಿಸುವ ಶಾಸ್ತ್ರವೇ ) ಅದೃಶವಾಗಬೇಕು. ( ಸಾಧನಾನುಷ್ಠಾನವನ್ನು ಮಾಡುವ ಶಾಸ್ತ್ರವನ್ನು ಒಪ್ಪಿದರೆ ಬ್ರಹ್ಮಭಿನ್ನನಾದ ಜೀವನು ಬ್ರಹ್ಮಪ್ರಾಪ್ತಿರೂಪಫಲದ ಉದ್ದಿಶ್ಯ ಕರ್ಮ ಮಾಡುವನೆಂದು ಪ್ರಾಪ್ತವಾಗುವುದು, ಆದುದರಿಂದ ಶಾಸ್ತ್ರವೇ ಇಲ್ಲ ಎಂದು ಹೇಳುವರು ಎಂದು ಭಾವವು. )

ಗಳಿಗೂ ದ್ವೈತಿಗಳಿಗೂ ಈ ವಿಷಯದಲ್ಲಿ ಸಾಮ್ಯವು ಉಂಟೆಂದು ಜನರು ಭ್ರಮಿಸು ವರೋ ಎಂಬ ಶಂಕೆಯಿಂದ, ಜ್ಞಾನಿ ಶಿಖಾಮಣಿಗಳಾದ ಶ್ರೀ ವ್ಯಾಸರಾಜರು, ಪೂರ್ವೋಕ್ತ ಜ್ಞಾನವನ್ನೇ ಭಕ್ತಿಶಬ್ದದಿಂದ ನಿರ್ದೇಶ ಮಾಡಿ "ಭಕ್ತಿಶ್ಚ ತತ್ಸಾಧನಂ" ಎಂದು ಹೇಳಿ ಬಿಟ್ಟರು. ಅಪರೋಕ್ಷ ಜ್ಞಾನವು ಭಕ್ತಿಯಿಂದ ಪೂರ್ಣವಾದ ಅವಸ್ಥಾ ವಿಶೇಷವು. ಮತ್ತು ಭಕ್ತಿಪೂರ್ವಕವಾದ ಸಾಧನಗಳಿಂದಲೇ ಕ್ರಮವಾಗಿ ಪ್ರಾಪ್ತವಾದದ್ದು. ಆದುದರಿಂದ ಅಪರೋಕ್ಷ ಜ್ಞಾನವನ್ನು "ಭಕ್ತಿ" ಎಂದು ಲಾಕ್ಷಣಿಕ ಪದದಿಂದ ನಿರ್ದೇಶ ಮಾಡಿರುವುದು ಚಂದ್ರಿಕಾದಿ ಗ್ರಂಥಕರ್ತರಾದ ವ್ಯಾಸರಾಜರ ಪದಪ್ರಯೋಗ ನಿಪುಣತೆಗೇ ನಿದರ್ಶನವಾಗಿರುತ್ತದೆ. 4. ಪರಂತು ನಮ್ಮ ಮತದಲ್ಲಿ ಮುಕ್ತಿ ಹೇತುಭೂತವಾದ ಪರಮಾತ್ಮನ ಪರಿಪೂರ್ಣ ಪ್ರಸಾದವನ್ನು ಸಂಪಾದಿಸುವುದಕ್ಕೆ ಅನೇಕ ಸಾಧನ ಸಂಪತ್ತಿಗಳು ಹೇಳಲ್ಪಟ್ಟಿರುವುವು. ಇವುಗಳಲ್ಲೆಲ್ಲಾ ಒಂದೊಂದು ಮೆಟ್ಟಲಿನಲ್ಲಿಯೂ ಭಕ್ತಿಯು ಆವಶ್ಯಕವು. ಅದ್ವೈತಮತದಲ್ಲಿ ತತ್ತ್ವಮಸ್ಯಾದಿ ವಾಕ್ಯೋತ್ಥ ನಿಷ್ಪ್ರಕಾರಕ ಜ್ಞಾನವು ಬಂದರೆ ಸಾಕು. ಈ ಮುಖ್ಯ ವ್ಯತ್ಯಾಸವನ್ನು ನಾವು ಅಲ್ಲಲ್ಲಿ ನಿರೂಪಿಸಿ ತೋರಿಸುತ್ತೇವೆ.

2. ಇನ್ನು ಅಧಿಕಾರಿಯ ಪ್ರಯತ್ನಗೋಚರವಾದ ಅನೇಕ ಧರ್ಮಗಳಲ್ಲಿ ಸಾಕ್ಷಾನ್ಮೋಕ್ಷ ಸಾಧನವೆಂದು ಹೇಳಲ್ಪಟ್ಟಿರುವ ಭಕ್ತಿಯು ಎಂಥಾದ್ದು ಎಂಬುದನ್ನು ವಿವರಿಸುತ್ತೇವೆ. ಅಜ್ಞನು ಮಾಡುವ ಮೂಢ ಭಕ್ತಿಯಿಂದ ಅಥವಾ ಭ್ರಾಂತನ ಮೋಹದಿಂದ ಮುಕ್ತಿಯು ದೊರಕಲಾರದು. ಶ್ರೀಮದಾಚಾರ್ಯರು,

**"ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ ।**
**ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನಚಾನ್ಯಥಾ ॥"**

ಎಂಬ ಪ್ರಮಾಣ ಶ್ಲೋಕವನ್ನು ಉದಾಹರಿಸಿ ಭಕ್ತಿಶಬ್ದಾರ್ಥವನ್ನು ನಿರೂಪಿಸಿರುತ್ತಾರೆ. ಇದಕ್ಕೆ ಶ್ರುತ್ಯರ್ಥಗರ್ಭಿತವಾದ* ವಿವರಣವು ಇರುತ್ತದೆ:—

**"ನಿರವಧಿಕಾನಂತಾನವದ್ಯಕಲ್ಯಾಣಗುಣತ್ವ ಜ್ಞಾನಪೂರ್ವಕಃ ಸ್ವಸ್ವಾತ್ಮೀಯಸಮಸ್ತ ವಸ್ತುಭ್ಯೋಽನೇಕಗುಣಾಧಿಕಃ ಅಂತರಾಯಸಹಸ್ರೇಣಾಪ್ಯಪ್ರತಿಬದ್ಧಃ ಪ್ರೇಮಪ್ರವಾಹೋ ಭಕ್ತಿಃ"** ( ಶ್ರೀಮನ್ನ್ಯಾಯಸುಧಾ )

ಪ್ರತ್ಯೇಕವಾಗಿ ಒಂದೊಂದೂ ಅನಂತವಾದ ಅನಂತ ನಿರ್ದೋಷ ಶುಭ ಗುಣಗಳಿಂದ ಪರಮಾತ್ಮನು ಪರಿಪೂರ್ಣನು ಎಂಬ **ಜ್ಞಾನಪೂರ್ವಕವಾದ,** ತಾನು, ತನ್ನ ಸಂಬಂಧಿಯಾದ ದೇಹ, ಪ್ರಾಣ, ಮಾನ, ಧನ, ದಾರಾ, ಪುತ್ರ, ಮಿತ್ರ, ಗೇಹ ಮೊದಲಾದ ಸಕಲ ವಸ್ತುಗಳಲ್ಲಿ ತನಗಿರುವ ಪ್ರೀತಿಗಿಂತ ಅನಂತ ಮಡಿ

---

* " ತಸ್ಯ ಪುತ್ರಾತ್ಪ್ರೇಯಃ ವಿತ್ತಾತ್ಪ್ರೇಯಃ " ಇತ್ಯಾದಿ ಶ್ರುತಿಗಳಿಂದ ಪರಬ್ರಹ್ಮನೇ ಪರಮೋಷ್ಟನಾದ ವಸ್ತುವೆಂದು ಸಿದ್ಧವಾಗುವುದು.

ಗುಣಿಸಿದಷ್ಟು, ವಿಘ್ನಸಹಸ್ರಗಳು ಬಂದರೂ ಪ್ರತಿಬದ್ಧವಾಗದ ಪ್ರೇಮ ಪ್ರವಾಹವು ಭಕ್ತಿಯೆನ್ನಿಸುವುದು.

ಏವಂಚ ಯಥಾರ್ಥವಾದ ಪರಮಾತ್ಮನ ಸ್ವರೂಪ ಜ್ಞಾನವು ಮತ್ತು ನಿರವಧಿಕ ಪ್ರೀತಿಯು ಇವೆರಡು ದಳಗಳಿಂದ ಸಹಿತವಾದ ಪರಿಪೂರ್ಣ ಭಕ್ತಿಯು ಪರಮಾತ್ಮನ ಪರಿಪೂರ್ಣ ಪ್ರಸಾದಾವಿರ್ಭಾವಕ್ಕೆ ಕಾರಣವಾಗುತ್ತದೆ. ಈ ಲಕ್ಷಣ ವಾಕ್ಯಪರ್ಯಾಲೋಚನೆಯಿಂದಲೇ ಬ್ರಹ್ಮಾಪರೋಕ್ಷಜ್ಞಾನವಾಗದ ಹೊರತು ಇಂಥ ಸಮಗ್ರ ಭಕ್ತಿಯು ಬರಲಾರದೆಂದು ನಿಶ್ಚಿತವಾಗುವುದು. ಶ್ರೀ ಕೃಷ್ಣನು ಅಪರೋಕ್ಷ ಜ್ಞಾನಿಗಿಂತಲೂ ಈ ರೀತಿ ನಿಷ್ಕಾಮ ಭಕ್ತಿಯನ್ನು ಮಾಡುವವನು ಶ್ರೇಷ್ಠನೆಂದು ದ್ವಾದಶಾಧ್ಯಾಯದಲ್ಲಿ ನಿರೂಪಿಸಿರುತ್ತಾನೆ :—

**(3) ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ।**
**ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಸ್ಸಮೇ ಪ್ರಿಯಃ ॥**
**ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸಚ ಮೇ ಪ್ರಿಯಃ ।**
**ಅನಪೇಕ್ಷಃ ಶುಚಿರ್ದಕ್ಷಃ ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ।**
**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ಯಸ್ಸಮೇ ಪ್ರಿಯಃ ।**
**ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।**
**ಶೀತೋಷ್ಣಸುಖದುಃಖೇಷು ಸಮಸ್ಸಂಗವಿವರ್ಜಿತಃ ।**
**ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।**
**ಅನಿಕೇತಸ್ಥಿರಮತಿರ್ಭಕ್ತಿಮಾನ್ ಮೇ ಪ್ರಿಯೋ ನರಃ ॥**
**ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ಧಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥**

**—(12. 13–20.)**

**ಅರ್ಥವು :—** ಯಾವಾತನು ಸರ್ವ ಪ್ರಾಣಿಗಳ ವಿಷಯದಲ್ಲಿಯೂ ದ್ವೇಷ ರಹಿತನಾಗಿ, ಕ್ಲೇಶಸ್ಥಾನವನ್ನು ತಿಳಿದು ಪರಿರಕ್ಷಿಸುವನಾಗಿ, ಕೃಪಾಯುಕ್ತನಾಗಿ ಮಮತಾಹಂಕಾರಗಳಿಂದ ರಹಿತನಾಗಿ, ಸಮದುಃಖ ಸುಖನಾಗಿ, ಸಹನಶೀಲನಾಗಿ, ಸರ್ವದಾ ಅಲಂಬುದ್ಧಿಯುಳ್ಳವನಾಗಿ, ಧ್ಯಾನಾದಿ ಯತ್ನಶೀಲನಾಗಿ, ವಿಷಯಗಳ

ದೆಸೆಯಿಂದ ನಿವರ್ತಿಸಲ್ಪಟ್ಟ ಚಿತ್ತವುಳ್ಳವನಾಗಿ, ಅಪ್ರಾಮಾಣ್ಯ ಸಂದೇಹರಹಿತ ವಾದ ತತ್ವನಿಶ್ಚಯವುಳ್ಳವನಾಗಿ, ನನ್ನಲ್ಲಿ ಸಮರ್ಪಿತವಾದ ಮನಸ್ಸು ಬುದ್ಧಿ ಯುಳ್ಳವನಾಗಿರುವನೋ ಅಂಥ ನನ್ನ ಭಕ್ತನು ನನಗೆ ಪ್ರಿಯನು. ಯಾವ ಜ್ಞಾನಿಯ ದೆಸೆಯಿಂದ ಜನವು ಭಯಪಡುವುದಿಲ್ಲವೋ (ಯಾವನು ಜನರಿಗೆ ಭಯಜನಕವಾದ ವ್ಯಾಪಾರವನ್ನು ಮಾಡುವುದಿಲ್ಲವೋ) ಮತ್ತು ಯಾವನು ಲೋಕವನ್ನು ನೋಡಿ ಭಯಪಡುವುದಿಲ್ಲವೋ, ಹರ್ಷವೆಂದರೆ ಅಧರ್ಮಾರ್ಥ ವಾಗಿ ಮನಃಪ್ರವೃತ್ತಿ, ಅಮರ್ಷ ಎಂದರೆ ಸಿಡಿಕಲು ಕೋಪ ಇವುಗಳಿಂದಲೂ ಮತ್ತು ಭಯ, ಉದ್ವೇಗಾದಿಗಳಿಂದಲೂ ಮುಕ್ತನೋ ಅಂಥ ನನ್ನ ಭಕ್ತನು ನನಗೆ ಪ್ರಿಯನು. ಯಾವಾತನು ಭಗವದ್ಭಕ್ತಿ ಜ್ಞಾನಾತಿರಿಕ್ತ ವಸ್ತುಗಳ ಅಪೇಕ್ಷಾ ರಹಿತನಾಗಿ, ಬಾಹ್ಯಾಂತಃ ಶುದ್ಧಿಯುಳ್ಳವನಾಗಿ, ಭಗವತ್ಕರ್ಮಾನುಷ್ಠಾನದಲ್ಲಿ ಪಟುವಾಗಿ, ಕ್ಷುದ್ರ ವಿಷಯಗಳಲ್ಲಿ ಉದಾಸೀನನಾಗಿ, ಪರಕೃತವಾದ ಅಪಕಾರಾದಿ ಗಳಿಂದ ಮನಃಕ್ಲೇಶಗಳನ್ನು ಹೊಂದದವನಾಗಿ, ಸರ್ವಾರಂಭ ಪರಿತ್ಯಾಗೀ— ಎಂದರೆ ಸರ್ವಪ್ರಾಪಂಚಿಕ ಉದ್ಯೋಗಗಳನ್ನೂ ಪರಿತ್ಯಾಗ ಮಾಡಿದವನಾಗಿ ಇರು ವನೋ ಅಥವಾ ಸರ್ವ ಉದ್ಯೋಗವನ್ನೂ ಪರಮಾತ್ಮನಲ್ಲಿ ಅರ್ಪಿಸಿದವನಾಗಿ ಇರು ವನೋ ಅಂಥ ನನ್ನ ಭಕ್ತನು ನನಗೆ ಪ್ರಿಯನು. ಯಾವಾತನು ಸರ್ವದಾ ಅಧರ್ಮಾರ್ಥವಾಗಿ ಮನಃಪ್ರವೃತ್ತಿರಹಿತನಾಗಿ, ಸರ್ವದಾ ಪರರಿಗೆ ಅನಿಷ್ಟವನ್ನು ಆಚರಿಸದವನಾಗಿ, ಶೋಕರಾಗಗಳಿಂದ ರಹಿತನಾಗಿ, ಶುಭಾಶುಭ ಪರಿತ್ಯಾಗಿ— ಎಂದರೆ ಸ್ವರ್ಗಾದ್ಯುದ್ದೇಶಕವಾದ ಶುಭಗಳನ್ನೂ, ವಿಧಿವಿರುದ್ಧವಾದ ಅಶುಭ ಗಳನ್ನೂ ಪರಿತ್ಯಾಗ ಮಾಡುವವನಾಗಿ ಇರುವನೋ ಅಂಥ ಭಕ್ತಿಪೂರ್ಣನಾದ ಜ್ಞಾನಿಯು ನನಗೆ ಪ್ರಿಯನು.

ಯಾವಾತನು ಶತ್ರುಮಿತ್ರರುಗಳಲ್ಲಿ ಸಮನಾಗಿ* ಮಾನಾಪಮಾನ, ಶೀತೋಷ್ಣ, ಸುಖದುಃಖ ಇವೇ ಮುಂತಾದ ದ್ವಂದ್ವಗಳನ್ನೂ ಸಹಿಸುವವನಾಗಿ, ದುಸ್ಸಂಗರಹಿತನಾಗಿ, ನಿಂದಾಸ್ತುತಿಗಳಲ್ಲಿ ಸಮನಾಗಿ, ಮನನಶೀಲನಾಗಿ, ವಿಷಯ

---

* 1. ಶತ್ರುಮಿತ್ರರ ಭಗವದ್ದ್ವೇಷಾದಿಗಳನ್ನು ಅನುಸರಿಸಿ ಅವರ ಯೋಗ್ಯತಾನುಗುಣವಾದ ದ್ವೇಷ ಪ್ರೀತಿಗಳನ್ನು ಮಾಡುವುದು ಒಂದು ವಿಧವಾದ ಸಮತ್ವವು; 2. ಶತ್ರುವು ದ್ವೇಷ ಮಾಡಿ ದರೂ ಪ್ರತಿದ್ವೇಷ ಮಾಡದೆ ಮಿತ್ರನು ಲೌಕಿಕ ವಿವಕ್ಷೆಯಿಂದ ಪ್ರೀತಿಸಿದರೂ ಪ್ರತಿಪ್ರೀತಿಯನ್ನು ಮಾಡದೆ ಅವರವರ ಭಕ್ತ್ಯಾದಿಗುಣಗಳಿಗನುಗುಣವಾಗಿ ಅವರನ್ನು ತಿಳಿಯುವದು ಒಂದು ವಿಧವಾದ ಸಮತ್ವವು. 3. ಶತ್ರುವು ಮನೆಯನ್ನು ಹಾಳು ಮಾಡಿದರೂ ಆತನು ಸ್ವತಂತ್ರನಲ್ಲ, ನನ್ನ ಕರ್ಮ ಗಳನ್ನು ನಿಮಿತ್ತ ಮಾಡಿ ಪರಮಾತ್ಮನು ಅವನಲ್ಲಿ ನಿಂತು ಫಲವನ್ನು ಕೊಟ್ಟಿರುವನೆಂದು ತಿಳಿದು, ಮಿತ್ರರು ಉಪಕಾರ ಮಾಡಿದರೆ ಆ ಪರಮಾತ್ಮನು ಅವರಲ್ಲಿ ನಿಂತು ನನಗೆ ಉಪಕಾರ ಮಾಡಿರುವ ನೆಂದೂ ತಿಳಿದು ಸ್ವತಂತ್ರ ಭಗವಂತನಲ್ಲಿ ಪ್ರೀತಿ ಮಾಡಿ ಅಸ್ವತಂತ್ರ ಜನವರ್ಗವು ನಿಮಿತ್ತ ಮಾತ್ರ ವೆಂದು ತಿಳಿದು ಅವರಲ್ಲಿ ತನಗೆ ಉಪಕಾರ ಮಾಡಿದುದರ ನಿಮಿತ್ತದಿಂದ ಪ್ರೀತಿಸದೆ, ಅಪಕಾರ

ಗಳಲ್ಲಿ ಅಪೇಕ್ಷಾರಹಿತನಾಗಿ ಎಷ್ಟು ಪ್ರಾಪ್ತವಾದರೆ ಅಷ್ಟರಿಂದಲೇ ಅಲಂಬುದ್ಧಿಯುಳ್ಳವನಾಗಿ, (ಅಭಿಮಾನೋತ್ಪತ್ತಿಗೆ ಕಾರಣವಾಗುವುದರಿಂದ) ನಿಯತ ಸ್ಥಳದಲ್ಲಿ ವಾಸರಹಿತನಾಗಿ, ಕುತರ್ಕಗಳಿಂದ ಚಾಂಚಲ್ಯರಹಿತವಾದ ಜ್ಞಾನವುಳ್ಳವನಾಗಿರುವನೋ ಅಂಥ ಪೂರ್ಣಭಕ್ತನಾದ ಪುರುಷನು ನನಗೆ ಪ್ರಿಯನು ಧರ್ಮ್ಯಾಮೃತಂ– ಎಂದರೆ ಧಾರಕನಾದ ವಿಷ್ಣುವಿನ ಪ್ರತ್ಯಕ್ಷಸಾಧಕವಾದ ಮತ್ತು ಮೋಕ್ಷಹೇತುಭೂತವಾದ ಈ ಯಾವತ್ತು ಧರ್ಮಗಳನ್ನು ಅನುಷ್ಠಾನ ಮಾಡುವವರಾಗಿ, ಶ್ರದ್ಧಾಪೂರ್ಣರಾಗಿ, ನಾನೇ (ಶ್ರೀ ಕೃಷ್ಣನೇ) ಸರ್ವೋತ್ತಮನೆಂದು ತಿಳಿದು ನನ್ನನ್ನು ಯಾರು ನಿರಂತರ ಉಪಾಸನೆ ಮಾಡುತ್ತಾರೆಯೋ ಅಂಥ ನನ್ನ ಭಕ್ತರು ನನಗೆ ಅತ್ಯಂತಪ್ರಿಯರು.

ಕೇವಲ ಅಪರೋಕ್ಷ ಜ್ಞಾನಿಗಿಂತ ನಿರಂತರ ಭಗವದಾರಾಧನದಲ್ಲಿ (ಧ್ಯಾನ, ಪ್ರವಚನ, ಲೋಕಶಿಕ್ಷಾರ್ಥವಾದ ಕರ್ಮಾಚರಣಗಳಲ್ಲಿ) ತತ್ಪರನಾದ ಭಕ್ತನು ಪರಮಾತ್ಮನ ಹೆಚ್ಚು ಪ್ರೀತಿಗೆ ಆಸ್ಪದನೆಂಬುದು ಶ್ರೀ ಕೃಷ್ಣನ ವಾಕ್ಯಗಳ ಸ್ವಾರಸ್ಯ ಪರ್ಯಾಲೋಚನೆಯಿಂದಲೇ ತಿಳಿದು ಬರುವುದು :—

---

ಮಾಡಿದುದರ ನಿಮಿತ್ತದಿಂದ ದ್ವೇಷಿಸದೆ ಅವರ ಭಗವದ್ಭಕ್ತ್ಯಾದಿ ಗುಣಗಳಿಗನುಗುಣವಾಗಿಯೇ ಅವರನ್ನು ಪ್ರೀತಿ ಮಾಡುವುದು ಒಂದು ವಿಧವಾದ ಸಮತ್ವವು. 4. ಭಗವಚ್ಛತ್ರುಗಳು ಉಪಕಾರ ಮಾಡಿದರೂ ಅದು ಅವರಿಗೆ ಆಗಂತುಕ ಧರ್ಮವೆಂದು ತಿಳಿದು ಅವರಲ್ಲಿ ಪ್ರೀತಿ ಮಾಡದೆ ಅವರ ಸ್ವಭಾವವನ್ನು ತಿಳಿದು ದ್ವೇಷವನ್ನೇ ಮಾಡಿ, ಭಗವನ್ಮಿತ್ರರು ಕೆಟ್ಟ ಕೆಲಸವನ್ನು ಮಾಡಿದರೂ ಅದು ಆಗಂತುಕ ಧರ್ಮವಾದುದರಿಂದ ಅದು ನಿವೃತ್ತವಾಗುವದೆಂದು ತಿಳಿದು ಅವರ ಸ್ವಭಾವವನ್ನು ತಿಳಿದು ಅವರನ್ನು ಪ್ರೀತಿ ಮಾಡುತ್ತಲೇ ಇರುವುದು ಒಂದು ವಿಧವಾದ ಸಮತ್ವವು. 5. ಶತ್ರುವಿನ ಅಪಕಾರದಿಂದ ಕುಗ್ಗದೆ ಮಿತ್ರನ ಸ್ತುತಿ ವಚನದಿಂದ ಹಿಗ್ಗದೆ ಏಕಪ್ರಕಾರವಾಗಿ ಪರಮಾತ್ಮನಲ್ಲಿ ರತಿ ಮಾಡುವುದು ಒಂದು ವಿಧವಾದ ಸಮತ್ವವು. 6. ಶತ್ರುವು ಮೋಕ್ಷ ವಿರೋಧಿಯಾದುದರಿಂದ ಹೇಗೆ ತ್ಯಾಜ್ಯನೋ ಹಾಗೆ ಲೌಕಿಕ ಮಿತ್ರರೆಲ್ಲರೂ ಮೋಕ್ಷ ವಿರೋಧಿಗಳಾದುದರಿಂದ ಅವರ ಸಂಗವೂ ಪರಿತ್ಯಾಜ್ಯವೆಂದು ನಿಶ್ಚಯಿಸಿ ಉಭಯರೂ ಅನಿಷ್ಟವೆಂದು ತಿಳಿಯುವುದು ಮತ್ತೊಂದು ವಿಧವಾದ ಸಮತ್ವವು. 7. ಶತ್ರು ಮಿತ್ರರುಗಳಲ್ಲಿರುವ ಪರಮಾತ್ಮನು ಸಮನು ಎಂದು ತಿಳಿಯುವುದೂ ಒಂದು ವಿಧವಾದ ಸಮತ್ವವು. ಇದಕ್ಕೆ ಭಿನ್ನವಾದ ಸಮತ್ವಜ್ಞಾನವು ಎಂದರೆ ಶತ್ರುವೂ ಮಿತ್ರನೂ ಸಮನೇ ಎಂದು ತಿಳಿಯೋಣವು ದೊಡ್ಡ ಭ್ರಾಂತಿಯು, ಅದು ಜ್ಞಾನಿಗೆ ಇರುವುದಿಲ್ಲ.

ಇದೇ ನ್ಯಾಯದಿಂದ ಈ ಪ್ರಕರಣದಲ್ಲಿ ಪರರನ್ನು ದ್ವೇಷ ಮಾಡದೆ ಎಂದರೆ ಸಜ್ಜನರನ್ನು ದ್ವೇಷ ಮಾಡದೆ ಎಂದೂ, ಸರ್ವರಿಗೂ ಹಿತಕರನಾಗಿ ಎಂದರೆ ಸರ್ವ ಸಜ್ಜನರಿಗೂ ಹಿತಕರನಾಗಿ ಎಂದೂ, ಎಲ್ಲರನ್ನೂ ಪ್ರೀತಿ ಮಾಡುವವನಾಗಿ ಎಂದರೆ ಎಲ್ಲಾ ಒಳ್ಳೆಯವರಲ್ಲೂ ಪ್ರೀತಿಯುಳ್ಳವನಾಗಿ ಎಂದೂ, ಸರ್ವರನ್ನೂ ಪರಿತ್ಯಜಿಸಿ ಎಂದರೆ ಸರ್ವ ಮೋಕ್ಷಾನುಪಯುಕ್ತ ಪದಾರ್ಥಗಳನ್ನೆಲ್ಲಾ ಪರಿತ್ಯಜಿಸಿ ಎಂದೂ ಅರ್ಥವನ್ನು ತಿಳಿದುಕೊಳ್ಳಬೇಕು.

**(4) ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ।**
—(7. 17.)

ಜ್ಞಾನಿಗೆ ನಾನು ಅತ್ಯಂತ ಪ್ರೀತಿ ವಿಷಯನು. ಅವನೂ ಸಹ ನನಗೆ ಪ್ರೀತಿ ವಿಷಯನು ಎಂದು ಶ್ರೀ ಕೃಷ್ಣನು ಜ್ಞಾನಿಯನ್ನು ಪ್ರಶಂಸನೆ ಮಾಡಿದನು. ಭಕ್ತ ನನ್ನು ಪ್ರಶಂಸನೆ ಮಾಡುವಾಗ :—

**(5) ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ।**
—(12. 20.)

ಎಂದರೆ ನನ್ನ ಭಕ್ತರು ನನಗೆ **ಅತ್ಯಂತ** ಪ್ರೀತಿ ವಿಷಯರು ಎಂದು ಹೇಳಿದನು. ಅಪರೋಕ್ಷ ಜ್ಞಾನಿಯು ಪ್ರೀತಿ ವಿಷಯನು; ಅಪರೋಕ್ಷ ಜ್ಞಾನವನ್ನು ಹೊಂದಿದ ಮೇಲೂ ಉನ್ಮತ್ತನಾಗದೆ ಭಗವದುಪಾಸನೆಯಲ್ಲಿ ತತ್ಪರನಾದ ಭಕ್ತನು ಅತ್ಯಂತ ಪ್ರೀತಿ ವಿಷಯನು. ಇಂಥ ಭಕ್ತನಿಗೇ ಜ್ಞಾನೋಪದೇಶರೂಪವಾದ ವಿಶಿಷ್ಟ ಕರ್ಮದಲ್ಲಿ ಮುಖ್ಯಾಧಿಕಾರವು. ಇಂಥವನನ್ನೇ ಶ್ರೀ ಕೃಷ್ಣನು ಹದಿನೆಂಟನೆಯ ಅಧ್ಯಾಯದಲ್ಲಿ ಸ್ತುತಿಸಿರುತ್ತಾನೆ :—

**(6) ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥**
**ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥**
—(18. 68-69.)

ಅತಿ ಗೋಪ್ಯವಾದ ಈ ಗೀತಾ ತತ್ವವನ್ನು ಯಾವ ಜ್ಞಾನಿಯು ನನ್ನ ಭಕ್ತರಿಗೆ ಉಪದೇಶ ಮಾಡುತ್ತಾನೆಯೋ ಆತನು ನನ್ನಲ್ಲಿ ಇನ್ನೂ ಅಧಿಕವಾದ ಭಕ್ತಿಯನ್ನು ಮಾಡಿ ಸಂಶಯವಿಲ್ಲದೆ ನನ್ನನ್ನೇ ಹೊಂದುತ್ತಾನೆ. ಅಂಥ ಗೀತಾ ರಹಸ್ಯಾರ್ಥವನ್ನು ಉಪದೇಶ ಮಾಡುವವನಿಗಿಂತಲೂ ನನಗೆ ಇಷ್ಟವಾದ ಕಾರ್ಯವನ್ನು ಮಾಡಿದ ಮನುಷ್ಯರಲ್ಲಿ ಯಾವ ಒಬ್ಬನೂ ಶ್ರೇಷ್ಠನು ಇಲ್ಲ. ಅವನೇ ನನಗೆ ಅತ್ಯಂತ ಇಷ್ಟ ಕಾರ್ಯವನ್ನು ಮಾಡಿದನೆಂದರ್ಥವು. ಆತನಿಗಿಂತ ನನಗೆ ಅತ್ಯಂತ ಪ್ರೀತಿ ವಿಷಯನು ಮತ್ತೊಬ್ಬನು ಈಗ ಇಲ್ಲ, ಉತ್ತರ ಕಾಲದಲ್ಲಿ ಇರುವುದಿಲ್ಲ, ಹಿಂದೂ ಇರಲಿಲ್ಲ.

ಈ ವಾಕ್ಯದಿಂದಲೇ ತಮ್ಮ ಸ್ವಾಭಿಪ್ರಾಯವನ್ನು ಗೀತಾ ವಾಕ್ಯಗಳಿಗೆ ಆರೂಢವಾಗುವಂತೆ ಮಾಡದೇ " ಗೀತಾರ್ಥಂ ವಕ್ಷ್ಯಾಮಿ ಲೇಶತಃ " ಎಂದು ಪ್ರತಿಜ್ಞೆ ಮಾಡಿ ಗೀತಾ ವಾಕ್ಯಗಳಿಗಿದ್ದ ಶ್ರೀ ಕೃಷ್ಣನ ಅಭಿಪ್ರಾಯಗಳನ್ನೇ ಅನಂತ ಶ್ರುತಿ ಸ್ಮೃತಿಗಳ ಬಲದಿಂದ ಪ್ರದರ್ಶನ ಮಾಡಿದ ನಮ್ಮ ಶ್ರೀಮದಾಚಾರ್ಯರು ಶ್ರೀ ಕೃಷ್ಣನ

ಭಕ್ತೋತ್ತಮರು ಎಂದು ಸಿದ್ಧವಾಗುವುದು * ಗೀತೆಯ ಯಥಾರ್ಥ ತತ್ವವನ್ನು ಅವರೊಬ್ಬರೇ ಯಥಾರ್ಥವಾಗಿ ತಿಳಿಸಿರುವುದರಿಂದ ಅವರೇ ಪರಮಾತ್ಮನ ಅತ್ಯಂತ ಇಷ್ಟವಾದ ಕಾರ್ಯವನ್ನು ಮಾಡಿದವರು, ಮತ್ತು ಪರಮಾತ್ಮನ ಅತ್ಯಂತ ಪ್ರೀತಿಗೆ ವಿಷಯರಾದವರು. ಅವರಿಂದ ತಿಳಿದ ತತ್ವವನ್ನು ಭಕ್ತರಿಗೆ ಉಪದೇಶ ಮಾಡುವ ಇತರ ಜ್ಞಾನಿಗಳೂ ಯಥಾಯೋಗ್ಯವಾಗಿ ಪರಮಾತ್ಮನ ಅತ್ಯಂತ ಪ್ರೀತಿಗೆ ವಿಷಯ ರಾಗುವುದರಲ್ಲಿ ಸಂದೇಹವಿಲ್ಲ. ಅಂತೂ ಈ ವಾಕ್ಯಗಳಿಂದ ಧ್ಯಾನ ಪ್ರವಚನಾದಿ ಗಳಿಂದ ಸಹಿತನಾದ, ನಿಷ್ಕಾಮನಾದ ಜ್ಞಾನಿಯು ( ಭಕ್ತನು ) ಅಪರೋಕ್ಷ ಜ್ಞಾನ ವನ್ನು ಮೊದಲೇ ಹೊಂದಿರುವನು, ಮತ್ತು ಕೇವಲ ಅಪರೋಕ್ಷ ಜ್ಞಾನಿಗಿಂತ ಪರ

---

* ಗೀತಾರ್ಥವನ್ನೇ ಶ್ರೀಮದಾಚಾರ್ಯರು ಹೇಳಿರುವರೆಂದು ಶ್ರೀಪಾದಂಗಳವರು ನಿರೂಪಿಸಿರುತ್ತಾರೆ. ಶಂಕರಾಚಾರ್ಯರು ತಮ್ಮ ಅರ್ಥವನ್ನು ಗೀತೆಗೆ ಬಲಾತ್ಕಾರವಾಗಿ ತುರುಕಿರುವರೆಂದು ಮ್ಯಾಕ್ಡೊನೆಲ್ ಸಾಹೇಬನೇ ಮುಂತಾದ ಅನೇಕ ಆಂಗ್ಲೇಯ ಪಂಡಿತರು ಹೇಳಿರುತ್ತಾರೆ. ಇದು ಮ್ಯಾಕ್ಡೊನೆಲ್ ಪಂಡಿತನ ವಾಕ್ಯವು :—

" From the Gita the tries to adduce proofs for his own doctrine "

—A. C. Macdonell.

ಶಂಕರಾಚಾರ್ಯರು ತಮ್ಮ ಸ್ವಂತ ತತ್ವಕ್ಕೆ ಗೀತೆಯಿಂದ ರುಜುವಾತುಗಳನ್ನು ಸಂಗ್ರಹಿಸುವುದಕ್ಕೆ ಯತ್ನ ಮಾಡುತ್ತಾರೆ ಎಂದು ಅರ್ಥವು. ಜ್ಞಾನಿಗೆ ಕರ್ಮ ಪರಿತ್ಯಾಗ, ಅಜ್ಞಾನಿಗೆ ಕರ್ಮಾ ಪರಿತ್ಯಾಗ, ಜೀವನ ಬ್ರಹ್ಮತ್ವ ಇವೇ ಮೊದಲಾದ ಬಹು ವಿಷಯ ಚರ್ಚೆಯನ್ನು ಮಾಡಿದ ಅನಂತರ ಸುಪ್ರಸಿದ್ಧನಾದ ಆರ್. ಸಿ. ಬೋಸ್ ನಾಮಕ ಪಂಡಿತನಿಗೆ ಅದ್ವೈತವಾದದ ವಿಷಯದಲ್ಲಿ ಬಹು " ಜುಗುಪ್ಸೆ " ಯು ಪ್ರಾಪ್ತವಾಗಿರುವುದು. ಆತನು ತನ್ನ ಕ್ರೂರ ನಿಶ್ಚಯವನ್ನು ನಿರವಕಾಶ ವಾಣಿಯಿಂದ ನಿರೂಪಿಸಿರುತ್ತಾನೆ :—

" The system has proved a refuge of lies to many a hardened sinner. The perplexed minds which have found shelter in its solution of the problem of existence are few indeed, but the number of wicked hearts which have been composed to sleep by the opiate of its false hope is incalculable "

—Hindu Philosophy by R. C. Bose.

**ಅರ್ಥವು:**— ಅದ್ವೈತವಾದವು ಬಹು ಕ್ರೂರ ಪಾಪಿಗಳಿಗೆ ಉಪಯೋಗವಾಗುವ ಅನೃತಗಳ ನಿವಾಸವಾಗಿರುತ್ತದೆ. ತತ್ವ ವಿಷಯದಲ್ಲಿ ಸಂದಿಗ್ಧ ಚೇತಸ್ಕರಾಗಿದ್ದು ಈ ವಾದದಿಂದ ನಿವೃತ್ತ ಸಂಶಯರಾಗಿ ಮನಶ್ಶಾಂತಿಯನ್ನು ಹೊಂದಿದವರು ನಿಜವಾಗಿಯೂ ಅತಿ ವಿರಳರೇ. ಆದರೆ ಈ ವಾದದಲ್ಲಿ ತೋರಿಸಿರುವ (ಬ್ರಹ್ಮತ್ವ, ಕರ್ಮ ಪರಿತ್ಯಾಗ ರೂಪವಾದ) ದುರಾಶೆಯೆಂಬ ಅಫೀಮಿನಿಂದ ನಿದ್ರೆಗೆ ವಶ ಮಾಡಲ್ಪಟ್ಟ ದುರಾತ್ಮರ ಸಂಖ್ಯೆಯು ಅಸಂಖ್ಯಾತವಾದುದು.

ಪರಮಾತ್ಮನ ಹೆಚ್ಚು ಪ್ರೀತಿಗೆ ಪಾತ್ರನು; ಈತನು ಮಾಡುವ ಭಕ್ತಿಯು ಮುಕ್ತಿಗೆ ಅವ್ಯವಹಿತ ಪೂರ್ವದಲ್ಲಿ ಇರುವ ಅವಸ್ಥೆಯು. ಇದರಿಂದ ಪರಿಪೂರ್ಣವಾದ ಭಗವಂತನ ಪ್ರಸಾದವು ಪ್ರಾಪ್ತವಾಗುವುದು. ತದನಂತರ ಸಕಲ ಜ್ಞಾನಿಗಳೂ ಲಿಂಗಭಂಗವನ್ನು ಹೊಂದಿ ಸ್ವಯೋಗ್ಯತಾನುಸಾರವಾಗಿ ಮೋಕ್ಷ ಸುಖವನ್ನು ಅನುಭವಿಸುವರು ಎಂದು ಸಿದ್ಧವಾಗುವುದು. ಹಾಗಿರುವುದರಿಂದಲೇ ಅಪರೋಕ್ಷ ಜ್ಞಾನಿಯಾದ ಅರ್ಜುನನಿಗೂ ಸಹ ಶ್ರೀ ಕೃಷ್ಣನು ಯುದ್ಧಾದಿ ಸ್ವವಿಹಿತ ಕರ್ಮದಲ್ಲಿ ಪುನಃ ಪುನಃ ಪ್ರೇರಿಸುತ್ತಿರುವನು.

ಶ್ರೀ ಕೃಷ್ಣನ ಚತುರ್ದಶಾಧ್ಯಾಯದ ಶ್ಲೋಕವು ಭಕ್ತಿಯೇ ಸಾಕ್ಷಾನ್ಮೋಕ್ಷ ಸಾಧನವೆಂಬುದರಲ್ಲಿ ಸ್ಪಷ್ಟವಾಗಿರುತ್ತದೆ :—

**(7) ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥**

—(14. 26)

ಯಾರು ಅವ್ಯಭಿಚರಿತ ಭಕ್ತಿಯೋಗದಿಂದ* ನನ್ನನ್ನು ಸೇವಿಸುತ್ತಾರೆಯೋ, ಅವರು ಈ ಸತ್ವರಜಸ್ತಮೋಗುಣಗಳನ್ನು ದಾಟಿ ಮುಕ್ತರಾಗುವುದಕ್ಕೆ ಸಮರ್ಥರಾಗುತ್ತಾರೆ.

ಮತ್ತೊಂದು ವಿಷಯವನ್ನು ಉಪಪಾದಿಸಿ ಈ ಚರ್ಚೆಯನ್ನು ಉಪಸಂಹರಿಸುವೆವು. ಅದ್ವೈತ ಮತದ ರೀತಿಯಿಂದ ಭಕ್ತ್ಯಾದಿ ಸಾಧನ ಪ್ರತಿಪಾದನೆಯು ನಿರರ್ಥಕವೇ. ಭಕ್ತ್ಯನುಷ್ಠಾನಕ್ಕೆ ಅತ್ಯವಶ್ಯಕವಾದ ಎರಡು ಮೂರು ಕಾರಣಗಳು ಅದ್ವೈತ ವಾದದಲ್ಲಿ ಇಲ್ಲವೇ ಇಲ್ಲ. ಭಕ್ತಿ ವಿಷಯವಾದ ಒಂದು ವಸ್ತುವು ಇಲ್ಲ. ನಿರ್ಗುಣಚಿನ್ಮಾತ್ರನು ಭಕ್ತಿಗಮ್ಯನಲ್ಲ. ಜೀವನೂ ನಿರ್ಗುಣ ಬ್ರಹ್ಮನೇ ಆಗಿರುವನು. ನಿರ್ಗುಣ ಬ್ರಹ್ಮನು ಪ್ರಾಪ್ಯನಲ್ಲ. ಈಶ್ವರಾದಿಗಳು ಭಕ್ತಿಗೆ ಯೋಗ್ಯ ವಿಷಯರಲ್ಲ. ಭ್ರಾಂತರು ಈಶ್ವರಾದಿಗಳ ಪೂಜೆಯನ್ನು ಮಾಡಬಹುದು. ಈಶ್ವರಾದಿಗಳು ಮಿಥ್ಯಾ, ಭಕ್ತಿ ಯೋಗ್ಯರಲ್ಲ ಎಂದು ನಿಶ್ಚಯವನ್ನು ತಿಳಿದು ಅದ್ವೈತ ಜ್ಞಾನಿಯು ಇವರುಗಳನ್ನು ಪ್ರೀತಿಸುವುದು ಅಯುಕ್ತವೇ. ಕಿಂಚ ಜೀವಚೇತನನೂ ನಿಷ್ಕ್ರಿಯ ಬ್ರಹ್ಮನೇ. ನಿಷ್ಕ್ರಿಯ ಚೇತನನು ಭಕ್ತಿ ಮಾಡುವುದೂ ಅಸಂಭಾವಿತವೇ ‡ ಪರಂತು ಭಕ್ತಿಯಿಂದ ಪ್ರಾಪ್ಯವಾದ ಫಲವು ಯಾವುದೂ ಅದ್ವೈತ

* ಈ ಶ್ಲೋಕವನ್ನು ಅಪರೋಕ್ಷ ಜ್ಞಾನಾನಂತರ ಮಾಡಲ್ಪಡುವ ಭಕ್ತಿಪರವಾಗಿಯೂ, ಅಪರೋಕ್ಷ ಜ್ಞಾನಾರ್ಥವಾಗಿ ಮಾಡಬೇಕಾದ ಭಕ್ತಿಪರವಾಗಿಯೂ ಸಹ ಅನ್ವಯಿಸಬಹುದು.

‡ ಚೇತನನು ನಿಷ್ಕ್ರಿಯನು ಎಂಬ ದುಷ್ಟ ವಾದವನ್ನು ಶಂಕರಾಚಾರ್ಯರು ಪರಿತ್ಯಾಗ ಮಾಡಿದ್ದರೆ ಭಕ್ತ್ಯನುಷ್ಠಾನವೂ, ಬ್ರಹ್ಮಪ್ರಾಪ್ತಿಯೂ ಸಂಭಾವಿತವಾಗುತ್ತಿತ್ತೆಂದು ಉರ್ಕುಹಾರ್ಟನು ಹೇಳುತ್ತಾನೆ :—

ಮತದಲ್ಲಿ ನಿರೂಪಿಸುವುದಕ್ಕೆ ಬರುವುದಿಲ್ಲ. ಮತ್ತು ಭಕ್ತ್ಯುತ್ಪತ್ತಿಗೆ ನಿಮಿತ್ತಗಳಾದ ಉತ್ತಮಾಧಮ ಭಾವವೂ ಇಲ್ಲದುದರಿಂದ ಅದ್ವೈತ ತತ್ವಜ್ಞನು ಸೇವಾದಿಗಳನ್ನು ಮಾಡುವುದೂ ಅಸಂಭಾವಿತವೇ.

ಅದ್ವೈತ ತತ್ವದ ಈ ಯಾವತ್ತೂ ನಿಶ್ಚಯಗಳು ಶ್ರೀ ಕೃಷ್ಣನಿಂದ ಅತ್ಯಂತ ಅಭಿಪ್ರಾಯಪೂರ್ವಕವಾಗಿ ತಿರಸ್ಕರಿಸಲ್ಪಟ್ಟಿರುತ್ತವೆ. ಶ್ರೀ ಕೃಷ್ಣನು ತಾನೇ ಪರ ಬ್ರಹ್ಮನೆಂದೂ, ಜೀವನು ಸಕ್ರಿಯನಾದ, ಸಂಸಾರದಲ್ಲಿ ಬದ್ಧನಾದ ಚೇತನನೆಂದೂ, ಜ್ಞಾನಾನಂತರದಲ್ಲಿಯೂ ಸೇವೆಯಿಂದ ಬ್ರಹ್ಮಪ್ರಸಾದಾತಿಶಯರೂಪವಾದ ಮಹಾ ಫಲವು ದೊರೆಯುವುದೆಂದೂ, ಭಕ್ತನು ತನಗೆ ಅತ್ಯಂತ ಪ್ರೀತಿ ವಿಷಯನೆಂದೂ ಹೇಳಿರುವನು. ಭಕ್ತಿಯು ಅಜ್ಞನಿಂದ ಅನುಷ್ಠೇಯವಾದ, ಭ್ರಾಂತಿರಹಿತನಾದ ಜ್ಞಾನಿಯಿಂದ ಪರಿತ್ಯಾಜ್ಯವಾದ ಧರ್ಮವಾಗಿದ್ದರೆ, ಸರ್ವಜ್ಞತಮನಾದ, ಕೇವಲ ಪ್ರಮಾತ್ಮಕಜ್ಞಾನ ಪರಿಪೂರ್ಣನಾದ ಶ್ರೀ ಕೃಷ್ಣನು, ಭಕ್ತನು ನನಗೆ ಅತ್ಯಂತ ಪ್ರೀತಿ ವಿಷಯನು ಎಂದು ಏತಕ್ಕೆ ಹೇಳುತ್ತಿದ್ದನು ? ಮಿಥ್ಯಾ ಜ್ಞಾನ ಪೂರ್ಣನಾದ, ನಿಷ್ಪ್ರಯೋಜಕವಾದ ಆಚರಣೆಗಳಲ್ಲಿ ರತನಾದ ವಿಮೂಢನನ್ನು ಪೂರ್ಣನಾದ ವಿಷ್ಣುವು ನನಗೆ ಅತ್ಯಂತ ಪ್ರೀತಿ ಪಾತ್ರನೆಂದು ಶ್ಲಾಘಿಸುವುದು ಅಸಂಭಾವಿತವು. ಪರಮಾತ್ಮನಾದ ಶ್ರೀ ಕೃಷ್ಣನು ಶ್ಲಾಘಿಸಿರುವನು. ಆದುದರಿಂದ ಜ್ಞಾನಾನಂತರ ದಲ್ಲಿ ಭಕ್ತಿಯಿಂದ ಭಗವದಾರಾಧನದಲ್ಲಿ ತತ್ಪರರಾದವರು ಯಥಾರ್ಥ ವಿಜ್ಞಾನ ಸಂಪನ್ನರೇ ಮತ್ತು ಭಕ್ತ್ಯನುಷ್ಠಾನವು ಈಶ್ವರ ಪ್ರೀತಿ ಸಂಪಾದನೆಗೆ ಕಾರಣವಾದ, ಸತ್ಯವಾದ, ಅತ್ಯುತ್ತಮ ವ್ಯಾಪಾರವೇ ಎಂದು ಸಿದ್ಧವಾಗುವುದು. ಶ್ರೀ ಕೃಷ್ಣನು ಹೇಳುತ್ತಾನೆ :—

---

"If greater stress had been laid on the principle of activity, Sankara might have approached more nearly to the position that union with the divine may be accomplished not so much by abstraction from ... ... experience as by emphasis on the idea that the human mind in its activity is reproducing the ... ... activities of the Divine mind."

—W. S. Urquhart, M. A. D. Litt.

**ಅರ್ಥವು:—** ಚೇತನವು ಸಕ್ರಿಯವು ಎಂಬ ಅಭಿಪ್ರಾಯಕ್ಕೆ ಶಂಕರಾಚಾರ್ಯರು ಪ್ರಾಶಸ್ತ್ಯ ವನ್ನು ಕೊಟ್ಟಿದ್ದರೆ, ಶಂಕರಾಚಾರ್ಯರ ತತ್ವವು ಸಕಲ ವ್ಯವಹಾರ ನಿವೃತ್ತರೂಪವಾದ ಐಕ್ಯವನ್ನು ಪರಿತ್ಯಾಗ ಮಾಡಿ ಬೇರೆ ವಿಧವಾದ ಬ್ರಹ್ಮೈಕ್ಯವು ಸಂಭವಿಸುವದೆಂದು ಹೇಳುವ – ಎಂದರೆ ಜೀವ ಚೇತನನು ಬ್ರಹ್ಮಚೇತನನ ಮನೋ ವ್ಯಾಪಾರಗಳಿಗೆ ಸದೃಶವಾದ ವ್ಯಾಪಾರವುಳ್ಳವನಾಗುವನು ಎಂದು ಹೇಳುವ ವಾದವಾಗುತ್ತಿತ್ತು.

**(8) ಭಕ್ತ್ಯಾ ಮಾಮಭಿಜಾನಾತಿ** 

**(8) ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ||**
—(18. 68.)

(ಬ್ರಹ್ಮಜ್ಞಾನಾನಂತರದಲ್ಲಿ) ಉತ್ತಮ ಭಕ್ತಿಯನ್ನು ಮಾಡಿ ಜ್ಞಾನಿಯು ನನ್ನನ್ನೇ ಹೊಂದುತ್ತಾನೆ.

---

# 3. ಮೂರನೆಯ ಅಂಶವು.

## ಅಪರೋಕ್ಷ ಜ್ಞಾನಕ್ಕೆ ಮೋಕ್ಷಸಾಧನತ್ವ ಸಮರ್ಥನವು.

ಶ್ರೀ ಶ್ರೀಗಳವರು:— 1. ಪೂರ್ವೋಕ್ತವಾದ ಭಗವಂತನ ಅತ್ಯರ್ಥಪ್ರಸಾದದ ಅಭಿವ್ಯಕ್ತಿಗೆ ಕಾರಣವಾದ ದ್ವಿದಳಾತ್ಮಕವಾದ ಉದ್ರಿಕ್ತ ಭಕ್ತಿಯು ಭಗವದಪರೋಕ್ಷ ಜ್ಞಾನದಿಂದ ಉತ್ಪನ್ನವಾಗುವುದು. ಹಾಗೆ ಹೇಳಿದುದರಿಂದ ಭಗವತ್ಪ್ರಸಾದವು ಪರಮ ಭಕ್ತಿಯ ಉತ್ಪತ್ತ್ಯರ್ಥವಾಗಿ ಬೇಕಿಲ್ಲವೆಂದು ತಿಳಿಯಕೂಡದು. ಭಕ್ತಿಯ ಉತ್ಪತ್ತಿಗೂ ಪರಮಾತ್ಮನ ಪ್ರಸಾದವೇ ಮುಖ್ಯ ಕಾರಣವು. ಅಪರೋಕ್ಷ ಜ್ಞಾನವು ಅಮುಖ್ಯ ಕಾರಣವು. ಆದರೆ ಪರಮಾತ್ಮನು ವಸ್ತುಗಳ ಸ್ವಭಾವವನ್ನು ನಾಶ ಮಾಡದೆ, ಬೀಜಾಂಕುರ, ಕುಲಾಲಘಟ, ಔಷಧ ರೋಗ ಪರಿಹಾರ, ವಹ್ನಿ ಸಂಯೋಗ ಭಸ್ಮೀಕರಣ ಇತ್ಯಾದಿ ದ್ವಂದ್ವಗಳಿಗಿರುವ ಕಾರ್ಯಕಾರಣ ಭಾವ ಗಳನ್ನು ನಾಶ ಮಾಡದೆ, ಅವುಗಳನ್ನು ನಿಮಿತ್ತ ಮಾಡಿಯೇ ತನ್ನ ಸಕಲ ನಿಯ ಮನ ವ್ಯಾಪಾರಗಳನ್ನೂ ನಡೆಯಿಸುವನು. ಬ್ರಹ್ಮನಲ್ಲಿ ಭಕ್ತ್ಯುದ್ರೇಕವನ್ನು ಹುಟ್ಟಿಸು ವುದು ಬ್ರಹ್ಮಾಪರೋಕ್ಷ ಜ್ಞಾನದ ಸ್ವಭಾವವು. ಶ್ರೀ ಹರಿಯು ಪ್ರಸನ್ನನಾಗಿ ಅಪ ರೋಕ್ಷ ಜ್ಞಾನ ಸ್ವಭಾವಕ್ಕೂ ಪ್ರೇರಕನಾಗಿ ನಿಯಾಮಕನಾಗಿರುವುದರಿಂದ, ಆತನೇ ಅಪರೋಕ್ಷ ಜ್ಞಾನವನ್ನು ನಿಮಿತ್ತ ಮಾಡಿ, ಆದರ ಸ್ವಭಾವಕ್ಕೂ ಪ್ರೇರಕನಾಗಿ ಭಗವದ್ಭಕ್ತಿಯನ್ನು ವೃದ್ಧಿ ಮಾಡುವನು ಎಂದು ಹೇಳುವುದು ಸರಿಯಾದ ಶಾಸ್ತ್ರಾ ರ್ಥವು. ಇದೇ ವಿದ್ವದ್ವ್ಯವಹಾರವು. ಕೆಲವು ವೇಳೆ ಸರ್ವ ಪ್ರೇರಕನಾದ ಪರ ಮಾತ್ಮನ ನಿಯಾಮಕತೆಯನ್ನು ವಿವರಿಸದೆ ಔಷಧಾದಿ ಪದಾರ್ಥಗಳೇ ರೋಗ ಪರಿಹಾರಾದಿ ಕಾರ್ಯಗಳಲ್ಲಿ ಕಾರಣಗಳೆಂದು ನಿರೂಪಿಸುವುದುಂಟು. ಇಂಥ ಸಂದರ್ಭಗಳಲ್ಲಿ ಅಧ್ಯಾಹಾರದಿಂದ ನಿಜವಾದ ಅರ್ಥವನ್ನು ತಿಳಿಯಬೇಕು. ಪರ ಮಾತ್ಮನಿಯಮ್ಯವಾದ ಸ್ವಭಾವ ಮತ್ತು ಕಾರ್ಯಕಾರಣ ಭಾವವುಳ್ಳ ಔಷಧವು ಆತನ ಅನುಗ್ರಹದಿಂದ ರೋಗವನ್ನು ಪರಿಹಾರ ಮಾಡಿರುವುದು ಎಂಬುದೇ ಫಲಿತವಾದ ಶಾಸ್ತ್ರಾರ್ಥವು. **"ಏತೇನ ಹವಾಪಯೋ ಮಂಡಂ ಭವತಿ", "ನದ್ಯಃ ಸ್ಯಂದಂತೇ", "ನ ಋತೇ ತ್ವತ್ಕ್ರಿಯತೇ ಕಿಂಚನಾರೇ", "ಸರ್ವಸ್ಯ ವಶೀ ಸರ್ವಸ್ಯೇಶಾನಃ"** ಇತ್ಯಾದಿ ಶ್ರುತಿಗಳಿಂದ ಈ ಅರ್ಥವು ಸಿದ್ಧವಾಗಿರು

ವುದು. "**ಯತಃ ಪ್ರವೃತ್ತಿರ್ಭೂತಾನಾಂ**", "**ಮತ್ತಃ ಸರ್ವಂ ಪ್ರವರ್ತತೇ**",

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥**
—(18. 61.)

ಇತ್ಯಾದಿ ಗೀತಾ ಶ್ಲೋಕಗಳೂ ಈ ವಿಷಯದಲ್ಲಿ ಪ್ರಮಾಣವಾಗಿರುವುವು.

(1) **ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
—(18. 58.)

ಎಂಬ ಶ್ರೀ ಕೃಷ್ಣನ ವಾಕ್ಯದಿಂದ ಒಂದೊಂದು ಮೋಕ್ಷ ಸಾಧನ ಸಂಪಾದನೆಯೆಂಬ ದುರ್ಗವೂ ಪರಮಾತ್ಮನ ಪ್ರಸಾದದಿಂದಲೇ ದಾಟಲ್ಪಡಬೇಕಾದುದೆಂದು ನಿಶ್ಚಿತ ವಾಗುವುದು. ಆದುದರಿಂದಲೇ ಹದಿನೈದನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಪರಾಪರ ತತ್ವಗಳನ್ನು ನಿರೂಪಣೆ ಮಾಡಿ, ಇವುಗಳನ್ನು ಜ್ಞಾನದಿಂದ ಸಾಕ್ಷಾತ್ತಾಗಿ ತಿಳಿದವನು ಮುಕ್ತನಾಗುವನು ಎಂದು ಹೇಳಿ, ಅಂಥ ಮೋಕ್ಷ ಸಾಧನೋಪಾಯವೂ ಮತ್ತು ಮೋಕ್ಷ ಸಾಧನೋಪಾಯವನ್ನು ಸಂಪಾದಿಸುವುದರಲ್ಲೂ ಮುಖ್ಯ ಉಪಾಯವೂ **ಪರಮಾತ್ಮನಲ್ಲಿ ಶರಣಾಗತಿಯು** ಎಂದೂ ನಿರೂಪಿಸಿರುತ್ತಾನೆ :—

(2) **ತಮೇವ ಚಾದ್ಯಂ ಪುರುಷಂ ಪ್ರಪದ್ಯೇ**
**ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥** —(15. 4.)

ಪುರಾತನವಾದ ಜನನಾದಿ ಪ್ರವಾಹವು ಯಾರಿಂದ ಪ್ರವರ್ತಿಸಲ್ಪಟ್ಟಿತೋ ಅಂಥ ಆದಿಯಲ್ಲಿದ್ದ ಪರಮಾತ್ಮನನ್ನೇ ಶರಣು ಹೊಂದಬೇಕು.

ಪುನಃ ಏಳನೆಯ ಅಧ್ಯಾಯದಲ್ಲಿಯೂ ಕೂಡ,

(3) **ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ।**
—(7. 14.)

ಎಂದು ಹೇಳಿರುತ್ತಾನೆ. ಹೀಗೆ ಹೇಳಿದುದರಿಂದ ವೈರಾಗ್ಯಾದಿ ಇತರ ಗುಣಗಳ ಸಂಪಾದನೆಯು ಅನವಶ್ಯಕವೆಂದಲ್ಲ, ಭಗವಂತನ ಪ್ರಸಾದವೇ ಮುಖ್ಯ ಕಾರಣವು. ಸದ್ಗುಣಗಳು ಆತನ ಅನುಗ್ರಹದಿಂದ ಮನಸ್ಸಿನಲ್ಲಿ ಉತ್ಪನ್ನವಾಗುವುವು. ಮತ್ತು ಅವುಗಳ ಸ್ವಭಾವಕ್ಕೂ ಅವು ಮೋಕ್ಷೋಪಯೋಗಿಯಾಗುವುದಕ್ಕೂ ಪರಮಾತ್ಮನೇ ನಿಯಾಮಕನು. ಆದುದರಿಂದ ಅವನ ಪ್ರಸಾದವನ್ನು ಕೋರಿ, ಇತರ ಗುಣಗಳನ್ನು ಸಂಪಾದಿಸುವುದಕ್ಕೆ ಅಧಿಕಾರಿಗಳು ಯತ್ನ ಮಾಡಬೇಕೆಂದು ತಾತ್ಪರ್ಯವು. ಆದುದ ರಿಂದಲೇ ಜೀವೋತ್ತಮಾವತಾರರಾದ ಹನುಮಂತ ದೇವರೂ ಸಹ "**ಕ್ಷಣೇ ಕ್ಷಣೇ ಭಕ್ತಿರಲಂ ವಿವರ್ಧತಾಂ**" ಎಂದು ಶ್ರೀರಾಮಚಂದ್ರನನ್ನೇ ಬೇಡಿಕೊಂಡರು.

**"ಸ ಹಿ ಸರ್ವಮನೋವೃತ್ತಿಪ್ರೇರಕಃ ಸಮುದಾಹೃತಃ"** ಎಂಬ ಶ್ರೀಮದಾಚಾರ್ಯರು ಉದಾಹರಿಸಿರುವ ಪ್ರಮಾಣ ವಚನವೂ ಸಹ ಸಾಕ್ಷಾನ್ಮೋಕ್ಷ ಪೂರ್ವ ಭಾವಿಯಾದ ಭಕ್ತಿಯೂ ಶ್ರೀ ಪರಮಾತ್ಮನ ಅನುಗ್ರಹದಿಂದಲೇ ಬರುವುದೆಂದು ಬೋಧಿಸುತ್ತದೆ.

**(4) ಬುದ್ಧಿರ್ಜ್ಞಾನಮಸಂಮೋಹಃ .... .... .... ।**
**—(10. 4.)**

**ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥**
**—(10. 5.)**

ಇತ್ಯಾದಿ ಶ್ಲೋಕಗಳಲ್ಲಿ ಭಕ್ತ್ಯಾದಿ ಸರ್ವ ಗುಣಗಳಿಗೂ ತಾನೇ ಕಾರಣನೆಂದು ಶ್ರೀ ಕೃಷ್ಣನು ಹೇಳಿರುತ್ತಾನೆ.

ಈ ವಿಮರ್ಶೆಯಿಂದ ಸಿದ್ಧವಾದ ಹೆಚ್ಚು ವಿಷಯವೇನೆಂದರೆ, ಮುಖ್ಯಾರ್ಥವಾಗಿ ಶ್ರವಣ, ಮನನ, ಧ್ಯಾನ, ಬ್ರಹ್ಮಾಪರೋಕ್ಷ ಜ್ಞಾನ, ಪರಮ ಭಕ್ತಿಯೇ ಮುಂತಾದ ಅನೇಕ ಸಾಧನಗಳು ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವುವು; ಈ ಒಂದೊಂದು ಸಾಧನವು ಅಧಿಕಾರಿಗೆ ಪ್ರಾಪ್ತವಾಗಬೇಕಾದರೂ ಪರಮಾತ್ಮನ ಪ್ರತ್ಯೇಕ ಪ್ರತ್ಯೇಕ ಪ್ರಸಾದವು ಬೇಕು. ಜೀವನ ಪ್ರತ್ಯೇಕ ಪ್ರತ್ಯೇಕ ಭಕ್ತಿಯೂ ಅವಶ್ಯಕವು. ಹೇಗೆಂದರೆ ಶ್ರವಣ ಮಾಡುತ್ತಾ ಸ್ವಲ್ಪ ಭಕ್ತಿಯಿಂದ ಪರಮಾತ್ಮನನ್ನು ತೃಪ್ತಿಪಡಿಸಿದರೆ, ಪರಮಾತ್ಮನು ಆತನಲ್ಲಿ ಸ್ವಲ್ಪ ಪ್ರಸಾದವನ್ನು ಮಾಡಿ ಸಾತ್ವಿಕವಾದ ಮನನ ಸಾಮರ್ಥ್ಯವನ್ನು ದಯಪಾಲಿಸುವನು. ಮನನ ಮಾಡುತ್ತಾ ಭಕ್ತಿಯಿಂದ ಪರಮಾತ್ಮನನ್ನು ಶರಣು ಹೊಂದಿದರೆ, ಹೆಚ್ಚು ಪ್ರಸಾದವನ್ನು ಅಭಿವ್ಯಕ್ತ ಮಾಡಿ ಪರಮಾತ್ಮನು ಮೋಕ್ಷೋಪಯೋಗಿಯಾದ ಧ್ಯಾನಾಧಿಕಾರವನ್ನು ದಯಪಾಲಿಸುವನು. ಧ್ಯಾನದಿಂದ ಸಮನ್ವಿತನಾಗಿ ಪರಮಾತ್ಮನಲ್ಲಿ ಇನ್ನೂ ಹೆಚ್ಚು ಭಕ್ತಿ ಮಾಡಿದರೆ, ಪರಮಾತ್ಮನು ಮತ್ತೂ ಪ್ರಸಾದಾತಿಶಯದಿಂದ ತನ್ನ ದರ್ಶನರೂಪವಾದ ಬ್ರಹ್ಮಾಪರೋಕ್ಷ ಜ್ಞಾನವನ್ನು ದಯಪಾಲಿಸುವನು. **"ಸಂಗಾತ್ಸಂಜಾಯತೇ ಕಾಮಃ"** ಎಂಬಂತೆ ಪರಮಾತ್ಮ ದರ್ಶನದಿಂದ ಜನಿತವಾದ ಉದ್ರಿಕ್ತ ಭಕ್ತಿಯಿಂದ ಆತನನ್ನು ಭಜನೆ ಮಾಡಿದರೆ, ಆತನು ಆಯಾಯ ಜೀವನ ಯೋಗ್ಯತಾನುಗುಣವಾಗಿ ತನ್ನ ಪೂರ್ಣ ಪ್ರಸಾದವನ್ನು ಪ್ರದರ್ಶನ ಮಾಡಿ ಜೀವನನ್ನು ಮುಕ್ತನನ್ನಾಗಿ ಮಾಡುವನು. ಹೀಗೆ ಒಂದೊಂದು ಮೋಕ್ಷ ಸಾಧನ ಸಂಪಾದನೆಯಲ್ಲಿಯೂ ತರತಮ ಭಾವಾಪನ್ನವಾದ ಜೀವಭಕ್ತಿ, ಹರಿಪ್ರಸಾದಗಳು ಅವಶ್ಯಕವಾಗಿರುವುವು. ಇಷ್ಟು ವಿಚಾರವು ಮನಸ್ಸಿನಲ್ಲಿದ್ದರೆ, ಜ್ಞಾನಕ್ಕೆ ಧ್ಯಾನವು ಸಾಕ್ಷಾತ್ಕಾರಣವು ಇತ್ಯಾದಿ ರೀತಿಯಲ್ಲಿ ನಾವು ಮುಂದೆ ಮಾಡುವ ನಿರೂಪಣೆಯಲ್ಲಿ ಕೆಲವು ವಿಷಯಗಳು ಅಧ್ಯಾಹೃತವಾಗಿರುವುವೆಂಬುದನ್ನು ಸುಲಭವಾಗಿ ತಿಳಿದು ಬರುವುದು.

2. ಇನ್ನು ಬ್ರಹ್ಮಾಪರೋಕ್ಷ ಜ್ಞಾನದ ಸ್ವರೂಪ, ಮತ್ತು ಲಕ್ಷಣಗಳನ್ನು ಸ್ವಲ್ಪ ವರ್ಣಿಸುತ್ತೇವೆ.

ಅಪರೋಕ್ಷ ಜ್ಞಾನವು ಅಲೌಕಿಕವಾದ ಮಾನಸ ಪ್ರತ್ಯಕ್ಷ ರೂಪವೆಂದು ಶ್ರೀ ಕೃಷ್ಣನು ಹೇಳಿರುತ್ತಾನೆ :—

**(1) ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಂ ||**
—(15. 11.)

ಅಪರೋಕ್ಷ ಜ್ಞಾನೋಪಾಯವನ್ನು ಅನುಷ್ಠಾನ ಮಾಡುವ ಯೋಗಿಗಳು ಶ್ರವಣ ಮನನ ಧ್ಯಾನಾದಿ ಪ್ರಯತ್ನಗಳನ್ನು ಮಾಡಿದವರಾಗಿ ತಮ್ಮ ಮನಸ್ಸಿನಲ್ಲಿ ಸ್ಥಿತನಾದ ಪರಮಾತ್ಮನನ್ನು ನೋಡುತ್ತಾರೆ.

**(2) ಧ್ಯಾನೇನಾತ್ಮನಿ ಪಶ್ಯಂತಿ.... .... .... ||** —(13. 24.)

ಕೆಲವರು ಧ್ಯಾನರೂಪ ಪ್ರಯತ್ನ (ಪ್ರಾಚುರ್ಯ) ದಿಂದ ಪರಮಾತ್ಮನನ್ನು ತಮ್ಮ ಮನಸ್ಸಿನಲ್ಲಿ ನೋಡುತ್ತಾರೆ.

**(3) ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ |**
**ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ||**
—(4. 38.)

ಬ್ರಹ್ಮಾಪರೋಕ್ಷ ಜ್ಞಾನಕ್ಕೆ ಸದೃಶವಾದ ಪಾಪ ಪರಿಹಾರಕವಾದ ಪದಾರ್ಥವು ಇರುವುದಿಲ್ಲ. ಅಂಥ ಜ್ಞಾನವನ್ನು ಯೋಗಾರೂಢನು ಬಹು ಕಾಲದ ಮೇಲೆ ಮನಸ್ಸಿನಲ್ಲಿ ಹೊಂದುತ್ತಾನೆ.

**(4) ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ ಆತ್ಮನಿ ತುಷ್ಯತಿ |**
—(6. 20.)

ಸಮಾಧಿ ಪರಿಪಾಕಾವಸ್ಥೆಯಲ್ಲಿ ಮನಸ್ಸಿನಲ್ಲಿ ಮನಸ್ಸಿನಿಂದ ಪರಮಾತ್ಮನನ್ನು ನೋಡುತ್ತಾ, ಪರಮಾತ್ಮ ದರ್ಶನದಿಂದ ಆನಂದವನ್ನು ಹೊಂದಿ, ಇತರ ವಿಷಯಗಳಲ್ಲಿ ಅಲಂಬುದ್ಧಿಯುಳ್ಳವನಾಗುತ್ತಾನೆ.

**(5) .... .... .... ಪಶ್ಯಂತಿ ಜ್ಞಾನಚಕ್ಷುಷಃ |** —(15. 10.)

ಜ್ಞಾನ ನೇತ್ರವುಳ್ಳವರು ಪರಮಾತ್ಮನನ್ನು ನೋಡುತ್ತಾರೆ.

ಈ ವಾಕ್ಯಗಳಿಂದ ಅತೀಂದ್ರಿಯ ದರ್ಶನದಲ್ಲಿ ಸಾಮರ್ಥ್ಯೋಪೇತವಾದ ಮನೋ ಇಂದ್ರಿಯದಿಂದ ಮನಸ್ಸಿನಲ್ಲಿ* ಶ್ರೀ ಪರಮಾತ್ಮನನ್ನು ಸಾಕ್ಷಾದ್ದರ್ಶನ

---

*** " ಮನಸೈವೇದಮಾಪ್ತವ್ಯಂ ", " ಮನಸೈವಾನುದ್ರಷ್ಟವ್ಯಂ ", " ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ", " ಶುದ್ಧೇನ ಮನಸಾ ಸದಾ "** ಇತ್ಯಾದಿ

ಮಾಡುವುದು ಅಪರೋಕ್ಷ ಜ್ಞಾನವೆನ್ನಿಸುವುದು ಎಂದು ಸಿದ್ಧವಾಗುವುದು. ಅದರಲ್ಲಿಯೂ ಕೆಲವರಿಗೆ ಅಪರೋಕ್ಷ ಜ್ಞಾನವು ಆಗುವಾಗಲೇ ವ್ಯಾಪ್ತವಾದ ಭಗವದ್ರೂಪವೂ ಕಾಣುವುದೆಂದು ಷಷ್ಠಾಧ್ಯಾಯದ ವರ್ಣನೆಯಿಂದ ವಿದಿತವಾಗುವುದು.

**(6) ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥**
—(6. 29.)

ಸರ್ವತ್ರ ಸಮದರ್ಶಿಯಾದ, ಯೋಗೋಪಾಯವನ್ನು ಪೂರ್ಣವಾಗಿ ಸಂಪಾದಿಸಿದ ಜ್ಞಾನಿಯು ಪರಮಾತ್ಮನನ್ನು ಸರ್ವ ಪ್ರಾಣಿಗಳಲ್ಲಿಯೂ ಸರ್ವ ಪ್ರಾಣಿಗಳನ್ನು ಪರಮಾತ್ಮನಲ್ಲಿಯೂ ನೋಡುತ್ತಾನೆ.

ಅರ್ಜುನನ ಅಪರೋಕ್ಷ ಜ್ಞಾನ ಪರಾಮರ್ಶದಿಂದಲೂ ಸಹ ಈ ವಿಷಯಗಳೆಲ್ಲವೂ ಸಿದ್ಧವಾಗುವುವು. ಅರ್ಜುನನ ಪ್ರಾರ್ಥನೆಯೇ ಬ್ರಹ್ಮಾಪರೋಕ್ಷ ಜ್ಞಾನವು ಭಗವತ್ಪ್ರತ್ಯಕ್ಷರೂಪವೆಂದು ನಿಶ್ಚಯ ಮಾಡುವುದರಲ್ಲಿ ಆಧಾರವಾಗುತ್ತದೆ :—

---

ಶ್ರುತಿಗಳಿಂದ ಪರಮಾತ್ಮನ ದರ್ಶನವು ಮನಸ್ಸಿನಿಂದಲೇ ಆಗುವುದೆಂದೂ ಬ್ರಹ್ಮನು ಅಜ್ಞೇಯನಲ್ಲವೆಂದೂ ಸಿದ್ಧವಾಗುವುದು. ಶಂಕರಾಚಾರ್ಯರೂ ಕೂಡ ( 2. 21. ) ಗೀತಾಭಾಷ್ಯದಲ್ಲಿ ಮನಸೈವಾನುದ್ರಷ್ಟವ್ಯಂ " ಎಂಬ ಶ್ರುತಿಯನ್ನು ಉದಾಹರಿಸಿ ಬ್ರಹ್ಮನು ಕರಣಾಗೋಚರನಲ್ಲ ಮತ್ತು ಮನಸ್ಸಿಗೆ ಗೋಚರನಾಗುವನೆಂದು ನಿರ್ಣಯ ಮಾಡಿರುತ್ತಾರೆ. ಯದ್ಯಪಿ ಬ್ರಹ್ಮನು ಮನಸ್ಸಿಗೆ ಅಗೋಚರನು, ಆದರೆ ಶ್ರುತಿಯು ಹೇಳುವುದರಿಂದ ತಿರಸ್ಕರಿಸಲಾಗುವುದಿಲ್ಲ ಎಂದು ತೀರ್ಮಾನ ಮಾಡಿರುತ್ತಾರೆ. ಇದೇ ಶ್ರುತಿ ಗೌರವದಿಂದ ಬ್ರಹ್ಮನು ಜ್ಞೇಯನು ಎಂದು ತೀರ್ಮಾನ ಮಾಡಿದ್ದರೆ ವಿರೋಧವು ಶಾಂತವಾಗುತ್ತಿತ್ತು. ಈಗಲಾದರೋ ಬ್ರಹ್ಮನು ಅಜ್ಞೇಯನು ಎಂದು ಒಪ್ಪಿ, ಬ್ರಹ್ಮನು ಮನಸ್ಸಿಗೆ ಗೋಚರನು ಎಂದು ಹೇಳಿದುದರಿಂದ ವಿರುದ್ಧವಾದವನ್ನು ಅವಲಂಬಿಸಿದಂತಾಯಿತು.

ಶ್ರುತಿಯಾದರೋ ನಾರಾಯಣನನ್ನೇ ಪರಬ್ರಹ್ಮನೆಂದು ಹೇಳಿ ಆತನೇ " ಮಹಾಜ್ಞೇಯಂ " ಎಂದರೆ ಅತ್ಯುತ್ತಮಜ್ಞೇಯನೆಂದು ಹೇಳಿರುವುದು. ಗೀತೆಯಲ್ಲಿಯೂ ಕೂಡ " **ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಽಮೃತಮಶ್ನುತೇ । ಅನಾದಿಮತ್ಪರಂ ಬ್ರಹ್ಮ .... .... ....** ॥ " ಎಂದು ಜ್ಞೇಯ ವಸ್ತುವೇ ಪರಬ್ರಹ್ಮನೆಂದು ಶ್ರೀ ಕೃಷ್ಣನು ಹೇಳಿರುತ್ತಾನೆ.

ಅದ್ವೈತಮತದಲ್ಲಿ ಬ್ರಹ್ಮಜ್ಞಾನವು ಅಸಾಧ್ಯವು ಎಂಬುದೇ ನಿಜವಾದ ಸ್ಥಿತಿಯೆಂದು ಉರ್ಕುಹಾರ್ಟನು ಹೇಳುತ್ತಾನೆ :—

" ( Shankara's ) method conceals both from himself and from others the true concluison that the quest is really a

(7) **ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ।**
**ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಂ ॥**
—(11. 3-4.)

ಎಲೈ ಪುರುಷೋತ್ತಮನೇ ! ನಿನ್ನ ಈಶ್ವರ ಸಂಬಂಧಿಯಾದ ರೂಪವನ್ನು ನೋಡಬೇಕೆಂದು ಇಚ್ಛಿಸುತ್ತೇನೆ. ಹೇ ಪ್ರಭೋ ! ಯೋಗೇಶ್ವರ ! ನನ್ನಿಂದ ಅದು ನೋಡಲ್ಪಡುವುದಕ್ಕೆ ಶಕ್ಯವಾಗುವುದಾದರೆ ನೀನು ನಿನ್ನ ಅವ್ಯಯವಾದ ಸ್ವರೂಪವನ್ನು ತೋರಿಸು.

(8) **ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ**
—(11. 5.)

ಎಲೈ ಪಾರ್ಥನೆ ! ಶತಶಃ ಮತ್ತು ಸಹಸ್ರಶಃ ನನ್ನ ರೂಪಗಳನ್ನು ನೋಡು.

ಅಪರೋಕ್ಷ ಜ್ಞಾನವು ನಮ್ಮ ಸಾಮಾನ್ಯ ಇಂದ್ರಿಯಗಳಿಂದಾಗಲೀ, ಸಾಮಾನ್ಯ ಮನಸ್ಸಿನಿಂದಾಗಲೀ ಉತ್ಪನ್ನವಾದುದಲ್ಲ. ಸಂಸ್ಕೃತವಾದ, ಅಲೌಕಿಕ ಪದಾರ್ಥಗಳನ್ನೂ ನೋಡುವುದಕ್ಕೆ ಪ್ರಯೋಜಕವಾದ ಶಕ್ತಿವಿಶೇಷದಿಂದ ಸಹಿತವಾದ ಮನೋ ಇಂದ್ರಿಯದಿಂದ ಉತ್ಪನ್ನವಾದುದು ಎಂದು ಶ್ರೀ ಕೃಷ್ಣನೇ ಹೇಳುತ್ತಾನೆ :—

---

hopeless one. The empirical investigator is practically told that he has failed because he has been searching in the wrong place. And in addition to this, the higher knowledge also encourages him in his abstract view, for there is associated with it the idea of vagueness rather than of definiteness and even he who has attained to it has to be content with the abstract and the negative and the undefined."

—W. S. Urquhart, M. A. D. Litt.

**ತಾತ್ಪರ್ಯವು:—** ಶಂಕರಾಚಾರ್ಯರ ಉಪಪಾದನೆಯು ಅದ್ವೈತಮತದಲ್ಲಿ ಬ್ರಹ್ಮಜ್ಞಾನಾರ್ಥವಾದ ಮಾರ್ಗಣವು ನಿಷ್ಫಲವೆಂಬ ನಿಜವಾದ ಸ್ಥಿತಿಯನ್ನು ತಮಗೂ ಮತ್ತೂ ಇತರರಿಗೂ ತಿಳಿಯದಂತೆ ಮರೆಮಾಡಿರುತ್ತದೆ. ವ್ಯಾವಹಾರಿಕ ಪ್ರಪಂಚದಲ್ಲಿ ಹುಡುಕುವವನಿಗಂತೂ "ನೀನು ಅಸ್ಥಾನದಲ್ಲಿ ಹುಡುಕುತ್ತೀ. ಆದ್ದರಿಂದ ನಿನ್ನ ಪ್ರಯತ್ನವು ನಿಷ್ಫಲವು" ಎಂದು ಹೇಳಲ್ಪಟ್ಟಿರುವುದು. ಇದಲ್ಲದೆ ಪರವಿದ್ಯೆಯೂ ಕೂಡ ಬ್ರಹ್ಮನನ್ನು ನಿಷ್ಕೃಷ್ಟವಾಗಿ ತಿಳಿಯುವುದರಲ್ಲಿ ಉಪೋದ್ಬಲಕವಲ್ಲ. ಏತಕ್ಕೆಂದರೆ ಅವನ ವಿಷಯವಾದುದೆಲ್ಲಾ ನಿರ್ವಿಷಯವೂ, ಅಸ್ಪಷ್ಟವೂ, ಹೀಗೆ ಇದೆ ಎಂದು ಹೇಳಲಿಕ್ಕೆ ಬರದಂತೆ ಅನಿರ್ವಚನೀಯವೂ ಆಗಿರುತ್ತದೆ. ಯಾವ ಪ್ರಕಾರದಿಂದಲೂ ಬ್ರಹ್ಮನನ್ನು ತಿಳಿಯುವುದಕ್ಕಾಗುವುದಿಲ್ಲವೆಂದು ಭಾವವು,

(9) **ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಂ ॥**
—(11. 8.)

ಎಲೈ ಅರ್ಜುನನೇ ! ನೀನು ನಿನ್ನ ಸ್ವಕೀಯವಾದ ಚಕ್ಷುಸ್ಸಿನಿಂದ ನನ್ನನ್ನು ನೋಡುವುದಕ್ಕೆ ಸಮರ್ಥನಲ್ಲ. ಆದುದರಿಂದ ನಾನು ನಿನಗೆ ಅಲೌಕಿಕವಾದ ದರ್ಶನ ಶಕ್ತಿಯನ್ನು ಕೊಡುತ್ತೇನೆ. ಅಚಿಂತ್ಯವಾದ ನನ್ನ ಸಾಮರ್ಥ್ಯವನ್ನು ನೋಡು.

"ದಿವ್ಯಚಕ್ಷುರ್ಮನಃ ಸ್ಮೃತಂ" ಇತ್ಯಾದಿ ಪ್ರಮಾಣಾನುಸಾರವಾಗಿ ದಿವ್ಯ ದೃಷ್ಟಿಯೆಂಬುದು ಮನಸ್ಸಿಗೆ ಪ್ರಾಪ್ತವಾದ ಒಂದು ಶಕ್ತಿವಿಶೇಷವೇ ಹೊರತು ಒಂದು ನೂತನವಾದ ಇಂದ್ರಿಯವೆಂದು ತಿಳಿಯುವುದಕ್ಕೆ ಕಾರಣವಿಲ್ಲ. ಶ್ರವಣಾದಿಗಳಿಂದ ಸಂಸ್ಕೃತವಾದ ಮನಸ್ಸಿಗೇ ಪರಮಾತ್ಮನ ಅನುಗ್ರಹದಿಂದ ಇಂಥ ಸಾಮರ್ಥ್ಯವು ಒರುವುದು. "ದೃಶ್ಯತೇ ತ್ವಗ್ರ್ಯಯಾಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ" ಎಂಬ ಶ್ರುತಿಯೂ ಸಹ ಈ ಅರ್ಥದಲ್ಲಿಯೇ ಅನುಕೂಲವಾಗಿರುವುದು.

ಅರ್ಜುನನು ನೋಡಿದ ರೂಪವು ಸ್ವದೇಹದಲ್ಲಿ ಮತ್ತು ಸರ್ವತ್ರ ವ್ಯಾಪ್ತ ವಾದ ಭಗವದ್ರೂಪವಾದುದರಿಂದ ಈತನು ವ್ಯಾಪ್ತದರ್ಶಿಯಾದ ಉತ್ತಮ ಯೋಗೀ ಶ್ವರರಲ್ಲಿ ಸೇರಿದವನೆಂದು ಸಿದ್ಧವಾಗುವುದು.

ಇಂಥ ಭಗವದ್ದರ್ಶನವು ಸಕಲ ಪಾಪಗಳಿಗೆ ಅಗ್ನಿಯಂತೆ ಇರುವುದು. ಶ್ರೀ ಕೃಷ್ಣನು ಹೇಳುತ್ತಾನೆ. :—

(10) **ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥**
**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ ।**
**ಜ್ಞಾನಾಗ್ನಿಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥**
—(4. 36–37.)

ಎಲೈ ಅರ್ಜುನನೇ ! ಸರ್ವ ಪಾಪಿಗಳಿಗಿಂತಲೂ ನೀನು ಅಧಿಕ ಪಾಪ ಮಾಡಿದವನಾಗಿದ್ದರೂ, ಸಮಸ್ತ ಪಾಪವನ್ನೂ ನೀನು ಜ್ಞಾನವೆಂಬ ನಾವೆಯಿಂದ ದಾಟುತ್ತೀಯೆ. ಪ್ರದೀಪ್ತವಾದ ಅಗ್ನಿಯು ಕಾಷ್ಠಗಳನ್ನು ಭಸ್ಮ ಮಾಡುವಂತೆ ಬ್ರಹ್ಮಾಪರೋಕ್ಷವೆಂಬ ಜ್ಞಾನಾಗ್ನಿಯು ಸಕಲ ಪ್ರಾರಬ್ಧೇತರ ಅನಿಷ್ಟ ಕರ್ಮ ಗಳನ್ನೂ ಭಸ್ಮವನ್ನಾಗಿ ಮಾಡುತ್ತದೆ.

ಪುನಃ ಶ್ರೀ ಕೃಷ್ಣನು ಹೇಳುತ್ತಾನೆ :—

(11) **ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥**
—(4. 19.)

ಬ್ರಹ್ಮಜ್ಞಾನವೆಂಬ ಅಗ್ನಿಯಿಂದ ದಹಿಸಲ್ಪಟ್ಟ ಪಾಪವುಳ್ಳವನನ್ನು ಪಂಡಿತನೆಂದು ( ಬ್ರಹ್ಮಜ್ಞಾನಿಯೆಂದು ) ಬುಧರು ಹೇಳುತ್ತಾರೆ.

**(12) ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ||**
**—(2. 50.)**

ಅಪರೋಕ್ಷ ಜ್ಞಾನಿಯು ಪ್ರಾರಾಭ್ಧೇತರ ಅನಿಷ್ಟ ಪುಣ್ಯ ಪಾಪಗಳನ್ನು ಪರಿತ್ಯಜಿಸುತ್ತಾನೆ.

ಅಪರೋಕ್ಷ ಜ್ಞಾನವು ಸಕಲ ಕರ್ಮಗಳಿಗೂ ಫಲರೂಪವಾದ ಅವಸ್ಥೆಯೆಂದೂ ಶ್ರೀ ಕೃಷ್ಣನ ಚತುರ್ಥಾಧ್ಯಾಯದ ನಿರೂಪಣೆಯಿಂದಲೇ ತಿಳಿದು ಬರುತ್ತದೆ. ಶ್ರೀ ಕೃಷ್ಣನು ಹನ್ನೊಂದು ವಿಧವಾದ ಯಜ್ಞಗಳನ್ನು ನಿರೂಪಿಸಿ, ಇವೆಲ್ಲಾ ಕರ್ಮದಿಂದ ಉತ್ಪನ್ನವಾದವು; ಇವುಗಳಿಗೆಲ್ಲಾ ಅಪರೋಕ್ಷ ಜ್ಞಾನವೇ ಫಲವು ಎಂದು ಹೇಳಿರುತ್ತಾನೆ. :—

**(13) ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ, ಮುಖೇ |**
**ಕರ್ಮಜಾನ್ ವಿದ್ಧಿ ತಾನ್ ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ||**
**ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ |**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ||**
**—(4. 32–33.)**

ಬ್ರಹ್ಮೋಪಾಸನೆ, ಅಗ್ನಿಪೂಜೆ, ಇಂದ್ರಿಯನಿಗ್ರಹ, ವಿಷಯಸಮರ್ಪಣ, ಮನೋನಿಗ್ರಹ, ದ್ರವ್ಯದಾನ, ತಪಸ್ಸು, ಯೋಗಧ್ಯಾನ, ಸ್ವಾಧ್ಯಾಯ, ಶ್ರವಣ ಮನನಾದಿಗಳು, ಪ್ರಾಣಾಯಾಮ ಇವೇ ಮುಂತಾದ ಅನೇಕ ಪ್ರಕಾರವಾದ ಯಜ್ಞಗಳು ಪರಮಾತ್ಮನ ಮುಖದಲ್ಲಿ ವಿಸ್ತೃತವಾಗಿರುವುವು- ಎಲೈ ಪಾರ್ಥನೇ ! ಇವೆಲ್ಲವೂ ಕರ್ಮಜನ್ಯವೆಂದೇ ತಿಳಿ. ಈ ರೀತಿ ತಿಳಿದು ಕರ್ಮಗಳನ್ನು ಆಚರಿಸಿದರೆ ನೀನು ಮುಕ್ತನಾಗುತ್ತೀಯೆ. ಎಲೈ ಪರಂತಪನೇ ! ಪ್ರಧಾನವಾದ ಯಜ್ಞಗಳ ದೆಸೆಯಿಂದ ಜ್ಞಾನ ಯಜ್ಞವು ಶ್ರೇಷ್ಠವು. ಏತಕ್ಕೆಂದರೆ ಸಕಲ ಕರ್ಮವೂ ಅಪರೋಕ್ಷ ಜ್ಞಾನರೂಪ ಫಲದಲ್ಲಿ ಅಂತರ್ಭವಿಸುತ್ತದೆ.

ಶ್ರವಣ, ಮನನ, ಪ್ರತ್ಯಾಹಾರ, ಧ್ಯಾನಾದಿ ಸಕಲ ಯೋಗಾನುಷ್ಠಾನಗಳಿಗೂ ಅಪರೋಕ್ಷ ಜ್ಞಾನವು ಸಿದ್ಧಿಭೂಮಿಯೆಂದೂ, ಪರಬ್ರಹ್ಮನ ವಿಷಯಕವಾದ ಸಕಲ ಸಂಶಯ ವಿಪರ್ಯಯಗಳನ್ನು ಮತ್ತೂ ಸಕಲ ಮಾನಸಿಕ ವಿಕಲ್ಪಗಳನ್ನೂ ನಿಶ್ಶೇಷವಾಗಿ ನಾಶ ಮಾಡತಕ್ಕ ಅವಸ್ಥೆಯೆಂದೂ ಶ್ರೀ ಕೃಷ್ಣನ ವಾಕ್ಯಗಳಿಂದ ಗೊತ್ತಾಗುತ್ತದೆ.

**(14) ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ |**
**ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ||**

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥**
—(6. 7-8.)

**ಅರ್ಥವು :—** ಜಿತಮನಸ್ಕನಿಗೆ ಪ್ರಶಾಂತಿಯು ಬರುವುದು; ಎಂದರೆ ಮನಸ್ಸು ಸ್ವತಏವ ವಿಷಯಗಳಲ್ಲಿ ಪ್ರವರ್ತಿಸುವುದಿಲ್ಲ. ಪ್ರಶಾಂತನ ಹೃದಯದಲ್ಲಿ ಪರಮಾತ್ಮನು ಸನ್ನಿಹಿತನಾಗುತ್ತಾನೆ. (ಎಂದರೆ ಧ್ಯಾನವಿಷಯನಾಗಿ ಅನಂತರ ಅಪರೋಕ್ಷ ಜ್ಞಾನ ವಿಷಯನಾಗುತ್ತಾನೆ. ಎಂದು ಭಾವವು.) ಜ್ಞಾನಿಯು ಶೀತೋಷ್ಣ, ಸುಖದುಃಖ, ಮಾನಾಪಮಾನರೂಪ ದ್ವಂದ್ವಗಳು ಬಂದೊದಗಿದರೂ ನಿರ್ವಿಕಾರನಾಗಿರುವನು. ಏಕೆಂದರೆ ಜ್ಞಾನಿಯು ಪರಾಪರತತ್ವ ವಿಷಯಕವಾದ ಮನಸ್ಸುಳ್ಳವನಾಗಿ, ಜಿತೇಂದ್ರಿಯನಾಗಿ, ಆತಏವ ನಿರ್ವಿಕಾರವಾದ ಚಿತ್ತವುಳ್ಳವನಾಗಿ, ಕಾಂಚನವನ್ನು ಮಣ್ಣು ಹೆಂಟೆಕಲ್ಲುಗಳಿಗೆ ಸಮವಾಗಿ ತಿಳಿದು ಧ್ಯಾನವನ್ನಾಚರಿಸುವನು. ಅವನು ಯೋಗಪೂರ್ತಿಯುಳ್ಳವನೆಂದು ಹೇಳಲ್ಪಡುತ್ತಾನೆ.

(15) **ಯದಾ ತೇ ಮೋಹಕಲಿಲಂಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥**
**ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥**
—(2. 52-53.)

ನಿನ್ನ ಮನಸ್ಸು ಮಿಥ್ಯಾ ಜ್ಞಾನವೆಂಬ ಮೋಹವನ್ನು ಯಾವಾಗ ಬಿಡುತ್ತದೋ ಆಗ ನಿನ್ನಿಂದ ಇದುವರೆವಿಗೆ ಶ್ರುತವಾದ ಮತ್ತು ಶ್ರೋತವ್ಯವಾದ ಸಕಲ ಕರ್ಮಗಳ ಅತ್ಯಂತ ಲಾಭವನ್ನೂ ನೀನು ಹೊಂದುತ್ತೀಯೆ.

(16) **ಯದ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ ।**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥**
—(4. 35.)

ಜ್ಞಾನಿಗಳ ಉಪದೇಶದಿಂದ ಪರಮಾತ್ಮನನ್ನು ತಿಳಿದ ಮೇಲೆ (ಅಪರೋಕ್ಷ ಜ್ಞಾನವಾದರೆ), ನೀನು ಪುನಃ ಇಂಥ ಬಂಧು ವಿಷಯಕವಾದ ಮೋಹವನ್ನು ಹೊಂದುವುದಿಲ್ಲ. ಯಾವ ಜ್ಞಾನದಿಂದ ಸರ್ವಾಂತರ್ಯಾಮಿಯಾದ ನನ್ನಲ್ಲಿ ಸರ್ವ ಪ್ರಾಣಿಗಳೂ ಇರುವುವೆಂದು ತಿಳಿಯುವೆಯೋ ಅಂತಹ ಜ್ಞಾನವನ್ನು ನಿನಗೆ ಉಪದೇಶ ಮಾಡುತ್ತೇನೆ.

(17) **........ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥** —(2. 59.)

ವಿಷಯಾಭಿಲಾಷೆಯು ಬ್ರಹ್ಮಾಪರೋಕ್ಷ ಜ್ಞಾನದಿಂದ ಪೂರ್ಣವಾಗಿ ನಿವೃತ್ತವಾಗುವುದು.

**(18) ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ ।**
**ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।**
**ತೇಷಾಮಾದಿತ್ಯವಜ್ಞ್ಯಾನಂ ಪ್ರಕಾಶಯತಿ ತತ್ಪರಂ ॥**
—(5. 15–16.)

ಜೀವಸ್ವರೂಪ ಜ್ಞಾನವು ಅವಿದ್ಯೆಯಿಂದ ಆವೃತವಾಗಿರುವುದು. ಆದುದರಿಂದ ಪ್ರಾಣಿಗಳು ಮೋಹಿತರಾಗುವರು. ಯಾವಾತನ ಅಜ್ಞಾನವು ಶಾಸ್ತ್ರಜನ್ಯ ಜ್ಞಾನದಿಂದ ನಾಶ ಹೊಂದುವುದೋ ಅಂಥವರಿಗೆ ಉತ್ಪನ್ನವಾದ ಬ್ರಹ್ಮಾಪರೋಕ್ಷ ಜ್ಞಾನವು ಆದಿತ್ಯಪ್ರಕಾಶವು ಘಟಾದಿ ಪದಾರ್ಥಗಳನ್ನು ಪ್ರಕಾಶಪಡಿಸುವಂತೆ ಪರಮಾತ್ಮನನ್ನು ಸಾಕ್ಷಾತ್ಕರಿಸುತ್ತದೆ.

ಇದರಲ್ಲಿ ಯುಕ್ತಿಯೂ ಇರುವುದು. ಶ್ರವಣ ಮನನಗಳಿಂದ ಜನಿತವಾದ ಜ್ಞಾನವು ಎಷ್ಟೇ ಶುದ್ಧವಾದರೂ ಸ್ಫುಟವಾಗಲಾರದು. ನಮ್ಮ ಶ್ರೀರಾಮ ದೇವರ ಮೂರ್ತಿಯನ್ನು ಮತ್ತೊಬ್ಬರು ಹತ್ತು ದಿವಸಗಳು ವರ್ಣಿಸಿದರೂ ಸಹ ದೇವರನ್ನು ನೀವು ಸಾಕ್ಷಾತ್ತಾಗಿ ನೋಡಿದಷ್ಟು ಸ್ಪಷ್ಟವಾದ ಜ್ಞಾನವು ಉಂಟಾಗಲಾರದು. ಪ್ರತ್ಯಕ್ಷ ಜ್ಞಾನವು ಶ್ರವಣಾದಿಗಳಿಂದ ತಿಳಿಯುವುದಕ್ಕೆ ಅಶಕ್ಯವಾದ, ವಸ್ತುವಿನ ಅನೇಕ ವಿಶೇಷ ಧರ್ಮಗಳನ್ನು ಅತಿ ಸುಲಭವಾಗಿ ವಿಷಯೀಕರಿಸುತ್ತದೆ. ಆದುದರಿಂದ ಸಕಲ ಸಂಶಯವಿಪರ್ಯಯಗಳನ್ನೂ ಪ್ರತ್ಯಕ್ಷವು "ಝಡಿತಿ" ನಾಶ ಮಾಡುತ್ತದೆ. ಹೀಗೆಯೇ ವೇದಾದಿಗಳಿಂದ ಪರಬ್ರಹ್ಮನ ರೂಪ ಲಾವಣ್ಯಗಳನ್ನೂ, ಹೃದಯದಲ್ಲಿ ಅವನು ಇರುವ ಸ್ಥಾನವಿಶೇಷವು, ಜಗತ್ತಿಗೂ ಅವನಿಗೂ ಇರುವ ಸಂಬಂಧ ವಿಶೇಷವು ಇವುಗಳನ್ನೆಲ್ಲಾ ಪರೋಕ್ಷವಾಗಿ ತಿಳಿದಿದ್ದರೂ, ಆ ಜ್ಞಾನವು ಪರಮಾತ್ಮನ ರೂಪವಿಶೇಷದ ಸಾಕ್ಷಾತ್ಪ್ರತ್ಯಕ್ಷವಾದಷ್ಟು ಸಮಗ್ರವೂ, ಸ್ಪಷ್ಟವೂ, ಸಕಲ ಸಂಶಯ ನಿವಾರಕವೂ, ಮತ್ತು ಸುಖಾತಿಶಯ ಹೇತುವೂ ಆಗಲಾರದು. ಹೀಗೆ ಸರ್ವಾಧಾರನೂ, ಸರ್ವಸ್ವತಂತ್ರನೂ, ದರ್ಶನ ಮಾತ್ರದಿಂದ ನಿರವಧಿಕಾನಂದ ಪ್ರದನೂ ಆದ ಪರಮಾತ್ಮನನ್ನು ಸಾಕ್ಷಾತ್ತಾಗಿ ಘಟಪಟಾದಿಗಳನ್ನು ನಾವು ನೋಡುವಂತೆ ನೋಡುವ ಜ್ಞಾನಿಯು ಸಕಲ ಮಿಥ್ಯಾಜ್ಞಾನವನ್ನೂ ಪರಿಹರಿಸಿಕೊಳ್ಳುವನು ಎನ್ನುವುದರಲ್ಲಾಗಲೀ, ಅಂಥ ಪರಮಾತ್ಮ ದರ್ಶನವನ್ನು ಬಿಟ್ಟು ಕ್ಷುದ್ರವಾದ ಲೌಕಿಕ ಕರ್ಮಗಳನ್ನು ಮಾಡುವುದಿಲ್ಲವೆನ್ನುವುದರಲ್ಲಾಗಲೀ ಆಶ್ಚರ್ಯವೇನು ? ಪ್ರಾಯೇಣ ಸಕಲ ವಿಷಯಕಾಂಕ್ಷಾರಾಹಿತ್ಯವು ಅಪರೋಕ್ಷ ಜ್ಞಾನಿಯ ಲಕ್ಷಣವೆಂದು ನಾವು ಹಿಂದೆಯೇ ನಿರೂಪಿಸಿರುತ್ತೇವೆ. ಅಪರೋಕ್ಷ ಜ್ಞಾನವು ಬಹು ಸುಖರೂಪವಾದ ಅವಸ್ಥೆಯೆಂದೂ, ಅದನ್ನು ಹೊಂದಿದವನು, ಬ್ರಹ್ಮದರ್ಶನವನ್ನು ಪರಿತ್ಯಾಗ ಮಾಡಿ, ಅವಶ್ಯಕವಾಗಿ ಮಾಡಬೇಕಾದ ಕರ್ಮವು ಒಂದೂ ಇಲ್ಲವೆಂದೂ ಶ್ರೀ ಕೃಷ್ಣನು ಸ್ಪಷ್ಟವಾಗಿ ಹೇಳಿರುತ್ತಾನೆ :—

**(19) ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥**

**ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।**
**ನಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥***
—(3. 17-18.)

(20) **ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ।**
**ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಂ ॥**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ।**
**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
**ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ।**
**ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಂ†॥**
—(6. 20-23.)

(21) **ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಂ ।**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಂ ॥**
**ಯುಂಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥**
—(6. 27-28.)

ವಿಷಯಗಳಲ್ಲಿ ಸ್ವತಃ ಅಪ್ರವೃತ್ತ ಮನಸ್ಸುಳ್ಳ ನಿವೃತ್ತ ರಜೋಗುಣನಾದ ಬ್ರಹ್ಮನಲ್ಲಿ ಸ್ಥಿತಮನಸ್ಸುಳ್ಳ, ಕಾಮಾದಿ ದೋಷರಹಿತನಾದ ಧ್ಯಾನಯೋಗಿಯನ್ನು ಉತ್ತಮ ಸುಖವು ಬಂದು ಸೇರುತ್ತದೆ. ಆ ಸುಖವು ಎಂಥಾದ್ದು ಎಂಬುದನ್ನು ಶ್ರೀ ಕೃಷ್ಣನು ಹೇಳುತ್ತಾನೆ :— ರಾಗಾದಿ ದೋಷರಹಿತನಾದ ಧ್ಯಾನಯೋಗಿಯು ಸರ್ವದಾ ಪರಮಾತ್ಮನನ್ನು ಧ್ಯಾನ ಮಾಡತಕ್ಕವನಾಗಿ ಪರಬ್ರಹ್ಮಸಂಸ್ಪರ್ಶಜನಿತವಾದ ಅತಿಶಯಿತವಾದ ಸುಖವನ್ನು ಹೊಂದುತ್ತಾನೆ.

ಈ ರೀತಿ ಯೋಗಾರೂಢನಾದ ಅಪರೋಕ್ಷಜ್ಞಾನಿಯೇ ಸಂಪೂರ್ಣವಾದ ಶಾಸ್ತ್ರೋಕ್ತ ಸಮದೃಷ್ಟಿಯುಳ್ಳವನು, ಅವನೇ ಸಂಪೂರ್ಣವಾಗಿ ತನ್ನ ಅಸ್ವಾತಂತ್ರ್ಯಜ್ಞಾನವುಳ್ಳವನು. ಆದುದರಿಂದಲೇ ಅವನಿಗೆ ಜ್ಞಾನಾನಂತರದಲ್ಲಿ ಮಾಡಿದ ಕರ್ಮಲೇಪಗಳು ಇರುವುದಿಲ್ಲ. ಪ್ರಮಾದದಿಂದ ಮಾಡಿದ ಸಾಮಾನ್ಯ ಪಾಪಗಳೂ ಕೂಡ ಜ್ಞಾನಿಗೆ ಹಾನಿಕರವಾಗಲಾರವು ಎಂದು ಶ್ರೀ ಕೃಷ್ಣನು ಹೇಳುತ್ತಾನೆ :—

(22) **ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥**

---

* ಪ್ರಥಮ ಭಾಗದಲ್ಲಿ ಈಗಾಗಲೇ ಹಿಂದೆಯೇ ವ್ಯಾಖ್ಯಾತವಾಗಿರುವುದು,

† ಪ್ರಥಮ ಭಾಗದಲ್ಲಿ ಈಗಾಗಲೇ ಹಿಂದೆಯೇ ವ್ಯಾಖ್ಯಾತವಾಗಿರುವುದು.

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥**
**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥**
**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ॥**
—(6. 29-32.)

ಧ್ಯಾನಯೋಗನಿರತನಾದ ಜ್ಞಾನಿಯು ಸಮದರ್ಶನನಾಗಿ ಎಂದರೆ ಬ್ರಹ್ಮಾದಿ ತೃಣಾಂತವ್ಯಾಪ್ತನಾದ ಪರಮಾತ್ಮನು ಸರ್ವ ಅಧಿಷ್ಠಾನಗಳಲ್ಲೂ ಸಮವಾದ ಐಶ್ವರ್ಯಾದಿಗಳಿಂದ ಪೂರ್ಣನಾಗಿ ಅಭಿನ್ನನಾಗಿರುವನು ಎಂದು ತಿಳಿದು ಪರಮಾತ್ಮನು ಸರ್ವಾಂತರ್ಯಾಮಿಯೆಂದೂ, ಸರ್ವವೂ ಪರಮಾತ್ಮನಲ್ಲಿ ಇರುವುದೆಂದೂ ನೋಡುತ್ತಾನೆ. ಸರ್ವ ಭೂತಗಳಲ್ಲಿ ಪ್ರತ್ಯೇಕ ಅನಂತ ರೂಪದಿಂದ ಇರುವ ನನ್ನನ್ನು ಅತ್ಯಂತ ಅಭಿನ್ನನೆಂದು ತಿಳಿದು ಭಜನೆ ಮಾಡುವ ಜ್ಞಾನಿಯು ಪ್ರಮಾದದಿಂದ ಅನ್ಯಾಯದಲ್ಲಿ ಪ್ರವೃತ್ತನಾದರೂ ನನ್ನಲ್ಲಿ ಸ್ಥಿತಿರೂಪವಾದ ಮುಕ್ತಿಯನ್ನು ಹೊಂದುತ್ತಾನೆ. ಎಲೈ ಅರ್ಜುನನೇ ! ತನ್ನಂತೆ ಇತರ ಭಗವದ್ಭಕ್ತರಿಗೂ ದುಃಖವಾಗದೆ ಸುಖವಾಗಬೇಕು ಎಂದು ತಿಳಿಯುವ ಸಮಜ್ಞಾನಿಯು ಅತ್ಯಂತ ಶ್ರೇಷ್ಠನು.

(23) **ಯೋಗಸಂನ್ಯಸ್ತ ಕರ್ಮಾಣಂ ಜ್ಞಾನಸಂಛಿನ್ನಸಂಶಯಂ ।**
**ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥**
—(4. 41.)

ಎಲೈ ಧನಂಜಯನೇ ! ಭಗವಂತನಲ್ಲಿ ಮನೋಯೋಗದಿಂದ ಸರ್ವ ಕರ್ಮಗಳನ್ನೂ ಪರಮಾತ್ಮನಲ್ಲಿ ಅರ್ಪಿಸಿದ, ಜ್ಞಾನದಿಂದ ನಿವೃತ್ತ ಸಂಶಯವುಳ್ಳ ಪರಮಾತ್ಮನ ಭಕ್ತನನ್ನು ಕರ್ಮಗಳು ಬಂಧಿಸುವುದಿಲ್ಲ. ಜ್ಞಾನಿಯು ಮುಕ್ತನಾಗುತ್ತಾನೆ ಎಂದರ್ಥವು.

(24) **ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।**
—(9. 28.)

( ಜ್ಞಾನಿಯಾದ ನಂತರ ) ಶುಭಾಶುಭ ಫಲಗಳನ್ನು ಕೊಡುವ ಸರ್ವ ಕರ್ಮ ಬಂಧನಗಳಿಂದಲೂ ಮುಕ್ತನಾಗುತ್ತೀಯೆ.

(25) **ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।**
**ಹತ್ವಾಪಿ ಸ ಇಮಾಂ ಲೋಕಾನ್ ನ ಹಂತಿ ನ ನಿಬಧ್ಯತೇ ॥**
—(18. 17.)

ಸ್ವಾತಂತ್ರ್ಯಾಭಿಮಾನರಹಿತನಾದ ಕರ್ಮ ಫಲದಲ್ಲಿ ಸ್ನೇಹರಹಿತವಾದ ಬುದ್ಧಿಯುಳ್ಳ ಅಪರೋಕ್ಷ ಜ್ಞಾನಿಯು ಈ ಯಾವತ್ತು ಲೋಕಗಳನ್ನೂ ಸಂಹರಿಸಿದರೂ ಕರ್ಮಬದ್ಧನಾಗುವುದಿಲ್ಲ. ಮುಕ್ತನಾಗುತ್ತಾನೆ ಎಂದರ್ಥವು.

ಈ ರೀತಿಯಾಗಿ ಅಪರೋಕ್ಷ ಜ್ಞಾನವು ಸರ್ವ ಮೋಕ್ಷ ಸಾಧನೆಗಳಲ್ಲೂ ಅತಿ ಶ್ರೇಷ್ಠವಾದುದರಿಂದಲೇ ಜ್ಞಾನ ಫಲವು ಸಕಲ ಕರ್ಮ ಫಲಗಳಿಗಿಂತಲೂ ಅಧಿಕವೆಂದೂ ಶ್ರೀ ಕೃಷ್ಣನು ಹೇಳಿರುತ್ತಾನೆ :—

**(26) ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ * ॥**
—(2. 47.)

**(27) ವೇದೇಷು ಯಜ್ಞೇಷು ತಪಸ್ಸು ಚೈವ**
**ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಂ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂ ಸ್ಥಾನಮುಪೈತಿ ಚಾದ್ಯಂ † ॥**
—(8. 28.)

3. ಪರೋಕ್ಷ ಜ್ಞಾನಕ್ಕಿಂತ ಅತ್ಯಂತ ಭಿನ್ನವಾದ ಅಪರೋಕ್ಷ ಜ್ಞಾನವೆಂಬ ಪದಾರ್ಥವೇ ಇಲ್ಲವೆಂದು ರಾಮಾನುಜರು ಹೇಳುವರು. ಅವರ ರೀತಿಯಲ್ಲಿ ನಿರಂತರ ಚಿಂತನ ರೂಪವಾದ ಧ್ಯಾನವೇ ಪರಮ ಪಾಟವವನ್ನು ಹೊಂದಿ, ವಸ್ತುವು ಎದುರಿಗೆ ಇದ್ದರೆ ಹೇಗೋ ಹಾಗೆಯೇ ಅತಿ ಸ್ಪಷ್ಟವಾಗಿ ಪ್ರತ್ಯಕ್ಷತುಲ್ಯವಾಗುವುದು; ಇದರಿಂದ ಅಪರೋಕ್ಷ ಜ್ಞಾನವೆಂದು ಆ ಸಮಾಧ್ಯವಸ್ಥೆಗೆ ಹೆಸರೇ ಹೊರತು ಅತೀಂದ್ರಿಯನಾದ, ಅವ್ಯಕ್ತನಾದ ಪರಬ್ರಹ್ಮನನ್ನು ಮನಸ್ಸಿನಿಂದ ಸಾಕ್ಷಾತ್ ನೋಡುವುದು ಅಸಂಭಾವಿತವು ಎಂದು ಹೇಳುತ್ತಾರೆ. ಲೋಕದಲ್ಲಿ ಕಾಮುಕರು ಕಾಮಿನೀ ಚಿಂತೆಯಿಂದ ಆಕೆಯಲ್ಲಿಯೇ ಲಗ್ನವಾದ ಚಿತ್ತವುಳ್ಳವರಾಗಿ, ಇತರ ವಿಷಯಗಳಲ್ಲಿ ಮನಸ್ಸಿಡದೆ ಪುನಃ ಪುನಃ ಮಾಡಲ್ಪಟ್ಟ ಸ್ತ್ರೀ ಧ್ಯಾನ ಪ್ರಭಾವದಿಂದ ಆಕೆಯು ಎದುರಿಗೇ ಇರುವಳೋ ಎಂಬಂತೆ ಭ್ರಮಕ್ಕೆ ವಶರಾಗುತ್ತಾರೆ. ಪುರೂರವನು ಊರ್ವಶಿಯನ್ನು ಕಳೆದುಕೊಂಡು ಪ್ರಣಯ ಮೋಹದಿಂದ ಪರವಶನಾಗಿ ಉನ್ಮಾದಾವಸ್ಥೆಯನ್ನು ಹೊಂದಿ ಪ್ರತಿಯೊಂದು ವನದಲ್ಲಿಯೂ, ವೃಕ್ಷದಲ್ಲಿಯೂ, ಪೊದೆಯಲ್ಲಿಯೂ ತನ್ನ ರಮಣಿಯನ್ನು ನೋಡಿ ನೋಡಿದವನಂತೆ ಪ್ರಲಪಿಸುತ್ತಿದ್ದನು. ರಾಮಾನುಜರ ಮತದಲ್ಲಿ ಅಪರೋಕ್ಷ ಜ್ಞಾನವೂ ಇಂಥ ಒಂದು ಅವಸ್ಥಾ ವಿಶೇಷವು. ಧ್ಯಾನಭಿನ್ನವಾದ ಪ್ರತ್ಯಕ್ಷಾತ್ಮಕವಾದ ಒಂದು ಜ್ಞಾನ ವಿಶೇಷವಲ್ಲ.

---

* ಪ್ರಥಮ ಭಾಗದಲ್ಲಿ ಈಗಾಗಲೇ ಹಿಂದೆ ವ್ಯಾಖ್ಯಾತವಾಗಿರುವುದು.

† ಪ್ರಥಮ ಭಾಗದಲ್ಲಿ ಈಗಾಗಲೇ ಹಿಂದೆ ವ್ಯಾಖ್ಯಾತವಾಗಿರುವುದು.

ಈ ವಾದವು ಬಹು ದೋಷಗಳಿಂದ ಯುಕ್ತವಾದುದು. ಇವರ ರೀತಿಯಲ್ಲಿ ವಿಚಾರ ಮಾಡಿದರೆ (1) ಜ್ಞಾನಿಯು ಮದ್ಯಪಾನ ಮಾಡಿದ ಉನ್ಮತ್ತನಂತೆ ವೃಥಾ ಭ್ರಾಂತ ಪುರುಷನಾಗುವನು. ಆತನು ವಸ್ತುತಃ ಪರಮಾತ್ಮನನ್ನು ಹೃದಯದಲ್ಲಿ ಕಾಣಲಿಲ್ಲ. ಆತನ ಸಾಕ್ಷಾತ್ಕಾರವನ್ನು ಪರಿರಂಭಣ ಮಾಡಿಕೊಂಡು ಸುಖವನ್ನು ಪಡೆಯಲಿಲ್ಲ. ಎಲ್ಲವೂ ಕಲ್ಪಿತವೇ ! ಪರಮಾತ್ಮನು ನನ್ನ ಮನಸ್ಸಿನಲ್ಲಿ ಇರುತ್ತಾನೆ, ಇಗೋ ಅವನು ಈಗ ಬಂದನು ಇತ್ಯಾದಿ ರೀತಿಯಲ್ಲಿ ಮನಸ್ಸಿನಲ್ಲಿಯೇ ಕಲ್ಪಿಸಿಕೊಂಡು ಕಲ್ಪಿತದರ್ಶನದಿಂದ ಜನಿತವಾದ ಸುಖವನ್ನು ಜ್ಞಾನಿಯು ಅನುಭವಿಸುವನು ಎಂದು ಪ್ರಾಪ್ತವಾಯಿತು. (2) ಹೀಗಾಗುವುದಾದರೆ, ಅಪರೋಕ್ಷ ಜ್ಞಾನವು ಯಾದೃಚ್ಛಿಕವಾಗಿ, ಸಮಾಧಿಯೂ ಯಾದೃಚ್ಛಿಕವಾಗಿ ಧ್ಯೇಯನಾದ ಪರಮಾತ್ಮನ ಚಿಂತೆಯು ಬಂದ ಒಡನೆಯೇ ಇಗೋ ಇಲ್ಲಿ ಪರಮಾತ್ಮನು ಎಂಬ ಜ್ಞಾನವು ಪ್ರಾಪ್ತವಾಗಿ ಅದಕ್ಕೇ ಸಮಾಧಿಯೆಂದು ಹೆಸರು ಬರಬೇಕಾಗುವುದು. ಅದರ ಪ್ರಾಪ್ತ್ಯರ್ಥವಾಗಿ ಷಷ್ಠಾಧ್ಯಾಯದಲ್ಲಿ ಶ್ರೀ ಕೃಷ್ಣನು ನಿರೂಪಿಸಿರುವ ಆಸನ ಪ್ರತ್ಯಾಹಾರಾದಿ ನಿಯಮಗಳು ಅನಾವಶ್ಯಕವಾಗುವುವು. ಕಾಮುಕನಿಗೆ ಕಾಮಿನೀ ಚಿಂತೆಯು ಬಂದ ಒಡನೆಯೇ ಬಾಹ್ಯವಿಸ್ಮೃತಿಯು ಬರುವುದು; ಹಾಗೆಯೇ ಜ್ಞಾನಿಗೆ ಪರಮಾತ್ಮನ ಸ್ಮೃತಿಯು ಪ್ರಾಪ್ತವಾದ ಒಡನೆಯೇ ಬಾಹ್ಯ ವಸ್ತುಗಳಲ್ಲಿ ಅನಾಸಕ್ತಿಯು ಬಂದು ಇಗೋ ಇಲ್ಲಿ ಪರಮಾತ್ಮನು ಎಂದು ಪರಮಾತ್ಮನನ್ನು ಸಾಕ್ಷಾತ್ಕಂಡವನಂತೆ ಕುಣಿಯುವುದಕ್ಕಾರಂಭಿಸಬೇಕಾಗುವುದು. (3) ಇದೂ ಅಲ್ಲದೆ, ಈ ರೀತಿಯಾಗಿ ಪರಮಾತ್ಮವಿಷಯಕವಾದ ಪಾಟವಾಪನ್ನವಾದ ಧ್ಯಾನವೇ ಅಪರೋಕ್ಷ ಜ್ಞಾನವಾಗುವುದಾದರೆ ಜ್ಞಾನಿಯು ಮದ್ಯಪಾನ ಮಾಡಿದವನಂತೆ, ಅಥವಾ ಪ್ರಣಯಮೋಹದ ಅಂತ್ಯಾವಸ್ಥೆಯನ್ನು ಹೊಂದಿದ ಕಾಮುಕನಂತೆ ವಿಹ್ವಲಿತಚಿತ್ತವುಳ್ಳವನೆಂದು ಪ್ರಾಪ್ತವಾಗುವುದರಿಂದ ಅವರುಗಳಂತೆ ಪ್ರಲಾಪ ಮಾಡುವುದಕ್ಕೆ ಆರಂಭಿಸಬೇಕಾಗುವುದು. ಅವನು ಸಾಕ್ಷಾತ್ಪರಮಾತ್ಮನ ಜಗನ್ಮಂಗಳ ವಿಗ್ರಹವನ್ನು ನೋಡಲಿಲ್ಲ. ಸಾಕ್ಷಾತ್ಪರಮಾತ್ಮನು ಅವನ ಸಂಗಡ ಮಾತಾಡಲಿಲ್ಲ. ಹಾಗಿದ್ದರೂ ಅವನು ತನ್ನ ಧ್ಯಾನ ಪ್ರಭಾವದಿಂದ ಆತನು ಎದುರಿಗೆ ಇರುವನೋ ಎಂಬಂತೆ ತಿಳಿಯುವುದೇ ಜ್ಞಾನವೆಂದೆನ್ನಿಸುವುದಾದರೆ, ಅವನ ಉದ್ರಿಕ್ತ ಪ್ರೀತಿಯು ಪ್ರಯತ್ನಕ್ಕೆ ಸೀಮಾಭೂಮಿಯಾದ ಸಾಕ್ಷಾತ್ಪರಮ ಪುರುಷನ ದರ್ಶನವಾಗುವವರೆವಿಗೂ ತೃಪ್ತಿ ಹೊಂದದೆ ಅವನು ಕ್ಷಣಕ್ಷಣದಲ್ಲಿಯೂ, ಇನ್ನೂ ಪರಮಾತ್ಮನು ನನಗೆ ದರ್ಶನ ಕೊಡಲಿಲ್ಲವಲ್ಲಾ ಎಂದು ಅಳುತ್ತಲೇ ಇರಬೇಕಾಗುವುದು. (4) ಮತ್ತು ಪರೋಕ್ಷಚಿಂತಾಮೂರ್ತಿಯು ಮಾತಾಡುವುದೆಲ್ಲಿಂದ ಬಂತು ? ಜ್ಞಾನಿಯು ತನ್ನ ಹೃದಯಕಮಲದಲ್ಲಿ ಪರಮಾತ್ಮನನ್ನು ನೋಡುವನು. ಅವನು ಪ್ರಸನ್ನನಾಗಿ ಮಂದಹಾಸದಿಂದ ಯುಕ್ತವಾದ ತನ್ನ ಮುಖಕಮಲದಿಂದ ದಿವ್ಯವಾದ ಮಧುರ ಶಬ್ದಗಳಿಂದ ಭಕ್ತನ ಸಂತಾಪವನ್ನು ಪರಿಹರಿಸುವುದೂ ಉಂಟೆಂದು ಪ್ರಮಾಣಗಳಿಂದ ಪ್ರಮಿತವಾಗಿರುವುದು. ಪರೋಕ್ಷ ಚಿಂತಾಮೂರ್ತಿಯೇ ಈ ವ್ಯಾಪಾರಗಳನ್ನೆಲ್ಲಾ ಮಾಡುವದು,

ಆದನ್ನೇ ಪರಮ ಪುರುಷನ ವ್ಯಾಪಾರವೆಂದು ಭಕ್ತನು ತನ್ನ ಪ್ರಣಯಮೋಹಪ್ರಭಾವ ದಿಂದ ತಿಳಿಯುವನು ಎಂದು ಹೇಳುವುದಾದರೆ ಜ್ಞಾನಿಗೂ ಉನ್ಮತ್ತನಾದ, ಅಯ ಥಾರ್ಥ ಜ್ಞಾನಿಯಾದ ಕಾಮುಕನಿಗೂ ವ್ಯತ್ಯಾಸವೇನಿರುವುದು ? (5) ಪರಂತು ಧ್ಯಾನಾರೂಢನಾದ ಯೋಗಿಗೆ ಸಾಕ್ಷಾತ್ ಷಡ್ಗುಣೈಶ್ವರ್ಯಸಂಪನ್ನನಾದ ಪರ ಮಾತ್ಮನು ಸ್ವಯಂ ತನ್ನ ರೂಪವಿಶೇಷವನ್ನು ಪ್ರದರ್ಶನ ಮಾಡಿ ಆನಂದಪಡಿಸುವ ನೆಂದು ಹೇಳುವುದರಲ್ಲಿ ಬಾಧಕವೇನು ? ಜ್ಞಾನಿಯು "**ಬ್ರಹ್ಮಸಂಸ್ಪರ್ಶಂ ಸುಖ ಮಶ್ನುತೇ**" ಎಂದರೆ ಪರಮಾತ್ಮನ ಸಂಸರ್ಗಜನಿತ ಸುಖವನ್ನು ಅನುಭವಿಸು ತ್ತಾನೆ ಎಂದು ಶ್ರೀ ಕೃಷ್ಣನ ಮಾತುಗಳೂ ಈ ಅರ್ಥಕ್ಕೆ ಅನುಕೂಲವಾಗಿರುವುವು. (6) ಅವ್ಯಕ್ತ ಸ್ವರೂಪನಾದ ಶ್ರೀಪರಮಾತ್ಮನು ಸಾಕ್ಷಾದ್ದರ್ಶನ ಕೊಡುವುದು ಹೇಗೆಂದು ಚಿಂತಿಸಬೇಕಾದುದಿಲ್ಲ. ಭಕ್ತವತ್ಸಲನಾದ ಪರಮಾತ್ಮನಿಗೆ ಅಚಿಂತ್ಯ ಶಕ್ತಿಯೂ ಇರುವುದು. ಆತನೇ ತನ್ನ ಇಚ್ಛಾಮಾತ್ರದಿಂದ ಪೂರ್ವದಲ್ಲಿಯೇ ಇದ್ದ ತನ್ನ ರಾಮಕೃಷ್ಣಾದಿ ರೂಪಗಳನ್ನು ಸಹ ಈಗ ಪ್ರಾದುರ್ಭೂತವಾದುದೆಂಬಂತೆ ತನ್ನ ಅಚಿಂತ್ಯಶಕ್ತಿಯಿಂದ ಪ್ರಕಟಿಸಿರುವಂತೆ, ಜ್ಞಾನಿಯ ಹೃದಯಕಮಲದಲ್ಲಿಯೂ, ಆತನಿಗೆ ಪ್ರಸನ್ನನಾಗಿ ಆತನ ಹೃದಯದಲ್ಲಿಯೇ ಅನಾದಿ ಕಾಲದಿಂದಲೂ ಸುಹೃ ದ್ರೂಪೇಣ ಇದ್ದ ತನ್ನ ರೂಪದಿಂದಲೇ ದರ್ಶನ ಕೊಟ್ಟು ಅವನ ಭವವೇದನೆಯನ್ನು ಪರಿಹರಿಸಿ, ಅವನಿಗೆ ಅತ್ಯುತ್ತಮ ಸುಖವನ್ನು ಕೊಡುವನೆಂದು ಹೇಳುವುದು ಸರ್ವ ಪ್ರಮಾಣಗಳಿಗೂ ಅನುಕೂಲವಾಗಿರುವುದು. "**ಜನ್ಮ ಕರ್ಮ ಚ ಮೇ ದಿವ್ಯಂ**" ಎಂದಷ್ಟೇ ಶ್ರೀ ಕೃಷ್ಣನು ಹೇಳಿರುವನು.

ಶ್ರೀ ಕೃಷ್ಣನು ಹೇಳುತ್ತಾನೆ :—

(1) **........ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ।**

—(2. 59.)

ವಿಷಯಕಾಮನೆಯು ಬ್ರಹ್ಮನ ಸಾಕ್ಷಾತ್ಕಾರದಿಂದ ನಾಶವಾಗುತ್ತದೆ.

(2) **ಯುಂಜನ್ನೇವ ಸದಾತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥**

—(6. 28.)

ವಿಷಯ ಧ್ಯಾನರಹಿತವಾದ ಮನಸ್ಸುಳ್ಳ, ಸದಾ ಪರಮಾತ್ಮನನ್ನು ಧ್ಯಾನ ಮಾಡುವ ಜ್ಞಾನಿಯು ಅನಾಯಾಸವಾಗಿ ಬ್ರಹ್ಮಸಂಸ್ಪರ್ಶಜನಿತವಾದ ಅತ್ಯುತ್ತಮ ಸುಖವನ್ನು ಹೊಂದುತ್ತಾನೆ.

7. ಜ್ಞಾನಿಯಾದ ಅರ್ಜುನನೂ ಸಹ ನಾನಾ ವರ್ಣಗಳಿಂದ ಸಹಿತವಾದ ಭಗವಂತನ ಅನಂತ ರೂಪಗಳನ್ನು ಕಂಡನು; "**ನಾನಾರೂಪಾಣಿ ದಿವ್ಯಾನಿ ನಾನಾವರ್ಣಾಕೃತೀನಿ ಚ**"

8. ಶ್ರೀ ಕೃಷ್ಣನು ಭಕ್ತಿಯುಳ್ಳವರು ತನ್ನನ್ನು ಸಾಕ್ಷಾತ್ ನೋಡುವರೆಂದು ತಿಳಿಸುವುದಕ್ಕಾಗಿ, ಅಪರೋಕ್ಷಾರ್ಥವಾದ "ದೃಶಿರ್" ಧಾತುವಿನಿಂದ ಉತ್ಪನ್ನವಾದ **"ಪಶ್ಯ.... .... ರೂಪಾಣಿ"** ಮತ್ತು **"ದ್ರಷ್ಟುಂ"** ಎಂಬ ಪದಗಳನ್ನು ಉಪಯೋಗಿಸಿರುತ್ತಾನೆ :—

**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥**
—(11 54.)

**ಅರ್ಥವು :—** ಎಲೈ ಪರಂತಪನೇ ! ಈ ರೀತಿಯಾಗಿ ನನ್ನನ್ನು ಯಥಾರ್ಥವಾಗಿ ತಿಳಿಯುವುದಕ್ಕೂ ನೋಡುವುದಕ್ಕೂ ಅನಂತರ ಮುಕ್ತಿಯಲ್ಲಿ ಪ್ರವೇಶಿಸುವುದಕ್ಕೂ ಅನನ್ಯವಾದ ಭಕ್ತಿಯಿಂದಲೇ ಶಕ್ಯವಾಗುವುದು.

ಈ ವಾಕ್ಯದಲ್ಲಿ "ತತ್ತ್ವೇನ ಜ್ಞಾತುಂ, ತತ್ವೇನ ದ್ರಷ್ಟುಂ" ಎಂಬ ಅನ್ವಯ ಸಾಮರ್ಥ್ಯದಿಂದ ಜ್ಞಾನಿಯ ಬ್ರಹ್ಮದರ್ಶನವು ಯಥಾರ್ಥವಾದ ಬ್ರಹ್ಮಸ್ವರೂಪ ದರ್ಶನವೇ ಹೊರತು ಚಿಂತಾಮೂರ್ತಿದರ್ಶನ ರೂಪವಾದ ಭ್ರಾಂತಿಯಲ್ಲವೆಂದು ಸಿದ್ಧವಾಗುವುದು.

4. ಇನ್ನು ನಿಷ್ಪ್ರಕಾರಕವಾದ ಬ್ರಹ್ಮಜ್ಞಾನವೇ ಚರಮಾಪರೋಕ್ಷವೃತ್ತಿಯೆಂದು ಹೇಳುವ ಅದ್ವೈತಿಗಳ ಮತವನ್ನು ಸ್ವಲ್ಪ ವಿಚಾರ ಮಾಡೋಣ. ವಸ್ತುತಃ ಇಲ್ಲಿ ಹೆಚ್ಚು ವಿಚಾರ ಮಾಡುವುದಕ್ಕೆ ಅವಕಾಶವೇ ಇರುವುದಿಲ್ಲ. 1. "ಸತಿ ಕುಡ್ಯೇ ಚಿತ್ರಕರ್ಮ". ನಿಷ್ಪ್ರಕಾರಕವಾದ ಬ್ರಹ್ಮಜ್ಞಾನವು ಶಶವಿಷಾಣದಂತೆಯೂ ವಂಧ್ಯಾಪುತ್ರನಂತೆಯೂ ಅಪ್ರಸಿದ್ಧವಾಗಿರುವುದು.* 2. ಕಿಂಚ ನಿರ್ವಿಶೇಷ ಚಿನ್ಮಾತ್ರವೆಂಬ

---

* ಅದ್ವೈತಮತದಲ್ಲಿ ಮೋಕ್ಷಹೇತುಭೂತವಾದ ಅಪರೋಕ್ಷ ಜ್ಞಾನವು ದುರ್ನಿರೂಪವೇ. ತತ್ತ್ವಮಸ್ಯಾದಿ ವಾಕ್ಯಜನ್ಯವಾದ ನಿಷ್ಪ್ರಕಾರಕ ಜ್ಞಾನವು ಮೋಕ್ಷಕಾರಣವೆಂದು ಅದ್ವೈತಿಗಳು ಹೇಳುತ್ತಾರೆ. ಆದರೆ ಇದು ಹೇಗೆ ಸಾಧ್ಯವಾಗುವುದು ? ಜ್ಞಾನಿಯು ಸಗುಣ ಬ್ರಹ್ಮನನ್ನು ಸಾಕ್ಷಾತ್ಕರಿಸುವನೇ ? ಅಥವಾ ನಿರ್ಗುಣ ಬ್ರಹ್ಮನನ್ನೇ ? ಸಗುಣ ಬ್ರಹ್ಮಜ್ಞಾನದಿಂದ ಮೋಕ್ಷವಾಗುವುದು ಅಸಂಭಾವಿತವು. ಮಿಥ್ಯಾಭೂತನಾದ ಸಗುಣ ಬ್ರಹ್ಮನ ಜ್ಞಾನದಿಂದ ಮೋಕ್ಷವಾಗುವುದಾದರೆ ಘಟಜ್ಞಾನದಿಂದಲೂ ಮೋಕ್ಷವು ಏತಕ್ಕೆ ಆಗಬಾರದೆಂದು ಪ್ರಶ್ನೆಯು ಬರುವುದು. ಅದ್ವೈತಿಗಳು ಅದನ್ನು ಅಂಗೀಕರಿಸುವುದೂ ಇಲ್ಲ. ಪರಮಾರ್ಥ ತತ್ತ್ವವಿಜ್ಞಾನದಿಂದಲೇ ಮೋಕ್ಷವಾಗಬೇಕು. ಆದರೆ ನಿರ್ಗುಣ ಬ್ರಹ್ಮಜ್ಞಾನದಿಂದ ಮೋಕ್ಷವಾಗುವುದು ಅಸಂಭಾವಿತವು; ಹೇಗೆಂದರೆ ನಿರ್ಗುಣ ಬ್ರಹ್ಮನು ಅಜ್ಞೇಯನು ಚರಮಾಪರೋಕ್ಷ ವೃತ್ತಿಯಲ್ಲಿ ಅವನ ಸ್ಫುರಣವು ಆಗುವುದಕ್ಕೆ ಕಾರಣವಿಲ್ಲ. ಯಾವುದರ ಜ್ಞಾನವು ಶಕ್ಯವೋ ಅದು ಮೋಕ್ಷ ಹೇತುವಾಗದ (ಮಿಥ್ಯಾಭೂತವಾದ) ಪದಾರ್ಥವು. ಯಾವುದು ಮೋಕ್ಷ ಹೇತುಭೂತವಾದ ಪರಮಾರ್ಥತತ್ವವೋ ಅದರ ಜ್ಞಾನವು ಉತ್ಪನ್ನವಾಗುವುದೇ ಇಲ್ಲ. ಉರ್ಕುಹಾರ್ಟ್ ಪಂಡಿತನು ಈ ದೋಷವನ್ನು ಮನಸ್ಸಿನಲ್ಲಿಟ್ಟುಕೊಂಡು ಹೀಗೆ ಬರೆದಿರುತ್ತಾನೆ :—

ವಸ್ತುವೂ ಗಗನಾರವಿಂದದಂತೆ ಅಪ್ರಸಿದ್ಧವೇ. ಸಕಲ ಕಲ್ಯಾಣ ಗುಣಭರಿತನಾದ ರಮಾನಾಥನೇ ಪರಬ್ರಹ್ಮನೆಂದು ಭಗವದ್ಗೀತೆಯಲ್ಲಿ ಪುನಃ ಪುನಃ ಉಕ್ತವಾಗಿರುವುದು. ಕಲ್ಯಾಣಗುಣಪೂರ್ಣನಾದ ಬ್ರಹ್ಮವಿಷಯಕ ಜ್ಞಾನವು ಸಪ್ರಕಾರಕವಾಗುವುದೇ ಹೊರತು ನಿಷ್ಪ್ರಕಾರಕವಾಗಲಾರದು. 3. ಕಿಂಚ ಜನ್ಮಾದಿಕರ್ತನಾದ ಪರಬ್ರಹ್ಮನ ಧರ್ಮಗಳು ಮಿಥ್ಯಾಭೂತವಾಗಿದ್ದರಲ್ಲವೇ ಕಥಂಚಿತ್ ನಿರ್ವಿಕಲ್ಪಕವಾದ ಧರ್ಮಿಜ್ಞಾನವು ಬರುವುದು ಎಂದು ಹೇಳಬಹುದು. "**ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ**" ಇತ್ಯಾದಿ ಶ್ರುತಿಗಳಲ್ಲಿ ಪರಮಾತ್ಮನ ಜ್ಞಾನಬಲಕ್ರಿಯಾದಿಗಳು ಪರಮಾತ್ಮನ ಸ್ವರೂಪಭೂತವಾದುವುಗಳು, ಅವನಂತೆಯೇ ನಿತ್ಯವೂ ಸತ್ಯವೂ ಆದವುಗಳು ಎಂದು ಹೇಳಲ್ಪಟ್ಟಿರುವುದು. 4. ಶ್ರೀ ಕೃಷ್ಣನೂ ಸಹ ತನ್ನ ಸ್ವರೂಪ, ವ್ಯಾಪ್ತಿ ಮತ್ತು ಸ್ವಾಭಾವಿಕ ಧರ್ಮಾದಿಗಳನ್ನು ಯಥಾರ್ಥವಾಗಿ ತಿಳಿದರೇನೇ ಮುಕ್ತಿಯಾಗುವುದೆಂದು ಹೇಳಿರುತ್ತಾನಾದುದರಿಂದ ಮೋಕ್ಷಹೇತುಭೂತವಾದ ಅಪರೋಕ್ಷ ಜ್ಞಾನವು ಸಪ್ರಕಾರ ಮೋಕ್ಷವೆಂದೇ ( ವಿಶೇಷಣ ಅಥವಾ ಧರ್ಮಗಳಿಂದ ಸಹಿತವಾದುದೆಂದೇ ) ಸಿದ್ಧವಾಗುವುದು. ಶ್ರೀ ಕೃಷ್ಣನು ಹೇಳುತ್ತಾನೆ :—

**(1) ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥**
—(11 . 4–9.)

---

"His (Sankara's) method conceals both from himself and from others that the quest is really a hopeless one"

—W. S. Urquhart, M. A. D. Litt.

**ಅರ್ಥವು :—** ಶಂಕರಾಚಾರ್ಯರ ಉಪಪಾದನೆಯು ಅವರ ಬ್ರಹ್ಮಸ್ವರೂಪ ಮಾರ್ಗಣವು ಅಸಾಧ್ಯವೆಂದು ( ನಿರ್ಗುಣ ಬ್ರಹ್ಮನ ಅಪರೋಕ್ಷ ಜ್ಞಾನಾದಿಗಳು ಬರುವುದಿಲ್ಲವೆಂದು ) ತಿಳಿಸಿ ಕೊಡದಂತೆ ವಸ್ತುತತ್ತ್ವವನ್ನು ಮುಚ್ಚಿ ಬಿಡುತ್ತದೆ.

ಉರ್ಕುಹಾರ್ಟ್‌ನು ಅದ್ವೈತಮತದ ರೀತ್ಯಾ ಅಪರೋಕ್ಷ ಜ್ಞಾನಿಯ ಸ್ಥಿತಿಯು ಹಾಸ್ಯಾಸ್ಪದವಾಗುವುದೆಂದು ಪ್ರೊಫೆಸರ್ ಲೇರ್ಡನಾಮಕ ಪಂಡಿತನ ಸಮ್ಮತಿಯನ್ನು ಕೊಟ್ಟು ಪ್ರದರ್ಶನ ಮಾಡಿರುವನು :—

He ( the seer ) is apt to fall into the error of those who as Prof. Laird puts it, "mistake a useless spectre for the last word in profundity and often advance the extra ordinary doctrine that truth is an incomprehensible reality while the thing that we know is a comprehensible unreality."

**ಅರ್ಥವು :—** ಅದ್ವೈತಮತದಲ್ಲಿ ಜ್ಞಾನಿಯು, ಮಹಾವಿದ್ವಾಂಸನಾದ ಲೇರ್ಡನು

ಎಲೈ ಅರ್ಜುನನೇ ! ಈ ರೀತಿಯಾಗಿ ನನ್ನ ಜನ್ಮ ಕರ್ಮಗಳು ಲೋಕವಿಲಕ್ಷಣವು ಮತ್ತು ಯಥಾರ್ಥವೆಂದು ಯಾವಾತನು ಯಥಾರ್ಥವಾಗಿ ತಿಳಿಯುತ್ತಾನೆಯೋ ಆ ಜ್ಞಾನಿಯು ದೇಹತ್ಯಾಗಾನಂತರ ಪುನರ್ಜನ್ಮವನ್ನು ಹೊಂದುವುದಿಲ್ಲ ಮತ್ತು ನನ್ನನ್ನು ಹೊಂದುತ್ತಾನೆ.

(2) **ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಂ ।**
**ಅಸಮ್ಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥**
—(10. 3.)

ಮನುಷ್ಯರಲ್ಲಿ ಯಾವಾತನು ನಾನು ಅಜನು ಮತ್ತು ಪ್ರಾಣದೇವರಿಗೂ ಸೃಷ್ಟಿಕರ್ತನು ಮತ್ತು ಸಕಲ ಲೋಕಗಳಿಗೂ ಮುಖ್ಯ ಸ್ವಾಮಿಯು ಎಂದು ಅಸಮ್ಮೂಢಃ =ಎಂದರೆ ನನ್ನ ಮಹಿಮೆಗಳು ಮಿಥ್ಯಾ ಎಂದು ಭ್ರಾಂತನಾಗದೆ ಯಥಾರ್ಥವೆಂದು ತಿಳಿಯುವನೋ ಅಂಥ ಜ್ಞಾನಿಯು ಸರ್ವ ಪಾಪಗಳಿಂದಲೂ ಮುಕ್ತನಾಗುತ್ತಾನೆ.

(3) **ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಂ ॥**
—(18. 55.)

ಭಕ್ತಿಯಿಂದ ಸಹಿತನಾಗಿ ನಾನು ( ಶ್ರೀ ಕೃಷ್ಣನು ) ದೇಶತಃ ಕಾಲತಃ, ಗುಣತಃ ವ್ಯಾಪ್ತನೆಂದು ತತ್ತ್ವತಃ = ಎಂದರೆ ನನ್ನ ವ್ಯಾಪ್ತಿಯು ಮಿಥ್ಯಾಭೂತವಲ್ಲವೆಂದು ಯಥಾರ್ಥವಾಗಿ ತಿಳಿದು, ನಂತರ ಭಕ್ತಿಯಿಂದಲೇ ನನ್ನನ್ನು ಯಥಾರ್ಥವಾಗಿ ನೋಡಿ, ( ಕೇವಲ ಧ್ಯಾನಮೂರ್ತಿಯನ್ನಾಗಲೀ ಸಗುಣ ಬ್ರಹ್ಮನನ್ನಾಗಲೀ ನೋಡದೆ, ಅನುಗ್ರಹದಿಂದ ದರ್ಶನವನ್ನು ಕೊಟ್ಟ ಪರಮಾತ್ಮನನ್ನು ಮನಸ್ಸಿನಲ್ಲಿ ನೋಡಿ ), ಅನಂತರದಲ್ಲಿ ( ಪರಮ ಭಕ್ತಿಯಿಂದ ಸ್ತುತಿಸಿದ ಅನಂತರ ಪ್ರಾರಬ್ಧ ಕರ್ಮಕ್ಷಯವಾದ ಅನಂತರ ), ನನ್ನನ್ನು ಪ್ರವೇಶಿಸುತ್ತಾನೆ. ( ಮುಕ್ತನಾಗುತ್ತಾನೆ ಎಂದರ್ಥವು. )

ಈ ವಾಕ್ಯಗಳಿಂದ ಸರ್ವವ್ಯಾಪ್ತನಾದ ಲೋಕಮಹೇಶ್ವರನಾದ ಪ್ರಾಣಪತಿಯಾದ ಪರಮಾತ್ಮನ ಜ್ಞಾನವೇ ಅಪರೋಕ್ಷ ಜ್ಞಾನವೆಂದು ಸಿದ್ಧವಾಗುವುದು. ಶ್ರೀ ಕೃಷ್ಣನು ಅಸಮ್ಮೂಢನಾಗಿ ನನ್ನನ್ನು ತಿಳಿಯಬೇಕೆಂದು ಇಲ್ಲಿಯೂ ಮತ್ತು ಹದಿನೈದನೆಯ ಮುಂತಾದ ಅಧ್ಯಾಯಗಳಲ್ಲಿಯೂ ಎಚ್ಚರಿಸಿರುತ್ತಾನೆ. ಪರಮಾತ್ಮನ

---

ಹೇಳುವಂತೆ "ನಿಷ್ಪ್ರಯೋಜನವಾದ ನೆರಳನ್ನು ಪರಮಾರ್ಥ ತತ್ತ್ವವೆಂದು ಭ್ರಮಿಸಿ, ಪರಮಾರ್ಥಸ್ವರೂಪವು ದುರ್ಜ್ಞೇಯವಾದ ವಸ್ತುವೆಂದೂ, ಮತ್ತು ನಾವು ತಿಳಿದಿರುವ ವಸ್ತುವು ಜ್ಞೇಯವಾದ ಮಿಥ್ಯಾ ಪದಾರ್ಥವೆಂದೂ ವಿಪರೀತವಾದವನ್ನು ಹೇಳುವಂಥ" ವರು ಬೀಳುವಂಥಾ ತಪ್ಪಿಗೆ ಬೀಳುವನು.

ಸ್ವರೂಪವು ನಿರ್ಗುಣವು ಎಂದಾಗಲೀ, ಅವನ ಗುಣಗಳು ಕಲ್ಪಿತವೆಂದಾಗಲೀ, ಮೋಹವನ್ನು ಎಂದರೆ ಮಿಥ್ಯಾ ಜ್ಞಾನವನ್ನು ಹೊಂದದೆ, " ತತ್ತ್ವೇನ " ಎಂದರೆ ಪರಮಾತ್ಮನೂ ಅವನ ಮಹಾ ವಿಭೂತಿಗಳೂ ಅತ್ಯಂತ ಯಥಾರ್ಥವಾದುವುಗಳು ಎಂದು ಸಪ್ರಕಾರಕವಾಗಿಯೇ ತಿಳಿಯಬೇಕೆಂದು ವಿಧಿಸಿರುತ್ತಾನೆ.

5. ಇನ್ನು ಅಪರೋಕ್ಷ ಜ್ಞಾನೋತ್ಪತ್ತಿನಿರೂಪಣದಲ್ಲಿಯೂ ಸಹ ಅದ್ವೈತ ಮತದಲ್ಲಿರುವ ಒಂದು ಪ್ರಬಲವಾದ ದೋಷವನ್ನು ತೋರಿಸಿ ಯಥಾರ್ಥವಾದ ಅಪರೋಕ್ಷ ಜ್ಞಾನೋತ್ಪತ್ತಿ ಪ್ರಕಾರವನ್ನು ನಿರೂಪಿಸುತ್ತೇವೆ. ಶಬ್ದಾಪರೋಕ್ಷ ಜ್ಞಾನವಾದಿಗಳಾದ ಕೆಲವರು ಅದ್ವೈತಿಗಳು ತತ್ತ್ವಮಸಿ ಎಂಬ ವಾಕ್ಯಶ್ರವಣ ದಿಂದಲೇ ( ನಾನು ನಿರ್ವಿಶೇಷ ಚಿನ್ಮಾತ್ರ ಬ್ರಹ್ಮನು ಎಂಬ ) **ಪ್ರತ್ಯಕ್ಷರೂಪವಾದ** ಚರಮಾಪರೋಕ್ಷ ವೃತ್ತಿಯು ಹುಟ್ಟುವುದು ಎಂದು ಹೇಳಿರುತ್ತಾರೆ. ಇದರಲ್ಲಿ ಒಂದು ದೃಷ್ಟಾಂತವೂ ಇರುವುದಂತೆ. ಹತ್ತು ಜನ ಗಾಂಪರೊಡೆಯರ ಶಿಷ್ಯರು ಒಂದು ನದಿಯನ್ನು ದಾಟಿ ನಾವು ಹತ್ತು ಜನರೂ ಸರಿಯಾಗಿರುವೆವೋ ಇಲ್ಲವೋ ಎಂದು ಗಣನೆ ಮಾಡಲಾರಂಭಿಸಿ ಒಬ್ಬೊಬ್ಬರೂ ತನ್ನನ್ನು ಬಿಟ್ಟು ಸ್ವವ್ಯತಿ ರಿಕ್ತವಾದ ಇತರ ಒಂಭತ್ತು ಜನರನ್ನೇ ಎಣಿಸುತ್ತಾ ಒಂಭತ್ತೇ ಜನರು ಇರುವ ರಲ್ಲಾ, ಹತ್ತನೆಯವನೇನಾದನು ಎಂದು ಪರಿತಪಿಸುತ್ತಿರಲು ಗಣತಜ್ಞನಾದ ಒಬ್ಬ ಪಥಿಕನು ಅಲ್ಲಿಗೆ ಬಂದು ತನ್ನನ್ನು ಬಿಟ್ಟು ಇತರರನ್ನು ಮಾತ್ರ ಪರಿಗಣನೆ ಮಾಡಿದ ಆ ಮಂಕು ಶಿಷ್ಯನನ್ನು ಕುರಿತು ಎಲೈ ಮೂಢನೇ ! " ದಶಮಸ್ತ್ವಮಸಿ " ನೀನು ಹತ್ತನೆಯವನು ಎಂದು ಹೇಳಿದನು. ಆಗ ಆ ಶಿಷ್ಯನಿಗೆ ಪಥಿಕನ ವಾಕ್ಯದಿಂದ ತಾನು ಹತ್ತನೆಯವನೆಂಬ ಪ್ರತ್ಯಕ್ಷರೂಪವಾದ ಜ್ಞಾನವು ಹುಟ್ಟಿತಂತೆ. ಇದರಂತೆ ಗುರುವಿನಿಂದ ತತ್ವಮಸ್ಯಾದಿ ಮಹಾವಾಕ್ಯವನ್ನು ಶ್ರವಣ ಮಾಡುವ ಶಿಷ್ಯನಿಗೆ ತಾನು ಚಿನ್ಮಾತ್ರನೆಂಬ ಪ್ರತ್ಯಕ್ಷಾತ್ಮಕವಾದ ಜ್ಞಾನವೇ ಆ ವಾಕ್ಯದಿಂದಲೇ ಸಾಕ್ಷಾತ್ ಹುಟ್ಟುವುದಂತೆ.

ಇದು ಅನುಭವವಿರುದ್ಧವಾದ ಕಟ್ಟುಕಥೆಯೇ ಹೊರತು ಶಾಸ್ತ್ರಾರ್ಥವಲ್ಲ. ಶಬ್ದದಿಂದ ವಸ್ತುವಿನ ಅಪರೋಕ್ಷವು ಸಾಕ್ಷಾತ್ತಾಗಿ ಆಗಲಾರದು. ಇದು ಘಟ ಎಂಬ **ಶಬ್ದದಿಂದ** ಘಟಪ್ರತ್ಯಕ್ಷವು ಹೇಗಾಗುವುದು ? ಘಟಪ್ರತ್ಯಕ್ಷವು ಇಂದ್ರಿಯ ಸನ್ನಿಕರ್ಷದಿಂದ ಆಗುವುದು. ಹೀಗೆಯೇ ನೀನು ಹತ್ತನೆಯವನು ಎಂಬ ಶಬ್ದದಿಂದ ನಾನು ಹತ್ತನೆಯವನು ಎಂಬ ಶಬ್ದಜನ್ಯವಾದ ಪರೋಕ್ಷ ಜ್ಞಾನವು ಉಂಟಾಗು ವುದು. ಅನಂತರ ಶಬ್ದಜನ್ಯಜ್ಞಾನವು ನಿಮಿತ್ತಕಾರಣವಾಗಿ ಇಂದ್ರಿಯಸನ್ನಿಕರ್ಷ ದಿಂದ ನಾನು ಹತ್ತನೆಯವನು ಎಂಬ ಅಪರೋಕ್ಷ ವೃತ್ತಿಯು ಹುಟ್ಟಬಹುದು. ಅಷ್ಟೇ ಹೊರತು ಶಬ್ದದಿಂದಲೇ ಸಾಕ್ಷಾದ್ವಸ್ತು ಪ್ರತ್ಯಕ್ಷವು ಉತ್ಪನ್ನವಾಗಲಾರದು. ಇದೇ ರೀತಿ ತತ್ತ್ವಮಸಿ ವಾಕ್ಯದಿಂದ ಚಿನ್ಮಾತ್ರ ಬ್ರಹ್ಮನ ಪ್ರತ್ಯಕ್ಷವು ಉಂಟಾಗುವು ದಿಲ್ಲ. ತತ್ತ್ವಮಸಿ ವಾಕ್ಯದಿಂದ ಪರೋಕ್ಷ ಜ್ಞಾನವು ಮಾತ್ರವೇ ಉಂಟಾಗುವುದು. ಆದುದರಿಂದ ಸಾಕ್ಷಾತ್ ಶಬ್ದಾಪರೋಕ್ಷವಾದವು ಅಪ್ರಮಾಣಿಕವೂ, ಅನುಭವ

ವಿರುದ್ಧವೂ ದೃಷ್ಟಾಂತರಹಿತವೂ ಆಗಿರುವುದು. ಅಪರೋಕ್ಷ ಜ್ಞಾನವು ಧ್ಯಾನಾದಿ ಜನಿತವಾದ ಹರಿಭಕ್ತಿಯಿಂದ ಪ್ರಸನ್ನನಾದ ಪರಮಾತ್ಮನ ಪ್ರಸಾದದಿಂದಲೇ ಉಂಟಾಗುವುದೆಂಬ ಶ್ರೀಮದಾಚಾರ್ಯರ ನಿರ್ಣಯವು ಸಕಲ ಗೀತಾವಾಕ್ಯಗಳಿಗೂ ಶ್ರುತಿ ಸ್ಮೃತ್ಯಾದಿ ಇತರ ಪ್ರಮಾಣಗಳಿಗೆ ಅನುಗುಣವಾಗಿಯೂ, ಯುಕ್ತ್ಯವಿರುದ್ಧ ವಾಗಿಯೂ ಇರುವುದು.

---

## 4. ನಾಲ್ಕನೆಯ ಅಂಶವು.

### ಭಗವದ್ಧ್ಯಾನಕ್ಕೆ ಮೋಕ್ಷಸಾಧನತ್ವ ಸಮರ್ಥನೆಯು.

1. ಶ್ರೀ ಶ್ರೀಗಳವರು :— ಮೋಕ್ಷಹೇತುಭೂತವಾದ ಅಪರೋಕ್ಷ ಜ್ಞಾನ ಸಾಧನೆಯನ್ನು ಶ್ರೀ ಕೃಷ್ಣನು ಹದಿನೆಂಟನೆಯ ಅಧ್ಯಾಯದಲ್ಲಿ ಸಂಕ್ಷೇಪವಾಗಿ ವಿವರಿಸಿರುತ್ತಾನೆ. ದ್ವಾದಶಾಧ್ಯಾಯದಲ್ಲಿಯೂ, ಷಷ್ಠಾಧ್ಯಾಯದಲ್ಲಿಯೂ ಸಹ ಪ್ರಕಾರಾಂತರದಿಂದ ಮೋಕ್ಷಸಾಧನೆಗಳ ತರತಮಭಾವವನ್ನು ತೋರಿಸುವುದರ ಮೂಲಕ, ಯಾವ ಸಾಧನಾನುಷ್ಠಾನಾನಂತರ ಯಾವ ಸಾಧನೆಯನ್ನು ಕೈಕೊಳ್ಳ ಬೇಕೆಂಬುದನ್ನೂ ಸೂಚಿಸಿರುತ್ತಾನೆ. ಆ ಶ್ಲೋಕಾರ್ಥಗಳನ್ನು ವಿವರಿಸಿ, ಅನಂತರ ಕ್ರಮವಾಗಿ ಒಂದೊಂದು ಸಾಧನ ವಿಶೇಷವನ್ನೂ ಲಕ್ಷಣಪೂರ್ವಕವಾಗಿ ವಿವರಿಸು ತ್ತೇವೆ.

(1) ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಽಪ್ನೋತಿ ನಿಬೋಧ ಮೇ ।
ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥
ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾಽತ್ಮಾನಂ ನಿಯಮ್ಯ ಚ ।
ಶಬ್ದಾದೀನ್ ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥
ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।
ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥
ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಂ ।
ವಿಮುಚ್ಯ ನಿರ್ಮಮಶ್ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥
ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ ।
ಸಮಸ್ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಂ ॥
ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ ।
ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಂ ॥
(—18. 50–55)

**ಅರ್ಥವು :**— ಎಲೇ ಕುಂತೀಪುತ್ರನೇ ! ಉತ್ತಮ ಜ್ಞಾನಲಕ್ಷಣ ಸ್ಥಿತಿರೂಪವಾದ ಬ್ರಹ್ಮಜ್ಞಾನವೆಂಬ ಸಿದ್ಧಿಯನ್ನು ಹೇಗೆ ಜೀವನು ಪಡೆಯುವನು, ಅಂಥ ಜ್ಞಾನವನ್ನು ಹೊಂದಿದವನು ಬ್ರಹ್ಮನನ್ನು ಹೇಗೆ ಹೊಂದುವನು ಎಂಬ ವಿಷಯದಲ್ಲಿ ನಾನು ಸಂಕ್ಷೇಪವಾಗಿ ಹೇಳುವ ಪ್ರಕಾರವನ್ನು ನೀನು ನನ್ನಿಂದ ಕೇಳು. —50.

ವಿಷಯಾಸಕ್ತಿರಹಿತವಾದ ಬುದ್ಧಿಯಿಂದ ಕೂಡಿದವನಾಗಿ, ಧೃತಿಯಿಂದ ಮನಸ್ಸನ್ನು ವಿಷಯಗಳಲ್ಲಿ ಹೋಗದಂತೆ ನಿಗ್ರಹಿಸಿ, ಶಬ್ದಾದಿ ವಿಷಯಭೋಗದ ಇಚ್ಛೆಯನ್ನು ಬಿಟ್ಟು, ಕಾಮಕ್ರೋಧಗಳನ್ನು ಪರಿತ್ಯಾಗ ಮಾಡಿ, ವಿವಿಕ್ತಸೇವೀ = ಎಂದರೆ ದುರ್ಜನ ಸಂಗರಹಿತವಾದ ದೇಶದಲ್ಲಿ ವಾಸವುಳ್ಳವನಾಗಿ, ಮಿತವಾದ ಆಹಾರವುಳ್ಳವನಾಗಿ, ಸದ್ವಿಷಯದಲ್ಲಿಯೇ ನಿಯಮಿಸಲ್ಪಟ್ಟ ವಾಗಿಂದ್ರಿಯ, ಶರೀರ, ಮತ್ತು ಮನಸ್ಸನ್ನುಳ್ಳವನಾಗಿ, ಸರ್ವದಾ ಧ್ಯಾನಯೋಗದಲ್ಲಿ ರತನಾಗಿ, ವಿಷಯಗಳಲ್ಲಿ ಅಸಾರತ್ವ ಜ್ಞಾನರೂಪವಾದ ವೈರಾಗ್ಯವನ್ನು ಹೊಂದಿದವನಾಗಿ, ಅಹಂಕಾರವನ್ನು ಎಂದರೆ ಸ್ವಾತಂತ್ರ್ಯಾಭಿಮಾನವನ್ನೂ, ಬಲಂ ಎಂದರೆ ನಾನು ಸ್ವತಂತ್ರ ಸಮರ್ಥನು ಎಂಬ ದುರಭಿಮಾನವನ್ನೂ, ದರ್ಪವನ್ನೂ, ಕಾಮ ಕ್ರೋಧಗಳನ್ನೂ, ಪರಿಗ್ರಹಂ ಎಂದರೆ ದುಷ್ಟ ಪದಾರ್ಥಗಳ ಸಂಗ್ರಹೇಚ್ಛೆಯನ್ನೂ ಸಂಪೂರ್ಣವಾಗಿ ಬಿಟ್ಟು, ನಿರ್ಮಮಃ = ಎಂದರೆ ಸ್ವದೇಹ ಧನದಾರಾ ಪುತ್ರ ಮಿತ್ರಾದಿಗಳಲ್ಲಿ ಮಮತೆಯನ್ನು ತ್ಯಾಗ ಮಾಡಿ, ಶಾಂತಃ ಎಂದರೆ ಬುದ್ಧಿಯನ್ನು ಭಗವಂತನಲ್ಲಿ ಇಡೋಣವೆಂಬ ಶಮಗುಣಾನ್ವಿತನಾದರೆ, ಬ್ರಹ್ಮಭೂಯಾಯ ಕಲ್ಪತೇ = ಎಂದರೆ ಸರ್ವದಾ ಬ್ರಹ್ಮನಲ್ಲಿಯೇ ಇಡಲ್ಪಟ್ಟ ಚಿತ್ತವುಳ್ಳವನಾಗುವುದಕ್ಕೆ ಸಮರ್ಥನಾಗುತ್ತಾನೆ. –53.

ಈ ರೀತಿ ಬ್ರಹ್ಮನಲ್ಲಿ ಲಗ್ನವಾದ ಚಿತ್ತವುಳ್ಳವನು, ಪ್ರಸನ್ನಾತ್ಮಾ ಎಂದರೆ ಸ್ವಭಾವತಃ ವಿಷಯಗಳಲ್ಲಿ ಪ್ರವರ್ತಿಸದಿರುವ ಮನಸ್ಸುಳ್ಳವನಾಗಿ, ಯಾವ ನಿಮಿತ್ತದಿಂದಲೂ ಶೋಕಪಡುವುದಿಲ್ಲ, ಯಾವ ವಿಷಯವನ್ನೂ ಅಪೇಕ್ಷಿಸುವುದಿಲ್ಲ. ಸರ್ವ ಪ್ರಾಣಿಗಳ ವಿಷಯದಲ್ಲಿಯೂ ರಾಗದ್ವೇಷರಹಿತನಾಗಿ, ಉತ್ತಮವಾದ ನನ್ನ ಭಕ್ತಿಯನ್ನು ಹೊಂದುತ್ತಾನೆ. —54.

ಅನಂತರ (ಧ್ಯಾನಜನ್ಯ ಭಕ್ತಿ ಸಾಮರ್ಥ್ಯದಿಂದ,) ನನ್ನ ಯಥಾರ್ಥ ಸ್ವರೂಪವನ್ನೂ, ಮತ್ತು ಯಾವಾನ್ = ನಾನು ದೇಶಕಾಲ ಗುಣಗಳಿಂದ ಹೇಗೆ ವ್ಯಾಪ್ತನಾಗಿರುವೆನು, ಯಾವ ನಾಮರೂಪವುಳ್ಳವನು ಇತ್ಯಾದಿ ನನ್ನ ಪರಮಾರ್ಥ ಪ್ರಭಾವವನ್ನು ಯೋಗ್ಯತಾನುಸಾರವಾಗಿ ತಿಳಿಯುತ್ತಾನೆ. ಎಂದರೆ ಅಪರೋಕ್ಷ ಜ್ಞಾನದಿಂದ ನನ್ನ ಸಾಕ್ಷಾತ್ಕಾರವನ್ನು ಹೊಂದುತ್ತಾನೆ. ಈ ರೀತಿ ನನ್ನನ್ನು ಯಥಾರ್ಥವಾಗಿ ತಿಳಿದ ನಂತರ, ಭಕ್ತ್ಯಾ ಎಂದರೆ ಪುನಃ ಉದ್ರಿಕ್ತ ಭಕ್ತಿಯಿಂದಲೇ ನನ್ನನ್ನು ಉಪಾಸನೆ ಮಾಡಿ, ತದನಂತರಂ ವಿಶತೇ = ಪ್ರಾರಬ್ಧ ಕರ್ಮಾದಿಗಳು ಕಳೆದ ನಂತರ ನನ್ನನ್ನು ಪ್ರವೇಶಿಸುತ್ತಾನೆ ( ಮುಕ್ತನಾಗುತ್ತಾನೆ ಎಂದರ್ಥವು ).

**ಈ ಶ್ಲೋಕಗಳಲ್ಲಿ ನೈಷ್ಕರ್ಮ್ಯಸಿದ್ಧಿಯು ಎಂದರೆ ನಿಷ್ಕಾಮ ಕರ್ಮರೂಪವಾದ**

ಉಪಾಯದಿಂದ ಬುದ್ಧಿವಿಶುದ್ಧತೆ ಎಂದರೆ ವಿಷಯವಿರಕ್ತಿ ಪ್ರಾಪ್ತಿಯು; ಅನಂತರ (ಶ್ರವಣಾದಿಗಳಿಂದ) ಧ್ಯಾನಯೋಗದಲ್ಲಿ ರತಿಯು; ಅನಂತರ ನಿರಂತರ ಧ್ಯಾನವು, ಅನಂತರ ಭಕ್ತಿವಿವೃದ್ಧತೆಯಿಂದ ಅಪರೋಕ್ಷ ಜ್ಞಾನವು; ಪುನಃ ಭಕ್ತ್ಯುದ್ರೇಕದಿಂದ ಪರಮಾತ್ಮನ ಅಭಿಜ್ಞಾನವು ಎಂದರೆ ವಿಶೇಷೋಪಾಸನೆಯು; ಅನಂತರ ಪರಮಾತ್ಮ ಪ್ರವೇಶರೂಪವಾದ ಮುಕ್ತಿಯೂ ಕ್ರಮವಾಗಿ ಮೋಕ್ಷ ಸಾಧನೆಗಳೆಂದು ನಿರೂಪಿಸಲ್ಪಟ್ಟಿರುತ್ತವೆ.

ಹನ್ನೆರಡನೆಯ ಅಧ್ಯಾಯದಲ್ಲಿಯೂ ಇದೇ ಕ್ರಮವೇ ಸೂಚಿಸಲ್ಪಟ್ಟಿರುವುದು :—

**(2) ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥**
**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಂ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥**
**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮ ಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥**
**ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ॥**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥**
**ಶ್ರೇಯೋ ಹಿ ಜ್ಞಾನಮಭ್ಯಾಸಾತ್ ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಂ ॥**

**—(12. 8–12.)**

**ಅರ್ಥ :—** ನನ್ನಲ್ಲಿಯೇ (ಶ್ರೀ ಕೃಷ್ಣನಲ್ಲಿಯೇ) ಮನಸ್ಸನ್ನು ದೃಢವಾಗಿ ಇಡು; ಇದು ಲಭಿಸದಿದ್ದರೆ ನನ್ನ ವಿಷಯಕವಾದ ತತ್ವಜ್ಞಾನವನ್ನು ಶ್ರವಣ ಮನನಗಳಿಂದ ಸಂಪಾದಿಸು; ಈ ರೀತಿ ನನ್ನ ವಿಷಯಕ ಜ್ಞಾನವನ್ನು ಹೊಂದಿ, ನನ್ನ ಉಪಾಸನೆಯನ್ನು ದೃಢವಾಗಿ ಮಾಡಿ, ನನ್ನ ಅಪರೋಕ್ಷವಾದ ನಂತರ ಭಕ್ತಿ ಮಾಡಿದ ಮೇಲೆ, ಮಯಿ ನಿವಸಿಷ್ಯಸಿ = ನೀನು ನನ್ನಲ್ಲಿಯೇ ನಿರ್ದುಃಖಾನಂದಾನುಭವಾತ್ಮಕವಾದ ಸ್ಥಿತಿಯನ್ನು ಹೊಂದುತ್ತೀಯೆ.

ಅಥ = (ಈ ಪದವು ಪಕ್ಷಾಂತರದ್ಯೋತಕವು) ಅಥವಾ, ನನ್ನಲ್ಲಿಯೇ ಸ್ಥಿರವಾಗಿ ಇಡಲ್ಪಟ್ಟ ಚಿತ್ತದಿಂದ ನಿರಂತರ ಧ್ಯಾನವನ್ನು ಮಾಡುವುದಕ್ಕೆ ನೀನು ಅಶಕ್ತನಾದರೆ, ಇಂಥ ಧ್ಯಾನವನ್ನು ಪ್ರತ್ಯಾಹಾರಾದಿರೂಪವಾದ ಯೋಗಾಭ್ಯಾಸದಿಂದ ಹೊಂದಿ ನನ್ನನ್ನು ತಿಳಿಯುವುದಕ್ಕೆ ಯತ್ನ ಮಾಡು. ವಿಷಯಾಂತರಗಳಲ್ಲಿ ಸಂಚರಿಸುವ ಮನಸ್ಸನ್ನು ಹಿಂತಿರುಗಿಸಿ ನನ್ನಲ್ಲಿ ಪುನಃ ಪುನಃ ತಂದು ನಿಲ್ಲಿಸುವುದೆಂಬ

ಪ್ರತ್ಯಾಹಾರರೂಪವಾದ ಅಭ್ಯಾಸವೂ ನಿನಗೆ ಸಾಧ್ಯವಾಗದಿದ್ದರೆ, ನನ್ನ ಪ್ರೀತಿಕರವಾದ ಕರ್ಮವನ್ನು ಮಾಡು. ನನ್ನ ಪ್ರೀತ್ಯುದ್ದೇಶಕರವಾದ ಕರ್ಮವನ್ನು ಆಚರಿಸುವವನಾಗಿ ನೀನು ಜ್ಞಾನದ್ವಾರಾ ಮುಕ್ತನಾಗುತ್ತೀಯೆ. ಸರ್ವ ಕರ್ಮಗಳನ್ನೂ ನನ್ನ ಪ್ರೀತ್ಯರ್ಥವಾಗಿ ಮಾಡುವುದೂ ನಿನಗೆ ಕಷ್ಟವಾದರೆ, ದೇವತಾಂತರ ಪೂಜಾದಿಗಳನ್ನು ಮಾಡಿದರೂ ನನ್ನ ವಿಷಯಕವಾದ ಯೋಗವನ್ನು ಆಶ್ರಯಿಸು ಎಂದರೆ ಅಂತ್ಯದಲ್ಲಿ ಆ ಕರ್ಮಗಳನ್ನಾದರೂ ನನಗೆ ಸಮರ್ಪಿಸು; ಅದರಿಂದ ನಿಯಮಿಸಲ್ಪಟ್ಟ ಮನಸ್ಸುಳ್ಳವನಾಗಿ ಸರ್ವ ಕರ್ಮ ಫಲಗಳನ್ನೂ ನನ್ನಲ್ಲಿಯೇ ಸಮರ್ಪಿಸುವವನಾಗು.

ಜ್ಞಾನಪೂರ್ವಕವಾದ ಪ್ರತ್ಯಾಹಾರಾದಿರೂಪವಾದ ಅಭ್ಯಾಸಕ್ಕಿಂತ (ಶ್ರವಣ ಮನನಜನಿತ) ತತ್ತ್ವಜ್ಞಾನವು ಶ್ರೇಷ್ಠವು. ಕೇವಲ ಶ್ರವಣಮನನಜನಿತ ತತ್ತ್ವಜ್ಞಾನಕ್ಕಿಂತಲೂ ಜ್ಞಾನಪೂರ್ವಕವಾಗಿ, ಪ್ರತ್ಯಾಹಾರಾದಿಜನಿತ ಧ್ಯಾನವು ಶ್ರೇಷ್ಠವು. ಧ್ಯಾನದಲ್ಲಿ ಸಕಾಮ ಧ್ಯಾನಕ್ಕಿಂತಲೂ ಸರ್ವಕರ್ಮಫಲಾಪೇಕ್ಷಾ ನಿವೃತ್ತಿಪೂರ್ವಕವಾದ ನಿಷ್ಕಾಮ ಧ್ಯಾನವು ಶ್ರೇಷ್ಠವು. ತ್ಯಾಗಾತ್ ಎಂದರೆ ನಿಷ್ಕಾಮಪೂರ್ವಕವಾದ ಧ್ಯಾನಕ್ಕಿಂತಲೂ ಅಪರೋಕ್ಷ ಜ್ಞಾನವು ಶ್ರೇಷ್ಠವು. ಅನಂತರಂ = ಅಪರೋಕ್ಷ ಜ್ಞಾನಾನಂತರ (ಭಕ್ತಿಪೂರ್ವಕವಾದ ಉಪಾಸನೆಯು ಆದ ಅನಂತರ, ಪ್ರಾರಬ್ಧ ಕರ್ಮಾದಿಗಳು ನಷ್ಟವಾದ ಅನಂತರ), ಶಾಂತಿಃ=ಮುಕ್ತಿಯು ಪ್ರಾಪ್ತವಾಗುವುದು.

ಏವಂಚ ಈ ಶ್ಲೋಕಗಳಲ್ಲಿ ಪ್ರತ್ಯಾಹಾರಾದಿ ಪ್ರಯತ್ನ ಸಾಪೇಕ್ಷಿಗಳಾಗಿ ಮನನಾದಿಗಳಿಂದ ಭಗವದಪರೋಕ್ಷ ಜ್ಞಾನವನ್ನು ಹೊಂದತಕ್ಕ ಚೇತನರು ಕೆಲವರು; ಪ್ರತ್ಯಾಹಾರಾದಿ ಸಂಪತ್ತಿರಹಿತರಾದರೂ ಮನನ ಪ್ರಭಾವದಿಂದಲೇ ಅಪರೋಕ್ಷ ಜ್ಞಾನವನ್ನು ಹೊಂದುವವರು ಕೆಲವು ಚೇತನರು; ಈ ಉಭಯರೂ ಬ್ರಹ್ಮಾಪರೋಕ್ಷಾರ್ಥವಾಗಿ ಕ್ರಮವಾಗಿ ಮಾಡಬೇಕಾದ ಪ್ರಯತ್ನವಿಶೇಷವನ್ನು ಶ್ರೀಕೃಷ್ಣನು ನಿರೂಪಿಸಿರುತ್ತಾನೆ.

ಇದೇ ರೀತಿಯಾದ ತಾರತಮ್ಯವನ್ನೇ ಷಷ್ಠಾಧ್ಯಾಯದ ಅಂತ್ಯ ಶ್ಲೋಕಗಳಲ್ಲಿ ಸಂಕ್ಷೇಪವಾಗಿ ಶ್ರೀಕೃಷ್ಣನು ನಿರೂಪಿಸಿರುತ್ತಾನೆ:—

**(3) ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥**
**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।**
**ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥**
—(6. 46–47.)

(ಅಪರೋಕ್ಷ ಜ್ಞಾನಕ್ಕೆ ಸಾಕ್ಷಾತ್ಸಾಧಕವಾದ) ಧ್ಯಾನಯೋಗದಲ್ಲಿ ರತನಾದವನು ಕೃಚ್ಛ್ರಚಾಂದ್ರಾಯಣಾದಿ ತಪಸ್ಸು ಮಾಡುವವರಿಗಿಂತಲೂ ಅಧಿಕನು; ಮತ್ತು ಧ್ಯಾನರಹಿತವಾದ ಕೇವಲ ಪರೋಕ್ಷ ಜ್ಞಾನವುಳ್ಳವನಿಗಿಂತಲೂ ಶ್ರೇಷ್ಠನು;

ಮತ್ತು ಕೇವಲ ಕರ್ಮಾಚರಣೆಯುಳ್ಳವನಿಗಿಂತಲೂ ಶ್ರೇಷ್ಠನು. ಆದುದರಿಂದ ಎಲೈ ಅರ್ಜುನನೇ ! ನೀನು ಧ್ಯಾನಯೋಗದಲ್ಲಿ ನಿರತನಾಗು. ಅಂಥ ಧ್ಯಾನವಂತರಲ್ಲಿಯೂ ಶ್ರದ್ಧೆಯಿಂದ ಎಂದರೆ ಅಧಿಕ ಭಕ್ತಿಯಿಂದ ನನ್ನಲ್ಲಿಯೇ ಇಡಲ್ಪಟ್ಟ ಮನಸ್ಸುಳ್ಳವನಾಗಿ ಕೇವಲ ನಿಷ್ಕಾಮತೆಯಿಂದ ಉಪಾಸನೆ ಮಾಡುವವನು ಯುಕ್ತತಮನು ಎಂದರೆ ಯೋಗಿಗಳಲ್ಲಿ ಉತ್ತಮನು. ( ಇವನಿಗೇ ಸಾಧನಾಂತರಾಪೇಕ್ಷೆಯಿಲ್ಲದೆ ಅಪರೋಕ್ಷ ಜ್ಞಾನವು ಆಗುವುದು. )

2. ಇಲ್ಲಿ ಒಂದೆರಡು ಸೂಕ್ಷ್ಮ ವಿಷಯಗಳನ್ನು ನಿರೂಪಿಸಬೇಕಾಗಿದೆ. ಕರ್ಮಿಗಳಿಗಿಂತ ತತ್ತ್ವಜ್ಞಾನಿಯು ಶ್ರೇಷ್ಠನು, ತತ್ತ್ವಜ್ಞಾನಿಗಿಂತ ಧ್ಯಾನ ಮಾಡುವವನು ಶ್ರೇಷ್ಠನು. ಧ್ಯಾನಯೋಗಿಗಿಂತ ಅತ್ಯಂತ ನಿಷ್ಕಾಮ ಧ್ಯಾನಯೋಗಿಯು ಶ್ರೇಷ್ಠನು, ಅವನಿಗಿಂತ ಅಪರೋಕ್ಷ ಜ್ಞಾನಿಯು ಶ್ರೇಷ್ಠನು ಇತ್ಯಾದಿ ನಮ್ಮ ನಿರೂಪಣೆಯಿಂದ ಮೋಕ್ಷಸಾಧನೆಯ ಒಂದು ಮೇಲಿನ ಪಾವಟಿಗೆಯನ್ನು ಏರಿದವನು ಕೆಳಗಿನ ಅಭ್ಯಾಸಗಳನ್ನು ಪರಿತ್ಯಾಗ ಮಾಡಬಹುದೆಂದು ಭ್ರಮಿಸಕೂಡದು. ಎಂದರೆ ತತ್ತ್ವಜ್ಞಾನಿಯು ಅಥವಾ ಧ್ಯಾನಯೋಗಿಯು ಕರ್ಮವನ್ನು ಪರಿತ್ಯಾಗ ಮಾಡಬಹುದೆಂದಾಗಲೀ, ಧ್ಯಾನ ಮಾಡುವವನು ಮನನಾದಿಗಳನ್ನು ಮತ್ತು ವಿಹಿತಕರ್ಮವನ್ನು ಮಾಡಬೇಕಾದುದಿಲ್ಲವೆಂದಾಗಲೀ ತಾತ್ಪರ್ಯವಲ್ಲ. ವಿಹಿತ ಕರ್ಮಾಚರಣೆಯು, ತತ್ತ್ವಜ್ಞಾನವು, ನಿರಂತರ ಮನನವು ಅಥವಾ ಅಭ್ಯಾಸಸಹಿತವಾದ ನಿರಂತರ ಧ್ಯಾನಯೋಗವು ಇವು ಮೂರೂ ಅಪರೋಕ್ಷ ಜ್ಞಾನಪರ್ಯಂತವೂ ಅವಶ್ಯಕವೇ. ಆದರೆ ಮನನಶೀಲನು ಕರ್ಮಸಂಕೋಚವನ್ನು ಮಾಡಬಹುದು; ಧ್ಯಾನಯೋಗಿಯು ಸಹ ವಿಹಿತಕರ್ಮವನ್ನು ಸಂಕುಚಿತವಾಗಿ ಆಚರಿಸುತ್ತಲೇ, ಶ್ರವಣಮನನಗಳನ್ನೂ ಸಹ ಮೊದಲೇ ಮಾಡಿರುವನಾದುದರಿಂದ ತನ್ನಿಂದ ಸಂಗೃಹೀತವಾದ ಭಗವದ್ಗುಣ ಧ್ಯಾನದಲ್ಲಿ ಹೆಚ್ಚು ಆಸಕ್ತನಾಗುವನು. ಹಾಗೆಯೇ ನಿಷ್ಕಾಮತೆಯೂ ಕರ್ಮ ಮಾಡುವವನಿಗೂ, ಜ್ಞಾನ ಸಂಪಾದಿಸುವವನಿಗೂ, ಧ್ಯಾನಯೋಗಿಗೂ ಅವಶ್ಯಕವು. ಮತ್ತು ಅಪರೋಕ್ಷವನ್ನು ಕ್ಷಿಪ್ರದಲ್ಲಿ, ಸಾಧನಾಂತರವನ್ನು ಮಾಡದಂತೆ, ಸಾಕ್ಷಾತ್ ಹೊಂದಲು ಯೋಗ್ಯನಾದ ಧ್ಯಾನಯೋಗಿಯು ವಿಶೇಷತಃ ನಿಷ್ಕಾಮನಾಗಬೇಕು. ಕರ್ಮವೂ ಜ್ಞಾನ ಸಾಧನಗಳೂ ಜೊತೆಯಾಗಿಯೇ ಅಪರೋಕ್ಷ ಜ್ಞಾನಕ್ಕೆ ಕಾರಣವಾಗುವುವು.

3. ಮೋಕ್ಷಸಾಧನವನ್ನು ನಿರೂಪಣೆ ಮಾಡುವ ಶಾಸ್ತ್ರದ ಮುಖ್ಯ ಸಾರಾಂಶವು ಇದು— " **ದೈವೀಸಂಪದ್ವಿಮೋಕ್ಷಾಯ** " ಎಂಬ ಶ್ರೀ ಕೃಷ್ಣನ ವಚನಾನುಸಾರವಾಗಿ ಮುಕ್ತಿಯೋಗ್ಯ ಚೇತನನು ಅತ್ಯುತ್ತಮ ಸುಖಾನುಭವರೂಪವಾದ ಮೋಕ್ಷವನ್ನು ಹೊಂದುವುದು ನಿಶ್ಚಯವು. ಕಾಲ ಕರ್ಮಗಳು ಪರಿಪಕ್ವವಾಗದ ಸ್ಥಿತಿಯಲ್ಲಿ ಆತನು ತನ್ನ ಅವಿದ್ಯಾ ಕಾಮ ಕರ್ಮಾದಿಗಳಿಂದ ವಿಶೇಷತಃ ಪ್ರತಿಬದ್ಧನಾಗಿ, ನಾನಾ ದೇಶಗಳಲ್ಲಿ ನಾನಾ ವಿಧವಾದ ದುರ್ಯೋನಿಗಳನ್ನು ಹೊಂದುತ್ತಾ, ಸಂಸಾರದಲ್ಲಿ ಅಲೆಯುತ್ತಿರುವನು. ಅನಿಮಿತ್ತಕೃಪಾಸಿಂಧುವಾದ ಶ್ರೀಪರಮಾತ್ಮನು

ತಿಬೇಟಿನಲ್ಲೋ, ಚೀನಾ ದೇಶದಲ್ಲೋ, ಹೂಣ ದೇಶಗಳಲ್ಲೋ ಎಲ್ಲೋ ಅಲೆಯುತ್ತಿರುವ ಸಾತ್ವಿಕ ಜೀವನನ್ನು ಅವನ ಯಾವುದಾದರೂ ಒಂದು ಸ್ವರೂಪಾನುಗುಣವಾದ ಸಾತ್ವಿಕ ಕರ್ಮವನ್ನು ನಿಮಿತ್ತ ಮಾಡಿ, ಉತ್ತಮ ಕರ್ಮಸಾಧನ ಭೂಮಿಯಲ್ಲಿ ಜನ್ಮವನ್ನು ಕೊಟ್ಟು, ಭಗವದ್ಭಕ್ತರ ಸಂಗವನ್ನು ಕೊಡುವನು. ಸತ್ಸಂಗದಿಂದ ಜೀವಜಡಾತ್ಮಕವಾದ ಪ್ರಪಂಚಕ್ಕಿಂತ ಅತ್ಯಂತ ವಿಲಕ್ಷಣನಾದ ನಾರಾಯಣನು ತನಗೆ ಸ್ವಾಮಿಯೆಂದು ತಿಳಿದೊಡನೆಯೇ ಮುಕ್ತಿಯೋಗ್ಯನು ಅಂಥ ಪರಮ ಪುರುಷನನ್ನು ನೋಡಿ ನಿರಂತರ ದುಃಖಪ್ರದವಾದ ಸಂಸಾರಬಂಧವನ್ನು ಅವನ ಪ್ರಸಾದದಿಂದ ಕಳೆದುಕೊಳ್ಳಬೇಕೆಂಬ ಊರ್ಜಿತಾಪೇಕ್ಷೆಯಿಂದ ಯುಕ್ತನಾಗಿ,* ತದರ್ಥವಾದ ವಿಧಿವಿಹಿತವಾದ ನಿಷ್ಕಾಮ ಕರ್ಮಗಳನ್ನು ಆಚರಿಸುತ್ತಾ ಅವುಗಳಿಂದ ಶುದ್ಧಾಂತಃಕರಣವುಳ್ಳವನಾಗುವನು. ಅನಂತರ ಅಭಿವೃದ್ಧವಾದ ತತ್ತ್ವಬುಭುತ್ಸೆಯುಳ್ಳವನಾಗಿ, ಸಜ್ಜನರ ಮುಖದಿಂದ ವಿಧ್ಯುಕ್ತ ರೀತಿಯಲ್ಲಿ ಶ್ರೀ ಭಗವದ್ಗುಣಗಳನ್ನು ಶ್ರವಣ ಮಾಡಿ ಸಂಶಯ ನಿವೃತ್ತ್ಯರ್ಥವಾಗಿ ಮನನ ಮಾಡುವನು. ಅನಂತರ ಪರಿಪೂರ್ಣವಾದ ವೈರಾಗ್ಯದಿಂದ ಸಹಿತನಾಗಿ, ನಿತ್ಯ ಸುಖಪ್ರದನಾದ ಶ್ರೀ ಪರಮಾತ್ಮನನ್ನು ನಿರಂತರ ಮನನರೂಪವಾದ ಉಪಾಯದಿಂದಲೋ, ಪ್ರತ್ಯಾಹಾರಾದಿ ಅಭ್ಯಾಸದಿಂದ ಸಹಕೃತವಾದ ಧ್ಯಾನಯೋಗರೂಪವಾದ ಉಪಾಯದಿಂದಲೋ, ವಿಹಿತ ಕರ್ಮಗಳನ್ನೂ ಮಾಡುತ್ತಲೇ ಉಪಾಸನೆ ಮಾಡುವನು. ಭಕ್ತಿಪೂರ್ವಕವಾದ ಇಂಥ ಉಪಾಸನೆಯಿಂದ ಶ್ರೀ ಪರಮಾತ್ಮನು ಪ್ರಸನ್ನನಾಗಿ ಉಪಾಸಕನ ಹೃದಯ ಕಮಲದಲ್ಲಿ ಅವನ ಯೋಗ್ಯತಾನುಗುಣವಾಗಿ ದರ್ಶನ ಕೊಡುವನು. ಇದಕ್ಕೇ ಅಪರೋಕ್ಷ ಜ್ಞಾನವೆಂದು ಹೆಸರು. ಅಪರೋಕ್ಷ ಜ್ಞಾನಿಯು ನಿಶ್ಚಿತಮುಕ್ತನು. ಜ್ಞಾನಿಯು ಪೂರ್ಣವಾದ ಜ್ಞಾನ ಭಕ್ತಿವಿರಕ್ತಿಗಳಿಂದ ಪರಮಾತ್ಮನನ್ನು ಉಪಾಸನೆ ಮಾಡಿ, ಪರಮಾತ್ಮನ ಅತ್ಯರ್ಥ ಪ್ರಸಾದವನ್ನು ಹೊಂದಿ ತನ್ನ ಯೋಗ್ಯತಾನುಸಾರಿಯಾದ ಮುಕ್ತಿ ಪದವಿಯನ್ನು ಹೊಂದುತ್ತಾನೆ.

ಆದುದರಿಂದ ಮುಕ್ತಿಯೋಗ್ಯನು ಪ್ರಥಮತಃ ಸಾಮಾನ್ಯ ಜ್ಞಾನ-ಭಕ್ತಿವಿರಕ್ತಿಗಳಿಂದ ವಿಶೇಷವಾಗಿ ಕರ್ಮಮಾರ್ಗದಲ್ಲಿ ಪ್ರವೃತ್ತನಾಗುತ್ತಾನೆ. ಅನಂತರ ವಿಶೇಷ ಜ್ಞಾನ ಭಕ್ತಿವಿರಕ್ತಿಗಳಿಂದ ಕರ್ಮ ಸಂಕೋಚವನ್ನು ಮಾಡಿಕೊಂಡು ಶ್ರವಣಾದಿರೂಪವಾದ ಜ್ಞಾನಸಾಧನದಲ್ಲಿ ಪ್ರವಿಷ್ಟನಾಗುತ್ತಾನೆ. ಅನಂತರ, ಪ್ರಾಪ್ತವಾದ ಜ್ಞಾನದಿಂದ ಪಕ್ವವಾದ ಚಿತ್ತವುಳ್ಳವನಾಗಿ ವಿಶೇಷ ಜ್ಞಾನ ಭಕ್ತಿ ವಿರಕ್ತಿಗಳಿಂದ ಸಹಿತನಾಗಿ ಧ್ಯಾನದಲ್ಲಿ ಪ್ರವೃತ್ತನಾಗುವನು. ಧ್ಯಾನದಿಂದ ಅಪರೋಕ್ಷ

* ಇನ್ನು ಕೆಲವು ಉತ್ತಮ ಮುಕ್ತಿಯೋಗ್ಯ ಚೇತನರು ಶಾಸ್ತ್ರಾದಿಗಳಿಂದ ಪರಮಾತ್ಮನ ಜ್ಞಾನವು ಬಂದ ಹಾಗೆಲ್ಲಾ ಮುಕ್ತಿಯೇ ಮುಂತಾದ ಯಾವ ಫಲದಲ್ಲಿಯೂ ದೃಷ್ಟಿಯಿಡದೆ ಕೇವಲ ಪರಮಾತ್ಮನ ದರ್ಶನಾರ್ಥವಾಗಿ ಮತ್ತು ಆತನ ಪ್ರಸಾದಮಾತ್ರದ ವೃದ್ಧಿಗಾಗಿ ಅತ್ಯುತ್ಸಾಹಪೂರ್ವಕವಾದ ಯತ್ನವನ್ನು ಮಾಡುವರು.

ಜ್ಞಾನವು ಪ್ರಾಪ್ತವಾಗಿ ಸ್ವಯೋಗ್ಯತಾನುಗುಣವಾದ ಜ್ಞಾನ ಭಕ್ತಿ ವಿರಕ್ತಿಗಳು ಮೂರೂ ಪೂರ್ಣವಾಗುವುವು. ಹೀಗೆ ಇರುವುದರಿಂದ ಕೆಲವು ಕಡೆ ಶಾಸ್ತ್ರಗಳಲ್ಲಿ, ಹಾಗೂ ಹದಿನೆಂಟನೆಯ ಅಧ್ಯಾಯಾದಿಗಳಲ್ಲಿ ಶ್ರೀ ಕೃಷ್ಣನ ಮಾತುಗಳಲ್ಲಿಯೂ ಸಹ, ಮೊದಲು ವಿರಕ್ತಿಯನ್ನು ಹೊಂದಬೇಕು, ಅನಂತರ ಜ್ಞಾನೋಪಾಯವು, ಅನಂತರ ಭಕ್ತಿಯು ಇತ್ಯಾದಿ ರೀತಿಯಲ್ಲಿ ತತ್ತ್ವವು ನಿರೂಪಿತವಾಗಿದ್ದರೂ, ಪೂರ್ವದಲ್ಲಿದ್ದುದಕ್ಕಿಂತ ಹೆಚ್ಚು ಜ್ಞಾನ ಭಕ್ತಿ ವಿರಕ್ತಿಗಳಿಂದ ಉತ್ತಮ ಸಾಧನದಲ್ಲಿ ಉಪಾಸಕನು ಆಸಕ್ತನಾಗಬೇಕು ಎಂದು ಅರ್ಥ ಮಾಡಬೇಕು. ಅಷ್ಟೇ ವಿನಹ ವಿರಕ್ತಿಯನ್ನು ಬಿಟ್ಟು ಜ್ಞಾನವನ್ನೂ, ಜ್ಞಾನವನ್ನು ಬಿಟ್ಟು ಭಕ್ತಿಯನ್ನೂ ಹೊಂದಬಹುದೆಂದಾಗಲೀ, ವಿರಕ್ತನಿಗೆ ಜ್ಞಾನ ಭಕ್ತಿಗಳು ಬೇಕಿಲ್ಲ, ಜ್ಞಾನಿಗೆ ಭಕ್ತಿಯು ಬೇಕಿಲ್ಲವೆಂದಾಗಲೀ ಅರ್ಥ ಮಾಡಬಾರದು.

**4.** ಇನ್ನೊಂದು ಅವಶ್ಯವಕ್ತವ್ಯವಾದ ಎಚ್ಚರೋಕ್ತಿಯನ್ನು ಹೇಳಿ ಧ್ಯಾನಯೋಗದ ಸ್ವರೂಪ ಲಕ್ಷಣಾದಿಗಳನ್ನು ನಿರೂಪಿಸುತ್ತೇವೆ. ಯದ್ಯಪಿ ನಿಷ್ಕಾಮ ಧ್ಯಾನವು ಅಪರೋಕ್ಷ ಜ್ಞಾನಕ್ಕೆ ಕಾರಣವಾಗುವುದು. ಆದರೂ ವಿಧ್ಯುಕ್ತ ರೀತಿಯಲ್ಲಿ ನಡೆಯುತ್ತಾ ನಿಷಿದ್ಧ ಪರಿತ್ಯಾಗಗಳಿಂದ ಸಹಿತನಾಗಿ ನಿಯತ ರೀತಿಯಲ್ಲಿ ಉಪದೇಶಾದಿಗಳನ್ನು ಹೊಂದಿ ಮಾಡಿದ ಧ್ಯಾನವೇ ಸಾಕ್ಷಾದಪರೋಕ್ಷ ಜ್ಞಾನವನ್ನು ಹುಟ್ಟಿಸುವುದು. ಅನ್ಯಥಾ ಅಪರೋಕ್ಷ ಜ್ಞಾನವು ಉಂಟಾಗಲಾರದು.

**ಪ್ರಶ್ನೆ—** ಸ್ವಾಮೀ ! ಇದು ಆಶ್ಚರ್ಯವು; ತೃಣವನ್ನು ಸುಡುವುದರಲ್ಲಿ ಅಗ್ನಿಯು ಕಾರಣವು. ಬಟ್ಟೆಯನ್ನು ತೋಯಿಸುವುದಕ್ಕೆ ಜಲವು ಕಾರಣವು. ಹೀಗೆಯೇ ಜ್ಞಾನಕಾರಣವಾದ ಧ್ಯಾನವು ಹುಟ್ಟಿದ ಮೇಲೆ ಅಪರೋಕ್ಷ ಜ್ಞಾನವು ಹುಟ್ಟದೇ ಇರುವುದು ಹೇಗೆ ? ಮತ್ತು ಧ್ಯಾನಕಾರಣವಾದ ತತ್ತ್ವಜ್ಞಾನವು ಶಾಸ್ತ್ರ ವ್ಯಾಸಂಗದಿಂದ ಬರುವುದು. ಇನ್ನು ವ್ಯಾಸಂಗವು ನಿಯತ ರೀತಿಯಿಂದಲೇ ನಡೆಯಬೇಕೆಂದು ನಿರ್ಬಂಧವೇನು ? ಅಥವಾ ಶಾಸ್ತ್ರ ವ್ಯಾಸಂಗದಿಂದ ಜ್ಞಾನವು ಬರುವುದೆಂದು ಅನುಭವಸಿದ್ಧವಾಗಿರುವುದರಿಂದ ತದರ್ಥವಾಗಿ ವಿಧ್ಯುಕ್ತ ಕರ್ಮಾಚರಣೆಯು ಏತಕ್ಕೆ ?

ಶ್ರೀ ಶ್ರೀಗಳವರು– ಅಂತಃಕರಣಶುದ್ಧ್ಯರ್ಥವಾದ ಕರ್ಮಾಚರಣೆಯು, ತತ್ತ್ವಜ್ಞಾನಾರ್ಥವಾದ ಶ್ರವಣ ಮನನಗಳು, ಧ್ಯಾನಾರ್ಥವಾದ ಮನನ ಯೋಗಾಭ್ಯಾಸಾದಿಗಳು ಇವಿಷ್ಟೂ ವಿದಿವಿಹಿತವಾದ ರೀತಿಯಲ್ಲಿ ಅಧಿಕಾರಾನುಸಾರವಾಗಿ ನಡೆದರೇನೇ ಅಪರೋಕ್ಷ ಜ್ಞಾನೋತ್ಪತ್ತಿಗೆ ಕಾರಣವಾಗುವುವು. ಹಾಗಿಲ್ಲದೆ ಮಹಾಫಲವಾದ ಬ್ರಹ್ಮದರ್ಶನವು ಉಂಟಾಗಲಾರದು. ಯದ್ಯಪಿ ನೀವು ಹೇಳಿದಂತೆ ಅಗ್ನಿಯು ಕಾಷ್ಠವನ್ನು ಸುಡುವುದು ನಿಜವು. ಅಗ್ನಿಯಿಂದ ಪಾಕವು ಉಂಟಾಗುವುದು. ಆದರೆ ಹಸೀ ಕಟ್ಟಿಗೆಗಳಿಂದ ಧೂಮಪೂರ್ಣವಾದ ಮಂದವಾದ ಅಗ್ನಿಯಿಂದ ಸಹಸ್ರ ಬ್ರಾಹ್ಮಣ ಭೋಜನಾರ್ಥವಾದ ದೊಡ್ಡ ಅಡಿಗೆಯನ್ನು ಮಾಡುವುದು ಸಾಧ್ಯವೇ ?

ಅಥವಾ ಸರೋವರದ ಮಧ್ಯದಲ್ಲಿ ನೀರಿನ ಮೇಲೆ ಅಗ್ನಿಯನ್ನು ಇಟ್ಟು ಅಡಿಗೆ ಮಾಡುವುದಕ್ಕೆ ಶಕ್ಯವಾಗುವುದೇ ? ಬೀಜವು ಧ್ಯಾನ್ಯೋತ್ಪತ್ತಿಗೆ ಕಾರಣವಾಗುವುದು. ಆದರೆ ಬಂಡೆಯ ಕಲ್ಲಿನ ಮೇಲೆ ಎರಚಲ್ಪಟ್ಟರೆ ಅಥವಾ ಕೊಳೆತು ಹೋಗಿದ್ದರೆ ಅದು ಅಂಕುರವನ್ನು ಹೇಗೆ ತಾನೇ ಹುಟ್ಟಿಸುವುದು ? ದಂಡವು ಘಟನಿರ್ಮಾಣದಲ್ಲಿ ಒಂದು ಕಾರಣವಾದರೂ, ಅದು ದೃಢವಾಗಿ ಚಕ್ರಸಂಬಂಧದ ಅಭಿಘಾತವನ್ನು ತಡೆಯುವಷ್ಟು ಶಕ್ತಿಯುಳ್ಳದ್ದಾಗಿರಬೇಕು. ಹೀಗೆಯೇ ಧ್ಯಾನವು ಅಪರೋಕ್ಷಕ್ಕೆ ಕಾರಣವಾದರೂ ವಿಧ್ಯುಕ್ತ ರೀತಿಯಲ್ಲಿ ನಡೆಯದೇ ಇದ್ದರೆ, ಅಪರೋಕ್ಷ ಜ್ಞಾನ ಜನಕವಾದ ಹರಿಪ್ರಸಾದವನ್ನು ಹುಟ್ಟಿಸಲಾರದು. ಹಾಗೆಯೇ ಶ್ರವಣಮನನಗಳು ವಿಧ್ಯುಕ್ತ ರೀತಿಯಲ್ಲಿ ನಡೆಯದೇ ಇದ್ದರೆ ಮೋಕ್ಷಕಾರಣವಾದ ಧ್ಯಾನವನ್ನು ಹುಟ್ಟಿಸಲಾರವು. ವಿಧ್ಯುಕ್ತ ಕರ್ಮಾನುಷ್ಠಾನ ಪರಿತ್ಯಾಗವೂ ಸಹ ಮೋಕ್ಷ ಕಾರಣವಾದ ಅಪರೋಕ್ಷ ಜ್ಞಾನೋತ್ಪತ್ತಿಗೆ ಪ್ರತಿಬಂಧಕವಾಗಿ ಪರಿಣಮಿಸಿ ಅತ್ಯಂತ ಅನರ್ಥಕರವೇ ಆಗುವುದು.

ಅಪರೋಕ್ಷ ಜ್ಞಾನವು ಧ್ಯಾನಜನಿತ ಹರಿಭಕ್ತಿಯಿಂದ ಪ್ರಾಪ್ತವಾದ ಶ್ರೀ ಪರಮಾತ್ಮನ ಪ್ರಸಾದದಿಂದ ಉಂಟಾಗುವುದು ಎಂಬ ವಿಷಯವನ್ನು ನೀವು ಮನಸ್ಸಿನಲ್ಲಿಟ್ಟರೆ, ಕೆಲವು ಧ್ಯಾನಗಳು, ಕೆಲವು ಶ್ರವಣಮನನಗಳು, ಕೆಲವು ಕರ್ಮಗಳು ಮೋಕ್ಷೋಪಯೋಗಿಯಾಗದಿರುವುದಕ್ಕೂ, ಕೆಲವು ಮೋಕ್ಷೋಪಯೋಗಿಯಾಗುವುದಕ್ಕೂ ಕಾರಣವು ಸ್ಫುಟತರವಾಗಿ ಗೊತ್ತಾಗುವುದು. ಲೌಕಿಕ ದೃಷ್ಟಾಂತದಿಂದಲೂ ಈ ವಿಷಯವನ್ನು ಚೆನ್ನಾಗಿ ತಿಳಿಯಬಹುದು. ಇಷ್ಟು ಗ್ರಂಥಗಳನ್ನು ಓದಿ ಈ ರೀತಿಯಾಗಿ ವ್ಯಾಖ್ಯಾನ ಕೌಶಲ್ಯವನ್ನು ಪಡೆದವನಿಗೆ ಎಂ.ಎ. ಬಿರುದನ್ನು ಕೊಡಬೇಕೆಂದು ನಿಮ್ಮ ವಿಶ್ವವಿದ್ಯಾನಿಲಯದ ಮಹಾಧಿಕಾರಿಯು ನಿಶ್ಚಯಿಸಿರುತ್ತಾನೆ. ಹೀಗಿದ್ದರೂ, ಮನೆಯಲ್ಲಿಯೇ ಓದಿ ಅಷ್ಟು ಸಾಮರ್ಥ್ಯವನ್ನು ಸಂಪಾದಿಸಿದವನಿಗಾಗಲೀ, ಅಥವಾ ಕೆಳಗಿನ ತರಗತಿಯ ಪರೀಕ್ಷೆಗಳಾದ ಬಿ.ಎ. ಮುಂತಾದ ಸರ್ಟಿಫಿಕೇಟನ್ನು ಹೊಂದಿದವರಿಗಾಗಲೀ ಆತನು ಎಂ.ಎ. ಬಿರುದನ್ನು ಕೊಡಲಾರನು. ಮತ್ತು ಸರ್ಕಾರದಲ್ಲಿ ಕೆಲಸವನ್ನು ಕೊಡಲಾರರು. ಪ್ರಭುಪ್ರಸಾದವು ವಿಧ್ಯುಕ್ತ ರೀತಿಯಲ್ಲಿ ನಡೆದವನ ಮೇಲೆಯೇ ಬರುವುದು. ವಿಧ್ಯತಿಕ್ರಮ ಮಾಡಿದವನ ಮೇಲೆ ವಿಧಿನಿಯಾಮಕನು ಹೇಗೆ ತಾನೇ ಒಲಿಯುವನು ? ಈ ಅಭಿಪ್ರಾಯವನ್ನೆಲ್ಲಾ ಮನಸ್ಸಿನಲ್ಲಿಟ್ಟೇ " **ನಿಯತಧ್ಯಾನಜಜ್ಞಾನಯೋಗಾಪ್ಯವ್ಯಂ** " ಎಂದು ಟೀಕಾಕೃತ್ಪಾದರು ಪರಬ್ರಹ್ಮನನ್ನು ಸ್ತುತಿಸಿರುತ್ತಾರೆ.

# 5. ಐದನೆಯ ಅಂಶವು.

## ಬ್ರಹ್ಮಾಪರೋಕ್ಷದ ಸಾಕ್ಷಾತ್ಸಾಧನದ ವಿಶೇಷ ವಿಮರ್ಶೆಯು. ಧ್ಯಾನಸ್ವರೂಪಾದಿ ವರ್ಣನೆಯು.

1. ಶ್ರೀ ಶ್ರೀಗಳವರು :— ಇನ್ನು ಮೇಲೆ ಅಪರೋಕ್ಷ ಜ್ಞಾನಕ್ಕೆ ಸಾಕ್ಷಾತ್ಸಾಧನವು ಯಾವುದೆಂಬುದನ್ನು ಸ್ವಲ್ಪ ವಿಶೇಷವಾಗಿ ವಿಚಾರ ಮಾಡೋಣ.

ಆರಂಭದಲ್ಲಿಯೇ ಒಂದು ವಿಶೇಷ ನಿರ್ಣಯವನ್ನು ಸೂಚನೆ ಮಾಡಿ ಬಿಡುವೆವು. ಅಪರೋಕ್ಷ ಜ್ಞಾನೋತ್ಪತ್ತಿಯಲ್ಲಿಯೂ ಸಹ ಅಪರೋಕ್ಷ ಜ್ಞಾನಜನಕವಾದ ವಿಷ್ಣುಪ್ರಸಾದವೇ ಮುಖ್ಯ ಕಾರಣವು.

ಶ್ರೀ ಕೃಷ್ಣನು ಹೇಳುತ್ತಾನೆ :—

**(1) ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
—(18. 58.)

ನನ್ನಲ್ಲಿಯೇ ಇಡಲ್ಪಟ್ಟ ಚಿತ್ತವುಳ್ಳವನಾದರೆ ಸರ್ವದುರ್ಗಗಳನ್ನೂ ನನ್ನ ಪ್ರಸಾದದಿಂದಲೇ ನೀನು ದಾಟುತ್ತೀಯೆ.

ಇದರಿಂದ ಧ್ಯಾನವನ್ನು ಸಂಪಾದನೆ ಮಾಡಿ ಅಪರೋಕ್ಷ ಜ್ಞಾನಾರ್ಥವಾಗಿ ಅಧಿಕಾರಿಯು ಹೊಂದುವ ಮಹಾ ಸಂಕಟರೂಪವಾದ ದುರ್ಗವನ್ನೂ ಸಹ ಶ್ರೀ ಕೃಷ್ಣನು ತನ್ನ ಪ್ರಸಾದದಿಂದಲೇ ದಾಟಿಸುವನೆಂದು ಸಿದ್ಧವಾಗುವುದು. ಸ್ಪಷ್ಟ ವಚನವೂ ಇರುವುದು :—

**(2) ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ ॥**
**ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥**
—(10. 4–5.)

ಜ್ಞಾನವು, ಅಪರೋಕ್ಷ ಜ್ಞಾನವು, ಮಿಥ್ಯಾಜ್ಞಾನನಾಶವು, ಕ್ಷಮಾ ಸತ್ಯ ದಮಶಮಾದಿ ಸರ್ವ ಗುಣಗಳೂ ಪ್ರಾಣಿಗಳಿಗೆ ನನ್ನಿಂದಲೇ ಬರುವುವು.

**(3) ........ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।** —(15. 15.)

ನನ್ನಿಂದಲೇ ಸ್ಮೃತಿಯು, ಪರೋಕ್ಷಾಪರೋಕ್ಷ ಜ್ಞಾನವು, ಜ್ಞಾನತಿರೋಧಾನವು ಇವೆಲ್ಲಾ ಬರುತ್ತವೆ.

ಹೀಗಿರುವುದರಿಂದ ಧ್ಯಾನವು ಅಪರೋಕ್ಷ ಜ್ಞಾನಜನಕವಾದ ಹರಿಪ್ರಸಾದಕ್ಕೆ ಕಾರಣವಾಗಿ, ಅದರಿಂದ ಪರಮಾತ್ಮದರ್ಶನವು ಆಗುವುದೆಂದು ನಿಶ್ಚಯಿಸಬೇಕು. ಇಷ್ಟೇ ಅಲ್ಲ, ಧ್ಯಾನವೂ ಸಹ ಸಾಕ್ಷಾತ್ ಹರಿಪ್ರಸಾದವನ್ನು ಹುಟ್ಟಿಸಲಾರದು.

ಧ್ಯಾನಜನಿತವಾದ ಅಧಿಕಾರಿಯ **ಭಕ್ತಿಯೇ** ಅಪರೋಕ್ಷ ಜ್ಞಾನಜನಕವಾದ ಹರಿ ಪ್ರಸಾದಕ್ಕೆ ಸಾಕ್ಷಾತ್ ಕಾರಣವು. ಅಥವಾ ಧ್ಯಾನವೇ ಕಾರಣವೆಂದು ಹೇಳುವುದಾದರೆ ಭಕ್ತಿಯನ್ನು ಸನ್ನಿಕರ್ಷರೂಪವಾದ ಅವಾಂತರ ವ್ಯಾಪಾರವೆಂದಾದರೂ ಭಾವಿಸಬಹುದು. ಅಂತೂ ಅಪರೋಕ್ಷ ಜ್ಞಾನಜನಕವಾದ ಭಕ್ತಿಯು ಧ್ಯಾನದಿಂದ ಸಾಕ್ಷಾದುತ್ಪನ್ನವಾಗುವುದು. ಅಥವಾ **" ಧ್ಯಾನಂ ಭಕ್ತಿಸಮನ್ವಿತಃ "** ಎಂಬ ಪ್ರಮಾಣ ವಚನಾನುಸಾರ ಭಕ್ತಿಸಹಿತವಾದ ಧ್ಯಾನವು ಕಾರಣವೆಂದಾದರೂ ಹೇಳಬಹುದು. ಅಂತೂ ಧ್ಯಾನಜನ್ಯವಾದ ಭಕ್ತಿಯು ಅಥವಾ ಭಕ್ತಿಸಹಿತವಾದ ಧ್ಯಾನವು ಪರಮಾತ್ಮದರ್ಶನಕ್ಕೆ ಸಾಕ್ಷಾತ್ಕಾರಣವು.

ಶ್ರೀ ಕೃಷ್ಣನು ಹೇಳುತ್ತಾನೆ:—

**(4) ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥**
**—(11. 54.)**

ಎಲೈ ಅರ್ಜುನನೇ ! ಅನನ್ಯವಾದ ಭಕ್ತಿಯಿಂದ ನನ್ನ ಸ್ವರೂಪವನ್ನು ತಿಳಿಯುವುದಕ್ಕೂ, ನೋಡುವುದಕ್ಕೂ, ಮುಕ್ತಿಯಲ್ಲಿ ಪ್ರವೇಶಿಸುವುದಕ್ಕೂ ಸಾಧ್ಯವಾಗುವುದು.

**(5) ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ ।**
**—(18. 55.)**

ಅಧಿಕಾರಿಯು ಭಕ್ತಿಯಿಂದಲೇ ನನ್ನ ವ್ಯಾಪ್ತಿಯನ್ನೂ ಯಥಾರ್ಥ ಸ್ವರೂಪವನ್ನೂ ಸರಿಯಾಗಿ ತಿಳಿಯುತ್ತಾನೆ.

**2.** ಅಪರೋಕ್ಷ ಜ್ಞಾನಕಾರಣವಾದ ಧ್ಯಾನಸ್ವರೂಪವನ್ನು ಸಾಂಗವಾಗಿ ಶ್ರೀ ಕೃಷ್ಣನು ಐದನೆಯ ಮತ್ತು ಆರನೆಯ ಅಧ್ಯಾಯಗಳಲ್ಲಿ ನಿರೂಪಿಸಿರುತ್ತಾನೆ. ಧ್ಯಾನವೆಂದರೆ ಭಗವದ್ಗೀತೆಯಲ್ಲಿ ದ್ವಿತೀಯ ಷಟ್ಕದಲ್ಲಿ ಉಕ್ತವಾಗಿರುವ ಗುಣಗಣಾನುಸಂಧಾನಪೂರ್ವಕವಾಗಿ ಭಗವಂತನನ್ನು ಶ್ರವಣಮನನಾದಿಜನಿತ ಸಂಸ್ಕಾರಾತ್ಮಕವಾದ ಭಗವದ್ವಿಗ್ರಹದಲ್ಲಿ ಮನಸ್ಸಿನಿಂದಲೇ ಸದಾ ಚಿಂತಿಸುತ್ತಿರುವುದು. ಅಂಥ ವಾಸನಾಮಯ ಪ್ರತಿಮೆಯಲ್ಲಿ ಶ್ರೀ ಪರಮಾತ್ಮನ ಸಾನ್ನಿಧ್ಯವು ಬಾಹ್ಯ ಪ್ರತಿಮೆಗಳಲ್ಲಿರುವುದಕ್ಕಿಂತಲೂ ಅತ್ಯತಿಶಯವಾಗಿರುವುದು. ಇಂಥ ಅಂತಃಕರಣದಲ್ಲಿ ಸನ್ನಿಹಿತವಾದ ಹರಿಪ್ರತಿಮೆಯ ನಿರಂತರಾವಲೋಕನವು ಕೆಲವರಿಗೆ ಆಸನ, ಪ್ರಾಣಾಯಾಮ, ವಾಯುಜಯಾದಿ ಉಪಾಯಗಳಿಂದ ಕ್ಷಿಪ್ರವಾಗಿ ಸಾಧ್ಯವಾಗುವುದು. ಇಂಥ ಯೋಗೋಪಾಯರಹಿತರಾದವರಿಗೆ,

**(1) ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಂ ।**
**—(13. 11.)**

ಎಂಬ ಶ್ಲೋಕೋಕ್ತವಾದ ಭಗವದ್ವಿಷಯಕವಾದ ತತ್ತ್ವಜ್ಞಾನದಲ್ಲಿ ಆಸಕ್ತಿಯು ಮತ್ತು ಅಪರೋಕ್ಷ ಜ್ಞಾನಾರ್ಥವಾಗಿ ಶಾಸ್ತ್ರಪರ್ಯಾಲೋಚನೆಯು ಇವುಗಳೇ ಅಪರೋಕ್ಷ ಜ್ಞಾನಕ್ಕೆ ಮುಖ್ಯ ಸಾಧನವಾಗುವುವು.

(2) **ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
—(13. 10.)

ಎಂಬಲ್ಲಿ ಹೇಳಿರುವ ಭಕ್ತಿಯು ಮಾತ್ರ ಸರ್ವರಿಗೂ ಅಪೇಕ್ಷಿತವು.

ಧ್ಯಾನಸ್ವರೂಪವನ್ನು ಶ್ರೀ ಕೃಷ್ಣನು ಸಂಕ್ಷೇಪವಾಗಿ ಪಂಚಮಾಧ್ಯಾಯದಲ್ಲಿ ನಿರೂಪಿಸಿರುತ್ತಾನೆ :—

(3) **ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ ।**
**ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ॥**
**ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।**
**ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥**
—(5. 27–28.)

ಪ್ರತ್ಯಾಹಾರದಿಂದ ಶಬ್ದಾದಿ ವಿಷಯಗಳನ್ನು ಶ್ರೋತ್ರಾದಿ ಇಂದ್ರಿಯಗಳಿಗೆ ಅವಿಷಯಗಳನ್ನಾಗಿ ಮಾಡಿ ( ಅಥವಾ ಅಭಿಮಾನ ಪರಿತ್ಯಾಗದಿಂದ ಸುಖ ದುಃಖ ಸಂಪಾದಕವಾಗುವಂತೆ ಮಾಡಿ, ಸರ್ವಥಾ ವಿಷಯಾಭಿಲಾಷೆಯನ್ನು ಬಿಟ್ಟು, ) ಭ್ರೂಮಧ್ಯದಲ್ಲಿ ದೃಷ್ಟಿಯನ್ನಿಟ್ಟು, ಪ್ರಾಣಾಪಾನಗಳನ್ನು ನಿರ್ವಿಕಾರವಾಗಿ ನಾಸಾಂತಃ ಪ್ರದೇಶದಲ್ಲಿಯೇ ಸಂಚರಿಸುವಂತೆ ಮಾಡಿ ( ಕುಂಭಕದಲ್ಲಿ ಸ್ಥಾಯಿಯಾಗಿ ನಿಲ್ಲಿಸಿ ), ನಿಗೃಹೀತವಾದ ಇಂದ್ರಿಯ ಮತ್ತು ಮನೋಬುದ್ಧಿಗಳುಳ್ಳವನಾಗಿ, ಮನನಶೀಲನಾಗಿ, ಮೋಕ್ಷವೆಂಬ ಪುರುಷಾರ್ಥದಲ್ಲಿಯೇ ಆಸಕ್ತನಾಗಿ ವಿಷಯೇಚ್ಛೆ, ಭಯ, ಕ್ರೋಧಾದಿಗಳಿಂದ ಯಾವಾತನು ರಹಿತನಾಗಿರುವನೋ ಆತನು ಮುಕ್ತಸದೃಶನು. ಕ್ಷಿಪ್ರದಲ್ಲಿ ಜ್ಞಾನವನ್ನು ಹೊಂದಿ ಮುಕ್ತನಾಗುವನು ಎಂದು ಭಾವವು.

ಷಷ್ಠಾಧ್ಯಾಯದ ಧ್ಯಾನಪ್ರಕಾರದ ವರ್ಣನೆಯು ವಿಸ್ತೃತವಾದುದು :—

(4) **ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥**
**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೇಲಾಜಿನ ಕುಶೋತ್ತರಂ ॥**
**ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।**
**ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥**

**ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥**
**ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।**
**ಮನಸ್ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥**
**ಯುಂಜನ್ನೇವ ಸದಾತ್ಮಾನಂ ಯೋಗೀ ನಿಯತಮಾನಸಃ ।**
**ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥**
**—(6. 10–15.)**

ಧ್ಯಾನಯೋಗಿಯು ನಿರಂತರದಲ್ಲಿಯೂ ಜನಸಂಘರಹಿತವಾದ ಸ್ಥಳದಲ್ಲಿ ಸ್ಥಿತನಾಗಿ, ಏಕಾಕಿಯಾಗಿ, ಜಿತವಾದ ಮನಸ್ಸು ಮತ್ತು ದೇಹಗಳುಳ್ಳವನಾಗಿ, ಆಶಾರಹಿತನಾಗಿ ಮತ್ತು ವಿಷಯಸಂಗರಹಿತನಾಗಿ ತನ್ನ ಮನಸ್ಸನ್ನು ಪರಮಾತ್ಮನಲ್ಲಿ ಯೋಗ ಮಾಡಬೇಕು. ಇಂಥ ಧ್ಯಾನಾನುಷ್ಠಾನ ಪ್ರಕಾರವನ್ನು ಶ್ರೀ ಕೃಷ್ಣನು ಹೇಳುತ್ತಾನೆ :— ನಿರ್ಮಲವಾದ ಎಂದರೆ ಮನಃಪ್ರಸಾದಜನಕವಾದ ಸ್ಥಳದಲ್ಲಿ, ವಸ್ತ್ರ, ವ್ಯಾಘ್ರಚರ್ಮ ಅಥವಾ ದರ್ಭೆಗಳೇ ಮೇಲಾಗಿ ಉಳ್ಳಂಥಾ ಮತ್ತು ಅತಿ ಎತ್ತರವೂ ಅತಿ ತಗ್ಗೂ ಅಲ್ಲದಂಥಾ ಆಸನವನ್ನು ಸ್ಥಿರವಾಗಿ ಪ್ರತಿಷ್ಠಾಪಿಸಿ ಅದರಲ್ಲಿ ಕುಳಿತು, ನಿಗೃಹೀತವಾದ ಚಿತ್ತ ಮತ್ತು ಇಂದ್ರಿಯ ವ್ಯಾಪಾರವುಳ್ಳವನಾಗಿ ಏಕಾಗ್ರ ಮನಸ್ಕನಾಗಿ ಮನೋಗತವಾದ ಸಕಲ ದೋಷಗಳ ಪರಿಹಾರಾರ್ಥವಾಗಿ ಅಥವಾ ಸಕಲ ಸಂಸಾರದೋಷ ನಿವೃತ್ತ್ಯರ್ಥವಾಗಿ ಧ್ಯಾನಯೋಗವನ್ನು ಆರಂಭಿಸಬೇಕು. ದೇಹ, ಶಿರಸ್ಸು, ಕಂಠ ಇವುಗಳನ್ನು ರುಜುವಾಗಿ ಎಂದರೆ ಅಳ್ಳಾಡದಂತೆ ಸ್ಥಿರವಾಗಿ ನಿಲ್ಲಿಸಿ, ಸ್ವನಾಸಾಗ್ರವನ್ನು ನೋಡುತ್ತಾ, ನಾನಾ ದಿಕ್ಕುಗಳನ್ನು ತಿರುಗಿ ನೋಡದೆ, ಸ್ವತಃ ವಿಷಯಗಳಲ್ಲಿ ಪ್ರವೃತ್ತಿರಹಿತವಾದ ಮನಸ್ಸುಳ್ಳವನಾಗಿ, ನಿರ್ಭಯನಾಗಿ, ಬ್ರಹ್ಮಚಾರಿ ವ್ರತದಲ್ಲಿ ಸ್ಥಿತನಾಗಿ, ಮನಸ್ಸನ್ನು ವಿಷಯ ಧ್ಯಾನ ಮಾಡದಂತೆ ನಿಗ್ರಹಿಸಿ, ನನ್ನಲ್ಲಿಯೇ ಇಡಲ್ಪಟ್ಟ ಚಿತ್ತವುಳ್ಳವನಾಗಿ, ನಾನೇ ಸರ್ವೋತ್ತಮನೆಂದು ತಿಳಿದು, ಯುಕ್ತ ಆಸೀತ = ಸಮಾಧಿಸಂಪನ್ನನಾಗತಕ್ಕದ್ದು. ಈ ರೀತಿಯಾದ, ಸದಾ ಪರಮಾತ್ಮನಲ್ಲಿ ಮನಸ್ಸನ್ನು ಲಗ್ನವನ್ನಾಗಿ ಮಾಡುವ, ಜಿತಮನಸ್ಕನಾದ ಯೋಗಿಯು ಶರೀರೋತ್ಕ್ರಾಂತ್ಯನಂತರದಲ್ಲಿ ಪ್ರಾಪ್ತವಾಗುವ ನನ್ನಲ್ಲಿ (ಶ್ರೀ ಕೃಷ್ಣನಲ್ಲಿ) ಸ್ಥಿತಿರೂಪವಾದ ಮುಕ್ತಿಯನ್ನು ಹೊಂದುತ್ತಾನೆ.

ಧ್ಯಾನಯೋಗನಿಷ್ಠನಾದವನಿಗೆ ಕೆಲವು ಆಹಾರಾದಿ ನಿಯಮಗಳನ್ನು ಹೇಳಿ, ಯೋಗಸಂಪೂರ್ತಿ ಸ್ವರೂಪವನ್ನು ಶ್ರೀ ಕೃಷ್ಣನು ವರ್ಣಿಸುತ್ತಾನೆ :—

(5) **ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ ।**
**ನಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥**
**ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**

**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ||**
**ಯದಾ ವಿನಿಯತಂ ಚಿತ್ತಮಾತ್ಮನ್ಯೇವ ವಶಂ ನಯೇತ್ |**
**ನಿಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ||**
**ಯಥಾ ದೀಪೋ ನಿವಾತಸ್ಥೋ ನೇಂಪತೇ ಸೋಪಮಾ ಸ್ಮೃತಾ |**
**ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ||**
**ಯತ್ರೋಪರಮತೇ ಚಿತ್ತಂ ನಿಷಿದ್ಧಂ ಯೋಗಸೇವಯಾ |**
**ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ||**
—(6. 16-20.)

ಎಲೈ ಅರ್ಜುನನೇ ! ಜೀರ್ಣ ಶಕ್ತಿಯನ್ನು ಮೀರಿ ಅತ್ಯಾಹಾರವನ್ನು ಭಕ್ಷಣೆ ಮಾಡುವಂಥ, ತನ್ನ ಸಹನ ಸಾಮರ್ಥ್ಯವನ್ನು ಮೀರಿ ಸರ್ವಥಾ ಭೋಜನವೇ ಮಾಡದಂಥ, ಅತಿ ನಿದ್ರಾರತನಾದಂಥ ಮತ್ತು ತನ್ನ ಸಾಮರ್ಥ್ಯವನ್ನು ಮೀರಿ ನಿದ್ರೆಗೆಡುವಂಥ ಪುರುಷನಿಗೆ ಧ್ಯಾನಯೋಗವು ಲಭಿಸಲಾರದು. ಧ್ಯಾನೋಪಯೋಗಿ ಯಾಗುವಷ್ಟು ಆಹಾರ ವಿಹಾರಗಳುಳ್ಳಂಥ, ಕರ್ಮಗಳಲ್ಲಿ ಯೋಗವಿಘಾತವಾಗ ದಷ್ಟು ಇಂದ್ರಿಯ ವ್ಯಾಪಾರವನ್ನು ಮಾಡುವಂಥ, ಯೋಗೋಪಯೋಗವಾಗುವಷ್ಟು ಮಾತ್ರ ನಿದ್ರಾ ಜಾಗ್ರದವಸ್ಥಾದಿಗಳನ್ನು ಉಳ್ಳಂಥ ಪುರುಷನಿಗೆ ದುಃಖನಾಶಕರವಾದ ಧ್ಯಾನಯೋಗವು ಉಂಟಾಗುವುದು. ಯಾವಾಗ ಯೋಗಿಯು ವಿಷಯಗಳಿಂದ ಪ್ರತ್ಯಾಹೃತವಾದ ಸ್ವವಶವಾದ ತನ್ನ ಮನಸ್ಸನ್ನು ಸರ್ವ ವಿಷಯಾಪೇಕ್ಷಾರಹಿತನಾಗಿ ಪರಮಾತ್ಮನಲ್ಲಿಯೇ ಇಡುತ್ತಾನೆಯೋ ಆಗ ಆತನು ಯೋಗಸಂಪೂರ್ತಿಯುಳ್ಳವ ನೆಂದು ಹೇಳಿಸಿಕೊಳ್ಳಲ್ಪಡುತ್ತಾನೆ. ವಾಯುಶೂನ್ಯ ಪ್ರದೇಶದಲ್ಲಿರುವ ದೀಪವು ಹೇಗೆ ಚಲಿಸುವುದಿಲ್ಲವೋ ಹಾಗೆ ಇರುವ ಸ್ಥಿತಿಯು ಭಗವಂತನಲ್ಲಿ ಮನೋಯೋಗ ವನ್ನು ಆಚರಿಸುವ ಯತಚಿತ್ತನಾದ ( ಜಿತಮನಸ್ಕನಾದ ) ಯೋಗಿಗೆ ಉಪಮಾನವು ( ದೃಷ್ಟಾಂತವು ). ಇಂಥ ಸಮಾಧಿಯಲ್ಲಿ, ಧ್ಯಾನವೆಂಬ ಉಪಾಯದಿಂದ ಬಾಹ್ಯ ವ್ಯಾಪಾರಗಳಿಂದ ನಿರೋಧಿಸಲ್ಪಟ್ಟ ಮನಸ್ಸು ಉಪರಮತೇ = ಪರಮಾತ್ಮನ ಪಾದ ಮೂಲದಲ್ಲಿಯೇ ವಿಶೇಷವಾಗಿ ಕ್ರೀಡಿಸುತ್ತದೆ. ಮತ್ತು ಈ ಅವಸ್ಥೆಯಲ್ಲಿ ಧ್ಯಾನ ಶೀಲನು ಮನಸ್ಸಿನಿಂದ ಭಗವಂತನನ್ನು ನೋಡುವವನಾಗಿ ಸ್ವದೇಹದಲ್ಲಿಯೇ ಸಂತೋಷವನ್ನು ಹೊಂದುತ್ತಾನೆ. ಧ್ಯಾನಾರ್ಥವಾಗಿ ಮನಸ್ಸು ನಿಶ್ಚಲವಾಗದಿದ್ದರೆ ಯೋಗಿಯು ಅವಶ್ಯ ಆಚರಿಸಬೇಕಾದ ಪ್ರತ್ಯಾಹಾರ ಕ್ರಮವನ್ನು ಶ್ರೀ ಕೃಷ್ಣನು ನಿರೂಪಿಸುತ್ತಾನೆ :—

(5) **ಸಂಕಲ್ಪಪ್ರಭಾವಾನ್ ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ |**
**ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ||**
**ಶನೈಃಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ |**
**ಆತ್ಮಸಂಸ್ಥಂ ಮನಃಕೃತ್ವಾ ನ ಕಿಂಚಿದಪಿ ಚಿಂತಯೇತ್ ||**

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಂ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥**
—(6. 24–26.)

**ಅರ್ಥವು :—** ಈ ಫಲದ ಉದ್ದಿಶ್ಯ ಈ ಕರ್ಮವನ್ನು ಮಾಡುತ್ತೇನೆಂದು ಸಂಕಲ್ಪಪೂರ್ವಕವಾದ ಆಚರಣೆಗಳಿಂದ ಜನಿತವಾದ ಸಕಲ ವಿಷಯಭೋಗಗಳನ್ನೂ ಸಂಪೂರ್ಣವಾಗಿ ಪರಿತ್ಯಾಗ ಮಾಡಿ, ಮನಸ್ಸಿನಿಂದ ಸಕಲ ಇಂದ್ರಿಯ ಸಮೂಹ ವನ್ನೂ ವಿಷಯಗಳ ದೆಸೆಯಿಂದ ನಿಯಮಿಸಿ, ಧೈರ್ಯೋಪೇತವಾದ ಧಾರಣೆಯಿಂದ ಸಹಿತವಾದ ವಶೀಕೃತವಾದ ಬುದ್ಧಿಯಿಂದ ಮೆಲ್ಲ ಮೆಲ್ಲಗೆ, ಮನಸ್ಸು ವಿಷಯಗಳನ್ನು ಕುರಿತು ಪ್ರವರ್ತಿಸದಂತೆ ಮಾಡಬೇಕು. ಮನಸ್ಸನ್ನು ಭಗವನ್ನಿಷ್ಠವನ್ನಾಗಿ ಮಾಡಿ ಭಗವದನ್ಯವಾದ ಯಾವ ವಿಷಯವನ್ನೂ ಚಿಂತಿಸಬಾರದು. ಚಂಚಲವೂ ಮತ್ತು ಅಸ್ಥಿರವೂ ಆದ ಮನಸ್ಸು ಯಾವ ಯಾವ ವಿಷಯಗಳನ್ನು ಕುರಿತು ಪ್ರವರ್ತಿಸುತ್ತ ದೆಯೋ ಆಯಾ ವಿಷಯಗಳಿಂದ ಅದನ್ನು ಹಿಂತಿರುಗಿಸಿ ಪರಮಾತ್ಮನಲ್ಲಿಯೇ ಅಧೀನ ವಾಗಿ ಇಡಬೇಕು.

ಪ್ರತ್ಯಾಹಾರಾದಿ ಸಾಧನರಹಿತರಾದವರು ತಮ್ಮ ಮನನಭಕ್ತಿಗಳು ಪರಿಪಕ್ವ ವಾದ ಅನಂತರ ಧ್ಯಾನದಲ್ಲಿ ಶಕ್ತರಾಗಿ, ಸ್ವತಏವ ವಿಷಯಗಳಲ್ಲಿ ಪ್ರವೃತ್ತಿರಹಿತ ವಾದ ಮನಸ್ಸನ್ನು ಸಂಸ್ಕಾರೋಪಾದಾನಕವಾದ ಭಗದ್ವಿಗ್ರಹದಲ್ಲಿಟ್ಟು ಪರಮಾತ್ಮನ ಗುಣಗಣಗಳನ್ನು ನಿರಂತರ ಧ್ಯಾನ ಮಾಡಿ, ಹಾಗಾಗದಿದ್ದರೆ ನಿರಂತರ ಶಾಸ್ತ್ರ ವಿಮರ್ಶೆ ಮಾಡುತ್ತಲೇ ಅಪರೋಕ್ಷವನ್ನು ಹೊಂದುವರೆಂದು ತಿಳಿಯಬೇಕು.*

3. ಶ್ರೀ ಶ್ರೀಗಳವರು— ಇಲ್ಲಿ ಒಂದೆರಡು ಸೂಕ್ಷ್ಮ ವಿಷಯಗಳನ್ನು ನಿರೂ ಪಿಸಿ ಧ್ಯಾನಕರಣವಾದ ಮನನ ಸ್ವರೂಪವನ್ನು ಹೇಳುವೆವು. ಶ್ರವಣ, ಮನನ,

---

* ಕೇವಲ ಮನದಿಂದ ಎಂದರೆ ಸತತ ಶಾಸ್ತ್ರವಿಮರ್ಶೆಯಿಂದ ಅಪರೋಕ್ಷ ಜ್ಞಾನವನ್ನು ಹೊಂದುವವರಿಗೂ ಪ್ರತ್ಯಾಹಾರಾದಿ ಉಪಾಯ ಸಹಕೃತ ಧ್ಯಾನದಿಂದ ಅಪರೋಕ್ಷ ಜ್ಞಾನವನ್ನು ಹೊಂದುವವರಿಗೂ ಉತ್ಕ್ರಾಂತಿ ವಿಷಯದಲ್ಲಿಯೂ ಕೂಡ ಸ್ವಲ್ಪ ತಾರತಮ್ಯವುಂಟು. "..... ..... **ಯೋಗ ಬಲೇನ ಚೈವ । ..... .....ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್ ॥" ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗ ಧಾರಣಾಂ ।"** ಇತ್ಯಾದಿ ರೀತಿಯಲ್ಲಿ ಅಷ್ಟಮಾಧ್ಯಾಯದಲ್ಲಿ ನಿರೂಪಿತವಾದ ಉತ್ಕ್ರಾಂತಿ ಪ್ರಕಾರವು ಧ್ಯಾನಯೋಗರೀತ್ಯಾ ಅಪರೋಕ್ಷ ಜ್ಞಾನವನ್ನು ಹೊಂದಿದವರಿಗೇ ಎಂದು ಶಾಸ್ತ್ರದಲ್ಲಿ ನಿಶ್ಚಿತವಾಗಿರುವುದು. ಇವರು ತಮ್ಮ ವಾಯುಜಯ ಪ್ರಭಾವದಿಂದ ತಮ್ಮ ಯೋಗ್ಯತಾ ಪೂರ್ಣ ವಾಗುವಷ್ಟು ಭಕ್ತಿಪರಿಪಾಕವು ಆಗುವುದಕ್ಕೆ ಸ್ವಲ್ಪ ಮುಂಚೆಯೇ ಉತ್ಕ್ರಾಂತಿಯನ್ನು ಹೊಂದಿ ಮಹರಾದಿ ಲೋಕಗಳಲ್ಲಿ ಪೂರ್ಣ ಸಾಧನ ಸಂಪನ್ನರಾಗಿ ವೈಕುಂಠಲೋಕಕ್ಕೆ ತೆರಳುವರು. ಇತರರು ಸ್ವಯೋಗ್ಯ ಭಕ್ತ್ಯಾದಿ ಸಾಧನ ಪೂರ್ತಿಯಾದ ನಂತರವೇ ಉತ್ಕ್ರಾಂತಿಯನ್ನು ಹೊಂದುವರು.

ಧ್ಯಾನಾದಿ ರೂಪವಾದ ಉಕ್ತ ಪ್ರಣಾಲಿಯನ್ನು, (ಮಾರ್ಗವನ್ನು) ಅತಿಕ್ರಮಿಸಿ ಪರಮಾತ್ಮನನ್ನು ಹೊಂದುವ ಕ್ಷುದ್ರ ಉಪಾಯಗಳು ಯಾವುದೂ ಇರುವುದಿಲ್ಲ. ಹೀಗಿದ್ದರೂ ರಾಮಾನುಜರು ಕೇವಲ ಪ್ರಪತ್ತಿ ಎಂದರೆ ಮೂಢ ಭಕ್ತಿಪೂರ್ವಕವಾದ ಶರಣಾಗತಿ ಮಾತ್ರದಿಂದಲೂ ಮುಕ್ತಿಯು ಕರಗತವಾಗುವುದೆಂದು ಹೇಳುವರು. ಅನನ್ಯವಾದ ಭಕ್ತಿಯಿಂದ ಪ್ರಪನ್ನನಾದ ದೀನನ ಮೇಲೆ ಕೃಪಾಸಿಂಧುವಾದ ಕಮಲಾನಾಥನು ಕಾರುಣ್ಯವನ್ನು ತೋರಿಸಿ, ಶರಣಾಗತನಾದ ತನ್ನ ಮೂಢ ಭಕ್ತನನ್ನೂ ಸಹ ಶ್ರವಣಾದಿ ರೂಪವಾದ ಭಯಂಕರವಾದ ಕಡಿದಾದ ದಾರಿಯಲ್ಲಿ ಕರೆದುಕೊಂಡು ಬಂದು ಕಷ್ಟಪಡಿಸದೆ, ತನ್ನ ಬಲವಾದ ಹಸ್ತಲಾಘವವನ್ನು ಕೊಟ್ಟು, ಥಟ್ಟನೆ ಸಂಸಾರಾಟವಿಯಿಂದ ತನ್ನ ಮುಕ್ತ ರಾಜಧಾನಿಗೆ ಸೆಳೆದುಕೊಂಡು ಬಿಡುವನು ಎಂದು ಹೇಳುವರು. "ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಎಂಬ ಗೀತಾಶ್ಲೋಕವೂ ಆಪಾತತಃ ಈ ವಾಕ್ಯಾರ್ಥಕ್ಕೆ ಸಹಾಯಕವಾಗಿರುವಂತೆ ತೋರುವುದು.

ಆದರೆ ಇದು ಸರ್ವ ಪ್ರಮಾಣಗಳಿಗೂ ಅತ್ಯಂತ ವಿರುದ್ಧವಾದ ನೀಚವಾದವು. ಮತ್ತು ಸ್ವರೂಪತಃ ಸರ್ವ ಜೀವರೂ ಸಮರು ಎಂದು ಒಪ್ಪಿರುವ ರಾಮಾನುಜ ಮತದಲ್ಲಿ ಇದರ ಪ್ರವೇಶವು ಅತ್ಯಂತ ಅಸಂಗತವು. 1. ಜ್ಞಾನಾದಿ ಕಠಿಣ ಪ್ರಯತ್ನರಹಿತವಾದ ಶರಣಾಗತಿ ಮಾತ್ರದಿಂದ ಮುಕ್ತಿ ಸ್ಥಾನವು ಪ್ರಾಪ್ತವಾಗುವುದಾದರೆ, ಇನ್ನು ಮೇಲೆ ಸಕಲ ಮುಮುಕ್ಷುಗಳೂ ಶ್ರವಣ ಮನನಾದಿಗಳನ್ನು ಪರಿತ್ಯಾಗ ಮಾಡಿ, ದಂಡ ಪ್ರಣಾಮಪೂರ್ವಕವಾದ ಕೈಂಕರ್ಯವನ್ನು ಮಾತ್ರ ಅವಲಂಬಿಸಿ ಮುಕ್ತಿಯನ್ನು ಹೊಂದಲು ಯತ್ನಿಸಬೇಕು. ಲಘೂಪಾಯವಾದ ಪ್ರಪತ್ತಿ ಮಾತ್ರದಿಂದ ಮೋಕ್ಷವಾಗುವುದಾದರೆ ಗುರುತಮವಾದ, ದೀರ್ಘವಾದ ಮತ್ತು ಕಠಿಣವಾದ ಮನನಾದಿಗಳನ್ನೂ, ತಪಶ್ಚರ್ಯೆಗಳನ್ನೂ ಅನುಷ್ಠಾನ ಮಾಡುವುದು ಅವಿವೇಕವೆಂದೇ ಪ್ರಾಪ್ತವಾಗುವುದು. 2. ಕಿಂಚ ವಿಭಿನ್ನ ಸಾಧನಗಳಿಂದ ವಿಷಮ ಫಲವಾದರೂ, ಪ್ರಮಾಣಪ್ರಮಿತವಾಗಿದ್ದರೆ ಕೇವಲ ಪ್ರಪನ್ನರು ಅಲ್ಪ ಮುಕ್ತಿ ಭಾಗಿಗಳು, ಶ್ರವಣಾದಿಗಳಿಂದ ಸಂಸ್ಕೃತರಾದ ದೀರ್ಘ ತಪಸ್ವಿಗಳು ಉತ್ತಮ ಫಲ ಭಾಗಿಗಳು ಎಂದು ಮನಸ್ಸಮಾಧಾನವನ್ನು ಹೊಂದಬಹುದಾಗಿತ್ತು. ರಾಮಾನುಜ ಮತದಲ್ಲಿ ಮುಕ್ತಿಯಲ್ಲೂ ಎಲ್ಲರೂ ಸಮಾನವಾದ ಆನಂದಭೋಗವುಳ್ಳವರೆಂದು ಸಿದ್ಧಾಂತವು. ಹೀಗಿರುವುದರಿಂದ ಪ್ರಪನ್ನನಿಗೆ ಪ್ರಾಪ್ತವಾಗುವುದಕ್ಕೆ ಸಮವಾದ ಆನಂದಾದಿ ಫಲಕ್ಕಾಗಿ ಆತನಿಗಿಂತ ಹೆಚ್ಚು ಪ್ರಯತ್ನವನ್ನು ಮಾಡುವ ಜ್ಞಾನಯೋಗಿಯು ಮೂಢನೆಂದು ನಿಸ್ಸಂಶಯವಾಗಿ ಸಿದ್ಧವಾಗುವುದು. 3. ಕಿಂಚ ಈ ರೀತಿಯಾದ ರಾದ್ಧಾಂತವು ಪರಮಾತ್ಮನಲ್ಲಿ ಪ್ರಬಲವಾದ ವೈಷಮ್ಯನೈರ್ಘೃಣ್ಯರೂಪ ದೋಷವನ್ನು ಆರೋಪಿಸಿ ದೈವದ್ರೋಹಕ್ಕೂ ಭಾಗಿಯಾಗುವುದು. ಬಹು ದೀರ್ಘ ಕಾಲ ಉಗ್ರವಾದ ತಪಶ್ಚರ್ಯೆಯಲ್ಲಿ ರತರಾಗಿ ಸರ್ವ ಪ್ರಕಾರದಿಂದ ಪರಮಾತ್ಮನ ಮಹಿಮಾ ಚಿಂತನಪೂರ್ವಕವಾಗಿ ಶರಣಾಗತರಾದವರಿಗೂ ಪ್ರಯತ್ನರಹಿತರಾದ

ಪ್ರಪನ್ನರಿಗೂ ಸಮಾನದರ್ಶನ ಮತ್ತು ಮುಕ್ತಿಯಲ್ಲಿ ಸಮಾನ ಭೋಗವನ್ನು ಪರಮಾತ್ಮನು ಕೊಡುವನೆಂದು ಹೇಳುವುದು ವಿಷ್ಣುವಿನಲ್ಲಿ ಪ್ರಬಲವಾದ ದೋಷಾರೋಪಣೆಯಾಗಿ ಪರ್ಯವಸಾನವಾಗುವುದು. **4.** ಪರಂತು ಇದು ಅಸಂಭಾವಿತವೇ. ಸರ್ವಪ್ರಕಾರದಿಂದಲೂ ಪರಮಾತ್ಮನನ್ನು ನಂಬಿ, ನಿವೃತ್ತವಾದ ಅಭಿಮಾನವುಳ್ಳ, ಅಹಂಕಾರ ಮಮತೆಗಳಿಂದ ರಹಿತನಾದ ದಾಸನನ್ನಷ್ಟೇ ಪರಮಾತ್ಮನು ಓಡಿ ಬಂದು ಕರಾವಲಂಬನವನ್ನು ನೀಡಿ ಕಾಪಾಡುವನು ! ಇದು ನಮಗೂ ಸಮ್ಮತವೇ. ಆದರೆ ಅಜ್ಞಾನಿಯಾದ ಮೂಢನಿಗೆ ಅಥವಾ ತನ್ನ ಯೋಗ್ಯತಾನುಸಾರ ಪೂರ್ಣವಾಗಿ ಶ್ರವಣ ಮನನಗಳನ್ನು ಮಾಡದ ಸಾಮಾನ್ಯ ಪುರುಷನಿಗೆ ಇಂಥ ಅಂತಃಕರಣ ಪರಿಪಾಕವು ಉಂಟಾಗುವುದೇ ಇಲ್ಲ. ಆದುದರಿಂದಲೇ ಶ್ರೀ ಕೃಷ್ಣನು—

**(1) ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ ।**
—(7. 19.)

ಎಂದರೆ ಅನೇಕ ಜನ್ಮಗಳಲ್ಲಿ ಸಾಧನಾನುಷ್ಠಾನವಾದ ಅನಂತರ ಅಪರೋಕ್ಷ ಜ್ಞಾನವನ್ನು ಹೊಂದಿದವನು ನನ್ನಲ್ಲಿ ಪ್ರಪನ್ನನಾಗುತ್ತಾನೆ ( ನನ್ನನ್ನು ಹೊಂದುತ್ತಾನೆ) ಎಂದು ಹೇಳಿದನು. ಮತ್ತೊಂದು ಸ್ಥಳದಲ್ಲಿಯೂ ಸಹ

**(2) ಅನೇಕ ಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಂ ॥**
—(6. 45.)

ಎಂದರೆ ಅನೇಕ ಜನ್ಮಗಳ ಸಾಧನದಿಂದ ಜ್ಞಾನಸಿದ್ಧಿಯನ್ನು ಹೊಂದಿದವನು ಅನಂತರದಲ್ಲಿ ಉತ್ತಮ ಗತಿಯನ್ನು ( ಮೋಕ್ಷವನ್ನು ) ಹೊಂದುತ್ತಾನೆ ಎಂದು ಹೇಳಿರುತ್ತಾನೆ. ಏವಂಚ ಭಗವದ್ದರ್ಶನದಿಂದ ನಷ್ಟವಾದ ಮನೋಮಾಲಿನ್ಯವುಳ್ಳವನಿಗೇ ಕಾಪಟ್ಯರಹಿತವಾದ ಕೈಂಕರ್ಯಭಾವವು ಪ್ರಾಪ್ತವಾಗುವುದು. ಅಂಥ ಪ್ರಪನ್ನನನ್ನು ಭಗವಂತನು ಗಜೇಂದ್ರನನ್ನು ರಕ್ಷಿಸಿದಂತೆ ರಕ್ಷಿಸುವನೆಂದು ಹೇಳುವುದು ಯುಕ್ತ್ಯನುಕೂಲವಾಗಿಯೂ, ಶಾಸ್ತ್ರಸಮ್ಮತವಾಗಿಯೂ ಇರುವುದು. "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಎಂಬ ಶ್ಲೋಕ ಭಾಗವು ಈ ಅರ್ಥವನ್ನೇ ರಕ್ಷಣೆ ಮಾಡುವುದು. **ಪ್ರಯತಾತ್ಮನಾದ** ಭಕ್ತನ ಪುಷ್ಪಪತ್ರಗಳನ್ನು ನಾನು ಸ್ವೀಕರಿಸುವೆನೆಂದು ಶ್ರೀ ಕೃಷ್ಣನು ಪ್ರತಿಜ್ಞೆ ಮಾಡಿರುವನು. ಸರ್ವಧರ್ಮಗಳನ್ನು ಪರಿತ್ಯಾಗ ಮಾಡಿದ ಭ್ರಷ್ಟನನ್ನು ಶರಣು ಹೊಂದಿದ ಕ್ಷಣವೇ ಆಲಿಂಗಿಸಿಕೊಂಡು ವೈಕುಂಠ ಮಂದಿರದಲ್ಲಿಟ್ಟು ನಿರಂತರಾನಂದವನ್ನು ಹೊಂದಿಸುವೆನೆಂದು ಎಲ್ಲೂ ಹೇಳಿರುವುದಿಲ್ಲ. ಧರ್ಮಪಾಲಕನೆಂದು ಪರಮಾತ್ಮನು ಪ್ರಸಿದ್ಧನಾಗಿರುವನು; ಭ್ರಷ್ಟಪಾಲಕನೆಂದು ಅವನನ್ನು ಕರೆಯುವುದಕ್ಕೆ ಯಾರಿಗೆ ತಾನೆ ಬಾಯಿ ಬರುವುದು ? ಆದುದರಿಂದ ಈ ಶ್ಲೋಕಾರ್ಥವನ್ನು ಪ್ರಾಮಾಣಿಕವಾದ ರೀತಿಯಲ್ಲಿ ಯೋಜನೆ ಮಾಡಿದರೆ ಈ ಅರ್ಥವು ಬರುವುದು. (i) ಸರ್ವ ಅವೈಷ್ಣವಧರ್ಮಗಳನ್ನೂ ಪರಿತ್ಯಾಗ ಮಾಡಿ ನನ್ನಲ್ಲಿ ನಿಷ್ಕಾಮನಾಗಿ ಶರಣು ಹೊಂದು

ಎಂದರೆ ಕೇವಲ ನನ್ನ ಪ್ರೀತ್ಯರ್ಥವಾಗಿಯೇ ಸಕಲ ಕರ್ಮಗಳನ್ನೂ ಮಾಡು. **" ಸರ್ವಾರಂಭ ಪರಿತ್ಯಾಗೀ ", " ಯತ್ಕರೋಷಿ ಯದಶ್ನಾಸಿ........ತತ್ಕುರುಷ್ವ ಮದರ್ಪಣಂ "** ಇತ್ಯಾದಿ ಶ್ಲೋಕಗಳು ಈ ಅರ್ಥ ಮಾಡುವುದರಲ್ಲಿ ಸಹಾಯಕವಾಗಿರುತ್ತವೆ. (ii) ಅಥವಾ ಕಾಮ್ಯವಾದ ಸ್ವರ್ಗಪ್ರಾಪಕವಾದ ಸರ್ವ ಕ್ಷುದ್ರ ಧರ್ಮಗಳನ್ನು ಪರಿತ್ಯಾಗ ಮಾಡಿ ನಿಷ್ಕಾಮ ಹೃದಯದಿಂದ ನನ್ನನ್ನು ಶರಣು ಹೊಂದು. ಈ ಅರ್ಥ ಮಾಡುವುದರಲ್ಲಿ **" ಶುಭಾಶುಭ ಪರಿತ್ಯಾಗೀ "** ಇತ್ಯಾದಿ ಶ್ಲೋಕಗಳು ಸಹಾಯಕವಾಗಿರುತ್ತವೆ. (iii) ಅಥವಾ ಸರ್ವ ಧರ್ಮಗಳನ್ನೂ ನನ್ನ ಪಾದಮೂಲದಲ್ಲಿ ಸಮರ್ಪಿಸಿ, ಅವುಗಳ ಫಲವನ್ನು ಮನಸ್ಸಿನಿಂದ ಪರಿತ್ಯಾಗ ಮಾಡಿ ನನ್ನನ್ನು ಶರಣು ಹೊಂದು. **" ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ "** ಎಂದರೆ ನಿನ್ನ ಸರ್ವ ಪುಣ್ಯಗಳನ್ನೂ, ಸೇವೆಗಳನ್ನೂ ಸ್ವೀಕರಿಸಿದ ನಾನು ನಿನ್ನನ್ನು ಪಾಪಗಳಿಂದ ಬಿಡಿಸಿ ಬಿಡುತ್ತೇನೆ. **" ಸರ್ವ ಕರ್ಮಾಣಿ ಮನಸಾ ಸಂನ್ಯಸ್ಯ "** ಇತ್ಯಾದಿ ಶ್ಲೋಕಗಳು ಈ ಅರ್ಥವನ್ನು ಮಾಡುವುದರಲ್ಲಿ ಸಹಾಯಕರವಾಗಿರುತ್ತವೆ. ಈ ರೀತಿಯಾದ ಶರಣಾಗತಿಯು ಶ್ರವಣಾದಿ ಸಂಸ್ಕೃತಿರಹಿತವಾದ ಮನಸ್ಸುಳ್ಳ ಅಜ್ಞಾನಿಯಿಂದ ಸಾಧ್ಯವಲ್ಲ. 6. ಮತ್ತು ಧ್ಯಾನ ಜ್ಞಾನಾದಿಗಳಿಲ್ಲದೆ ಕೇವಲ ಪ್ರಪತ್ತಿಯಿಂದ ಮೋಕ್ಷವನ್ನು ಇದುವರೆವಿಗೆ ಯಾರೂ ಹೊಂದಿಲ್ಲ. ಗಜೇಂದ್ರಾದಿಗಳು **" ಪ್ರಾಗ್ಜನ್ಮನ್ಯನುಶಿಕ್ಷಿತಃ "** ಇತ್ಯಾದಿ ವಚನಾನುಸಾರವಾಗಿಯೂ **" ತತ್ರತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಂ "** ಇತ್ಯಾದಿ ಗೀತಾವಚನಾನುಸಾರವಾಗಿಯೂ, ಜನ್ಮಾಂತರದಲ್ಲಿ ಅಭ್ಯಸ್ತವಾದ ಜ್ಞಾನದ ಸ್ಮೃತಿಯನ್ನು ಪಡೆದವರಾಗಿ ಪರಮಾತ್ಮನನ್ನು ಸ್ತುತಿಸಿ ಜ್ಞಾನದ್ವಾರಾ ಮುಕ್ತಿಯನ್ನು ಹೊಂದಿದವರೇ ಹೊರತು ಮೂಢ ಭಕ್ತಿಯಿಂದ ಕೈಮುಗಿದು ಕೈವಲ್ಯವನ್ನು ಒಟ್ಟಿಗೆ ಸಂಪಾದಿಸಲಿಲ್ಲ. 7. ಇದೂ ಅಲ್ಲದೆ ಈ ಮತವು **" ನಾನ್ಯಃ ಪಂಥಾ ಅಯನಾಯ ವಿದ್ಯತೇ " " ಜ್ಞಾನೇನಾಮೃತೀ ಭವತಿ "** ಇತ್ಯಾದಿ ಶ್ರುತಿವಿರೋಧದಿಂದಲೂ ಅನೇಕ ಗೀತಾವಚನವಿರೋಧದಿಂದಲೂ ನಷ್ಟ ವೀರ್ಯವಾಗಿ ಮೃತಪ್ರಾಯವಾಗಿರುವುದು. ಶ್ರೀ ಕೃಷ್ಣನು ಹೇಳುತ್ತಾನೆ :—

(3) **ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥**

—(4. 39.)

ಶ್ರದ್ಧಾವಂತನು ಅಪರೋಕ್ಷ ಜ್ಞಾನವನ್ನು ಹೊಂದಿ ಶೀಘ್ರದಲ್ಲಿ ಮೋಕ್ಷವನ್ನು ಹೊಂದುತ್ತಾನೆ.

(4) **ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥**

—(4. 36.)

ನೀನು ಸರ್ವ ಪಾಪಗಳನ್ನೂ ಜ್ಞಾನರೂಪವಾದ ನಾವೆಯಿಂದಲೇ ದಾಟುತ್ತೀಯೆ. ( ಮೌಢ್ಯಮೂಲಕವಾದ ಪ್ರಪತ್ತಿಯಿಂದ ದಾಟಲಾಗುವುದಿಲ್ಲ ಎಂದು ಏವ ಶಬ್ದಾರ್ಥವು. )

(5) ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ॥
—(4. 38.)

ಜ್ಞಾನಕ್ಕೆ ಸದೃಶವಾದ ಪಾಪನಾಶಕ ಸಾಮಗ್ರಿಯು ಇರುವುದಿಲ್ಲ. ( ಮೂಢ ಪ್ರಪತ್ತಿಯು ಜ್ಞಾನಕ್ಕೆ ಸದೃಶವಲ್ಲವೆಂದು ಭಾವವು. )

8. ಪರಂತು ಉಗ್ರವಾದ ಮನನಾದಿಗಳನ್ನು ಮಾಡದಿದ್ದರೆ ಜೀವನ ಅಜ್ಞಾನ ವಿಪರ್ಯಯಗಳು ನಾಶವಾಗುವುದಕ್ಕೆ ಉಪಾಯವೇ ಇರುವುದಿಲ್ಲ. " ಸಂಶಯಾತ್ಮಾ ವಿನಶ್ಯತಿ " ಎಂಬ ಶ್ರೀ ಕೃಷ್ಣನ ವಚನದ ರೀತ್ಯಾ ಮೂಢನು ಸಂಶಯಗ್ರಸ್ತನಾಗಿ ಕ್ಷಿಪ್ರದಲ್ಲಿ ದುಃಖವನ್ನು ಹೊಂದುವನು. ಅಥವಾ ಪರಮಾತ್ಮನಲ್ಲಿ ಶರಣಾಗತನಾದರೆ ಪರಮಾತ್ಮನು ಉತ್ತಮ ಗುರುಗಳನ್ನು ಸಂಯೋಗ ಮಾಡಿ ಜ್ಞಾನ ಪ್ರಾಪ್ತಿಯಲ್ಲಿ ಅನುಕೂಲನಾಗುವನು. ಅಷ್ಟೇ ಹೊರತು ನಿಮಿಷ ಮಾತ್ರದಲ್ಲಿ ಜ್ಞಾನಪ್ರಾಪ್ತಿಯನ್ನಾಗಲೀ, ಕೇವಲ ಮನನ ಸಾಧ್ಯವಾದ ಶರಣಾಗತಿಗೂ ಪ್ರಯೋಜಕವಾದ ವಿಷ್ಣು ಸರ್ವೋತ್ತಮತ್ವ ನಿಶ್ಚಯವನ್ನಾಗಲೀ ಜ್ಞಾನಸಾಧನರಹಿತನಾದ ಮೂಢನು ಹೊಂದುವನೆಂದು ಹೇಳುವುದು ಶ್ರುತಿ ತಾತ್ಪರ್ಯಾ ಪರಿಜ್ಞಾನದಿಂದ ಜನಿತವಾದ ಬಹು ಮೌಢ್ಯ ವಿಜೃಂಭಿತವಾದ ವಾದವಾಗುವುದು. ಮತ್ತು ಕೃತಪ್ರಣಾಶ ಅಕೃತಾಭ್ಯಾಗಮಾದಿ ಬಹು ದೋಷಗಳಿಗೂ ಆಕರವಾಗುವುದು. 9. ಮತ್ತು ಸಾಧನವೈಚಿತ್ರ್ಯವನ್ನು ನಿರೂಪಿಸುವ ಅವಸರದಲ್ಲಿ ಧ್ಯಾನಪ್ರಚುರವಾದ ಸಾಧನ ಸಂಪನ್ನರು ಕೆಲವರು; ಕೆಲವರು ಸ್ವಪ್ರತಿಭೆಯಿಂದಲೇ ಪ್ರಾಪ್ತಜ್ಞಾನರಾದ ಮಹಾ ಯೋಗಿಗಳು; ಕರ್ಮಯೋಗಿಗಳು ಕೆಲವರು; ಹೀಗೆ ನಾನಾ ವೈಚಿತ್ರ್ಯಗಳನ್ನು ಶ್ರೀ ಕೃಷ್ಣನು ಹೇಳಿದ್ದರೂ ಕೇವಲ ಪ್ರಪತ್ತಿಮಾತ್ರದಿಂದ ಪರಮಪದ ಪ್ರಾಪ್ತಿಯು ಬರುವುದೆಂದು ನರನಾಥನಾದ ಶ್ರೀಪತಿಯು ಹೇಳಲಿಲ್ಲ. ಆದುದರಿಂದ ಸರ್ವ ಮುಮುಕ್ಷುಗಳೂ ತಮ್ಮ ಯಥಾಯೋಗ್ಯತಾನುಸಾರವಾಗಿ ಶ್ರವಣ ಮನನಾದಿ ರೂಪವಾದ ಸಾಧನಾನುಷ್ಠಾನಗಳನ್ನು ವಿಧ್ಯುಕ್ತ ಪದ್ಧತಿಯಲ್ಲಿ ಆಚರಿಸಿ ಮೋಕ್ಷ ಪದವಿಯನ್ನು ಹೊಂದಬೇಕೇ ಹೊರತು, ಆಲಸ್ಯಕ್ಕೆ ವಶರಾಗಿ ಅಪ್ರಾಮಾಣಿಕವಾದ " ದೃಪ್ತಪ್ರಪತ್ತಿ " ಅಥವಾ " ಆರ್ತಪ್ರಪತ್ತಿ " ಯೇ ಮುಂತಾದ ಕ್ಷುದ್ರೋಪಾಯಗಳಲ್ಲಿ ಭರವಸೆಯನ್ನಿಡಬಾರದು.

4. ಇದೇ ಸಂದರ್ಭದಲ್ಲಿ ದ್ವೇಷಯುತವಾದ ಭಗವದ್ಧ್ಯಾನದಿಂದ ಸಹ ಮುಕ್ತರಾಗಬಹುದೆಂಬ ರಾವತನುಜವಾದದ ದುರಂತ ದೋಷಗಳನ್ನು ಅವಶ್ಯವಾಗಿ ತೋರಿಸಬೇಕಾಗಿರುವುದು. ಬಹ್ವಾಯಾಸಪೂರ್ವಕವಾದ ತೀರ್ಥ ಯಾತ್ರೆಯನ್ನು ಕೈಗೊಂಡು ಪಾದದಿಂದಲೇ ಭೂಮಿಯನ್ನು ನಡೆದು, ತೀರ್ಥವನ್ನು ಸೇರಿದ ನಂತರ ಪಿಶಾಚ ಬುದ್ಧಿಯಿಂದ ಗ್ರಸ್ತನಾಗಿ ತೀರ್ಥ ನಿಂದೆಯನ್ನು ಮಾಡಿ ಸಕಲ ಪುಣ್ಯಗಳನ್ನು ನಾಶ ಮಾಡಿಕೊಂಡು ಪಾಪ ಫಲಕ್ಕೆ ಭಾಗಿಯಾಗುವ ಮಂದನಂತೆ, ರಾಮಾನುಜರು ಸಕಲ ಶಾಸ್ತ್ರಗಳನ್ನೂ ಹೆಜ್ಜೆ ಹೆಜ್ಜೆಗೂ ಪರವಾದಿಗಳ ಸಂಗಡ

ವಾಕ್ಯಾರ್ಥ ಮಾಡಿ ಜಯಿಸಿ, ಅಂತ್ಯದಲ್ಲಿ ಆತ್ಮಘಾತಕವಾದ ಕೆಲವು ದೋಷಗಳನ್ನು ಒಪ್ಪಿ, ತಮ್ಮ ಯಾವತ್ತು ಸಿದ್ಧಾಂತವನ್ನು ಖಂಡನಕಾರರ ಬಾಯಿಗೆ ತುತ್ತು ಮಾಡಿಟ್ಟಿರುವರು. ಜ್ಞಾನದಿಂದಲೇ ಮುಕ್ತಿಯಾಗುವುದೆಂದು ಒಪ್ಪಿ ಪ್ರಪತ್ತಿವಾದ ವನ್ನು ಉಪಪಾದನೆ ಮಾಡಿದರು. ಈಶ್ವರನು ಗುಣಗಣಾರ್ಣವನೆಂದು ಹೇಳಿ ನಿಶ್ಶಂಕವಾಗಿ ಅವನು ಭಿನ್ನವಾದ ಧರ್ಮಭೂತ ಜ್ಞಾನದಿಂದಲೇ ವಿಷಯಗಳನ್ನು ತಿಳಿಯುವನೆಂದು ಹೇಳಿದರು. ಪರಮಾತ್ಮನು ಸರ್ವೋತ್ತಮನೆಂದು ಹೇಳಿ ಸರ್ವ ಜೀವರೂ ಸ್ವರೂಪತಃ ಪರಸ್ಪರ ಸಮರೆಂದೂ, ಈಶ್ವರನಿಗೆ ಸಮಾನವಾದ ಆನಂದ ವನ್ನು ಮುಕ್ತಿಯಲ್ಲಿ ಅನುಭವಿಸುವರೆಂದೂ ಪ್ರತಿಪಾದಿಸಿದರು. ಶಾಶ್ವತ ಕೈಂಕರ್ಯ ಭಾವವು ಶಾಸ್ತ್ರಪ್ರಮಿತ ಧರ್ಮವೆಂದು ಪ್ರತಿಪಾದಿಸಿ ದಾಸ್ಯಾಭಾವವು ಔಪಾಧಿಕ ವೆಂದು ಒಪ್ಪಿದರು. ಸರ್ವರೂ ಸಮರೆಂದು ಹೇಳಿ ಕೆಲವರು ನಿತ್ಯ ಸಂಸಾರಿಗಳೆಂದು ಪ್ರತಿಪಾದಿಸಿದರು. ಪ್ರಕೃತದಲ್ಲಿಯೂ ಸಹ ನಿಯತ ಸಾಧನಗಳಿಂದಲೇ ಮುಕ್ತಿ ಯಾಗುವುದೆಂದು ಒಪ್ಪಿ ನಿರಂತರ ದ್ವೇಷದಿಂದಲೂ ಮುಕ್ತಿಯಾಗುವುದೆಂದು ಪ್ರತಿ ಪಾದಿಸಿದರು. ಈ ವಾದದ ದೋಷಗಳು ಸ್ಪಷ್ಟವಾಗಿರುವುವು. ಕೆಲವುಗಳನ್ನು ಮಾತ್ರ ಸೂಚಿಸುವೆವು 1. ನಿರಂತರ ದ್ವೇಷದಿಂದ ಮುಕ್ತಿಯಾಗುವುದಾದರೆ ಸರ್ವದಾ ವೇದವಿರುದ್ಧ ಕರ್ಮಗಳಲ್ಲಿ ಸರ್ವರೂ ತತ್ಪರರಾಗಿ **"ಶ್ರುತಿಸ್ಮೃತೀಹರೇ ರಾಜ್ಞೇ"** ಎಂಬಲ್ಲಿ ಹೇಳಲ್ಪಟ್ಟಿರುವ ವೇದಾದಿ ಶಾಸ್ತ್ರಗಳನ್ನು ನಿರಂತರವೂ ಉಲ್ಲಂಘಿಸುವುದರಲ್ಲಿ ಯತ್ನವನ್ನು ಮಾಡಬಹುದೆಂದು ಒಪ್ಪಬೇಕಾಗುವುದು. ಇದ ರಿಂದ ಸರ್ವ ಲೋಕನಾಶವೂ, ಸರ್ವಸಾಂಕರ್ಯವೂ ಕ್ಷಿಪ್ರದಲ್ಲಿ ಪ್ರಾಪ್ತವಾಗುವುದರಲ್ಲಿ ಸಂಶಯವಿಲ್ಲ. 2. ಕಿಂಚ ನಿರಂತರ ದ್ವೇಷದಿಂದ ಪರಮಾತ್ಮನು ಎದುರಿಗೆ ಬಂದು ಕೊಂದು ಬಿಡುವನೋ ಏನೋ ಎಂಬ ಭಯವು ಅಂಕುರಿಸಿ ಪ್ರತಿನಿಮಿಷವೂ ಪರ ಮಾತ್ಮನ ಸ್ಮೃತಿಯು ಬರುವುದರಿಂದ ಮುಕ್ತಿಯಾಗುವುದರಲ್ಲಿ ಸಂಶಯವಿಲ್ಲವೆಂದು ರಾಮಾನುಜರು ಹೇಳುವರು. ಹಾಗಿದ್ದರೆ ತ್ರೈರಾಶಿ ಲೆಖ್ಖಕ್ಕೆ ಅನುಗುಣವಾಗಿ ಸ್ವಲ್ಪ ಪರಮಾತ್ಮ ದ್ವೇಷದಿಂದ ಯಮದೇವರು ಎಲ್ಲಿ ನರಕಕ್ಕೆ ಹಾಕುವರೋ ನನ್ನ ಗತಿ ಏನಾಗುವುದೋ ಎಂಬ ಭಯವೂ ದೇವತಾಸ್ಮೃತಿಯೂ ಸ್ವಲ್ಪ ಬರುವುದರಿಂದ ಸ್ವಲ್ಪ ಪಾಪಿಗೆ ಸ್ವರ್ಗಾದಿ ಲೋಕಗಳಾದರೂ ಆಗಬೇಕಾಗುವುದು. ಪೂರ್ಣ ಭಕ್ತಿ ಯನ್ನು ಮಾಡಿದವನಿಗೆ ಪೂರ್ಣ ಮುಕ್ತಿಯೂ, ಸ್ವಲ್ಪ ಭಕ್ತಿಯನ್ನು ಮಾಡಿದವನಿಗೆ ಸ್ವರ್ಗಾದಿ ಲೋಕಗಳ ಪ್ರಾಪ್ತಿಯೂ ನಿಯತವಾಗಿರುವಂತೆ, ಸ್ವಲ್ಪ ದ್ವೇಷದಿಂದ ಮತ್ತು ವಿಧ್ಯತಿಕ್ರಮಣದಿಂದ ಸ್ವರ್ಗಾದಿ ಲೋಕದ ಪ್ರಾಪ್ತಿಯಾಗುವುದೆಂದು ರಾಮಾನುಜರು ಒಪ್ಪಬೇಕಾಗುವುದು. 3. ಈ ರೀತಿ ಅಂಗೀಕಾರ ಮಾಡುವ ದಾದರೆ, ಈ ವಾದದ ರೀತ್ಯಾ ಯಮದೇವರ ಸೃಷ್ಟಿಯು, ನರಕಾದಿಗಳ ಉತ್ಪ ತ್ತಿಯು, ವೇದಶಾಸ್ತ್ರಗಳ ಪ್ರವೃತ್ತಿಯು ಇವೆಲ್ಲವೂ ಅನಿರ್ವಚನೀಯವೇ ಆಗುವುದು. ಶ್ರೀಕೃಷ್ಣನಾದರೋ,

(1) ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ॥
—(16. 23.)

ಎಂದರೆ ಶಾಸ್ತ್ರವಿಧಿಯನ್ನು ಅತಿಕ್ರಮಿಸಿ ಸ್ವೇಚ್ಛಾನುಸಾರವಾಗಿ ಆಚರಿಸುವವನು ಜ್ಞಾನರೂಪವಾದ ಸಿದ್ಧಿಯನ್ನು ಹೊಂದುವುದಿಲ್ಲ; ಸ್ವರ್ಗಾದಿ ಸುಖವನ್ನು ಹೊಂದುವುದಿಲ್ಲ; ಮೋಕ್ಷವನ್ನು ಹೊಂದುವುದಿಲ್ಲ ಎಂದು ಹೇಳಿರುತ್ತಾನೆ. 4. ಪರಂತು ಮುಕ್ತಿ ಪ್ರಾಪ್ತಿಪ್ರಕಾರದ ಪರಾಮರ್ಶೆಯಿಂದಲೇ ದ್ವೇಷಯುತವಾದ ಧ್ಯಾನವು ಮೋಕ್ಷಸಾಧನವಾಗಲಾರದೆಂದು ನಿರ್ಣೀತವಾಗುವುದು. ಮುಕ್ತಿಯು ಭಗವಂತನ ಅತ್ಯರ್ಥ ಪ್ರಸಾದದಿಂದ ಪ್ರಾಪ್ತವಾಗುವ ಉತ್ತಮೋತ್ತಮವಾದ ಸ್ಥಿತಿ ಯೆಂದು ನಾವು ನಿರೂಪಿಸಿರುತ್ತೇವೆ. ಇದು ರಾಮಾನುಜ ಮತದಲ್ಲಿಯೂ ಅಂಗೀಕೃತವೇ ಆಗಿರುವುದು. ಸರ್ವೋತ್ತಮ ಚೇತನನು ಅವರವರ ಕರ್ಮಾನುಗುಣವಾಗಿ ತನ್ನಲ್ಲಿ ಪ್ರೀತಿ ಮಾಡುವವರಿಗೆ ಸುಖವನ್ನೂ, ದ್ವೇಷ ಮಾಡುವವರಿಗೆ ದುಃಖವನ್ನೂ ಕೊಡುವುದು ನಿಷ್ಪಕ್ಷಪಾತವಾದ ವ್ಯಾಪಾರವಾಗಿರುವುದು. ಶ್ರೀ ಕೃಷ್ಣನು ಇಂಥಾದ್ದೇ ತನ್ನ ಸ್ವಭಾವವೆಂದು ವರ್ಣಿಸಿರುತ್ತಾನೆ :—

(2) ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ ॥
—(4. 11.)

ಯಾರು ಯಾರು ನನ್ನನ್ನು ಯಾವ ಯಾವ ಭಾವಗಳಿಂದ ಭಜಿಸುತ್ತಾರೆಯೋ ಅವರಿಗೆ ನಾನು ಅವರ ಭಜನಾನುಗುಣವಾಗಿ ಫಲವನ್ನು ಕೊಡುತ್ತೇನೆ ಎಂದು ಭಾವವು. ದ್ವೇಷಿಗಳಿಗೆ ಅವರ ದ್ವೇಷಾನುಗುಣವಾದ ದುಃಖವನ್ನೂ ಪ್ರೀತಿ ಮಾಡುವವರಿಗೆ ಅವರ ಪ್ರೀತಿಫಲವಾದ ಸುಖವನ್ನೂ ಕೊಡುವುದು ಸಮವಾದ ನಡವಳಿಕೆ ಯೆಂದು ಲೋಕಪ್ರಸಿದ್ಧವಾಗಿರುವುದು. ವಿಷಮವಾದ ಮತ್ತು ತಾರತಮ್ಯೋಪೇತವಾದ ಭಜನಾನುಸಾರವಾಗಿ ಪರಮಾತ್ಮನು ವಿಷಮವಾದ ಮತ್ತು ತಾರತಮ್ಯೋಪೇತವಾದ ಫಲವನ್ನು ವಿತರಿಸುವನೆಂದು ಹೇಳುವುದು ಸಕಲ ಶಾಸ್ತ್ರಗಳಿಂದಲೂ ಮಾನ್ಯವಾದ ನಿಶ್ಚಯವಾಗಿರುತ್ತದೆ. 5. ಯಾವ ರೀತಿಯಿಂದಲಾದರೂ ಸರಿಯೆ ( ಪ್ರೀತಿಯಿಂದಾಗಲೀ, ದ್ವೇಷದಿಂದಾಗಲೀ ) ನಿರಂತರ ಸ್ಮೃತಿ ಮಾತ್ರದಿಂದ ಪರಮಾತ್ಮನು ಪ್ರಸನ್ನನಾಗುವನು ಮತ್ತು ಸನಾತನವಾದ ಮೋಕ್ಷ ಫಲವನ್ನು ಕೊಡುವನು ಎಂದು ಹೇಳುವುದು ಲೋಕವಿರುದ್ಧ ನ್ಯಾಯವಾಗಿರುವುದು ಮತ್ತು ಶ್ರೀ ಕೃಷ್ಣನ ವಾಕ್ಯಗಳಿಗೂ ವಿರುದ್ಧವಾಗಿರುವುದು. ಪುಷ್ಪದಿಂದ ಪ್ರಹಾರ ಮಾಡಿದರೂ ಕತ್ತಿಯಿಂದ ಪ್ರಹಾರ ಮಾಡಿದರೂ ಸಮವೆಂದು ಯಾರಾದರೂ ತಿಳಿಯುವರೇ ? ದ್ವೇಷದಿಂದ ರಾಜ ಸಂಹಾರವನ್ನು ಮಾಡಲೆಣಿಸಿ ಹಗಲೂ ಇರಳೂ ರಾಜ ಸಂಹಾರ ಪ್ರಕಾರವನ್ನು ಚಿಂತಿಸುವ ರಾಜದ್ರೋಹಿಯು ಪ್ರೀತಿಪಾತ್ರನಾದ ಅಮಾತ್ಯನಿಗೆ ಸಮವಾದ ಫಲವನ್ನು ಹೊಂದುವನೆಂದು ಹೇಳುವುದಕ್ಕಿಂತ ಹೆಚ್ಚು ಹಾಸ್ಯಾ

ಪ್ರದವಾದ ಪ್ರಕ್ರಿಯೆಯು ಎಲ್ಲಿರುವುದು ? ದ್ವೇಷಿಯಾದ ದುರ್ಯೋಧನನ ಸನ್ಮಾನವನ್ನೇ ಶ್ರೀ ಕೃಷ್ಣನು ಸರ್ವಥಾ ಸ್ವೀಕರಿಸಲಿಲ್ಲ.*

ಭಗವದ್ಗೀತೆಯಲ್ಲಿಯೂ ಸಹ ದ್ವೇಷಯುಕ್ತರಾಗಿ ತನ್ನನ್ನು ನಿಂದಿಸುವವರಿಗಾಗುವ ಪರಿಣಾಮವನ್ನು ಶ್ರೀ ಕೃಷ್ಣನು ಹೇಳಿರುತ್ತಾನೆ :—

**(3) ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ।**
**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ॥**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ।**
**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ॥**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ ॥**
—(16. 18–23) †

6. ಕಿಂಚ ಈ ರೀತಿಯಾಗಿ ನಿರಂತರ ದ್ವೇಷ ಮಾಡಿ ಮುಕ್ತಿಯನ್ನು ಹೊಂದಿದವರು ಒಬ್ಬರೂ ಇಲ್ಲ. ಶಿಶುಪಾಲಾದಿಗಳು ಪೂರ್ವದಲ್ಲಿ ಮಹಾ ಭಕ್ತರಾಗಿದ್ದರು, ಶಾಪ ಪ್ರಭಾವದಿಂದ ದುರ್ಬುದ್ಧಿಗೆ ವಶರಾಗಿ ಪರಮಾತ್ಮನ ದ್ವೇಷವನ್ನು ಸ್ವಲ್ಪ ಕಾಲ ಮಾಡಿದರು. ಕರುಣಾಸಾಂದ್ರನಾದ ಶ್ರೀಹರಿಯು ಅವರ

---

* ಶ್ರೀ ಕೃಷ್ಣನು ರಾಯಭಾರಿಯಾಗಿ ಹಸ್ತಿನಾವತಿಗೆ ಬಿಜಯ ಮಾಡಿದಾಗ ದುರ್ಯೋಧನನು ತನ್ನ ಮನೆಗೆ ಬಂದು ತನ್ನ ಆತಿಥ್ಯವನ್ನು ಸ್ವೀಕರಿಸಬೇಕೆಂದು ಬಹು ಪ್ರಕಾರವಾಗಿ ಶ್ರೀ ಕೃಷ್ಣನನ್ನು ಪ್ರಾರ್ಥಿಸಿದನು. ಶ್ರೀ ಕೃಷ್ಣನು ಕ್ರೋಧಪೂರ್ವಕವಾಗಿ ಅಸಂದಿಗ್ಧ ಮಾತುಗಳಿಂದಲೇ ಪ್ರತ್ಯುತ್ತರವನ್ನು ಹೇಳಿ ಅವನ ಆತಿಥ್ಯವನ್ನು ತಿರಸ್ಕರಿಸಿದನು :—

**ದ್ವಿಷದನ್ನಂ ನ ಭೋಕ್ತವ್ಯಂ ದ್ವಿಷಂತಂ ನೈವ ಭೋಜಯೇತ್ ।**
**ಪಾಂಡವಾನ್ ದ್ವಿಷಸೇ ರಾಜನ್ ಮಮ ಪ್ರಾಣಾ ಹಿ ಪಾಂಡವಾಃ ॥**

ಎಲೈ ದುರ್ಯೋಧನನೇ ! ದ್ವೇಷಿಗಳ ಅನ್ನವನ್ನು ಭೋಜನ ಮಾಡಬಾರದು; ದ್ವೇಷಿಗಳನ್ನು ಆದರಪೂರ್ವಕವಾಗಿ ಕರೆದು ಅವರಿಗೆ ಭೋಜನವನ್ನೂ ಮಾಡಿಸಬಾರದು. ಹೇ ರಾಜನ್ ! ನೀನು ಪಾಂಡವರ ದ್ವೇಷವನ್ನು ಮಾಡುತ್ತೀ. ಪಾಂಡವರು ನನ್ನ ಪಂಚಪ್ರಾಣಗಳಿಗೆ ಸಮಾನರು.

ಹೀಗೆ ದ್ವೇಷಿಗಳಿಗೆ ಭೋಜನ ಮಾಡಿಸಬಾರದೆಂದು ಹೇಳುವ ಮಧುಸೂದನನು ನಿರಂತರ ದ್ವೇಷಿಗಳನ್ನು ತನ್ನ ವೈಕುಂಠ ಲೋಕಕ್ಕೆ ಕರೆದುಕೊಂಡು ಹೋಗಿ ದಿವ್ಯ ಭೋಗ್ಯ ದ್ರವ್ಯಗಳನ್ನು ದಾನ ಮಾಡುವುದು ಸಂಭಾವಿತವೇ ? ದ್ವೇಷಿಗಳ ಅನ್ನವನ್ನೇ ತಿರಸ್ಕರಿಸಿದ ನಾರಾಯಣನು ದ್ವೇಷಿಗಳ ಧ್ಯಾನವನ್ನು ಪೂಜಾರೂಪೇಣ ಅಂಗೀಕರಿಸಿ ಸತ್ಫಲಗಳನ್ನು ಕೊಡುವುದು ಸಂಭಾವಿತವೇ ?

† ಈ ಶ್ಲೋಕಗಳು ಈಗಾಗಲೇ ಪೂರ್ವ ಭಾಗದಲ್ಲಿಯೇ ವ್ಯಾಖ್ಯಾತವಾಗಿರುವುವು.

ಪೂರ್ವಕೃತವಾದ ಮಹಾಸೇವೆಯನ್ನು ಮನಸ್ಸಿನಲ್ಲಿಟ್ಟು, ಅವರ ದ್ವೇಷ ಕಾರ್ಯಗಳನ್ನು ಮನ್ನಿಸಿ ಕ್ಷಮಿಸಿದನು. ನಿರಂತರ ದ್ವೇಷಿಗಳಾದ ದುರ್ಯೋಧನ, ಜರಾಸಂಧಾದಿಗಳನ್ನು ಅಂಧಂತಮಸ್ಸಿಗೆ ಹಾಕಿ ನಿತ್ಯ ದುಃಖವನ್ನು ಕೊಡುವನೆಂದು ಶಾಸ್ತ್ರಗಳು ಹೇಳುತ್ತಿವೆ. ಆದುದರಿಂದ ಯಾವ ಪ್ರಕಾರದಿಂದಲಾದರೂ ಪರಮಾತ್ಮನ ಧ್ಯಾನವು ಸುಫಲಪ್ರದವಾದುದೆಂದು ಭ್ರಮಿಸದೆ, ನೀವೆಲ್ಲರೂ ಕೇವಲ ಭಕ್ತಿಪೂರ್ವಕವಾದ ನಿಯತ ಧ್ಯಾನವೇ ಮೋಕ್ಷೋಪಯೋಗಿಯೆಂದು ತಿಳಿಯಬೇಕು. ಪ್ರಪತ್ತಿವಾದವು ಮತ್ತು ದ್ವೇಷಯುತ ಧ್ಯಾನವು ಮೋಕ್ಷ ಸಾಧನವೆಂಬ ವಾದವು ಇವೆರಡು ವಾದಗಳೂ ಶ್ರೀ ಕೃಷ್ಣನ ಒಂದೇ ವಾಕ್ಯರೂಪವಾದ ಕುಠಾರದಿಂದ ಸಮೂಲವಾಗಿ ಛಿನ್ನವಾಗಿರುವುವು :—

**(4) ಭಕ್ತ್ಯಾ ಮಾಮಭಿಜಾನಾತಿ ಯಾವಾನ್ ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಂ ॥**
—(18. 55.)

ಅಧಿಕಾರಿಯು **ತನ್ನ ಭಕ್ತಿಯಿಂದ** ನನ್ನ ದೇಶತಃ, ಕಾಲತಃ, ಗುಣತಃ ವ್ಯಾಪ್ತಿಯನ್ನು ತಿಳಿಯುತ್ತಾನೆ; ನನ್ನ ಯಥಾರ್ಥ ಸ್ವರೂಪವನ್ನು ತಿಳಿಯುತ್ತಾನೆ; ಆ ರೀತಿ **ಯಥಾರ್ಥವಾಗಿ ನನ್ನನ್ನು ತಿಳಿದ ನಂತರ** ಮುಕ್ತನಾಗುತ್ತಾನೆ.

ನನ್ನನ್ನು ತಿಳಿದ ನಂತರವೇ ಮುಕ್ತನಾಗುತ್ತಾನೆ ಎಂದು ಶ್ರೀ ಕೃಷ್ಣನು ಹೇಳಿರುವುದರಿಂದ ಕೇವಲ ಪ್ರೀತಿಯು ಸಾಕ್ಷಾತ್ ಮೋಕ್ಷ ಕಾರಣವಲ್ಲವೆಂದು ಸಿದ್ಧವಾಯಿತು. ಭಕ್ತಿಯಿಂದ ನನ್ನನ್ನು ತಿಳಿದ ನಂತರ ಮೋಕ್ಷವನ್ನು ಹೊಂದುತ್ತಾನೆಂದು ಹೇಳಿರುವುದರಿಂದ ದ್ವೇಷಯುಕ್ತವಾದ ಧ್ಯಾನಮಾತ್ರವು ಮೋಕ್ಷೋಪಯೋಗಿಯಲ್ಲವೆಂದು ಸಿದ್ಧವಾಯಿತು.

5. " **ಸೋಽಹಮಸ್ಮಿ** " ಎಂಬ ಅದ್ವೈತಗಳ ಆತ್ಮಧ್ಯಾನವು ಮೋಕ್ಷಪ್ರಾಪಕವಲ್ಲವೆಂದು ಬಹು ಸ್ಥಳಗಳಲ್ಲಿ ನಾವು ನಿರೂಪಿಸಿರುತ್ತೇವೆ. ಪ್ರಕೃತದಲ್ಲಿ ಸಂಗ್ರಹರೂಪವಾಗಿ ಒಂದೆರಡು ವಿಷಯಗಳನ್ನು ಸೂಚಿಸುವೆವು. ಅಹಂ ಬ್ರಹ್ಮಾಸ್ಮಿ, ಸೋಽಹಮಸ್ಮಿ ಮುಂತಾದ ಧ್ಯಾನ ಪ್ರಕಾರಗಳು ಅದ್ವೈತಮತದ ರೀತಿಯಿಂದಲೇ ವಿಚಾರ ಮಾಡಿದರೆ ಒಂದು ವಿವಕ್ಷೆಯಿಂದ ನಿರರ್ಥಕವಾದ ಶುದ್ಧ ಪಿಟಿಪಿಟಿ ಜಪದಂತೆ ಅರ್ಥರಹಿತವಾದ ಉಪಾಸನೆಗಳಾಗುವುವು. ಹೇಗೆಂದರೆ ಸೋಽಹಮಸ್ಮಿ ಎಂದರೆ "ನಾನು ಆ ಬ್ರಹ್ಮನು" ಎಂದರ್ಥವು. ಇಲ್ಲಿ "ನಾನು" ಎಂಬ ಜ್ಞಾನಕ್ಕೆ ವಿಷಯವಾದ ವಿಶಿಷ್ಟ ಜೀವಪದಾರ್ಥವು ಅದ್ವೈತಮತದ ರೀತ್ಯಾ ಮಿಥ್ಯಾ, ಬ್ರಹ್ಮನೆಂದರೆ ನಿರ್ಗುಣ ಬ್ರಹ್ಮನು ಅಥವಾ ಸೃಷ್ಟ್ಯಾದಿಕರ್ತನಾದ ಸಗುಣ ಬ್ರಹ್ಮನು. ಆದುದರಿಂದ "ನಾನು ಆ ಬ್ರಹ್ಮನು" ಎಂದರೆ ಮಿಥ್ಯಾಭೂತವಾದ ಜೀವಪದಾರ್ಥವು ಸೃಷ್ಟ್ಯಾದಿಕರ್ತನಾದ ಸಗುಣ ಬ್ರಹ್ಮನು ಎಂದು ಅರ್ಥವಾಗುವುದು; ಅಥವಾ ಮಿಥ್ಯಾಭೂತವಾದ ಜೀವಪದಾರ್ಥವು ನಿರ್ಧರ್ಮಕ ಶುದ್ಧ ಚೈತನ್ಯನು ಎಂದು

ಅರ್ಥವಾಗುವುದು. ಉಭಯ ವಿಧವಾದ ಉಪಾಸನೆಯೂ ದುರರ್ಥದ ಆಧಾರದ ಮೇಲೆ ಜನಿತವಾದ ನಿರರ್ಥಕ ಮನೋವಿಭ್ರಮವೇ, "ಅಹಂ" ಪದಾರ್ಥವಾದ ಜೀವನು ಸೃಷ್ಟ್ಯಾದಿಕರ್ತನಾದ ಸಗುಣ ಬ್ರಹ್ಮನು ಎಂಬ ಉಪಾಸನೆಯು ಘೋರ ನರಕಕ್ಕೆ ಕಾರಣವಾಗುವ ದೈವ ದ್ರೋಹವೇ ಸರಿ. ಮತ್ತು ಮಿಥ್ಯಾಭೂತವಾದ ಪದಾರ್ಥವು ಶುದ್ಧ ಚೈತನ್ಯನೆಂದು ಹೇಳುವುದು ಅಶಕ್ಯವೆಂದು ನ್ಯಾಯಪ್ರಾಪ್ತವಾಗಿರುವುದು. 2. ಜೀವೋಪಲಕ್ಷಿತವಾದ ಚೈತನ್ಯವೇ ಬ್ರಹ್ಮಚೈತನ್ಯವು ಎಂದು ಅದ್ವೈತಿಗಳು ಹೇಳುವುದಾದರೆ ಅಂಥ ಶುದ್ಧ ಬ್ರಹ್ಮನು ಧ್ಯೇಯವಸ್ತುವೇ ಆಗಲಾರನು. ಹೇಗೆಂದರೆ ಶುದ್ಧ ಚೈತನ್ಯನು "ನಾನು" "ನಾನು" ಎಂಬ ಪ್ರತೀತಿಯಲ್ಲಿ ವಿಷಯನಾಗಲಾರನು. "ನಾನು" ಎಂಬ ಪದಾರ್ಥವು ಬ್ರಹ್ಮವಸ್ತುವಲ್ಲ ಎಂದು ಅದ್ವೈತಮತದ ರೀತಿಯಿಂದಲೇ ಸಿದ್ಧವಾಯಿತು. "ನನ್ನ" ಅನುಭವಕ್ಕೆ ಬರದಿರುವ ಯಾವುದೋ ಒಂದು ಬ್ರಹ್ಮವಸ್ತುವು ಇದ್ದರೆ ತಾನೆ ಏನು? ಇಲ್ಲದಿದ್ದರೆ ತಾನೆ ಏನು? ನಿರ್ಧರ್ಮಕ ಶುದ್ಧ ಚೈತನ್ಯನು "ನಾನು" ಎಂಬ ಪ್ರತೀತಿಗೆ ವಿಷಯನಾದ ಜೀವನಿಗೆ ಅಜ್ಞೇಯನಾಗಿರುವುದರಿಂದ ಅವನು ಧ್ಯೇಯನಾಗಲಾರನು. ಧ್ಯೇಯವಸ್ತುರಹಿತವಾದ ಧ್ಯಾನವು ಅಸಂಭಾವಿತವು.* 3. ಪರಂತು ನಿರ್ಧರ್ಮಕ

---

* ಸಗುಣ ಬ್ರಹ್ಮನೇ "ನಾನು" ಎಂಬ ಜೀವವಸ್ತುವು ಎಂದು ಹೇಳುವುದು ದೌರಾತ್ಮ್ಯದ ಪರಾಕಾಷ್ಠತೆಯೇ ಸರಿಯೆಂದು ಒಬ್ಬ ಅಮೆರಿಕಾ ಗ್ರಂಥಕರ್ತನು ಬರೆದಿರುತ್ತಾನೆ :—

For a sinful man to call himself Brahma is the height of deceit and wickedness :—

—Xian Writer.

**ಅರ್ಥ**— ಪಾಪಿಯಾದ ಮನುಷ್ಯನು ನಾನು ಬ್ರಹ್ಮನು ಎಂದು ಹೇಳಿಕೊಳ್ಳುವುದು ದ್ರೋಹದ ಮತ್ತು ದುರಾತ್ಮತೆಯ ಪರಾಕಾಷ್ಠತೆಯೇ.

ನಾನು ಎಂಬ ಪದಾರ್ಥವು ಅಜ್ಞೇಯವಾದ ನಿರ್ಗುಣ ಬ್ರಹ್ಮನು ಎಂಬ ಉಪಾಸನೆಯು ಅವಿವೇಕ ಮೂಲಕವಾದುದು. ಚಿನ್ಮಾತ್ರ ಬ್ರಹ್ಮನು ಸರ್ವಥಾ ಅಜ್ಞೇಯನು. ಅವನು "ನಾನು" ಎಂಬ ಪ್ರತೀತಿಗೆ ಗೋಚರನಲ್ಲ. ಅವನು ನಮ್ಮ ವ್ಯವಹಾರದಲ್ಲಿ ಎಲ್ಲೂ ಬರುವುದಿಲ್ಲ. ಅಂಥ ಅಜ್ಞೇಯ ವಸ್ತುವೇ ನಾನು ಎಂದು ಹೇಳಿಕೊಳ್ಳುವುದು ಅಸಂಭಾವಿತವೇ. ಅಥವಾ ಶಶಿವಿಷಾಣವು ನಾನು ಎಂದು ಹೇಳಿಕೊಂಡಂತೆಯೇ. ಅದ್ವೈತಮತದಲ್ಲಿರುವ ಈ ದೋಷವನ್ನು ಪ್ರೊಫೆಸರ್ ಸರ್ಕಾರ್ ನಾಮಕ ಪಂಡಿತನು ಚೆನ್ನಾಗಿ ವಿವರಿಸಿರುತ್ತಾನೆ :—

"Indeed, the Absolute has been made so much transcendental that we may even conceive the continuity of a psychological or scientific relativity side by side with the Absolute without any harm or detriment to its Absolute character, and philosophy can be satisfied in teaching this much that in the

ಬ್ರಹ್ಮನು ಶಶವಿಷಾಣದಂತೆ ಅಪ್ರಸಿದ್ಧನೆಂದು ನಾವು ಬಹು ಸ್ಥಳಗಳಲ್ಲಿ ನಿರೂಪಿಸಿರುತ್ತೇವೆ. 4. ಪರಮಾತ್ಮನಾದ ವಾಸುದೇವನೇ ಪರಬ್ರಹ್ಮನು. ಅವನೂ ಅವನ ಮಹಿಮೆಗಳೂ ಅತ್ಯಂತ ಸತ್ಯವಾದವುಗಳೆಂದೂ, ಜೀವನು ಅಲ್ಪಜ್ಞತ್ವಾದಿ ಅನೇಕ ಸ್ವಾಭಾವಿಕ ಧರ್ಮಗಳಿಂದ ಸಹಿತನಾಗಿ ನಿತ್ಯನೂ, ಸತ್ಯನೂ ಆಗಿರುವನೆಂದೂ ನಾವು ನಿರೂಪಿಸಿರುತ್ತೇವೆ. ಹೀಗಿರುವಲ್ಲಿ ಜೀವನಿಗೆ ತನ್ನಿಂದ ಸ್ವರೂಪತಃ ಭಿನ್ನವಾದ ಯಾವ ಮತ್ತೊಂದು ವಸ್ತುವಿನಿಂದಲೂ ಅಭೇದ ಪ್ರಾಪ್ತಿಗೆ ಅವಕಾಶವಿರುವುದಿಲ್ಲ. 5. ಶ್ರೀ ಕೃಷ್ಣನು "ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ" ಇತ್ಯಾದಿ ಬಹು ಸ್ಥಳಗಳಲ್ಲಿ ಧ್ಯೇಯನಾದ ಪರಬ್ರಹ್ಮನು ರೂಪವತ್ಪದಾರ್ಥವೆಂದು ಸ್ಪಷ್ಟವಾಗಿ ನಿರೂಪಿಸಿರುತ್ತಾನೆ. ಪೂರ್ಣನಾದ ಧ್ಯಾನಗೋಚರನಾದ ಪರಬ್ರಹ್ಮನು ಧ್ಯಾನಕರ್ತನಾದ ಯೋಗಿ ಜೀವನಿಗಿಂತ ಅತ್ಯಂತ ಭಿನ್ನನೆಂದು ನೂತನವಾಗಿ ನಿರೂಪಿಸಬೇಕಾದುದಿಲ್ಲ.

6. ಅದ್ವೈತಮತದಲ್ಲಿ ಯಾವ ರೀತಿಯಿಂದ ವಿಚಾರ ಮಾಡಿದರೂ ಧ್ಯಾನ ಮಾಡುವುದಕ್ಕೆ ಕಾರಣವೇ ಇರುವುದಿಲ್ಲ ಈ ವಿಷಯವನ್ನು ಅದ್ವೈತಿಗಳೂ ಬಲ್ಲರು. ಆದರೆ ಈ ದೋಷೋಲ್ಲಂಘನೆಯನ್ನು ಮಾಡುವುದಕ್ಕೆ ಒಂದು ಕೇವಲ ಹಾಸ್ಯಾಸ್ಪದವಾದ ಕುಕಲ್ಪನೆಯನ್ನು ಮಾಡಿರುವರು. ಇದು ಅವರ ನಿರೂಪಣ ಪ್ರಕಾರವು :— "ಯದ್ಯಪಿ ಶುದ್ಧ ಬ್ರಹ್ಮನ ಧ್ಯಾನಾದಿಗಳು ಅಸಂಭಾವಿತವು; ಸಾಧ್ಯವೂ ಅಲ್ಲ. ಆದರೆ ಪ್ರತೀಕಾದಿಗಳಲ್ಲಿ ಪರಬ್ರಹ್ಮ ದೃಷ್ಟಿಯಿಂದ ಧ್ಯಾನವು ವಿಹಿತವಾಗಿರುವುದು. "ನಾಮ ಬ್ರಹ್ಮೇತ್ಯುಪಾಸೀತ" ಇತ್ಯಾದಿ ಛಾಂದೋಗ್ಯ ಶ್ರುತಿಯಲ್ಲಿ ನಾಮಾದಿ ಪ್ರಾಣಪರ್ಯಂತವಾಗಿ ಅನೇಕ ಪ್ರತೀಕಗಳು ಹೇಳಲ್ಪಟ್ಟಿರುವುವು. ಈ ಪ್ರತೀಕಗಳಲ್ಲಿ ನಾಮವೇ ಪರಬ್ರಹ್ಮವು, ಪ್ರಾಣನೇ ಪರಬ್ರಹ್ಮನು, ವಿಷ್ಣುವೇ ಪರಬ್ರಹ್ಮನು ಇತ್ಯಾದಿ ರೀತಿಯಾದ ಅಭೇದೋಪಾಸನೆಯು ಉಕ್ತವಾಗಿರುವುದು. ಬ್ರಹ್ಮದೃಷ್ಟಿರುತ್ಕರ್ಷಾತ್ ಇತ್ಯಾದಿ ಸೂತ್ರಗಳಿಂದಲೂ ವಿಹಿತವಾಗಿರುವುದು.

---

continuity of self-conscious experience no where do we come across the Absolute."

—Mahendranath Sircar, M.A., Ph.D.

**ಅರ್ಥ :—** ಅದ್ವೈತಮತದಲ್ಲಿ ಬ್ರಹ್ಮನು ಅತ್ಯಂತ ಪ್ರಮಾಣಾತೀತನಾಗಿರುವುದರಿಂದ ಪ್ರಮಿತವಾದ ನಮ್ಮ ಜಗತ್ಪ್ರವಾಹವು ಅಜ್ಞೇಯ ಬ್ರಹ್ಮನ ಸಂಬಂಧವೇ ಇಲ್ಲದೇ ಭಿನ್ನವಾಗಿ ಸರ್ವದಾ ಅನುವರ್ತಿಸುತ್ತಿರುವುದೆಂದು ಹೇಳುವುದರಲ್ಲಿ ಬಾಧಕವಿಲ್ಲ. ಯಾತಕ್ಕೆಂದರೆ "ನಾನು" ಎಂಬ ಪ್ರತೀತಿಸಿದ್ಧರಾದ ಜೀವರುಗಳ ಅನುಭವದಲ್ಲಿ ಯಾವಾಗಲೂ ಎಲ್ಲೂ ಚಿನ್ಮಾತ್ರ ಬ್ರಹ್ಮನು ವಿದಿತನಾಗಲಾರನು. ಇಷ್ಟನ್ನು ( ಬ್ರಹ್ಮನು ನಿಮಗೆ ಎಲ್ಲೂ ಸಿಕ್ಕುವುದಿಲ್ಲವೆಂದು ) ಹೇಳೋಣದರಿಂದಲೇ ಅದ್ವೈತ ಶಾಸ್ತ್ರವು ತೃಪ್ತಿಯನ್ನು ಹೊಂದಬಹುದು.

"ಯದ್ಯಪಿ ನಾಮ, ಪ್ರಾಣ, ಈಶ್ವರ, ವಿಷ್ಣ್ವಾದಿಗಳೊಬ್ಬರೂ ಪರಬ್ರಹ್ಮ ವಸ್ತುವಲ್ಲ. ಪರಿದೃಶ್ಯಮಾನವಾದುದೆಲ್ಲಾ ಮಿಥ್ಯಾ. ಆದರೂ ಶಾಖಾಚಂದ್ರ ನ್ಯಾಯ ದಿಂದಲೋ, ಅಥವಾ ಸ್ಥೂಲಾರುಂಧತೀ ನ್ಯಾಯದಿಂದಲೋ ಸಗುಣ ವಸ್ತುವನ್ನೇ ನಿರ್ಗುಣ ಪರಬ್ರಹ್ಮನೆಂದು ಧ್ಯಾನ ಮಾಡುವವನಿಗೆ ಮನಸ್ಸು ನಿಶ್ಚಲವಾಗಿ ತತ್ತ್ವಮಸ್ಯಾದಿ ವಾಕ್ಯಗಳಿಂದ ಯಥಾರ್ಥ ವಿಜ್ಞಾನವು ಪ್ರಾಪ್ತವಾದಾಗ ನಾಮಾದಿ ಗಳೆಲ್ಲವೂ ಮಿಥ್ಯಾ, ಪರಬ್ರಹ್ಮನಲ್ಲಿ ಆರೋಪಿತವು ಎಂದು ಸ್ಪಷ್ಟವಾಗುವುದು. ಶುಕ್ತಿರಜತ ಭ್ರಮೆಯನ್ನು ಹೊಂದಿದವನು ತನ್ನ ಜ್ಞಾನಕ್ಕೆ ಗೋಚರವಾದ ರಜತ ವನ್ನೇ ಇದು ಶುಕ್ತಿಯು, ಶುಕ್ತಿಯು ಎಂದು ಧ್ಯಾನ ಮಾಡುತ್ತಾ ಇದ್ದರೆ ಭ್ರಮವು ನಿವೃತ್ತಿಯಾದ ನಂತರ ಅಲ್ಲಿ ಶುಕ್ತಿಯೇ ಇರುವುದರಿಂದ ಅಲ್ಲಿರುವ ಶುಕ್ತಿಯು ಹೇಗೆ ಪ್ರತೀತವಾಗಿ ಭ್ರಾಂತನು ಮಾಡಿದ ಮಿಥ್ಯೋಪಾಸನೆಯೂ ಹೇಗೆ ಫಲಕಾರಿಯಾಗಿ ಪರಿಣಾಮ ಹೊಂದುವುದೋ, ಹಾಗೆಯೇ ಈಶ್ವರನನ್ನೋ, ವಿಷ್ಣುವನ್ನೋ, ಗಣೇಶ ನನ್ನೋ, ಅಂಬಿಕೆಯನ್ನೋ ನೀನೇ ಶುದ್ಧ ಬ್ರಹ್ಮನು, ನೀನೇ ಶುದ್ಧ ಬ್ರಹ್ಮನು ಹೀಗೆ ಧ್ಯಾನ ಮಾಡುತ್ತಾ ಇದ್ದರೆ ತತ್ತ್ವಮಸ್ಯಾದಿ ವಾಕ್ಯದಿಂದ ಯಥಾರ್ಥ ಜ್ಞಾನೋ ದಯವಾದ ನಂತರ ಗಣೇಶತ್ವ, ಅಂಬಿಕಾತ್ವ, ಶಂಖಚಕ್ರಾದಿಮತ್ವಾದಿ ಆರೋಪಿತ ಧರ್ಮಗಳೆಲ್ಲಾ ಅದೃಶ್ಯವಾಗಿ ಹೋಗಿ ಶುದ್ಧ ಬ್ರಹ್ಮ ಸಾಕ್ಷಾತ್ಕಾರವೇ ಆಗುವುದು. ನೀನೇ ಬ್ರಹ್ಮನು ಎಂದು ಮಾಡಿದ ಧ್ಯಾನವು ಸಫಲವೂ ಸತ್ಯವೂ ಆಗಿ ಪರಿಣಮಿಸು ವುದು" ಎಂದು ಹೇಳುವರು. ಸೂತಸಂಹಿತೆಯಲ್ಲಿ ಇಂಥ ಧ್ಯಾನ ಪ್ರಕಾರವನ್ನು ಅದ್ವೈತಿಗಳು ವಿಸ್ತಾರವಾಗಿ ವರ್ಣಿಸಿರುವರು.

**ಪ್ರಶ್ನೆ**— ಸ್ವಾಮೀ ! ಇದರಲ್ಲಿ ದೋಷಗಳೇನು ?

**ಶ್ರೀ ಶ್ರೀಗಳವರು**— ಈ ನಿರೂಪಣವು ಬಂಜೆಗೆ ಪುತ್ರೋತ್ಪತ್ತಿಯಾಗುವು ದೆಂದು ಗ್ರಾಮಗಳಲ್ಲಿ ಬುಡುಬುಡಿಕೆಯವರು ವಿಧಾನ ಮಾಡುವ ಪ್ರಕ್ರಿಯೆಗೆ ಸದೃಶ ವಾಗಿರುವುದು. ಪ್ರತೀಕ ಬ್ರಹ್ಮೋಪಾಸನೆಯ ಮುಖ್ಯವಾದ ಕೆಲವು ದೋಷ ಗಳನ್ನು ನಿರೂಪಿಸುವೆವು.

1. **ಅದ್ವೈತಮತದ ರೀತಿಯಿಂದಲೂ ಕೂಡ** ಪ್ರತೀಕ ಬ್ರಹ್ಮೋಪಾಸ ನೆಗೂ ನಿರ್ಗುಣ ಬ್ರಹ್ಮ ಸಾಕ್ಷಾತ್ಕಾರೋತ್ಪತ್ತಿಗೂ ಕಾರ್ಯಕಾರಣ ಭಾವವು ಯಾವುದೂ ಇರುವುದಿಲ್ಲ. ಪ್ರತೀಕವನ್ನು ನೋಡುತ್ತಾ ನೀನೇ ನಿರ್ಗುಣ ಬ್ರಹ್ಮನು ! ನೀನೇ ನಿರ್ಗುಣ ಬ್ರಹ್ಮನು ! ಎಂದು ಉಪಾಸನೆ ಮಾಡುವುದರಿಂದ ನಿರ್ಗುಣ ಬ್ರಹ್ಮ ಜ್ಞಾನವು ಉಂಟಾಗುವುದಿಲ್ಲ. ನಿರ್ಗುಣ ಬ್ರಹ್ಮಜ್ಞಾನವು ತತ್ತ್ವಮಸ್ಯಾದಿ ವಾಕ್ಯಾರ್ಥ ಜ್ಞಾನದಿಂದ ಸ್ಫುರಿಸುವುದೇ ಹೊರತು ಧ್ಯಾನಾದಿಗಳು ಪರಬ್ರಹ್ಮ ಜ್ಞಾನೋತ್ಪತ್ತಿಯಲ್ಲಿ ಅವಶ್ಯಕವಲ್ಲ† ಮತ್ತು ಸ್ವಲ್ಪ ಪ್ರತಿಬಂಧಕವೂ ಆಗು

---

† ಇದೇ ಅದ್ವೈತಮತದ ಪ್ರಕ್ರಿಯೆಯು; ಅದ್ವೈತ ತತ್ತ್ವೋಪಾದನೆಯ ರೀತಿಯಿಂದಲೇ ಧ್ಯಾನಾದಿಗಳು ಮೋಕ್ಷಕ್ಕೆ ಕಾರಣವಾಗುವುದಿಲ್ಲ. ಈ ವಿಷಯವನ್ನು ಉಭಯ ವಿದ್ಯಾ ಪಾರಂಗತ ರಾದ ದಾಸಗುಪ್ತರು ಸಮೀಚೀನವಾಗಿ ನಿರೂಪಿಸಿರುತ್ತಾರೆ :—

ವುವು. ಶುಕ್ತಿರಜತ ದೃಷ್ಟಾಂತದಲ್ಲಿಯೂ ಹೀಗೆಯೇತಿಳಿಯಬೇಕು. ಭ್ರಮ ಕಾಲದಲ್ಲಿ ರಜತವನ್ನು ನೋಡುತ್ತಾ ಇದು ಶುಕ್ತಿಯು ಎಂದು ಸಹಸ್ರ ವರ್ಷಗಳ ಪರ್ಯಂತ ಧ್ಯಾನ ಮಾಡಿದರೂ ಶುಕ್ತಿ ಜ್ಞಾನವು ಬರಲಾರದು. ಹತ್ತಿರ ಹೋಗಿ ಬಗ್ಗಿ ನೋಡಿದರೆ, ಎಂದರೆ ಯಥಾರ್ಥ ಜ್ಞಾನಕಾರಣವಾದ ಸಮೀಚೀನ ಸನ್ನಿಕರ್ಷವು ಉತ್ಪನ್ನವಾದ ಕ್ಷಣವೇ, ಯಥಾರ್ಥ ಶುಕ್ತಿಜ್ಞಾನವು ಉಂಟಾಗುವುದು. ರಜ್ಜು ಸರ್ಪಭ್ರಮದಲ್ಲಿಯೂ ಹೀಗೆಯೇ ತಿಳಿಯಬೇಕು. 2. ಕಿಂಚ ಈಶ್ವರ ವಿಷ್ಣ್ವಾದಿಗಳು ಮಿಥ್ಯಾ ಅಲ್ಲ. ಅವರ ಪರಿಪೃಶ್ಯಮಾನವಾದ ಧರ್ಮಗಳೂ ಮಿಥ್ಯಾ ಅಲ್ಲ, ಎಂದು ನಾವು ಅನೇಕ ಕಾರಣಗಳಿಂದ ನಿರೂಪಿಸುತ್ತೇವೆ. ಹೀಗಿರುವಲ್ಲಿ ಸತ್ಯ ಧರ್ಮಗಳಿಂದ ಸಹಿತನಾದ ವಿಷ್ಣು ಚೇತನನನ್ನು ನೀನು ನಿರ್ಗುಣ ಬ್ರಹ್ಮನೆಂದು ಧ್ಯಾನ ಮಾಡಿದರೆ ಪ್ರಬಲವಾದ ದೈವದ್ರೋಹವು ಪ್ರಾಪ್ತವಾಗುವುದು. 3. ಪರಂತು ಮಿಥ್ಯೋಪಾಸನೆಯು ಮೋಕ್ಷಸಾಧಕವೆಂದು ಅಂಗೀಕರಿಸುವುದು ಅತ್ಯಂತ ಸಾಹಸ ಪ್ರಕ್ರಿಯೆಯು. ಯಥಾರ್ಥವಾದ ಜ್ಞಾನವು ಮತ್ತು ಉಪಾಸನೆಯು ಮೋಕ್ಷಸಾಧಕವೆಂದೂ, ಅಯಥಾರ್ಥವಾದ ಜ್ಞಾನವು ಮತ್ತು ಉಪಾಸನಾದಿಗಳು ಸಂಸಾರ ಕಾರಣವೆಂದೂ ಶಾಸ್ತ್ರದಲ್ಲಿ ನಿಶ್ಚಿತವಾಗಿರುವುದು. ಯಥಾರ್ಥೋಪಾಸನೆಯು ಸಾತ್ವಿಕವಾದುದರಿಂದ ಮೋಕ್ಷಸಾಧಕವಾಗಬಹುದು. ಅಯಥಾರ್ಥೋಪಾಸನೆಯು ತಾಮಸಗುಣ ಜನ್ಯವಾದ ವಿಪರೀತ ನಿಶ್ಚಯಾತ್ಮಕವಾದುದರಿಂದ ನಿರಯಪ್ರದವಾಗುವುದೆಂದು ಯುಕ್ತಿಯೂ ಸ್ವರಸವಾಗಿರುವುದು. 4. ಲೋಕ ದೃಷ್ಟಾಂತವೂ ಹೀಗೆಯೇ ಇರುವುದು. ಚಂಡಾಲನನ್ನು ಕುರಿತು ನೀನು ರಾಜನು ಎಂದು ಅಭಿಪ್ರಾಯ ಪುರಸ್ಸರವಾಗಿ ಸ್ತುತಿಸಿ ರಾಜೋಪಚಾರಗಳಿಂದ ಪೂಜಿಸ

---

"Sankar's main point was that the Upanishads revealed the highest truth as the Brahman. No meditation or worship or action of any kind was required; but one reached absolute wisdom and emancipation when the truth dawned on him that the Brahman or self was the ultimate reality."

—S Das Gupta M A., Ph.D.

**ಅರ್ಥವು :—** ಉಪನಿಷತ್ತುಗಳು ಬ್ರಹ್ಮನೇ ಪರಮಾರ್ಥ ತತ್ವವೆಂದು ತೋರಿಸುವುವೆನ್ನುವುದು ಶಂಕರಾಚಾರ್ಯರ ಮುಖ್ಯ ಪ್ರಾತಿಪಾದಿತ ತತ್ವವು. ಯಾವ **ಧ್ಯಾನವೂ** ಆರಾಧನೆಯೂ ಕರ್ಮಾದ್ಯನುಷ್ಠಾನವೂ ಅವಶ್ಯಕವಿರುವುದಿಲ್ಲ. ಪರಂತು ಅಧಿಕಾರಿಯು ಶುದ್ಧ ಬ್ರಹ್ಮನು ಅಥವಾ ಆತ್ಮನೇ ಅಂತ್ಯ ತತ್ವವೆಂದು ತಿಳಿದ ಕ್ಷಣವೇ ಪೂರ್ಣ ವಿಜ್ಞಾನವನ್ನೂ ಮತ್ತು ಬಂಧನಿವೃತ್ತಿಯನ್ನೂ ಹೊಂದಿ ಬಿಡುವನು.

ಏವಂಚ ಧ್ಯಾನಾದಿಗಳು ಮೋಕ್ಷೋಪಯೋಗಿಯಲ್ಲ. ಅದು ಮಂದರ ಆಚರಣೆಯು ಎಂದು ಸಿದ್ಧವಾಯಿತು.

ತೊಡಗಿದರೆ, ರಾಜನು ಕುಪಿತನಾಗಿ ರಾಜದ್ರೋಹರೂಪವಾದ ದೋಷಭಾಗಿಯಾದ ಅಂಥ ನಿಂದಕನನ್ನು ಸಂಹರಿಸುವನು. ಇದೇ ರೀತಿಯಲ್ಲಿ ನಾಮಾದಿ ಪ್ರತೀಕಗಳನ್ನು ಉದ್ದೇಶ ಮಾಡಿ ನೀವುಗಳೇ ಉಪನಿಷತ್ಪ್ರತಿಪಾದ್ಯನಾದ ಪರಬ್ರಹ್ಮ ವಸ್ತುವು ಎಂದು ಉಪಾಸನೆ ಮಾಡಿದರೆ, ಪರಬ್ರಹ್ಮನು ಕುಪಿತನಾಗಿ ತನ್ನ ಮಹಾ ಗುಣಗಳನ್ನು ಅಲ್ಪರಾದ ಪ್ರತೀಕಗಳಲ್ಲಿ ಆರೋಪಿಸುವ ವಿಪರೀತೋಪಾಸಕನನ್ನು ನಿತ್ಯ ದುಃಖಕ್ಕೆ ಗುರಿ ಮಾಡುವನೆಂದು ಹೇಳಬಹುದು. 5. ಪರಬ್ರಹ್ಮ ವಸ್ತುವು ನಿರ್ಗುಣ ಚಿನ್ಮಾತ್ರನು, ಅದು ಕೋಪಿಸಿಕೊಂಡು ಶಿಕ್ಷಾದಿಗಳನ್ನು ಮಾಡತಕ್ಕ ವೀರಭದ್ರ ಮೂರ್ತಿಯಲ್ಲವೆಂದು ಅದ್ವೈತಿಗಳು ವಾದಿಸಬಹುದು. ಆದರೆ, ಶ್ರೀ ಕೃಷ್ಣನೇ ವೇದೈಶ್ಚ ಸರ್ವೈರಹಮೇವ ವೇದ್ಯಃ ಇತ್ಯಾದಿ ಬಹು ಪ್ರಮಾಣ ವಚನಾನುಗುಣವಾಗಿ ಸರ್ವ ವೇದಪ್ರತಿಪಾದ್ಯನಾದ ಪರಬ್ರಹ್ಮ ವಸ್ತುವು. ಶ್ರೀ ಕೃಷ್ಣನು ಸತ್ವಾದಿ ಗುಣರಹಿತನಾದುದರಿಂದ ನಿರ್ಗುಣನೆನ್ನಿಸುವನು ಮತ್ತು ಅನಂತ ಕಲ್ಯಾಣ ಗುಣಗಳಿಂದ ಸದಾ ಪರಿಪೂರ್ಣನಾದುದರಿಂದ ಪರಬ್ರಹ್ಮನೆನ್ನಿಸುವನು. ಆತನಿಗಿಂತ ಅತಿರಿಕ್ತವಾದ ನಿರ್ವಿಶೇಷ ಚಿನ್ಮಾತ್ರರೂಪವಾದ ನಿರ್ಗುಣ ವಸ್ತುವು ವೇದ ಪ್ರತಿಪಾದ್ಯವಾಗಿರುವುದಿಲ್ಲ ಮತ್ತು ಶಶವಿಷಾಣದಂತೆ ಅಪ್ರಸಿದ್ಧವಾಗಿರುವುದೆಂದು ನಾವು ಹಿಂದೆಯೇ ನಿರೂಪಿಸಿರುತ್ತೇವೆ. ಆದುದರಿಂದ ನಾಮಾದಿ ಪ್ರತೀಕಗಳಲ್ಲಿ ಬ್ರಹ್ಮತ್ವ ಬುದ್ಧಿಯಿಂದ ಉಪಾಸನೆ ಮಾಡಿದರೆ ಪರಬ್ರಹ್ಮನಾದ ಶ್ರೀ ಕೃಷ್ಣನು ಕುಪಿತನಾಗಿ ಪೌಂಡ್ರಕ ವಾಸುದೇವಾದಿಗಳಿಗೆ ಮಾಡಿದಂಥ ಶಿಕ್ಷೆಯನ್ನೇ ಮಾಡುವುದು ನಿಶ್ಚಯವು. 6. ಪರಂತು ನಾಮಾದಿ ಪ್ರತೀಕರೂಪವಾದ ದೇವತೆಗಳಿಗೂ ಈ ಉಪಾಸನೆಯು ಇಷ್ಟಕರವಲ್ಲ. ಪತಿವ್ರತೆಯಾದ ಸ್ತ್ರೀಯನ್ನು ನೀನು ಸ್ವತಂತ್ರ ಪುರುಷಳು, ಈ ಮನೆಗೆ ನೀನೇ ಯಜಮಾನಿತಿಯಾಗಿರುತ್ತೀ ಎಂದು ಸ್ತುತಿಸಿದರೆ ಆಕೆಯು ಸಂತುಷ್ಟಿಯನ್ನು ಹೊಂದಲಾರಳು. ನಿಜ ಭೃತ್ಯನನ್ನು ಕುರಿತು ನೀನು ಮಹಾರಾಜನೆಂದು ಸ್ತುತಿಸಿದರೆ ಕುಪಿತನಾಗುವನು. ಹಾಗೆಯೇ ಪರಬ್ರಹ್ಮನಾದ ಶ್ರೀ ಕೃಷ್ಣನ ಪಾದಗಳಲ್ಲಿ ಅನನ್ಯ ಭಾವದಿಂದ ಶರಣಾಗತರಾದ ಬ್ರಹ್ಮಾದಿ ದೇವತೆಗಳಲ್ಲಿ ಪರಬ್ರಹ್ಮ ದೃಷ್ಟಿಯನ್ನಿಟ್ಟು ಉಪಾಸನೆಯನ್ನು ಮಾಡಿದರೆ ಅವರು ಸಂತೋಷವನ್ನು ಹೊಂದಲಾರರು ಮತ್ತು ಸಹಜವಾದ ಕ್ರೋಧಕ್ಕೆ ವಶರಾಗಿ ಅಂಥ ದುರುಪಾಸಕನನ್ನು ದಂಡಿಸುವುದರಲ್ಲಿ ಸಂಶಯವಿಲ್ಲ. 7. ಮಿಥ್ಯೋಪಾಸನೆಯಾದರೂ, ಐಕ್ಯಜ್ಞಾನೋತ್ಪತ್ತಿಯಲ್ಲಿ ಸಾಕ್ಷಾತ್ಸಾಧನವಲ್ಲದಿದ್ದರೂ, ಪ್ರತೀಕದಲ್ಲಿ ಬ್ರಹ್ಮ ದೃಷ್ಟಿಯಿಂದ ಉಪಾಸನೆ ಮಾಡುವುದರಿಂದ ಚಿತ್ತೈಕಾಗ್ರತೆಯು ಬರುವುದು ಎಂದು ಕೆಲವರು ಅದ್ವೈತಿಗಳು ಹೇಳುವರು. ಈ ವಿವಕ್ಷೆಯಿಂದಲೂ ಮಿಥ್ಯೋಪಾಸನೆಯು ಉಚಿತವಲ್ಲ. ಚಿತ್ತೈಕಾಗ್ರತೆಯನ್ನು ಹೊಂದುವುದಕ್ಕೆ ಅದ್ವೈತಮತದ ರೀತಿಯಿಂದಲೇ ನೀನು ಮಿಥ್ಯಾ ಎಂದು ಪ್ರತೀಕವನ್ನು ಉಪಾಸನೆ ಮಾಡಿದರೆ ಸಾಕು. ನೀನು ಪರಬ್ರಹ್ಮನು ಎಂದು ನಿರರ್ಥಕವಾದ ಮತ್ತು ವಿರುದ್ಧ ಫಲಜನಕವಾದ ಅಸದುಪಾಸನೆಯನ್ನು ಮಾಡುವುದಕ್ಕೆ ಕಾರಣವಿರುವುದಿಲ್ಲ.

**ಪ್ರಶ್ನೆ**— ಸ್ವಾಮೀ ! ಪ್ರತೀಕದಲ್ಲಿ ಬ್ರಹ್ಮ ದೃಷ್ಟಿಯನ್ನಿಟ್ಟು ಧ್ಯಾನ ಮಾಡು ವುದು ಮಿಥ್ಯೋಪಾಸನೆಂಬೋ ಹೌದು. ಆದರೆ ಅದು ನಿರರ್ಥಕವು ಹೇಗೆ ಆಗು ವುದು? ನಾನು ಒಂದು ಕಲ್ಲನ್ನು ದೇವರೆಂದು ನಂಬಿಕೊಂಡರೆ ನಮ್ಮ ಭಾಗಕ್ಕೆ ಅದು ದೇವರೇ ಆಗುವುದು.

**ಉತ್ತರ— ಶ್ರೀ ಶ್ರೀಗಳವರು**— ಇದು ಸ್ವಲ್ಪ ಮೋಹಕವಾದ ಉಪವಾದ ನೆಯು. 8 ವಸ್ತು ತತ್ತ್ವವೇನೆಂದರೆ, ಯಾವನಾದರೂ ಒಬ್ಬ ಪುರುಷನು ಒಂದು ಕಲ್ಲನ್ನು ಬಂಗಾರದ ತುಂಡೆಂದು ನಂಬಿದರೆ ಆ ಭ್ರಮ ಜ್ಞಾನದಿಂದ ಆತನಿ ಗೇನೋ ಮನೆಯಲ್ಲಿ ಬಂಗಾರವು ಇದ್ದಿದ್ದರೆ ಎಷ್ಟು ಸಂತೋಷವೋ ಅಷ್ಟು ಸಂತೋಷವು ಉಂಟಾಗುವುದು. ಈ ಸಂತೋಷೋತ್ಪತ್ತಿಯು ಭ್ರಮ ಜ್ಞಾನದ ಸಾಮರ್ಥ್ಯವು, ಕಲ್ಲಿನ ಸಾಮರ್ಥ್ಯವಲ್ಲ. ಯಾತಕ್ಕೆಂದರೆ ಪುರುಷನ ನಂಬಿಕೆ ಯಿಂದ ಕಲ್ಲು ಕರಗಿ ಬಂಗಾರರೂಪವಾಗಿ ಪರಿಣಾಮನ್ನು ಹೊಂದಲಾರದು. ಕಲ್ಲು ಇದ್ದಂತೆಯೇ ಇರುವುದು. ಹೀಗಿದ್ದರೂ ಕಲ್ಲು ಬಂಗಾರವೆಂಬ ಭ್ರಮ ಜ್ಞಾನವು ಸುಖಜನಕವಾಗುವುದು. ಆದರೆ ಅದೇ ಪುರುಷನು ಮನೆಯಲ್ಲಿ ವಿವಾಹೋತ್ಸವವು ಪ್ರಾಪ್ತವಾದಾಗ ಚಿನ್ನದ ಡಾಬನ್ನು ಮಾಡಿಸಬೇಕೆಂಬ ಉದ್ದೇಶದಿಂದ ಅಂಗಡಿಗೆ ತನ್ನಲ್ಲಿಟ್ಟುಕೊಂಡಿದ್ದ ಕಲ್ಲುಗಟ್ಟಿಯನ್ನು ತೆಗೆದುಕೊಂಡು ಹೋದರೆ ಸಕಲರೂ ಅವನನ್ನು ಹುಚ್ಚನೆಂದು ಕರೆಯುವರು. ಅವನ ಇಷ್ಟಾರ್ಥ ಪ್ರಾಪ್ತಿಯೂ ಆಗ ಲಾರದು.

ಇದೇ ರೀತಿಯಲ್ಲಿ ಪ್ರತೀಕದಲ್ಲಿ ಬ್ರಹ್ಮತ್ವಾರೋಪರೂಪವಾದ ಭ್ರಮ ಜ್ಞಾನ ದಿಂದ ತಾಮಸ ಸುಖವು ಉತ್ಪನ್ನವಾಗುವುದು. ಆದರೆ ಬ್ರಹ್ಮನ ಪ್ರಸಾದ ಪ್ರಾಪ್ತಿ ಯಾಗಲೀ, ಪರಿಣಾಮ ಫಲರೂಪವಾದ ಮುಕ್ತ್ಯಾದಿ ಪುರುಷಾರ್ಥವಾಗಲೀ ಪ್ರಾಪ್ತ ವಾಗಲಾರದು. ವಿಷವನ್ನು ಹಾಲೆಂದು ಭ್ರಾಂತಿಯಿಂದ ತಿಳಿದರೆ, ತೃಷಾರ್ತನು ಇನ್ನೇನು ನನ್ನ ದಾಹನಿವೃತ್ತಿಯಾಯಿತೆಂದು ನಂಬಿ ಸಂತೋಷಪಡುವನು. ಆದರೆ ಪಾನ ಮಾಡಿದರೆ ಮರಣವು ಸಿದ್ಧವಾಗಿರುವುದು. ಹೀಗೆಯೇ ಭಯಂಕರವಾದ ಅಸದಾರೋಪದಿಂದ ಪ್ರಾಪ್ತವಾದ ತಾಮಸ ಸುಖವು ಪರಿಣಾಮದಲ್ಲಿ ಪರಬ್ರಹ್ಮನ ದ್ರೋಹದಿಂದ ಸಂಭವಿಸುವ ನಿತ್ಯ ನರಕ ಪ್ರಾಪ್ತಿಯಲ್ಲಿ ಪರ್ಯವಸಾನವನ್ನು ಹೊಂದು ವುದು. ಅಭಕ್ಷ್ಯಭಕ್ಷಣಗಳಿಂದ ಸುಖವು ಉತ್ಪನ್ನವಾಗುವುದು. ಹೀಗೆಯೇ ಮಿಥ್ಯಾ ಜ್ಞಾನದಿಂದಲೂ ಕ್ವಚಿತ್ ತಾತ್ಕಾಲಿಕ ಸುಖವು ಉಂಟಾಗುವುದು. ಆದರೆ ಶಾಸ್ತ್ರ ಮಾರ್ಗದಲ್ಲಿ ಪ್ರವೃತ್ತರಾದ ಮುಮುಕ್ಷುಗಳು ನಿಷಿದ್ಧಗಳಾದ ಈ ಹೇಯ ಸುಖ ಗಳು ಪರಿಣಾಮದಲ್ಲಿ ನರಕ ಕಾರಣವಾಗುವುವೆಂದು ನಿಶ್ಚಯಿಸಿ ಅವುಗಳನ್ನು ಸರ್ವಥಾ ಅಪೇಕ್ಷಿಸಬಾರದು. ಪ್ರತೀಕ ಬ್ರಹ್ಮತ್ವ ಧ್ಯಾನವು ಶ್ರುತಿ ಸ್ಮೃತಿಗಳಿಂದ ನಿಷೇಧಿಸಲ್ಪಟ್ಟ ಭ್ರಮ ಜ್ಞಾನವಾದುದರಿಂದ ಅಂಥ ಉಪಾಸನೆಯಿಂದ ಪ್ರಾಪ್ತ ವಾಗುವ ತಾತ್ಕಾಲಿಕ ಕ್ಷುದ್ರ ಸುಖವನ್ನು ಮುಮುಕ್ಷುವು ಅಪೇಕ್ಷಿಸಬಾರದು. 9. "ಯ ಆತ್ಮನಿ ತಿಷ್ಠನ್" "ಸರ್ವಭೂತೇಷು ಗೂಢಃ" ಇತ್ಯಾದಿ ಅನೇಕ ಶ್ರುತಿ

ಗಳಲ್ಲಿಯೂ, "ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್" ಇತ್ಯಾದಿ ಅನೇಕ ಬ್ರಹ್ಮಸೂತ್ರಗಳಲ್ಲೂ ಪರಬ್ರಹ್ಮನು ಸರ್ವ ಪ್ರತೀಕಗಳಲ್ಲಿಯೂ ಅಂತರ್ಗತನಾಗಿರುವನೆಂದೇ ಹೇಳಲ್ಪಟ್ಟಿರುತ್ತದೆ. ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಪುನಃ ಪುನಃ ಚೇತನಾ ಚೇತನಾತ್ಮಕವಾದ ಸಕಲ ಜಗತ್ತೂ ತನಗೆ ಪ್ರತೀಕ ಮಾತ್ರವೇ ಎಂದು ನಿರೂಪಿಸಿರುತ್ತಾನಾದುದರಿಂದ ಚಿತ್ತೈಕಾಗ್ರತೆಯನ್ನು ಅಪೇಕ್ಷಿಸುವವನೂ ಸಹ ಸರ್ವತ್ರ ಪರಮಾತ್ಮನು ಅಂತರ್ಯಾಮಿಯಾಗಿರುವನೆಂದು ಉಪಾಸನೆಯನ್ನು ಮಾಡಬೇಕೇ ಹೊರತು ತಾದಾತ್ಮ್ಯ ದೃಷ್ಟಿಯಿಂದ ಧ್ಯಾನವನ್ನು ಮಾಡಬಾರದು.* ತಾಮ್ರಾದಿಗಳಿಂದ ರಚಿತವಾದ ಅಚೇತನ ಪ್ರತೀಕಗಳಾಗಲೀ, ಇಂದ್ರಾದಿ ಚೇತನ ಪ್ರತೀಕಗಳಾಗಲೀ, ಸ್ವಭಾವತಃ ಪರಬ್ರಹ್ಮವಸ್ತುವಲ್ಲ. ಮತ್ತು ನಾವು ಅವರುಗಳನ್ನು ಬ್ರಹ್ಮದೃಷ್ಟಿಯಿಂದ ಧ್ಯಾನ ಮಾಡಿದರೆ ಅವುಗಳ ಜಡತ್ವ, ಜೀವತ್ವಾದಿ ಸ್ವಾಭಾವಿಕ ಧರ್ಮಗಳು ನಷ್ಟವಾಗಿ ಪರಬ್ರಹ್ಮತ್ವ ಪ್ರಾಪ್ತಿಯು ಅವುಗಳಿಗೆ ಬರಲಾರದು. ಹೀಗಿರುವಲ್ಲಿ ಯಾವ ರೀತಿಯಿಂದ ತಾನೇ ಪರಬ್ರಹ್ಮ ಪ್ರಸಾದವು ಪ್ರತೀಕ ಬ್ರಹ್ಮದೃಷ್ಟಿಯುಳ್ಳವನಿಗೆ ಬರುವುದು? ಆದುದರಿಂದ ನಿತ್ಯವ್ಯಕ್ತವಾದ ನಿರವಧಿಕ ಮಹೈಶ್ವರ್ಯಗಳಿಂದ ಪರಿಪೂರ್ಣನಾದ ಶ್ರೀ ಪರಮಾತ್ಮನನ್ನು ಶ್ರವಣ ಮನನಾದಿಗಳಿಂದ ಶುದ್ಧವಾದ ಮನಸ್ಸಿನಿಂದ ಸ್ವದೇಹದಲ್ಲಿಯೂ ಮತ್ತು ಇತರ ಉತ್ತಮ ಅಧಿಷ್ಠಾನಗಳಲ್ಲಿಯೂ ಸ್ವಯೋಗ್ಯತಾನುಸಾರವಾಗಿ ಪೂರ್ಣವಾದ ಜ್ಞಾನ ಭಕ್ತಿಗಳಿಂದ ಧ್ಯಾನ ಮಾಡುವುದೇ ಸಾಕ್ಷಾದಪರೋಕ್ಷ ಜ್ಞಾನ ಸಾಧನವಾಗಿ ಮುಕ್ತಿ ಫಲಪ್ರದವಾದ ಉಪಾಸನೆಯು. ಕೇವಲ ಪ್ರಪತ್ತಿಯಾಗಲೀ, ದ್ವೇಷಯುಕ್ತ ಧ್ಯಾನವಾಗಲೀ, ಪ್ರತೀಕದಲ್ಲಿ ಬ್ರಹ್ಮದೃಷ್ಟಿಯಾಗಲೀ ಶಾಸ್ತ್ರದಿಂದ ಅಂಗೀಕರಿಸಲ್ಪಟ್ಟಿಲ್ಲವಾದುದರಿಂದ ಸ್ವಕಪೋಲಕಲ್ಪಿತವಾದ ಮೋಹಕವಾದಗಳೆಂದು ಸಿದ್ಧವಾಗುವುದು.

---

* **ಸರ್ವಭೂತಸ್ಥ ಮಾತ್ಮಾನಂ** —(6. 29.) **ಯೋ ಮಾಂ ಪಶ್ಯತಿ ಸರ್ವತ್ರ** —(6. 30.); **ಸರ್ವಭೂತಸ್ಥಿತಂ ಯೋ ಮಾಂ ಭಜತಿ** –(7.31.) **ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ** –(11. 40.); **ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಂ** –(13. 27.); **ಸರ್ವತ್ರ ಸಮವಸ್ಥಿತಮೀಶ್ವರಂ** –(13. 28.); **ಮಾಮಾತ್ಮ ಪರದೇಹೇಷು** –(16. 18.); **ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ** —(18. 20.); **ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ** —(18. 61.) ಇತ್ಯಾದಿ ಬಹು ಸ್ಥಳಗಳಲ್ಲಿ ಪರಬ್ರಹ್ಮನಾದ ಶ್ರೀ ಕೃಷ್ಣನು ತನ್ನ ಸರ್ವಾಂತರ್ಯಾಮಿತ್ವವನ್ನೇ ಸ್ಪಷ್ಟವಾಗಿ ಉದ್ಘೋಷಿಸಿರುತ್ತಾನೆ. **ವಾಸುದೇವಸ್ಸರ್ವಮಿತಿ, ರಸೋಽಹಮಪ್ಸು ಕೌಂತೇಯ, ಪಾಂಡವಾನಾಂ ಧನಂಜಯಃ** ಇತ್ಯಾದಿ ವಾಕ್ಯಗಳು ಪ್ರತೀಕಬ್ರಹ್ಮತಾದಾತ್ಮ್ಯವನ್ನು ಬೋಧಿಸುವುದಿಲ್ಲವೆಂದು ಹಿಂದೆಯೇ ನಿರೂಪಿಸಲ್ಪಟ್ಟಿರುತ್ತದೆ. ಇನ್ನು ಪುನಃ ದಶಮಾಧ್ಯಾಯದ ಅರ್ಥವಿಸ್ತರವು ಮಾಡಲ್ಪಡುವುದು.

# 6. ಆರನೆಯ ಅಂಶವು.

## ಧ್ಯಾನಕಾರಣ ಸಾಮಗ್ರೀ ವಿಮರ್ಶೆಯು.

## ( ಮನನದಿಂದ ತತ್ತ್ವನಿಶ್ಚಯವು — ಶ್ರವಣವು. )

1. ಪ್ರಶ್ನೆ— ಸ್ವಾಮೀ ! ಅಪರೋಕ್ಷ ಜ್ಞಾನಹೇತುವಾದ ಧ್ಯಾನವು ಯಾವ ಸಾಧನಗಳಿಂದ ಹುಟ್ಟುವುದು ?

ಶ್ರೀ ಶ್ರೀಗಳವರು— ಷಷ್ಠಾಧ್ಯಾಯದ ಶ್ರೀ ಕೃಷ್ಣಾರ್ಜುನರ ಪ್ರಶ್ನೋತ್ತರ ಪರಾಮರ್ಶದಿಂದಲೇ ಈ ವಿಷಯವು ತಿಳಿದು ಬರುವುದು :—

ಅರ್ಜುನ ಉವಾಚ :—

**(1) ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಂ ||**
**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಂ |**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ ||**

ಶ್ರೀ ಭಗವಾನುವಾಚ :—

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಂ |**
**ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ||**
**ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ||**
**ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ||**

—(6. 32–36.)

ಅರ್ಜುನನು ಹೇಳುತ್ತಾನೆ :— ಎಲೈ ಮಧುಸೂದನನೇ ! ಸಾಮ್ಯಜ್ಞಾನ ರೂಪವಾದ ಯಾವ ಧ್ಯಾನಯೋಗೋಪಾಯವು ನಿನ್ನಿಂದ ಹೇಳಲ್ಪಟ್ಟಿತೋ ಅಂಥ ಯೋಗಕ್ಕೆ, ಮನಸ್ಸು ಚಂಚಲವಾಗಿರುವ ನಿಮಿತ್ತದಿಂದ, ದೃಢವಾದ ಸ್ಥಿತಿಯನ್ನು ಕಾಣೆನು. ( ಅದರ ಪ್ರಾಪ್ತಿಯೇ ಅಸಂಭಾವಿತವೆಂದು ಭಾವವು. ) ಎಲೈ ಕೃಷ್ಣನೇ ! ಮನಸ್ಸು ಅತಿ ಚಂಚಲವಾದುದು, ದೇಹೇಂದ್ರಿಯಾದಿಗಳಿಗೆ ಬಹಳ ಕ್ಷೋಭಕರ ವಾದುದು, ಬಲಿಷ್ಠವಾದುದು ( ಜಯಿಸುವುದಕ್ಕೆ ಅಶಕ್ಯವು ) ಮತ್ತು ದೃಢವಾಗಿರು ವುದು ( ಅನಾದಿ ವಿಷಯವಾಸನೆಯಿಂದ ಬೇರೂರಿರುವುದು ). ಆಕಾಶದಲ್ಲಿರುವ ಗಾಳಿಯನ್ನು ವಸ್ತ್ರಾದಿಗಳಿಂದ ನಿರೋಧಿಸುವುದು ಹೇಗೆ ಅಶಕ್ಯವೋ ಹಾಗೆಯೇ ಇಂಥ ಮನಸ್ಸಿನ ನಿಗ್ರಹವು ಅತ್ಯಂತ ದುಷ್ಕರವಾದುದು. ಶ್ರೀ ಕೃಷ್ಣನು ಹೇಳು ತ್ತಾನೆ :— ಎಲೈ ಮಹಾಬಾಹುವೇ ! ಮನಸ್ಸು ಚಂಚಲವು, ನಿಗ್ರಹಿಸುವುದು

ಕಷ್ಟವೆಂಬುದರಲ್ಲಿ ಸಂಶಯವಿಲ್ಲ. ಹಾಗಿದ್ದರೂ, ಎಲೈ ಕೌಂತೇಯನೇ ! (ಶಾಸ್ತ್ರ ಶ್ರವಣ ಮನನಾದಿಗಳಿಂದ ಪರಮಾತ್ಮನ ಉತ್ತಮತ್ವವನ್ನೂ, ವಿಷಯಗಳಲ್ಲಿ ಅಸಾರತೆಯನ್ನೂ ತಿಳಿದು,) ಅಸಾರವಾದ ವಿಷಯಗಳ ಭೋಗ ತ್ಯಾಗರೂಪವಾದ **ವೈರಾಗ್ಯದಿಂದಲೂ,** ಶಾಸ್ತ್ರಾವೃತ್ತಿರೂಪವಾದ ಅಥವಾ ಪುನಃ ಪುನಃ ವಿಷಯಗಳಲ್ಲಿ ಸಂಚರಿಸುವ ಮನಸ್ಸನ್ನು ಹಿಂತೆಗೆದುಕೊಂಡು ಬಂದು ಪರಮಾತ್ಮನ ಪಾದ ಮೂಲದಲ್ಲಿ ಇಡೋಣವೆಂಬ **ಅಭ್ಯಾಸದಿಂದಲೂ** ಅದು ಜಯಿಸಲ್ಪಡುತ್ತದೆ. ಅಭ್ಯಾಸ ವೈರಾಗ್ಯಗಳಿಂದ ಮನೋನಿಗ್ರಹವನ್ನು ಮಾಡದವನಿಗೆ ಧ್ಯಾನಯೋಗ ಪ್ರಾಪ್ತಿಯು ಅಸಾಧ್ಯವೆಂದು ನನ್ನ ನಿಶ್ಚಯವು. ಅಭ್ಯಾಸಾದಿಗಳಿಂದ ವಶೀಕೃತವಾದ ಮನಸ್ಸಿನಿಂದ ಯತ್ನ ಮಾಡುವವನಿಗೆ ಧ್ಯಾನಯೋಗವು ಆಸನ ಆಹಾರ ನಿಯಾಮಾದ್ಯುಪಾಯಗಳಿಂದ ಹೊಂದುವುದಕ್ಕೆ ಶಕ್ಯವಾಗುವುದು.

ಈ ವಾಕ್ಯಗಳಿಂದ ನಿಶ್ಚಲವಾದ ಧ್ಯಾನಕ್ಕೆ ವೈರಾಗ್ಯವೂ ಅಭ್ಯಾಸವೂ ಕಾರಣವೆಂದು ನಿಶ್ಚಿತವಾಗುವುದು. ,ಅಭ್ಯಾಸವೆಂದರೆ ಪ್ರತ್ಯಾಹಾರಾದಿ ಯೋಗ ಪ್ರಯತ್ನಗಳ ಪುನಃ ಪುನಃ ಆವರ್ತನವು; ಮತ್ತು ಗುರುಮುಖದಿಂದ ಶ್ರುತವಾದ ಶಾಸ್ತ್ರವನ್ನು ಪುನಃ ಪುನಃ ಆವೃತ್ತಿ ಮಾಡುವುದು ಎಂದು ಅರ್ಥವು. ವೈರಾಗ್ಯವೆಂದರೆ ಅಂತಃಕರಣ ಶುದ್ಧಿಯು, ಎಂದರೆ, ಮನಸ್ಸಿನಲ್ಲಿ ದುರ್ವಿಷಯಗಳ ಅಭಿಲಾಷಾ ರಾಹಿತ್ಯವು. ಮತ್ತು ಪರಮಾತ್ಮನಲ್ಲಿ ರತಿಯು. ಈ ರೀತಿಯಾದ ಭಕ್ತಿ ವಿರಕ್ತಿಗಳಿಂದ ಸಹಿತವಾದ ಉಪಾಯದಿಂದ ಒಡಗೂಡಿದ ವಿಧಿವಿಹಿತ ಮನನ ಜನಿತವಾದ ಅಖಂಡ ಸ್ಮೃತಿಯೇ ಧ್ಯಾನವು.

ಇಲ್ಲಿಯೂ ನಾವು ಪೂರ್ವದಲ್ಲಿ ನಿರೂಪಿಸಿರುವ ಪ್ರಮೇಯಗಳ ಅನುಸಂಧಾನವು ಆವಶ್ಯಕವು. ವಿಧಿವಿಹಿತ ವಿಶಿಷ್ಟ ಮನನವು ಧ್ಯಾನಕ್ಕೆ ಕಾರಣವು ಎಂದು ಹೇಳಿದರೂ ಮನನಜನಿತ ಭಕ್ತಿಯಿಂದ ಪ್ರಾಪ್ತವಾದ ಶ್ರೀ ಹರಿಯ ಪ್ರಸಾದವೇ ಧ್ಯಾನೋತ್ಪತ್ತಿಯಲ್ಲಿ ಮುಖ್ಯ ಸಾಧನವೆನ್ನಿಸುವುದು.

ಧ್ಯಾನಕ್ಕೆ ವೈರಾಗ್ಯ ಮತ್ತು ವಾಯುಜಯಾದಿಗಳಿಂದ ಶುದ್ಧವಾದ ಅಂತಃಕರಣವು ಕಾರಣವೆಂಬ ವಿಷಯದಲ್ಲಿ ಶ್ರೀ ಕೃಷ್ಣನ ಸಮ್ಮತಿಯನ್ನು ಮುಂದೆ ತೋರಿಸುತ್ತೇವೆ. ಶಾಸ್ತ್ರ ಮನನದಿಂದ ಪ್ರಾಪ್ತವಾದ ನಿಶ್ಚಯಾತ್ಮಕವಾದ ತತ್ತ್ವಜ್ಞಾನವು ಆವಶ್ಯಕವೆಂಬುದು ಸಪ್ತಮಾಧ್ಯಾಯದ ಆದ್ಯ ಶ್ಲೋಕದಿಂದಲೇ ತಿಳಿದು ಬರುವುದು. ಶ್ರೀ ಕೃಷ್ಣನು ಹೇಳುತ್ತಾನೆ :—

**(2) ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥**
**ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ ॥**
—(7. 1–2.)

ಎಲೈ ಪಾರ್ಥನೇ ! ನನ್ನಲ್ಲಿ ಅತ್ಯಂತ ಸ್ನೇಹಯುಕ್ತವಾದ ಮನಸ್ಸುಳ್ಳವನಾಗಿ, ನಾನೇ ( ಶ್ರೀ ಪರಮಾತ್ಮನೇ ) ಆಶ್ರಯನು ಎಂದು ತಿಳಿದು ಧ್ಯಾನಯೋಗವನ್ನು ಆಚರಿಸುವವನಾದ ನೀನು, ಸಂದೇಹವಿಲ್ಲದಿರುವಂತೆ ಭಗವತ್ಸ್ವರೂಪವನ್ನು ನೀನು ಹೇಗೆ ತಿಳಿಯುವೆಯೋ ಹಾಗೆ ತತ್ತ್ವೋಪದೇಶವನ್ನು ಮಾಡುತ್ತೇನೆ. ಕೇಳು ( ಮತ್ತು ಕೇಳಿ ಉಕ್ತ ಗುಣಗಳ ಜ್ಞಾನಪೂರ್ವಕವಾಗಿ ಭಗವದುಪಾಸನೆಯನ್ನು ಮಾಡು ಎಂದು ಭಾವವು ). ಎಲೈ ಪಾರ್ಥನೇ ! ನಾನು ನಿನಗೆ ವಿಶೇಷ ತಿಳಿಯಲ್ಪಡಬೇಕಾದ ನನ್ನ ಮಹಿಮೆಯಿಂದ ಸಹಿತವಾಗಿ, ಸಾಮಾನ್ಯವಾಗಿ ತಿಳಿಯಬೇಕಾದ ನನ್ನ ಮಹಿಮೆಯನ್ನೂ ಸಹ ಸಂಪೂರ್ಣವಾಗಿ ತಿಳಿಸುತ್ತೇನೆ. ನಾನು ಹೇಳಿದ ತತ್ತ್ವವನ್ನು ತಿಳಿದ ನಂತರ ಪುನಃ ಲೋಕದಲ್ಲಿ ತಿಳಿಯಲ್ಪಡಬೇಕಾದ ಅವಶ್ಯ ಜ್ಞಾತವ್ಯ ವಿಷಯವು ಇರುವುದಿಲ್ಲ.

ಈ ವಾಕ್ಯಗಳ ಪರ್ಯಾಲೋಚನೆಯಿಂದ, ಧ್ಯಾನ ಮಾಡುವವನಿಗೆ ಭಗವನ್ಮಹಿಮಾ ಜ್ಞಾನವು ಆವಶ್ಯಕವೆಂದೂ, ಅದು ಕೃಷ್ಣನೇ ಆದಿಯಾದಂಥಾ ಸಂಶಯೋಚ್ಛೇದನ ಮಾಡುವುದರಲ್ಲಿ ಸಮರ್ಥರಾದ ಗುರುಗಳ ಮುಖದಿಂದ ಶ್ರವಣ ಮಾಡುವುದರಿಂದ ಬರಬೇಕೆಂದೂ ಮತ್ತು ಶ್ರುತವಾದ ತತ್ತ್ವವು ಮನನ ಪ್ರಭಾವದಿಂದ ನಿಸ್ಸಂಶಯವಾಗುವಂತೆ ಯೋಗಿಯ ಜ್ಞಾನಕ್ಕೆ ವಿಷಯವಾಗಿರಬೇಕೆಂದೂ ಸಿದ್ಧವಾಗುವುದು. ಸಂಶಯವಿದ್ದರೆ ಚಿತ್ತೈಕಾಗ್ರತೆಯು ಬರುವುದಿಲ್ಲ; ಮತ್ತು ಮನಸ್ಸು ಡೋಲಾಯಮಾನವಾಗುವುದಕ್ಕೆ ಆರಂಭವಾಗುವುದು.

ಈ ರೀತಿಯಾಗಿ ಭಗವನ್ಮಹಿಮೋಪದೇಶರೂಪವಾದ ಶ್ರೀ ಕೃಷ್ಣನ ಪ್ರವೃತ್ತಿಯೇ ಧ್ಯಾನಾದಿಗಳಿಗೆ ಶ್ರವಣ ಮನನ ಜನಿತ ತತ್ತ್ವನಿಶ್ಚಯವು ಆವಶ್ಯಕವೆಂದು ತೋರಿಸುವುದು. ಆದುದರಿಂದಲೇ ಶ್ರೀ ಕೃಷ್ಣನು ಪುನಃ ಪುನಃ ಭಗವನ್ಮಹಿಮೆಯನ್ನು ಉಪದೇಶ ಮಾಡುತ್ತೇನೆಂದು ಪ್ರತಿಜ್ಞೆ ಮಾಡಿರುತ್ತಾನೆ ಮತ್ತು ಯುಕ್ತಿಗಳಿಂದ ಸಹಿತವಾಗಿ ಪ್ರತಿಪಾದಿಸಿರುತ್ತಾನೆ :—

**(3) ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥**
—(9. 1.)

ಎಲೈ ಪಾರ್ಥನೇ ! ಯಾವುದನ್ನು ತಿಳಿಯುವುದರಿಂದ ಜ್ಞಾನದ್ವಾರಾ ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದಲ್ಪಡುವಿಯೋ ಅಂಥ ಇಗೋ ! ಅತಿ ಗೋಪ್ಯವಾದ ಸಾಮಾನ್ಯ ಜ್ಞಾತವ್ಯ ತತ್ತ್ವವನ್ನೂ ವಿಶೇಷ ಜ್ಞಾತವ್ಯ ತತ್ತ್ವಗಳನ್ನೂ ಅಸೂಯಾರಹಿತನಾದ ನಿನಗೋಸ್ಕರ ಉಪದೇಶ ಮಾಡುತ್ತೇನೆ.

ಪುನಃ ತಾನು ಹೇಳುವ ತತ್ತ್ವವು ವೇದಸಮ್ಮತವೆಂದೂ, ಬ್ರಹ್ಮಸೂತ್ರೋಕ್ತ

ಯುಕ್ತಿಗಳಿಂದ ನಿರ್ಣಯ ಮಾಡಲ್ಪಟ್ಟಿರುವುದೆಂದೂ ಶ್ರೀ ಕೃಷ್ಣನು ಪ್ರಶಂಸನೆ ಮಾಡಿರುತ್ತಾನೆ :—

**(4) ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್ ।**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತಂ ॥**
—(13. 5.)

ಹೇ ಕೌಂತೇಯ ! ನಾನು ನಿರೂಪಿಸುವ ಕ್ಷೇತ್ರಾದಿ ಸ್ವರೂಪವು ಪೂರ್ವದಲ್ಲಿ ಸರ್ವಜ್ಞರಾದ ಋಷಿಗಳಿಂದ ಬಹು ವಿಧವಾಗಿ ನಿರೂಪಿಸಲ್ಪಟ್ಟಿರುವುದು. ನಾಲ್ಕು ವೇದಗಳಲ್ಲಿಯೂ ಪ್ರತಿಪಾದಿಸಲ್ಪಟ್ಟಿರುವುದು. ಮತ್ತು ಹೇತು ( ಯುಕ್ತಿ, ಅನುಮಾನ, ಕಾರಣ ) ಗಳಿಂದ ಸಹಿತವಾದ ಬ್ರಹ್ಮಸೂತ್ರಗಳಿಂದಲೂ ನಿರ್ಣಯ ಮಾಡಲ್ಪಟ್ಟಿರುವುದು.

ಶ್ರೀ ಕೃಷ್ಣನ ಈ ವಾಕ್ಯಗಳಿಂದ, ನಿಶ್ಚಿತವಾದ ಶಾಸ್ತ್ರಾರ್ಥವು ಧ್ಯಾನಕ್ಕೆ ಅತ್ಯವಶ್ಯಕವೆಂದು ಸಿದ್ಧವಾಯಿತು. ಶ್ರೀ ಕೃಷ್ಣನು ತನ್ನ ಮಾತು ಪ್ರಮಾಣವೆನ್ನುವುದರಲ್ಲಿ ಋಷಿ ಪರಂಪರೆಯಿಂದ ತಾನು ಹೇಳುವ ತತ್ವವು ಉಪದಿಷ್ಟವಾಗಿರುವುದೆಂದೂ, ನಾಲ್ಕು ವೇದಗಳಲ್ಲೂ ಪ್ರತಿಪಾದಿತವಾಗಿರುವುದೆಂದೂ ಮತ್ತು ಬ್ರಹ್ಮಸೂತ್ರದಲ್ಲಿ ಯುಕ್ತಿಗಳಿಂದ ನಿಶ್ಚಿತವಾಗಿರುವುದೆಂದೂ ಮೂರು ಯುಕ್ತಿಗಳನ್ನು ಉಪಯೋಗಿಸಿರುತ್ತಾನೆ.

ಇದರಿಂದ ಬ್ರಹ್ಮಸೂತ್ರೋಕ್ತ ಯುಕ್ತಿಗಳಿಂದ ತತ್ವ ನಿರ್ಣಯವನ್ನು ಮಾಡಿಕೊಳ್ಳುವುದು ಕೃಷ್ಣನಿಗೆ ಅತಿ ಸಮ್ಮತವೆಂದು ಸಿದ್ಧವಾಯಿತು. ನಾನೂ ಸಹ ಅಲ್ಲಿ ನಿರ್ಣೀತವಾದ ಶಾಸ್ತ್ರಾರ್ಥವನ್ನು ಮಾತ್ರ ನಿನಗೆ ಉಪದೇಶ ಮಾಡುತ್ತೇನೆ ಎಂದು ಅರ್ಜುನನಿಗೆ ಹೇಳಿರುತ್ತಾನಾದುದರಿಂದ ಬ್ರಹ್ಮಸೂತ್ರೋಕ್ತ ರೀತಿಯಲ್ಲಿ ಮನನವೇ ಸಕಲ ಸಂಶಯ ನಿವರ್ತಕವಾದ ಸಮಗ್ರ ಶಾಸ್ತ್ರ ಜ್ಞಾನಸಾಧನವೆಂದೂ ಸಿದ್ಧವಾಗುವುದು.

“ ಮನನಂ ಯುಕ್ತಿಭಿರನುಚಿಂತನಂ ” ಎಂದು ಹೇಳಿರುವ ಮೇರೆಗೆ ಮನನವೆಂದರೆ ಶ್ರುತವಾದ ವಾಕ್ಯಾರ್ಥವು ಸರಿಯೋ ಅಲ್ಲವೋ ಎಂದು ಸಂಶಯವು ಬಂದರೆ ಸಾಧಕಗಳಾದ ಅನುಮಾನಗಳಿಂದ ತನಗೆ ಉಪದಿಷ್ಟವಾದ ತತ್ವವು ಅತ್ಯಂತ ಪ್ರಾಮಾಣಿಕವೆಂದು ನಿಶ್ಚಯಿಸುವುದು. ಸಂಶಯವು ಧ್ಯಾನಕ್ಕೆ ಪ್ರತಿಬಂಧಕವು ಎಂದು ಶ್ರೀಕೃಷ್ಣನು ಹೇಳಿರುತ್ತಾನೆ :—

**(5) ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥**
—(4. 40.)

ಜ್ಞಾನಹೀನನು, ಶ್ರದ್ಧಾವಿರಹಿತನು, ಮತ್ತು ತತ್ವವಿಷಯಕವಾದ ಸಂಶಯ ಮನಸ್ಕನಾದವನು ನರಕಾದಿಗಳನ್ನು ಹೊಂದುತ್ತಾನೆ, ಸಂಶಯಪೂರ್ಣವಾದ ಮನಸ್ಸುಳ್ಳವನಿಗೆ ಇಹಲೋಕದಲ್ಲಿ ಸುಖವಿಲ್ಲ, ಪರಲೋಕಪ್ರಾಪ್ತಿಯೂ ಇಲ್ಲ.

ಆದುದರಿಂದ, "ಧ್ಯಾನಂ ನಿಶ್ಚಿತ ತತ್ತ್ವಸ್ಯ" ಎಂದು ಹೇಳಿರುವಂತೆ, ಮನನ ಮಾಡಿ ತತ್ವನಿಶ್ಚಯದಿಂದ ಸಂಶಯವನ್ನು ಪರಿಹರಿಸಿಕೊಳ್ಳಬೇಕೆಂದು ಶ್ರೀ ಕೃಷ್ಣನು ವಿಧಿಸುತ್ತಾನೆ :—

**(6) ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ ।**
**ಛಿತ್ತ್ವೈವಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥**
—(4. 42.)

ಎಲೈ ಅರ್ಜುನನೇ ! ತತ್ವಜ್ಞಾನವಿಲ್ಲದಿರುವುದರಿಂದ ಉಂಟಾದ ಮನೋಗತ ವಾದ ಸಂಶಯವನ್ನು ಪರೋಕ್ಷ ಜ್ಞಾನವೆಂಬ ಖಡ್ಗದಿಂದ ಛೇದನ ಮಾಡಿ ಅಪ ರೋಕ್ಷ ಜ್ಞಾನೋಪಾಯರೂಪವಾದ ಧ್ಯಾನವನ್ನಾಚರಿಸು. *

ಮನನಜನ್ಯವಾದ ಪರೋಕ್ಷ ತತ್ವಜ್ಞಾನವು ಧ್ಯಾನಕ್ಕೆ ಅತ್ಯವಶ್ಯಕವಾದುದ ರಿಂದಲೇ, ಧ್ಯಾನಯೋಗವನ್ನಾಚರಿಸುವವನು "ಜ್ಞಾನವಿಜ್ಞಾನತೃಪ್ತಾತ್ಮಾ" ಎಂದರೆ ಸಾಮಾನ್ಯ ತತ್ವಜ್ಞಾನ ವಿಶೇಷ ತತ್ವಜ್ಞಾನಗಳಿಂದ ಪೂರ್ಣವಾದ ಮನಸ್ಸುಳ್ಳವ ನಾಗಬೇಕು ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ.

"ಅಧ್ಯಾತ್ಮಜ್ಞಾನನಿತ್ಯತ್ವಂ ತತ್ವಜ್ಞಾನಾರ್ಥದರ್ಶನಂ" ಎಂದೂ "ಅಧ್ಯಾತ್ಮ ನಿತ್ಯಾಃ" ಎಂದೂ "ಬುದ್ಧ್ಯಾ ವಿಶುದ್ಧಯಾ ಯುಕ್ತೋ" ಎಂದೂ ಶ್ರೀ ಕೃಷ್ಣನು ಅಲ್ಲಿ ಅಲ್ಲಿ ಮನನಾದಿಗಳಲ್ಲಿ ಮುಮುಕ್ಷುವು ಆಸಕ್ತನಾಗಿರಬೇಕೆಂದು ಉಪದೇಶ ಮಾಡಿರುತ್ತಾನೆ. ಶಾಸ್ತ್ರ ಮನನವು ಮೋಕ್ಷಸಾಧಕವಾದ ಪ್ರಯತ್ನಗಳಲ್ಲಿ ಅತ್ಯಂತ ಪ್ರಶಸ್ತವೆಂಬುದನ್ನು ಶ್ರೀ ಕೃಷ್ಣನು ಉತ್ಕೃಷ್ಟ ಫಲಕಥನಪೂರ್ವಕವಾಗಿ ಈ ವಾಕ್ಯ ದಲ್ಲಿ ಸೂಚಿಸಿರುತ್ತಾನೆ :—

**(7) ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ।** —(6. 44.)

ಮೋಕ್ಷಸಾಧನ ಶಾಸ್ತ್ರವನ್ನು ವಿಚಾರ ಮಾಡುವವನೂ ಕೂಡ ವಿಧಿನಿಷೇಧ ರೂಪವಾದ ಬಂಧವನ್ನು ದಾಟುತ್ತಾನೆ (ಎಂದರೆ ಕ್ರಮವಾಗಿ ಮುಕ್ತನಾಗುತ್ತಾನೆ. ಹೀಗಿರುವಲ್ಲಿ ಮೋಕ್ಷಸಾಧನವನ್ನು ಸಂತತವಾಗಿ ಅನುಷ್ಠಾನ ಮಾಡುವವನು ಮುಕ್ತ ನಾಗುವನೆಂದು ಹೇಳುವುದರಲ್ಲಿ ಸಂಶಯವೇನು ಎಂದು ಭಾವವು.)

---

* ಈ ಶ್ಲೋಕಕ್ಕೆ ಮತ್ತೊಂದು ಅರ್ಥವು ಹಿಂದೆಯೇ ನಿರೂಪಿತವಾಗಿರುತ್ತದೆ. ಅಪರೋಕ್ಷ ಜ್ಞಾನವೆಂಬ ಖಡ್ಗದಿಂದ ಸಕಲ ಸೂಕ್ಷ್ಮವಾದ ಸಂಶಯಗಳನ್ನೂ ಸಂಹರಿಸಿ ವಿಷ್ಣುಸೇವಾರೂಪವಾದ ಕರ್ಮವನ್ನಾಚರಿಸಲು ಎಂದಾದರೂ ಅರ್ಥವನ್ನು ಮಾಡಬಹುದು.

2. ಶ್ರವಣವು ಮನನ ಕಾರಣವೆಂದು ಪೂರ್ವೋಕ್ತ ಅನೇಕ ವಾಕ್ಯಗಳಿಂದಲೇ ನಿಶ್ಚಿತವಾಗುವುದು, ಶ್ರೀ ಕೃಷ್ಣನು ಸ್ಪಷ್ಟವಾಗಿಯೂ ಹೇಳಿರುತ್ತಾನೆ :—

**(1) ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥**

—(4. 34.)

ಎಲೈ ಪಾರ್ಥನೇ ! ಆದುದರಿಂದ ದಂಡಪ್ರಣಾಮ, ಪುನಃ ಪುನಃ ಪ್ರಶ್ನೆ ಮತ್ತು ಸೇವೆಗಳನ್ನು ಮಾಡಿ ಜ್ಞಾತವ್ಯ ತತ್ವವನ್ನು ಜ್ಞಾನಿಗಳಾದ ಗುರುಗಳಿಂದ ಸಂಪಾದಿಸು. ಅಪರೋಕ್ಷ ಜ್ಞಾನಿಗಳು ನಿನ್ನ ಸೇವಾದಿಗಳಿಂದ ಪ್ರಸನ್ನರಾಗಿ ನಿನಗೆ ತತ್ವಜ್ಞಾನವನ್ನು ಉಪದೇಶ ಮಾಡುವರು

**(2) ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ॥**

—(10. 1.)

ಎಲೈ ಮಹಾಬಾಹುವೇ ! ಪುನಃ ನಾನು ಹೇಳುವ ಉತ್ತಮ ವಾಕ್ಯವನ್ನು ಕೇಳು.

ಈ ರೀತಿಯಾದ ಶ್ರೀ ಕೃಷ್ಣನ ವಚನಪೂರ್ವಕವಾದ ಪ್ರವೃತ್ತಿಯಿಂದಲೂ ಶ್ರವಣವು ಜ್ಞಾನಸಾಧನವೆಂದು ನಿಶ್ಚಿತವಾಗುತ್ತದೆ. ಪುನಃ,

**(3) ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ।**
**ಕಚ್ಚಿದಜ್ಞಾನಸಂಮೋಹಃ ಪ್ರಣಷ್ಟಸ್ತೇ ಧನಂಜಯ ॥**

—(18. 72.)

ಎಲೈ ಅರ್ಜುನನೇ ! ನನ್ನ ತತ್ತ್ವೋಪದೇಶವು ಏಕಾಗ್ರ ಮನಸ್ಸಿನಿಂದ ನಿನ್ನಿಂದ ಶ್ರುತವಾಯಿತೇ ? ನಿನ್ನ ಅಜ್ಞಾನ ಮಿಥ್ಯಾ ಜ್ಞಾನಗಳು ನಿವೃತ್ತವಾದವೇ ?

ಎಂಬ ಶ್ರೀ ಕೃಷ್ಣನ ಪ್ರಶ್ನೆಯಿಂದ ಶ್ರವಣವು ಅಜ್ಞಾನವನ್ನೂ ವಿಪರೀತ ಜ್ಞಾನವನ್ನೂ ನಾಶ ಮಾಡುವುದರಲ್ಲಿ ಸಮರ್ಥವೆಂದು ತೋರುತ್ತದೆ. ವಸ್ತುತಃ ಶ್ರವಣವು ಅಜ್ಞಾನ ನಾಶಕವು; ಮನನವು ಸಂಶಯವಿಪರ್ಯಯನಾಶಕವು. ಹೀಗಿರುವುದರಿಂದ ಅರ್ಜುನನಿಗೆ ಶ್ರೀ ಕೃಷ್ಣನ ಉಪದೇಶದಿಂದ ಶ್ರವಣ ಮನನಗಳೆರಡರ ಫಲವೂ ಆಗಿರುವುದೆಂದು ಸಿದ್ಧವಾಗುವುದು. ಇದು ಯುಕ್ತವೇ. ಶ್ರೀ ಕೃಷ್ಣನು ವೇದಾಂತ ಸೂತ್ರೋಕ್ತ ಹೇತುಗಳ ಉಪನ್ಯಾಸಪೂರ್ವಕವಾಗಿಯೇ ಪದೇಪದೇ ಶಾಸ್ತ್ರಾರ್ಥವನ್ನು ನಿರೂಪಣೆ ಮಾಡಿರುವನು. ಆದುದರಿಂದ ಗೀತೆಯು ತತ್ವನಿರೂಪಕವಾದ ಗ್ರಂಥವಾಗಿರುವುದಲ್ಲದೆ ಬ್ರಹ್ಮಮೀಮಾಂಸಾ ಶಾಸ್ತ್ರದಂತೆ ಯುಕ್ತಿ ಪ್ರತಿಪಾದಕವಾಗಿಯೂ ಇರುವುದು.

3. ಶ್ರವಣ ಮನನಗಳು ಧ್ಯಾನಕ್ಕೆ ಸಾಕ್ಷಾತ್ಕಾರಣವೆಂಬಲ್ಲಿ ಯುಕ್ತಿಯೂ ಇರುವುದು. ಚಿತ್ತೈಕಾಗ್ರತೆಯಿಂದ ನಿರಂತರ ಮಾನಸಿಕ ಭಗವನ್ಮೂರ್ತ್ಯವಲೋಕನವು

ಧ್ಯಾನವು. ಅದು ಭಗವದ್ಭಕ್ತಿರಹಿತವಾದರೆ ಅನಾಥ್ಯವು ಮತ್ತು "ಧ್ಯಾನಂ ಭಕ್ತಿ ಸಮನ್ವಿತಃ" ಇತ್ಯಾದಿ ಗೀತಾವಾಕ್ಯಗಳ ಬಲದಿಂದ ಭಕ್ತಿಪೂರ್ವಕವಾಗಿದ್ದರೇನೇ ಫಲಪ್ರದವಾಗುವುದು. ಅಂಥ ಭಗವದ್ಭಕ್ತಿಯು ಮಾಹಾತ್ಮ್ಯ ಜ್ಞಾನದಿಂದಲೇ ಬರಬೇಕು. ಭಗವನ್ಮಹಿಮೆಯ ಜ್ಞಾನವು ಭಗವಂತನನ್ನು ಪ್ರತಿಪಾದನೆ ಮಾಡುವ ವೇದಗಳಿಂದಲೂ ತದನುಸಾರಿಯಾದ ಗ್ರಂಥಗಳ ಶ್ರವಣದಿಂದಲೂ ಬರುವುದು. "ವೇದೈಶ್ಚ ಸರ್ವೈರಹಮೇವ ವೇದ್ಯಃ" ಎಂದು ಶ್ರೀ ಕೃಷ್ಣನೇ ಹೇಳಿರುತ್ತಾನಷ್ಟೆ! ವೇದಾದಿಗಳಿಂದ ಶ್ರುತವಾದ ಅರ್ಥದಲ್ಲಿ (ವಿಷ್ಣುವೇ ಸರ್ವೋತ್ತಮನೆಂಬ ವಿಷಯದಲ್ಲಿ) ಅದ್ವೈತಾದಿ ತಾಮಸ ಶಾಸ್ತ್ರಗಳಿಂದ ಆಹಿತವಾದ ಸಂಶಯವು ಉಪಕ್ರಮಾದಿ ಲಿಂಗಗಳ ಪರ್ಯಾಲೋಚನೆಯಿಂದಲೂ, ವೇದಾದಿಗಳಿಗೇ ಪಾಶುಪತಾದಿ ಶಾಸ್ತ್ರಾಪೇಕ್ಷಯಾ ಪ್ರಾಬಲ್ಯಸಾಧಕವಾದ ಹೇತುಗಳ ಪರ್ಯಾಲೋಚನೆಯಿಂದಲೂ ನಿವೃತ್ತವಾಗಿ "ವ್ಯವಸಾಯಾತ್ಮಿಕಾ ಬುದ್ಧಿಃ" ಎಂದರೆ ಮೋಕ್ಷೋಪಯೋಗಿಯಾದ ಸತ್ತತ್ತ್ವ ನಿಶ್ಚಯವು ಉಂಟಾಗುವುದು. ಇದೇ ಮನನವು. ಇದರಿಂದ ಭಗವಂತನ ಮಹಿಮೆಯು ನಿಶ್ಚಿತವಾಗಿ ಭಕ್ತಿಯು ವೃದ್ಧಿಯಾಗುವುದರಿಂದ ಹರಿಪ್ರಸಾದದಿಂದ ಮಾನಸಿಕ ಧ್ಯಾನವು ಉತ್ಪನ್ನವಾಗುವುದು.

4. ಶ್ರವಣ ಮನನಗಳು ವಿಧ್ಯುಕ್ತವಾಗಿ ನಡೆದರೇನೇ ಉತ್ಪನ್ನವಾದ ಪರೋಕ್ಷ ಜ್ಞಾನವು ಮೋಕ್ಷೋಪಯೋಗಿಯಾಗುವುದು. "ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ" ಇತ್ಯಾದಿ ವಿಧಿವಾಕ್ಯಗಳ ಬಲದಿಂದಲೂ, ಹದಿನೆಂಟನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣನು ಮಾಡಿರುವ ಗೀತೋಪದೇಶಕ್ಕೆ ಅರ್ಹರಾದ ಅಧಿಕಾರಿಗಳ ವರ್ಣನೆಯಿಂದಲೂ ಈ ವಿಷಯವು ಸಿದ್ಧವಾಗುವುದು.

5. ಸಾತ್ವಿಕ ಜ್ಞಾನವನ್ನು ಶ್ರೀ ಕೃಷ್ಣನು ನಿರೂಪಿಸಿರುತ್ತಾನೆ :—

(1) **ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ।**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ವಿಕಂ॥**
—(18. 20.)

ಪರಸ್ಪರ ಭಿನ್ನವಾದ ಅನಂತ ಪ್ರಾಣಿಗಳಲ್ಲಿಯೂ, ಜಡ ವಸ್ತುಗಳಲ್ಲಿಯೂ ಒಬ್ಬನೇ ನಿತ್ಯನಾದ, ಅಧಿಷ್ಠಾನವು ನಾಶ ಹೊಂದಿದರೂ ತಾನು ನಾಶ ಹೊಂದದ, ತನ್ನ ಅನಂತ ರೂಪಗಳಲ್ಲಿ ಪರಸ್ಪರ ಭೇದವಿಲ್ಲದ ಪರಮಾತ್ಮನು ಇರುವನೆಂದು ಯಾವ ಜ್ಞಾನದಿಂದ ತಿಳಿಯುವನೋ ಅದು ಸಾತ್ವಿಕ ಜ್ಞಾನವು.

ಶ್ರವಣ ಮನನಗಳಿಂದ ಬರುವ ಪರಮಾತ್ಮವಿಷಯಕವಾದ ಸಾಮಾನ್ಯ ಜ್ಞಾನವು ಮತ್ತು ವಿಶೇಷ ಜ್ಞಾನವೂ ಇವುಗಳ ಪ್ರಕಾರವೂ ಸಪ್ತಮ ಮತ್ತು ನವಮೋಧ್ಯಾಯಗಳಲ್ಲಿಯೂ, ದ್ವಿತೀಯ ಮತ್ತು ತ್ರಯೋದಶಾಧ್ಯಾಯಗಳಲ್ಲಿಯೂ ಸಹ ನಿರೂಪಿತವಾಗಿರುವುದು. ಶ್ರೀ ಕೃಷ್ಣನ ಅಭಿಪ್ರಾಯಾನುಸಾರವಾದ ನಿಜ

ತತ್ವವನ್ನು ಸಂಕ್ಷೇಪವಾಗಿ ಉಪಪಾದಿಸಿ ತೋರಿಸಿರುತ್ತೇವೆ. ಮುಂದೆ ಇನ್ನೂ ಸ್ವಲ್ಪ ವಿಶದವಾಗಿ ನಿರೂಪಿಸಿರುವೆವು.

---

# 7. ಏಳನೆಯ ಅಂಶವು.

## ಧ್ಯಾನಕಾರಣ ಸಾಮಗ್ರಿ ವಿಮರ್ಶೆಯು— ವೈರಾಗ್ಯವು.

1. **ಶ್ರೀ ಶ್ರೀಗಳವರು**— ಧ್ಯಾನಕ್ಕೆ ಪ್ರಧಾನಾಂಗರೂಪವಾದ ಶ್ರವಣ ಮನನಗಳು ನಮ್ಮಿಂದ ನಿರೂಪಿತವಾದವು. ಇನ್ನು ಅಂತಃಕರಣ ಶುದ್ಧಿ ಮನೋಜಯ, ವೈರಾಗ್ಯ, ಸಂನ್ಯಾಸ, ಮನಃಪ್ರಸಾದಾದಿ ಅನೇಕ ನಾಮಗಳಿಂದ ಕರೆಯಲ್ಪಡುವ ಆವಶ್ಯಕವಾದ ದ್ವಿತೀಯಾಂಗದ ಸ್ವರೂಪವನ್ನು ಅದರ ಉತ್ಪತ್ತಿ ಕಾರಣದಿಂದ ಸಹಿತವಾಗಿ ನಿರೂಪಿಸುತ್ತೇವೆ.

ಸೂಕ್ಷ್ಮವಾಗಿ ವಿಚಾರ ಮಾಡಿದರೆ ಭಕ್ತಿ ವಿರಕ್ತಿಗಳಿಂದ ಸಹಿತವಾದ ಚಿತ್ತವೃತ್ತಿಯೇ ಶುದ್ಧಾಂತಃಕರಣವೆನ್ನಿಸುವುದು. ಇದರಿಂದ ಸಮನ್ವಿತವಾದ ಸಂತತ ಭಗವನ್ಮಹಿಮಾಚಿಂತನೆಯೇ ಅಪರೋಕ್ಷ ಜ್ಞಾನಜನಕವಾದ ಧ್ಯಾನವು.

**ಪ್ರಶ್ನೆ**— ಸ್ವಾಮೀ ! ಇಂಥ ಶುದ್ಧಾಂತಃಕರಣವೂ ಸಹ ಶ್ರವಣ ಮನನಗಳಿಂದಲೇ ಬರಬಹುದಷ್ಟೆ ? ಶ್ರವಣ ಮನನಗಳಿಂದ ಪರಮಾತ್ಮನ ಸರ್ವೋತ್ತಮತ್ವವು ತಿಳಿದ ಮೇಲೆ, ಜಗತ್ತು ಅಸಾರವು, ಅನಿತ್ಯವು ಎಂಬ ಜ್ಞಾನವೂ ಸಹಜವಾಗಿಯೇ ಶಾಸ್ತ್ರಗಳಿಂದ ಹುಟ್ಟುವುದು. ಅದರಿಂದ ಪ್ರಪಂಚದಲ್ಲಿ ವಿರಕ್ತಿಯೂ, ಪರಬ್ರಹ್ಮನಲ್ಲಿ ಪ್ರೀತಿಯೂ ಉದಯಿಸುವುವು. ಯದ್ಯಪಿ ಇಂದ್ರಿಯನಿಗ್ರಹವು, ರಾಗ ದ್ವೇಷರಾಹಿತ್ಯಾದಿಗಳು, ನಿಷ್ಕಾಮ ಕರ್ಮಾನುಷ್ಠಾನವೂ ಸಹ ಚಿತ್ತಶುದ್ಧಿಗೆ ಕಾರಣವಾಗುವುವು. ಆದರೆ ಇವುಗಳೆಲ್ಲವೂ ಶ್ರವಣ ಮನನಗಳಿಂದಲೇ ಬರುವುವು. ಶ್ರವಣ ಮನನಗಳಿಂದ ಪರಮಾತ್ಮನೊಬ್ಬನೇ ಸರ್ವಶ್ರೇಷ್ಠನಾದ ನಿತ್ಯ ಸುಖಪ್ರದನಾದ ಪರಬ್ರಹ್ಮನೆಂದೂ ಲೌಕಿಕ ವಿಷಯಗಳು ಪ್ರತಿಬಂಧಕಗಳು ಮತ್ತು ಪರಮಾತ್ಮನ ಪ್ರಾಪ್ತಿಗೆ ವಿರೋಧಿಗಳೆಂದೂ ತಿಳಿದ ಮೇಲೆ ಯಾವನು ತಾನೇ ವಿಷರೂಪವಾದ ಶಬ್ದಸ್ಪರ್ಶಾದಿಗಳನ್ನು ಆಕಾಂಕ್ಷೆಮಾಡುವನು ? ಮತ್ತು ಯಾವ ಪ್ರಾಜ್ಞನು ತನ್ನ ಇಂದ್ರಿಯಗಳಿಂದ ಬಂಧಕವಾದುದೆಂದು ಜ್ಞಾತವಾಗಿರುವ ವಿಷಯ ಭೋಗಗಳನ್ನುಮಾಡುವನು ? ಆದುದರಿಂದ ರಾಗ-ದ್ವೇಷರಾಹಿತ್ಯರೂಪವಾದ ಸಂನ್ಯಾಸವೂ, ಇಂದ್ರಿಯನಿಗ್ರಹವೂ ಸಹ ಶ್ರವಣ ಮನನಗಳಿಂದಲೇ ಬರುವುವು. ಹೀಗೆಯೇ ನಿಷ್ಕಾಮವಾದ ಭಗವದಾರಾಧನೆಯಲ್ಲಿ ರತಿಯೂ ಕೂಡ ಶ್ರವಣ ಮನನಗಳಿಂದ ಪರಾಪರತತ್ವ ಜ್ಞಾನವುಳ್ಳವನಿಗೆ ಸಹಜವಾಗಿಯೇ ಬರುವುದು. ಆದುದರಿಂದ ಸರ್ವ

ಪ್ರಕಾರದಲ್ಲೂ ಶ್ರವಣ ಮನನಗಳು ಭಕ್ತಿಗೆ ಕಾರಣವಾಗುವುವು; ಭಕ್ತಿಯು ಧ್ಯಾನ ಜನಕವಾದ ಹರಿಪ್ರಸಾದಕ್ಕೆ ಕಾರಣವಾಗುವುದು; ಆದರಿಂದ ಧ್ಯಾನವು ಉತ್ಪನ್ನ ವಾಗುವುದು. ಹೀಗೆ ಹೇಳಿದರೆ ತಮ್ಮ ಉಪಪಾದನೆಗೂ ಅವಿರುದ್ಧವೇ ಆಗಿರುವುದು. "ಶ್ರೋತವ್ಯೋ ಮಂತವ್ಯೋ ನಿಧಿಧ್ಯಾಸಿತವ್ಯಃ" ಎಂಬ ಶ್ರುತಿಗೂ ಅನುಕೂಲವಾಗಿ ರುವುದು. ಹೀಗಿರುವಲ್ಲಿ ಧ್ಯಾನೈಕದಳವಾದ ಚಿತ್ತಶುದ್ಧಿಗೆ ಶ್ರವಣ ಮನನಾತಿರಿಕ್ತ ವಾದ ಬೇರೆ ಕಾರಣಾನ್ವೇಷಣಾರ್ಥವಾಗಿ ತಾವು ವಿಚಾರವನ್ನು ಆರಂಭಿಸಿದುದು ಏತಕ್ಕೆ ? ತಮ್ಮ ಉಪಪಾದನೆಯನ್ನು ನೋಡಿದರೆ ಶ್ರವಣ ಮನನವೂ, ಚಿತ್ತಶುದ್ಧಿಗೆ ಕಾರಣವಾದ ಇಂದ್ರಿಯಜಯಾದಿ ಕೆಲವು ಸಾಮಗ್ರಿಗಳೂ ಸೇರಿ ಸಮುಚ್ಚಿತವಾಗಿ ಧ್ಯಾನಕ್ಕೆ ಕಾರಣವೆಂದು ತೋರಿ ಬರುವುದು.

**ಉತ್ತರ— ಶ್ರೀ ಶ್ರೀಗಳವರು—** ಹೌದು ! ನಮ್ಮ ಅಭಿಪ್ರಾಯವು ಸ್ವಲ್ಪ ಹಾಗೆಯೇ ಇರುವುದು. ಆದರೂ ನಿಮ್ಮ ವಾಕ್ಯಾರ್ಥವು ಸರ್ವಥಾ ನಿರಾಕರಣೀಯ ವಾದುದಲ್ಲ. ಅರ್ಧಾಂಗೀಕಾರದಿಂದ ನಿಮ್ಮ ಪೂರ್ವ ಪಕ್ಷವನ್ನು ಪರಿಹರಿಸುವೆವು. 1. ಧ್ಯಾನಕಾರಣೈಕದೇಶವಾದ ಅಂತಃಕರಣ ಶುದ್ಧಿಗೆ ಅಥವಾ ಮನಃ ಪ್ರಸಾದಕ್ಕೆ ಕಾಮಾಪಿವರ್ಜನರೂಪವಾದ ಸಂನ್ಯಾಸವು, ಇಂದ್ರಿಯ ನಿಗ್ರಹವು, ಮತ್ತು ಕೆಲವು ಚೇತನರ ವಿವಕ್ಷೆಯಿಂದ ವಾಯುಜಯಾದಿ ರೂಪವಾದ ಪ್ರಯತ್ನಾಭ್ಯಾಸವು ಮತ್ತು ದ್ವಂದ್ವಸಹನವೇ ಮುಂತಾದ ಕೆಲವು ಧರ್ಮಗಳೂ ಸಹ ಕಾರಣವೆನ್ನಿಸುವುವು. ಯದ್ಯಪಿ ಇವುಗಳೆಲ್ಲಾ ಮನನದಿಂದಲೇ ಹುಟ್ಟುವುವೆಂದು ನೀವು ಹೇಳಿದಂತೆಯೇ ಒಪ್ಪಿಕೊಂಡರೂ, ಮನನದಿಂದ ಈ ಧರ್ಮಗಳು ಮನಸ್ಸಿನಲ್ಲಿ ಉತ್ಪನ್ನವಾಗಿ ಅನಂತರ ಮನನವು ನಿಂತು ಹೋಗಿ, ಮುಂದೆ ಇಂದ್ರಿಯಜಯಾದಿಗಳಿಂದ ಉತ್ಪನ್ನ ವಾದ ನಿರ್ಮಲಚಿತ್ತವೇ ಧ್ಯಾನಕ್ಕೆ ಸಾಕ್ಷಾತ್ಕಾರಣವೆಂದು ಹೇಳುವುದು ಕೇವಲ ಅಪ್ರಾಮಾಣಿಕವೂ, ಪ್ರಮಾಣವಿರುದ್ಧವೂ ಆಗುವುದು. ಮತ್ತೇನೆಂದರೆ ಭಗವ ದ್ಗುಣಗಳ ಮನನವೂ ಇಂದ್ರಿಯ ಜಯಾದಿ ಗುಣಗಳೂ ಸಮುಚ್ಚಿತವಾಗಿ ಇದ್ದೇ ಅಪರೋಕ್ಷ ಜ್ಞಾನಹೇತುವಾದ ಭಕ್ತಿ ಸಹಿತವಾದ ವಿಶಿಷ್ಟ ಧ್ಯಾನಕ್ಕೆ ಕಾರಣವಾಗು ವುವು; ಮನನವು ಇಂದ್ರಿಯ ಜಯಾದಿಗಳನ್ನು ಹುಟ್ಟಿಸಿ ತಾನು ನಿವೃತ್ತವಾಗುವು ದಿಲ್ಲ. ಮನನವು ಸಾಕ್ಷಾತ್ ಧ್ಯಾನಕ್ಕೆ ಕಾರಣವಾಗುವುದು. ಇಂದ್ರಿಯಜಯ, ರಾಗದ್ವೇಷಾದಿರಾಹಿತ್ಯ ರೂಪವಾದ ಸಂನ್ಯಾಸವು, ಪ್ರತ್ಯಾಹಾರಾದಿ ಪ್ರಯತ್ನರೂಪ ಅಭ್ಯಾಸಗಳು, ಸ್ವಲ್ಪ ನಿಷ್ಕಾಮ ಕರ್ಮಾಚರಣೆಯು ಇತ್ಯಾದಿಗಳೂ ಸಹ ಮನನ ದಂತೆಯೇ ಸಾಕ್ಷಾತ್ ಧ್ಯಾನಕ್ಕೆ ಕಾರಣವಾಗುವುವು. ಈ ಧರ್ಮಗಳೂ ಮತ್ತು ಮನನವೂ ಪ್ರತ್ಯೇಕವಾಗಿ ಧ್ಯಾನಕ್ಕೆ ಸಾಕ್ಷಾತ್ಕಾರಣವಾಗುವುವೆಂಬುದು ಶ್ರೀಕೃಷ್ಣನ ಉಪಪಾದನೆಯಿಂದಲೇ ತಿಳಿದು ಬರುವುದು. ಶ್ರೀ ಕೃಷ್ಣನು ಹೇಳುತ್ತಾನೆ. :—

**(1) ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥**
**ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।**

**ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತಿ ||**
**ನಾಸ್ತಿಬುದ್ಧಿರಯುಕ್ತಸ್ಯ ನಚಾಯುಕ್ತಸ್ಯ ಭಾವನಾ ||**
—(2. 64–66.)

ರಾಗದ್ವೇಷಗಳಿಂದ ರಹಿತವಾದ ಮನಸ್ಸಿನಿಂದ ಪ್ರೇರಿತವಾದ ಅತಏವ ಸ್ವಾಧೀನವಾದ ಇಂದ್ರಿಯಗಳಿಂದ ಕೇವಲ ವಿಧಿವಿಹಿತವಾದ ದೇಹಧಾರಣ ಮಾತ್ರೋಪಯೋಗಿಯಾದ ವಿಷಯಗಳನ್ನು ಅನುಭವಿಸುವಂಥ ಜಿತಮನಸ್ಸುಳ್ಳವನು **ಮನಃಪ್ರಸಾದವನ್ನು** (ಎಂದರೆ ಪ್ರಯತ್ನವಿಲ್ಲದೇನೇ ದುರ್ವಿಷಯಗಳಲ್ಲಿ ಮನಸ್ಸು ಹೋಗದಿರುವ ಸ್ಥಿತಿಯನ್ನು) ಹೊಂದುತ್ತಾನೆ. ಇಂಥ ಮನಃಪ್ರಸಾದವು ಬಂದರೆ ಶೀಘ್ರದಲ್ಲಿಯೇ (ಮನನಜನಿತ ಧ್ಯಾನದಿಂದಲೇ) ಅಪರೋಕ್ಷ ಜ್ಞಾನವು ಪ್ರಾಪ್ತವಾಗುವುದು. ಅದರಿಂದ ಸಕಲ ದುಃಖ ಪರಿಹಾರವೂ ಆಗುತ್ತದೆ. ಇಂದ್ರಿಯಜಯ ಮತ್ತು ಮನೋನಿಗ್ರಹಾದಿ ಜನಿತ ಚಿತ್ತನಿರೋಧರೂಪವಾದ ಉಪಾಯರಹಿತನಾದವನಿಗೆ **ಭಾವನಾ** ಎಂದರೆ ಧ್ಯಾನವು ಉಂಟಾಗುವುದಿಲ್ಲ. ಅಭಾವಯುತಃ ಬುದ್ಧಿರ್ನಾಸ್ತಿ=ಧ್ಯಾನರಹಿತನಾದವನಿಗೆ ಅಪರೋಕ್ಷ ಜ್ಞಾನವು ಉಂಟಾಗಲಾರದು.*

ಈ ವಚನಗಳಿಂದ ಚಿತ್ತನಿರೋಧವೂ ಮನನವಂತೆ ಸಾಕ್ಷಾತ್ ಧ್ಯಾನಕಾರಣವೆಂದೂ ಮತ್ತು ರಾಗದ್ವೇಷಾಭಾವ, ಇಂದ್ರಿಯಜಯ, ಮನೋಜಯಾದಿ ನಿಯತ ಕಾರಣಗಳಿಂದ ಅದು ಹುಟ್ಟುವುದೆಂದೂ ಸಿದ್ಧವಾಗುವುದು.

(2) **.... .... ....ಯೋಗಂ ಯುಂಜನ್ ಮದಾಶ್ರಯಃ |**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ||**
—(7. 1.)

(3) **ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಂ ||**
—(13. 11.)

ಇತ್ಯಾದಿ ವಾಕ್ಯಗಳಿಂದ ಮನನಜನಿತವಾದ ಪರಾಪರ ತತ್ತ್ವಜ್ಞಾನವೂ ಧ್ಯಾನಕ್ಕೆ ಅವಶ್ಯಕವೆಂದು ನಿಶ್ಚಿತವಾಗುವುದು.

ಮನಃಪ್ರಸಾದವು ಮನನವನ್ನು ಉತ್ಪತ್ತಿ ಮಾಡಿ ತಾನು ಸ್ವಯಂ ನಿವೃತ್ತವಾಗುವುದೆಂದು ಹೇಳಲು ಆಗುವುದಿಲ್ಲ. ಏತಕ್ಕೆಂದರೆ ಅಂತಃಕರಣ ಪ್ರಸಾದರಹಿತವಾದ ಕೇವಲ ಮನನವು ಧ್ಯಾನಜನಕವಾಗಲಾರದು. ಆದುದರಿಂದ ಇಂದ್ರಿಯ

---

* **ನಾಸ್ತಿ ಬುದ್ಧಿರಯುಕ್ತಸ್ಯ ನಚಾಯುಕ್ತಸ್ಯ ಭಾವನಾ ||** ಎಂಬ ಶ್ಲೋಕದಲ್ಲಿ ಅಯುಕ್ತಸ್ಯ ಬುದ್ಧಿರ್ನಾಸ್ತಿ ಎಂದು ಹೇಳಿ ಅದಕ್ಕೆ ಕಾರಣವೇನೆಂದು ಆಶಂಕೆ ಬಂದರೆ, ಅಯುಕ್ತಸ್ಯ ಭಾವನಾ ನಾಸ್ತಿ ಎಂದು ಪರಿಹಾರವು ಉತ್ತರಾರ್ಧದಲ್ಲಿ ಹೇಳಲ್ಪಟ್ಟಿರುವುದು. ಆದುದರಿಂದ ಸಮಗ್ರ ಯೋಜನೆಯು "ಅಯುಕ್ತಸ್ಯ ಭಾವನಾ ನಾಸ್ತಿ; ಅಭಾವಯತಃ ಬುದ್ಧಿರ್ನಾಸ್ತಿ" ಎಂದು ಆಗುವುದು.

ಜಯಾದಿಗಳೂ, ಮನನವೂ, ಉಭಯವೂ ಸಮುಚ್ಚಿತವಾಗಿಯೇ ಧ್ಯಾನಜನಕವು ಎಂದು ಅಂಗೀಕರಿಸಬೇಕು.

ಶ್ರೀ ಕೃಷ್ಣನ ಹದಿನೈದನೆಯ ಅಧ್ಯಾಯದ ಶ್ಲೋಕವು ಈ ವಿಷಯವನ್ನು ಸ್ಫುಟವಾಗಿ ವಿವರಿಸುವುದು :—

**(4) ಅಶ್ವತ್ಥಮೇನಂ ಸುವಿರೂಢಮೂಲಂ ಅಸಂಗಶಸ್ತ್ರೇಣ**
**ದೃಢೇನ ಛಿತ್ವಾ ।**
**ತತಃ ಪರಂ ತತ್ಪರಿಮಾರ್ಗಿತವ್ಯಂ.... .... .... ... ॥ —(15. 34.)**

ಅಶ್ವತ್ಥವೆಂಬ ಜಗದ್ವೃಕ್ಷವನ್ನು ವೈರಾಗ್ಯವೆಂಬ ಶಸ್ತ್ರದಿಂದ ಸಹಿತವಾದ ಮನನಜನಿತ ದೃಢವಾದ ತತ್ತ್ವಜ್ಞಾನವೆಂಬ ಖಡ್ಗದಿಂದ ಛೇದನ ಮಾಡಿ ಎಂದರೆ ಚೆನ್ನಾಗಿ ತಿಳಿದುಕೊಂಡು ಪರಮಾತ್ಮನನ್ನು ಹುಡುಕಬೇಕು.

ಇದರಿಂದಲೂ ವೈರಾಗ್ಯಾದಿಗಳೂ ಮನನವೂ ಎರಡೂ ಧ್ಯಾನಕ್ಕೆ ಕಾರಣ ವೆಂದು ಸಿದ್ಧವಾಗುವುದು.

**2**. ಪರಂತು ನೀವು ಹೇಳಿದಂತೆ ಧ್ಯಾನಕಾರಣವಾದ ಮನಃಪ್ರಸಾದಕ್ಕೆ ಬೇಕಾದ ಇಂದ್ರಿಯಜಯ, ಪ್ರತ್ಯಾಹಾರಾದಿ ಅಭ್ಯಾಸಗಳೆಲ್ಲವೂ ಮನನದಿಂದಲೇ ಹುಟ್ಟುವುವೆಂದು ಹೇಳುವುದು ಸ್ವಲ್ಪ ಕಠಿಣವಾಗುವುದು. ವಿಷಯಸ್ನೇಹರಾಹಿತ್ಯಾದಿ ಕೆಲವು ಧರ್ಮಗಳೇನೋ ಮನನ ಪ್ರಭಾವದಿಂದ ಬರುವುವು ಆದರೂ ನಿರಾಹಾರತ್ವ, ಪ್ರತ್ಯಾಹಾರಾದಿ ಯತ್ನಗಳೇ ಮುಂತಾದ ಕೆಲವು ಧರ್ಮಗಳು ಕೇವಲ ಮನದಿಂದ ಹುಟ್ಟದೇ ವಿಶೇಷವಾದ ಕರ್ಮೇಂದ್ರಿಯಗಳ ಪ್ರವೃತ್ತಿಯನ್ನೂ ಅಪೇಕ್ಷಿಸುವುವು. ಉಪೋಷ್ಯಗಳಿಂದಲೂ, ಪ್ರತ್ಯಾಹಾರಗಳಿಂದಲೂ ಆಗುವ ಮನಶ್ಶುದ್ಧಿಗೂ ಮನನವೇ ಸರ್ವ ಪ್ರಕಾರದಿಂದಲೂ ಕಾರಣವು ಎಂದು ಹೇಳುವುದು ಸ್ವಲ್ಪ ಸರಿಯಾಗಿ ತೋರುವುದಿಲ್ಲ. ಬಹು ಮುಷ್ಕರ ಮಾಡಿದರೆ ನಾವು ಅದಕ್ಕೂ ಒಪ್ಪಿಬಿಡುವೆವು. ಏತಕ್ಕೆಂದರೆ ಭಗವದುತ್ಕರ್ಷ ಜ್ಞಾನಪೂರ್ವಕವಾಗಿ ಪುನಃ ಪುನಃ ಮನಸ್ಸನ್ನು ಪರಮಾತ್ಮನಲ್ಲಿ ಯೋಜಿಸುವುದೇ ಇಂದ್ರಿಯ ಜಯಾದಿಗಳಿಗೆ ಪ್ರಧಾನ ಕಾರಣವೆಂದು ಶಾಸ್ತ್ರ ನಿಶ್ಚಿತಾರ್ಥವು. "ಜ್ಞಾನನಿರ್ಧೂತಕಲ್ಮಷಾಃ" ಇತ್ಯಾದಿ ವಾಕ್ಯಗಳೂ ಈ ವಿಷಯದಲ್ಲಿ ಸಂವಾದರೂಪವಾಗಿರುವುವು. ಆದುದರಿಂದ ಸಾಕ್ಷಾತ್ತಾಗಿಯೋ ಅಥವಾ ಪರಂಪರೆಯಿಂದಲೋ ಮನಃಪ್ರಸಾದ ಕಾರಣವಾದ ಸರ್ವ ಧರ್ಮಗಳೂ ಮನನದಿಂದಲೇ ಬಂದರೂ ಸಹ ಮನನವು ಪ್ರಧಾನ ಕಾರಣವು; ಇಂದ್ರಿಯಜಯ ಭಕ್ತಿ ವಿರಕ್ತ್ಯಾದಿಗಳು ಅಪ್ರಧಾನ ಕಾರಣವು ಎಂದು ಏರ್ಪಟ್ಟಿತು. ಅಂತೂ ಎರಡೂ ಮಿಳಿತವಾಗಿಯೇ ಧ್ಯಾನಕ್ಕೆ ಕಾರಣವಾಗುವುವು.

**3**. ಆದರೆ ಸೂಕ್ಷ್ಮವಾದ ತತ್ವಾರ್ಥವೇನೆಂದರೆ, ಮನನವೂ ಭಕ್ತಿ ವಿರಕ್ತಿ ರೂಪವಾದ ಚಿತ್ತಪ್ರಸಾದವೂ ಪ್ರತ್ಯೇಕವಾಗಿ, ಪರಸ್ಪರ ಪ್ರಯೋಜ್ಯ ಪ್ರಯೋಜಕ

ಭಾವರಹಿತವಾಗಿ, ಧ್ಯಾನಕಾರಣಗಳೆಂದು ನಮ್ಮ ಆಶಯವಲ್ಲ. ಮತ್ತೇನೆಂದರೆ ಸ್ವಲ್ಪ ಮನನದಿಂದ ವಿಷ್ಣುವೇ ಸರ್ವೋತ್ತಮನೆಂಬ ಸಾಮಾನ್ಯ ನಿಶ್ಚಯವು ಹುಟ್ಟಿದರೆ ಅಧಿಕಾರಿಯು ಸ್ವಲ್ಪ ವಿಷಯಗಳ ಭೋಗದಲ್ಲಿ ಸಂಕೋಚವನ್ನು ಮಾಡುವನು ಮತ್ತು ಹರಿಯಲ್ಲಿ ಪ್ರೀತಿ ಮಾಡುವನು. ಆ ಪ್ರೀತಿಯಿಂದ ಪ್ರೇರಿತನಾಗಿ ಪುನಃ ವಿಷಯಭೋಗಗಳ ಸಂಕೋಚವನ್ನು ಮಾಡಿ ಹೆಚ್ಚು ಮನನ ಕಾರ್ಯದಲ್ಲಿ ಆಸಕ್ತನಾಗುವನು. ಈ ಮನನದಿಂದ ಅವನ ವಿಷ್ಣೂತ್ಕರ್ಷ ನಿಶ್ಚಯವು ದೃಢವಾದ ನಂತರ ಅವನು ಪರಮಾತ್ಮನಲ್ಲಿ ಇನ್ನೂ ಅಧಿಕ ಪ್ರೀತಿಯನ್ನು ಮಾಡಿ ವಿಷಯ ಭೋಗವನ್ನು ಕೇವಲ ದೇಹಧಾರಣ ಪೂರ್ತಿಯಾಗುವಷ್ಟು ಮಾಡುತ್ತಾ ಸಂತತ ಪರಮಾತ್ಮ ಚಿಂತನೆಯಲ್ಲಿ ಆಸಕ್ತನಾಗುವನು. ಹೀಗೆಯೇ ಜ್ಞಾನ ಭಕ್ತಿ ವಿರಕ್ತಿಗಳು ಪರಸ್ಪರ ಕಾರ್ಯಕಾರಣ ಭಾವಾಪನ್ನವಾಗಿ ಒಂದರಿಂದ ಒಂದು ವೃದ್ಧಿಯಾಗುತ್ತಾ ಧ್ಯಾನದಲ್ಲಿ ಮೂರೂ (ಅಥವಾ ಭಕ್ತಿ ವಿರಕ್ತಿಗಳೆರಡನ್ನೂ ಒಂದು ಪದಾರ್ಥವಾಗಿ ಗಣನೆ ಮಾಡಿದರೆ ಎರಡೂ) ಕಾರಣವಾಗುವುವು. ಈ ಅಭಿಪ್ರಾಯದಿಂದಲೇ ನಿಮ್ಮ ಪೂರ್ವಪಕ್ಷವನ್ನು ಅರ್ಧಾಂಗೀಕಾರದಿಂದ ಪರಿಹರಿಸುತ್ತೇವೆಂದು ಪ್ರತಿಜ್ಞೆ ಮಾಡಿದೆವು. ಈ ಅಭಿಪ್ರಾಯಗಳೆಲ್ಲಾ ನಾವು ಪೂರ್ವದಲ್ಲಿ ಉದಾಹರಿಸಿರುವ ಹದಿನೆಂಟನೆಯ ಅಧ್ಯಾಯದ ಶ್ಲೋಕಗಳಿಂದಲೇ ತಿಳಿದು ಬರುವುವು.

4. ಇದು ಮನನಾವಸ್ಥೆಯನ್ನು ಹೊಂದಿರುವವನ ಮಾತು. ಇನ್ನು ಶ್ರವಣವನ್ನು ಆರಂಭಿಸಿರುವವನ ವಿಷಯದಲ್ಲಿ ತತ್ತ್ವಜ್ಞಾನದಿಂದಲೇ ಅಂತಃಕರಣ ಶುದ್ಧಿಯು ಬರಬೇಕೆಂಬ ನಿರ್ಬಂಧವು ಇಲ್ಲ. ಆಗ ಇಂದ್ರಿಯಜಯಾದಿಗಳಿಗೆ ನಿಷ್ಕಾಮ ಕರ್ಮವೇ ಮೊದಲಾದ ಭಗವದಾರಾಧನೆಗಳೇ ಕಾರಣವೆಂದು ಅವಶ್ಯವಾಗಿ ಒಪ್ಪಬೇಕು.

5. ಆದ್ದರಿಂದಲೇ ಒಂದು ವಿಷಯದಲ್ಲಿ ನಿಮ್ಮ ಉಪಪಾದನೆಯು ಅಂಗೀಕಾರಾರ್ಹವಲ್ಲ. ಶಾಸ್ತ್ರ ಜ್ಞಾನದಿಂದಲೇ ನಿಷ್ಕಾಮ ಕರ್ಮದಲ್ಲಿ ಪ್ರವೃತ್ತಿಯುಂಟಾಗುವುದು ಎಂದು ಹೇಳಿದರೆ ಶ್ರೀ ಕೃಷ್ಣನ ಅನೇಕ ವಾಕ್ಯಗಳಿಗೆ ವಿರುದ್ಧವಾಗುವುದು. "ಕರ್ಮಣಾ ಜ್ಞಾನಮಾಪ್ನೋತಿ" ಎಂಬ ಶ್ರುತಿವಿರೋಧವೂ ಬರುವುದು. ಆದುದರಿಂದ ನಿಷ್ಕಾಮ ಕರ್ಮದಿಂದ ಸಾಮಾನ್ಯವಾದ ಶುದ್ಧಾಂತಃಕರಣವನ್ನು ಹೊಂದಿದವನೇ ಶ್ರವಣ ಮನನಾದಿಗಳಲ್ಲಿ ಪ್ರವೃತ್ತನಾಗುವನೆಂದೂ, ಶ್ರವಣದಿಂದ ತತ್ತ್ವವನ್ನು ತಿಳಿದವನು ಕರ್ಮವನ್ನು ಸಂಕೋಚ ಮಾಡಿಕೊಂಡು ಮನನದಲ್ಲಿ ತತ್ಪರನಾಗಿ ಅದರಿಂದ ಪ್ರವೃದ್ಧವಾದ ಭಕ್ತಿ ವಿರಕ್ತಿಗಳಿಂದ ಪುನಃ ಊರ್ಜಿತವಾದ ಮನನವನ್ನು ಮಾಡಿ ಧ್ಯಾನಾವಸ್ಥೆಯನ್ನು ಹೊಂದುವನೆಂದೂ ನಿರ್ಣಯ ಮಾಡಬೇಕು. ನಿಷ್ಕಾಮ ಕರ್ಮಾನುಷ್ಠಾನವು ಶ್ರವಣ ಮನನಗಳಿಗೆ ಪೂರ್ವದಲ್ಲಿ ಅತ್ಯವಶ್ಯಕವೆಂದೂ ಮತ್ತು ಅಪರೋಕ್ಷ ಜ್ಞಾನಪರ್ಯಂತವೂ ಅದರ ಪರಿತ್ಯಾಗವು ಅನರ್ಥಪ್ರದವೆಂದೂ ಮುಂದೆ ನಾವು ನಿರೂಪಿಸುತ್ತೇವೆ.

2. ಪ್ರಶ್ನೆ— ಸ್ವಾಮೀ ! ತಿಳಿಯಿತು. ಹಾಗಾದರೆ ಧ್ಯಾನೈಕದಳವಾದ ಅಂತಃಕರಣ ಶುದ್ಧಿಗೆ ಮನನಾತಿರಿಕ್ತವಾದ ಕಾರಣಗಳು ಯಾವುವು ? ಇವುಗಳಲ್ಲಿ ತರತಮಭಾವವು ಇದ್ದರೆ ಅದನ್ನು ದಯಮಾಡಿ ತಿಳಿಸಬೇಕು

**ಶ್ರೀ ಶ್ರೀಗಳವರು—** 1. ರಾಗದ್ವೇಷ ಪರಿತ್ಯಾಗವೂ, ಇಂದ್ರಿಯಜಯವೂ ಆವಶ್ಯಕವೆಂದು ದ್ವಿತೀಯಾಧ್ಯಾಯದ ಪೂರ್ವೋದಾಹೃತ ಶ್ಲೋಕಗಳಿಂದ ನಿಶ್ಚಿತ ವಾಗುವುದು. ಪುನಃ ತೃತೀಯಾಧ್ಯಾಯದಲ್ಲಿ ಶ್ರೀ ಕೃಷ್ಣನು ಹೇಳುತ್ತಾನೆ :—

(1) **ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್ ತೌ ಹ್ಯಸ್ಯ ಪರಿಪಂಥಿನೌ ॥**
—(3. 34.)

ಚಕ್ಷುರಾದಿ ಇಂದ್ರಿಯಗಳಿಗೆ ರೂಪಾದಿ ವಿಷಯಗಳಲ್ಲಿ ಅನುಕೂಲವೆಂದು ತೋರಿದ ವಿಷಯಗಳಲ್ಲಿ ರಾಗವು, ಪ್ರತಿಕೂಲವೆಂದು ತೋರಿದ ವಿಷಯದಲ್ಲಿ ದ್ವೇಷವೂ ಅವಶ್ಯವಾಗಿ ಆಗುವುವು. ಅಂಥ ರಾಗ–ದ್ವೇಷಗಳಿಗೆ ಮುಮುಕ್ಷುವು ವಶನಾಗಬಾರದು. ಅವೆರಡೂ ಅವನಿಗೆ ಮುಖ್ಯ ಶತ್ರುಗಳು.

ಪುನಃ ಇದೇ ಅಧ್ಯಾಯದಲ್ಲಿಯೇ ಕಾಮವು ಜ್ಞಾನ ವಿಜ್ಞಾನನಾಶಕವೆಂದು ಹೇಳಿ ಅದರ ಪರಿತ್ಯಾಗವನ್ನು ಶ್ರೀ ಕೃಷ್ಣನು ವಿಧಿಸುತ್ತಾನೆ :—

(2) **ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಂ ॥**
**ಇಂದ್ರಿಯಾಣಿ ಮನೋಬುದ್ಧಿರಸ್ಯಾಧಿಷ್ಠಾನಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಂ ॥**
**ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಂ ॥**
.... .... .... .... .... ....
**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ ॥**
—(3. 37-43.)

ಎಲೈ ಪಾರ್ಥನೇ ! ಜೀವನಿಗೆ ಪಾಪಕರ್ಮದಲ್ಲಿ ಮುಖ್ಯ ಪ್ರವರ್ತಕವು ಕಾಮವು. ಇದೇ ಕ್ರೋಧವು ಎಂದರೆ ಕ್ರೋಧಕ್ಕೆ ಕಾರಣವು. ( ತನ್ನಿಂದ ಇಷ್ಟವಾದ ವಿಷಯ ಪ್ರಾಪ್ತಿಯು ಪ್ರತಿರುದ್ಧವಾದರೆ ಪ್ರತಿರೋಧ ಮಾಡಿದವನ ವಿಷಯದಲ್ಲಿ ಕ್ರೋಧವು ಉಂಟಾಗುವುದು ). ಈ ಕ್ರೋಧವು ರಜೋಗುಣ ಮೂಲಕವಾಗಿ ಉತ್ಪನ್ನವಾದದು. ಬಹು ಭೋಗ ಸಾಧನಗಳನ್ನು ವಿಷಯ

ವನ್ನಾಗಿ ಉಳ್ಳದ್ದು. ಬ್ರಹ್ಮಹತ್ಯಾದಿ ಮಹಾ ಪಾಪಗಳಿಗೆ ಕಾರಣವು. ಇದನ್ನೇ ( ಕಾಮಾಭಿಮಾನಿಯಾದ ಕಾಲನೇಮಿಯನ್ನೇ ) ಮೋಕ್ಷ ಮಾರ್ಗಕ್ಕೆ ಶತ್ರುವೆಂದು ತಿಳಿ. ಈ ಕಾಮಾಖ್ಯ ಶತ್ರುವಿಗೆ ಇಂದ್ರಿಯಗಳೂ, ಮನಸ್ಸೂ, ಬುದ್ಧಿಯೂ ವಾಸಸ್ಥಾನಗಳು. ಈ ಕಾಮವು ಇವುಗಳಿಂದ (ಇಂದ್ರಿಯ ಮನೋಬುದ್ಧಿಗಳಿಂದ) ಜ್ಞಾನವನ್ನು ತಿರೋಧಾನ ಹೊಂದಿಸಿ ಎಂದರೆ ಕ್ವಚಿತ್ ಜ್ಞಾನವನ್ನೇ ಹುಟ್ಟಗೊಡಿಸದೆ, ಕ್ವಚಿತ್ ಜ್ಞಾನವು ಹುಟ್ಟಿದರೂ ಅದು ಧ್ಯಾನೋಪಯೋಗಿಯಾಗದಂತೆ ವ್ಯರ್ಥಗೊಳಿಸಿ ಜೀವನನ್ನು ಮೋಹಿತನನ್ನಾಗಿ ಮಾಡುತ್ತದೆ ( ವಿಷಯ ಪ್ರಪಂಚದಲ್ಲೇ ಬಂಧಿಸುತ್ತದೆ ). ಆದುದರಿಂದ, ಎಲೈ ಭರತಶ್ರೇಷ್ಠನೇ ! ನೀನು ಮೊದಲು ಇಂದ್ರಿಯಗಳನ್ನು ನಿಗ್ರಹಿಸಿ ( ನಿಷಿದ್ಧ ವಿಷಯಸನ್ನಿಕರ್ಷವಾಗದಂತೆ ಮಾಡಿ ), ಕ್ರಮವಾಗಿ ಪರೋಕ್ಷ ಜ್ಞಾನ ಮತ್ತು ಅಪರೋಕ್ಷ ಜ್ಞಾನವನ್ನೂ ಸಹ ನಾಶ ಮಾಡುವಂಥ ಈ ಪಾಪಿಯನ್ನು ಸಂಹರಿಸು. ಎಲೈ ಮಹಾಬಾಹುವೇ ! ಬುದ್ಧ್ಯಾದಿ ಸಕಲ ತತ್ವನಿಯಾಮಕರಾದ ಲಕ್ಷ್ಮ್ಯಾದಿ ದೇವತೆಗಳಿಗೂ ಉತ್ತಮನಾದ ಪರಮಾತ್ಮನನ್ನು ತಿಳಿದು, ಮನಸ್ಸನ್ನು ಬುದ್ಧಿಯಿಂದ ನಿಗ್ರಹಿಸಿ ( ವಿಷಯಗಳಿಗೆ ಹೋಗದಂತೆ ನಿಶ್ಚಲವನ್ನಾಗಿ ಮಾಡಿ, ದುರಾಸದನಾದ ( ಬಹು ಕಷ್ಟದಿಂದ ನಿವರ್ತನೀಯವಾದ ) ಈ ಕಾಮಾಖ್ಯ ಶತ್ರುವನ್ನು ಸಂಹರಿಸು. ( ಇಂದ್ರಿಯ, ಮನಸ್ಸು, ಬುದ್ಧಿಗಳೆಂಬ ಕಾಮನ ಅಧಿಷ್ಠಾನಗಳನ್ನು ಪರಮಾತ್ಮ ಜ್ಞಾನಾದಿಗಳಿಂದ ಸಂಸ್ಕೃತವಾದ ಚಿತ್ತದಿಂದ ವಿಷಯಗಳಿಗೆ ಹೋಗದಂತೆ ಮಾಡಿ ಕಾಮವನ್ನು ಅವುಗಳಿಂದ ಓಡಿಸು ಎಂದು ಭಾವವು. )

(3) **ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ।** —(6. 2.)

ವಿಷಯ ಕಾಮಜನಿತವಾದ ಸಂಕಲ್ಪಗಳನ್ನು ಪರಿತ್ಯಾಗ ಮಾಡದವನು ಧ್ಯಾನ ಯೋಗಿಯಾಗಲಾರನು.

ದ್ವಂದ್ವ ಮೋಹಪರಿತ್ಯಾಗವೂ ಒಂದು ಮನಃಪ್ರಸಾದ ಕಾರಣವೆಂದು ಶ್ರೀಕೃಷ್ಣನು ಹೇಳುತ್ತಾನೆ :—

(4) **ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।**
**ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ॥**
**ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಂ ।**
**ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ ॥**
—(7. 27-28.)

ಅನುಕೂಲವೆಂದು ತೋರಿದ ವಿಷಯಗಳಲ್ಲಿ ಇಚ್ಛೆಯು, ಪ್ರತಿಕೂಲವೆಂದು ತೋರಿದ ವಿಷಯಗಳಲ್ಲಿ ದ್ವೇಷವು, ಇವುಗಳ ಅಭಿವೃದ್ಧಿಯಿಂದ ಉತ್ಪನ್ನವಾದ ದ್ವಂದ್ವಮೋಹದಿಂದ ಎಂದರೆ ಸುಖ ದುಃಖ ಲಾಭಾಲಾಭಾದಿಗಳ ವಿಷಯದಲ್ಲಿ

ಮಿಥ್ಯಾ ಜ್ಞಾನವಿಂದ ( ದುಃಖಾದಿಗಳಂತೆ ವೈಷಯಿಕ ಸುಖಗಳೂ ಮೋಕ್ಷವಿರೋಧಿಗಳಾಗಿದ್ದರೂ ಅವುಗಳು ಉಪಾದೇಯಗಳೆಂಬ ಮಿಥ್ಯಾ ಜ್ಞಾನದಿಂದ ) ಸರ್ವ ಪ್ರಾಣಿಗಳೂ ಸೃಷ್ಟಿ ಕಾಲದಿಂದ ಆರಂಭಿಸಿಕೊಂಡು ಸಮ್ಮೋಹವನ್ನು ಹೊಂದುತ್ತಾರೆ. ಎಂದರೆ ಜೀವಬ್ರಹ್ಮರು ಅಭಿನ್ನರು, ನಾನೇ ಬ್ರಹ್ಮನು, ಸ್ವತಂತ್ರನು ಇತ್ಯಾದಿ ರೂಪವಾದ ವಿಪರೀತ ಜ್ಞಾನವನ್ನು ಹೊಂದುತ್ತಾರೆ. ಮತ್ತು ವಿಷಯಗಳಲ್ಲಿ ಆಸಕ್ತರಾಗುತ್ತಾರೆ. ಯಾವ ಪುಣ್ಯ ಕರ್ಮಾನುಷ್ಠಾನರತರಾದ ಸಜ್ಜನರಿಗೆ ಪಾಪಗಳು ನಷ್ಟವಾಗಿರುವುವೋ ಅವರೇ ದ್ವಂದ್ವ ಮೋಹಗಳಿಂದ ನಿರ್ಮುಕ್ತರಾಗಿ ದೃಢವ್ರತರಾಗಿ ನನ್ನನ್ನು ಭಜನೆ ಮಾಡುತ್ತಾರೆ.

ತ್ರಯೋದಶಾಧ್ಯಾಯದಲ್ಲಿ ಅನೇಕ ಜ್ಞಾನ ಸಾಧನಗಳನ್ನು ಶ್ರೀ ಕೃಷ್ಣನು ಸಂಗ್ರಹಿಸಿರುತ್ತಾನೆ :—

**(5) ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಂ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥**
**ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।**
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಂ ॥**
**ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥**
**ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥**
**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಂ ।**
**ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥**
**—(13. 7–11.)**

ಆತ್ಮಶ್ಲಾಘನೆಯ ರಾಹಿತ್ಯವು, ತಾನು ಅಲ್ಪನೆಂದು ತಿಳಿದಿದ್ದರೂ ಮಹತ್ವವನ್ನು ಪ್ರದರ್ಶನೆ ಮಾಡದಿರುವುದು, ಅಹಿಂಸೆಯು, ಸಹನಶೀಲತ್ವವು, ಆರ್ಜವವು ಎಂದರೆ ಸನ್ಮಾರ್ಗದಲ್ಲಿ ಮನೋವಾಕ್ಕಾಯ ಕರ್ಮಗಳಲ್ಲಿ ವೈಪರೀತ್ಯವನ್ನು ಹೊಂದದಿರುವುದು, ಜ್ಞಾನಿಗಳ ಸೇವೆಯು, ಬಾಹ್ಯಾಂತರ ಶುದ್ಧಿಯು, ಸ್ಥೈರ್ಯವು ಎಂದರೆ ಭಯ ಬಂದರೂ ಸ್ವಧರ್ಮದಿಂದ ಚಲನರಾಹಿತ್ಯವು, ಮನೋನಿಗ್ರಹವು, ಇಂದ್ರಿಯ ವಿಷಯಗಳಲ್ಲಿ ಕಾಮರಾಹಿತ್ಯವು, ಅನಹಂಕೃತಿಯು ಎಂದರೆ ತನ್ನಲ್ಲಿ ಇಲ್ಲದೇ ಇರುವ ಗುಣಗಳನ್ನು ಆರೋಪಿಸಿಕೊಂಡು ಅಭಿಮಾನ ಹೊಂದದೇ ಇರೋಣವು, ಜನನ ಮರಣ ಜರಾವ್ಯಾಧಿಗಳಿಂದ ಉಂಟಾಗುವ ದುಃಖರೂಪವಾದ ದೋಷವನ್ನು ಸದಾ ತಿಳಿಯುತ್ತಿರುವುದು, ಪತ್ನೀ ಪುತ್ರ ಗೃಹಾದಿಗಳಲ್ಲಿ ಸ್ನೇಹ ತ್ಯಾಗವು ಮತ್ತು ಅತ್ಯಭಿಮಾನವನ್ನು ಮಾಡದೇ ಇರೋಣವು, ಇಷ್ಟಾನಿಷ್ಟಗಳು ಯಾವುವು ಪ್ರಾಪ್ತವಾದರೂ

ಸರ್ವದಾ ನಿರ್ವಿಕಾರವಾದ ಚಿತ್ತವನ್ನು ಹೊಂದಿರುವುದು, ನನ್ನಲ್ಲಿ (ಶ್ರೀ ಕೃಷ್ಣನಲ್ಲಿ) ಅವ್ಯಭಿಚರಿತವಾದ (ಅನ್ಯರನ್ನು ಸ್ವತಂತ್ರರೆಂದು ತಿಳಿಯದ) ಅನನ್ಯ ಭಕ್ತಿಯು, ಏಕಾಂತವಾಸವು, ಜನಸಮ್ಮರ್ದರಹಿತವಾದ ಶುದ್ಧ ದೇಶದಲ್ಲಿ ಸ್ಥಿತಿಯು, ಬ್ರಹ್ಮ ಜ್ಞಾನಾರ್ಥವಾಗಿ ಸದಾ ನಿಯತ ಪ್ರಯತ್ನಗಳನ್ನು ಮಾಡುತ್ತಿರುವುದು, ಅಪರೋಕ್ಷ ಜ್ಞಾನಾರ್ಥವಾಗಿ ಶಾಸ್ತ್ರ ಪರ್ಯಾಲೋಚನೆಯು ಇವೆಲ್ಲವೂ ಜ್ಞಾನ ಸಾಧನಗಳು. ಇದಕ್ಕೆ ಭಿನ್ನವಾದವುಗಳೆಲ್ಲಾ ಜ್ಞಾನ ಸಾಧನಗಳಲ್ಲ.

ಹದಿನೈದನೆಯ ಅಧ್ಯಾಯದಲ್ಲಿಯೂ ಸಹ ಈ ಧರ್ಮಗಳ ಅವಶ್ಯಕತೆಯು ಸ್ಪಷ್ಟವಾಗಿ ಪ್ರತಿಪಾದಿತವಾಗಿರುವುದು. :—

**(6) ನಿರ್ಮಾನಮೋಹಾ ಜಿತಸಂಗದೋಷಾ ಅಧ್ಯಾತ್ಮನಿತ್ಯಾವಿನಿವೃತ್ತ ಕಾಮಾಃ ।**
**ದ್ವಂದ್ವೈರ್ವಿಮುಕ್ತಾಸ್ಸುಖದುಃಖಸಂಜ್ಞೈರ್ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥** —(15. 5.)

ಅಹಂಕಾರ ಮಿಥ್ಯಾ ಜ್ಞಾನಗಳಿಂದ ರಹಿತರಾದ, ಫಲ ಸ್ನೇಹರೂಪ ದೋಷ ವನ್ನು ಜಯಿಸಿದಂಥ, ಭಗವಚ್ಛ್ರವಣಾದಿಗಳಲ್ಲಿ ನಿರತರಾದ, ವಿಷಯತೃಷ್ಣಾ ರಹಿತರಾದಂಥ, ಸುಖ ದುಃಖಗಳೆಂಬ ದ್ವಂದ್ವರಹಿತರಾದಂಥ (ದುಃಖವು ಹೇಗೆ ಅನಿಷ್ಟವೋ ಹಾಗೆಯೇ ಮೋಕ್ಷವಿರೋಧಿಯಾದುದರಿಂದ ಲೌಕಿಕ ಸುಖವೂ ಅನಿಷ್ಟ ವೆಂದು ತಿಳಿದಿರುವಂಥ) ಜ್ಞಾನಿಗಳು ನಾಶರಹಿತನಾದಂಥ ಭಗವಂತನನ್ನು ಹೊಂದು ತ್ತಾರೆ.

**3.** ಅನಂತ ಧರ್ಮಗಳು ಧ್ಯಾನಸಾಧನವಾಗಿ ಮೋಕ್ಷಕ್ಕೆ ಪ್ರಯೋಜಕವಾಗು ವುವು. ದ್ವಿತೀಯಾಧ್ಯಾಯದಲ್ಲಿಯೇ "ವಿಷಯಾವಿನಿವರ್ತಂತೇ ನಿರಾಹಾರಸ್ಯ ದೇಹಿ ನಃ" ಎಂದು ಅಲ್ಪಾಹಾರ ಸೇವನೆ ರೂಪವಾದ ಪ್ರಯತ್ನವನ್ನೂ ಷಷ್ಠಾಧ್ಯಾಯದಲ್ಲಿ ಪ್ರಾಣಾಯಾಮ ಪ್ರತ್ಯಾಹಾರ ರೂಪವಾದ ಮಹಾ ಪ್ರಯತ್ನವನ್ನೂ ಸಹ ಇಂದ್ರಿಯ ಜಯದ್ವಾರಾ ಚಿತ್ತಶುದ್ಧಿ ಸಾಧನವನ್ನಾಗಿ ಶ್ರೀ ಕೃಷ್ಣನು ನಿರೂಪಿಸಿರುವುದು ನಿಜವು. ಆದರೆ ಮುಖ್ಯವಾದ ಮನಃಪ್ರಸಾದ ಸಾಧನವು ಪುನಃ ಪುನಃ ಭಗವಂತನ ಚರಣಾರವಿಂದದಲ್ಲಿ ಆತನ ಸರ್ವೋತ್ತಮತ್ವ ಜ್ಞಾನಪೂರ್ವಕವಾಗಿ ಮನಸ್ಸನ್ನು ಇಡುವುದು. ಮನಃಪ್ರಸಾದವನ್ನು ಹುಟ್ಟಿಸುವ ಸಾಧನಗಳಲ್ಲಿ ಪ್ರಧಾನವಾದ ಭಗ ವಚ್ಚರಣಾರವಿಂಡಗಳಲ್ಲಿ ಮನೋಯೋಗದ ಸ್ವರೂಪವನ್ನು ದ್ವಿತೀಯಾಧ್ಯಾಯ ದಲ್ಲಿಯೇ ಶ್ರೀ ಕೃಷ್ಣನು ನಿರೂಪಿಸಿರುತ್ತಾನೆ. :—

**(1) ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ।**
**ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ॥**
—(2. 60-61.)

ಹೇ ಕೌಂತೇಯ ! ಇಂದ್ರಿಯಗಳು ಸ್ವಭಾವತಃ ಕ್ಷೋಭನಕಾರಿಗಳು. ಅವುಗಳು ಮನಸ್ಸನ್ನು ಬಲಾತ್ಕಾರವಾಗಿ ವಿಷಯಗಳಲ್ಲಿ ಆಸಕ್ತವಾಗುವಂತೆ ಮಾಡುವುವು. ಮುಮುಕ್ಷುವು ಆ ಸರ್ವ ಇಂದ್ರಿಯಗಳನ್ನೂ ವಿಷಯಗಳ ದೆಸೆಯಿಂದ ಉಪಸಂಹರಿಸಿ, ಮತ್ಪರಃ = ನಾನೇ ( ಶ್ರೀ ಕೃಷ್ಣನೇ ) ಸರ್ವೋತ್ತಮನೆಂದು ತಿಳಿದವನಾಗಿ, ಯುಕ್ತಆಸೀತ = ಪರಮಾತ್ಮನಲ್ಲಿ ಮನೋಯೋಜನೆಯನ್ನು ಮಾಡಿದವನಾಗಿ ನಿಲ್ಲಬೇಕು.

ಶರಣಾಗತನಾಗಿ ಹರಿಸ್ಮರಣೆಯನ್ನು ಮಾಡುವವನಿಗೆ ಹೊಂದಲ್ಪಡದ ಭಾಗ್ಯವಿಲ್ಲ. ಶ್ರೀ ಕೃಷ್ಣನು ಹೇಳುತ್ತಾನೆ :—

**(2) ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ||**
—(7. 14.)

ನನ್ನನ್ನೇ ಯಾರು ಶರಣು ಹೊಂದುತ್ತಾರೆಯೋ ಅವರು ನನ್ನ ಬಂಧಕ ಪ್ರಕೃತಿಯನ್ನು ದಾಟುತ್ತಾರೆ.

**(3) ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ |**
**ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಂ ||**
—(7. 29.)

ಜರಾಮರಣರೂಪವಾದ ಸಂಸಾರದಿಂದ ಮೋಕ್ಷಾರ್ಥಿಗಳಾಗಿ ನನ್ನನ್ನು ಆಶ್ರಯಿಸಿ ಯಾರು ಸೇವಿಸುತ್ತಾರೆಯೋ ಅಂಥ ಸಜ್ಜನರು ಪರಬ್ರಹ್ಮನನ್ನು ತಿಳಿಯುವರು; ಸಕಲವಾದ ಅಧ್ಯಾತ್ಮವನ್ನು ತಿಳಿಯುವರು; ಜಗತ್ಸರ್ಜನಾದಿ ಭಗವತ್ಕರ್ಮಗಳನ್ನು ತಿಳಿಯುವರು.

**(4) ತಮೇವ ಚಾದ್ಯಂ ಪುರುಷಂ ಪ್ರಪದ್ಯೇ**
**ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ||** —(15. 4.)

ಸಂಸಾರತಾರಕವಾದ ಜಗದ್ವೃಕ್ಷ ಛೇದನೋಪಾಯವನ್ನು ( ಪರಾಪರ ತತ್ವ ಜ್ಞಾನೋಪಾಯವನ್ನು ) ಶ್ರೀ ಕೃಷ್ಣನು ಹೇಳುತ್ತಾನೆ :— ಯಾರಿಂದ ಈ ಜನನ ಮರಣರೂಪವಾದ ಸಂಸಾರಪ್ರವರ್ತನವು ಉಂಟಾಯಿತೋ ಅಂಥ ಪುರಾತನನಾದ ಪರಮಾತ್ಮನನ್ನೇ ಶರಣು ಹೊಂದಬೇಕು.

4. ಭಗವಂತನಲ್ಲಿ ಶರಣಾಗತಿರೂಪವಾದ ಮಹಾ ಸಾಧನೆಯ ನಂತರ ನಿಷ್ಕಾಮ ಕರ್ಮಾನುಷ್ಠಾನವೂ ಧ್ಯಾನಯೋಗಕ್ಕೆ ಒಂದು ಸಾಕ್ಷಾತ್ಸಾಧನವೆನ್ನಿಸುವುದು. ಇದು ಶ್ರವಣ ಮನನದಶಾದಲ್ಲಿಯೂ ಧ್ಯಾನೋತ್ಪತ್ತಿಗೆ ಪ್ರತ್ಯೇಕ ಕಾರಣವಾಗಿ ಅವಶ್ಯಕವೆನ್ನಿಸುವುದು. ಶ್ರವಣದಲ್ಲಿ ಪ್ರವೃತ್ತಿಯು ಉಂಟಾಗುವುದಕ್ಕೂ ನಿಷ್ಕಾಮ ಕರ್ಮಾನುಷ್ಠಾನವು ಒಂದೇ ಪ್ರಧಾನ ಕಾರಣವು. ನಿಷ್ಕಾಮಕರ್ಮದ

ಸ್ವರೂಪವನ್ನು ಸ್ವಲ್ಪ ಮುಂದೆ ವಿವರಿಸುವೆವು. ಪ್ರಕೃತದಲ್ಲಿ ಪೂರ್ವೋಕ್ತವಾದ ಕೇವಲ ಮನನವೇ ಅಂತಃಕರಣ ಶುದ್ಧಿಯನ್ನು ಕೊಡಲಾರದೆಂಬಲ್ಲಿ ಕೆಲವು ಯುಕ್ತಿಗಳನ್ನು ಹೇಳಿ ಈ ವಿಚಾರವನ್ನು ಉಪರಮ ಹೊಂದಿಸುವೆವು.

5. ರಾಗ ದ್ವೇಷಾದಿಗಳಿಂದ ಕಲುಷಿತವಾದ ಅಭಿಮಾನಪೂರ್ಣವಾದ ಉನ್ಮತ್ತನ ಹೃದಯದಲ್ಲಿ ಸಮಾಧಿ ಧ್ಯಾನೋಪಯೋಗಿಯಾದ ತತ್ವನಿಶ್ಚಯವು ಉಂಟಾಗುವುದಿಲ್ಲ. ಶ್ರೀ ಕೃಷ್ಣನೂ ಸಹ ದ್ವಿತೀಯಾಧ್ಯಾಯದಲ್ಲಿ ಕಾಮಾಸಕ್ತರಾದ ಸಂಸಾರಿಗಳನ್ನು ವರ್ಣಿಸಿ ಅವರಿಗೆ " **ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ** " ಎಂದು ಹೇಳಿರುವನು. ಭೋಗೈಶ್ವರ್ಯಗಳಿಂದ ಅಪಹೃತವಾದ ಜ್ಞಾನವುಳ್ಳ ವಿಷಯ ಕಾಮುಕರಿಗೆ ಸಮಾಧಿ ಧ್ಯಾನಕ್ಕೆ ಕಾರಣವಾದ ತತ್ವನಿಶ್ಚಯವು ಉತ್ಪನ್ನವಾಗುವುದಿಲ್ಲವೆಂದು ಭಾವವು. ರಾಗ ದ್ವೇಷಾದಿಗಳು, ಅಭಿಮಾನವು, ಇಂದ್ರಿಯಲೋಲುಪತೆಯು, ಇವು " ಜ್ಞಾನ ವಿಜ್ಞಾನ" ನಾಶಕಗಳು ಎಂದರೆ ಜ್ಞಾನವು ಉಂಟಾಗುವುದಕ್ಕೆ ಪ್ರತಿಬಂಧಕಗಳು. ಕಥಂಚಿತ್ ಶ್ರವಣದಿಂದ ವಾಕ್ಯಜ್ಞಾನವು ಉಂಟಾದರೂ ಪ್ರಾಮಾಣ್ಯ ನಿಶ್ಚಯವು ಉಂಟಾಗದೆ " ಅವರು ಹೀಗೆ ಹೇಳುವರು, ಇವರು ಹೀಗೆ ಹೇಳುವರು, ಇದು ಅವರ ಅಭಿಪ್ರಾಯವು, ಇದು ನನ್ನ ಅಭಿಪ್ರಾಯವು " ಇತ್ಯಾದಿ ರೀತಿಯಲ್ಲಿ ವಿಶಕಲಿತವಾದ ನಾನಾ ಪ್ರಕಾರವಾದ ಜ್ಞಾನಗಳು ಹುಟ್ಟುವುವೇ ಹೊರತು ನಿರ್ಣೀತವಾದ ಶಾಸ್ತ್ರಾರ್ಥವು ತಿಳಿಯಲಾರದು. ಪಕ್ಷಪಾತರಹಿತವಾದ ಹೃದಯದಿಂದ ಚಿಂತನೆ ಮಾಡಿದರಷ್ಟೇ ಯಥಾರ್ಥ ನಿಶ್ಚಯವು ತಿಳಿದು ಬರುವುದು ! ರಾಗ ದ್ವೇಷ ಕಲುಷಿತವಾದ ಮನಸ್ಸು ಪಕ್ಷಪಾತದಿಂದ ಪೂರ್ಣವಾಗಿ ನಿಜ ತತ್ವವನ್ನು ತಿಳಿಯುವದಕ್ಕೂ ವಿಘ್ನವಾಗಿ ಪರಿಣಮಿಸುವುದು. *

ವಿಷ್ಣೂತ್ಕರ್ಷ ಜ್ಞಾನವು ಉತ್ಪನ್ನವಾದರೂ ಆ ಜ್ಞಾನವು ಸರ್ವ ವೇದ ಸಮ್ಮತವು ಮತ್ತು ಅತ್ಯಂತ ಸತ್ಯವೆಂದು ದೃಢನಿಶ್ಚಯವು ಬರದಿದ್ದರೆ ಧ್ಯಾನಾರ್ಥವಾಗಿ ನಿಶ್ಶಂಕ ಪ್ರವೃತ್ತಿಯು ಉಂಟಾಗಲಾರದು. ಏವಂಚ ಅಂತಃಕರಣ ಶುದ್ಧಿ ರಹಿತನಿಗೆ ನಾನಾ ಕಾಮ್ಯಕರ್ಮಗಳಲ್ಲೂ, ವಿಷಯಭೋಗಗಳಲ್ಲೂ ಮನಸ್ಸು ಪ್ರವೃತ್ತವಾಗಿ ಪ್ರಬಲವಾದ ಶಾಸ್ತ್ರಾಭ್ಯಾಸದಲ್ಲಿ ರತಿಯೇ ಉಂಟಾಗಲಾರದಾದುದರಿಂದ ಮನನವೇ ಸಂಭವಿಸಲಾರದು. ಕಥಂಚಿತ್ ಬುದ್ಧಿ ಪ್ರಭಾವದಿಂದ ಕೆಲವರು

---

* ಪರಸ್ತ್ರೀ ಗಮನವು ದುಃಖಕರವೆಂಬ ಮಾತಿಗೆ ಒಬ್ಬ ಕಾಮಿಯು ಉತ್ತಮರ ಪತ್ನೀ ಗಮನವು ದುಃಖಕರವು ಎಂದು ಅರ್ಥ ಮಾಡಿದನಂತೆ. ಇದೇ ರೀತಿಯಲ್ಲಿ ನಿಜ ತತ್ವಾಭಿಲಾಷೆಯಿಂದ ರಹಿತವಾದ ದುಷ್ಟ ಮನಸ್ಸಿನಿಂದ ಚಿಂತನೆ ಮಾಡಿದರೆ ಪ್ರಮಾಣಗಳ ಯಥಾರ್ಥ ಅಭಿಪ್ರಾಯವು ಸ್ಫುರಣವಾಗದೆ ಮನುಷ್ಯನು ಸ್ವಾಭಿಪ್ರಾಯಾನುಸಾರವಾಗಿ ಪ್ರಮಾಣಗಳನ್ನು ಯೋಜನೆ ಮಾಡುವುದಕ್ಕೆ ಯತ್ನಿಸುವನು. ಮತ್ತು ವಿರುದ್ಧ ಪ್ರಮಾಣಗಳನ್ನು ಮುಚ್ಚಿಡುವುದರಲ್ಲಿ ಆಸಕ್ತನಾಗುವನು. ಈ ರೀತಿಯಾಗಿಯಷ್ಟೇ ಅನಂತ ತಾಮಸ ವ್ಯಾಖ್ಯಾನಗಳು ಭಗವದ್ಗೀತೆಗೆ ಆಗಿರುವುವು !

ಮನದಲ್ಲಿ ಪ್ರವೃತ್ತರಾದರೂ ದೋಷಕಲುಷಿತ ಮನಸ್ಸಿಗೆ ವೇದಾದಿ ಪ್ರಮಾಣಗಳ ಯಥಾರ್ಥ ನಿಶ್ಚಯವು ಆಗಲಾರದು. ವಿಷ್ಣು ದ್ವೇಷದಿಂದ ಸಹಿತವಾದ ಮನಸ್ಸು ವಿಷ್ಣೂತ್ಕರ್ಷ ಪ್ರತಿಪಾದಕ ವಾಕ್ಯಗಳಿಗೆ ಪ್ರಕಾರಾಂತರ ಅರ್ಥವನ್ನು ಕಲ್ಪಿಸುವುದು ಸಹಜವೇ ! ಅಥವಾ ನಿಜವಾದ ತತ್ವಜ್ಞಾನವು ಉತ್ಪನ್ನವಾದರೂ ರಾಗ ದ್ವೇಷ ಗಳಿಂದ ಅದು ಪುನಃ ಪುನಃ ತಿರೋಧಾನವನ್ನು ಹೊಂದುತ್ತಿರುವುದರಿಂದ ಕಷ್ಟಕರ ವಾದ ತಪೋಽನುಷ್ಠಾನಗಳೂ, ಧ್ಯಾನಾದಿ ಮಹಾ ಪ್ರಯತ್ನಗಳೂ ಹೇಗೆ ತಾನೇ ಸಾಧ್ಯವಾಗುವುವು ?

ಲೌಕಿಕ ದೃಷ್ಟಾಂತವೂ ಇದೇ ಅರ್ಥವನ್ನು ಬೋಧಿಸುವುದು. ಬಂಡೆಯ ಕಲ್ಲಿನ ಮೇಲೆ ಬಿತ್ತಿದ ಬೀಜವು ಧಾನ್ಯವನ್ನು ಹುಟ್ಟಿಸುವುದೆಂತು ? ಭೂಮಿಯ ಮೇಲೆ ಬೀಜವನ್ನು ಹಾಕಿದರೂ, ಭೂಮಿಯನ್ನು ಉತ್ತು, ಗೊಬ್ಬರವನ್ನು ಹಾಕಿ, ಸಸಿಗಳನ್ನು ನೆಟ್ಟರೆ, ಉತ್ಕೃಷ್ಟವಾದ ಪೈರುಗಳು ಬೆಳೆಯುವುದನ್ನು ನಾವು ನೋಡಿ ರುತ್ತೇವೆ. ಹಾಗಿಲ್ಲದೆ ಕಳೆಯಿಂದ ಪೂರ್ಣವಾದ ಮೈದಾನದಲ್ಲಿ ಕಬ್ಬು ಬೀಜವನ್ನು ಬಿತ್ತಿದರೆ ಆ ಕಳೆಗಳೇ ಕಬ್ಬು ಬೀಜವನ್ನು ಕೊಂದು, ಅದನ್ನು ತಮಗೆ ಗೊಬ್ಬರದಂತೆ ಉಪಯೋಗಿಸಿಕೊಂಡು ತಾವೇ ಪ್ರವೃದ್ಧವಾಗಿ ಕಬ್ಬಿನ ಉತ್ಪತ್ತಿಗೇ ಅವಕಾಶ ಕೊಡ ಲಾರವು. ಕಥಂಚಿತ್ ಕಬ್ಬಿನ ಮೊಳಕೆಗಳು ಉತ್ಪನ್ನವಾದರೂ ಶಿಥಿಲವಾಗಿ ರಸ ರಹಿತವಾಗುವುದು. ಇದೇ ರೀತಿಯಲ್ಲಿ ಅಭಿಮಾನದಿಂದಲೂ ಕಾಮ ಕ್ರೋಧ ಗಳಿಂದಲೂ ಪೂರ್ಣವಾದ ಮನಸ್ಸಿನಲ್ಲಿ ಪ್ರಾಪ್ತವಾದ ಶಾಸ್ತ್ರಾರ್ಥವು ದುಷ್ಕರ್ಮ ಗಳಿಗೂ ಬ್ರಾಹ್ಮಣ ದ್ರೋಹಾದಿ ಮಹಾ ಪಾಪಗಳಿಗೂ ಕಾರಣವಾಗಿ ಮೋಕ್ಷಕ್ಕೆ ಪ್ರತಿಬಂಧಕವೇ ಆಗುವುದು. ಕಿಂಚ ಅಪಾರವಾದ ಬುದ್ಧಿ ಸಾಮರ್ಥ್ಯವುಳ್ಳವನಾಗಿ ಉತ್ತಮ ಸಂಗ ಪ್ರಭಾವದಿಂದ ಶಾಸ್ತ್ರದ ಯಥಾರ್ಥ ನಿಶ್ಚಯವನ್ನು ತಿಳಿದರೂ ಕೂಡ ರಾಗ ದ್ವೇಷಗಳಿಗೆ ವಶನಾದರೆ ಪದೇ ಪದೇ ಭಗವದ್ವಿಸ್ಮೃತಿರೂಪವಾದ ಮಹಾ ವ್ಯಾಧಿಯಿಂದ ಪೀಡಿತನಾಗಿ ಧ್ಯಾನ ಮಾಡುವುದರಲ್ಲಿ ಅಸಮರ್ಥನಾಗು ವನು. ಆದುದರಿಂದ ಭಕ್ತಿ ವಿರಕ್ತಿಗಳಿಂದ ಯುಕ್ತವಾದ ಪ್ರಸನ್ನಚಿತ್ತವು ಮನನ ಮಾಡುವವನಿಗೂ ಅತ್ಯಂತ ಆವಶ್ಯಕವಾಗಿರುವುದು. ಇವೆರಡೂ ಮಿಳಿತವಾಗಿಯೇ ಧ್ಯಾನಕ್ಕೆ ಕಾರಣವಾಗುವುವು. ಶ್ರವಣವೂ ಕೂಡ ಶ್ರದ್ಧೆಯಿಂದ ವಿಧ್ಯುಕ್ತ ರೀತಿ ಯಲ್ಲಿ ನಡೆದರೇನೇ ಮೋಕ್ಷೋಪಯೋಗಿಯಾಗುವುದೆಂದು ಪೂರ್ವೋಕ್ತ ನ್ಯಾಯ ದಿಂದ ನಿಶ್ಚಯಿಸಬೇಕು.

---

# 8. ಎಂಟನೆಯ ಅಂಶವು.

## ಪ್ರಕಾರಾಂತರದಿಂದ ಧ್ಯಾನಕಾರಣ ಸಾಮಗ್ರೀ ವಿಮರ್ಶೆಯು ಕರ್ಮಯೋಗವು.

1. **ಪ್ರಶ್ನೆ—** ಸ್ವಾಮೀ ! ಶ್ರವಣಾದಿಗಳಿಂದ ಪರಂಪರೆಯಾಗಿ ಅಪರೋಕ್ಷ ಜ್ಞಾನವು ಉತ್ಪತ್ತಿಯಾಗುವುದೆಂದು ಇದುವರೆವಿಗೆ ತಮ್ಮಿಂದ ನಿರೂಪಿತವಾಯಿತು. ಆದರೆ ಕರ್ಮಯೋಗಕ್ಕೆ ಜ್ಞಾನೋತ್ಪತ್ತಿಯಲ್ಲಿ ಯಾವ ವಿಧವಾಗಿಯೂ ಕಾರಣತ್ವವು ಸಂಭವಿಸುವುದಿಲ್ಲವೆಂಬ ನಮ್ಮ ಸಂದೇಹವನ್ನು ತಾವು ಈ ದಿವಸ ದಯಮಾಡಿ ಪರಿಹರಿಸಬೇಕು.

**ಉತ್ತರ— ಶ್ರೀ ಶ್ರೀಗಳವರು—** ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು "ಕರ್ಮಯೋಗ" ವನ್ನು **ಎರಡು ವಿಧವಾಗಿ** ಪ್ರತಿಪಾದಿಸಿರುತ್ತಾನೆ. ಒಂದು ಅರ್ಥ ದಲ್ಲಿ ಶ್ರವಣ ಮನನಗಳೂ ಸಹ ಕರ್ಮ ಪ್ರಭೇದಗಳೇ ಆಗಿರುವುವು. ಅಪರೋಕ್ಷ ಜ್ಞಾನಾರ್ಥವಾದ ಸಕಲ ವಾಚನಿಕ, ಮಾನಸಿಕ, ಶಾರೀರಕ ವ್ಯಾಪಾರಗಳೂ ಕರ್ಮ ವೆಂದೆನಿಸುವುವು. ಶಾಸ್ತ್ರ ಪಾರಾಯಣಾದಿಗಳು ವಾಗಿಂದ್ರಿಯಜನಿತ ಕರ್ಮಗಳು. ಶ್ರವಣ ಮನನಾದಿಗಳು ಮಾನಸಿಕ ಕ್ರಿಯೆಗಳು. ವಿಧ್ಯುಕ್ತ ಕರ್ಮಾನುಷ್ಠಾನಗಳು ಶಾರೀರಕ ಕ್ರಿಯೆಗಳು. ಕರ್ಮಯೋಗವೆಂದರೆ ರಾಗ ದ್ವೇಷವರ್ಜನರೂಪವಾದ ಸಂನ್ಯಾಸವೆಂಬ ಮನೋಧರ್ಮದಿಂದ ಸಹಿತವಾಗಿ, ಮತ್ತು ಭಗವಂತನ ಸ್ವಾ-ತಂತ್ರ್ಯವೇ ಮೊದಲಾದ ಅನೇಕ ಕಲ್ಯಾಣ ಗುಣಗಳ ಜ್ಞಾನಪೂರ್ವಕವಾಗಿ, ವಿಷ್ಣು ಭಕ್ತಿಯಿಂದ, ವಿಧ್ಯುಕ್ತವಾದ ಕರ್ಮಾನುಷ್ಠಾನವನ್ನು ನಿಷ್ಕಾಮವಾಗಿ ಮಾಡಿ ಅಂತ್ಯದಲ್ಲಿ, ಸರ್ವ ಕರ್ಮ ಫಲವನ್ನೂ ಭಗವಂತನಿಗೆ ಸಮರ್ಪಿಸುವುದು ಎಂದರ್ಥವು. ಇಂಥ ವಿಶಿಷ್ಟ ಕರ್ಮಯೋಗವು ಷಷ್ಠಾಧ್ಯಾಯದಲ್ಲಿ ಉಕ್ತವಾದ ಧ್ಯಾನಯೋಗಕ್ಕೆ ಸಾಕ್ಷಾತ್ಕಾರಣವಾಗಿ ಧ್ಯಾನದ್ವಾರಾ ಅಪರೋಕ್ಷ ಜ್ಞಾನವನ್ನು ಹುಟ್ಟಿಸುವುದು. ಈ ನಿರೂಪಣೆಯಲ್ಲಿ ಕರ್ಮವು ಜ್ಞಾನೋತ್ಪತ್ತಿಯಲ್ಲಿ ಹೇಗೆ ಕಾರಣವಾಗುವುದೆಂಬ ಪ್ರಶ್ನೆಗೇ ಅವಸರವಿಲ್ಲ. ಕೇವಲ ಶಾರೀರಕ ಕರ್ಮವು ಜ್ಞಾನವನ್ನು ಹುಟ್ಟಿಸುವುದು ಎಂದು ಹೇಳಿದ್ದರೆ ಸಂದೇಹಕ್ಕೆ ಅವಕಾಶವಿರುವುದರಿಂದ ಪ್ರಶ್ನೆಯು ಉಚಿತವಾಗು ತ್ತಿತ್ತು. ಪ್ರಕೃತದಲ್ಲಿ ಭಕ್ತಿ ಜ್ಞಾನಗಳಿಂದ ಸಹಿತವಾದ ನಿಷ್ಕಾಮ ಕರ್ಮದಿಂದ ಪರಮಾತ್ಮನು ಪ್ರಸನ್ನನಾಗಿ ಧ್ಯಾನಾಧಿಕಾರವನ್ನು ಕೊಡುವನು ಎಂಬ ಅರ್ಥವು ಸರ್ವಸಮ್ಮತವಾದುದು.

ಇಂಥ ವಿಶಿಷ್ಟ ಕರ್ಮಯೋಗವು ಚತುರಂಗರೂಪವಾದುದು. 1. ಭಗವ ದರ್ಪಣ ಬುದ್ಧಿಯಿಂದ ವಿಧ್ಯುಕ್ತ ಕರ್ಮಾನುಷ್ಠಾನರೂಪವಾದ **ಕರ್ಮವೆಂದು** ಹೆಸ ರುಳ್ಳ ಪ್ರಥಮಾಂಶವು. 2. ಶ್ರವಣಾದಿಜನಿತ ಪರಮಾತ್ಮನ ಜ್ಞಾನವು **ಸಾಂಖ್ಯ** ವೆಂದು ಕರೆಯಲ್ಪಡುವ ದ್ವಿತೀಯಾಂಶವು. 3. ರಾಗ ದ್ವೇಷಾದಿ ವರ್ಜನರೂಪ

ವಾದ ಸಂನ್ಯಾಸವೆಂದು ಕರೆಯಲ್ಪಡುವ ತೃತೀಯಾಂಶವು. 4. ಅಂತ್ಯದಲ್ಲಿ ಸರ್ವ ಕರ್ಮ ಫಲಗಳನ್ನೂ ಪರಮಾತ್ಮನಲ್ಲಿ ಸಮರ್ಪಣ ಮಾಡೋಣವೆಂಬ **ತ್ಯಾಗವೆಂದು** ಹೆಸರುಳ್ಳ ಚತುರ್ಥಾಂಶವು. ಇವು ನಾಲ್ಕೂ ಮಿಳಿತವಾಗಿ ಧ್ಯಾನದ್ವಾರಾ ಸಾಕ್ಷಾದಪರೋಕ್ಷ ಜ್ಞಾನವನ್ನೇ ಹುಟ್ಟಿಸುವುವೆಂದು ಹೇಳುವುದು ಶ್ರೀಕೃಷ್ಣನಿಗೆ ಅತ್ಯಂತ ಸಮ್ಮತವಾದುದು. ಇವು ನಾಲ್ಕೂ ಮಿಳಿತವಾಗಿಯೇ ಜ್ಞಾನವನ್ನು ಹುಟ್ಟಿಸುವುವೆಂದು ಶ್ರೀ ಕೃಷ್ಣನು ಪ್ರಥಮ ಷಟ್ಕದಲ್ಲಿ ಸ್ಫುಟತರವಾಗಿ ಪ್ರತಿಪಾದಿಸಿರುತ್ತಾನೆ :—

**(1) ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥**
—(2. 48.)

ಎಲೈ ಧನಂಜಯನೇ! ಕರ್ಮಫಲ ಸ್ನೇಹವನ್ನು ಪರಿತ್ಯಾಗ ಮಾಡಿ, ಜ್ಞಾನೋಪಾಯದಲ್ಲಿ ನಿರತನಾಗಿ, ಕರ್ಮಫಲ ಪ್ರಾಪ್ತಿ ಅಪ್ರಾಪ್ತಿಗಳಿಂದ ಮನೋವಿಕಾರ ರಹಿತನಾಗಿ ವಿಹಿತ ಕರ್ಮಾನುಷ್ಠಾನವನ್ನು ನೀನು ಮಾಡು. ಫಲಾಪೇಕ್ಷಾರಾಹಿತ್ಯವು ತ್ಯಾಗಸಹಿತವಾಗಿ ಮುಖ್ಯ ಜ್ಞಾನೋಪಾಯವೆನಿಸುತ್ತದೆ.

ಈ ವಾಕ್ಯದಲ್ಲಿ "ಸಂಗಂತ್ಯಕ್ತ್ವಾ" ಎಂದು ಹೇಳಿದುದರಿಂದ ಕರ್ಮಫಲೇಚ್ಛಾರಾಹಿತ್ಯರೂಪವಾದ ಸಂನ್ಯಾಸವೂ, "ಕುರುಕರ್ಮಾಣಿ" ಎಂದು ಹೇಳಿದುದರಿಂದ ವಿಹಿತ ಕರ್ಮಾನುಷ್ಠಾನರೂಪವಾದ ಕರ್ಮವೂ, "ಯೋಗಸ್ಥಃ" ಎಂಬ ಮಾತಿನಿಂದ ಭಗವಂತನ ಸ್ಮೃತಿರೂಪವಾದ ಸಾಂಖ್ಯವೂ ಮತ್ತು ಅಂತ್ಯದಲ್ಲಿ ಕರ್ಮಫಲ ಸಮರ್ಪಣೆ ಎಂಬ ತ್ಯಾಗವೂ ಸೂಚಿಸಲ್ಪಟ್ಟಿರುವುವು.

ಸಾಂಖ್ಯನಾಮಕವಾದ ಭಗವತ್ತತ್ವ ನಿಶ್ಚಯವೂ ಫಲ ಸಮರ್ಪಣೆಯೆಂಬ ತ್ಯಾಗವೂ ಧ್ಯಾನಕಾರಣವಾದ ವಿಶಿಷ್ಟ ಕರ್ಮಯೋಗಕ್ಕೆ ಅವಶ್ಯಕವೆಂದು ಇಲ್ಲಿಯೇ ಶ್ರೀ ಕೃಷ್ಣನು ಸ್ಪಷ್ಟವಾಗಿ ಹೇಳುತ್ತಾನೆ :—

**(2) ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಂ ॥**
—(2. 51.)

ಬುದ್ಧಿಯುಕ್ತಾಃ ಎಂದರೆ ಶಾಸ್ತ್ರಾಭ್ಯಾಸದಿಂದ ಉತ್ಪನ್ನವಾದ ಭಗವತ್ತತ್ವ ನಿಶ್ಚಯವುಳ್ಳವರು ಕರ್ಮಜನ್ಯ ಫಲವನ್ನು ಶ್ರೀ ಕೃಷ್ಣನಲ್ಲಿ ಅರ್ಪಣೆ ಮಾಡಿ (ಧ್ಯಾನದ್ವಾರಾ) ಅಪರೋಕ್ಷ ಜ್ಞಾನವನ್ನು ಹೊಂದಿ ಮುಕ್ತರಾಗುತ್ತಾರೆ.

ಚತುರ್ಥಾಧ್ಯಾಯದಲ್ಲಿಯೂ ಸಹ, ಈ ನಾಲ್ಕು ಅಂಗಗಳೂ ಮಿಳಿತವಾಗಿ ಧ್ಯಾನಕಾರಣವೆಂದು ಶ್ರೀ ಕೃಷ್ಣನು ನಿರೂಪಿಸುತ್ತಾನೆ :—

**(3) ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥**

ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ ।
ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥
ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ।
ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ॥
ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ।
ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ॥
ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।
ಸಮಸ್ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ ॥
ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।
ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥
—(4. 18-23.)

ಯಾವಾತನು ಕರ್ಮಾನುಷ್ಠಾನವನ್ನು ಮಾಡುವಾಗಲೂ ಕೂಡ ತಾನು ಅಸ್ವತಂತ್ರಕರ್ತನೆಂದು ತಿಳಿಯುವನೋ, ಮತ್ತು ಸ್ವಯಂ ಕರ್ಮರಹಿತನಾಗಿ ಸುಷುಪ್ತ್ಯಾದಿ ಅವಸ್ಥೆಯಲ್ಲಿ ಇರುವಾಗಲೂ ಕೂಡ ಸ್ವತಂತ್ರಕರ್ತನಾದ ಭಗವಂತನ ವ್ಯಾಪಾರಗಳು ಉಂಟೆಂದು ತಿಳಿಯುತ್ತಾನೆಯೋ ಅಂಥ ಪುರುಷನು ಮನುಷ್ಯರಲ್ಲಿ ಜ್ಞಾನಿಯು * ಅವನೇ ಜ್ಞಾನೋಪಾಯವಂತನು. ಅವನೇ ಪೂರ್ಣವಾದ ಕರ್ಮ ಫಲವನ್ನು ಹೊಂದತಕ್ಕವನು. ( ಇದರಿಂದ ಸಾಂಖ್ಯದ ಅವಶ್ಯಕತೆಯು ಹೇಳಲ್ಪಟ್ಟಂತಾಯಿತು. ) ಯಾವಾತನ ಸರ್ವ ಕರ್ಮೋಪಕ್ರಮಗಳೂ ಕರ್ಮಫಲೇಚ್ಛೆಯೆಂಬ ರಾಗದಿಂದಲೂ ಮತ್ತು ಈ ಕರ್ಮವನ್ನು ಇಂಥ ಕ್ಷುದ್ರ ಫಲಾರ್ಥವಾಗಿ ಮಾಡುತ್ತೇನೆಂಬ ಸಂಕಲ್ಪದಿಂದಲೂ ರಹಿತವಾಗಿ ಜರುಗುವುವೋ ಅಂಥ, ಪರಮಾತ್ಮನೇ ಸ್ವತಂತ್ರಕರ್ತನು. ಜೀವನು ಅಸ್ವತಂತ್ರಕರ್ತನೆಂಬ ಜ್ಞಾನರೂಪವಾದ ಅಗ್ನಿಯಿಂದ ದಹಿಸಲ್ಪಟ್ಟ ಪಾಪವುಳ್ಳವನನ್ನು ತತ್ತ್ವಜ್ಞಾನಿಯೆಂದು ಬುಧರು ಹೇಳುತ್ತಾರೆ. ಕರ್ಮ ಫಲಗಳಲ್ಲಿ ದೃಢವಾದ ಸ್ನೇಹವನ್ನು ಪರಿತ್ಯಾಗ ಮಾಡಿ ( ಎಂದರೆ ಕರ್ಮದಲ್ಲಿ ನಾನು ಸ್ವತಂತ್ರಕರ್ತನೆಂಬ ಅಭಿಮಾನವನ್ನೂ ಕರ್ಮಜನ್ಯ ಫಲದಲ್ಲಿ ಅಪೇಕ್ಷಾರೂಪವಾದ ರಾಗವನ್ನೂ ಪರಿತ್ಯಾಗ ಮಾಡಿ ), ನಿತ್ಯ ತೃಪ್ತನೂ ನಿರಾಶ್ರಯನೂ ಆದ ಪರಮಾತ್ಮನಿಗೆ ನಾನು ಪ್ರತಿಬಿಂಬನು ಎಂಬ ಜ್ಞಾನದಿಂದ ಸಹಿತನಾಗಿ, ಕರ್ಮದಲ್ಲಿ ವಿಶೇಷತಃ ಪ್ರವೃತ್ತನಾದರೂ ಅವನು ಕರ್ಮಬಂಧವನ್ನು ಸ್ವಲ್ಪವೂ ಹೊಂದುವುದಿಲ್ಲ. ಆಶಾರಹಿತನಾಗಿ ನಿಗೃಹೀತವಾದ ಮನೋವೃತ್ತಿಗಳುಳ್ಳವನು ಸ್ವದೇಹೇಂದ್ರಿಯಾದಿಗಳಲ್ಲಿ ಅಭಿಮಾನರಹಿತನಾಗುವನು. ಇಂಥ ಜ್ಞಾನಿಯು ಶರೀರ ಧಾರಣಾರ್ಥವಾಗಿ ಮಾತ್ರ ಪ್ರವೃತ್ತಿಕರ್ಮವನ್ನು ಆಚರಿಸಿದರೂ

* ಇತರರು ಪಶು ಸಮಾನರೆಂದು ಭಾವವು.

ಪಾಪವನ್ನು ಹೊಂದುವುದಿಲ್ಲ; ಈಶ್ವರೇಚ್ಛೆಯಿಂದ ಪ್ರಾಪ್ತವಾದುದರಿಂದ ತೃಪ್ತನಾಗಿ, ಸುಖ ದುಃಖ ಲಾಭಾಲಾಭಾದಿ ದ್ವಂದ್ವಗಳಿಂದ ವಿಕಾರರಹಿತನಾಗಿ, ಮಾತ್ಸರ್ಯರಹಿತನಾಗಿ, ಕರ್ಮಫಲಪ್ರಾಪ್ತಿ ಅಪ್ರಾಪ್ತಿಗಳಿಂದ ಉಚ್ಚತ್ವ ನೀಚತ್ವಗಳನ್ನು ಹೊಂದದೇ ಕರ್ಮವನ್ನಾಚರಿಸಿದರೂ ಕರ್ಮದಿಂದ ಬಂಧಿಸಲ್ಪಡುವುದಿಲ್ಲ. (ಇದರಿಂದ ಸಂನ್ಯಾಸ, ಸಾಂಖ್ಯ, ಕರ್ಮಾನುಷ್ಠಾನ ಈ ಮೂರು ಅಂಶಗಳ ಅವಶ್ಯಕತೆಯೂ ಹೇಳಲ್ಪಟ್ಟಂತಾಯಿತು). ಶ್ರೀ ಕೃಷ್ಣನು ಇಷ್ಟು ಪ್ರಮೇಯವನ್ನೂ ಸಂಗ್ರಹಿಸಿ ಒಂದೇ ಶ್ಲೋಕದಲ್ಲಿ ನಿರೂಪಿಸುತ್ತಾನೆ :— ಗತಸಂಗಸ್ಯ = ಫಲಸ್ನೇಹರಹಿತನಾದ, ಮುಕ್ತಸ್ಯ = ಸ್ವಾತಂತ್ರ್ಯಾದ್ಯಭಿಮಾನರಹಿತನಾದ, ಜ್ಞಾನಾವಸ್ಥಿತಚೇತಸಃ = ವಿಷ್ಣು ಸರ್ವೋತ್ತಮತ್ವ ಜ್ಞಾನದಲ್ಲಿ ನಿಶ್ಚಲವಾಗಿ ಸ್ಥಿತವಾದ ಚಿತ್ತವುಳ್ಳ ಮತ್ತು ಯಜ್ಞಾಯ ಕರ್ಮ ಆಚರತಃ = ಎಂದರೆ ಯಜ್ಞನಾಮಕ ವಿಷ್ಣು ಪ್ರೀತ್ಯರ್ಥವಾಗಿ ಸಕಲ ಕರ್ಮಗಳನ್ನೂ ಆಚರಿಸತಕ್ಕಂಥಾ ಪುರುಷನ ಸಕಲ ಕರ್ಮಗಳೂ ಬಂಧಕಗಳಾಗುವುದಿಲ್ಲ. ಅವನು ತಾನು ಆಚರಿಸುವ ಕರ್ಮಗಳಿಂದ ಬದ್ಧನಾಗುವುದಿಲ್ಲ ಮತ್ತು ಸಕಲ ಪಾಪಸಂಕ್ಷಯವನ್ನೂ ಹೊಂದುತ್ತಾನೆ ಎಂದರ್ಥವು.

ಇದರಲ್ಲಿ ಗತಸಂಗಸ್ಯ ಎಂಬ ಶ್ಲೋಕ ಭಾಗದಿಂದ ಸಂನ್ಯಾಸವೂ, ಮುಕ್ತಸ್ಯ, ಜ್ಞಾನಾವಸ್ಥಿತಚೇತಸಃ ಎಂಬ ವಿಶೇಷಣಗಳಿಂದ ಸಾಂಖ್ಯವೂ, ಯಜ್ಞಾಯಾಚರತಃ ಕರ್ಮ ಎಂಬ ಶ್ಲೋಕ ಭಾಗದಿಂದ ಕರ್ಮಾನುಷ್ಠಾನರೂಪವಾದ ಯೋಗವೂ ಮತ್ತು ತ್ಯಾಗವೂ ಹೇಳಲ್ಪಟ್ಟಿರುವುವು. ಇದೇ ವಿಶಿಷ್ಟ ಕರ್ಮ ಯೋಗವು.

ಪಂಚಮಾಧ್ಯಾಯದಲ್ಲಿಯೂ ಸಹ ಶ್ರೀ ಕೃಷ್ಣನು ಸಾಂಖ್ಯ, ಸಂನ್ಯಾಸ, ಕರ್ಮಯೋಗ ಇವುಗಳೆಲ್ಲಾ ಮಿಳಿತವಾಗಿಯೇ ಧ್ಯಾನಕಾರಣವಾಗಿ ಅಪರೋಕ್ಷ ಜ್ಞಾನವನ್ನು ಹುಟ್ಟಿಸುವುವೆಂದು ಹೇಳಿರುತ್ತಾನೆ :—

**(4) ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।**
—(5. 2·)

ಕಾಮಾದಿ ವರ್ಜನರೂಪವಾದ ಸಂನ್ಯಾಸವು ಮತ್ತು ಭಗವದರ್ಪಣ ಬುದ್ಧಿಯಿಂದ ಕರ್ಮಾನುಷ್ಠಾನ ರೂಪವಾದ ಯೋಗವು, ಉಭೌ = ಇವೆರಡೂ ಸೇರಿಯೇ ಎಂದರೆ ಇವುಗಳೆರಡೂ ಮಿಳಿತವಾಗಿಯೇ ಮೋಕ್ಷ ಕಾರಣವಾಗುವುವು.

ಕರ್ಮಯೋಗ ಸಂನ್ಯಾಸಗಳ ಮೇಳನವು ಮತ್ತು ಸಾಂಖ್ಯವೂ ಧ್ಯಾನಾದಿ ದ್ವಾರಾ ಜ್ಞಾನೋತ್ಪತ್ತಿಯಲ್ಲಿ ಅತ್ಯವಶ್ಯಕವೆಂದು ಶ್ರೀ ಕೃಷ್ಣನು ಪುನಃ ಉಪಪಾದಿಸುತ್ತಾನೆ :—

**(5) ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನಚಿರೇಣಾಧಿಗಚ್ಛತಿ ॥**

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ |**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ||**
—(5. 6–7.)

ಎಲೈ ಪಾರ್ಥನೇ ! ಭಗವದರ್ಪಣ ಬುದ್ಧಿಯಿಂದ ಮಾಡಿದ ಕರ್ಮಾನುಷ್ಠಾನವೆಂಬ ಯೋಗವಿಲ್ಲದಿದ್ದರೆ ಕೇವಲ ಕಾಮಾದಿವರ್ಜನ ರೂಪವಾದ ಸಂನ್ಯಾಸವು ನರಕಾದ್ಯನರ್ಥಗಳಿಗೇ ಕಾರಣವಾಗುತ್ತದೆ. ಯೋಗ ಸಹಕೃತನಾಗಿ ಮನನಶೀಲನಾದ ಯತಿಯು ಕ್ಷಿಪ್ರದಲ್ಲಿ ಪರಬ್ರಹ್ಮನನ್ನು ಹೊಂದುತ್ತಾನೆ. ಭಗವದರ್ಪಣ ಬುದ್ಧಿಯಿಂದ ವಿಹಿತ ಕರ್ಮಾನುಷ್ಠಾನವೆಂಬ ಯೋಗದಿಂದ ಸಹಕೃತನಾಗಿ, ವಿಶುದ್ಧವಾದ ಮನಸ್ಸುಳ್ಳವನಾಗಿ, ( ಎಂದರೆ ಫಲಸ್ನೇಹರಾಹಿತ್ಯ ರೂಪವಾದ ಸಂನ್ಯಾಸವನ್ನು ಹೊಂದಿ ), ನಿಗೃಹೀತವಾದ ಮನಸ್ಸುಳ್ಳವನಾಗಿ, ಜಿತೇಂದ್ರಿಯನಾಗಿ, ಮತ್ತು ಸರ್ವ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿರುವ ಪರಮಾತ್ಮನಲ್ಲಿ ಇಡಲ್ಪಟ್ಟ ಚಿತ್ತವುಳ್ಳವನಾಗಿ ಕರ್ಮವನ್ನು ಆಚರಿಸುವವನು ಕರ್ಮದಿಂದ ಬಂಧಿಸಲ್ಪಡುವುದಿಲ್ಲ.

ತತ್ವನಿಶ್ಚಯರೂಪವಾದ ಸಾಂಖ್ಯವೂ, ಸಂಕಲ್ಪ ತ್ಯಾಗರೂಪವಾದ ಸಂನ್ಯಾಸವೂ, ಪರಮಾತ್ಮನಲ್ಲಿ ಫಲ ಸಮರ್ಪಣರೂಪವಾದ ತ್ಯಾಗವೂ ಜ್ಞಾನೋತ್ಪತ್ತಿಯಲ್ಲಿ ಅತ್ಯಾವಶ್ಯಕವೆಂಬುದು ಶ್ರೀ ಕೃಷ್ಣನ ಮುಂದಿನ ವಾಕ್ಯಗಳಿಂದ ನಿಸ್ಸಂಶಯವಾಗುವಂತೆ ನಿಶ್ಚಿತವಾಗುವುದು.

(6) **ನೈವ ಕಿಂಚಿತ್ಕರೋಮಿತಿ ಯುಕ್ತೋ ಮನ್ಯೇತ ತತ್ತ್ವವಿತ್ |**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ||**
**ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ |**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ||**
**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ |**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ||**
**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ |**
**ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ||**
**ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿನೈಷ್ಠಿಕೀಂ |**
**ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ||**
**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ |**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ನಕಾರಯನ್ ||**
—(5. 8–13.)

ಯುಕ್ತಃ = ಭಗವದರ್ಪಣ, ಫಲತ್ಯಾಗ, ಭಗವತ್ಸ್ಮೃತಿಯೇ ಮುಂತಾದ ಉಪಾಯಗಳಿಂದ ಸಹಿತನಾದ ವಿಶಿಷ್ಟ ಕರ್ಮಯೋಗಿಯು, ತತ್ತ್ವವಿತ್ = ತತ್ತ್ವ ಜ್ಞಾನದಿಂದ ಕೂಡಿದವನಾಗಿ, ದರ್ಶನ, ಶ್ರವಣ, ಸ್ಪರ್ಶನ, ಆಸ್ವಾದನ, ಗಂಧ ಗ್ರಹಣಾದಿ ಜ್ಞಾನೇಂದ್ರಿಯ ವ್ಯಾಪಾರಗಳನ್ನು ಮಾಡುತ್ತಿದ್ದರೂ, ಭೋಜನ ಮಾಡುತ್ತಿದ್ದರೂ, ಗಮನಾಗಮನಾದಿ ಪಾದೇಂದ್ರಿಯ ವ್ಯಾಪಾರವನ್ನು ಮಾಡುತ್ತಿದ್ದರೂ, ನಿದ್ರಿಸಬೇಕಾದರೂ, ಶ್ವಾಸ ಬಿಡುತ್ತಿದ್ದರೂ, ಪ್ರಲಾಪ ಮಾಡುತ್ತಿದ್ದರೂ, ಮಲಾದಿ ವಿಸರ್ಜನೆಯನ್ನು ಮಾಡುತ್ತಿದ್ದರೂ, ಹಸ್ತದಿಂದ ಪದಾರ್ಥಗಳನ್ನು ಗ್ರಹಣ ಮಾಡುತ್ತಿದ್ದರೂ, ಕಣ್ಣು ರೆಪ್ಪೆಗಳನ್ನು ತೆರೆಯುತ್ತಿದ್ದರೂ ಮುಚ್ಚುತ್ತಿದ್ದರೂ ಕೂಡ ಸಕಲ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೂ ತಮ್ಮ ತಮ್ಮ ವಿಷಯಗಳಲ್ಲಿ ಸ್ವತಂತ್ರನಾದ ಹರೀಚ್ಛೆಯಿಂದ ಪ್ರವರ್ತಿಸುತ್ತವೆ; ನಾನು ಸ್ವತಂತ್ರನಾಗಿ ಯಾವ ವ್ಯಾಪಾರವನ್ನೂ ಮಾಡುವುದಿಲ್ಲ ಎಂದು ಅನುಸಂಧಾನವನ್ನು ಮಾಡುತ್ತಾನೆ. ಯಾವಾತನು ಕರ್ಮ ಫಲದಲ್ಲಿ ಅಪೇಕ್ಷಾರಹಿತನಾಗಿ, ಕರ್ಮ ಫಲಗಳನ್ನು ಪರಬ್ರಹ್ಮನಲ್ಲಿ ಸಮರ್ಪಿಸುತ್ತಾ ಕರ್ಮಗಳನ್ನು ಆಚರಿಸುತ್ತಾನೆಯೋ, ಅವನು ಕಮಲಪತ್ರವು ಜಲದಲ್ಲಿ ನಿರ್ಲಿಪ್ತವಾಗಿರುವಂತೆ ತಾನು ಮಾಡಿದ ಕರ್ಮಗಳಿಂದ ಬಂಧಿಸಲ್ಪಡುವುದಿಲ್ಲ. ಸಾಂಪ್ರದಾಯಿಕ ಆಚಾರವೂ ಹೀಗೆಯೇ ಇರುವುದೆಂದು ಶ್ರೀ ಕೃಷ್ಣನು ಹೇಳುತ್ತಾನೆ:— ಯೋಗಿಗಳು ಆತ್ಮಶುದ್ಧ್ಯರ್ಥವಾಗಿ ಸ್ವಾತಂತ್ರ್ಯಾಭಿಮಾನರಹಿತರಾಗಿ ಶರೀರದಿಂದಲೂ, ಮನೋ ಇಂದ್ರಿಯದಿಂದಲೂ, ಬುದ್ಧಿಯಿಂದಲೂ, ಕರ್ಮ ಫಲದಲ್ಲಿ ಅಪೇಕ್ಷಾರಹಿತರಾಗಿ ಕರ್ಮವನ್ನು ಆಚರಿಸುತ್ತಾರೆ. ಕರ್ಮ ಫಲಾಪೇಕ್ಷಾರಹಿತನಾಗಿ ಭಗವದರ್ಪಣಾದಿ ಬುದ್ಧಿಯಿಂದ ಕರ್ಮಾನುಷ್ಠಾನವನ್ನು ಮಾಡುವವನು ( ಜ್ಞಾನ ದ್ವಾರಾ ) ಸ್ವಾಭಾವಿಕವಾದ ಎಂದರೆ ಸ್ವರೂಪಾನಂದಾವಿರ್ಭಾವ ರೂಪಾತ್ಮಕವಾದ ಮುಕ್ತಿಯನ್ನು ಹೊಂದುತ್ತಾನೆ. ಫಲಾಪೇಕ್ಷೆಯುಳ್ಳವನಾಗಿ ಭಗವದರ್ಪಣಾದಿ ಯೋಗರಹಿತನಾದ ಸ್ವೇಚ್ಛಾಚಾರಿಯು ನಿಬಧ್ಯತೇ = ಅತ್ಯಂತವಾಗಿ ಬಂಧಿಸಲ್ಪಡುತ್ತಾನೆ ಎಂದರೆ ನರಕಾದ್ಯನರ್ಥಗಳನ್ನು ಹೊಂದುತ್ತಾನೆ. ಯೋಗಿಯು ಸರ್ವ ಕರ್ಮಗಳನ್ನೂ ಅನುಷ್ಠಾನ ಮಾಡಿ ಮನಸಾ ಸಂನ್ಯಸ್ಯ = ಭಗವಂತನ ಪ್ರೇರಣೆಯಿಂದಲೇ ಅಸ್ವತಂತ್ರನಾದ ನಾನು ಕರ್ಮಗಳನ್ನು ಮಾಡಿರುವೆನು ಎಂದು ಅನುಸಂಧಾನ ಮಾಡಿ ಕರ್ಮ ಫಲವನ್ನು ಪರಮಾತ್ಮನಲ್ಲಿ ಸಮರ್ಪಿಸಿ, ಜಿತಮನಸ್ಕನಾಗಿ ನವದ್ವಾರಾತ್ಮಕವಾದ ಈ ದೇಹದಲ್ಲೇ ಇದ್ದರೂ ಸ್ವಾತಂತ್ರ್ಯ ಜ್ಞಾನದಿಂದ ಯಾವುದನ್ನೂ ಆಚರಿಸದೆ ಮತ್ತು ಯಾವುದನ್ನೂ ಮಾಡಿಸದೆ ಸುಖವಾಗಿ ಇರುತ್ತಾನೆ.

ಚತುರ್ಥಾಧ್ಯಾಯದಲ್ಲಿ ಸಾಂಖ್ಯವೆಂಬ ಪರಬ್ರಹ್ಮವಿಷಯಕ ತತ್ತ್ವಜ್ಞಾನ ಸಹಿತವಾದ ವಿಶಿಷ್ಟ ಕರ್ಮಯೋಗದ ಸ್ವರೂಪವನ್ನು ಶ್ರೀ ಕೃಷ್ಣನು ಸ್ವಲ್ಪ ವಿಶೇಷವಾಗಿ ವರ್ಣಿಸಿರುತ್ತಾನೆ. ಮತ್ತು ಸಾಕ್ಷಾದಪರೋಕ್ಷ ಸಾಧನವಾದ ಧ್ಯಾನೋಪಯೋಗಿಯಾದ ಇಂಥ ಕರ್ಮಯೋಗವು ಅನೇಕ ಪ್ರಕಾರವಾಗಿರುವುವು ಎಂದೂ ಹೇಳುತ್ತಾನೆ :—

(7) ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಂ ।
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥
ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।
ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪ ಜುಹ್ವತಿ ॥
ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।
ಶಬ್ದಾದೀನ್ ವಿಷಯಾನನ್ಯೇ ಇಂದ್ರಿಯಾಗ್ನಿಷು ಜುಹ್ವತಿ ॥
ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।
ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥
ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।
ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಶಂಸಿತವ್ರತಾಃ ॥
ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ ।
ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ॥
ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ ।
ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥
ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಂ ।
ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥
—(4. 24-31.)

ಯಾವಾತನು ಹೋಮಸಾಧನವಾದ ದರ್ವೀಪಿಠರಾದಿಗಳು ಬ್ರಹ್ಮಾಧೀನವು, ಬ್ರಹ್ಮನಿಂದ ಅಧಿಷ್ಠಿತವಾದುದು; ಹೋಮದ್ರವ್ಯವಾದ ಹವಿಸ್ಸು ಬ್ರಹ್ಮಾಧೀನವು, ಬ್ರಹ್ಮನಿಂದ ಅಧಿಷ್ಠಿತವಾದುದು; ಅಗ್ನಿಯಲ್ಲಿ ಪರಬ್ರಹ್ಮನು ಇರುತ್ತಾನೆ, ಅಗ್ನಿ ನಿಯಾಮಕನು ಪರಮಾತ್ಮನು; ಸಮಾಧಿಯಿಂದ ಸಹಿತವಾದ ಸಕಲ ಕರ್ಮವೂ ಬ್ರಹ್ಮಾಧೀನವು ಮತ್ತು ಬ್ರಹ್ಮನಿಂದ ಅಧಿಷ್ಠಿತವಾದುದು ಎಂದು ತಿಳಿದು, ಬ್ರಹ್ಮನಿಂದ ಪ್ರೇರಿತನಾಗಿದ್ದೇನೆ ಎಂಬ ಅನುಸಂಧಾನಪೂರ್ವಕವಾಗಿ ಹೋಮವನ್ನು ಮಾಡುತ್ತಾನೆಯೋ, ಬ್ರಹ್ಮೈವತೇನಗಂತವ್ಯಂ = ಅಂಥ ಯೋಗಿಗೆ (ಜ್ಞಾನದ್ವಾರಾ) ಪರಬ್ರಹ್ಮನೇ ಪ್ರಾಪ್ಯನು. ಇಂಥವನು ಅಪರೋಕ್ಷ ಜ್ಞಾನವನ್ನು ಹೊಂದಿ ಮುಕ್ತನಾಗುತ್ತಾನೆ ಎಂದು ಅರ್ಥವು. ಈ ರೀತಿಯಾಗಿ ಯಾವ ಸಂಖ್ಯಾನುಸಂಧಾನದಿಂದ ಮುಕ್ತಿಯಾಗುವುದೋ ಅಂಥ ತತ್ತ್ವಜ್ಞಾನವನ್ನು ವಿವರಿಸಿ ಶ್ರೀ ಕೃಷ್ಣನು ಇಂಥ ವಿಶಿಷ್ಟ ಕರ್ಮಯೋಗವು ಅನೇಕ ಪ್ರಕಾರವಾಗಿರುವುದೆಂದು ನಿರೂಪಿಸಬೇಕಾಗಿ ಹನ್ನೊಂದು ಪ್ರಭೇದಗಳನ್ನು ನಾಮತಃ ನಿರ್ದೇಶ ಮಾಡಿ ವರ್ಣಿಸುತ್ತಾನೆ :—

1. ಕೆಲವು ಯೋಗಿಗಳು ಭಗವಂತನ ಉಪಾಸನೆಯನ್ನೇ ಯಜ್ಞರೂಪವಾಗಿ

ಪರಮಾತ್ಮನಲ್ಲಿ ಅರ್ಪಿಸುತ್ತಾರೆ. 2. ಮತ್ತು ಕೆಲವರು ಬ್ರಹ್ಮಾಧೀನವಾದ ಮತ್ತು ಬ್ರಹ್ಮನಿಂದ ಅಧಿಷ್ಠಿತವಾದ ಅಗ್ನಿಯಲ್ಲಿ ಯಜ್ಞನಾಮಕ ಭಗವಂತನನ್ನು ಉದ್ದೇಶಮಾಡಿ ಯಜ್ಞನಾಮಕ ಪರಮಾತ್ಮನ ಪ್ರೇರಣೆಯಿಂದಲೇ ಕರ್ಮ ಮಾಡುತ್ತೇನೆಂಬ ಜ್ಞಾನಪೂರ್ವಕವಾಗಿ ಹೋಮ ಮಾಡಿ ಅದನ್ನೇ ಪರಮಾತ್ಮನಿಗೆ ಅರ್ಪಿಸುತ್ತಾರೆ. 3. ಕೆಲವು ಯೋಗಿಗಳು ನಾನು ಯಜ್ಞನಾಮಕ ಪರಮಾತ್ಮನಿಂದ ಪ್ರೇರಿತನಾಗಿದ್ದೇನೆಂಬ ಅನುಸಂಧಾನಪೂರ್ವಕವಾಗಿ ಶ್ರೋತ್ರಾದಿ ಜ್ಞಾನೇಂದ್ರಿಯಗಳನ್ನು ವಿಷಯಗಳಲ್ಲಿ ಪ್ರವರ್ತಿಸದಂತೆ ನಿಗ್ರಹ ಮಾಡಿ ಅದನ್ನೇ ಯಜ್ಞವೆಂದು ಭಾವಿಸಿ ಪರಮಾತ್ಮನಲ್ಲಿ ಅರ್ಪಿಸುತ್ತಾರೆ. 4. ಮತ್ತೆ ಕೆಲವರು ಯಜ್ಞನಾಮಕ ಪರಮಾತ್ಮನಿಂದ ಪ್ರೇರಿತನಾಗಿದ್ದೇನೆಂಬ ಜ್ಞಾನಪೂರ್ವಕವಾಗಿ ಶಬ್ದಾದಿ ವಿಷಯಗಳನ್ನು ( ಹವಿಸ್ಸಾಗಿ ಚಿಂತಿಸಿ ) ಶ್ರೋತ್ರಾದಿ ಇಂದ್ರಿಯಗಳೆಂಬ ಬ್ರಹ್ಮಾಧಿಷ್ಠಿತವಾದ ಅಗ್ನಿಯಲ್ಲಿ ಹೋಮ ಮಾಡುತ್ತಾರೆ. ಎಂದರೆ ಪರಮಾತ್ಮ ಜ್ಞಾನಪೂರ್ವಕವಾಗಿ ವಿಷಯಾಪೇಕ್ಷಾರಹಿತರಾಗಿ ಭಗವತ್ಪೂಜಾತ್ವೇನ ವಿಷಯ ಭೋಗವನ್ನು ಮಾಡುತ್ತಾರೆ. 5. ಇನ್ನು ಕೆಲವರು ಯೋಗಿಗಳು ನಾನು ಯಜ್ಞನಾಮಕ ಪರಮಾತ್ಮನಿಂದ ಪ್ರೇರಿತನಾಗಿದ್ದೇನೆಂದು ತಿಳಿದು ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಎಂಬ ಸರ್ವ ಕರ್ಮೇಂದ್ರಿಯ ವ್ಯಾಪಾರಗಳನ್ನೂ ಮತ್ತು ಪ್ರಾಣಾಪಾನಾದಿ ಪಂಚವಾಯುಗಳ ವ್ಯಾಪಾರವನ್ನೂ ಪ್ರಜ್ವಲಿತವಾದ ಬ್ರಹ್ಮ ಜ್ಞಾನಪೂರ್ವಕವಾಗಿ ಮನಸ್ಸಿನಿಂದ ನಿಗ್ರಹ ಮಾಡೋಣವೆಂಬ ಅಗ್ನಿಯಲ್ಲಿ ಹೋಮ ಮಾಡುತ್ತಾರೆ. ಎಂದರೆ ಪರಮಾತ್ಮನ ಜ್ಞಾನಪೂರ್ವಕವಾಗಿ ಕರ್ಮೇಂದ್ರಿಯ ವ್ಯಾಪಾರಗಳನ್ನೂ ಪಂಚವಾಯು ವ್ಯಾಪಾರಗಳನ್ನೂ ಮನಸ್ಸಿನಿಂದ ನಿಯಮಿಸಿ, ಆ ನಿಯಮನ ಕರ್ಮವನ್ನೇ ಯಜ್ಞವನ್ನಾಗಿ ಪರಮಾತ್ಮನಲ್ಲಿ ಅರ್ಪಿಸುತ್ತಾರೆ. 6. ಕೆಲವರು ನಾನು ಯಜ್ಞನಾಮಕ ಪರಮಾತ್ಮನಿಂದ ಪ್ರೇರಿತನಾಗಿದ್ದೇನೆಂಬ ಬುದ್ಧಿಪೂರ್ವಕವಾಗಿ, ಸತ್ಪಾತ್ರದಲ್ಲಿ ಈಶ್ವರ ಪ್ರೀತ್ಯರ್ಥವಾದ ಸರ್ವಸ್ವ ದಾನವೇ ಮೊದಲಾದ ದ್ರವ್ಯ ದಾನಗಳನ್ನು ಮಾಡಿ, ಅದನ್ನೇ ಯಜ್ಞವನ್ನಾಗಿ ಪರಮಾತ್ಮನಲ್ಲಿ ಅರ್ಪಿಸುತ್ತಾರೆ. 7. ಕೆಲವರು ನಾನು ಯಜ್ಞನಾಮಕ ಪರಮಾತ್ಮನಿಂದ ಪ್ರೇರಿತನಾಗಿದ್ದೇನೆ, ಎಂಬ ಜ್ಞಾನಪೂರ್ವಕವಾಗಿ ಕೃಚ್ಛ್ರ ಚಾಂದ್ರಾಯಣ, ವಿಷ್ಣುಪಂಚಕ, ಭೀಷ್ಮಪಂಚಕ, ಧಾರಣ ಪಾರಣಾದಿ ತಪಸ್ಸುಗಳನ್ನು ಮಾಡಿ ಅದನ್ನೇ ಯಜ್ಞವನ್ನಾಗಿ ಪರಮಾತ್ಮನಲ್ಲಿ ಅರ್ಪಿಸುತ್ತಾರೆ. 8. ಕೆಲವರು ನಾನು ಯಜ್ಞನಾಮಕ ಪರಮಾತ್ಮನಿಂದ ಪ್ರೇರಿತನಾಗಿದ್ದೇನೆ ಎಂಬ ಜ್ಞಾನಪೂರ್ವಕವಾಗಿ ಅಷ್ಟಾಂಗಸಹಿತವಾದ ಧ್ಯಾನವನ್ನು ಆಚರಿಸಿ ಅದನ್ನೇ ಯಜ್ಞವನ್ನಾಗಿ ಪರಮಾತ್ಮನಲ್ಲಿ ಅರ್ಪಿಸುತ್ತಾರೆ. *

---

* ಅಷ್ಟಾಂಗಯೋಗಿಗಳು, ಪ್ರಾಣಾಯಾಮ, ಆಸನ ನಿಯಮಗಳು ಇವೇ ಮುಂತಾದ ವಿಷಯಗಳಲ್ಲಿ ಚರ್ಚೆ ನಡೆದಿದ್ದರೂ ಈ ಗ್ರಂಥದಲ್ಲಿ ಅದು ಉದ್ದೇಶಪೂರ್ವಕವಾಗಿ ವರ್ಣಿಸಲ್ಪಟ್ಟಿಲ್ಲ. ಆ ವಿಷಯಗಳು ಹೀಗೆಂದು ಬರೆಯಲ್ಪಟ್ಟರೆ, ಕ್ಷಿಪ್ರವಾದ ಉತ್ಸಾಹವನ್ನು ವೃದ್ಧಿ ಮಾಡಿ ನಿಜವಾದ ವೈರಾಗ್ಯರಹಿತರಾದ ಅಶಾಂತರ ಹೃದಯದಲ್ಲಿ ಸ್ವತಂತ್ರ ಪ್ರವೃತ್ತಿಗಳನ್ನು ಹುಟ್ಟಿಸಿ ಆ ವಿಧವಾದ ದುರ್ಯೋಗ

9. ಕೆಲವರು ಯಜ್ಞನಾಮಕ ವಿಷ್ಣುವಿನಿಂದ ಪ್ರೇರಿತನಾಗಿದ್ದೇನೆಂಬ ಜ್ಞಾನ ಪೂರ್ವಕವಾಗಿ ಪಾರಾಯಣ, ವೇದಾಧ್ಯಯನಾದಿಗಳನ್ನು ಮಾಡಿ ಅದನ್ನೇ ಯಜ್ಞವನ್ನಾಗಿ ಪರಮಾತ್ಮನಲ್ಲಿ ಸಮರ್ಪಿಸುತ್ತಾರೆ. ಈ ಸ್ವಾಧ್ಯಾಯ ಯಜ್ಞಕಾರಿಗಳು ಶ್ರವಣ ಮನನಾದಿ ಜ್ಞಾನ ಯಜ್ಞದಲ್ಲಿ ನಿರತರಾಗಿರುವುದರಿಂದ ತೀಕ್ಷ್ಣ ವ್ರತವುಳ್ಳವರು ಮತ್ತು ಯತ್ನಶೀಲರು 10. ಪ್ರಾಣಾಯಾಮಾಭ್ಯಾಸಶೀಲರಾದ ಕೆಲವರು ಯೋಗಿಗಳು ಯಜ್ಞನಾಮಕ ವಿಷ್ಣುವಿನಿಂದ ಪ್ರೇರಿತನಾಗಿದ್ದೇನೆಂಬ ಜ್ಞಾನಪೂರ್ವಕವಾಗಿ ಪ್ರಾಣಾಪಾನ ವಾಯುಗಳ ಸಂಚಾರವನ್ನು ನಿರೋಧಿಸಿ ಎಂದರೆ ಕುಂಭಕದಲ್ಲಿ ಸ್ಥಾಯಿಯಾಗಿ ನಿಲ್ಲಿಸಿ, ಪ್ರಾಣ ವಾಯುವಿನಲ್ಲಿ ಅಪಾನ ವಾಯುವನ್ನು ಪ್ರವೇಶಿಸುತ್ತಾರೆ ಮತ್ತು ಅಪಾನ ವಾಯುವಿನಲ್ಲಿ ಪ್ರಾಣ ವಾಯುವನ್ನು ಪ್ರವೇಶಿಸುತ್ತಾರೆ. 11. ಮತ್ತು ಕೆಲವು ಯೋಗಿಗಳು ಯಜ್ಞನಾಮಕ ಪರಮಾತ್ಮನಿಂದ ಪ್ರೇರಿತನಾಗಿದ್ದೇನೆಂಬ ಜ್ಞಾನಪೂರ್ವಕವಾಗಿ ದೇಹಧಾರಣೋಪಯೋಗಿಯಾಗುವಷ್ಟು ಮಾತ್ರ ಆಹಾರವನ್ನು ಸೇವಿಸಿ, ( ನಿರಾಹಾರದಿಂದ ಇಂದ್ರಿಯಾದಿಗಳ ಶಕ್ತಿಯನ್ನು ಅಡಗಿಸಿ) ಇಂದ್ರಿಯ ವೃತ್ತಿಗಳನ್ನು ಇಂದ್ರಿಯಗಳಲ್ಲಿ ಹೋಮ ಮಾಡುತ್ತಾರೆ, ಎಂದರೆ ಅಲ್ಪಾಹಾರದಿಂದ ಇಂದ್ರಿಯ ಶಕ್ತಿಯನ್ನು ಕುಂಠನ ಮಾಡಿ, ಅವುಗಳನ್ನು ವಿಷಯಭೋಗದಲ್ಲಿ ಅಸಮರ್ಥವನ್ನಾಗಿ ಮಾಡಿ ಅಂಥ ಇಂದ್ರಿಯ ನಿಯಮವನ್ನೇ ಯಜ್ಞವನ್ನಾಗಿ ಪರಮಾತ್ಮನಲ್ಲಿ ಸಮರ್ಪಿಸುತ್ತಾರೆ ಇವರೆಲ್ಲರೂ ಯಜ್ಞ ಜ್ಞಾನವುಳ್ಳವರೇ ಮತ್ತು ಯಜ್ಞಾನುಷ್ಠಾನದಿಂದ ನಷ್ಟವಾದ ಪಾಪವುಳ್ಳವರೇ. †

---

ದಿಂದ ದೇಹಕ್ಷಯಕ್ಕೂ ಪಾಪವೃದ್ಧಿಗೂ ಕಾರಣವಾಗುವುವು. ಗುರುದೇವತೆಗಳ ಅನುಗ್ರಹದಿಂದ ಪರಂಪರಾ ಪ್ರಾಪ್ತವಾದ ರೀತಿಯಲ್ಲಿಯೇ ಅವುಗಳನ್ನು ಸೇವಾದ್ವಾರಾ ಪಡೆದು ಮುಮುಕ್ಷುವು ವಿಷಯಭೋಗಗಳನ್ನು ತೃಣವೆಂದು ಭಾವಿಸಿ ಧ್ಯಾನಮಾತ್ರದಿಂದ ಸುಖಿಯಾಗಿರಬೇಕು. ಇಲ್ಲಿ ಸೂಕ್ಷ್ಮಾಂಶವೇನೆಂದರೆ :— ಅಷ್ಟಾಂಗಯೋಗವೂ ಕೂಡ, ಶಾಸ್ತ್ರದಂತೆ ಮುಕ್ತಿಯೋಗ್ಯರ ಯೋಗವೆಂದೂ ತಮೋಯೋಗ್ಯರ ಯೋಗವೆಂದೂ ಎರಡು ಪ್ರಕಾರವಾಗಿರುವುದು. ಕ್ರಮಗಳೂ ಸಿದ್ಧಿಗಳೂ ಎರಡು ಪ್ರಕಾರವಾಗಿಯೇ ಇರುವುವು. ಆದುದರಿಂದ ದ್ವೈತ ತತ್ವದಲ್ಲಿ ನಿಷ್ಠಾರಹಿತನಾದವನ ಯೋಗವು ತಾಮಸವೆಂದು ಸಿದ್ಧವು. ತಾಮಸ ಯೋಗವೂ ಕೂಡ ಬಲಪ್ರದವೂ ಸಿದ್ಧಿಪ್ರದವೆಂದು ತೋರಿದರೂ ಹೂಣ ವಿದ್ಯಾಭ್ಯಾಸದಂತೆ ಮೋಕ್ಷಕ್ಕೆ ವಿರೋಧಿಯೆಂದು ಸಾತ್ವಿಕರು ನಿಶ್ಚಯಿಸಬೇಕು.

ಸಾತ್ವಿಕ ಯೋಗವು ಉಪನಿಷತ್ತುಗಳಲ್ಲಿಯೇ ಹೇಳಲ್ಪಟ್ಟಿರುವುದು. ಕಾಲಾಂತರದಲ್ಲಿ ವಿವರಿಸುವೆವು —[ H. S. ]

† ನಾಯಂ ಲೋಕೋಸ್ತ್ಯಯಜ್ಞಸ್ಯ ಎಂಬ ಗೀತಾ ಶ್ಲೋಕದಿಂದಲೂ ಮತ್ತು ಇತರ ಪ್ರಮಾಣಗಳಿಂದಲೂ ಅಗ್ನಿಹೋತ್ರಾದಿ ಯಜ್ಞವಿಹೀನನಿಗೆ ಸದ್ಗತಿಯು ಇಲ್ಲವೆಂದು ಪ್ರಮಿತವಾಗಿರುವುದು. ಅಗ್ನಿಹೋತ್ರರಹಿತನಿಗೆ ನರಕಪ್ರಾಪ್ತಿಯು ಉಂಟೆಂದು ಹೇಳುವ ವಾಕ್ಯಕ್ಕೆ ಅಗ್ನಿಹೋತ್ರವೇ ಮೊದಲು ಮಾಡಿ ಇಲ್ಲಿ ಹೇಳಿರುವ ಹನ್ನೊಂದು ವಿಧವಾದ ಯಜ್ಞಗಳಲ್ಲಿ ಯಾವ ಯಜ್ಞವನ್ನೂ ಆಚರಿಸದವನು ಪತಿತನಾಗಿ ನರಕವನ್ನು ಹೊಂದುತ್ತಾನೆ ಎಂದು ಅರ್ಥವನ್ನು ಮಾಡಬೇಕು.

ಅಮೃತವೆಂದು ಕರೆಯಲ್ಪಡುವ ಯಜ್ಞಶೇಷವನ್ನು ಭೋಗ ಮಾಡುವವನು ಅನಾದಿನಿತ್ಯನಾದ ಪರಿಪೂರ್ಣನಾದ ಪರಬ್ರಹ್ಮನನ್ನು ಹೊಂದುತ್ತಾನೆ. ಎಲೈ ಕುರುಶ್ರೇಷ್ಠನೇ ! ಯಾವ ಯಜ್ಞವನ್ನೂ ಮಾಡದವನಿಗೆ ಈ ಲೋಕದಲ್ಲೇ ಸುಖವು ಇರುವುದಿಲ್ಲ. ಇನ್ನು ಉತ್ತಮ ಲೋಕಪ್ರಾಪ್ತಿಯು ಎಲ್ಲಿಂದ ಬರುವುದು ?

ಈ ಯಜ್ಞಗಳ ಮಧ್ಯದಲ್ಲಿ ಉಕ್ತವಾಗಿರುವ ಶ್ರವಣ ಮನನ ಉಪಾಸನಾದಿ ಗಳನ್ನು ಕೂಡ ಶ್ರೀ ಕೃಷ್ಣನು ಕರ್ಮವಿಶೇಷವೆಂದೇ ನಿರೂಪಣೆ ಮಾಡಿರುತ್ತಾನೆ. ಇದೇ ಸಮಾಧಿ ಧ್ಯಾನಕ್ಕೆ ಸಾಕ್ಷಾತ್ಕಾರಣವಾದ ವಿಶಿಷ್ಟ ಕರ್ಮಯೋಗವು. ಶ್ರೀ ಕೃಷ್ಣನು ಇವೆಲ್ಲಾ ಕರ್ಮವೆಂದೇ ಹೇಳುತ್ತಾನೆ :—

**(8) ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।**
**ಕರ್ಮಜಾನ್ ವಿದ್ಧಿ ತಾನ್ ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥**
**ಶ್ರೇಯಾನ್ ದ್ರವ್ಯ ಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥**

—(4. 32-33.)

ಈ ರೀತಿಯಾಗಿ ಅನೇಕ ಪ್ರಕಾರವಾದ ಯಜ್ಞಗಳು ಪರಮಾತ್ಮನ ಮುಖದಲ್ಲಿ ವಿಸ್ತೃತವಾಗಿರುವುವು. ಇವುಗಳೆಲ್ಲವೂ ಮಾನಸಿಕ, ಕಾಯಿಕ, ವಾಚನಿಕ ಭೇದ ದಿಂದ ಮಾಡಲ್ಪಟ್ಟ ಕರ್ಮಗಳಾದುದರಿಂದ ಕರ್ಮ ರೂಪಗಳೆಂದೇ ತಿಳಿ. ಹೀಗೆ ತಿಳಿದು ಸ್ವವಿಹಿತ ಯುದ್ಧಕರ್ಮವನ್ನು ಮಾಡಿ ನೀನು ಮುಕ್ತನಾಗುತ್ತೀಯೆ. * ಉಕ್ತ ಯಜ್ಞಗಳಲ್ಲಿ ಯಾವುದು ಶ್ರೇಷ್ಠವೆಂದರೆ ಹೇಳುತ್ತಾನೆ :— ದ್ರವ್ಯತ್ಯಾಗಾದಿ ರೂಪವಾದ ಯಜ್ಞಗಳಿಗಿಂತ ಜ್ಞಾನಸಂಪಾದನ ರೂಪವಾದ ಯಜ್ಞವು ಶ್ರೇಷ್ಠವು.

ಎಲೈ ಪಾರ್ಥನೇ ! ಸಕಲ ಕರ್ಮಗಳೂ ಅಪರೋಕ್ಷ ಜ್ಞಾನೋತ್ಪತ್ತಿಯಾದರೆ ಸಫಲವಾಗುತ್ತವೆ. ಇಂಥ ವಿಶಿಷ್ಟ ಕರ್ಮಯೋಗದ ಪರಿಪಾಕವನ್ನೂ ಫಲವನ್ನೂ ಶ್ರೀ ಕೃಷ್ಣನು ಹೇಳುತ್ತಾನೆ :—

**(9) ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥**

—(5. 17.)

ಪರಮಾತ್ಮನಲ್ಲಿ ಪುನಃ ಪುನಃ ಇಡಲ್ಪಟ್ಟ ಬುದ್ಧಿಯುಳ್ಳವರಾದಂಥಾ, ಪರ ಮಾತ್ಮನೇ ನಮಗೆ ಸ್ವಾಮಿಯೆಂದು ತಿಳಿದಂಥಾ, ಆತನಲ್ಲಿಯೇ ಅಚಂಚಲವಾಗಿ

---

* ಇದರಿಂದ ಕರ್ಮಾತ್ಮಕ ಯುದ್ಧದಿಂದೇನು ಪ್ರಯೋಜನವು. ನಾನು ಜ್ಞಾನ ಯೋಗವನ್ನು ಅವಲಂಬಿಸುತ್ತೇನೆ ಎಂಬ ಅರ್ಜುನನ ಪೂರ್ವಪಕ್ಷವು ನಿರಾಕೃತವಾಯಿತೆಂದು ತಿಳಿಯಬೇಕು. ಶ್ರವಣ ಮನನಾದಿ ಜ್ಞಾನಯೋಗಗಳೂ ಒಂದು ವಿಧವಾದ ಕರ್ಮವೇ ಎಂದು ಶ್ರೀ ಕೃಷ್ಣನ ಆಶಯವು.

ಸ್ಥಿತಿಯುಳ್ಳಂಥಾ, ಅವನೇ ನಮಗೆ ಮುಖ್ಯ ಆಶ್ರಯನು ಎಂದು ತಿಳಿದಂಥಾ ಪರೋಕ್ಷ ಜ್ಞಾನಿಗಳು, ಅಪರೋಕ್ಷ ಜ್ಞಾನದಿಂದ ಸಂಪೂರ್ಣವಾಗಿ ಬಿಡಲ್ಪಟ್ಟ ಪಾಪಗಳುಳ್ಳವರಾಗಿ, ಪುನರಾವೃತ್ತಿರಹಿತವಾದ ಮುಕ್ತಿಯನ್ನು ಹೊಂದುತ್ತಾರೆ.

ಇಲ್ಲಿ ಅಪರೋಕ್ಷ ಜ್ಞಾನಕ್ಕೆ ಸಮೀಪವಾದ ಪೂರ್ವ ಕಾಲದಲ್ಲಿ ಇರಬೇಕಾದ ಮನಸ್ಸಿನ ಸ್ಥಿತಿಯು ವರ್ಣಿಸಲ್ಪಟ್ಟಿರುವುದು. ಇದು ಸಾಂಗವಾದ ಕರ್ಮಯೋಗ ಪ್ರಭಾವದಿಂದ ಪ್ರಾಪ್ತವಾದುದೆಂದು ತಿಳಿಯಬೇಕು.

ಆರನೆಯ ಅಧ್ಯಾಯದಲ್ಲಿಯೂ ಸಹ ಶ್ರೀ ಕೃಷ್ಣನು ಸಂನ್ಯಾಸ ತತ್ವಜ್ಞಾನಾದಿಗಳೆಲ್ಲವೂ ಪೂರ್ವೋಕ್ತ ಚತುರಂಶ ಸಹಿತವಾದ ವಿಶಿಷ್ಟ ಕರ್ಮಯೋಗದಲ್ಲಿ ಅಂತರ್ಭೂತವೆಂದೇ ಹೇಳಿರುತ್ತಾನೆ :—

**(10) ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸಂನ್ಯಾಸ ಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ ।**
**ನಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥**

—(6. 1–2.)

ಯಾವಾತನು ಕರ್ಮಫಲವನ್ನು ಅಪೇಕ್ಷಿಸದೆ ಸ್ವವರ್ಣಾಶ್ರಮೋಚಿತವಾದ ಕರ್ತವ್ಯಕರ್ಮವನ್ನು ಮಾಡುತ್ತಾನೆಯೋ ಆತನೇ ಸಂನ್ಯಾಸಿಯು ಮತ್ತು ಯೋಗಿಯು. ಅಗ್ನಿ ಪರಿತ್ಯಾಗ ಮಾಡಿದವನು ಸಂನ್ಯಾಸಿಯಲ್ಲ. ಕರ್ತವ್ಯ ಕರ್ಮ ಪರಿತ್ಯಾಗ ಮಾಡಿದವನು ಯೋಗಿಯಲ್ಲ. ಎಲೈ ಪಾಂಡವನೇ ! ರಾಗ ದ್ವೇಷಾದಿ ವರ್ಜನ ರೂಪವಾದ ಯಾವ ಧರ್ಮವನ್ನು ಸಂನ್ಯಾಸವೆಂದು ಜನರು ಕರೆಯುವರೋ ಅದು ( ಚತುರಂಶಸಹಿತವಾದ ) ವಿಶಿಷ್ಟ ಕರ್ಮಯೋಗದಲ್ಲಿ ಅಂತರ್ಭೂತವೆಂದು ತಿಳಿ. ( ಸಂನ್ಯಾಸವು ಯೋಗದ ಏಕದೇಶವು ಎಂದರ್ಥವು. ) ಏತಕ್ಕೆಂದರೆ ಕರ್ಮ ಮಾಡುವಾಗ ಲೌಕಿಕ ಫಲಾಪೇಕ್ಷಾರೂಪವಾದ ಸಂಕಲ್ಪವನ್ನು ಪರಿತ್ಯಾಗ ಮಾಡದವನು ( ಫಲವನ್ನು ಕೋರುವವನು ) ವಿಶಿಷ್ಟ ಕರ್ಮಯೋಗಿಯು ಎಂದೆನಿಸಿಕೊಳ್ಳಲಾರನು.

ಸಮಗ್ರವಾದ ಕರ್ಮಯೋಗದಲ್ಲಿ ಶಾಸ್ತ್ರಜ್ಞಾನವೂ ಏಕದೇಶವೆಂದು ಕರ್ಮಯೋಗದ ಪರಿಪಾಕವನ್ನು ಹೊಂದಿದ ಯೋಗಿಯ ಧ್ಯಾನ ವರ್ಣನೆಯ ಪರಾಮರ್ಶದಿಂದ ತಿಳಿದು ಬರುವುದು :—

**(11) ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥**

—(6. 8.)

ಧ್ಯಾನಯೋಗದ ಫಲವನ್ನು ಹೊಂದಿದ ಯೋಗಿಯು ವೇದಾದಿ ಶಾಸ್ತ್ರಜನಿತ ವಿಷ್ಣೂತ್ಕರ್ಷ ಜ್ಞಾನದಿಂದಲೂ ಮತ್ತು ಪರಮಾತ್ಮನ ವಿಶೇಷ ಮಾಹಾತ್ಮ್ಯಜ್ಞಾನ

ದಿಂದಲೂ ತೃಪ್ತನಾಗಿ, ಶೀತೋಷ್ಣಾದಿ ದ್ವಂದ್ವಗಳು ಪ್ರಾಪ್ತವಾದರೂ ನಿರ್ವಿಕಾರನಾಗಿ, ಜಿತೇಂದ್ರಿಯನಾಗಿ, ಕಾಂಚನವನ್ನು ಕಲ್ಲಿಗೆ ಸಮವಾಗಿ ತಿಳಿಯುತ್ತಾನೆ. ಆವನೇ ಯೋಗಸಂಪೂರ್ತಿಯುಳ್ಳವನೆನ್ನಿಸುವನು.

**ಪ್ರಶ್ನೆ**— ಸ್ವಾಮೀ ! ತಮ್ಮಿಂದ ಉದಾಹೃತವಾದ ಈ ವಾಕ್ಯಗಳಲ್ಲೆಲ್ಲಾ ಕರ್ಮ ಫಲೇಚ್ಛಾರಾಹಿತ್ಯ ಅಥವಾ ಕಾಮಾದಿ ದೋಷರಾಹಿತ್ಯವೆಂಬ ಸಂನ್ಯಾಸವು, ತತ್ತ್ವಜ್ಞಾನವೆಂಬ ಸಾಂಖ್ಯವು, ವಿಹಿತ ಕರ್ಮಾನುಷ್ಠಾನವೆಂಬ ಯೋಗವು ಹೀಗೆ ಮೂರೇ ಅಂಶಗಳು ಪ್ರತಿಪಾದಿತವಾಗಿರುವುವು. ಪರಮಾತ್ಮನಲ್ಲಿ ಕರ್ಮಫಲ ಸಮರ್ಪಣೆಯೆಂಬ ( ತ್ಯಾಗವೆಂಬ ) ಚತುರ್ಥಾಂಶವನ್ನು ಏತಕ್ಕೆ ನಿರೂಪಿಸಲಿಲ್ಲ ?

**ಉತ್ತರ— ಶ್ರೀ ಶ್ರೀಗಳವರು—** ವಿಹಿತ ಕರ್ಮಗಳನ್ನು ಮಾಡಿ ಪರಮಾತ್ಮನಲ್ಲಿ ಕರ್ಮವನ್ನು ಸಮರ್ಪಿಸುವುದೇ ಕರ್ಮಾನುಷ್ಠಾನವು ಎಂದು ವಿವಕ್ಷೆ ಮಾಡಿ ತ್ಯಾಗವನ್ನು ಪೃಥಕ್ ನಿರ್ದೇಶ ಮಾಡಲಿಲ್ಲ. ಸರ್ವಾಂಶಗಳಿಂದ ಸಹಿತವಾದ ಕರ್ಮವೇ ಪರಿಪೂರ್ಣವಾದ ಕರ್ಮಯೋಗವು ಎಂಬುದು ಶ್ರೀ ಕೃಷ್ಣನ ತೃತೀಯಾಧ್ಯಾಯದ ವಾಕ್ಯದಿಂದ ಸ್ಫುಟವಾಗಿ ಗೊತ್ತಾಗುವುದು.

**(12) ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥**
—(3. 30.)

ನಾನೇ (ಶ್ರೀ ಕೃಷ್ಣನೇ) ಸರ್ವೋತ್ತಮಚೇತನನೆಂಬ ಜ್ಞಾನಪೂರ್ವಕವಾಗಿ, ಕರ್ಮ ಫಲದಲ್ಲಿ ಅಪೇಕ್ಷೆಯಿಲ್ಲದೆ, ಸಕಲ ವಿಹಿತ ಕರ್ಮಗಳನ್ನೂ ಅನುಷ್ಠಾನ ಮಾಡಿ, ನನ್ನಲ್ಲಿ ಸಮರ್ಪಿಸಿ, ಮಮತಾರಹಿತನಾಗಿ ಸಂತಾಪವನ್ನು ಹೊಂದದೆ ಯುದ್ಧ ಮಾಡು. ಈ ವಾಕ್ಯದಲ್ಲಿ "ಸರ್ವಾಣಿ ಕರ್ಮಾಣಿ" ಎಂಬ ಪದಗಳಿಂದ ವಿಹಿತ ಕರ್ಮಾನುಷ್ಠಾನರೂಪವಾದ ಕರ್ಮಯೋಗವೂ, ಮಯಿ ಸಂನ್ಯಸ್ಯ ಎಂಬ ಪದಗಳಿಂದ ಫಲ ಸಮರ್ಪಣೆಯೆಂಬ ತ್ಯಾಗಾಂಶವೂ, ಅಧ್ಯಾತ್ಮಚೇತಸಾ ಎಂಬ ಪದದಿಂದ ತತ್ತ್ವ ನಿಶ್ಚಯರೂಪವಾದ ಸಾಂಖ್ಯಾಂಶವೂ, ನಿರಾಶೀರ್ನಿರ್ಮಮಃ ಎಂಬ ಪದಗಳಿಂದ ಫಲಸ್ನೇಹರಾಹಿತ್ಯ ಮತ್ತು ರಾಗಾಭಿಮಾನವರ್ಜನ ರೂಪವಾದ ಸಂನ್ಯಾಸಾಂಶವೂ ನಿರೂಪಿತವಾಗಿರುವುವು. ಇಂಥ ವಿಶಿಷ್ಟ ಕರ್ಮಯೋಗವೇ * ಧ್ಯಾನಕ್ಕೆ ಸಾಕ್ಷಾತ್ಕಾರಣವೂ ಕ್ಷಿಪ್ರದಲ್ಲಿ ಅಪರೋಕ್ಷ ಜ್ಞಾನಜನಕವೂ ಆಗಿರುವುದು.

* ಕರ್ಮಯೋಗ ಅಥವಾ ಯೋಗ ಎಂಬ ಪದಗಳನ್ನು ಶ್ರೀ ಕೃಷ್ಣನು ಎರಡು ಅರ್ಥಗಳಲ್ಲಿ ಪ್ರಯೋಗ ಮಾಡಿರುತ್ತಾನೆ. **" ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ "** ಇತ್ಯಾದಿ ಬಹು ಸ್ಥಳಗಳಲ್ಲಿ ಯೋಗ ಅಥವಾ ಕರ್ಮಯೋಗವೆಂದರೆ ಕರ್ಮಾನುಷ್ಠಾನ, ತ್ಯಾಗ, ಸಂನ್ಯಾಸ, ಸಾಂಖ್ಯಗಳೆಂಬ ಚತುರಂಶಗಳಿಂದ ಸಹಿತವಾದ ಸಮಗ್ರವಾದ ಸಾಕ್ಷಾತ್ ಜ್ಞಾನಸಾಧನವಾದ ಉಪಾಯವು ಎಂದರ್ಥವು.

**ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ।**

2. ಶ್ರೀ ಕೃಷ್ಣನ ಈ ರೀತಿಯಾದ ಉಪಪಾದನೆಯು "**ಕರ್ಮಣಾ ಜ್ಞಾನಮಾತನೋತಿ**" ಎಂಬ ಶ್ರುತಿಗೂ ಅತ್ಯಂತ ಅನುಕೂಲವಾಗಿರುವುದು. ಈ ಶ್ರುತಿಯಲ್ಲಿರುವ "ಕರ್ಮ" ವೆಂಬ ಪದಕ್ಕೆ ಸಹಕಾರಿ ಸಾಮಗ್ರಿಗಳಿಂದ ವಿಶಿಷ್ಟವಾದ ಚತುರಂಶಗಳಿಂದಲೂ ಪೂರ್ಣವಾದ ಸಮಗ್ರ ಕರ್ಮಯೋಗವೆಂದು ಅರ್ಥ ಮಾಡಿದರೆ, ಇಂಥ ಕರ್ಮದಿಂದ ಅಪರೋಕ್ಷ ಜ್ಞಾನವು ಸಾಕ್ಷಾತ್ತಾಗಿಯೇ ಹುಟ್ಟುವುದರಿಂದ, ಶ್ರುತಿಗೆ ಮುಖ್ಯಾರ್ಥವನ್ನೇ ಹೇಳಿದಂತಾಯಿತು. ಬ್ರಹ್ಮಾಪರೋಕ್ಷ ಜ್ಞಾನೋತ್ಪತ್ತಿ ಪ್ರಕಾರವನ್ನು ಎರಡು ವಿಧವಾಗಿ ಉಪಪಾದಿಸಿ ಹೇಳಬಹುದು. ನಿತ್ಯನೈಮಿತ್ತಿಕ ಕರ್ಮಾನುಷ್ಠಾನ, ಶ್ರವಣ ಮನನಗಳು, ಧ್ಯಾನಾನುಷ್ಠಾನ, ನಂತರ ಅಪರೋಕ್ಷ ಜ್ಞಾನೋತ್ಪತ್ತಿ ಎಂಬುದು ಒಂದು ವಿಧವಾದ ನಿರೂಪಣೆಯು. ವಿಶಿಷ್ಟ ಕರ್ಮಯೋಗ, ಧ್ಯಾನಯೋಗ, ಅಪರೋಕ್ಷ ಜ್ಞಾನೋತ್ಪತ್ತಿ ಎಂದು ಮತ್ತೊಂದು ವಿಧವಾದ ನಿರೂಪಣೆಯು. ಪ್ರಮೇಯವು ಒಂದೇ. ಆದರೆ, ನಿರೂಪಣ ಪ್ರಕಾರವು ಸ್ವಲ್ಪ ವಿಲಕ್ಷಣವಾಗಿರುವುದು. ಭಗವದ್ಗೀತೆಯಲ್ಲಿ ನಮ್ಮಿಂದ ಇದುವರೆವಿಗೆ ಉಪಪಾದಿತವಾದ ದ್ವಿತೀಯ ನಿರೂಪಣ ಪ್ರಕಾರವೇ ಶ್ರೀ ಕೃಷ್ಣನಿಂದ ಸಾಂಗವಾಗಿ ಪ್ರಥಮ ಷಟ್ಕದಲ್ಲಿಯೂ, ದ್ವಿತೀಯ ಷಟ್ಕಗಳ ಅನೇಕ ಶ್ಲೋಕಗಳಲ್ಲಿಯೂ ಕಥಿತವಾಗಿರುವುದು. ಈ ರೀತಿಯಾದ ತತ್ತ್ವೋಪಪಾದನೆಯೇ ಶ್ರೀ ಕೃಷ್ಣನಿಗೆ ಹೆಚ್ಚು ಪ್ರಿಯವಾಗಿರುವಂತೆ ತೋರುವುದು.

ಇಂಥ ಉಪಪಾದನೆಯಿಂದ ಒಂದು ಅನುಕೂಲವುಂಟು. ಕರ್ಮಯೋಗಕ್ಕೆ ಅಪರೋಕ್ಷ ಜ್ಞಾನವೇ ಫಲವೆಂದು ಹೇಳಿದ ಮೇಲೆ, ಅಪರೋಕ್ಷ ಜ್ಞಾನೋತ್ಪತ್ತಿ ಪರ್ಯಂತವೂ ಅದನ್ನು ಅನುಷ್ಠಾನ ಮಾಡಬೇಕೆಂದು ಸಿದ್ಧವಾಯಿತು. ಆದುದರಿಂದ ವಿಹಿತ ಕರ್ಮಾನುಷ್ಠಾನವನ್ನು ಎಲ್ಲಿಯ ಪರ್ಯಂತ ಆಚರಣೆ ಮಾಡಬೇಕು ? ಶ್ರವಣದಲ್ಲಿ ಆಸಕ್ತನಾದಾಗ ಪರಿತ್ಯಾಗ ಮಾಡಬಹುದೇ ? ಇತ್ಯಾದಿ ರೀತಿಯಾದ ಪ್ರಶ್ನೆಗಳಿಗೆ ಅವಕಾಶವಿರುವುದಿಲ್ಲ. ಕರ್ಮಾನುಷ್ಠಾನದ ಅನಂತರ ಶ್ರವಣ ಮನನಗಳು, ಅವುಗಳಿಂದ ಅಪರೋಕ್ಷ ಜ್ಞಾನವು ಎಂದು ಹೇಳಿದರೆ ಕರ್ಮಾದಿಗಳಿಗೆ ಜ್ಞಾನೋತ್ಪತ್ತಿಯಲ್ಲಿ ಕಾರಣತ್ವವು ಹೇಗೆ ಎಂದು ಸಂದೇಹವು ಅಂಕುರಿಸುವುದು. ಶ್ರವಣದಲ್ಲಿ ಪ್ರವೇಶ ಮಾಡುವವರೆವಿಗೂ ಕರ್ಮಾನುಷ್ಠಾನ ಮಾಡಿ ಅನಂತರ ಕರ್ಮವನ್ನು ಪರಿತ್ಯಾಗ ಮಾಡಬಹುದೆಂಬ ಭ್ರಮವು ಬರುವುದು. ಸಂದೇಹ ಪರಿಹಾರೋಪಾಯವನ್ನು ಆವಶ್ಯಕವಾಗಿ ಹೇಳಬೇಕಾಗುವುದು. ಚತುರಂಶ ಸಹಿತವಾದ ಸಮಗ್ರ ಕರ್ಮಯೋಗವನ್ನು ವಿಧ್ಯುಕ್ತ ರೀತಿಯಲ್ಲಿ ಅಪರೋಕ್ಷ ಜ್ಞಾನೋತ್ಪತ್ತಿಯಾಗುವ ಪರ್ಯಂತವೂ ಆಚರಿಸುತ್ತಲೇ ಇರಬೇಕು ಎಂದು ಹೇಳಿಬಿಟ್ಟರೆ ಇಂಥ ಶಂಕೋತ್ಪತ್ತಿಯೇ ಆಗಲಾರದು.

---

ಇತ್ಯಾದಿ ಕೆಲವು ಸ್ಥಳಗಳಲ್ಲಿ ಶ್ರೀ ಕೃಷ್ಣನು ಸ್ವವರ್ಣಾಶ್ರಮೋಚಿತ ವಿಹಿತ ಕರ್ಮಾನುಷ್ಠಾನ ಮಾತ್ರವನ್ನೇ ಕರ್ಮಯೋಗವೆಂದು ವಿವಕ್ಷೆ ಮಾಡಿ ಸಂಕುಚಿತಾರ್ಥವನ್ನು ಕೊಟ್ಟಿರುತ್ತಾನೆ. ಪ್ರಕರಣ ಪರ್ಯಾಲೋಚನೆಯಿಂದ ಅಲ್ಲಿ ಅಲ್ಲಿ ಅಭಿಪ್ರೇತವಾದ ಅರ್ಥವನ್ನು ತಿಳಿಯಬೇಕು.

# 9. ಒಂಭತ್ತನೆಯ ಅಂಶವು.

## ಅದ್ವೈತ ಮತಾನುಸಾರಿಯಾದ ಸಾಂಖ್ಯೋಪದೇಶಕ್ಕೆ ಗೀತೆಯಲ್ಲಿ ಅಸಾಂಗತ್ಯ ಪ್ರದರ್ಶನವು.

1. **ಪ್ರಶ್ನೆ—** ಸ್ವಾಮೀ ! ಸಾಂಖ್ಯ, ಸಂನ್ಯಾಸ, ತ್ಯಾಗ, ಕರ್ಮಾನುಷ್ಠಾನ ಈ ನಾಲ್ಕು ಅಂಶಗಳನ್ನೂ ಗೀತೋಕ್ತ ರೀತಿಯಿಂದಲೇ ಸ್ವಲ್ಪ ವಿವರಿಸಬೇಕು.

**ಶ್ರೀ ಶ್ರೀಗಳವರು :— "ಕೇವಲಂ ಭಗವದ್ಜ್ಞಾನಂ ಸಾಂಖ್ಯಮಿತ್ಯುಚ್ಯತೇ ಬುಧೈಃ"** ಇತ್ಯಾದಿ ಪ್ರಮಾಣ ವಚನಾನುಸಾರವಾಗಿ ವೇದಾರ್ಥ ತತ್ತ್ವ ನಿರ್ಣಯವೇ ಸಾಂಖ್ಯವೆನ್ನಿಸುವುದು. ಕಪಿಲರೂಪನಾದ ವಿಷ್ಣುವಿನ ಸಾಂಖ್ಯೋಪದೇಶವೂ ಇದೇ. ಆದುದರಿಂದ ನಿರೀಶ್ವರ ಸಾಂಖ್ಯವೆಂಬ ಪ್ರಸಿದ್ಧವಾದವಾದವು ಪರಮಾತ್ಮನಿಂದ ರಚಿತವಾದುದಲ್ಲ. ಮತ್ತೇನೆಂದರೆ **"ಕಪಿಲೋನ್ಯೋ ಜಗಾದ ಹ"** ಇತ್ಯಾದಿ ಪ್ರಮಾಣ ವಚನಾನುಸಾರವಾಗಿ ನಾರಾಯಣನಿಂದ ಆಜ್ಞಪ್ತರಾದ ಗೌತಮಾದಿ ಋಷಿಗಳಿಂದ ಪ್ರಣೀತವಾದ, ಅಪ್ರಾಮಾಣಿಕ ವಿಷಯಪ್ರಾಚುರ್ಯವಾದ, ನ್ಯಾಯಶಾಸ್ತ್ರ, ಯೋಗಶಾಸ್ತ್ರ ಮುಂತಾದ ಶಾಸ್ತ್ರಗಳಂತೆ ಅದೂ ಒಂದು ಕುಶಾಸ್ತ್ರವೆಂದು ಸಿದ್ಧವಾಗುವುದು. ಸಾಕ್ಷಾತ್ಪರಮಾತ್ಮನೇ ಕಪಿಲಾವತಾರದಲ್ಲಿ ಉಪದೇಶ ಮಾಡಿದ ಪ್ರಮೇಯಗಳು ಭಾಗವತದ ತೃತೀಯ ಸ್ಕಂಧದಲ್ಲಿ ಇರುವುವು. ಅಲ್ಲಿಯೂ ಸಾಂಖ್ಯವೆಂದರೆ ಯಥಾರ್ಥ ತತ್ತ್ವವಿಜ್ಞಾನವು ಎಂದೇ ಅರ್ಥವು. *

ಭಗವದ್ಗೀತೆಯಲ್ಲಿಯೂ ಸಹ ಈ ಅರ್ಥದಲ್ಲಿಯೇ ಸಾಂಖ್ಯ ಶಬ್ದವನ್ನು ಶ್ರೀ ಕೃಷ್ಣನು ಉಪಯೋಗಿಸಿರುವನು. ಸಮಸ್ತ ಜ್ಞಾತವ್ಯ ತತ್ತ್ವಗಳನ್ನೂ "ಅಶೋಚ್ಯಾನನ್ವಶೋಚಸ್ತ್ವಂ" ಎಂಬ ದ್ವಿತೀಯಾಧ್ಯಾಯದ ಹನ್ನೊಂದನೆಯ ಶ್ಲೋಕವನ್ನು ಮೊದಲುಗೊಂಡು ಮೂವತ್ತೆಂಟನೆಯ ಶ್ಲೋಕಪರ್ಯಂತವೂ ಸಂಕ್ಷೇಪವಾಗಿ ಹೇಳಿ, ಶ್ರೀ ಕೃಷ್ಣನು ಉಪಕ್ರಾಂತವಾದ ವಿಷಯೋಪಸಂಹಾರ ರೂಪವಾದ ಮೂವತ್ತೊಂಭತ್ತನೆಯ ಶ್ಲೋಕದಲ್ಲಿ,

**(1) ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು ।**
**—(2. 39.)**

---

* ಶಂಕರಾಚಾರ್ಯರೂ ತಮ್ಮ ಬ್ರಹ್ಮಸೂತ್ರ ಭಾಷ್ಯದಲ್ಲಿ ಷಡ್ದರ್ಶನಗಳಲ್ಲಿರುವ ಸಾಂಖ್ಯ ಶಾಸ್ತ್ರವು ಅಪ್ರಮಾಣಕವಾದ ಬೇರೆ ಶಾಸ್ತ್ರವೆಂದು ಉಪಪಾದಿಸಿ ಅದನ್ನು ಖಂಡಿಸಿರುವರು. ಮತ್ತು ಸಾಂಖ್ಯ ಶಬ್ದಕ್ಕೆ ಪರಮಾರ್ಥ ತತ್ತ್ವಜ್ಞಾನವೆಂದೇ ಗೀತಾಭಾಷ್ಯದ ದ್ವಿತೀಯಾಧ್ಯಾಯದಲ್ಲಿ ಅರ್ಥ ಮಾಡಿರುವರು. ಆ ಸಾಂಖ್ಯವು – ಪರಮಾರ್ಥ ತತ್ತ್ವಜ್ಞಾನವು – ಅದ್ವೈತವೆಂದು ಅವರ ಮೋಹವು. ಅದ್ವೈತ ತತ್ತ್ವೋಕ್ತವಾದ ನಿರ್ಗುಣ ವಸ್ತುವು ಅಥವಾ ಅವಿಕ್ರಿಯಾತ್ಮನು ಗೀತೆಯಲ್ಲಿ ಎಲ್ಲಿಯೂ ಪ್ರತಿಪಾದಿಸಲ್ಪಟ್ಟಿರುವುದಿಲ್ಲ. ಇದು ಉತ್ತರತ್ರ ಮಾಡುವ ವಿಚಾರದಿಂದಲೂ, ಪೂರ್ವ ಭಾಗದ ವಿಚಾರ ಪರಾಮರ್ಶೆಯಿಂದಲೂ ವಿದಿತವಾಗುವುದು.

ಎಂದರೆ ತತ್ವಜ್ಞಾನ ವಿಷಯದಲ್ಲಿ ನನ್ನಿಂದ ಇಷ್ಟು ಮಾತುಗಳು ನಿರೂಪಿತವಾದುವು; ಮುಂದೆ ತತ್ತ್ವಜ್ಞಾನೋಪಾಯವನ್ನು ಹೇಳುವೆನು ಎಂದು ಹೇಳಿರುವನು. ಏವಂಚ ದ್ವಿತೀಯಾಧ್ಯಾಯದ ಹನ್ನೊಂದನೆಯ ಶ್ಲೋಕವನ್ನು ಮೊದಲು ಮಾಡಿ ಮೂವತ್ತೆಂಟನೆಯ ಶ್ಲೋಕಪರ್ಯಂತವೂ ಶ್ರೀ ಕೃಷ್ಣನು ಹೇಳಿರುವ ವಾಕ್ಯಗಳು ಮೋಕ್ಷೋಪಯೋಗಿಯಾದ "ಸಾಂಖ್ಯ" (ತತ್ತ್ವಜ್ಞಾನ) ವನ್ನು ಉತ್ಪತ್ತಿ ಮಾಡುವುವು ಎಂದು ನಿಶ್ಚಿತವಾಯಿತು.

2. ನಿಖಿಲ ತತ್ತ್ವಸಂಗ್ರಹರೂಪವಾದ ದ್ವಿತೀಯಾಧ್ಯಾಯದ ಈ ಇಪ್ಪತ್ತೇಳು ಶ್ಲೋಕಗಳಿಗೆ ನಮ್ಮಿಂದ ಉಕ್ತವಾದ ಅರ್ಥವೇ ಯಥಾರ್ಥವೆಂಬಲ್ಲಿ ಉಪಪತ್ತಿ ಪ್ರದರ್ಶನಾರ್ಥವಾಗಿ ಅರ್ಜುನನ ಶಂಕೆಗಳನ್ನು ಪರಿಗಣನೆ ಮಾಡಿ ವಿವರಿಸುವೆವು. ಇದರಿಂದಲೇ ಈ ಶ್ಲೋಕಗಳಲ್ಲಿ ನಿರೂಪಿತವಾದ ಸಾಂಖ್ಯವು ಅದ್ವೈತಾತ್ಮಾವಗಾಹಿಯಾದುದೋ ಅಥವಾ ದ್ವೈತ ತತ್ತ್ವೋಪಪಾದಕವಾದುದೋ ಎಂಬುದನ್ನು ಸುಲಭವಾಗಿ ಮುಂದರೂ ಸಹ ತಿಳಿಯಬಹುದು. ಇಲ್ಲಿ ಉಕ್ತವಾಗಿರುವ ಸಾಂಖ್ಯೋಪದೇಶವು ಧರ್ಮಯುದ್ಧಕ್ರಿಯೆಗೆ ಪ್ರತಿಬಂಧಕವಾಗಿದ್ದ ಅರ್ಜುನನ ವಿಷಾದದ ಪರಿಹಾರಾರ್ಥವಾಗಿ ಶ್ರೀ ಕೃಷ್ಣನಿಂದ ಮಾಡಲ್ಪಟ್ಟಿರುವುದು. ಇದರ ಶ್ರವಣದಿಂದ ತನ್ನ ಮೋಹವು ನಷ್ಟವಾಯಿತೆಂದೂ ಯುದ್ಧದಲ್ಲಿ ಉದ್ಯುಕ್ತನಾಗುವೆನೆಂದೂ ಅಂತ್ಯದಲ್ಲಿ ಅರ್ಜುನನೂ ಒಪ್ಪಿರುವನು. ಆದುದರಿಂದ ಇಲ್ಲಿ ನಿರೂಪಿತವಾಗಿರುವ ತತ್ತ್ವವು ಅದ್ವೈತವೋ ದ್ವೈತವೋ ಯಾವುದಾದರೂ ಅರ್ಜುನನ ಶಂಕಾ ಪರಿಹಾರಕವಾಗಿಯೂ, ವಿಷಾದನಾಶಕವಾಗಿಯೂ, ಯುದ್ಧಕ್ರಿಯೆಗೆ ಪ್ರೋತ್ಸಾಹಕವಾಗಿಯೂ ಇರಬೇಕು. ಆದುದರಿಂದ ಇಲ್ಲಿ ದ್ವೈತಾದ್ವೈತಗಳಲ್ಲಿ ಯಾವುದಕ್ಕೆ ಆನುಗುಣ್ಯವು ಇರುವುದೆಂಬುದನ್ನು ನಿರ್ಣಯಿಸುವುದಕ್ಕಾಗಿ ಅರ್ಜುನನ ಪ್ರಶ್ನೆಗಳನ್ನೂ ಶ್ರೀಕೃಷ್ಣನ ಉತ್ತರರೂಪವಾದ ಸಾಂಖ್ಯೋಪದೇಶವನ್ನೂ ಕ್ರಮವಾಗಿ ನಿರೂಪಿಸುವೆವು.

**ಪ್ರಶ್ನೆ**— ಸ್ವಾಮಿ ! ನಮಗೆ ಇನ್ನೂ ಸ್ವಲ್ಪ ಕೂಲಂಕಷವಾಗಿಯೇ ಈ ವಿಷಯವನ್ನು ವಿಚಾರ ಮಾಡಬೇಕೆಂದು ಅಪೇಕ್ಷೆಯಿರುವುದು. ಮಹಾ ಜ್ಞಾನಿಯೆಂದು ಪ್ರಸಿದ್ಧನಾದ, ಕುರುವರ್ಷಾದಿಗಳಿಗೆ ದಂಡೆತ್ತಿ ಹೋಗಿ ಅಲ್ಲಿನ ದೇವತೆಗಳಿಂದಲೂ ಸಹ ಕಪ್ಪವನ್ನು ಪಡೆದು ಬಂದುದರಿಂದ ಯೋಗೀಶ್ವರನೆಂದೂ, ಚಿತ್ರರಥನೆಂಬ ದೇವ ಗಂಧರ್ವನಿಗೂ ಆಗ್ನೇಯಾಸ್ತ್ರೋಪದೇಶವನ್ನು ಮಾಡಿದುದರಿಂದ ಮಂತ್ರ ವಿದ್ಯಾಪಾರಂಗತನೆಂದೂ, ದೇವತೆಗಳಿಂದಲೂ ಲಾಲಿತನಾಗಿರುವುದರಿಂದಲೇ ಮತ್ತು ಊರ್ವಶ್ಯಾದಿಗಳ ಕುಹಕಗಳಿಗೂ ವಶನಾಗದುದರಿಂದಲೇ ಮಹಾ ಜಿತೇಂದ್ರಿಯನಾದ ಬ್ರಹ್ಮಜ್ಞಾನಿಯೆಂದೂ ಪ್ರಸಿದ್ಧನಾಗಿರುವ ಸಾಕ್ಷಾದಿಂದ್ರಪುತ್ರನಾದ ಅರ್ಜುನನಿಗೆ ಮೋಹವು ಬರಲು ಕಾರಣವೇನು ? ಮೋಹವೆಂದರೆ ಮಿಥ್ಯಾ ಜ್ಞಾನವಷ್ಟೇ ! ಅದು "ಪಾರ್ಥಾರ್ಷ್ಟಿರ್ಷೇಣ" ಇತ್ಯಾದಿ ಭಾಗವತದಲ್ಲಿ ಪರಿಗಣಿತರಾಗಿರುವ ಭ್ರಮರಹಿತರಾದ ಬ್ರಹ್ಮಜ್ಞಾನಿಗಳಲ್ಲಿ ಒಬ್ಬನಾದ ಅರ್ಜುನನಿಗೆ ಹೇಗೆ ತಾನೇ ಸಂಭವಿಸುವುದು ?

**ಉತ್ತರ— ಶ್ರೀ ಶ್ರೀಗಳವರು :—** ಈ ಪ್ರಶ್ನೆಗೆ ಅದ್ವೈತ ಮತದಲ್ಲಿ ಉತ್ತರ ಕೊಡಲು ಸಾಧ್ಯವಿಲ್ಲ. ಅಷ್ಟೇ ಅಲ್ಲ! ಅರ್ಜುನನು ಮೊದಲು ಬ್ರಹ್ಮಜ್ಞಾನಶೂನ್ಯನಾದ ದಡ್ಡನು; ಶ್ರೀ ಕೃಷ್ಣನ ಉಪದೇಶವನ್ನು ಹೊಂದಿದ ಅನಂತರವೂ ಸಹ ಬ್ರಹ್ಮಜ್ಞಾನಶೂನ್ಯನಾದ ದಡ್ಡನು ಎಂದು ಹೇಳಬೇಕು. ಮತ್ತು ಅದ್ವೈತಿಗಳು ಹೇಳಿಯೂ ಹೇಳುವರು. ಅವರ ಮತದ ರೀತಿಯಿಂದ ಮೊದಲು ಅರ್ಜುನನು ದಡ್ಡನೆಂದು ಒಪ್ಪಿಕೊಳ್ಳದಿದ್ದರೆ, ಆತನ ಪ್ರಶ್ನೆಯೇ ಅನುಚಿತವಾಗುವುದು. ಕಿಂಚ ಜ್ಞಾನಿಯಾಗಿದ್ದರೆ ಅದ್ವೈತಾತ್ಮನಲ್ಲಿ ಲೀನವಾಗುತ್ತಿದ್ದನೇ ಹೊರತು, ಕೃಷ್ಣನ ಪಾದಗಳನ್ನು ಆಶ್ರಯ ಮಾಡಿ ರಥ ಮಧ್ಯದಲ್ಲಿ ಘೋರ ತರವಾದ ಯುದ್ಧಾರ್ಥವಾಗಿ ಕುಳಿತುಕೊಳ್ಳುತ್ತಿರಲಿಲ್ಲ. ಆದುದರಿಂದ ಅರ್ಜುನನು ಅಜ್ಞಾನಿಯೆಂದೇ ನಿಶ್ಚಯಿಸುವುದಾದರೆ, “ ಪಾರ್ಥಾಕ್ಷಿರ್ಷೇಣ ” ಇತ್ಯಾದಿಯಾದ ಅರ್ಜುನನು ಬ್ರಹ್ಮಜ್ಞಾನಿಯೆಂದು ಹೇಳುವ ಅನೇಕ ಪ್ರಮಾಣಗಳು ಕುಪಿತವಾಗುವುವು. ಉಪದೇಶಾನಂತರವೂ ಸಹ ಅರ್ಜುನನು ದಡ್ಡನಾಗಿಯೇ ಉಳಿದು ಹೋದನೆಂದು ಅದ್ವೈತಿಗಳು ಒಪ್ಪಿಕೊಳ್ಳಬೇಕು. ಅನ್ಯಥಾ ಅವರ ರೀತ್ಯಾ ಬ್ರಹ್ಮಜ್ಞಾನಿಯಾದ ಅರ್ಜುನನು ಐಕ್ಯ ಸಾಕ್ಷಾತ್ಕಾರವನ್ನು ಹೊಂದಿದವನಾಗಿ ಯುದ್ಧ ಭೂಮಿಯಿಂದ ಅದೃಶ್ಯನಾಗಿ ಹೋಗುತ್ತಿದ್ದನು. ಅಥವಾ ಕರ್ಮ ಸಂನ್ಯಾಸಿಯಾಗಿ ರಣಾಂಗಣದಿಂದ ಓಡುತ್ತಿದ್ದನು. ಆದುದರಿಂದ ಅರ್ಜುನನು ಶ್ರೀ ಕೃಷ್ಣನ ಉಪದೇಶಾನಂತರವೂ ಸಹ ಅವಿದ್ಯಾವೃತನಾದ ಭ್ರಾಂತನೆಂದು ಹೇಳುವುದಾದರೆ, ಸಕಲ ಪ್ರಮಾಣಗಳೂ ದಂಡಾಹತವಾದ ಉರಗಗಳಂತೆ ಉಗ್ರವಾದ ಕೋಪವನ್ನು ತಾಳುವುವು. ಪರಂತು ಈ ಸಮಾಧಾನವು ಕೃಷ್ಣಾರ್ಜುನರ ಅವಜ್ಞಾರೂಪವಾಗಿರುವುದು. ಪರಬ್ರಹ್ಮನಾದ ವಿಷ್ಣುವು ತತ್ವವನ್ನು ಬೋಧಿಸಿದರೂ ಸಮೀಚೀನ ಜ್ಞಾನವು ಉತ್ಪನ್ನವಾಗಲಿಲ್ಲವೆಂದೂ, ಅಧಿಕಾರಿ ವರ್ಗದಲ್ಲಿ ಅತ್ಯಂತ ಶ್ರೇಷ್ಠನಾದ ಶಿಷ್ಯನಾದ, ಮೊದಲೇ ಯೋಗೀಶ್ವರನಾಗಿದ್ದ ಅರ್ಜುನನು ವಿಸ್ಮೃತವಾದ ಬುದ್ಧಿಯಿಂದ ಸಹಿತವಾಗಿ ಶ್ರವಣ ಮಾಡಿದರೂ ಸಹ ನಿಜ ತತ್ವವನ್ನು ಚೆನ್ನಾಗಿ ತಿಳಿಯಲಿಲ್ಲವೆಂದೂ ಹೇಳುವುದಕ್ಕಿಂತ ಹೆಚ್ಚು ಅವಜ್ಞೆಯನ್ನು ಗುರುಶಿಷ್ಯರಾದ ಕೃಷ್ಣಾರ್ಜುನರ ವಿಷಯದಲ್ಲಿ ಮಾಡುವುದು ಅಶಕ್ಯವು. ಪರಂತು ವಿಶ್ವರೂಪದರ್ಶನವೂ ಸಹ ಕಲ್ಪಿತ ಮಾಯೆಯೆಂದೂ, ಯೋಗೀಶ್ವರನಾದ ಶ್ರೀ ಕೃಷ್ಣನು ಹಳ್ಳಿಯ ಡೊಂಬರಂತೆ ಒಬ್ಬ ಕುಹಕ ಪುರುಷನೆಂದೂ ಈ ಮತದ ರೀತ್ಯಾ ಪ್ರಾಪ್ತವಾಯಿತು. ಶಂಕರಾಚಾರ್ಯರೂ ಹಾಗೆಯೇ ಈಶ್ವರನು ಒಬ್ಬ ಐಂದ್ರಜಾಲಿಕ ಪುರುಷನೆಂದೇ ಹೇಳುವರು ಮತ್ತು ಇಂಥ ಮಹಾವಾದದಲ್ಲಿಯೇ ಯಥಾರ್ಥ ವಿಜ್ಞಾನವು ಉಂಟಾಗದ ಮೇಲೆ ಇನ್ನು ಲೋಕದಲ್ಲಿ ಯಾವ ಗುರುವಿನ ಅದ್ವೈತ ತತ್ವೋಪದೇಶದಿಂದಲೂ ಯಾವ ಶಿಷ್ಯನಿಗೂ ಸಹ ಅದ್ವೈತ ಜ್ಞಾನವು ಉಂಟಾಗುವುದಿಲ್ಲವೆಂದೂ ಕೈಮುತ್ಯ ನ್ಯಾಯದಿಂದ ಸಿದ್ಧವಾಯಿತು.

**3. ಪ್ರಶ್ನೆ—** ಸ್ವಾಮೀ! ಹೌದು. ಅರ್ಜುನನಿಗೆ ವಿಷಾದೋತ್ಪತ್ತಿಗೆ ಕಾರಣ

ವನ್ನೂ ವಿಷಾದ ಪರಿಹಾರ ಪ್ರಕಾರವನ್ನೂ ಅದ್ವೈತ ಮತದ ರೀತ್ಯಾ ಉಪಪಾದಿಸುವುದಕ್ಕೆ ಅಶಕ್ಯವಾಗುವುದು. ದ್ವೈತ ಮತದಲ್ಲಿ ಈ ಪ್ರಶ್ನೆಗೆ ಉತ್ತರವು ಹೇಗೆ ಸುಲಭವಾಗಿರುವುದು ?

**ಉತ್ತರ— ಶ್ರೀ ಶ್ರೀಗಳವರು—** ಭಯಂಕರವಾದ ಅಮಾವಾಸ್ಯೆಯ ಕತ್ತಲೆಗೆ ನಾಶಕವಾದ ಕಿರಣ ಸಹಸ್ರಗಳಿಂದ ಸಹಿತನಾದ ಪ್ರಕಾಶಾತ್ಮಕನಾದ ಸೂರ್ಯನಂತೆ, ಸಕಲ ತತ್ವವಿಷಯಕವಾದ ಆಂತರ ಸಂಶಯವಿಪರ್ಯಯ ಪರಿಹಾರಕವಾದ ಉಜ್ಜ್ವಲ ಜ್ಞಾನ ಕಾಂತಿಗಳಿಂದ ಯುಕ್ತರಾದ ನಮ್ಮ ಶ್ರೀಮದಾಚಾರ್ಯರು ಸಂಕ್ಷಿಪ್ತ ಗ್ರಂಥಗಳಲ್ಲಿಯೇ ಅನಂತ ಸಂಶಯಗಳಿಗೂ ಉತ್ತರವನ್ನು ಸೂಚಿಸಿರುವರು ಅರ್ಜುನನ ವಿಷಾದೋತ್ಪತ್ತಿಗೆ ಕಾರಣವನ್ನು ನಮ್ಮ ಮತದ ರೀತ್ಯಾ ಎರಡು ವಿಧವಾಗಿ ನಿರೂಪಿಸಬಹುದು.

1. ಯದ್ಯಪಿ ಸಕಲ ದೇವತೆಗಳೂ, ಇಂದ್ರಾವತಾರನೆಂದು ಮಹಾಭಾರತದಲ್ಲಿಯೇ ಸುಪ್ರಸಿದ್ಧನಾಗಿರುವ ಅರ್ಜುನನೂ ಸಹ, ಪರಬ್ರಹ್ಮ ಸಾಕ್ಷಾತ್ಕಾರವನ್ನು ಹೊಂದಿದ ಜ್ಞಾನಿಗಳೇ. ತ್ರಿಲೋಕರಕ್ಷಕನಾದ, ಮನಸ್ತತ್ವಾಭಿಮಾನಿಯಾಗಿ ಸಕಲರ ಹೃದಯದಲ್ಲಿಯೂ ಒಂದೊಂದು ಅಂಶದಿಂದ ನಿಯಾಮಕನಾಗಿ ವಾಸ ಮಾಡುವ, ಅನಂತಾಂಶಗಳಿಂದ ನಿಖಿಲ ಬ್ರಹ್ಮಾಂಡ ವ್ಯಾಪಿಯಾದ ಇಂದ್ರದೇವನು ಸರ್ವಜ್ಞನಲ್ಲವೆಂದು ಹೇಳುವುದು ಹೇಗೆ ? **" ನೈವ ದೇವ ಪದಂ ಪ್ರಾಪ್ತಾ ಬ್ರಹ್ಮದರ್ಶನ ವರ್ಜಿತಾಃ "** ಇತ್ಯಾದಿ ಬಹು ಪ್ರಮಾಣ ವಚನಗಳೂ ಆಯಾಯ ದೇವತೆಗಳ ಕಾರ್ಯಪರ್ಯಾಲೋಚನೆಯೂ ಸಹ ಅವರುಗಳ ಸರ್ವಜ್ಞತ್ವದಲ್ಲಿ ನಿಶ್ಚಾಯಕವಾಗಿರುತ್ತವೆ. ಈ ರೀತಿಯಾಗಿ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿದ ಜ್ಞಾನಿಗಳಾಗಿದ್ದರೂ ಸಹ ಸಕಲ ದೇವತೆಗಳೂ ಪ್ರಾರಬ್ಧ ಕರ್ಮದಿಂದ ಯುಕ್ತರಾಗಿ, ಅದರ ಪರಿಹಾರಾರ್ಥವಾಗಿ ಭಗವಂತನಿಂದ ನಿಯತವಾದ ಅಧಿಕಾರಗಳಲ್ಲಿ ಸ್ಥಿತರಾಗಿ ಅಲ್ಲಲ್ಲಿ ತಾವು ಮಾಡಿದ ಸಕಲ ಸೇವೆಗಳನ್ನೂ ಭಗವಂತನಲ್ಲಿ ಅರ್ಪಣೆ ಮಾಡುತ್ತಾ ಸರ್ವೇಶ್ವರನಾದ ನಾರಾಯಣನನ್ನು ಸೇವಿಸುತ್ತಿರುತ್ತಾರೆ. **" ಭೀಷಾಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ "** ಇತ್ಯಾದಿ ಶ್ರುತಿಗಳೂ, ಭಾಗವತದಲ್ಲಿ ಹೇಳಿರುವ **" ಸರ್ವೇ ಮಹಾಮೋ ಬಲಿಮೀಶ್ವರಾಯ "** ಇತ್ಯಾದಿ ಬ್ರಹ್ಮದೇವರ ವಚನಗಳೂ ಈ ವಿಷಯದಲ್ಲಿ ಆಧಾರವಾಗಿರುತ್ತವೆ. ಆತ್ಮ ಸಾಕ್ಷಾತ್ಕಾರವನ್ನು ಹೊಂದಿದವನಿಗೂ ಸಹ ಪ್ರಾರಬ್ಧ ಕರ್ಮವು ಇರುವುದೆಂದೂ, ಅದು ಭೋಗಾದಿಗಳಿಂದಲೂ ಪರಮಾತ್ಮನ ವಿಶೇಷಾನುಗ್ರಹದಿಂದಲೂ ಉಪಮರ್ದಿಸಲ್ಪಡುವುದೆಂದೂ, **" ಭೋಗೇ ನತ್ವಿತರೇಕ್ಷಪಯಿತ್ವಾಥ ಸಂಪತ್ಸ್ಯತೇ " " ಉಪಮರ್ದಂಚ "** ಇತ್ಯಾದಿ ಬ್ರಹ್ಮಸೂತ್ರಗಳಲ್ಲಿ ನಿರ್ಣೀತವಾಗಿರುವುದು. ಜ್ಞಾನಿಗೆ ಪ್ರಾರಬ್ಧ ಕರ್ಮವು ಅಸಂಭಾವಿತವೆಂದು ಹೇಳುವ ಶಂಕರಾಚಾರ್ಯರೂ ಸಹ,

**" ಉತ್ಪನ್ನೇಪ್ಯಾತ್ಮ ವಿಜ್ಞಾನೇ ಪ್ರಾರಬ್ಧಂ ನೈವ ಮುಂಚತಿ "**
**ಇತಿ ಯಚ್ಛ್ರೂಯತೇ ಶಾಸ್ತ್ರೇ ।**

ಎಂಬ ಶ್ಲೋಕ ಭಾಗಗಳಲ್ಲಿ ಜ್ಞಾನಿಗಳಿಗೂ ಪ್ರಾರಬ್ಧ ಕರ್ಮವು ಬಿಡುವುದಿಲ್ಲವೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವುದೆಂದು ಒಪ್ಪಿರುತ್ತಾರೆ. ಆದರೆ ಇಷ್ಟನ್ನು ಹೇಳಿ, **"ತನ್ನಿರಾಕ್ರಿಯತೇಽಧುನಾ"** ಎಂದರೆ, ಶಾಸ್ತ್ರದಲ್ಲಿ ಹೇಳಿರುವ ಈ ವಿಷಯವನ್ನು ನಾವು ನಿರಾಕರಣೆ ಮಾಡುತ್ತೇವೆ, ಎಂದು ಪ್ರತಿಜ್ಞೆ ಮಾಡಿರುತ್ತಾರೆ. ಅವರ ಈ ನಿರಾಕರಣ ಪ್ರಕಾರವು ಅನುಚಿತವೂ ಮತ್ತು ಯುಕ್ತಿ ವಿರುದ್ಧವೂ ಆಗಿರುವುದೆಂದು ನಾವು ಪೂರ್ವದಲ್ಲಿಯೇ * ತೋರಿಸಿರುತ್ತೇವೆ. ಏವಂಚ ದೇವತೆಗಳೂ ಪ್ರಬಲವಾದ ಪ್ರಾರಬ್ಧ ಕರ್ಮಕ್ಕೆ ವಶರಾಗಿ ರಾಜಾಧೀನರಾದ ಸರ್ಕಾರದ ನೌಕರರಂತೆ ನಾನಾ ಅಧಿಕಾರಗಳನ್ನು ವಹಿಸಿರುತ್ತಾರೆ. ಇಲ್ಲಿ ಮಾತ್ರ ಒಂದು ವಿಶೇಷವಿರುವುದು. ಗಣಿಯಲ್ಲಿ ಕೆಲಸವನ್ನು ಮಾಡುವ ದಿನಗೂಲಿಯೂ ರಾಜ ಮಂತ್ರಿಯೂ ಉಭಯರೂ ಕೂಲಿಯವರೇ. ಆದರೂ ದಿನಗೂಲಿ ಮಾಡುವವನು ತನ್ನ ಕರ್ಮಗಳಿಂದ ವೇತನವನ್ನು ಸಂಪಾದಿಸಿಕೊಂಡು ಆ ದಿವಸದ ತನ್ನ ಉದರ ಪೂರ್ತಿಯನ್ನು ಹೊಂದುತ್ತಾನೆ. ಆತನ ಕಾರ್ಯದಿಂದ ಪರಪ್ರಯೋಜನವು ಅತ್ಯಲ್ಪವು. ಮಂತ್ರಿಯ ಕೂಲಿಗೆಲಸವು ಮಂತ್ರಿಗೆ ಅಪರಿಮಿತವಾದ ಮಹದೈಶ್ವರ್ಯಕ್ಕೆ ಕಾರಣವಾಗುವುದಲ್ಲದೆ ಸಕಲ ದೇಶಕ್ಕೂ ಕ್ಷೇಮವನ್ನು ಉಂಟು ಮಾಡುವುದು. ಇದೇ ರೀತಿಯಲ್ಲಿ ಲೋಕ ಪಾಲನ ವ್ಯಾಪಾರದಲ್ಲಿ ವಿಷ್ಣುವಿನಿಂದ ನಿಯುಕ್ತರಾದ ದೇವತೆಗಳ ಪ್ರಾರಬ್ಧ ಕರ್ಮವು ಸಕಲ ಮುಕ್ತಿಯೋಗ್ಯ ಸಂಸಾರಿಗಳ ಕರ್ಮಗ್ರಂಥಿಯ ವಿಮೋಚನೆಗೆ ಕಾರಣವಾಗಿರುವುದು. ಪ್ರಕೃತದಲ್ಲಿ ಉತ್ತಮಾಧಿಕಾರಿಯಾದ ಇಂದ್ರನ ಅರ್ಜುನ ರೂಪದಿಂದ ಅವತಾರವೂ, ಅವನ ಯುದ್ಧಾದಿ ಕಾರ್ಯಗಳೂ, ಯುದ್ಧೋಪಕ್ರಮದಲ್ಲಿ ಅವನ ಪ್ರಾರಬ್ಧ ಕರ್ಮದಿಂದ ಜನಿತವಾದ ವಿಷಾದವೂ ಸಹ ಭೂಭಾರಹರಣ, ಗೀತೋಪದೇಶಾದಿ ಮಹಾ ಕಾರ್ಯಗಳಿಗೆ ಅವಕಾಶಪ್ರದವಾಗುವುದರ ಮೂಲಕ ಲೋಕೋದ್ಧಾರಕ್ಕೆ ಕಾರಣವಾಯಿತು. ಮಹತ್ಪುಣ್ಯ ಕಾರಣವಾದ ಪ್ರಾರಬ್ಧ ಕರ್ಮವಿದ್ದುದರಿಂದಲೇ ಅರ್ಜುನನಿಗೆ ಮಹದ್ಯುದ್ಧಾರಂಭದಲ್ಲಿ, ಉಪದೇಶಿಸಲ್ಪಡುವ ತತ್ವದ ನೈಜ ಪ್ರಭಾವವನ್ನು ಪರೀಕ್ಷಿಸುವುದಕ್ಕೆ ಅನುಕೂಲವಾಗುವ ಧರ್ಮಸಂಕಟ ಕಾಲದಲ್ಲಿ, ತತ್ವೋಪದೇಶದಿಂದ ಭಿನ್ನವಾದ ಯಾವ ಲೌಕಿಕ ಉಪಾಯಗಳಿಂದಲೂ ನಿವೃತ್ತವಾಗದಿರುವ ಮಹಾ ವಿಷಾದವು ಪ್ರಾಪ್ತವಾಯಿತು. ಅರ್ಜುನನು ಹೇಳುತ್ತಾನೆ :—

(1) **ನಹಿ ಪ್ರಪಶ್ಯಾಮಿ ಮಮಾಪನುದ್ಯಾ**
**ದ್ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಂ ।**
**ಅವಾಪ್ಯ ಭೂಮಾವಸಪತ್ನಮೃದ್ಧಂ**
**ರಾಜ್ಯಂ ಸುರಾಣಾಮಪಿ ಚಾಧಿಪತ್ಯಂ ॥** —(2. 8.)

---

* ಶ್ರೀಮತ್ಸತ್ಯಧ್ಯಾನತೀರ್ಥರ ಗೀತೋಪದೇಶಗಳು ಈಗಾಗಲೇ ಪ್ರಥಮ ಭಾಗದಲ್ಲಿ ವ್ಯಾಖ್ಯಾತವಾಗಿರುವುದು.

ಎಲೈ ಹೃಷೀಕೇಶನೇ ! ನನ್ನ ಸರ್ವೇಂದ್ರಿಯಗಳಿಗೂ ಶೋಷಣಕರವಾದ ( ಅತಿ ಸಂತಾಪವನ್ನುಂಟು ಮಾಡಿ ಶಕ್ತಿ ನಾಶ ಮಾಡುವಂಥ ) ಈ ಶೋಕವನ್ನು ನಿವಾರಣೆ ಮಾಡುವ ಉಪಾಯವನ್ನು ನಾನು ಕಾಣೆನು. ಯದ್ಯಪಿ ಶತ್ರುಗಳಿಂದ ರಹಿತವಾದ ಸಮೃದ್ಧವಾದ ರಾಜ್ಯವನ್ನಾದರೂ ಹೊಂದಿಯೇನು. ದೇವಲೋಕಾಧಿ ಪತ್ಯವನ್ನಾದರೂ ಪಡೆದೇನು. ಆದರೂ ಈ ವಿಷಾದಕ್ಕೆ ಪರಿಹಾರೋಪಾಯವನ್ನು ಕಾಣುವುದು ಅಶಕ್ಯವಾಗಿರುವುದು.

ಏವಂಚ ಲೋಕಾನುಗ್ರಹ ಕಾರ್ಯಕಾರಿಯಾದ ಅರ್ಜುನನ ಪ್ರಾರಬ್ಧ ಕರ್ಮ ದಿಂದ ಗೀತೋಪದೇಶವು ಯುದ್ಧಾಂಗಣದಲ್ಲಿ ಆರಬ್ಧವಾಯಿತೆಂದು ಒಂದು ಉತ್ತರವು. ಹೀಗೆ ಹೇಳಿದುದರಿಂದ ಜ್ಞಾನಿಶ್ರೇಷ್ಠನಾದ ಇಂದ್ರಾಂಶನಾದ ಅರ್ಜುನನಿಗೆ ದುಃಖ ರೂಪವಾದ ವಿಷಾದವು ಹೇಗೆ ಸಂಭವಿಸುವುದೆಂಬ ಪ್ರಶ್ನೆಗೂ ಕಾರಣವಿಲ್ಲ. ಯಾತ ಕ್ಕೆಂದರೆ, ಧೃತರಾಷ್ಟ್ರಾದಿ ಜ್ಞಾನಿಗಳಿಗೆ ಪ್ರಾರಬ್ಧ ವಶದಿಂದ ವಿಪರೀತ ಜ್ಞಾನವೇ ಬಂದಿತ್ತು. ಅರ್ಜುನನಿಗಾದರೋ ಸ್ವಲ್ಪ ಜ್ಞಾನ ತಿರೋಧಾನವು ಬಂದೊದಗಿತು. ರುದ್ರಾದಿ ಮಹಾ ದೇವತೆಗಳಿಗೂ ಸಹ ಕೆಲವು ಸಮಯಗಳಲ್ಲಿ ಅವರ ದೇವತಾ ದೇಹಗಳಲ್ಲಿಯೂ ಮತ್ತು ಅವರು ಮನುಷ್ಯರಾಗಿ ಅವತರಿಸಿರುವಾಗ ಮಾನುಷಾನ್ನ ಪ್ರಭಾವಾದಿಗಳಿಂದಲೂ ಪದೇ ಪದೇ ಪರಬ್ರಹ್ಮನ ವಿಸ್ಮೃತಿಯಿಂದ ಸಹಿತವಾದ ಕ್ಷಣಿಕವಾದ ಶೋಕಾದಿಗಳು ಪ್ರಾಪ್ತವಾಗುವುವು. ಇಂಥ ಪರಿಭವಕ್ಕೆ ಪ್ರಾರಬ್ಧ ಕರ್ಮದಿಂದ ಅವರುಗಳಿಗೆ ಪ್ರಾಪ್ತವಾಗುವ ಪರಬ್ರಹ್ಮನಾದ ವಿಷ್ಣುವಿನ ಅಪರೋಕ್ಷ ಜ್ಞಾನ ತಿರೋಧಾನವೇ ಕಾರಣವು. ಅರ್ಜುನನಿಗೂ ಪ್ರಾರಬ್ಧ ಕರ್ಮದಿಂದ ಆತ್ಮ ಸಾಕ್ಷಾತ್ಕಾರವು ತಿರೋಹಿತವಾಗಲು, ಆತನು ಬಂಧು–ಸ್ನೇಹಾದಿ ನಿಮಿತ್ತಗಳಿಂದ ಶೋಕವನ್ನು ಹೊಂದಿ ಧರ್ಮ ಯುದ್ಧವನ್ನು ಅಧರ್ಮಕರವೆಂದು ಭ್ರಮಿಸಿ, ಮಿಥ್ಯಾ ಜ್ಞಾನದಿಂದ ಸಂತಪ್ತನಾಗಿ, ಯುದ್ಧ ಮಾಡಲಾರದೆ, "ರಥೋಪಸ್ಥ ಉಪಾವಿಶತ್" ರಥ ಮಧ್ಯದಲ್ಲಿ ಸುಮ್ಮನೆ ಕುಳಿತನು.

ಇದು ಒಂದು ಬಗೆಯ ಸಮಾಧಾನವು. 2. ಅಥವಾ ಕಲಿಯುಗದಲ್ಲಿ ಮುಂದೆ ಹುಟ್ಟುವ ಮಂದಭಾಗ್ಯರಲ್ಲಿ ಅನುಕಂಪಾ ವಿಶೇಷದಿಂದ ಸಹಿತನಾದ ಮುಕುಂದನೇ ಗೀತೋಪದೇಶವನ್ನು ಲೋಕದಲ್ಲಿ ಪ್ರಚಾರ ಮಾಡಬೇಕೆಂಬ ತನ್ನ ಸತ್ಯ ಸಂಕಲ್ಪವನ್ನು ನೆರವೇರಿಸಬೇಕೆಂದು ಇಚ್ಛಿಸಿ, "ನಾಪೃಷ್ಟಃ ಕಸ್ಯಚಿದ್ಬ್ರೂಯಾತ್" ಎಂಬ ನಿಯಮವಿರುವುದರಿಂದ ಪ್ರಶ್ನೋತ್ತರ ರೂಪವಾದ ವೇದಾಂತ ವಾದಕ್ಕೆ ಅರ್ಜುನನ ಪ್ರಾರಬ್ಧ ಕರ್ಮಗಳನ್ನೂ ನಿಮಿತ್ತ ಮಾಡಿಕೊಂಡು ತನ್ನ ಹೃಷೀಕೇಶತ್ವ ( ಇಂದ್ರಿಯ ನಿಯಾಮಕತ್ವ ) ವನ್ನು ಪ್ರಕಟನ ಮಾಡುವವನಾಗಿ ಅರ್ಜುನನ ಮನಸ್ಸಿನಲ್ಲಿ ಮಿಥ್ಯಾ ಜ್ಞಾನವನ್ನು ಹುಟ್ಟಿಸಿದನೆಂದು ತೋರುತ್ತದೆ. ಅನ್ಯಥಾ ಮಹಾ ಜ್ಞಾನಿಯಾದ ಅರ್ಜುನನಿಗೆ ಇಂಥ ದುರ್ಬುದ್ಧಿಯು ಹೇಗೆ ಬರುವುದು ?

ಅರ್ಜುನನು ಯುದ್ಧಾರಂಭಕ್ಕಿಂತ ಪೂರ್ವದಲ್ಲಿಯೇ ಯಥಾರ್ಥ ವಿಜ್ಞಾನ

ದಿಂದ ಸಹಿತನಾದ ಪರಮ ಭಕ್ತನಾಗಿದ್ದನೆಂದು ಗೀತೋಪಕ್ರಮದ ಪೂರ್ವೋತ್ತರ ಪರಾಮರ್ಶದಿಂದಲೇ ತಿಳಿದು ಬರುವುದು. ಅರಣ್ಯವಾಸದಲ್ಲಿರುವಾಗಲೇ, ದುರ್ಯೋಧನಾದಿಗಳು ದುರ್ಜನರೆಂದೂ, ಅವರನ್ನು ಅನುಸರಿಸುವವರೂ ಸಹ ಪಾಪಿಗಳೆಂದೂ, ಆದುದರಿಂದಲೇ ಸರ್ವರೂ ಪಾಂಡವರಿಂದ ಹನನಯೋಗ್ಯರೆಂದೂ, ಭೀಮಾರ್ಜುನ ಯುಧಿಷ್ಠರಾದಿ ಸಕಲ ಪಾಂಡವರೂ ನಿಶ್ಚಯಿಸಿದ್ದರು. ದೇವತಾಸ್ತ್ರಗಳಿಂದ ಉದ್ದೀಪ್ತಬಲವುಳ್ಳ ಕರ್ಣನ ಜಯವು ಅಶಕ್ಯವೆಂದು ಚಿಂತಿಸಿ ಪಾರ್ಥನು ಪಶುಪತಿಯನ್ನು ತಪಸ್ಸಿನಿಂದ ಮೆಚ್ಚಿಸಿ ಪಾಶುಪತಾಸ್ತ್ರವೇ ಮುಂತಾದ ದಿವ್ಯಾಸ್ತ್ರಗಳನ್ನೂ ಸಂಪಾದಿಸಿದ್ದನು. ಧರ್ಮದರ್ಶಿಗಳಲ್ಲಿ ಅಗ್ರಗಣ್ಯನಾದ ಶ್ರೀಕೃಷ್ಣನಿಂದ ಶಿಕ್ಷಿತನಾಗಿ, ಬಕವೈರಿಯಾದ ಭೀಮನ ಅನುಜನಾದ ಅರ್ಜುನನು ಯುದ್ಧದಲ್ಲಿ ದುರ್ಯೋಧನಾದಿಗಳ ಹನನವು ವೃಷಾಕಪಿಯಾದ ಕೃಷ್ಣನಿಗೆ ತುಷ್ಟಿಕರವಾದ ಯಜ್ಞವೆಂದು ನಿಶ್ಚಯಿಸಿದ್ದನು, ತದರ್ಥವಾಗಿ ತನ್ನ ಕಲ್ಯಾಣ ಕಾರ್ಯದಲ್ಲಿ ಮಹತ್ವವನ್ನು ಸಂಪಾದಿಸುವುದಕ್ಕೋಸ್ಕರ ಯಜ್ಞಪತಿಯಾದ ನಾರಾಯಣನನ್ನೇ ಭಕ್ತಿ ಪಾಶದಿಂದ ಕಟ್ಟಿ ಸಾರಥ್ಯ ಕರ್ಮದಲ್ಲಿ ನಿಯೋಗಿಸಿದನು. ಯುದ್ಧಾಂಗಣದಲ್ಲಿಯೂ ಸಹ ದುರ್ಜನ ಹನನ ಕರ್ಮದಲ್ಲಿ ಕೃತನಿಶ್ಚಯನಾದ ವೀರನ ಮಾತುಗಳೇ ಆತನ ಮುಖಕಮಲದಿಂದ ಹೊರಗೆ ಹೊರಟಿರುವುವು. ಮತ್ತು ನಾರಾಯಣದ್ವೇಷಿಯಾದ ದುರ್ಯೋಧನನೂ ಅವನನ್ನು ಅನುಸರಿಸಿದವರೂ ಸಹ ದುರ್ಬುದ್ಧಿಗಳೆಂದೇ ಅರ್ಜುನನು ಹೇಳಿರುವನು. ಸಂಜಯನ ಚರಿತ್ರಕಥನವೇ ಈ ವಿಷಯವನ್ನು ವಿಶದಪಡಿಸುತ್ತದೆ. :—

(2) **ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇಸ್ಥಿತೌ ।**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥**
**ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।**
—(1. 14–15.)

ದಿಕ್ಕುಗಳು ಶತ್ರುಗಳ ಶಂಖ ಧ್ವನಿಗಳಿಂದ ಮೊಳಗುವುದನ್ನು ನೋಡಿ ಶುಭ್ರವರ್ಣವುಳ್ಳ ಕುದುರೆಗಳಿಂದ ಯುಕ್ತವಾದ ಉತ್ತಮ ರಥದಲ್ಲಿ ಸ್ಥಿತರಾದ ಶ್ರೀ ಕೃಷ್ಣಾರ್ಜುನರಿಬ್ಬರೂ ದಿವ್ಯವಾದ ಶಂಖಗಳನ್ನು ಊದಿದರು. ಹೃಷೀಕೇಶನು ಪಾಂಚಜನ್ಯ ಶಂಖವನ್ನೂ ಧನಂಜಯನು ದೇವದತ್ತವೆಂಬ ಶಂಖವನ್ನೂ, ನಾದಮಾಡಿದರು. ಪುನಃ,

(3) **ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।**
**ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥**
**ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ॥**

**ಅರ್ಜುನ ಉವಾಚ :—**

**ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ॥**

**ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ ।**
**ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥**
**ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ।**
—(1. 20–23.)

ಅನಂತರದಲ್ಲಿ ಕಪಿಧ್ವಜನಾದ ಅರ್ಜುನನು ಯುದ್ಧದಲ್ಲಿ ಕೃತನಿಶ್ಚಯರಾಗಿ ಸ್ಥಿತರಾಗಿರುವ ಧೃತರಾಷ್ಟ್ರ ಪುತ್ರರನ್ನು ನೋಡಿ, ಶಸ್ತ್ರ ಪ್ರಹಾರಗಳು ಆರಂಭ ವಾಗುವ ಸಮಯದಲ್ಲಿ, ಧನುಸ್ಸನ್ನು ಸಜ್ಜು ಮಾಡಿ ಕೈಯಲ್ಲಿ ಎತ್ತಿ ಹಿಡಿದು ಕೊಂಡು, ಹೃಷೀಕೇಶನನ್ನು ಕುರಿತು ಈ ವಾಕ್ಯವನ್ನು ಹೇಳಿದನು. ಅರ್ಜುನನು ಹೇಳಿದುದೇನೆಂದರೆ :— "ಎಲೈ ಅಚ್ಯುತನೇ ! ಈ ರಣೋದ್ಯೋಗದಲ್ಲಿ ಯುದ್ಧಾರ್ಥಿಗಳಾಗಿ ಪ್ರಾಪ್ತರಾಗಿರುವ ಯೋಧರನ್ನೂ, ನಾನು ಯಾರ ಸಂಗಡ ಯುದ್ಧ ಮಾಡಬೇಕಾಗುವುದೋ ಅವರನ್ನೂ ನೋಡುವವರೆವಿಗೂ ಉಭಯಸೇನೆಯ ಮಧ್ಯ ಪ್ರದೇಶದಲ್ಲಿ ನನ್ನ ರಥವನ್ನು ನಿಲ್ಲಿಸು. ದುರ್ಬುದ್ಧಿಯಾದ ಧೃತರಾಷ್ಟ್ರಪುತ್ರನಿಗೆ ಯುದ್ಧದಲ್ಲಿ ಪ್ರಿಯವನ್ನು ಮಾಡಬೇಕೆಂಬ ಅಪೇಕ್ಷೆಯಿಂದ ಮಿಳಿತರಾಗಿರುವ ಈ ಯೋಧರನ್ನು ನಾನು ನೋಡುತ್ತೇನೆ.

ಇವು, ಸಮಗ್ರ ಸಂಹಾರವನ್ನು ಮಾಡಬೇಕೆಂದು ಕೃತನಿಶ್ಚಯನಾಗಿ, ಶತ್ರುಗಳ ಮರ್ಮಸ್ಥಾನಗಳನ್ನು ನೋಡಿ ತಿಳಿಯಲಿಚ್ಛಿಸಿದ ಪರಂತಪನ ವಾಕ್ಯಗಳು. ದುರ್ಯೋಧನನ ನಾಮಗ್ರಹಣವನ್ನೂ ಮಾಡದೆ, ಧೃತರಾಷ್ಟ್ರ ಪುತ್ರನೆಂದು ವ್ಯವಹರಿಸಿ, ಅವನನ್ನು ದುರ್ಬುದ್ಧಿಯೆಂದು ಕರೆದಿರುವುದರಿಂದಲೂ ಅರ್ಜುನನು ಯುದ್ಧಾರಂಭದಲ್ಲಿ ಬಂಧುಮೋಹರಹಿತನಾಗಿ, ತಾನು ಧರ್ಮ ಯುದ್ಧದಲ್ಲಿ ಪ್ರವಿಷ್ಟನಾಗಿರುವೆನೆಂದೇ ತಿಳಿದಿದ್ದನೆಂದು ನಿಶ್ಚಯಿಸಬಹುದು. ಯುದ್ಧಾರಂಭಕ್ಕೆ ಪೂರ್ವದಲ್ಲಿ ಅರ್ಜುನನು ಯಥಾರ್ಥ ಜ್ಞಾನದಿಂದ ಸಂಪನ್ನನಾಗಿದ್ದನೆಂಬುದು ಗೀತಾಂತ್ಯದಲ್ಲಿ ಆತನು ಹೇಳಿರುವ ಶ್ಲೋಕಗಳಿಂದಲೇ ತಿಳಿದು ಬರುತ್ತದೆ. :—

(4) **ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ॥**
—(18. 73.)

ಎಲೈ ಅಚ್ಯುತನೇ ! ನನ್ನ ಮಿಥ್ಯಾಜ್ಞಾನವು ನಾಶ ಹೊಂದಿತು. ನಿನ್ನ ಪ್ರಸಾದದಿಂದ ನನ್ನ ಪೂರ್ವಜ್ಞಾನವು ಪ್ರಾಪ್ತವಾಯಿತು.

ಅರ್ಜುನನು ಈ ರೀತಿಯಾಗಿ ಉತ್ಸಾಹಯುಕ್ತನಾಗಿದ್ದುದರಿಂದಲೇ ಶ್ರೀ ಕೃಷ್ಣನೂ ಸಹ ಉಭಯಸೇನಾ ಮಧ್ಯ ಪ್ರದೇಶದಲ್ಲಿ ರಥವನ್ನು ನಿಲ್ಲಿಸಿ ಯುದ್ಧಾರ್ಥವಾಗಿ ಮಿಳಿತರಾಗಿರುವ ಯೋಧರನ್ನು ನೋಡು ಎಂದು ಹೇಳಿದನು. ಸಂಜಯನು ಈ ವೃತ್ತಾಂತವನ್ನು ನಿರೂಪಿಸುತ್ತಾನೆ :—

**ಸಂಜಯ ಉವಾಚ :—**

(5) **ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।**
**ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಂ ॥**
**ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಂ ।**
**ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ॥**
—(1. 24–25.)

ಸಂಜಯನು ಹೇಳುತ್ತಾನೆ :— ಎಲೈ ಧೃತರಾಷ್ಟ್ರನೇ ! ಈ ರೀತಿಯಾಗಿ (ಉಭಯ ಸೇನೆಯ ಮಧ್ಯ ಪ್ರದೇಶದಲ್ಲಿ ರಥವನ್ನು ನಿಲ್ಲಿಸಬೇಕೆಂದು) ಜಿತನಿದ್ರನಾದ ಅರ್ಜುನನಿಂದ ಪ್ರಾರ್ಥಿಸಲ್ಪಟ್ಟ ಹೃಷೀಕೇಶನು ಉಭಯಸೇನಾ ಮಧ್ಯದಲ್ಲಿ, ಭೀಷ್ಮ ದ್ರೋಣರುಗಳ ಮತ್ತು ಸರ್ವ ರಾಜರುಗಳ ಪ್ರಮುಖದಲ್ಲಿಯೂ ತನ್ನ ಉತ್ತಮ ರಥವನ್ನು ನಿಲ್ಲಿಸಿ, "ಎಲೈ ಪಾರ್ಥನೇ ! ಯುದ್ಧಾರ್ಥವಾಗಿ ಮಿಳಿತರಾಗಿರುವ ಕುರುಗಳನ್ನು ನೋಡು" ಎಂದು ಹೇಳಿದನು.

ಶತ್ರುಗಳಾದ ದುರ್ಜನರನ್ನು ನೋಡು ಎಂದು ಕೃಷ್ಣನ ವಾಕ್ಯದ ಭಾವವು. ಅರ್ಜುನನೂ ಆ ಭಾವದಿಂದಲೇ ಶತ್ರು ಪಕ್ಷವನ್ನು ದೃಷ್ಟಿಸಬೇಕಾಗಿತ್ತು. ಮೋಕ್ಷದಾಯಕನಾದ ಮುಕುಂದನು ಕೈಯಲ್ಲಿ ಚಾವಟಿಯನ್ನು ಹಿಡಿದುಕೊಂಡು ಯುದ್ಧರಂಗದಲ್ಲೇ ಪ್ರತ್ಯಕ್ಷನಾಗಿ ಒಂದು ನಿಂತಿದ್ದರೂ ಸಹ ಅವನನ್ನೂ ಲಕ್ಷಿಸದೆ, ಅವನ ವಿರೋಧಿ ಪಕ್ಷವನ್ನು ಅವಲಂಬಿಸಿ ರಾಜ್ಯ ಲೋಭಾಧಿಗಳಿಂದ ಯುದ್ಧಾರ್ಥವಾಗಿ ಪ್ರಾಪ್ತರಾದ ಭೂಭಾರ ರೂಪರಾದ ದುಷ್ಟ ದೈತ್ಯರನ್ನು ನೋಡಿ ನ್ಯಾಯ ಪ್ರಾಪ್ತವಾದ ಮೋಕ್ಷೋಪಯೋಗಿಯಾದ ಕ್ರೋಧವೃದ್ಧಿಯನ್ನು ಅರ್ಜುನನು ಹೊಂದಬೇಕಾಗಿತ್ತು. ಆದರೆ ಇದು ದೈವ ವಿಲಾಸ ! ಕೃಷ್ಣನು ಸಮವೇತರಾದ ಕುರುಗಳನ್ನು ನೋಡೆಂದನು. ಅರ್ಜುನನು ಮಿತ್ರಾದಿ ಬಂಧುಗಳನ್ನು ನೋಡಿದನು :—

(6) **ತತ್ರಾಪಶ್ಯತ್ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್ ।**
**ಆಚಾರ್ಯಾನ್ ಮಾತುಲಾನ್ ಭ್ರಾತೄನ್ ಪುತ್ರಾನ್ ಪೌತ್ರಾನ್ ಸಖೀಂಸ್ತಥಾ ॥**
**ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ ।**
**ತಾನ್ ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ ಬಂಧೂನವಸ್ಥಿತಾನ್ ॥**
**ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್ ।**
—(1. 26–28.)

ಆಗ ಪಾರ್ಥನು ಯುದ್ಧಾರ್ಥವಾಗಿ ಮಿಳಿತವಾದ ಈ ಉಭಯ ಸೇನೆಯಲ್ಲಿ ಸ್ಥಿತರಾದ (ಭೂರಿಶ್ರವಾದಿ) ಪಿತೃಗಳನ್ನೂ, (ಭೀಷ್ಮಾದಿ) ಪಿತಾಮಹಂದಿರು

ಗಳನ್ನೂ, (ದ್ರೋಣಾದಿ) ಆಚಾರ್ಯರುಗಳನ್ನೂ, (ಶಲ್ಯಾದಿ) ಮಾತುಲರನ್ನೂ, (ದುರ್ಯೋಧನಾದಿ) ಭ್ರಾತೃಗಳನ್ನೂ, ಪುತ್ರರನ್ನೂ, ಪೌತ್ರರನ್ನೂ, ಮತ್ತು ಮಿತ್ರರನ್ನೂ, ಹೆಣ್ಣು ಕೊಟ್ಟ ಮಾವಂದಿರುಗಳನ್ನೂ ಸುಹೃಜ್ಜನರನ್ನೂ ನೋಡಿದನು. ಯುದ್ಧ ಭೂಮಿಯಲ್ಲಿ ಸ್ಥಿತರಾದ ಸರ್ವ ಬಂಧುಗಳನ್ನೂ ಕೌಂತೇಯನಾದ ಅರ್ಜುನನು ನೋಡಿ ಅಧಿಕವಾದ (ತಾಮಸ) ಕೃಪೆಯಿಂದ ವ್ಯಾಪ್ತವಾದ ಮನಸ್ಸುಳ್ಳವನಾಗಿ ವಿಷಾದವನ್ನು ಹೊಂದಿ ಈ ರೀತಿ ಮಾತಾಡಿದನು.

**ಅರ್ಜುನ ಉವಾಚ :—**

ದೃಷ್ಟ್ವೇಮಂಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್ ||
ಸೀದನ್ತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ |
ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ||
ಗಾಂಡೀವಂ ಸ್ರಂಸತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ |
ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ, ಚ ಮೇ ಮನಃ ||
ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ |
ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ||
ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ |
ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ||
ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ |
ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ||
ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ |
ಮಾತುಲಾಃಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ ||
ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ |
ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ||
ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ |
ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ||
ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ಸ್ವಬಾಂಧವಾನ್ |
ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ||
ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ |
ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ ||

**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥**
**ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ ।**
**ಧರ್ಮೇ ನಷ್ಟೇ ಕುಲಂಕೃತ್ಸ್ನಮಧರ್ಮೋಽಭಿಭವತ್ಯುತ ॥**
**ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ ।**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥**
**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥**
**ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।**
**ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥**
**ಉತ್ಸನ್ನ ಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇಽ ನಿಯತಂ ವಾಸೋ ಭವತೀತ್ಯನುಶುಶ್ರುಮ ॥**
**ಅಹೋ ಬತ ಮಹಾತ್ಪಾಪಂ ಕರ್ತುಂ ವ್ಯವಸಿತಾ ವಯಮ್ ।**
**ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ॥**
**ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥**

—(1. 28–46.)

ಅರ್ಜುನನು ಮಿಳಿತರಾದ ಕೌರವರನ್ನು ಶ್ರೀ ಕೃಷ್ಣನ ಆಜ್ಞೆಯಂತೆ ಧರ್ಮ ಯಜ್ಞದಲ್ಲಿ ಉಪಕರಣಗಳಾದ ಪಶು ದೃಷ್ಟಿಯಿಂದ ನೋಡದೆ, ಬಂಧುತ್ವೇನ ಎಂದರೆ ಬಂಧು ದೃಷ್ಟಿಯಿಂದ ನೋಡಿ, ಮಮತಾದ್ಯಭಿಮಾನಗಳಿಗೆ ವಶನಾಗಿ, ತಿರೋಹಿತ ಯಥಾರ್ಥ ಜ್ಞಾನವುಳ್ಳವನಾಗಿ, ಶತ್ರುಭೂತವಾದ, ತಾಮಸ ಕೃಪಾತ್ಮಕವಾದ ದುರ್ದೇವತೆಯಿಂದ ಆವಿಷ್ಟನಾಗಿ ದುಃಖಗ್ರಸ್ತನಾದನು. ಅಸಾಧಾರಣ ವಿಜ್ಞಾನ ಸಂಪನ್ನನಾದ ಜಿತನಿದ್ರನಾದ ಗಾಂಡೀವ ಧನ್ವಿಯು ಈ ಸ್ಥಿತಿಯನ್ನು ಹೊಂದುವುದರಲ್ಲಿ ನಿಖಿಲ ಚೇತನರ ಮನಃಕರ್ಷಕನಾದ ಕೃಷ್ಣನೇ ಮುಖ್ಯ ಕಾರಣನು. ಇದು ಮನ ಆದಿ ಸರ್ವೇಂದ್ರಿಯ ಪ್ರೇರಕನಾದ ಹೃಷೀಕೇಶನ ವ್ಯಾಪಾರವು. ಅರ್ಜುನನ ಪ್ರಾರಬ್ಧ ಕರ್ಮಗಳು ಅಮುಖ್ಯ ನಿಮಿತ್ತಗಳು. ಅನ್ಯಥಾ ಅರ್ಜುನನ ಜ್ಞಾನ ತಿರೋಧಾನರೂಪ ಕಾರ್ಯವು ಅಸಂಭಾವಿತವಾಗುವುದು. ಸಂಜಯನೇ ಇದು ಆಶ್ಚರ್ಯ ವ್ಯಾಪಾರವೆಂದು ಸೂಚಿಸಿರುತ್ತಾನೆ :—

**ಸಂಜಯ ಉವಾಚ :—**

**(7) ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ ।**

**ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವ ಹ ||**
—(2. 9.)

ಸಂಜಯ ಹೇಳುತ್ತಾನೆ :— ಈ ರೀತಿ ಜಿತನಿದ್ರನಾದ, ಶತ್ರು ಸಂತಾಪಕನಾದ ಅರ್ಜುನನು ಹೃಷೀಕೇಶನಾದ ಗೋವಿಂದನನ್ನು ಕುರಿತು ನಾನು ಯುದ್ಧ ಮಾಡುವುದಿಲ್ಲವೆಂದು ಹೇಳಿ ಮೌನವನ್ನು ಧರಿಸಿದನು. ಹ ! ಏನು ಆಶ್ಚರ್ಯವು !

ಜಿತನಿದ್ರನಿಗೆ ಅಜ್ಞಾನವು ಪ್ರಾಪ್ತವಾದದ್ದೂ, ಪರಂತಪನು ಶತ್ರುಗಳಲ್ಲಿ ಪ್ರೀತಿ ಮಾಡಿದುದೂ ಆಶ್ಚರ್ಯವೇ ! ಇಂಥ ಆಶ್ಚರ್ಯ ವ್ಯಾಪಾರವಾದುದರಿಂದಲೇ ಪರಬ್ರಹ್ಮನಾದ ಕೃಷ್ಣನಿಂದಲೇ ಇದು ನಡೆದಿರಬೇಕೆಂದು " **ಹೃಷೀಕೇಶಂ** " ಎಂಬ ವಿಶೇಷಣವು ಸೂಚಿಸುವುದು. ( ಹೃಷೀಕಾಣಾಂ ಈಶಃ ಎಂಬ ವ್ಯುತ್ಪತ್ತಿಯಿಂದ ) ಮನ ಆದಿ ಸರ್ವೇಂದ್ರಿಯ ಪ್ರೇರಕನೆಂದು ಹೃಷೀಕೇಶ ಶಬ್ದಾರ್ಥವು. ಕೃಷ್ಣನು ಅರ್ಜುನನ ಮನಸ್ಸನ್ನು ಇಂಥ ಸಂರಂಭ ಸಮಯದಲ್ಲಿ ವಿಷಾದಯುಕ್ತವನ್ನಾಗಿ ಮಾಡಿದುದಕ್ಕೆ ಕಾರಣವೂ ಸಹ **ಗೋವಿಂದಂ** ಎಂಬ ಈ ಶ್ಲೋಕೋಕ್ತ ವಿಶೇಷಣವೇ ಸೂಚಿಸುವುದು. ( ಗಾಃ ವೇದವಾಚಃ ಎಂದತೇ ಪ್ರತಿಪಾದಕತ್ವೇನ ಲಭತೇ ಎಂಬ ವ್ಯುತ್ಪತ್ತಿಯಿಂದ) ನಿಖಿಲ ವೇದ ವೇದಾಂತಗಳೆಂಬ ವಾಕ್ಕುಗಳಿಂದ ಪ್ರತಿಪಾದಿತ ಸ್ವರೂಪವುಳ್ಳವನೆಂದು ಗೋವಿಂದ ಶಬ್ದಾರ್ಥವು. ಅಂಥ ವೇದೋಕ್ತ ತತ್ವವನ್ನು ಉಪದೇಶ ಮಾಡುವುದಕ್ಕೋಸ್ಕರವೇ ಈ ಸಂರಂಭ ಸಮಯದಲ್ಲಿ ಹೃಷೀಕೇಶನಾದ ಶ್ರೀ ಕೃಷ್ಣನು ಅರ್ಜುನನ ವೇದಾಂತ ಪ್ರಶ್ನೆಗೆ ಅವಕಾಶವನ್ನು ಹುಟ್ಟಿಸುವುದಕ್ಕಾಗಿ ಅವನನ್ನು " **ಧರ್ಮಸಂಮೂಢಚೇತಾಃ** " ಎಂದರೆ ಧಾರ್ತರಾಷ್ಟ್ರಾದಿಗಳ ಹನನವು ಧರ್ಮ ಜನಕವೋ ಅಧರ್ಮಜನಕವೋ ಎಂಬುದಾಗಿ ಸಂದಿಗ್ಧ ಮನಸ್ಕನಾಗುವಂತೆ ಮಾಡಿ ಬಿಟ್ಟನು. ಅರ್ಜುನನು ಹೇಳುತ್ತಾನೆ :—

(8) **ಕಾರ್ಪಣ್ಯದೋಷೋಪಹತಸ್ವಭಾವಃ**
**ಪೃಚ್ಛಾಮಿ ತ್ವಾಂ ಧರ್ಮಸಂಮೂಢಚೇತಾಃ |**
**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ**
**ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ ||** —(2. 7.)

ಎಲೈ ಅಚ್ಯುತನೇ ! ಕೃಪಾಪಾರವಶ್ಯದಿಂದ ಜನಿತವಾದ ಕೃಪಣತ್ವವೆಂಬ ಮನೋದೋಷದಿಂದ ಅಭಿಭೂತವಾದ ಶೌರ್ಯ ಸ್ವಭಾವ ಉಳ್ಳವನಾಗಿ ಧರ್ಮ ವಿಷಯದಲ್ಲಿ ಸಂದೇಹಯುಕ್ತವಾದ ಚಿತ್ತವುಳ್ಳವನಾಗಿ ನಾನು ನಿನ್ನನ್ನು ಪ್ರಶ್ನೆ ಮಾಡುತ್ತೇನೆ. ಯುದ್ಧವನ್ನು ಪರಿತ್ಯಾಗ ಮಾಡಿ ಭಿಕ್ಷಾಟನಾದಿಗಳಿಂದ ಜೀವನವನ್ನು ಕಳೆಯುವುದು ಧರ್ಮಕರವೇ ಅಥವಾ ಯುದ್ಧವನ್ನು ಮಾಡುವುದು ಧರ್ಮಕರವೇ ? ಭಿಕ್ಷಾಟನ ಯುದ್ಧಗಳಲ್ಲಿ ಯಾವುದು ಶ್ರೇಯಸ್ಕರವೆಂಬುದನ್ನು ನನಗೆ

ತಿಳಿಸು. ನಾನು ನಿನಗೆ ಶಿಷ್ಯನಾಗಿರುತ್ತೇನೆ. ಶರಣಾಗತನಾದ ನನ್ನನ್ನು ನೀನು ಉಪದೇಶಿಸು.

ರಣಶೌಂಡನಾದ ಪಾರ್ಥನಿಗೆ ಭಿಕ್ಷಾಟನದಲ್ಲಿ ಮನಸ್ಸು ಪ್ರವೃತ್ತವಾಯಿತು. ನಿಖಿಲ ಮನೋ ನಿಯಾಮಕನಾದ ಪರಮಾತ್ಮನೇ ಪ್ರಕಾರಾಂತರದಿಂದ ಅರ್ಜುನನನ್ನು ಅನುಗ್ರಹಿಸಬೇಕೆಂದು ಈ ರೀತಿಯಾದ ಚಿತ್ತವೈಕಲ್ಯವನ್ನುಂಟು ಮಾಡಿದನೆಂಬಲ್ಲಿ ಶ್ರೀ ಕೃಷ್ಣನ ಅನೇಕ ವಾಕ್ಯಗಳು ಆಧಾರವಾಗಿರುತ್ತವೆ :—

**(9) ಮತ್ತಃ ಸರ್ವಂ ಪ್ರವರ್ತತೇ ।**

**(10) ಬುದ್ಧಿರ್ಜ್ಞಾನಮಸಂಮೋಹಃ........ಮತ್ತ ಏವ ಪೃಥಗ್ವಿಧಾಃ ॥**

—(10. 4.)

**(11) ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟಃ**
**ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ॥**

—(15. 15.)

ಪರಂತು ಈ ಪ್ರಕರಣದಲ್ಲೂ ಸಹ ಅರ್ಜುನನ ವಿಷಾದ ಪರಿಹಾರಾರ್ಥವಾಗಿ ಸಾಂತ್ವ ವಚನಗಳನ್ನಾಡುವುದಕ್ಕೆ ಉಪಕ್ರಮಿಸಿದ ಶ್ರೀ ಕೃಷ್ಣನನ್ನು ಸಂಜಯನು ವರ್ಣಿಸಿರುವ ರೀತಿಯಿಂದಲೇ ಅರ್ಜುನನ ಚಿತ್ತವೈಕಲ್ಯವು ಉದ್ದೇಶಪೂರ್ವಕವಾದ ದೈವ ತಂತ್ರವೆಂದು ನಿಶ್ಚಿತವಾಗುತ್ತದೆ :—

**(12) ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।**
**ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥**

—(2. 10.)

ಎಲೈ ಧೃತರಾಷ್ಟ್ರನೇ ! ಉಭಯಸೇನಾ ಮಧ್ಯದಲ್ಲಿ ಸ್ಥಿತನಾಗಿ ಶೋಕದಿಂದ ಪರಿತಪಿಸುತ್ತಿರುವ ಅರ್ಜುನನ್ನು ಕುರಿತು ಸರ್ವೇಂದ್ರಿಯ ಪ್ರೇರಕನಾದ ಶ್ರೀಕೃಷ್ಣನು ( ಅಪಹಾಸದ್ಯೋತಕವಾದ ) ಮುಗುಳು ನಗೆಯಿಂದ ಒಡಗೂಡಿದ ವನೋಪಾದಿಯಲ್ಲಿ ಈ ರೀತಿ ಹೇಳಿದನು.

"ಹೃಷೀಕೇಶಂ", "ಪ್ರಹಸನ್", ಮತ್ತು "ಇವ" ಎಂಬ ಪದಗಳು ಬಹ್ವರ್ಥಗರ್ಭಿತವಾಗಿವೆ. ಸರ್ವೇಂದ್ರಿಯ ನಿಯಾಮಕನಾದ ಸ್ವಾಮಿಯು ಅರ್ಜುನನ ಹೃದಯದಲ್ಲಿ ಧರ್ಮ ಸಂದೇಹವನ್ನು ಉಂಟು ಮಾಡಿ, ಆತನು ಪ್ರಶ್ನೆ ಮಾಡಿದ ನಂತರ ತನ್ನ ಸ್ವಾತಂತ್ರ್ಯಾನುಸಂಧಾನವನ್ನು ಪ್ರಕಟ ಮಾಡುವವನಾಗಿ ಮಂದಹಾಸವನ್ನು ತೋರಿಸಿ, ಅರ್ಜುನನ ಸ್ವತಂತ್ರವೀರ್ಯ, ಪರಾಕ್ರಮಾದಿಗಳನ್ನೂ, ಉತ್ಪನ್ನವಾದದುರಭಿಮಾನವನ್ನೂ ನೋಡಿ ಅಪಹಾಸ್ಯ ಮಾಡಿರುತ್ತಾನೆ.

4. **ಪ್ರಶ್ನೆ**— ಸ್ವಾಮೀ ! ಯಾವ ಉದ್ದೇಶದಿಂದ ವಿಜಯಸಖನಾದ ಶ್ರೀ ಕೃಷ್ಣನು ಯುದ್ಧ ಸಮಯದಲ್ಲಿ ಧರ್ಮ ಸಂದೇಹವನ್ನು ತಂದಿಟ್ಟನು ?

**ಉತ್ತರ— ಶ್ರೀ ಶ್ರೀಗಳವರು—** ದುರ್ಜ್ಞೇಯವಾದ ಈಶ್ವರ ಚಿತ್ತವನ್ನು ತಿಳಿಯುವುದು ಅಶಕ್ಯವು. ಶಾಸ್ತ್ರಜ್ಞರು ಅನೇಕ ಪ್ರಕಾರವಾಗಿ ನಿರೂಪಿಸಿರುವರು. 1. ಸಜ್ಜನ ಲೋಕಾನುಗ್ರಹಾರ್ಥವಾಗಿ ಸತ್ತತ್ತ್ವೋಪದೇಶವನ್ನು ಮಾಡುವ ಉದ್ದೇಶದಿಂದ ತತ್ತ್ವೋಪದೇಶಕ್ಕೆ ಅವಸರವನ್ನು ಕಲ್ಪಿಸುವುದಕ್ಕಾಗಿ ಶ್ರೇಷ್ಠನಾದ ಅಧಿಕಾರಿಯಿಂದ ಶ್ರುತವಾದ ಮತ್ತು ಅನುಷ್ಠಿತವಾದ ತತ್ತ್ವವೇ ಪ್ರಚಯಾರ್ಹವೂ ಅನುಕರಣಾರ್ಹವೂ ಆದುದರಿಂದ, ಉತ್ತಮಾಧಿಕಾರಿಯಾದ ಅರ್ಜುನನ ಮನಸ್ಸ ರೋವರವನ್ನೇ ಕಲಕಿ ಧರ್ಮ ಸಂಶಯವನ್ನು ಹೃಷೀಕೇಶನು ತಂದಿಟ್ಟನೆಂದು ನಾವು ನಿರೂಪಿಸಿರುತ್ತೇವೆ. ಗೀತೋಪದೇಶವು ಅರ್ಜುನನನ್ನು ನಿಮಿತ್ತ ಮಾಡಿಕೊಂಡು ಲೋಕಾನುಗ್ರಹವನ್ನು ಮಾಡುವ ಉದ್ದೇಶದಿಂದ ಪ್ರವೃತ್ತವಾಯಿತೆಂದೇ ಶಂಕರಾ ಚಾರ್ಯರೂ ಒಪ್ಪಿರುತ್ತಾರೆ. ಅವರು ತಮ್ಮ ಗೀತಾಭಾಷ್ಯದ ಪ್ರಥಮಾಧ್ಯಾಯ ದಲ್ಲಿಯೇ "ಸರ್ವ ಲೋಕಾನುಗ್ರಹಾರ್ಥಮರ್ಜುನಂ ನಿಮಿತ್ತೀಕೃತ್ಯಾಹ ಭಗವಾನ್ ವಾಸುದೇವಃ" ಎಂದು ಬರೆದಿರುತ್ತಾರೆ.

ಅದರಲ್ಲಿಯೂ ತಾನು ನಿರೂಪಿಸುವ ಶಾಸ್ತ್ರವು ವ್ಯಾಸಂಗ ಮಾತ್ರೋಪಯೋಗಿ ಯಾದ ನಿಸ್ಸಾರವಾದ ತತ್ತ್ವವಲ್ಲ; ಮತ್ತೇನೆಂದರೆ ಕಲಿಕಾಲದಲ್ಲಿ ಧರ್ಮಸಂಕಟ ಸಮಯದಲ್ಲಿ ಪ್ರಾಪ್ತವಾಗುವ ಸಕಲ ಸಂಶಯಗಳಿಗೂ ನಿವರ್ತಕವಾದ ವಿಶ್ವತೋ ಮುಖವಾದ ಮತ್ತು ಸಜ್ಜನರ ದಿನಚರ್ಯೆಯಲ್ಲೂ ಅನುಷ್ಠೇಯವಾದ ನಿಜ ತತ್ತ್ವ ವೆಂದು ಸೂಚಿಸುವುದಕ್ಕಾಗಿ ಶ್ರೀ ಕೃಷ್ಣನು ಸಂಗ್ರಾಮ ಸಂರಂಭದಲ್ಲಿಯೇ ಉಪ ದೇಶಕ್ಕೆ ಅವಕಾಶವನ್ನು ಕಲ್ಪಿಸಿರುತ್ತಾನೆ. ಶ್ರೀ ಕೃಷ್ಣನು ಮಹತ್ಸಂಕಟವನ್ನು ನಿರ್ಮಾಣ ಮಾಡಿ ಆಧ್ಯಾತ್ಮಿಕ ಧರ್ಮ ಸಂಕಟಕ್ಕೆ ಔಷಧರೂಪವಾದ ತನ್ನ ತತ್ತ್ವ ವನ್ನು ಉಪದೇಶ ಮಾಡಿದುದರಿಂದ ಗೀತೆಯು ಸಂಕಟ ಪರಿಹಾರಕವಾದ ಉಪದೇಶ ವೆಂದು ವಿದಿತವಾಯಿತು.

ಸೂಕ್ಷ್ಮಜ್ಞರು ಇನ್ನೂ ಎರಡು ಮೂರು ಕಾರಣಗಳನ್ನು ನಿರೂಪಿಸುವರು. ಅರ್ಜುನನ ಪರಮೇಷ್ಟ ದೇವತೆಯಾದ ಶ್ರೀ ಕೃಷ್ಣನು ತನ್ನ ಭಕ್ತನಿಗೆ ಭೂಭಾರ ಹರಣದಿಂದ ಪ್ರಾಪ್ತವಾಗುವ ಮಹತ್ಫಲವನ್ನು ಇನ್ನೂ ಅಧಿಕ ಮಾಡಿ ಕೊಡ ಬೇಕೆಂದು ಇಚ್ಛಿಸಿದವನಾಗಿ, ಜ್ಞಾನಾಧಿಕ್ಯಾನುಗುಣವಾಗಿ ಕರ್ಮ ಫಲಕ್ಕೆ ಆಧಿಕ್ಯವು ಬರುವುದೆಂದು ಶಾಸ್ತ್ರ ಪ್ರಮಿತವಾಗಿರುವುದರಿಂದ ಅರ್ಜುನನ ಜ್ಞಾನವನ್ನು ಪೂರ್ವ ಕ್ಕಿಂತಲೂ ಹೆಚ್ಚು ಅತಿಶಯೋಪೇತವಾದದ್ದನ್ನಾಗಿ ಮಾಡಲೋಸುಗ ಇದ್ದ ಜ್ಞಾನಕ್ಕೂ ತಿರೋಧಾನವನ್ನು ತಂದಿಟ್ಟು ಅರ್ಜುನನ ಶಿಷ್ಯಭಾವವನ್ನು ಸ್ವೀಕರಿಸಿ ದನು. ಭಯಂಕರವಾದ ಎಂಥ ಗಡಿಬಿಡಿಯಲ್ಲಿಯೂ ಸಹ ಪರಮಾತ್ಮನನ್ನು ಮರೆಯಬಾರದು ಮತ್ತು ಬ್ರಹ್ಮ ವಿಚಾರವನ್ನು ಬಿಡಬಾರದು ಎಂದು ಯುದ್ಧ ಕಾಲೀನವಾದ ಈ ಉಪದೇಶದಿಂದ ಸ್ಫುಟವಾಗಿ ಗೊತ್ತಾಗುವುದು.

ಅಥವಾ ಸಾಮಾನ್ಯ ಜ್ಞಾನದಿಂದ ಯುದ್ಧ ಮಾಡುವ ಅರ್ಜುನನಿಗೆ ರಣ ಮಧ್ಯದಲ್ಲಿ ಅವರ್ಜನೀಯವಾಗಿ ಪ್ರಾಪ್ತವಾಗುವ ಮನಸ್ಸಿನ ಅನವಧಾನತೆಯಿಂದ (ಎಂದರೆ ಪ್ರಮಾದದಿಂದ) ಅಶ್ವತ್ಥಾಮಾದಿ ಉತ್ತಮರ ಸಂಗಡ ಪರಮಾತ್ಮನ ವಿಸ್ಮೃತಿಯಿಂದ ಸಹಿತವಾಗಿ ಯುದ್ಧ ಮಾಡಿದರೆ ಪ್ರಬಲವಾದ ಉತ್ತಮ ದ್ರೋಹವು ಬಂದು ಬಿಡಬಹುದೆಂಬ ಶಂಕೆಯಿಂದ ಅದರ ನಿವಾರಣಾರ್ಥವಾಗಿ ಆತನಿಗೆ ದಿವ್ಯ ಜ್ಞಾನವನ್ನು ಅನುಗ್ರಹಿಸುವುದಕ್ಕೋಸ್ಕರ ಶ್ರೀ ಕೃಷ್ಣನು ಉಪದೇಶಕ್ಕೆ ಅವಕಾಶ ವನ್ನು ಕಲ್ಪಿಸಿದನೆಂದು ಹೇಳುವರು.

ಕಿಂಚ ಭಗವದ್ವಿಸ್ಮೃತಿಯಿಂದ ಸಾರಥಿಯಾದ ಶ್ರೀ ಕೃಷ್ಣನ ಅವಜ್ಞೆಯು ಪ್ರಾಪ್ತವಾಗಿ ಅರ್ಜುನನಿಗೆ ಪ್ರಬಲವಾದ ಆಮುಷ್ಮಿಕ ಹಾನಿಯು ಬಂದು ಬಿಡು ತ್ತಿತ್ತು. ಇಂಥ ಸಂಭವವು ಇದ್ದಿತೆಂದು ಅರ್ಜುನನ ಏಕಾದಶಾಧ್ಯಾಯದಲ್ಲಿ ನಿರೂ ಪಿತವಾಗಿರುವ ಕೃಷ್ಣಸ್ತುತಿಯಿಂದ ವಿದಿತವಾಗುವುದು :—

(1) **ಸಖೇತಿ ಮತ್ವಾ ಪ್ರಸಭಂ ಯದುಕ್ತಂ**
**ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।**
**ಅಜಾನತಾ ಮಹಿಮಾನಂ ತವೇದಂ**
**ಮಯಾ ಪ್ರಮಾದಾತ್ಪ್ರಣಯೇನ ವಾಪಿ ॥**

(2) **ಯಚ್ಚಾಪಹಾಸಾರ್ಥಮಸತ್ಕೃತೋಽಸಿ**
**ವಿಹಾರಶಯ್ಯಾಸನಭೋಜನೇಷು ।**
**ಏಕೋಽಥವಾಪ್ಯಚ್ಯುತ ತತ್ಸಮಕ್ಷಂ**
**ತತ್ಕ್ಷಾಮಯೇ ತ್ವಾಮಹಮಪ್ರಮೇಯಂ ॥**

(3) **ಪಿತಾಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ**
**ಲೋಕತ್ರಯೇಽಪ್ಯಪ್ರತಿಮಪ್ರಭಾವ ॥**

(4) **ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ**
**ಪ್ರಸಾದಯೇ ತ್ವಾಮಹಮೀಶಮೀಡ್ಯಂ ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ**
**ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಂ ॥**

**—(11. 41–44.)**

ಎಲೈ ಸ್ವಾಮಿಯೇ ! ನಿನ್ನ ಈ ಮಹಿಮೆಯನ್ನು ತಿಳಿಯದೆ, ನಿನ್ನನ್ನು

ಲೌಕಿಕ ಮಿತ್ರನೆಂದು ತಿಳಿದು, ಮರ್ಯಾದೆಯಿಲ್ಲದಂತೆ ನಿನ್ನನ್ನು ಕುರಿತು ಎಲೈ ಕೃಷ್ಣನೇ ! ಹೇ ಯಾದವ ! ಎಲೈ ಮಿತ್ರನೇ ! ಇತ್ಯಾದಿ ರೀತಿಯಾಗಿ ಕ್ವಚಿತ್ ಪ್ರಮಾದದಿಂದಲೂ, ಕ್ವಚಿತ್ ಪ್ರೀತಿಯಿಂದಲೂ ನಾನು ಆಡಿದ ಮಾತುಗಳನ್ನು ನೀನು ಕ್ಷಮಿಸಬೇಕು. ಎಲೈ ಅಚ್ಯುತನೇ ! ಸ್ವತಂತ್ರಕರ್ತನಾದ ಸರ್ವೋತ್ತಮ ವಸ್ತುವಾದ, ಅಪಾರ ಮಹಿಮೋಪೇತನಾದ ನಿನ್ನನ್ನು ಕುರಿತು ವಿಹಾರ, ಶಯನ, ಆಸನ, ಭೋಜನಾದಿ ಸಮಯಗಳಲ್ಲಿ ಹಾಸ್ಯಾರ್ಥವಾಗಿ ನಾನು ಮಾಡಿದ ಅಸ ತ್ಕಾರಗಳನ್ನು ಕ್ಷಮಿಸಬೇಕೆಂದು ನಿನ್ನ ಎದುರಿಗೇ ಬೇಡಿಕೊಳ್ಳುತ್ತೇನೆ. ನೀನು ಸ್ಥಾವರ ಜಂಗಮಾತ್ಮಕವಾದ ಸರ್ವ ಪ್ರಪಂಚಕ್ಕೂ ತಂದೆಯು, ಜಗತ್ಪೂಜ್ಯನು, ಅತಿ ಶ್ರೇಷ್ಠನಾದ ಗುರುವು. ನಿರುಪಮೈಶ್ವರ್ಯವಂತನಾದ ಎಲೈ ಸ್ವಾಮಿಯೇ ! ನಿನಗೆ ಸಮಾನನಾದವನು ಈ ಮೂರು ಲೋಕಗಳಲ್ಲೂ ಇಲ್ಲ; ಇನ್ನು ನಿನಗಿಂತಲೂ ಅಧಿಕನಾದವನು ಬೇರೊಬ್ಬನು ಎಲ್ಲಿ ಇರುವನು ? ಆದುದರಿಂದ, ಸರ್ವ ಜಗತ್ತಿಗೂ ಸ್ವಾಮಿಯಾದ, ಸರ್ವ ಜಗತ್ತಿನಿಂದಲೂ ಸ್ತುತ್ಯನಾದ ನಿನ್ನನ್ನು ದಂಡಪ್ರಣಾಮ ಮಾಡಿ ಕ್ಷಮಾಪಣೆಯನ್ನು ಕೇಳಿಕೊಳ್ಳುತ್ತೇನೆ. ಹೇ ದೇವ ! ಮಗನ ಅಪರಾಧ ವನ್ನು ತಂದೆಯು ಕ್ಷಮಿಸುವಂತೆ, ಮಿತ್ರನ ಅಪರಾಧವನ್ನು ಮಿತ್ರನು ಕ್ಷಮಿಸುವಂತೆ, ಪತ್ನಿಯ ಅಪರಾಧವನ್ನು ಪತಿಯು ಕ್ಷಮಿಸುವಂತೆ, ನೀನು ನನ್ನ ಅಪರಾಧವನ್ನು ಕ್ಷಮಿಸಬೇಕು.

ಇಂಥ ವಿಶಿಷ್ಟ ಜ್ಞಾನವು ಕೃಷ್ಣನ ವಿಶೇಷಾನುಗ್ರಹದಿಂದ ಪ್ರಾಪ್ತವಾದುದ ರಿಂದಲೇ ಕುರುಕ್ಷೇತ್ರದಲ್ಲಿ ಅರ್ಜುನನು ಆಚರಿಸಿದ ಮಹಾ ಯುದ್ಧವು ರಾಜ ಸೂಯಯಾಗಾದಿಗಳಂತೆ ವಿಶೇಷ ಫಲಪ್ರದವಾಗಿ ಶ್ರೀ ಕೃಷ್ಣನ ಪ್ರೀತಿಕರವಾಯಿತು. ಇಂಥ ವಿಶಿಷ್ಟ ಜ್ಞಾನವು ಕೃಷ್ಣಾನುಗ್ರಹದಿಂದ ಹುಟ್ಟಿದುದರಿಂದಲೇ ಅರ್ಜುನನು ಅಭಿಮನ್ಯು ಘಟೋತ್ಕಚಾದಿಗಳ ವಧೆಯಿಂದಲೂ ಸಹ ಹೆಚ್ಚು ವಿಷಾದವನ್ನು ಹೊಂದದೆ ಧರ್ಮ ಯುದ್ಧದಲ್ಲಿ ಅಕುಂಠಿತ ಉತ್ಸಾಹದಿಂದ ಆಸಕ್ತನಾದನು. ಯುಧಿ ಷ್ಠಿರನಿಗೆ ಇಂತಹ ವಿಸ್ತೃತ ಜ್ಞಾನವು ಹುಟ್ಟಲಿಲ್ಲವಾದುದರಿಂದ ಯುದ್ಧೋಪ ಸಂಹಾರವಾದ ನಂತರ ತಾನು ಆಚರಿಸಿದ ಭೀಷ್ಮಾದಿಗಳ ಹನನವು ಪಾಪಫಲಪ್ರದ ವಾಗಬಹುದೆಂಬ ಸಂಶಯವು ಬಂದು ಪರಿತಪಿಸುವುದಕ್ಕಾರಂಭಿಸಿದನು.

ಏವಂಚ ವಿಷಾದಸಂವಿಗ್ನ ಮನಸ್ಕನಾದ, ಶರಣಾಗತನಾದ ಸ್ವಭಕ್ತನನ್ನು ಉದ್ಧಾರ ಮಾಡಬೇಕೆಂಬ ಇಚ್ಛೆಯಿಂದಲೂ ಮತ್ತು ಲೋಕಾನುಗ್ರಹೋದ್ದೇಶ ದಿಂದಲೂ ಶ್ರೀ ಕೃಷ್ಣನು ಕುರುಕ್ಷೇತ್ರ ಭೂಮಿಯಲ್ಲಿ ಉತ್ತಮಾಧಿಕಾರಿಯಾದ ಅರ್ಜುನನಿಗೆ ತತ್ತ್ವೋಪದೇಶವನ್ನು ಮಾಡಿದನು. ಕಿಂಚ ಇದೇ ಸಮಾರಂಭದಲ್ಲಿ ಶ್ರೀ ಕೃಷ್ಣನು ಪ್ರಸಂಗಾದ್ಯಾನುಕೂಲ್ಯವು ಪ್ರಾಪ್ತವಾದಾಗ ತತ್ತ್ವೋಪದೇಶವನ್ನು ಕೈ ಬಿಡಬಾರದೆಂದು ತನ್ನ ಉಪದೇಶ ಕಾರ್ಯರೂಪವಾದ ಉದಾಹರಣೆಯಿಂದಲೇ ನಮ್ಮಂಥವರೆಲ್ಲರಿಗೂ ತೋರಿಸಿರುವನು.

5. ಅದ್ವೈತಮತದ ರೀತ್ಯಾ ಗೀತೋಪದೇಶೋಪಕ್ರಮವೇ ಅಸಂಗತವಾಗುವುದು. ಪರಮಧರ್ಮ ಕಥನದಿಂದ **"ಧರ್ಮಸಂಮೂಢ"** ಮನಸ್ಕನಾದ ಅರ್ಜುನನ ಭ್ರಮವನ್ನು ಪರಿಹರಿಸಿ ಯುದ್ಧವು ಧರ್ಮ ಕಾರ್ಯವೆಂದು ನಿರೂಪಿಸುವುದು ಆವಶ್ಯಕವು. ಆದರೆ ಆತ್ಮೈಕ್ಯವಾದವು, ನಿರ್ಗುಣ ಬ್ರಹ್ಮವಾದವು, ಕರ್ಮ ಸಂನ್ಯಾಸದ ಆವಶ್ಯಕತಾ ಸಮರ್ಥನೆಯು, ವಿಶ್ವಮಿಥ್ಯಾತ್ವ ಸಮರ್ಥನೆಯು ಇವೇ ಮೊದಲಾದ ಅದ್ವೈತ ತತ್ತ್ವೋಪದೇಶಕ್ಕೆ ಈ ಭಾರತ ಯುದ್ಧ ಭೂಮಿಗಿಂತ ಅನುಚಿತವಾದ ಸ್ಥಳವಿಲ್ಲ. ಮತ್ತು ಶಸ್ತ್ರ ಸಂಪಾತವು ಸನ್ನಿಹಿತವಾಗಿರುವ ಯುದ್ಧ ಕಾಲಕ್ಕಿಂತ ಹೆಚ್ಚು ಅನುಚಿತವಾದ ಕಾಲವಿಲ್ಲ. ಅದ್ವೈತ ತತ್ತ್ವೋಪದೇಶವು ಆ ದೇಶ ಕಾಲಗಳಿಗೆ ವಿರುದ್ಧವೂ, ಅನುಚಿತವೂ, ಅಯೋಗ್ಯವೂ ಆಗಿರುವುದು. ಮಂಗಳೋತ್ಸವ ಸಮಯದಲ್ಲಿ ಸೂತಕವು ಪ್ರಾಪ್ತವಾದಂತೆ, ಉರಿಯುವ ಬೆಂಕಿಗೆ ತಣ್ಣೀರನ್ನು ಎರಚಿದಂತೆ ಶಂಕರಾಚಾರ್ಯರ ಕರ್ಮ ಸಂನ್ಯಾಸವಾದವು ಕೃಷ್ಣಾರ್ಜುನರ ಸಂವಾದದಲ್ಲಿ ಪ್ರವೇಶಕ್ಕೆ ಅತ್ಯಂತ ಅನರ್ಹವಾದ ದುಸ್ತತ್ವವೆಂದು ವಿಚಾರಶೀಲರಿಗೆ ತೋರದಿರಲಾರದು. ತಮ್ಮ ಗೀತಾ ಭಾಷ್ಯದ ಆರಂಭದಲ್ಲಿಯೇ ಶಂಕರಾಚಾರ್ಯರು ಹೀಗೆ ಬರೆದಿರುವರು :—

" ತಸ್ಯಾಸ್ಯ ಗೀತಾಶಾಸ್ತ್ರಸ್ಯ ಸಂಕ್ಷೇಪತಃ ಪ್ರಯೋಜನಂ ಪರಂ ನಿಃಶ್ರೇಯಸಂ ಸಹೇತುಕಸ್ಯ ಸಂಸಾರಸ್ಯಾತ್ಯಂತೋಪರಮಲಕ್ಷಣಂ । ತಚ್ಚ ಸರ್ವಕರ್ಮಸಂನ್ಯಾಸಪೂರ್ವಕಾದಾತ್ಮಜ್ಞಾನನಿಷ್ಠಾರೂಪಾದ್ಧರ್ಮಾದ್ಭವತಿ ॥ "

**ಅರ್ಥವು :—** ಈ ಗೀತಾಶಾಸ್ತ್ರಕ್ಕೆ **(ಅವಿದ್ಯಾರೂಪ)** ಕಾರಣದಿಂದ ಸಹಿತವಾದ ಸಂಸಾರೋಪರಮರೂಪವಾದ ಮುಕ್ತಿಯೇ ಮುಖ್ಯ ಪ್ರಯೋಜನವು. ಅದು ಸರ್ವ ಕರ್ಮ ಸಂನ್ಯಾಸಪೂರ್ವಕವಾದ ಆತ್ಮಜ್ಞಾನ (ಬ್ರಹ್ಮೈಕ್ಯಜ್ಞಾನ) ದಲ್ಲಿ ಸ್ಥಿತಿರೂಪವಾದ ಧರ್ಮದಿಂದ ಬರುತ್ತದೆ.

ಪುನಃ ದ್ವಿತೀಯಾಧ್ಯಾಯದಲ್ಲಿ **"ಅಶೋಚ್ಯಾನನ್ವಶೋಚಸ್ತ್ವಂ"** ಎಂಬ ಗೀತೋಪದೇಶದ ಆರಂಭ ಶ್ಲೋಕ ವ್ಯಾಖ್ಯಾನಾವಸರದಲ್ಲೂ ಸಹ ಹೀಗೆ ಬರೆದಿರುತ್ತಾರೆ :—

" ಸಂಸಾರಬೀಜಭೂತೌ ಶೋಕಮೋಹೌ । ತಯೋಶ್ಚ ಸರ್ವಕರ್ಮಸಂನ್ಯಾಸಪೂರ್ವಕಾದಾತ್ಮಜಾನಾನ್ನಾನ್ಯತೋ ನಿವೃತ್ತಿರಿತಿ ತದುಪದಿದಿಕ್ಷುಃ........ ಆಹ........ಅಶೋಚ್ಯಾನಿತ್ಯಾದಿ "

**ಅರ್ಥವು :—** ಶೋಕಮೋಹಗಳು ಸಂಸಾರಬೀಜವಾದುವುಗಳು. ಅವುಗಳಿಗೆ ಸರ್ವ ಕರ್ಮ ಸಂನ್ಯಾಸಪೂರ್ವಕವಾದ ನಿರ್ಗುಣ ಬ್ರಹ್ಮಜ್ಞಾನದಿಂದಲೇ ಹೊರತು ಅನ್ಯೋಪಾಯಗಳಿಂದ ನಿವೃತ್ತಿಯಿಲ್ಲ. ಅಂಥ ಆತ್ಮಜ್ಞಾನವನ್ನು ಉಪದೇಶಿಸುವುದಕ್ಕಾಗಿ ಅಶೋಚ್ಯಾನಿತ್ಯಾದಿ ಶ್ಲೋಕಗಳನ್ನು ಶ್ರೀ ಕೃಷ್ಣನು ಉಪದೇಶ ಮಾಡುತ್ತಾನೆ.

ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ನಿತ್ಯನೈಮಿತ್ತಿಕ ಕರ್ಮಗಳು ಜ್ಞಾನೋಪಯೋಗಿಯೆಂದೇ ನಿರೂಪಿಸಿರುತ್ತಾನೆ. ಕರ್ಮ ಸಂನ್ಯಾಸವನ್ನು ಉಪದೇಶ ಮಾಡಿರುವುದಿಲ್ಲ ಎಂದು ಹೇಳುವವರ ಅಭಿಪ್ರಾಯವನ್ನು ಶಂಕರಾಚಾರ್ಯರು ಅಲ್ಲಲ್ಲಿ ಖಂಡನೆ ಮಾಡಿರುತ್ತಾರೆ.

ಕರ್ಮ ಸಂನ್ಯಾಸವು ಮೋಕ್ಷೋಪಯೋಗಿಯಲ್ಲ ಮತ್ತು ಮೋಕ್ಷವಿರೋಧಿಯೆಂದೂ, ಆತ್ಮೈಕ್ಯಜ್ಞಾನವು ಮೋಕ್ಷೋಪಯೋಗಿಯಲ್ಲ ಮತ್ತು ಮೋಕ್ಷವಿರೋಧಿಯೆಂದೂ ನಾವು ತೋರಿಸುತ್ತೇವೆ. ಪ್ರಕೃತದಲ್ಲಿ ಇಷ್ಟು ಹೇಳಬೇಕಾಗಿರುವುದು. ಕರ್ಮಸಂನ್ಯಾಸವನ್ನು ಬೋಧಿಸುವ ಉದ್ದೇಶದಿಂದ ಶ್ರೀಕೃಷ್ಣನು ಗೀತೋಪದೇಶದಲ್ಲಿ ಪ್ರವರ್ತಿಸಿದನೆಂದು ಹೇಳುವುದು ಗುರುಶಿಷ್ಯರಾದ ಕೃಷ್ಣಾರ್ಜುನರಿಬ್ಬರಿಗೂ ಪ್ರಬಲವಾದ ದೋಷಾಪಾದನೆಗಳನ್ನು ಒಪ್ಪಬೇಕಾದ ಮಹದವಜ್ಞೆಯನ್ನು ಅಂಗೀಕಾರ ಮಾಡಬೇಕಾಗುವುದು. ಹೇಗೆಂದರೆ, ಅಶೋಚ್ಯಾನನ್ವಶೋಚಸ್ತ್ವಂ ಎಂಬ ಶ್ಲೋಕದ ಮೊದಲುಗೊಂಡು ಶ್ರೀ ಕೃಷ್ಣನು ಉಪದೇಶ ಮಾಡಿದ "ಸಾಂಖ್ಯ"ವು ಕರ್ಮ ಸಂನ್ಯಾಸಪೂರ್ವಕವಾದ ಆತ್ಮಜ್ಞಾನದಲ್ಲಿ ಸ್ಥಿತಿರೂಪವಾದರೆ, "ಕುರು ಕರ್ಮೈವ ತಸ್ಮಾತ್ತ್ವಂ" ಇತ್ಯಾದಿ ರೀತಿಯಾಗಿ ಅರ್ಜುನನನ್ನು ಕುರಿತು ಶ್ರೀ ಕೃಷ್ಣನು ಬೋಧಿಸಿದುದು ಅಸಂಬದ್ಧ ಪ್ರಲಾಪವಾಗುವುದು. ಕೃಷ್ಣನು ವಿಸ್ಮೃತಿಶೀಲನಾದ ಭ್ರಾಂತನಾಗಬೇಕು. ಅಥವಾ ವಿರುದ್ಧ ಸ್ವಭಾವವುಳ್ಳ ಲೌಕಿಕ ಗುರುವಿನಂಥಾ ಮೂರ್ಖ ಗುರುವಾಗಬೇಕು. ಹೇಗೆಂದರೆ ಮದ್ಯಪಾನವನ್ನು ಮಾಡಬಾರದು, ಟೀ ಮೊದಲಾದ ಮಾದಕ ದ್ರವ್ಯಗಳನ್ನು ಪಾನ ಮಾಡಬಾರದೆಂದು ಉದ್ದೇಶಪೂರ್ವಕವಾಗಿ ಉಪದೇಶ ಮಾಡುತ್ತಿರುವಾಗಲೇ ತಾನೇ ಸಭಿಕರಿಗೆ ಮದ್ಯವನ್ನೋ, ಟೀಯನ್ನೋ ಬಟ್ಟಲುಗಳಲ್ಲಿ ತುಂಬಿ ಅರ್ಪಣೆ ಮಾಡುವುದು ವಿರುದ್ಧ ಸ್ವಭಾವವುಳ್ಳ ದುರ್ಜನನಿಗೆ ಉಚಿತವೆಂದು ಲೋಕಸಮ್ಮತವಾಗಿರುತ್ತದೆ. ಹಾಗೆ ಕರ್ಮಸಂನ್ಯಾಸವನ್ನು ಉಪದೇಶ ಮಾಡಿದ ನಂತರ "ಯುಧ್ಯಸ್ವ ಭಾರತ" ಎಂದು ಮೋಕ್ಷೋಪಯೋಗಿಯಲ್ಲದ ಯುದ್ಧದಲ್ಲಿ ಶ್ರೀ ಕೃಷ್ಣನು ಅರ್ಜುನನ್ನು ಪ್ರೇರಿಸುವನೆಂದು ಹೇಳುವುದಾದರೆ ಕೃಷ್ಣನ ಜ್ಞಾನದಲ್ಲಿ ಅಂಧತೆಯನ್ನು ಒಪ್ಪಬೇಕು ಅಥವಾ ಅವನನ್ನು ವಿರುದ್ಧ ಸ್ವಭಾವವುಳ್ಳ ದುರ್ಜನನೆಂದು ಒಪ್ಪಬೇಕು.

**ಪ್ರಶ್ನೆ**— ಸ್ವಾಮೀ ! ಇದಕ್ಕೆ ಶಂಕರಾಚಾರ್ಯರು ಸಮಾಧಾನವನ್ನು ಯಾವ ರೀತಿಯಿಂದಲೂ ಹೇಳಿರುವುದಿಲ್ಲವೋ ?

**ಉತ್ತರ— ಶ್ರೀ ಶ್ರೀಗಳವರು :**— ಹೇಳಿರುವರು. ಸಮಾಧಾನ ಪ್ರಕಾರವನ್ನು ವಿಚಾರ ಮಾಡಿರಿ. ಸರ್ವ ಕರ್ಮ ಸಂನ್ಯಾಸಪೂರ್ವಕವಾದ ಆತ್ಮೈಕ್ಯಜ್ಞಾನನಿಷ್ಠೆಯು ಪರಮಾರ್ಥ ಉಪದೇಶವು. ಹೀಗಿದ್ದರೂ ಕರ್ಮವನ್ನು ಮಾಡಬೇಕೆಂದು ಪುನಃ ಪುನಃ ಬೋಧಿಸಿರುವುದು ಮೂಢರಾದ ಮೋಕ್ಷೇಚ್ಛಾರಹಿತರಾದ ಕರ್ಮಯೋಗಿಗಳ ವಿವಕ್ಷೆಯಿಂದ ಎಂದು ಹೇಳಿರುವರು. ಇದು ಶಾಂಕರ ಗೀತಾಭಾಷ್ಯದ ದ್ವಿತೀಯಾಧ್ಯಾಯದಲ್ಲಿಯೇ ನಿರೂಪಿತವಾಗಿದೆ :—

" ಜ್ಞಾನಕರ್ಮನಿಷ್ಠಯೋರ್ವಿಭಾಗವಚನಾದ್ಬುದ್ಧಿದ್ವಯಾಶ್ರಯಯೋರಶೋಚ್ಯಾನಿತ್ಯಾದಿನಾ ಭಗವತಾ ಯಾವತ್ ಸ್ವಧರ್ಮಮಪಿ ಚಾವೇಕ್ಷ್ಯ ಇತ್ಯೇತದಂತೇನ ಗ್ರಂಥೇನ ಯತ್ಪರಮಾರ್ಥಾತ್ಮತತ್ತ್ವನಿರೂಪಣಂ ಕೃತಂ ತತ್ಸಾಂಖ್ಯಂ ತದ್ವಿಷಯಾ ಬುದ್ಧಿರಾತ್ಮನೋ ಜನ್ಮಾದಿಷಡ್ವಿಕ್ರಿಯಾಭಾವಾದಕರ್ತಾತ್ಮೇತಿ ಪ್ರಕರಣಾರ್ಥನಿರೂಪಣಾದ್ಯಾಜಾಯತೇ ಸಾ ಸಾಂಖ್ಯಬುದ್ಧಿಃ ಸಾ ಯೇಷಾಂ ಜ್ಞಾನಿನಾಮುಚಿತಾ ಭವತಿ ತೇ ಸಾಂಖ್ಯಾಃ. ಏತಸ್ಯಾ ಬುದ್ಧೇರ್ಜನ್ಮನಃ ಪ್ರಾಗಾತ್ಮನೋ ಮೋಕ್ಷಸಾಧನಾನುಷ್ಠಾನನಿರೂಪಣಲಕ್ಷಣೋ ಯೋಗಃ ತದ್ವಿಷಯಾ ಬುದ್ಧಿರ್ಯೋಗಬುದ್ಧಿಃ ಸಾ ಯೇಷಾಂ ಕರ್ಮಿಣಾಮುಚಿತಾ ಭವತಿ ತೇ ಯೋಗಿನಃ. ತಥಾಚ ವಿಭಕ್ತೇ ದ್ವೇ ಬುದ್ಧೀ ನಿರ್ದಿಷ್ಟೇ "ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇತ್ವಿಮಾಂ ಶೃಣು " ಇತಿ............ಏವಂ ಸಾಂಖ್ಯಬುದ್ಧಿಂ ಯೋಗಬುದ್ಧಿಂ ಚಾಶ್ರಿತ್ಯ ದ್ವೇ ನಿಷ್ಠೇ ವಿಭಕ್ತೇ ಭಗವತೈವೋಕ್ತೇ "

**ಅರ್ಥವು :—** ಜ್ಞಾನನಿಷ್ಠೆ ಮತ್ತು ಕರ್ಮನಿಷ್ಠೆ ಎಂಬ ವಿಭಾಗ ವಚನದಿಂದ ತೋರಿ ಬರುವ ಎರಡು ಬುದ್ಧಿಗಳಲ್ಲಿ " ಅಶೋಚ್ಯಾನನ್ವಶೋಚಸ್ತ್ವಂ " ಎಂಬ ಶ್ಲೋಕವನ್ನು ಮೊದಲು ಮಾಡಿಕೊಂಡು ಸ್ವಧರ್ಮಮಪಿಚಾವೇಕ್ಷ್ಯ ಎಂಬ ಶ್ಲೋಕ ಪರ್ಯಂತವೂ ಹೇಳಲ್ಪಟ್ಟಿರುವ ಪರಮಾರ್ಥ ತತ್ವನಿರೂಪಣವು ಸಾಂಖ್ಯವೆನ್ನಿಸುವುದು. ತದ್ವಿಷಯಕವಾದ ಆತ್ಮನು ಜನ್ಮಾದಿ ಷಡ್ವಿಕಾರರಹಿತನು ಅವನು ಅಕರ್ತನು ಎಂದು ಪ್ರಕರಣಾರ್ಥದಿಂದ ಉತ್ಪನ್ನವಾಗುವ ಬುದ್ಧಿಯು ಸಾಂಖ್ಯ ಬುದ್ಧಿಯು. ಅದನ್ನು ಅವಲಂಬಿಸುವ ಜ್ಞಾನಿಗಳು ಸಾಂಖ್ಯರು.

" ಇಂಥ ಸಾಂಖ್ಯ ಬುದ್ಧಿಯು ಹುಟ್ಟುವುದಕ್ಕೆ ಪೂರ್ವದಲ್ಲಿ ( ಆಚರಿಲ್ಪಡಬೇಕಾದ ) ಆತ್ಮನ ಮೋಕ್ಷಸಾಧನಾನುಷ್ಠಾನದ ನಿರೂಪಣೆಗೆ ಯೋಗವೆಂದು ಹೆಸರು. ತದ್ವಿಷಯಕವಾದ ಬುದ್ಧಿಯು ಯೋಗಬುದ್ಧಿಯು. ಅದನ್ನು ಆಚರಿಸುವ ಕರ್ಮಿಗಳು ಯೋಗಿಗಳು. ಹೀಗೆ ವಿಭಾಗ ಮಾಡಿ "ಏಷಾತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು " ಎಂಬಲ್ಲಿ ಎರಡು ಬುದ್ಧಿಗಳು ನಿರ್ದೇಶ ಮಾಡಲ್ಪಟ್ಟಿವೆ — ಹೀಗೆ ಸಾಂಖ್ಯ ಬುದ್ಧಿ ಮತ್ತು ಯೋಗಬುದ್ಧಿ ಎಂಬ ಎರಡು ಬುದ್ಧಿಗಳನ್ನು ಆಶ್ರಯಿಸಿ ಎರಡು ವಿಧವಾದ ಸ್ಥಿತಿಯು ವಿಭಕ್ತವಾಗಿ ಭಗವಂತನಿಂದಲೇ ಹೇಳಲ್ಪಟ್ಟಿವೆ. "

ಅದರಲ್ಲಿ ಸಾಂಖ್ಯ ಬುದ್ಧಿಯನ್ನವಲಂಬಿಸಿ ಕರ್ಮ ಪರಿತ್ಯಾಗ ಮಾಡುವವರು ಜ್ಞಾನಿಗಳು ಮತ್ತು ಮುಮುಕ್ಷುಗಳು; ಕರ್ಮವನ್ನು ಮಾಡುವವನು ಅಜ್ಞಾನಿಯು ಮತ್ತು ಮೋಕ್ಷೇಚ್ಛಾರಹಿತನು ಎಂದು ಅವರ ವಾಕ್ಯದಿಂದಲೇ ನಿಶ್ಚಿತವಾಗುವುದು :—

" ಯಾನಿ ಕರ್ಮಾಣಿ ಶಾಸ್ತ್ರೇಣ ವಿಧೀಯಂತೇ ತಾನಿ ಅವಿದುಷೋ ವಿಹಿತಾನಿ .... .... .... ವಿದುಷಃ **ಮುಮುಕ್ಷೋಶ್ಚ** ಕರ್ಮಸಂನ್ಯಾಸೇ ಏವ ಅಧಿಕಾರಃ ॥ "

**ಅರ್ಥ :—** ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವ ಕರ್ಮಗಳು ( ಮೋಕ್ಷೇಚ್ಛಾರಹಿತ

ನಾದ) ಅರ್ಜುನನಿಗೆ ಹೇಳಲ್ಪಟ್ಟಿರುವುವು .... .... .... ಜ್ಞಾನಿಗೂ ಮೋಕ್ಷವು ಬೇಕೆಂಬ ಇಚ್ಛೆಯುಳ್ಳವನಿಗೂ ಸಕಲ ಕರ್ಮ ಪರಿತ್ಯಾಗದಲ್ಲಿಯೇ ಅಧಿಕಾರವು.

ಹೀಗೆ ಶಂಕರಾಚಾರ್ಯರು ಪರಮಾರ್ಥ ತತ್ತ್ವರೂಪವಾದ, ನಿತ್ಯನೈಮಿತ್ತಿಕಾದಿ ಸರ್ವ ಕರ್ಮ ಪರಿತ್ಯಾಗಪೂರ್ವಕವಾದ ಆತ್ಮಜ್ಞಾನದಲ್ಲಿ ಸ್ಥಿತಿಯೆಂಬ ಸಾಂಖ್ಯವನ್ನು ಉತ್ತಮವಾದ ಸಾಂಖ್ಯ ಬುದ್ಧಿಯನ್ನು ಅವಲಂಬಿಸಿ ಶ್ರೀ ಕೃಷ್ಣನು ಹೇಳಿರುವನೆಂದೂ, ವಿಹಿತ ಕರ್ಮಾನುಷ್ಠಾನ ರೂಪವಾದ ಯೋಗವನ್ನು ಅರ್ಜುನರಿಗೆ ಉಚಿತವಾದ ಯೋಗ ಬುದ್ಧಿಯನ್ನು ಅವಲಂಬಿಸಿ ಹೇಳಿರುವನೆಂದೂ ಸ್ಪಷ್ಟವಾಗಿ ಬರೆದಿರುತ್ತಾರೆ. ಆದುದರಿಂದ ನಾವು ಪೂರ್ವದಲ್ಲಿ ನಿರೂಪಿಸಿದಂತೆ, ಅದ್ವೈತ ಮತದ ರೀತ್ಯಾ ಸರ್ವ ಕರ್ಮ ಸಂನ್ಯಾಸ ರೂಪವಾದ ಸಾಂಖ್ಯವೇ ಪರಮ ತತ್ವವಾದರೆ ಕರ್ಮಯೋಗವನ್ನು ಶ್ರೀ ಕೃಷ್ಣನು ನಿರೂಪಿಸುವುದಕ್ಕೆ ಕಾರಣವಿರಲಿಲ್ಲ. ಅಂಥ ನಿರೂಪಣೆಯು ಅತ್ಯಂತ ಅನುಚಿತವೂ, ವಿರುದ್ಧವೂ, ಅಯೋಗ್ಯವೂ ಆಗುವುದಲ್ಲದೆ ಅತೀವ ಹಾಸ್ಯಾಸ್ಪದವಾದ ಉಪದೇಶ ಪ್ರಕಾರವೆನ್ನಿಸುವುದು.

**ಪ್ರಶ್ನೆ :—** ಸ್ವಾಮೀ ! ವಿವಕ್ಷಾದ್ವಯಗಳನ್ನು ಇಟ್ಟುಕೊಂಡು ವಾದ ಮಾಡುವುದನ್ನು ನಾವು ಎಷ್ಟೋ ಸ್ಥಳಗಳಲ್ಲಿ ನೋಡಿಲ್ಲವೇ ? ಹಾಗೆ ಪ್ರಕೃತದಲ್ಲಿಯೂ ಸಹ ಪರಮಾರ್ಥ ವಿವಕ್ಷೆಯಿಂದ ಕರ್ಮ ಸಂನ್ಯಾಸ ಪೂರ್ವಕವಾದ ಆತ್ಮೈಕ್ಯ ಜ್ಞಾನವೆಂಬ ಸಾಂಖ್ಯವನ್ನೂ, ವ್ಯಾವಹಾರಿಕ ವಿವಕ್ಷೆಯಿಂದ ಕರ್ಮಾನುಷ್ಠಾನ ರೂಪವಾದ ಯೋಗವನ್ನೂ ಶ್ರೀ ಕೃಷ್ಣನು ಹೇಳಿರುವನೆಂದು ಯಾತಕ್ಕೆ ತಿಳಿಯಕೂಡದು.

**ಶ್ರೀ ಶ್ರೀಗಳವರು :—** 1. ಅಣ್ಣ ತಮ್ಮಂದಿರು ಒಂದು ಮನೆಯಲ್ಲಿ ಕಲೆಯುವರು; ಅಗ್ನಿ ಹಿಮಗಳು ಒಂದು ಕಡೆಯಲ್ಲಿ ಸೇರಲಾರವು. ಹಾಗೆಯೇ ಪ್ರಕೃತದಲ್ಲಿಯೂ ಸಹ ಪರಸ್ಪರ ವಿರುದ್ಧವಾದ ಎರಡು ವಿವಕ್ಷೆಗಳು ಒಬ್ಬ ಅಧಿಕಾರಿಗೆ ಒಂದು ಉಪದೇಶದಲ್ಲಿ ಪ್ರವೃತ್ತವಾಗುವುದು ಅಸಂಭಾವಿತವು. ಪರಸ್ಪರ ಅವಿರುದ್ಧವಾದ ಎರಡು ವಿವಕ್ಷೆಗಳಿಂದ ಒಂದು ಪದಾರ್ಥವನ್ನು ನಾವು ತಿಳಿಯಬಹುದು. ರೋಗಿಯ ವಿವಕ್ಷೆಯಿಂದ ಘೃತವು ಅನಿಷ್ಟವೆಂದೂ, ದೃಢಕಾಯನಾದ ವಿದ್ಯಾರ್ಥಿ ವಿವಕ್ಷೆಯಿಂದ ಘೃತವು ಇಷ್ಟ ಪದಾರ್ಥವೆಂದೂ ನಿಶ್ಚಯಿಸಬಹುದು. ಆದರೆ ಒಂದೇ ವ್ಯಭಿಚಾರ ಕರ್ಮವು ವ್ಯಭಿಚಾರಿಯ ವಿವಕ್ಷೆಯಿಂದ ಧರ್ಮವೆಂದೂ, ಶಾಸ್ತ್ರಜ್ಞರ ವಿವಕ್ಷೆಯಿಂದ ಅಧರ್ಮಕರವೆಂದೂ ಶಾಸ್ತ್ರ ವಾಕ್ಯಾರ್ಥದಲ್ಲಿ ನಿಶ್ಚಯಿಸುವುದು ಅಪ್ರಯೋಜಕವಾದ ವಿವಕ್ಷಾ ಕಲ್ಪನೆಯೆನ್ನಿಸುವುದು. ಪ್ರಕೃತದಲ್ಲಿ ಸಾಂಖ್ಯ ವಿವಕ್ಷೆಯಿಂದ ಅರ್ಜುನನಿಗೆ ಶ್ರೀ ಕೃಷ್ಣನು ಸರ್ವ ಕರ್ಮ ಸಂನ್ಯಾಸಪೂರ್ವಕವಾದ ಬ್ರಹ್ಮೈಕ್ಯ ಜ್ಞಾನವನ್ನು ಉಪದೇಶ ಮಾಡಿದ್ದರೆ, ಆತನು ಅಜ್ಞವಿವಕ್ಷೆಯಿಂದ ಎಂದರೆ ಸುಳ್ಳು ವಿವಕ್ಷೆಯಿಂದ ಪ್ರವೃತ್ತವಾಗುವ ಕರ್ಮಾನುಷ್ಠಾನವನ್ನು ಅರ್ಜುನನಂಥ ಉತ್ತಮಾಧಿಕಾರಿಗೆ ಬೋಧಿಸುವುದಕ್ಕೇ ಅವಕಾಶವಿರಲಿಲ್ಲ. 2. ಕಥಂಚಿತ್ ಮೂಢರು ಹೀಗೆ ಮಾಡಬೇಕು ಎಂದು ಹೇಳಬಹುದಾದರೂ ಸಹ, "ಯುಧ್ಯಸ್ವ ವಿಗತಜ್ವರಃ",

"ಅತಿಷ್ಠೋತ್ತಿಷ್ಠ ಭಾರತ", "ಕುರು ಕರ್ಮೈವ ತಸ್ಮಾತ್ತ್ವಂ" ಎಂದು ಪುನಃ ಪುನಃ ಯುದ್ಧದಲ್ಲಿ ಪ್ರೇರಿಸುವುದೂ, ತಾನೂ ಅಂಥ ಅಜ್ಞ ವಿವಕ್ಷೆಯಿಂದ ಪ್ರವೃತ್ತ ವಾಗುವ ವ್ಯಾಪಾರಕ್ಕೆ ಮುಖ್ಯ ಸಹಾಯಕನಾಗಿ ನಿಂತುಕೊಳ್ಳುವುದೂ ಅನುಚಿತ ವಾಗುವುದು. 3. ಅರ್ಜುನನು ಅಜ್ಞನು, ಆತನು ಸಾಂಖ್ಯಾಧಿಕಾರಿಯಲ್ಲವೆಂದು ಪರಮಾರ್ಥವಾದ ಸಾಂಖ್ಯವನ್ನು ಸ್ವಲ್ಪ ವಿವರಿಸಿ, ಅನಂತರ ಅರ್ಜುನನಿಂದ ಅನು ಷ್ಠೇಯವಾದ ಯೋಗವನ್ನೇ ವಿಶೇಷವಾಗಿ ಶ್ರೀಕೃಷ್ಣನು ಹೇಳಿದನು ಎಂದು ಹೇಳುವು ದಾದರೆ, ಕೃಷ್ಣನು ಅಜ್ಞನು, ಪರಮಾರ್ಥತತ್ವವಾದ ಕರ್ಮ ಸಂನ್ಯಾಸ ರೂಪವಾದ ಸಾಂಖ್ಯವನ್ನು ಅನುಷ್ಠಾನ ಮಾಡದೆ ಸೃಷ್ಟ್ಯಾದಿಕ್ರಿಯೆ, ಭೂಭಾರಹರಣ, ವಿಜಯ ಸಾರಥ್ಯಾದಿ ಕರ್ಮಯೋಗದಲ್ಲಿ ಪ್ರವೃತ್ತನಾದನೆಂದು ಒಪ್ಪಿಕೊಳ್ಳಬೇಕಾಗುವುದು. ಇದು ಮಹಾ ಕೃಷ್ಣಾವಜ್ಞೆಯೆನ್ನಿಸುವುದು. ಕಥಂಚಿತ್ ಕೃಷ್ಣನು ಅಜ್ಞ ವ್ಯಾಪಾರ ವನ್ನು ಅನುಕರಣೆ ಮಾಡಿದನೆಂದು ಹೇಳಿದರೂ ಸಹ, ಭಕ್ತನೂ ಮುಮುಕ್ಷುವೂ ಆದ ಅರ್ಜುನನಿಗೆ ಅಜ್ಞ ವಿವಕ್ಷೆಯಿಂದ ಪ್ರಾಪ್ತವಾದ ಯುದ್ಧ ಕಾರ್ಯದಲ್ಲಿ ಪ್ರೇರಿ ಸಿದನೆಂದು ಹೇಳುವುದು ಅಸಂಗತವಾಗುವುದು. 4. ಕಿಂಚ ಸಕಲ ಪ್ರಮಾಣ ಗಳಲ್ಲಿಯೂ ಅರ್ಜುನನು ಸಾಂಖ್ಯಾಧಿಕಾರಿಗಳಾದ ಸನಕಾದಿಗಳಿಗಿಂತ ಉತ್ತಮ ನಾದ ತ್ರೈಲೋಕವಂದಿತ ಚರಣನಾದ ದೇವೇಂದ್ರಾವತಾರನೆಂದು ಪ್ರಸಿದ್ಧನಾಗಿರು ವುದರಿಂದ ಅತ್ಯುತ್ತಮ ಸಾಂಖ್ಯಾಧಿಕಾರಿಯೇ ಆಗಿರುವನು. ಮತ್ತು ಅರ್ಜುನನು ಸಾಮಾನ್ಯನಾಗಿದ್ದರೂ ಶ್ರೀ ಕೃಷ್ಣನ ಉಪದೇಶವೇ ಪ್ರಬಲವಾದ ಅಜ್ಞನನ್ನು ಸಾಂಖ್ಯನನ್ನಾಗಿ ನಿಮಿಷ ಮಾತ್ರದಲ್ಲಿ ಮಾಡುವುದಕ್ಕೆ ಸಮರ್ಥವಾಗಿರುವುದು. ಆದುದರಿಂದ ಅದ್ವೈತಮತದ ರೀತ್ಯಾ ಅರ್ಜುನನು ತನ್ನ ಯೋಗ್ಯತಾನುಗುಣವಾದ ಕರ್ಮ ಸಂನ್ಯಾಸವನ್ನು ವಿಧಿಸುವ ಸಾಂಖ್ಯೋಪದೇಶವನ್ನು ಶ್ರವಣ ಮಾಡಿದ ನಂತರ ನೀಚವಾದ ಮತ್ತು ಕ್ರೂರವಾದ ಕರ್ಮಯೋಗದಲ್ಲಿ ಪ್ರವೃತ್ತನಾಗುವುದಕ್ಕೆ ಕಾರಣವೇ ಇರಲಿಲ್ಲ. 5. ಪರಂತು ಶ್ರೀ ಕೃಷ್ಣನು ಬೋಧಿಸಿದ ಸಾಂಖ್ಯವು ಕರ್ಮ ಸಂನ್ಯಾಸವನ್ನು ವಿಧಿಸತಕ್ಕದ್ದಲ್ಲವೆಂದು ಗೀತೆಯಿಂದಲೇ ವಿಶದವಾಗಿ ನಿಶ್ಚಿತ ವಾಗುವುದು. ಸಾಂಖ್ಯವನ್ನು ಶ್ರವಣ ಮಾಡಿದ ನಂತರವೂ ಸಹ ಕರ್ಮಯೋಗ ದಲ್ಲಿ ಪ್ರವೃತ್ತನಾದುದರಿಂದಲೇ ಅರ್ಜುನನು ಶ್ರವಣ ಮಾಡಿದ ಸಾಂಖ್ಯವು ಕರ್ಮಾ ನುಷ್ಠಾನಕ್ಕೆ ಉಪೋದ್ಘಾತಕವೆಂದು ಸೂಚಿತವಾಗುವುದು. ಸಾಂಖ್ಯವನ್ನು ಉಪದೇಶ ಮಾಡಿದ ನಂತರ "ಕುರು ಕರ್ಮೈವ ತಸ್ಮಾತ್ತ್ವಂ" ಎಂದು ಶ್ರೀ ಕೃಷ್ಣನು ಕರ್ಮಾ ನುಷ್ಠಾನದಲ್ಲಿ ಪ್ರೇರಿಸುತ್ತಿರುವುದರಿಂದಲೂ ಶ್ರೀ ಕೃಷ್ಣನು ಉಪದೇಶ ಮಾಡಿದ ಸಾಂಖ್ಯವು ಕರ್ಮಾನುಷ್ಠಾನಕ್ಕೆ ಉಪೋದ್ಘಾತಕವೇ ಹೊರತು ಕರ್ಮ ಸಂನ್ಯಾಸ ವನ್ನು ವಿಧಿಸತಕ್ಕದ್ದಲ್ಲವೆಂದು ನಿಶ್ಚಿತವಾಗುವುದು. ಮತ್ತು ಅರ್ಜುನನ ಅಂತ್ಯ ಶ್ಲೋಕಗಳೂ ಸಹ ಅರ್ಜುನನು ಶ್ರೀ ಕೃಷ್ಣನಿಂದ, ವಿಸ್ಮೃತವಾದ ತನ್ನ "ಸಾಂಖ್ಯ" ಜ್ಞಾನವನ್ನೇ ಪುನಃ ಪಡೆದು ಯುದ್ಧದಲ್ಲಿ ಉತ್ಸಾಹದಿಂದ ಪ್ರವೃತ್ತನಾದನೆಂದು ಬೋಧಿಸುವುವು. ಇದು ಅರ್ಜುನನ ವಾಕ್ಯವು :—

**(1) ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಽಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥**
—(18. 73.)

ಎಲೈ ಅಚ್ಯುತನೇ! ನನ್ನ ವಿಪರೀತ ಜ್ಞಾನವು, (ಬಂಧುಸ್ನೇಹವು) ನಾಶವಾಯಿತು. ನನ್ನ ಪೂರ್ವ ಜ್ಞಾನವು ನಿನ್ನ ಅನುಗ್ರಹದಿಂದ ಪ್ರಾಪ್ತವಾಯಿತು. ಜ್ಞಾನಸಂಛಿನ್ನ ಸಂಶಯವುಳ್ಳವನಾಗಿರುತ್ತೇನೆ. ನಿನ್ನ ಅಪ್ಪಣೆಯನ್ನು ನೆರವೇರಿಸುತ್ತೇನೆ.

ಕರ್ಮ ಸಂನ್ಯಾಸಪೂರ್ವಕವಾದ ಆತ್ಮೈಕ್ಯ ಜ್ಞಾನವನ್ನು ಹೊಂದಿರುತ್ತೇನೆ. ನಾನು ಯುದ್ಧ ಮಾಡುತ್ತೇನೆ ಎಂದು ಈ ಶ್ಲೋಕಾರ್ಥವನ್ನು ಮಾಡಿದರೆ ಅತ್ಯಂತ ವಿರುದ್ಧವಾಗುವುದು. ಮತ್ತು ನಿನ್ನ ಆಜ್ಞೆಯಂತೆ ನಡೆಯುತ್ತೇನೆಂದು ಶ್ರೀ ಕೃಷ್ಣನಿಗೆ ಹೇಳಿ ಅರ್ಜುನನು ಕರ್ಮ ಮಾರ್ಗದಲ್ಲೇ ಪ್ರವೃತ್ತನಾಗಿರುವುದರಿಂದ, ಕರ್ಮ ಮಾರ್ಗವೂ ಜ್ಞಾನ ಮಾರ್ಗವೂ ಪರಸ್ಪರ ವಿರುದ್ಧವಾದ ಒಬ್ಬ ಅಧಿಕಾರಿಯಲ್ಲಿ ಅಸಂಭಾವಿತವಾದ ವಸ್ತುದ್ವಯಗಳಲ್ಲವೆಂದು ಸಿದ್ಧವಾಗುತ್ತದೆ. ಅದ್ವೈತಮತದ ರೀತ್ಯಾ, ಕರ್ಮ ಮಾರ್ಗವೂ ಜ್ಞಾನ ಮಾಗವೂ ಒಬ್ಬನಲ್ಲಿ ಅಸಂಭಾವಿತವು. ಈ ವಿಷಯವನ್ನು ಶಂಕರಾಚಾರ್ಯರೇ ಒಪ್ಪಿರುತ್ತಾರೆ :—

"ಜ್ಞಾನಕರ್ಮಣೋಃ ಕರ್ತೃತ್ವಾಕರ್ತೃತ್ವೈಕತ್ವಾನೇಕತ್ವ ಬುದ್ಧ್ಯಾಶ್ರಯಯೋರೇಕಪುರುಷಾಶ್ರಯತ್ವಾಸಂಭವಂ ಪಶ್ಯತಾ (ದ್ವೇನಿಷ್ಠೇ ವಿಭಕ್ತೇ ಭಗವತ್ವೈವೋಕ್ತೇ)" ಶಾಂಕರ ಗೀತಾಭಾಷ್ಯ. ಅಧ್ಯಾಯ 2.

**ಅರ್ಥ :—** ಕರ್ತೃತ್ವ ಬುದ್ಧಿಯನ್ನೂ ಅನೇಕತ್ವ ಬುದ್ಧಿಯನ್ನೂ ಆಶ್ರಯಿಸಿದ ಕರ್ಮ ಮಾರ್ಗಕ್ಕೂ, ಅಕರ್ತೃತ್ವ ಬುದ್ಧಿಯನ್ನೂ ಏಕತ್ವ ಬುದ್ಧಿಯನ್ನೂ ಆಶ್ರಯಿಸಿದ ಜ್ಞಾನ ಮಾರ್ಗಕ್ಕೂ ಒಬ್ಬ ಪುರುಷನಲ್ಲಿ ಅವಸ್ಥಾನವು ಅಸಂಭಾವಿತವೆಂದು ತಿಳಿದಂಥ ಶ್ರೀ ಕೃಷ್ಣನು ಸರ್ವ ಕರ್ಮ ಸಂನ್ಯಾಸಪೂರ್ವಕವಾದ ಆತ್ಮೈಕ್ಯ ಜ್ಞಾನವೆಂಬ ಸಾಂಖ್ಯ ತತ್ವವನ್ನೂ ಕರ್ಮಾನುಷ್ಠಾನ ರೂಪವಾದ ಯೋಗವನ್ನೂ ವಿಭಾಗ ಮಾಡಿ ಬೇರೆ ಬೇರೆಯೇ ಉಪದೇಶ ಮಾಡಿರುತ್ತಾನೆ.

ಈ ರೀತಿಯಾಗಿ ಶಂಕರಾಚಾರ್ಯರ ಅಭಿಪ್ರಾಯಾನುಸಾರವಾಗಿ ಅರ್ಜುನನು ಜ್ಞಾನಿಯಾದರೆ ಯುದ್ಧ ಮಾಡಕೂಡದು. ಕರ್ಮಿಯಾದರೆ ಶ್ರೀ ಕೃಷ್ಣನ ಸಾಂಖ್ಯೋಪದೇಶವು, ಆತನಿಗೆ ಜ್ಞಾನೋತ್ಪತ್ತಿಗಾಗಿ ಮಾಡಿದ ಉಪದೇಶ, ತೋರಿಸಿದ ವಿಶ್ವರೂಪದರ್ಶನಾದಿಗಳೂ ಅಕಾಂಡತಾಂಡವವಾಗುವುವು. ಅಲ್ಲದೆ ಅದ್ವೈತಾತ್ಮಾವಗಾಹಿಯಾದ ಜ್ಞಾನವೇ ಸಾತ್ವಿಕವೆಂದು ಶಂಕರಾಚಾರ್ಯರು ಹದಿನೆಂಟನೆಯ ಅಧ್ಯಾಯದಲ್ಲಿ ಹೇಳಿರುವುದರಿಂದ ಕರ್ಮಿಯಾದ ಅರ್ಜುನನು ಅವರರೀತ್ಯಾ ಸಾತ್ವಿಕ ಜ್ಞಾನರಹಿತನಾದ ಮಂಕನಾಗಬೇಕು. *

---

* ಶ್ರೀಪಾದಂಗಳವರು ಈ ವಿಚಾರಾವಸರದಲ್ಲಿ ಬಹು ಗೂಢವಾಗಿದ್ದ ಅದ್ವೈತತತ್ವದ ದೋಷ

6. " ಪರಂತು ಏಷಾತೇಽಭಿಹಿತಾ ಸಾಂಖ್ಯೇ " ಎಂಬ ದ್ವಿತೀಯಾಧ್ಯಾಯದ ಮೂವತ್ತೊಂಭತ್ತನೆಯ ಶ್ಲೋಕದ ಪೂರ್ವ ಭಾಗದ ಇಪ್ಪತ್ತೇಳು ಶ್ಲೋಕಗಳೂ ಸಾಂಖ್ಯವನ್ನು ಹೇಳುವುವೆಂದೂ, " ಬುದ್ಧಿರ್ಯೋಗೇತ್ವಿಮಾಂಶೃಣು " ಎಂಬ ಅದೇ ಶ್ಲೋಕವನ್ನು ಆರಂಭಿಸಿಕೊಂಡು ಮುಂದೆ ಹೇಳುವದೆಲ್ಲಾ ಯೋಗಪರವೆಂದೂ ಶ್ರೀ ಕೃಷ್ಣನು ಉಪದೇಶ ಮಾಡಿರುತ್ತಾನೆ. ಇವುಗಳಲ್ಲಿ " ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ " (2. 31.) ಎಂಬ ಶ್ಲೋಕದ ಮೊದಲುಗೊಂಡು,

**(2) ಸುಖದುಃಖೇ ಸಮೇಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥**
—(2. 28.)

---

ವನ್ನು ಸಜ್ಜನರ ಜ್ಞಾನನೇತ್ರಕ್ಕೆ ವ್ಯಕ್ತಪಡಿಸಿರುವರು. ಇದೇ ಶಂಕರ ಮತವು. ಕರ್ಮ ಮಾಡುವವನು ವೇದಾಂತ ಗ್ರಂಥವನ್ನು ಮುಟ್ಟಕೂಡದು. ವೇದಾಂತ ವ್ಯಾಸಂಗಕ್ಕೆ **ಆರಂಭಿಸುವವನು** ಕರ್ಮವನ್ನು ಪರಿತ್ಯಾಗ ಮಾಡಬೇಕು. ಒಬ್ಬ ಪುರುಷನಲ್ಲಿ ಕರ್ಮಾನುಷ್ಠಾನವೂ ವೇದಾಂತ ವಿಚಾರವೂ ( ಅಥವಾ ಜ್ಞಾನವು ) ಪರಸ್ಪರ ವಿರೋಧಿಗಳಾದುದರಿಂದ ಇವೆರಡೂ ಇರಲಾರವು ಎಂದು ಸ್ಪಷ್ಟವಾಗಿ ಶಂಕರಾಚಾರ್ಯರೇ ಬರೆದಿರುತ್ತಾರೆ. **"ಅನುಷ್ಠೇಯವಿರೋಧಿತ್ವಾದವಿಕ್ರಿಯಾತ್ಮಜ್ಞಾನಸ್ಯ"** ಎಂದರೆ ಆತ್ಮನು ನಿಷ್ಕ್ರಿಯನು ಎಂಬ ವೇದಾಂತ ಜ್ಞಾನವು ಕರ್ಮಾನುಷ್ಠಾನಕ್ಕೆ ವಿರೋಧಿಯು ಎಂದು ಆನಂದಗಿರಿ ಟೀಕಾಕಾರರು ಬರೆದಿರುತ್ತಾರೆ. ಪ್ರೊಫೆಸರ್ ದಾಸಗುಪ್ತರೂ ಸಹ ಶಂಕರಾಚಾರ್ಯರ ಈ ಸಾಹಸವನ್ನು ಹೀಗೆಯೇ ಉಪಪಾದಿಸಿರುತ್ತಾರೆ :—

Throughout his commentary on the " Bhagavadgita " Shankara tried to demonstrate that those who should follow the injuctions of the Veda and perform Vedic deeds, such as sacrifices, etc., belonged to a lower order. So long as they remained in that order they had no right to follow the higher teachings of the Upanishads. They were but karmins ( performers of scriptural duties ). When they……wanted to know the truth alone, they entered the jnanamarga ( the way of wisdom ) and had no duties to perform……. Thus, the path of duties ( karma ) and the path of wisdom ( jnana ) were intended far different classes of persons or adhikarins. There could be no joint performance of the Vedic duties and the seeking of the highest truth as taught in the Upanishads.

—Surendranath Das Gupta, M.A., Ph.D.

ಎಂಬ ಶ್ಲೋಕಪರ್ಯಂತವಾದ ಎಂಟು ಶ್ಲೋಕಗಳಲ್ಲಿಯೂ ವಿಹಿತ ಕರ್ಮಾನುಷ್ಠಾನವನ್ನೇ ಬೋಧಿಸಿ, ಅನಂತರ "ಏಷಾ ತೇಽಭಿಹಿತಾಸಾಂಖ್ಯೇ" ಎಂದು ಇದೆಲ್ಲವನ್ನೂ ಸಾಂಖ್ಯದಲ್ಲಿ ಅಂತರ್ಭಾವವನ್ನು ಹೊಂದಿಸಿರುವನು. ಅದ್ವೈತ ಮತದರೀತ್ಯಾ ಸಾಂಖ್ಯಬುದ್ಧಿ ವಿರೋಧಿಯಾದ ಕರ್ಮ ವಿವಕ್ಷೆಯಿಂದ ಪ್ರವೃತ್ತವಾದ ಈ ಶ್ಲೋಕಗಳನ್ನು ಹೇಳಿ ಶ್ರೀ ಕೃಷ್ಣನು ಏಷಾತೇಽಭಿಹಿತಾಸಾಂಖ್ಯೇ ಎಂದು ಹೇಳಿದುದು ಅತ್ಯಂತ ಅಸಂಗತವೇ ಆಗುವುದು. ಸಾಂಖ್ಯ ಬುದ್ಧಿಯೂ ಕರ್ಮಬುದ್ಧಿಯೂ ಒಬ್ಬನಲ್ಲಿಯೇ ಇರಬಹುದಾದರೆ ಕಥಂಚಿತ್ ಈ ವಾಕ್ಯಗಳನ್ನು ಹೇಳಬಹುದಾಗಿತ್ತು. ಆದರೆ ಶಂಕರಾಚಾರ್ಯರು ಸಾಂಖ್ಯ ಬುದ್ಧಿಯೂ ಯೋಗ ಬುದ್ಧಿಯೂ ಒಬ್ಬನಲ್ಲಿ ಇರಲಾರದೆಂದು ಸ್ಪಷ್ಟವಾಗಿ ಬರೆದಿರುತ್ತಾರೆ. ತತ್ತ್ವವನ್ನು ನಿರೂಪಣೆ ಮಾಡಿ ಸ್ವಧರ್ಮವಾದ ಯುದ್ಧವನ್ನು ಲಾಭಾಲಾಭಗಳಲ್ಲಿ ದೃಷ್ಟಿಯಿಡದೆ ನಡೆಯಿಸಬೇಕೆಂದು ಬೋಧಿಸಿ "ಏಷಾತೇಽಭಿಹಿತಾಸಾಂಖ್ಯೇ" ಎಂದರೆ ಇದು ಸಾಂಖ್ಯವಿಷಯದಲ್ಲಿ ನಿರೂಪಿಸಿದ ತತ್ತ್ವವು ಎಂದು ಹೇಳಿರುವುದರಿಂದ ಸಾಂಖ್ಯವು ಕರ್ಮಸಂನ್ಯಾಸಪೂರ್ವಕವಾದ ಆತ್ಮೈಕ್ಯ ಜ್ಞಾನವೆಂದು ಸಿದ್ಧಿಸುವುದಿಲ್ಲ. *

---

**ಅರ್ಥವು :—** ಅವರ ಸಮಗ್ರ ಗೀತಾಭಾಷ್ಯದಲ್ಲಿ ಶಂಕರಾಚಾರ್ಯರು ವೇದೋಕ್ತ ವಿಧಿಗಳನ್ನು ಆಚರಿಸುವವರೂ ಮತ್ತು ಯಜ್ಞಾದಿ ವೈದಿಕ ಕರ್ಮಗಳನ್ನು ಅನುಷ್ಠಾನ ಮಾಡುವವರೂ ಅಧಮ ತರಗತಿಗೆ ಸೇರಿದವರೆಂದೇ ತೋರಿಸುವುದಕ್ಕೆ ಪ್ರಯತ್ನಿಸಿದರು. ಅಂಥ ಕರ್ಮಿಗಳು ಈ ರೀತಿಯಾದ ಯಜ್ಞಾದ್ಯನುಷ್ಠಾನದಲ್ಲಿರುವವರೆಗೂ, ಉಪನಿಷತ್ತಿನ ಉಪದೇಶ ಸ್ವೀಕಾರದಲ್ಲಿ (ಬ್ರಹ್ಮವಿದ್ಯಾಭ್ಯಾಸದಲ್ಲಿ) ಅಧಿಕಾರವಿಲ್ಲದವರು; ಅವರು ಕೇವಲ ಕರ್ಮಿಗಳೇ. ಅವರೇನಾದರೂ ತತ್ತ್ವವನ್ನು ತಿಳಿಯಬೇಕಾದರೆ ಜ್ಞಾನ ಮಾರ್ಗವನ್ನು ಪ್ರವೇಶ ಮಾಡಬೇಕು ಮತ್ತು ಯಾವ ಕರ್ಮವನ್ನೂ ಮಾಡಬೇಕಾದುದಿಲ್ಲ. ಈ ರೀತಿಯಾಗಿ ಕರ್ಮಮಾರ್ಗವೂ, ಜ್ಞಾನಮಾರ್ಗವೂ ಬೇರೆ ಬೇರೆ ಯೋಗ್ಯತೆಯುಳ್ಳ ಅಧಿಕಾರಿಗಳಿಗೆ ನಿಯತವಾದುವು. ವೇದೋಕ್ತ ಕರ್ಮಾನುಷ್ಠಾನವೂ ಉಪನಿಷತ್ತುಗಳಲ್ಲಿರುವ ತತ್ತ್ವ ವಿಚಾರವೂ ಜೊತೆಯಲ್ಲಿ ಸಂಭವಿಸಲಾರವು. (ಜ್ಞಾನ ಮಾರ್ಗದವರು ಕರ್ಮ ಮಾಡಕೂಡದು. ಕರ್ಮ ಮಾರ್ಗದವರು ಜ್ಞಾನಾರ್ಥವಾಗಿ ವಿಚಾರ ಮಾಡಕೂಡದು. ಯಾವ ರೀತಿಯಿಂದಲೂ ಜ್ಞಾನ ಕರ್ಮಗಳಿಗೆ ಏಕಕಾಲದಲ್ಲಿ, ಏಕಪುರುಷನಲ್ಲಿ ಸಹಾವಸ್ಥಿತಿಯು ಇಲ್ಲ ಎಂದು ಶಂಕರಾಚಾರ್ಯರು ಪ್ರತಿಪಾದಿಸಿದರು ಎಂದು ಭಾವವು.)

* ಶಂಕರಾಚಾರ್ಯರು "ಶೋಕಮೋಹಾಪನಯನಾಯ ಲೌಕಿಕೋನ್ಯಾಯಃ ಸ್ವಧರ್ಮಮಪಿ ಚಾವೇಕ್ಷ್ಯೇತ್ಯಾದ್ಯೈಃ ಶ್ಲೋಕೈರುಕ್ತೋ ನತು ತಾತ್ಪರ್ಯೇಣ" ಎಂದು ಧೈರ್ಯದಿಂದ ಬರೆದಿರುತ್ತಾರೆ

**ಅರ್ಥ :—** ಅರ್ಜುನನ ದುಃಖಶಮನಾರ್ಥವಾಗಿ "ಸ್ವಧರ್ಮಮಪಿಚಾವೇಕ್ಷ್ಯ" ಮುಂತಾದ ಶ್ಲೋಕಗಳಲ್ಲಿ ಲೌಕಿಕ ನ್ಯಾಯವನ್ನು ಅವಲಂಬಿಸಿ ಶ್ರೀ ಕೃಷ್ಣನು ಮಾತಾಡಿದನೇ ಹೊರತು ತಾತ್ಪರ್ಯಪೂರ್ವಕವಾಗಿ ಸ್ವಧರ್ಮವನ್ನು ಆಚರಿಸು ಎಂದು ಹೇಳಲಿಲ್ಲ.

7. ಸಮುಚ್ಚಯಾರ್ಥಕವಾದ ಅಪಿ ಶಬ್ದದಿಂದ ಸಹಿತವಾದ,

**(3) ಸ್ವಧರ್ಮಮಪಿಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।** —(2. 31.)

ಎಂಬ ಶ್ಲೋಕವೇ ಶ್ರೀ ಕೃಷ್ಣನು ಉಪದೇಶ ಮಾಡಿರುವ ಸಾಂಖ್ಯ ತತ್ವವು ಕರ್ಮಾನುಷ್ಠಾನವನ್ನೇ ಬೋಧಿಸುವುದೆಂದು ನಿಶ್ಚಯಿಸುವುದರಲ್ಲಿ ಸಹಾಯಕವಾಗಿರುವುದು. ಹೇಗೆಂದರೆ, ಎಲೈ ಅರ್ಜುನನೇ! ಸ್ವಧರ್ಮವೆಂಬ ದೃಷ್ಟಿಯಿಂದಲೂ ಸಹ ನೀನು ಯುದ್ಧ ಮಾಡುವುದರಲ್ಲಿ ಭಯಪಡಕೂಡದು ಎಂದು ಈ ಶ್ಲೋಕಾರ್ಥವು. ಏವಂಚ ಇದುವರೆವಿಗೂ ನಾನು ಮಾಡಿರುವ ಸಾಂಖ್ಯೋಪದೇಶದಿಂದಲೂ ನೀನು ಯುದ್ಧದಿಂದ ಹಿಂತೆಗೆಯುವುದಕ್ಕೆ ಕಾರಣವಿಲ್ಲ; ಮತ್ತು ಯುದ್ಧವು ಸ್ವಧರ್ಮವೆಂಬ ಕರ್ಮಯೋಗ ಬುದ್ಧಿಯಿಂದಲೂ ಸಹ ನೀನು ಯುದ್ಧದಿಂದ ಹಿಂತೆಗೆಯುವುದಕ್ಕೆ ಕಾರಣವಿಲ್ಲ. ಎಷ್ಟು ಪ್ರಕಾರದಿಂದ ವಿಮರ್ಶೆ ಮಾಡಿ

---

ಪುನಃ "**ಯುದ್ಧಸ್ವ ಭರತರ್ಷಭ**" ಎಂಬ ಶ್ಲೋಕ ವ್ಯಾಖ್ಯಾನಾವಸರದಲ್ಲಿ ಕೃಷ್ಣನಿಗೆ ಯುದ್ಧ ಮಾಡು ಎಂದು ವಿಧಿಸುವುದರಲ್ಲಿ ತಾತ್ಪರ್ಯವಿಲ್ಲವೆಂದು ನಿಷ್ಕಾರಣವಾಗಿ ಬರೆದಿರುತ್ತಾರೆ:— "**ಯುಧ್ಯಸ್ವೇತ್ಯನುವಾದ ಮಾತ್ರಂ ನ ವಿಧಿಃ**" ಎಂದರೆ ಯುದ್ಧ ಮಾಡು ಎಂಬ ವಾಕ್ಯವು ಲೌಕಿಕ ಅನುವಾದವೇ ಹೊರತು ವಿಧಿಯಲ್ಲ. ಇದರ ದೋಷವನ್ನು ಗೀತೆಯನ್ನು ಸಾಮಾನ್ಯವಾಗಿ ಓದುವವರೂ ಸಹ ತಿಳಿಯುವರು. ಮತ್ತು "**ತತೋ ಯುದ್ಧಾಯ ಯುಜ್ಯಸ್ವ**" ಎಂಬ ಶ್ಲೋಕ ಭಾಗದ ವ್ಯಾಖ್ಯಾನ ಕಾಲದಲ್ಲಿ ಇದೆಲ್ಲಾ ಪ್ರಾಸಂಗಿಕವಾಗಿ ಎಂದರೆ, ಮಾತು ಬಂತಲ್ಲಾ ಎಂದು ಆಡಿದ್ದೇ ಹೊರತು ಕೃಷ್ಣನಿಗೆ ಯುದ್ಧ ಕರ್ಮ ವಿಧಾನದಲ್ಲಿ ತಾತ್ಪರ್ಯವಿಲ್ಲವೆಂದು ಹೇಳಿರುತ್ತಾರೆ. ಕರ್ಮ ಮಾರ್ಗದ ಉಪದೇಶಕ್ಕೆ ಗೀತೆಯಲ್ಲಿ ಸಂಗತಿಯೇ ಇಲ್ಲವೆಂದು ಅವರು ಸ್ವತಃ ಒಪ್ಪಿಕೊಂಡಂತಾಯಿತು. ಇದು ಅವರ ಮಾತು :—

**ತತೋ ಯುದ್ಧಾಯ ಯುಜ್ಯಸ್ವ .... .... .... .... ।**
**.... .... .... ಇತ್ಯೇಷ ಉಪದೇಶಃ ಪ್ರಾಸಂಗಿಕಃ ॥**

**ಅರ್ಥ**— ಆದ್ದರಿಂದ ಯುದ್ಧ ಮಾಡು ಎಂಬ ಶ್ರೀ ಕೃಷ್ಣನ ಉಪದೇಶವು ಪ್ರಾಸಂಗಿಕವು. ( ತತ್ವೋಪದೇಶಕ್ಕೆ ಸಂಬಂಧವಿಲ್ಲದ ಸುಮ್ಮನೆ ಹೇಳಿದ ಮಾತು. )

ಗೀತೆಯು ಮುಮುಕ್ಷುವಿನಿಂದ ಸ್ವಧರ್ಮವು ಸರ್ವತ್ರ ಅತ್ಯನುಷ್ಠೇಯವಾದ ಕರ್ತವ್ಯವೆಂದು ಬೋಧಿಸುತ್ತಿರುವುದು. ಶಂಕರಾಚಾರ್ಯರ ಅರ್ಥವು ಸ್ವಕಪೋಲಕಲ್ಪಿತವಾದ ದುರರ್ಥವು, ಮ್ಯಾಕ್ಡೊನೆಲ್ ಸಾಹೇಬರೂ ಹಾಗೆ ಹೇಳುತ್ತಾರೆ :—

"From the Gita he ( Sankara ) tries to adduce proofs for his own doctrine especially its exoteric part relating to the performance of social duties."

—A. A. Macdonell, M.A.

ದರೂ ಯುದ್ಧವು ನಿನ್ನಿಂದ ಅವಶ್ಯ ಕರ್ತವ್ಯವಾಗಿರುತ್ತದೆ ಎಂದು ಫಲಿತಾರ್ಥವು. ಇದರಿಂದ ಸಾಂಖ್ಯ ಬುದ್ಧಿಯೂ ಯೋಗಬುದ್ಧಿಯೂ ಎರಡೂ ವಿರೋಧವಿಲ್ಲದೆ ಒಬ್ಬನಲ್ಲಿಯೇ ಇದ್ದು ಉತ್ತಮವಾದ ಅನುಷ್ಠಾನಗಳಿಗೆ ಕಾರಣವಾಗಬಹುದೆಂದು ಸ್ಪಷ್ಟವಾಗಿ ನಿಶ್ಚಿತವಾಗುತ್ತದೆ. ಈ ಸಾಂಖ್ಯೋಪದೇಶವನ್ನು ಉಪಸಂಹಾರ ಮಾಡುವ ಅಂತ್ಯ ಶ್ಲೋಕವೇ ಈ ಅಭಿಪ್ರಾಯಕ್ಕೆ ಉಪೋದ್ಬಲಕವಾಗಿರುವುದು :—

(4) **ಸುಖದುಃಖೇ ಸಮೇಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋಯುದ್ಧಾಯಯುಜ್ಯಸ್ವ** .... .... .... ॥—(2. 38.)

ನನ್ನಿಂದ ಉಕ್ತವಾದ ಸಾಂಖ್ಯಾನುಸಂಧಾನದಿಂದ ಸುಖ ದುಃಖ, ಲಾಭಾಲಾಭ, ಜಯಾಪಜಯಗಳನ್ನು ಸಮವಾಗಿ ಎಣಿಸಿ, (ಎಂದರೆ ಲಾಭಾದಿಗಳಿಂದ ಹಿಗ್ಗದೆ, ನಷ್ಟಾದಿಗಳಿಂದ ಕುಗ್ಗದೇ), ಯುದ್ಧವನ್ನು ಮಾಡು.

ಈ ವಾಕ್ಯದಲ್ಲಿ ಸಾಂಖ್ಯವನ್ನು ಉತ್ತಮ ಕರ್ಮಾನುಷ್ಠಾನದ ಪರಿಪೂರ್ತಿಗೆ ಅವಶ್ಯವಾದ ಒಂದು ಅಂತರ ಅಂಗವನ್ನಾಗಿ ಶ್ರೀಕೃಷ್ಣನು ನಿರೂಪಿಸಿರುತ್ತಾನೆ. ಆದುದರಿಂದ, ಈ ಸಾಂಖ್ಯವು ಸರ್ವಕರ್ಮಸಂನ್ಯಾಸಪೂರ್ವಕವಾದ ಆತ್ಮೈಕ್ಯಜ್ಞಾನವಾದರೆ, ಸಾಂಖ್ಯಾನುಸಂಧಾನಪೂರ್ವಕವಾದ ಕರ್ಮಯೋಗವು ವಂಧ್ಯಾಪುತ್ರನಂತೆ ಅಪ್ರಸಿದ್ಧ ಪದಾರ್ಥವಾಗಿ ಹೋಗುವುದು. ಸರ್ವಕರ್ಮಸಂನ್ಯಾಸಪೂರ್ವಕವಾದ ಆತ್ಮೈಕ್ಯ ಜ್ಞಾನದಿಂದ ಸಂಪನ್ನನಾಗಿ ನಿವೃತ್ತ ದ್ವಂದ್ವನಾಗಿ ಯುದ್ಧವನ್ನು ಮಾಡು ಎಂಬ ಅದ್ವೈತೋಪದೇಶವು ವ್ಯಾಹತಿಗೆ ಪ್ರಸಿದ್ಧ ದೃಷ್ಟಾಂತವಾಗಿ ಪರಿಣಮಿಸುವುದು.

---

**ಅರ್ಥ :—** ಶಂಕರಾಚಾರ್ಯರು ಗೀತೆಯಿಂದ ತಮ್ಮ ಸ್ವಂತ ತತ್ವಕ್ಕೆ ಅದರಲ್ಲಿಯೂ ಮುಖ್ಯವಾಗಿ ಕರ್ಮಾನುಷ್ಠಾನ ವಿಷಯದಲ್ಲಿ ತಮಗೆ ಅಭಿಪ್ರೇತವಾದ ವಾದಕ್ಕೆ (ಕರ್ಮಸಂನ್ಯಾಸ ವಾದಕ್ಕೆ) ಗೀತೆಯಿಂದ ರುಜುವಾತುಗಳನ್ನು ಕಂಡು ಹಿಡಿಯಲು ಪ್ರಯತ್ನಿಸುತ್ತಾರೆ.

ಇದು ಬಿರುದಾಂಕಿತರಾದ (ಪದಕವನ್ನೂ ಹೊಂದಿದ) ಒಬ್ಬ ದೆನ್ಮಾರ್ಕ ಪಂಡಿತರ ಮಾತು :—

"The key-note of the religion of the Gita is not non-activity but the right activity according to the injunctions of the scriptures ( Dhaıma ) having for its opposite Adharma."

—Paul Yevtic; D. Litt., Ph.D.

**ಅರ್ಥ :—** ಗೀತೆಯ ಪರಮ ತಾತ್ಪರ್ಯಕ್ಕೆ ವಿಷಯವಾದ ಮತವು ಕರ್ಮಾಕರಣವಲ್ಲ. ಮತ್ತೇನೆಂದರೆ ಅಧರ್ಮವನ್ನು ವಿರುದ್ಧವಾಗಿಟ್ಟುಕೊಂಡು ಶಾಸ್ತ್ರೋಕ್ತವಾದ ರೀತಿಯಲ್ಲಿ ಸರಿಯಾಗಿ ಧರ್ಮವನ್ನು ಆಚರಿಸಬೇಕೆಂಬುದೇ (ಗೀತೆಗೆ ಸಮ್ಮತವಾದ ಮತವು).

**ಪ್ರಶ್ನೆ**— ಸ್ವಾಮೀ ! ದ್ವೈತಮತದಲ್ಲಿ ನಿವೃತ್ತ ದ್ವಂದ್ವನಾಗಿ ಯುದ್ಧವನ್ನು ಮಾಡು ಎನ್ನುವುದು ವಿರುದ್ಧವಲ್ಲವೋ ?

**ಉತ್ತರ— ಶ್ರೀ ಶ್ರೀಗಳವರು**— ಯಾವ ವಿರೋಧವೂ ಇಲ್ಲ. ನಿವೃತ್ತ ದ್ವಂದ್ವನಾದರೆ ಸ್ವಾರ್ಥವಾದ ಲೌಕಿಕ ಅಪೇಕ್ಷೆಗಳು ನಾಶವಾಗಿ ಕೇವಲ ಭಗವತ್ಪ್ರೀತ್ಯರ್ಥವಾದ ನಿಷ್ಕಾಮಕರ್ಮಾನುಷ್ಠಾನವು ಸಂಭವಿಸುವುದು. ನಿರ್ದ್ವಂದ್ವನಲ್ಲದ ಪುರುಷನಿಗೆ ಮೋಕ್ಷಹೇತುಭೂತವಾದ ಸ್ವಧರ್ಮಾಚರಣೆಯೇ ಅಶಕ್ಯವಾಗುವುದು. ಆದುದರಿಂದ ಅದ್ವೈತಮತದಲ್ಲಿ, ಏಕಪುರುಷಾಶ್ರಿತವಾಗಿ ಉಭಯವೂ ಇರುವುದು ಅಸಂಭವವೆಂದು ಒಪ್ಪಿ ಸಾಂಖ್ಯವನ್ನೂ, ಕರ್ಮವನ್ನೂ ಒಬ್ಬ ಅರ್ಜುನನಿಗೆ ಸರ್ವಜ್ಞನಾದ ಶ್ರೀ ಕೃಷ್ಣನು ಉಪದೇಶ ಮಾಡಿದನೆಂದು ಹೇಳುವುದು; ಅರ್ಜುನನು ಸಾಂಖ್ಯೋಪದೇಶಕ್ಕೆ ಅರ್ಹನಲ್ಲವೆಂದು ಹೇಳುವುದು; ಅರ್ಜುನನು ಶ್ರುತವಾದ ಸಾಂಖ್ಯವನ್ನು ಅನುಷ್ಠಾನ ಮಾಡದ ಧರ್ಮ ಹೇಡಿಯು ಎಂದು ಹೇಳುವುದು; ಅರ್ಜುನನು ಯೋಗಬುದ್ಧಿಮಾತ್ರವನ್ನು ಆಶ್ರಯಿಸಿದ ಕರ್ಮಿಯು ಎಂದು ಹೇಳುವುದು; ಪರಬ್ರಹ್ಮನಾದ ಶ್ರೀ ಕೃಷ್ಣನು ಪ್ರಣತನಾದ ಶಿಷ್ಯನಿಗೆ ಉತ್ತಮವಾದ ಸಾಂಖ್ಯವನ್ನು ಉಪದೇಶ ಮಾಡಿ, ನಂತರ ಅದೇ ಕ್ಷಣದಲ್ಲಿ ಅದರಂತೆ ಅನುಷ್ಠಾನ ಮಾಡದೆ ಅಜ್ಞ ದೃಷ್ಟಿಯಿಂದ ಪ್ರಾಪ್ತವಾಗುವ ಕರ್ಮವನ್ನು ಮಾಡು, ಎಂದು ನೀಚವೆಂದು ಅಂಗೀಕೃತವಾದ ಆಚರಣೆಯನ್ನು ವಿಧಿಸುವನೆಂದು ಹೇಳುವುದು; ಅಥವಾ ಶ್ರೀ ಕೃಷ್ಣನು ಸರ್ವ ಕರ್ಮ ಪರಿತ್ಯಾಗ ಮಾಡೆಂದು ಹೇಳಿ ಉತ್ತರಕ್ಷಣದಲ್ಲಿ ಉನ್ಮತ್ತ ಪ್ರಲಾಪದಂತೆ ಧಾರ್ತರಾಷ್ಟ್ರರ ಸಂಹಾರದಲ್ಲಿ ಅರ್ಜುನನನ್ನು ಪ್ರೇರಿಸುವನೆಂದು ಹೇಳುವುದು; ಸರ್ವಕರ್ಮಸಂನ್ಯಾಸಪೂರ್ವಕವಾದ ಆತ್ಮಜ್ಞಾನದಿಂದ ಸಹಿತನಾಗಿ ಯುದ್ಧ ಮಾಡು ಎಂದು ಶ್ರೀ ಕೃಷ್ಣನು ವಿರುದ್ಧೋಪದೇಶವನ್ನು ಮಾಡಿದನೆಂದು ಅಂಗೀಕರಿಸಬೇಕಾಗುವ ವಾದವನ್ನು ಮಾಡುವುದು; ಇವೇ ಮುಂತಾದ ಅನಂತದೋಷದುಷ್ಟವಾದ ಅದ್ವೈತಭಾಷ್ಯದರೀತ್ಯಾ, ಭಗವದ್ಗೀತೆಯಲ್ಲಿ ಸಾಂಖ್ಯತತ್ತ್ವೋಪದೇಶದ ಉಪಕ್ರಮವೇ ಅಸಮಂಜಸವಾಗುವುದು. ಏಕಪುರುಷನಲ್ಲಿ ಏಕಕಾಲದಲ್ಲಿ ಸಹಾವಸ್ಥಾನವನ್ನು ಹೊಂದಲಾರದ ಬುದ್ಧಿದ್ವಯ ಕಲ್ಪನೆಯು ಸ್ತೇನನ ಬುದ್ಧಿಯಿಂದ ಚೌರ್ಯವು ಧರ್ಮವು ಎಂಬಂತೆ ಅತ್ಯಂತ ಹಾಸ್ಯಾಸ್ಪದವಾದ ಪ್ರಕ್ರಿಯೆಯು.

5. **ಪ್ರಶ್ನೆ**— ಸ್ವಾಮೀ ! ದ್ವೈತ ಮತದಲ್ಲೂ ಸಹ ಸಾಂಖ್ಯ, ಯೋಗ ಎಂಬ ಎರಡು ಪದಾರ್ಥಗಳು ಭಿನ್ನಭಿನ್ನವಾಗಿ ಪ್ರತಿಪಾದಿತವಾಗಿರುವುದಿಲ್ಲವೇ ?

**ಶ್ರೀ ಶ್ರೀಗಳವರು**— ಪ್ರತಿಪಾದಿತವಾಗಿರುವುವು. ನಾವು ಪೂರ್ವದಲ್ಲಿ ನಿರೂಪಿಸಿದಂತೆ ಒಂದು ಮನೆಯಲ್ಲಿ ಏಕೋದರರು ನಾಲ್ಕು ಜನರು ಇರುವಂತೆ ಸಾಂಖ್ಯವು, ಕರ್ಮವು, ಆಶಾರಾಹಿತ್ಯ ರೂಪಸಂನ್ಯಾಸವು, ಮತ್ತು ಕರ್ಮಫಲ ಸಮರ್ಪಣೆಯೆಂಬ ತ್ಯಾಗವು ಇವು ನಾಲ್ಕು ಅಂಶಗಳು ಭಗವತ್ಪ್ರಾಪ್ತಿ ಹೇತುಭೂತವಾದ ಬ್ರಹ್ಮಾಪರೋಕ್ಷ ಜ್ಞಾನಕ್ಕೆ ಒಟ್ಟಿಗೆ ಧ್ಯಾನದ್ವಾರಾ ಸಾಧನವಾಗಿರುತ್ತವೆ.

ಅದನ್ನು ಹೇಳಬೇಕಾಗಿಯೇ ಪ್ರಥಮತಃ ಭಗವಂತನೇ ಪರಮ ನಿತ್ಯನಾದ ಸ್ವತಂತ್ರ ತತ್ವವು; ಜೀವರುಗಳು ಆತನ ಅಧೀನರಾದ ಅಸ್ವತಂತ್ರ ಚೇತನರು; ಅಭಿಮಾನವನ್ನು ಪರಿತ್ಯಾಗ ಮಾಡಿ ಪುಣ್ಯ ಕರ್ಮವನ್ನು ಮಾಡಿದರೆ " ಅಮೃತತ್ವಾಯಕಲ್ಪತೇ " ಜ್ಞಾನದ್ವಾರಾ ಜೀವನು ಮುಕ್ತಿಯನ್ನು ಹೊಂದುತ್ತಾನೆ; ಇತ್ಯಾದಿ ರೀತಿಯಾಗಿ ಶ್ರೀ ಕೃಷ್ಣನು ಜೀವ ಪರಮಾತ್ಮ ಸ್ವರೂಪವನ್ನು ವಿಂಗಡಿಸಿ ಹೇಳಿ, ಅನಂತರ ಅಂಥ ಪರಮಾತ್ಮನಿಗೆ ಪ್ರಿಯವಾದ ಸ್ವಧರ್ಮವನ್ನು ನೀನು ಪರಿತ್ಯಾಗ ಮಾಡಬಾರದು ಎಂದು ಸಹೇತುಕವಾಗಿ ನಿರೂಪಿಸಿ, ಸಾಂಖ್ಯೋಪದೇಶವನ್ನು ಪರಿಸಮಾಪ್ತಿ ಮಾಡಿ, ಸಾಂಖ್ಯಸಹಿತವಾಗಿ ಮಾಡಲ್ಪಡಬೇಕಾದ ಕರ್ಮವನ್ನೇ ವಿಸ್ತಾರವಾಗಿ ತೃತೀಯ ಚತುರ್ಥ ಪಂಚಮಾಧ್ಯಾಯಗಳಲ್ಲಿ ನಿರೂಪಿಸಿರುತ್ತಾನೆ. ಮತ್ತು ಇಂಥ ಸಾಂಖ್ಯ ಮತ್ತು ಕರ್ಮಾನುಷ್ಠಾನಗಳಿಂದ ಪ್ರಾಪ್ತವಾಗುವ ಧ್ಯಾನಯೋಗರೂಪವಾದ ಪರಿ ಪಾಕಾವಸ್ಥೆಯನ್ನು ಷಷ್ಠಾಧ್ಯಾಯದಲ್ಲಿ ನಿರೂಪಿಸಿರುತ್ತಾನೆ. ಜ್ಞಾನಿಯೂ ಸಹ ವಿಶೇಷ ಪ್ರೀತಿಯಿಂದ ವಿಶೇಷ ಆರಾಧನೆಯಲ್ಲೂ, ಆತ್ಮಧ್ಯಾನ, ಪ್ರಜಾ ಶಿಕ್ಷಣರೂಪ ವಾದ ಬಲವತ್ತರ ಕರ್ಮಯೋಗದಲ್ಲೂ ಸಹ ಆಸಕ್ತನಾಗುವನೆಂದು ಶ್ರೀ ಕೃಷ್ಣನು ಹೇಳಿರುವನೇ ಹೊರತು ಅತ್ಯಂತ ಅಸಂಭಾವಿತವಾದ ಸರ್ವ ಕರ್ಮಸಂನ್ಯಾಸವನ್ನು ಎಲ್ಲಿಯೂ ಹೇಳಿರುವುದಿಲ್ಲ. ಆತ್ಮೈಕ್ಯವು ಸಾಂಖ್ಯ ತತ್ವವಲ್ಲ ಮತ್ತು ವಿಷ್ಣು ಸರ್ವೋತ್ತಮತ್ವವೇ ಮತ್ತು ಜೀವಬ್ರಹ್ಮರ ಭೇದವೇ ಶ್ರೀ ಕೃಷ್ಣನು ಮಾಡಿರುವ ಸಾಂಖ್ಯೋಪದೇಶವೆಂದು ನಾವು ತೋರಿಸಿಯೇ ಇರುತ್ತೇವೆ. ಸರ್ವ ಕರ್ಮ ಸಂನ್ಯಾಸ ವನ್ನು ಶ್ರೀ ಕೃಷ್ಣನು ಎಲ್ಲಿಯೂ ಹೇಳಿಲ್ಲವೆಂಬುದನ್ನು ಕರ್ಮಾನುಷ್ಠಾನ ವಿಚಾರ ಪ್ರಕರಣದಲ್ಲಿ ವಿಶದಪಡಿಸುವೆವು. ಪ್ರಕೃತದಲ್ಲಿ ಇಷ್ಟು ಹೇಳುವೆವು. ಧರ್ಮಸಂಕಟ ದಲ್ಲಿ ಸಿಕ್ಕಿ ಬಿದ್ದಿರುವ ಅರ್ಜುನನಿಗೆ ಧರ್ಮೋಪದೇಶವನ್ನು ಮಾಡಬೇಕಾಗಿ "ಯುದ್ಧವು ಧರ್ಮಪ್ರಾಪಕವೆಂದು ತಿಳಿದು ಶತ್ರು ಮರಣದಿಂದ ಪ್ರಸಕ್ತವಾದ ದುಃಖವನ್ನು ಪ್ರಬಲವಾದ ಪುಣ್ಯ ಲಾಭವನ್ನು ದೃಷ್ಟಿಯಲ್ಲಿರಿಸಿ ಮತ್ತು ದುರಭಿಮಾನ ತ್ಯಾಗ ದಿಂದ ಉತ್ಪನ್ನವಾಗದಂತೆ ಮಾಡಿದರೆ, ಪರಮಾತ್ಮತೋಷಣ ರೂಪವಾದ ಮಹಾ ಕೆಲಸವು ಆಗುವುದರಿಂದ, ಮೋಕ್ಷರೂಪವಾದ ಮಹಾ ಪುರುಷಾರ್ಥವು ಕರಗತ ವಾಗುವುದು; ಯುದ್ಧ ನಿವೃತ್ತಿರೂಪ ಕರ್ಮ ಸಂನ್ಯಾಸದಿಂದ ಪಾಪವು ಪ್ರಾಪ್ತ ವಾಗುವುದು " ಎಂದು ಶ್ರೀ ಕೃಷ್ಣನು ಹೇಳಬೇಕಾಗಿರುವುದರಿಂದ, ಧರ್ಮೋಪ ದೇಶದ ಸಮಯದಲ್ಲಿ ಆಕ್ಷಿಪ್ತವಾಗಿ ಅವಶ್ಯವಾಗಿ ಪರಮಾತ್ಮ, ಜೀವ, ಇವರುಗಳ ಸಂಬಂಧ ಇವುಗಳೇ ಮುಂತಾದ ಸಾಂಖ್ಯೋಪದೇಶವನ್ನು ಶ್ರೀ ಕೃಷ್ಣನು ಸಮಗ್ರ ವಾಗಿ ಮಾಡಬೇಕಾಯಿತು. ಆದುದರಿಂದ ಮಾಡಿರುವನು. ಅದ್ವೈತಮತದ ರೀತ್ಯಾ ಪಾರಮಾರ್ಥಿಕ ತತ್ತ್ವವನ್ನು ಬಚ್ಚಿಟ್ಟು, ವ್ಯಾವಹಾರಿಕ (ಸುಳ್ಳು) ಯೋಗ ಬುದ್ಧಿಯನ್ನು ಆಶ್ರಯಿಸಿ ಯುದ್ಧವು ಅಧರ್ಮಕರವಲ್ಲವೆಂದು ಹೇಳಿದ್ದರೆ ಸಾಕಾ ಗಿತ್ತು. ಕರ್ಮ ಸಂನ್ಯಾಸವನ್ನು ಬೋಧಿಸುವ ಅವರ ಸಾಂಖ್ಯೋಪದೇಶವು ಅವರ ರೀತಿಯಿಂದಲೇ ಅಕಾಂಡತಾಂಡವದಂತೆ ವಿರುದ್ಧ ಪ್ರಕ್ರಿಯೆಯೇ ಆಗಿರುವುದು.

ಇದೂ ಅಲ್ಲದೆ ಸಾಂಖ್ಯವನ್ನು ಅತಿ ಸ್ವಲ್ಪವಾಗಿ ದ್ವಿತೀಯಾಧ್ಯಾಯದ ಈ ಇಪ್ಪತ್ತು ಮೂವತ್ತು ಶ್ಲೋಕಗಳಲ್ಲಿ ಮಾತ್ರವೇ ಶ್ರೀ ಕೃಷ್ಣನು ಹೇಳಿರುವನೆಂದು ಹೇಳುವುದೂ ಅತ್ಯಂತ ಅಬದ್ಧೋಕ್ತಿಯು. ಪಂಚಮಾಧ್ಯಾಯದಲ್ಲಿ, ಷಷ್ಠಾಧ್ಯಾಯದಲ್ಲಿ, ಸಪ್ತಮಾಧ್ಯಾಯವೇ ಮೊದಲುಗೊಂಡು ಯಾವತ್ತೂ ದ್ವಿತೀಯ ಷಟ್ಕದಲ್ಲಿ, ಅದರಲ್ಲಿಯೂ ಮುಖ್ಯವಾಗಿ ದಶಮುಏಕಾದಶಾಧ್ಯಾಯಗಳಲ್ಲಿ, ಸಮಗ್ರ ತ್ರಯೋದಶಾಧ್ಯಾಯ ಪಂಚದಶಾಧ್ಯಾಯಗಳಲ್ಲಿ ಮತ್ತು ಸಪ್ತದಶ ಮತ್ತು ಅಷ್ಟಾದಶ ಅಧ್ಯಾಯದ ಅನೇಕ ಶ್ಲೋಕಗಳಲ್ಲಿ ಪರಮಾತ್ಮ ಸ್ವರೂಪೋಪದೇಶರೂಪವಾದ ಸಾಂಖ್ಯ ತತ್ವವನ್ನು ಶ್ರೀ ಕೃಷ್ಣನು ವಿವರಿಸಿರುತ್ತಾನೆ. ಇತರ ಅಧ್ಯಾಯಗಳಲ್ಲಿಯೂ ಪ್ರಕೃತಿ ಪುರುಷ ವಿವೇಕಕ್ಕೆ ಬೇಕಾಗುವ ಗುಣತ್ರಯ ವಿಭಾಗವೇ ಮುಂತಾದ ಬಹು ಸಾಂಖ್ಯೋಪಯೋಗಿಯಾದ ಅಮೌಲ್ಯ ವಿಷಯಗಳನ್ನೇ ಶ್ರೀ ಕೃಷ್ಣನು ಹೇಳಿರುವನು. ಕರ್ಮಯೋಗವನ್ನು ಶ್ರೀ ಕೃಷ್ಣನು ಮೂರು ನಾಲ್ಕು ಅಧ್ಯಾಯಗಳಲ್ಲಿಯೂ, ಬ್ರಹ್ಮಸ್ವರೂಪವನ್ನು ಅಲ್ಲಲ್ಲಿ ಸಮಗ್ರ ಹದಿನೆಂಟು ಅಧ್ಯಾಯಗಳಲ್ಲಿಯೂ ವಿಶೇಷವಾಗಿಯೇ ಉಪದೇಶ ಮಾಡಿರುತ್ತಾನೆ. ಹೀಗಿರುವುದರಿಂದ ಶ್ರೀಕೃಷ್ಣನ ಸಾಂಖ್ಯೋಪದೇಶವು ಧರ್ಮ ಸಂದೇಹ ಪರಿಹಾರಕ್ಕಾಗಿ ಅವಶ್ಯ ಆಕ್ಷಿಪ್ತವಾದ, ಧರ್ಮಾನುಷ್ಠಾನಕ್ಕೆ ಉಪೋದ್ಬಲಕವಾದ, ವೀರ್ಯವರ್ಧಕವಾದ, ಸರ್ವ ಕರ್ಮ ಸಂನ್ಯಾಸಪೂರ್ವಕವಾದ ಆತ್ಮೈಕ್ಯಕ್ಕಿಂತ ಭಿನ್ನವಾದ, ಮತ್ತು ಅದ್ವೈತ ವಿರೋಧಿಯಾದ ತತ್ತ್ವವೆಂದೂ, ಅತಏವ ಗೀತೆಯಲ್ಲಿ ಪ್ರವೇಶಾರ್ಹವೆಂದೂ ನಿಶ್ಚಿತವಾಗುವುದು. ಐಕ್ಯೋಪದೇಶವೂ, ಸರ್ವ ಕರ್ಮ ಸಂನ್ಯಾಸವಾದವೂ, ಮಂತ್ರಪೂತವಾದ ಯಜ್ಞ ಶಾಲೆಯಲ್ಲಿ ಪಿಶಾಚಿಯ ಪ್ರವೇಶದಂತೆ ಅನುಚಿತವೂ ಅಶಕ್ಯವೂ ಆಗಿರುವುದು.

---

## 10. ಹತ್ತನೆಯ ಅಂಶವು.

### ದ್ವೈತ ಮತಾನುಸಾರಿಯಾದ ಸಾಂಖ್ಯೋಪದೇಶವು ಔಚಿತ್ಯವು.

### ಅರ್ಜುನನ ಶೋಕಕಾರಣಗಳು.

1. **ಪ್ರಶ್ನೆ—** ಸ್ವಾಮೀ! ಅದ್ವೈತ ರೀತಿಯಿಂದ ಪ್ರತಿಪಾದಿತವಾದ ಸಾಂಖ್ಯಕ್ಕೆ ಗೀತೆಯಲ್ಲಿ ಪ್ರವೇಶವು ಅಸಾಧ್ಯವೆಂದೂ ದ್ವೈತ ರೀತಿಯಿಂದ ಉಪಪಾದಿತ ಸಾಂಖ್ಯೋಪದೇಶಕ್ಕೆ ಪ್ರಾಪ್ತಿಯು ಇರುವುದರಿಂದ ಅದರ ಉಪದೇಶವು ಸಂಗತವೆಂದೂ ನಿಷ್ಕೃಷ್ಟವಾಯಿತು. ಅರ್ಜುನನ ವಿಷಾದ ಕಾರಣಗಳನ್ನು ನಿರೂಪಿಸಿ ಶ್ರೀ ಕೃಷ್ಣನ ಸಾಂಖ್ಯೋಪದೇಶವು ಅವನ ಪ್ರಶ್ನೆಗಳಿಗೆ ಉತ್ತರ ರೂಪವಾಗಿರು

ವುದೆಂದು ತೋರಿಸಿದರೆ ಇದು ನಮಗೆ ವಿಶದವಾಗುವುದು. ಆದುದರಿಂದ ದಯ ಮಾಡಿ ಅರ್ಜುನನ ವಿಷಾದಕ್ಕೆ ಅಂತರಂಗ ಕಾರಣಗಳನ್ನು ನಿರೂಪಿಸಬೇಕು.

**ಉತ್ತರ— ಶ್ರೀ ಶ್ರೀಗಳವರು—** ಅರ್ಜುನನ ವಾಕ್ಯಗಳ ಪರಾಮರ್ಶ ದಿಂದಲೇ ಇದನ್ನು ನಿರ್ಣಯ ಮಾಡಿ ತೋರಿಸುವೆವು. ಇವು ಅರ್ಜುನನ ವಿಷಾದ ವಿವರಣಪರವಾದ ಶ್ಲೋಕಗಳು :—

(1) **ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಂ ।**
**ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ॥**
**ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ।**
**ಗಾಂಡೀವಂ ಸ್ರಂಸತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ ॥**
**ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥**
—(1. 28-30.)

ಎಲೈ ಕೃಷ್ಣನೇ (ಪೂರ್ಣಾನಂದನೇ! ಜಗತ್ಕರ್ಷಕನೇ!) ಯುದ್ಧಾರ್ಥಿ ಗಳಾಗಿ ಸ್ಥಿತರಾಗಿರುವ ಈ ಬಂಧು ಜನರನ್ನು ನೋಡಿ ನನ್ನ ಹಸ್ತಪಾದಾದ್ಯವ ಯವಗಳು ಪರಿತಪಿಸುತ್ತವೆ. ನನ್ನ ಮುಖವು ಬಾಡುತ್ತಿದೆ. ನನ್ನ ಶರೀರದಲ್ಲಿ ಕಂಪವೂ, ರೋಮಾಂಚನವೂ ಹುಟ್ಟುತ್ತಿದೆ. ಹಸ್ತದಿಂದ ಗಾಂಡೀವ ಧನುಸ್ಸು ಜಾರಿ ಬೀಳುತ್ತದೆ. ನನ್ನ ಚರ್ಮವೇ ಸರ್ವತ್ರ ಸುಡುತ್ತಿದೆ. ನಾನು ನಿಶ್ಚಲನಾಗಿ ಕುಳಿತುಕೊಳ್ಳುವುದಕ್ಕೇ ಸಮರ್ಥನಲ್ಲ. ನನ್ನ ಮನಸ್ಸು ಭ್ರಮಣ ಹೊಂದಿದೆಯೋ ಎಂಬಂತೆ ಅಸ್ವಸ್ಥವಾಗಿರುತ್ತದೆ.

(2) **ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥**

**ಸಂಜಯ ಉವಾಚ :—**

**ಏವಮುಕ್ತ್ವಾರ್ಜುನಸ್ಸಂಖ್ಯೇ ರಥೋಪಸ್ಥ ಉಪಾವಿಶತ್ ।**
**ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥**

ಶತ್ರುಗಳಿಂದ ತಾಡಿತನಾದರೂ ಅವರಿಗೆ ಪ್ರತೀಕಾರ ಮಾಡದಿರುವವನಾಗಿ ಆಯುಧಗಳನ್ನು ತ್ಯಾಗ ಮಾಡಿ ಸುಮ್ಮನಿರುವ ನನ್ನನ್ನು ಶಸ್ತ್ರಪಾಣಿಗಳಾದ ಧೃತ ರಾಷ್ಟ್ರಪುತ್ರರು ರಣದಲ್ಲಿ ಸಂಹಾರ ಮಾಡಿದರೂ ಅದು ನನಗೆ ಅತ್ಯಂತ ಕ್ಷೇಮ ಕರವೇ ಆಗಿರುವುದು. ಸಂಜಯನು ಹೇಳುತ್ತಾನೆ :—

ಈ ಪ್ರಕಾರ ಅರ್ಜುನನು ಮಾತಾಡಿ, ಬಾಣಸಹಿತವಾದ ಧನುಸ್ಸನ್ನು ತ್ಯಾಗ ಮಾಡಿ, ಶೋಕಕಂಪಿತವಾದ ಮನಸ್ಸುಳ್ಳವನಾಗಿ, ಯುದ್ಧರಂಗದಲ್ಲಿ ರಥಮಧ್ಯ ಪ್ರದೇಶದಲ್ಲಿ ಕುಳಿತನು.

ಪುನಃ ಶ್ರೀಕೃಷ್ಣನ ಆಂದವಾದ ಆಕ್ಷೇಪಗಳಿಗೆ ಸಮಾಧಾನವನ್ನು ಹೇಳಿ ದುಸ್ಸಹವಾದ ವಿಷಾದದಿಂದ ತೂಷ್ಣೀಂಭಾವವನ್ನು ಹೊಂದಿರುತ್ತಾನೆ :—

(3) ಸಂಜಯ ಉವಾಚ :—

ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಂ ।
ವಿಷೀದಂತಮಿದಂ ವಾಕ್ಯಮುವಾಚ ಮಧುಸೂಧನಃ ॥

ಶ್ರೀ ಭಗವಾನುವಾಚ :—

ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ ।
ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥
ಕ್ಲೈಬ್ಯಂ ಮಾಸ್ಮಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।
ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥

ಅರ್ಜುನ ಉವಾಚ :—

ನ ಹಿ ಪ್ರಪಶ್ಯಾಮಿ ಮಮಾಪನುದ್ಯಾ
ದ್ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಂ ।
ಅವಾಪ್ಯ ಭೂಮಾವಸಪತ್ನಮೃದ್ಧಂ
ರಾಜ್ಯಂ ಸುರಾಣಾಮಪಿ ಚಾಧಿಪತ್ಯಂ ॥

ಸಂಜಯ ಉವಾಚ :—

ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ ।
ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವ ಹ ॥
—(2. 1–4. 8–9.)

ಅರ್ಥವು :— "ಸಂಜಯನು ಹೇಳುತ್ತಾನೆ :— ಈ ರೀತಿಯಾಗಿ ಕೃಪಾಯುಕ್ತನೂ, ಶೋಕಜನ್ಯಜಲಪೂರ್ಣವಾದ ವ್ಯಾಕುಲಿತ ನೇತ್ರವುಳ್ಳವನೂ ಆಗಿ ವಿಷಾದಪಡುವ ಅರ್ಜುನನನ್ನು ಕುರಿತು ಮಧುಸೂದನನು ಈ ಮಾತನ್ನು ಆಡಿದನು. ಭಗವಂತನು ಹೇಳುತ್ತಾನೆ :— ಎಲೈ ಅರ್ಜುನನೇ ! ವಿಷಮ ಕಾಲದಲ್ಲಿ (ಅಕಾಲದಲ್ಲಿ, ವಿಷಾದಕ್ಕೆ ಯೋಗ್ಯವಲ್ಲದ ಕಾಲದಲ್ಲಿ) ಈ ವಿಷಾದವು ನಿನಗೇನು ಕಾರಣವುಂಟಾಯಿತು ? ಇದು ಆರ್ಯರಿಂದ ಸೇವಿತವಲ್ಲ. ಸ್ವರ್ಗ ಪ್ರಾಪ್ತಿಗೆ ವಿರೋಧಿಯು ಮತ್ತು ಅಪಕೀರ್ತಿಕರವಾದದು. ಎಲೈ ಪಾರ್ಥನೇ ! ನೀನು ಕ್ಲೈಬ್ಯವನ್ನು ಹೊಂದಬೇಡ. ಇದು ನಿನಗೆ ಯೋಗ್ಯವಲ್ಲ. ಎಲೈ ಪರಂತಪನೇ ! ಲಾಘವಕರವಾದ ಮನೋದೌರ್ಬಲ್ಯವನ್ನು ಬಿಟ್ಟು ಯುದ್ಧಸನ್ನದ್ಧನಾಗು. ಅರ್ಜುನನು ಹೇಳುತ್ತಾನೆ :—

ಶತ್ರುರಹಿತವಾದ ಸಮಗ್ರ ರಾಜ್ಯವನ್ನೂ ಅಥವಾ ದೇವತಾಧಿಪತ್ಯವನ್ನೇ ಹೊಂದಿದರೂ ಕೂಡ ಇಂದ್ರಿಯಗಳಿಗೆ ಅತ್ಯಂತ ಶೋಷಕವಾದ ಈ ಶೋಕವನ್ನು ಯಾವುದು ಪರಿಹರಿಸುವುದೋ ಅಂತಹ ಉಪಾಯವನ್ನು ಕಾಣೆನು. ಸಂಜಯನು ಹೇಳುತ್ತಾನೆ :— ಹೃಷೀಕೇಶನನ್ನು ಕುರಿತು ಜಿತನಿದ್ರನೂ, ಪರಂತಪನೂ ಆದ ಅರ್ಜುನನು ಈ ಪ್ರಕಾರ ಮಾತಾಡಿ, ನಾನು ಯುದ್ಧ ಮಾಡುವುದಿಲ್ಲವೆಂದು ಗೋವಿಂದನಿಗೆ ಹೇಳಿ ಮೌನವನ್ನು ಧರಿಸಿದನು. ಆಶ್ಚರ್ಯವು!" **ಇದು ದುರಭಿಮಾನದ ಫಲವು.**

**2.** ಈ ಪ್ರಕಾರವಾದ ಮಹಾ ವಿಷಾದಕ್ಕೆ ಅಂತರಂಗ ಕಾರಣಗಳನ್ನು ಅರ್ಜುನನೇ ಹೇಳಿರುತ್ತಾನೆ. ಆದರೆ ಇಲ್ಲಿಯೂ ಕೂಡ ಅದ್ವೈತಮತದ ರೀತಿಯಿಂದ ಅರ್ಜುನನಿಗೆ ವಿಷಾದೋತ್ಪತ್ತಿಗೆ ಅವಕಾಶವೇ ಇರುವುದಿಲ್ಲ. ಅರ್ಜುನನು ಚೇತನನು ಅದ್ವೈತಮತದರೀತ್ಯಾ ಹಿಂದೂ ಬ್ರಹ್ಮನಾಗಿದ್ದನು, ವಿಷಾದ ಕಾಲದಲ್ಲಿಯೂ ಬ್ರಹ್ಮನು, ಮುಂದೂ ಬ್ರಹ್ಮನು. ಇಂಥ ನಿತ್ಯೈಕ ಸ್ವರೂಪನಾದ ಬ್ರಹ್ಮನು ಅಳುವುದಕ್ಕೆ ಕಾರಣವೇನು ?

ಅಂಧಕಾರದಂತಿರುವ ಅವಿದ್ಯಾಸಂಬಂಧದಿಂದ ಆವೃತನಾಗಿ ಬ್ರಹ್ಮನು ಜೀವಭಾವವನ್ನು ಹೊಂದಿ ವಿಷಾದಾದಿ ತಾಮಸ ಧರ್ಮಗಳಿಗೆ ವಶನಾದನೆಂದು ಹೇಳಲಾಗುವುದಿಲ್ಲ. ಸೂರ್ಯನಂತೆ ನಿತ್ಯಜ್ಞಪ್ತಿ ಸ್ವರೂಪನಾದ, "**ಅಸಂಗೋಹ್ಯಯಂ ಪುರುಷಃ**" ಎಂಬ ಶ್ರುತಿ ವ್ಯಾಖ್ಯಾನದಲ್ಲಿ ಬ್ರಹ್ಮನು ಅವಿದ್ಯಾದಿ ಸರ್ವ ಸಂಬಂಧರಹಿತನೆಂದು ಅದ್ವೈತಿಗಳಿಂದಲೇ ಅಂಗೀಕೃತನಾದ ಚಿನ್ಮಾತ್ರ ನಿರ್ಗುಣ ಬ್ರಹ್ಮನು ಅವಿದ್ಯೆಯಿಂದ ಆವೃತನಾಗಿ ವಿಷಾದಾದಿಗಳನ್ನು ಹೊಂದುವುದೂ ದುರ್ಘಟವೇ. ಅಂಧಕಾರವು ಸೂರ್ಯನನ್ನು ಆವರಿಸಲಾರದು; ಆದರೆ ಪ್ರಬಲವಾದ ವರ್ಷಾಕಾಲದ ನೀಲಮೇಘವು ಸೂರ್ಯ ತೇಜಸ್ಸನ್ನೂ ತಿರೋಹಿತವನ್ನಾಗಿ ಮಾಡುವುದು; ಹೀಗೆ ಅವಿದ್ಯೆಯೆಂಬ ಮೋಡದಿಂದ ತಿರಸ್ಕೃತವಾದ ಜ್ಞಾನ ಸ್ವರೂಪನಾದ ಬ್ರಹ್ಮನು ಜೀವಭಾವವನ್ನು ಹೊಂದಿ ವಿಷಾದವನ್ನು ಹೊಂದಿದನು ಎಂದು ಕೂಡ ಹೇಳಲಾಗುವುದಿಲ್ಲ. ನಿಧರ್ಮಕನಾದ ಸರ್ವ ಸಂಗರಹಿತನಾದ ಚಿನ್ಮಾತ್ರ ಬ್ರಹ್ಮನಿಗೆ "ಆವ್ರಿಯಮಾಣತ್ವ" ಎಂದರೆ ಅವಿದ್ಯೆಯಿಂದ ಆವರಿಸಲ್ಪಡೋಣವೆಂಬ ಗುಣವೇ ಇರುವುದಿಲ್ಲ.

ಪರಂತು ಅವಿದ್ಯೆಯೆಂಬ ಒಂದು ಪದಾರ್ಥವು ಸತ್ಯವಾಗಿ ಇದ್ದರಷ್ಟೇ ಬ್ರಹ್ಮನನ್ನು ಆವರಿಸಿ ಜೀವಭಾವವನ್ನು ಹೊಂದಿಸಿ ವಿಷಾದಾದಿಗಳನ್ನು ಉಂಟು ಮಾಡುವುದು! ಅದ್ವೈತಮತದಲ್ಲಿ ಅವಿದ್ಯೆಯೂ ಮಿಥ್ಯಾ ಎಂದರೆ ಹಿಂದೂ ಇರಲಿಲ್ಲ, ಈಗಲೂ ಇಲ್ಲ, ಮುಂದೂ ಇರುವುದಿಲ್ಲ. ಇಂಥ ತ್ರಿಕಾಲದಲ್ಲಿಯೂ ಅವಿದ್ಯಮಾನವಾದ ಪದಾರ್ಥವು ಬ್ರಹ್ಮನನ್ನು ಆವರಿಸಿ ಜೀವಭಾವವನ್ನು ಹೊಂದಿಸಿ ಶೋಕಾದಿಗಳನ್ನು ಕಲ್ಪಿಸುವುದೆಂದು ಹೇಳುವುದು ಬಹು ಅನ್ಯಾಯವಾದ ಪ್ರಕ್ರಿಯೆಯು. ಆದುದರಿಂದ ಅದ್ವೈತಮತದಲ್ಲಿ ಜೀವಭಾವಗಳೂ, ಭ್ರಮವೂ, ವಿಷಾದಾದಿಗಳೂ,

ಸಮಾಧಾನಗಳೂ ಕೂಡ ಸುಳ್ಳಿಂದೇ ಹೇಳಬೇಕು. ಹಾಗೆಯೇ ಅದ್ವೈತಿಗಳೂ ಹೇಳಿ ಬಿಟ್ಟಿರುತ್ತಾರೆ. * ಇದು ಅದ್ವೈತ ಗ್ರಂಥವಾದ ಯೋಗವಾಸಿಷ್ಠದ ಶ್ಲೋಕವು :—

**ಯದಿದಂ ದೃಶ್ಯತೇ ಕಿಂಚಿತ್ತನ್ನಾಸ್ತಿ ಕಿಮಪಿ ಧ್ರುವಂ ।**
**ಯಥಾ ಗಂಧರ್ವನಗರಂ ಯಥಾ ವಾರಿ ಮರುಸ್ಥಲೇ ॥**

**ಅರ್ಥ :—** ಏನೇನು ಜ್ಞಾನಕ್ಕೆ ವಿಷಯವಾಗುತ್ತದೆಯೋ ಅದೆಲ್ಲಾ ನಿಜ ವಾಗಿ ಇಲ್ಲವೇ ಇಲ್ಲ. ಗಂಧರ್ವ ನಗರದಂತೆ ಅಥವಾ ಮರುಭೂಮಿಯಲ್ಲಿ ಕಾಣುವ ಜಲದಂತೆ ಅವುಗಳು ಅಸತ್ಯವಾದುವುಗಳು.

* ನ ಭ್ರಮೋನಾಮಕಶ್ಚಿನ್ನ ಚ ಸಂಸಾರೋನಾಮ; ನ ಬಂಧೋ ನ ವೈಮುಮುಕ್ಷುರಿತ್ಯೇಷಾ ಪರಮಾರ್ಥತಾ ಇತ್ಯಾದಿ ಅದ್ವೈತಿಗಳ ವಾಕ್ಯಗಳು ಬಂಧ, ಮೋಕ್ಷ, ಭ್ರಮಾದಿಗಳು ಒಂದೂ ಇಲ್ಲವೇ ಇಲ್ಲವೆಂದು ಹೇಳುತ್ತವೆ. ಇದು ಅದ್ವೈತಮತದ ನ್ಯಾಯವಾದ ಫಲಿತ ಸ್ಥಿತಿಯು. ಆದರೆ ಅದ್ವೈತಿ ಗಳು ಯಾವಾಗಲೂ ಹೀಗೆಯೇ ಉತ್ತರವನ್ನು ಹೇಳುವಷ್ಟು ಶಾಂತಚಿತ್ತರಾಗಿರುವುದಿಲ್ಲ. **ಜಗತ್ತೂ ಇರುವುದು.** ಅದಕ್ಕೇನಾದರೂ ಒಂದು ಗತಿಯನ್ನು ಕಲ್ಪಿಸಬೇಕೆಂದು ಯೋಚಿಸಿ ಅವಿದ್ಯೆಯಿಂದ ಬ್ರಹ್ಮನೇ ಆವೃತನಾಗಿ ನಾನಾ ಪ್ರಪಂಚಾಕಾರನಾಗಿ ತೋರುವನು ಎಂದು ಹೇಳುವರು. ಆದರೆ ಇದು ಅಸಂಗತವಾದ ವಾದವು. ಬ್ರಹ್ಮನು ಒಬ್ಬನೇ ಇರುವನು ಎಂದು ಹೇಳಿ ಅವಿದ್ಯೆಯನ್ನು ಮಧ್ಯೇ ಶಾಸ್ತ್ರದಲ್ಲಿ ಪ್ರವೇಶಿಸುವುದು ಅನುಚಿತವು. ಘಾಟೆನಾಮಕ ಸುಪ್ರಸಿದ್ಧ ಪಂಡಿತನು ಅದನ್ನೇ ಕೇಳು ತ್ತಾನೆ :—

" But whence comes this Avidya, this primeval cause of ignorance, sin and misery ? No satisfactory answer has been given to this question; or rather the question itself must be regarded as inadmissible. "

—V. S. Ghate, M.A.,
Doctor of the University of Paris.

**ಅರ್ಥ :—** ಆದರೆ ಅದ್ವೈತಮತದಲ್ಲಿ ಅಜ್ಞಾನ, ಪಾಪ, ದುಃಖಗಳಿಗೆ ಮೂಲ ಕಾರಣವಾದ ಈ ಅವಿದ್ಯೆಯು ಎಲ್ಲಿಂದ ಬಂತು ? ( ಬ್ರಹ್ಮನು ಒಬ್ಬನೇ ಇರುವನು ತದತಿರಿಕ್ತವಾಗಿ ಯಾವುವೂ ಇಲ್ಲ ಎಂದು ಹೇಳುವ ತತ್ವದಲ್ಲಿ ಇದನ್ನು ಒಪ್ಪುವುದು ಹೇಗೆ ಎಂದು ಭಾವವು. ) ಈ ಪ್ರಶ್ನೆಗೆ ಸಮರ್ಪಕವಾದ ಉತ್ತರವು ಅದ್ವೈತಿಗಳಿಂದ ಕೊಡಲ್ಪಟ್ಟಿಲ್ಲ. ಅಥವಾ ಈ ಪ್ರಶ್ನೆಯೇ ಅನುಚಿತ ವೆಂದು ಭಾವಿಸಲ್ಪಡುತ್ತದೆ.

ಸುಪ್ರಸಿದ್ಧ ಪಂಡಿತನಾದ ಪಾಲ್‌ಡಾಸರ್ ನಾಮಕ ಗ್ರಂಥಕರ್ತನೂ ಈ ದೂಷಣವನ್ನೇ ತೋರಿ ಸಿರುವನು :—

" In reality there is nothing else besides Brahman alone. If we imagine that we perceive a transformation ( vikara ) of

him into the world, a division ( bheda ) of him into a plurality of individuals, this depends on avidya. But how does this happen ? How do we manage to deceive ourselves into seeing a transformation and a plurality, where in reality Brahman alone is ? On this question our authors give no information."

—Paul Deussen- ( p. 302. )

**ಅರ್ಥ :—** " ನಿಜವಾಗಿ ಅದ್ವೈತಮತದಲ್ಲಿ ಬ್ರಹ್ಮಾತಿರಿಕ್ತವಾಗಿ ಒಂದೂ ಇಲ್ಲ. ಬ್ರಹ್ಮನೇ ನಾನಾ ವಿಕಾರಗಳನ್ನು ಹೊಂದಿ ನಾನಾ ಭೇದಗಳನ್ನೂ ನಾನಾ ಜೀವಭಾವಗಳನ್ನೂ ಹೊಂದುವನೆಂದು ನಾವು ತಿಳಿಯುವುದಾದರೆ ಅದು ಅವಿದ್ಯಾ ಮೂಲಕವು. ಆದರೆ ಇದು ಹೇಗೆ ಸಾಧ್ಯವಾಗುವುದು ? ಒಂದೇ ಬ್ರಹ್ಮನು ಇರುವುದಾದರೆ ನಾನಾ ವಿಕಾರಗಳನ್ನೂ ಭೇದಗಳನ್ನೂ ತಿಳಿಯುವ ಭ್ರಮವು ಬರುವುದು ಹೇಗೆ ? ಈ ಪ್ರಶ್ನೆಗೆ ನಮ್ಮ ಗ್ರಂಥಕಾರರು ( ಅದ್ವೈತಿಗಳು ) ಯಾವ ಉತ್ತರವನ್ನೂ ಕೊಡುವುದಿಲ್ಲ.

ತತ್ತ್ವವಿಚಾರದಲ್ಲಿ ಅತಿ ನಿಪುಣರಾದ ರಾಧಾಕೃಷ್ಣರೂ ಇದೇ ದೋಷವನ್ನು ತಾವು ನಿರೂಪಿಸಿ ಅದ್ವೈತಿಗಳು ಉತ್ತರಕೊಡದೇ ಇರುವುದರಲ್ಲಿ ಕಾರಣವನ್ನೂ ನಿರೂಪಿಸಿರುತ್ತಾರೆ :—

But how avidya and Brahman can coexist is just the problem for which we do not have any solution.................. They ( " our authors " vide above Deussen's remarks ) give us no information simply because " no information is possible. "

—S. Radhakrishnan, M.A., D. Litt.

**ಅರ್ಥ :—** ಅವಿದ್ಯೆಯೂ ಬ್ರಹ್ಮನೂ ಒಟ್ಟಿಗೆ ಇರುವುದು ಹೇಗೆ ಎಂಬ ಪ್ರಶ್ನೆಗೆ ಅದ್ವೈತ ಮತದಲ್ಲಿ ಸಮಾಧಾನವು ಕೊಡಲ್ಪಟ್ಟಿರುವುದಿಲ್ಲ. " ನಮ್ಮ ಗ್ರಂಥಕರ್ತರ " ಯಾವ ಉತ್ತರವನ್ನೂ ಕೊಡಲಿಲ್ಲ; ಯಾತಕ್ಕಂದರೆ ಯಾವ ಉತ್ತರವನ್ನು ಕೊಡಲೂ ಸಾಧ್ಯವಿಲ್ಲ.

ಇವು ಮ್ಯಾಕ್ಸಮುಲ್ಲರ್ ನಾಮಕ ಗ್ರಂಥಕರ್ತನ ಮಾತುಗಳು :—

" The Primeval Avidya is left unexplained. It is not to be accounted for as little as Brahman can be accounted for."

—F. Max Muller, K. M.

**ಅರ್ಥ :—** ಅದ್ವೈತಮತದಲ್ಲಿ ಮೂಲಾವಿದ್ಯೆಯು ಉಪಪಾದನೆಯಿಲ್ಲದೆ ಹಾಗೆಯೇ ಬಿಡಲ್ಪಟ್ಟಿದೆ. ನಿರ್ಗುಣ ಬ್ರಹ್ಮ ವಿಷಯದಲ್ಲಿ ಹೇಗೆ ಯಾವುದನ್ನೂ ನಿರೂಪಿಸುವುದಕ್ಕೂ ಶಕ್ಯವಲ್ಲವೋ. ಹಾಗೆಯೇ ಅದ್ವೈತಮತದಲ್ಲಿ ಅವಿದ್ಯೆಯ ವಿಷಯದಲ್ಲಿಯೂ ಯಾವ ನಿರೂಪಣೆಯನ್ನೂ ಮಾಡುವುದಕ್ಕಾಗುವುದಿಲ್ಲ.

"ಮಾಯಾ" ಅಥವಾ "ಅವಿದ್ಯಾ" ವಾದವು ರಬೀಂದ್ರನಾಥ ಠಾಕೂರರವರಿಗೂ ಸಮಂಜಸವಾಗಿ ಕಾಣುವುದಿಲ್ಲ :—

" The word Maya is a mere name; it is no explanation. "

—Rabindranath Tagore.

ಅರ್ಥ :— ಮಾಯಾ ಎಂಬುದು ಒಂದು ಹೆಸರೇ ಹೊರತು ತತ್ತ್ವವಿಷಯಕ ಪ್ರಶ್ನೆಗೆ ಉತ್ತರವಾಗುವುದಿಲ್ಲ.

ಪ್ರೊಫೆಸರ್ ಮಾಲ್ಕಾನಿ ಎಂಬ ವಿದ್ವಾಂಸನಿದೂ ಇದೇ ಅಭಿಪ್ರಾಯವು :—

" The theory of Maya ( or Avidya ) is conceived in the spitit of an ultimate explanation of things. It is not an explanation in the ordinary sense. For it expresses nothing. The why and the wherefore of the world remain as unanswerable as ever. "

" A consistent non-dualist thinker will refuse, therefore, to admit any illusory appearance. For him, there is only one reality, the self, and what we call the world simply does not exist in it or outside it. The doctrine of illusory appearance or Maya is necessitated by the less consistent thinker pressing for a place in reality of something admitted to be different from it in nature.

—Prof. G. R. Malkani, M.A.

ಅರ್ಥವು :— ಮಾಯಾವಾದವು ತತ್ತ್ವವಿಷಯಕ ಪ್ರಶ್ನೆಗಳಿಗೆ ಉತ್ತರರೂಪವಾಗಿ ಅದ್ವೈತಿಗಳಿಂದ ಕಲ್ಪಿಸಲ್ಪಟ್ಟಿದೆ. ಆದರೆ ಅದು ಲೋಕ ರೀತಿಯಿಂದ ಉತ್ತರವಾಗಲಾರದು. ಯಾತಕ್ಕೆಂದರೆ ಅದು ಯಾವ ಪ್ರಶ್ನೆಗೂ ಉತ್ತರರೂಪವಾದ ನಿರೂಪಣವಲ್ಲ. ಒಬ್ಬನೇ ಬ್ರಹ್ಮನು ಇರುವಾಗ ಜಗತ್ತು ಯಾತಕ್ಕೆ ಬಂತು ? ಎಲ್ಲಿಂದ ಬಂತು ? ಎಂಬ ಪ್ರಶ್ನೆಗಳಿಗೆ ಮೊದಲಿನಂತೆ ಯಾವ ಸಮಾಧಾನವನ್ನು ಹೇಳುವುದಕ್ಕೂ ಆಗದಂತೆ ಉಳಿದು ಹೋಗುವುದು.

ಪ್ರೊಫೆಸರ್ ಉರ್ಕ್ಯುಹಾರ್ಟನೂ ಹಾಗೆಯೇ ಹೇಳುತ್ತಾನೆ :—

" It (Maya) is something which cannot obviously be connected with the one great Being. "

—W. S. Urquhart, M.A., D. Litt.

ಅರ್ಥ :— ಬ್ರಹ್ಮನೂ ಒಬ್ಬನೇ ಸತ್ಯನೆಂದು ಒಪ್ಪಿದ ಮೇಲೆ ಈ ತತ್ತ್ವದಲ್ಲಿ ಅವನಿಗೆ ಮಾಯಾ ಸಂಬಂಧವನ್ನು ಯಾವ ರೀತಿಯಿಂದಲೂ ಯೋಜನೆ ಮಾಡುವುದಕ್ಕೆ ಆಗುವುದಿಲ್ಲ.

ಡಾಕ್ಟರ್ ಮಹೇಂದ್ರನಾಥ ಸರ್ಕಾರನೂ ಹೀಗೆಯೇ ಬರೆದಿರುತ್ತಾನೆ :—

It ( Nescience ) has no raison d'etre in the Absolute·········

ಪ್ರಕೃತದಲ್ಲಿಯೂ ಅರ್ಜುನನು ವಿಷಾದಪಡಲೇ ಇಲ್ಲ. ಶ್ರೀ ಕೃಷ್ಣನು ಗೀತೆಯನ್ನು ಉಪದೇಶ ಮಾಡಲೇ ಇಲ್ಲ. ಶಂಕರಾಚಾರ್ಯರು ಗೀತಾ ಭಾಷ್ಯವನ್ನು ರಚಿಸಲೇ ಇಲ್ಲ ಎಂದು ಪ್ರಾಪ್ತವಾಯಿತು. ಈ ಅಭಿಪ್ರಾಯಗಳ ಪ್ರಮಾಣವಿರುದ್ಧತೆಯನ್ನು ಕುರುಬರೂ ತಿಳಿಯಬಹುದು.

ದ್ವೈತಮತದಲ್ಲಿ ಅಲ್ಪ ಜ್ಞಾನಾತ್ಮಕನಾದ ಅರ್ಜುನಜೀವನು ಮೋಡದಂತೆಯೋ ಅಥವಾ ಬೂದಿಯಂತೆಯೋ ಕವಿದುಕೊಂಡಿರುವ ಪ್ರಾರಬ್ಧಕರ್ಮಗಳಿಂದ ತಿರೋಹಿತವಾದ ತನ್ನ ಸ್ವರೂಪ ಜ್ಞಾನವುಳ್ಳವನಾಗಿ, ಬಂಧು ಸ್ನೇಹವೆಂಬ ದುರಭಿಮಾನಕ್ಕೆ ವಶನಾಗಿ, ಪರಮ ಸಾತ್ವಿಕವಾದ ವಿಷ್ಣು ಪ್ರೀತಿಕರವಾದ ಧರ್ಮಯುದ್ಧವನ್ನು ಅಧರ್ಮಕರವೆಂದು ತಿಳಿದನು ಎಂದು ಹೇಳಬಹುದು. ಈ ವಿಧವಾದ ಶಾಸ್ತ್ರಾರ್ಥ ನಿಶ್ಚಯವು ಸಕಲ ಪ್ರಮಾಣಗಳಿಗೂ ಅವಿರುದ್ಧವಾಗಿರುವುದೆಂದು ಯುಕ್ತಿಸಿದ್ಧವಾಗಿರುವುದು.

---

To Sankara the Absolute is the abstract identity.........Sankara can find no room for the details of experience.

Prof. Mahendranath Sircar, M.A., Ph.D.

**ಅರ್ಥ :—** ಅವಿದ್ಯೆಯು ಅದ್ವೈತಾತ್ಮನಲ್ಲಿ ಹೇಗೆ ಇರುವುದೆಂದು ನಿರೂಪಿಸುವುದಕ್ಕೆ ಶಕ್ಯವಾದ ಸ್ಥಿತಿಯನ್ನು ಹೊಂದಿಲ್ಲ. ಶಂಕರಾಚಾರ್ಯರ ಆತ್ಮನು ಸರ್ವ ಧರ್ಮನಾಶಕವಾದ ತಾದಾತ್ಮ್ಯವು. ಅಂಥ ಆತ್ಮವಾದದಲ್ಲಿ ಶಂಕರಾಚಾರ್ಯರು ನಮ್ಮ ವ್ಯವಹಾರಗೋಚರವಾದ ಪ್ರಪಂಚ ವಿಸ್ತೃತಿಗೆ ಸ್ಥಳವನ್ನು ಕೊಡಲಾರರು. ( ಪ್ರಪಂಚವು ಹೇಗೆ ಬಂತೆಂಬ ಪ್ರಶ್ನೆಗೆ ಉತ್ತರವನ್ನು ಕೊಡಲಾರರೆಂದು ಭಾವವು. )

ವಾರ್ಮನನು ಮಾಯಾವಾದವನ್ನು ಕ್ರೋಧಪೂರ್ವಕವಾಗಿ ನಿಂದಿಸಿರುತ್ತಾನೆ :—

His ( The Adwaitin's ) Maya is inexplicable. It is the argument of one in darkness himself. This new vedantic theory has done and is doing more harm to the world than any other religious theory. It is a worse delusion than the delusion of Maya.

—E. B. Warman, M.A.

**ಅರ್ಥ :—** ಆತನಿಗೆ ( ಶಂಕರಾಚಾರ್ಯರಿಗೆ ) ಮಾಯೆಯ ವಿಷಯದಲ್ಲಿ ಯಾವ ಸಾಮಾಧಾನಗಳನ್ನು ಹೇಳುವುದಕ್ಕೂ ಶಕ್ಯವಲ್ಲ. ಮಾಯಾಂಗೀಕಾರವು ಭ್ರಾಂತನ ವಾದವೇ ಸರಿ. ಈ ನವೀನ ವೇದಾಂತ ತತ್ವವು ಲೋಕದಲ್ಲಿನ ಇತರ ಯಾವ ಮತಕ್ಕಿಂತಲೂ ಜಗತ್ತಿಗೆ ಹೆಚ್ಚು ಕೇಡನ್ನು ಉಂಟು ಮಾಡಿರುವುದು ಮತ್ತು ಈಗಲೂ ಮಾಡುತ್ತಿರುವುದು. ಅವಿದ್ಯಾ ಭ್ರಮಕ್ಕಿಂತ ಮಾಯೆಯನ್ನು ಶಾಸ್ತ್ರದಲ್ಲಿ ಉಪಪಾದನೆ ಮಾಡುವವನ ಭ್ರಮವು ಮತ್ತೂ ನೀಚವಾದುದು.

3. ಪ್ರಶ್ನೆ— ಸ್ವಾಮೀ ! ಅರ್ಜುನನು ವಿಷಾದ ಹೊಂದಿ ತಾನು ಯುದ್ಧ ಮಾಡದೇ ಇರುವುದರಲ್ಲಿ ಎಷ್ಟು ಕಾರಣಗಳನ್ನು ಹೇಳಿರುವನು ?

**ಶ್ರೀ ಶ್ರೀಗಳವರು :—** ಬಂಧುಹನನದಿಂದ ಪಾಪವು ಪ್ರಾಪ್ತವಾಗಬಹು ದೆಂಬ ಶಂಕೆಯಿಂದಲೂ, ಇಹಲೋಕದಲ್ಲಿ ಬಂಧುವಿಯೋಗದಿಂದ ಸೌಖ್ಯ ಹಾನಿ ಯೂ, ದುಃಖಪ್ರಾಪ್ತಿಯೂ ಉಂಟಾಗುವುದೆಂದೂ, ಮತ್ತು ಜಯವು ಸಂದಿಗ್ಧ ವೆಂದೂ ಮೂರು ಕಾರಣಗಳನ್ನು ವರ್ಣಿಸಿರುತ್ತಾನೆ. ಇದು ಸಾಮಾನ್ಯವಾದ ಪ್ರತಿಜ್ಞಾ ಶ್ಲೋಕವು :—

**(1) ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ।**
**ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ॥**
—(1. 31.)

ಎಲೈ ಬ್ರಹ್ಮರುದ್ರಾದಿಗಳ ಪ್ರವರ್ತಕವಾದ ಸ್ವಾಮಿಯೇ ! ದುರ್ನಿಮಿತ್ತ ಗಳನ್ನು ನೋಡುತ್ತಿದ್ದೇನೆ. ಸ್ವಜನರನ್ನು ಯುದ್ಧದಲ್ಲಿ ಸಂಹರಿಸುವುದರಿಂದ ಶ್ರೇಯ ಸ್ಸಾಗುವುದಿಲ್ಲ.

ಐಹಿಕ ಶ್ರೇಯಸ್ಸು ರಾಜ್ಯಾದಿಗಳಿಂದ ಸುಖವು; ಪಾರಲೌಕಿಕ ಶ್ರೇಯಸ್ಸು ಸ್ವರ್ಗಾದಿ ಪ್ರಾಪ್ತಿಯು. ಉಭಯವೂ ಆಗಲಾರದೆಂದು ಅರ್ಜುನನು ಕ್ರಮವಾಗಿ ಪ್ರತಿಪಾದಿಸಿರುತ್ತಾನೆ. ಮತ್ತೂ ಮೂರು ವಿಧವಾಗಿ ಪಾಪವು ಪ್ರಾಪ್ತವಾಗುವು ದೆಂಬ ಭೀತಿಯನ್ನು ಅರ್ಜುನನ ವಾಕ್ಯಗಳು ವಿಶದ ಮಾಡುತ್ತವೆ :—

**(2) ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಸ್ಸ್ಯಾಜ್ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥**
**ತಸ್ಮಾನ್ನಾರ್ಹಾವಯಂ ಹಂತುಂ ಧಾರ್ತರಾಷ್ಟ್ರಾನ್**
**ಸ್ವಬಾಂಧವಾನ್ ।**
**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥**
**ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಂ ॥**
**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಂ ।**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥**
—(1. 26–39.)

ಎಲೈ ಜನಾರ್ದನನೇ ! ( ಜನನಾದಿ ದೋಷರಹಿತನಾಗಿ ಭಕ್ತರ ಭವಪಾಶ ನಾಶಕನಾದ ಶ್ರೀ ಕೃಷ್ಣನೇ ! ) ಧೃತರಾಷ್ಟ್ರ ಪುತ್ರರನ್ನು ಸಂಹಾರ ಮಾಡುವುದ

ರಿಂದ ನಮಗೆ ಏನು ಸುಖವು ? ( ಇಹಲೋಕದ ಸುಖವಾಗಲೀ ಪಾರತ್ರಿಕ ಸುಖ ವಾಗಲೀ ಇಲ್ಲವೆಂದು ಭಾವವು. ) ಮತ್ತು ನಮಗೆ ಇವರ ವಧೆಯಿಂದ ಪಾಪವೇ ಬರುವುದು. ಯದ್ಯಪಿ ಇವರು ಆತತಾಯಿಗಳೇ. ಆದರೂ ನಮ್ಮಿಂದ ಈ ಧಾರ್ತ ರಾಷ್ಟ್ರರು ವಧಾರ್ಹರಲ್ಲ. ಎಲೈ ಮಾಧವನೇ ! ಸ್ವಜನರನ್ನು ಸಂಹಾರ ಮಾಡಿ ಸುಖದಿಂದ ಹೇಗೆ ಇರುವುದಕ್ಕಾಗುವುದು ? ಯದ್ಯಪಿ ಲೋಭದಿಂದ ತಿರಸ್ಕೃತ ಬುದ್ಧಿಯುಳ್ಳ ಈ ಕೌರವರು ಕುಲಕ್ಷಯದಿಂದ ಉಂಟಾಗುವ ದೋಷವನ್ನೂ, ಮಿತ್ರ ದ್ರೋಹದಿಂದ ಪ್ರಾಪ್ತವಾಗುವ ಪಾತಕವನ್ನೂ ತಿಳಿಯಲಾರರು. ಆದರೆ ಎಲೈ ಜನಾರ್ದನನೇ ! ಕುಲಕ್ಷಯದಿಂದ ಉಂಟಾಗುವ ಪಾಪವನ್ನು ತಿಳಿದ ನಾವು ಈ ಪಾಪ ಕರ್ಮವು ನಿವರ್ತಿಸಲ್ಪಡತಕ್ಕದ್ದು ( ಎಂದರೆ ಅನುಷ್ಠಾನ ಮಾಡಲ್ಪಡ ಕೂಡದು ) ಎಂದು ತಿಳಿಯದಿರುವುದು ಹೇಗೆ ?

ಈ ರೀತಿಯಾಗಿ ಸ್ವಬಾಂಧವರ ಹನನನಿಮಿತ್ತಕವಾದ ಪಾಪವು, ಕುಲಕ್ಷಯ ಜನಿತ ಪಾಪವು, ಮಿತ್ರ ದ್ರೋಹ ನಿಮಿತ್ತಕ ಪಾಪವು ಹೀಗೆ ತ್ರಿವಿಧವಾದ ಪಾಪ ಗಳು ಪ್ರಸಕ್ತವಾಗುವುವೆಂದು ಅರ್ಜುನನು ವಿಷಾದವನ್ನು ಹೊಂದಿದನು. ಅದ ರಲ್ಲೂ ಕುಲಕ್ಷಯದಿಂದ ಸಂಭವಿಸುವ ದೋಷಗಳು ಅತ್ಯಂತ ಅನರ್ಥಕರವೆಂಬು ದನ್ನು ಐದಾರು ಶ್ಲೋಕಗಳಿಂದ ವಿವರಿಸುತ್ತಾನೆ :—

**(3) ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥**
**ಅಧರ್ಮಾಭಿಭವಾತ್ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ ।**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥**
**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥**
**ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।**
**ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥**
**ಉತ್ಸನ್ನ ಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ॥**
**ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಂ ।**
**ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ॥**

**—(1. 43–45.)**

ಕುಲಕ್ಷಯದಿಂದ ಅನಾದಿ ಪರಂಪರೆಯಿಂದ ಕುಲಧರ್ಮಗಳು ನಷ್ಟವಾಗು

ತ್ತವೆ.* ಮತ್ತು ಕುಲಧರ್ಮಗಳು ನಷ್ಟವಾದರೆ ಸಮಗ್ರ ಕುಲವೂ ಅಧರ್ಮಾಕ್ರಾಂತವಾಗುತ್ತದೆ. ಎಲೈ ಕೃಷ್ಣನೇ! ಅಧರ್ಮ ವ್ಯಾಪ್ತಿಯಿಂದ ಕುಲಸ್ತ್ರೀಯರು (ಪಾತಿವ್ರತ್ಯರಹಿತರಾಗುವುದರಿಂದ) ದೂಷಿತರಾಗುತ್ತಾರೆ. ಹೇ ವಾರ್ಷ್ಣೇಯ! ಸ್ತ್ರೀಯರು ದುಷ್ಟರಾದರೆ ವರ್ಣಸಾಂಕರ್ಯವು ಉಂಟಾಗುವುದು. (ಬ್ರಾಹ್ಮಣಾದಿ ವರ್ಣರ ಸ್ತ್ರೀಯರು ಭಿನ್ನ ವರ್ಣದ ಪುರುಷರ ಸಂಗದ ಕ್ರೀಡಿಸಿ ಪುತ್ರರನ್ನು ಪಡೆಯುವುದರಿಂದ ಯಾವ ವರ್ಣಕ್ಕೂ ಸೇರದ ವರ್ಣಬಾಹ್ಯರು ಉತ್ಪನ್ನರಾಗಿ ಅವರೂ ಪ್ರಧಾನವಾದ ಚತುರ್ವರ್ಣಗಳಲ್ಲಿ ಬೆರೆತು ಇಂಥವರು ಇಂತಹ ವರ್ಣಕ್ಕೆ ಸೇರಿದವರು ಎಂಬ ವ್ಯವಸ್ಥೆಯೇ ಇಲ್ಲದೇ ಹೋಗುವುದರಿಂದ ವರ್ಣಸಾಂಕರ್ಯವು ಉತ್ಪನ್ನವಾಗುವುದು ಎಂದು ಭಾವವು) ಈ ರೀತಿಯಾಗಿ ಉತ್ಪನ್ನನಾದ ಸಂಕರಪುತ್ರನು ಕುಲನಾಶಕನಿಗೂ ಮತ್ತು ತನ್ನ ಕುಲದವರಿಗೂ ನರಕಪ್ರದನಾಗುತ್ತಾನೆ. ಆದುದರಿಂದ ಈ ಸಂಕರಪುತ್ರರ ಪಿತೃಗಳು (ಪಿಂಡದಾನದಲ್ಲಿ ಅಧಿಕಾರ ಹೊಂದಿದ ಔರಸ ಪುತ್ರರು ತಮ್ಮ ಕ್ಷೇತ್ರದಲ್ಲಿ ಉತ್ಪನ್ನರಾಗದುದರಿಂದ) ಲುಪ್ತ ಪಿಂಡರಾಗಿ ಮತ್ತು ಲುಪ್ತೋದಕಕ್ರಿಯರಾಗಿ ನರಕದಲ್ಲಿ ಬೀಳುತ್ತಾರೆ. ವರ್ಣಸಂಕರಕಾರಕರಾದ ಕುಲಘ್ನರಿಂದ ಪ್ರಾಪ್ತವಾದ ಈ ದೋಷಗಳಿಂದ ಬ್ರಾಹ್ಮಣಾದಿ ಜಾತಿ ಧರ್ಮಗಳು ನಷ್ಟವಾಗುತ್ತವೆ. ಮತ್ತು ಪರಂಪರಾಪ್ರಾಪ್ತವಾದ ಕುಲಧರ್ಮಗಳು ನಾಶ ಹೊಂದುತ್ತವೆ. ಎಲೈ ಜನಾರ್ದನನೇ! ಸ್ವವರ್ಣೋಚಿತ ಧರ್ಮಗಳನ್ನೂ ಸ್ವಕುಲ ಧರ್ಮಗಳನ್ನೂ ತ್ಯಜಿಸಿದ ಮನುಷ್ಯರಿಗೆ ನರಕದಲ್ಲಿ ವಾಸವು ನಿಯತವೆಂದು ಕೇಳಿರುತ್ತೇವೆ. ಹಾ! ಕಷ್ಟ! ರಾಜ್ಯಲೋಭದಿಂದ ಸ್ವಜನಹನನವೆಂಬ ಅತ್ಯಂತ ಪಾಪ ಕರ್ಮವನ್ನು ಆಚರಿಸಲು ನಾವು ನಿಶ್ಚಯ ಮಾಡಿದ್ದೇವು.

ಎರಡು ವಿಧವಾಗಿ ಸೌಖ್ಯ ಹಾನಿಯೂ ಮತ್ತು ದುಃಖಪ್ರಾಪ್ತಿಯೂ ಯುದ್ಧದಲ್ಲಿ ಬಾಂಧವಹನನದಿಂದ ಪ್ರಸಕ್ತವಾಗುವುದೆಂದು ಅರ್ಜುನನು ತೋರಿಸಿರುತ್ತಾನೆ. ಯಾರ ಉದ್ದೇಶದಿಂದ ಧನಾದಿಗಳನ್ನು ಆರ್ಜಿಸಿ ಸುಖ ಹೊಂದಬೇಕೆಂದು ಸರ್ವರೂ ಇಚ್ಛಿಸುತ್ತಾರೆಯೋ ಅಂಥ ಪ್ರಿಯರಾದ ಆಪ್ತ ಬಂಧುಗಳು ಯುದ್ಧದಲ್ಲಿ ಪ್ರಾಣ ಪರಿತ್ಯಾಗ ಮಾಡುತ್ತಾರೆ ಎಂದು ಅರ್ಜುನನು ಹೇಳುತ್ತಾನೆ:—

(4) **ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ**
**ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ ।**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥**
**ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ।**
**ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ ॥**

* ಉಪದೇಶಕರಾದ ಜ್ಞಾನವೃದ್ಧರಾದ ಕುಲವೃದ್ಧರ ನಾಶದಿಂದ ವರ್ಣಾಶ್ರಮ ಧರ್ಮ ಜ್ಞಾನವೇ ಬರುವುದಕ್ಕೆ ಅವಕಾಶವಿಲ್ಲದಿರುವುದರಿಂದ ಸ್ವವರ್ಣಾಶ್ರಮೋಚಿತ ಧರ್ಮಗಳು ಅನುಷ್ಠಿಸಲ್ಪಡದೇ ಧರ್ಮಗಳೆಲ್ಲವೂ ನಾಶ ಹೊಂದುವುವು ಎಂದು ಭಾವವು.

**ಏತಾನ್ನಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ ।**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥**
—(1. 32–35.)

ಎಲೈ ಗೋವಿಂದನೇ ! ಯಾರಿಗೋಸ್ಕರ ನಮಗೆ ರಾಜ್ಯವೂ, ಭೋಗ್ಯ ದ್ರವ್ಯಗಳೂ, ಇತರ ಸುಖ ಸಾಧನಗಳೂ ಅಪೇಕ್ಷಿತಗಳೋ ಅಂಥ ಆಚಾರ್ಯರು, ಪಿತೃಗಳು, ಪುತ್ರರು, ಪಿತಾಮಹಂದಿರುಗಳು, ಮಾತುಲರು, ಶ್ವಶುರರು, ಪೌತ್ರರು, ಭಾವಮೈದುನರು ಮತ್ತೂ ಇತರ ಸಂಬಂಧಿಗಳು ಪ್ರಾಣಗಳಲ್ಲಿ ಮತ್ತು ಧನಾದಿಗಳಲ್ಲಿ ಆಶೆಯನ್ನು ಪರಿತ್ಯಾಗ ಮಾಡಿ ಯುದ್ಧದಲ್ಲಿ ಸನ್ನದ್ಧರಾಗಿರುವುದರಿಂದ ಅವರನ್ನು ಸಂಹರಿಸಿ ಪ್ರಾಪ್ತವಾಗುವ ರಾಜ್ಯದಿಂದ ನಮಗೆ ಆಗುವುದೇನು ? ಮತ್ತು ಇತರ ಭೋಗ್ಯದ್ರವ್ಯ ಪ್ರಾಪ್ತಿಯಿಂದ ಅಥವಾ ನಮ್ಮ ಜೀವನದಿಂದ ತಾನೇ ಏನು ಆಗುವುದು ? ಎಲೈ ಮಧುಸೂದನನೇ ! ನನ್ನನ್ನು ಸಾಯಿಸಿದರೂ ಚಿಂತೆಯಿಲ್ಲ, ನಾನು ಇವರನ್ನು ಸಂಹರಿಸುವುದಕ್ಕೆ ಇಚ್ಛಿಸುವುದಿಲ್ಲ. ಯುದ್ಧದಿಂದ ತ್ರೈಲೋಕ್ಯ ಸಾಮ್ರಾಜ್ಯವೇ ದೊರಕುವುದಾದರೂ ನಾನು ಇವರನ್ನು ಸಂಹರಿಸುವುದಕ್ಕೆ ಇಚ್ಛಿಸುವುದಿಲ್ಲ. ಹೀಗಿರುವಲ್ಲಿ ಅಲ್ಪವಾದ ಭೂಮಂಡಲಾರ್ಥವಾಗಿ ಇವರನ್ನು ಸಂಹಾರ ಮಾಡಲಾರೆನೆಂದು ಹೇಳುವುದೇನು ?

ಈ ವಾಕ್ಯಗಳಿಂದ ಆಪ್ತ ಬಂಧುಗಳು ಮೃತರಾದರೆ ಅವರ ದರ್ಶನ, ಸ್ಪರ್ಶನಾದ್ಯ ಭಾವದಿಂದ ಸುಖ ನಾಶವೂ, ಮತ್ತು ದುಃಖಪ್ರಾಪ್ತಿಯೂ ಉಭಯವೂ ಅವರ್ಜನೀಯವೆಂದು ಅರ್ಜುನನು ಶಂಕಿಸಿದನೆಂದು ಸ್ಪಷ್ಟವಾಗುವುದು. ದ್ವಿತೀಯಾಧ್ಯಾಯದಲ್ಲಿಯೂ ಪುನಃ ಅರ್ಜುನನು ಈ ಅಭಿಪ್ರಾಯವನ್ನೇ ಸಂಕ್ಷೇಪವಾಗಿ ಹೇಳಿರುತ್ತಾನೆ :—

(5) **ಯಾನೇವ ಹತ್ವಾ ನ ಜಿಜೀವಿಷಾಮಃ ।**
**ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ॥** —(2. 6.)

ಪ್ರಿಯ ಬಂಧುಗಳಾದ ಯಾವ ಧೃತರಾಷ್ಟ್ರನ ಪುತ್ರನನ್ನೂ ಅವನ ಅನುಯಾಯಿಗಳನ್ನೂ ಸಂಹರಿಸಿ ನಾವು ಪ್ರಾಣಧಾರಣೆ ಮಾಡಲಾರೆವೋ ಅಂಥ ದುರ್ಯೋಧನನೂ ಅವನ ಸಂಬಂಧಿಗಳಾದ ಭೀಷ್ಮಾದಿಗಳೂ ಯುದ್ಧದಲ್ಲಿ ಸನ್ನದ್ಧರಾಗಿರುತ್ತಾರೆ.

ಮತ್ತೊಂದು ವಿಧವಾಗಿ ದುಃಖಪ್ರಾಪ್ತಿ ಪ್ರಕಾರವನ್ನು ಅರ್ಜುನನು ನಿರೂಪಿಸುತ್ತಾನೆ :—

(6) **ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥**

**ಗುರೂನಹತ್ವಾ ಹಿ ಮಹಾನುಭಾವಾನ್ ।**
**ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ ॥**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ ।**
**ಭುಂಜೀಯ ಭೋಗಾನ್ರುಧಿರಪ್ರದಿಗ್ಧಾನ್ ॥** —(2. 4–5.)

ಎಲೈ ಮಧುಸೂದನನೇ ! ನಾನು ಯುದ್ಧದಲ್ಲಿ ಎದುರಿಸಿ ಪೂಜಾರ್ಹರಾದ ಭೀಷ್ಮದ್ರೋಣರನ್ನು ಹೇಗೆ ಬಾಣಗಳಿಂದ ಹೊಡೆಯಲಿ ? ಮಹಾನುಭಾವರಾದ ಎಂದರೆ ಭಗವದ್ಭಕ್ತಿ ತಪಸ್ಸು ಮುಂತಾದ ಮಹಾ ಗುಣ ಸಂಪನ್ನರಾದ, ವಿದ್ಯೋಪದೇಶಕರಾದ ಗುರುಗಳನ್ನು ಸಂಹರಿಸದೆ ಈ ಲೋಕದಲ್ಲಿ ಭಿಕ್ಷಾಟನದಿಂದಲಾದರೂ ಜೀವನ ಮಾಡುವುದು ಪಾರತ್ರಿಕ ಶ್ರೇಯಸ್ಸಾಧನವಾಗಿರುವುದು. ಮತ್ತು ಅರ್ಥಕಾಮರಾದ ಎಂದರೆ ಭೋಗ್ಯ ದ್ರವ್ಯಗಳನ್ನು ಅಪೇಕ್ಷಿಸಿ, ಬದುಕಬೇಕೆಂದಿರುವ ಗುರುಗಳನ್ನು ಸಂಹಾರ ಮಾಡಿ ಅವರ ರಕ್ತದಿಂದ ಲಿಪ್ತವಾದ ( ಅವರುಗಳಿಂದ ಅನುಭವಿಸಲ್ಪಟ್ಟ ) ರಾಜ್ಯಗೃಹಾದಿ ಭೋಗಗಳನ್ನು ಹೇಗೆ ಅನುಭವಿಸಲಿ ?

ಜಯ ಸಂದೇಹವೂ ಯುದ್ಧದಲ್ಲಿ ಪ್ರತಿಬಂಧಕವಾಗಲು ಕಾರಣವೆಂದು ಅರ್ಜುನನು ನಿರೂಪಿಸಿರಬಹುದೆಂದು ಶ್ರೀ ಕೃಷ್ಣನ ಉತ್ತರದಿಂದ ತೋರಿ ಬರುವುದು. ಅರ್ಜುನನ ಸ್ವಂತ ವಾಕ್ಯವು (2 6.) ಈ ವಿಷಯದಲ್ಲಿ ಅಷ್ಟು ಸ್ಪಷ್ಟವಾಗಿರುವುದಿಲ್ಲ. *

(7) **ನಚೈತದ್ವಿದ್ಮಃ ಕತರನ್ನೋ ಗರೀಯೋ ।**
**ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ॥**
—(2. 6.)

---

* ಈ ಉಭಯ ಪಕ್ಷದಲ್ಲಿ ಯಾವುದು ಶ್ರೇಷ್ಠವೆಂಬುದನ್ನು ನಾವು ತಿಳಿದಿಲ್ಲ; ನಾವೇ ಜಯಿಸುವುದೆಂಬುದೋ ಅಥವಾ ಕೌರವರೇ ನಮ್ಮನ್ನು ಜಯಿಸುವುದೆಂಬುದೋ ನಾವು ತಿಳಿದಿಲ್ಲ ಎಂದು ಈ ಶ್ಲೋಕಾರ್ಥವು. ಇದು ಅರ್ಜುನನು ಯುದ್ಧ ಮಾಡಿದರೂ ಜಯದ ಸಂದೇಹವೆಂದು ತಿಳಿದಿದ್ದನು ಎಂದು ಹೇಳುವುದರಲ್ಲಿ ಸ್ಪಷ್ಟವಾದ ಸಾಧಕವಾಗಲಾರದು. ಆದರೂ ಅರ್ಜುನನಿಗೆ ಇಂಥ ಸಂದೇಹವೇ ಇಲ್ಲದಿದ್ದರೆ, **“ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ”** ಎಂದು ದ್ವಿತೀಯಾಧ್ಯಾಯದಲ್ಲಿಯೂ, **“ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್”** ಎಂದು ಏಕಾದಶಾಧ್ಯಾಯದಲ್ಲಿಯೂ ಶ್ರೀ ಕೃಷ್ಣನು ಹೇಳಿರುವ ಮಾತುಗಳು ಅಸಂಗತವಾಗುವುವು. ಈ ಕಾರಣದಿಂದ **“ಯದ್ವಾ ಜಯೇಮ ಯದಿ ವಾ ನೋ ಜಯೇಯುಃ”** ಎಂದು ಹೇಳುವಾಗ ಅರ್ಜುನನು ಜಯ ಸಂದೇಹವನ್ನೂ ಈ ವಾಕ್ಯದಲ್ಲಿ ಗರ್ಭೀಕರಿಸಿ ಮಾತಾಡಿದ್ದನೆಂದು ನಿಶ್ಚಯಿಸಬೇಕು. ನಾವೇ ಗೆಲ್ಲುವೆವೋ ಅಥವಾ ಕೌರವರೇ ಜಯಿಸುವರೋ ಮತ್ತು ಜಯ ಪರಾಜಯಗಳೆಂಬ ಇವೆರಡರಲ್ಲಿ ಯಾವ ಪಕ್ಷವು ಶ್ರೇಷ್ಠವೋ ನನಗೆ ತಿಳಿಯದು ಎಂದು ಅರ್ಜುನನ ಭಾವವು.

ಇಷ್ಟೂ, ಬಂಧು ಸ್ನೇಹದಿಂದ ನಾರಾಯಣ ದ್ವೇಷಿಗಳ ಹನನ ರೂಪವಾದ ಮಹಾ ಯಜ್ಞದಲ್ಲಿ ಅಧರ್ಮ ಭ್ರಾಂತಿಯನ್ನು ಹೊಂದಿ ಪುಣ್ಯನಾಶಕವಾದ ಪರಿತಾಪಕ್ಕೆ ವಶನಾದ ಅರ್ಜುನನು ತಾನು ಯುದ್ಧ ಮಾಡುವುದಿಲ್ಲವೆಂಬಲ್ಲಿ ನಿರೂಪಿಸಿದ ಕಾರಣಗಳು.

---

# 11. ಹನ್ನೊಂದನೆಯ ಅಂಶವು.

## ಗೀತೆಯ ಸಾಂಖ್ಯೋಪದೇಶವು.

1. **ಪ್ರಶ್ನೆ :—** ಸ್ವಾಮೀ ! ಶ್ರೀ ಕೃಷ್ಣನು ನಿರೂಪಿಸಿದ ಸಾಂಖ್ಯ ತತ್ವವು ಯಾವುದು ? ಮತ್ತು ಬಂಧು ಸ್ನೇಹವನ್ನು ಅದು ನಿವೃತ್ತಿ ಮಾಡುವುದರಲ್ಲಿ ಹೇಗೆ ಸಮರ್ಥವಾದುದು ? ಈ ವಿಷಯವನ್ನು ಸಾವಧಾನವಾಗಿ ನಿರೂಪಿಸಬೇಕು.

**ಉತ್ತರ :—** ಅಂಧಕಾರ ನಿವರ್ತಕವಾದ ಸೂರ್ಯ ಪ್ರಕಾಶದಂತೆ, ಶ್ರೀ ಕೃಷ್ಣನಿಂದ ಉಪದಿಷ್ಟವಾದ ಸಾಂಖ್ಯ ತತ್ವವು ಅರ್ಜುನನ ದುರಭಿಮಾನವನ್ನು ಪರಿಹರಿಸಿರುವುದು. ಮತ್ತು ಈಗಲೂ ದುರ್ಜನ ಸ್ನೇಹದಿಂದ ಧರ್ಮ ಕಾರ್ಯದಲ್ಲಿ ಅಲಸರಾದ ಸಕಲ ಭ್ರಾಂತರಿಗೂ ವಿವೇಕವನ್ನು ಹುಟ್ಟಿಸಿ ಸ್ವಧರ್ಮದಲ್ಲಿ ನಿಷ್ಠೆಯನ್ನು ಉಂಟು ಮಾಡುತ್ತಿರುವುದು. ದುರ್ಜನ ಬಂಧು ಸ್ನೇಹಜನಿತ ವಿಷಾದವು ಅರ್ಜುನನ ಯುದ್ಧಕರಣದಲ್ಲಿ ಪ್ರತಿಬಂಧಕವಾಗಿತ್ತು. ತತ್ವೋಪದೇಶದಿಂದ ಬಂಧುಗಳಲ್ಲಿ ದುರಭಿಮಾನವು ನಿವೃತ್ತವಾದ ನಂತರ ಸ್ವವರ್ಣಾಶ್ರಮೋಚಿತ ಯುದ್ಧದಲ್ಲಿ ಅರ್ಜುನನು ಸಹಜವಾಗಿಯೇ ಪ್ರವೃತ್ತನಾದನು. ಭೀಷ್ಮಾದಿಗಳು ನನ್ನಿಂದ ಸಂಹೃತರಾಗುವರು, ಅದರಿಂದ ನನಗೆ ಐಹಿಕ ಪಾರಲೌಕಿಕ ದುಃಖವು ಪ್ರಾಪ್ತವಾಗುತ್ತದೆ ಎಂಬುದು ಅರ್ಜುನನ ಸಮಗ್ರ ವಾಕ್ಯಾರ್ಥವು. "ಭೀಷ್ಮಾದಿಗಳು ಸ್ವರೂಪತಃ ಸಂಹಾರಯೋಗ್ಯರೇ ಅಲ್ಲ. ದೇಹವಿಯೋಗ ರೂಪವಾದ ಕ್ಷುದ್ರ ಸಂಹಾರದಲ್ಲಿಯೂ ಕೂಡ ನೀನು ಸ್ವತಂತ್ರನಲ್ಲ. ಅವರು ಅಸ್ವತಂತ್ರನಾದ ನಿನ್ನನ್ನು ನಿಮಿತ್ತ ಮಾಡಿಕೊಂಡಿರುವ ಸ್ವತಂತ್ರನಾದ ಪರಬ್ರಹ್ಮನಾದ ವಿಷ್ಣುವಿನಿಂದ ದೇಹ ವಿಯೋಗವನ್ನು ಹೊಂದುವರು. ಬಂಧು ದರ್ಶನಾದ್ಯ ಭಾವದಿಂದ ನಿನಗೆ ದುಃಖವು ದುರಭಿಮಾನದಿಂದ ಬರುವುದು. ಅದನ್ನು ಪರಿತ್ಯಾಗ ಮಾಡಿ ಸ್ವವರ್ಣಾಶ್ರಮೋಚಿತವಾದ ಯುದ್ಧವನ್ನು ಮಾಡಿ ಪರಬ್ರಹ್ಮನಾದ ಶ್ರೀ ಕೃಷ್ಣನಿಗೆ ಅರ್ಪಣೆ ಮಾಡಿದರೆ ನಿನಗೆ ಮೋಕ್ಷ ರೂಪವಾದ ಮಹಾ ಪುರುಷಾರ್ಥವು ಸಂಭವಿಸುವುದು" ಎಂದು ಶ್ರೀ ಕೃಷ್ಣನು ಉಪದೇಶ ಮಾಡಿದ ಸಾಂಖ್ಯತತ್ವದ ಸಾರವು. **ಅದೇ ವೈಷ್ಣವ**

**ಶಾಸ್ತ್ರವು.*** ಪರಬ್ರಹ್ಮ ಸ್ವರೂಪವು, ಜೀವಸ್ವರೂಪವು, ಅವರುಗಳ ಸಂಬಂಧ ಪ್ರಕಾರವು, ಪರಬ್ರಹ್ಮನ ಮಹಿಮಾ ವರ್ಣನೆಯು ಇವುಗಳನ್ನು ಬೋಧಿಸುವ ತತ್ವ ಭಾಗಕ್ಕೆ ಸಾಂಖ್ಯವೆಂದು ಹೆಸರು. ದ್ವಿತೀಯ, ಸಪ್ತಮ, ನವಮ, ದಶಮ, ಏಕಾದಶ, ತ್ರಯೋದಶಾದಿ ಅಧ್ಯಾಯಗಳಲ್ಲಿರುವ ಈ ವಿಷಯ ಸಂಗ್ರಾಹಕವಾದ ಶ್ಲೋಕಗಳನ್ನು ಉದಾಹರಿಸಿ, ಅರ್ಥವನ್ನು ಹೇಳುವೆವು. ಶ್ರೀ ಕೃಷ್ಣನು ಅರ್ಜುನನ ಶೋಕವು ಅವಿವೇಕಮೂಲಕವಾದುದೆಂದು ಹೇಳುತ್ತಾನೆ :—

(1) **ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥**
—(2. 11.)

**ಅರ್ಥವು :—** ಎಲೈ ಅರ್ಜುನನೇ ! ಯಾರ ಸಂಹಾರವು ಶೋಕಾರ್ಹವಲ್ಲವೋ ಮತ್ತು ಸಂತೋಷಾರ್ಹವೋ ಅಂಥವರನ್ನು ಕುರಿತು ( ಅವರನ್ನು ಸಂಹರಿಸುವುದು ಹೇಗೆಂದು ) ನೀನು ಶೋಕಪಡುತ್ತಿದ್ದೀಯೆ ಮತ್ತು ಪ್ರಾಜ್ಞರಿಗೆ ಅಸಮ್ಮತವಾದ ( ಅಪ್ರಾಮಾಣಿಕವಾದ ) ಸ್ವಕಪೋಲಕಲ್ಪಿತವಾದ ಯುಕ್ತಿಗಳನ್ನು ನಿರೂಪಿಸಿರುತ್ತೀಯೆ. ( ಆಸನ್ನವಿನಾಶರಾದ ಎಂದರೆ ಸ್ವಲ್ಪ ಹೊತ್ತಿನಲ್ಲಿಯೇ ಮರಣವನ್ನು ಹೊಂದುವ ಬಂಧುಗಳು ಹೇಗೆ ಶೋಕಾನರ್ಹರು ಎಂದರೆ ಹೇಳುತ್ತಾನೆ :— ಎಲೈ ಅರ್ಜುನನೇ ! ಜ್ಞಾನಿಗಳು ಪ್ರಾಣದಿಂದ ಸಹಿತವಾಗಿ ಬದುಕಿರುವ ಬಂಧುಗಳನ್ನು ಕುರಿತು ಹೇಗೆ ಶೋಕಿಸುವುದಿಲ್ಲವೋ, ಹಾಗೆಯೇ ಮೃತ್ಯುವಿನ ಬಾಯಿಗೆ ಸಿಕ್ಕಿ ಬಿದ್ದು, ಆಸನ್ನವಿನಾಶರಾಗಿರುವವರನ್ನು ಕುರಿತು ಸಹ ಶೋಕವನ್ನು ಹೊಂದುವುದಿಲ್ಲ. ( ತತ್ವಜ್ಞಾನಿಗಳು ಬದುಕಿದವರ ವಿಷಯದಲ್ಲಿಯೂ ಕೂಡ

---

* ಭಗವದ್ಗೀಯ "ಸಾಂಖ್ಯವು" ಎಂದರೆ ಪರಮತತ್ತ್ವವು ವೈಷ್ಣವತತ್ತ್ವವೇ ಎಂದು ಕಣ್ಣಿದ್ದವರೆಲ್ಲರಿಗೂ ತೋರತಕ್ಕ ನಿಶ್ಚಯವು; ಉಭಯ ವಿದ್ಯಾಪಾರಂಗತರಾದ ಪ್ರೊಫೆಸರ್ ದಾಸಗುಪ್ತರೂ ಹಾಗೆಯೇ ಹೇಳಿರುತ್ತಾರೆ :—

"The Srimadbhagavadgita is the canonical work of the ekanti ( singularistic ) Vaishnavas." ......"The proofs in support of the view that the Bhagavadgita is a Vaisnava work will be discussed in the second volume......"

Surendra Nath Das Gupta, M.A., Ph. D.,
Professor of Sanskrit.

**ಅರ್ಥ :—** ಶ್ರೀ ಭಗವದ್ಗೀತೆಯು ಏಕಾಂತಿ ( ವಿಷ್ಣು ಮಾತ್ರ ಸರ್ವೋತ್ತಮವಾದಿಗಳಾದ ) ವೈಷ್ಣವರ ಶಾಸ್ತ್ರ ಗ್ರಂಥವಾಗಿರುತ್ತದೆ. ಭಗವದ್ಗೀತೆಯು ವೈಷ್ಣವ ಗ್ರಂಥವೆಂಬ ವಿಷಯದಲ್ಲಿ ರುಜುವಾತುಗಳು ಎರಡನೆಯ ವಾಲ್ಯೂಂನಲ್ಲಿ ವಿಮರ್ಶಿಸಲ್ಪಡುವುವು.

ಅವರು ಸತ್ತು ಹೋಗುತ್ತಾರಲ್ಲಾ ಎಂದು ಶೋಕವನ್ನು ಹೊಂದುವುದಿಲ್ಲ ಎಂದು ಸಂಕ್ಷೇಪಾರ್ಥವು. )

ಇದು ಪ್ರತಿಜ್ಞಾ ಶ್ಲೋಕವು. ಇನ್ನು ಮೇಲೆ ಭೀಷ್ಮದ್ರೋಣಾದಿಗಳ ಮರಣವು ಶೋಕಾನರ್ಹವೆಂಬಲ್ಲಿ ಪ್ರಾಮಾಣಿಕ ಯುಕ್ತಿಗಳನ್ನು ಶ್ರೀ ಕೃಷ್ಣನು ನಿರೂಪಿಸಬೇಕಾಗಿರುವುದು, ಶ್ರೀ ಕೃಷ್ಣನು ಸಂಕುಚಿತ ವಾಣಿಯಿಂದಲೇ ಅನೇಕ ವಿಕಲ್ಪಗಳಿಗೆ ಉತ್ತರವನ್ನು ಕೊಟ್ಟಿರುವನು. ರಣಾಂಗಣದಲ್ಲಿ ಗಾಂಡೀವ ನಿರ್ಮುಕ್ತವಾದ ಬಾಣಗಳ ತಾಡನದಿಂದ ಭೀಷ್ಮಾದಿಗಳ ಜೀವಸ್ವರೂಪವೇ ನಷ್ಟವಾಗುವುದೆಂದು ಶೋಕವೇ ? ಭೀಷ್ಮಾದಿ ಜೀವರುಗಳ ಬಾಹ್ಯ ಶರೀರವು ನಾಶವಾಗುವುದೆಂದು ಶೋಕವೇ ? ಅಥವಾ ಈಗಿರುವ ಜೀವ ಶರೀರ ಸಂಯೋಗವು ನಾಶವಾಗುವುದರಿಂದ ಅವರ ದರ್ಶನಾದಿಗಳಿಗೆ ಅವಕಾಶವು ತಪ್ಪಿ ಹೋಗುವುದೆಂದು ಶೋಕವೇ ? ಅಥವಾ ದೇಹಾತಿರಿಕ್ತವಾದ ಆತ್ಮವೇ ಇಲ್ಲದಿರುವುದರಿಂದ ಭೀಷ್ಮಾದಿಗಳ ದೇಹವು ನಾಶವಾದರೆ ಅವರು ಸರ್ವ ಪ್ರಕಾರದಿಂದಲೂ ನಷ್ಟರೇ ಆದರೆಂದು ಶೋಕವೇ ? ಇತ್ಯಾದಿ ನಾನಾ ವಿಕಲ್ಪಗಳನ್ನೂ ಮನಸ್ಸಿನಲ್ಲಿಟ್ಟುಕೊಂಡು, ಸರ್ವಜ್ಞನಾದ ಭಗವಂತನು ಇವುಗಳಿಗೆಲ್ಲಾ ಸ್ವಲ್ಪ ಮಾತಿನಿಂದಲೇ ಸಮಾಧಾನವನ್ನು ಹೇಳಿ, ಅರ್ಜುನನ ಮತ್ತು ಸಕಲ ಭಕ್ತ ಜನರ ಮೋಹವನ್ನು ಪರಿಹಾರ ಮಾಡಿರುವನು.

ಆದುದರಿಂದ ಪ್ರಥಮತಃ ಶ್ರೀ ಕೃಷ್ಣನು ಜೀವಾದಿ ಬಹು ವಸ್ತುಗಳು ನಿತ್ಯವಾದುವುಗಳು ಎಂದು ಉಪದೇಶ ಮಾಡಿ, ನಿತ್ಯ ವಸ್ತುಗಳು ನಾಶ ಹೊಂದುವುದಿಲ್ಲವಾದುದರಿಂದ ಶೋಕಕ್ಕೆ ಸರ್ವಥಾ ಕಾರಣವೇ ಇರುವುದಿಲ್ಲವೆಂದು ಉಪಪಾದಿಸುತ್ತಾನೆ. ತಥಾಹಿ :—

**(2) ನತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।**
**ನಚೈವ ನ ಭವಿಷ್ಯಾಮಃ ಸರ್ವೇ ವಯಮತಃಪರಂ ॥**

—(2. 12.)

---

ಡಾಕ್ಟರ್ ಪಾಲ್ ಯುವ್ಟಿಕ್ ಎಂಬಾತನೂ ಕೂಡ ಅನೇಕ ವಿದ್ವಾಂಸರು ಹೀಗೆಯೇ ಸಮ್ಮತಿಸಿರುತ್ತಾರೆಂದು ಸ್ವಭಿಪ್ರಾಯಪೂರ್ವಕವಾಗಿ ಹೇಳುತ್ತಾನೆ :—

"Many scholars agree that the Bhagavadgita is a moksha-shastra prodused in a Vishnava Church descended from the Katha Upanishad."

Paul Yevtic, B. Litt. Ph. D.

**ಅರ್ಥ :—** ಭಗವದ್ಗೀತೆಯು ಕಠೋಪನಿಷತ್ತಿನ ಆಧಾರದ ಮೇಲೆ ಪ್ರಾಪ್ತವಾಗಿರುವ, ವೈಷ್ಣವ ತತ್ವಜ್ಞರಿಂದ ರಚಿತವಾದ ಮೋಕ್ಷ ಶಾಸ್ತ್ರವೆಂದು ಅನೇಕ ವಿದ್ವಾಂಸರು ಸಮ್ಮತಿಸುತ್ತಾರೆ.

ಎಲೈ ಪಾರ್ಥನೇ ! ನಾನು ಹಿಂದೆ ಯಾವಾಗಲಾದರೂ ಇರಲಿಲ್ಲವೆಂದು ಅಲ್ಲ ಎಂದರೆ ನಾನು ಅನಾದಿ ಕಾಲದಿಂದಲೂ ಇದ್ದೇ ಇರುತ್ತೇನೆ. ನೀನು ಹಿಂದೆ ಇರಲಿಲ್ಲವೆಂದು ಅಲ್ಲ, ಎಂದರೆ ನೀನು ಅನಾದಿ ಕಾಲದಿಂದಲೂ ಇದ್ದೇ ಇರುತ್ತೀಯೆ. ಈ ಕ್ಷತ್ರಿಯ ರಾಜರು ಹಿಂದೆ ಇರಲಿಲ್ಲವೆಂದು ಅಲ್ಲ, ಎಂದರೆ ಇವರೆಲ್ಲರೂ ಹಿಂದೆ ಅನಾದಿ ಕಾಲದಿಂದಲೂ ಇದ್ದೇ ಇರುತ್ತಾರೆ. ನಾನು, ನೀನು, ಮತ್ತು ಈ ಜನಾಧಿಪರು ಇವರೆಲ್ಲರೂ ಉತ್ತರ ಕಾಲದಲ್ಲಿ ಇರುವುದಿಲ್ಲವೆಂದು ಅಲ್ಲ ಎಂದರೆ ಉತ್ತರ ಕಾಲದಲ್ಲೂ ಇರುತ್ತಾರೆ.

ಈ ಶ್ಲೋಕದಿಂದ ಪರಮಾತ್ಮನಾದ ಶ್ರೀ ಕೃಷ್ಣನೂ ಮತ್ತು ಸಕಲ ಚೇತನರೂ ಅನಾದಿ ನಿತ್ಯರೆಂದು ಹೇಳಿದ ಹಾಗಾಯಿತು. ಮತ್ತು ನ ತ್ವೇವಾಹಂ ಎಂಬಲ್ಲಿ "ತು" ಎಂಬ ವಿಶೇಷ ಶಬ್ದ ಪ್ರಯೋಗದಿಂದ ಶ್ರೀ ಕೃಷ್ಣನು ವಿಶೇಷ ರೂಪವಾಗಿ ಅನಾದಿ ನಿತ್ಯನಾಗಿರುವನೆಂದೂ ಸೂಚಿಸಲ್ಪಟ್ಟಿರುವುದು. "ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾಂ" ಎಂಬ ಶ್ರುತಿಯಿಂದ ಈ ವಿಶೇಷವು ಸಿದ್ಧವಾಗುವುದು. ಮುಂದೆ ಶ್ರೀ ಕೃಷ್ಣನೂ ಸಹ ತನಗೂ ಮತ್ತು ತನ್ನಂತೆ ನಿತ್ಯರಾದ ಇತರ ಚೇತನರಿಗೂ ಇರುವ ತಾರತಮ್ಯವನ್ನು ವಿಶದವಾಗಿ ನಿರೂಪಿಸಿರುತ್ತಾನೆ.

ಆದರೆ ಅನಾದಿನಿತ್ಯ ಪದಾರ್ಥಗಳು ಇರುವುದೆಂದರೇನು ? ದೃಷ್ಟಾಂತವಿಲ್ಲದುದರಿಂದ ಇವೆಲ್ಲವೂ ಸ್ವಂತ ಕಲ್ಪನೆಯೆಂದು ಮಂದರು ಆಶಂಕಿಸುವರು. ಯುಕ್ತಿ ಶಾಸ್ತ್ರದಲ್ಲಿ ಪಾರಂಗತತೆಯನ್ನು ಹೊಂದಿದ ಪರಾಪರ ನಿಖಿಲ ತತ್ವಜ್ಞನಾದ ಶ್ರೀ ಕೃಷ್ಣನು ಅನೇಕ ದೃಷ್ಟಾಂತಗಳನ್ನು ಉದಾಹರಿಸಿ ಅನೇಕ ನಿತ್ಯ ಪದಾರ್ಥಗಳು ಇರುವುವೆಂದು ತಿಳಿಸಿರುತ್ತಾನೆ :—

**(3) ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಂತ ಸ್ತ್ವನಯೋ ಸ್ತತ್ವದರ್ಶಿಭಿಃ ॥**
—(2. 16.)

ಅಸತಃ = ( ಅವ್ಯಕ್ತಸ್ಯ ) ಅವ್ಯಕ್ತವಾದ ಜಗದುಪಾದಾನ ಕಾರಣವಾದ ಮೂಲ ಪ್ರಕೃತಿಗೂ, ಪ್ರಕೃತಿಗೆ ಅಭಿಮಾನಿಯಾದ ಚೇತನ ಪ್ರಕೃತಿಗೂ, ಅಭಾವಃ ಎಂದರೆ ಹಿಂದಾಗಲೀ, ಉತ್ತರ ಕಾಲದಲ್ಲಾಗಲೀ ನಾಶವು ಇರುವುದಿಲ್ಲ. ಚೇತನಾಚೇತನ ಪ್ರಕೃತಿಗಳು ಅನಾದಿನಿತ್ಯ ಪದಾರ್ಥಗಳೆಂದು ತಾತ್ಪರ್ಯವು. ಸತಃ = ಪರಬ್ರಹ್ಮನಿಗೆ, ಅಭಾವವು ಎಂದರೆ ಹಿಂದಾಗಲೀ, ಉತ್ತರ ಕಾಲದಲ್ಲಾಗಲೀ ನಾಶವು ಇರುವುದಿಲ್ಲ. ಪರಬ್ರಹ್ಮನು ಅನಾದಿ ನಿತ್ಯನೆಂದು ತಾತ್ಪರ್ಯವು. ಪ್ರಕೃತಿ ಪರಬ್ರಹ್ಮರಿಬ್ಬರೂ ಅನಾದಿನಿತ್ಯರೆಂಬ ನಿರ್ಣಯವು ತತ್ವದರ್ಶಿಗಳಿಂದ ನಿಶ್ಚಯಿಸಲ್ಪಟ್ಟಿದೆ. *

---

* ತತ್ವದರ್ಶಿಭಿರಪಿದೃಷ್ಟಃ ಎಂದು ಯೋಜನೆಯನ್ನು ಮಾಡಿದರೆ ತತ್ವದರ್ಶಿಗಳಾದ ಮಹಾಜ್ಞಾನಿಗಳಿಂದಲೂ ನಿಶ್ಚಯಿಸಲ್ಪಟ್ಟಿದೆ ಎಂದು ಅರ್ಥವಾಗುವುದು. ಆದರಿಂದ "ಪ್ರಕೃತಿಃ ಪುರುಷ

ಪ್ರಕೃತಿ ಪರಮಾತ್ಮರಲ್ಲದೆ ಇನ್ನೂ ಅನೇಕ ನಿತ್ಯ ಪದಾರ್ಥಗಳಿರುವುವೆಂದು ಶ್ರೀ ಕೃಷ್ಣನು ಹೇಳುತ್ತಾನೆ :—

**(4) ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಂ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥**

—(2. 17.)

ಎಲೈ ಪಾರ್ಥನೇ ! ಯಾವುದು ಸರ್ವತ್ರವ್ಯಾಪ್ತವೋ ಅದೆಲ್ಲವೂ ಅವಿನಾಶಿಗಳು ಎಂದರೆ ಸ್ವಭಾವತಃ ವಿನಾಶರಹಿತವಾದವುಗಳು, ಎಂದರೆ ನಿತ್ಯವೇ ಎಂದು ವ್ಯಾಪ್ತಿಯಿರುವುದೆಂದು ನೀನು ತಿಳಿಯುವವನಾಗು. (ಇದರಿಂದ ಅಕಾರಾದಿ ವರ್ಣಗಳು, ಅವ್ಯಾಕೃತಾಕಾಶ, ಮುಂತಾದ ಅನೇಕ ಪದಾರ್ಥಗಳಿಗೆ ನಿತ್ಯತ್ವವು ಸಿದ್ಧವಾಯಿತು.) ಈ ವಾಕ್ಯದಿಂದ ಜೀವವು ನಿತ್ಯ ಪದಾರ್ಥವೆಂಬಲ್ಲಿ ಅನಂತ ದೃಷ್ಟಾಂತಗಳು ದೊರೆತರೂ, ಶಾಪಾದಿಪ್ರಯುಕ್ತವಾಗಿ ಸ್ವಾಭಾವಿಕನಾದ ಜೀವ ನಿತ್ಯತ್ವವೂ ಕೂಡ ಯಾತಕ್ಕೆ ನಾಶ ಹೊಂದಬಾರದು ಎಂಬ ಶಂಕೆಯನ್ನು ಶ್ರೀ ಕೃಷ್ಣನು ಇದೇ ಶ್ಲೋಕದ ಉತ್ತರಾರ್ಧದಿಂದಲೇ ಪರಿಹರಿಸುವನು :— ಎಲೈ ಪಾರ್ಥನೇ ! ನಿತ್ಯವಾದ ವಸ್ತುವಿನ ವಿನಾಶವನ್ನು ಯಾವನೂ ಮಾಡಲಾರನು. **ಕಶ್ಚಿದಪಿ ಕರ್ತುಂ ನಾರ್ಹತಿ = ಚತುರ್ಮುಖ** ಬ್ರಹ್ಮನೂ ಕೂಡ ಮಾಡಲಾರನು ಎಂದು ಅರ್ಥವು. *

ಈ ರೀತಿಯಾಗಿ ಪ್ರಕೃತಿ, ಪರಮಾತ್ಮವ್ಯಾಪ್ತವಾದ, ಗಗನಾದಿಗಳ ದೃಷ್ಟಾಂತದಿಂದ ಶ್ರೀ ಕೃಷ್ಣನು ಜೀವನಿತ್ಯತ್ವವನ್ನು ಸಮರ್ಥನೆ ಮಾಡಿರುವನು. ಇನ್ನೂ ಕೆಲವು ಶ್ಲೋಕಗಳಿಂದ ಶ್ರೀ ಕೃಷ್ಣನು ಜೀವನಿತ್ಯತ್ವ ವಿಷಯದಲ್ಲಿ ಪ್ರಕಾರಾಂತರದಿಂದ ಪ್ರಾಪ್ತವಾಗುವ ಶಂಕೆಗಳನ್ನು ಪರಿಹರಿಸಿ ಜೀವಸ್ವರೂಪವು ಸರ್ವ ಪ್ರಕಾರದಿಂದಲೂ ನಿತ್ಯವು ಎಂಬ ನಿರ್ಣಯವನ್ನು ತೋರಿಸಿರುವನು. ತಥಾಹಿ :—

ಯದ್ಯಪಿ ಜೀವನು ಸ್ವರೂಪತಃ ನಾಶರಹಿತನೆಂದು ಉಪಪಾದಿಸಲ್ಪಟ್ಟಿತು. ಆದರೂ "**ರೂಪಂ ರೂಪಂ ಪ್ರತಿರೂಪೋಬಭೂವ**" ಎಂಬ ಕಾಠಕ ಶ್ರುತಿಯಲ್ಲಿ ಜೀವನು ಪರಮಾತ್ಮನ ಪ್ರತಿಬಿಂಬನೆಂದು ನಿರೂಪಿಸಲ್ಪಟ್ಟಿರುವುದು. ಪ್ರತಿಬಿಂಬವು ಕನ್ನಡಿಯಲ್ಲಿ ಕಾಣುವ ಪ್ರತಿಮುಖದಂತೆ ಉಪಾಧಿಕೃತವೆಂದು ಲೋಕದಲ್ಲಿ ದೃಷ್ಟವಾಗಿರುವುದು. ದರ್ಪಣ ರೂಪವಾದ ಉಪಾಧಿಯಿಂದ ಪ್ರತಿಮುಖವು

---

ಶ್ಚೈವ ನಿತ್ಯೌ ಕಾಲಶ್ಚ ಸತ್ತಮ" ಇತ್ಯಾದಿ ವಿಷ್ಣು ಪುರಾಣಾದಿ ಆಗಮಗಳೂ ಈ ವಿಷಯದಲ್ಲಿ ಪ್ರಮಾಣವಾಗಿರುವುವು ಎಂದು ಸೂಚಿತವಾಗುತ್ತದೆ

* ಅಥವಾ ಕಶ್ಚಿತ್ = ಅಚಿಂತ್ಯ ಪ್ರಭಾವವುಳ್ಳ ಪರಬ್ರಹ್ಮನೂ ಕೂಡ ತನ್ನ ಇಚ್ಛೆಯಿಂದಲೇ ನಿತ್ಯ ಪದಾರ್ಥಗಳ ನಿತ್ಯತ್ವವನ್ನು ನಾಶ ಮಾಡುವುದಿಲ್ಲ. "ಕ" ಶಬ್ದವು ಪರಮಾತ್ಮವಾಚಕವೆಂದು ವಿಷ್ಣು ಸಹಸ್ರನಾಮದಿಂದ ವಿದಿತವಾಗುವುದು.

ಉತ್ಪನ್ನವಾಗುತ್ತದೆ. ಅದು ಅನಿತ್ಯವು. ಹೀಗೆಯೇ ಜೀವನು ಪ್ರತಿಬಿಂಬನಾಗುವುದಾದರೆ ದೇಹರೂಪವಾದ ಉಪಾಧಿಜನ್ಯನಾಗಬೇಕಾಗುವುದರಿಂದ ಜೀವನು ಉತ್ಪನ್ನನು ಮತ್ತು ವಿನಾಶಿಯು ಎಂದು ಪ್ರಾಪ್ತವಾಗುವುದು. ಜೀವರೂಪ ಪ್ರತಿಬಿಂಬಕ್ಕೆ ಕಾರಣವಾದ ಉಪಾಧಿಯು ಸ್ಥೂಲ ದೇಹವು; ಅದು ಅನಿತ್ಯವಾದುದರಿಂದ ಅನಿತ್ಯೋಪಾಧಿಜನ್ಯವಾದ ಜೀವಾಖ್ಯ ವಸ್ತುವೂ ಅನಿತ್ಯವೇ. ಹೀಗಿರುವಲ್ಲಿ ಸಕಲ ಜೀವರುಗಳೂ ನಿತ್ಯರು ಎಂದು ಹೇಳುವುದು ಹೇಗೆ ಎಂಬ ಶಂಕಾಶೂಲವನ್ನು ನಿರ್ಮೂಲ ಮಾಡುವ ಅಮೋಘವಾದ ವಾಙ್ಮಯಾಸ್ತ್ರವನ್ನು ಶ್ರೀ ಕೃಷ್ಣನು ಪ್ರಯೋಗಿಸಿರುತ್ತಾನೆ :—

(5) **ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವಭಾರತ ॥**
—(2. 18.)

ಎಲೈ ಅರ್ಜುನನೇ ! ಸ್ವರೂಪತಃ ನಿತ್ಯರಾದ ಮತ್ತು ಶರೀರದಿಂದ ಸಹಿತರಾಗಿರುವ ಈ ಯೋಧರುಗಳ ಸ್ಥೂಲ ದೇಹಗಳು ನಾಶ ಹೊಂದತಕ್ಕವುಗಳೇ. ( ಏವಂಚ ಜೀವನು ಪ್ರತಿಬಿಂಬನಾಗುವದರಲ್ಲಿ ಸ್ಥೂಲ ದೇಹವು ಉಪಾಧಿಯಲ್ಲ. ಜೀವ ಚೇತನನು ವಿಲಕ್ಷಣ ಪದಾರ್ಥವು ದರ್ಪಣಾದಿಗಳಿಂದ ಪ್ರತಿ ಮುಖವು ಉತ್ಪನ್ನವಾಗುವಂತೆ ಜೀವನು ದೇಹರೂಪವಾದ ಉಪಾಧಿಯಿಂದ ಉತ್ಪನ್ನನಾಗುವನಲ್ಲ. **ಚೇತನನೇ ಉಪಾಧಿಯು ಮತ್ತು ಚೇತನನೇ ಪ್ರತಿಬಿಂಬವು.** ಜೀವ ಸ್ವರೂಪಾನತಿರಿಕ್ತವಾದ ಉಪಾಧಿಯು ಅನಿತ್ಯವಲ್ಲವಾದುದರಿಂದ ಪ್ರತಿಬಿಂಬನಾದ ಜೀವನು ಅನಿತ್ಯವಲ್ಲವೆಂದು ಭಾವವು. )

ಆದರೂ ಮತ್ತೊಂದು ಶಂಕೆಯು ಉಳಿದಿರುವುದು. ಪ್ರತಿಬಿಂಬವು ಉಪಾಧಿ ನಾಶದಿಂದ ನಾಶ ಹೊಂದಿ ಅನಿತ್ಯವಾಗುವುದು. ಬಿಂಬೋಪಾಧಿಗಳ ಸನ್ನಿಧಿನಾಶದಿಂದಲೂ ನಾಶ ಹೊಂದುವುದು. ಜೀವನಿಗೆ ಸ್ವರೂಪಾತಿರಿಕ್ತ ಉಪಾಧಿಯು ಇಲ್ಲವಾದುದರಿಂದ ಉಪಾಧಿನಾಶಪ್ರಯುಕ್ತ ಅನಿತ್ಯತ್ವವು ಪ್ರಾಪ್ತವಾಗಲಾರದು. ಆದರೆ ಬಿಂಬನಾಶ ಪ್ರಯುಕ್ತನಾಶವಾಗಲೀ ಅಥವಾ ಬಿಂಬೋಪಾಧಿ ಸನ್ನಿಧಿನಾಶ ಪ್ರಯುಕ್ತ ನಾಶವಾಗಲೀ ಯಾತಕ್ಕೆ ಆಗಬಾರದು ಎಂಬ ಪ್ರಶ್ನೆಗೂ " **ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ** " ಎಂಬ ಉತ್ತರಾರ್ಧದಿಂದ ಶ್ರೀ ಕೃಷ್ಣನು ಸಮಾಧಾನವನ್ನು ಹೇಳಿರುತ್ತಾನೆ. ಅದೇನೆಂದರೆ, ಎಲೈ ಅರ್ಜುನನೇ ! ಅನಾಶಿಯಾದ ಎಂದರೆ ಸರ್ವ ಪ್ರಕಾರದಿಂದ ನಾಶರಹಿತನಾದ ಮತ್ತು ಅಪ್ರಮೇಯನಾದ ಎಂದರೆ ಸರ್ವತ್ರ ವ್ಯಾಪ್ತನಾದ ಶ್ರೀ ಪರಮಾತ್ಮನ ಪ್ರತಿಬಿಂಬನಾದ ಈ ಜೀವನ ಭೌತಿಕ ದೇಹಗಳು ಮಾತ್ರವೇ ನಾಶ ಹೊಂದುವುವು.

ಏವಂಚ, ಜೀವನು ಪರಮಾತ್ಮನ ಪ್ರತಿಬಿಂಬನು. ಆದರೆ ಸ್ವಸ್ವರೂಪಾತಿರಿಕ್ತವಾದ ಉಪಾಧಿಯಿಂದ ಜನ್ಯವಾದ ಪ್ರತಿಬಿಂಬವಲ್ಲ. ನಾಶ ಹೊಂದತಕ್ಕ

ಸ್ಥೂಲ ದೇಹವು ಉಪಾಧಿಯೇ ಅಲ್ಲ. ಬಿಂಬನಾದ ಪರಬ್ರಹ್ಮನು ನಾಶರಹಿತನು. ಆದುದರಿಂದ ಬಿಂಬನಾಶ ಪ್ರಯುಕ್ತವಾದ ನಾಶವು ಪ್ರತಿಬಿಂಬ ಜೀವನಿಗಿರುವುದಿಲ್ಲ. ಮತ್ತು ಬಿಂಬನಾದ ಪರಮಾತ್ಮನು ಸರ್ವತ್ರವ್ಯಾಪ್ತನಾದುದರಿಂದ ಬಿಂಬಸನ್ನಿಧಾನ ನಾಶಪ್ರಯುಕ್ತವಾದ ನಾಶವು ಪ್ರತಿಬಿಂಬನಾದ ಜೀವನಿಗಿರುವುದಿಲ್ಲ. *

ಹೀಗೆ ಶ್ರೀ ಕೃಷ್ಣನು ಜೀವನಿತ್ಯತ್ವವನ್ನು ಅನೇಕ ದೃಷ್ಟಾಂತಗಳಿಂದ ಉಪಪಾದಿಸಿ ಹೇಳಿ, ಪ್ರತಿಬಿಂಬನಾದ ಪ್ರಯುಕ್ತವಾಗಿ, ಜೀವನು ಅನಿತ್ಯನು ಯಾತಕ್ಕೆ ಆಗಬಾರದೆಂಬ ಶಂಕೆಯನ್ನೂ ಪರಿಹರಿಸಿರುತ್ತಾನೆ.

3. ಮತ್ತೊಂದು ವಿಧವಾಗಿಯೂ (ಶಸ್ತ್ರ ಶಾಪಾದಿ ಪ್ರಬಲ ನಿಮಿತ್ತದಿಂದಲೂ ಕೂಡ) ಜೀವನು ನಾಶ ಹೊಂದದ ಸ್ವರೂಪವುಳ್ಳ ನಿತ್ಯ ಪದಾರ್ಥನೆಂದು ಶ್ರೀ ಕೃಷ್ಣನು ಹೇಳಿರುತ್ತಾನೆ :—

**(6) ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥**
—(2. 23.)

ಈ ಜೀವನನ್ನು ಖಡ್ಗಾದಿ ಶಸ್ತ್ರಗಳು ಛೇದನ ಮಾಡಲಾರವು. ಅಗ್ನಿಯು ಸುಡುವುದಿಲ್ಲ. ಜಲವು ತೋಯಿಸುವುದಿಲ್ಲ. ಗಾಳಿಯು ಶೋಷಿಸುವುದಿಲ್ಲ (ಒಣಗಿಸಿ ಶೈಥಿಲ್ಯವನ್ನುಂಟು ಮಾಡುವುದಿಲ್ಲ.)

---

* **ಅನಾಶಿನೋಽಪ್ರಮೇಯಸ್ಯ ಜೀವಸ್ಯ ದೇಹಾ ಅಂತವಂತಃ** ಎಂದರೆ **ಅನಾಶಿಬ್ರಹ್ಮಸದೃಶಸ್ಯ ಅಪ್ರಮೇಯ ಬ್ರಹ್ಮಸದೃಶಸ್ಯ ಜೀವಸ್ಯ ದೇಹಾ ಅಂತವಂತಃ** ಎಂದು ಅರ್ಥವನ್ನು ಮಾಡಬೇಕು.

ನಿತ್ಯಸ್ಯ ಎಂದು ಶ್ರೀ ಕೃಷ್ಣನು ಹೇಳಿರುವುದರಿಂದ ಪೌನರುಕ್ತ್ಯ ದೋಷ ಪರಿಹಾರಾರ್ಥವಾಗಿ ಅನಾಶಿ ಶಬ್ದವನ್ನು ಹೇತುಗರ್ಭವಾಗಿ ಸ್ವೀಕರಿಸಿ ಅನಾಶಿ ಬ್ರಹ್ಮಸದೃಶಸ್ಯ ಎಂದೂ, ಅಣುವಾದ ಜೀವನಲ್ಲಿ ಅಪ್ರಮೇಯತ್ವವು i. ಅಣುರ್ಹ್ಯೇಷ ಆತ್ಮಾ ಚೇತಸಾ ವೇದಿತವ್ಯೋ ಯಸ್ಮಿನ್ ಪ್ರಾಣಃ ಪಂಚಧಾ ಸಂವಿವೇಶ; ii. ಅಣುರ್ವಾಹ್ಯೇಷ ಆತ್ಮಾಯಂವಾ ಏತೇ ಸಿನೀತಃ iii. ವಾಲಾಗ್ರಶತ ಭಾಗಸ್ಯ ಶತಧಾ ಕಲ್ಪಿತಸ್ಯ ಚ । ಭಾಗೋ ಜೀವಃ ಸ ವಿಜ್ಞೇಯಃ ಇತ್ಯಾದಿ ಶ್ರುತಿಗಳಿಗೂ iv. ಅಣುಶ್ಚ v. ಉತ್ಕ್ರಾಂತಿ ಗತ್ಯಾಗತೀನಾಂ ಇತ್ಯಾದಿ ಸೂತ್ರಗಳಿಗೂ ವಿರುದ್ಧವಾಗಿರುವುದರಿಂದ ಅತದ್ಭಾವೇ ಸಾಮಾನಾಧಿಕರಣ್ಯಂ ಸಾರೂಪ್ಯಂ ಗಮಯತಿ ಎಂಬ ನ್ಯಾಯಾನುಸಾರವಾಗಿ ಅಪ್ರಮೇಯಪರ ಬ್ರಹ್ಮ ಸದೃಶಸ್ಯ ಎಂದೂ ಅರ್ಥವನ್ನು ಮಾಡಬೇಕು. ಸಿಂಹೋಮಾಣವಕಃ ಇತ್ಯಾದಿ ಇಂಥ ಬಹು ಪ್ರಯೋಗಗಳು ಲೋಕದಲ್ಲಿ ಪ್ರಸಿದ್ಧವಾಗಿರುವುವು.

ಅನಾಶಿನೋಽಪ್ರಮೇಯಸ್ಯ ಎಂಬಲ್ಲಿರುವ ಷಷ್ಠೀ ವಿಭಕ್ತಿ ಪ್ರತ್ಯಯವೂ ಕೂಡ ಜೀವನು ಪರಮಾತ್ಮನ ಅಧೀನನು (ಪ್ರತಿಬಿಂಬನು) ಎಂಬ ಅರ್ಥವನ್ನು ಕೊಡುತ್ತದೆ.

ಶ್ರೀಕೃಷ್ಣನು ಇದರಲ್ಲಿ ಕಾರಣವನ್ನೂ ಹೇಳುತ್ತಾನೆ :—

**(7) ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।**
**ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥**

—(2. 24.)

ಈ ಜೀವನು ಛೇದನಾರ್ಹವಾದ ಪದಾರ್ಥವಲ್ಲ. ದಾಹಾರ್ಹವಾದ ಪದಾರ್ಥವೇ ಅಲ್ಲ. ಒದ್ದೆಯಾಗತಕ್ಕ ಪದಾರ್ಥವಲ್ಲ. ಯಾತಕ್ಕೆಂದರೆ ಈತನು ಸರ್ವದಾ ಸರ್ವತ್ರವ್ಯಾಪ್ತನಾದ ನಿರ್ವಿಕಾರನಾದ ಪ್ರಾಕೃತ ಚಲನರಹಿತನಾದ ಪರಮಾತ್ಮನ ಪ್ರತಿಬಿಂಬನು, ಮತ್ತು ವಿಧಿನಿಷೇಧಬದ್ಧನು. ಅಥವಾ ಈ ಜೀವನು ಸದಾ ಸರ್ವತ್ರ ವ್ಯಾಪ್ತನಾದ ಹರಿಯಲ್ಲಿ ಸ್ಥಿತನಾಗಿರುವ ಅಣು ಪದಾರ್ಥವು. ಯಾವ ನಿಮಿತ್ತಗಳಿಂದಲೂ ನಾಶ ಹೊಂದತಕ್ಕವನಲ್ಲ ಮತ್ತು ವಿಧಿಬದ್ಧನು. ( ಈ ರೀತಿಯಾದ ಈ ಶ್ಲೋಕದ ದ್ವಿತೀಯಾರ್ಥವು **" ನಿತ್ಯಂ ಸರ್ವಗತೇ ವಿಷ್ಣಾವಣುರ್ಜೀವೋ ವ್ಯವಸ್ಥಿತಃ "** ಎಂಬ ವಿಷ್ಣು ಪುರಾಣ ಶ್ಲೋಕದಿಂದಲೂ ಸಿದ್ಧವಾಗುವುದು. )

ಈ ರೀತಿಯಾಗಿ ಜೀವಾತ್ಮನು ನಿತ್ಯನೆಂದು ಶ್ರೀ ಕೃಷ್ಣನು ಮೂರು ಪ್ರಕಾರವಾಗಿ ಸಮರ್ಥಿಸಿರುವನು. ಆದುದರಿಂದ ಜೀವನು ಸ್ವರೂಪತಃ ನಷ್ಟವಾಗುವನೆಂಬ ಭೀತಿಯಿಂದ ಅರ್ಜುನನು ವಿಷಾದಪಡಲು ಕಾರಣವಿಲ್ಲವೆಂದು ತೋರಿಸಿದ ಹಾಗಾಯಿತು.

2. ಈ ಪ್ರಸಂಗದಲ್ಲಿ ಮತ್ತೊಂದು ಶಂಕೆಯು ಅವರ್ಜನೀಯವಾಗಿ ಪ್ರಾಪ್ತವಾಗುವುದು. ಜೀವನೂ ನಿತ್ಯನು; ಪರಮಾತ್ಮನೂ ನಿತ್ಯನು; ಹೀಗಿರುವಲ್ಲಿ, ಜೀವ ಪರಮಾತ್ಮರಿಗೆ ಸರ್ವ ಸಾಮ್ಯವೇ ಪ್ರಾಪ್ತವಾಯಿತಲ್ಲವೇ ಎಂಬ ಅರ್ಜುನನ ಮನಸ್ಸಿನಲ್ಲಿ ಉತ್ಪನ್ನವಾದ ಶಂಕೆಯನ್ನು ಪರಿಹರಿಸುವವನಾಗಿ, ಮತ್ತು ಯುದ್ಧಕರ್ಮದಲ್ಲಿ ಅರ್ಜುನನಿಗಿದ್ದ ಸ್ವಾತಂತ್ರ್ಯ ಭ್ರಮವನ್ನೂ ನಿವಾರಣೆ ಮಾಡುವವನಾಗಿ ಶ್ರೀಕೃಷ್ಣನು ಇದೇ ಶ್ಲೋಕಗಳಿಂದ ಪರಬ್ರಹ್ಮ ಸ್ವರೂಪವನ್ನೂ ವರ್ಣನೆ ಮಾಡಿರುತ್ತಾನೆ. ತಥಾಹಿ :— " ನತ್ವೇವಾಹಂ ಜಾತುನಾಸಂ " ಎಂಬಲ್ಲಿ **" ತು "** ಶಬ್ದದಿಂದ ಶ್ರೀ ಕೃಷ್ಣನು ಅರ್ಜುನಾದಿ ಚೇತನರಿಗಿಂತ ತನ್ನಲ್ಲಿ ಒಂದು ವೈಲಕ್ಷಣ್ಯವುಂಟೆಂದು ಸೂಚಿಸಿರುತ್ತಾನೆ. ಅದನ್ನೇ ಈಗ ವಿಸ್ತರಿಸುತ್ತಾನೆ :—

**(1) ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಂ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥**

—(2. 17.)

ಈ ಪ್ರಮಿತವಾದ ಸರ್ವ ಜಗತ್ತೂ, ಕಾಲವೂ, ಸರ್ವ ಸದ್ಗುಣವೂ ಯಾವನಿಂದ ವ್ಯಾಪ್ತವಾಗಿರುವುವೋ ಎಂದರೆ ಯಾವನು ದೇಶತಃ ಕಾಲತಃ ಗುಣತಃ ಪರಿಪೂರ್ಣನೋ ಅಂಥ ಪರಬ್ರಹ್ಮನು ಅವಿನಾಶಿಯು ಎಂದರೆ ಚತುರ್ವಿಧ ನಾಶ

ರಹಿತನು.* ಸರ್ವ ಪ್ರಕಾರದಿಂದ ನಾಶರಹಿತನಾದ ಪರಮಾತ್ಮನಿಗೆ ವಿನಾಶವನ್ನು ಉಂಟು ಮಾಡಲು ಯಾರೂ ಸಮರ್ಥರಲ್ಲ.

ಜೀವರುಗಳು ಸ್ವರೂಪತಃ ನಾಶರಹಿತರಾದರೂ ದೇಹನಾಶಾದಿಗಳನ್ನು ಉಳ್ಳವರೆಂದು ಶ್ರೀ ಕೃಷ್ಣನು ಬೋಧಿಸುತ್ತಾನೆ :—

**(2) ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥**

—(2. 18.)

ಸ್ವರೂಪತಃ ನಿತ್ಯನಾದ ಈ ಶರೀರಿಯ ಪರಿದೃಶ್ಯಮಾನವಾದ ಭೌತಿಕ ದೇಹಗಳು ನಾಶ ಹೊಂದತಕ್ಕವುಗಳೇ. ಆದುದರಿಂದ ಎಲೈ ಭರತಕುಲೋತ್ಪನ್ನನಾದ ಅರ್ಜುನನೇ ! ಚತುರ್ವಿಧ ನಾಶರಹಿತನೂ, ದೇಶತಃ ಕಾಲತಃ ಗುಣತಃ ಅಪರಿಚ್ಛಿನ್ನನೂ (ಅನಂತನೂ) ಆದ ಪರಮಾತ್ಮನ ಪೂಜಾರ್ಥವಾಗಿ ನೀನು ಯುದ್ಧ ಮಾಡು.

ಏವಂಚ ಜೀವಪರಮಾತ್ಮರಿಬ್ಬರೂ ಸ್ವರೂಪತಃ ನಿತ್ಯರಾದರೂ ಪರಮಾತ್ಮನು ಪೂರ್ಣನಾದುದರಿಂದ ಸ್ವತಂತ್ರನು, ಚತುರ್ವಿಧ ನಾಶರಹಿತನು, ಮತ್ತು ಸರ್ವತ್ರ ವ್ಯಾಪ್ತನು. ಜೀವನು ಅಲ್ಪನು, ಅಸ್ವತಂತ್ರನು, ಮತ್ತು ದೇಹನಾಶ ರೂಪವಾದ ನಾಶವನ್ನು ಹೊಂದತಕ್ಕವನು ಎಂದು ಸಿದ್ಧವಾಯಿತು. ಪ್ರತಿಬಿಂಬನಾದುದರಿಂದಲೂ ಜೀವನು ಅಸ್ವತಂತ್ರನು ಎಂದು ಸಿದ್ಧವಾದ ವಿಷಯವೇ ಆಗಿರುತ್ತದೆ. ಬಿಂಬಾಧೀನವು ಪ್ರತಿಬಿಂಬವೆಂದು ಸರ್ವಸಮ್ಮತವಾದ ಪ್ರಮೇಯವು.

ಜೀವನಿತ್ಯತ್ವ ಪಾರತಂತ್ರ್ಯಗಳೆರಡನ್ನೂ ಶ್ರೀ ಕೃಷ್ಣನು ಒಂದೇ ಶ್ಲೋಕದಲ್ಲಿ ಸಂಗ್ರಹಿಸಿ ನಾನೇ ದುರ್ಯೋಧನಾದಿಗಳನ್ನು ಕೊಲ್ಲುವವನು ಎಂಬ ಅರ್ಜುನನ ಸ್ವಾತಂತ್ರ್ಯಭ್ರಮವನ್ನೂ ಪರಿಹರಿಸುತ್ತಾನೆ :—

---

*** ಅನಿತ್ಯತ್ವಂ ದೇಹಹಾನಿರ್ದುಃಖಪ್ರಾಪ್ತಿರಪೂರ್ಣತಾ ।**
**ನಾಶಶ್ಚತುರ್ವಿಧಃ ಪ್ರೋಕ್ತಸ್ತದಭಾವೋ ಹರೇಃ ಸದಾ ॥**

ಇತ್ಯಾದಿ ಪ್ರಮಾಣಾನುಸಾರವಾಗಿ ಶ್ರೀ ಪರಮಾತ್ಮನಿಗೆ ಸ್ವರೂಪನಾಶ, ದೇಹನಾಶ, ದುಃಖಪ್ರಾಪ್ತಿ, ಅಪೂರ್ಣತೆ ಎಂಬ ನಾಲ್ಕು ವಿಧವಾದ ನಾಶಗಳೂ ಇರುವುದಿಲ್ಲ. ದ್ವಿತೀಯಾಧ್ಯಾಯದ ಈ ಶ್ಲೋಕಗಳು ಸಂಕ್ಷೇಪವಾಗಿ ಅಧ್ಯಾತ್ಮ ತತ್ವವನ್ನು ಬೋಧಿಸುವುವಾದುದರಿಂದ ಕೆಲವು ಶ್ಲೋಕಗಳು ಜೀವಪರವಾಗಿಯೂ ಮತ್ತು ಪರಮಾತ್ಮಪರವಾಗಿಯೂ ಅರ್ಥವನ್ನು ಕೊಡುವುವು. ಆದುದರಿಂದ ಆಕಾಂಕ್ಷಾನುಸಾರವಾಗಿ ಮತ್ತು ನಿರವಕಾಶವಾದ ಪ್ರಮಾಣಾಂತರಗಳಿಗೆ ಅವಿರುದ್ಧವಾಗಿ ಅರ್ಥವನ್ನು ಮಾಡಬೇಕು.

(3) ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಂ ।
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥
—(2. 19.)

ಯಾವಾತನು ಒಬ್ಬ ಜೀವನು ಮತ್ತೊಬ್ಬನನ್ನು ಸ್ವತಂತ್ರವಾಗಿ ಕೊಲ್ಲುವನೆಂದು ತಿಳಿಯುವನೋ, ಮತ್ತು ಯಾವಾತನು ಶತ್ರುವಿನಿಂದ ಮರಣ ಹೊಂದಿದ ಜೀವನು ಸ್ವರೂಪೇಣ ನಾಶ ಹೊಂದಿದನೆಂದು ತಿಳಿಯುವನೋ ಇವರಿಬ್ಬರೂ ತಿಳಿಯದವರು. ( ಸಾತ್ವಿಕ ಜ್ಞಾನಶೂನ್ಯರಾದ ಮೂಢರು ಎಂದು ತಾತ್ಪರ್ಯವು. ) ವಸ್ತು ತತ್ವವೇನೆಂದರೆ ಜೀವನು ಶತ್ರುವನ್ನು ಸಂಹಾರ ಮಾಡುವುದರಲ್ಲಿ ಸ್ವತಂತ್ರನಲ್ಲ ಮತ್ತು ಮರಣ ಹೊಂದಿದ ಶತ್ರುವು ಸ್ವರೂಪೇಣ ನಾಶವನ್ನು ಹೊಂದಿಸಲ್ಪಡುವವನಲ್ಲ. *

---

* ಕೊಲ್ಲುವ ಜೀವನು ಸಂಹಾರ ಮಾಡುತ್ತಾನೆಂದು ತಿಳಿಯುವವನೂ, ಶತ್ರುಜೀವನು ಹತನಾದನೆಂದು ತಿಳಿಯುವವನೂ ಇವರಿಬ್ಬರೂ ದಡ್ಡರು ಎಂದು ಇರುವುದರಿಂದ, ಸಂಹಾರ ಮತ್ತು ಮರಣ ಇವೆರಡೂ ಮಿಥ್ಯಾ ಎಂದು ಈ ಶ್ಲೋಕಕ್ಕೆ ಅರ್ಥ ಮಾಡುವುದು ಭಯಂಕರವಾದ ಪ್ರಮಾಣಗಳ ಅತಿಕ್ರಮ ರೂಪವಾಗಿರುವದಲ್ಲದೆ, ಶ್ರೀಕೃಷ್ಣನ ಸರ್ವ ವಾಕ್ಯಗಳಿಗೂ ಅತ್ಯಂತ ವಿರುದ್ಧರೂಪವಾಗಿರುವುದು. ಅರ್ಜುನಜೀವನು ಕರ್ಣನನ್ನು ಸಂಹಾರ ಮಾಡಿದುದು ಪ್ರತ್ಯಕ್ಷಸಿದ್ಧವಾಗಿರುವುದು. ಕರ್ಣನು ಮರಣ ಹೊಂದಿದುದೂ ಪ್ರತ್ಯಕ್ಷಸಿದ್ಧವಾಗಿರುವುದು. ಹೀಗಿರುವಲ್ಲಿ ಅರ್ಜುನನು ಕರ್ಣನನ್ನು ಸಂಹಾರ ಮಾಡಲಿಲ್ಲ. ಕರ್ಣನು ಹತನಾಗಲಿಲ್ಲ ಎಂದು ಹೇಳುವುದು ಅತ್ಯಂತ ಸುಳ್ಳು ಮತ್ತು ಅವಿವೇಕಿಗಳ ಮಾತೇ ಎಂದು ತಿಳಿಯಬಾರದು. ವಸ್ತು ತತ್ವವೇನೆಂದರೆ, **"ಮತ್ತಃ ಸರ್ವಂ ಪ್ರವರ್ತತೇ" " ನಿಮಿತ್ತಮಾತ್ರಂ ಭವ ಸವ್ಯಸಾಚಿನ್ " " ಮಯಾ ಹತಾಂಸ್ತ್ವಂ ಜಹಿ " " ಯತಃ ಪ್ರವೃತ್ತಿರ್ಭೂತಾನಾಂ "** ಇತ್ಯಾದಿ ಗೀತಾವಚನಗಳಿಂದ ಶ್ರೀಕೃಷ್ಣನು ಸ್ವತಂತ್ರಸಂಹಾರಕನು, ಅರ್ಜುನನು ನಿಮಿತ್ತಮಾತ್ರನು. ಮತ್ತು **"ನಿತ್ಯಸ್ಯೋಕ್ತಾಃ ಶರೀರಿಣಃ" "ನ ಜಾಯತೇ ಮ್ರಿಯತೇ ವಾ ಕದಾಚಿತ್" "ನೈನಂ ಛಿಂದಂತಿ ಶಸ್ತ್ರಾಣಿ"** ಇತ್ಯಾದಿ ಅನೇಕ ವಚನಗಳಿಂದ ಕರ್ಣಜೀವನೂ ಸ್ವರೂಪೇಣ ನಿತ್ಯನು. ಆದರೆ **"ತಥಾ ದೇಹಾಂತರಪ್ರಾಪ್ತಿಃ" " ಅಂತವಂತ ಇಮೇ ದೇಹಾಃ "** ಇತ್ಯಾದಿ ವಚನಗಳಿಂದ ಕರ್ಣನ ದೇಹವು ವಿಯೋಗರೂಪವಾದ ಮರಣಕ್ಕೆ ವಶವಾಗಿರುವುದು. ಆದುದರಿಂದ ಕರ್ಣನು ದೇಹನಾಶ ರೂಪವಾದ ಮರಣವನ್ನು ಹೊಂದಿರುವನು. ಆದರೆ ಆತನ ಸ್ವರೂಪವು ನಾಶವನ್ನು ಹೊಂದತಕ್ಕದ್ದಲ್ಲ. ಅರ್ಜುನನು ಸಂಹಾರ ಮಾಡುವುದರಲ್ಲಿ ಸ್ವತಂತ್ರನೆಂದು ತಿಳಿಯುವವನೂ, ಕರ್ಣನು ಸ್ವರೂಪತಃ ಹತನಾದನೆಂದು ತಿಳಿಯುವವನೂ ಇವರಿಬ್ಬರೂ ಮೂಢರು. ವಸ್ತುತಃ ಅರ್ಜುನನು ಸ್ವತಂತ್ರ ಸಂಹಾರಕನಲ್ಲ. ಕರ್ಣನು ಸ್ವರೂಪೇಣ ಸಂಹೃತನಾಗಲಿಲ್ಲ ಎಂದು ಸಮೀಚೀನವಾದ ಶ್ಲೋಕಾರ್ಥವು.

ಈ ಅಭಿಪ್ರಾಯವು ಮತ್ತೊಂದು ಶ್ಲೋಕದಿಂದಲೂ ವ್ಯಕ್ತವಾಗುವುದು :—

(4) **ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಂ ।**
**ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಂ ॥**

—(2. 21.)

ಎಲೈ ಪಾರ್ಥನೇ ! ಯಾವನು, ಜೀವಸ್ವರೂಪವು ಉತ್ಪತ್ತಿ ಶೂನ್ಯವಾದುದು ನಾಶಶೂನ್ಯವಾದುದು, ಸ್ವರೂಪನಾಶ ಪ್ರಯೋಜಕವಾದ ವಿಕಾರರಹಿತವಾದುದು ಎಂದು ತಿಳಿದಿರುವನೋ ಮತ್ತು ಯಾವ ಜೀವನು ಏನಂ = ಪರಮಾತ್ಮ ಸ್ವರೂಪ ವನ್ನು ಸರ್ವ ಪ್ರಕಾರದಿಂದಲೂ ನಾಶರಹಿತವು, ಜನ್ಮ ವಿಕಾರಶೂನ್ಯವು, ಅನವರತ ಸ್ವತಂತ್ರವೆಂದು ತಿಳಿಯುವನೋ ಅಂಥ ಜ್ಞಾನಿಯು ಯಾರನ್ನು ಕೊಲ್ಲುವುದರಲ್ಲಿ ತಾನೇ ನಾನು ಸ್ವತಂತ್ರವಾಗಿ ಸಂಹಾರ ಮಾಡುತ್ತೇನೆ ಎಂದು ಹೇಗೆ ಅಭಿಮಾನ ಮಾಡುವನು ? ಮತ್ತು ಜೀವನು ಸತ್ತನು ಎಂದು ತಾನೇ ಹೇಗೆ ಅಭಿಮಾನ ಮಾಡುವನು ? ( ಜ್ಞಾನಿಯು ಶತ್ರು ಸಂಹಾರ ಕಾರ್ಯದಲ್ಲಿ ತಾನು ಸ್ವತಂತ್ರ ನೆಂದಾಗಲೀ, ಜೀವಸ್ವರೂಪವು ಹನನದಿಂದ ಸ್ವರೂಪೇಣ ನಾಶ ಹೊಂದತಕ್ಕ ದ್ದೆಂದಾಗಲೀ ತಿಳಿಯುವುದಿಲ್ಲ. ಈಶ್ವರನು ಸ್ವತಂತ್ರ ಸಂಹಾರಕನು ನಾನು ನಿಮಿತ್ತ ಮಾತ್ರನು ಎಂದರೆ ಅಸ್ವತಂತ್ರ ಸಂಹಾರಕನೆಂದೂ, ಶತ್ರುಜೀವನು ಸ್ವರೂಪತಃ ನಾಶ ಹೊಂದತಕ್ಕವನಲ್ಲ ಮತ್ತು ದೇಹವಿಯೋಗರೂಪವಾದ ನಾಶವನ್ನು ಮಾತ್ರ ಹೊಂದಿದನೆಂದೂ ತಿಳಿಯುವನು ಎಂದು ಭಾವವು. )

ಈಶ್ವರನು ಚತುರ್ವಿಧ ನಾಶರಹಿತನಾದುದರಿಂದ ಸ್ವತಂತ್ರನೆಂದು ಶ್ರೀಕೃಷ್ಣನ ಅಭಿಪ್ರಾಯವು. ಶ್ರೀ ಪರಮಾತ್ಮನು ಸರ್ವ ಪ್ರಕಾರದಿಂದಲೂ ಅವಿನಾಶಿಯು ಎಂಬುದನ್ನು ಮೂರು ನಾಲ್ಕು ಶ್ಲೋಕಗಳಿಂದ ಶ್ರೀಕೃಷ್ಣನು ನಿರೂಪಿಸಿ, ಪರ ಮಾತ್ಮನ ಅಚಿಂತ್ಯ ಶಕ್ತಿಯಿರುವುದರಿಂದಲೇ ಅವನು ಸ್ವತಂತ್ರನು ಮತ್ತು ಸರ್ವ ವಿಧವಾದ ವಿಕಾರರಹಿತನು ಎಂದು ಮುಖ್ಯ ಯುಕ್ತಿಯನ್ನೂ ಸಹ ಹೇಳುತ್ತಾನೆ :—

(5) **ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥**
**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।**
**ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥**
**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ ।**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥**

—(2. 23–25.)

ಪರಬ್ರಹ್ಮನನ್ನು ( ಸ್ವರೂಪವನ್ನೂ ಮತ್ತು ದೇಹವನ್ನೂ ) ಖಡ್ಗಾದಿ ಶಸ್ತ್ರ

ಗಳು ಛೇದನ ಮಾಡುವುದಿಲ್ಲ. ಅಗ್ನಿಯು ಪರಮಾತ್ಮನನ್ನು ಸುಡುವುದಿಲ್ಲ. ಜಲವು ಪರಮಾತ್ಮನನ್ನು ತೋಯಿಸುವುದಿಲ್ಲ. ವಾಯುವು ಪರಮಾತ್ಮನನ್ನು ಶೋಷಣ ಮಾಡುವುದಿಲ್ಲ. ಯಾತಕ್ಕೆಂದರೆ ಶ್ರೀ ಪರಮಾತ್ಮನು ಸ್ವರೂಪದಿಂದಲಾಗಲೀ, ದೇಹದಿಂದಲಾಗಲೀ ಛೇದನ ಯೋಗ್ಯನಲ್ಲ, ದಾಹಯೋಗ್ಯ ಪದಾರ್ಥವಲ್ಲ, ಒದ್ದೆ ಯಾಗತಕ್ಕ ವಸ್ತುವಲ್ಲ, ಒಣಗತಕ್ಕ ವಸ್ತುವಲ್ಲ. ಪರಮಾತ್ಮನು ಸರ್ವ ಪ್ರಕಾರ ದಿಂದಲೂ ನಿತ್ಯನು. ಸರ್ವತ್ರ ವ್ಯಾಪ್ತನು; ನಿರ್ವಿಕಾರನು; ಪ್ರಾಕೃತ ಚಲನವರ್ಜಿ ತನು; ಮತ್ತು ಶಶ್ವದೇಕ ಪ್ರಕಾರವಾದ ಅನಾದಿ ವಸ್ತುವು. (ಆದುದರಿಂದ ಶ್ರೀ ಪರಮಾತ್ಮನು ಸರ್ವ ಸ್ವತಂತ್ರನು ಎಂದು ಭಾವವು.) ಹೀಗೆ ದೇಹವುಳ್ಳವನಾಗಿ ಸರ್ವಗತನಾಗಿರುವವನಾದರೆ ಶ್ರೀ ಪರಮಾತ್ಮನು ಯಾತಕ್ಕೆ ಗೋಚರನಾಗುವುದಿಲ್ಲ ಎಂಬ ಶಂಕೆಗೆ ಶ್ರೀಕೃಷ್ಣನು ಸಮಾಧಾನ ಮಾಡುತ್ತಾನೆ:— ಪರಮಾತ್ಮನು ಅವ್ಯಕ್ತ ಸ್ವರೂಪನು.* ಸರ್ವತ್ರ ಇದ್ದರೂ ಅವ್ಯಕ್ತನಾಗಿರುವುದು ಹೇಗೆಂದರೆ, ಆತನು ಅಚಿಂತ್ಯ ಶಕ್ತಿಯಿಂದ ಪರಿಪೂರ್ಣನು. ಮತ್ತು ಅವನ ಸ್ವರೂಪವು ಸರ್ವ ಪ್ರಕಾರದಿಂದಲೂ ವಿಕಾರ ರಹಿತವು ಎಂದು ಹೇಳಲ್ಪಡುತ್ತದೆ. ಈ ರೀತಿಯಾಗಿ, ಜೀವನು ನಿತ್ಯನು; ಆದರೂ ಪರಮಾತ್ಮನ ಸಾಮ್ಯವು ಇಲ್ಲ ಎಂದು ತಿಳಿದು,

---

* "**ತದವ್ಯಕ್ತಮಾಹ ಹಿ**" ಇತ್ಯಾದಿ ಬ್ರಹ್ಮಸೂತ್ರಗಳಲ್ಲಿ ಪರಮಾತ್ಮನು ಅವ್ಯಕ್ತ ಸ್ವರೂಪನೆಂದು ಹೇಳಲ್ಪಟ್ಟಿರುವುದು. ಸರ್ವಥಾ ಪರಮಾತ್ಮನು ಅವ್ಯಕ್ತನಾದರೆ ಅವನು ಜ್ಞಾನ ಗೋಚರನಾಗುವನೆಂದು ಹೇಳುವುದು ಅಸಾಧ್ಯವಾಗುವುದು. ಆದುದರಿಂದ ಪರಮಾತ್ಮನು ಸ್ವಾನು ಗ್ರಹವಿಲ್ಲದೆ ಸಾಮಾನ್ಯವಾಗಿ ವ್ಯಕ್ತವಾಗದ ಸ್ವರೂಪವುಳ್ಳವನು ಎಂದು ಅರ್ಥ ಮಾಡಬೇಕು. "**ಅತೋಽನಂತೇನ ತಥಾ ಹಿ ಲಿಂಗಂ**" ಎಂಬ ಬ್ರಹ್ಮಸೂತ್ರದಲ್ಲಿ ಅನಂತನಾಮಕ ಪರ ಮಾತ್ಮನು ತನ್ನ ಪ್ರಸಾದದಿಂದಲೇ ಭಕ್ತ ಜೀವರುಗಳಿಗೆ ವ್ಯಕ್ತನಾಗುವನು ಎಂದು ಸೂತ್ರಕಾರರು ಸಿದ್ಧಾಂತ ಮಾಡಿರುತ್ತಾರೆ. ಆದುದರಿಂದ ಪರಮಾತ್ಮನು ಅವ್ಯಕ್ತನೆಂದರೆ; 1. ಲಕ್ಷ್ಮ್ಯಾದಿಗಳಿಗೂ ಕೂಡ ಗೋಚರವಾಗದಷ್ಟು ಸೂಕ್ಷ್ಮನಾಗಿರುವನೆಂದೂ, 2. ತನ್ನ ಪ್ರಸಾದಮಾತ್ರದಿಂದಲೇ ಭಕ್ತರಿಗೆ ಮತ್ತು ಲಕ್ಷ್ಮ್ಯಾದಿ ದೇವತೆಗಳಿಗೆ ಗೋಚರವಾಗುವನೇ ಹೊರತು ಘಟಪಟಗಳಂತೆ ಸಾಮಾನ್ಯವಾಗಿ ವ್ಯಕ್ತವಾಗುವ ಚೇತನನಲ್ಲವೆಂದೂ, 3. ತನ್ನ ಪ್ರಸಾದದಿಂದ ವ್ಯಕ್ತನಾದರೂ ಸಾಕಲ್ಯೇನ ವ್ಯಕ್ತ ನಾಗುವುದಿಲ್ಲವೆಂದೂ, 4. ಪ್ರಾಕೃತವ್ಯಕ್ತ ಪದಾರ್ಥಗಳಿಗಿಂತ ಅತಿ ವಿಲಕ್ಷಣವಾದ ಸ್ವರೂಪ ಉಳ್ಳವ ನೆಂದೂ ಅರ್ಥವನ್ನು ಮಾಡಬೇಕು.

ಸ್ವಭಾವತಃ ಅವ್ಯಕ್ತ ಸ್ವರೂಪನಾದ ಪರಮಾತ್ಮನಿಗೆ ವ್ಯಕ್ತಿಯು ತನ್ನ ಅಚಿಂತ್ಯ ಶಕ್ತಿಯಿಂದಲೇ ಆಗುವುದೇ ಹೊರತು ಮತ್ತೊಬ್ಬನ ಬಲಾತ್ಕಾರದಿಂದ ಆಗಲಾರದು ಮತ್ತು ಸರ್ವಗತನಾದರೂ ಪರ ಮಾತ್ಮನು ತನ್ನ ಅಚಿಂತ್ಯ ಶಕ್ತಿಯಿಂದಲೇ ಅವ್ಯಕ್ತನಾಗಿರುವನು. ಮಹಾಭಾರತದಲ್ಲಿ ಶ್ರೀಕೃಷ್ಣನೇ ತನ್ನ ಈ ಅದ್ಭುತ ಸಾಮರ್ಥ್ಯವನ್ನು ಹೇಳಿಕೊಂಡಿರುತ್ತಾನೆ:—

**ಏತತ್ತ್ವಯಾ ನ ವಿಜ್ಞೇಯಂ ರೂಪವಾನಿತಿ ದೃಶ್ಯತೇ ।**
**ಇಚ್ಛನ್ ಮುಹೂರ್ತಾನ್ನಶ್ಯೇಯಮೀಶೋಽಹಂ ಜಗತಾಂ ಗುರುಃ ॥**

ಜೀವನು ಅಸ್ವತಂತ್ರನಾದರೂ ಸ್ವರೂಪತಃ ನಿತ್ಯನಾದುದರಿಂದ, ನೀನು ಈ ಪರಿದೃಶ್ಯಮಾನರಾದ ಯೋಧರುಗಳು ಸರ್ವ ಪ್ರಕಾರದಿಂದಲೂ ನಾಶ ಹೊಂದುವರೆಂದು ಭ್ರಮಿಸಿ ಶೋಕಿಸಬೇಡ ಎಂದು ಅರ್ಥವು.

ಜೀವನು ಸ್ವರೂಪತಃ ನಿತ್ಯನು ಆದರೆ ದೇಹನಾಶರೂಪವಾದ ಮರಣವನ್ನೂ, ದೇಹಸಂಯೋಗ ರೂಪವಾದ ಜನ್ಮವನ್ನೂ ಉಳ್ಳವನೆಂದೂ, ಪರಮಾತ್ಮನು ಸರ್ವ ಪ್ರಕಾರದಿಂದಲೂ ಜನನ ಮರಣರಹಿತನೆಂದೂ ಶ್ರೀಕೃಷ್ಣನು ಮಂತ್ರವರ್ಣ (ಕಾಠಕೋಪನಿಷತ್ತು) ವಚನೋದಾಹರಣಪೂರ್ವಕವಾಗಿ ಸಮರ್ಥಿಸುತ್ತಾನೆ :—

(6) **ನ ಜಾಯತೇ ಮ್ರಿಯತೇ ವಾ ಕದಾಚಿನ್ನಾಯಂ ಭೂತ್ವಾ**
**ಭವಿತಾ ವಾ ನ ಭೂಯಃ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ**
**ಹನ್ಯಮಾನೇ ಶರೀರೇ ॥**
—(2. 20.)

ಈ ಶ್ಲೋಕವು ಜೀವಸ್ವರೂಪವನ್ನೂ ಪರಮಾತ್ಮಸ್ವರೂಪವನ್ನೂ ವಿಂಗಡಿಸಿ ತಿಳಿಸಿ ಕೊಡುವುದು. ಜೀವಪರವಾದ ಅರ್ಥವೇನೆಂದರೆ :— ಎಲೈ ಪಾರ್ಥನೇ ! ಈ ಜೀವನು ಸ್ವರೂಪೇಣ ಯಾವಾಗಲೂ ಉತ್ಪನ್ನನಾಗುವುದಿಲ್ಲ. ಸ್ವರೂಪೇಣ ಯಾವಾಗಲೂ ಮರಣವನ್ನು ಹೊಂದುವುದಿಲ್ಲ. ಹಾಗಿದ್ದರೂ, ಭೂತ್ವಾಭವಿತವಾನ = ಪರಮಾತ್ಮನು ಪೂರ್ವದಲ್ಲಿಯೇ ಸಿದ್ಧವಾದ ರಾಮಕೃಷ್ಣಾದಿ ರೂಪಗಳನ್ನು ತನ್ನ ಅಚಿಂತ್ಯ ಶಕ್ತಿಯಿಂದ ಈಗ ಆವಿರ್ಭವಿಸಿದನೋ ಎಂಬಂತೆ ತೋರಿಸುವಂತೆ ಜೀವನು ಅಭಿವ್ಯಕ್ತನಾಗುವನಲ್ಲ. (ಜೀವನಿಗೆ ಒಂದು ವಿಧವಾದ ಉತ್ಪತ್ತಿಯೇ ಉಂಟು ಎಂದು ತಾತ್ಪರ್ಯವು) ಜೀವ ಸ್ವರೂಪಕ್ಕೆ ಜನನ ಮರಣಗಳು ಯಾತಕ್ಕೆ ಇಲ್ಲವೆಂದರೆ :— ಜೀವನು ಸ್ವರೂಪತಃ ಉತ್ಪತ್ತಿ ಶೂನ್ಯನಾದ, ಸ್ವರೂಪತಃ ನಾಶ ಶೂನ್ಯನಾದ, ಶಶ್ವದೇಕಪ್ರಕಾರನಾದ ಭಗವಂತನ ಪ್ರತಿಬಿಂಬನಾಗಿರುವನು. (ಹೀಗಿದ್ದರೂ) ಜೀವನು ಪುರಾಣನು = ಶರೀರದಿಂದ ಶರೀರಾಂತರವನ್ನು ಹೊಂದುತ್ತಲೇ ಇರುವನು. ಆದರೆ ಇವನ ಶರೀರವು ನಾಶವನ್ನು ಹೊಂದಿದರೂ ಜೀವನು ಸ್ವರೂಪೇಣ ನಾಶವನ್ನು ಹೊಂದುವುದಿಲ್ಲ.

ಪರಮಾತ್ಮಪರವಾದ ಅರ್ಥವೇನೆಂದರೆ :— ಎಲೈ ಅರ್ಜುನನೇ ! ಅಯಂ ನಾ = ಸರ್ವಗತನಾದ ಪರಮ ಪುರುಷನು, ಯಾವಾಗಲೂ ಹುಟ್ಟುವುದಿಲ್ಲ. ಮರಣವನ್ನೂ ಹೊಂದುವುದಿಲ್ಲ. ಹಾಗಿದ್ದರೆ ರಾಮನು ಅವತರಿಸಿದನು, ಕೃಷ್ಣನು ಹುಟ್ಟಿದನು ಇತ್ಯಾದಿ ಉತ್ಪತ್ತಿವಿನಾಶ ಪ್ರಸಿದ್ಧಿಯು ಇರುವುದಕ್ಕೆ ಕಾರಣವೇನೆಂದರೆ, ಈ ಪರಮಾತ್ಮನು ರಾಮಕೃಷ್ಣಾದಿ ರೂಪಗಳಿಂದ ಸರ್ವದಾ ಇರುವವನಾಗಿಯೇ ಕಾಲ ವಿಶೇಷದಲ್ಲಿ ತನ್ನ ಅಚಿಂತ್ಯ ಶಕ್ತಿಯಿಂದ ಈಗ ಅವತರಿಸಿದನು ಇತ್ಯಾದಿ ಪ್ರತೀತಿ

ಗಳಿಗೆ ವಿಷಯನಾಗುವನು. ಅಷ್ಟೇ ವಿನಾ, ನಭೂಯಃ = ಪ್ರಕಾರಾಂತರದಿಂದ ದೇಹಯೋಗ ವಿಯೋಗ ನಿಮಿತ್ತಕವಾದ ಜನಿಮೃತಿಗಳು ಪರಮಾತ್ಮನಿಗಿರುವುದಿಲ್ಲ.* ಈ ಜೀವನಾದರೋ ಅಜನು, ನಿತ್ಯನು ಎಂದರೆ ಉತ್ಪತ್ತಿ ನಾಶರಹಿತನು; ಮತ್ತು ಶಾಶ್ವತನು ಎಂದರೆ ಸರ್ವದಾ ಭಗವತ್ಪಾರತಂತ್ರ್ಯರೂಪ ನಿಜ ಸ್ವಭಾವವುಳ್ಳವನು. ದೇಹದಿಂದ ದೇಹಾಂತರವನ್ನು ಕುರಿತು ಹೋಗುತ್ತಾ ಇರುವವನು. ಶರೀರ ನಾಶ ವನ್ನು ಹೊಂದಿದರೂ ಸ್ವರೂಪತಃ ನಾಶವನ್ನು ಹೊಂದುವುದಿಲ್ಲ.

ಪರಮಾತ್ಮನ ಸ್ವಾತಂತ್ರ್ಯ ಅಚಿಂತ್ಯ ಶಕ್ತಿಗಳನ್ನೂ, ಜೀವನಿತ್ಯತ್ವ ಪಾರ ತಂತ್ರ್ಯಗಳನ್ನೂ ತತ್ಪ್ರೋಪಸಂಹಾರರೂಪವಾದ ಎರಡು ಶ್ಲೋಕಗಳಲ್ಲಿ ಶ್ರೀಕೃಷ್ಣನು ವಿಶದವಾಗಿ ನಿರೂಪಿಸಿರುತ್ತಾನೆ :—

**(7) ಆಶ್ಚರ್ಯವತ್ಪಶ್ಯತಿ ಕಶ್ಚಿದೇನಮಾಶ್ಚರ್ಯವದ್ವದತಿ**
**ತಥೈವ ಚಾನ್ಯಃ ।**

---

*ಬ್ರಹ್ಮಾಂಡ ಪುರಾಣದ ಬ್ರಹ್ಮನಾರದ ಸಂವಾದದಿಂದಲೂ ಪರಮಾತ್ಮನಿಗೆ ಪ್ರಾಕೃತ ದೇಹ ವಿಯೋಗಾದಿಗಳು ಇಲ್ಲವೆಂದು ವಿಶದವಾಗುವುದು .—

**ನಾರದ ಉವಾಚ :—**

**ನಿರ್ದೋಷಶ್ಚೇತ್ಕಥಂ ವಿಷ್ಣುರ್ಮಾನುಷೇಷೂದಪದ್ಯತ ।**

**ಬ್ರಹ್ಮೋವಾಚ :—**

**ಸ್ತ್ರೀಪುಂಮಲಾಭಿಯೋಗಾತ್ಮದೇಹೋ ವಿಷ್ಣೋರ್ನಜಾಯತೇ ॥**
**ಕಿಂತು ನಿರ್ದೋಷಚೈತನ್ಯಸುಖಾಂ ನಿತ್ಯಾಂ ಸ್ವಕಾಂ ತನುಂ ।**
**ಪ್ರಕಾಶಯತಿ ಸೈವೇಯಂ ಜನಿರ್ವಿಷ್ಣೋರ್ನಚಾಪರಾ ॥**
**ಪ್ರತ್ಯಕ್ಷತ್ವಂ ಹರೇರ್ಜನ್ಮ ನ ವಿಕಾರಃ ಕಥಂಚನ ।**

**ಅರ್ಥವು :—** ವಿಷ್ಣುವು ನಿರ್ದೋಷನಾದರೆ ಮನುಷ್ಯರಲ್ಲಿ ಹುಟ್ಟಿದುದು ಹೇಗೆ ? ಎಂದು ನಾರದರ ಪ್ರಶ್ನೆಯು. ಬ್ರಹ್ಮದೇವರು ಹೇಳುತ್ತಾರೆ :— ಸ್ತ್ರೀ ಪುರುಷರ ಶುಕ್ಲಶೋಣಿತಾದಿರೂಪ ವಾದ ಕಶ್ಮಲ ಸಂಬಂಧದಿಂದ ಉಂಟಾಗುವ ದೇಹವು ವಿಷ್ಣುವಿಗೆ ಹುಟ್ಟುವುದಿಲ್ಲ. ಮತ್ತೇನೆಂದರೆ, ನಿರ್ದೋಷಜ್ಞಾನಾನಂದಾತ್ಮಕವಾದ ನಿತ್ಯವಾದ ತನ್ನ ಸ್ವರೂಪಭೂತವಾದ ದೇಹವನ್ನು ಅಭಿವ್ಯಕ್ತಿ ಪಡಿಸುತ್ತಾನೆ. ಅದೇ ವಿಷ್ಣುವಿಗೆ ಉತ್ಪತ್ತಿಯು. ದೇಹ ಪ್ರಾಪ್ತಿರೂಪವಾದ ಬೇರೆ ಉತ್ಪತ್ತಿಯು ಇಲ್ಲ. ಲೋಕದ ಜನರಿಗೆ ದೃಗ್ಗೋಚರವಾಗುವುದೇ ಪರಮಾತ್ಮನಿಗೆ ಜನನವು; ಪಾಮರರ ದೃಷ್ಟಿಗೆ ಕಾಣದಂತೆ ಅಂತರ್ಧಾನವನ್ನು ಹೊಂದುವುದೇ ಮರಣವು. ಇದಕ್ಕಿಂತ ಅತಿರಿಕ್ತವಾಗಿ ಯಾವ ವಿಧವಾದ ವಿಕಾರವೂ ಯಾವ ರೀತಿಯಿಂದಲೂ ಪರಮಾತ್ಮನಿಗಿಲ್ಲ.

**ಆಶ್ಚರ್ಯವಚ್ಚೈನಮನ್ಯಃ ಶೃಣೋತಿ ಶ್ರುತ್ವಾಽಪ್ಯೇನಂ ವೇದ ನ ಚೈವ ಕಶ್ಚಿತ್ ॥**
—(2. 29.)

ಕಶ್ಚಿತ್ = ಸಾತ್ವಿಕ ಸ್ವಭಾವಯುಕ್ತನಾದ ಜ್ಞಾನಿಯು ಪರಮಾತ್ಮನನ್ನು ಸರ್ವ ಸ್ವತಂತ್ರನಾದ ಅದ್ಭುತ ವಸ್ತುವನ್ನಾಗಿ ನೋಡುತ್ತಾನೆ. ಮತ್ತೊಬ್ಬ ಸಾತ್ವಿಕಾಧಿಕಾರಿಯು ಪರಮಾತ್ಮನೇ ಸಮಾಧಿಕರಹಿತನಾದ ಅದ್ಭುತ ವಸ್ತುವೆಂದು (ಶಿಷ್ಯರಿಗೆ) ಹೇಳುತ್ತಾನೆ. ಮತ್ತೊಬ್ಬ ಸಾತ್ವಿಕ ಪುರುಷನು ಸದೃಶಾಂತರ ವಸ್ತುರಹಿತನಾದ ಪರಮಾತ್ಮನೇ ಅದ್ಭುತವಾದ ಶ್ರೋತವ್ಯ ವಸ್ತುವೆಂದು ಶ್ರವಣ ಮಾಡುತ್ತಾನೆ. ಹೀಗೆ ನೋಡಿಯೂ, ಹೇಳಿಯೂ, ಕೇಳಿಯೂ ಕೂಡ ಅದ್ಭುತನಾದ ಪರಮಾತ್ಮನನ್ನು ಯಾವನೂ ಸಾಕಲ್ಯವಾಗಿ ತಿಳಿಯಲಾರನು.

ಜೀವನು ಸ್ವರೂಪತಃ ನಿತ್ಯನಾದರೂ ಅಚಿಂತ್ಯಾದ್ಭುತ ಶಕ್ತಿಯಿಂದ ಪೂರ್ಣನಾದ ಶ್ರೀ ಪರಮಾತ್ಮನು ಸ್ವಾಭಾವಿಕ ಧರ್ಮವನ್ನು ಯಾತಕ್ಕೆ ನಾಶ ಮಾಡಬಾರದು ? ಅಥವಾ ಜೀವನಿತ್ಯತ್ವವು ಜೀವನ ಸ್ವಾಭಾವಿಕ ಧರ್ಮವಾದ್ದರಿಂದ, ಸ್ವಾಭಾವಿಕ ಧರ್ಮ ವಿಷಯದಲ್ಲಿ ಶ್ರೀ ಪರಮಾತ್ಮನು ಮಾಡುವ ಉಪಕಾರವೇನು ? ಜೀವನಿಗೆ ತನ್ನ ಸ್ವರೂಪ ಧರ್ಮ ಸದ್ಭಾವದಲ್ಲಿ ಸ್ವಾತಂತ್ರ್ಯವು ಇರಬಹುದಲ್ಲವೇ ? ಎಂಬ ಪ್ರಶ್ನೆಗಳಿಗೆ ಅಚಿಂತ್ಯಾದ್ಭುತ ಶಕ್ತ್ಯುಪೇತನಾದ ಶ್ರೀ ಪರಮಾತ್ಮನ ಪ್ರಸಾದವು ಸ್ವಾಭಾವಿಕ ಧರ್ಮರಕ್ಷಣೆಯಲ್ಲಿಯೂ ಆವಶ್ಯಕವು, ಮತ್ತು ಜೀವನು ಸರ್ವದಾ ತನ್ನ ಸ್ವರೂಪಸತ್ತಾದಿ ವಿಷಯದಲ್ಲಿಯೂ ಪರತಂತ್ರನು ಎಂದು ದ್ರವ್ಯಂ ಕರ್ಮಚ ಕಾಲಶ್ಚ ಸ್ವಭಾವೋ ಜೀವ ಏವಚ । ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥ ಇತ್ಯಾದಿ ಪ್ರಮಾಣಪ್ರಮಿತವಾದ ಅಭಿಪ್ರಾಯವನ್ನೇ ಉತ್ತರರೂಪವಾಗಿ ಶ್ರೀ ಕೃಷ್ಣನು ಹೇಳುತ್ತಾನೆ :—

**(8) ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥**
—(2. 30.)

ಎಲೈ ಪಾರ್ಥನೇ ! ಸಕಲರ ದೇಹದಲ್ಲಿಯೂ (ಸ್ಥೂಲ, ಸೂಕ್ಷ್ಮ, ಲಿಂಗ ದೇಹದಲ್ಲಿ ಮತ್ತು ಚಿದ್ರೂಪ ಸ್ವರೂಪ ದೇಹದಲ್ಲಿಯೂ ಕೂಡ) ಶ್ರೀ ಪರಮಾತ್ಮನು ರಕ್ಷಕನಾಗಿ ಇರುತ್ತಾನೆ. ಆದುದರಿಂದ ಜೀವನು ನಿತ್ಯವೂ ಅವಧ್ಯನು. ಈ ರೀತಿ ಸ್ವರೂಪೇಣ ನಿತ್ಯರಾದ ಜೀವರ ನಿತ್ಯತ್ವರೂಪ ಸ್ವಾಭಾವಿಕ ಧರ್ಮಕ್ಕೆ ರಕ್ಷಕನಾಗಿ ದೇಹಿಗಳಲ್ಲಿ ಶ್ರೀ ಪರಮಾತ್ಮನು ಸ್ಥಿತನಾಗಿರುವುದರಿಂದ* ಶಸ್ತ್ರಾದಿಗಳಿಂದ ಸ್ವರೂಪೇಣ ಅವಧ್ಯರಾದ (ಭೀಷ್ಮಾದಿ) ಜೀವರುಗಳನ್ನು ಕುರಿತು ನೀನು ಶೋಕಿಸಬೇಡ.

* ನಾಲ್ಕು ವಿಧವಾದ ಶರೀರಗಳಲ್ಲಿಯೂ ಪರಮಾತ್ಮನು ರಕ್ಷಕನಾಗಿ ಸ್ಥಿರನಾಗಿರುವನು.

**3**. ಇಷ್ಟು ಉಪನ್ಯಾಸದಿಂದ ಜೀವಸ್ವರೂಪ ನಾಶಪ್ರಯುಕ್ತವಾದ ಶೋಕವು ಅವಿವೇಕ ಮೂಲಕವು; ಜೀವನಿಗೆ ಸ್ವರೂಪೇಣ ನಾಶವು ಇರುವುದಿಲ್ಲ ಎಂದು ಸಿದ್ಧವಾಯಿತು. ಹಾಗಾದರೂ ಮತ್ತೊಂದು ಶಂಕೆಯು ಪ್ರಸಕ್ತವಾಗುವುದು. ಭೀಷ್ಮಾದಿಯೋಧರುಗಳಿಗೆ ಅತಿ ಪ್ರಿಯವಾದ ದೇಹದ ನಾಶವು ಪ್ರಾಪ್ತವಾಗುವುದು. ದೇಹನಾಶಜನಿತವಾದ ಮಹಾ ದುಃಖವು ಭೀಷ್ಮಾದಿ ಸ್ವಜನರಿಗೆ ಗಾಂಡೀವ ಧನುರ್ಮುಕ್ತವಾದ ತೀಕ್ಷ್ಣ ನಾರಾಚಗಳಿಂದ ಯುದ್ಧ ಮಾಡಿದರೆ ಪ್ರಾಪ್ತವಾಗುವುದಲ್ಲಾ ಎಂದು ವಿಷಾದದಿಂದ ನಾನು ಯುದ್ಧ ಮಾಡಲಾರೆನು ಎಂಬ ಅರ್ಜುನನ ಶಂಕೆಗೆ ಶ್ರೀ ಕೃಷ್ಣನು ಉತ್ತರವನ್ನು ಹೇಳುತ್ತಾನೆ :—

(1) **ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥**
—(2. 13.)

ಎಲೈ ಅರ್ಜುನನೇ ! ದೇಹಸಹಿತನಾದ ಈ ಜೀವನಿಗೆ ಈ ದೇಹದಲ್ಲಿ ಕೌಮಾರಾವಸ್ಥೆಯು ಹೋಗಿ ಯೌವನಾವಸ್ಥೆಯೂ, ಯೌವನಾವಸ್ಥೆಯು ಹೋಗಿ ವಾರ್ಧಕ್ಯಾವಸ್ಥೆಯೂ ಬರುವಂತೆ ಈ ಪರಿದೃಶ್ಯಮಾನವಾದ ದೇಹವು ನಾಶವಾದ ನಂತರ ನಿಯಮೇನ ಮತ್ತೊಂದು ದೇಹವು ( ಮುಕ್ತಿಪರ್ಯಂತವೂ ) ಬರುತ್ತಲೇ ಇರುವುದು. ( ಜೀರ್ಣವಾದ ದೇಹವು ಹೋಗಿ ಪುನಃ ಉತ್ತಮವಾದ ನೂತನ ದೇಹವು ಪ್ರಾಪ್ತವಾಗುವುದೆಂದು ತಿಳಿಯುವ ) ವಿವೇಕಶಾಲಿಯಾದ ಪಂಡಿತನು ಬಂಧುಗಳ ದೇಹನಾಶವನ್ನು ಕುರಿತು ವಿಪರೀತ ಜ್ಞಾನವನ್ನು ಹೊಂದಿ ಶೋಕಪಡುವುದಿಲ್ಲ.

ಒಂದೆರಡು ರೂಪಾಯಿಗಳನ್ನು ಕೊಡುವುದರಿಂದ ನೂರು ರೂಪಾಯಿ ಬಾಳುವ ದಿವ್ಯ ಪೀತಾಂಬರವು ದೊರೆಯುವುದಾದರೆ ಯಾರಾದರೂ ವಿಷಾದವನ್ನು ಹೊಂದುವರೇ ? ಹೀಗೆಯೇ ಭೀಷ್ಮಾದಿಗಳಿಗೆ ಕ್ಷತ್ರಿಯೋಚಿತವಾದ ಯುದ್ಧದಲ್ಲಿ ಪ್ರಾಣ ತ್ಯಾಗದಿಂದ ಜನ್ಮಾಂತರದಲ್ಲಿ ಉತ್ತಮ ದೇಹವು ಪ್ರಾಪ್ತವಾಗುವುದರಿಂದ ಅವರ ದೇಹನಾಶವು ವಿವೇಕಿಗಳಿಂದ ಶೋಕಾರ್ಹವಲ್ಲವೆಂದು ಶ್ರೀ ಕೃಷ್ಣನ ವಾಕ್ಯದ ತಾತ್ಪರ್ಯವು.

ಶ್ಲೋಕಾಂತರದಲ್ಲಿಯೂ ಜೀವನಿಗೆ ನೂತನ ದೇಹಾಂತರ ಪ್ರಾಪ್ತಿಯನ್ನು

---

ಆದರೆ ಸ್ವರೂಪದೇಹದಲ್ಲಿ **ಸರ್ವದಾ** ರಕ್ಷಕನಾಗಿ ಸ್ಥಿರನಾಗಿರುವನು. ಇತರ ಶರೀರಗಳಲ್ಲಿ ಆಯುಷ್ಯಾನುಗುಣವಾಗಿ ಆಯಾಯ ಶರೀರಗಳಲ್ಲಿ ಪರಮಾತ್ಮನು ಇದ್ದು ಆಯುಷ್ಯ ತೀರಿದ ನಂತರ ಆ ಶರೀರಗಳನ್ನು ಬಿಡುವನು. ಆಗ ಅವು ನಾಶವನ್ನು ಹೊಂದುವುವು. ಸ್ವರೂಪ ದೇಹದಲ್ಲಿ ಯಾದರೋ ಅನಾದಿ ಕಾಲದಿಂದಲೂ ಪರಮಾತ್ಮನು ಇರುವನು ಮತ್ತು ಮುಂದೆ ಯಾವಾಗಲೂ ಪರಿತ್ಯಜಿಸುವದಿಲ್ಲ. ಆದುದರಿಂದ ಜೀವಸ್ವರೂಪವು ನಿತ್ಯವು. ಈ ವಿಷಯಗಳೆಲ್ಲವೂ ಛಾಂದೋಗ್ಯ ಶ್ರುತಿಯಲ್ಲಿ ವ್ಯಕ್ತವಾಗಿರುವುವು.

ದೃಷ್ಟಾಂತದ್ವಾರಾ ಶ್ರೀ ಕೃಷ್ಣನು ನಿರೂಪಿಸುತ್ತಾನೆ :—

**(2) ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥**

—(2. 22.)

ಜೀರ್ಣವಾದ ವಸ್ತ್ರಗಳನ್ನು ಪರಿತ್ಯಾಗ ಮಾಡಿ ಮನುಷ್ಯನು ಬೇರೆ ನೂತನ, ವಸ್ತ್ರಗಳನ್ನು ಧಾರಣಾರ್ಥವಾಗಿ ಸ್ವೀಕರಿಸುವಂತೆ ಹಾಗೆಯೇ ಜೀವನು ( ಆಯುಃ ಕ್ಷಯಾನಂತರ ) ಹಳೆಯ ಶರೀರಗಳನ್ನು ಬಿಟ್ಟು ಬೇರೇ ನೂತನ ದೇಹಗಳನ್ನು ಹೊಂದುತ್ತಲೇ ಇರುವನು.

ಧಾರ್ತರಾಷ್ಟ್ರರ ದೇಹನಾಶರೂಪವಾದ ಮರಣದಿಂದ ವಿಷಾದ ಹೊಂದುವುದು ಅನವಶ್ಯಕವೆಂಬಲ್ಲಿ ಶ್ರೀ ಕೃಷ್ಣನು ಮತ್ತೊಂದು ಕಾರಣವನ್ನು ನಿರೂಪಿಸುತ್ತಾನೆ:—

**(3) ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಂ ।**
**ತಥಾಪಿ ತ್ವಂ ಮಹಾಬಾಹೋ ನೈವಂ ಶೋಚಿತುಮರ್ಹಸಿ ॥**
**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನತ್ವಂ ಶೋಚಿತುಮರ್ಹಸಿ ॥**
**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥**

—(2. 26–28.)

ಎಲೈ ಪಾರ್ಥನೇ ! ಜೀವನು ನಿಯಮೇನ ದೇಹಯೋಗ ರೂಪಜನನವನ್ನೂ, ದೇಹವಿಯೋಗ ರೂಪ ಮರಣವನ್ನೂ ಹೊಂದಿಯೇ ಹೊಂದುವನೆಂದು ತಿಳಿದವನಾದರೂ ನೀನು ಜೀವನನ್ನು ಕುರಿತು ಶೋಕಿಸುವುದಕ್ಕೆ ಕಾರಣವಿರುವುದಿಲ್ಲ. ಯಾತಕ್ಕೆಂದರೆ ಉತ್ಪನ್ನನಾದವನಿಗೆ ಮರಣವು ನಿಶ್ಚಯವು. ಮತ್ತು ಮೃತನಾದವನಿಗೆ ಪುನರ್ಜನ್ಮವು ನಿಯತವು ( ಆಮುಕ್ತಿ. ) ಆದುದರಿಂದ ಪರಿಹರಿಸಿಕೊಳ್ಳುವುದಕ್ಕೆ ಅಶಕ್ಯವಾದ, ನಿಯತವಾಗಿ ಪ್ರಾಪ್ತವಾಗುವ ಜನನ ಮರಣಗಳನ್ನು ಕುರಿತು ನೀನು ಶೋಕಿಸಬೇಡ.

ಎಲೈ ಭಾರತ ! ( ಭರತ ಕುಲೋತ್ಪನ್ನನೇ ! ) ಸಕಲ ಜೀವ ಶರೀರಗಳೂ ಮೂಲ ಪ್ರಕೃತಿರೂಪವಾದ ಮೂಲ ಕಾರಣದಿಂದ ಉತ್ಪನ್ನವಾದುವುಗಳು. ಜನ್ಮ ಮರಣಗಳ ಮಧ್ಯಕಾಲವಾದ ಸ್ಥಿತಿಕಾಲದಲ್ಲಿ ಸರ್ವರ ದೃಷ್ಟಿಗೂ ಸ್ಪಷ್ಟವಾಗಿ

ಕಾಣಿಸಲ್ಪಡತಕ್ಕವುಗಳು. ಪರಿಣಾಮದಲ್ಲಿ ಅವ್ಯಕ್ತನಾಮಕ ಮೂಲ ಪ್ರಕೃತಿಯಲ್ಲಿ ಲಯವನ್ನು ಹೊಂದುತ್ತವೆ. ಹೀಗೆ ಜೀವಾತ್ಮರ ತತ್ತ್ವವನ್ನು ಮತ್ತು ಜೀವರುಗಳ ದೇಹ ಸ್ವರೂಪವನ್ನು ವಿಮರ್ಶಿಸಿ ತಿಳಿದ ಮೇಲೆ ಯಾತಕ್ಕೆ ವಿಷಾದಪಡಬೇಕು ?

ಜೀವರುಗಳು ಅಸ್ವತಂತ್ರರು. ದೇಹ ನಾಶವು ಅಪರಿಹಾರ್ಯವು. ಅಸ್ವತಂತ್ರನಾದ ಜೀವನಿಗೆ ಸ್ವತಂತ್ರ ಪುರುಷನಿಂದ ನಿಯತವಾಗಿ ಜನಿಮೃತಿಗಳು ಬರುತ್ತಿರುವುವು. ನಿನ್ನ ಅಧೀನವಲ್ಲದ ವಿಷಯದಲ್ಲಿ ನೀನು ಯಾತಕ್ಕೆ ಪರಿತಪಿಸುತ್ತೀ ? ಎಂದು ಶ್ರೀ ಕೃಷ್ಣನ ವಾಕ್ಯದ ತಾತ್ಪರ್ಯವು.

ಹುಟ್ಟಿದವನಿಗೆ ಮರಣವು ಎಂದಾದರೂ ಅವರ್ಜನೀಯವು. ಇನ್ನೂ ವಿಚಾರ ಮಾಡಿದರೆ ಧರ್ಮ ಯುದ್ಧದಲ್ಲಿ ಮರಣದಿಂದ ಭೀಷ್ಮಾದಿಗಳಿಗೆ ಉತ್ತಮ ದೇಹ ಲಾಭವೇ ಬರುವುದರಿಂದ ಅವರ ದೇಹ ನಾಶವನ್ನು ಕುರಿತು ವಿಷಾದಪಡುವುದು ನ್ಯಾಯವಲ್ಲವೆಂದು ಶ್ರೀ ಕೃಷ್ಣನು ಹೇಳಿದನು. ಆದರೆ ದುರ್ಬುದ್ಧಿಗಳಾದ ಧಾರ್ತರಾಷ್ಟ್ರರಿಗೆ ಮರಣಾನಂತರದಲ್ಲಿ ಯಾತನಾ ದೇಹಪ್ರಾಪ್ತಿಯು ಸಂಭಾವಿತವು. ಉತ್ತಮ ಜನ್ಮಾಂತರ ಪ್ರಾಪ್ತಿಯು ಅಧರ್ಮಶೀಲರಿಗೆ ಬರಲಾರದು. ಆದುದರಿಂದ ಅವರುಗಳು ಸ್ವಕರ್ಮಾರ್ಜಿತವಾದ ಲೋಕಗಳನ್ನು ಕಾಲಪ್ರಾಪ್ತವಾದ ಮರಣಾನಂತರ ಹೊಂದಬಹುದು. ನಾನು ಅವರನ್ನು ಸಂಹಾರ ಮಾಡಿ, ಅವರುಗಳಿಗೆ ದುಃಖವನ್ನು ಉಂಟು ಮಾಡುವುದು ಸರಿಯಲ್ಲವೆಂಬ ಅರ್ಜುನನ ಶಂಕೆಗೆ ಶ್ರೀ ಕೃಷ್ಣನು ಉತ್ತರವನ್ನು ಹೇಳುತ್ತಾನೆ :—

**(4) ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥**
—(2. 16.)

ದುಷ್ಕರ್ಮಕ್ಕೆ ಸುಖವು ಇರುವುದಿಲ್ಲ, ಸತ್ಕರ್ಮಕ್ಕೆ ದುಃಖವು ಇರುವುದಿಲ್ಲ. ಈ ಎರಡು ವಿಷಯಗಳ ನಿರ್ಣಯವು ತತ್ವದರ್ಶಿಗಳಾದ ಜ್ಞಾನಿಗಳಿಂದ ನಿಶ್ಚಿತವಾಗಿರುವುದು. *

---

* ಈ ಶ್ಲೋಕಕ್ಕೆ ಪೂರ್ವದಲ್ಲಿ ಒಂದು ಅರ್ಥವು ನಿರೂಪಿತವಾಗಿತ್ತು. ಈಗ "ಸತ್" ಶಬ್ದಕ್ಕೆ ಸಾಧು ಕರ್ಮವೆಂದೂ "ಅಸತ್" ಶಬ್ದಕ್ಕೆ ದುಷ್ಕರ್ಮವೆಂದೂ ಅರ್ಥವು ಮಾಡಲ್ಪಟ್ಟಿರುವುದು. ಗೀತೆಯಲ್ಲಿಯೇ ಶ್ರೀ ಕೃಷ್ಣನು " ಪ್ರಶಸ್ತೇಕರ್ಮಣಿ ತಥಾಸಚ್ಛಬ್ದಃಪಾರ್ಥ ಯುಜ್ಯತೇ " ಎಂಬಲ್ಲಿ ಈ ಅರ್ಥವನ್ನು ನಿರೂಪಿಸಿರುವನು. ಭಾರತವು ದಶಾರ್ಥಗಳಿಂದ ಸಹಿತವಾಗಿ ಶ್ರೀ ಪರಮಾತ್ಮನ ಉತ್ಕರ್ಷವನ್ನು ಬೋಧಿಸುವುದೆಂದು ಶ್ರೀಮದಾಚಾರ್ಯರು ಹೇಳಿರುತ್ತಾರೆಂದು ಮಧ್ವವಿಜಯದಿಂದ ತಿಳಿದು ಬರುವುದು. ಶ್ರೀಮದಾಚಾರ್ಯರು ಕೆಲವು ಗೀತಾ ಶ್ಲೋಕಗಳಿಗೆ ಮಾತ್ರ ಎರಡು ಅರ್ಥವನ್ನು ಮಾಡಿ ತೋರಿಸಿ **" ಲೇಶತಃ "** ತಮ್ಮ ಬುದ್ಧಿಶಕ್ತಿಯನ್ನು ಪ್ರಕಾಶಪಡಿಸಿರುವರು. ಪರ

ನಾರಾಯಣ ದ್ವೇಷಿಗಳಾದ, ಅತಏವ ಭೂಭಾರರೂಪರಾದ ಮಹಾ ದೈತ್ಯರು ಸಂಹೃತರಾಗಿ ದುರ್ದೇಹಗಳನ್ನು ಹೊಂದಿ ದುಃಖಪಡುವುದು ಅವರ್ಜನೀಯವು; ಆದುದರಿಂದ ನಾನು ಯಾತಕ್ಕೆ ಅವರನ್ನು ಸಂಹಾರ ಮಾಡಬೇಕೆಂದು ನೀನು ಪರಿತಪಿಸಬೇಕಾಗಿಲ್ಲ. ಮತ್ತು ಧರ್ಮಯುದ್ಧದಲ್ಲಿ ದುರ್ಜನ ಹನನವೆಂಬ ಸತ್ಕರ್ಮದಿಂದ ಮೋಕ್ಷಾದಿ ಸುಖ ಪ್ರಾಪ್ತಿಯು ಸಿದ್ಧವಾಗಿರುವುದರಿಂದ ಸ್ವಜನರನ್ನು ನಾನು ಹೇಗೆ ಸಂಹಾರ ಮಾಡಲೆಂದು ನೀನು ವಿಷಾದ ಹೊಂದಲು ಕಾರಣವಿಲ್ಲವೆಂದು ಶ್ರೀ ಕೃಷ್ಣನ ಭಾವವು. ದುರ್ಜನರಿಗೆ ದುರ್ದೇಹ ಪ್ರಾಪ್ತಿಯು ವಿಷಾದ ಕಾರಣವಲ್ಲ. ಮತ್ತು ಕ್ಷತ್ರಿಯನಿಗೆ ಧರ್ಮಯುದ್ಧದಲ್ಲಿ ದುರ್ಜನ ಹನನವು ದುಃಖಕರವಲ್ಲ.

4. ಆದರೂ ಮತ್ತೊಂದು ಪ್ರಬಲವಾದ ವಿಷಾದ ಕಾರಣವನ್ನು ಅರ್ಜುನನು ನಿರೂಪಿಸಬಹುದು. ಭೀಷ್ಮಾದಿಗಳು ಸ್ವರೂಪೇಣ ನಿತ್ಯರೇ. ಅವರು ದೇಹ ನಾಶವಾದ ನಂತರವೂ ಉತ್ತಮ ದೇಹಾಂತರವನ್ನು ಹೊಂದಬಹುದು. ದುರ್ಯೋಧನಾದಿಗಳು ದುಷ್ಟರಾದುದರಿಂದ ದುರ್ದೇಹವನ್ನು ಹೊಂದಿದರೂ ದುಃಖಪಡಬೇಕಾದುದಿಲ್ಲ. ಹೀಗಿದ್ದರೂ, ಸ್ವಜನರಾದ ಭೀಷ್ಮಾದಿಗಳಿಗೆ ಪರಿದೃಶ್ಯಮಾನವಾದ ದೇಹ ವಿಯೋಗವು ಪ್ರಾಪ್ತನಾದರೆ ಅವರ ದರ್ಶನ ಸ್ಪರ್ಶ ಸಂಭಾಷಣಾದಿಗಳು ತಪ್ಪಿ ಹೋಗಿ ದುಃಖಸಾಗರದಲ್ಲೇ ಮುಳುಗಬೇಕಾಗುವುದು. ಸ್ವಜನಶೂನ್ಯವಾದ ಹಸ್ತಿನಾವತಿಯು ನರಕತುಲ್ಯವಾಗುವುದಿಲ್ಲವೇ ? ಎಂಬ ಅರ್ಜುನನ ಶಂಕೆಗೆ ತಾಪತ್ರಯೋಪಶಾಮಕವಾದ ವಾಗಮೃತದಿಂದ ಶ್ರೀ ಕೃಷ್ಣನು ಸಮಾಧಾನವನ್ನು ನಿರೂಪಿಸುತ್ತಾನೆ :—

**(1) ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥**

—(2. 14.)

ಎಲೈ ಕೌಂತೇಯನೇ ! ಕೇವಲ ಇಂದ್ರಿಯಾರ್ಥ ಸನ್ನಿಕರ್ಷಗಳು ( ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ವಿಷಯಗಳಿಗೂ ಶ್ರೋತ್ರ, ತ್ವಕ್, ಚಕ್ಷು, ರಸನ, ಘ್ರಾಣಗಳೆಂಬ ಇಂದ್ರಿಯಗಳಿಗೂ ಕ್ರಮವಾಗಿ ಉಂಟಾಗುವ ಸಂಬಂಧಗಳು) ಶಬ್ದಾದಿ ವಿಷಯ ಸಾಕ್ಷಾತ್ಕಾರದ್ವಾರಾ ಸುಖ ದುಃಖಗಳನ್ನು ಕೊಡುವುವೆಂದು ತಿಳಿದಿರುವೆಯಾ ? (ಕೇವಲ ಶಬ್ದಾದಿಗಳು ಜ್ಞಾನದ್ವಾರಾ ಸುಖ ದುಃಖಗಳನ್ನುಂಟು ಮಾಡಲಾರವು. ಮತ್ತೇನೆಂದರೆ ವಿಷಯಾಭಿಮಾನವು ಇದ್ದರೇನೇ ಇಷ್ಟ ವಿಷಯ ಪ್ರಾಪ್ತಿಯಿಂದ ಸುಖವೂ ಅನಿಷ್ಟ ವಿಷಯಪ್ರಾಪ್ತಿಯಿಂದ ದುಃಖವೂ ಉಂಟಾಗುವುದು. ) ( ಪಂಶುಕ ಕುಸುಮ ಪ್ರವಾಹದಂತೆ ) ಶಬ್ದಾದಿ ವಿಷಯಗಳು ಬರುತ್ತಲೂ

---

ಸ್ಪರ ವಿರುದ್ಧವಾದ ಅದ್ವೈತ ಗೀತಾ ಭಾಷ್ಯವನ್ನು ಪರಾಮರ್ಶೆ ಮಾಡಿ ನಂತರ ದ್ವೈತ ಭಾಷ್ಯವನ್ನು ಅವಲೋಕಿಸಿದರೆ ತೃಷಾರ್ಥನಿಗೆ ಅಮರ ತರಂಗಿಣಿಯು ಸಿಕ್ಕಿದಂತೆ ಆನಂದವಾಗುವುದರಲ್ಲಿ ಸಂಶಯವಿಲ್ಲ.

ನಾಶವಾಗುತ್ತಲೂ ಇರುತ್ತವೆ. ಮತ್ತು ಸರ್ವ ವಿಷಯುಗಳೂ ಅನಿತ್ಯಗಳು, ಆದುದರಿಂದ ನಾಶಶಿರಸ್ಕವಾದ ಕ್ಷುದ್ರ ವಿಷಯುಗಳಲ್ಲಿ ಅಭಿಮಾನವನ್ನು ಬಿಟ್ಟು ಬಂಧುಗಳ ದರ್ಶನಾದ್ಯ ಭಾವದಿಂದ ದುಃಖರೂಪ ಚಿತ್ತವಿಕಾರವನ್ನು ಹೊಂದದೆ ಯುದ್ಧವನ್ನು ಮಾಡು.

ಲೌಕಿಕ ವಿಷಯುಗಳ ಅಪೇಕ್ಷೆಯಿಂದಲೂ, ಬಂಧುಗಳು ನನ್ನವರು, ಇವರೇ ನನಗೆ ಸುಖಪ್ರದರು ಎಂಬ ಅಭಿಮಾನದಿಂದಲೂ, ದುಷ್ಟವಾದ ಕ್ಷುದ್ರ ವಿಷಯುಗಳಲ್ಲಿ ಇವು ಮಹತ್ಸುಖಪ್ರದವೆಂಬ ಭ್ರಮದಿಂದಲೂ ಇಂದ್ರಿಯಾರ್ಥ ಸನ್ನಿಕರ್ಷವು ಶಬ್ದಾದಿ ವಿಷಯುಕ ಜ್ಞಾನವನ್ನೂ, ಹಾಗೆ ಉತ್ಪನ್ನವಾದ ಜ್ಞಾನವು ಸುಖ ದುಃಖಗಳನ್ನೂ ಉಂಟು ಮಾಡುತ್ತದೆ * ಸರ್ವ ಪ್ರಕಾರದಿಂದ ಅಭಿಮಾನಶೂನ್ಯನಾದವನಿಗೆ ಕ್ವಚಿತ್ ಸುಪ್ತ ಪುರುಷನಿಗಾಗುವಂತೆ ಶಬ್ದಾದಿ ಜ್ಞಾನವೇ ಉಂಟಾಗುವುದಿಲ್ಲ. ಕಥಂಚಿತ್ ಜ್ಞಾನವು ಉತ್ಪನ್ನವಾದರೂ ಸುಖ ದುಃಖಗಳು ಉತ್ಪನ್ನವಾಗುವುದಿಲ್ಲ. ಆದುದರಿಂದ ಬಂಧುಗಳಲ್ಲಿರುವ ಅಭಿಮಾನವನ್ನು ಬಿಟ್ಟು ಬಿಟ್ಟು, ಅವರ ದರ್ಶನಾದ್ಯಭಾವಗಳಿಂದ ದುಃಖವು ಉಂಟಾಗದಂತೆ ಇರುವ ಸ್ಥಿತಿಯನ್ನು ಹೊಂದು ಎಂದು ಶ್ರೀ ಕೃಷ್ಣನ ವಾಕ್ಯ ತಾತ್ಪರ್ಯವು.

5. ತಥಾಪಿ ಇನ್ನೂ ಒಂದೆರಡು ಶಂಕೆಗಳು ಉಳಿದೇ ಇರುವುವು. ದೈವ ನಿಯತ ಕಾರಣಗಳಿಂದ ತಾವೇ ಮರಣವನ್ನು ಹೊಂದುವ ಈ ಶತ್ರುಯೋಧರನ್ನು ನಾನು ಪ್ರಯತ್ನಪೂರ್ವಕವಾಗಿ ಯಾತಕ್ಕೆ ಸಂಹರಿಸಬೇಕು ? ಕಿಂಚ ಇವರನ್ನು ಸಂಹಾರ ಮಾಡಿ ಬಂಧು ದರ್ಶನಾದ್ಯಭಾವದಿಂದ ಪ್ರಸಕ್ತವಾಗುವ ದುಃಖವನ್ನು ಅಭಿಮಾನತ್ಯಾಗದಿಂದ ದೂರೀಕರಣೆ ಮಾಡಬೇಕೆಂಬ ಗುರುಭೂತವಾದ ಪ್ರಯತ್ನವು ಯಾತಕ್ಕೆ ? " ಪ್ರಕ್ಷಾಳನಾದ್ಧಿ ಪಂಕಸ್ಯ ದೂರಾದಸ್ಪರ್ಶನಂ ವರಂ ". ಕೆಸರಿನಲ್ಲಿ ಕಾಲಿಟ್ಟು ನಂತರ ಜಲದಿಂದ ಪಾದಪ್ರಕ್ಷಾಳನ ಮಾಡಿಕೊಂಡು ಶುದ್ಧಿಯನ್ನು ಹೊಂದುವದಕ್ಕಿಂತ ಮೊದಲೇ ಕೆಸರನ್ನು ತುಳಿಯದಂತೆ ರಸ್ತೆಯಲ್ಲಿ ಗಮನ ಮಾಡು

---

* ಅಭಿಮಾನವು ಮೂರು ಪ್ರಕಾರವಾಗಿರುತ್ತದೆ.

(1) ದೇಹೇಂದ್ರಿಯಾಂತಃಕರಣಗಳಿಗೂ ಜೀವನಿಗೂ ಇರುವ ಸಂಬಂಧ ವಿಶೇಷವು ಅಭಿಮಾನವೆನ್ನಿಸುತ್ತದೆ. ಸಂಸಾರಾವಸ್ಥೆಯಲ್ಲಿ ಇಂಥ ಅಭಿಮಾನವು ಇದ್ದರೆ ವಿಷಯ ಜ್ಞಾನವು ಉತ್ಪನ್ನವಾಗುತ್ತದೆ; ಇಂಥ ಅಭಿಮಾನವು ಇಲ್ಲದಿದ್ದರೆ ವಿಷಯ ಜ್ಞಾನವೇ ಉತ್ಪನ್ನವಾಗುವುದಿಲ್ಲ. ಸುಷುಪ್ತಿಯಲ್ಲಿ ಇಂಥ ಅಭಿಮಾನವಿಲ್ಲದುದರಿಂದ ಲೌಕಿಕ ಜ್ಞಾನವು ಉತ್ಪನ್ನವಾಗುವುದಿಲ್ಲ. ಜಾಗ್ರದವಸ್ಥೆಯಲ್ಲಿ ಈ ರೀತಿಯಾದ ಅಭಿಮಾನ ಪರಿತ್ಯಾಗವು ಬ್ರಹ್ಮಾಪರೋಕ್ಷ ಜ್ಞಾನ ಸಾಧ್ಯವು. ಆದುದರಿಂದಲೇ ಬ್ರಹ್ಮ ಜ್ಞಾನಿಗೆ ಸಮಾಧ್ಯವಸ್ಥೆಯಲ್ಲಿ ಅವಯವ ಛೇದವನ್ನು 'ಮಾಡಿದರೂ ದುಃಖವು ಉತ್ಪನ್ನವಾಗುವುದಿಲ್ಲ. ಈ ಅಭಿಮಾನವು ಸಂಸಾರದಲ್ಲಿ ಜಾಗ್ರದವಸ್ಥೆಯಲ್ಲಿ ಬ್ರಹ್ಮಾದಿ ಸರ್ವ ಜೀವರಿಗೂ ಇರುವುದು. ಉಪಯೋಗ ಭೇಧದಿಂದ ಇದು ಒಳ್ಳೆಯದೂ ಕೆಟ್ಟದೂ ಆಗುವುದು.

ವುದು ಉಚಿತವಾಗಿ ಲೋಕದಲ್ಲಿ ಕಂಡು ಬಂದಿರುವುದೆಂಬ ಅರ್ಜುನನ ಸಂದೇಹಕ್ಕೆ ಶ್ರೀ ಕೃಷ್ಣನು ಸಮಾಧಾನವನ್ನು ಹೇಳುತ್ತಾನೆ :—

**(1) ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥**
—(2. 15.)

ಅಭಿಮಾನವನ್ನು ಪರಿತ್ಯಾಗ ಮಾಡಿ ಇಂದ್ರಿಯಾರ್ಥ ಸನ್ನಿಕರ್ಷಜನ್ಯಶಬ್ದಾದಿ ಜ್ಞಾನದಿಂದ ಯಾವ ಪುರುಷನು ಸುಖ ದುಃಖರೂಪವಾದ ವಿಕಾರವನ್ನು ಹೊಂದುವುದಿಲ್ಲವೋ, ಅಂಥ ಸಮ ದುಃಖ ಸುಖನಾದ ( ಎಂದರೆ ದುಃಖವು ಹೇಗೆ ಅನುಪಾದೇಯವೋ ಹಾಗೆಯೇ ಸಕಲ ವಿಷಯ ಸೌಖ್ಯವೂ ಅನಿತ್ಯವೂ, ಅಲ್ಪವೂ, ಬ್ರಹ್ಮಜ್ಞಾನಕ್ಕೆ ವಿರೋಧಿಯೂ ಆದುದರಿಂದ ಅನುಪಾದೇಯವೆಂದು ತಿಳಿಯುವ ) ಬ್ರಹ್ಮಜ್ಞಾನಿಯು ಮೋಕ್ಷವನ್ನು ಹೊಂದುವುದಕ್ಕೆ ಅರ್ಹನಾಗುತ್ತಾನೆ.

ಈ ವಾಕ್ಯ ಪರ್ಯಾಲೋಚನೆಯಿಂದ ಈ ವಿಷಯವು ವಿಶದವಾಗಿ ತಿಳಿದು ಬರುವುದು. ಸ್ವಧರ್ಮವನ್ನು ಆಚರಿಸಿ ಅದರಿಂದ ಪ್ರಾಪ್ತವಾದ ದುಃಖಗಳನ್ನು ಅಭಿಮಾನ ಪರಿತ್ಯಾಗದಿಂದ ಪರಿಹರಿಸಿಕೊಳ್ಳುವುದು ಮೋಕ್ಷಸಾಧನೋಪಾಯವು. ಆದುದರಿಂದ ಬಂಧುಗಳನ್ನಾದರೂ ಧರ್ಮಯುದ್ಧದಲ್ಲಿ ಹನನ ಮಾಡಿ ಅಭಿಮಾನ ಪರಿತ್ಯಾಗದಿಂದ ಚಿತ್ತವಿಕಾರವನ್ನು ಹೊಂದದಿರುವುದು ಉತ್ತಮ ಸಾಧನವೆಂದು ನಿಶ್ಚಿತವಾಗುವುದು

ಪ್ರಕೃತ ಯುದ್ಧವು ನಾರಾಯಣ ದ್ವೇಷಿಗಳ ಹನನ ರೂಪವಾದುದರಿಂದ

---

(2) ಅಹಂತಾ ಮಮತಾರೂಪ ಭ್ರಮ ಜ್ಞಾನವು ಅಭಿಮಾನವೆನ್ನಿಸುವುದು. ನಾನೇ ಸ್ವತಂತ್ರನು. ಪಶು, ಪತ್ನೀ, ಬಾಂಧವರೆಲ್ಲರೂ ನನ್ನವರು; ನನಗೆ ಸ್ವತಂತ್ರವಾಗಿ ಸುಖಪ್ರದರು ಎಂದು ತಿಳಿಯುವ ಜ್ಞಾನವು ಭ್ರಮವು ಈ ಭ್ರಮದಿಂದ ರಾಗ-ದ್ವೇಷಗಳೂ, ವಿಷಯಾಕಾಂಕ್ಷೆಯೂ ಉತ್ಪನ್ನವಾಗಿ ತನಗೆ ದುಃಖಪ್ರದವಾದ ವಸ್ತುಗಳಲ್ಲೆಲ್ಲಾ ದ್ವೇಷವು ಉಂಟಾಗುವುದು, ಈ ದುರಭಿಮಾನವು ಪರಮಾತ್ಮನ ಸ್ವಾತಂತ್ರ್ಯ ಪರಿಜ್ಞಾನದಿಂದ ನಷ್ಟವಾಗುವುದು. ಈ ದುರಭಿಮಾನದ ಪರಿತ್ಯಾಗವುಳ್ಳವನಿಗೆ ( ಮನಸ್ಸು ವಿಷಯಗಳಲ್ಲಿ ಆಸಕ್ತಿರಹಿತವಾಗಿರುವುದರಿಂದ ) ಕ್ವಚಿತ್ ಪದಾರ್ಥ ಜ್ಞಾನವೇ ಉತ್ಪನ್ನವಾಗುವುದಿಲ್ಲ. ಅವರ್ಜನೀಯವಾಗಿ ಚಕ್ಷುರಾದಿ ಇಂದ್ರಿಯಗಳಿಗೂ, ವಿಷಯಗಳಿಗೂ ಇರುವ ಸನ್ನಿಕರ್ಷ ಪ್ರಭಾವದಿಂದ ಜ್ಞಾನವು ಉತ್ಪನ್ನವಾದರೂ ಸುಖದುಃಖಗಳು ಉತ್ಪನ್ನವಾಗುವುದಿಲ್ಲ. ಅವರ್ಜನೀಯವಾಗಿ ಸುಖ ದುಃಖಗಳು ಉತ್ಪನ್ನವಾದರೂ ಜ್ಞಾನಿಯು ಸುಖದಿಂದ ಹಿಗ್ಗುವುದಿಲ್ಲ, ದುಃಖದಿಂದ ಕುಗ್ಗುವುದಿಲ್ಲ. ದುರ್ವಿಷಯಜನಿತ ಸುಖ ದುಃಖಗಳ ಭೋಗವು ಉಂಟಾಗುವದಿಲ್ಲ. ಅಹಂತಾ ಮಮತೆಗಳನ್ನು ಉಳ್ಳವನಿಗೆ ಅರಿಷಡ್ವರ್ಗಗಳು ಉತ್ಪನ್ನವಾಗಿ ದುರ್ವಿಷಯಗಳಲ್ಲಿ ಸ್ನೇಹವೂ, ಸದ್ವಿಷಯಗಳಲ್ಲಿ ದ್ವೇಷವೂ ಉತ್ಪನ್ನವಾಗಿ ಕ್ಷಿಪ್ರದಲ್ಲಿ ನರಕಾದ್ಯನರ್ಥವನ್ನು ಹೊಂದುವನು. ಅಂತಹ ಮಮತಾದಿಗಳು ಸರ್ವ ಕಾಲದಲ್ಲೂ ದುಷ್ಟವಾದವುಗಳು.

ಸ್ವಧರ್ಮವೆಂದೂ, ಅದರ ಪರಿತ್ಯಾಗದಿಂದ ಬಹಳ ಅನರ್ಥಗಳುಂಟೆಂದೂ ಶ್ರೀ ಕೃಷ್ಣನು ಹೇಳುತ್ತಾನೆ :—

(2) ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।
ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ಕ್ಷತ್ರಿಯಸ್ಯ ನ ವಿದ್ಯತೇ ॥
ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಂ ।
ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಂ ॥
ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।
ತತಸ್ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥
ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಮ್ ।
ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥
ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ ।
ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಂ ॥
ಅವಾಚ್ಯವಾದಾಂಶ್ಚ ಬಹೂನ್ ವದಿಷ್ಯಂತಿ ತವಾಹಿತಾಃ ।
ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಂ ॥
ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ ।
ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥
—(2. 30-37.)

---

3. ವಿಷಯಗಳಲ್ಲಿ ಶೋಭನಾಧ್ಯಾಸವು ತೃತೀಯ ಪ್ರಕಾರದ ಅಭಿಮಾನವು; ಎಂದರೆ, ಮೋಕ್ಷವಿರೋಧಿಯಾದ ದುರ್ವಿಷಯಗಳಲ್ಲಿ ಇದು ನನಗೆ ಉತ್ತಮ ಸುಸಾಧನವೆಂಬ ದುಷ್ಟ ಜ್ಞಾನವು ಮತ್ತು ತಜ್ಜನಿತರಾಗವು; ಮತ್ತು ಸದ್ವಿಷಯಗಳಲ್ಲಿ ( ಮೋಕ್ಷೋಪಯೋಗಿಯಾದ ವಿಷಯಗಳಲ್ಲಿ ) ಇದು ನನಗೆ ದುಃಖ ಸಾಧನವೆಂಬ ಅನಿಷ್ಟ ಜ್ಞಾನವು, ತಜ್ಜನಿತ ದ್ವೇಷವು ಅಭಿಮಾನವೆನ್ನಿಸುವವು. ಇದು ಯಾವಾಗಲೂ ನಾಶಕಾರಣವಾದುದು. ಈ ದುರಭಿಮಾನದ ಪರಿತ್ಯಾಗದಿಂದ ಕೆಲವು ದುರ್ವಿಷಯಗಳ ಸನ್ನಿಕರ್ಷವಿದ್ದರೂ ( ಮನಸ್ಸು ಅನ್ಯತ್ರ ಆಸಕ್ತವಾಗಿರುವದರಿಂದ ) ಕ್ವಚಿತ್ ಜ್ಞಾನವೇ ಉತ್ಪನ್ನವಾಗುವದಿಲ್ಲ. ಕಥಂಚಿತ್ ಅವರ್ಜನೀಯವಾಗಿ ಜ್ಞಾನವು ಉತ್ಪನ್ನವಾದರೂ ದುರ್ವಿಷಯಗಳ ( ಮೋಕ್ಷೋಪಯೋಗಿಯಲ್ಲದ ವಿಷಯಗಳ ) ಸನ್ನಿಕರ್ಷಜನಿತ ಜ್ಞಾನದಿಂದ ಸುಖವು ಉತ್ಪನ್ನವಾಗುವದಿಲ್ಲ. ಶತ್ರುಪುತ್ರನ ದರ್ಶನದಿಂದ ಸುಖವು ಉಂಟಾಗುವದೇ ? ಹೀಗೆಯೇ ಸದ್ವಿಷಯ ದರ್ಶನಾದಿಗಳಿಂದ ಯಾವಾಗಲೂ ದುಃಖವು ಉಂಟಾಗುವದಿಲ್ಲ. ಕಥಂಚಿತ್ ಅವರ್ಜನೀಯವಾಗಿ ಸ್ವಲ್ಪ ದುಃಖವು ಬಂದರೂ ಜ್ಞಾನಿಯು ನೀಚತೆಯನ್ನು ಹೊಂದುವದಿಲ್ಲ. ಮಾಘಸ್ನಾನದಿಂದ ಛಳಿಯಾದರೂ ಜ್ಞಾನಿಯು ಸಹನ ಮಾಡುವನಷ್ಟೆ !

ಜೀವಸ್ವರೂಪವು ನಾಶವಾಗುವುದಿಲ್ಲವೆಂದು ತಿಳಿಯುವುದಲ್ಲದೆ ಈ ಯುದ್ಧವು ಸ್ವಧರ್ಮ ರೂಪವಾದುದೆಂದೂ ತಿಳಿದು ನೀನು ಭಯದಿಂದ ಶರೀರಕಂಪವನ್ನು ಹೊಂದಕೂಡದು. ಕ್ಷತ್ರಿಯನಿಗೆ ಧರ್ಮಯುದ್ಧಕ್ಕಿಂತ ಹೆಚ್ಚು ಪರಲೋಕ ಸುಖ ಕರವಾದ ಮತ್ತು ಧಾರಕನಾದ ವಿಷ್ಣುವಿಗೆ ಪ್ರೀತಿಕರವಾದ ಧರ್ಮವು ಇರುವುದಿಲ್ಲ. ದೈವೇಚ್ಛೆಯಿಂದ ಪ್ರಾಪ್ತವಾದ ಪಾರಲೌಕಿಕ ಸುಖಸಾಧನವಾದ ಇಂಥ ಯುದ್ಧ ವನ್ನು ಪುಣ್ಯವಂತರಾದ ಕ್ಷತ್ರಿಯರು ಹೊಂದುತ್ತಾರೆ. ಜಗದ್ಧಾರಕನಾದ ಪರ ಮಾತ್ಮನಿಗೆ ಪ್ರೀತಿಕರವಾದ ಮೋಕ್ಷ ಸಾಧನಾರ್ಥವಾದ ಯುದ್ಧವನ್ನು ನೀನು ಮಾಡದೇ ಇದ್ದರೆ, ನೀನು ಸ್ವಧರ್ಮವನ್ನೂ ಕೀರ್ತಿಯನ್ನೂ ಕಳೆದುಕೊಂಡು ಪಾಪ ವನ್ನು ಹೊಂದುತ್ತೀಯೆ. ಸಕಲ ಪ್ರಜೆಗಳೂ ಶಾಶ್ವತವಾದ ನಿನ್ನ ಅಪಕೀರ್ತಿಯನ್ನು ಆಡಿಕೊಳ್ಳುತ್ತಾರೆ. ಲೋಕದಲ್ಲಿ ಮಾನಿಯಾದ ಪುರುಷನಿಗೆ ಅಪಕೀರ್ತಿಯು ಮರಣಕ್ಕಿಂತ ಅಧಿಕ ದುಃಖಕರವು. ಯಾರು ನಿನ್ನನ್ನು ಬಹು ಗೌರವಿಸುತ್ತಿದ್ದರೋ ಅಂಥ ಮಹಾರಥರು ನಿನ್ನನ್ನು ಭಯದಿಂದ ಓಡಿ ಹೋದನೆಂದು ತಿಳಿಯುವರು. ನೀನು ಅವರ ಮನಸ್ಸಿನಲ್ಲಿ ಲಾಘವವನ್ನು ಹೊಂದುತ್ತೀಯೆ. ನಿನ್ನ ಶತ್ರುಗಳು ನಿನ್ನ ಸಾಮರ್ಥ್ಯವನ್ನು ನಿಂದಿಸುವವರಾಗಿ ಅವಾಚ್ಯನಾಗಿ ನಿನ್ನನ್ನು ಬೈಯುತ್ತಾರೆ. ಅದಕ್ಕಿಂತಲೂ ಇನ್ನು ಅಧಿಕ ದುಃಖವು ಯಾವುದು ಇರುವುದು ? ನೀನು ಯುದ್ಧ ದಲ್ಲಿ ಮೃತನಾದರೆ ಸ್ವರ್ಗವನ್ನು ಹೊಂದುತ್ತೀಯೆ. ಜಯಿಸಿದರೆ ರಾಜ್ಯವನ್ನು ಅನುಭವಿಸುತ್ತಿಯೆ. ಆದುದರಿಂದ ಯುದ್ಧ ಮಾಡುವುದಕ್ಕೆ ಕೃತನಿಶ್ಚಯನಾಗಿ ಯುದ್ಧಸನ್ನದ್ಧನಾಗು

6. ಈ ಪ್ರಕಾರವಾಗಿ ಅರ್ಜುನನು ಯುದ್ಧ ಪರಿತ್ಯಾಗದಲ್ಲಿ ಹೇಳಿದ ಕಾರಣ ಗಳನ್ನೆಲ್ಲಾ * ತತ್ತ್ವೋಪದೇಶದಿಂದ ಪರಿಹಾರ ಮಾಡಿ ಶ್ರೀ ಕೃಷ್ಣನು ತನ್ನ ಸಾಂಖ್ಯೋಪದೇಶವನ್ನು ಉಪಸಂಹಾರ ಮಾಡುತ್ತಾನೆ :—

**(1) ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥**
—(2. 38.)

---

ಪ್ರಕೃತದಲ್ಲಿ ಈ ಎರಡನೆಯ ಮೂರನೆಯ ಅಭಿಮಾನಗಳನ್ನು ಪರಿತ್ಯಾಗ ಮಾಡಿ ಧರ್ಮ ಯುದ್ಧವು ಅಧರ್ಮವೆಂಬ ಭ್ರಮವನ್ನೂ, ದುಷ್ಟರಾದ ದುರ್ಯೋಧನಾದಿಗಳಲ್ಲಿ ಇವರು ನನಗೆ ಸುಖ ಸಾಧನರು ಎಂಬ ಭ್ರಮವನ್ನೂ ಪರಿತ್ಯಾಗ ಮಾಡಿ ಅವರ ಹನನದಿಂದ ದುಃಖವನ್ನೇ ಹೊಂದ ಬೇಡ; ಕಥಂಚಿತ್ ಸ್ವಲ್ಪ ದುಃಖವು ಬಂದರೂ ಮೋಕ್ಷರೂಪ ಮಹಾಫಲ ಸಾಧನವಾದುದರಿಂದ, ಯಜ್ಞದಲ್ಲಿ ಧೂಮವ್ಯಾಪ್ತಿಯನ್ನು ಸಹಿಸುವಂತೆ, ಆ ದುಃಖವನ್ನು ಸಹನ ಮಾಡು ಎಂದು ಶ್ರೀ ಕೃಷ್ಣನ ಉಪದೇಶ ಭಾವವು.

* ದೇಹಾನ್ಯಜೀವವೇ ಇಲ್ಲವಾದುದರಿಂದ ದೇಹನಾಶವಾದರೆ ಆತ್ಮನಾಶವು ಪ್ರಸಕ್ತ ವಾಗುವದರಿಂದ ಸರ್ವನಾಶಕವಾದ ಬಾಣ ಪ್ರಯೋಗವನ್ನು ನಾನು ಮಾಡಲಾರನೆಂಬ ಅರ್ಜುನನ

ಜೀವ ಸ್ವರೂಪವು ನಿತ್ಯವಾದುದೆಂದು ತಿಳಿದು, ದೇಹನಾಶವು ಅಪರಿಹಾರ್ಯ ವಾದುದೆಂದು ತಿಳಿದು, ಜೀವದೇಹ ಸಂಬಂಧ ವಿಯೋಗದಿಂದ ಪ್ರಾಪ್ತವಾಗುವ ಬಂಧುದರ್ಶನಾದ್ಯ ಭಾವಜನಿತ ದುಃಖಗಳನ್ನು ಅಭಿಮಾನ ತ್ಯಾಗದಿಂದ ಪರಿಹರಿಸಿ ಕೊಂಡು, ಸುಹೃಜ್ಜನ ದರ್ಶನ, ಸ್ಪರ್ಶಾದಿ ಜನಿತ ಸುಖವೂ ( ಲೌಕಿಕ ವಿಷಯ ಸುಖವೂ ) ದುಃಖವೂ ಸಮಾನವೇ ಎಂದರೆ ದುಃಖವು ಹೇಗೆ ಅನಿಷ್ಟವೋ ಹಾಗೆಯೇ ವಿಷಯ ಸುಖವೂ ಮೋಕ್ಷ ಸಾಧನ ವಿರೋಧಿಯಾದುದರಿಂದ ಅನಿಷ್ಟ ವೆಂದು ತಿಳಿದು, ಸುಖ ದುಃಖಗಳಲ್ಲಿ ಸಮನಾಗಿ, ಯುದ್ಧವು ಸ್ವಧರ್ಮ ರೂಪ ವಾದುದರಿಂದ ರಾಜ್ಯಲಾಭವಾದರೂ ಸರಿಯೇ, ರಾಜ್ಯಹಾನಿಯಾದರೂ ಸರಿಯೇ, ನಿರ್ವಿಕಾರನಾಗಿ, ಯುದ್ಧವು ಸ್ವಧರ್ಮ ರೂಪವಾದುದರಿಂದ ಜಯಪ್ರಾಪ್ತಿಯನ್ನೂ ಅಪಜಯವನ್ನೂ ಸಮವೆಂದು ತಿಳಿದು, **ತತಃ**— ಈ ಪೂರ್ವೋಕ್ತ ತತ್ವಾನು ಸಂಧಾನವುಳ್ಳವನಾಗಿ ಅಥವಾ ಸರ್ವ ವ್ಯಾಪ್ತನಾದ, ಗುಣಪೂರ್ಣನಾದುದರಿಂದ "**ತತ್**" ಎಂಬ ಹೆಸರುಳ್ಳ ಪರಮಾತ್ಮನಿಂದ ನಾನು ಪ್ರೇರಿತನಾಗಿರುತ್ತೇನೆ, ನಾನು ನಿಯಮ್ಯನಾಗಿರುತ್ತೇನೆ, ನಾನು ಸ್ವತಂತ್ರನಲ್ಲವೆಂದು ತಿಳಿದು, ಯುದ್ಧಾರ್ಥ ವಾಗಿ ಸನ್ನದ್ಧನಾಗು. ಈ ಬುದ್ಧಿಯಿಂದ ಯುದ್ಧವನ್ನು ಮಾಡಿದರೆ ನೀನು ಪಾಪ ವನ್ನು ಹೊಂದುವುದಿಲ್ಲ.

ಇದು ಕೃಷ್ಣನ ಮತವು. ಸಂಕ್ಷೇಪದಿಂದ ತಾನು ಉಪದೇಶ ಮಾಡಿದ ಈ ತತ್ವವನ್ನೇ ಉಳಿದ ಹದಿನಾರೂವರೆ ಅಧ್ಯಾಯಗಳಲ್ಲಿ ವಿಸ್ತರಿಸಿ ಹೇಳಿರುತ್ತಾನೆ. ಶ್ರೀ ಕೃಷ್ಣನು ಅದ್ವೈತಿಯಾಗಿದ್ದರೆ ಈ ಸಾಂಖ್ಯೋಪದೇಶದ ಉಪಸಂಹಾರವನ್ನು

---

ಶಂಕೆಯು "**ದೇಹಿನೋಽಸ್ಮಿನ್ ಯಥಾ ದೇಹೇ । ಕೌಮಾರಂ ಯೌವನಂ ಜರಾ ॥ ತಥಾ ದೇಹಾಂತರ ಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ**" ಎಂಬ ಶ್ಲೋಕದಿಂದಲೇ ಪರಿಹೃತವಾಗಿರುವುದು. "**ದೇಹಿನಃ**" ಎಂದರೆ ದೇಹವುಳ್ಳವನಿಗೆ ಎಂದ ರ್ಥವು. ಇದರಿಂದಲೇ ದೇಹವು ಭಿನ್ನವು, ದೇಹವುಳ್ಳ ಆತ್ಮನು ಭಿನ್ನನು ಎಂದು ಸಿದ್ಧವಾಗುವುದು. ದೇಹಾತಿರಿಕ್ತವಾದ ಆತ್ಮನೇ ಇಲ್ಲವೆಂಬ ಚಾರ್ವಾಕ ಮತದಲ್ಲಿ ಮರಣವೆಂದರೇನು ? ಎಂಬ ಪ್ರಶ್ನೆಗೆ ಉತ್ತರವು ದುರ್ಘಟವಾಗುವುದು. ಸಮಗ್ರಾವಯವವುಳ್ಳ ಮೃತ ದೇಹಕ್ಕೂ ಜೀವವುಳ್ಳ ದೇಹಕ್ಕೂ ಈ ಮತದಲ್ಲಿ ವೈಷಮ್ಯವನ್ನು ನಿರೂಪಿಸುವುದೇ ಕಷ್ಟವಾಗುವುದು. ದೇಹವೇ ಆತ್ಮವಾದರೆ ಜನರು ಕ್ಷೌರ ಮಾಡಿಸಿಕೊಂಡಾಗಲೆಲ್ಲಾ ಆತ್ಮಭೇದವನ್ನು ಹೊಂದಿದರೆಂದು ಒಪ್ಪಬೇಕಾಗುವುದು. "**ಅಂತ ವಂತ ಇಮೇ ದೇಹಾಃ ನಿತ್ಯಸ್ಯೋಕ್ತಾಃ ಶರೀರಿಣಃ**" ಇತ್ಯಾದಿ ಶ್ಲೋಕಗಳಲ್ಲಿ ಶ್ರೀ ಕೃಷ್ಣನು ಜೀವನ ದೇಹವು ನಾಶ ಹೊಂದತಕ್ಕದ್ದು, ಜೀವನ ಸ್ವರೂಪವು ನಿತ್ಯವು ಎಂದು ವಿಭಾಗ ಮಾಡಿ ನಿರೂಪಿಸಿರುವುದರಿಂದ ಮತ್ತು ಜನ್ಮಾಂತರಗಳನ್ನೂ ಸಾಧನೆ ಮಾಡಿರುವುದರಿಂದ ಈ ತತ್ವವು ಗೀತಾ ವಿರುದ್ಧವೆಂದು ಹೆಚ್ಚು ಹೇಳಬೇಕಾದುದಿಲ್ಲ. ಅತಿ ಕ್ಷುದ್ರ ಮತವಾದುದರಿಂದಲೂ "ನನ್ನ ದೇಹವು" ಎಂಬ ಸರ್ವ ಜನರುಗಳ ಪ್ರತೀತಿಯಿಂದಲೇ ಹತವಾಗಿರುವುದರಿಂದಲೂ ಈ ವಿಷಯ ದಲ್ಲಿ ಹೆಚ್ಚು ಚರ್ಚೆಯನ್ನು ಮಾಡಬೇಕಾಗಿಲ್ಲ.

"ತತೋಯುದ್ಧಾಯ ಯುಜ್ಯಸ್ವ" ಎಂದು ಮಾಡುತ್ತಿರಲಿಲ್ಲ. "ತತೋಯುದ್ಧಾನ್ನಿವರ್ತಸ್ವ" ಎಂದು ಹೇಳುತ್ತಿದ್ದನು. ತತಃ ಎಂಬ ಈ ಹೇತು ಸೂಚಕವಾದ ಪೂರ್ವೋಕ್ತ ಕಾರಣ ಪರಾಮರ್ಶಿಯಾದ ಪದವು ಅದ್ವೈತಿಗಳ ಕತ್ತನ್ನು ಕುಯ್ಯುವುದು. ಇಪ್ಪತ್ತೇಳು ಶ್ಲೋಕಗಳಿಂದ ಪಾರಮಾರ್ಥಿಕ ತತ್ತ್ವವನ್ನು ಶ್ರೀ ಕೃಷ್ಣನು ಹೇಳಿ, ನಂತರ ವ್ಯಾವಹಾರಿಕ ಧರ್ಮವನ್ನು ಉಪದೇಶ ಮಾಡಿದನೆಂದು ಶಂಕರಾಚಾರ್ಯರು ಹೇಳಿರುವರು. ಇದು ಅಸಂಬದ್ಧ ಪ್ರಲಾಪವೆಂಬುದು "ತತೋಯುದ್ಧಾಯ ಯುಜ್ಯಸ್ವ" ಎಂಬ ಶ್ರೀ ಕೃಷ್ಣನ ಶ್ಲೋಕಾಂತ್ಯಪಾದವು ತಾಡನ ಮಾಡಿದಂತೆ ನಿರೂಪಿಸುತ್ತಿರುವುದು. ಧರ್ಮಾನುಷ್ಠಾನಕ್ಕೂ ಸಾಂಖ್ಯ ತತ್ವಾನುಸಂಧಾನಕ್ಕೂ ಕಾರ್ಯಕಾರಣ ಭಾವವಿರುವುದು ಎಂದು ಸ್ಪಷ್ಟವಾಗಿ "ತತಃ" ಎಂಬ ಹೇತುವಾಚಕ ಪದವು ಬೋಧಿಸುವುದು. ಶಂಕರಾಚಾರ್ಯರು ಹೇಳಿರುವಂತೆ, ಸರ್ವ ಕರ್ಮ ಸಂನ್ಯಾಸಪೂರ್ವಕವಾದ ಬ್ರಹ್ಮೈಕ್ಯ ಜ್ಞಾನವು ನಿಜತತ್ತ್ವವಾಗಿದ್ದರೆ ಈ ಶ್ಲೋಕಾರ್ಥವು ಈ ರೀತಿಯಾಗಿ ಆಗುವುದು :— "ಸರ್ವ ಕರ್ಮ ಸಂನ್ಯಾಸಪೂರ್ವಕವಾದ ಬ್ರಹ್ಮೈಕ್ಯ ಜ್ಞಾನವು ಪರಮ ತತ್ತ್ವವೆಂದು ತಿಳಿದು, ಸುಖ ದುಃಖಗಳಲ್ಲೂ ಲಾಭಾಲಾಭಗಳಲ್ಲೂ ಜಯಾಪಜಯಗಳಲ್ಲೂ ಸಮನಾಗಿ ಎಂದರೆ ಸರ್ವವೂ ಮಿಥ್ಯಾ ಎಂದು ತಿಳಿದು, ತತಃ = ಅನಂತರದಲ್ಲಿ ಅಥವಾ ಈ ಕಾರಣಗಳದೆಸೆಯಿಂದ, ಭಯಂಕರ ಯುದ್ಧದಲ್ಲಿ ಸನ್ನದ್ಧನಾಗು. ನಿನಗೆ ಈ ಪ್ರಕಾರವಾದ ಯುದ್ಧದಿಂದ ಪಾಪವಿಲ್ಲ."

ಈ ಅರ್ಥವು ಅತ್ಯಂತ ಅಸಂಗತವಾದ, ದುರರ್ಥವೆಂದು ಸ್ಪಷ್ಟವಾಗಿರುವುದು. ಸಾಂಖ್ಯಾನುಸಂಧಾನವನ್ನೂ ಜಗನ್ಮಿಥ್ಯಾತ್ವಾನುಸಂಧಾನವನ್ನೂ ಹೊಂದಿದ ನಂತರ ಯುದ್ಧಕ್ಕೆ ಸನ್ನದ್ಧನಾಗು ಎಂದು ಹೇಳುವವನು ವಂಚಕನು ಅಥವಾ ಮೂಢನು; ಕೇಳುವವನು ಭ್ರಾಂತನು ಅಥವಾ ಅತ್ಯಂತ ಬುದ್ಧಿಶೂನ್ಯನಾದ ಪಶುವು ಎಂದು ಪ್ರಾಪ್ತವಾಗುವುದು. ಕೃಷ್ಣಾರ್ಜುನರ ಸಂವಾದವು ಅಥವಾ ಕೃಷ್ಣೋಪದೇಶಾನುಸಾರಿಯಾದ ಅರ್ಜುನನ ಯುದ್ಧವು ಗಾರ್ಧಭಗಾಯಕನ ಸಮಯದಲ್ಲಿ ಉಷ್ಟ್ರ ತಾಂಡವ ರಚನೆಯಂತೆ ಅಪಹಾಸಾಸ್ಪದವಾದ, ಮಂಕು ಮಿತ್ರರ ಸಂಭಾಷಣೆಯೆಂದು ಪ್ರಾಪ್ತವಾಗುವುದು. ಆದುದರಿಂದ ಶ್ರೀ ಕೃಷ್ಣೋಪದಿಷ್ಟ ಸಾಂಖ್ಯವು ಅದ್ವೈತವೆಂದು ಉಪಪಾದಿಸುವುದು ಪ್ರಬಲವಾದ ನರನಾರಾಯಣರ ಅವಜ್ಞೆಯಾಗುವುದೆಂದು ನಾವು ನಿರೂಪಿಸಿಯೇ ಇರುತ್ತೇವೆ.

———

# 12. ಹನ್ನೆರಡನೆಯ ಅಂಶವು.

## ಸಾಂಖ್ಯ ತತ್ತ್ವೋಪದೇಶವು.

( ಮುಂದುವರಿಸಿದ್ದು. )

## ಜ್ಞಾನವಿಜ್ಞಾನಗಳು.

1. **ಶ್ರೀ ಶ್ರೀಗಳವರು :—** ಸಂಗ್ರಹರೂಪವಾಗಿ ದ್ವಿತೀಯಾಧ್ಯಾಯದಲ್ಲಿ ನಿರೂಪಿತವಾದ ಪರಾಪರತತ್ತ್ವ ನಿರ್ಣಯವನ್ನು ಜ್ಞಾನಷಟ್ಕದಲ್ಲಿ ( 7–12 ಅಧ್ಯಾಯಗಳಲ್ಲಿ ) ಶ್ರೀ ಕೃಷ್ಣನು ಉಪದೇಶ ಮಾಡಿರುತ್ತಾನೆ. ಮತ್ತು ಪುನಃ ಸರ್ವಾರ್ಥ ಸಂಕ್ಷೇಪರೂಪವಾದ ತ್ರಯೋದಶಾಧ್ಯಾಯದಲ್ಲಿಯೂ ಸಯುಕ್ತಿಕವಾಗಿ ಉಪಪಾದಿಸಿರುತ್ತಾನೆ.

**ಪ್ರಶ್ನೆ :—** ಸ್ವಾಮೀ! ಶ್ರೀ ಕೃಷ್ಣನು ಪ್ರಥಮತಃ ತತ್ತ್ವನಿರೂಪಣೆಯನ್ನು ಮಾಡುವಾಗಲೇ ನಿಸ್ಸಂಶಯವಾಗುವಂತೆ ವಿಸ್ತಾರವಾಗಿ ನಿರವಕಾಶ ವಾಕ್ಯಗಳಿಂದ ಪ್ರತಿಪಾದನೆ ಮಾಡದೆ ಅತಿ ಸಂದಿಗ್ಧವಾದ ವಾಕ್ಯಗಳಲ್ಲಿ ಜ್ಞಾತವ್ಯ ತತ್ತ್ವವನ್ನು ನಿರೂಪಣೆ ಮಾಡುವುದು ಉಚಿತವೇ ?

**ಶ್ರೀ ಶ್ರೀಗಳವರು :—** ಅನುಚಿತ ಕರ್ಮವನ್ನು ಶ್ರೀ ಕೃಷ್ಣನು ಮಾಡುವನೇ ? " ಸಂಕ್ಷೇಪವಿಸ್ತರಾಭ್ಯಾಂ ಹಿ ಕಥಯಂತಿ ಮನೀಷಿಣಃ " ಎಂಬ ಪ್ರಮಾಣ ಶ್ಲೋಕೋಕ್ತ ನ್ಯಾಯಾನುಸಾರವಾಗಿ ಜ್ಞಾನಿಗಳು ಶಿಷ್ಯನ ಕುತೂಹಲ ಪರಿಹಾರಾರ್ಥವಾಗಿ ಸಮಸ್ತ ತತ್ತ್ವವನ್ನೂ ಸ್ವಲ್ಪ ಮಾತುಗಳಿಂದಲೇ ಪ್ರಥಮದಲ್ಲಿಯೇ ಪೂರ್ಣವಾಗಿ ನಿರೂಪಿಸಿ ಬಿಡುವರು ಸಂಕ್ಷೇಪವು ಪ್ರಾಯೇಣ ಸಂದಿಗ್ಧವಾಗಿಯೇ ಇರುವುದು. ಇದರಿಂದ ಅನೇಕ ಪ್ರಶ್ನೆಗಳು ಪುನಃ ಪ್ರಾಪ್ತವಾಗುವುವು. ಆಗ ಕೌತುಕನಿರ್ಭರನಾದ ಶಿಷ್ಯನಿಂದ ಪರಿಪೃಷ್ಟನಾದ ಗುರುವು ಸಯುಕ್ತಿಕವಾಗಿ ತನ್ನಿಂದ ಉಪದಿಷ್ಟವಾದ ಪ್ರಮೇಯವನ್ನು ಸಮಗ್ರವಾಗಿ ದೃಷ್ಟಾಂತಗಳಿಂದಲೂ, ಅವಶ್ಯ ಬಿದ್ದರೆ ಸ್ವಾನುಭವ ಕಥನದಿಂದಲೂ ದೃಢೀಕರಿಸುವನು. ಹೀಗಿರುವುದರಿಂದಲೇ ದ್ವಿತೀಯಾಧ್ಯಾಯ ಶ್ಲೋಕಗಳು ಸಂದಿಗ್ಧವಾಗಿದ್ದರೂ ಸಪ್ತಮ, ಅಷ್ಟಮ, ಪಂಚದಶಾಧ್ಯಾಯಾದಿಗಳಲ್ಲಿ ಬ್ರಹ್ಮಸ್ವರೂಪವು ನಿರವಕಾಶವಾದ ವಾಕ್ಯಗಳಲ್ಲಿ ನಿರೂಪಿತವಾಗಿರುವುದರಿಂದ ತದನುಗುಣವಾಗಿ ಸಾವಕಾಶ ಶ್ಲೋಕಾರ್ಥಗಳನ್ನು ಯೋಜನೆ ಮಾಡಬೇಕು. ಜ್ಞಾನಿ ಸಂಪ್ರದಾಯವನ್ನೇ ಶ್ರೀ ಕೃಷ್ಣನು ಅವಲಂಬಿಸಿ ತತ್ತ್ವೋಪದೇಶವನ್ನು ಮಾಡಿರುವನು. ಮಹಾಭಾರತದಲ್ಲಿಯೂ, ಭಾಗವತದಲ್ಲಿಯೂ ಸಹ ಪ್ರಥಮ ದ್ವಿತೀಯಾಧ್ಯಾಯಗಳಲ್ಲಿ ಸಕಲ ಪ್ರಮೇಯಗಳೂ ಸಂಕ್ಷೇಪತಃ ನಿರೂಪಿತವಾಗಿ ನಂತರ ಅಷ್ಟಾದಶ ಪರ್ವಗಳಲ್ಲಿಯೂ ಉಕ್ತಾರ್ಥವು ವಿಶದವಾಗಿ ನಿರೂಪಿಸಲ್ಪಟ್ಟಿರುವುದು.

ಪ್ರಶ್ನೆ— ಸ್ವಾಮೀ ! ಇನ್ನೂ ಎಲ್ಲೆಲ್ಲಿ ಶ್ರೀ ಕೃಷ್ಣನು ಸಾಂಖ್ಯಜನಕವಾದ ವಿಚಾರವನ್ನು ಮಾಡಿರುವನು ? ಅವುಗಳನ್ನು ಸಂಗ್ರಹವಾಗಿ ನಿರೂಪಿಸಬೇಕು.

**ಶ್ರೀ ಶ್ರೀಗಳವರು :—** ಪರಬ್ರಹ್ಮ ಸ್ವರೂಪ ಜ್ಞಾನವು ಮುಖ್ಯವಾಗಿ ಸಾಂಖ್ಯ ಶಬ್ದಾರ್ಥವು. ಪರಬ್ರಹ್ಮ ಸ್ವರೂಪವನ್ನು ವಿವಿಚ್ಯ ತಿಳಿಯಬೇಕಾದರೆ, ಎಂದರೆ ಪ್ರಕೃತ್ಯಾದಿಗಳಿಂದ ಭಿನ್ನವಾಗಿ, ಅಸಾಧಾರಣ ಧರ್ಮೋಪೇತನನ್ನಾಗಿ ಸಪ್ರಕಾರವಾಗಿ ತಿಳಿಯಬೇಕಾದರೆ ಜಗದ್ವಿಜ್ಞಾನವೂ, ಕಾಲ, ಆಕಾಶ, ಜೀವಾದಿ ವಸ್ತುಗಳ ಸ್ವರೂಪ ವಿಜ್ಞಾನವೂ ಆವಶ್ಯಕವು. ಇದರಲ್ಲಿ ಜೀವಾದಿಗಳಿಂದ ವ್ಯಾವೃತ್ತ ವಾದ ಬ್ರಹ್ಮಸ್ವರೂಪ ನಿರ್ಣಯವನ್ನು ಸಮಗ್ರ ದ್ವಿತೀಯ ಷಟ್ಕದಲ್ಲಿ ಶ್ರೀ ಕೃಷ್ಣನು ಮಾಡಿರುತ್ತಾನೆ. ಇವುಗಳೆಲ್ಲಾ ಪ್ರಾಯೇಣ ಪ್ರಥಮಾಧ್ಯಾಯದಲ್ಲಿ ಹರಿ ಸರ್ವೋತ್ತ ಮತ್ವ ಸಾಧನಾವಸರದಲ್ಲಿ ನಮ್ಮಿಂದ ನಿರೂಪಿತವಾಗಿವೆ. ಜೀವ ಸ್ವರೂಪವನ್ನು ಅಲ್ಲಿ ಅಲ್ಲಿ ಬಿಡಿಸಿ ಶ್ರೀ ಕೃಷ್ಣನು ನಿರೂಪಿಸಿರುತ್ತಾನೆ, ಅದೂ ಸಹ ಪೂರ್ವದಲ್ಲಿ ( ಗೀತೋಪದೇಶಗಳು I ಭಾಗ ಅಧ್ಯಾಯ 3–4–5. ) ನಮ್ಮಿಂದ ಪ್ರತಿವಾದಿ ಸಲ್ಪಟ್ಟಿರುವುದು. ಪ್ರಕೃತಿ ಸ್ವರೂಪವನ್ನು ನಾವು ದ್ವಿತೀಯಾಧ್ಯಾಯದಲ್ಲಿ ಜಗತ್ಸ ತ್ಯತ್ವ ಸಮರ್ಥನಾವಸರದಲ್ಲಿ ಹೇಳಿರುತ್ತೇವೆ. ಶ್ರೀ ಕೃಷ್ಣನು ಉಪಪಾದಿಸಿರುವ ಮುಕ್ತಿ ಸ್ವರೂಪವನ್ನು ಮುಕ್ತಿ ಸ್ವರೂಪವರ್ಣನಾವಸರದಲ್ಲಿ ನಾವು ನಿರೂಪಿಸಿರು ತ್ತೇವೆ. ಆದರೂ ಪ್ರಕಾರ ಭೇದದಿಂದ ಪುನಃ ಪುನಃ ತತ್ತ್ವನಿರೂಪಣವು ಜ್ಞಾನದ ವೈಶದ್ಯಕ್ಕೆ ಕಾರಣವಾಗಬಹುದೆಂದು, ಜ್ಞಾನವಿಜ್ಞಾನ ಶಬ್ದಗಳಿಂದ ಶ್ರೀ ಕೃಷ್ಣನು ಉದ್ದೇಶ ಮಾಡಿ ನಿರೂಪಿಸಿರುವ ಕೆಲವು ತತ್ತ್ವ ರಹಸ್ಯಗಳನ್ನು, ಅವನಿಂದ ಉಕ್ತ ವಾದ ರೀತಿಯಿಂದಲೇ ಪ್ರತಿಪಾದಿಸುವೆವು. *

2. **ಪ್ರಶ್ನೆ :—** ಸ್ವಾಮೀ ! ಹಾಗಾದರೆ ದ್ವಿತೀಯ ಷಟ್ಕದಲ್ಲಿ ಕೇವಲ ತತ್ವ ಪರವಾದ ಶ್ಲೋಕಗಳಿಗೆ ಅರ್ಥವನ್ನು ಹೇಳಬೇಕು.

**ಶ್ರೀ ಶ್ರೀಗಳವರು :—** ಸಮಸ್ತ ಶ್ಲೋಕಗಳೂ ತತ್ವಪರವೇ ಆಗಿರುವುವು. ಆದುದರಿಂದ ಕೆಲವು ನಿರ್ದಿಷ್ಟ ಶ್ಲೋಕಗಳಿಗೆ ಮಾತ್ರ ವಿಂಗಡಿಸಿ ಅರ್ಥವನ್ನು ನಿರೂಪಿಸುವೆವು. ತಥಾಹಿ :—

---

* ಬ್ರಹ್ಮ ಸ್ವರೂಪ ವರ್ಣನೆಯು ಸಮಗ್ರ ದ್ವಿತೀಯ ಷಟ್ಕದ ಕಾರ್ಯವು. ಪ್ರಥಮ ಷಟ್ಕ ದಲ್ಲಿಯೂ ಸಹ ( 3. 42-43. ), ( 4. 5-14 ), (5. 29.), ( 6. 29-32. ) ಇತ್ಯಾದಿ ಶ್ಲೋಕಗಳಲ್ಲಿಯೂ, ತೃತೀಯ ಷಟ್ಕದಲ್ಲಿ (13. 3.), (13. 13-18.), (13.23.), (13. 28.), (13. 32-34.), (14 3-4 ), (14. 19 ), ( 14. 27. ), ಹದಿನೈದನೆಯ ಅಧ್ಯಾಯದ ಬಹು ಶ್ಲೋಕಗಳಲ್ಲಿಯೂ, (17. 23.), (18. 54 58 ) (18. 61-62.), (18. 65-66.) ಇತ್ಯಾದಿ ಬಹು ಸ್ಥಳಗಳಲ್ಲಿ ಕಥಿತವಾಗಿರುವುದು.

ಜೀವ ಸ್ವರೂಪಾದಿಗಳನ್ನು ಇದೇ ನ್ಯಾಯದಿಂದ ಅಲ್ಲಿ ಅಲ್ಲಿ ನಿರೂಪಿತವಾಗಿರುವುದನ್ನು ವಿಂಗ ಡಿಸಿ ತಿಳಿಯಬೇಕು.

ಶ್ರೀ ಕೃಷ್ಣನೇ ಪರಬ್ರಹ್ಮವಿಷಯಕ ತತ್ವಜ್ಞಾನವು ಸಾಮಾನ್ಯ ವಿಶೇಷ ಭಾವದಿಂದ ಎರಡು ಪ್ರಕಾರವಾಗಿರುವುದೆಂದು ವಿಂಗಡಿಸಿ ಹೇಳಿ ಒಂದಾದ ನಂತರ ಮತ್ತೊಂದನ್ನು ಕ್ರಮವಾಗಿ ಉಪಪಾದಿಸಿ ಹೇಳಿರುತ್ತಾನೆ :—

**(1) ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯ ಜ್ಜ್ಞಾತವ್ಯಮವಶಿಷ್ಯತೇ ॥**
—(7. 2.)

ಎಲೈ ಪಾರ್ಥನೇ ! ನಾನು ವಿಶೇಷವಾಗಿ ತಿಳಿಯಲ್ಪಡಬೇಕಾದ ಭಗವನ್ಮಹಿಮೆಯಿಂದ ಸಹಿತವಾದ ಜ್ಞಾನವನ್ನು ( ಸಾಮಾನ್ಯವಾಗಿ ತಿಳಿಯಲ್ಪಡಬೇಕಾದ ಭಗವನ್ಮಹಿಮೆಯನ್ನು ) ನಿನಗೆ ಸಮಗ್ರವಾಗಿ ಹೇಳುತ್ತೇನೆ. ನಾನು ಹೇಳುವುದನ್ನು ಕೇಳಿದ ನಂತರ ನಿನಗೆ ಮುಖ್ಯವಾದ ಜ್ಞಾತವ್ಯ ಪ್ರಮೇಯವು ಒಂದೂ ಉಳಿಯುವುದಿಲ್ಲ.

ಹೀಗೆ ಪ್ರತಿಜ್ಞೆ ಮಾಡಿ ಶ್ರೀ ಕೃಷ್ಣನು "**ಸಾಮಾನ್ಯಸಾಂಖ್ಯ**" ವನ್ನು ಈ ರೀತಿಯಾಗಿ ನಿರೂಪಿಸಿರುತ್ತಾನೆ :—

**(2) ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥**
**ಅಪರೇಯ ಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್॥**
**ಏತದ್ಯೋನೀನೀ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥**
**ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥**
—(7. 2–7.)

ಈ ಶ್ಲೋಕಾರ್ಥವು ಪೂರ್ವದಲ್ಲಿಯೇ ನಿರೂಪಿತವಾಗಿರುತ್ತದೆ. ಇದರ ತಾತ್ಪರ್ಯವು ಸ್ಪಷ್ಟವಾಗಿರುವುದು. ಪರಮಾತ್ಮನು ಚೇತನಾಚೇತನ ಸರ್ವ ಜಗತ್ತಿಗಿಂತಲೂ ವಿಲಕ್ಷಣನು. ಆತನು ಲಕ್ಷ್ಮ್ಯಾದಿ ಸರ್ವ ಚೇತನರಿಗಿಂತಲೂ ಉತ್ತಮನು. ಆತನೇ ಸರ್ವೋತ್ತಮನು. ಆತನೇ ಮುಖ್ಯ ಸೃಷ್ಟಿಕರ್ತನು, ಸ್ಥಿತಿಕರ್ತನು, ಸಂಹಾರಕರ್ತನು, ಸರ್ವ ನಿಯಾಮಕನು, ಸರ್ವಾಧಾರನು ಇತ್ಯಾದಿ ರೀತಿಯಾಗಿ ಬ್ರಹ್ಮನನ್ನು ತಿಳಿಯುವ ಜ್ಞಾನವು ಸಾಮಾನ್ಯ ಜ್ಞಾನವು.

**ವಿಜ್ಞಾನ**ವೆಂದು ನಿರ್ದಿಷ್ಟವಾದ **ಸಾಂಖ್ಯವಿಶೇಷ**ವನ್ನು ಶ್ರೀ ಕೃಷ್ಣನು ಉತ್ತರ ಶ್ಲೋಕಗಳಲ್ಲಿ ನಿರೂಪಿಸಿರುತ್ತಾನೆ :—

(3) ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ।
ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥
ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।
ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥
ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಂ ।
ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಂ ॥
ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಂ ।
ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥
ಯೇ ಚೈವ ಸಾತ್ವಿಕಾಭಾವಾ ರಾಜಸಾಸ್ತಾಮಸಾಶ್ಚ ಯೇ ।
ಮತ್ತಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ ॥
—(7. 8–12.)

ಈ ಶ್ಲೋಕಗಳು ಪೂರ್ವದಲ್ಲಿಯೇ (ಪ್ರಥಮ ಭಾಗದಲ್ಲಿ) ವ್ಯಾಖ್ಯಾತವಾಗಿರುವುವು. ಲೋಕದಲ್ಲಿರುವ ಸಾತ್ವಿಕ ರಾಜಸ ತಾಮಸಗಳೆಂಬ ತ್ರಿವಿಧ ಪದಾರ್ಥಗಳೂ ಮತ್ತು ಈ ಪದಾರ್ಥಗಳಲ್ಲಿರುವ ತ್ರಿವಿಧ ಸ್ವರೂಪ ಧರ್ಮಗಳೂ ನನ್ನಿಂದಲೇ ಉಂಟಾಗುತ್ತವೆ; ನಾನು ಅವುಗಳನ್ನು ಆಶ್ರಯಿಸಿಕೊಂಡಿರುವುದಿಲ್ಲ, ಅವು ನನ್ನ ಆಶ್ರಯದಲ್ಲಿ ಇರುತ್ತವೆ ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ. ಪ್ರತಿ ಪದಾರ್ಥದಲ್ಲಿಯೂ ಇರುವ ಸ್ವರೂಪ, ಪ್ರಮಿತಿ, ಪ್ರವೃತ್ತಿರೂಪ ತ್ರಿವಿಧ ಸತ್ತೆಯೂ ಪರಮಾತ್ಮನ ಅಧೀನವಾಗಿರುವುದು. ಪರಮಾತ್ಮನು ಪ್ರತಿ ಪದಾರ್ಥದಲ್ಲಿಯೂ ಇರುವ ಸ್ವಾಭಾವಿಕ ಧರ್ಮಗಳಿಗೂ ನಿಯಾಮಕನು ಎಂದು ತಿಳಿಯುವುದು **ವಿಜ್ಞಾನವು.** ಸ್ವಾಭಾವಿಕ ಧರ್ಮಗಳಿಗೆ ಪರಮಾತ್ಮನಿಂದ ಪ್ರಾಪ್ತವಾಗುವ ವಿಶೇಷವೇನು ಎಂದು ಶಂಕಿಸಕೂಡದು. "ಏತೇನ ಹ ವಾ ಪಯೋ ಮಂಡಂ ಭವತಿ" ಇತ್ಯಾದಿ ಶ್ರುತಿಗಳಿಂದಲೂ, "ಪಯೋಂಬುವಚ್ಚೇತ್ತತ್ರಾಪಿ" ಇತ್ಯಾದಿ ಸೂತ್ರಗಳಿಂದಲೂ, ದ್ರವ್ಯಂ ಕರ್ಮ ಚ ಕಾಲಶ್ಚ ಇತ್ಯಾದಿ ಭಾಗವತಾದಿ ಸ್ಮೃತಿಗಳಿಂದಲೂ ಪರಮಾತ್ಮನು ಸ್ವಾಭಾವಿಕ ಧರ್ಮಗಳಿಗೂ ನಿಯಾಮಕನು, ಪರಮಾತ್ಮನೊಬ್ಬನೇ ಸ್ವತಂತ್ರನು ಎಂದು ಸಿದ್ಧವಾಗಿರುವುದು. ಶ್ರೀ ಕೃಷ್ಣನೂ ಸಹ ಗೀತೆಯ ದ್ವಿತೀಯಾಧ್ಯಾಯದಲ್ಲಿಯೇ ಪರಬ್ರಹ್ಮನು ಆಶ್ಚರ್ಯ ಸ್ವರೂಪನೆಂದು ಹೇಳಿರುತ್ತಾನೆ.

ಜ್ಞಾನವಿಜ್ಞಾನ ವಿಭಾಗದಿಂದ ದ್ವಿಪ್ರಕಾರವಾದ ಸಾಂಖ್ಯವನ್ನು ಶ್ರೀ ಕೃಷ್ಣನು ನವಮಾಧ್ಯಾಯದಲ್ಲಿಯೂ ನಿರೂಪಿಸಿರುತ್ತಾನೆ :—

(4) ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।
ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಂ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಂ ॥**
**ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥**

—(9. 1–3.)

ಎಲೈ ಪರಂತಪನೇ ! ಅಸೂಯಾರಹಿತನಾದ ( ಗುಣವಂತರಲ್ಲಿ ದೋಷ ಬುದ್ಧಿರಹಿತನಾದ ) ನಿನಗೋಸ್ಕರ ಅತಿ ಗುಹ್ಯವಾದ ವಿಜ್ಞಾನದಿಂದ ಸಹಿತವಾದ ಜ್ಞಾನವನ್ನು ( ಸಾಮಾನ್ಯವಾದ ಜ್ಞಾತವ್ಯ ಭಗವನ್ಮಹಿಮೆಗಳನ್ನೂ, ವಿಶೇಷವಾಗಿ ಜ್ಞಾತವ್ಯವಾದ ಭಗವನ್ಮಹಿಮೆಗಳನ್ನೂ ) ಉಪದೇಶ ಮಾಡುತ್ತೇನೆ. ಇದನ್ನು ತಿಳಿದು ( ಅನುಷ್ಠಾನ ಮಾಡಿದ ಮೇಲೆ ) ನೀನು ಸಕಲ ಪಾಪಗಳಿಂದಲೂ ಮುಕ್ತನಾಗುತ್ತೀಯೆ. ಇದು ರಾಜವಿದ್ಯೆಯು ಎಂದರೆ ಸಾಕ್ಷಾನ್ಮೋಕ್ಷೋಪಯೋಗಿಯಾದ ಪ್ರಧಾನ ವಿದ್ಯೆಯು, ಪ್ರಧಾನ ರಹಸ್ಯ ತತ್ವವು, ಪಾಪಹಾರಕವಾದುದು, ಶ್ರೇಷ್ಠವಾದುದು; ಸರ್ವೇಂದ್ರಿಯ ಪ್ರೇರಕನಾದ ಭಗವತ್ಸಾಕ್ಷಾತ್ಕಾರ ಸಾಧನವಾದುದು, ಜಗದ್ಧಾರಕನಾದ ಪರಮಾತ್ಮನ ಪ್ರೀತಿ ಸಾಧನವು, ಸಂಪಾದಿಸುವುದಕ್ಕೆ ಅತಿ ಸುಲಭವು, ಮತ್ತು ಅಕ್ಷಯವಾದ ಮೋಕ್ಷ ಫಲಪ್ರದವಾದುದು. ಭಗವದ್ವಿಷಯಕವಾದ ಈ ಜ್ಞಾನದ ವಿಷಯದಲ್ಲಿ ಶ್ರದ್ಧಾರಹಿತರಾದ ಎಂದರೆ ಇದು ಪರಮ ಪುರುಷಾರ್ಥವೆಂದು ತಿಳಿಯದ ಜನರು ನನ್ನನ್ನು ಹೊಂದದೇನೇ ಜನನ ಮರಣ ಪ್ರವಾಹ ರೂಪವಾದ ಭಯಂಕರವಾದ ಸಂಸಾರ ಮಾರ್ಗದಲ್ಲಿ ನಿರಂತರ ಸ್ಥಿತರಾಗಿರುತ್ತಾರೆ.

ಈ ಶ್ಲೋಕಗಳಲ್ಲಿ ಕೃಷ್ಣನು ತಾನು ನಿರೂಪಿಸುವ ವಿದ್ಯೆಯು ವ್ಯಾವಹಾರಿಕವಾದ ಸುಳ್ಳಾದ ಧರ್ಮ ಸ್ವರೂಪ ಮಾತ್ರ ನಿರೂಪಣೆಯಲ್ಲ; ಅಪರ ಬ್ರಹ್ಮವಿದ್ಯೆಯಲ್ಲವೆಂದು ತೋರಿಸುವುದಕ್ಕಾಗಿ, ಮೋಕ್ಷಪ್ರದತ್ವಾದಿ ಮಹಾ ಮಹಿಮೋಪೇತವು ಸಾಕ್ಷಾತ್ ಭಗವತ್ಸಾಕ್ಷಾತ್ಕಾರ ಸಾಧನವು ಇತ್ಯಾದಿ ರೀತಿಯಲ್ಲಿ ಪ್ರಶಂಸನೆ ಮಾಡಿ ಈ ರಾಜವಿದ್ಯೆಯು ಪಾರಮಾರ್ಥಿಕ ತತ್ವಬೋಧಕವಾದ ಸಾಂಖ್ಯವೇ ಎಂದು ಸ್ಪಷ್ಟವಾಗುವಂತೆ ವಿವರಿಸಿರುತ್ತಾನೆ.

ಪ್ರತಿಜ್ಞಾತವಾದ ಜ್ಞಾನವನ್ನು ಎಂದರೆ ಸಾಮಾನ್ಯ ಜ್ಞಾತವ್ಯವಾದ ಸಾಂಖ್ಯ ಸ್ವರೂಪವನ್ನು ಶ್ರೀ ಕೃಷ್ಣನು ಹೀಗೆ ವರ್ಣಿಸಿರುತ್ತಾನೆ :—

(5) **ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥**
**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಂ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥**

ಯಥಾಽಽಕಾಶಸ್ಥಿತೋ ನಿತ್ಯಂ ವಾಯುಸ್ಸರ್ವತ್ರಗೋ ಮಹಾನ್ ।
ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥
ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಂ ।
ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಂ ॥
ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।
ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥
ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।
ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥
ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಂ ।
ಹೇತುನಾನೇನ ಕೌಂತೇಯ ಜಗದ್ವಿಪರಿವರ್ತತೇ ॥

—(9. 4–10.)

ಎಲೈ ಪಾರ್ಥನೇ ! ಚರಾಚರಾತ್ಮಕವಾದ ಈ ಸಕಲ ಪ್ರಪಂಚವೂ ಸೂಕ್ಷ್ಮ ದೇಹವುಳ್ಳ ನನ್ನಿಂದ ವ್ಯಾಪಿಸಲ್ಪಟ್ಟಿದೆ. ಸರ್ವ ಪಧಾರ್ಥಗಳೂ ನನ್ನ ಆಧಾರದಲ್ಲಿ ಇರುತ್ತವೆ. ನಾನು ಅವುಗಳನ್ನು ಆಶ್ರಯಿಸಿರುವುದಿಲ್ಲ. ಸರ್ವ ಪ್ರಾಣಿಗಳೂ ನನ್ನ ಆಧಾರದಲ್ಲಿಯೇ ಇದ್ದರೂ ನನ್ನ ಸ್ಪರ್ಶವನ್ನು ಹೊಂದಿ ನನ್ನ ಧರ್ಮಸಂಕ್ರಾಂತಿ ಯನ್ನು ಹೊಂದುವುದಿಲ್ಲ. ಇದು ನನ್ನ ಅಚಿಂತ್ಯ ಸಾಮರ್ಥ್ಯವೆಂದು ತಿಳಿ. ನಾನು ಹೇಗೋ ಹಾಗೆಯೇ ನನ್ನ ದೇಹವೂ ಕೂಡ ಸೃಷ್ಟ್ಯಾದಿಗಳನ್ನು ಮಾಡುವುದಾಗಿ ಸಕಲ ಜಗದಾಧಾರವಾಗಿದ್ದು ಮತ್ತೊಂದು ಪದಾರ್ಥವನ್ನು ಆಶ್ರಯಿಸಿರುವುದಿಲ್ಲ. ಸರ್ವದಾ ಆಕಾಶದಲ್ಲಿರುವ ಮಹಾ ವಾಯುವು ಸರ್ವ ಸ್ಥಳದಲ್ಲಿಯೂ ಇದ್ದರೂ ಆಯಾಯ ಸ್ಥಳದಲ್ಲಿರುವ ಧರ್ಮ ಸಂಪರ್ಕವನ್ನು ಹೇಗೆ ಹೊಂದುವುದಿಲ್ಲವೋ * ಹಾಗೆಯೇ ಸಮಸ್ತ ಚರಾಚರ ಪ್ರಪಂಚವೂ ನನ್ನಲ್ಲಿದ್ದರೂ ಅನ್ಯೋನ್ಯ ಧರ್ಮ ಸಂಪರ್ಕರಹಿತವಾಗಿರುವುದೆಂದು ತಿಳಿ. ಹೇ ಕೌಂತೇಯನೇ ! ಪ್ರಳಯ ಕಾಲದಲ್ಲಿ ಸರ್ವ ಜೀವ ಜಡಾತ್ಮಕ ಪದಾರ್ಥ ಸಮೂಹವೂ ನನ್ನ ಅಧೀನವಾದ ಪ್ರಕೃತಿಯನ್ನು ಸೇರಿ ನನ್ನಲ್ಲಿ ಲೀನವಾಗುತ್ತವೆ. (ಜೀವರುಗಳು ಚೇತನ ಪ್ರಕೃತಿಯಲ್ಲಿಯೂ ಜಡಗಳು ಜಡ ಪ್ರಕೃತಿಯಲ್ಲಿಯೂ ಲಯ ಹೊಂದುವುವೆಂದು ವಿವೇಕವು.) ಪುನಃ ಸೃಷ್ಟಿ ಕಾಲದಲ್ಲಿ ನಾನು ಅವುಗಳನ್ನು ವಿಧವಿಧವಾಗಿ ಸೃಷ್ಟಿಸುತ್ತೇನೆ. ನನ್ನ ಅಧೀನ ವಾದ ಪ್ರಕೃತಿಯನ್ನು ಸೃಷ್ಟ್ಯುಪಕರಣ ಪದಾರ್ಥವನ್ನಾಗಿ ಆಶ್ರಯಿಸಿ (ಜಡ ಪ್ರಕೃತಿ

---

*ವಾಯುವು ಕೇವಲ ಶೀತಳವಾಗಿರುವದು ವಾಯುಗತ ಜಲಕಣಗಳ ನಿಮಿತ್ತಕವು. ವಾಯುವು ಕೇವಲ ಉಷ್ಣವಾಗಿರುವದು ವಾಯುಸಂಬಂಧಿ ಅಗ್ನಿಕಣ ನಿಮಿತ್ತಕವು; ಸುರಭಿಯಾದರೆ ಪೃಥಿವೀಕಣ ನಿಮಿತ್ತಕವು. ವಸ್ತುತಃ ಔಷ್ಣ್ಯಶೈತ್ಯಾದಿ ಧರ್ಮಗಳನ್ನು ಹೊಂದುವದಿಲ್ಲ.

ಯನ್ನು ಉಪಾದಾನತ್ವೇನ ಆಶ್ರಯಿಸಿ, ಚೇತನ ಪ್ರಕೃತಿಯನ್ನು ನಿಮಿತ್ತವನ್ನಾಗಿ ಆಶ್ರಯಿಸಿ ) ಪ್ರಕೃತಿ ವಶವಾದುದರಿಂದಲೇ ಅಸ್ವತಂತ್ರವಾದ ಈ ಸಮಸ್ತಭೂತ ಸಮುದಾಯವನ್ನೂ ಪುನಃ ಪುನಃ ( ಪ್ರತಿಕಲ್ಪದಲ್ಲಿಯೂ ) ನಾನಾ ಪ್ರಕಾರವಾಗಿ ಸೃಷ್ಟಿ ಮಾಡುತ್ತೇನೆ. ಹೀಗೆ ನಾನಾ ವಿಧವಾಗಿ ಸೃಷ್ಟ್ಯಾದಿಗಳನ್ನು ನಾನು ಮಾಡಿದರೂ ಆ ಕರ್ಮಗಳು ನನ್ನನ್ನು ಬಂಧಿಸುವುದಿಲ್ಲ. ಯಾತಕ್ಕೆಂದರೆ ವಸ್ತುತಃ ಉದಾಸೀನನಲ್ಲದಿದ್ದರೂ ಉದಾಸೀನನಾದ ಪುರುಷನೋಪಾದಿಯಲ್ಲಿ ಆ ನನ್ನ ಸೃಷ್ಟ್ಯಾದಿ ಕರ್ಮಗಳಲ್ಲಿ ನಾನು ಪ್ರಯೋಜನಾಪೇಕ್ಷಾರಹಿತನಾಗಿ ನಿರಾಯಾಸದಿಂದ ಪ್ರವೃತ್ತನಾಗಿರುತ್ತೇನೆ. † ಅಧಿಪತಿಯಾದ ನನ್ನಿಂದ ( ಪ್ರೇರಿತವಾಗಿ ) ಪ್ರಕೃತಿಯು ಚರಾಚರ ಪ್ರಪಂಚವನ್ನು ನಿರ್ಮಿಸುತ್ತದೆ. ಈ ರೀತಿಯಾದ ಕಾರಣದಿಂದ ( ಸ್ವತಂತ್ರ ಕರ್ತನಾದ ಮತ್ತು ಪ್ರೇರಕನಾದ ನನ್ನಿಂದ, ಪರಾಧೀನ ಕಾರಣವಾದ ಉಭಯ ವಿಧ ಪ್ರಕೃತಿಯಿಂದ ) ಚರಾಚರಾತ್ಮಕ ಜಗತ್ತು ಪುನಃ ಪುನಃ ಹುಟ್ಟುತ್ತದೆ.

ಈ ಪ್ರಕಾರವಾಗಿ ಪರಮಾತ್ಮನ ಸರ್ವತ್ರವ್ಯಾಪ್ತಿ, ನಿಖಿಲ ಜಗದಾಧಾರತ್ವ, ಸರ್ವತ್ರ ಇದ್ದರೂ ತತ್ತತ್ಪದಾರ್ಥಗತ ಧರ್ಮಸಂಕ್ರಾಂತಿರಾಹಿತ್ಯ, ಕರ್ಮ ಲೇಪಾಭಾವ, ಸ್ವತಂತ್ರ ಸೃಷ್ಟಿಕರ್ತೃತ್ವ, ಪುನಃ ಪುನಃ ಜಗನ್ನಿರ್ಮಾಣ ಹೇತುತ್ವವನ್ನೂ ಮತ್ತು ಪ್ರಕೃತ್ಯಾದಿಗಳ ಅಧೀನತೆಯನ್ನೂ ತಿಳಿಯುವುದು. " **ಜ್ಞಾನ** " ವು, ಸಾಮಾನ್ಯ ಸಾಂಖ್ಯವು.

ತನ್ನ ಮಾಹಾತ್ಮ್ಯೆಯನ್ನು ತಿಳಿಯದ ದುರ್ಜನರನ್ನು ಅವರಿಗೆ ಪ್ರಾಪ್ತವಾಗುವ ಅನರ್ಥ ಫಲಪ್ರದರ್ಶನಪೂರ್ವಕವಾಗಿ ನಿಂದಿಸಿ, ತನ್ನನ್ನು ಭಜಿಸುವ ಸಾಧು ಸಜ್ಜನರನ್ನು ಸ್ತುತಿಸಿ, ಶ್ರೀ ಕೃಷ್ಣನು ತನ್ನಿಂದ ಪ್ರತಿಜ್ಞಾತವಾದ ವಿಜ್ಞಾನವನ್ನು ಈ ಪ್ರಕಾರ ವರ್ಣಿಸಿರುತ್ತಾನೆ:—

---

† ಪರಮಾತ್ಮನು ಕರ್ಮನಿರ್ಲಿಪ್ತನು ಎಂದರೆ 1. ಆತನು ಸ್ವಪ್ರಯೋಜನವನ್ನು ಉದ್ದೇಶ ಮಾಡಿ ಜಗತ್ಸೃಷ್ಟಿ ಪ್ರೇರಣಾದಿ ವ್ಯಾಪಾರಗಳನ್ನು ಮಾಡುವವನಲ್ಲ. ಆತನು ಪೂರ್ಣಾನಂದನು. 2 ಪರಮಾತ್ಮನು ಜನರು ಕರ್ಮ ಮಾಡುವಂತೆ ಆಯಾಸದಿಂದ ಕರ್ಮಗಳನ್ನು ಮಾಡುವದಿಲ್ಲ. ಆತನು ಅಚಿಂತ್ಯಾದ್ಭುತಸಾಮರ್ಥ್ಯೋಪೇತನು. 3. ಪರಮಾತ್ಮನು ಕರ್ಮ ಫಲವನ್ನು (ದುಃಖಾದಿಗಳನ್ನು ) ಭೋಗಿಸುವದಿಲ್ಲ. ಆತನು ಯೋಗೇಶ್ವರೇಶ್ವರನಾದ ಸ್ವತಂತ್ರಪುರುಷನು. 4. ಕೆಲವು ಶುಭ ಕರ್ಮ ಫಲಗಳನ್ನು (ಜೀವದತ್ತವಾದುವುಗಳನ್ನೂ ಸಹ ) ಆತನು ಸ್ವೀಕರಿಸಿದರೂ ಸಹ ಆತನಿಗೆ ಅದರಿಂದ ವೃದ್ಧಿಯು ಇಲ್ಲ. ಜಲಬಿಂದುವು ಸಮುದ್ರಕ್ಕೆ ಬಂದಂತೆ ಕರ್ಮ ಫಲ ಭೋಗದಿಂದ ಆತನ ಆನಂದವು ವೃದ್ಧಿಯಾಗುವುದಿಲ್ಲ. ಶುಭ ಕರ್ಮ ಫಲಗಳು ಬರದಿದ್ದರೆ ಆತನಿಗೆ ಹಾನಿಯಿಲ್ಲ. ಇದಕ್ಕೆ ಲೌಕಿಕ ದೃಷ್ಟಾಂತವು ಸಿಕ್ಕುವುದಿಲ್ಲ. ಜಲ ಬಿಂದುಸಾಗರ ದೃಷ್ಟಾಂತವು ಸರ್ವ ವಿಷಯಕವಲ್ಲ. " **ಆಗಮಿಷ್ಯತ್ಸುಖಂ ಚಾಪಿ ತಸ್ಯಾಸ್ತ್ಯೇವ ಸದಾಪಿ ತು** " ಇತ್ಯಾದಿ ಪ್ರಮಾಣ ವಚನಾನುಸಾರವಾಗಿ ಶ್ರೀ ಪರಮಾತ್ಮನು ಸರ್ವದಾ ಪರಿಪೂರ್ಣವಾದ ವೃದ್ಧಿಹ್ರಾಸವರ್ಜಿತವಾದ ನಿತ್ಯಾನಂದವುಳ್ಳವನು.

(6) ಅಹಂ ಕ್ರತುರಹಂ ಯಜ್ಞಃ ಸ್ವಧಾಽಹಮಹಮೌಷಧಂ ।
ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಂ ॥
ಪಿತಾಽಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।
ವೇದ್ಯಂ ಪವಿತ್ರ ಮೋಂಕಾರ ಋಕ್ಸಾಮಯಜುರೇವಚ ॥
ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।
ಪ್ರಭವಃ ಪ್ರಲಯಸ್ಥಾನಂ ನಿಧನಂ ಬೀಜಮವ್ಯಯಂ ॥
ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।
ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥

—(9. 18–19.)

ಎಲೈ ಅರ್ಜುನನೇ ! ನಾನು ಸೃಷ್ಟ್ಯಾದಿಕೃತಿ ಸ್ವರೂಪನಾದುದರಿಂದ ಕ್ರತು ಶಬ್ದವಾಚ್ಯನಾಗಿ ಕ್ರತುವಿನಲ್ಲಿ * ಇದ್ದು ಕ್ರತುವಿಗೆ ನಿಯಾಮಕನಾಗಿಯೂ, ಕ್ರತು ಫಲಭೋಕ್ತನಾಗಿಯೂ ಇರುತ್ತೇನೆ. ಪ್ರಮಾಣಪ್ರಮಿತವಾದ ಸರ್ವವನ್ನೂ ತಿಳಿಯುವುದರಿಂದ ನಾನು ಯಜ್ಞನಾಮಕನಾಗಿಯೂ, ಯಜ್ಞ ಫಲಭೋಕ್ತೃವೂ ಆಗಿರುವೆನು. ಸ್ವಾತ್ಮಾಧಾರದಲ್ಲಿಯೇ ಇರುವ ಅನನ್ಯಾಶ್ರಿತ ಪುರುಷನಾದುದರಿಂದ ಸ್ವಧಾಶಬ್ದವಾಚ್ಯನಾದ ನಾನು ಸ್ವಧೆಯಲ್ಲಿದ್ದು ಸ್ವಧಾ ನಿಯಾಮಕನಾಗಿಯೂ ಆಗಿರುವೆನು. ತಾಪತ್ರಯ ಸಂತಪ್ತರಿಗೆ ನಿಧಿಯಾದುದರಿಂದ ಔಷಧನಾಮಕನಾದ ನಾನು ಔಷಧದಲ್ಲಿದ್ದು ಔಷಧಕ್ಕೆ ಶ್ರೈಷ್ಠ್ಯಪ್ರದನಾಗಿಯೂ, ನಿಯಾಮಕನಾಗಿಯೂ ಇರುವೆನು. ಭಕ್ತರಿಗೆ ಜ್ಞಾನದಾನ ಮಾಡಿ ರಕ್ಷಣೆ ಮಾಡುವುದರಿಂದ ಮಂತ್ರನಾಮಕನಾದ ನಾನು ಮಂತ್ರದಲ್ಲಿದ್ದು ಮಂತ್ರಕ್ಕೆ ಶ್ರೈಷ್ಠ್ಯಪ್ರದನಾಗಿಯೂ, ಪ್ರತಿಪಾದ್ಯನಾಗಿಯೂ, ನಿಯಾಮಕನಾಗಿಯೂ, ಫಲದಾತೃವಾಗಿಯೂ ಇರುವೆನು. ಸರ್ವರಿಗಿಂತಲೂ ಶ್ರೇಷ್ಠನಾದುದರಿಂದ ಆಜ್ಯ ಶಬ್ದವಾಚ್ಯನಾದ ನಾನು ಆಜ್ಯದಲ್ಲಿ ಅದರ ಸ್ವಾಭಾವಿಕ ಧರ್ಮಕ್ಕೆ ನಿಯಾಮಕನಾಗಿ ಅದಕ್ಕೆ ಶ್ರೇಷ್ಠತ್ವಪ್ರದನಾಗಿರುವೆನು. ಸ್ವತಃ ಗತಿಹೀನವಾದ ಪ್ರಪಂಚವನ್ನು ಉತ್ತಮ ಗತಿಯನ್ನು ಕುರಿತು ನಯನ ಮಾಡುವುದರಿಂದ ಅಗ್ನಿಶಬ್ದವಾಚ್ಯನಾದ ನಾನು ಅಗ್ನಿಯಲ್ಲಿ ಇದ್ದು ಅದಕ್ಕೆ ಶ್ರೇಷ್ಠತ್ವಪ್ರದನಾಗಿ, ಅದರ ಸ್ವಾಭಾವಿಕ ಧರ್ಮ

---

* 1. ದೀಕ್ಷಾದ್ಯವಭೃತಾಂತವಾದ ಜ್ಯೋತಿಷ್ಟೋಮಾದಿನಾಮಕ ಸಮಗ್ರಯಜ್ಞ ಕರ್ಮಕ್ಕೆ ಕ್ರತುವೆಂದು ಹೆಸರು.

2. ದೇವತೋದ್ದೇಶದಿಂದ ದ್ರವ್ಯತ್ಯಾಗ ರೂಪವಾದ ಯಾಗೈಕದೇಶವಾದ ಪ್ರಧಾನ ಕರ್ಮಕ್ಕೆ ಯಜ್ಞವೆಂದು ಹೆಸರು.

3. ಪಿತೃಗಳಿಗೆ ಮಾಡುವ ತಿಲೋದಕದಾನಕ್ಕೆ ಸ್ವಧಾ ಎಂದು ಹೆಸರು.

ಗಳಿಗೂ ನಿಯಾಮಕನಾಗಿ ಪ್ರೇರಕನಾಗಿರುವೆನು. ಯಜ್ಞಾದಿಗಳಲ್ಲಿ ಆಹೂತ ನಾದುದರಿಂದ ಹುತನಾಮಕನಾದ ನಾನು ಹೋಮ ದ್ರವ್ಯದಲ್ಲಿದ್ದು ಅದಕ್ಕೆ ಶ್ರೇಷ್ಠತ್ವಪ್ರದನಾಗಿ ಅದರಲ್ಲಿ ನಿಯಾಮಕನಾಗಿರುತ್ತೇನೆ. ನಾನೇ ಜಗತ್ತಿಗೆ ಜನಕನು, ತಾಯಿಯು, ಪೋಷಕನು ಮತ್ತು ಧಾರಕನು, ಪಿತಾಮಹನು ಎಂದರೆ ಪೂಜ್ಯನು, ವೇದ್ಯನು ಎಂದರೆ ಪ್ರಧಾನಜ್ಞೇಯ ವಸ್ತುವು; ಪವಿತ್ರನು ಎಂದರೆ ಸ್ಮರಣೆ ಮಾಡುವವರನ್ನು ಪವಿತ್ರ ಮಾಡುವವನು, ಪ್ರಣವ ಪ್ರತಿಪಾದ್ಯನು. ಬ್ರಹ್ಮಾದಿಗಳಿಂದ ಅರ್ಚ್ಯನಾದುದರಿಂದ ಋಕ್ ಶಬ್ದವಾಚ್ಯನಾದ ನಾನು ಋಗ್ವೇದದಲ್ಲಿದ್ದು ಅದಕ್ಕೆ ಸರ್ವ ವೇದಾಪೇಕ್ಷಯಾ ಶ್ರೈಷ್ಠ್ಯಪ್ರದನಾಗಿ, ಋಗ್ವೇದ ಪ್ರತಿಪಾದ್ಯನಾಗಿ, ಅದರಲ್ಲಿ ನಿಯಾಮಕನಾಗಿರುತ್ತೇನೆ. ಸರ್ವ ರೂಪಗಳಲ್ಲೂ ಸಮನಾಗಿರುವುದರಿಂದ ಸಾಮಶಬ್ದವಾಚ್ಯನಾದ ನಾನು ಸಾಮವೇದದಲ್ಲಿದ್ದು ಅದಕ್ಕೆ ಶ್ರೈಷ್ಠ್ಯಪ್ರದನಾಗಿ, ಅದರಿಂದ ಪ್ರತಿಪಾದ್ಯನಾಗಿ ಸಾಮವೇದದಲ್ಲಿ ನಿಯಾಮಕನಾಗಿರುವೆನು. ಯಾಗೋದ್ದೇಶ್ಯ ದೇವತೆಯಾದುದರಿಂದ ಯಜ್ಞಶಬ್ದವಾಚ್ಯನಾದ ನಾನು ಯಜುರ್ವೇದದಲ್ಲಿದ್ದು ಯಜುರ್ವೇದದಿಂದ ಪ್ರತಿಪಾದ್ಯನಾಗಿ ಆದರಲ್ಲಿ ನಿಯಾಮಕನಾಗಿರುವೆನು. ಮೋಕ್ಷಾರ್ಥಿಗಳಿಂದ ಗಮ್ಯನಾದುದರಿಂದ ನಾನು ಗತಿಯೆಂದೆನಿಸುವೆನು. ನಾನು ಸರ್ವರಿಗೂ ಪೋಷಕನು, ಸ್ವಾಮಿಯು ಮತ್ತು ಸಾಕ್ಷಿಯು ಎಂದರೆ ಸರ್ವವನ್ನೂ ಸಾಕ್ಷಾತ್ ನೋಡುವವನು. ನಾನು ಸರ್ವರಿಗೂ ಆಶ್ರಯನು, ಭೀತರಕ್ಷಕನು, ಅನಿಮಿತ್ತ ಬಂಧುವು, ಸೃಷ್ಟಿಕರ್ತನು, ಸಂಹಾರಕರ್ತನು, ಸರ್ವಾಧಾರನು, ಪ್ರಳಯದಲ್ಲಿ ಸರ್ವ ಜಗತ್ತನ್ನೂ ಉದರದಲ್ಲಿಟ್ಟುಕೊಳ್ಳುವವನು. ನಾನೇ ಜಗದ್ವ್ಯಂಜಕನು, ಆದರೂ ವಿಕಾರರಹಿತನು. ಮತ್ತು ಆದಿತ್ಯನಲ್ಲಿದ್ದು ನಾನೇ ತಪಿಸುತ್ತೇನೆ, ಎಂದರೆ ಆದಿತ್ಯನಲ್ಲಿರುವ ತಪನಧರ್ಮಕ್ಕೆ ನಿಯಾಮಕನಾಗಿರುತ್ತೇನೆ. ಮೇಘಚಕ್ರಗತನಾಗಿ ವೃಷ್ಟಿಯನ್ನು ಸುರಿಸುತ್ತೇನೆ ಮತ್ತು ನಿಲ್ಲಿಸುತ್ತೇನೆ. ಮೃತಿನಾಶಕನಾದುದರಿಂದ ಅಮೃತನೂ ನಾನೇ. ಆಯುಃ ಕ್ಷಯವಾದ ನಂತರ ಸಂಹಾರಕನೂ ನಾನೇ. ಸಕಲ ಕಾರ್ಯ ಪದಾರ್ಥಗಳಿಗೂ ನಾನೇ ನಿಯಾಮಕನು; ಸಕಲ ಕಾರಣ ಪದಾರ್ಥಗಳಿಗೂ ನಾನೇ ನಿಯಾಮಕನು.

ಈ ಪ್ರಕಾರವಾಗಿ ಸರ್ವ ಶಬ್ದವಾಚ್ಯನಾದ ಪರಮಾತ್ಮನು ಪ್ರತಿಯೊಂದು ಪದಾರ್ಥದಲ್ಲಿಯೂ ಒಂದೊಂದು ರೂಪದಿಂದ ಇದ್ದು ಆ ಪದಾರ್ಥಗತ ಸ್ವಾಭಾವಿಕ ಧರ್ಮಗಳಿಗೂ ತತ್ತತ್ಪದಾರ್ಥಗಳ ನಾಮ ರೂಪ ಕ್ರಿಯೆಗಳಿಗೂ ನಿಯಾಮಕನಾಗಿರುವನೆಂದು ತಿಳಿಯುವುದು **ವಿಜ್ಞಾನ**ವೆನ್ನಿಸುವುದು. ಇದೇ ವಿಶೇಷ ಸಾಂಖ್ಯವು. ಈ ವಿಶೇಷ ಜ್ಞಾತವ್ಯ ಭಗವನ್ಮಹಿಮೆಗಳನ್ನು ದಶಮಾಧ್ಯಾಯದಲ್ಲಿ ಇನ್ನೂ ವಿಸ್ತಾರವಾಗಿ ಶ್ರೀ ಕೃಷ್ಣನು ನಿರೂಪಿಸಿರುತ್ತಾನೆ. ಅದನ್ನು ಮುಂದೆ ವಿಶದವಾಗಿ ಹೇಳುತ್ತೇವೆ.

3. **ಪ್ರಶ್ನೆ :—** ಸ್ವಾಮೀ ! ಪರಮಾತ್ಮನು ಸೃಷ್ಟಿಕರ್ತನು, ಸ್ಥಿತಿಕರ್ತನು, ಸಂಹಾರಕರ್ತನು ಇತ್ಯಾದಿ ರೀತಿಯಾಗಿ ತಿಳಿಯುವುದು ಸಾಮಾನ್ಯ ಜ್ಞಾನವೆಂದು

ಸಪ್ತಮಾಧ್ಯಾಯದಲ್ಲಿ ಶ್ರೀ ಕೃಷ್ಣನು ನಿರೂಪಿಸಿ, ಈಗ ನವಮಾಧ್ಯಾಯದಲ್ಲಿ "ಪ್ರಭವಃ ಪ್ರಳಯಃ ಸ್ಥಾನಂ" ಎಂದು ಸೃಷ್ಟಿಕರ್ತೃತ್ವಾದಿ ಜ್ಞಾನವನ್ನು ವಿಜ್ಞಾನ ದಲ್ಲಿ ಅಂತರ್ಭಾವವನ್ನು ಹೊಂದಿಸಿರುವನು. ಇದು ವಿರುದ್ಧವಾಗಲಿಲ್ಲವೇ ?

**ಶ್ರೀ ಶ್ರೀಗಳವರು :—** ಬ್ರಹ್ಮಾದಿ ದೇವತೆಗಳಿಗೂ ಜ್ಞಾನದಾತನಾದ ಜಗದ್ಗುರುವಾದ ಶ್ರೀಕೃಷ್ಣನು ವಿರುದ್ಧೋಪದೇಶಗಳನ್ನು ಮಾಡುವನೇ ? ಸಪ್ತಮಾಧ್ಯಾಯದಲ್ಲಿ ಪರಮಾತ್ಮನು ಸೃಷ್ಟಿಕರ್ತನು, ಸ್ಥಿತಿಕರ್ತನು, ಸಂಹಾರಕರ್ತನು ಇತ್ಯಾದಿ ರೀತಿಯಲ್ಲಿ ಪರಮಾತ್ಮನನ್ನು ತಿಳಿಯುವುದು ಸಾಮಾನ್ಯ ಜ್ಞಾನವೆಂದೇ ಹೇಳಿರುವನು. ಸಾಮಾನ್ಯವಾಗಿ ಸರ್ವ ಜಗತ್ತಿಗೂ ಪರಮಾತ್ಮನು ಸೃಷ್ಟ್ಯಾದಿ ಕರ್ತನು ಎಂದು ತಿಳಿಯುವುದು "ಜ್ಞಾನವು" ಎಂದು ಅಲ್ಲಿ ಅರ್ಥವು. ನವಮಾಧ್ಯಾಯದಲ್ಲಿಯಾದರೋ, ಒಂದೊಂದು ಘಟ, ಪಟಾದಿ ವ್ಯಕ್ತಿವಿಶೇಷವನ್ನು ಪರಮಾತ್ಮನು ಸೃಷ್ಟಿಸುವನು, ರಕ್ಷಿಸುವನು, ಸಂಹರಿಸುವನು ಎಂದು ವಿಶೇಷವಾಗಿ ಪ್ರತಿಪ್ರತಿ ಪದಾರ್ಥಗಳಲ್ಲಿಯೂ ಪರಮಾತ್ಮನನ್ನು ಚಿಂತಿಸುವುದು ವಿಜ್ಞಾನವೆಂದು ಪರಮಾತ್ಮನು ನಿರೂಪಿಸಿರುವನು. ಹೀಗಿರುವಲ್ಲಿ ವಿರೋಧವೆಲ್ಲಿಂದ ಬಂತು ?

**4. ಪ್ರಶ್ನೆ :—** ಸ್ವಾಮೀ ! ಇನ್ನೂ ಪರಬ್ರಹ್ಮನ ಮಹಿಮೆಯನ್ನು ವಿಸ್ತರಿಸುವ ಇತರ ಶ್ಲೋಕಗಳಿಗೂ ಅರ್ಥವನ್ನು ವಿವರಿಸಬೇಕು.

**ಶ್ರೀ ಶ್ರೀಗಳವರು :—** ಪ್ರಾಯೇಣ ಭಗವನ್ಮಹಿಮಾ ಪ್ರತಿಪಾದಕವಾದ ಸಕಲ ವಾಕ್ಯಗಳನ್ನೂ ಉದಾಹರಿಸಿ ಅರ್ಥವನ್ನು ಪೂರ್ವದಲ್ಲಿ ( ಪ್ರಥಮಾಧ್ಯಾಯದಲ್ಲಿಯೇ ) ನಿರೂಪಿಸಿರುತ್ತೇವೆ. ಗೀತೆಯ ಏಕಾದಶಾಧ್ಯಾಯದಲ್ಲಿ ಪರಮಾತ್ಮನು ದೇಶತಃ ಕಾಲತಃ ಗುಣತಃ ಅನಂತನೆಂಬ ಮಹಾ ಮಹಿಮೆಯು ಮುಖ್ಯವಾಗಿ ಪ್ರತಿಪಾದಿತವಾಗಿರುತ್ತದೆ. ದ್ವಾದಶಾಧ್ಯಾಯದಲ್ಲಿ ಅವ್ಯಕ್ತ ನಾಮಕ ಲಕ್ಷ್ಮೀದೇವಿಗಿಂತಲೂ ಪರಮಾತ್ಮನು ಉತ್ತಮನು ಎಂದು ನಿರೂಪಿಸಲ್ಪಟ್ಟಿರುವುದು. ತ್ರಯೋದಶಾಧ್ಯಾಯದಲ್ಲಿ ಪರಬ್ರಹ್ಮಸ್ವರೂಪವು ಬಹ್ವರ್ಥಗರ್ಭಿತವಾದ ಸಂಕ್ಷಿಪ್ತ ವಾಣಿಯಿಂದ ವರ್ಣಿತವಾಗಿರುವುದು. ಆ ಶ್ಲೋಕಗಳನ್ನು ಉದಾಹರಿಸಿ ಈ ವಿಚಾರವನ್ನು ಉಪಸಂಹರಿಸುವೆವು :—

**(1) ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಽಮೃತಮಶ್ನುತೇ ।**
**ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ ॥12॥**

**ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಂ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ॥13॥**

**ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಂ ।**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥ ॥14॥**

ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ ।
ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ॥ ॥15॥
ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಂ ।
ಭೂತಭರ್ತೃ ಚ ತಜ್ಞ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥ ॥16॥
ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ಧಿಷ್ಠಿತಂ ॥ ॥17॥
ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।
ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥ ॥22॥

ಈ ಶ್ಲೋಕಗಳು ಪ್ರಾಯೇಣ ವ್ಯಾಖ್ಯಾತವಾಗಿರುವುವು. ಇವುಗಳಲ್ಲಿ ಪರಮಾತ್ಮನ ಅನಂತಾವಯವತ್ವ, ಒಂದೊಂದು ಅವಯವಕ್ಕೂ ಸರ್ವೇಂದ್ರಿಯ ಕಾರ್ಯಕಾರಿ ಸಾಮರ್ಥ್ಯೋಪೇತತ್ವ, ಸರ್ವತ್ರ ಅಂತರ್ಬಹಿರ್ವ್ಯಾಪ್ತತ್ವ, ಸರ್ವೇಂದ್ರಿಯಗಳ ಮತ್ತು ಸರ್ವೇಂದ್ರಿಯ ವಿಷಯಗಳ ಜ್ಞಾನವತ್ವ ಪ್ರಾಕೃತೇಂದ್ರಿಯರಾಹಿತ್ಯ, ನಿರ್ಲಿಪ್ತತ್ವ, ಸಾರಭೋಕ್ತೃತ್ವ, ಸರ್ವಸಂಹಾರಕತ್ವ, ಸತ್ವಾದಿ ಗುಣರಾಹಿತ್ಯ ಅನಂತ ಕಲ್ಯಾಣ ಗುಣಪೂರ್ಣತ್ವ, ಸರ್ವ ಪ್ರಾಣಿಗಳಲ್ಲಿ ಅಂತರ್ಬಹಿರ್ವ್ಯಾಪ್ತತ್ವ, ನಿಶ್ಚಲತ್ವ ಮತ್ತು ಚಲತ್ವ, ಸ್ಥೂಲತ್ವ ಮತ್ತು ಸೂಕ್ಷ್ಮತ್ವ, ದೂರಸ್ಥತ್ವ ಮತ್ತು ಸಮೀಪಸ್ಥತ್ವ ಇವೇ ಮುಂತಾದ ವಿರುದ್ಧ ಧರ್ಮೋಪೇತತ್ವವು ಅನಂತಾಧಿಷ್ಠಾನಗಳಲ್ಲಿದ್ದರೂ ತಾರತಮ್ಯರಹಿತನಾಗಿರೋಣವೆಂಬ ಸಮತ್ವ, ಭೂತಧಾರಣಪೋಷಣ ಕರ್ತೃತ್ವ, ಪ್ರಳಯದಲ್ಲಿ ಸರ್ವಭಕ್ಷಕತ್ವ, ಸೃಷ್ಟಿಯಲ್ಲಿ ಸರ್ವೋತ್ಪಾದಕತ್ವ, ಸೂರ್ಯಾದಿ ತೇಜಃಪದಾರ್ಥಗಳಿಗೂ ತೇಜಃಪ್ರದತ್ವ, ಪ್ರಕೃತಿವಿಲಕ್ಷಣತ್ವ ಮತ್ತು ಅಜ್ಞಾನ ರಾಹಿತ್ಯ, ಜ್ಞಾನರೂಪತ್ವ, ಸ್ವತಂತ್ರ ಸ್ವಪ್ರಕಾಶತ್ವ, ಜ್ಞಾನಗಮ್ಯತ್ವ, ಸರ್ವಾಂತಃ ಕರಣ ವೃತ್ತಿತ್ವ, ಸರ್ವಾಧಿಕನಾಗಿದ್ದು ಸರ್ವವನ್ನೂ ನೋಡೋಣವೆಂಬ ಉಪದ್ರಷ್ಟೃತ್ವ, ನಿರಾತಂಕವಾದ ಮತಿಯಿಂದ ನಿಖಿಲರ ಮನಸ್ಸನ್ನು ಪ್ರೇರಿಸುವುದೆಂಬ ಅನುಮಂತೃತ್ವ, ಸರ್ವಾಧಾರಕತ್ವ, ಸಾರಭೋಕ್ತೃತ್ವ, ಅಚಿಂತ್ಯ ಶಕ್ತಿಮತ್ವ, ಪರಮಚೇತನತ್ವ ಇವೇ ಮುಂತಾದ ಬಹು ಗೋಪ್ಯವಾದ ಪ್ರಧಾನವಾದ ಭಗವನ್ಮಹಿಮೆಗಳು ವರ್ಣಿತವಾಗಿರುವುವು. ಅಂತ್ಯ ಶ್ಲೋಕತ್ರಯಗಳು ಸದೃಷ್ಟಾಂತವಾಗಿ ಪರಮಾತ್ಮನ ವ್ಯಾಪ್ತಿಯನ್ನೂ, ನಿರ್ಲಿಪ್ತತೆಯನ್ನೂ ವಿವರಿಸುತ್ತವೆ :—

(2) ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಽಯಮವ್ಯಯಃ ।
ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ॥
ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ ।
ಸರ್ವತ್ರಾವಸ್ಥಿತೋ ದೇಹೇ ತಥಾಽಽತ್ಮಾನೋಪಲಿಪ್ಯತೇ ॥

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥**
—(13. 31–33.)

ಈ ಪರಮಾತ್ಮನು ಅವ್ಯಯನು ಎಂದರೆ ಸರ್ವ ಪ್ರಕಾರದಿಂದಲೂ ನಾಶ ರಹಿತನು. ಯಾತಕ್ಕೆಂದರೆ ಈತನು ಅನಾದಿಯು ಎಂದರೆ ಉತ್ಪತ್ತಿರಹಿತನು. ಉತ್ಪತ್ತಿರಹಿತನಾದರೂ ದೇಹಸಂಬಂಧದಿಂದ ಜನ್ಮಾದಿಗಳು ಯಾತಕ್ಕೆ ಬರಬಾರ ದೆಂದರೆ ಈತನು ನಿರ್ಗುಣನು, ಪ್ರಾಕೃತ ಗುಣರಹಿತನು; ಪ್ರಾಕೃತ ಗುಣರಹಿತ ನಾದರೂ ಕರ್ಮಫಲ ಭೋಕ್ತೃತ್ವಾದಿಗಳಿಂದ ವಿಕಾರವುಂಟಾಗಲಿ ಎಂದು ಶಂಕಿಸಿ ದರೆ ಅಥವಾ ಬ್ರಹ್ಮನು ಇಂಥ ಗುಣಸಂಗ ರಹಿತನಾದ ಅವ್ಯಯ ಮೂರ್ತಿಯಾದರೆ, ತತ್ವಮಸಿ ಮುಂತಾದ ಅದ್ವೈತ ವಾಕ್ಯಗಳಿಗೇನು ಗತಿ ಎಂದು ಶಂಕಿಸಿದರೆ ಶ್ರೀ ಕೃಷ್ಣನು ಹೇಳುತ್ತಾನೆ :— **ಶರೀರಸ್ಥೋಽಪಿನ**– ಪರಮಾತ್ಮನು ( ಇದು ಹೇತು ಗರ್ಭ ಪದವು ) ಎಂದರೆ ಪರಮಚೇತನನಾದ ವಿಷ್ಣುವು ಶರೀರಾಭಿಮಾನಿಯಾದ ಜೀವನಲ್ಲ. ಇದರಿಂದ ಕರ್ಮಫಲ ಭೋಕ್ತೃತ್ವಾದಿ ನಿಮಿತ್ತಕ ವಿಕಾರಗಳು ಪರಮ ಚೇತನನಾದ ಹರಿಗೆ ಬರುವುದಿಲ್ಲವೆಂದು ಸಿದ್ಧವಾಯಿತು. ಪರಮಾತ್ಮನು ಜೀವ ನಂಥಾ ಅಲ್ಪಶಕ್ತನಾದ ಅಸ್ವತಂತ್ರ ಶರೀರಾಭಿಮಾನಿಯಲ್ಲ. ತತ್ವಮಸ್ಯಾದಿ ವಾಕ್ಯ ಗಳು ಅಭೇದ ತಾತ್ಪರ್ಯಕವಲ್ಲವೆಂದೂ ಇದರಿಂದಲೇ ಸಿದ್ಧವಾಯಿತು. ಕಿಂಚ ಪರಮಾತ್ಮನು ನಿಷ್ಕ್ರಿಯನಲ್ಲ. ಕರೋತಿ ನ ಲಿಪ್ಯತೇ = ಆತನು ಸರ್ವಕರ್ತನು ಆದರೂ ಕರ್ಮ ಫಲದಿಂದ ಲಿಪ್ತನಾಗುವುದಿಲ್ಲ. ಇದರಿಂದಲೇ ಪರಮಾತ್ಮನಿಗೆ ನಿಷ್ಕ್ರಿಯತ್ವವ್ಯಪದೇಶವೆಂದು ಸಿದ್ಧವಾಯಿತು. *

ಪರಮಾತ್ಮನು ನಿರ್ಲಿಪ್ತನೆಂಬಲ್ಲಿ ಶ್ರೀ ಕೃಷ್ಣನು ದೃಷ್ಟಾಂತವನ್ನು ಹೇಳು ತ್ತಾನೆ :— ಪಂಕಕೂಪವೇ ಮುಂತಾದ ಸರ್ವ ಪ್ರದೇಶವರ್ತಿಯಾದರೂ ಆಕಾಶವು ಸೂಕ್ಷ್ಮವಾದುದರಿಂದ ( ಅಪ್ರತಿಘ ದ್ರವ್ಯವಾದುದರಿಂದ ) ಹೇಗೆ ತತ್ತತ್ಪ್ರದೇಶಗತ ದೋಷಗಳಿಂದ ಲಿಪ್ತವಾಗುವುದಿಲ್ಲವೋ ಹಾಗೆಯೇ ಸರ್ವವ್ಯಾಪಿಯಾದ ಪರಮಾತ್ಮನು ಜೀವನ ದೇಹದಲ್ಲಿಯೇ ಇದ್ದರೂ ಜೀವಕೃತ ಕರ್ಮದಿಂದ ಲಿಪ್ತನಾಗುವುದಿಲ್ಲ. ಪರಮಾತ್ಮನು ಕ್ಷೇತ್ರಜ್ಞನೆಂದು ಸದೃಷ್ಟಾಂತವಾಗಿ ಶ್ರೀ ಕೃಷ್ಣನು ನಿರೂಪಿಸು ತ್ತಾನೆ :— ಒಬ್ಬನೇ ಸೂರ್ಯನು ಈ ಸಕಲ ಪ್ರಪಂಚವನ್ನೂ ಪ್ರಕಾಶಪಡಿಸುವಂತೆ ಒಬ್ಬನೇ ಪರಮಾತ್ಮನು ಸಕಲ ಕ್ಷೇತ್ರಗಳಲ್ಲೂ ಸ್ಥಿತನಾಗಿದ್ದು ಚೇತನಾಚೇತನಾತ್ಮಕ ವಾದ ಸಕಲ ಕ್ಷೇತ್ರವನ್ನೂ ಪ್ರಕಾಶಪಡಿಸುತ್ತಾನೆ.

---

* ಪ್ರಕಾರಾಂತರದಿಂದಲೇ ಈ ಶ್ಲೋಕಭಾಗಕ್ಕೆ ಅರ್ಥವನ್ನು ಹೇಳಬಹುದು. " ಎಲೈ ಕೌಂತೇಯನೇ ! ಪರಮಾತ್ಮನು ಶರೀರದಲ್ಲಿಯೇ ಜೀವನಂತೆಯೇ ಇದ್ದರೂ ಜೀವನಂತೆ ಕರ್ಮ ಗಳನ್ನು ಅವಶನಾಗಿ ಆಯಾಸದಿಂದ ಫಲಾಪೇಕ್ಷಿಯಾಗಿ ಮಾಡುವುದಿಲ್ಲ. ಮತ್ತು ಕರ್ಮಗಳಿಂದ ಲಿಪ್ತನಾಗುವುದಿಲ್ಲ.

ಹದಿನೈದನೆಯ ಅಧ್ಯಾಯದಲ್ಲಿಯೂ ಬಹು ಭಗವದ್ಗುಣಗಳು ನಿರೂಪಿತವಾಗಿರುವುವು. ಸಾಧ್ಯವಾದಷ್ಟು ಪೂರ್ವದಲ್ಲಿಯೇ (ಪ್ರಥಮಾಧ್ಯಾಯದಲ್ಲಿಯೇ ನಿರೂಪಿತವಾಗಿರುವುದರಿಂದ ಈಗ ಪುನರಾರಂಭವು ಅನವಶ್ಯಕವು.

ಇದು ಶ್ರೀ ಕೃಷ್ಣನಿಂದ ಉಪದಿಷ್ಟವಾದ ಸಾಂಖ್ಯ ತತ್ವವು,— ದ್ವಿತೀಯಾಧ್ಯಾಯದಲ್ಲಿ ಸಂಕ್ಷಿಪ್ತವಾಗಿ ಪ್ರತಿಪಾದಿಸಲ್ಪಟ್ಟು ಇತರ ಸರ್ವ ಅಧ್ಯಾಯಗಳಲ್ಲೂ ವಿಶದೀಕೃತವಾದ ಗುಹ್ಯೋಪದೇಶವು. ಬಲವದಾಶ್ರಯದಿಂದ ಪ್ರವೇಶಿಸಿದ ಸಾಮಾನ್ಯ ಭೃತ್ಯನಿಗೂ ರಾಜದರ್ಶನವು ಸುಲಭವಾಗಿ ಲಭಿಸುವಂತೆ, ಪದವೀಧರನಿಗೆ ಪ್ರಜಾ ಸಹಾಯವು ಆಜ್ಞಾಮಾತ್ರದಿಂದ ಲಭಿಸುವಂತೆ, ಅಥವಾ ಲಕ್ಷ್ಮೀಪುತ್ರನಿಗೆ ಲೌಕಿಕ ಸಂಪತ್ತೆಲ್ಲಾ ದ್ರವ್ಯವಿತರಣೆಯ ಪ್ರಭಾವದಿಂದ ತತ್ತತ್ಕಾಲದಲ್ಲಿ ಬಂದೊದಗುವಂಥ, ನಿಖಿಲ ಸದ್ಗುಣಗಣೋಪೇತನಾದ ಸ್ವತಂತ್ರನಾದ ಶ್ರೀ ಪರಮಾತ್ಮನ ಜ್ಞಾನಪೂರ್ವಕವಾಗಿ ಕೃತವಾದ ವಿಶಿಷ್ಟ ಕರ್ಮಯೋಗವುಳ್ಳ ಅಧಿಕಾರಿಯು ಭಗವದನುಗ್ರಹವನ್ನು ಅನಾಯಾಸದಿಂದ ಹೊಂದುವುದರಲ್ಲಿ ಸಂಶಯವಿಲ್ಲ. ಸರ್ವ ಕರ್ಮಾನುಷ್ಠಾನಗಳಿಗೂ ಅವಶ್ಯಾಂಗವಾದ ಮತ್ತು ಫಲರೂಪವೂ ಆದ ಅಂತಹ ನಿಜ ತತ್ವವು, ಪೂರ್ವೋಕ್ತವಾದ ವಿಷ್ಣು ಸರ್ವೋತ್ತಮತ್ವವು, ಪರಮಾತ್ಮನ ಸ್ವಾತಂತ್ರ್ಯ, ಗುಣಪೂರ್ಣತ್ವ, ಅಚಿಂತ್ಯ ಶಕ್ತ್ಯಾದಿ ಮಹಾ ಮಹಿಮೋಪೇತತ್ವವು; ಜೀವನ ಪಾರತಂತ್ರ್ಯ, ಅಲ್ಪತೆ ಮತ್ತು ಸ್ವರೂಪೇಣ ನಿತ್ಯತ್ವವು; ಪ್ರಕೃತ್ಯಾದಿಗಳ ಸ್ವರೂಪೇಣ ನಿತ್ಯತ್ವವು ಮತ್ತು ಪರಮಾತ್ಮನಿಯಮ್ಯತ್ವವು. ಈ ರೀತಿಯಾದ ಪರಾಪರ ತತ್ವಜ್ಞಾನವು ಈ ಗೀತಾ ದ್ವಿತೀಯಾಧ್ಯಾಯಕ್ಕೆ ಸಾಕ್ಷನ್ಮೂಲಭೂತವಾದ ಕಾಠಕ ಶ್ರುತಿಗೂ ಸಮ್ಮತವಾಗಿ ಮತ್ತು ಸರ್ವ ವೇದದಿಂದಲೂ ಅಂಗೀಕೃತವಾದ ನಿಶ್ಚಯವಾಗಿರುತ್ತದೆ. *

---

* ವಿಷ್ಣು ಸರ್ವೋತ್ತಮತ್ವವು, ಜೀವ ಬ್ರಹ್ಮರ ಭೇದವು, ಜಗತ್ಸತ್ಯತ್ವವು ಇವೇ ಮುಂತಾದುವುಗಳನ್ನು ಪ್ರತಿಪಾದನೆ ಮಾಡುವ ದ್ವೈತ ತತ್ವವೇ ಗೀತೆಯಲ್ಲಿ ಶ್ರೀಕೃಷ್ಣನಿಂದ ನಿರೂಪಿಸಲ್ಪಟ್ಟ "**ಸಾಂಖ್ಯ**" ವೆಂದು ನಿಷ್ಪಕ್ಷಪಾತವಾದ ಹೃದಯವುಳ್ಳ ಸರ್ವರಿಗೂ ವಿದಿತವಾಗುವುದು. ಆಂಗ್ಲೇಯರಲ್ಲಿ ವಿದ್ವದಗ್ರಣಿಯಾದ ಉರ್ಕ್ಯುಹಾರ್ಟನೂ ಹಾಗೆಯೇ ಹೇಳುತ್ತಾನೆ:—

Krishna becomes identified with Vishnu or Vasudeva...... But Vishnu is also on the point of being identified with the impersonal non-qualitative Brahman the subject of the more severely monistic doctrine of the Upanishads. Thus, from whatever direction we view the process of modification, Vishnu obtains the elevation which results from identification with the Absolute, and at the same time the Absolute is prevented from receding into these depths of negation and unapproacha-

bility...... The all-God becomes associated with qualities which constitute him a definite object of worship and from him the world-process emerges— as a real emanation and not simply as an illusive shadow-play.

—W. S. Urquhart, M.A., D. Litt.

**ಅರ್ಥವು :—** ಗೀತೆಯಲ್ಲಿ ಶ್ರೀ ಕೃಷ್ಣನಿಗೆ ವಿಷ್ಣುತಾದಾತ್ಮ್ಯವು ( ವಿಷ್ಣುವಿನಿಂದ ಅಭೇದವು) ನಿರೂಪಿತವಾಗಿರುವುದು. ಅಷ್ಟೇ ಅಲ್ಲ. ಈ ವಿಷ್ಣುವಿಗೇ ಉಪನಿಷತ್ಪ್ರತಿಪಾದ್ಯವಾದ ನಿರ್ಗುಣಬ್ರಹ್ಮತಾದಾತ್ಮ್ಯವೂ ನಿರೂಪಿಸಲ್ಪಟ್ಟಿರುವುದು. ಈ ರೀತಿಯಾಗಿ ಪ್ರಾಪ್ತವಾದ ಪ್ರಕಾರ ವೈಚಿತ್ರ್ಯಗಳಲ್ಲಿ ನಾವು ಯಾವುದನ್ನು ಪರಾಮರ್ಶೆ ಮಾಡಿದರೂ, ವಿಷ್ಣುವು ಉಪನಿಷತ್ಪ್ರತಿಪಾದ್ಯವಾದ ಬ್ರಹ್ಮತಾದಾತ್ಮ್ಯದಿಂದ ಪ್ರಾಪ್ತವಾದ ಸರ್ವೋತ್ತಮತ್ವವನ್ನೇ ಹೊಂದುತ್ತಾನೆ. ಅದೂ ಅಲ್ಲದೆ ಪರಮಾತ್ಮನು ನಿರ್ಧರ್ಮಕ ಶೂನ್ಯಭಾವ ಮತ್ತು ಅಜ್ಞೇಯತೆ ಎಂಬ ಹಳ್ಳಕ್ಕೆ ಬೀಳದಂತೆ ತಪ್ಪಿಸಲ್ಪಟ್ಟಿರುವನು. ಈ ಸರ್ವೇಶ್ವರನು ಗುಣಗಳಿಂದ ಯುಕ್ತನಾಗುವುದರಿಂದ ಜನರುಗಳ ಆರಾಧನೆಗೆ ವಿಷಯನಾಗುವನು, ಮತ್ತು ಈತನಿಂದ ಜಗತ್ಪ್ರವಾಹವು– ಸತ್ಯಭೂತವಾದ ನಿರ್ಗಮವು, ಮಿಥ್ಯಾಭೂತವಾದ ಸುಳ್ಳು ಆಟವಲ್ಲ– ಹೊರಗೆ ಹೊರಡುತ್ತದೆ.

ಇದು ಬಹು ಬಿರುದಾಂಕಿತನಾದ ಡಾಕ್ಟರ್ ಬಾರ್ನೆಟ್ ಎಂಬ ಮತ್ತೊಬ್ಬ ಪ್ರೌಢ ಗ್ರಂಥಕರ್ತನ ನಿಶ್ಚಯವು :—

" At the summit of all existence is an Absolute spirit variously called Paramatman, Purushottama, Vasudeva, Iswara, Narayana, Govinda, Hari, Vishnu. But though being above the moods and inconceivable, he is not the blank, attributeless unqualified one of the Adwaita Vedanta. On the other hand, in Him are united all conceivable good qualities raised to infinity. All goodness, knowledge, and blessedness that are and may be abide in an immeasurable degree in Him. He is the soul, the witness, the inward ruler of the universe. All the universe is real for it is inspired throughout by this blessed soul. The universe comprises two real categories— one matter, and infinitely many souls.

—L. D. Barnett, M.A., D. Litt.

**ಅರ್ಥವು :—** ಗೀತೆಯಲ್ಲಿ ಸರ್ವಕ್ಕೂ ಮೇಲ್ಪಟ್ಟ ಸ್ಥಾನದಲ್ಲಿ ಪರಮಾತ್ಮ, ಪುರುಷೋತ್ತಮ, ವಾಸುದೇವ, ಈಶ್ವರ, ನಾರಾಯಣ, ಗೋವಿಂದ, ಹರಿ, ವಿಷ್ಣು ಇತ್ಯಾದಿ ಅನೇಕ ಹೆಸರುಗಳಿಂದ ಕರೆಯಲ್ಪಡುವ ಒಂದು ಪರಮ ( ಪರಬ್ರಹ್ಮ ) ಚೇತನವು ನಿರೂಪಿಸಲ್ಪಟ್ಟಿದೆ. ಅದರೆ

ಇದು ಸರ್ವಾವಸ್ಥಾತೀತವೂ, ಅಚಿಂತ್ಯವೂ ಆಗಿದ್ದರೂ, ಅದು ಅದ್ವೈತ ವೇದಾಂತದಲ್ಲಿ ಪ್ರತಿಪಾದಿಸಲ್ಪಟ್ಟ ನಿರ್ಧರ್ಮಕವಾದ, ವಿಶೇಷರಹಿತವಾದ ಶೂನ್ಯ ಐಕ್ಯವಲ್ಲ. ಪರಂತು ಅವನಲ್ಲಿ ಸಕಲ ಕಲ್ಯಾಣ ಗುಣಗಳೂ ಆನಂತ್ಯವನ್ನು ಹೊಂದಿ ನೆಲೆಗೊಂಡಿರುವುವು. ಸಕಲ ಸದ್ಗುಣಗಳೂ, ಜ್ಞಾನವೂ, ಆನಂದವೂ ಪರಿಪೂರ್ಣವಾಗಿ ಆತನಲ್ಲಿರುವುವು, ಆತನು ಜಗದಂತರ್ಯಾಮಿಯು, ಸರ್ವ ಸಾಕ್ಷಿಯು, ಅಂತರ್ಗತನಾಗಿ ಜಗನ್ನಿಯಾಮಕನಾಗಿರುವನು, ಸಕಲ ಜಗತ್ತೂ ಸತ್ಯವೇ, ಯಾತಕ್ಕೆಂದರೆ ಅದು ಈ ಪೂರ್ಣಾನಂದ ವಸ್ತುವಿನಿಂದ ಚೇಷ್ಟಿತವಾಗಿದೆ, ಜಗತ್ತು ಸತ್ಯ ಭೂತವಾದ ಎರಡು ತತ್ವಗಳನ್ನು ಒಳಗೊಂಡಿರುವುದು, ಒಂದು ಜಡವು, ಮತ್ತೊಂದು ಅನಂತಾನಂತ ಜೀವರಾಶಿಗಳು.



# 13. ಹದಿಮೂರನೆಯ ಅಂಶವು.

## ಸಂನ್ಯಾಸ ಸ್ವರೂಪವು.

1. **ಶ್ರೀ ಶ್ರೀಗಳವರು:—** ಸಂಕಲ್ಪರಾಹಿತ್ಯ, ನಿಷ್ಕಾಮತೆ, ವೈರಾಗ್ಯ, ಮನಃಪ್ರಸಾದ ಇತ್ಯಾದಿ ಪರ್ಯಾಯ ನಾಮಗಳಿಂದ ನಿರೂಪಿತವಾದ ರಾಗ ದ್ವೇಷ ವರ್ಜನರೂಪವಾದ ಸಂನ್ಯಾಸ ಸ್ವರೂಪವನ್ನೂ, ಅಪರೋಕ್ಷ ಜ್ಞಾನ ಪ್ರಾಪ್ತಿಯಲ್ಲಿ ಅದರ ಆವಶ್ಯಕತೆಯನ್ನೂ, ಪೂರ್ವದಲ್ಲೇ ನಿರೂಪಿಸಿರುತ್ತೇವೆ. ಸಂನ್ಯಾಸವು ಚತುರಂಶಗಳಿಂದ ಸಹಿತವಾದ ಸಾಕ್ಷಾತ್ ಧ್ಯಾನಕಾರಣವಾದ ಕರ್ಮಯೋಗದ ಏಕಾಂಶವು ಎಂದೂ ಹಿಂದೆಯೇ ಹೇಳಿರುತ್ತೇವೆ. ಕಾಮಾದಿವರ್ಜನ ರೂಪವಾದ ಸಂನ್ಯಾಸವು ವಿಶಿಷ್ಟ ಕರ್ಮಯೋಗದಲ್ಲಿ ಅಂತರ್ಭೂತವಾಗಿರುವುದೆಂದೂ, ಸಂನ್ಯಾಸವಿಲ್ಲದಿದ್ದರೆ ಕರ್ಮಯೋಗದ ಸ್ವರೂಪನಿಷ್ಪತ್ತಿಯೇ ಅಸಂಭಾವಿತವಾಗುವುದೆಂದೂ ಶ್ರೀಕೃಷ್ಣನು ಹೇಳುತ್ತಾನೆ:—

**(1) ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ ।**
**ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥**

—(6. 2.)

ಎಲೈ ಪಾಂಡುನಂದನನೇ! ಕಾಮಾದಿವರ್ಜನರೂಪವಾದ ಸಂನ್ಯಾಸವು ಕರ್ಮಯೋಗದಲ್ಲಿ ಅಂತರ್ಭೂತವಾದುದು (ಏಕದೇಶವು) ಎಂದೇ ತಿಳಿ. ಯಾತಕ್ಕೆಂದರೆ ಕರ್ಮ ಫಲಾಪೇಕ್ಷಾಪೂರ್ವಕವಾದ ಸಂಕಲ್ಪಗಳನ್ನು ಪರಿತ್ಯಾಗ ಮಾಡದವನು (ಸಂನ್ಯಾಸರಹಿತನು) ಕರ್ಮಯೋಗಿಯಾಗಲಾರನು.

ಕಾಮಾದಿಗಳನ್ನು ಪರಿತ್ಯಜಿಸುವುದೆಂದರೆ ಸ್ವರೂಪತಃ ಸರ್ವ ಮನೋಗತ ಸಂಕಲ್ಪಗಳನ್ನೂ, ಇಚ್ಛೆಗಳನ್ನೂ ತ್ಯಜಿಸಿ, ಶೂನ್ಯಭಾವವನ್ನು ಹೊಂದುವುದಲ್ಲ. ಕಾಮಾದಿಗಳನ್ನು ದುರ್ವಿಷಯಗಳಿಂದ ಬಿಡಿಸುವುದೇ ಕಾಮಾದಿಗಳ ಪರಿತ್ಯಾಗವು. ದುರ್ವಿಷಯೇಚ್ಛಾ ಪರಿತ್ಯಾಗವೇ ಕಾಮವರ್ಜನವು. ಧರ್ಮ ವಿಷಯದಲ್ಲಿ ಕೋಪವನ್ನು ಹೊಂದದಿರುವುದೇ ಕ್ರೋಧ ಪರಿತ್ಯಾಗವು. ಸತ್ಪಾತ್ರದಲ್ಲಿ ವಿಷ್ಣುಪ್ರೀತ್ಯರ್ಥವಾಗಿ ದ್ರವ್ಯ ವಿನಿಮಯವನ್ನು ಮಾಡಬೇಕಾದಾಗ, ದ್ರವ್ಯವು ಖರ್ಚಾಗುವುದಲ್ಲಾ ಎಂಬ ಧನಸ್ನೇಹವನ್ನು ಪರಿತ್ಯಾಗ ಮಾಡುವುದೇ ಲೋಭತ್ಯಾಗವು. ಇದೇ ರೀತಿಯಲ್ಲಿ ಸಕಲ ಮನೋಧರ್ಮಗಳನ್ನೂ ಅವುಗಳ ವಿಷಯ ಶೋಧನೆಯಿಂದ ತನಗೆ ಅನರ್ಥ ಪ್ರಾಪ್ತಿಕರವಾಗದಿರುವಂತೆ ಮಾಡಿಕೊಳ್ಳೋಣವೇ ಸಂನ್ಯಾಸವೇ ಹೊರತು ಕಾಮಾದಿಗಳನ್ನು ಸ್ವರೂಪತಃ ಸಂಹರಿಸುವುದು ಜ್ಞಾನ ಭಕ್ತಿವಿರಕ್ತಿಗಳನ್ನು ಸಂಪಾದಿಸಬೇಕೆಂದು ಪುನಃ ಪುನಃ ವಿಧಿಸುತ್ತಿರುವ ಶ್ರೀ ಕೃಷ್ಣನಿಗೆ ಅತ್ಯಂತ ಅಸಮ್ಮತ

ವಾದ ವ್ಯಾಪಾರವು. * ಈ ಪ್ರಮೇಯಗಳೆಲ್ಲಾ ಪೂರ್ವದಲ್ಲಿಯೇ ನಿರೂಪಿಸಲ್ಪಟ್ಟಿರುವುವು. ಅದೇ ವಿಷಯವನ್ನೇ ಸ್ವಲ್ಪ ವಿವರಿಸುವೆವು. ತಥಾಹಿ :—

ಶ್ರೀ ಕೃಷ್ಣನೇ ಸಂನ್ಯಾಸ ಶಬ್ದಾರ್ಥವನ್ನೂ ಸಹ ಹೇಳಿರುತ್ತಾನೆ :—

**(2) ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ಪ್ರಮುಚ್ಯತೇ ॥**
—(5. 3.)

---

* ಅದ್ವೈತ ಮತಕ್ಕೂ ದ್ವೈತ ಮತಕ್ಕೂ, ಹೂಣ ವ್ಯವಹಾರಗಳಿಗೂ ವೈದಿಕ ವ್ಯವಹಾರಗಳಿಗೂ ವಿರೋಧವಿರುವಂತೆ, ಸರ್ವ ಮೋಕ್ಷಹೇತುಭೂತವಾದ ತತ್ವ ವಿಷಯಗಳಲ್ಲಿಯೂ ಕ್ರೂರವಾದ ವಿರೋಧವು ಇರುವುದು, ಪ್ರಕೃತದಲ್ಲಿಯೂ ಕೂಡ ಸಕಲ ಕಾಮಗಳನ್ನೂ ಸ್ವರೂಪತಃ ನಾಶವನ್ನು ಹೊಂದಿಸಿ, ಇಚ್ಛಾರಹಿತನಾಗಿ ಮೋಟು ಮರದಂತೆ ನಿಶ್ಚಲತ್ವವನ್ನು ಹೊಂದುವುದೇ ಉತ್ತಮ ಧರ್ಮವೆಂದು ಅದ್ವೈತಿಗಳು ಹೇಳುತ್ತಾರೆ, ಇದು ಧರ್ಮಭ್ರಂಶಕ್ಕೂ, ನರಕಾದ್ಯನರ್ಥಗಳಿಗೂ ಕಾರಣವಾದ ಇಹಪರಗಳೆರಡರಲ್ಲೂ ದುಃಖ ಮಾತ್ರ ಫಲವನ್ನು ಕೊಡುವ ವೃಥಾ ಪ್ರಯತ್ನವೆಂದು ದ್ವೈತಿಗಳು ಹೇಳುತ್ತಾರೆ, ಕಾಮಜಯವೆಂದರೆ ಸ್ವರೂಪತಃ ಕಾಮದ ನಾಶವಲ್ಲ, ಮತ್ತೇನೆಂದರೆ ಕಾಮಕ್ಕೆ ವಿಷಯವಾದ ಸ್ತ್ರೀ, ಧನ, ಕೀರ್ತಿ ಮುಂತಾದ ಅಲ್ಪ ಪದಾರ್ಥಗಳನ್ನು ಪರಿತ್ಯಾಗ ಮಾಡಿ, ಪರಮಾತ್ಮ, ದೇವತೆಗಳು, ಧರ್ಮ ಮುಂತಾದುವುಗಳನ್ನು ವಿಷಯವಾಗಿ ಸ್ವೀಕರಿಸುವುದು, ವಿಷಯಶೋಧನೆಯಿಂದ ಕಾಮಾದಿಗಳ ಜಯವು ಉಚಿತವೇ ಹೊರತು ಸ್ವರೂಪತಃ ಇಚ್ಛೆಯನ್ನು ಪರಿತ್ಯಾಗ ಮಾಡುವುದು ಸುಖಕರವಲ್ಲವೆಂಬುದು ಎಲ್ಲರ ಅನುಭವಕ್ಕೂ ಸಿದ್ಧವಾಗಿರುವುದು, ಆಂಗ್ಲೇಯ ತತ್ವಜ್ಞರಲ್ಲಿ ನಿಸ್ಸೀಮನೆಂದು ಪ್ರಸಿದ್ಧನಾದ ಕೇರ್ಡನು ಈ ದೋಷವನ್ನು ತೋರಿಸುತ್ತಾನೆ ;—

"To remain at the negative point of view is as disastrous as never to have reached it. For to deny the place of passion and desire is to cut oneself off from all concrete human interests."

—Edward Caird, M.A.

**ಅರ್ಥ** :— ತತ್ವ ವಿಚಾರದಲ್ಲಿ ಯಾವುದೂ ಇಲ್ಲ, ಎಲ್ಲಾ ಸುಳ್ಳು ಎಂಬ ನಿಷೇಧ ದೃಷ್ಟಿಯಲ್ಲಿ ಇರುವುದು ವಿಚಾರರಹಿತವಾಗಿದ್ದರೆ ಹೇಗೋ ಹಾಗೆಯೂ ನಾಶಕರವಾದುದು, ಏತಕ್ಕೆಂದರೆ ರಾಗ ದ್ವೇಷಾದಿಗಳಿಗೆ ಸ್ವರೂಪತಃ ಸ್ಥಿತಿಯನ್ನೇ ತಿರಸ್ಕರಿಸುವುದು ಸಕಲ ಮಾನುಷ ಧರ್ಮ ವ್ಯವಹಾರಗಳಿಂದಲೂ ಸಂಬಧವನ್ನು ಕತ್ತರಿಸಿಕೊಂಡಂತೆಯೇ ಆಗುವುದು,

(ಸ್ವರೂಪತಃ ಕಾಮಾದಿಗಳನ್ನು ನಾಶ ಮಾಡಿದರೆ ಪರಮಾತ್ಮ ಪ್ರೀತಿಕರವಾದ ಧರ್ಮಗಳನ್ನೂ ಸಾಧು ಮನುಷ್ಯ ಸೇವೆಗಳನ್ನೂ ಮಾಡುವುದು ಕೂಡ ಅಸಾಧ್ಯವಾಗಿ ಹೋಗುವುದೆಂದು ಭಾವವು, )

ಆರ್ಚರ್ ಸಾಹೇಬನೂ ಇದೇ ನಿಶ್ಚಯವನ್ನು ಬರೆದಿರುತ್ತಾನೆ ;—

ಎಲೈ ಪರಾಕ್ರಮಶಾಲಿಯಾದ ಅರ್ಜುನನೇ! ಯಾವಾತನು ದ್ವೇಷ ಆಕಾಂಕ್ಷಾದಿರಹಿತನೋ (ಮತ್ತು ಕಾಮ್ಯಕರ್ಮತ್ಯಾಗಿಯೋ) ಆತನು ನಿತ್ಯ ಸಂನ್ಯಾಸಿಯೆಂದು ತಿಳಿಯತಕ್ಕದ್ದು. ಆತನೇ ರಾಗದ್ವೇಷಾದಿ ರೂಪವಾದ ಅಥವಾ ಶೀತೋಷ್ಣ, ಲಾಭಾಲಾಭಾದಿ ರೂಪವಾದ ದ್ವಂದ್ವಗಳನ್ನು ಜಯಿಸಿ ಅನಾಯಾಸವಾಗಿ ಸಂಸಾರಪಾಶದಿಂದ ಮುಕ್ತನಾಗುತ್ತಾನೆ.

ದ್ವೇಷ ಮತ್ತು ಆಕಾಂಕ್ಷಾರಹಿತನು ಸಂನ್ಯಾಸಿಯು ಎಂಬ ಶ್ರೀ ಕೃಷ್ಣನ ವಾಕ್ಯವು ಇನ್ನೂ ಅಧಿಕವಾದ ಅರ್ಥದಿಂದ ಗರ್ಭಿತವಾಗಿರುವುದು. ಆಕಾಂಕ್ಷಾ ದ್ವೇಷಗಳನ್ನು ಪರಿತ್ಯಾಗ ಮಾಡಬೇಕೆಂದರೆ ಕಾಮಾದಿ ಸಕಲ ಅರಿಷಡ್ವರ್ಗಗಳನ್ನೂ ಜಯಿಸಬೇಕೆಂದು ಅರ್ಥವು.

2. ಅಲ್ಲಿ ಅಲ್ಲಿ ಶ್ರೀ ಕೃಷ್ಣನು ಪುನಃ ಪುನಃ ಕಾಮಾದಿಗಳ ಜಯವನ್ನು ವಿಧಿಸುತ್ತಾನೆ :—

(1) **ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಂ ॥**

—(3. 37.)

**ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಂ ॥**

—(3. 41.)

---

The doctrine of detachment, passionlessness, indifference as a cure for the inherent evil of existence is not profouud one at all...... In its exaggerated from it is violently antisocial and consequently incompatible with any rational system of ethics."

—W. Archer's India and the Future (73)

**ಅರ್ಥ :—** ಸರ್ವಸಂಗ ರಾಹಿತ್ಯ ಸ್ವರೂಪೇಣ ರಾಗರಾಹಿತ್ಯ ಮತ್ತು ಉದಾಸೀನತೆ ಇವುಗಳೇ ಲೋಕದಲ್ಲಿರುವ ತಾಪಗಳಿಗೆ ಪರಿಹಾರವೆಂದು ಬೋಧಿಸುವ ತತ್ತ್ವವು ಆಳವಾದುದೇ ಅಲ್ಲ, ಅಧಿಕವಾಗಿ ವೃದ್ಧಿ ಹೊಂದಿದರೆ ಈ ನಡೆವಳಿಕೆಯು ಅತಿ ಕ್ರೂರವಾಗಿ ಸಮಾಜದಲ್ಲಿ ಧರ್ಮಾನುಷ್ಠಾನಗಳಿಗೇ ವಿರುದ್ಧವಾಗುವುದರಿಂದ ಈ ತತ್ತ್ವವು ಯಾವ ವಿಧವಾದ ಸಮಂಜಸವಾದ ಮೋಕ್ಷಸಾಧನ ಶಾಸ್ತ್ರದ ಸಂಗಡದಲ್ಲಿಯೂ ಅವಿರುದ್ಧವಾಗಿರಲಾರದು, (ಮೋಕ್ಷ ಸಾಧನ ಶಾಸ್ತ್ರವನ್ನು ಇಟ್ಟುಕೊಳ್ಳಬೇಕಾದರೆ ಅದ್ವೈತ ತತ್ತ್ವವನ್ನು ಪರಿತ್ಯಾಗ ಮಾಡಬೇಕೆಂದು ತಾತ್ಪರ್ಯವು.)

ಎಲೈ ಪಾರ್ಥನೇ ! ಈ ಕಾಮವು ಪ್ರಬಲವಾದ ಪಾಪಕಾರಣವು. ಇದೇ ರಜೋಗುಣದಿಂದ ಉತ್ಪನ್ನವಾಗತಕ್ಕ ಕ್ರೋಧಕ್ಕೆ ಕಾರಣವು. ಇದು ಬಹು ಭೋಗ ಸಾಧನಗಳನ್ನು ಅಪೇಕ್ಷಿಸತಕ್ಕದ್ದು. ಬ್ರಹ್ಮಹತ್ಯಾದಿ ಮಹಾ ಪಾಪಗಳಿಗೆ ಕಾರಣ ವಾಗತಕ್ಕದ್ದು. ಇದನ್ನು ಮುಖ್ಯ ಶತ್ರುವೆಂದು ತಿಳಿ. ........ ಆದುದರಿಂದ ಎಲೈ ಭರತಶ್ರೇಷ್ಠನೇ ! ನೀನು ಮೊದಲು ಇಂದ್ರಿಯಗಳನ್ನು ವಿಷಯಗಳಿಗೆ ಹೋಗ ದಂತೆ ನಿಗ್ರಹಿಸಿ ಜ್ಞಾನವಿಜ್ಞಾನಗಳಿಗೆ ನಾಶಕವಾದ ಈ ಪಾಪಿಯನ್ನು ಸಂಹರಿಸು.

ಅರಿಷಡ್ವರ್ಗಗಳಲ್ಲೆಲ್ಲಾ ಕಾಮವು ಪ್ರಧಾನವು. ಕ್ರೋಧಾದಿಗಳೆಲ್ಲಾ ಕಾಮ ಮೂಲಕವಾಗಿ ಉತ್ಪನ್ನವಾದುವುಗಳು; ಆದುದರಿಂದ ಬಂಧಕವಾದ ವಿಷಯೇಚ್ಛಾ ರೂಪವಾದ ಕಾಮವನ್ನು ಪರಿತ್ಯಾಗ ಮಾಡಿದರೆ, ಸಂಪೂರ್ಣ ಸಂನ್ಯಾಸವನ್ನು ಸಂಪಾದಿಸಿದಂತಾಯಿತು. ಇಂಥ ರಾಗದ್ವೇಷ ಪರಿತ್ಯಾಗವನ್ನು ನಾನಾ ಪ್ರಕಾರ ವಾಗಿ ಶ್ರೀ ಕೃಷ್ಣನು ಬೋಧಿಸಿರುತ್ತಾನೆ :—

**(2) ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪಂಥಿನೌ ॥**

—(3. 34.)

ಇಂದ್ರಿಯಗಳಿಗೆ ಅನುಕೂಲವೆಂದು ತೋರಿದ ವಿಷಯಗಳಲ್ಲಿ ಇಚ್ಛೆಯೂ ಪ್ರತಿಕೂಲವೆಂದು ತೋರಿದ ವಿಷಯಗಳಲ್ಲಿ ದ್ವೇಷವೂ ವ್ಯವಸ್ಥಿತವಾಗಿರುವುದು. ಜಿತೇಂದ್ರಿಯನಾದ ಪ್ರಾಜ್ಞನು ಅವುಗಳ ( ರಾಗದ್ವೇಷಗಳ ) ಅಧೀನನಾಗಬಾರದು. ಅವುಗಳೇ ಶ್ರೇಯೋಽರ್ಥಿಗೆ ಮುಖ್ಯ ಶತ್ರುಗಳು. ಶ್ರೀ ಕೃಷ್ಣನು ಹೇಳುತ್ತಾನೆ :—

**(3) ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।**
**ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥**

**ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸಸುಖೀ ನರಃ ॥**

—(5. 22–23.)

ಎಲೈ ಕೌಂತೇಯನೇ ! ವಿಷಯ ಸಂಸರ್ಗಜನ್ಯವಾದ ಭೋಗಗಳೆಲ್ಲಾ ನಿಯಮೇನ ದುಃಖಕ್ಕೇ ಕಾರಣವಾಗುತ್ತವೆ. ಯಾತಕ್ಕೆಂದರೆ ಅವು ಉತ್ಪತ್ತಿ ವಿನಾಶವುಳ್ಳವುಗಳಾಗಿರುತ್ತವೆ. ಆದುದರಿಂದ ಪ್ರಾಜ್ಞನು ಅವುಗಳಲ್ಲಿ ಆಸಕ್ತನಾಗು ವುದಿಲ್ಲ. ಯಾವಾತನು ಈ ಮಾನುಷ ದೇಹದಲ್ಲಿಯೇ ದೇಹವಿಯೋಗರೂಪವಾದ ಮರಣ ಪ್ರಾಪ್ತಿಗೆ ಪೂರ್ವದಲ್ಲಿಯೇ ಕಾಮಕ್ರೋಧಗಳಿಂದ ಉಂಟಾಗುವ ವೇಗವನ್ನು ಎಂದರೆ ಮನೋವಿಕಾರಗಳನ್ನು ಸಹಿಸುವುದಕ್ಕೆ ಯತ್ನಿಸುವನೋ ಆತನೇ ಜ್ಞಾನೋ ಪಾಯವನ್ನುಳ್ಳ ಅಧಿಕಾರಿಯು. ಆತನೇ ಸುಖವುಳ್ಳವನಾಗುತ್ತಾನೆ.

3. ಶ್ರೀಕೃಷ್ಣನು ದ್ವಿತೀಯಾಧ್ಯಾಯದಲ್ಲಿ ವಿಷಯಕಾಮವು ಬುದ್ಧಿಭ್ರಂಶವನ್ನು ಉತ್ಪತ್ತಿ ಮಾಡುವ ಪ್ರಕಾರವನ್ನೂ ರಾಗದ್ವೇಷರಾಹಿತ್ಯರೂಪವಾದ ಸಂನ್ಯಾಸದ ಫಲವನ್ನೂ ವಿಶದವಾಗಿ ವರ್ಣಿಸುತ್ತಾನೆ :—

(1) **ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।**
**ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ॥**
**ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ॥**
**ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥**
—(2. 62–64.)

ಶಬ್ದಾದಿ ವಿಷಯಗಳನ್ನು ಸದಾ ಚಿಂತಿಸುವವನಿಗೆ ಅವುಗಳಲ್ಲಿ ಆಸಕ್ತಿಯು ಹುಟ್ಟುತ್ತದೆ. ಅದರಿಂದ ವಿಷಯೇಚ್ಛೆಯು ಅಧಿಕವಾಗುತ್ತದೆ. ಕಾಮವು ಯಾರಿಂದಲಾದರೂ ಪ್ರತಿರುದ್ಧವಾದರೆ ಆತನ ವಿಷಯದಲ್ಲಿ ಕ್ರೋಧವು ಉತ್ಪನ್ನವಾಗುತ್ತದೆ. ಕ್ರೋಧದಿಂದ ಅಕಾರ್ಯೇಚ್ಛೆಯು ಅಥವಾ ಅಧರ್ಮದಲ್ಲಿ ಧರ್ಮಬುದ್ಧಿಯು ಹುಟ್ಟುತ್ತದೆ, ಇಂತಹ ಸಮ್ಮೋಹದಿಂದ ವಿಧಿನಿಷೇಧ ಶಾಸ್ತ್ರಜ್ಞಾನವು ನಾಶವಾಗುತ್ತದೆ. ಅದರಿಂದ ಬುದ್ಧಿನಾಶವು ಎಂದರೆ ಪರದ್ರವ್ಯ ಹರಣಾದಿಗಳು ಅಧರ್ಮಕರವೆಂದು ನಿರ್ಣೀತವಾದ ದೋಷಬುದ್ಧಿಯು ಸರ್ವಾತ್ಮನಾನಾಶವನ್ನು ಹೊಂದುತ್ತದೆ. ಇಂಥ ಬುದ್ಧಿನಾಶದಿಂದ ಪುರುಷನು ನರಕಾದ್ಯನರ್ಥಗಳನ್ನು ಹೊಂದುತ್ತಾನೆ. ರಾಗದ್ವೇಷಗಳಿಂದ ರಹಿತವಾದ ಇಂದ್ರಿಯಗಳಿಂದ ಸ್ವದೇಹ ಧಾರಣೋಪಯೋಗಿಯಾದ ವಿಷಯಗಳನ್ನು ಭೋಗಿಸುತ್ತಾ ಇರುವವನು ಸ್ವಾಧೀನವಾದ ಮನಸ್ಸುಳ್ಳವನಾಗಿ ಪ್ರಸಾದವನ್ನು ಹೊಂದುತ್ತಾನೆ ಎಂದರೆ ಸ್ವಪ್ರಯತ್ನವಿಲ್ಲದೆ ಮನಸ್ಸು ವಿಷಯಗಳಲ್ಲಿ ಪ್ರವರ್ತಿಸದೇ ಇರೋಣವೆಂಬ ಪೂರ್ಣ ಸಂನ್ಯಾಸವನ್ನು ಹೊಂದುತ್ತಾನೆ.

4 ಇಂಥ ಸಂನ್ಯಾಸವು ದೈವೀ ಸಂಪತ್ತುಳ್ಳ ಮುಕ್ತಿಯೋಗ್ಯರಲ್ಲಿ ಸ್ವಾಭಾವಿಕವಾಗಿರುವುದೆಂದೂ, ಆಸುರೀ ಸಂಪತ್ತಿನಿಂದ ಒಡಗೂಡಿದ ದುರ್ಜನರಲ್ಲಿ ಇದಕ್ಕೆ ವಿರುದ್ಧವಾದ ಉಲ್ಬಣವಾದ ವಿಧಿವಿರುದ್ಧ ಕಾಮವು ಪ್ರವೃದ್ಧವಾಗಿರುವುದೆಂದೂ ಶ್ರೀ ಕೃಷ್ಣನು ಹೇಳುತ್ತಾನೆ :—

(1) **ಅಭಯಂ ಸತ್ತ್ವಸಂಶುದ್ಧಿಃ ಜ್ಞಾನಯೋಗವ್ಯವಸ್ಥಿತಿಃ ।**

* * * * *

**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಶ್ಶಾಂತಿರಪೈಶುನಂ ।**
**............ಅಲೋಲುತ್ವಂ ಮಾರ್ದವಂ ಹ್ರೀರಚಾಪಲಂ ॥**

**ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ||**

—(16–2, 3.)

ಎಲೈ ಭರತಶ್ರೇಷ್ಠನೇ ! ಸತ್ವಸಂಶುದ್ಧಿಃ = ಎಂದರೆ ನಿರ್ಮಲವಾದ ಅಂತಃ ಕರಣವು ( ಸಂನ್ಯಾಸವು ) ........ ಅಕ್ರೋಧಃ = ಕ್ರೋಧ ಪರಿತ್ಯಾಗವು; ಅಲೋಲುತ್ವಂ = ವಿಷಯಗಳಲ್ಲಿ ಅನುರಾಗ ಪರಿತ್ಯಾಗವು; ಇತ್ಯಾದಿ ಗುಣಗಳು ದೈವೀ ಸಂಪತ್ತನ್ನು ಹೊಂದಿದವರಲ್ಲಿ ( ಮುಕ್ತಿಯೋಗ್ಯರಲ್ಲಿ ) ಇರುತ್ತವೆ.

(2) **ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು |**
**ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ |**

* * * * *

**ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ |**
**ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ |**
**ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್ ||**

* * * * *

**ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇऽಶುಚೌ ||**

—(16. 6 ) (16. 10–16.)

"ಎಲೈ ಪಾರ್ಥನೇ ! ಮುಕ್ತಿಯೋಗ್ಯ ಸ್ವಭಾವ ಧರ್ಮಗಳು ವಿಸ್ತಾರವಾಗಿ ವರ್ಣಿಸಲ್ಪಟ್ಟವು. ಇನ್ನು ಅಸುರಸಂಬಂಧಿ ಸ್ವಭಾವವನ್ನು ಕೇಳು. ಅಸುರರು ವಿಷಯಗಳನ್ನು ಕೊಟ್ಟು ತೃಪ್ತಿ ಹೊಂದಿಸುವುದಕ್ಕೆ ಅಶಕ್ಯವಾದ ಕಾಮವನ್ನು ಆಶ್ರಯಿಸಿ ದಂಭಮಾನಮದಾನ್ವಿತರಾಗಿರುತ್ತಾರೆ.

"ವಿಷಯಭೋಗದಲ್ಲಿಯೇ ಅತ್ಯಂತ ಆಸಕ್ತರಾಗಿ, ಐಹಿಕ ಫಲಕ್ಕಿಂತ ಬೇರೆ ಆಮುಷ್ಮಿಕ ಸುಖಪ್ರದಲೋಕವೇ ಇಲ್ಲವೆಂದು ನಿಶ್ಚಯಿಸಿ, ಅನಂತರ ಆಶಾಪಾಶದಿಂದ ಬದ್ಧರಾಗಿ, ಕಾಮಕ್ರೋಧ ಪರಾಯಣರಾಗಿ, ತಮಗೆ ಇಷ್ಟವಾದ ವಿಷಯಭೋಗಗಳ ಅನುಭವಾರ್ಥವಾಗಿ ಅಧರ್ಮದಿಂದ ದ್ರವ್ಯ ಸಂಗ್ರಹವನ್ನು ಇಚ್ಛಿಸುತ್ತಾರೆ. ಮತ್ತು ವಿಷಯಭೋಗಗಳಲ್ಲಿ ಅತ್ಯಂತರತರಾಗಿ ಅತಿ ಕಶ್ಮಲವಾದ ನರಕದಲ್ಲಿ ಬೀಳುತ್ತಾರೆ."

ಇದು ರಾಗದ್ವೇಷ ವರ್ಜನರೂಪವಾದ ಸಂನ್ಯಾಸರಹಿತರ ಚರಿತ್ರೆಯು.

ಸಂನ್ಯಾಸವನ್ನು ಸಂಪಾದಿಸಿದವರು ಜ್ಞಾನಿಗಳಾಗಿ ಮಹಾ ಫಲವನ್ನು ಹೊಂದಿರುತ್ತಾರೆಂದು ಶ್ರೀ ಕೃಷ್ಣನು ಹೇಳುತ್ತಾನೆ:—

(3) **ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ |**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ||**

—(4. 10.)

ರಾಗ, ಭಯ, ಕ್ರೋಧಗಳಿಂದ ರಹಿತರಾದವರು ( ಸಂನ್ಯಾಸವನ್ನು ಹೊಂದಿದವರು ) ನನ್ನನ್ನು ಧ್ಯಾನ ಮಾಡಿ ನನ್ನನ್ನೇ ಸರ್ವ ವಿಧದಲ್ಲಿಯೂ ಆಶ್ರಯಿಸಿ ಅನೇಕ ಸಜ್ಜನರು ಜ್ಞಾನ ತಪಸ್ಸುಗಳಿಂದ ಪವಿತ್ರರಾಗಿ ಮುಕ್ತರಾಗಿರುತ್ತಾರೆ.

ಇದರಿಂದ ಸಂನ್ಯಾಸವು ಧ್ಯಾನಕ್ಕೆ ಕಾರಣವಾಗಿ ಕ್ರಮವಾಗಿ ಜ್ಞಾನಾದಿಗಳು ಉತ್ಪನ್ನವಾದ ನಂತರ ಪರಂಪರಯಾ ಮುಕ್ತಿಗೆ ಕಾರಣವಾಗುವುದೆಂದು ಸಿದ್ಧವಾಗುವುದು.

5. ರಾಗದ್ವೇಷವರ್ಜನರೂಪವಾದ ಸಂನ್ಯಾಸವು ಕರ್ಮಯೋಗದಲ್ಲಿ ಪ್ರವೃತ್ತನಾದವನಲ್ಲಿ ಕರ್ಮಫಲಾಪೇಕ್ಷಾರಾಹಿತ್ಯವನ್ನು ಉಂಟು ಮಾಡುವುದರ ಮೂಲಕ ತನ್ನ ಪ್ರಭಾವವನ್ನು ತೋರಿಸುವುದು. ಆದುದರಿಂದ ಕಾರ್ಯಕಾರಣಗಳಿಗೆ ಅಭೇದ ವ್ಯಪದೇಶವನ್ನು ನಿಮಿತ್ತ ಮಾಡಿ ಕೆಲವು ಸ್ಥಳಗಳಲ್ಲಿ ಕರ್ಮಫಲೇಚ್ಛಾರಾಹಿತ್ಯವೇ ಸಂನ್ಯಾಸವೆಂದು ಗೀತೆಯಲ್ಲಿ ಶ್ರೀಕೃಷ್ಣನಿಂದಲೇ ವ್ಯವಹರಿಸಲ್ಪಟ್ಟಿರುವುದು. ಕ್ವಚಿತ್ ಇದೇ ರೀತಿಯಾಗಿ ಸಂಕಲ್ಪ ಪರಿತ್ಯಾಗವು ಎಂದರೆ ಲೌಕಿಕ ವಿಷಯಭೋಗ ಪ್ರಾಪ್ತಿರೂಪವಾದ ಫಲವನ್ನು ಇಚ್ಛಿಸದೆ ಇರೋಣವೆಂಬ ಮನೋಧರ್ಮವೇ ಸಂನ್ಯಾಸವೆಂದು ನಿರೂಪಿಸಲ್ಪಟ್ಟಿರುವುದು :—

**(1) ಅನಾಶ್ರಿತಃ ಕರ್ಮ ಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥**
—(6. 1.)

ಕರ್ಮವನ್ನು ಅಪೇಕ್ಷಿಸದೆ ಕರ್ತವ್ಯ ಕರ್ಮವನ್ನು ಯಾವಾತನು ಮಾಡುವನೋ ಆತನೇ ಸಂನ್ಯಾಸಿಯು, ಮತ್ತು ಆತನೇ ಯೋಗಿಯು. ಅಗ್ನಿ ಪರಿತ್ಯಾಗ ಮಾಡಿದವನು ಸಂನ್ಯಾಸಿಯಲ್ಲ; ಸಕಲ ಕರ್ಮವನ್ನೂ ಪರಿತ್ಯಾಗ ಮಾಡಿದವನು ಯೋಗಿಯಲ್ಲ.

ಸಂಕಲ್ಪ ಸಂನ್ಯಾಸವೂ ಸಂನ್ಯಾಸ ಶಬ್ದಾರ್ಥವೆಂದು ಈ ಕೆಳಗಿನ ಶ್ಲೋಕಾರ್ಥ ಪರ್ಯಾಲೋಚನೆಯಿಂದ ಸಿದ್ಧವಾಗುವುದು :—

**(2) ನಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ।**
—(6. 2 )

ಕರ್ಮಾನುಷ್ಠಾನಗಳಲ್ಲಿ ಸಂಕಲ್ಪಗಳನ್ನು ಪರಿತ್ಯಾಗ ಮಾಡದವನು ಯೋಗಿ-ಯೂ ಆಗಲಾರನು.

ಈ ಶ್ಲೋಕದಲ್ಲಿ "ಸಂನ್ಯಾಸ" ವನ್ನು ಹೊಂದುವವನು ಪೂರ್ವೋಕ್ತ ಸಮಗ್ರ ಕರ್ಮಯೋಗವುಳ್ಳವನೂ ಆಗಲಾರನು ಎಂದು ಶ್ರೀ ಕೃಷ್ಣನು ಹೇಳಬೇಕಾಗಿರುವುದು. ಇದನ್ನು ಉಪದೇಶ ಮಾಡುವಾಗ ಸಂನ್ಯಾಸ ಶಬ್ದಕ್ಕೆ "ಸಂನ್ಯಸ್ತಸಂಕಲ್ಪ" ನೆಂದು ವಿವರಣ ರೂಪವಾಗಿ ವಾಕ್ಯವನ್ನು ಪ್ರಯೋಗ ಮಾಡಿರುವನು.

ಸಕಲ ಸಂಕಲ್ಪಗಳನ್ನೂ ಪರಿತ್ಯಾಗ ಮಾಡಿದವನು ಸಂನ್ಯಾಸವುಳ್ಳವನು ಎಂದು ನಿಶ್ಚಿತಾರ್ಥವು. ಎಂದರೆ ಮೋಕ್ಷಾರ್ಥಿಯು ಕರ್ಮಾನುಷ್ಠಾನಾರಂಭದಲ್ಲಿ ತಾನು ಮಾಡುವ ಕರ್ಮವನ್ನು "ಪುತ್ರಪೌತ್ರ ಧನಧಾನ್ಯಾದ್ಯಭಿವೃದ್ಧ್ಯರ್ಥಂ" "ದಾರ ಪುತ್ರ ಮಿತ್ರ ಸೌಭಾಗ್ಯಸಿದ್ಧ್ಯರ್ಥಂ," ಇತ್ಯಾದಿ ಬಹು ಪ್ರಕಾರವಾದ ಲೌಕಿಕ ಉದ್ದೇಶ ಮಾಡಿ ಆಚರಿಸಬಾರದು ಎಂದು ಅರ್ಥವು. ನಿಷ್ಕಾಮನಾಗಿ ಎಂದರೆ ವಿಷಯ ಕಾಮನಾರಹಿತನಾಗಿ ಭಗವಂತನ ಪ್ರಸಾದವನ್ನೂ ಜ್ಞಾನ ಭಕ್ತಿ ವೈರಾಗ್ಯ ಗಳನ್ನೂ ಅಪೇಕ್ಷಿಸಿ ಕರ್ಮವನ್ನು ಆಚರಿಸಬೇಕು.

ಮತ್ತೊಂದು ವಾಕ್ಯದಿಂದಲೂ ಇಂಥ ಮೋಕ್ಷವಿರೋಧಿ ಸಂಕಲ್ಪ ಪರಿತ್ಯಾಗವು ಸಂನ್ಯಾಸವೆಂದು ನಿಶ್ಚಿತವಾಗುವುದು :—

(3) **ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।**
**ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ॥**

—(6. 4.)

ಯಾವಾಗ ಮೋಕ್ಷಾಧಿಕಾರಿಯು ಇಂದ್ರಿಯ ವಿಷಯಗಳಲ್ಲಿ ಪ್ರಯತ್ನವಿಲ್ಲದೆ ಸ್ನೇಹರಹಿತನಾಗುತ್ತಾನೆಯೋ ಮತ್ತು ಕರ್ಮಾನುಷ್ಠಾನಗಳಲ್ಲಿ ನಾನೇ ಸ್ವತಂತ್ರ ಕರ್ತನು ಎಂಬ ಅಭಿಮಾನರಹಿತನಾಗುತ್ತಾನೆಯೋ ಅಂತಹ ಸರ್ವ ಸಂಕಲ್ಪ ಗಳನ್ನೂ (ದುರ್ವಿಷಯೇಚ್ಛೆಯನ್ನು) ಪರಿತ್ಯಾಗ ಮಾಡಿದವನು ಯೋಗಾರೂಢ ನೆನ್ನಿಸುವನು.

6. ಸಕಲ ಲೌಕಿಕ ಸಂಕಲ್ಪ ಪರಿತ್ಯಾಗವು ಧ್ಯಾನಯೋಗಿಗೆ ಆವಶ್ಯಕ ವೆಂಬುದು ಶ್ರೀಕೃಷ್ಣನ ವಿಧಾನದಿಂದಲೇ ತಿಳಿದು ಬರುವುದು :—

(1) **ಸಂಕಲ್ಪಪ್ರಭವಾನ್ ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।**
**ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥**
**ಶನೈಃ ಶನೈರುಪರಮೇತ್............ ।**

—(6. 24–25.)

ಈ ಫಲಪ್ರಾಪ್ತಿಗೋಸ್ಕರ ಈ ಕರ್ಮವನ್ನು ಮಾಡುತ್ತೇನೆ ಎಂಬ ಸಂಕಲ್ಪಪೂರ್ವಕ ವಾದ ಅನುಷ್ಠಾನದಿಂದ ಉತ್ಪತ್ತಿಯುಳ್ಳ ಸಕಲ ವಿಷಯಭೋಗಗಳನ್ನೂ ಪರಿ ತ್ಯಾಗ ಮಾಡಿ, ಮನಸ್ಸಿನಿಂದ ಇಂದ್ರಿಯಗಳನ್ನು ನಿಗ್ರಹಿಸಿ, ಬುದ್ಧಿಯಿಂದ ಮನ ಸ್ಸನ್ನು ಕ್ರಮಕ್ರಮವಾಗಿ ವಿಷಯಗಳಿಗೆ ಹೋಗದಂತೆ ನಿಯಮಿಸಬೇಕು.

ಇದರಿಂದ ಸಂಕಲ್ಪವು ವಿಷಯಭೋಗ ಪ್ರಾಪ್ತಿಗೆ ಕಾರಣವಾಗಿ ಜ್ಞಾನ ಪ್ರಾಪ್ತಿಗೆ ವಿಳಂಬವನ್ನು ಉಂಟು ಮಾಡಿ ಮೋಕ್ಷಮಾರ್ಗಕ್ಕೆ ವಿರೋಧಿಯಾಗುವು ದೆಂದು ನಿಶ್ಚಿತವಾಗುವುದು. ಸ್ಪಷ್ಟ ವಚನವೂ ಇರುವುದು :—

(2) **ನ ಹ್ಯ ಸಂನ್ಯಸ್ತ ಸಂಕಲ್ಪೋ ಯೋಗೀ ಭವತಿ ಕಶ್ಚನ ।**
—(6. 2.)

ಸಂಕಲ್ಪ ಪರಿತ್ಯಾಗ ಮಾಡದವನು ಧ್ಯಾನ ಮಾಡಲಾರನು.

7. ವಿಷಯೇಚ್ಛೆಯಿಂದ ಜನಿತವಾದ ಸಂಕಲ್ಪಗಳನ್ನು ಬಿಟ್ಟು ನಿಷ್ಕಾಮ ಕರ್ಮಾನುಷ್ಠಾನ ಮಾಡುವವರು ಉತ್ತಮ ಜ್ಞಾನಿಗಳಾಗುವರೆಂದು ಶ್ರೀ ಕೃಷ್ಣನು ಶ್ಲಾಘಿಸುತ್ತಾನೆ :—

(1) **ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ ।**
**ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥**
—(4. 19.)

ಯಾವಾತನಿಗೆ ಸಕಲ ಕರ್ಮೋಪಕ್ರಮದಲ್ಲಿಯೂ ಈ ಫಲಾರ್ಥವಾಗಿ ಈ ಕರ್ಮವನ್ನು ಮಾಡುತ್ತೇನೆ ಎಂಬ ಇಚ್ಛೆಯೂ ಅದರಿಂದ ಹುಟ್ಟುವ ಸಂಕಲ್ಪಗಳೂ ಇರುವುದಿಲ್ಲವೋ ಅಂತಹವನೇ ( ಸಂನ್ಯಾಸವುಳ್ಳವನೇ ) ಪರಮಾತ್ಮನೇ ಸ್ವತಂತ್ರ ಕರ್ತನೆಂದು ತಿಳಿದು ತತ್ವಜ್ಞಾನಿಯಾಗುವನೆಂದು ಬುಧರು ಹೇಳಿರುತ್ತಾರೆ.

8. ಮೋಕ್ಷಾರ್ಥಿಯಾದವನು ಸ್ವಕರ್ಮಾನುಷ್ಠಾನವನ್ನು ಮಾಡುವಾಗಲೂ ಸಕಲ ಲೌಕಿಕ ಫಲಾಪೇಕ್ಷಾರಹಿತನಾಗಿರಬೇಕೆಂಬುದು ಸಾಕ್ಷಾಚ್ಛ್ರೀಕೃಷ್ಣನ ವಿಧಾನದಿಂದಲೂ, ಮತ್ತು ಕೆಲವು ವಾಕ್ಯಗಳ ತಾತ್ಪರ್ಯ ಪರ್ಯಾಲೋಚನೆ ಯಿಂದಲೂ ವಿಶದವಾಗುವುದು :—

(1) **ಮಾ ಕರ್ಮಫಲಹೇತುರ್ಭೂಃ ............ ।** —(2, 47.)

ಎಲೈ ಅರ್ಜುನನೇ ! ನೀನು ಕರ್ಮ ಫಲವನ್ನು ಅಪೇಕ್ಷಿಸಿ ಕರ್ಮಗಳನ್ನು ಆಚರಿಸಬೇಡ.

(2) **........ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
—(2. 48.)

ಎಲೈ ಧನಂಜಯನೇ ! ನೀನು ಕರ್ಮಫಲ ಸ್ನೇಹರಹಿತನಾಗಿ ವಿಧ್ಯುಕ್ತ ಕರ್ಮವನ್ನು ಅನುಷ್ಠಾನ ಮಾಡು.

(3) **ತಸ್ಮಾದಸಕ್ತಸ್ಸತತಂ ಕಾರ್ಯಂ ಕರ್ಮ ಸಮಾಚರ ।**
—(3. 19.)

....ನೀನು ಫಲಸ್ನೇಹರಹಿತನಾಗಿ ಕರ್ತವ್ಯ ಕರ್ಮವನ್ನು ನಿರಂತರ ಇದು ಭಗವತ್ಪೂಜೆಯು ಎಂಬ ಬುದ್ಧಿಯಿಂದ ಆಚರಿಸುವವನಾಗು.

(4) **ನಿರಾಶೀಃ........ಯುಧ್ಯಸ್ವ........ ।** —(3. 30.)

ನೀನು ಫಲಾಶಾರಹಿತನಾಗಿ ಯುದ್ಧವನ್ನು ಮಾಡು.

**(5) ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥**
—(3. 43.)

ಎಲೈ ಮಹಾಬಾಹುವೇ ! ನೀನು ವಿಷಯೇಚ್ಛೆಯೆಂಬ ದುರ್ಜಯನಾದ ಶತ್ರುವನ್ನು ಜಯಿಸುವವನಾಗು.

**(6) ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
—(2. 45.)

ಎಲೈ ಅರ್ಜುನನೇ ! ವೇದಗಳು ಆಪಾತತಃ ಸ್ವರ್ಗಾದಿ ಫಲಗಳನ್ನು ಕೊಡುವ ಕಾಮ್ಯಕರ್ಮವನ್ನು ಬೋಧಿಸುವುವು. ನೀನಾದರೋ (ಅದು ವೇದ ತಾತ್ಪರ್ಯ ವಲ್ಲವಾದುದರಿಂದ) ಕಾಮ್ಯಕರ್ಮಜನ್ಯವಾದ ಸ್ವರ್ಗಾದಿ ಫಲಗಳಲ್ಲಿ ಅಪೇಕ್ಷಾ ರಹಿತನಾಗು.

9. ಇದು ಕರ್ಮಫಲಾಪೇಕ್ಷಿಗಳ ನಿಂದೆಯು :—

**(1) ಕೃಪಣಾಃ ಫಲಹೇತವಃ ।** —(2. 49.)

ಫಲೋದ್ದೇಶದಿಂದ ಕರ್ಮಾನುಷ್ಠಾನವನ್ನು ಮಾಡುವವರು ದೀನರು.

**(2) ನಾಸ್ತಿ ಬುದ್ಧಿರಯುಕ್ತಸ್ಯ ।** —(2. 66.)

ವಿಷಯ ಕಾಮನಾರಾಹಿತ್ಯರೂಪವಾದ ಚಿತ್ತನಿರೋಧವು ಇಲ್ಲದವನಿಗೆ ಧ್ಯಾನವು ಪ್ರಾಪ್ತವಾಗುವುದಿಲ್ಲವಾದುದರಿಂದ ಅಪರೋಕ್ಷ ಜ್ಞಾನವು ಉತ್ಪನ್ನವಾಗು ವುದಿಲ್ಲ.

**(3) ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ।**
—(5. 12.)

ಎಲೈ ಪಾರ್ಥನೇ ! ಯೋಗಹೀನನಾದ, ಫಲೇಚ್ಛಾಪೂರ್ವಕವಾದ ಕರ್ಮಾ ಚರಣೆಯಿಂದ ಕ್ಷುದ್ರವಾದ ಸ್ವರ್ಗಾದಿ ಫಲಗಳಲ್ಲಿ ಆಸಕ್ತನಾದವನು ಅತ್ಯಂತವಾಗಿ ಸಂಸಾರಬಂಧವನ್ನು ಅನುಭವಿಸುತ್ತಾನೆ.

10. ಕರ್ಮ ಫಲಾಪೇಕ್ಷಾರಾಹಿತ್ಯರೂಪವಾದ ಸಂನ್ಯಾಸವು ಮೋಕ್ಷೋಪ ಯೋಗಿಯಾದ ಮಹಾ ಗುಣವು. ಅದು ಸಾಕ್ಷಾದ್ಧ್ಯಾನಕ್ಕೆ ಕಾರಣವಾಗಿ ಅಪ ರೋಕ್ಷ ಜ್ಞಾನವು ಪ್ರಾಪ್ತವಾದ ನಂತರ ಮತ್ತಷ್ಟು ಪ್ರಜ್ವಲಿತವಾಗಿ ಶ್ರೀ ಪರಮಾತ್ಮ ನಲ್ಲಿ ಭಕ್ತಿವೃದ್ಧಿಗೆ ಕಾರಣವಾಗಿ ಪರಮಾತ್ಮನ ಅತ್ಯರ್ಥ ಪ್ರಸಾದ ಪ್ರಾಪ್ತಿಗೆ ಹೇತು ವಾಗುವುದು. ಶ್ರೀ ಕೃಷ್ಣನು ಹೇಳುತ್ತಾನೆ :—

**(1) ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾಽತ್ಮಾನಂ ನಿಯಮ್ಯ ಚ ॥**
**ಶಬ್ದಾದೀನ್ ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ।**

**ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥**
**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಂ ।**
**ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥**

—(18. 51–53.)

ಈ ಶ್ಲೋಕಗಳು ಪೂರ್ವದಲ್ಲೇ ವ್ಯಾಖ್ಯಾತವಾಗಿರುವುವು. ಇದರಿಂದ ವೈರಾಗ್ಯವು ( ಸಂನ್ಯಾಸವು ) ಜ್ಞಾನಾರ್ಥಿಯಾದ ಮುಮುಕ್ಷುವಿಗೆ ಪ್ರಥಮ ಸೋಪಾನವೆಂದು ಸಿದ್ಧವಾಗುವುದು. ಸಂನ್ಯಾಸವನ್ನು ಹೊಂದಿದವನು ಧ್ಯಾನ ಯೋಗದಲ್ಲಿ ನಿರತನಾಗಿ ಅಹಂತಾ ಮಮತೆಗಳನ್ನು ಪರಿತ್ಯಾಗ ಮಾಡಿ ಬ್ರಹ್ಮ ಭೂಯಾಯಕಲ್ಪತೇ = ಪರಬ್ರಹ್ಮನಲ್ಲಿಯೇ ಇಡಲ್ಪಟ್ಟ ಚಿತ್ತವುಳ್ಳವನಾಗುತ್ತಾನೆ ಎಂದು ಸಿದ್ಧವಾಗುವುದು. ಅನಂತರ ಶ್ರವಣಾದಿ ಜನಿತ ಜ್ಞಾನದಿಂದ ಸ್ತುತನಾದ ಪರಮಾತ್ಮನ ಸಾಕ್ಷಾತ್ಕಾರವೂ ಅದರಿಂದ ಪ್ರವೃದ್ಧವಾದ ದೃಢ ಭಕ್ತಿಯೂ ಬರುವು ದೆಂದು ಇದೇ ಅಧ್ಯಾಯದ (54-55.) ಶ್ಲೋಕಗಳಲ್ಲಿ ನಿರೂಪಿತವಾಗಿರುವುದು. ಕೆಲವು ಕಡೆಗಳಲ್ಲಿ ಸಂನ್ಯಾಸವು ಮೋಕ್ಷ ಕಾರಣವೆಂದು ಹೇಳಿದ್ದರೂ ಈ ಶ್ಲೋಕಾರ್ಥ ವಿಮರ್ಶಾನುಗುಣವಾಗಿ ಧ್ಯಾನಾದಿದ್ವಾರಾ ಸಾಂಖ್ಯಾದಿ ಇತರ ಅಂಶಗಳಿಂದ ಸಹ ಕೃತವಾದ ಸಂನ್ಯಾಸವೇ ಪರಂಪರಯಾ ಮೋಕ್ಷ ಕಾರಣವಾಗುವುದೆಂದು ನಿಶ್ಚಯಿಸ ಬೇಕು. ಫಲಕಥನಪೂರ್ವಕವಾಗಿ ಶ್ರೀ ಕೃಷ್ಣನು "ಸಂನ್ಯಾಸ" ವನ್ನು ಪ್ರಶಂಸಿ ಸಿರುವ ಇತರ ಶ್ಲೋಕಗಳನ್ನು ಉದಾಹರಿಸುವೆವು.

**(2) ಅಸಕ್ತ ಬುದ್ಧಿಸ್ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥**

—(18. 49 )

ಶಬ್ದಾದಿ ಸರ್ವ ವಿಷಯಗಳಲ್ಲಿಯೂ ಆಸಕ್ತಿರಹಿತವಾದ ಬುದ್ಧಿಯುಳ್ಳವನಾಗಿ, ಜಿತಮನಸ್ಕನಾಗಿ, ವಿಷಯಾಭಿಲಾಷೆಗಳನ್ನು ಪರಿತ್ಯಾಗ ಮಾಡಿದವನು ಇಂಥ ಸಂನ್ಯಾಸದಿಂದ ( ಧ್ಯಾನದ್ವಾರಾ ) ಉತ್ಕೃಷ್ಟವಾದ ಮೋಕ್ಷ ರೂಪವಾದ ಮಹಾ ಪುರುಷಾರ್ಥವನ್ನು ಹೊಂದುತ್ತಾನೆ.

ದ್ವಿತೀಯಾಧ್ಯಾಯಗತವಾದ ಶ್ರೀ ಕೃಷ್ಣನ ವಾಕ್ಯವು ಸಾಂಖ್ಯ ಸಹಕೃತವಾದ ಸಂನ್ಯಾಸವೇ ಮೋಕ್ಷ ಸಾಧನವೆಂದು ನಿರೂಪಿಸಿ ಫಲವನ್ನು ಹೇಳುತ್ತದೆ :—

**(3) ಕರ್ಮಜಂ ಬುದ್ಧಿಯುಕ್ತಾ ಹಿ ಫಲಂತ್ಯಕ್ತ್ವಾ ಮನೀಷಿಣಃ ।**
**ಜನ್ಮಬಂಧವಿನಿರ್ಮುಕ್ತಾಃ ಪದಂಗಚ್ಛಂತ್ಯನಾಮಯಂ ॥**

—(2. 51.)

ಶಾಸ್ತ್ರಾಭ್ಯಾಸ ಜನಿತ ತತ್ವಜ್ಞಾನವುಳ್ಳ ಪಂಡಿತರು, ಕರ್ಮಜಂ ಫಲಂತ್ಯಕ್ತ್ವಾ = ಕರ್ಮದಿಂದ ಪ್ರಾಪ್ತವಾಗುವ ಲೌಕಿಕ ಫಲಗಳನ್ನು ಅಪೇಕ್ಷಿಸದೆ, (ಜ್ಞಾನವನ್ನು ಹೊಂದಿ) ಜನನ ಮರಣ ರೂಪವಾದ ಬಂಧದಿಂದ ನಿರ್ಮುಕ್ತರಾಗಿ ನಿರ್ದುಃಖವಾದ ಮೋಕ್ಷ ಸ್ಥಾನವನ್ನು ಹೊಂದುತ್ತಾರೆ.

**(4) ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।**
**ಪ್ರಸನ್ನಚೇತಸೋಹ್ಯಾಶು ಬುದ್ಧಿಃ ಪರ್ಯವತಿಷ್ಠತಿ ॥**
—(2. 65.)

ಅಪ್ರಯತ್ನದಿಂದ ಮನಸ್ಸು ವಿಷಯವನ್ನು ಕುರಿತು ಹೋಗದಿರುವ ಸ್ಥಿತಿಯನ್ನು ಹೊಂದುವುದೆಂಬ ಮನಃ ಪ್ರಸಾದವನ್ನು ಹೊಂದಿದವನಿಗೆ ಶೀಘ್ರದಲ್ಲಿ ಬ್ರಹ್ಮಾಪರೋಕ್ಷ ಜ್ಞಾನವು ಪ್ರಾಪ್ತವಾಗುವುದರಿಂದ ಆತ್ಯಂತಿಕ ಸಕಲ ದುಃಖ ಹಾನಿಯು ( ಮೋಕ್ಷವು ) ಉಂಟಾಗುವುದು.

**(5) ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥**
—(2. 71.)

ಯಾವ ಪುರುಷನು ಸರ್ವ ಲೌಕಿಕ ವಿಷಯೇಚ್ಛೆಗಳಿಂದ ರಹಿತವಾಗಿ ಸರ್ವ ವಿಷಯ ಭೋಗಗಳನ್ನೂ ಪರಿತ್ಯಾಗ ಮಾಡಿ ಕೇವಲ ದೇಹಧಾರಣ ಮಾತ್ರಾರ್ಥವಾಗಿ ಆಹಾರವನ್ನು ಭಕ್ಷಿಸುತ್ತಾನೆಯೋ ಅಂಥವನು ( ತತ್ವಜ್ಞಾನದಿಂದ ಅಹಂತಾ ಮಮತೆಗಳನ್ನು ಬಿಟ್ಟವನಾಗಿ ) ಮುಕ್ತಿಯನ್ನು ಹೊಂದುತ್ತಾನೆ.

**(6) ಯತೇಂದ್ರಿಯ ಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।**
**ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತಏವಸಃ ॥**
—(5. 28.)

ಸರ್ವದಾ ಗೃಹೀತವಾದ ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿಯುಳ್ಳಂಥ ಮನನಶೀಲನಾದಂಥ, ಮೋಕ್ಷೇತರ ಪುರುಷಾರ್ಥಗಳಲ್ಲಿ ಇಚ್ಛಾರಹಿತನಾದ ವಿಷಯೇಚ್ಛೆಯು, ಭಯವು ಮತ್ತು ಕ್ರೋಧವು ಇವುಗಳಿಂದ ರಹಿತನಾದವನು ಮುಕ್ತ ಸದೃಶನು; ಎಂದರೆ ಸಂನ್ಯಾಸವನ್ನು ಹೊಂದಿದವನು ಸಾಂಖ್ಯವನ್ನು ಸಂಪಾದಿಸಿ ಮನನಶೀಲನಾಗಿ ಶೀಘ್ರದಲ್ಲಿ ಪರಬ್ರಹ್ಮನ ಸಾಕ್ಷಾತ್ಕಾರವನ್ನು ಹೊಂದುತ್ತಾನೆ. ಅನಂತರ ಮುಕ್ತನಾಗುತ್ತಾನೆ ಎಂದರ್ಥವು.

**(7) ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಂ ।**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಂ ॥**
—(5. 26.)

ಕಾಮ ಕ್ರೋಧದಿಂದ ರಹಿತರಾದ, ಜಿತಮನಸ್ಕರಾದ, ಧ್ಯಾನಾದಿ ಯತ್ನ ಶೀಲರಾದ, ಪರಮಾತ್ಮ ಸಾಕ್ಷಾತ್ಕಾರವನ್ನು ಹೊಂದಿದ ಜ್ಞಾನಿಗಳಿಗೆ ಪ್ರಾಕೃತ ಶರೀರರಹಿತನಾದ ಪರಬ್ರಹ್ಮನು ಸರ್ವ ಪ್ರಕಾರದಲ್ಲಿಯೂ ರಕ್ಷಕನಾಗಿ ಇರುತ್ತಾನೆ. ಕಾಮ ಕ್ರೋಧಾದಿಗಳಿಂದ ರಹಿತರಾಗಿ "**ಸಂನ್ಯಾಸ**" ವನ್ನು ಹೊಂದಿದವರು ಶ್ರವಣ ಮನನಾದಿ ಯತ್ನಗಳಿಂದ ಜ್ಞಾನವನ್ನು ಹೊಂದಿ ಪರಮಾತ್ಮನ ದರ್ಶನ ವನ್ನು ಹೊಂದುತ್ತಾರೆ. ಇಂಥ ಕೇವಲ ನಿಷ್ಕಾಮ ಭಕ್ತರನ್ನು ಪರಮಾತ್ಮನು ಸರ್ವ ಪ್ರಕಾರದಿಂದಲೂ ಸರ್ವ ದೇಶ ಕಾಲ ಅವಸ್ಥೆಗಳಲ್ಲಿಯೂ ರಕ್ಷಿಸುತ್ತಾನೆ ಮತ್ತು ನಿರಂತರ ಅವರ ಜ್ಞಾನಕ್ಕೆ ವಿಷಯನಾಗಿ ಇರುತ್ತಾನೆ ಎಂದು ಭಾವವು.

(8) **ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।** —(6. 7.)

ಜಿತವಾದ ಮನಸ್ಸುಳ್ಳವನಿಗೆ ಪ್ರಶಾಂತಿಯು ಬರುವುದು; ಎಂದರೆ ಆತನ ಮನಸ್ಸು ಸ್ವತ ಏವ ವಿಷಯಗಳಲ್ಲಿ ಪ್ರವರ್ತಿಸುವುದಿಲ್ಲ. ಇಂಥ ಪ್ರಶಾಂತಿಯುಳ್ಳವನ ಹೃದಯದಲ್ಲಿ ಪರಮಾತ್ಮನು ( ಜ್ಞಾನಗೋಚರನಾಗಿ ) ಸನ್ನಿಹಿತನಾಗುತ್ತಾನೆ.

(9) **ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।**
**ನಿಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥**
—(6. 18.)

ಯಾವಾಗ ಅಧಿಕಾರಿಯ ವಿಶೇಷಾಕಾರವಾಗಿ ವಿಷಯಗಳಿಂದ ಉಪಸಂಹೃತ ವಾದ ಮನಸ್ಸು, ಶ್ರವಣಾದಿಗಳಿಂದ ವಿದಿತನಾದ ಪರಮಾತ್ಮನಲ್ಲಿ ಸ್ಥಿರವಾಗಿ ನಿಲ್ಲು ತ್ತದೆಯೋ ಮತ್ತು ಸರ್ವ ಭೋಗ್ಯ ವಿಷಯಕ ಆಶೆಗಳಿಂದಲೂ ನಿವೃತ್ತವಾಗಿರು ವದೋ ಆಗ ಆತನು ಯೋಗಸಂಪನ್ನನು ಎಂದು ಕರೆಯಲ್ಪಡುವನು.

ಇದರಿಂದಲೂ ಕೂಡ ಸಂನ್ಯಾಸದಿಂದ ನಿಶ್ಚಲ ಮನಸ್ಸುಳ್ಳ ಯೋಗಿಯು "ಸಾಂಖ್ಯ" ಸಹಾಯದಿಂದ ಪರಮಾತ್ಮ ಧ್ಯಾನದಲ್ಲಿ ಮಗ್ನನಾಗುವನು. ಅನಂತರ ಯೋಗಪರಿಪಾಕದ ಫಲವನ್ನು ಹೊಂದುತ್ತಾನೆ ಎಂದು ಸಿದ್ಧವಾಗುವುದು.

(10) **ವಿಶಂತಿ ಯದ್ಯತಯೋ ವೀತರಾಗಾಃ ।** —(8. 11.)

ಸಕಲ ವಿಷಯಾಪೇಕ್ಷೆಗಳನ್ನು ಬಿಟ್ಟು ಯತ್ನಶೀಲರಾದ ಮುನಿಗಳು ಪರ ಮಾತ್ಮನನ್ನು ಪ್ರವೇಶಿಸುತ್ತಾರೆ.

(11) **ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥**
—(8–14.)

ಅನ್ಯ ವಿಷಯಗಳಿಂದ ಸಂಪೂರ್ಣವಾಗಿ ಹಿಂತಿರುಗಿಸಲ್ಪಟ್ಟ ಮನಸ್ಸುಳ್ಳವ

ನಾಗಿ ಯಾವಾತನು ಸಂತತ ನನ್ನನ್ನು ಸ್ಮರಿಸುತ್ತಾನೆಯೋ ಅಂತಹ ನಿತ್ಯಯುಕ್ತನಾದ ಯೋಗಿಗೆ ನಾನು ( ಶ್ರೀ ಕೃಷ್ಣನು ) ಸುಲಭನು.

ಈ ವಾಕ್ಯದಿಂದಲೂ ಕೂಡ ಸಂನ್ಯಾಸ ಯುಕ್ತನು ಸಾಂಖ್ಯಜನಿತ ನಿತ್ಯಸ್ಮರಣೆಯಿಂದ ಭಗವದಾರಾಧನೆಯಲ್ಲಿ ತತ್ಪರನಾಗಿ ಪರಮಾತ್ಮನನ್ನು ಹೊಂದುವನೆಂದು ಸಿದ್ಧವಾಗುವುದು.

(12) .... .... .... .... **ಸಂಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥**
—(11. 55.)

ಎಲೈ ಪಾಂಡುನಂದನನೇ ! ವಿಷಯಸ್ನೇಹರಹಿತನಾಗಿ, ಸರ್ವ ಸಜ್ಜನರ ವಿಷಯದಲ್ಲಿಯೂ ದ್ವೇಷರಹಿತನಾಗಿರುವವನು ನನ್ನನ್ನು ಹೊಂದುತ್ತಾನೆ.

(13) **ಅದ್ವೇಷ್ಟಾ ಸರ್ವಭೂತಾನಾಂ........ಯೋ ಮದ್ಭಕ್ತಃ**
**ಸ ಮೇ ಪ್ರಿಯಃ ॥**
—(12. 13–14.)

ಸರ್ವ ಸಾತ್ವಿಕ ಪ್ರಾಣಿಗಳ ವಿಷಯದಲ್ಲಿಯೂ ದ್ವೇಷರಹಿತನಾದ ನನ್ನ ಭಕ್ತನು ನನಗೆ ಅತ್ಯಂತ ಪ್ರಿಯನು.

"**ಸಂನ್ಯಾಸ**"ವು ಈ ರೀತಿಯಾಗಿ ಪರಂಪರೆಯಾಗಿ ಮೋಕ್ಷ ಸಾಧನವಾಗಿರುವುದರಿಂದಲೇ ಶ್ರೀ ಕೃಷ್ಣನು ಮೋಕ್ಷ ಸಾಧನಗಳ ನಿರೂಪಣಾವಸರದಲ್ಲಿ ಇದನ್ನು ಉದ್ದೇಶಪೂರ್ವಕವಾಗಿ ಸಂಗ್ರಹಿಸಿರುತ್ತಾನೆ :—

(14) **ಇಂದ್ರಿಯಾರ್ಥೇಷು ವೈರಾಗ್ಯಂ** .... .... .... ....
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಂ ॥**
**ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥**
—(13. 8–9.)

**ಏತಜ್ಜ್ಞಾನಮಿತಿಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥**
—(13. 11.)

ಇಂದ್ರಿಯ ವಿಷಯಗಳಾದ ಶಬ್ದಾದಿಗಳಲ್ಲಿ ವೈರಾಗ್ಯವು, ಜನನ ಮರಣ ಜರಾ ವ್ಯಾಧಿಗಳಿಂದ ಲೋಕದಲ್ಲಿ ಉಂಟಾಗುವ ದುಃಖದ ಅನುಸಂಧಾನವು, ಪುತ್ರ, ದಾರ, ಗೃಹಾದಿ ವಿಷಯಗಳಲ್ಲಿ ವಿಶೇಷ ಆಸಕ್ತಿರಾಹಿತ್ಯವು ಮತ್ತು ವಿಶೇಷ ಸ್ನೇಹರಾಹಿತ್ಯವು, ಇಷ್ಟಗಳ ಪ್ರಾಪ್ತಿಯಿಂದ ಹಿಗ್ಗದಂಥ ಅನಿಷ್ಟ ಪ್ರಾಪ್ತಿಯಿಂದ ಕುಗ್ಗ

ದಂಥ ನಿರ್ವಿಕಾರ ಚಿತ್ತಯುಕ್ತತ್ವವು ಇವೆಲ್ಲವೂ ಜ್ಞಾನ ಸಾಧನಗಳೆನ್ನಿಸುವುವು. ಇದಕ್ಕೆ ವಿರುದ್ಧವಾದುವುಗಳು ಜ್ಞಾನ ಸಾಧನಗಳಲ್ಲ.

**(15) ನಿರ್ಮಾನಮೋಹಾ ಜಿತಸಂಗದೋಷಾ ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।**
**ದ್ವಂದ್ವೈರ್ವಿಮುಕ್ತಾಸ್ಸುಖದುಃಖ ಸಂಜ್ಞೈರ್ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥**

—(15. 5.)

**ಅರ್ಥ :—** ಅಭಿಮಾನ ಮಿಥ್ಯಾ ಜ್ಞಾನಗಳಿಂದ ವರ್ಜಿತರಾದ, ಕರ್ಮ ಫಲ ಸ್ನೇಹವೆಂಬ ದೋಷರಹಿತರಾದ, ಪರಮಾತ್ಮನಲ್ಲಿ ಧ್ಯಾನರತರಾದ ಕಾಮಾದಿಗಳನ್ನು ಬಿಟ್ಟಂಥ ಸುಖ ದುಃಖಗಳೆಂಬ ದ್ವಂದ್ವದಿಂದ ನಿರ್ವಿಕಾರರಾದ ಜ್ಞಾನಿಗಳು ಪರಮ ಪದವನ್ನು ಹೊಂದುತ್ತಾರೆ.

ಈ ರೀತಿಯಲ್ಲಿ ಜ್ಞಾನೋತ್ಪತ್ತಿಗೂ ಸಾಧಕವಾದ ಮಹಾ ಗುಣವಾದುದ ರಿಂದಲೇ ಶ್ರೀ ಕೃಷ್ಣನು ಸಂನ್ಯಾಸವನ್ನು (ವೈರಾಗ್ಯವನ್ನು) ಸಕಲರೂ ಸಂಪಾದಿಸ ಬೇಕೆಂದು ಅತ್ಯಂತ ಅಭಿಪ್ರಾಯಪೂರ್ವಕವಾಗಿ ವಿಧಿಸುತ್ತಾನೆ. ಅದರಲ್ಲಿಯೂ ಪ್ರಾಪಂಚಿಕ ವಿಷಯಗಳಲ್ಲಿ ಅನಾದರಣೆಯನ್ನು ಮಾಡುವುದಕ್ಕೆ ಕಾರಣಾಂತರ ಗಳನ್ನು ನವಮಾಧ್ಯಾಯದಲ್ಲಿ ನಿರೂಪಿಸಿರುತ್ತಾನೆ :—

**(16) ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಂ ॥**

—(9. 33.)

ಎಲೈ ಅರ್ಜುನನೇ ! ಅನಿತ್ಯವಾದ ಮತ್ತು ದುಃಖಮಿಶ್ರವಾದ ಈ ಲೋಕ ವನ್ನು ಹೊಂದಿರುವಾಗಲೇ ನನ್ನನ್ನು ಭಜಿಸು.

ಪ್ರಪಂಚವು ಅನಿತ್ಯವೂ, ದುಃಖಮಿಶ್ರವೂ ಆಗಿರುವುದರಿಂದ, ( ಈ ಮಾನುಷ ದೇಹದಲ್ಲಿ ಅದು ಚೆನ್ನಾಗಿ ತಿಳಿಯುವುದರಿಂದ, ) ವಿಷಯ ಭೋಗಗಳನ್ನು ತೊರೆದು ನಿತ್ಯಾನಂದಪ್ರದನಾದ ಪರಮಾತ್ಮನನ್ನು ಉಪಾಸನೆ ಮಾಡಬೇಕೆಂದು ಶ್ರೀ ಕೃಷ್ಣನ ಭಾವವು. ಅದೇ ನಮ್ಮ ಉಪದೇಶವು.

---

# 14. ಹದಿನಾಲ್ಕನೆಯ ಅಂಶವು.

## ( ಸಂನ್ಯಾಸ ಮಹಿಮೆಯು. )

1. **ಪ್ರಶ್ನೆ :—** ಸ್ವಾಮೀ ! ಕಾಮಾದಿವರ್ಜನ ರೂಪವಾದ ಸಂನ್ಯಾಸವು ಜ್ಞಾನೋತ್ಪತ್ತಿಯಲ್ಲಿ ಹೇಗೆ ಕಾರಣವಾಗುವುದು ? ಚಿತ್ತಶುದ್ಧಿಗೂ ವೇದಾರ್ಥ ಪರಿಜ್ಞಾನಕ್ಕೂ ಏನು ಸಂಬಂಧವು ? ಅಥವಾ ಅಂಥ ಸಂನ್ಯಾಸವು ಇದ್ದರೆ ನಿಮ್ಮ ಜ್ಞಾನದಿಂದ ತಾನೇ ಏನು ಪ್ರಯೋಜನವು ? **ವೇಧಾದ್ವೇಧಾ ಭ್ರಮಂ ಚಕ್ರೇ ಕಾಂತಾಸು ಕನಕೇಷು ಚ । ತಾಸು ತೇಷ್ವಪ್ಯನಾಸಕ್ತಃ ಸ ಸಾಕ್ಷಾದ್ಭರ್ಗೋ ನರಾಕೃತಿಃ ।** ಎಂದು ಕಾವ್ಯ ಶ್ಲೋಕದಲ್ಲಿಯೂ ಸಂನ್ಯಾಸವುಳ್ಳವನು ಕೃತಾರ್ಥನೆಂದು ಹೇಳಲ್ಪಟ್ಟಿರುವುದು.

**ಉತ್ತರ :— ಶ್ರೀ ಶ್ರೀಗಳವರು :—** ಅನೇಕ ವಿಧವಾಗಿ ಸಂನ್ಯಾಸವು ಜ್ಞಾನಕ್ಕೆ ಸಾಧಕವಾಗುವುದು. 1. ಸಂನ್ಯಾಸರಹಿತನಿಗೆ ವೇದಾದಿ ಶಾಸ್ತ್ರಾಭ್ಯಾಸದಲ್ಲಿಯೇ ಅಧಿಕಾರವಿಲ್ಲವೆಂದು ಶ್ರುತಿ, ಸೂತ್ರಾದಿ ಪ್ರಮಾಣಗಳಲ್ಲಿ ಸಿದ್ಧವಾಗಿರುವುದು. ಗೀತೆಯಲ್ಲಿಯೂ ಕೂಡ **" ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ "** ಇತ್ಯಾದಿ ವಾಕ್ಯಗಳಲ್ಲಿ ವಿಷ್ಣು ಭಕ್ತಿ ಮತ್ತು ವಿಷಯ ವಿರಕ್ತಿಗಳಿಂದ ಸಹಿತನಾದವನಿಗೇ ತತ್ವೋಪದೇಶವನ್ನು ಮಾಡಬೇಕೆಂದು ಶ್ರೀ ಕೃಷ್ಣನು ನಿರೂಪಿಸಿರುತ್ತಾನೆ. ವಿರಕ್ತನು ಶಾಸ್ತ್ರ ಶ್ರವಣಾದಿಗಳಿಗೆ ಅಧಿಕಾರಿಯು. ಎಂದರೆ ವೈರಾಗ್ಯ ಸಂಪನ್ನನಾಗಿದ್ದರೆ, ಶ್ರವಣಾದಿಗಳಿಂದ ವೇದೋಕ್ತ ಫಲವು ಬರುವುದು, ಅನ್ಯಥಾ ಬರುವುದಿಲ್ಲ. ದುಷ್ಟ ಹೃದಯದಿಂದ ಮಾಡಿದ ಸೇವೆಯನ್ನು ಪೂರ್ಣ ಕಾಮನಾದ ವಿಷ್ಣುವು ಸ್ವೀಕರಿಸುದಿಲ್ಲವೆಂದು ಹೇಳಬೇಕಾದುದೇನು ?

2. ಪರಂತು ಸಂನ್ಯಾಸವು ಸಾಕ್ಷಾತ್ ಜ್ಞಾನೋಪಾಯ ರೂಪವಲ್ಲದಿದ್ದರೂ, ಜ್ಞಾನೋಪಾಯವಾದ ಕರ್ಮಯೋಗ, ಧ್ಯಾನಾದಿಗಳಿಗೆ ತನ್ನ ಸಾಹಿತ್ಯದಿಂದ ಅಧಿಕ ಫಲವನ್ನು ಕೊಡಿಸಿ, ಅವುಗಳಿಂದ ಕ್ಷಿಪ್ರ ಫಲವು ಉಂಟಾಗುವಂತೆ ಮಾಡುತ್ತದೆ. ವಿರಕ್ತನು ಮಾಡಿದ ಕರ್ಮವು ಅನಂತಮಡಿ ಪುಣ್ಯ ಫಲವನ್ನು ಹೊಂದುತ್ತದೆ; ವಿರಕ್ತನ ಧ್ಯಾನವು ಕ್ಷಿಪ್ರದಲ್ಲಿ ಭಗವಂತನ ಪ್ರಸಾದಕ್ಕೆ ಕಾರಣವಾಗುತ್ತದೆ, ಅಲ್ಲದೆ, ಸಂನ್ಯಾಸದ ಪರಿಪಾಕವು ಮನಃಪ್ರಸಾದವು ಎಂದರೆ ಮನಸ್ಸು ಸ್ವತಃ ( ಜೀವನ ಪ್ರಯತ್ನವಿಲ್ಲದೆ ) ವಿಷಯಗಳಲ್ಲಿ ಪ್ರವರ್ತಿಸದೇ ಇರೋಣವೆಂಬ ಸ್ಥಿತಿಯನ್ನು ಹೊಂದುವುದು. ಇಂಥ ಸ್ಥಿತಿಯು ಹೇಗೆ ತಾನೇ ಸಾಕ್ಷಾತ್ ಪರಮಾತ್ಮನ ಅನುಗ್ರಹಕ್ಕೆ ಕಾರಣವಾಗುವುದು ? ಅನ್ಯ ವಿಷಯಕ ಚಿಂತಾ ಪರಿತ್ಯಾಗ ಮಾತ್ರದಿಂದ ರಾಜನು ತನ್ನ ಭೃತ್ಯನಲ್ಲಿ ವಿಶ್ವಾಸ ಮಾಡಲಾರನು. ಮತ್ತೇನೆಂದರೆ ಅನ್ಯ ವಿಷಯಕ ಧ್ಯಾನರಹಿತವಾಗಿ ಸ್ವಸೇವೆಯಲ್ಲಿ ನಿರತನಾದ ಭೃತ್ಯನ ವಿಷಯದಲ್ಲಿ ರಾಜನು ಅಧಿಕವಾಗಿ ಪ್ರಸನ್ನನಾಗುವನು. ಆದುದರಿಂದ ಕೇವಲ ರಾಗ ದ್ವೇಷಾದಿರಾಹಿತ್ಯ

ರೂಪವಾದ ಸಂನ್ಯಾಸವು ಅಧಿಕಾರಿಯು ಮಾಡತಕ್ಕ ಕರ್ಮ, ಧ್ಯಾನಾದಿ ಯೋಗಗಳಲ್ಲಿ ಪ್ರಾಶಸ್ತ್ಯ ಸಂಪಾದಕವಾಗಿ ಪರಂಪರಯಾ ಮೋಕ್ಷಕ್ಕೆ ಸಾಧಕವಾಗುವುದೆಂದು ನಿರ್ಣಯಿಸಬೇಕು.

3. ಕೇವಲ ಸಂನ್ಯಾಸವು ಮೋಕ್ಷ ಸಾಧನವಾಗುವುದೆಂದು ಹೇಳಿದರೆ **" ಜ್ಞಾನೇನಾಮೃತೀ ಭವತಿ " " ನಾನ್ಯಃಪಂಥಾ ಅಯನಾಯ ವಿದ್ಯತೇ "** ಇತ್ಯಾದಿ ಶ್ರುತಿಗಳಿಗೆ ವಿರುದ್ಧವಾಗುವುದು. **" ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹವಿದ್ಯತೇ "** ಇತ್ಯಾದಿ ಗೀತಾ ವಾಕ್ಯಗಳಿಗೂ ವಿರುದ್ಧವಾಗುವುದು.

4. ಕಾಮಾದಿಗಳಿಂದ ಅಭಿಭೂತವಾದ ಚಿತ್ತವುಳ್ಳವನಿಗೆ ಶ್ರವಣಾದಿ ಜ್ಞಾನೋಪಾಯಗಳು ಸಂಪಾದಿಸುವುದಕ್ಕೇ ಅಶಕ್ಯವಾಗುವುವು. ಕಥಂಚಿತ್ ಶ್ರವಣದಿಂದ ಜ್ಞಾನವು ಉತ್ಪನ್ನವಾದರೂ, ಅದು ನಿರಂತರ ಧ್ಯಾನವನ್ನು ಉತ್ಪತ್ತಿ ಮಾಡಲಾರದೆ, ಉತ್ಪನ್ನವಾದ ಜ್ಞಾನವನ್ನೂ ತಿರೋಧಾನ ಹೊಂದಿಸಿ, ಅಪರೋಕ್ಷ ಜ್ಞಾನಜನಕವಾಗದಂತೆ ಮಾಡಿ ಬಿಡುವುದು. ಶ್ರೀ ಕೃಷ್ಣನು ಹೇಳುತ್ತಾನೆ :—

(1) **ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಂ ।**
—(3. 41.)

ಎಲೈ ಅರ್ಜುನನೇ ! ಉತ್ಪತ್ತಿಯಾಗುವ ಮತ್ತು ಉತ್ಪನ್ನವಾದ ಜ್ಞಾನವಿಜ್ಞಾನಗಳಿಗೆ ನಾಶಕವಾದ ಪಾಪಿಯಾದ ವಿಷಯಾಭಿಲಾಷೆ ಎಂಬ ಕಾಮವನ್ನು ನೀನು ಸಂಹರಿಸು. ಕ್ವಚಿತ್ ದುಷ್ಟ ಕಾಮವು ಯಥಾರ್ಥ ವಿಜ್ಞಾನವನ್ನು ನಾಶಮಾಡುವುದಲ್ಲದೆ, ವಿಪರೀತ ವಿಷಯಗಳಲ್ಲಿ ಮನಸ್ಸನ್ನು ಪ್ರವೃತ್ತವಾಗುವಂತೆ ಮಾಡಿ, ನರಕಾದ್ಯನರ್ಥಗಳಿಗೂ ಕಾರಣವಾಗುತ್ತದೆ. " ಧ್ಯಾಯತೋ ವಿಷಯಾನ್ ಪುಂಸಃ " ಇತ್ಯಾರಭ್ಯ " ಬುದ್ಧಿನಾಶಾತ್ಪ್ರಣಶ್ಯತಿ " ಇತ್ಯಂತವಾದ ಗೀತಾ ವಚನಗಳು ಈ ವಿಷಯದಲ್ಲಿ ಸಾಧಕವಾಗಿರುತ್ತವೆ.

ವಶೀಕೃತವಾದ ಮನಸ್ಸುಳ್ಳವನಿಗಾದರೋ ಯಥಾರ್ಥ ತತ್ವನಿಶ್ಚಯವು ಶೀಘ್ರದಲ್ಲಿ ಉತ್ಪನ್ನವಾಗುವುದು, ಮತ್ತು ಉತ್ಪನ್ನವಾದ ತತ್ವಜ್ಞಾನವು ಊಳಲ್ಪಟ್ಟ ( ಕರ್ಷಣ ಮಾಡಲ್ಪಟ್ಟ ) ಭೂಮಿಯಲ್ಲಿ ಬಿತ್ತಲ್ಪಟ್ಟ ಬೀಜದಂತೆ ಕ್ಷಿಪ್ರದಲ್ಲಿ ಧ್ಯಾನಜನಕವಾಗಿ ಅಪರೋಕ್ಷ ಜ್ಞಾನಕ್ಕೆ ಕಾರಣವಾಗುವುದು. ಇದೂ ಅಲ್ಲದೆ,

5. (2) **ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ।**
—(2. 71.)

ಇತ್ಯಾದಿ ಶ್ರೀ ಕೃಷ್ಣನ ಅನೇಕ ವಾಕ್ಯಗಳಿಂದ ಅಹಂತಾ ಮಮತಾ ಪರಿತ್ಯಾಗವು ಧ್ಯಾನಾದಿಗಳಿಗೆ ಒಂದು ಮುಖ್ಯ ಕಾರಣವೆಂದು ಶ್ರೀ ಕೃಷ್ಣನು ನಿರೂಪಿಸಿರುತ್ತಾನೆ ನಾನು ಸ್ವತಂತ್ರನು, ನನ್ನ ದಾರಾಪುತ್ರ ಮಿತ್ರಾದಿಗಳೆಲ್ಲರೂ ಕೇವಲ ನನ್ನ ಅಧೀನರು ಇತ್ಯಾದಿ ರೂಪವಾದ ಭ್ರಮವು ವಿಷಯಗಳಲ್ಲಿ ಆಶಾರಾಹಿತ್ಯ

ಮಾತ್ರದಿಂದ ಹೇಗೆ ನಿವೃತ್ತವಾಗುವುದು ? ಪರಮಾತ್ಮನೇ ಸ್ವತಂತ್ರನು. ಕಳತ್ರ ಮಿತ್ರಾದಿ ಭಾಗ್ಯವೆಲ್ಲವೂ ಶ್ರೀಹರಿಯ ಕೃಪೆಯಿಂದ ಪ್ರಾಪ್ತವಾದುದು. ಯಾವುದೂ ನಮ್ಮ ಅಧೀನವಲ್ಲ, ಇತ್ಯಾದಿ ವಿಜ್ಞಾನವು "**ಸಾಂಖ್ಯ**" ಎಂದರೆ ತತ್ವಜ್ಞಾನ ರೂಪವಾದುದು. ಆದುದರಿಂದ ಸಾಂಖ್ಯ ಸಹಕೃತವಾದ ಸಂನ್ಯಾಸವು ಸಾಕ್ಷಾದ್ಧ್ಯಾನ ಜನಕವಾಗುವುದು ಎಂದು ನಿಶ್ಚಯಿಸಬೇಕು. ಆದುದರಿಂದಲೇ ಶ್ರೀ ಕೃಷ್ಣನು ಮೋಕ್ಷ ಸಾಧನಗಳನ್ನು ನಿರೂಪಿಸುವಾಗ "**ಇಂದ್ರಿಯಾರ್ಥೇಷು ವೈರಾಗ್ಯಂ**" ಇತ್ಯಾದಿ ವಾಕ್ಯಗಳಲ್ಲಿ ಸಂನ್ಯಾಸವನ್ನು ವಿಧಾನ ಮಾಡಿ ಅದೇ ಪ್ರಕರಣದಲ್ಲಿಯೇ, ಸಂಗಡವೇ, "**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ವಜ್ಞಾನಾರ್ಥದರ್ಶನಂ**" ಎಂದು ಶಾಸ್ತ್ರಾಭ್ಯಾಸವನ್ನು ಒಂದು ಮುಖ್ಯ ಕಾರಣವನ್ನಾಗಿ ಬೋಧಿಸಿದನು. ಮತ್ತು,

6. (3) "**ಶಬ್ದಾದೀನ್ ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ।**
**ಧ್ಯಾನಯೋಗಪರೋ ನಿತ್ಯಂ........**" ।

—(18. 51–52.)

ಎಂದು ಹೇಳುವಾಗ ಶ್ರೀ ಕೃಷ್ಣನು ಸಂನ್ಯಾಸವು ( ವಿಷಯಾಕಾಂಕ್ಷಾ ರಾಹಿತ್ಯವು ) ಧ್ಯಾನಯೋಗಕ್ಕೆ ಸಾಧಕವಾಗುವುದೆಂದು ಸೂಚಿಸಿರುತ್ತಾನೆ.

7. ಕೇವಲ ಸಂನ್ಯಾಸವು ಕರ್ಮಭ್ರಂಶಕ್ಕೆ ಕಾರಣವಾಗಿ ಮಹಾ ಪಾಪಗಳಿಗೆ ಮೂಲವಾಗುವುದು ಎಂದು ಶ್ರೀ ಕೃಷ್ಣನು ಸೂಚಿಸಿರುತ್ತಾನೆ :—

(4) **ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ।** —(3. 4.)

ಕೇವಲ ಫಲಾಪೇಕ್ಷಾರಾಹಿತ್ಯ ರೂಪವಾದ ಸಂನ್ಯಾಸದಿಂದಲಾಗಲೀ, ಕೇವಲ ಯತ್ಯಾಶ್ರಮದಿಂದಾಗಲೀ ಜ್ಞಾನಾದಿ ರೂಪವಾದ ಸಿದ್ಧಿಯನ್ನು ಮನುಷ್ಯನು ಹೊಂದುವುದಿಲ್ಲ.

ಕಾಮಾದಿರಹಿತನಾಗಿ ಸ್ಥಾಣುವಿನಂತೆ ಅಚಲನಾಗಿ ಮನೆಯಲ್ಲಿ ಕುಳಿತರೆ ವಿಹಿತವಾದ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನ ಪರಿತ್ಯಾಗದಿಂದ ಮಹಾ ಅನರ್ಥವು ಪ್ರಾಪ್ತವಾಗುವುದು. ಸಂನ್ಯಾಸ ಕರ್ಮಯೋಗಗಳೆರಡೂ ಮಿಳಿತವಾಗಿದ್ದರೇ ಮೋಕ್ಷ ಹೇತುಭೂತವಾದ ಜ್ಞಾನ ಧ್ಯಾನಾದಿ ಉಪಾಯಗಳು ಲಭಿಸುವುವು. ಶ್ರೀ ಕೃಷ್ಣನು ಹೇಳುತ್ತಾನೆ :—

(5) **ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ॥**

—(5. 2.)

ಕಾಮಾದಿರಾಹಿತ್ಯ ರೂಪವಾದ ಸಂನ್ಯಾಸವು ಮತ್ತು ವಿಹಿತ ಕರ್ಮಾನುಷ್ಠಾನ ರೂಪವಾದ ಕರ್ಮ ಯೋಗವು ಇವೆರಡೂ ಮಿಳಿತವಾಗಿಯೇ ಮೋಕ್ಷ ಕಾರಣವಾಗುವುವು.

2. ಇದು ಶ್ರೀ ಕೃಷ್ಣನ ಅಭಿಪ್ರಾಯವು ಆದರೆ ಶಂಕರಾಚಾರ್ಯರು ಸ್ವರೂಪೇಣ ಸಕಲ ಕರ್ಮ ಪರಿತ್ಯಾಗವೇ ಸಂನ್ಯಾಸವೆಂದೂ ಇಂಥ ಸಂನ್ಯಾಸವನ್ನೇ ಜ್ಞಾನ ಹೊಂದಿದ ಅರ್ಜುನನು ತಿಳಿದನೆಂದೂ ಹೇಳಿರುತ್ತಾರೆ. ಗೀತೋಪಸಂಹಾರ ಕಾಲದಲ್ಲಿ ಅರ್ಜುನನು :—

**(1) ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ।**
—(18. 73.)

ಎಂದು ಹೇಳಿರುತ್ತಾನೆ. ನಾನು ನಷ್ಟ ಸಂಶಯವುಳ್ಳವನಾಗಿ ಯುದ್ಧಕ್ಕೆ ಸ್ಥಿತನಾಗಿರುತ್ತೇನೆ ನಿನ್ನ ಅಪ್ಪಣೆಯನ್ನು ನೆರವೇರಿಸುತ್ತೇನೆ ಎಂದು ಸ್ಪಷ್ಟವಾದ ಶ್ಲೋಕಾರ್ಥವು. ಹೀಗಿದ್ದರೂ ಶಂಕರಾಚಾರ್ಯರು "**ಕರಿಷ್ಯೇ ವಚನಂ ತವ ಅಹಂ ತ್ವತ್ಪ್ರಸಾದಾತ್ಕೃತಾರ್ಥಃ ನ ಮೇ ಕರ್ತವ್ಯಮಸ್ತಿ ಇತ್ಯಭಿಪ್ರಾಯಃ** " ಎಂದು ಅರ್ಥವನ್ನು ಬರೆದಿರುತ್ತಾರೆ.

**ಅರ್ಥವು :**— "ನಾನು ಅಪ್ಪಣೆಯನ್ನು ನಡೆಸುತ್ತೇನೆ ಎಂದರೆ ನಿನ್ನ ಪ್ರಸಾದದಿಂದ ನಾನು ಕೃತಾರ್ಥನಾಗಿರುತ್ತೇನೆ. ನಾನು ಮಾಡಬೇಕಾದುದು ಒಂದೂ ಇಲ್ಲ ಎಂದು ಅಭಿಪ್ರಾಯವು."

ಈ ರೀತಿಯಾದ ವ್ಯಾಖ್ಯಾನವು ಈ ಅಂತ್ಯ ಶ್ಲೋಕಕ್ಕೆ ಎಷ್ಟು ಅಸಂಗತವೆಂಬುದು ನಮ್ಮ ಪೂರ್ವದ ನಿರೂಪಣೆಯಿಂದ ವಿಶದವಾಗುವುದು. ನಾನು ನಿನ್ನ ಅಪ್ಪಣೆಯಂತೆ ಯುದ್ಧ ಮಾಡುತ್ತೇನೆ ಎಂಬ ವಾಕ್ಯಕ್ಕೆ ನಾನು ಕೃತಕೃತ್ಯನು, ನಾನು ಏನನ್ನೂ ಮಾಡಬೇಕಾದುದಿಲ್ಲ ಎಂಬ ಅರ್ಥವು ವಿನೋದಿನೀ ಪತ್ರಿಕೆಯಲ್ಲಿಯೂ ಸಿಕ್ಕುವುದು ಕಷ್ಟ ಅರ್ಜುನನ ಮುಂದಿನ ವ್ಯಾಪಾರಗಳ ಪರಾಮರ್ಶೆಯಿಂದಲಾದರೂ ಈ ಶ್ಲೋಕಕ್ಕೆ ಅರ್ಥ ಮಾಡಿದ್ದರೆ ಇಂಥ ಹಾಸ್ಯಾಸ್ಪದವಾದ ಮತಿವಿಭ್ರಮಕರವಾದ ದುರರ್ಥವು ತೋರುತ್ತಿರಲಿಲ್ಲ. ಅರ್ಜುನನು ಉತ್ಸಾಹದಿಂದ ಯುದ್ಧವನ್ನು ಮಾಡಿ ಅನೇಕ ವರ್ಷಗಳ ಪರ್ಯಂತರ ಸಾಮ್ರಾಜ್ಯ ಪರಿಪಾಲನೆಯಲ್ಲಿ ಯುಧಿಷ್ಠಿರನಿಗೆ ಸಹಾಯಭೂತನಾಗಿ ಕೃಷ್ಣನಲ್ಲಿ ನಿರಂತರ ಭೃತ್ಯ ಭಾವನೆಯನ್ನೇ ವ್ಯಕ್ತಪಡಿಸಿದನು. ಕೃತಕೃತ್ಯನಾದವನಂತೆ ನಿಷ್ಪ್ರವೃತ್ತಿಯನ್ನೂ, ವರ್ಣಾಶ್ರಮ ಧರ್ಮ ಪರಿತ್ಯಾಗವನ್ನೂ ಮಾಡಲಿಲ್ಲ. ಸ್ವರೂಪೇಣ ಕರ್ಮಗಳ ಸಂನ್ಯಾಸವು ತಾಮಸವೆಂದು ಶ್ರೀ ಕೃಷ್ಣನು ಹೇಳಿರುತ್ತಾನೆ :—

**(2) ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥**
—(18. 7.)

ವಿಧಿವಿಹಿತವಾದ ಅವಶ್ಯಕರ್ತವ್ಯ ಕರ್ಮಗಳ ಪರಿತ್ಯಾಗವು ಉಚಿತವಾದುದಲ್ಲ. ವಿಪರೀತ ಜ್ಞಾನದಿಂದ ನಿಯತ ಕರ್ಮಗಳನ್ನು ಪರಿತ್ಯಾಗ ಮಾಡುವುದು ತಾಮಸವೆಂದು ಹೇಳಲ್ಪಡುವುದು.

ಪುನಃ ಕಾಮ್ಯಕರ್ಮ ಪರಿತ್ಯಾಗವು ಎಂದರೆ ಕರ್ಮಾನುಷ್ಠಾನ ಮಾಡುವಾಗ ಕಾಮನಾ ಪರಿತ್ಯಾಗವು ನಿಜವಾದ ಸಂನ್ಯಾಸವೆಂದು ಸಂನ್ಯಾಸ ಶಬ್ದಾರ್ಥವನ್ನು ಶ್ರೀ ಕೃಷ್ಣನು ಉಪದೇಶ ಮಾಡಿರುತ್ತಾನೆ :—

**(3) ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ ।**
—(18. 2.)

ಕರ್ಮಾನುಷ್ಠಾನದಲ್ಲಿ ಕರ್ಮ ಪರಿತ್ಯಾಗವು ಎಂದರೆ ಲೌಕಿಕ ಫಲಾಪೇಕ್ಷಾ ರಾಹಿತ್ಯವು ಸಂನ್ಯಾಸವೆಂದು ಜ್ಞಾನಿಗಳು ತಿಳಿದಿರುತ್ತಾರೆ.

**ಪ್ರಶ್ನೆ :—** ಸ್ವಾಮೀ ! ಕಾಮ್ಯ ಕರ್ಮ ಪರಿತ್ಯಾಗವು ಸಂನ್ಯಾಸವೆಂದು ಈ ಶ್ಲೋಕದಲ್ಲಿ ಹೇಳಿರುವುದು. ಕಾಮನಾ ಪರಿತ್ಯಾಗವು ಸಂನ್ಯಾಸವೆಂದು ಯಾತಕ್ಕೆ ಅರ್ಥ ಮಾಡಬೇಕು ?

**ಶ್ರೀ ಶ್ರೀಗಳವರು :—** ಕಾಮ್ಯ ಕರ್ಮವೆಂಬ ಹೆಸರನ್ನು ಹೊಂದಿದ ಬೇರೆ ಕರ್ಮಗಳ ಸಮುದಾಯವು ಪ್ರಸಿದ್ಧವಾಗಿಲ್ಲ. ಒಂದೇ ಕರ್ಮವು ಕಾಮದಿಂದ ಮಾಡಲ್ಪಟ್ಟರೆ ಕಾಮ್ಯಕರ್ಮವು ಎಂದೆನಿಸುವುದು. ಭಗವದರ್ಪಣ ಬುದ್ಧಿಯಿಂದ (ನಿಷ್ಕಾಮತೆಯಿಂದ) ಮಾಡಲ್ಪಟ್ಟರೆ ನಿಷ್ಕಾಮ ಕರ್ಮವೆಂದೆನಿಸುವುದು. ಆದುದ ರಿಂದ ವಿಶೇಷಣವಾದ ಕಾಮ ಪರಿತ್ಯಾಗ ಮಾಡಿದರೆ (ವಿಶಿಷ್ಟವಾದ) ಕಾಮ್ಯ ಕರ್ಮ ವನ್ನು ಪರಿತ್ಯಾಗ ಮಾಡಿದಂತೆಯೇ ಆಯಿತು.

ಅಥವಾ ಕಾರೀರ್ಯಾದಿ ಯಾಗಗಳು ಸ್ವರೂಪೇಣ ಕಾಮ್ಯ ಕರ್ಮಗಳೆಂದು ಇಟ್ಟುಕೊಂಡರೂ ಚಿಂತಿಲ್ಲ. ಆಗಲೂ ಸಹ ಕಾಮ್ಯ ಕರ್ಮಗಳ ಪರಿತ್ಯಾಗವು ಸಂನ್ಯಾಸವು ಎಂದು ಶ್ಲೋಕಾರ್ಥವಾಗುವುದು. ನಿಷ್ಕಾಮ ಕರ್ಮವನ್ನು ಪರಿತ್ಯಾಗ ಮಾಡಬಾರದು. ಸರ್ವ ಕರ್ಮ ಪರಿತ್ಯಾಗವು ಸಂನ್ಯಾಸವಲ್ಲ ಎಂದೂ ಈ ಶ್ಲೋಕ ದಿಂದಲೇ ನಿಶ್ಚಿತವಾಗುವುದು. ಮತ್ತೂ ಶ್ರೀ ಕೃಷ್ಣನು ಹೇಳುತ್ತಾನೆ :—

**(4) ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಂ ॥**
—(18–6.)

ಎಲೈ ಅರ್ಜುನನೇ ! ಪೂರ್ವೋಕ್ತ ಯಜ್ಞ ದಾನಾದಿ ಕರ್ಮಗಳು ಫಲಾ ಪೇಕ್ಷೆಯನ್ನು ಬಿಟ್ಟು, ಕರ್ಮ ಫಲವನ್ನೂ ಪರಮಾತ್ಮನಲ್ಲಿ ಸಮರ್ಪಿಸಿ, ಅವಶ್ಯವಾಗಿ ಮಾಡಲ್ಪಡಬೇಕೆಂದು ನನ್ನ ವ್ಯವಸ್ಥಿತವಾದ ಉತ್ತಮ ಸಿದ್ಧಾಂತವಾಗಿರುತ್ತದೆ.

ಏವಂಚ ಸರ್ವ ಕರ್ಮ ಪರಿತ್ಯಾಗ ರೂಪವಾದ ಸಂನ್ಯಾಸವು ಬ್ರಾಹ್ಮಣ್ಯಾದಿ ವರ್ಣ ಧರ್ಮನಾಶಕವಾದ ಮತ್ತು ಬ್ರಹ್ಮಚರ್ಯಾದಿ ಆಶ್ರಮ ಧರ್ಮ ನಾಶಕವಾದ, ಸಾಂಕರ್ಯಕಾರಕವಾದ ಅತ್ಯಂತ ತಾಮಸ ಧರ್ಮವಾಗಿರುವುದರಿಂದ ಕರ್ಮ ಪರಿ

ತ್ಯಾಗವೇ ಸಂನ್ಯಾಸವೆಂಬ ವಾದವು ಭಗವತ್ಪ್ರಾಪ್ತಿಗೆ ಸಾಧಕವಾದ ಯೋಗ ಶಾಸ್ತ್ರದಲ್ಲಿ ಯಜ್ಞಶಾಲೆಯಲ್ಲಿ ಪ್ರವಿಷ್ಟವಾದ ಗರ್ದಭದಂತೆ ಬಹಿಷ್ಕೃತವಾದ, ದುರ್ಜನ ಪ್ರೀತಿಕರವಾದ, ಕೆಟ್ಟ ತತ್ತ್ವವೆಂದು ಸಕಲರೂ ಪರಾಮರ್ಶೆ ಮಾಡಿ ನಿಶ್ಚಯಿಸಿರುತ್ತಾರೆ.

3. ರಾಗಾದಿರಾಹಿತ್ಯ ರೂಪವಾದ ಸಂನ್ಯಾಸವು ವಜ್ರಕ್ಕೆ ವರ್ತಿಯಂತೆ ಕರ್ಮಾನುಷ್ಠಾನದ ನೈಜ ಪ್ರಭಾವವನ್ನು ವ್ಯಕ್ತಗೊಳಿಸುತ್ತದೆ. ಅಥವಾ ಕಳೆಯನ್ನು ಕಿತ್ತು, ಪಾತಿಯನ್ನು ಮಾಡಿ ಜಲಸೇಚನಾದಿಗಳಿಂದ ಸಂಸ್ಕೃತವಾದ ಉತ್ತಮ ಭೂಮಿಯಲ್ಲಿ ಉತ್ತಮವಾದ ಪಟಾಪಟಿಯ ಕಬ್ಬಿನ ಫಸಲು ಬೆಳೆಯುವಂತೆ ಸಂನ್ಯಾಸದಿಂದ ಸಹಕೃತವಾದ ಮನಸ್ಸಿನಿಂದ ಯುಕ್ತವಾಗಿ ಮಾಡಲ್ಪಟ್ಟ ಕರ್ಮಗಳು ಸಮಗ್ರ ಫಲಪ್ರದವಾಗಿ ಕ್ಷಿಪ್ರದಲ್ಲಿ ಶ್ರೀಹರಿ ಪ್ರಸಾದಕ್ಕೆ ಕಾರಣವಾಗುವುವು. ಯದ್ಯಪಿ, ಯೋಗ (ವಿಧ್ಯುಕ್ತ ಕರ್ಮಾನುಷ್ಠಾನ) ರಹಿತವಾದ ಸಂನ್ಯಾಸವು ಬೀಜರಹಿತವಾದ ಕಪ್ಪು ಭೂಮಿಯಂತೆ ನಿಷ್ಫಲವೇ. ಅಷ್ಟೇ ಅಲ್ಲ; ಪಾಪಕಾರಣವೂ ಆಗುವುದು. ಆದರೆ ಯೋಗಸಹಕೃತವಾದ ಸಂನ್ಯಾಸವು ಮಹತ್ಫಲಕ್ಕೆ ಕಾರಣವಾಗುವುದು. ಶ್ರೀ ಕೃಷ್ಣನು ಹೇಳುತ್ತಾನೆ:—

**(1) ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ ॥**

—(5. 6.)

ಎಲೈ ಪಾರ್ಥನೆ ! ಕರ್ಮಾನುಷ್ಠಾನ ರೂಪವಾದ ಯೋಗರಹಿತವಾದ ಕೇವಲ ಸಂನ್ಯಾಸವು ಕೇವಲ ದುಃಖಾರ್ಥವಾಗಿಯೇ ಸರಿ. ( ನರಕಾದ್ಯನರ್ಥಗಳಿಗೆ ಕಾರಣವಾಗುತ್ತದೆ ಎಂದರ್ಥವು. ) ಆದರೆ ಭಗವದರ್ಪಣ ಬುದ್ಧಿಪೂರ್ವಕವಾದ ಕರ್ಮಾನುಷ್ಠಾನ ರೂಪವಾದ ಯೋಗದಿಂದ ಸಹಕೃತವಾದ, ಶಾಸ್ತ್ರ ಮನನದಿಂದ ಸಹಿತನಾದವನು ಶೀಘ್ರದಲ್ಲಿ ಪರಬ್ರಹ್ಮನನ್ನು ಹೊಂದುತ್ತಾನೆ.

ಈ ವಾಕ್ಯದಿಂದ ಸಾಂಖ್ಯ, ಯೋಗ, ತ್ಯಾಗ, ಸಂನ್ಯಾಸಗಳೆಂಬ ನಾಲ್ಕೂ ಅಂಶಗಳು ಒಟ್ಟಿಗೆ ಸೇರಿದರೆ ಜ್ಞಾನಾದಿ ರೂಪವಾದ ಸಿದ್ಧಿಯು ಪ್ರಾಪ್ತವಾಗುವುದೆಂದು ನಿರ್ವಿವಾದವಾಗಿ ಸಿದ್ಧವಾಗುವುದು. ಒಂದೇ ಯಂತ್ರದಲ್ಲಿ ಮುಂಭಾಗವೂ, ಹಿಂಭಾಗವೂ, ಮೊಳೆಗಳೂ, ಚಕ್ರಗಳೂ ಸೇರುವುದರಿಂದ ಒಂದು ಕಾರ್ಯವು ನೆರವೇರುವಂತೆ ಈ ನಾಲ್ಕು ಭಾಗಗಳೂ ಸೇರಿದರೇನೆ ವಿಶಿಷ್ಟವಾದ ಕರ್ಮಯೋಗದ ಫಲವು ಪ್ರಾಪ್ತವಾಗುವುದು. ಆದರೂ ಒಂದೊಂದು ಅಂಶಕ್ಕೂ ಪ್ರತ್ಯೇಕ ಪ್ರತ್ಯೇಕ ಪ್ರಯೋಜನವುಂಟು. ಕರ್ಮಾನುಷ್ಠಾನವು ಬ್ರಾಹ್ಮಣ್ಯಾದಿ ವರ್ಣಗಳನ್ನೂ, ಬ್ರಹ್ಮಚರ್ಯಾದಿ ಆಶ್ರಮಗಳನ್ನೂ ರಕ್ಷಿಸುವುದು; ನರಕದಿಂದ ಪ್ರಜೆಗಳನ್ನು ರಕ್ಷಿಸುವುದು; ಸಂನ್ಯಾಸಕ್ಕೆ ಕಾರಣವಾಗುವುದು. ಅನಂತರ ಸಂನ್ಯಾಸಾದಿಗಳಿಂದ ಸಹಿತವಾಗಿ ಧ್ಯಾನಯೋಗಕ್ಕೆ ಕಾರಣವಾಗುವುದು; ಅಥವಾ ಧ್ಯಾನವನ್ನೂ ಒಂದು ಕರ್ಮವಿಶೇಷವನ್ನಾಗಿಟ್ಟುಕೊಂಡರೆ ಸಾಕ್ಷಾದಪರೋಕ್ಷ ಜ್ಞಾನಕ್ಕೇ ಕಾರಣವಾಗುವುದು.

ತ್ಯಾಗವು ಮಾಡಲ್ಪಟ್ಟ ಕರ್ಮ ಫಲವು ನಾಶವಾಗದಂತೆ ಅದನ್ನು ರಕ್ಷಣೆ ಮಾಡುವುದು; ಕರ್ಮ ಫಲವನ್ನು ಅನಂತ ಮಾಡಿ ವೃದ್ಧಿ ಹೊಂದಿಸಿ ಸಮೀಚೀನ ವಾದ ಫಲವನ್ನು ಕೊಡಿಸುವುದು.

ಸಾಂಖ್ಯವು ಸಾಕ್ಷಾತ್ ಧ್ಯಾನಕ್ಕೆ ಮುಖ್ಯ ಕಾರಣವಾಗಿ ಅವ್ಯಕ್ತನಾದ ಭಗ ವಂತನನ್ನು ಸಹ ಅನುಗ್ರಹೋನ್ಮುಖನನ್ನಾಗಿ ಮಾಡಿಸಿ ಕೊಡುವುದು.

ಸಂನ್ಯಾಸವು ಯಂತ್ರದಲ್ಲಿ ಸ್ಕ್ರೂ ಮೊಳೆಗಳು ಇರುವಂತೆ, ಇತರ ಅಂಶ ಗಳಿಂದ ಸಹಕೃತವಾಗದೆ ಕೇವಲವಾಗಿದ್ದರೆ ಅಪ್ರಯೋಜಕವೇ. ಅರ್ಜುನನು ಕೇವಲ ಸಂನ್ಯಾಸವು ಉತ್ತಮವೋ, ಕೇವಲ ಕರ್ಮಾನುಷ್ಠಾನವು ಉತ್ತಮವೋ, ಎಂದು ಪ್ರಶ್ನೆ ಮಾಡಲು ಈ ವಿವಕ್ಷೆಯಿಂದಲೇ ಪರಮಾತ್ಮನಾದ ಶ್ರೀ ಕೃಷ್ಣನು ಸಂನ್ಯಾಸಾಂಶಕ್ಕಿಂತ ವಿಹಿತ ಕರ್ಮಾನುಷ್ಠಾನ ರೂಪವಾದ ಯೋಗಾಂಶವೇ ಅಧಿಕ ವೆಂದು ಹೇಳಿದನು :—

**ಅರ್ಜುನ ಉವಾಚ :—**

**(2) ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।**
**ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಂ ॥**

**ಶ್ರೀ ಭಗವಾನುವಾಚ :—**

**ಸಂನ್ಯಾಸಃ ಕರ್ಮಯೋಗಶ್ಚ ನಿಶ್ಶ್ರೇಯಸಕರಾವುಭೌ ।**
**ತಯೋಸ್ತು ಕರ್ಮಸಂನ್ಯಾಸಾತ್ಕರ್ಮಯೋಗೋ ವಿಶಿಷ್ಯತೇ ॥**

* * * *

**ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ ॥**

—(5. 1, 2–6.)

ಎಲೈ ಶ್ರೀ ಕೃಷ್ಣನೇ ! ನೀನು ಕಾಮಾದಿವರ್ಜನ ರೂಪವಾದ ಸಂನ್ಯಾಸ ವನ್ನು ಅಧಿಕವೆಂದೂ, ಪುನಃ ಕರ್ಮಾನುಷ್ಠಾನ ರೂಪಯೋಗವೇ ಅಧಿಕವೆಂದೂ ಪ್ರಶಂಸನೆ ಮಾಡಿರುತ್ತೀಯೆ. ಇವೆರಡರಲ್ಲಿ ವಸ್ತುತಃ ಯಾವದೊಂದು ಶ್ರೇಷ್ಠ ವಾಗಿರುವುದೆಂಬುದನ್ನು ನಿರ್ಣಯವಾಗಿ ಹೇಳು. ಶ್ರೀ ಕೃಷ್ಣನು ಹೇಳುತ್ತಾನೆ:— ಎಲೈ ಪಾರ್ಥನೇ ! ಕಾಮಾದಿವರ್ಜನ ರೂಪಸಂನ್ಯಾಸವೂ, ಕರ್ಮಾನುಷ್ಠಾನವೂ, ಉಭಯವೂ ಮಿಳಿತವಾಗಿಯೇ ಮೋಕ್ಷಕ್ಕೆ ಸಾಧಕವಾಗುವುವು; ಅವುಗಳೆರಡರಲ್ಲಿ ಸಂನ್ಯಾಸಕ್ಕಿಂತ ಕರ್ಮಯೋಗ ರೂಪವಾದ ಅಂಶವು ಶ್ರೇಷ್ಠವು.... ಎಲೈ ಮಹಾ ಬಾಹುವೇ ! ವಿಹಿತ ಕರ್ಮಾನುಷ್ಠಾನವೆಂಬ ಯೋಗದಿಂದ ರಹಿತವಾದ ಕೇವಲ ಸಂನ್ಯಾಸವು ದುಃಖಮಾಪ್ತುಂ = ಕೇವಲ ದುಃಖಕ್ಕೆ ಕಾರಣವಾಗುವುದು. ( ನರ ಕಾದ್ಯನರ್ಥ ಪ್ರದವಾಗುವುದೆಂದು ಭಾವವು. ) ಯೋಗಸಹಕೃತವಾದ ಸಂನ್ಯಾಸ

ವುಳ್ಳ ಮನನಶೀಲನಾದ ಅಧಿಕಾರಿಯು ಕ್ಷಿಪ್ರದಲ್ಲಿ ಪರಬ್ರಹ್ಮನನ್ನು ಹೊಂದುತ್ತಾನೆ.

ಯೋಗ ( ಕರ್ಮಾನುಷ್ಠಾನ ) ಯುಕ್ತವಾದ ಸಂನ್ಯಾಸದ ಮಹಿಮೆಯು ಅಪಾರವಾದುದು ಅದು ಕ್ಷಿಪ್ರದಲ್ಲಿ ಮೋಕ್ಷದಾಯಕವಾದುದೆಂಬಲ್ಲಿ ಹಿಂದೆಯೇ ವಚನಗಳನ್ನು ಉದಾಹರಿಸಿರುತ್ತೇವೆ. ಇನ್ನೂ ಇತರ ಮಹಿಮೆಗಳನ್ನು ಶ್ರೀ ಕೃಷ್ಣನು ಹೇಳುತ್ತಾನೆ :—

**(3) ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥**
—(5. 7 )

ಶುದ್ಧಾಂತಃಕರಣನಾದ, ಜಿತಮನಸ್ಕನೂ, ಜಿತೇಂದ್ರಿಯನೂ ಆದ ಸಂನ್ಯಾಸಿಯು ( ರಾಗದ್ವೇಷಾದಿರಹಿತನು ) ಕರ್ಮಾನುಷ್ಠಾನ ರೂಪವಾದ ಯೋಗಯುಕ್ತನಾಗಿ, ಸರ್ವ ಭೂತಾಂತರ್ಗತನಾದ ಪರಮಾತ್ಮನಲ್ಲಿ ಇಡಲ್ಪಟ್ಟ ಚಿತ್ತವುಳ್ಳವನಾಗಿ ಕರ್ಮಗಳನ್ನು ಮಾಡುತ್ತಿದ್ದರೂ ಲೇಪವನ್ನು ಹೊಂದುವದಿಲ್ಲ. (ಸಂನ್ಯಾಸವುಳ್ಳವನ ಕರ್ಮಗಳು ಜನನ ಮರಣ ರೂಪವಾದ ಸಂಸಾರಬಂಧಕ್ಕೆ ಕಾರಣವಾಗುವುದಿಲ್ಲವೆಂದು ಭಾವವು. )

ಇದೇ ಅಧ್ಯಾಯದಲ್ಲಿ ಪುನಃ ಹೀಗೆ ಹೇಳಿರುತ್ತಾನೆ :—

**(4) ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥**
**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾಽಽತ್ಮಶುದ್ಧಯೇ ॥**
—(5. 10-11.)

ಯಾವಾತನು ಕರ್ಮಫಲ ಸ್ನೇಹವನ್ನು ಬಿಟ್ಟು ಪರಮಾತ್ಮ ಸ್ವಾತಂತ್ರ್ಯ ಜ್ಞಾನಪೂರ್ವಕವಾಗಿ ಕರ್ಮ ಮಾಡಿ ಕರ್ಮ ಫಲವನ್ನು ಪರಮಾತ್ಮನಲ್ಲಿ ಅರ್ಪಿಸುವನೋ ಅಂತಹವನು, ಪದ್ಮಪತ್ರವು ಜಲಸಂಬಂಧವಿಲ್ಲದೇ ಇರುವಂತೆ, ಪಾಪ ಸಂಬಂಧವನ್ನು ಹೊಂದುವುದಿಲ್ಲ. ಯೋಗಿಗಳು ಶರೀರ, ಮನಸ್ಸು, ಬುದ್ಧಿ, ಮತ್ತು ಅಹಂಕಾರರಹಿತವಾದ ಇಂದ್ರಿಯಗಳಿಂದಲೂ ಕೂಡ ಫಲೇಚ್ಛಾದಿಗಳನ್ನು ತ್ಯಾಗ ಮಾಡಿ ಆತ್ಮಶುದ್ಧ್ಯರ್ಥವಾಗಿ ಕರ್ಮವನ್ನು ಮಾಡುತ್ತಾರೆ.

ಸಂನ್ಯಾಸವು ಕರ್ಮಫಲಲೇಪಾಭಾವಕ್ಕೂ ಕಾರಣವಾಗುವುದೆಂದು ಶ್ರೀಕೃಷ್ಣನು ಅರ್ಜುನನನ್ನು ಕುರಿತು ಮಾಡಿರುವ ವಿಧಿಯಿಂದಲೇ ನಿಶ್ಚಿತವಾಗುವುದು :—

**(5) ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।**

**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ||**

ಈ ಶ್ಲೋಕವು ಪೂರ್ವದಲ್ಲಿಯೇ ವ್ಯಾಖ್ಯಾತವಾಗಿರುವುದು.

ಚತುರ್ಥಾಧ್ಯಾಯದ ಶ್ರೀ ಕೃಷ್ಣನ ವಾಕ್ಯಗಳಿಂದಲೂ ಸಂನ್ಯಾಸವುಳ್ಳವನಿಗೆ ಆತನು ಮಾಡುವ ಕರ್ಮವು ಸಂಬಂಧವಾಗುವುದಿಲ್ಲವೆಂದೂ ಮತ್ತು ಬಹು ಪಾಪ ಕ್ಷಯಕ್ಕೆ ಕಾರಣವಾಗುವುದು ಎಂದೂ ಪ್ರಮಿತವಾಗುವುದು. :—

(6) **ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ |**
**ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ||**
**ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ |**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ||**
**—(4. 20-21.)**

ಪುನಃ,

(7) **ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ |**
**ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಽಪಿ ನ ನಿಬಧ್ಯತೇ ||**
**ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ |**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ||**
**—(4. 22-23.)**

ದೈವೇಚ್ಛೆಯಿಂದ ಲಬ್ಧವಾದುದರಿಂದ ಸಂತುಷ್ಟನಾಗಿ ಲಾಭಾಲಾಭಾದಿ ದ್ವಂದ್ವಗಳಿಂದ ವಿಕಾರವನ್ನು ಹೊಂದದೆ, ಮಾತ್ಸರ್ಯರಹಿತನಾಗಿ, ಸುಖವಾಗಲೀ ದುಃಖವಾಗಲೀ ವಿಕಾರವನ್ನು ಹೊಂದದೆ, ಕರ್ಮ ಮಾಡುವ ಅಧಿಕಾರಿಯು ತನ್ನ ಕರ್ಮಗಳಿಂದ ಬದ್ಧನಾಗುವದಿಲ್ಲ ಕರ್ಮಫಲ ಸ್ನೇಹರಹಿತನಾದ ಸ್ವಾತಂತ್ರ್ಯಾಭಿಮಾನರಹಿತನಾದ, ವಿಷ್ಣು ಜ್ಞಾನದಲ್ಲಿ ಆಸಕ್ತವಾದ ಮನಸ್ಸುಳ್ಳ, ವಿಷ್ಣು ಪ್ರೀತ್ಯರ್ಥವಾಗಿ ಕರ್ಮ ಮಾಡುವ ಅಧಿಕಾರಿಗೆ ಆತನು ಮಾಡುವ ಕರ್ಮಗಳೆಲ್ಲವೂ ಬಂಧಕವಾಗುವದಿಲ್ಲ.

**ಕೇವಲ** ಸಂನ್ಯಾಸಕ್ಕೆ ಬಂಧ ಪರಿಹಾರಕತ್ವವು ಮತ್ತು ವಿಶೇಷವಾಗಿ ಕರ್ಮಫಲ ಲೇಪಾಭಾವದಲ್ಲಿ ಕಾರಣತ್ವವು ಇಲ್ಲವೆಂದು ಪಂಚಮಾಧ್ಯಾಯದಲ್ಲಿ ಶ್ರೀ ಕೃಷ್ಣನು ತೀರ್ಮಾನ ಮಾಡಿರುತ್ತಾನೆ. ಹೀಗಿದ್ದರೂ ಈ ಪ್ರಕರಣದಲ್ಲಿಯೂ ಮತ್ತು ಇತರ ಸ್ಥಳಗಳಲ್ಲಿಯೂ ಸಂನ್ಯಾಸಿಗೆ ಪಾಪಕ್ಷಯವೂ ಮಾಡಲ್ಪಟ್ಟ ಕರ್ಮಗಳಿಗೆ ಅಬಂಧಕತ್ವವೂ ಮತ್ತು ವಿಶೇಷ ಪುಣ್ಯ ಪ್ರಾಪ್ತಿಯೂ ಉಂಟೆಂದು ಹೇಳಿರುವುದರಿಂದ ಇಲ್ಲಿ ಶ್ರೀ ಕೃಷ್ಣನು ಸಾಂಖ್ಯಸಹಕೃತವಾದ ಅಥವಾ ಅಪರೋಕ್ಷ ಜ್ಞಾನದಿಂದಲೇ ಉಜ್ಜೀವನವನ್ನು ಹೊಂದಿದ ಸಂನ್ಯಾಸವನ್ನು ವಿವಕ್ಷೆ ಮಾಡಿರುವನೆಂದು ನಿಶ್ಚಿತವಾಗುವುದು.

ಪರಂತು ಈ ನಿರ್ಣಯದಲ್ಲಿ ಕಾರಣವೂ ಉಂಟು. ತತ್ವಜ್ಞಾನರಹಿತನಾದವನು ಇದು ಸ್ವತಂತ್ರವು ಇದು ಅಸ್ವತಂತ್ರವು; ಇದು ನಿತ್ಯವು ಇದು ಅನಿತ್ಯವು; ಇತ್ಯಾದಿ ರೀತಿಯಾದ ವಿವೇಕವನ್ನು ಮಾಡಲಾರನು. ಸ್ವತಂತ್ರಾಸ್ವತಂತ್ರವಸ್ತು ವಿವೇಕವು, ನಿತ್ಯಾನಿತ್ಯ, ಮತ್ತು ಸಾರಾಸಾರಾದಿ ವಿವೇಕರಹಿತನಿಗೆ ಹೇಗೆ ತಾನೇ ವಿಷಯ ಭೋಗಾಪೇಕ್ಷೆಯು ನಾಶವನ್ನು ಹೊಂದುವುದು ? ಆದುದರಿಂದ ಉತ್ತಮ ವೈರಾಗ್ಯವು ಬರಬೇಕಾದರೆ ಸಮೀಚೀನವಾದ ಶಾಸ್ತ್ರಜ್ಞಾನವು ಅವಶ್ಯವಾಗಿರುವುದು. ಆದ ಕಾರಣ ಸರ್ವ ಪಾಪಹಾರಿಯಾಗಿ ಮಾಡಲ್ಪಟ್ಟ ಕರ್ಮಗಳ ಫಲದಿಂದ ನಿರ್ಲಿಪ್ತತೆಯನ್ನು ಹೊಂದಿಸತಕ್ಕ ಸಂನ್ಯಾಸವು ಸಾಂಖ್ಯದಿಂದ ಉಪೋದ್ಬಲಿತವೆಂದು ನಿರ್ವಿವಾದವಾಗಿ ಸಿದ್ಧವಾಗುವುದು ಹೇಗೆಂದರೆ ಕರ್ತೃತ್ವಾಭಿಮಾನ ಪರಿತ್ಯಾಗಪೂರ್ವಕವಾಗಿ ಮಾಡಲ್ಪಟ್ಟ ಕರ್ಮವೇ ಬಂಧಕವಾಗುವುದಿಲ್ಲ, ಎಂಬ ನಿಯಮವು ಉಂಟು. ಆದುದರಿಂದ ಸಂನ್ಯಾಸವು ಕರ್ತೃತ್ವಾಭಿಮಾನ ತ್ಯಾಗದ್ವಾರಾ ಕರ್ಮಲೇಪಾಭಾವಕ್ಕೂ ಪಾಪಕ್ಷಯಕ್ಕೂ ಕಾರಣವಾಗುವುದು ಎಂದು ಅವಶ್ಯವಾಗಿ ಅಂಗೀಕರಿಸಬೇಕು. ಕರ್ತೃತ್ವಾಭಿಮಾನ ತ್ಯಾಗವು ತತ್ವಜ್ಞಾನವಿಲ್ಲದವನಿಗೆ ಶಕ್ಯವಾಗುವುದಿಲ್ಲ. ಆದುದರಿಂದ ಈ ಪರಂಪರಾ ಕ್ರಮದಿಂದಲೂ ಕೂಡ ಸಂನ್ಯಾಸದ ಫಲಪ್ರಾಪ್ತಿಗೆ ಸಾಂಖ್ಯ ಸಹಾಯವು ಅತ್ಯವಶ್ಯಕವೆಂದು ನಿರ್ಣೀತವಾಗುವುದು. " ಸಾಂಖ್ಯವನ್ನು ಹೊಂದಿದವನು ಸ್ವಾತಂತ್ರ್ಯಾಭಿಮಾನರಹಿತನಾಗಿ ಕರ್ಮ ಫಲದಲ್ಲಿ ಸ್ನೇಹವನ್ನು ಮಾಡುವುದಿಲ್ಲವೆಂದೂ, ವಿವೇಕರಹಿತನಾದ ತತ್ವಜ್ಞಾನಶೂನ್ಯನು ಸ್ವಾತಂತ್ರ್ಯ ಭ್ರಮವನ್ನು ಹೊಂದಿ ಕರ್ಮ ಫಲದಲ್ಲಿ ಸಕ್ತನಾಗುವನೆಂದೂ ಶ್ರೀ ಕೃಷ್ಣನು ಹೇಳುತ್ತಾನೆ :—

**(8) ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।**
**ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥**
**ಪ್ರಕೃತೇರ್ಗುಣಸಂಮೂಢಾಃ ಸಜ್ಜಂತೇ ಗುಣಕರ್ಮಸು ।**

—(3. 28–29.)

ಎಲೈ ವೀರನೇ ! ಗುಣವಿಭಾಗಗಳನ್ನು ( ಎಂದರೆ ಕರ್ಮಕಾರಣವಾದ ಭಗವದಿಚ್ಛಾದಿ ಗುಣಗಳು, ಜೀವನ ಸ್ವಭಾವಾದಿಗಳು, ಪ್ರಕೃತಿ ಪರಿಣಾಮಗಳಾದ ಸತ್ವರಜಸ್ತಮೋಗುಣಗಳು, ಮತ್ತು ಅವುಗಳ ಕಾರ್ಯಗಳಾದ ದೇಹೇಂದ್ರಿಯ ಮನ ಆದಿಗಳು, ಈ ರೀತಿಯಾದ ವಿಭಾಗಗಳನ್ನು) ಮತ್ತು ಕರ್ಮ ವಿಭಾಗಗಳನ್ನು ( ಎಂದರೆ ಕರ್ಮ ಮಾಡುವುದರಲ್ಲಿ ಸ್ವತಂತ್ರ ಭಗವತ್ಕರ್ತೃತ್ವವು, ಅಸ್ವತಂತ್ರ ಜೀವ ಕರ್ತೃತ್ವವು ಇತ್ಯಾದಿ ಕರ್ಮ ವಿಭಾಗಗಳನ್ನೂ ) ತಿಳಿದಂಥ ತತ್ವಜ್ಞಾನಿಯಾದರೋ ಭಗವದ್ಗುಣಗಳಾದ ಇಚ್ಛಾದಿಗಳು ಅಪ್ರಧಾನವಾದ ಜೀವಸ್ವಭಾವ, ಇಂದ್ರಿಯಗಳು ಮತ್ತು ಕರ್ಮ ಇವುಗಳಲ್ಲಿ ಪ್ರೇರಕತನದಿಂದ ಇರುತ್ತವೆ ಎಂದು ತಿಳಿದು, ನಸಜ್ಜತೇ = ನಾನೇ ಸ್ವತಂತ್ರಕರ್ತನೆಂಬ ಅಭಿಮಾನವನ್ನು ಮಾಡುವುದಿಲ್ಲ. ಕರ್ಮ ಫಲದಲ್ಲಿ ಸ್ನೇಹವನ್ನು ಮಾಡುವುದಿಲ್ಲ. ಪ್ರಕೃತಿ ಗುಣಗಳಿಂದ ಸಂಮೂಢರಾದವರು ( ಎಂದರೆ

ಪ್ರಕೃತಿ ಗುಣಗಳಾದ ಸತ್ವರಜಸ್ತಮೋಗುಣಗಳಿಂದ ಬದ್ಧರಾಗಿ ಮೋಹಿತ ಜ್ಞಾನವುಳ್ಳಂಥವರು ) ಪ್ರಕೃತಿ ಗುಣ ಕರ್ಮಗಳಲ್ಲಿ ಎಂದರೆ ಪ್ರಕೃತಿ ಕಾರ್ಯಗಳಾದ ದೇಹೇಂದ್ರಿಯ ಮನ ಆದಿ ವಸ್ತುಗಳಲ್ಲಿ ಮತ್ತು ಶಬ್ದ ಸ್ಪರ್ಶ ರೂಪ ರಸ ಗಂಧಗಳೆಂಬ ವಿಷಯಗಳಲ್ಲಿ ಆಸಕ್ತರಾಗುತ್ತಾರೆ. ಮತ್ತು ತಾವು ಮಾಡತಕ್ಕ ಕರ್ಮಗಳಲ್ಲಿ ಸ್ವಾತಂತ್ರ್ಯ ಭ್ರಮದಿಂದ ಯುಕ್ತರಾಗುತ್ತಾರೆ ಮತ್ತು ಫಲಾಪೇಕ್ಷೆಯಿಂದ ಸಹಿತರಾಗುತ್ತಾರೆ.

ಸಂನ್ಯಾಸ, ಸಾಂಖ್ಯ, ಕರ್ಮಾನುಷ್ಠಾನಾದಿ ಸರ್ವಾಂಗಗಳಿಂದಲೂ ಸಮಗ್ರವಾದ ಕರ್ಮಯೋಗವೇ ಪರಮಾತ್ಮನ ಪ್ರಸಾದಕ್ಕೆ ಕಾರಣವಾಗುವುದು ಎಂದು ಪುನಃ ಪುನಃ ಎಚ್ಚರಿಸಿ ಶ್ರೀ ಕೃಷ್ಣನು ಹೇಳಿರುತ್ತಾನೆ. ಏಕಾದಶಾಧ್ಯಾಯದ ಅಂತ್ಯ ಶ್ಲೋಕವು ಇದೇ ಪ್ರಮೇಯವನ್ನೇ ಸಂಗ್ರಹಿಸಿ ನಿರೂಪಿಸುತ್ತದೆ :—

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥**

—(11 55.)

ಎಲೈ ಪಾರ್ಥನೇ ! ಯಾವಾತನು ನನ್ನ ಪ್ರೀತ್ಯರ್ಥವಾದ ಕರ್ಮಗಳನ್ನು ಅನುಷ್ಠಾನ ಮಾಡುವವನಾಗಿ ನನ್ನನ್ನೇ ( ಶ್ರೀ ಕೃಷ್ಣನನ್ನೇ ) ಸರ್ವೋತ್ತಮನೆಂದು ತಿಳಿದವನಾಗಿ, ನನ್ನಲ್ಲಿ ಭಕ್ತಿಯುಳ್ಳವನಾಗಿ, ವಿಷಯ ಸ್ನೇಹರಹಿತನಾಗಿ ಸರ್ವ ಸತ್ಪುರುಷರ ವಿಷಯದಲ್ಲಿಯೂ ದ್ವೇಷರಹಿತನಾಗಿರುವನೋ ಅಂಥವನು ನನ್ನನ್ನು ಹೊಂದುತ್ತಾನೆ.

ಈ ವಾಕ್ಯದಲ್ಲಿ **ಮತ್ಕರ್ಮಕೃತ್** ಎಂದು ಹೇಳಿದುದರಿಂದ ಕರ್ಮಯೋಗವೂ ಮತ್ತು ಫಲತ್ಯಾಗವೂ, **ಮತ್ಪರಮಃ** ಎಂದು ಹೇಳಿರುವುದರಿಂದ ಸಾಂಖ್ಯ ನಾಮಕವಾದ ತೃತೀಯಾಂಶವೂ, **ಸಂಗವರ್ಜಿತಃ, ನಿರ್ವೈರ ಸರ್ವಭೂತೇಷು** ಎಂಬ ಶ್ಲೋಕ ಭಾಗದಿಂದ ಸಂನ್ಯಾಸವೆಂಬ ಚತುರ್ಥಾಂಶವೂ ಪರಮಾತ್ಮನ ಪ್ರಾಪ್ತಿ ಸಾಧಕವಾದ ಜ್ಞಾನೋಪಾಯಗಳೆಂದು ವರ್ಣಿಸಲ್ಪಟ್ಟಿರುವುವು. **ಮದ್ಭಕ್ತಃ** ಎಂಬ ಶ್ಲೋಕ ಭಾಗದಿಂದ ಈ ಯಾವತ್ತು ಸಾಧನೆಗಳು ಭಗವದ್ಭಕ್ತಿಯುಕ್ತವಾಗಿದ್ದರೇನೇ ಉತ್ತಮ ಫಲಪ್ರದವಾಗುವುವು, ಅನ್ಯಥಾ ನಿಷ್ಫಲವೇ ಎಂದು ಶ್ರೀ ಕೃಷ್ಣನು ಸೂಚಿಸಿರುತ್ತಾನೆ.

4. **ಪ್ರಶ್ನೆ**— ಸ್ವಾಮೀ ! ರಾಗಾದಿವರ್ಜನ ರೂಪವಾದ ಸಂನ್ಯಾಸಕ್ಕೆ ಗುರೂಪದಿಷ್ಟವಾದ ಸಾಂಖ್ಯವು ಅತ್ಯವಶ್ಯಕವೆಂದು ತಮ್ಮ ನಿರೂಪಣೆಯಿಂದ ನಿಶ್ಚಿತವಾಯಿತು. ಸಾಂಖ್ಯವಾದರೋ ಕಾಮಕ್ರೋಧರಹಿತನಾದ ಎಂದರೆ ಸಂನ್ಯಾಸವನ್ನು ಹೊಂದಿದ ಉತ್ತಮ ಅಧಿಕಾರಿಗೇ ಲಭಿಸುವುದು. ಯಾತಕ್ಕೆಂದರೆ ರಾಗಾದಿ ದೋಷಕಲ್ಮಷರಹಿತನಾದವನಿಗೆ ಭಗವತ್ತತ್ತ್ವವನ್ನು ಶ್ರವಣ ಮಾಡಬೇಕೆಂದು

ಶ್ರದ್ಧೆಯು ಬರುವುದು. "**ಶ್ರದ್ಧಾವಾನ್ ಲಭತೇ ಜ್ಞಾನಂ**" ಎಂದು ಶ್ರೀ ಕೃಷ್ಣನೂ ಹೇಳಿರುವನು. ಹೀಗೆ ಅನ್ಯೋನ್ಯಾಶ್ರಯವು ಪ್ರಾಪ್ತವಾಯಿತು. ಸಂನ್ಯಾಸವನ್ನು ಸಂಪಾದಿಸಿದ ಮೇಲೆ ಸಾಂಖ್ಯ ಪ್ರಾಪ್ತಿ, ಸಾಂಖ್ಯವುಳ್ಳವನಿಗೆ ವಿಷಯ ಕಾಮನಾರಾಹಿತ್ಯರೂಪವಾದ ಸಂನ್ಯಾಸವು ಎಂದು ಆಯಿತು. ಆದುದರಿಂದ ಇದನ್ನು ನಂಬುವುದು ಹೇಗೆ ?

**ಉತ್ತರ :— ಶ್ರೀ ಶ್ರೀಗಳವರು :—** ನಾವು ಪೂರ್ವದಲ್ಲಿಯೇ ನಿರೂಪಿಸಿರುತ್ತೇವೆ. ಜ್ಞಾನ ಭಕ್ತಿ ವಿರಕ್ತಿಗಳು ಮೂರೂ ಮಿಳಿತವಾಗಿಯೇ ಮೋಕ್ಷ ಫಲಕ್ಕೆ ಕಾರಣವಾಗುವುವು. ಆದರೂ ಪರಸ್ಪರ ಕಾರ್ಯಕಾರಣ ಭಾವವುಂಟು. ಜ್ಞಾನ ಬಂದರೆ ವಿಷಯ ವಿರಕ್ತಿ ಮತ್ತು ಭಗವಂತನಲ್ಲಿ ಭಕ್ತಿ; ಭಕ್ತಿಯಿದ್ದವನಿಗೆ ಜ್ಞಾನ ಪ್ರಾಪ್ತಿ, ವಿಷಯ ವೈರಾಗ್ಯ; ಇತ್ಯಾದಿ ರೀತಿಯಾಗಿ ಅನ್ಯೋನ್ಯಾಶ್ರಯಗಳು ಬಂದರೂ ಅದರ ಪರಿಹಾರ ಕ್ರಮವನ್ನು ನಾವು ನಿರೂಪಿಸಿದೆವು. ಅದರಂತೆ ಇಲ್ಲಿಯೂ ಕೂಡ ಸ್ವಭಾವಾನುಗುಣವಾದ ಸಾತ್ವಿಕವಾದ ಎಂದರೆ ಹೆಚ್ಚು.ವಿಷಯಾಕಾಂಕ್ಷೆಯಿಂದ ರಹಿತವಾದ ಮನಸ್ಸನ್ನು ಮುಕ್ತಿಯೋಗ್ಯ ಜೀವನು ಕರ್ಮ ಪರಿಪಾಕ ವಶದಿಂದ ಹೊಂದಿ, ಉತ್ತಮ ಗುರುಗಳಲ್ಲಿ ಭಗವತ್ಕಥಾ ಶ್ರವಣವನ್ನು ಮಾಡಿ ಸ್ವಲ್ಪ ಸಾಂಖ್ಯವನ್ನು ಸಂಪಾದಿಸುವನು. ಅದರಿಂದ ಪುನಃ ಅಭಿವೃದ್ಧವಾದ ಹರಿಭಕ್ತಿಯುಳ್ಳವನಾಗಿ ರಾಗಾದಿಗಳನ್ನು ಪರಿತ್ಯಜಿಸುವನು; ಕರ್ಮಾನುಷ್ಠಾನವನ್ನು ಅತಿ ಸಮೀಚೀನವಾದ ರೀತಿಯಲ್ಲಿ ಮಾಡುವನು. ಪುನಃ ಸಾಂಖ್ಯ ಸಂಪಾದನೆಯು, ಅದರಿಂದ ಸಂನ್ಯಾಸವೃದ್ಧಿ, ಅದರಿಂದ ಸಾಂಖ್ಯವೃದ್ಧಿ ಈ ರೀತಿಯಾಗಿ ಉಭಯವೂ ವೃದ್ಧಿಯಾಗುವುವು. ಜ್ಞಾನವೃದ್ಧಿಯಾದ ಹಾಗೆಲ್ಲಾ ಸಂನ್ಯಾಸವೃದ್ಧಿಯು ಎಂಬ ನಿಯಮವು ಇರುವುದರಿಂದಲೇ ಅಪರೋಕ್ಷ ಜ್ಞಾನಿಗೆ ಏನು ಲಕ್ಷಣವೆಂದು ಅರ್ಜುನನು ಕೇಳಿದ ಪ್ರಶ್ನೆಗೆ ಶ್ರೀ ಕೃಷ್ಣನು ಪ್ರಾಯೇಣ ಸರ್ವ ಕಾಮರಾಹಿತ್ಯವು ಜ್ಞಾನಿ ಲಕ್ಷಣವೆಂದು ದ್ವಿತೀಯಾಧ್ಯಾಯದಲ್ಲಿ:ನಿರೂಪಿಸಿದನು :—

(1) **ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥**
—(2. 55.)

ಇದೇ ಮುಂತಾದ ಶ್ಲೋಕಗಳು ಪೂರ್ವದಲ್ಲಿಯೇ ವ್ಯಾಖ್ಯಾತವಾಗಿರುವುವು. ಆದುದರಿಂದಲೇ ದ್ವಾದಶಾಧ್ಯಾಯದಲ್ಲಿ ಜ್ಞಾನಿಯಾದ ವಿಷ್ಣುಭಕ್ತನು ಸರ್ವ ಕಾಮಗಳನ್ನೂ ಸಂಪೂರ್ಣವಾಗಿ ತ್ಯಜಿಸಿರುವನೆಂದು ಶ್ರೀ ಕೃಷ್ಣನು "**ಅದ್ವೇಷ್ಟಾ ಸರ್ವಭೂತಾನಾಂ**" "**ಹರ್ಷಾಮರ್ಷಭಯೋದ್ವೇಗೈರ್ಮುಕ್ತಃ**" "**ಅನಪೇಕ್ಷಃ,**" "**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ**" ಇತ್ಯಾದಿ ವಚನಗಳಿಂದ ಸ್ತುತಿಸಿರುತ್ತಾನೆ. ಚತುರ್ದಶಾಧ್ಯಾಯದಲ್ಲಿಯೂ ಕೂಡ ಗುಣಾತೀತನಾದ ಜ್ಞಾನಿಯೇ ವಿಷಯೇಚ್ಛಾರಹಿತನಾದ ಸಂನ್ಯಾಸಿಯು ಎಂದು "**ಉದಾಸೀನ**

ವದಾಸೀನಃ" "ಸಮದುಃಖಸುಖಃ ಸ್ವಸ್ಥಃ" "ಮಾನಾಪಮಾನಯೋಃ ಸ್ತುಲ್ಯಃ" ಇತ್ಯಾದಿ ವಚನಗಳಿಂದ ಸ್ತುತಿಸಿರುತ್ತಾನೆ. ಆ ಶ್ಲೋಕಗಳೆಲ್ಲಾ ಉದಾಹೃತವಾಗಿರುವುವು.

5. **ಪ್ರಶ್ನೆ:—** ಗೊತ್ತಾಯಿತು ಮಹಾ ಸ್ವಾಮೀ! ಆದರೆ ಇಂಥ ಸಂನ್ಯಾಸವನ್ನು ನಾವು ಸಂಪಾದಿಸುವ ಕ್ರಮವು ಹೇಗೆ?

**ಉತ್ತರ:— ಶ್ರೀ ಶ್ರೀಗಳವರು:—** ಇಂದ್ರಿಯಗಳನ್ನು ವಿಷಯಗಳಲ್ಲಿ ಪ್ರವರ್ತಿಸದಂತೆ ನಿಗ್ರಹಿಸಿ, ಮನಸ್ಸಿನಲ್ಲಿ ನಿರೂಢವಾದ ಕಾಮವನ್ನು ತತ್ತ್ವಜ್ಞಾನದಿಂದ ಛೇದಿಸಬೇಕು. ಶ್ರೀ ಕೃಷ್ಣನು ಹೇಳುತ್ತಾನೆ:—

**(1) ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಂ॥**
**—(3. 41.)**

**ಏವಂ ಬುದ್ಧೇಃ ಪರಂ ಬುಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ॥**
—(3. 43.)

ಈ ಶ್ಲೋಕಾರ್ಥಗಳನ್ನು ಹಿಂದೆಯೇ ನಿರೂಪಿಸಿರುತ್ತೇವೆ. ಈ ವಾಕ್ಯಗಳಿಂದ ಇಂದ್ರಿಯ ಜಯದಿಂದ ಸಂನ್ಯಾಸವು ದೃಢವಾಗಿ ಜ್ಞಾನೋತ್ಪತ್ತಿಗೆ ಪ್ರಯೋಜಕವಾಗುವುದು ಎಂದು ಸಿದ್ಧವಾಗುವುದು.

6. **ಪ್ರಶ್ನೆ —** ಸ್ವಾಮೀ! ಇಂದ್ರಿಯ ಜಯವನ್ನು ಸಂಪಾದಿಸುವುದು ಹೇಗೆ?

**ಉತ್ತರ — ಶ್ರೀ ಶ್ರೀಗಳವರು:—** ಶ್ರೀ ಕೃಷ್ಣನು ಎರಡು ಮೂರು ಕಾರಣಗಳನ್ನು ನಿರೂಪಿಸಿರುತ್ತಾನೆ. 1. ಯದ್ಯಪಿ ಭಗವಂತನ ಚರಣಾರವಿಂದದಲ್ಲಿ ಶರಣಾಗತಿಪೂರ್ವಕವಾದ ಸಂತತ ಅವನ ಸ್ಮೃತಿಯಿಂದ ಸರ್ವವೂ ಲಭಿಸುವುದು. ಆದರೆ ಮದದಿಂದ ವಿಘೂರ್ಣಿತವಾದ, ಚಂಚಲವಾದ ಇಂದ್ರಿಯವುಳ್ಳವನಿಗೆ ಪರಮಾತ್ಮನನ್ನು ದೈನ್ಯದಿಂದ ಬೇಡುವಷ್ಟು ಮನಃಪ್ರಾವಣ್ಯವು ಕೂಡ ಬರಲಾರದು. ಆದುದರಿಂದ ಮದವೇರಿದ, ಆನೆಯನ್ನೂ ಕ್ರೂರವಾದ ಸಿಂಹವನ್ನೂ ಸ್ವಾಧೀನಪಡಿಸಿಕೊಳ್ಳುವ ಉದ್ದೇಶದಿಂದ ಆಹಾರವನ್ನು ಹಾಕದೆ ಅವುಗಳನ್ನು ಸ್ವಲ್ಪ ದಂಡಿಸಿ ಅವುಗಳ ಮದವು ಇಳಿದ ನಂತರ ಅವುಗಳಿಗೆ ವಿಹಿತ ಶಿಕ್ಷೆಯನ್ನು ಕಲಿಸುವ ಮೃಗಪ್ರದರ್ಶಕ (Circus Manager) ನಂತೆ, ಮೋಕ್ಷ ಪದವಿಯಲ್ಲಿ ಆರೂಢನಾಗಲು ಇಚ್ಛಿಸುವವನು ತನ್ನ ದೇಹದಲ್ಲಿರುವ ತಾಮಸ ಭಾವಗಳು ನಾಶವಾಗುವುದಕ್ಕೋಸ್ಕರ ನಿರಾಹಾರತ್ವಾದಿ ಮಹಾ ಪ್ರಯತ್ನಗಳನ್ನೂ ಮಾಡಬೇಕು. ಶ್ರೀ ಕೃಷ್ಣನು ಹೇಳುತ್ತಾನೆ:—

(1) **ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥**
—(2. 59.)

ಈ ಶ್ಲೋಕವು ಪೂರ್ವದಲ್ಲಿಯೇ ವ್ಯಾಖ್ಯಾತವಾಗಿರುವುದು.

2. ವಿಷಯಗಳಲ್ಲಿ ಪ್ರವರ್ತಿಸುವ ಇಂದ್ರಿಯಗಳನ್ನು ಪುನಃ ಪುನಃ ಹಿಂತಿರುಗಿಸಿ ಶುಭ ವಿಷಯಗಳಲ್ಲಿ ಪ್ರವರ್ತಿಸುವುದೆಂಬ ಪ್ರತ್ಯಾಹಾರವೂ, ಇಂದ್ರಿಯ ಜಯಕ್ಕೆ ಒಂದು ಕಾರಣವು. ಆದರೆ 3. ಪರಮಾತ್ಮನ ಸರ್ವೋತ್ತಮತ್ವ ಜ್ಞಾನ ಪೂರ್ವಕವಾಗಿ ಆತನ ಪ್ರೀತ್ಯರ್ಥವಾದ ಕರ್ಮಗಳನ್ನು ಮಾಡುತ್ತಾ ಪರಮಾತ್ಮನಲ್ಲಿ ಪುನಃ ಪುನಃ ಚಿತ್ತವೃತ್ತಿಯನ್ನು ಯೋಜಿಸುವುದೇ ಇಂದ್ರಿಯ ಜಯಕ್ಕೆ ಅತ್ಯುತ್ತಮ ಉಪಾಯವು. ಈ ಮೂರು ಉಪಾಯಗಳೂ ಸೋಪಾನ ಕ್ರಮದಿಂದಲಾದರೂ ಪ್ರಯೋಜಕವಾಗುವುವು. ಶ್ರೀ ಕೃಷ್ಣನು ಹೇಳುತ್ತಾನೆ :—

(2) **ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।**
**ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥**
**ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।**
**ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥**
—(2. 60–61.)

ಈ ಶ್ಲೋಕಗಳು ಪೂರ್ವದಲ್ಲಿಯೇ ವ್ಯಾಖ್ಯಾತವಾಗಿರುವುವು.

ಇದೇ ಕ್ರಮವನ್ನೇ ದ್ವಾದಶಾಧ್ಯಾಯದಲ್ಲಿ ಸ್ವಲ್ಪ ಪ್ರಕಾರಾಂತರವಾಗಿ ಶ್ರೀ ಕೃಷ್ಣನು ನಿರೂಪಿಸಿರುತ್ತಾನೆ. ಚಿತ್ತ ಸಮಾಧಾನವು (ಪರಮಾತ್ಮನಲ್ಲಿ ಸರ್ವೋತ್ತಮತ್ವ ಜ್ಞಾನಪೂರ್ವಕವಾದ ಮನೋಯೋಜನೆಯು) ಅಶಕ್ಯವಾದರೆ ಪ್ರತ್ಯಾಹಾರಾದಿ ಯತ್ನಗಳನ್ನು ಮಾಡಬೇಕು. ಅದೂ ಕಷ್ಟವಾದರೆ ಪರಮಾತ್ಮನ ಪ್ರೀತ್ಯರ್ಥವಾದ ಕರ್ಮಗಳು (ಮತ್ತು ನಿರಾಹಾರತ್ವಾದಿಗಳು) ಇವುಗಳಿಂದ ದೇಹವನ್ನು ಸ್ವಾಧೀನಪಡಿಸಿಕೊಂಡು ಇಂದ್ರಿಯ ಜಯಾದಿಗಳನ್ನು ಸಂಪಾದಿಸಿ ಮನೋಜಯವನ್ನು ಹೊಂದಬೇಕು ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ :—

(3) **ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಂ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥**
**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥**
—(12. 9–10.)

ಈ ಶ್ಲೋಕಗಳು ಈಗಾಗಲೇ ಹಿಂದೆ ವ್ಯಾಖ್ಯಾತವಾಗಿರುವುವು.

7. ಸಂನ್ಯಾಸಕ್ಕೆ ಕಾರಣವಾದ ಇಂದ್ರಿಯ ಜಯೋತ್ಪತ್ತಿಯಲ್ಲಿ ನಿರಾಹಾರತ್ವಾದಿ ಬಹು ಭೇದಭಿನ್ನವಾದ ಕರ್ಮಯೋಗವು ಹೇಗೆ ಕಾರಣವಾಗುವುದೆಂಬುದನ್ನು ವಿಶದವಾಗಿ ಮುಂದೆ ನಿರೂಪಿಸುವೆವು, ಪ್ರಕೃತದಲ್ಲಿ ಈ ಪ್ರಕರಣಾರ್ಥವನ್ನು ಸಂಗ್ರಹದಿಂದ ಪುನಃ ಪರಾಮರ್ಶೆ ಮಾಡಿ ಮನೋನಿಗ್ರಹದ ಅವಶ್ಯಕತೆಯನ್ನು ಕುರಿತು ಶ್ರೀ ಕೃಷ್ಣನು ಮಾಡಿರುವ ಉಪದೇಶವನ್ನು ಉದಾಹರಿಸಿ ಈ ವಿಷಯೋಪನ್ಯಾಸವನ್ನು ಉಪರಮ ಹೊಂದಿಸುವೆವು. 1. ರಾಗ-ದ್ವೇಷಾದಿ ಪರಿತ್ಯಾಗವು, ಕರ್ಮಾನುಷ್ಠಾನದಲ್ಲಿ ಸಂಕಲ್ಪ ಪರಿತ್ಯಾಗವು, ಕಾಮ್ಯ ಕರ್ಮಗಳನ್ನು ಸ್ವರೂಪೇಣ ತ್ಯಜಿಸುವುದು ಮತ್ತು ವಿಹಿತ ಕರ್ಮಾನುಷ್ಠಾನದಲ್ಲಿ ಫಲಾಪೇಕ್ಷಾರಾಹಿತ್ಯವು ಇವುಗಳೆಲ್ಲವೂ ಸಂನ್ಯಾಸ ಶಬ್ದಾರ್ಥವು. ಇವುಗಳನ್ನುಳ್ಳವನು ಸಂನ್ಯಾಸಿಯು. 2. ಕೇವಲ ಯತ್ಯಾಶ್ರಮವನ್ನು ಸ್ವೀಕರಿಸಿದವನೇ ಸಂನ್ಯಾಸಿಯಲ್ಲ. ಯತ್ಯಾಶ್ರಮವನ್ನು ಹೊಂದಿದವನಲ್ಲಿ ಮನೋಜಯವು ಅಧಿಕವಾಗಿ ಇರುವುದರಿಂದಲೂ, ಸ್ವರೂಪೇಣ ಕಾಮ್ಯ ಕರ್ಮಗಳನ್ನು ಆತನು ಬಿಟ್ಟಿರುವುದರಿಂದಲೂ ಯತಿಗೆ ವಿಶೇಷತಃ ಸಂನ್ಯಾಸಿ ಎಂಬ ಹೆಸರು ಸಲ್ಲುವುದು. ಆದರೆ ಗೀತೆಯಲ್ಲಿ ನಿರುಕ್ತವಾದ ರೀತಿಯಲ್ಲಿ ವಸಿಷ್ಠಾದಿ ಗೃಹಸ್ಥರೂ, ವಿಷಯಾಸಕ್ತಿರಹಿತವಾದ ಬ್ರಹ್ಮಚಾರಿಗಳೂ ಸಂನ್ಯಾಸಿಗಳೇ. 3. ಸ್ವರೂಪೇಣ ಕರ್ಮ ಪರಿತ್ಯಾಗವು ಸಂನ್ಯಾಸವಲ್ಲ. ಅದು ತಾಮಸ ಕಾರ್ಯವೆಂದು ಗೀತೆಯಲ್ಲಿ ಸ್ಪಷ್ಟ ವಚನಗಳು ಅನಂತವಾಗಿರುತ್ತವೆ. ಕರ್ಮ ಪರಿತ್ಯಾಗ ರೂಪವಾದ ಸಂನ್ಯಾಸವು ಕೃಷ್ಣನಿಂದ ಧಿಕ್ಕೃತವಾದ ತಮಸ್ಸನ್ನು ಹೊಂದಿಸತಕ್ಕ ಪಾಪಮೂಲವಾದ ವಾದವೆಂದು ಗೀತಾರ್ಥಜ್ಞರು ನಿಶ್ಚಯಿಸುವರು. 4. ವಿಹಿತ ಕರ್ಮಾನುಷ್ಠಾನದಲ್ಲಿ ಫಲಾಪೇಕ್ಷಾರಹಿತರಾಗಿರೋಣವೆಂಬ ಶ್ರೀ ಕೃಷ್ಣನಿಗೆ ಪ್ರಿಯವಾದ ಸಂನ್ಯಾಸವೂ ಕೂಡ ಕೇವಲವಾಗಿ ಫಲ ಕೊಡಲಾರದು; ಎಂದರೆ ಕರ್ಮಾನುಷ್ಠಾನ, ಸಾಂಖ್ಯ, ಕರ್ಮಫಲ ತ್ಯಾಗವೆಂಬ ಇತರ ಅಂಶಗಳಿಂದ ಸಹಿತವಾಗಿಯೇ ಧ್ಯಾನಾದಿಗಳಿಗೆ ಕಾರಣವಾಗಿ ಅಪರೋಕ್ಷ ಜ್ಞಾನಕ್ಕೆ ಕಾರಣವಾಗುವುದು. 5. ಅನಂತರವೂ ಜ್ಞಾನೋತ್ಪತ್ತಿಯಾದ ನಂತರ ನಾಶವನ್ನು ಹೊಂದದೆ ಮತ್ತಷ್ಟು ಊರ್ಜಿತವಾಗಿ ಜ್ಞಾನಿಯ ಲಕ್ಷಣವಾಗಿಯೇ ಉಳಿದಿರುವುದು. **“ಅಪೂರ್ಯಮಾಣಮಚಲಪ್ರತಿಷ್ಠಂ”** ಇತ್ಯಾದಿ ಶ್ಲೋಕೋಕ್ತ ರೀತಿಯಲ್ಲಿ ಪ್ರಾಯೇಣ ಸರ್ವ ಕಾಮರಾಹಿತ್ಯವು ಜ್ಞಾನಿಗಳ ಲಕ್ಷಣವು. ಇದು ಜ್ಞಾನಿಗಳಲ್ಲಿ ಸ್ವಾಭಾವಿಕವು. 6. ಮುಮುಕ್ಷುಗಳಾದ ಅಜ್ಞರಿಗೆ ಇಂಥ ಸಂನ್ಯಾಸವು ತತ್ವಜ್ಞಾನದಿಂದ ಅಧಿಕವಾಗಿ ಬರುವುದು. 7. ತತ್ವಜ್ಞಾನವು ಬರುವುದಕ್ಕಿಂತ ಪೂರ್ವದಶೆಯಲ್ಲಿಯೂ ಸಹ ಪರಮಾತ್ಮನ ಪಾದದಲ್ಲಿ ಆತನ ಸರ್ವೋತ್ತಮತ್ವ ಜ್ಞಾನಪೂರ್ವಕವಾಗಿ ಮನಸ್ಸಮರ್ಪಣೆಯಿಂದಲೂ, ಪ್ರತ್ಯಾಹಾರಾದಿ ಪ್ರಯತ್ನ ವಿಶೇಷದಿಂದಲೂ, ನಿರಾಹಾರತ್ವ, ತೀರ್ಥಯಾತ್ರಾದಿ ಉಪಾಯ ವಿಶೇಷಗಳಿಂದಲೂ ಸಂಪಾದಿಸಿದ ಇಂದ್ರಿಯ ಜಯದಿಂದ ಮನಃಪ್ರಸಾದವನ್ನು ಸಾಧ್ಯವಾದಷ್ಟುಮಟ್ಟಿಗೆ ಹೊಂದಿ, ಬ್ರಹ್ಮ ವಿಚಾರದಿಂದ ಶಾಸ್ತ್ರಜ್ಞಾನವನ್ನು ಸಂಪಾದಿಸಿದ ನಂತರ ಪೂರ್ಣವಾದ ನಿಷ್ಕಾಮತ್ವರೂಪವಾದ

ಸಂನ್ಯಾಸವನ್ನು ಸಂಪಾದಿಸಬಹುದು. 8. ಇಂಥ ಉತ್ತಮವಾದ ಧರ್ಮವನ್ನು ಮನಸ್ಸಿನಲ್ಲಿಟ್ಟುಕೊಂಡವನಿಗೆ ದ್ವಂದ್ವ ಸಹಿಷ್ಣುತ್ವಾದಿ ಮಹಾ ಗುಣಗಳು ಕರಗತ ವಾಗುವುವು. ಕರ್ಮಗಳು ಬಂಧಕವಾಗದೆ ಸಂಸಾರತಾರಕವಾದ ಬ್ರಹ್ಮವಿದ್ಯಾ ಪ್ರಾಪ್ತಿಯು ಸುಲಭವಾಗುವುದು. ಕರ್ಮಫಲಲೇಪಾಭಾವವೂ, ಕರ್ಮಕ್ಷಯವೂ, ಅಪರೋಕ್ಷ ಜ್ಞಾನವೂ, ಮುಕ್ತಿಯೂ, ಪರಂಪರಯಾ ಸಂನ್ಯಾಸದಿಂದ ಪ್ರಾಪ್ತವಾಗ ತಕ್ಕ ಮಹತ್ಫಲಗಳು. 9. ಹೀಗಿದ್ದರೂ ಇದು ಕರ್ಮಯೋಗರಹಿತವಾಗಿದ್ದರೆ, ನರಕಾದ್ಯನರ್ಥಗಳಿಗೇ ಕಾರಣವಾಗುವುದು. 10. ಸಂನ್ಯಾಸವು ಕರ್ಮಯೋಗಕ್ಕೆ ಫಲರೂಪವಾಗಿರುವುದಲ್ಲದೆ, ಕರ್ಮಯೋಗ ಸಾಚಿವ್ಯವನ್ನು ಹೊಂದಿದರೆ, ಮಾಡಿದ ಕರ್ಮ ಫಲದಲ್ಲಿ ಅತಿಶಯವನ್ನು ಉತ್ಪತ್ತಿ ಮಾಡಿ, ಕ್ಷಿಪ್ರದಲ್ಲಿ ಬ್ರಹ್ಮ ದರ್ಶನವನ್ನು ಮಾಡಿಸುವುದು. 11. ಇಂಥ ಅವಶ್ಯ ಸಂಪಾದನೀಯವಾದ ಮುಮುಕ್ಷು ಜನ ಸಾಮಾನ್ಯವಾದ ಪರಮ ಧರ್ಮವು ಮುಕ್ತಿಯೋಗ್ಯರಲ್ಲಿ ಸ್ವಾಭಾವಿಕವಾಗಿಯೇ ಇದ್ದು ಸಾಧನೋಪದೇಶಾದಿಗಳಿಂದ ವೃದ್ಧಿಯನ್ನು ಹೊಂದುವುದು. 12. ಆಸುರೀ ಸಂಪತ್ತುಳ್ಳ ದುರ್ಜನರು ಈ ಪ್ರಕಾರವಾದ ಸಂನ್ಯಾಸರಹಿತರಾಗಿ, ಆಶಾಪಾಶ ಶತಗಳಿಂದ ಬದ್ಧವಾದ ದುಷ್ಟ ಹೃದಯದಿಂದ ವೇದವಿರುದ್ಧವಾದ ಉಗ್ರ ಕರ್ಮ ಗಳಲ್ಲಿ ನಿರತರಾಗಿ ಶ್ರೀ ಕೃಷ್ಣನನ್ನು ಯಾವ ಕಾಲಕ್ಕೂ ಹೊಂದದೆ ಅಧಮ ಗತಿ ಯನ್ನು ಹೊಂದುವರು.

ಸಂನ್ಯಾಸವನ್ನು ಸಂಪಾದಿಸದೇ ಆಲಸ್ಯದಿಂದ ಕಾಲವನ್ನು ಕಳೆಯುವವನಿಗೆ ಮಹದನರ್ಥವು ಇರುವುದರಿಂದಲೇ ಶ್ರೀ ಕೃಷ್ಣನು ಮನೋಜಯದ ಪ್ರಾಶಸ್ತ್ಯವನ್ನು ಕುರಿತು ಉಪದೇಶ ಮಾಡುತ್ತಾನೆ:—

**(1) ಉದ್ಧರೇದಾತ್ಮನಾಽಽತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥**
**ಬಂಧುರಾತ್ಮಾಽಽತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥**
**ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ॥**

—(6. 5–7)

"ಯಾವ ಕಾರಣದಿಂದ ಈ ಜೀವನಿಗೆ ಮನಸ್ಸೇ ಬಂಧುವಿನಂತೆ ಉಪ ಕಾರಿಯೂ, ಮನಸ್ಸೇ ಶತ್ರುವಿನಂತೆ ಅಪಕಾರಿಯೂ ಆಗಿರುವುದೋ, ಆ ಕಾರಣ ದಿಂದ ಅಧಿಕಾರಿಯು ತನ್ನನ್ನು (ಜೀವನನ್ನು) ತನ್ನ ಮನಸ್ಸಿನಿಂದಲೇ ಉದ್ಧಾರ ಮಾಡಿಕೊಳ್ಳಬೇಕು ಎಂದರೆ ಮನಸ್ಸನ್ನು ಬಂಧುವಿನಂತೆ ಉಪಕಾರಿಯನ್ನಾಗಿ ಮಾಡಿಕೊಂಡು ತನ್ನನ್ನು ಪುರುಷಾರ್ಥ ಪ್ರಾಪ್ತಿಗೆ ಅರ್ಹನನ್ನಾಗಿ ಮಾಡಿಕೊಳ್ಳ ಬೇಕು. ಮತ್ತು ತನ್ನನ್ನು ದುಃಖಭಾಜನನನ್ನಾಗಿ ಮಾಡಿಕೊಳ್ಳಬಾರದು, ಎಂದರೆ

ತನ್ನ ಮನಸ್ಸನ್ನು ಶತ್ರುವಿನಂತೆ ಅಪಕಾರಿಯನ್ನಾಗಿ ಮಾಡಿಕೊಂಡು ತನ್ನನ್ನು ದುರ್ಗತಿಗೆ ಪಾತ್ರನನ್ನಾಗಿ ಮಾಡಿಕೊಳ್ಳಬಾರದು.

"ಎಂತಹ ಜೀವನಿಗೆ ಎಂತಹ ಮನಸ್ಸು ಬಂಧುವಾಗುವುದು ಮತ್ತು ಎಂತಹ ಜೀವನಿಗೆ ಎಂತಹ ಮನಸ್ಸು ಶತ್ರುವಾಗುವುದು ಎಂಬುದನ್ನು ಶ್ರೀ ಕೃಷ್ಣನು ವಿವರಿಸುತ್ತಾನೆ :— ಯಾವ ಜೀವನಿಂದ ಮನಸ್ಸು ವಶೀಕೃತವಾಗಿರುವುದೋ ಅಂತಹ ಜೀವಾತ್ಮನಿಗೆ ಆತನ ಮನಸ್ಸು ಬಂಧುವಿನಂತೆ ಧ್ಯಾನೋಪಕಾರಿಯಾಗಿರುವುದು. ಮನೋಜಯ ರಹಿತನಾದವನಿಗೆ ಆತನ ಮನಸ್ಸೇ ಶತ್ರುವಿನಂತೆ ಅಪಕಾರಿಯಾಗುವುದು, ಎಂದರೆ ಭಗವದ್ಧ್ಯಾನೋಪಯೋಗಿಯಾಗದೆ ವಿಷಯಧ್ಯಾನೋಪಯೋಗಿಯಾಗಿ ನರಕಾದ್ಯನರ್ಥಗಳನ್ನು ಹೊಂದಿಸುವುದು.

"ವಶೀಕೃತ ಮನಸ್ಸುಳ್ಳವನಿಗಾದರೋ ಪ್ರಶಾಂತಿಯು ಎಂದರೆ ವಿಷಯಗಳಲ್ಲಿ ಪ್ರವರ್ತಿಸದೇ ಇರುವ ಮನಃ ಪ್ರಸಾದವು ( ಸಂನ್ಯಾಸವು ) ಬರುವುದು. ಪರಮಾತ್ಮನು ಪ್ರಶಾಂತನ ಹೃದಯದಲ್ಲಿ ಸನ್ನಿಹಿತನಾಗುತ್ತಾನೆ; ಎಂದರೆ ಧ್ಯಾನಕ್ಕೆ ಗೋಚರನಾಗಿ ದರ್ಶನವನ್ನು ಕೊಡುತ್ತಾನೆ."

8 **ಪ್ರಶ್ನೆ :—** ಸ್ವಾಮೀ ! ಮನೋಜಯವು ಅಸಾಧ್ಯವೆಂದು ನಮಗೆ ತೋರುವುದು.

**ಉತ್ತರ :— ಶ್ರೀ ಶ್ರೀಗಳವರು :—** ಜಗನ್ನಾಥನನ್ನು ಆಶ್ರಯಿಸದವರಿಗೆ ಎಲ್ಲವೂ ಅಸಾಧ್ಯವು. ಆದರೆ ಹರಿಪಾದದಲ್ಲಿ ವಿನಮ್ರವಾದ ಚಿತ್ತವುಳ್ಳ ಸಜ್ಜನರಿಗೆ ಯಾವುದು ತಾನೇ ಅಸಾಧ್ಯವು ? ಆದರೂ ಮನೋನಿಗ್ರಹವು ಸ್ವಲ್ಪ ಕಷ್ಟದಿಂದ ಸಂಪಾದನೀಯವಾಗಿರುವುದು. ಆದರೆ ಅಸಾಧ್ಯವಲ್ಲ ಶ್ರೀ ಕೃಷ್ಣಾರ್ಜುನರ ಪ್ರಶ್ನೋತ್ತರ ಪರಾಮರ್ಶದಿಂದ ಈ ವಿಷಯವು ಸುನಿಶ್ಚಿತವಾಗುವುದು :—

(1) **ಅರ್ಜುನ ಉವಾಚ :—**

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ ।**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ಸ್ಥಿತಿಂ ಸ್ಥಿರಾಂ ॥**
**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಂ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ ॥**

**ಶ್ರೀ ಭಗವಾನುವಾಚ :—**

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಂ ।**
**ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥**
**ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।**
**ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥**

—(6. 33–36.)

“ಅರ್ಜುನನು ಹೇಳುತ್ತಾನೆ :— ಎಲೈ ಮಧುಸೂದನನೇ! ಸರ್ವತ್ರ ವಾಸ ಮಾಡುವ ಭಗವಂತನನ್ನು ಅಭಿನ್ನನೆಂದು ತಿಳಿಯುವುದು, ಸುಖದುಃಖಾದಿ ದ್ವಂದ್ವ ಗಳಿಂದ ವಿಕಾರರಹಿತನಾಗಿರುವುದು, ತನ್ನಂತೆ ಇತರ ಭಗವದನುಯಾಯಿಗಳನ್ನು ತಿಳಿಯುವುದು ಇವೇ ಮೊದಲಾದ ಸಾಮ್ಯದೃಷ್ಟಿಯಿಂದ ಸಹಿತವಾದ ಯಾವ ಧ್ಯಾನ ಯೋಗವು ನಿನ್ನಿಂದ ಉಪದಿಷ್ಟವಾಯಿತೋ ಇಂಥ ಯೋಗಕ್ಕೆ ಮನಸ್ಸು ಚಂಚಲ ವಾಗಿರುವುದರಿಂದ ದೃಢವಾದ ಸ್ಥಿತಿಯನ್ನು ನಾನು ಕಾಣೆನು (ಎಂದರೆ ಸರ್ವರ ಮನಸ್ಸೂ ಚಂಚಲವಾಗಿರುವುದರಿಂದ ಇಂಥ ಧ್ಯಾನಯೋಗವನ್ನು ಹೊಂದುವುದು ಅಸಾಧ್ಯವು ಎಂದು ಭಾವವು) ಹೇ ಕೃಷ್ಣ! ಮನಸ್ಸು ಚಂಚಲವು, ದೇಹೇಂದ್ರಿಯ ಗಳಿಗೆ ಕ್ಷೋಭವನ್ನು ಉಂಟು ಮಾಡತಕ್ಕದ್ದು, ಜ್ಞಾನದಿಂದಲೂ ಜಯಿಸುವುದಕ್ಕೆ ಅಶಕ್ಯವು. ಅನಾದಿ ವಿಷಯವಾಸನಾ ಸಂಬಂಧದಿಂದ ವಿಷಯಗಳಲ್ಲಿ ಊರಿ ನಿಂತಿರು ವುದು. ಆದುದರಿಂದ ಆಕಾಶದಲ್ಲಿ ಓಡುವ ಗಾಳಿಯನ್ನು ವಸ್ತ್ರಕುಂಭಾದಿಗಳಿಂದ ಹೇಗೆ ನಿರೋಧ ಮಾಡುವುದು ಅಶಕ್ಯವೋ ಹಾಗೆಯೇ ಮನಸ್ಸನ್ನು ನಿಗ್ರಹ ಮಾಡು ವುದು ಅಸಾಧ್ಯವೆಂದು ತಿಳಿದಿರುತ್ತೇನೆ.”

ಶ್ರೀ ಕೃಷ್ಣನು ಹೇಳುತ್ತಾನೆ:— ಎಲೈ ಮಹಾಬಾಹುವೇ! ಮನಸ್ಸು ಸ್ವಾಭಾವಿಕವಾಗಿ ಚಂಚಲವು ಮತ್ತು ಕಷ್ಟದಿಂದ ಜಯಿಸುವುದಕ್ಕೆ ಶಕ್ಯವಾದುದು. ಈ ವಿಷಯದಲ್ಲಿ ಸಂಶಯವಿಲ್ಲ. ಆದರೆ ವೈರಾಗ್ಯದಿಂದಲೂ (ಎಂದರೆ ವಿಷಯ ಗಳಲ್ಲಿ ಅಲ್ಪತ್ವ, ಅಸ್ಥಿರತ್ವ, ಅಸಾರತಾ ನಿಶ್ಚಯದಿಂದ ಜನಿತವಾದ ಜಿಹಾಸೆ-ಯಿಂದಲೂ), ಮತ್ತು ಅಭ್ಯಾಸದಿಂದಲೂ ಎಂದರೆ ವಿಷಯಗಳಲ್ಲಿ ಪ್ರವರ್ತಿಸಿದ ಇಂದ್ರಿಯಗಳನ್ನೂ, ಚಿತ್ತವೃತ್ತಿಗಳನ್ನೂ ಪುನಃ ಪುನಃ ಹಿಂತಿರುಗಿಸಿಕೊಂಡು ಬಂದು ಶುಭ ವಿಷಯಗಳಲ್ಲಿ ಇಡುವುದೆಂಬ (ಪ್ರತ್ಯಾಹಾರಾದಿ) ಪ್ರಯತ್ನಗಳ ಅಭ್ಯಾಸ ದಿಂದಲೂ ಶಾಸ್ತ್ರಾವೃತ್ತಿರೂಪವಾದ ಅಭ್ಯಾಸದಿಂದಲೂ **ಗೃಹ್ಯತೇತಂ = ನಿಶ್ಚಯ** ವಾಗಿಯೂ ನಿಗ್ರಹಿಸಲ್ಪಡುತ್ತದೆ. ಅಭ್ಯಾಸಾದಿಗಳಿಂದ ಅವಶೀಕೃತವಾದ ಮನಸ್ಸು ಳ್ಳವನಿಗೆ ಧ್ಯಾನಯೋಗವು ಅಸಾಧ್ಯವೆಂದು ನನ್ನ ನಿಶ್ಚಯವು. ಅಭ್ಯಾಸ ವೈರಾ ಗ್ಯಾದಿಗಳಿಂದ ಮನೋಜಯವನ್ನು ಹೊಂದಿದವನಿಗೆ ಧ್ಯಾನಯೋಗವು ಉಪಾಯ ದಿಂದ ಸಂಪಾದಿಸುವುದಕ್ಕೆ ಸಾಧ್ಯವಾಗುವುದು.”

**9.** ಮನೋಜಯವು ಉಪಾಯವುಳ್ಳವನಿಗೆ ಸಾಧ್ಯವೆಂದು ಶ್ರೀ ಕೃಷ್ಣನು ಹೇಳಿರುವನು. ಮನೋಜಯವುಳ್ಳವನಿಗೆ ಧ್ಯಾನಯೋಗವು ಸಾಧ್ಯವೆಂದೂ ಶ್ರೀ ಕೃಷ್ಣನು ಹೇಳಿರುವನು. ಆದುದರಿಂದ ವಿವೇಕಿಯಾದ ಪುರುಷನು ಜನನ ಮರಣ ಜರಾ ವ್ಯಾಧ್ಯಾದಿ ಅನಂತ ಪೀಡೆಗಳಿಂದ ಪರಿಪ್ಲುತವಾದ, ಅಲ್ಪವೂ, ಅಸ್ಥಿರವೂ, ಚಂಚಲವೂ, ಅಸಾರಭೂತವೂ ಆದ ಗ್ರಾಮ್ಯ ವಿಷಯಭೋಗದ ಅಪೇಕ್ಷೆಯಿಂದ ದಗ್ಧಹೃದಯವುಳ್ಳವರಾಗಿ ನಾನಾ ದುರ್ಯೋನಿಗಳಲ್ಲಿ ಭ್ರಮಿಸುತ್ತಿರುವ ಭ್ರಷ್ಟ ಜನ **ಸಂಘ**ವನ್ನು ನೋಡಿ, ಪ್ರಾಪಂಚಿಕವಾದ ದಾರಾ, ಪುತ್ರ, ಮಿತ್ರ, ಗೃಹ, ಧನ, ಧಾನ್ಯಾದಿ ನಿಮಿತ್ತಕವಾದ ಸುಖಭೋಗದಲ್ಲಿ ಜಿಹಾಸೆಯನ್ನು ಹೊಂದಬೇಕು.

ಅನಿತ್ಯವೂ ಅಲ್ಪ ಸುಖವುಳ್ಳದ್ದೂ ಆದ ಈ ಪ್ರಪಂಚದಲ್ಲಿ ನಮ್ಮ ಮನೋನಯನಗಳನ್ನು ಯಾವುದರಲ್ಲಿ ಸರ್ವ ಪ್ರಕಾರವಾಗಿ ಇಟ್ಟು ತೃಪ್ತಚಿತ್ತರಾಗಬಹುದು? ವೀರ್ಯ, ಶೌರ್ಯ, ಔದಾರ್ಯಗಳಿಗೆ ನೆಲೆಯಾದ ದಿವ್ಯ ವಸ್ತುವು ಈ ಲೋಕದಲ್ಲಿ ಯಾವುದೂ ಇಲ್ಲ ತೇಜೋಲಾವಣ್ಯಗಳಿಗೆ ಆಕರವಾದ ದಿವ್ಯ ಸುಂದರ ವಿಗ್ರಹವು ಯಾವುದೂ ಭೂಲೋಕದಲ್ಲಿ ಇಲ್ಲ. ಪ್ರಪಂಚದಲ್ಲಿ ಎಲ್ಲಿ ನೋಡಿದರೂ ಮಲಮೂತ್ರ ಕೀವು ರಕ್ತ ಎಲುಬುಗಳಿಂದ ತುಂಬಿದ ಚರ್ಮಮಯದ ಹೊದ್ದಿಕೆಯುಳ್ಳ ಗೊಂಬೆಗಳು ಕಾಣುತ್ತಿರುವುವು. ಮನುಷ್ಯ ದೇಹವು ಅಸ್ಥಿರವು, ಬಹು ವ್ಯಾಧಿಗಳಿಗೆ ಆಸ್ಪದವಾದುದು. ದಾರಾ ಪುತ್ರ ಮಿತ್ರಾದಿಗಳು ಸ್ವಸ್ವಪ್ರಯೋಜನಾರ್ಥವಾಗಿ ಪ್ರೀತಿ ಮಾಡುವರೇ ಹೊರತು ಯಾರೂ ನಿರುಪಾಧಿಕ ಬಂಧುಗಳಲ್ಲ. ಆದುದರಿಂದ ಅಸತ್ಕಲ್ಪವಾದ ಪ್ರಾಪಂಚಿಕ ಸುಖವನ್ನು ಕೋರಿ ತದರ್ಥವಾಗಿ ಕಾಮ್ಯಕರ್ಮವನ್ನು ಮಾಡುವವನು ಮಂದನೇ. ಸ್ವರ್ಗಾದಿಗಳೂ ಸಹ ಅಸ್ಥಿರ ಲೋಕಗಳು. ಸಂಪಾದಿಸಿದ ಪುಣ್ಯಕ್ಷಯವು ಆದ ನಂತರ ದೇವತೆಗಳಿಂದ ದಬ್ಬಲ್ಪಟ್ಟು ನಾವು ಹೋದ ದಾರಿಯಲ್ಲೋ, ಅಥವಾ ಎಂದೂ ಕಾಣದ ಬೇರೆ ದಾರಿಯಿಂದಲೋ ದಿಗ್ಭ್ರಾಂತರಾಗಿ ಪುನಃ ಭೂಲೋಕಕ್ಕೆ ಬರಬೇಕಾಗುವುದು. ಇನ್ನೂ ದುಷ್ಕಾಮಗಳಿಗೆ ವಶನಾಗಿ ವಿರುದ್ಧ ಕರ್ಮಗಳನ್ನು ಮಾಡುವವನು ಘೋರ ನರಕಗಳನ್ನು ಹೊಂದಿ ಅಲ್ಲಿಂದ ಮರಳಿ ಭೂಮಿಗೆ ಬಂದರೆ ಕೀಟ, ಪಶು, ಪಕ್ಷ್ಯಾದಿಗಳ ದಾರುಣವಾದ ಗರ್ಭವಾಸವನ್ನು ಹೊಂದಿ ನಾನಾ ಯೋನಿಗಳಲ್ಲಿ ಹುಟ್ಟಬೇಕಾಗುವುದು.* ಆದುದರಿಂದಲೇ ಶ್ರೀ ಕೃಷ್ಣನು ಪುನಃ ಪುನಃ ಕಾಮಾದಿಗಳನ್ನು ಜಯಿಸಬೇಕೆಂದೂ, ಪರಮಾತ್ಮನಲ್ಲಿ ಶರಣಾಗತನಾಗಿ ಸುಕೃತ ದುಷ್ಕೃತಗಳಿಗೆ ಕಾರಣವಾದ ಕಾಮ್ಯಕರ್ಮಗಳನ್ನು ಪರಿತ್ಯಾಗ ಮಾಡಬೇಕೆಂದೂ,

**(1) ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥***
—(5-23.)

---

*ಸಮುದ್ರದಲ್ಲಿ ಮುಳುಗಿ ಮುತ್ತುಗಳನ್ನೂ, ರತ್ನಗಳನ್ನೂ ಹೊರಗೆ ತರುವಂತೆ ಶ್ರೀಪಾದಂಗಳವರು ಸಕಲ ಶಾಸ್ತ್ರದಲ್ಲಿರುವ ಸಾರತಮವಾದ ಅಭಿಪ್ರಾಯ ಮಣಿಗಳನ್ನು ಸಜ್ಜನರ ಅನುಗ್ರಹಾರ್ಥವಾಗಿ ಹೊರಗೆ ಚೆಲ್ಲುತ್ತಿರುವರು. ಆದುದರಿಂದ ಮೋಕ್ಷಾರ್ಥಿಗಳಾದ ವೈಷ್ಣವ ವಾಚಕರು ಯಥಾಶಕ್ತಿ ಭಕ್ತಿ ವಿರಕ್ತಿಗಳಿಂದ ಸಹಿತವಾಗಿ ಈಶ್ವರ ಪ್ರೀತಿಕರವಾದ ವಿಧ್ಯುಕ್ತ ಕರ್ಮಗಳನ್ನು ಅನುಷ್ಠಾನ ಮಾಡಬೇಕು. ಯಾತಕ್ಕೆಂದರೆ ಅನ್ಯತಕ್ಕೆ ತವರು ಮನೆಯಾದ ಅದ್ವೈತ ಮತದಲ್ಲಿ ಮಾತ್ರ ಬೇಕಾದಂತೆ ವರ್ತಿಸಿದರೂ ಬಾಧಕವಿಲ್ಲ. ಅದ್ವೈತ ಮತದಲ್ಲಿ ಪತ್ನ್ಯಾದಿ ಭೋಗದಿಂದ ಉತ್ಪನ್ನವಾಗುವ ಸುಖವೆಲ್ಲವೂ ಬ್ರಹ್ಮಾನಂದವೇ ಎಂದು ಕೆಲವರು ಸಿದ್ಧಾಂತವನ್ನು ಮಾಡಿರುವರು. ಆದುದರಿಂದ ಆ ಮತದ ರೀತ್ಯಾ ಭೋಗ್ಯ ದ್ರವ್ಯಗಳನ್ನು ವೃದ್ಧಿ ಮಾಡಿಕೊಂಡು ನಿರಂತರ ಸುಖಾನುಭವದಲ್ಲಿ ಮಗ್ನನಾದರೆ ಬೇಡವೆನ್ನುವರು ಯಾರೂ ಇಲ್ಲ. ಶ್ರೀ ಕೃಷ್ಣನು ಮಾತ್ರ ಇಂಥ ವಿಷಯ ಸುಖಗಳೆಲ್ಲವೂ ರಾಜಸತಾಮಸಗಳೆಂದು ಹದಿನೆಂಟನೆಯ ಅಧ್ಯಾಯದಲ್ಲಿ ನಿರೂಪಿಸಿರುತ್ತಾನೆ. ಆದುದರಿಂದ ವಿಷಯಭೋಗವು ಅನರ್ಥಕರವೆಂದು ತಿಳಿದು ತಮ್ಮ ಸರ್ವಸ್ವವನ್ನೂ ಬ್ರಾಹ್ಮಣರಲ್ಲಿ ಭಗವದರ್ಪಣೆ ಮಾಡಿ ಪ್ರಾಚೀನರು ಭಗವದುಪಾಸನೆಯಲ್ಲಿ ತತ್ಪರರಾದರು.

**ಅರ್ಥ :—** ಎಲೈ ಪಾರ್ಥನೆ ! ಯಾವಾತನು ಈ ಮಾನುಷ ದೇಹದಲ್ಲಿಯೇ ಶರೀರ ತ್ಯಾಗರೂಪವಾದ ಮರಣಕ್ಕಿಂತ ಪೂರ್ವದಲ್ಲಿಯೇ ಕಾಮಕ್ರೋಧಾದಿಗಳಿಂದ ಉತ್ಪನ್ನವಾದ ವೇಗವನ್ನು ( ಮನಸ್ಸಿನ ಮತ್ತು ಇಂದ್ರಿಯಗಳ ಚಾಂಚಲ್ಯವನ್ನು ) ಸಹಿಸುವುದಕ್ಕೆ ಸಮರ್ಥನಾಗುತ್ತಾನೆಯೋ ಆತನೇ ಜ್ಞಾನೋಪಾಯವುಳ್ಳ ಅಧಿಕಾರಿಯು; ಆತನೇ ಸುಖವನ್ನು ಹೊಂದುವ ಪುರುಷನು.

ಇತ್ಯಾದಿ ಅನೇಕ ಶ್ಲೋಕಗಳಲ್ಲಿ ಬೋಧಿಸಿರುವನು. ಮತ್ತು ವಿಷಯಗಳಿಂದ ಪ್ರತ್ಯಾಹೃತವಾದ ಯಾವತ್ತೂ ಮನಸ್ಸನ್ನು ತನ್ನಲ್ಲಿ ಇಡಬೇಕೆಂದು

**(2) ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಂ ॥**

—(9. 33.)

( ಈ ವಾಕ್ಯವು ಈಗಾಗಲೇ ಹಿಂದೆ ವ್ಯಾಖ್ಯಾತವಾಗಿದೆ. )

ಎಂದು ಪ್ರಿಯನಾದ ಅರ್ಜುನನನ್ನು ನಿಮಿತ್ತ ಮಾಡಿ ಸಕಲ ಮುಮುಕ್ಷುಗಳಿಗೂ ಉಪದೇಶ ಮಾಡಿರುತ್ತಾನೆ. ಆದುದರಿಂದ ಯಾವಾತನ ಪಾದಾರವಿಂದದಲ್ಲಿ ಶರಣಾಗತನಾಗುವುದರಿಂದ ಭಯಂಕರವಾದ ಸಂಸಾರಮೃತ್ಯುವು ಪಲಾಯನವನ್ನು ಹೊಂದುವುದೋ, ಅಂಥ ನಿರಸ್ತದೋಷನಾದ ಅನಂತ ಗುಣಗಳಿಂದ ಪೂರ್ಣನಾದ ಜಗನ್ನಾಥನನ್ನು ದುಷ್ಟ ವಿಷಯಗಳಿಂದ ಭೀತರಾಗಿ ಅಂತರ್ಮುಖವಾದ ಮನೋ ಇಂದ್ರಿಯದಿಂದ ಧ್ಯಾನ ಮಾಡಿ, ಆತನ ಪ್ರಸಾದಕ್ಕೆ ಪಾತ್ರರಾಗಿ ಜ್ಞಾನ ದ್ವಾರಾ ಯಾವ ಕಾಲದಲ್ಲಿಯೂ ಯಾವ ಕಾರಣದಿಂದಲೂ ನಾಶ ಹೊಂದದ ಸ್ವರೂಪಭೂತವಾದ ನಿತ್ಯಾನಂದದ ಅಭಿವ್ಯಕ್ತಿಯನ್ನು ಹೊಂದುವುದಕ್ಕೆ ಯತ್ನಿಸಬೇಕೆಂಬುದು ಶ್ರೀ ಕೃಷ್ಣನಿಗೆ ಸಮ್ಮತವಾದ ಉಪದೇಶವೆಂದು ನಾವು ನಿರೂಪಿಸಿರುತ್ತೇವೆ.

---

# 15. ಹದಿನೈದನೆಯ ಅಂಶವು.

## ಕರ್ಮಾನುಷ್ಠಾನಸ್ವರೂಪವು.

**1. ಶ್ರೀ ಶ್ರೀಗಳವರು:—** ಇನ್ನು ಧ್ಯಾನಕಾರಣವಾದ ಕರ್ಮಯೋಗದಲ್ಲಿ ಒಂದು ಅಂಶವಾದ ಕರ್ಮಾನುಷ್ಠಾನದ ಸ್ವರೂಪವನ್ನು ಶ್ರೀ ಕೃಷ್ಣನ ವಾಕ್ಯಗಳಿಂದಲೇ ನಿರೂಪಿಸುತ್ತೇವೆ. ಮತ್ತು ಕರ್ಮಾನುಷ್ಠಾನವು ಜ್ಞಾನೋತ್ಪತ್ತಿಯಲ್ಲಿ ಹೇಗೆ ಪ್ರಯೋಜಕವಾಗುವುದು ಎಂಬ ನಿಮ್ಮ ಪ್ರಶ್ನೆಗೂ ಉತ್ತರವನ್ನು ಕೊಡುತ್ತೇವೆ. ಜ್ಞಾನಕಾರಣವೆಂದು ಶ್ರೀ ಕೃಷ್ಣನಿಂದ ವಿವಕ್ಷಿತವಾದ ಕರ್ಮಾನುಷ್ಠಾನವೆಂದರೆ ಕರ್ಮೇಂದ್ರಿಯಗಳಿಂದ ಮಾಡಲ್ಪಟ್ಟ ಭಗವತ್ಪೂಜೆಯು ಎಂದರ್ಥವು. ಸ್ವಶಕ್ತ್ಯನುಸಾರವಾಗಿ ಸ್ವವರ್ಣಾಶ್ರಮೋಚಿತವಾದ ವೇದೋಕ್ತ ಕರ್ಮಗಳನ್ನು ಭಗವದಾರಾಧನರೂಪವಾಗಿ ಅನುಷ್ಠಾನ ಮಾಡುವುದೇ ಕರ್ಮಾನುಷ್ಠಾನವು. ಇದನ್ನೇ ಯೋಗವೆಂದೂ, ಕರ್ಮಯೋಗವೆಂದೂ ಶ್ರೀ ಕೃಷ್ಣನು ಅಲ್ಲಿ ಅಲ್ಲಿ ಕರೆದಿರುತ್ತಾನೆ. ಭಗವದರ್ಪಣ ಬುದ್ಧಿಯಿಂದ ಮಾಡಲ್ಪಡುವ ವಿಧ್ಯುಕ್ತಕರ್ಮವು ಸಾಂಖ್ಯ, ಸಂನ್ಯಾಸ, ತ್ಯಾಗಗಳಿಂದ ಸಹಿತವಾಗಿ ಧ್ಯಾನಕ್ಕೆ ಕಾರಣವಾಗುವುದು ಮತ್ತು ಅಪರೋಕ್ಷ ಜ್ಞಾನಕ್ಕೂ ಪ್ರಯೋಜಕವಾಗುವುದು. ಇಂಥ ಪ್ರಶಸ್ತ ಕರ್ಮಕ್ಕೆ ನಾಮಾಂತರವೂ ಉಂಟೆಂದು ಶ್ರೀ ಕೃಷ್ಣನು ಹೇಳುತ್ತಾನೆ :—

**(1) ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥**
**ಯಜ್ಞೇ ತಪಸಿ ದಾನೇ ಚ ಸ್ಥಿತಿಸ್ಸದಿತಿ ಚೋಚ್ಯತೇ ।**
**ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥**
—(17. 26–27.)

ಎಲೈ ಪಾರ್ಥನೇ ! ಶುಭಕರ್ಮದಲ್ಲಿಯೂ ಕೂಡ "**ಸತ್**" ಎಂಬ ಪದವು ಪ್ರಯೋಗಿಸಲ್ಪಡುತ್ತದೆ. ಜ್ಯೋತಿಷ್ಟೋಮ, ರಾಜಸೂಯ, ಅಶ್ವಮೇಧಾದಿಯಾಗಗಳಲ್ಲಿಯೂ, ಕೃಚ್ಛ್ರಚಾಂದ್ರಾಯಣಾದಿ ತಪಸ್ಸುಗಳಲ್ಲಿಯೂ, ದ್ರವ್ಯದಾನದಲ್ಲಿಯೂ **ಸ್ಥಿತಿಯು*** ಎಂದರೆ ಭಗವನ್ನಿಷ್ಠಾಬುದ್ಧಿಯೂ ಕೂಡ '**ಸತ್**' ಎಂಬ ಹೆಸರಿನಿಂದ ವ್ಯವಹರಿಸಲ್ಪಡುತ್ತದೆ. ಭಗವತ್ಪ್ರೀತಿಕರವಾದ ಕರ್ಮವೂ ಕೂಡ ಸತ್ ಎಂದೇ ಕರೆಯಲ್ಪಡುವುದು.

ಸನ್ನಾಮಕವಾದ, ಭಗವದರ್ಪಣ ಬುದ್ಧಿಯಿಂದ ಮಾಡಲ್ಪಟ್ಟ, ಕರ್ಮೇಂದ್ರಿಯ ವ್ಯಾಪಾರವು ತಪಸ್ಸೆಂದೂ ಕರೆಯಲ್ಪಡುವುದು. ವಿಹಿತ ಕರ್ಮಾನುಷ್ಠಾನವು

*ಅಶ್ವಮೇಧಾದಿ ಯಾಗಗಳನ್ನು ಮಾಡುವಾಗಲೂ, ಕೃಚ್ಛ್ರಚಾಂದ್ರಾಯಣಾದಿ ತಪಸ್ಸುಗಳನ್ನು ಆಚರಿಸುವಾಗಲೂ, ಉತ್ತಮ ಪಾತ್ರರಲ್ಲಿ ವಿಧ್ಯುಕ್ತ ರೀತಿಯಲ್ಲಿ ದಾನಾದಿಗಳನ್ನು ಅರ್ಪಿಸುವಾಗಲೂ ಭಗವಂತನಲ್ಲಿಯೇ ಇಡಲ್ಪಟ್ಟ ಚಿತ್ತವುಳ್ಳವನಾಗಿ ಈ ಆರಾಧನೆಗಳಿಂದ ಭಗವಂತನು ಸಂತುಷ್ಟನಾಗಿ ಫಲಪ್ರದನಾಗುವನೆಂಬ ಶ್ರದ್ಧಾವಿಶೇಷವು ಸ್ಥಿತಿಯೆನ್ನಿಸುವುದು.

ಶಾರೀರಕ ಮತ್ತು ವಾಚನಿಕ ತಪಸ್ಸಿನಲ್ಲಿ ಅಂತರ್ಭೂತವಾಗಿ ಶ್ರವಣಾದಿಗಳಿಗೆ ಕಾರಣವಾಗುವುದು.

ಆದಿ ಸೃಷ್ಟಿಯಲ್ಲಿ ಗಾಢಾಂಧಕಾರದಿಂದ ಆವೃತನಾಗಿ ಪ್ರಳಯೋದಕದಲ್ಲಿ ಸ್ಥಿತನಾದ ಪದ್ಮನಾಭ ದೇವರ ನಾಭಿಕಮಲದಿಂದ ಉತ್ಪನ್ನರಾದ ಚತುರ್ಮುಖ ಬ್ರಹ್ಮದೇವರು ತಾವು ಹುಟ್ಟಿದ ಮೂಲ ಸ್ಥಾನವನ್ನು ತಿಳಿಯಲಾರದೆ ನಾಲ್ಕು ದಿಕ್ಕುಗಳನ್ನೂ ನೋಡುತ್ತಿರಲು, "ತಪ" "ತಪ" ಎಂಬ ಭಗವಂತನ ಮುಖಕಮಲದಿಂದ ನಿಸ್ಸೃತವಾದ ಆಕಾಶವಾಣಿಯು ಕೇಳಲ್ಪಟ್ಟಿತು. ಅನಂತರ ಚತುರ್ಮುಖ ಬ್ರಹ್ಮದೇವರು ದಿವ್ಯ ಸಹಸ್ರ ವರ್ಷಪರ್ಯಂತವಾಗಿ ಪದ್ಮಾಸನದಲ್ಲಿ ಸ್ಥಿತರಾಗಿ ಜಪಾದಿರೂಪವಾದ ಪರಮಾತ್ಮನ ಪ್ರೀತಿಕರವಾದ ಕರ್ಮವನ್ನು ಮಾಡಲು, ಪರಮಾತ್ಮನು ಪ್ರಸನ್ನನಾಗಿ ಎದುರಿಗೆ ಬಂದು, ತನ್ನ ಮುಕ್ತ ಲೋಕವನ್ನು ಸಹ ಅವರಿಗೆ ದರ್ಶನ ಮಾಡಿಸಿ, ವೇದಾದಿ ಸಕಲ ಪ್ರಮಾಣ ಗ್ರಂಥಗಳನ್ನೂ ಸಾಕ್ಷಾತ್ ಉಪದೇಶ ಮಾಡಿದನು.

ಇದೇ ಕರ್ಮಫಲವು. ಇದೇ ರೀತಿಯಲ್ಲಿ ಈಗಲೂ ಕೂಡ ಭಗವದಾಜ್ಞಾರೂಪವಾದ ವಿಹಿತ ಕರ್ಮವನ್ನ ಮಾಡುವವರೆಲ್ಲರೂ ಭಗವಂತನ ಪ್ರಸಾದಕ್ಕೆ ಪಾತ್ರರಾಗಿ ಉತ್ತಮ ಗುರುಗಳಿಂದ ಸಂಸಾರತಾರಕವಾದ ಬ್ರಹ್ಮವಿದ್ಯೆಯನ್ನು ಹೊಂದುವುದಕ್ಕೆ ಯೋಗ್ಯರಾಗುತ್ತಾರೆ.*

---

* ಶ್ರೀಪಾದಂಗಳವರು ಪ್ರತಿಯೊಂದು ಮೋಕ್ಷ ಸಾಧನೆಯ ನಿರೂಪಣಾವಸರದಲ್ಲಿಯೂ ಪರಬ್ರಹ್ಮನ **ಪ್ರಸಾದವು** ಅತ್ಯವಶ್ಯಕವೆಂದು ತಲೆಯ ಮೇಲೆ ಹೊಡೆದಂತೆ ಒತ್ತಿ ಒತ್ತಿ ನಿರೂಪಿಸಿರುವರು. ಅನ್ಯಥಾ ನಮ್ಮ ಕರ್ಮಾದ್ಯನುಷ್ಠಾನಗಳು ನಿರುದ್ದೇಶ್ಯಕವಾಗಿ ಸಂಸಾರ ತಾರಣೋಪಾಯವೇ ಹೀಗೆಂದು ಹೇಳಲಿಕ್ಕೆ ಅಶಕ್ಯವಾಗುವುದೆಂದು ಅವರ ಭಾವವು. ಅದ್ವೈತ ಮತದಲ್ಲಿಯಾದರೋ ಎರಡು ಚೇತನವೇ ಇಲ್ಲದಿರುವುದರಿಂದ ಸ್ವಾಮಿ ಭೃತ್ಯಭಾವವಾಗಲೀ, ಉಚ್ಚ ನೀಚ ಭಾವವಾಗಲೀ ಉಂಟಾಗುವುದಕ್ಕೇ ಅವಕಾಶವಿಲ್ಲದಿರುವುದರಿಂದ ನಮ್ಮ ಸರ್ವ ಮೋಕ್ಷಸಾಧನ ಯತ್ನಗಳೂ ಬೂದಿಯಲ್ಲಿ ಮಾಡಿದ ಹೋಮದಂತೆ ನಿರರ್ಥಕವೆಂದೇ ಪ್ರಾಪ್ತವಾಗುವುದು. ಯಾತಕ್ಕೆಂದರೆ ಅದ್ವೈತ ಮತದರೀತ್ಯಾ **"ನಾನು"** ಎಂಬ ಜೀವವೇ ಯಾವಾಗಲೂ ನಿತ್ಯಜ್ಞಪ್ತಿಸ್ವರೂಪನಾದ ಪರಬ್ರಹ್ಮನು. ಇದಕ್ಕೆ ಭಿನ್ನವಾದ ಸಕಲ ಜಗತ್ತೂ ಮಿಥ್ಯಾ ಎಂದರೆ ಹಿಂದೆ ಇರಲಿಲ್ಲ, ಈಗ ಇಲ್ಲ, ಮುಂದೆ ಇರುವುದಿಲ್ಲ. ಹೀಗಿರುವಲ್ಲಿ ನಾವು ಯಾರ ಆಜ್ಞೆಯನ್ನು ಪರಿಪಾಲನೆ ಮಾಡಬೇಕು ? ಯಾರ ಪ್ರೀತ್ಯರ್ಥವಾಗಿ ಕರ್ಮವನ್ನು ಮಾಡಬೇಕು ? ಪ್ರಸಾದ ಮಾಡತಕ್ಕ ಅಥವಾ ಕುಪಿತನಾಗತಕ್ಕ ಬೇರೆ ಚೇತನನು ಎಲ್ಲಿ ಇರುವನು ? ಯಾರ ಪ್ರಸಾದದಿಂದ ತಾನೇ ನಮಗೆ ಏನಾಗಬೇಕು ? ಇಂಥ ದುಃಸ್ಥಿತಿಯನ್ನು ಅಂಗೀಕರಿಸುವ ಅದ್ವೈತ ಮತವು ಈಶ್ವರನನ್ನಾಗಲೀ, ಆವನ ಪ್ರಸಾದವನ್ನಾಗಲೀ ಒಪ್ಪುವುದಕ್ಕೆ ಕಾರಣವಿಲ್ಲವೆಂದೂ, ಯಾವ ಮೋಕ್ಷ ಸಾಧನವನ್ನೂ ನಿರೂಪಿಸಲಾರದೆಂದೂ ಘನ ಹೊಂದಿದ ವಿದ್ವಾಂಸನಾದ ಪ್ರಭುಲಾಲನು ಸಯುಕ್ತಿಕವಾಗಿ ತೋರಿಸಿರುತ್ತಾನೆ.

ಕರ್ಮೇಂದ್ರಿಯ ವ್ಯಾಪಾರಗಳು ಅನಂತವಾಗಿರುವುವು. ಆದರೆ ಇವುಗಳಲ್ಲಿ ಯಾವ ಪ್ರಕಾರವಾದ ಕರ್ಮಗಳು ಪರಮಾತ್ಮನಿಂದ ತಪ್ಪೋರೂಪವಾಗಿ ಸ್ವೀಕರಿಸಲ್ಪಡುವುವೋ ಅವು ಯೋಗವೆಂದೂ, ತಪಸ್ಸೆಂದೂ ಕರೆಯಲ್ಪಟ್ಟು ಶ್ರವಣಕ್ಕೆ ಕಾರಣವಾಗುವುವು. ತದ್ಭಿನ್ನವಾದವುಗಳು ತಾಮಸ ಕರ್ಮಗಳು. "**ಶಾಸ್ತ್ರವಿಧಿಂ**", "**ಶಾಸ್ತ್ರವಿಧಾನೋಕ್ತಂ**" ಇತ್ಯಾದಿ ಶ್ರೀ ಕೃಷ್ಣನ ವಾಕ್ಯಗಳಲ್ಲಿ ವೇದಾದಿ ಶಾಸ್ತ್ರಗಳು ಭಗವಂತನ ವಿಧಿಗಳು ಎಂದರೆ ಭಗವಂತನು ಮಾಡಿರುವ ನಿಬಂಧನೆಗಳು

---

Be it remembered that were it not for the grace of God, ... . no body would be freed from the round of births and deaths to which he is subject in virtue of his karma.

According to the Adwaita Vedanta, as there is one Absolute existence without a second, there is no individual soul, no God, no slave, no master. Man is essentially free and pure and not bound. Neither are there actions, nor is there any agency, neither rewards nor punishments; and therefore there are no occasions for the exercise of the Lord's grace. It is the ignorance of man only in considering himself as an individual entity separate from the Lord that has produced this delusion of a slave and a master about himself and God respectively...... Thus, it is man alone who has himself created under delusion or through ignorance about Reality which he himself is, a state of affairs, wherein, he who is himself the master, or to say more correctly, who is neither master nor slave, places himself in the position of a slave at the mercy of his master the Lord God who exists as a master over him as long only as he is under the said delusion...... The Lord's position is truly that of a witness of a scene unconcerned with what is passing before Him; and it is man alone, who though himself essentially free of all these wordly scenes, creates these scenes and drags the Lord also into the said scenes giving Him all sorts of attributes that do not belong to Him at all.

—Prabhulal,
( Vedanta Kesari, May, 1916. )

ಎಂದು ಹೇಳಲ್ಪಟ್ಟಿರುವುದು. ಅವುಗಳನ್ನು ಅನುಸರಿಸಿಯೇ ಸಕಲ ಕರ್ಮಗಳನ್ನೂ ನಾವು ಮಾಡಬೇಕು ಎಂದು ಸಿದ್ಧವಾಗುವದು. ಇವು ಸಾತ್ವಿಕ ಕರ್ಮಗಳು. ಪರಮಾತ್ಮನಿಂದಲೇ ಪ್ರವರ್ತಿಸಲ್ಪಟ್ಟ ವಿಧ್ಯುಕ್ತ ಸಾತ್ವಿಕ ಕರ್ಮಗಳು ಸಕಲ ಮುಮುಕ್ಷುಗಳಿಂದಲೂ ಸಹಜವಾಗಿ ಆಚರಿಸಲ್ಪಡುವುವು. ಶ್ರೀ ಕೃಷ್ಣನು ಹೇಳುತ್ತಾನೆ :—

(1) **ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।**

.... .... .... .... .... ....

**ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ ।**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ॥**

—(17. 23–25.)

ಭಗವದಾಜ್ಞಾರೂಪವಾದ ನಿಯತವಿಧಿಗಳನ್ನು ಉಲ್ಲಂಘಿಸುವವರು ಅಸುರರು ಎಂದು ಶ್ರೀ ಕೃಷ್ಣನು ಹೇಳುತ್ತಾನೆ :—

---

**ಅರ್ಥವು :—** ಪರಮಾತ್ಮನ ಪ್ರಸಾದವಿಲ್ಲದಿದ್ದರೆ, ಯಾವ ಒಬ್ಬ ಪುರುಷನೂ ತನ್ನ ಕರ್ಮದಿಂದ ಪ್ರಾಪ್ತವಾದ ಜನನ ಮರಣ ರೂಪವಾದ ಚಕ್ರದಿಂದ ಬಿಡುಗಡೆ ಹೊಂದಲ್ಪಡುತ್ತಿರಲಿಲ್ಲವೆಂಬುದು ನೆನಪಿನಲ್ಲಿ ಇಡಲ್ಪಟ್ಟಿರಲಿ. ಅದ್ವೈತಮತದರೀತ್ಯಾ ದ್ವಿತೀಯರಹಿತವಾದ ಒಂದೇ ಒಂದು ಪರಮಾರ್ಥತತ್ವವು ಇರುವುದರಿಂದ, ಜೀವನೂ, ಈಶ್ವರನೂ, ಭೃತ್ಯನೂ, ಸ್ವಾಮಿಯೂ ಇರುವುದಿಲ್ಲ. ಮನುಷ್ಯನು ಸ್ವರೂಪತಃ ಮುಕ್ತನೂ, ಶುದ್ಧನೂ ಮತ್ತು ಬಂಧರಹಿತನೂ ಆಗಿರುವನು. ಮತ್ತು ಕರ್ಮಗಳಾಗಲೀ ಯಾವುದಾದರೂ ಕರ್ತೃತ್ವವಾಗಲೀ (ಕರ್ಮಾಚರಣೆಗೆ) ಪ್ರತಿಫಲವಾಗಲೀ, (ಅನಾಚರಣೆಗೆ) ದಂಡವಾಗಲೀ ಇರುವುದಿಲ್ಲ. ಆದುದರಿಂದ ಪರಮಾತ್ಮನ ಪ್ರಸಾದವನ್ನು ತೋರಿಸುವುದಕ್ಕೆ ಅವಕಾಶವೇ ಇರುವುದಿಲ್ಲ. ಮನುಷ್ಯನ, ತನ್ನ ಕೇವಲ ಅಜ್ಞಾನದಿಂದಲೇ, ತಾನು ಪರಮಾತ್ಮನಿಂದ ಭಿನ್ನವಾದ ಒಬ್ಬ ಜೀವನೆಂಬ ಕಲ್ಪನೆಯೇ ನಾನು ಭೃತ್ಯನು, ಈಶ್ವರನು ಸ್ವಾಮಿಯು ಎಂಬ ಭ್ರಮಕ್ಕೆ ಕಾರಣವಾಗಿರುವುದು. ಈ ರೀತಿಯಾಗಿ ಮನುಷ್ಯನೇ ತನ್ನ ಪರಮಾರ್ಥ ಸ್ಥಿತಿ ವಿಷಯದಲ್ಲಿ ಭ್ರಮಕ್ಕೂ ಅಜ್ಞಾನಕ್ಕೂ ವಶನಾಗಿ ಒಂದಾನೊಂದು ಸ್ಥಿತಿಯನ್ನು ಕಲ್ಪಿಸಿಕೊಂಡು ಅದರಲ್ಲಿ ವಸ್ತುತಃ ತಾನೇ ಸ್ವಾಮಿಯಾಗಿದ್ದರೂ ಅಥವಾ ಇನ್ನೂ ಸರಿಯಾಗಿ ಹೇಳಬೇಕಾದರೆ, ತಾನು ಸ್ವಾಮಿಯಾಗಲೀ ಅಥವಾ ಭೃತ್ಯನಾಗಲೀ ಅಲ್ಲದಿದ್ದರೂ ತನ್ನನ್ನು, ತನ್ನ ಭ್ರಮ ಕಾಲದಲ್ಲಿ ಮಾತ್ರ ಸ್ವಾಮಿಯಂತೆ ತೋರುವ ಒಬ್ಬ ಈಶ್ವರನ ಕಾರುಣ್ಯವಶನಾದ ಭೃತ್ಯನೋಪಾದಿಯಲ್ಲಿ ಕಲ್ಪಿಸಿಕೊಂಡಿರುವನು. ಪರಮಾತ್ಮನ ಸ್ಥಿತಿಯು ತನ್ನ ಎದುರಿಗೆ ನಡೆಯುವ ಕ್ರಿಯೆಗಳಲ್ಲಿ ಯಾವ ಸಂಬಂಧವನ್ನೂ ಹಚ್ಚಿಕೊಳ್ಳದ ಒಂದು ನೋಟವನ್ನು ನೋಡುವ ಸಾಕ್ಷಿಗಾರನಂತೆ ಇರುವದು. ಮತ್ತು ಮನುಷ್ಯನು ತಾನೇ ಈ ಪ್ರಾಪಂಚಿಕ ವ್ಯವಹಾರಗಳಿಂದ ಮುಕ್ತನಾಗಿದ್ದರೂ ವ್ಯವಹಾರಗಳನ್ನು ಕಲ್ಪಿಸಿಕೊಳ್ಳುತ್ತಾನೆ. ಮತ್ತು ಪರಮಾತ್ಮನನ್ನು, ಅವನಿಗೆ ಸರ್ವಥಾ ಇಲ್ಲದೇ ಇರುವಂಥ ನಾನಾ ವಿಧವಾದ ಧರ್ಮಗಳನ್ನು ಕೊಟ್ಟು ಪೂರ್ವೋಕ್ತ ವ್ಯವಹಾರಕ್ಕೆ ಎಳೆಯುತ್ತಾನೆ.

(2) **ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ ।**
.... .... **ತಾನ್ ವಿದ್ಧ್ಯಾಸುರನಿಶ್ಚಯಾನ್ ॥**
—(17. 5-6.)

ಎಲೈ ಪಾರ್ಥನೇ ! ಯಾರು ಶಾಸ್ತ್ರೋಕ್ತ ವಿಧಿಗಳನ್ನು ಅತಿಕ್ರಮಿಸಿ ತಪಸ್ಸನ್ನು ಆಚರಿಸುತ್ತಾರೆಯೋ ಅವರನ್ನು ( ತಾಮಸರಾದ ) ಅಸುರಸಂಬಂಧಿ ಜ್ಞಾನವುಳ್ಳವರೆಂದು ನೀನು ನಿಶ್ಚಯವಾಗಿ ತಿಳಿ.

"**ವಿಧಿದೃಷ್ಟೋ ಯ ಇಜ್ಯತೇ....ಸ ಸಾತ್ವಿಕಃ**" ಎಂದೂ, "**ವಿಧಿಹೀನಂ ....ತಾಮಸಂ ಪರಿಚಕ್ಷತೇ**" ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ. ವಿಧ್ಯುಕ್ತ ಯಾಗವು ಸಾತ್ವಿಕವೆಂದೂ, ವಿಧಿಯನ್ನು ಉಲ್ಲಂಘಿಸಿ ಮಾಡಿದ್ದು ತಾಮಸವೆಂದೂ ಅರ್ಥವು.

ವಿಧ್ಯುಕ್ತ ಸಾತ್ವಿಕ ಕರ್ಮಗಳು ಸಂಧ್ಯಾವಂದನಾದಿ ನಿತ್ಯಕರ್ಮಗಳು, ತೀರ್ಥಯಾತ್ರಾ, ದೇವಪೂಜನ, ವ್ರತಾನುಷ್ಠಾನಗಳು, ಏಕಾದಶಾದಿ ಉಪವಾಸ, ಜಪ, ಪಾರಾಯಣ ಇವೇ ಮುಂತಾದುವುಗಳು. ಶ್ರೀ ಕೃಷ್ಣನು ಹೇಳುತ್ತಾನೆ :—

(3) **ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಂ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥**
**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥**
(17. 14-15.)

ವಿಷ್ಣುಪೂಜೆಯು ಮತ್ತು ಭಗವತ್ಪರಿವಾರತಯಾ ಅವರವರ ಯೋಗ್ಯತಾನುಸಾರವಾಗಿ ಇತರ ದೇವತೆಗಳ ಪೂಜೆಯು, ಬ್ರಾಹ್ಮಣರ ಸತ್ಕಾರವು, ಗುರುಪೂಜೆಯು, ಜ್ಞಾನಿಗಳ ಸೇವೆಯು, ಮೃಜ್ಜಲಾದಿಗಳಿಂದ ಶೌಚವು ಮನೋವಾಕ್ಯಗಳಿಗೆ ಅನುಸಾರಿಯಾದ ಬಾಹ್ಯ ಆಚರಣೆಯು, ಗುಹ್ಯೇಂದ್ರಿಯನಿಗ್ರಹವು, ಇತರ ಪ್ರಾಣಿಗಳಿಗೆ ಹಿಂಸೆಯನ್ನು ಮಾಡದೆ ಇರೋಣವು, ಇವುಗಳು ಶರೀರಸಂಬಂಧಿ ತಪಸ್ಸುಗಳೆನ್ನಿಸುವುವು. ಪರರಿಗೆ ಉದ್ವೇಗವನ್ನು ಉಂಟು ಮಾಡದಿರುವಂತೆ ಮಾತಾಡೋಣವು, ಕೇಳುವಾಗ ಮತ್ತೂ ಮತ್ತೂ ಕೇಳಬೇಕೆಂಬ ಇಚ್ಛೆಯನ್ನು ಹುಟ್ಟಿಸುವ, ಕಾಲಾಂತರದಲ್ಲಿ ಸುಖಕರವಾದ ಯಥಾರ್ಥ ವಚನವು,* ವೇದಾದಿಗಳನ್ನು ಅಭ್ಯಾಸ ಮಾಡುವುದು ( ಪಾರಾಯಣಾದಿಗಳು ), ವಾಗಿಂದ್ರಿಯದಿಂದ ನಡೆಯಿಸಲ್ಪಟ್ಟ ತಪಸ್ಸೆನ್ನಿಸುತ್ತವೆ

---

*"**ಸತ್ಯಂ ಪ್ರಿಯಹಿತಂ ಚ ಯತ್**" ಎಂದರೆ ಯಥಾರ್ಥ ವಚನವನ್ನೇ ಶ್ರವಣ ಮಾಡೋಣದರಿಂದ ದುಃಖವಾಗದ ಸಮಯದಲ್ಲಿ ಮತ್ತು ಹಿತವಾದ ( ಧರ್ಮಸಾಧನಕ್ಕೆ ಅನುಕೂಲ

ಇವುಗಳಲ್ಲದೆ ಇನ್ನೂ ಅನೇಕ ವಿಧವಾದ ಕರ್ಮಗಳು ವಿಧಿವಿಹಿತವಾಗಿ ಪರಮಾತ್ಮನ ಪ್ರೀತಿ ಸಂಪಾದನೆಗೆ ಕಾರಣವಾಗಿರುವುವು. ವಿಧ್ಯುಕ್ತವಾದ ( ಸಾತ್ವಿಕ ) ಆಹಾರ, ಯಜ್ಞ, ದಾನ, ಭಾಷಣಾದಿಗಳ ಸ್ವರೂಪವು ಶ್ರೀ ಕೃಷ್ಣನಿಂದ ಹದಿನೇಳನೆಯ ಅಧ್ಯಾಯದಲ್ಲಿ ನಿರೂಪಿತವಾಗಿರುವುದು. ಆ ವಾಕ್ಯಗಳೆಲ್ಲವೂ ಪೂರ್ವದಲ್ಲಿಯೇ ಉದಾಹೃತವಾಗಿರುವುವು. ಆದುದರಿಂದ ಸರ್ವರೂ ಪರಬ್ರಹ್ಮನಿಂದ ವಿಹಿತವಾದ ಕರ್ಮಗಳನ್ನು ಆಚರಿಸಿ ಆತನ ಆಜ್ಞಾಪರಿಪಾಲನ ರೂಪವಾದ ತಪಸ್ಸಿನಿಂದ ಪ್ರಾಪ್ತವಾದ ಆತನ ಪ್ರಸಾದಕ್ಕೆ ಪಾತ್ರರಾಗಿ ಜ್ಞಾನಾದಿಗಳನ್ನು ಸಂಪಾದಿಸುವುದಕ್ಕೆ ಯತ್ನಿಸಬೇಕು.

2. **ಪ್ರಶ್ನೆ :—** ಮಹಾಸ್ವಾಮೀ ! ವಿಧಿವಿಹಿತ ಕರ್ಮಾನುಷ್ಠಾನವು ಅನೇಕ ಪ್ರಕಾರವಾಗಿರುವುದೆಂದೂ, ಮೋಕ್ಷಾರ್ಥಿಗಳು ಅದನ್ನು ಆಚರಿಸುವರೆಂದೂ ವಿದಿತವಾಯಿತು. ವಿಹಿತ ಕರ್ಮಾಚರಣೆಗೆ ತಪಸ್ಸೆಂಬ ನಾಮಧೇಯವೂ ಯುಕ್ತವೇ ಸರಿ. ಆದರೆ ಕರ್ಮಾಚರಣೆಗೆ ಶ್ರವಣಾದಿ ರೂಪವಾದ ಜ್ಞಾನಸಾಧನಗಳನ್ನು ಸಂಪಾದಿಸುವುದರಲ್ಲಾಗಲೀ ಅಥವಾ ಬೇರೆ ವಿಧವಾಗಿ ಮೋಕ್ಷ ಪ್ರಾಪ್ತಿಯಲ್ಲಾಗಲೀ ಕಾರಣತ್ವವು ಕಂಡು ಬರುವುದಿಲ್ಲ. ಜ್ಞಾನಾದಿಗಳಿಗೆ ಸಾಧಕವಲ್ಲದ ನಿಷ್ಕಾರಣವಾದ ವ್ಯರ್ಥ ಕರ್ಮಗಳನ್ನು ಯಾತಕ್ಕೆ ಮಾಡಬೇಕು ಎಂಬ ನಮ್ಮ ಪ್ರಶ್ನೆಗೆ ಸಾವಧಾನವಾಗಿ ಉತ್ತರವನ್ನು ನಿರೂಪಿಸಬೇಕು.

**ಉತ್ತರ:— ಶ್ರೀ ಶ್ರೀಗಳವರು:—** ನಾವೂ ಒಂದು ಪ್ರಶ್ನೆಯನ್ನು ಕೇಳುತ್ತೇವೆ. ಈಗ ಬಿ. ಎ. ಪರೀಕ್ಷೆ ಮಾಡಿದವರಿಗೆ ಐವತ್ತು ರೂಪಾಯಿನ ಸರ್ಕಾರದ ಹುದ್ದೆಯನ್ನು ಕೊಡಬಹುದು ಎಂದು ನಿಮ್ಮ ರಾಜ್ಯದಲ್ಲಿ ನಿಯಮವಿರುವುದು. ಎಂದರೆ ಪರೀಕ್ಷಾರ್ಥವಾಗಿ ಇಡಲ್ಪಟ್ಟ ಕೆಲವು ಗ್ರಂಥಗಳ ಜ್ಞಾನವು ಸರ್ಕಾರದಲ್ಲಿ ಅಧಿಕಾರ ಪ್ರಾಪ್ತಿಗೆ ಸಾಕ್ಷಾತ್ಕಾರಣವೆನ್ನಿಸುವುದು. ಹೀಗಿರುವಲ್ಲಿ ನಿಯತ ಶಾಲೆಗೆ ಹೋಗೋಣ; ಶಾಲಾಧ್ಯಕ್ಷರಿಗೆ ವಿಧೇಯನಾಗಿರೋಣ; ಉಪಾಧ್ಯಾಯರಲ್ಲಿ ನಮ್ರತೆಯನ್ನು ತೋರಿಸೋಣ; ಶಾಲಾ ನಿಯಮಗಳನ್ನನುಸರಿಸಿ ಭೋಜನ ಕಾಲವನ್ನೂ ಪರಿಮಿತಿಯನ್ನೂ ಕ್ಲೃಪ್ತ ಮಾಡಿಕೊಳ್ಳೋಣ; ನಿಯಮಾನುಸಾರಿಯಾದ ಉಡಿಗೆ ತೊಡಿಗೆಗಳನ್ನು ಹೊಂದಿ, ನಿಯಮ ವಿರುದ್ಧವಾದ ಆಚಾರಗಳನ್ನು ಪರಿತ್ಯಜಿಸಿ, ಫೀಜು ವಗೈರೆಗಳನ್ನು ಕಾಲ ಕಾಲಕ್ಕೆ ಕೊಡೋಣ; ಇವೇ ಮೊದಲಾದ ಕರ್ಮಗಳನ್ನೂ, ಮತ್ತು ಶಾಲೆಗೆ ಸೇರುವುದಕ್ಕೆ ಮೊದಲು ರಾಜ್ಯದ ನಿಬಂಧನೆಗಳನ್ನನು

ವಾಗುವ) ಸಮಯದಲ್ಲಿ ನುಡಿಯಬೇಕು. ಅಸತ್ಯ ವಚನವನ್ನು ಯಾವಾಗಲೂ ಹೇಳಬಾರದು. ಸತ್ಯ ವಚನವನ್ನು ಅಪ್ರಿಯ ಮತ್ತು ಅಹಿತವಾಗುವ ( ಅಧರ್ಮಾನುಷ್ಠಾನಕ್ಕೆ ಉಪೋದ್ಬಲಕವಾಗುವ ) ಕಾಲದಲ್ಲಿ ಆಡದೆ ಮೌನವನ್ನು ಧರಿಸಬೇಕು. ಈ ನ್ಯಾಯವನ್ನು ಅನುಸರಿಸಿಯೇ ವಿದುರನು ಯುಧಿಷ್ಠಿರನಿಗೆ ಭವಿಷ್ಯದ್ವೃತ್ತಾಂತವೆಲ್ಲವನ್ನೂ ಹೇಳಿದರೂ ಕೃಷ್ಣನ ಪ್ರಯಾಣ, ಯಾದವರ ನಾಶ ಮುಂತಾದುವನ್ನು ತಿಳಿದಿದ್ದರೂ ಹೇಳಲಿಲ್ಲ. [ H. S. ]

ಸರಿಸಿಕೊಂಡು ರಾಜದ್ರೋಹಾದಿಗಳಿಗೆ ವಶರಾಗದೆ, ಶಾಲೆಯ ಪ್ರವೇಶಕ್ಕೆ ಪ್ರಯೋಜಕವಾದ ಪ್ರಾರ್ಥನಾದಿಗಳನ್ನು ಮಾಡೋಣವೇ ಮೊದಲಾದ ಅನೇಕ ಕರ್ಮಗಳನ್ನೂ ಯಾತಕ್ಕೆ ಮಾಡಬೇಕು ? ಇವುಗಳಿಗೂ ಸರ್ಕಾರದ ನೌಕರಿಗೂ ಏನು ಸಂಬಂಧವು ?

**ವಿದ್ಯಾರ್ಥಿಗಳು :—** ಸ್ವಾಮೀ ! ಸಾಕ್ಷಾತ್ಸಂಬಂಧವು ಇಲ್ಲದಿದ್ದರೂ ಪರಂಪರಯಾ ಸಂಬಂಧವು ಇರುವುದು. ಶಾಲಾ ಪ್ರವೇಶಕ್ಕೆ ಪೂರ್ವದಲ್ಲಿ ರಾಜದ್ರೋಹಾದಿಗಳನ್ನು ಮಾಡಿ ಕಾರಾಗೃಹವಾಸಾದಿಗಳನ್ನು ಹೊಂದಿದರೆ ಶಾಲೆಗೆ ಸೇರುವುದಕ್ಕಾಗುವುದಿಲ್ಲ. ಶಾಲೆಗೆ ಸೇರದಿದ್ದರೆ ಗ್ರಂಥ ವ್ಯಾಸಂಗವು ದುರ್ಘಟವಾಗಿ ಬಿ. ಎ, ಪರೀಕ್ಷೆ ಕೊಡುವುದಕ್ಕೇ ಅವಕಾಶವಿರುವುದಿಲ್ಲ 2. ಶಾಲೆಗೆ ಪ್ರವೇಶ ಮಾಡಿದ ನಂತರವೂ ಸಹ ಶಾಲಾಧ್ಯಕ್ಷರು ಮಾಡುವ ನಿಬಂಧನೆಗಳನ್ನು ಮೀರಿದರೆ ಶಾಲೆಯಿಂದ ಬಹಿಷ್ಕಾರವು ಪ್ರಾಪ್ತವಾಗುವುದು. ಒಂದೊಂದು ವೇಳೆ ನಾವು ಪರೀಕ್ಷೆ ಕೊಟ್ಟರೂ ನಮಗೆ ತೇರ್ಗಡೆ ಚೀಟಿಯನ್ನು ಕೊಡಬಾರದೆಂದು ಶಿಕ್ಷೆಯು ಪ್ರಾಪ್ತವಾಗುವುದು. ನಿಯಮಗಳನ್ನು ಅನುಸರಿಸಿಕೊಂಡು ಶಾಲಾಧಿಕಾರಿಗಳ ಮನಃಪ್ರಸಾದಕ್ಕೆ ಪಾತ್ರರಾದರೆ ವಿದ್ಯಾಫಲವು ಅತಿ ಸುಲಭವಾಗಿ ಬಂದೊದಗುವುದು.

**ಶ್ರೀ ಶ್ರೀಗಳವರು :—** 1. ಇದೇ ರೀತಿಯಲ್ಲಿ ಭಗವಂತನಾದ ನಮ್ಮ ವಿಷ್ಣುವು ಶ್ರವಣಾದಿಗಳಿಂದ ಜ್ಞಾನವನ್ನು ಹೊಂದಿದವರಿಗೇ ಮೋಕ್ಷವನ್ನು ಕೊಡುವೆನೆಂಬ ನಿಯಮವನ್ನು ಮಾಡಿರುವನು. ಮತ್ತು ಸರ್ಕಾರದವರು ಪ್ರಜೆಗಳ ಕ್ಷೇಮಾರ್ಥವಾಗಿ ಅವರುಗಳಿಂದ ಅವಶ್ಯವಾಗಿ ಅನುಷ್ಠೇಯವಾದ ಕೆಲವು ಕಾಯಿದೆಗಳನ್ನು ಮಾಡಿರುವಂತೆ, ಸಕಲ ಮನುಷ್ಯರುಗಳಿಂದಲೂ ಅವಶ್ಯವಾಗಿ ಅನುಷ್ಠೇಯವಾದ ಕೆಲವು ನಿಬಂಧನೆಗಳನ್ನು ಮಾಡಿರುತ್ತಾನೆ. ಇವು ಸಾಮಾನ್ಯ ಧರ್ಮಗಳು. ಸರ್ಕಾರದವರಿಂದ ವಿಹಿತವಾದ ಸರ್ವ ಪ್ರಜಾ ಸಾಮಾನ್ಯವಾದ ಧರ್ಮಗಳನ್ನು ತಿರಸ್ಕರಿಸಿದವರಿಗೆ ದೇಶವಾಸವೇ ದುರ್ಘಟವಾಗಿ ದಂಡವೋ, ಕಾರಾಗೃಹವಾಸವೋ, ದೇಶೋಚ್ಚಾಟನೆಯೋ ಪ್ರಾಪ್ತವಾಗುವಂತೆ, ಶ್ರೀ ಕೃಷ್ಣನು ವಿಧಾನ ಮಾಡಿರುವ ನಿತ್ಯ ಕರ್ಮಗಳನ್ನು ಆಚರಿಸದವನಿಗೆ ನರಕಾದ್ಯನರ್ಥರೂಪವಾದ ಮಹಾದಂಡವು ಪ್ರಾಪ್ತವಾಗುವುದು. ಇನ್ನು ಮೋಕ್ಷೋಪಯೋಗಿಯಾದ ಶ್ರವಣಾದಿಗಳಿಗೆ ಅಧಿಕಾರವೆಲ್ಲಿಂದ ಬಂತು ? 2. ಮತ್ತು ಸಾಮಾನ್ಯ ಧರ್ಮಗಳನ್ನು ರಕ್ಷಿಸುವ ವಿನೀತರಾದ ದೇಶೀಯ ಪ್ರಜೆಗಳೂ ಸಹ ಬಿ. ಎ ಪರೀಕ್ಷೆಯನ್ನು ಮಾಡಬೇಕಾದರೆ ಶಾಲಾಪ್ರವೇಶಾರ್ಥವಾಗಿ ಸ್ವಲ್ಪ ವಿಶೇಷ ಪ್ರಾರ್ಥನಾದಿ ರೂಪವಾದ ಹೆಚ್ಚು ಆಚರಣೆಯನ್ನು ಮಾಡಬೇಕಾಗಿರುವಂತೆ, ನಿತ್ಯ ಕರ್ಮಾದಿಗಳನ್ನು ಮಾಡುತ್ತಿರುವ ಸಾತ್ವಿಕ ಜನರೂ ಸಹ ಶ್ರವಣಾದಿಗಳಿಗೆ ಅಧಿಕಾರ ಬರುವುದಕ್ಕಾಗಿ ಸ್ವಲ್ಪ ವಿಶೇಷ ಕರ್ಮಾನುಷ್ಠಾನವನ್ನು ಮಾಡಬೇಕು. ಅಥವಾ ಮಾಡುವ ಕರ್ಮಗಳನ್ನೇ ಹೆಚ್ಚು ಶ್ರದ್ಧೆಯಿಂದ ಆಚರಿಸಿ ಪರಮಾತ್ಮನನ್ನು ಪ್ರಾರ್ಥಿಸಬೇಕು 3. ಪರಂತು ರಾಜ್ಯದಲ್ಲಿರುವ ಪರ್ಯಂತವೂ ಪ್ರಜೆಯು ತತ್ತದಧಿಕಾರಿಗಳಿಗೆ ವಿಧೇಯನಾಗಿರುವಂತೆ, ಪರಬ್ರಹ್ಮನ

ಆಳ್ವಿಕೆಗೆ ಒಳಪಟ್ಟ ಸಕಲ ಜೀವರುಗಳು ಯಾವ ಯಾವ ಕಾಲದಲ್ಲಿ ಯಾವ ಯಾವ ಅವಸ್ಥೆಯಲ್ಲಿ ಏನೇನು ಕರ್ಮವನ್ನು ಮಾಡಬೇಕೆಂದು ಆತನು ವಿಧಿಸಿರುವನೋ ಅಂಥ ಕರ್ಮಗಳನ್ನು ಮಾಡುತ್ತಲೇ ಇರಬೇಕು. ಅಷ್ಟೇ ಅಲ್ಲ ರಾಜನು ಉತ್ತಮನಾದ, ವಿದ್ಯಾವಂತನಾದ ತನ್ನ ಪ್ರಜೆಗೆ ಕೌನ್ಸಿಲರ್ ಅಂಥ ಮಂತ್ರಿ ಪದವಿಯನ್ನು ಕೊಟ್ಟು ಆತನನ್ನು ಯಾವ ನಿರ್ಬಂಧಗಳಿಗೂ ವಶವಾಗದಂತೆ ಮಾಡಿ ಸ್ವಾತಂತ್ರ್ಯವನ್ನು ಕೊಟ್ಟರೂ ಸಹ, ಆ ಮಂತ್ರಿಯು ರಾಜನಿಗೆ ವಿಧೇಯನಾಗಿ ತನ್ನ ಮನಃಪೂರ್ವಕವಾಗಿ ಪ್ರಜಾ ಕ್ಷೇಮಾರ್ಥವಾಗಿ ರಾಜನ ಉದ್ದೇಶಗಳನ್ನನುಸರಿಸಿ ಪ್ರಾಯೇಣ ಸರ್ವ ನಿಬಂಧನೆಗಳನ್ನು ಅನುಸರಿಸುತ್ತಲೇ ತಾನೂ ಒಬ್ಬ ಪ್ರಜೆಯಾಗಿಯೇ ಇರುವಂತೆ, ಬ್ರಹ್ಮಾದಿ ಸಕಲ ಮುಕ್ತಿಯೋಗ್ಯ ಜೀವರುಗಳೂ ಅಪರೋಕ್ಷ ಜ್ಞಾನಿಗಳಾಗಿ ಮುಕ್ತರಾಗಿ ಭಗವಂತನಿಂದ ಯಥೇಷ್ಟವಾಗಿ ರಮಿಸುತ್ತಿರಬಹುದೆಂಬ ಅಪ್ಪಣೆಯನು ಹೊಂದಿದ್ದರೂ ಸಹ ಭಗವಂತನಲ್ಲಿರುವ ಭಕ್ತಿಭರದಿಂದ ವಿಶೇಷಾಕಾರವಾಗಿ ತಮ್ಮ ಸ್ವಭಾವಾನುಗುಣವಾಗಿಯೇ ಆತನ ಸೇವೆಯಲ್ಲಿ ತತ್ಪರರಾಗಿರುತ್ತಾರೆ. ಮುಕ್ತರಿಗೆ ಕರ್ಮಾನುಷ್ಠಾನವೂ ಸಹ ಸುಖರೂಪವಾಗಿಯೇ ಇರುವುದು.

**ಪ್ರಶ್ನೆ:—** ಸ್ವಾಮೀ ! ಹಾಗಾದರೆ ಸಂಧ್ಯಾವಂದನಾದಿ ಸರ್ವ ವಿಧ್ಯುಕ್ತ ಕರ್ಮಗಳನ್ನು ಯಾವ ರೀತಿಯಲ್ಲಿ ನಾವು ತಿಳಿಯಬೇಕು ?

**ಉತ್ತರ :— ಶ್ರೀ ಶ್ರೀಗಳವರು :—** ಕರ್ಮಾನುಷ್ಠಾನವು ಭಗವದಾರಾಧನಾರೂಪವಾಗಿ ಪರಂಪರಯಾ ಜ್ಞಾನಕರಣವೆಂದು ತಿಳಿಯಬೇಕು.
ಶ್ರೀ ಕೃಷ್ಣನು ಹೇಳುತ್ತಾನೆ :—

(1) **ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಂ ॥**
**ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥**
(5. 4–5.)

" ಎಲೈ ಅರ್ಜುನನೇ ! ಶ್ರವಣಾದಿ ಜನಿತ ತತ್ವಜ್ಞಾನವೂ ಭಗವದರ್ಪಣ ಬುದ್ಧಿಪೂರ್ವಕವಾದ ವಿಹಿತ ಕರ್ಮಾನುಷ್ಠಾನ ರೂಪವಾದ ಯೋಗವೂ ( ಸಾಧ್ಯ ಸಾಧನ ಭಾವ ರಹಿತವಾದ, ) ಪರಸ್ಪರ ಸಂಬಂಧರಹಿತವಾದ ಪ್ರತ್ಯೇಕ ಪದಾರ್ಥಗಳೆಂದು ಅವಿವೇಕಿಗಳು ಹೇಳುತ್ತಾರೆ. ಪಂಡಿತರು ( ಸಾಂಖ್ಯವು ಸಾಧ್ಯವು, ಯೋಗವು ಸಾಧನವು ಎಂದು ತಿಳಿದು, ) ಇವೆರಡೂ ಕಾರ್ಯಕಾರಣ ಭಾವರಹಿತವೆಂದು ತಿಳಿಯುವುದಿಲ್ಲ. ಆದುದರಿಂದ ಜ್ಞಾನಮಾರ್ಗ ಕರ್ಮಮಾರ್ಗವೆಂಬ ಇವೆರಡರಲ್ಲಿ ಯಾವ ಒಂದನ್ನು ಸಮೀಚೀನವಾಗಿ ಆಚರಿಸುವವನೂ ಕೂಡ ಜ್ಞಾನ ಕರ್ಮ ಇವುಗಳೆರಡರ ಫಲವನ್ನೂ ಹೊಂದುತ್ತಾನೆ. ( ಎಂದರೆ ಕರ್ಮಾನುಷ್ಠಾನ ಮಾಡುವವನು ಜ್ಞಾನವನ್ನು ಹೊಂದಿ ಮೋಕ್ಷವನ್ನು ಹೊಂದುತ್ತಾನೆ. ಸಾಂಖ್ಯ

ರೂಪ ಜ್ಞಾನವುಳ್ಳವನು ಸಾಕ್ಷಾತ್ ಅಪರೋಕ್ಷ ಜ್ಞಾನದ್ವಾರಾ ಮುಕ್ತನಾಗುತ್ತಾನೆ. ಅಂತು ಕರ್ಮ ಮಾಡುವವನಿಗೂ ಜ್ಞಾನವೂ ಅದರ ಫಲವೂ ತಪ್ಪದೇ ಬಂದೇ ಬರುವುದು ಎಂದು ಭಾವವು) ಇದೇ ಅಭಿಪ್ರಾಯವೇ ಮುಂದಿನ ಶ್ಲೋಕದಲ್ಲಿ ವಿವರಿಸಲ್ಪಡುವುದು :— ಎಲೈ ಅರ್ಜುನನೇ ! ಸಾಂಖ್ಯವನ್ನು ಹೊಂದಿದ ಎಂದರೆ ತತ್ವನಿಶ್ಚಯವನ್ನುಳ್ಳ ಪಂಡಿತರಿಂದ ಯಾವ ಸ್ಥಾನವು ಎಂದರೆ ಭಗವತ್ಸ್ವರೂಪವು ಹೊಂದಲ್ಪಡುತ್ತದೆಯೋ, ಅದು ಯೋಗವುಳ್ಳ ಎಂದರೆ ಭಗವದರ್ಪಣ ಬುದ್ಧಿಯಿಂದ ವಿಹಿತ ಕರ್ಮಾನುಷ್ಠಾನದಿಂದ ಸಹಿತರಾದ ಕರ್ಮಯೋಗಿಗಳಿಂದಲೂ ಹೊಂದಲ್ಪಡುವುದು. (ಕರ್ಮಾನುಷ್ಠಾನ ಮಾಡುವವರೂ ಸಾಂಖ್ಯವನ್ನು ಹೊಂದಿ ಭಗವಂತನನ್ನು ಹೊಂದುವರು ಎಂದು ಭಾವವು.) ಯಾವಾತನು ಸಾಂಖ್ಯವೂ ಯೋಗವೂ ಒಂದೇ ಎಂದರೆ ಕಾರ್ಯಕಾರಣ ಭಾವವನ್ನು ಹೊಂದಿ ಭಗವತ್ಪ್ರಾಪ್ತಿ ರೂಪವಾದ ಏಕ ಫಲಕ್ಕೆ ಸಾಧಕವಾದವುಗಳೆಂದು ತಿಳಿಯುತ್ತಾನೆಯೋ ಆತನು ವಿವೇಕಿಯು."

ಚತುರ್ಥಾಧ್ಯಾಯದಲ್ಲಿಯೂ ಸಹ ಶ್ರೀ ಕೃಷ್ಣನು ಹೇಳಿರುತ್ತಾನೆ :—

(2) **ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ||**
—(4. 33.)

ಎಲೈ ಪಾರ್ಥನೇ ! ಸಕಲ ಕರ್ಮಗಳೂ ಜ್ಞಾನರೂಪವಾದ ಫಲದಲ್ಲಿ ಪರಿಸಮಾಪ್ತಿಯನ್ನು ಹೊಂದುವುವು. ಎಂದರೆ ಸರ್ವ ಕರ್ಮಗಳಿಗೂ ಜ್ಞಾನವೇ ಫಲವು ಎಂದರ್ಥವು.

ಕರ್ಮಾನುಷ್ಠಾನದ ಸಾರ್ಥಕತೆಯನ್ನು ಮೂರು ನಾಲ್ಕು ಪ್ರಕಾರವಾಗಿ ನಿರೂಪಿಸಬಹುದು.

i. **ಧರ್ಮಃ ಸ್ವನುಷ್ಠಿತಃ ಪುಂಸಾಂ ವಿಷ್ವಕ್ಸೇನಕಥಾಶ್ರಯಾಂ |**
**ನೋತ್ಪಾದಯೇದ್ಯದಿ ರತಿಂ ಶ್ರಮ ಏವ ಹಿ ಕೇವಲಂ ||**

**ಅರ್ಥ :—** ಸಮೀಚೀನವಾಗಿ ಆಚರಿಸಲ್ಪಟ್ಟ ವಿಹಿತ ಕರ್ಮಗಳು ಶ್ರೀಮನ್ನಾರಾಯಣನನ್ನು ಪ್ರತಿಪಾದನೆ ಮಾಡುವ ಶಾಸ್ತ್ರಶ್ರವಣದಲ್ಲಿ ಶ್ರದ್ಧೆಯನ್ನು ಉಂಟುಮಾಡದಿದ್ದರೆ (ಭಸ್ಮದಲ್ಲಿ ಮಾಡಿದ ಹೋಮದಂತೆ) ನಿರರ್ಥಕವೇ. ಈ ಭಾಗವತ ವಚನ ಬಲದಿಂದಲೂ;

(3) **ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ |**

(4) **ಶ್ರದ್ಧಾವಾನ್ ಲಭತೇ ಜ್ಞಾನಂ ಮತ್ಪರಃ ಸಂಯತೇಂದ್ರಿಯಃ ||**

ಇತ್ಯಾದಿ ಗೀತಾ ವಾಕ್ಯಗಳ ಬಲದಿಂದಲೂ ಸಮೀಚೀನ ಪ್ರಕಾರದಲ್ಲಿ ಅನುಷ್ಠಿತವಾದ ವಿಹಿತ ಕರ್ಮಾನುಷ್ಠಾನವು ಇಂದ್ರಿಯ ಜಯಾದಿಗಳಿಗೆ ಕಾರಣವಾಗಿ ಭಗವಂತನ ಮಹಿಮೆಯನ್ನು ತಿಳಿಸಿ ಕೊಡುವ ಶಾಸ್ತ್ರಶ್ರವಣದಲ್ಲಿ ಶ್ರದ್ಧೆಯನ್ನು ಉಂಟು ಮಾಡುತ್ತದೆ ಎಂದು ಸಿದ್ಧವಾಗುವುದು.

ii. ಅಂತಃಕರಣವು ಕನ್ನಡಿಯಂತೆ ಸ್ವಚ್ಛವಾದ ದ್ರವ್ಯವು. ಇದು ಅನಾದಿ ವಿಷಯವಾಸನಾ ರೂಪವಾದ ಮಲದಿಂದ ಆವೃತವಾಗಿ ತತ್ವಜ್ಞಾನಜನಕವಾದ ಶ್ರವಣಾದಿಗಳಲ್ಲೂ, ಭಗವದ್ಧ್ಯಾನದಲ್ಲೂ ಆಸಕ್ತವಾಗಲಾರದು. ಸಾತ್ವಿಕ ಕರ್ಮಾನುಷ್ಠಾನದಿಂದ ರಜಸ್ತಮೋಗುಣ ಜನಿತವಾದ ಈ ದೋಷಗಳು ಸುಟ್ಟು ಹೋಗಿ ಗುಡಿಸಿದ ಮನೆಯಂತೆ ಅಂತಃಕರಣವು ಶುದ್ಧವಾಗುವುದು ಎಂದರೆ ಪ್ರಮಾದಾಲಸ್ಯಾದಿಗಳಿಂದ ರಹಿತವಾಗಿ ಚಿತ್ತೈಕಾಗ್ರತೆಯಿಂದ ಯುಕ್ತವಾಗಿ ಜ್ಞಾನಸಾಧನ ಕಾರ್ಯದಲ್ಲಿ ಸಮರ್ಥವಾಗುವುದು.

iii. ವಿಹಿತ ಕರ್ಮಾನುಷ್ಠಾನದ ಪ್ರಭಾವದಿಂದ ಜನಿತವಾದ ಪುಣ್ಯಪ್ರಚಯದಿಂದ ಪರಿಮಳೀಕೃತವಾದ ಅಂತಃಕರಣವು ದೇವತೆಗಳ ವಾಸಸ್ಥಾನವಾಗಿ ನಿಬಿಡವಾದ ಪ್ರಕಾಶದಿಂದ ಸಹಿತವಾಗುವುದರಿಂದ ಭಗವಂತನಲ್ಲಿ ಭಕ್ತಿಯೂ ಅತಏವ ಭಗವತ್ಕಥಾ ಶ್ರವಣದಲ್ಲಿ ವಿಶೇಷವಾದ ರತಿಯೂ, ವಿಷಯಗಳಲ್ಲಿ ಅನಾದರಣೆಯೂ ಸಾಕ್ಷಾತ್ತಾಗಿ ಉಂಟಾಗುವುವು. ಏವಂಚ ವಿಹಿತ ಕರ್ಮಾನುಷ್ಠಾನಕ್ಕೆ ಪಾಪಕ್ಷಯ, ಪುಣ್ಯಪ್ರಾಪ್ತಿ ಇವೆರಡೂ ಸಾಕ್ಷಾತ್ಫಲಗಳು. ಇವೆರಡರಿಂದಲೂ ಸಾಕ್ಷಾತ್ತಾಗಿಯೇ ಇಂದ್ರಿಯ ಜಯಾದಿಗಳೂ, ಭಗವನ್ಮಹಿಮಾ ಶ್ರವಣದಲ್ಲಿ ಸಾತ್ವಿಕ ಶ್ರದ್ಧೆಯೂ, ಕ್ರಮವಾಗಿ ರಾಗದ್ವೇಷರಾಹಿತ್ಯವೂ ಪ್ರಾಪ್ತವಾಗುವುವು.

3. **ಪ್ರಶ್ನೆ:—** ಸ್ವಾಮೀ! ನಿರಂತರ ವಿಹಿತ ಕರ್ಮಾನುಷ್ಠಾನದಿಂದ ಭಗವತ್ಕಥಾರತಿಯು ಪ್ರಾಪ್ತವಾಗುವುದು ಹೇಗೆ?

**ಉತ್ತರ:— ಶ್ರೀ ಶ್ರೀಗಳವರು :—** ಇದರಲ್ಲಿ ಆಶ್ಚರ್ಯವೇನು? 1. ವಿಹಿತ ಕರ್ಮಾನುಷ್ಠಾನದಿಂದ ಪ್ರಸನ್ನನಾದ ಪರಮಾತ್ಮನು ಕರ್ಮ ಕಾಲದಲ್ಲಿ ಮಾಡಿದ "**ಧಿಯೋ ಯೋ ನಃ ಪ್ರಚೋದಯಾತ್**" ಎಂದರೆ ನಮಗೆ ಸಮೀಚೀನವಾದ ಬುದ್ಧಿಯನ್ನು ಶ್ರೀ ಪರಮಾತ್ಮನು ಪ್ರೇರಣೆ ಮಾಡಲಿ, ಇತ್ಯಾದಿ ಪ್ರಾರ್ಥನಾನುಗುಣವಾಗಿ ತನ್ನನ್ನು ತಿಳಿಯುವುದಕ್ಕೆ ಯೋಗ್ಯವಾಗುವ ಸಾತ್ವಿಕ ಬುದ್ಧಿಯನ್ನು ದಯಪಾಲಿಸುವನು. ಕರ್ಮದಿಂದ ಬುದ್ಧಿ ವಿಕಾಸವು ಆಗುವುದು ನಿಶ್ಚಯವು. ಅದರಲ್ಲಿ ಸಾತ್ವಿಕ ಕರ್ಮದಿಂದ ಸಾತ್ವಿಕ ಬುದ್ಧಿಯೂ, ರಾಜಸ ಕರ್ಮದಿಂದ ರಾಜಸ ಬುದ್ಧಿಯೂ ತಾಮಸ ಕರ್ಮದಿಂದ ತಾಮಸ ಬುದ್ಧಿಯೂ ಬರುವುದು. "ಬುದ್ಧಿಃ ಕರ್ಮಾನುಸಾರಿಣೀ" ಎಂಬ ಪುರಾಣ ವಾಕ್ಯಕ್ಕೆ ಇದೂ ಒಂದು ಅರ್ಥವು.

2. ಕಿಂಚ, ಶೌಚ, ಸ್ನಾನ, ಊರ್ಧ್ವಪುಂಡ್ರಧಾರಣ, ಸಂಧ್ಯಾವಂದನ, ಜಪ, ಪಾರಾಯಣ, ದಾನ, ತೀರ್ಥಾಟನಾದಿ ಉತ್ತಮ ಕರ್ಮಗಳಲ್ಲಿ ನಿರತನಾದವನು ತಾನು ಯಾರ ಪ್ರೀತ್ಯರ್ಥವಾಗಿ ಸಂಕಲ್ಪಪೂರ್ವಕವಾಗಿ ಇಷ್ಟು ಕರ್ಮಗಳನ್ನು ಮಾಡುತ್ತಿರುವನೋ ಅಂಥ ಮಹಾಪುರುಷನು ಯಾರು ಎಂದು ಆಕಾಂಕ್ಷೆಯನ್ನು ಸಹಜವಾಗಿಯೂ ಹೊಂದುವನು. ಕರ್ಮಜನಿತ ಪುಣ್ಯಪ್ರಚಯದಿಂದ ಸುವಾಸಿತವಾದ ಅಂತಃಕರಣವುಳ್ಳವನಿಗೆ ಶ್ರವಣಾದಿಗಳಲ್ಲಿ ಅತ್ಯಾಸಕ್ತಿಯು ಕ್ಷಿಪ್ರದಲ್ಲಿ ಹುಟ್ಟಿ

ಹೋಗಿ ಭಗವಂತನಲ್ಲೂ, ಭಗವದ್ಭಕ್ತರಲ್ಲೂ ಅತುಲವಾದ ಯಥಾಯೋಗ್ಯವಾದ ಸ್ನೇಹವು ಅಂಕುರಿಸುವುದು. ಪ್ರತಿ ದಿನವೂ ಪರಮಾತ್ಮನನ್ನು ಉದ್ದೇಶ ಮಾಡಿ ಸಂಕಲ್ಪಗಳನ್ನು ಮಾಡುತ್ತಾ ಮಾಡುತ್ತಾ ಆವನ ಸ್ಮೃತಿಯು ಬರುತ್ತಿರುವುದು. ಯಾವನ ಪ್ರೀತ್ಯರ್ಥವಾಗಿ ಇದನ್ನೆಲ್ಲಾ ನಿತ್ಯವೂ ಆಚರಿಸುವನೋ ಅವನಲ್ಲಿ ಪ್ರೀತಿಯು ಬರುವುದು ಸಹಜವೇ! ಇಂಥ ಭಗವತ್ಸ್ನೇಹದಿಂದ ಸಹಿತರಾದ ಸಜ್ಜನರು ತುಚ್ಛವಾದ ವಿಷಯಾಪೇಕ್ಷೆಯಿಂದ ರಹಿತರಾಗಿ ಶ್ರವಣಾಧಿಕಾರಿಗಳಾಗುವ ರೆಂಬಲ್ಲಿ ಸಂಶಯವೇನು ?

3. ಪುಣ್ಯ ಕರ್ಮಗಳು ಮತ್ತೊಂದು ವಿಧವಾಗಿಯೂ ಮುಮುಕ್ಷುವನ್ನು ಕಾಪಾಡುವುವು ಎಂದರೆ ಮೋಕ್ಷೋಪಯೋಗಿಯಾದ ಶ್ರವಣದಲ್ಲಿ ಕಾರಣವಾಗುವುವು. ಧರ್ಮದಲ್ಲಿ ರತನಾದವನು ಅತ್ಯಂತ ನಿಷ್ಕಾಮನಾಗದಿದ್ದರೂ ಸಹ ಸ್ವರ್ಗಾದಿಗಳನ್ನು ಅನುಭವಿಸಿದ ಮೇಲೆ, ಕಾಮಿಯಾದ ಯೋಗಭ್ರಷ್ಟನಂತೆ, ಪ್ರಭೂತವಾದ ಸಾತ್ವಿಕ ಧನಸಂಪನ್ನನಾಗಿ ಉತ್ತಮ ಕುಲದಲ್ಲಿ ಹುಟ್ಟಿ, ಉತ್ತಮ ಗುರುಗಳನ್ನು ತನ್ನ ದ್ರವ್ಯ ದಾನಾದಿಗಳಿಂದ ತೃಪ್ತಿಪಡಿಸಿ, ಬ್ರಹ್ಮವಿದ್ಯೆಯನ್ನು ಹೊಂದುವದಕ್ಕೆ ಸಮರ್ಥನಾಗುವನು. ಶ್ರೀ ಕೃಷ್ಣನು ಹೇಳುತ್ತಾನೆ :—

**(1) ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ||**
**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಂ |**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಂ ||**
**—(6. 41–42.)**

ಯೋಗಭ್ರಷ್ಟನು (ಉಪಲಕ್ಷಣದಿಂದ ವಿಹಿತ ಪುಣ್ಯ ಕರ್ಮಗಳನ್ನು ಮಾಡುವವನು) * ಪವಿತ್ರರಾದ ಧನವಂತರ ಮನೆಯಲ್ಲಿ ಹುಟ್ಟುತ್ತಾನೆ. ಅಥವಾ ಬ್ರಹ್ಮವಿದ್ಯೆಯನ್ನು ಬಲ್ಲ ಜ್ಞಾನಿಗಳ ವಂಶದಲ್ಲಿ ಹುಟ್ಟುತ್ತಾನೆ. ಈ ವಿಧವಾದ ಉತ್ಪತ್ತಿಯು ಕಷ್ಟಲಭ್ಯವಾದುದು.

ಈ ಪ್ರಕಾರವಾಗಿ ಸತ್ಕರ್ಮಗಳಿಂದ ಪ್ರಾಪ್ತವಾದ ಧನದಿಂದ ಮತ್ತಷ್ಟು ಪುಣ್ಯ ಕರ್ಮಗಳನ್ನೂ, ಗುರುಸೇವೆಯನ್ನೂ ಮಾಡಿದರೆ ಪ್ರಸನ್ನನಾದ ಗುರುವಿನಿಂದ ಸುಲಭವಾಗಿ ಶಾಸ್ತ್ರ ಶ್ರವಣಾದಿಗಳನ್ನು ಮಾಡಿ ಜ್ಞಾನವನ್ನು ಹೊಂದಬಹುದು. ಈ ರೀತಿಯಾಗಿ ಕರ್ಮಾನುಷ್ಠಾನವು ಬ್ರಹ್ಮವಿದ್ಯಾಪ್ರಾಪ್ತಿಯಲ್ಲಿ ಒಂದು ಬಹಿರಂಗ ಕಾರಣವಾಗಿಯೂ ಕ್ವಚಿತ್ ಆಗುವುದು. ಈ ವಿವಕ್ಷೆಯಿಂದಲೇ ವಿದುರನು ಧರ್ಮಾದಿ ಚತುರ್ವಿಧ ಪುರುಷಾರ್ಥಗಳಲ್ಲಿ ಧರ್ಮವು (ಸತ್ಕರ್ಮಾನುಷ್ಠಾನವು)

---

* ಈ ವಾಕ್ಯದಲ್ಲಿ ಕೇವಲ ಯೋಗಭ್ರಷ್ಟನನ್ನು ವಿವಕ್ಷೆ ಮಾಡಬಾರದು, ಮತ್ತೇನೆಂದರೆ, ಸರ್ವ ಪುಣ್ಯ ಕರ್ಮದಲ್ಲಿ ರತರಾದವರನ್ನೂ ತೆಗೆದುಕೊಳ್ಳಬೇಕೆಂಬುದು "ನ ಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ" ಎಂಬ ಹಿಂದಿನ ಶ್ಲೋಕದಿಂದಲೇ ಸೂಚಿತವಾಗುವುದು.

ಶ್ರೇಷ್ಠವು ಎಂದು ಹೇಳಿದನು. ಶ್ರವಣಾದಿಗಳಿಗೆ ಪ್ರಯೋಜಕವಾದ ಉತ್ತಮ ದೇಹಾದಿಪ್ರಾಪ್ತಿರೂಪವಾದ ಮಹಾಲಾಭವು ಸತ್ಕರ್ಮಾನುಷ್ಠಾನ ಮಾಡಿದವರಿಗೇ ಶಕ್ಯವಾಗುವುದು.

4. ಮತ್ತೊಂದು ಪ್ರಕಾರವಾದ ಕರ್ಮದ ಸಾರ್ಥಕತೆಯು ಮತ್ತು ಪರಂಪರಯಾ ಶ್ರವಣೋಪಯೋಗಿತ್ವವು ಸುಲಭವೇದ್ಯವಾದ ಶಾಸ್ತ್ರಾರ್ಥವಾಗಿರುವುದು. ರಾಜಾಜ್ಞೆಗಳನ್ನು ಉಲ್ಲಂಘಿಸುವ ದ್ರೋಹಿಯು ಶಿಕ್ಷೆಗೆ ಗುರಿಯಾಗಿ ರಾಜ್ಯದಲ್ಲಿರುವ ಮಾನ್ಯ ಸ್ಥಾನಗಳ ಪ್ರವೇಶದಲ್ಲಿ ಅಧಿಕಾರವನ್ನು ಕಳೆದುಕೊಳ್ಳುವಂತೆ, ಭಗವದಾಜ್ಞಾರೂಪವಾದ ಶ್ರುತಿ ಸ್ಮೃತಿಗಳಲ್ಲಿರುವ ವಿಧಿಗಳನ್ನು ಅತಿಕ್ರಮಿಸಿ ನಿರಂಕುಶವಾಗಿ ಪ್ರವರ್ತಿಸಿದರೆ ನರಕವು ಪ್ರಾಪ್ತವಾಗುವದಲ್ಲದೆ ಪುನಃ ಭೂಲೋಕದಲ್ಲಿ ನಾಯಿ, ನರಿ, ಕುರಿ, ಕೋಳಿ, ಹಂದಿ, ಪತಂಗಾದಿ ನಾನಾ ದುರ್ಯೋನಿಗಳನ್ನು ಹೊಂದುವುದರಿಂದ ಶ್ರವಣಾದಿಗಳಿಗೆ ಪ್ರಯೋಜಕವಾದ ಮನುಷ್ಯ ದೇಹವನ್ನೇ ಕಳೆದುಕೊಳ್ಳುವನು. ಶ್ರೀ ಕೃಷ್ಣನು ಹೇಳುತ್ತಾನೆ :—

**(2) ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ॥**
—(16. 23.)

ಯಾವಾತನು ಶಾಸ್ತ್ರವಿಧಿಯನ್ನು ಉಲ್ಲಂಘಿಸಿ, ಸ್ವೇಚ್ಛಾನುಸಾರವಾಗಿ ಪ್ರವರ್ತಿಸುವನೋ ಆತನು ಜ್ಞಾನಾದಿ ರೂಪವಾದ ಫಲವನ್ನು ಹೊಂದುವುದಿಲ್ಲ. ಇಹದಲ್ಲೂ ಸುಖವನ್ನು ಹೊಂದುವುದಿಲ್ಲ. (ಆಸುರ ಯೋನಿಗಳನ್ನು ಹೊಂದುವುದರಿಂದ) ಉತ್ತಮ ಗತಿಯನ್ನೂ ಹೊಂದುವುದಿಲ್ಲ.

ಶ್ರೀ ಕೃಷ್ಣನು ಶಾಸ್ತ್ರವಿಧಿಯನ್ನು ಮೀರಿ ನಡೆಯುವವರು ಅಸುರರೆಂದೇ ಹೇಳುತ್ತಾನೆ :—

**(3) ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥**
—(16. 7.)

**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥**
—(16. 19.)

"ಅಸುರರು ವಿಧ್ಯುಕ್ತ ಕರ್ಮಗಳಲ್ಲಿ ಪ್ರವೃತ್ತಿಯನ್ನೂ ವಿಧಿನಿಷಿದ್ಧದ ಪರಿತ್ಯಾಗವನ್ನೂ ತಿಳಿದು ಅನುಷ್ಠಾನ ಮಾಡುವವರಲ್ಲ. ಆದುದರಿಂದ ಅವರಲ್ಲಿ ವಿಧ್ಯುಕ್ತಶೌಚವು ಇರುವುದಿಲ್ಲ. ಸ್ನಾನ, ಊರ್ಧ್ವಪುಂಡ್ರಧಾರಣ, ಸಂಧ್ಯಾವಂದನ, ದೇವಪೂಜಾದಿ ಆಚರಣೆಗಳು ಇರುವುದಿಲ್ಲ. "ಸತ್ಯಂ ವದ" ಇತ್ಯಾದಿ ವೇದೋಕ್ತ

ಯಥಾರ್ಥ ವಚನವು ಇರುವುದಿಲ್ಲ....... ಈ ರೀತಿಯಾಗಿ ನನ್ನ ಆಜ್ಞೆಯನ್ನು ಉಲ್ಲಂಘನೆ ಮಾಡಿದ ನರಾಧಮರಾದ ದುಷ್ಕರ್ಮಗಳನ್ನು ಮಾಡಿದ ನನ್ನ ದ್ವೇಷಿಗಳನ್ನು ನಾನು ನಿರಂತರವೂ ಆಸುರೀ ಯೋನಿಗಳಲ್ಲಿ ಇಡುತ್ತೇನೆ. ಎಂದರೆ ತಮೋಗುಣ ಪ್ರಚುರವಾದ ದುರ್ಯೋನಿಗಳಲ್ಲಿ ಇಡುತ್ತೇನೆ" ಎಂದರ್ಥವು.

**ಪ್ರಶ್ನೆ :—** ಸ್ವಾಮೀ ! ವಿಧ್ಯುಕ್ತಕರ್ಮಗಳನ್ನು ಮಾಡದೆ ಈಗ ಎಷ್ಟೋ ಜನರು ಶ್ರವಣಾದಿಗಳನ್ನು ಮಾಡಿ ಜ್ಞಾನವನ್ನು ಸಂಪಾದಿಸಿ ಗ್ರಂಥಗಳನ್ನು ಸಹ ಬರೆದಿರುವರು. ಆಂಗ್ಲೇಯರಲ್ಲಿ ಅನೇಕರು ವೇದವಿಧಿಯನ್ನು ಅತಿಕ್ರಮಿಸಿ ಇದ್ದರೂ ಪ್ರಚಂಡ ಪಂಡಿತರಾಗಿರುವರು. ಹೀಗಿರುವಲ್ಲಿ ವಿಧ್ಯುಕ್ತ ಕರ್ಮಗಳನ್ನು ಮಾಡದವನಿಗೆ ಜ್ಞಾನಾದಿಗಳು ಬರುವುದಿಲ್ಲವೆಂದು ಹೇಳುವುದು ಹೇಗೆ ?

**ಉತ್ತರ :— ಶ್ರೀ ಶ್ರೀಗಳವರು :—** ನಾವು ಪೂರ್ವದಲ್ಲಿಯೇ ನಿರೂಪಿಸಿದೆವು. ಕರ್ಮಮಾತ್ರದಿಂದ ಜ್ಞಾನವು ಪರಂಪರಯಾ ಪ್ರಾಪ್ತವಾಗುವುದು. ಆದರೆ ಪರಮಾತ್ಮನ **ಅಪರೋಕ್ಷ ಜ್ಞಾನಜನಕವಾದ ಯಥಾರ್ಥ ತತ್ವಜ್ಞಾನವು** ವೇದವಿರುದ್ಧ ಆಚಾರವುಳ್ಳವರಿಗೆ ದೊರಕಲಾರದು ಎಂದು ನಾವು ಹೇಳಿದೆವು. ರಾಜಾಜ್ಞೆಯನ್ನು ಉಲ್ಲಂಘಿಸಿ, ಶಾಲೆಗಳಿಗೆ ಹೋಗಿ ನಿಯತ ರೀತಿಯಲ್ಲಿ ಪರೀಕ್ಷೆ ಕೊಡದೆ, ತೇರ್ಗಡೆ ಪತ್ರವನ್ನು ಹೊಂದದೆ, ನಿಯತವಲ್ಲದ ಅನೇಕ ಗ್ರಂಥಗಳನ್ನು ಓದಿದ ಮಾತ್ರಕ್ಕೆ ಸರ್ಕಾರದವರು ತಮ್ಮ ನಿಯಮಕ್ಕೆ ಒಳಪಡದ ನಿರಂಕುಶ ಪ್ರಜೆಗೆ ಉತ್ತಮ ನೌಕರಿಯನ್ನು ಕೊಡಲಾರರು. ಇದೇ ರೀತಿಯಲ್ಲಿ ಪರಮಾತ್ಮನ ಕಾಯಿದೆಗಳನ್ನು ಮೀರಿ ವೇದೋಕ್ತ ಸ್ವವರ್ಣಾಶ್ರಮೋಚಿತವಾದ ಕರ್ಮಗಳನ್ನು ಮಾಡದವನಿಗೆ **ಸಂಸಾರತಾರಕವಾದ ಪರಮಾತ್ಮನ ಪ್ರಸಾದದಿಂದಲೇ ಬರುವ, ಮೋಕ್ಷೋಪಯೋಗಿಯಾದ** ಶ್ರವಣಾದಿಗಳಲ್ಲಿ ಅಧಿಕಾರವು ಬರುವುದಿಲ್ಲ. ಅಷ್ಟೇ ಹೊರತು, ಮೋಕ್ಷ ಮಾರ್ಗಕ್ಕೆ ವಿರುದ್ಧವಾದ, ಪರಮಾತ್ಮನ ಕೋಪಕ್ಕೆ ಪಾತ್ರವಾಗುವ, ಆಸುರಯೋನಿ ಪ್ರಾಪ್ತಿಗೂ ದುರ್ಗತಿಗೂ ಕಾರಣವಾಗುವ ತಾಮಸ ಜ್ಞಾನವು ಬರುವುದಿಲ್ಲವೆಂದು ಹೇಳಿದವರು ಯಾರು ? ವಿಪರ್ಯಯ ಜ್ಞಾನವು ಹೇಗೆ ತಮೋಗುಣಜನ್ಯವೋ ಹಾಗೆಯೇ ತನ್ನ ಅಧಿಕಾರವನ್ನು ಮೀರಿ ಭಗವನ್ನಿಯಮಗಳಿಗೆ ವಿರುದ್ಧವಾಗಿ ಸಂಪಾದಿಸಿದ ಯಥಾರ್ಥ ನಿಶ್ಚಯವೂ ಸಹ ತಮೋಗುಣ ಕಾರ್ಯವೇ. ಆದುದರಿಂದ ವಿಧಿ ನಿಷೇಧಗಳನ್ನು ಗೌರವ ಮಾಡಿ ಆಚರಿಸದವರಿಗೆ ಅಧಃಪತನವು ತಪ್ಪಿದುದಲ್ಲ. ವಸ್ತುತಃ ವಿಧ್ಯುಕ್ತ ಕರ್ಮರಹಿತನಾದವನಿಗೆ ಶಾಸ್ತ್ರ ತಾತ್ಪರ್ಯವಾದ ಯಥಾರ್ಥ ಜ್ಞಾನವೇ ಹುಟ್ಟುವುದಿಲ್ಲ. ಯಥಾರ್ಥ ಜ್ಞಾನವು ಹುಟ್ಟಿದರೂ ಅದೇ ಯಥಾರ್ಥವಾದುದು ಇತರ ಸರ್ವ ಮತಗಳೂ ಅಪ್ರಾಮಾಣಿಕವಾದುವುಗಳು ಎಂದು ಸಂಶಯ ವಿಪರ್ಯಯ ರಹಿತವಾದ ಪ್ರಾಮಾಣ್ಯ ನಿಶ್ಚಯವು ಯಾವಾಗಲೂ ಬರುವುದಿಲ್ಲ. ಅಷ್ಟೇ ಅಲ್ಲ. ವಿಪರೀತ ಜ್ಞಾನಗಳಲ್ಲಿ ಪ್ರಾಮಾಣ್ಯ ನಿಶ್ಚಯವು ಉಂಟಾಗುವುದು. ಶ್ರೀ ಕೃಷ್ಣನ ವಾಕ್ಯಗಳ ಅನುಪೂರ್ವೀ ಪರ್ಯಾಲೋಚನೆಯಿಂದಲೇ ಇದು ನಿಶ್ಚಿತವಾಗುವುದು :—

(4) ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।
ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥
—(16. 7.)

ಎಂದರೆ ಅಸುರ ಜನರು ವೇದೋಕ್ತ ರೀತಿಯಲ್ಲಿ ಸ್ವೋಚಿತವಾದ ಕರ್ಮಗಳನ್ನು ಮಾಡುವುದಿಲ್ಲವೆಂದು ಹೇಳಿ, ಮುಂದಿನ ವಾಕ್ಯದಲ್ಲಿ,

(5) ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ ।
ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಂ ॥
ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥
—(16. 8-9.)

ಎಂದು ಹೇಳಿದನು. "ವಿಧಿ ನಿಷೇಧಗಳನ್ನು ಅನುಸರಿಸಿ ಆಚರಣೆಗಳನ್ನು ನಡೆಸದ ಅಸುರರು ಜಗತ್ತು ಮಿಥ್ಯಾ, ಸ್ವಾಧಾರರಹಿತವಾದುದು, ಪಾಲಕನಾದ ಈಶ್ವರನಿಂದ ರಹಿತವಾದುದು ಇತ್ಯಾದಿ ರೀತಿಯಾದ ಜ್ಞಾನವನ್ನು ಅವಲಂಬಿಸಿ ದುಷ್ಟ ಮನಸ್ಸಿನಿಂದ ಸಹಿತರಾದ ನೀಚ ಬುದ್ಧಿಗಳಾಗುವರು. ಅವರು ಜಗತ್ತಿನ ಕ್ಷೇಮನಾಶಕರಾಗಿ ಸ್ವನಾಶಾರ್ಥವಾಗಿಯೇ ಎಂದರೆ ನರಕಾದ್ಯನರ್ಥಗಳನ್ನು ಹೊಂದುವುದಕ್ಕಾಗಿಯೇ ಲೋಕದಲ್ಲಿ ಹುಟ್ಟುತ್ತಾರೆ" ಎಂದು ಅರ್ಥವು. ಇದರಿಂದ ವಿಧ್ಯತಿಕ್ರಮಕ್ಕೂ ವಿಪರ್ಯಯ ಜ್ಞಾನೋತ್ಪತ್ತಿಗೂ ಯಾವುದಾದರೂ ಒಂದು ರೀತಿಯಲ್ಲಿ ಕಾರ್ಯಕಾರಣ ಭಾವವು ಇರುವುದೆಂದು ಸೂಚಿತವಾಗುವುದು. ಮುಂದಿನ ವಾಕ್ಯಗಳಲ್ಲಿ ಶ್ರೀ ಕೃಷ್ಣನೇ ಅಸುರ ಜನರ ಚಿಂತಾ ಪ್ರಕಾರವನ್ನು ವಿಶೇಷವಾಗಿ ನಿರೂಪಿಸಿರುತ್ತಾನೆ. ಇವೆಲ್ಲಕ್ಕೂ ಆರಂಭದಲ್ಲಿಯೇ ಅವರು ವೇದೋಕ್ತ ವಿಧಿಗಳನ್ನು ಪರಿಪಾಲಿಸುವುದಿಲ್ಲವೆಂದು ಹೇಳಿರುವುದರಿಂದ ಅವರ ವಿಧ್ಯತಿಕ್ರಮವನ್ನು ನೋಡಿ ಕುಪಿತನಾದ ಕರ್ಮಫಲಪ್ರದನಾದ ಪರಮಾತ್ಮನೇ ಅವರಿಗೆ ತನ್ನ ಪ್ರಾಪ್ತಿಗೆ ಪ್ರತಿಬಂಧಕವಾಗುವ ಅಂಥ ದುಷ್ಟ ಜ್ಞಾನವನ್ನು ಕೊಡುವನೆಂದು ನಿಶ್ಚಯಿಸಬೇಕು. ಯಾತಕ್ಕೆಂದರೆ, ಪರಮಾತ್ಮನೇ ಬುದ್ಧ್ಯಾದಿಗಳಿಗೆ ಪ್ರೇರಕನು, ಜ್ಞಾನಾದಿದಾತೃವು ಎಂದು ಪ್ರಮಿತವಾಗಿರುತ್ತದೆ. ಶ್ರೀ ಕೃಷ್ಣನು ಹೇಳುತ್ತಾನೆ :—

(6) ಬುದ್ಧಿರ್ಜ್ಞಾನಮಸಂಮೋಹಃ....ಮತ್ತ ಏವ ಪೃಥಗ್ವಿಧಾಃ ।
(10. 4-5.)

(7) ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ॥
—(15. 15.)

ಕಿಂಚ ಪರಮಾತ್ಮನು ತನ್ನ ಭಕ್ತರಾಗಿ ಸ್ವೋಚಿತ ಕರ್ಮಗಳಲ್ಲಿ ರತರಾದವರಿಗೆ ತನ್ನ ಪ್ರಾಪ್ತಿ ಪ್ರಯೋಜಕವಾದ ಉತ್ತಮ ಜ್ಞಾನವನ್ನು ಕೊಟ್ಟು ಅವರ

ಹೃದಯದಲ್ಲಿರುವ ಅಜ್ಞಾನವನ್ನು ನಾಶ ಮಾಡುವನು. ಶ್ರೀ ಕೃಷ್ಣನು ಹೇಳುತ್ತಾನೆ :—

(8) ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಂ ।
ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥
ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ ।
ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥
ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥
—(10. 9-11.)

**ಅರ್ಥ :—** ಎಲೈ ಪಾರ್ಥನೆ! ನನ್ನ (ಶ್ರೀ ಕೃಷ್ಣನ) ಮಹಿಮೆಯನ್ನು ತಿಳಿದ ಜ್ಞಾನಿಗಳು ನನ್ನಲ್ಲಿಯೇ ಇಡಲ್ಪಟ್ಟ ಚಿತ್ತವುಳ್ಳವರಾಗಿ, ನನ್ನಲ್ಲಿಯೇ ಅರ್ಪಿತವಾದ ಪ್ರಾಣವುಳ್ಳವರಾಗಿ, ( ಶ್ರೀ ಕೃಷ್ಣನ ಸೇವಾರ್ಥವಾಗಿಯೇ ಪ್ರಾಣವನ್ನು ಧಾರಣೆ ಮಾಡುವವರಾಗಿ, ಮತ್ತು ಕೇವಲ ಶ್ರೀ ಕೃಷ್ಣನ ಪ್ರೀತ್ಯರ್ಥವಾದ ಚೇಷ್ಟೆಗಳನ್ನು ಉಳ್ಳವರಾಗಿ ) ಶಿಷ್ಯರಿಗೆ ನನ್ನ ಸ್ವರೂಪವನ್ನು ಉಪದೇಶ ಮಾಡುತ್ತಾ, ಇಬ್ಬರು ಸೇರಿದಾಗ ಪರಸ್ಪರವಾಗಿ ನನ್ನ ಮಹಿಮೆಗಳನ್ನು ಒಬ್ಬರಿಗೊಬ್ಬರು ತಿಳಿಸಿ ಕೊಡುತ್ತಾ, ಸರ್ವದಾ ವಿಷಯಗಳಲ್ಲಿ ಅಲಂಬುದ್ಧಿಯುಳ್ಳವರಾಗಿರುತ್ತಾರೆ; ಮತ್ತು ನನ್ನ ಧ್ಯಾನದಿಂದ ಸುಖವನ್ನು ಅನುಭವಿಸುತ್ತಾರೆ. ಈ ರೀತಿಯಾಗಿ ನಿತ್ಯದಲ್ಲಿಯೂ ನನ್ನಲ್ಲಿ ನಿಬದ್ಧವಾದ ಚಿತ್ತವುಳ್ಳ, ಭಕ್ತಿಪೂರ್ವಕವಾಗಿ ನನ್ನನ್ನು ಸೇವಿಸುವ ಅಧಿಕಾರಿಗಳಿಗೆ ಯಾವುದರಿಂದ ಅವರು ನನ್ನನ್ನು ಬಂದು ಸೇರುತ್ತಾರೆಯೋ, ಅಂತಹ ಜ್ಞಾನರೂಪವಾದ ಉಪಾಯವನ್ನು ಕೊಡುತ್ತೇನೆ. ಮತ್ತು ಅವರಲ್ಲಿಯೇ ದಯಾನಿಮಿತ್ತದಿಂದ ಅವರ ಅಂತಃಕರಣದಲ್ಲಿ ನಾನು ಒಂದು ರೂಪದಿಂದ ಸ್ಥಿತನಾಗಿ, ಪ್ರಜ್ವಲಿತವಾದ ಜ್ಞಾನವೆಂಬ ದೀಪದಿಂದ ಅವರ ಮನೋಗತವಾದ ಅಜ್ಞಾನಜನ್ಯವಾದ ಸಕಲಗಳನ್ನೂ ನಾಶ ಮಾಡುತ್ತೇನೆ.

ಈ ವಾಕ್ಯಾರ್ಥ ವಿಮರ್ಶೆಯಿಂದ ನಾವು ಹೇಳಿದ ಎರಡು ವಿಷಯಗಳೂ ಸಿದ್ಧವಾಗುವುವು. "ತೇಷಾಂ ಸತತಯುಕ್ತಾನಾಂ" ಎಂದರೆ ನಿರಂತರ ನನಗೆ ಸಮ್ಮತವಾದ ಕರ್ಮಯೋಗದಲ್ಲಿ ರತರಾಗಿ ನನ್ನಲ್ಲಿ ಭಕ್ತಿ ಮಾಡುವವರಿಗೇನೇ ನಾನು ಜ್ಞಾನಪ್ರದನಾಗುವೆನು ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ. ಕಿಂಚ "ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ" ಎಂದರೆ ಯಾವುದರಿಂದ ನನ್ನನ್ನು ಹೊಂದುತ್ತಾರೆಯೋ **ಅಂಥ** ಬುದ್ಧಿಯೋಗವನ್ನು ನಾನು ಕೊಡುತ್ತೇನೆಂದು ಶ್ರೀ ಕೃಷ್ಣನು ಪ್ರತಿಜ್ಞೆ ಮಾಡಿರುವುದರಿಂದ, ಶ್ರೀ ಕೃಷ್ಣನ ಪ್ರಾಪ್ತಿರಹಿತವಾದ ಒಂದು ಬುದ್ಧಿಯೋಗವೂ ಉಂಟೆಂದು ನಿಶ್ಚಿತವಾಗುವುದು. ಹದಿನಾರನೆಯ ಅಧ್ಯಾಯದಲ್ಲಿ

ಶ್ರೀ ಕೃಷ್ಣನು ಅಸುರರ ಬುದ್ಧಿ ಪ್ರಕಾರವನ್ನು "ಈಶ್ವರೋಽಹಮಹಂ ಭೋಗೀ" ಇತ್ಯಾದಿ ಅನೇಕ ಶ್ಲೋಕಗಳಲ್ಲಿ ವಿವರಿಸಿ,

**(9) ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ ॥**

ಎಂದರೆ ಅಸುರರು ಸರ್ವಥಾ ನನ್ನನ್ನು ಹೊಂದದೇ ಅಂತ್ಯದಲ್ಲಿ ಅಂಧಂತಮಸ್ಸನ್ನು ಕುರಿತು ಹೋಗುತ್ತಾರೆ ಎಂದು ಹೇಳಿರುತ್ತಾನೆ.

ಪರಮಾತ್ಮನ ಪ್ರೀತಿಕರವಾದ ಸ್ವೋಚಿತ ಧರ್ಮಾನುಷ್ಠಾನವು ಸಾತ್ವಿಕ ಗುಣ ಕಾರ್ಯವು. ಆದುದರಿಂದ ಅದು ರಜಸ್ತಮೋಗುಣಗಳ ಹನನದಲ್ಲಿ ಸಮರ್ಥವಾಗುವುದು ಮತ್ತು ಭಗವಂತನಲ್ಲಿ ರತಿಯನ್ನೂ ಹುಟ್ಟಿಸುವುದು, ನಂತರ ಯಥಾರ್ಥ ಜ್ಞಾನಕ್ಕೂ ಕಾರಣವಾಗುವುದೆಂದು ಭಾಗವತದಲ್ಲಿಯೂ ಹೇಳಲ್ಪಟ್ಟಿರುವುದು. ಹದಿನಾಲ್ಕನೆಯ ಅಧ್ಯಾಯದಲ್ಲಿ ಗೀತೆಯಲ್ಲಿಯೂ ಉಕ್ತವಾಗಿರುವುದು ಭಾಗವತದಲ್ಲಿ ಉದ್ಧವನಿಗೆ ಶ್ರೀ ಕೃಷ್ಣನು **"ಸತ್ವೇನಾನ್ಯತಮೌ ಹನ್ಯಾತ್"** ಎಂದರೆ ಸತ್ವ ಗುಣದಿಂದ ರಜಸ್ತಮೋಗುಣಗಳನ್ನು ನಾಶ ಮಾಡಬೇಕೆಂದು ಉಪದೇಶ ಮಾಡಿರುತ್ತಾನೆ. ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿಯೂ ಹೇಳಿರುತ್ತಾನೆ :—

**(10) ತತ್ರ ಸತ್ವಂ ನಿರ್ಮಲತ್ವಾತ್ಪ್ರಕಾಶಕಮನಾಮಯಂ ।**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥**

**—(14. 6)**

ಸತ್ವ ಗುಣವು ಶುದ್ಧವಾದುದರಿಂದ ಭವರೋಗನಾಶಕವಾದ ಜ್ಞಾನೋತ್ಪಾದಕವಾಗಿ ಸಾತ್ವಿಕ ಸುಖ ಸಂಬಂಧದಿಂದಲೂ ತತ್ವಜ್ಞಾನ ಸಂಬಂಧದಿಂದಲೂ ಮುಕ್ತಿಯೋಗ್ಯ ಜನರನ್ನು ಬಂಧಿಸುತ್ತದೆ

ಸತ್ವ ಗುಣವು ಜ್ಞಾನೋತ್ಪತ್ತಿಯಲ್ಲಿ ಪ್ರಯೋಜಕವಾಗುವ ಕ್ರಮವು **"ಸತ್ವಾದ್ಧರ್ಮೋ ಭವೇದ್ವೃದ್ಧಾತ್ಪುಂಸೋ ಮದ್ಭಕ್ತಿ ಲಕ್ಷಣಃ । ಸಾತ್ವಿಕೋಪಾಸ್ತಯಾ ಜ್ಞಾನಂ ತತೋ ಧರ್ಮಃ ಪ್ರವರ್ತತೇ ॥ ಧರ್ಮೋ ರಜಸ್ತಮೋ ಹನ್ಯಾತ್ಸತ್ವವೃತ್ತಿರನುತ್ತಮಾ ॥** ಎಂಬ ಏಕಾದಶಸ್ಕಂಧ ಶ್ಲೋಕಗಳಲ್ಲಿ ಪ್ರಮಿತವಾಗಿರುವುದು. ಸಾತ್ವಿಕ ಗುಣಕಾರ್ಯವಾದ ವಿಧ್ಯುಕ್ತ ಸ್ವಧರ್ಮಾನುಷ್ಠಾನದಿಂದ ಭಗವತ್ಕಥಾ ಶ್ರವಣಾದಿಗಳಲ್ಲಿ ರತಿಯೂ, ಸಾತ್ವಿಕ ಭಗವದ್ಜ್ಞಾನವೂ ಬರುವುದು ಎಂದು ಪೂರ್ವದಲ್ಲಿ ನಿರೂಪಿತವಾದ ಅರ್ಥವೇ ಉಕ್ತವಾಗಿರುವುದು. ಆದುದರಿಂದ ವಿಧ್ಯುಕ್ತ ಕರ್ಮಾನುಷ್ಠಾನದಿಂದಲೇ ಯಥಾರ್ಥ ಜ್ಞಾನಪ್ರಾಪ್ತಿಯೂ, ವಿಧ್ಯತಿಕ್ರಮದಿಂದ ತಾಮಸಗುಣ ಜನ್ಯವಾದ ದುಷ್ಟ ಜ್ಞಾನವೂ ಬರುವುದೆಂದು ನಿಶ್ಚಯಿಸಬೇಕು.

**ಪ್ರಶ್ನೆ :—** ಸ್ವಾಮೀ ! ಯದ್ಯಪಿ ಶಾಲಾ ನಿಯಮಗಳು ಅನೇಕವಿರುವುವು. ಆದರೆ ರಾಜದ್ರೋಹಾದಿಗಳನ್ನು ಮಾಡದೇ ಶಾಲೆಯವರ ಅಪ್ಪಣೆಗೆ ಅನುಗುಣ

ವಾಗಿಯೇ ಮನೆಯಲ್ಲಿಯೇ ನಿಯತ ಗ್ರಂಥಗಳನ್ನು ಓದಿ ಪರೀಕ್ಷೆ ಕೊಟ್ಟವರಿಗೂ ಸಹ ತೇರ್ಗಡೆ ಚೀಟಿಯು ದೊರಕುವುದು. ಹೀಗೆಯೇ ಕರ್ಮಾದಿಗಳನ್ನು ಮಾಡ ದಿದ್ದರೂ ಪೂರ್ವಜನ್ಮ ಕೃತಕರ್ಮಪರಿಪಾಕದಿಂದ ಶ್ರವಣಾದಿಗಳಲ್ಲಿ ರತಿಯುಳ್ಳವ ನಾದವನು ಜ್ಞಾನವನ್ನು ಸಂಪಾದಿಸಬಹುದಲ್ಲವೇ?

**ಉತ್ತರ:— ಶ್ರೀ ಶ್ರೀಗಳವರು:—** ನಿಮ್ಮ ದೃಷ್ಟಾಂತದಲ್ಲಿ ವಿಧ್ಯತಿ ಕ್ರಮವು ಯಾವುದೂ ಇರುವುದಿಲ್ಲ. ಸರ್ಕಾರದವರ ಅಪ್ಪಣೆಯ ಪ್ರಕಾರವೇ ವಿಶೇಷ ಪ್ರಾರ್ಥನೆಗಳಿಂದ ಆಜ್ಞೆಯನ್ನು ಪಡೆದುಕೊಂಡು ಅವರಿಂದ ನಿಯತವಾದ ಗ್ರಂಥ ಜ್ಞಾನವನ್ನೇ ಮನೆಯಲ್ಲಿಯೇ ಓದಿ ಹೊಂದಿದರೂ ಆತನು ತೇರ್ಗಡೆ ಚೀಟಿಯನ್ನು ಪಡೆಯುವನು. ಹೀಗೆಯೇ ಸರ್ವದಾ ಪರಮಾತ್ಮನ ಆಜ್ಞೋಲ್ಲಂಘನಾರೂಪವಾದ ದ್ರೋಹವನ್ನು ಆಚರಿಸದೆ, ವಿಶೇಷ ಪ್ರಾರ್ಥನೆಯಿಂದ ಪ್ರಸನ್ನನಾದ ಪರಮಾತ್ಮನ ಅಪ್ಪಣೆಗೆ ಅನುಗುಣವಾಗಿ ಸಮೀಪದಲ್ಲಿ ಗುರುಗಳು ಇಲ್ಲದಿದ್ದರೆ ಭಗವತ್ಕಥಾ ಶ್ರವಣಾದಿಗಳಲ್ಲಿ ಭಕ್ತಿಪೂರ್ವಕವಾಗಿ ಆಸಕ್ತನಾದರೆ ಭಗವಂತನು ಕುಪಿತನಾಗುವುದಿಲ್ಲ. ಮತ್ತು ಪ್ರಸನ್ನನಾಗಿ ಕ್ಷಿಪ್ರದಲ್ಲಿ ಉತ್ತಮ ಗುರುಗಳನ್ನು ಸಂಯೋಗ ಮಾಡುವನು. ದಂಭಮಾನಮದಾನ್ವಿತರಾಗಿ ನಿಯತ ಕರ್ಮಗಳನ್ನು ಪರಿತ್ಯಾಗ ಮಾಡಿದರೆ ಬ್ರಾಹ್ಮಣ್ಯಾದಿ ಧರ್ಮಗಳೇ ನಾಶವಾಗುವುವು. ಅದರಿಂದ ಇದ್ದ ಅಧಿಕಾರವು ಲುಪ್ತವಾಗಿ ಅಂಥ ಭ್ರಷ್ಟನಿಂದ ಮಾಡಲ್ಪಟ್ಟ ಇತರ ಪುಣ್ಯಗಳೂ ನಿಷ್ಫಲವಾಗುವುವು. ಶ್ರೀ ಕೃಷ್ಣನು ಹೇಳುತ್ತಾನೆ:—

(11) **ಯಜ್ಞದಾನತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ ॥**
**ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥**

—(18. 5–7.)

**ಅರ್ಥ:—** ಎಲೈ ಪಾರ್ಥನೇ! ವಿಧ್ಯುಕ್ತವಾದ ಯಜ್ಞಗಳು ಸತ್ಪಾತ್ರದಲ್ಲಿ ದಾನಗಳು, ಉಪವಾಸಾದಿ ತಪಸ್ಸುಗಳು, ಸಂಧ್ಯಾದಿ ಕರ್ಮಗಳು ಇವುಗಳು ಬಿಡಲ್ಪಡತಕ್ಕವಲ್ಲ; ಮತ್ತು ಅವಶ್ಯಕವಾಗಿ ಆಚರಿಸಲ್ಪಡತಕ್ಕವುಗಳು. ಯಜ್ಞದಾನ ತಪಸ್ಸುಗಳು ಜ್ಞಾನಿಗಳಿಗೂ ಪಾವನಕರವಾದುವುಗಳು........ ವಿಧ್ಯುಕ್ತ ವರ್ಣಾಶ್ರಮೋಚಿತ ಕರ್ಮಗಳ ಪರಿತ್ಯಾಗವು ಯುಕ್ತವಲ್ಲ. ಮಿಥ್ಯಾಜ್ಞಾನದಿಂದ ಸ್ವೋಚಿತ ಕರ್ಮಗಳನ್ನು ಪರಿತ್ಯಾಗ ಮಾಡುವುದು ತಾಮಸವೆನ್ನಿಸಲ್ಪಡುತ್ತದೆ.

ಪರಮಾತ್ಮನ ಆಜ್ಞಾರೂಪವಾದ, ವಿಧ್ಯನುಗುಣವಾದ ಕರ್ಮಗಳನ್ನು ಮಾಡುವವನೇ ಜ್ಞಾನಾದಿಗಳನ್ನು ಪಡೆಯುವನೆಂದು ಶ್ರೀ ಕೃಷ್ಣನು ಹೇಳುತ್ತಾನೆ:–

(12) **ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ।**

—(12. 10.)

**ಅರ್ಥ :—** ನನ್ನ ಪ್ರೀತ್ಯರ್ಥವಾದ ಕರ್ಮಗಳನ್ನು ಮಾಡುತ್ತಲೇ ನೀನು ಜ್ಞಾನಾದಿ ಸಿದ್ಧಿಯನ್ನು ಹೊಂದುತ್ತೀಯ

**(13) ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ||**
—(18 46 )

ಸ್ವವರ್ಣಾಶ್ರಮೋಚಿತ ಕರ್ಮಗಳಿಂದ ಪರಮಾತ್ಮನನ್ನು ಆರಾಧನೆ ಮಾಡಿದರೆ ಮನುಷ್ಯನು ಜ್ಞಾನರೂಪ ಸಿದ್ಧಿಯನ್ನು ಹೊಂದುವನು.

ಪರಂತು ಕರ್ಮಫಲವಾದ ಜ್ಞಾನವು ಪರಮಚೇತನವಾದ ಪರಮಾತ್ಮನ ಪ್ರಸಾದದಿಂದ ಪ್ರಾಪ್ತವಾಗುವ ಪದಾರ್ಥವೆಂದು ತಿಳಿದರೆ ಕರ್ಮದಿಂದ ಜ್ಞಾನವು ಹೇಗೆ ಬರುವುದೆಂಬ ನಿಮ್ಮ ಪ್ರಶ್ನೆಗೇ ಅವಕಾಶವಿರುವುದಿಲ್ಲ ತನ್ನ ಸೇವಾರೂಪವಾದ ಕರ್ಮಾನುಷ್ಠಾನದಿಂದ ಶ್ರೀ ಪರಮಾತ್ಮನು ಪ್ರಸನ್ನನಾಗುವನು, ಮತ್ತು ಫಲರೂಪವಾಗಿ ಅಂತಃಕರಣವನ್ನು ಶುದ್ಧಿ ಮಾಡಿ ಶ್ರವಣದಲ್ಲಿ ರತಿಯನ್ನು ಉತ್ಪತ್ತಿ ಮಾಡಿ ಜ್ಞಾನವನ್ನು ದಯಪಾಲಿಸುವನೆಂದು ಹೇಳುವುದರಲ್ಲಿ ಭಾಧಕವೇನು ? ಶ್ರೀ ಕೃಷ್ಣನು ತನ್ನ ಸ್ವಂತ ಮುಖದಿಂದ ಶಾಸ್ತ್ರೋಕ್ತ ರೀತಿಯಲ್ಲೇ ಸಕಲ ಕರ್ಮಗಳನ್ನೂ ಮಾಡಬೇಕೆಂದು ಹೇಳಿರುವನು :—

**(14) ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ||**
—(16 24 )

ಎಲೈ ಪಾರ್ಥನೇ ! ಶಾಸ್ತ್ರಸಮ್ಮತವಾದ ಕರ್ತವ್ಯ ಕರ್ಮವನ್ನು ತಿಳಿದುಕೊಂಡು ನೀನು ಕರ್ಮಗಳನ್ನು ಮಾಡಬೇಕು.

ಇಷ್ಟು ಮುಖ್ಯವಾದ ತಾತ್ಪರ್ಯವು :—

1. ವಿಷ್ಣುವಿನ ಆಜ್ಞಾರೂಪವಾದ ವೇದವಿಧಿಗಳ ಅತಿಕ್ರಮವು ವಿಷ್ಣುದ್ರೋಹರೂಪವಾಗಿ ಪರಿಣಮಿಸಿ, ಶ್ರವಣಾದಿಗಳಿಗೆ ಪ್ರಯೋಜಕವಾದ ಬ್ರಾಹ್ಮಣಾದಿ ಉತ್ತಮ ದೇಹ ಪ್ರಾಪ್ತಿಗೇ ವಿಘಾತಕವಾಗುವುದು 2 ನಮಗೆ ಇಷ್ಟಕರ್ಮವನ್ನು ನಾವು ಮಾಡಿದರೆ ಫಲದಾತೃವೆಂದು ಪ್ರಸಿದ್ಧನಾದ ಪರಮಾತ್ಮನು ಪ್ರಸನ್ನನಾಗುವುದಿಲ್ಲ ಮತ್ತು ಆತನಿಗೆ ಸಮ್ಮತವಾದ ಶಾಸ್ತ್ರೋಕ್ತ ಆಚರಣೆಯಿಂದ ಆತನು ಪ್ರಸನ್ನನಾಗಿ ಅಂತಃಕರಣ ಶುದ್ಧಿದ್ವಾರಾ ಜ್ಞಾನ ಫಲವನ್ನು ಕೊಡುವನೆಂದು ಪ್ರತಿಜ್ಞೆ ಮಾಡಿರುವನು 3. ವಿಧ್ಯುಕ್ತಕರ್ಮವು ಸಾತ್ವಿಕ ಗುಣಕಾರ್ಯವಾದುದರಿಂದಲೂ ರಜಸ್ತಮೋ ಭಾವಗಳನ್ನು ನಾಶ ಮಾಡಿ, ಸಚ್ಛಾಸ್ತ್ರದಲ್ಲಿ ಸ್ನೇಹವನ್ನು ವೃದ್ಧಿ ಮಾಡಿ, ಜ್ಞಾನಕ್ಕೆ ಕಾರಣವಾಗುವುದೆಂದು ಹೇಳಲ್ಪಟ್ಟಿರುವುದು. 4. ಧರ್ಮದಿಂದ ಅರ್ಥಪ್ರಾಪ್ತಿಯೂ, ಸಮೀಚೀನವಾಗಿ ವಿನಿಯುಕ್ತವಾದ ದ್ರವ್ಯದಿಂದ ಗುರುತುಷ್ಟಿಯೂ, ತದ್ದ್ವಾರಾ ಬ್ರಹ್ಮವಿದ್ಯಾ ಪ್ರಾಪ್ತಿ ರೂಪವಾದ ಫಲವೂ ದೊರಕಬಹುದಾದುದರಿಂದಲೂ, ಕರ್ಮವು ಜ್ಞಾನಕ್ಕೆ ಕಾರಣವಾಗಬಹುದೆಂದು ಹೇಳಬಹುದು.

5. ಕರ್ಮದಿಂದ ಕ್ರಮವಾಗಿ ಇಂದ್ರಿಯಗಳೂ, ಮನೋವೃತ್ತಿಗಳೂ ಮಾಲಿನ್ಯರಹಿತವಾಗುವುವು ಸತ್ಕರ್ಮಾನುಷ್ಠಾನದಿಂದ ಮನೋಗತ ಪಾಪಗಳು ದೂರವಾಗುವುವು ಅತ ಏವ ದುಷ್ಟ ಕಾಮಗಳು ನಿವೃತ್ತವಾಗುವುವು ಸತ್ಕರ್ಮಾನುಷ್ಠಾನ ಜನಿತ ಪುಣ್ಯ ಪ್ರಭಾವದಿಂದ ಮನಸ್ಸು ಭಗವಚ್ಛಾಸ್ತ್ರದಲ್ಲಿ ಸ್ನೇಹಯುಕ್ತವಾಗುವುದು ಈ ರೀತಿಯಾಗಿ ಸತ್ಕರ್ಮಾನುಷ್ಠಾನವು ಸಾಕ್ಷಾತ್ಸತ್ವಶುದ್ಧಿಗೆ ಕಾರಣವಾಗಿ ಪರಂಪರಯಾ ಜ್ಞಾನಕ್ಕೆ ಕಾರಣವಾಗುವುದು. 6 ಕಿಂಚ ಪ್ರತಿದಿನವೂ ಕರ್ಮಾನುಷ್ಠಾನ ಮಾಡುವವನು " ಶ್ರೀ ವಿಷ್ಣು ಪ್ರೇರಣಯಾ ಶ್ರೀ ವಿಷ್ಣು ಪ್ರೀತ್ಯರ್ಥಂ " ಎಂದು ಸಂಕಲ್ಪ ಮಾಡಿ ಕರ್ಮಗಳನ್ನು ಮಾಡುತ್ತಾ ಯಾರ ಪ್ರಸಾದಾರ್ಥವಾಗಿ ಇಷ್ಟು ಪ್ರಯಾಸಪೂರ್ವಕವಾದ ಮಹತ್ಕರ್ಮಗಳನ್ನು ಆಚರಿಸುವನೋ ಅಂಥ ಮಹಾಪುರುಷನ ಮಹಿಮೆಗಳನ್ನು ತಿಳಿಯಬೇಕೆಂದು ಇಚ್ಛಿಸುವುದು ಸಹಜವಾಗಿಯೂ ಇರುವುದು. ಆದುದರಿಂದ ಸತ್ಕರ್ಮಾನುಷ್ಠಾನವು ಭಗವತ್ಕಥಾರತಿಯನ್ನು ಉಂಟು ಮಾಡುವುದೆಂದು ಹೇಳುವುದರಲ್ಲಿ ಅಸಂಭಾವನಾ ಶಂಕೆಗೇ ಅವಕಾಶವಿರುವುದಿಲ್ಲ 7 ಮತ್ತು ಭಗವಂತನಿಂದ ನಿಯತವಾದ ಶಾಸ್ತ್ರೋಕ್ತ ಕರ್ಮಗಳನ್ನು ಮಾಡದೆ ಕಾಮಚಾರೇಣ ಪ್ರವೃತ್ತರಾಗುವವರು ಅಸುರರು ಎಂದು ಶ್ರೀ ಕೃಷ್ಣನು ನಿಂದಿಸಿ, ಅವರಿಗೆ ಜಗತ್ತು ಮಿಥ್ಯಾ ಈಶ್ವರೋಽಹಂ ಇತ್ಯಾದಿ ದುಷ್ಟ ಜ್ಞಾನಗಳು ಬರುವುವು, ವಿಷ್ಣು ಭಕ್ತಿಯು ಬರುವುದಿಲ್ಲ, ಮತ್ತು ಅವರು ವಿಷ್ಣು ದ್ವೇಷರೂಪವಾದ ಆಚರಣೆಗಳಿಂದ ತಮಸ್ಸನ್ನು ಹೊಂದುತ್ತಾರೆ ಎಂದು ಹೇಳಿರುವನು. ಇದರಿಂದ ವಿಧ್ಯುಕ್ತ ಸಾತ್ವಿಕ ಕರ್ಮವೇ ಯಥಾರ್ಥ ಜ್ಞಾನಕ್ಕೆ ಕಾರಣವಾಗುವುದೆಂದೂ, ವಿಧಿವಿರುದ್ಧವಾದ ತಾಮಸ ಕರ್ಮಗಳು ಅಯಥಾರ್ಥ ಜ್ಞಾನಕ್ಕೆ ಕಾರಣವಾಗುವುವೆಂದೂ ಪ್ರಮಿತವಾಗುವುದು ಆದುದರಿಂದ ಮುಮುಕ್ಷುಗಳಾದ ಸರ್ವರೂ ಶಾಸ್ತ್ರನಿಷಿದ್ಧ ಆಚರಣೆಗಳ ಪರಿತ್ಯಾಗಪೂರ್ವಕವಾಗಿ ಸ್ವವರ್ಣಾಶ್ರಮೋಚಿತವಾದ ನಿತ್ಯ ನೈಮಿತ್ತಿಕ ಕರ್ಮಗಳಲ್ಲಿ ಅತ್ಯಂತ ಶ್ರದ್ಧೆಯಿಂದ ಆಸಕ್ತರಾಗಬೇಕೆಂದು ನಿರೂಪಿಸಿರುತ್ತೇವೆ

---

---

# 16. ಹದಿನಾರನೆಯ ಅಂಶವು.

## ಕರ್ಮಾನುಷ್ಠಾನವು ( ಮುಂದುವರಿಸಿದ್ದು. )

## ಜ್ಞಾನ ಮಾರ್ಗವೂ, ಕರ್ಮ ಮಾರ್ಗವೂ ವಿರುದ್ಧವೇ ?

## ಕರ್ಮಾನುಷ್ಠಾನದ ಅವಶ್ಯಕತೆಯು.

1. **ಶ್ರೀ ಶ್ರೀಗಳವರು :—** ಕರ್ಮಾನುಷ್ಠಾನವೂ, ಜ್ಞಾನ ಮಾರ್ಗವೂ ಪರಸ್ಪರ ವಿರುದ್ಧವಾದ ಅತ್ಯಂತ ಭಿನ್ನ ಮಾರ್ಗಗಳೆಂದು ಶಂಕರಾಚಾರ್ಯರು ಬರೆದಿರುತ್ತಾರೆ. ಕಾಮಿಗಳಾದ ಕರ್ಮಿಗಳು ಕರ್ಮ ಮಾರ್ಗದಲ್ಲಿ ಅಧಿಕಾರಿಗಳು. ಅಂಥವರಿಗೆ ಜ್ಞಾನ ಮಾರ್ಗದಲ್ಲಿ ಪ್ರವೇಶವಿಲ್ಲ ಜ್ಞಾನ ಮಾರ್ಗದಲ್ಲಿ ಪ್ರವಿಷ್ಟರಾದ ಸಂನ್ಯಾಸಿಗಳು ಸಮಸ್ತ ಕರ್ಮಗಳನ್ನೂ ಅವಶ್ಯವಾಗಿ ಪರಿತ್ಯಾಗ ಮಾಡಿ ಆತ್ಮಧ್ಯಾನದಲ್ಲಿ ನಿರತರಾಗಬೇಕೆಂದು ಶಾಂಕರಗೀತಾಭಾಷ್ಯದಲ್ಲಿ ಅನೇಕ ವಚನಗಳಿರುತ್ತವೆ. ಕರ್ಮ ಮಾರ್ಗವೂ, ಜ್ಞಾನಮಾರ್ಗವೂ ಭಿನ್ನ ಪುರುಷಾನುಷ್ಠೇಯವಾದ ಮತ್ತು ಒಬ್ಬ ಪುರುಷನಿಂದ ಅನುಷ್ಠಿಸಲ್ಪಡುವುದಕ್ಕೆ ಅಶಕ್ಯವಾದ ಭಿನ್ನ ಪದಾರ್ಥಗಳೆಂದು ಅವರು ಬಹು ಸಾಹಸದಿಂದ ಪುನಃ ಪುನಃ ಉಪಪಾದಿಸಿರುತ್ತಾರೆ.* ಈ ಅಭಿಪ್ರಾಯ ಖಂಡನೆಯನ್ನು ಪೂರ್ವದಲ್ಲಿಯೇ ಮಾಡಿರುತ್ತೇವೆ. ಪ್ರಕೃತದಲ್ಲಿ

---

* ಇದು ಶಾಂಕರ ಗೀತಾಭಾಷ್ಯದ ತೃತೀಯಾಧ್ಯಾಯದ ವಚನವು .—

(1) "ಭಿನ್ನಪುರುಷಾನುಷ್ಠೇಯತ್ವೇನ ಜ್ಞಾನಕರ್ಮನಿಷ್ಠಯೋಃ" ।

(2) ಭಿನ್ನಪುರುಷಾನುಷ್ಠೇಯತ್ವೇನ ಜ್ಞಾನಕರ್ಮನಿಷ್ಠಯೋಃ ಭಗವತಃ ಪ್ರತಿವಚನ ದರ್ಶನಾತ್ ಜ್ಞಾನಕರ್ಮಣೋಃ ಸಮುಚ್ಚಯಾನುಪಪತ್ತಿಃ ॥

"ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ" ಎಂಬ ಶ್ಲೋಕ ವ್ಯಾಖ್ಯಾನಾಪಸರದಲ್ಲಿ ಹೀಗೆ ಬರೆದಿರುತ್ತಾರೆ .—

(3) ಲೋಕೇಽಸ್ಮಿನ್ ಶಾಸ್ತ್ರಾರ್ಥಾನುಷ್ಠಾನಾಧಿಕೃತಾನಾಂ ತ್ರೈವರ್ಣಿಕಾನಾಂ ದ್ವಿವಿಧಾ ದ್ವಿಪ್ರಕಾರಾ ನಿಷ್ಠಾ ಸ್ಥಿತಿಃ......ತತ್ರ ಜ್ಞಾನಯೋಗೇನ ಜ್ಞಾನಮೇವ ಯೋಗಃ ತೇನ ಸಾಂಖ್ಯಾನಾಂ ಆತ್ಮಾನಾತ್ಮವಿಷಯವಿವೇಕವಿಜ್ಞಾನವತಾಂ ಬ್ರಹ್ಮಚರ್ಯಾಶ್ರಮಾದೇವ ಕೃತಸಂನ್ಯಾಸಾನಾಂ ವೇದಾಂತವಿಜ್ಞಾನಸುನಿಶ್ಚಿತಾರ್ಥಾನಾಂ ಪರಮಹಂಸಪರಿವ್ರಾಜಕಾನಾಂ ಬ್ರಹ್ಮಣ್ಯೇವ ಅವಸ್ಥಿತಾನಾಂ ನಿಷ್ಠಾ ಪ್ರೋಕ್ತಾ ಕರ್ಮಯೋಗೇನ ಕರ್ಮೈವ ಯೋಗಃ ಕರ್ಮಯೋಗಃ ತೇನ ಕರ್ಮಯೋಗೇನ ಕರ್ಮಿಣಾಂ ನಿಷ್ಠಾ ಪ್ರೋಕ್ತಾ ಇತ್ಯರ್ಥಃ ॥ ಯದಿ ಚ ಏಕೇನ ಪುರುಷೇಣ ಏಕಸ್ಮೈ ಪುರುಷಾರ್ಥಾಯ ಜ್ಞಾನಂ ಕರ್ಮ ಚ ಸಮುಚ್ಚಿತ್ಯ ಅನುಷ್ಠೇಯಂ ಭಗವತಾ ಇಷ್ಟಂ ಉಕ್ತಂ.. ... ಕಥಮಿಹ ಅರ್ಜುನಾಯ ಉಪಪನ್ನಾಯ ಪ್ರಿಯಾಯ ವಿಶಿಷ್ಟಭಿನ್ನಪುರುಷಕರ್ತೃಕೇ ಏವ ಜ್ಞಾನಕರ್ಮನಿಷ್ಠೇ ಬ್ರೂಯಾತ್ ?...... ತಸ್ಮಾತ್ ಕಯಾಪಿ ಯುಕ್ತ್ಯಾ ನ ಸಮುಚ್ಚಯೋ ಜ್ಞಾನಕರ್ಮಣೋಃ ॥

ಜ್ಞಾನ ಮಾರ್ಗವೂ, ಕರ್ಮ ಮಾರ್ಗ.... **ಸಮುಚ್ಚಿತ**ವಾಗಿಯೇ ಎಂದರೆ ಮಿಳಿತ ವಾಗಿಯೇ **ಅಪರೋಕ್ಷ ಜ್ಞಾನಕ್ಕೆ** ಕಾರಣವಾಗುತ್ತವೆ; ಅವುಗಳೆರಡೂ ಸಂನ್ಯಾಸಿ ಮತ್ತು ಗೃಹಸ್ಥರೆಂಬ ಭಿನ್ನ ಅಧಿಕಾರಿಗಳಿಂದ ಅನುಷ್ಠೇಯವಾದ ವಿರುದ್ಧ ಧರ್ಮ ಗಳಲ್ಲವೆಂಬ ಶ್ರೀ ಕೃಷ್ಣನ ಸಿದ್ಧಾಂತವನ್ನು ಸಂಗ್ರಹವಾಗಿ ಪ್ರತಿಪಾದಿಸುವೆವು.

1. ಸಂನ್ಯಾಸಿಯು ಸಾಂಖ್ಯಕ್ಕೆ ಅಧಿಕಾರಿಯು, ಗೃಹಸ್ಥನು ಕರ್ಮಕ್ಕೆ ಅಧಿಕಾರಿಯು ಎಂದು ಶಂಕರಾಚಾರ್ಯರು ಹೇಳಿರುತ್ತಾರಷ್ಟೇ ! ಇದು ಕೃಷ್ಣನ ಕ್ರೋಧಾಗ್ನಿಗೆ ವಶವಾದ ಇದ್ದಲಿನಂಥ ಕೆಟ್ಟವಾದವು. ಹೇಗೆಂದರೆ ತಲೆಯನ್ನು ಬೋಳಿಸಿಕೊಂಡು ಆಶ್ರಮವನ್ನು ಸ್ವೀಕರಿಸಿದವನೇ ಸಂನ್ಯಾಸಿಯು ಎಂದು ಶ್ರೀ ಕೃಷ್ಣನು ಗೀತೆಯಲ್ಲಿ ಹೇಳಲಿಲ್ಲ. "ಕಾಮ್ಯಾನಾಂ ಕರ್ಮಣಾಂನ್ಯಾಸಂ ಸಂನ್ಯಾಸಂ ಕವಯೋ ವಿದುಃ", "ಅನಾಶ್ರಿತಃ ಕರ್ಮಫಲಂ.... ಸ ಸಂನ್ಯಾಸೀ" ಇತ್ಯಾದಿ ಬಹು ವಾಕ್ಯಗಳಿಂದ ರಾಗ ದ್ವೇಷರಹಿತರಾದ ಕಾಮ್ಯ ಕರ್ಮಗಳನ್ನು ಪರಿತ್ಯಾಗ ಮಾಡಿದ ಬ್ರಹ್ಮಚಾರಿ ಗೃಹಸ್ಥಾದಿ ಸರ್ವ ಅಧಿಕಾರಿಗಳೂ ಸಂನ್ಯಾಸಿಗಳೇ ಆಗಿರುತ್ತಾರೆ. ವಿಷಯ ಕಾಮರಹಿತನು ಕರ್ಮ ಮಾಡಕೂಡದೆಂದು ಶ್ರೀ ಕೃಷ್ಣನು ಹೇಳಿರುವುದಿಲ್ಲ. ಪ್ರತ್ಯುತ, ಕಾಮಾದಿರಹಿತನು ನಿಷ್ಕಾಮನಾಗಿ ಕರ್ಮಾನುಷ್ಠಾನವನ್ನು ಮಾಡಿ ಭಗವದರ್ಪಣೆಯನ್ನು ಮಾಡಬೇಕೆಂದು ಹೇಳಿರುತ್ತಾನೆ. ಕರ್ಮವನ್ನು ಮಾಡದ ಕೇವಲ ಸಂನ್ಯಾಸಿಯು ದುಃಖಭಾಗಿಯಾಗುತ್ತಾನೆಂದು ಹೇಳಿರುವನು :—

(1) **ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**

ಎಲೈ ಮಹಾಬಾಹುವೇ ! ಕರ್ಮಾನುಷ್ಠಾನ ರೂಪವಾದ ಯೋಗದಿಂದ ಸಹಕೃತವಲ್ಲದ ಕೇವಲ ಸಂನ್ಯಾಸವು ನರಕಾದ್ಯನರ್ಥಗಳಿಗೇ ಕಾರಣವಾಗುತ್ತದೆ. ಸಂನ್ಯಾಸವು ಯೋಗ (ಕರ್ಮ) ದಿಂದ ಸಹಕೃತವಾದರೆ ಬ್ರಹ್ಮಾಪರೋಕ್ಷ ಜ್ಞಾನಕ್ಕೆ ಸಾಧನವಾಗುವುದೆಂದೂ ಶ್ರೀ ಕೃಷ್ಣನು ಹೇಳಿರುತ್ತಾನೆ :—

(2) **ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ ॥**

ಕರ್ಮಾನುಷ್ಠಾನದಿಂದ ಸಹಿತನಾದ ಸಂನ್ಯಾಸವುಳ್ಳ ಮುನಿಯು ಶೀಘ್ರದಲ್ಲಿ ಬ್ರಹ್ಮನನ್ನು ಹೊಂದುತ್ತಾನೆ.

2. ಕಿಂಚ ಸಾಂಖ್ಯವನ್ನು ಅವಲಂಬಿಸಿದವರು ಕರ್ಮವನ್ನು ಮಾಡಬಾರ ದೆಂದು ಎಲ್ಲಿಯೂ ಕೃಷ್ಣನು ಹೇಳಿರುವುದಿಲ್ಲ. ವೇದಾಂತ ತತ್ವಜ್ಞಾನವನ್ನು ಹೊಂದಿ ದವನು ವೈರಾಗ್ಯದಿಂದ ಉಪೇತನಾಗಿ ಹೆಚ್ಚು ನಿಷ್ಕಾಮತೆಯಿಂದ ಕರ್ಮಗಳನ್ನು ಮಾಡುತ್ತಾ ಪರಮಾತ್ಮನ ಧ್ಯಾನವನ್ನು ಮಾಡಿದರೆ ಬ್ರಹ್ಮಾಪರೋಕ್ಷ ಜ್ಞಾನವನ್ನು ಹೊಂದುವನು. ಅಪರೋಕ್ಷಜ್ಞಾನ ಪರ್ಯಂತವಂತೂ ಸ್ವವರ್ಣಾಶ್ರಮೋಚಿತ ಧರ್ಮ ಗಳನ್ನು ಸರ್ವಥಾ ಪರಿತ್ಯಾಗ ಮಾಡಕೂಡದು; ಸಮಾಧಿ–ಪರಿಪಾಕವು ಪ್ರಾಪ್ತ ವಾಗುವವರೆವಿಗೂ ಕರ್ಮಾನುಷ್ಠಾನವನ್ನು ಬಿಡಕೂಡದೆಂದು ಶ್ರೀ ಕೃಷ್ಣನು ಹೇಳು ತ್ತಾನೆ :—

(3) ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।
ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥
—(2 53 )

ಶ್ರುತಿಗಳ ಆಪಾತತಃ ವಿರುದ್ಧ ವಾಕ್ಯಗಳಿಂದ ಸಂಶಯಗ್ರಸ್ತವಾದ ನಿನ್ನ ಬುದ್ಧಿಯು ಯಾವಾಗ ಸಂಶಯರಹಿತವಾಗಿ ನಿಶ್ಚಲವಾಗುತ್ತದೋ ಆಗ ಸಮಾಧಿ ಧ್ಯಾನವು ಲಭಿಸುವುದು ಅಂಥ ಸಮಾಧಿ ಧ್ಯಾನವು ಲಬ್ಧವಾದರೆ ಯೋಗಮವಾಪ್ಸ್ಯಸಿ— ಅದುವರೆವಿಗೂ ಅನುಷ್ಠಿತವಾದ ನಿಷ್ಕಾಮಕರ್ಮ ರೂಪವಾದ ಉಪಾಯವು ಪೂರ್ತಿಯನ್ನು ಹೊಂದುವದು ( ಎಂದರೆ ಅಪರೋಕ್ಷಜ್ಞಾನ ಪರ್ಯಂತವೂ ಕರ್ಮ ರೂಪವಾದ ಉಪಾಯವನ್ನು ಆಚರಿಸುತ್ತಲೇ ಇರಬೇಕೆಂದು ಭಾವವು. )

3. ವೇದಾಂತ ಜ್ಞಾನದಿಂದ ಸಹಿತವಾಗಿ ಕರ್ಮ ಫಲಾಪೇಕ್ಷಾರಹಿತವಾಗಿ ಮಾಡಿದ ಕರ್ಮಗಳೇ ಉತ್ತಮ ಕರ್ಮಗಳು, ಅವುಗಳೇ ಬಂಧಕವಾಗದೆ ಸಂಸಾರ ತರಣಕ್ಕೆ ಕಾರಣವಾಗುವುವು ಎಂದು ಸಹ ಶ್ರೀ ಕೃಷ್ಣನು ಹೇಳುತ್ತಾನೆ :—

(4) ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।
ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥
ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ ।
ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥
ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ।
ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ॥
—(4 18-20 )

ಈ ಶ್ಲೋಕಗಳು ಪೂರ್ವದಲ್ಲಿಯೇ ವ್ಯಾಖ್ಯಾತವಾಗಿರುವುವು

ಇನ್ನೂ ಉತ್ತರ ಶ್ಲೋಕದಲ್ಲಿ ಶ್ರೀ ಕೃಷ್ಣನು ಜ್ಞಾನ ಕರ್ಮ ಸಂನ್ಯಾಸಗಳು ಮೂರೂ ( ತ್ಯಾಗವೂ ಸೇರಿ ನಾಲ್ಕೂ ) ಮಿಳಿತವಾಗಿಯೇ ಕರ್ಮಕ್ಷಯಕ್ಕೆ ಕಾರಣವಾಗುವುವು ಎಂದು ಸ್ಪಷ್ಟವಾಗಿ ಹೇಳುತ್ತಾನೆ :—

(5) ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।
ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥
—(4 23.)

ಈ ಶ್ಲೋಕವೂ ಪೂರ್ವದಲ್ಲಿಯೇ ವ್ಯಾಖ್ಯಾತವಾಗಿರುವುದು

4. ಪರಂತು ಜ್ಞಾನ ಮಾರ್ಗದಲ್ಲಿ ಅಧಿಕಾರಿಯೆಂದು ಪ್ರಸಿದ್ಧನಾದ ಇಂದ್ರಾವತಾರನಾದ ಅರ್ಜುನನಿಗೇ ಶ್ರೀ ಕೃಷ್ಣನು " ಕುರು ಕರ್ಮೈವ ತಸ್ಮಾತ್ ತ್ವಂ

**ಪೂರ್ವೈಃ ಪೂರ್ವತರಂ ಕೃತಂ** ” ಎಂದು ವಿಧಿಸಿರುವುದರಿಂದಲೂ ಜ್ಞಾನ ಮಾರ್ಗವೂ, ಕರ್ಮಮಾರ್ಗವೂ ಭಿನ್ನ ಪುರುಷಾನುಷ್ಠೇಯವಾದ ವಿರುದ್ಧ ಧರ್ಮ ಗಳಲ್ಲವೆಂದು ನಿಶ್ಚಿತವಾಗುವುದು. ಅರ್ಜುನನು ಸಾಂಖ್ಯಕ್ಕೆ ಎಂದರೆ ವೇದಾಂತ ಜ್ಞಾನಕ್ಕೆ ಅನರ್ಹನಾದ ಕರ್ಮಿಯು ಎಂದು ಶಂಕರಾಚಾರ್ಯರು ಧೈರ್ಯವಾಗಿ ಬರೆದಿರುತ್ತಾರೆ :—

**“ ಕುರು ಕರ್ಮೈವ ತಸ್ಮಾತ್ ತ್ವಂ ಇತಿ ಚ ಜ್ಞಾನನಿಷ್ಠಾಸಂಭವಂ ಅರ್ಜುನಸ್ಯ ಅವಧಾರಣೇನ ದರ್ಶಯಿಷ್ಯತಿ ।** ” ಶಾಂಕರಗೀತಾ ಭಾಷ್ಯಂ.

**ಅರ್ಥವು :—** ಕರ್ಮವನ್ನೇ ಮಾಡು ಎಂಬ ವಿಧಿಯಿಂದ ಶ್ರೀ ಕೃಷ್ಣನು ಅರ್ಜುನನಿಗೆ ಜ್ಞಾನನಿಷ್ಠೆಯು ಅಸಾಧ್ಯವೆಂದು ( ಅವಧಾರಣೆಯಿಂದ ) ನಿಶ್ಚಯ ಪೂರ್ವಕವಾಗಿ ತೋರಿಸುತ್ತಾನೆ.

ಅಸಿತ, ದೇವಲ, ವೇದವ್ಯಾಸಾದಿಗಳಿಂದ ಶಿಕ್ಷಿತನಾದ, ಪರಬ್ರಹ್ಮನ ವಿರಾ ಡ್ರೂಪವನ್ನು ದಿವ್ಯ ಚಕ್ಷುಸ್ಸಿನಿಂದ ನೋಡಿ ಸರ್ವಜ್ಞನಾದ ಇಂದ್ರನಂದನನು ಕರ್ಮಿ ಯೆಂದು ಪಾಷಾಣ ಹೃದಯವುಳ್ಳವನು ಹೇಳಬೇಕೇ ಹೊರತು ಶ್ರುತಿ, ಸ್ಮೃತಿ, ವಿಮರ್ಶೆಯಿಂದ ದ್ರವೀಕೃತ ಚಿತ್ತವುಳ್ಳ ದೇವತಾ ರಹಸ್ಯವನ್ನು ತಿಳಿದ ವಿವೇಕಿಯು ಹೇಳಲಾರನು. ಕರ್ಮಾನುಷ್ಠಾನವೂ, ಸಾಂಖ್ಯವೂ, ಸಂನ್ಯಾಸವೂ, ತ್ಯಾಗವೂ ಮಿಳಿತವಾಗಿಯೇ ಫಲಪ್ರದವೆಂದು ತಿಳಿದೇ ಶ್ರೀ ಕೃಷ್ಣನು ವಿಶೇಷ ಪುಣ್ಯಕರವಾದ ಅನಿತರ ಸಾಧಾರಣವಾದ ದಿವ್ಯ ಸಾಧನೆಯನ್ನು ಅರ್ಜುನನಿಗೆ ಉಪದೇಶ ಮಾಡಿರು ತ್ತಾನೆ :—

**(6) ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥**
—(3. 30 )

ಈ ಶ್ಲೋಕಾರ್ಥವು ಪೂರ್ವದಲ್ಲಿಯೇ ನಿರೂಪಿತವಾಗಿರುವುದು.

ಶ್ರೀ ಕೃಷ್ಣನು ಕಾಮದಿಂದ ಸಹಿತನಾಗಿ ಪುತ್ರಾದ್ಯರ್ಥಿಯಾದ ತುಚ್ಛ ಗೃಹಸ್ಥ ನಂತೆ ಕರ್ಮವನ್ನು ಮಾಡಬೇಕೆಂದು ವಿಧಿಸಲಿಲ್ಲ.

ಚತುರಂಶ ಸಹಿತವಾದ ಸಮಗ್ರ ಕರ್ಮಯೋಗವೇ ಬ್ರಹ್ಮಜ್ಞಾನ ಕಾರಣ ವಾಗಿ ಮುಕ್ತಿಪ್ರಾಪಕವಾಗುವುದೆಂದು ಶ್ರೀ ಕೃಷ್ಣನ ಹನ್ನೊಂದನೆಯ ಅಧ್ಯಾಯದ ಶ್ಲೋಕದಿಂದ ನಿಶ್ಚಿತವಾಗುವುದು.

**(7) ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥**
—(11. 55.)

ಎಲೈ ಅರ್ಜುನನೇ ! ಮತ್ಪರಮಃ—ನಾನೇ ( ಶ್ರೀ ಕೃಷ್ಣನೇ ) ಸರ್ವೋತ್ತಮ ನೆಂಬ ಜ್ಞಾನಪೂರ್ವಕವಾಗಿ, ಸಂಗವರ್ಜಿತಃ— ಕರ್ಮಫಲಗಳಲ್ಲಿ ಸ್ನೇಹರಹಿತನಾಗಿ ಮತ್ತು ವಿಷಯಗಳಲ್ಲಿ ಸ್ನೇಹರಹಿತನಾಗಿ, ಎಂದರೆ ಸಾಂಖ್ಯರೂಪವಾದ ವೇದಾಂತ ಜ್ಞಾನದಲ್ಲಿ ಸ್ಥಿತಿಯುಳ್ಳವನಾಗು " ಎಂದು ವಿಧಾನವನ್ನು ಮಾಡಿರುತ್ತಾನೆ ಒಬ್ಬನೇ ಅರ್ಜುನನಿಗೆ " **ಕುರು ಕರ್ಮ** " " **ಬುದ್ಧೌ ಶರಣಮನ್ವಿಚ್ಛ** " ಎಂಬ ಎರಡು ಉಪದೇಶಗಳನ್ನೂ ಶ್ರೀ ಕೃಷ್ಣನು ಮಾಡಿರುವುದರಿಂದ ಜ್ಞಾನ ಕರ್ಮಗಳೆರಡೂ ಏಕತ್ರ ಇರಬಹುದಾದ ಧರ್ಮಗಳೆಂದೇ ಸಿದ್ಧವಾಗುವುದು ' **ಕುರು ಕರ್ಮೈವ** ' ಎಂಬಲ್ಲಿರುವ " **ಏವ** " ಕಾರವು ನೀನು ಕರ್ಮವನ್ನು ಮಾಡಿಯೇ ಮಾಡು; ಅದು ಜ್ಞಾನಿಯಾದ ನಿನಗೂ ಪ್ರಯೋಜನವುಳ್ಳದ್ದು, ನಿರ ರ್ಥಕವಲ್ಲವೆಂದು ಬೋಧಿಸುವುದು " **ಯಜ್ಞೋ ದಾನಂ ತಪಶ್ಚೈವ ಪಾವ ನಾನಿ ಮನೀಷಿಣಾಂ** " ಎಂದಷ್ಟೇ ಶ್ರೀ ಕೃಷ್ಣನು ಹೇಳಿರುವನು

2. **ಪ್ರಶ್ನೆ :**— ಸ್ವಾಮೀ ! ಅರ್ಜುನನು ಜ್ಞಾನಿಯಾಗಿದ್ದರೆ, ಮತ್ತು ಜ್ಞಾನ ಕರ್ಮಗಳು ಭಿನ್ನ ಪುರುಷಾನುಷ್ಠೇಯವಾದ ಎರಡು ಧರ್ಮಗಳಲ್ಲದಿದ್ದರೆ ಶ್ರೀ ಕೃಷ್ಣನು,

**ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ ॥**

ಎಂದು ಹೇಳಿ ಅನಂತರ " **ಕುರು ಕರ್ಮೈವ ತಸ್ಮಾತ್ತ್ವಂ** " ಎಂದು ವಿಧಿ ಸಲು ಕಾರಣವೇನು ?

**ಉತ್ತರ :— ಶ್ರೀ ಶ್ರೀಗಳವರು :**— ಅರ್ಜುನನ ಪ್ರಶ್ನೆಯನ್ನು ವಿಮರ್ಶೆ ಮಾಡಿ ನಂತರ ಶ್ರೀ ಕೃಷ್ಣನ ಉತ್ತರವನ್ನು ಪರಾಮರ್ಶಿಸಿದರೆ ಸಕಲವೂ ವಿದಿತ ವಾಗುವುದು ಇದು ಅರ್ಜುನನ ಪ್ರಶ್ನೆಯು :—

**ಅರ್ಜುನ ಉವಾಚ :—**

(1) **ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।**
**ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥**
**ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಂ ॥**
—3. 1–2 )

**ಅರ್ಥ :**— ಅರ್ಜುನನು ಹೇಳುತ್ತಾನೆ:— ಎಲೈ ಜನಾರ್ದನನೇ ! ಬುದ್ಧಿ ಯೋಗವು ಕರ್ಮಯೋಗಕ್ಕಿಂತ ಶ್ರೇಷ್ಠವೆಂದು ನಿನ್ನ ಅಭಿಪ್ರಾಯವಿರುವುದಾದರೆ ನನ್ನನ್ನು ಈ ಘೋರವಾದ ಯುದ್ಧದಲ್ಲಿ ಯಾತಕ್ಕೆ ಪ್ರೇರಿಸುತ್ತೀಯೇ ? ಪರಸ್ಪರ ವಿರುದ್ಧಾರ್ಥಗಳಿಂದ ಸಹಿತವಾದ ಸಂದೇಹಜನಕವಾದ ವಾಕ್ಯದಿಂದ ನನ್ನ ಬುದ್ಧಿ

ಯನ್ನು ಮೋಹ ಮಾಡುವವನಂತೆ ತೋರುತ್ತೀಯೆ. ಆದುದರಿಂದ ಎಲೈ ಕೇಶವನೇ ! ಯಾವ ಒಂದು ಆಚರಣೆಯಿಂದ ನಾನು ನಿಶ್ಚಯವಾಗಿ ಶ್ರೇಯಸ್ಸನ್ನು ಹೊಂದು ವೆನೋ ಅಂಥ ಮುಖ್ಯ ಶ್ರೇಯಸ್ಸಾಧನವನ್ನು ನಿರ್ಣಯವಾಗಿ ನನಗೆ ಹೇಳು.

ಇಷ್ಟು ಈ ಶ್ಲೋಕಗಳ ಅಕ್ಷರಾರ್ಥವು. ಶ್ರೀ ಕೃಷ್ಣನು ದ್ವಿತೀಯಾಧ್ಯಾಯ ದಲ್ಲಿ ಮಾಡಿದ ಉಪದೇಶದಲ್ಲಿ ಆಪಾತತಃ ಪರಸ್ಪರ ವಿರುದ್ಧ ಮಾತುಗಳನ್ನೇ ಹೇಳಿ ದನು. ಹೇಗೆಂದರೆ,

(2) **ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ |**
**ತತೋ ಯುದ್ಧಾಯ ಯುಜ್ಯಸ್ವ.... .... ||**

ಎಂಬಲ್ಲಿ, ಮತ್ತು "ತಸ್ಮಾದುತ್ತಿಷ್ಠ ಕೌಂತೇಯ" "ಯುದ್ಧಾಯ ಕೃತ ನಿಶ್ಚಯಃ" ಎಂಬಲ್ಲಿಯೂ, ಇನ್ನೂ ಎರಡು ಮೂರು ವಾಕ್ಯಗಳಲ್ಲಿಯೂ ಯುದ್ಧ ವನ್ನು ಪ್ರಶಂಸೆ ಮಾಡಿ ಅರ್ಜುನನು ಯುದ್ಧ ಮಾಡಬೇಕೆಂದು ಪ್ರೇರಿಸಿದನು. ಪುನಃ ನಲವತ್ತೆಂಟನೆಯ ಶ್ಲೋಕದಲ್ಲಿ **ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ** ಎಂದರೆ ಯೋಗೋಪಾಯದಲ್ಲಿ ರತನಾಗಿ ಕರ್ಮವನ್ನು ಮಾಡು ಎಂದು ವಿಧಿಸಿದನು. ಅನಂತರ ಇದರ ಮುಂದಿನ ಶ್ಲೋಕದಲ್ಲಿಯೇ (49 ನೆಯ ಶ್ಲೋಕದಲ್ಲಿಯೇ) ಕರ್ಮವು ಅಧಮವು, ನೀನು ಅದನ್ನು ಪರಿತ್ಯಾಗ ಮಾಡು ಎಂದು ಹೇಳುವನು :—

(3) **ದೂರೇಣ ಹ್ಯವರಂ, ಕರ್ಮ ಬುದ್ಧಿಯೋಗಾದ್ಧನಂಜಯ |**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ||**

—(2. 49.)

ಎಲೈ ಧನಂಜಯನೇ ! ಕರ್ಮಯೋಗವು ಬುದ್ಧಿ ಯೋಗಕ್ಕಿಂತ ಅತ್ಯಂತ ನೀಚವಾದುದು. ಆದುದರಿಂದ ನೀನು ಬುದ್ಧಿಯನ್ನು ಶರಣು ಹೊಂದು. ಫಲಾ ಪೇಕ್ಷಿಗಳು ದೀನರು.

ಆಪಾತತಃ ವ್ಯಾಹತಿಗೆ ಇದಕ್ಕಿಂತ ಬೇರೆ ದೃಷ್ಟಾಂತವು ಬೇಕಿಲ್ಲ. ನಲ ವತ್ತೆಂಟನೆಯ ಶ್ಲೋಕದಲ್ಲಿ "**ಯೋಗಸ್ಥಃ ಕುರು ಕರ್ಮಾಣಿ**" ಎಂದು ವಿಧಿಸಿ ನಲವತ್ತೊಂಭತ್ತನೆಯ ಶ್ಲೋಕದಲ್ಲಿ ನೀನು "**ಬುದ್ಧಿ**" ಯಲ್ಲಿ ಶರಣು ಹೊಂದು, ಕರ್ಮವು ನೀಚವು ಎಂದು ಉಪದೇಶ ಮಾಡಿದರೆ ಸಂದೇಹವು ಯಾರಿಗೆ ತಾನೇ ಹುಟ್ಟದಿರುವುದು ?

ಶಂಕರಾಚಾರ್ಯರ ಅಭಿಪ್ರಾಯದಲ್ಲಿ "ಕುರು ಕರ್ಮಾಣಿ" ಇತ್ಯಾದಿ ವಿಧಿಗಳು ಅಜ್ಞರಿಗೆ ಕರ್ಮ ದೃಷ್ಟಿಯನ್ನು ಅನುಸರಿಸಿ ಹೇಳಿದ್ದು; "ಬುದ್ಧೌ ಶರಣಮನ್ವಿಚ್ಛ" ಇತ್ಯಾದಿ ಉಪದೇಶವು ಸಾಂಖ್ಯ ದೃಷ್ಟಿಯನ್ನು ಅನುಸರಿಸಿದ ಪರಮಾರ್ಥ ತತ್ವವು; "ಬುದ್ಧೌ ಶರಣಮನ್ವಿಚ್ಛ" ಎಂದರೆ "ಪರಮಾರ್ಥ ಜ್ಞಾನಶರಣೋ ಭವ ಇತ್ಯರ್ಥಃ" ಎಂದು ಬರೆದಿರುವರು.

ಇದರಿಂದ ಏನು ತಿಳಿದು ಬರುವುದೆಂದರೆ ಪ್ರಾಜ್ಞನಾದ ಪರಬ್ರಹ್ಮನಾದ ಶ್ರೀ ಕೃಷ್ಣನು ಪ್ರಿಯ ಶಿಷ್ಯನಾದ ಒಬ್ಬನೇ ಅರ್ಜುನನಿಗೆ ಈ ಎರಡು ವಿಧಿಗಳನ್ನೂ ಮಾಡಿರುವುದರಿಂದ ಇಲ್ಲಿ ನಿರೂಪಿತವಾಗಿರುವ ಸಾಂಖ್ಯವೂ, ಕರ್ಮವೂ ಪರಸ್ಪರ ವಿರುದ್ಧವಾದ ಏಕ ಪುರುಷನಿಂದ ಒಂದೇ ಕಾಲದಲ್ಲಿ ಅನುಷ್ಠಿಸಲ್ಪಡುವುದಕ್ಕೆ ಅನರ್ಹವಾದ ಎರಡು ಪದಾರ್ಥಗಳಲ್ಲ ಮತ್ತೇನೆಂದರೆ ಒಬ್ಬನೇ ಅರ್ಜುನನು ಒಂದೇ ಯುದ್ಧ ಕಾಲದಲ್ಲಿ ಎರಡು ವಿಧಿಗಳನ್ನು ಅನುಷ್ಠಿಸಬೇಕೆಂದು ಅವನ ಮತ ವಿರುತ್ತದೆ ಎಂದು ನಿಶ್ಚಿತವಾಗುವುದು ಆದುದರಿಂದ ನಾವು ಈ ಎರಡು ಶ್ಲೋಕ ಗಳಿಗೆ ಆಪಾತತಃ ತೋರುವ ವಿರೋಧವನ್ನು ಪ್ರಕರಣ ಪರ್ಯಾಲೋಚನೆಯಿಂದ ಸಮೀಚೀನವಾದ ಅರ್ಥದಿಂದ ಪರಿಹರಿಸಬೇಕು ಹಾಗಿಲ್ಲದೆ ಶಂಕರಾಚಾರ್ಯರು ಹೇಳುವಂತೆ ಎರಡು ಭಿನ್ನ ದೃಷ್ಟಿಗಳಿಂದ ಶ್ರೀ ಕೃಷ್ಣನು ಒಬ್ಬ ಅಧಿಕಾರಿಗೆ ಉಪದೇಶ ಮಾಡಿದನೆಂದು ಒಪ್ಪುವುದಾದರೆ, ಆದೇ ಬಾಯಿಯಿಂದಲೇ ಶ್ರೀ ಕೃಷ್ಣನು ಬುದ್ಧಿ ಶೂನ್ಯನಾದ ಕುರುಬರ ಹುಡುಗನು ಎಂದೂ ಉತ್ಕೀರ್ತನ ಮಾಡುವುದಕ್ಕೆ ಸಿದ್ಧ ರಾಗಬೇಕು

ವಸ್ತುತಃ ಸರ್ವಜ್ಞನಾದ ಶ್ರೀ ಕೃಷ್ಣನು ವಿರುದ್ಧೋಪದೇಶವನ್ನು ಮಾಡಿಲ್ಲ. ಹೇಗೆಂದರೆ ನಲವತ್ತೆಂಟನೆಯ ಶ್ಲೋಕದಲ್ಲಿ " ಯೋಗಸ್ಥಃ ಕುರುಕರ್ಮಾಣಿ " ಎಂದು ಜ್ಞಾನೋಪಾಯಕ್ಕೆ ಸಾಧಕವಾದ " ನಿಷ್ಕಾಮಯುದ್ಧ ಕರ್ಮವನ್ನು **ಮಾಡು "** ಎಂದು ಹೇಳಿದನು ನಲವತ್ತೊಂಭತ್ತನೆಯ ಶ್ಲೋಕದಲ್ಲಿ **"ಕೃಪಣಾಃ ಫಲಹೇತವಃ "** ಎಂದರೆ ಫಲಾಪೇಕ್ಷಿಗಳು ದುಃಖಭಾಗಿಗಳಾಗುವರು ಎಂದು ಹೇಳಿ, ಫಲಾಪೇಕ್ಷೆಯಿಂದ ಸಹಿತವಾದ ಕಾಮ್ಯ ಕರ್ಮವನ್ನು ನಿಂದಿಸಿ ಬುದ್ಧೌ ಶರಣಮನ್ವಿಚ್ಛ = ಎಂದರೆ **ಜ್ಞಾನ ಸಾಧನದಲ್ಲಿ** ( ನಿಷ್ಕಾಮ ಕರ್ಮ ಧ್ಯಾನಾದಿ ಗಳಲ್ಲಿ ) ತತ್ಪರನಾಗು ಎಂದೇ ಹೇಳಿದನು ವಿರೋಧವೆಲ್ಲಿಂದ ಬಂತು ? 'ನಿಷ್ಕಾಮ ಕರ್ಮವನ್ನು ಮಾಡು ' ಎಂಬ ವಿಧಿಗೂ 'ಕಾಮ್ಯ ಕರ್ಮವು ಜ್ಞಾನೋಪಾಯಕ್ಕಿಂತ ಅಧಮವು; ನೀನು ಜ್ಞಾನೋಪಾಯದಲ್ಲಿ ಆಸಕ್ತನಾಗು ' ಎಂಬ ಉಪದೇಶಕ್ಕೂ ಚಿನ್ನದ ಸರಪಣಿಯಂತೆ ಅನ್ವಯವಿರುವುದೇ ಹೊರತು ವಿರೋಧವೇ ಇಲ್ಲ ಇಷ್ಟು ಸೂಕ್ಷ್ಮ ವಿಚಾರವನ್ನು ಶ್ರೀ ಕೃಷ್ಣನ ಮುಖದಿಂದ ಹೊರಡಿಸಬೇಕೆಂದೇ ರಾಗ ದ್ವೇಷಾದಿಗಳಿಂದ ಪೂರ್ಣವಾದ ಯುದ್ಧಾದಿ ಘೋರ ಕರ್ಮಗಳು ನಿಂದ್ಯ ಕರ್ಮ ಗಳೇ, ಇವು ಜ್ಞಾನೋಪಾಯಗಳಾಗಲಾರವು ಎಂದು ಶಂಕಿಸಿಕೊಂಡು ಕೃಷ್ಣನನ್ನು ಅರ್ಜುನನು ಪ್ರಶ್ನೆ ಮಾಡಿದನು : **"ಎಲೈ ಕೃಷ್ಣನೇ ಉತ್ತಮವಾದ ಜ್ಞಾನೋ ಪಾಯದಲ್ಲಿ ನನ್ನನ್ನು ಪ್ರೇರಿಸದೆ ಕಾಮ್ಯವಾದ ಯುದ್ಧಾದಿ ಕರ್ಮಗಳಲ್ಲಿ ನನ್ನನ್ನು ಯಾತಕ್ಕೆ ಪ್ರೇರಿಸುತ್ತಿ ? "** ಇದು ಅರ್ಜುನನಿಂದ ವಿವಕ್ಷಿತವಾದ ಪ್ರಥಮ ಪ್ರಶ್ನೆಯು. ಇದಕ್ಕೆ ಶ್ರೀ ಕೃಷ್ಣನು ಕೊಟ್ಟ ಉತ್ತರವನ್ನು ಮುಂದೆ **ನಿರೂ** ಪಿಸುವೆವು

ಮತ್ತೊಂದು ಪ್ರಶ್ನೆಯೂ ಅರ್ಜುನನಿಂದ ವಿವಕ್ಷಿತವಾಗಿರುವುದು "ಯೋಗಸ್ಥಃ

ಕುರು ಕರ್ಮಾಣಿ” ಎಂಬಲ್ಲಿ ನಿಷ್ಕಾಮನಾಗಿ ಯುದ್ಧಾದಿ ಕರ್ಮವನ್ನು ಮಾಡು ಎಂದು ಶ್ರೀ ಕೃಷ್ಣನು ಹೇಳಿದನು. “ಬುದ್ಧೌ ಶರಣಮನ್ವಿಚ್ಛ” ಎಂಬಲ್ಲಿ ಜ್ಞಾನೋಪಾಯದಲ್ಲಿ ತತ್ಪರನಾಗು ಎಂದು ಬೋಧಿಸಿದನು. ಯದ್ಯಪಿ ನಿಷ್ಕಾಮಕರ್ಮವೇ ಜ್ಞಾನೋಪಾಯವು ನಿಷ್ಕಾಮನಾಗಿ ಯುದ್ಧಾದಿ ಸ್ವಧರ್ಮ ರೂಪವಾದ ಜ್ಞಾನೋಪಾಯದಲ್ಲಿ ತತ್ಪರನಾಗು ಎಂದು ಶ್ರೀ ಕೃಷ್ಣನ ಅಭಿಪ್ರಾಯವು. ಆದರೆ ಇಲ್ಲಿ ಬೇರೆ ಒಂದು ಶಂಕೆಗೆ ಅವಕಾಶವಿರುವುದು. ಹೇಗೆಂದರೆ ಜ್ಞಾನೋಪಾಯಗಳು ದ್ವಿವಿಧವಾಗಿರುವುವು. ನಿಷ್ಕಾಮಕರ್ಮವು ಒಂದು ಜ್ಞಾನೋಪಾಯವು. ನಿಷ್ಕಾಮ ಶ್ರವಣ ಮನನ ಧ್ಯಾನಾದಿಗಳು ಒಂದು ಜ್ಞಾನೋಪಾಯವು. **ನಿಷ್ಕಾಮಕರ್ಮ** ರೂಪವಾದ ಜ್ಞಾನೋಪಾಯಕ್ಕಿಂತ **ನಿಷ್ಕಾಮ – ಧ್ಯಾನ**ರೂಪವಾದ ಜ್ಞಾನೋಪಾಯವು ಶ್ರೇಷ್ಠವು. ಆದರೆ “ಯುದ್ಧಾಯ ಯುಜ್ಯಸ್ವ” ಎಂಬಲ್ಲಿ ಶ್ರೀ ಕೃಷ್ಣನು ಅಧಮವಾದ ನಿಷ್ಕಾಮ ಯುದ್ಧಾದಿ ಕರ್ಮರೂಪವಾದ ಜ್ಞಾನಸಾಧನವನ್ನೇ ತನಗೆ ಉಪದೇಶ ಮಾಡಿ ಬಿಟ್ಟನಲ್ಲಾ, ವಿಶೇಷವಾಗಿ ಯತಿಗಳಿಂದ ಅನುಷ್ಠೇಯವಾದ ಧ್ಯಾನ ಪ್ರವಚನಾದಿಗಳಲ್ಲಿ ನನ್ನನ್ನು ಪ್ರೇರಿಸಲಿಲ್ಲವಲ್ಲಾ ಎಂದು ಭೀತನಾಗಿ ಅರ್ಜುನನು ಪ್ರಶ್ನೆ ಮಾಡಿದನು :—

**“ಎಲೈ ಜನಾರ್ದನನೆ ! ನಿಷ್ಕಾಮವಾದ ಕರ್ಮರೂಪವಾದ ಉಪಾಯಕ್ಕಿಂತ ಬುದ್ಧಿಯು ಎಂದರೆ ಜ್ಞಾನಸಾಧನವಾದ ಧ್ಯಾನಾದಿಗಳು ಶ್ರೇಷ್ಠವಾದರೆ, ನನಗೆ ಯತ್ಯಾಶ್ರಮವನ್ನು ಸ್ವೀಕರಿಸಿ ಧ್ಯಾನಾದಿ ಉತ್ತಮ ಸಾಧನಗಳಲ್ಲಿ ಪ್ರವರ್ತನಾಗು ಎಂದು ಬೋಧಿಸದೇ ಜ್ಞಾನೋಪಾಯವಾದರೂ ಘೋರವಾದ ಕರ್ಮರೂಪವಾದ ಯುದ್ಧದಲ್ಲಿ ಸನ್ನದ್ಧನಾಗು ಎಂದು ಯಾತಕ್ಕೆ ಹೇಳುತ್ತಿ ?”** ಇದು ಅರ್ಜುನನಿಂದ ವಿವಕ್ಷಿತವಾದ ದ್ವಿತೀಯ ಪ್ರಶ್ನೆಯು. ಅರ್ಜುನನ ಪ್ರಶ್ನವಾಕ್ಯಕ್ಕೆ ಈ ರೀತಿಯಾಗಿ ಎರಡು ಅರ್ಥಗಳಿರುವುವು.

3. ಈ ಪ್ರಕಾರವಾದ ಎರಡು ಪ್ರಶ್ನೆಗಳಲ್ಲಿ ಪ್ರಥಮ ಪ್ರಶ್ನೆಗೆ ವಿಸ್ತಾರವಾದ ಸಮಾಧಾನವನ್ನು ಹೇಳಬೇಕಾಗಿದ್ದುದರಿಂದ ದ್ವಿತೀಯ ಪ್ರಶ್ನೆಗೆ ಹೇಳಬೇಕಾದ ಸಂಕ್ಷಿಪ್ತವಾದ ಉತ್ತರವನ್ನು ಒಂದೇ ಶ್ಲೋಕದಲ್ಲಿ ಶ್ರೀ ಕೃಷ್ಣನು ಹೇಳಿಬಿಟ್ಟನು :—

**ಶ್ರೀ ಭಗವಾನುವಾಚ :—**

**(1) ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ ॥**
**—(3. 3.)**

**ಅರ್ಥ :—** ಎಲೈ ಪಾಪರಹಿತನಾದ ಅರ್ಜುನನೇ ! ಈ ಲೋಕದಲ್ಲಿ ಮೋಕ್ಷೋಪಾಯಸಹಿತರಾದವರು ಎರಡು ಪ್ರಕಾರವಾಗಿರುತ್ತಾರೆ. ಸಾಂಖ್ಯರು ಎಂದರೆ (ಸಾಕ್ಷಾತ್) ಜ್ಞಾನಸಾಧನವಾದ ಧ್ಯಾನ ಪ್ರವಚನಾದಿಗಳಲ್ಲಿ ವಿಶೇಷರತರಾದ ಸನಕಾದಿಗಳು, ಜ್ಞಾನಯೋಗದಿಂದ ಎಂದರೆ ಯತ್ಯಾಶ್ರಮವನ್ನು ಸ್ವೀಕಾರ

ಮಾಡಿ, ವಿಶೇಷವಾಗಿ ಧ್ಯಾನ ಪ್ರವಚನಾದಿ ರೂಪವಾದ ಉಪಾಸನೆಯಿಂದ ಸಹಿತ ವಾದ ಸ್ಥಿತಿಯಲ್ಲಿರುತ್ತಾರೆ. ಜನಕಪ್ರಿಯವ್ರತಾದಿ ಆಧಿಕಾರಿಕ ಚೇತನರು ಯೋಗಿಗಳು ಎಂದರೆ ನಿಷ್ಕಾಮವಾಗಿ ರಾಜ್ಯ ಪರಿಪಾಲನಾದಿ ಕರ್ಮರೂಪವಾದ ಮೋಕ್ಷ ಸಾಧನೋಪಾಯದಿಂದ ಸಹಿತವಾದ ಸ್ಥಿತಿಯಲ್ಲಿರುತ್ತಾರೆ

ಈ ವಾಕ್ಯದಿಂದ ಶ್ರೀ ಕೃಷ್ಣನು ಅರ್ಜುನನಿಗೆ ಯತ್ಯಾಶ್ರಮವನ್ನು ಸ್ವೀಕರಿಸಿ ವಿಶೇಷವಾಗಿ ಧ್ಯಾನಾದಿಗಳನ್ನು ಅನುಷ್ಠಾನ ಮಾಡಬೇಕೆಂದು ವಿಧಿಸದೆ ರಾಜ್ಯ ಪರಿಪಾಲನೆಯಲ್ಲಿ ಪ್ರೇರಿಸಿದುದಕ್ಕೆ ಸ್ಪಷ್ಟ ಕಾರಣವು ತಿಳಿದು ಹೋಯಿತು. ಇಂದ್ರಾದಿ ದೇವತೆಗಳು **"ಕರ್ಮಯೋಗಿಗಳು"** ಎಂದರೆ ಜ್ಞಾನವನ್ನು ಹೊಂದಿದ ನಂತರವೂ ಸಹ ವಿಶೇಷವಾಗಿ ತ್ರೈಲೋಕ್ಯರಕ್ಷಣ ರೂಪವಾದ ಕರ್ಮದಲ್ಲಿ ಆಸಕ್ತರಾಗಿ ಪರಮಾತ್ಮನನ್ನು ಸೇವಿಸುತ್ತಾರೆ. ಸನಕಸನಂದನಾದಿ ಯತಿಗಳೂ, ಋಷಿಗಳೂ ಪ್ರಚುರವಾಗಿ ಧ್ಯಾನಾದಿರೂಪವಾದ ಉಪಾಸನೆಯಲ್ಲಿ ರತರಾಗಿ ಪರಮಾತ್ಮನನ್ನು ಸೇವಿಸುತ್ತಾರೆ *

ಅರ್ಜುನನು ತ್ರೈಲೋಕ್ಯರಕ್ಷಣ ಕಾರ್ಯದಲ್ಲಿ ಶ್ರೀ ಪರಮಾತ್ಮನಿಂದ ನಿಯುಕ್ತನಾದ ಇಂದ್ರನ ಅವತಾರವೆಂದು ಸುಪ್ರಸಿದ್ಧವಾಗಿರುವುದು. ಆದುದರಿಂದ ದುಷ್ಟ ನಿಗ್ರಹವನ್ನು ಮಾಡಿ, ರಾಜ್ಯ ಪರಿಪಾಲನವನ್ನು ಮಾಡುವುದು ಆಧಿಕಾರಿಕ ಚೇತನನಾದ ನಿನಗೆ ಉಚಿತವೆಂದೇ ನಾನು ನಿನಗೆ ಘೋರವಾದ ಯುದ್ಧಕರ್ಮದಲ್ಲಿ ಪ್ರೇರಿಸಿರುತ್ತೇನೆ ಎಂದು ಶ್ರೀ ಕೃಷ್ಣನ ಭಾವವು ಅದರಲ್ಲಿಯೂ ರಾಜ್ಯಾದಿ ಕಾಮದಿಂದ ಮಾಡಿದ ಯುದ್ಧವು ಕ್ಷಯಿಷ್ಣು ಫಲಕಾರಿಯಾದುದರಿಂದ **" ಬುದ್ಧೌ ಶರಣಮನ್ವಿಚ್ಛ "** ಎಂದರೆ ಜ್ಞಾನೋಪಾಯವಾದ ನಿಷ್ಕಾಮತೆಯನ್ನು ಹೊಂದು ಎಂದು ಉಪದೇಶ ಮಾಡಿದನು

---

* ಯದ್ಯಪಿ ಪ್ರಚುರವಾದ ಕರ್ಮಯೋಗವುಳ್ಳವರು ಅವರರು (ಅಧಮರು). ಪ್ರಚುರವಾದ ಜ್ಞಾನಯೋಗವುಳ್ಳವರು ಉತ್ತಮರು ಆದರೂ ಈ ವ್ಯವಸ್ಥೆಯು ಬ್ರಹ್ಮಾಪರೋಕ್ಷ ಜ್ಞಾನವನ್ನು ಹೊಂದುವುದಕ್ಕೆ ಮುಂಚೆ ಯುಕ್ತವೇ ಹೊರತು ಬ್ರಹ್ಮಾಪರೋಕ್ಷ ಜ್ಞಾನವಾದ ನಂತರ ಯುಕ್ತವಲ್ಲ ಅಪರೋಕ್ಷ ಜ್ಞಾನವನ್ನು ಹೊಂದಿ ಧ್ಯಾನಾದಿಗಳನ್ನು ಮಾಡುತ್ತಾ ಪ್ರಜಾಪರಿಪಾಲನಾದಿ ವಿಶೇಷ ಕರ್ಮಗಳಲ್ಲಿ ಶ್ರೀ ಹರಿಯ ಆಜ್ಞಾನುಸಾರವಾಗಿ ಜನಕ, ಪ್ರಿಯವ್ರತ, ಇಂದ್ರಾದಿ ಮಹಾ ಜನರುಗಳು ಆಸಕ್ತರಾಗುತ್ತಾರೆ ಪರಮಾತ್ಮನಿಂದ ನಿಯತವಾದ ಆಧಿಪತ್ಯವನ್ನು ಹೊಂದಿರುವುದರಿಂದಲೇ ಇವರುಗಳಿಗೆ ಆಧಿಕಾರಿಕ ಚೇತನರೆಂದು ಹೆಸರು. ಕರ್ಮಜ ದೇವತಾತುಲ್ಯರಾದ ಮಾಂಧಾತೃ, ಅಂಬರೀಷಾದಿ ನೂರು ಜನ ಚಕ್ರವರ್ತಿಗಳೂ ಈ ಗುಂಪಿಗೇ ಸೇರಿದವರು. ಯಾರಿಗೆ ಈ ರೀತಿಯಾದ ವಿಶೇಷಾಧಿಪತ್ಯವನ್ನು ಶ್ರೀ ಹರಿಯು ಕೊಟ್ಟಿಲ್ಲವೋ, ಅವರು ಸಹಜವಾಗಿ ಧ್ಯಾನದಲ್ಲಿ ಆಸಕ್ತರಾಗುತ್ತಾರೆ ಆದ್ದರಿಂದ ಜ್ಞಾನೋತ್ತರ ಕಾಲದಲ್ಲಿ ಶ್ರೀ ಹರಿಯ ಆಜ್ಞೆಯಿಂದ ಪ್ರಾಪ್ತವಾದ ಈ ವೈಚಿತ್ರ್ಯವು ತಾರತಮ್ಯ ಸೂಚಕವಲ್ಲವೆಂದು ತಿಳಿಯಬೇಕು.

ಅರ್ಜುನನು ಇಂದ್ರಾಂಶನಲ್ಲದಿದ್ದರೆ ಶ್ರೀ ಕೃಷ್ಣನು ನಾರದಾದಿಗಳಿಗೆ ವಿಧಿಸಿರುವಂತೆ ಧ್ಯಾನ ಜ್ಞಾನೋಪದೇಶಾದಿ ಕಾರ್ಯಗಳಲ್ಲಿ ನಿಯೋಗಿಸುತ್ತಿದ್ದನು.

ಹೀಗಿರುವುದರಿಂದ "**ಬುದ್ಧೌ ಶರಣಮನ್ವಿಚ್ಛ**" ಎಂಬ ಶ್ಲೋಕ ಭಾಗಕ್ಕೆ ಕರ್ಮವನ್ನು ಪರಿತ್ಯಾಗ ಮಾಡಿ ಜ್ಞಾನಯೋಗವನ್ನು ಅವಲಂಬಿಸು ಎಂಬ ಅರ್ಥವು ದುರರ್ಥವು. ಮತ್ತೇನೆಂದರೆ ಕಾಮಗಳನ್ನು ಪರಿತ್ಯಾಗ ಮಾಡಿ ಜ್ಞಾನೋಪಾಯದಲ್ಲಿ ರತನಾಗು ಎಂದು ತಾತ್ಪರ್ಯವು. ಕಾಮ್ಯ ಕರ್ಮಗಳು ಜ್ಞಾನೋಪಾಯಗಳಲ್ಲಿ ಮತ್ತು ಜ್ಞಾನೋತ್ಪತ್ತಿಯಲ್ಲಿ ಪ್ರತಿಬಂಧಕಗಳೂ ಆಗುವುವು. ಆದುದರಿಂದಲೇ ಶ್ರೀ ಕೃಷ್ಣನು ಅನೇಕ ರೀತಿಗಳಿಂದ ಕಾಮ್ಯಕರ್ಮ ಪರಿತ್ಯಾಗವನ್ನು ಬೋಧಿಸಿರುವನು. "**ಶುಭಾಶುಭ ಪರಿತ್ಯಾಗೀ**", "**ಸರ್ವಾರಂಭ ಪರಿತ್ಯಾಗೀ**", "**ಸರ್ವಧರ್ಮಾನ್ ಪರಿತ್ಯಜ್ಯ**" ಇತ್ಯಾದಿ ಶ್ಲೋಕ ಭಾಗಗಳಿಗೆಲ್ಲಾ ಇದೇ ಅರ್ಥವು. ಕಾಮನೆಯಿಂದ (ಫಲೇಚ್ಛೆಯಿಂದ) ಮಾಡಿದ ಸತ್ಕರ್ಮವು ಶುಭವು, ಧರ್ಮವು, ಪುಣ್ಯವು ಎನ್ನಿಸಲ್ಪಡುವುದು. ಸ್ವರ್ಗಕಾರಣವಾದ ಇಂಥ ಧರ್ಮಗಳು ಮೋಕ್ಷ ಪ್ರಾಪ್ತಿಗೆ ವಿಳಂಬವನ್ನುಂಟು ಮಾಡುವುದರಿಂದ ಪಾಪತುಲ್ಯಗಳೆಂದು ತಿಳಿದು ಮೋಕ್ಷೇಚ್ಛುವು ಪರಿತ್ಯಾಗ ಮಾಡಬೇಕು. ಜ್ಞಾನಕಾರಣವಾದ ನಿಷ್ಕಾಮ ಕರ್ಮವು ನಿರ್ಗುಣ ಕರ್ಮವೆನ್ನಿಸುವುದು; ಯಾತಕ್ಕೆಂದರೆ ಅದು ಗುಣಬಂಧರಾಹಿತ್ಯ ರೂಪವಾದ ಮೋಕ್ಷಕ್ಕೆ ಕಾರಣವಾಗುವುದು. ಶ್ರೀ ಕೃಷ್ಣನು ಹೇಳುತ್ತಾನೆ :—

(2) **ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ॥**
—(2. 45.)

ಎಲೈ ಅರ್ಜುನನೇ ! "**ಸ್ವರ್ಗಕಾಮೋ ಯಜೇತ**" ಇತ್ಯಾದಿ ವೇದವಿಧಿಗಳು ಆಪಾತತಃ ತ್ರೈಗುಣ್ಯವಿಷಯಾಃ– ತ್ರಿಗುಣಜನ್ಯವಾದ ಸ್ವರ್ಗಾದಿ ಫಲೋದ್ದೇಶದಿಂದ ಕರ್ಮವಿಧಾಯಕವಾದುವುಗಳೆಂದು ತೋರುತ್ತವೆ. ನೀನು ತ್ರಿಗುಣ ಬುದ್ಧಿಯಿಂದ ರಹಿತನಾಗು ಎಂದರೆ ತ್ರಿಗುಣಜನ್ಯ ಸ್ವರ್ಗಾದ್ಯುದ್ದೇಶಕವಾದ ಫಲಬುದ್ಧಿಯಿಂದ ರಹಿತನಾಗು. (ನಿಷ್ಕಾಮನಾಗಿ ಕರ್ಮವನ್ನು ಮಾಡು ಎಂದು ಅರ್ಥವು.)

**4.** ಈ ಪ್ರಕಾರವಾಗಿ ನಿಷ್ಕಾಮ ಧ್ಯಾನದಲ್ಲಿ ನನ್ನನ್ನು ಪ್ರೇರಿಸದೆ, ನಿಷ್ಕಾಮ ಕರ್ಮದಲ್ಲಿ ಯಾತಕ್ಕೆ ಪ್ರೇರಿಸುತ್ತಿ ಎಂಬ ಅರ್ಜುನನ ದ್ವಿತೀಯ ಪ್ರಶ್ನೆಗೆ ಪರಿಹಾರವು ಪೂರ್ಣವಾಯಿತು. ಇನ್ನು ಜ್ಞಾನಕ್ಕೆ ಪ್ರತಿಬಂಧಕವಾದ ಮತ್ತು ಸಾಧಕವಾಗದ ಸ್ವರೂಪತಃ ನಿಂದ್ಯವಾದ, ತುಚ್ಛವಾದ ಕರ್ಮಯೋಗದಲ್ಲಿ ನನ್ನನ್ನು ಯಾತಕ್ಕೆ ಪ್ರೇರಿಸುತ್ತೀ ಎಂಬ ಅರ್ಜುನನ ಪ್ರಥಮ ಪ್ರಶ್ನೆಗೆ ಸಾವಕಾಶವಾಗಿ ಶ್ರೀ ಕೃಷ್ಣನು ಉತ್ತರವನ್ನು ತೃತೀಯಾಧ್ಯಾಯದಲ್ಲಿ ನಿರೂಪಿಸಿ ತಾನು ಹೇಳಿದ ಸಮಾಧಾನವನ್ನು ಸಮಗ್ರ ಪ್ರಥಮ ಷಟ್ಕದಲ್ಲಿ ವಿಸ್ತರಿಸಿರುತ್ತಾನೆ. ಇನ್ನೂ ಕರ್ಮಕರಣ ವಿಷಯದಲ್ಲಿ ಪ್ರಾಪ್ತವಾಗುವ ಕೆಲವು ಶಂಕೆಗಳನ್ನು ತೃತೀಯ ಷಟ್ಕದಲ್ಲಿ ಪರಿಹರಿಸಿರುತ್ತಾನೆ. ಆ ಉತ್ತರವು ಯಾವುದು ಎಂಬುದನ್ನು ಪರಿಶೀಲಿಸಬೇಕಾಗಿರುವುದು.

ಇಲ್ಲಿ ಪ್ರಥಮತಃ ಒಂದು ಅಂಶವನ್ನು ಸೂಚಿಸಬೇಕಾಗಿರುವುದು. ಶ್ರೀ ಕೃಷ್ಣನ ಮತವು ಅದ್ವೈತ ಮತವಾಗಿದ್ದರೆ ಎಂದರೆ ಕರ್ಮ ಮಾರ್ಗವೂ, ಜ್ಞಾನ ಮಾರ್ಗವೂ ಭಿನ್ನ ಪುರುಷಾನುಷ್ಠೇಯವಾದ ಧರ್ಮಗಳಾಗಿದ್ದರೆ ಅವುಗಳೆರಡಕ್ಕೂ ಕಾರ್ಯಕಾರಣ ಭಾವವು ಯಾವ ರೀತಿಯಿಂದಲೂ ಕೂಡುವುದಿಲ್ಲ ಅದ್ವೈತ ಮತದ ರೀತ್ಯಾ ಕರ್ಮ ಮಾರ್ಗದಲ್ಲಿರುವವನು ಮೂಢನು. ಕರ್ಮ ಮಾರ್ಗವನ್ನು ಉಪದೇಶ ಮಾಡುವವನು ಅಧಿಕ ಮೂಢನು. ಕರ್ಮ ಸಂನ್ಯಾಸವಷ್ಟೇ ಮುಕ್ತಿಗೆ ಸಾಧಕವೆಂದು ಶಂಕರಾಚಾರ್ಯರು ಹೇಳಿರುತ್ತಾರೆ! ಆದುದರಿಂದ ನಿಂದ್ಯವಾದ ಕರ್ಮ ಮಾರ್ಗದಲ್ಲಿ ನನ್ನನ್ನು ಯಾತಕ್ಕೆ ಪ್ರೇರಿಸುತ್ತೀ? ಎಂಬ ಅರ್ಜುನನ ಪ್ರಶ್ನೆಗೆ ಶ್ರೀ ಕೃಷ್ಣನು ಅದ್ವೈತಿಯಾಗಿದ್ದರೆ ಈ ಉತ್ತರವನ್ನು ಕೊಡುತ್ತಿದ್ದನು :— "ಎಲೈ ಅರ್ಜುನನೇ! ನೀನು ಮೂಢನು, ನಾನು ಸಂಮೂಢನು ಆದುದರಿಂದ ನಿನ್ನ ಶ್ರವಣವೂ, ನನ್ನ ಉಪದೇಶವೂ ಉಪಪನ್ನವಾಗುವುದು." ಅನ್ಯಥಾ ಮಿಥ್ಯಾಭೂತವಾದ ಮೋಕ್ಷವಿರೋಧಿಯಾದ ಕರ್ಮಗಳನ್ನು ಮಾಡಬೇಕೆಂದು ಹೇಳುವುದು ಅಸಂಭಾವಿತವು. ನೀರೆಲ್ಲಿರುವುದು ಎಂದು ಕೇಳಿದರೆ ಯಾವ ಜ್ಞಾನಿಯು ತಾನೇ 'ಮರೀಚಿಕಾ' ವನ್ನು ಕೈಯಿಂದ ತೋರಿಸುವನು, ಯಾವ ನಿರ್ದುಷ್ಟ ಚಕ್ಷುಸ್ಸುಳ್ಳವನು ನಂಬುವನು? *

---

* ಜಗತ್ತು ಮಿಥ್ಯಾ ಎಂಬ ವಾದವು ಕರ್ಮಯೋಗಕ್ಕೆ ಉಪೋದ್ಬಲಕವಾದ ವೈದ್ಯುತ ಶಕ್ತಿಯನ್ನು ಕೊಡಲಾರದು.

ಜಗತ್ತು ಮಿಥ್ಯಾ ಎಂದರೆ ಹಿಂದೆ ಇರಲಿಲ್ಲ, ಈಗ ಇಲ್ಲ, ಮತ್ತು ಮುಂದೆ ಇರುವುದಿಲ್ಲವೆಂಬಂಥಾ ಸುಳ್ಳು ಪದಾರ್ಥವಾಗಿದ್ದರೆ. ನಿಷ್ಕಾಮವಾದ ಪ್ರಜಾಪರಿಪಾಲನರೂಪವಾದ ಧರ್ಮದಲ್ಲಿ ಆದರದಿಂದ ಆಸಕ್ತನಾಗುವವನು ಪ್ರಜ್ಞಾಹೀನನೇ ಸರಿ. ಅದ್ವೈತ ತತ್ತ್ವಜ್ಞರಾದ ಪ್ರೊಫೆಸರ್ ಬಿ. ಕೆ. ಶಾಸ್ತ್ರಿಗಳೂ ಈ ದೋಷವನ್ನು ಒಪ್ಪಿಕೊಳ್ಳುತ್ತಾರೆ :—

"To live and work for the essentially untrue is hardly an inspiring and convincing creed ....."

— rofessor B. K. Shastri, M.A.

**ಅರ್ಥ :—** ವಸ್ತುತಃ ಸುಳ್ಳಾದ ಜಗತ್ತಿಗೋಸ್ಕರ ಬದುಕಬೇಕು ಮತ್ತು ಕೆಲಸ ಮಾಡಬೇಕೆಂಬ ವಾದವು ಉತ್ತೇಜಕವಾದ ಮತ್ತು ಶ್ರದ್ಧಾರ್ಹವಾದ ವಾದವೇ ಅಲ್ಲ.........

Looking at human beings......throngh the mediation of the concept of strict identity......we cannot direct our efforts persistently towards their welfare...... Social service demands the reality of the social order and its members."

—W. S. Urquhart, M.A., D. Litt.

ವಸ್ತುತಃ ಶ್ರೀ ಕೃಷ್ಣನು ಜ್ಞಾನಿಯೆಂದು ಶ್ರುತಿ ಸ್ಮೃತಿ ಸಿದ್ಧವಾದ ಪ್ರಮೇಯವು. "ವೇದಾಂತಕೃದ್ವೇದವಿದೇವಚಾಹಂ" ಎಂದು ಶ್ರೀ ಕೃಷ್ಣನು ತನ್ನ ಸರ್ವಜ್ಞತೆಯನ್ನು ತಾನೇ ಉದ್ಘೋಷಿಸಿರುತ್ತಾನೆ. ಶಿಷ್ಯನಾದ ಅರ್ಜುನನೂ ಅಂಥ ಮೂಢನಲ್ಲ. ಪರಂತು ಈ ಶ್ಲೋಕದಲ್ಲಿಯೇ "ಅನಘ" ಎಂದು ಶ್ರೀ ಕೃಷ್ಣನು ಅರ್ಜುನನನ್ನು ಕುರಿತು ಸಂಬೋಧಿಸಿರುವನು. ಪಾಪರಹಿತವಾದ ಅಂತಃಕರಣವುಳ್ಳ ಅರ್ಜುನನಿಗೆ, ನಿಂದ್ಯವಾದ, ಅವಿವೇಕಿಗಳಿಗೆ ಉಚಿತವಾದ, ತುಚ್ಛವಾದ ಸುಳ್ಳು ತತ್ತ್ವವನ್ನು ಉಪದೇಶ ಮಾಡುವಷ್ಟು ಅನ್ಯಾಯವನ್ನು ನಿರ್ದೋಷಿಪ್ರಿಯನಾದ ಪರಬ್ರಹ್ಮನಾದ ಶ್ರೀ ಕೃಷ್ಣನು ಮಾಡಲಾರನು. ಆದುದರಿಂದ ಶ್ರೀ ಕೃಷ್ಣನಿಂದ ಉಪದಿಷ್ಟವಾದ ಕರ್ಮ ಮಾರ್ಗವು ಪಾರಮಾರ್ಥಿಕವಾಗಿಯೂ ಜ್ಞಾನಾದಿಗಳಿಗೆ ಸಾಧಕವಾದ ಉತ್ತಮ ಶ್ರೇಯಸ್ಸಾಧನೆಯೆಂದು ನಿಶ್ಚಿತವಾಗುವುದು.

ಆದುದರಿಂದಲೇ ಕರ್ಮ ಮಾರ್ಗವು ತುಚ್ಛವಾದುದರಿಂದ ಪರಿತ್ಯಾಗಾರ್ಹವೆಂಬ ಅದ್ವೈತ ಮತದ ರೀತ್ಯಾ ಪ್ರಾಪ್ತವಾದ ಅರ್ಜುನನ ಶಂಕೆಯನ್ನು ಬಹು ದುಷ್ಟವೆಂದು ಸ್ಪಷ್ಟವಾಗಿ ಶ್ರೀ ಕೃಷ್ಣನು ನಿಂದಿಸುತ್ತಾನೆ :—

**(1) ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।**
**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥**

—(3. 4.)

---

**ಅರ್ಥ :—** ಕೇವಲ ಐಕ್ಯವಾದ ರೀತಿಯಲ್ಲಿ ಮನುಷ್ಯರನ್ನು ನಾವು ತಿಳಿಯುವುದಾದರೆ ನಾವು ಪ್ರಯತ್ನಪೂರ್ವಕವಾಗಿ ಅವರ ರಕ್ಷಣೆಯಲ್ಲಿ ನಿರತರಾಗಲಾರೆವು. ಪ್ರಜಾಸೇವೆಯು ಸಾಮಾಜಿಕ ಕ್ರಮಗಳ ಮತ್ತು ಸಮಾಜಕ್ಕೆ ಸೇರಿದ ಜನರ ಸತ್ಯತೆಯನ್ನೂ ಅವಶ್ಯವಾಗಿ ಕೋರುತ್ತದೆ.

ಸುಪ್ರಸಿದ್ಧರಾದ ರಾಧಾಕೃಷ್ಣರೂ ಸಹ ಜಗತ್ತು ಮಿಥ್ಯಾ ಎಂಬ ವಾದವು ಅಸಮರ್ಪಕವೆಂದೇ ನಿರ್ಣಯಿಸಿರುವರು.

If......we. . ... following the lead of some later Adwaitins, dismiss it (the world) as a cosmic illusion which has somehow arisen to afflict us deluded mortals of an evil dream, then the system becomes unsatisfactory." (p. 657. I. P.)

—S. Radhakrishnan, M.A., D.Litt.

**ಅರ್ಥ :—** ನಾವು ಅರ್ವಾಚೀನರಾದ ಕೆಲವು ಅದ್ವೈತಿಗಳನ್ನು ಅನುಸರಿಸಿಕೊಂಡು ಸ್ವಪ್ನದಂತೆ ಈ ಜಗತ್ತೆಲ್ಲವೂ ಸುಳ್ಳೇ, ಹೇಗೋ ಭ್ರಾಂತಮರ್ತ್ಯರಾದ ನಮ್ಮ ದುಃಖಕ್ಕಾಗಿ ಉತ್ಪನ್ನವಾಗಿರುವ ಕಲ್ಪಿತ ದೃಶ್ಯವೆಂದು ತೀರ್ಮಾನ ಮಾಡುವುದಾದರೆ, ಅದ್ವೈತ ತತ್ತ್ವವು ಅಸಮರ್ಪಕವೇ ಆಗುವುದು.

ಈ ಶ್ಲೋಕವು ಬಹ್ವರ್ಥಗರ್ಭಿತವಾದುದು ಬಹು ವಿಕಲ್ಪಗಳಿಗೆ ಉತ್ತರ ರೂಪವಾಗಿರುವುದು ಕರ್ಮ ಮಾರ್ಗವು ತುಚ್ಛವು, ಪರಿತ್ಯಾಗಾರ್ಹವು, ಎಂದು ಹೇಳುವವರು ಮೂರು ವಿಧವಾಗಿ ಪೂರ್ವ ಪಕ್ಷವನ್ನು ಮಾಡಬಹುದು. ಅವುಗಳೆಲ್ಲಕ್ಕೂ ಈ ಶ್ಲೋಕ ಮೊದಲುಗೊಂಡು ಐದಾರು ಶ್ಲೋಕಗಳಲ್ಲಿ ಸಮಾಧಾನವನ್ನು ಶ್ರೀ ಕೃಷ್ಣನು ಹೇಳಿರುತ್ತಾನೆ. ತಥಾಹಿ :— ಇದು ಶ್ರೀ ಕೃಷ್ಣನ ತಾತ್ಪರ್ಯವು. "ಎಲೈ ಅರ್ಜುನನೇ ! ಕರ್ಮವನ್ನು ಮಾಡಬಾರದೆಂದು ಮಾತನಾಡುವ ನಿನ್ನ ಅಭಿಪ್ರಾಯವೇನು ? 1. ಕರ್ಮಾಕರಣದಿಂದಲೇ ನೈಷ್ಕರ್ಮ್ಯವೆಂಬ ಹೆಸರಿನಿಂದ ಪ್ರಸಿದ್ಧವಾದ ಮುಕ್ತಿಯು ಪ್ರಾಪ್ತವಾಗುವುದು ಎಂದೋ ? 2. ಅಥವಾ ಕರ್ಮವು ಸಂಸಾರ ಬೀಜಭೂತವಾದುದು ಕರ್ಮವನ್ನು ಮಾಡುವುದನ್ನು ಬಿಟ್ಟುಬಿಟ್ಟರೆ ಬೀಜರಹಿತವಾದರೆ ವೃಕ್ಷಾದಿಗಳು ಹುಟ್ಟದಿರುವಂತೆ ಕರ್ಮಾಕರಣದಿಂದ ಸಂಸಾರೋಪರಮವು ಪ್ರಾಪ್ತವಾಗಿ ಮುಕ್ತಿಯು ಸಿದ್ಧವಾಗುವುದೆಂದೋ ? 3. ಅಥವಾ "ಕರ್ಮಣಾ ಬಧ್ಯತೇ ಜಂತುಃ" ಎಂಬ ಪ್ರಮಾಣಾನುಸಾರವಾಗಿ ಬಂಧಕವಾದ ಕರ್ಮದ ಪರಿತ್ಯಾಗವು ಉಚಿತವೆಂದೋ ? " ಎಂದು ಮೂರು ವಿಕಲ್ಪಗಳನ್ನು ಮನಸ್ಸಿನಲ್ಲಿಟ್ಟು ಮೂರಕ್ಕೂ ಸಮಾಧಾನವನ್ನು ಹೇಳುತ್ತಾನೆ.

5. ಕರ್ಮಾಕರಣವೇ ಮೋಕ್ಷಸಾಧನವು ಎಂಬ ಪ್ರಥಮ ಶಂಕೆಗೆ ಶ್ರೀ ಕೃಷ್ಣನು ಉತ್ತರವನ್ನು ಹೇಳುತ್ತಾನೆ :—

**(1) ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ||**
—(3. 4.)

ಎಲೈ ಅರ್ಜುನನೇ ! ಕರ್ಮಾಕರಣದಿಂದ ಪುರುಷನು ಮೋಕ್ಷವನ್ನು ಹೊಂದುವುದಿಲ್ಲ

ಕರ್ಮಾಕರಣದಿಂದ ಮೋಕ್ಷವನ್ನು ಹೊಂದುವುದು ಅಸಂಭಾವಿತವು ಎಂದು ಶ್ರೀ ಕೃಷ್ಣನ ಭಾವವು. "ಪುರುಷಃ" ಎಂಬ ಪದವೇ ಈ ಅರ್ಥವನ್ನು ಸೂಚಿಸುವುದು. ಅನಂತ ಶರೀರಗಳನ್ನು ಹೊಂದುತ್ತಿರುವುದರಿಂದ ಜೀವನು ಪುರುಷನೆಂದು ಹೆಸರುಳ್ಳವನಾಗುವನು. ಜೀವನು ಯಾವ ಶರೀರದಲ್ಲಿದ್ದರೂ ಏನಾದರೂ ಕರ್ಮವನ್ನು ಮಾಡುತ್ತಲೇ ಇರುವನು. ಕರ್ಮವನ್ನು ಮಾಡದೇ ಶರೀರಿಯು ಇರುವುದು ಅಸಂಭಾವಿತವು. ಆದುದರಿಂದ ಕರ್ಮಾಕರಣದಿಂದ ಮುಕ್ತಿಯಾಗುವುದೆಂದು ಹೇಳಿದರೆ ಒಬ್ಬರಿಗೂ ಮುಕ್ತಿಯಿಲ್ಲವೆಂದು ಒಪ್ಪಬೇಕಾಗಿ ನೈರಾಶ್ಯವಾದಕ್ಕೆ ಕಾಲು ಚಾಚಿದಂತಾಗುವುದು ಕರ್ಮಾಕರಣವು ಅಸಾಧ್ಯವೆಂದು ಶ್ರೀ ಕೃಷ್ಣನು ಸ್ಪಷ್ಟವಾಗಿ ಹೇಳುತ್ತಾನೆ :—

**(2) ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ !**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ||**
—(3. 5 )

ಎಲೈ ಪಾರ್ಥನೇ ! ಜೀವನು ಯಾವ ಒಂದು ಅವಸ್ಥೆಯಲ್ಲಿಯೂ ಯಾವ ಕರ್ಮವನ್ನೂ ಮಾಡದೆ ಸುಮ್ಮನೆ ಕೂಡಲಾರನು. ಪ್ರತಿಯೊಬ್ಬ ಪುರುಷನೂ ಅವಶನಾಗಿ ಪ್ರಕೃತಿಜನ್ಯ ಗುಣಗಳಿಂದ ಪ್ರೇರಿತನಾಗಿ ಯಾವುದಾದರೂ ಕರ್ಮವನ್ನು ಮಾಡುತ್ತಲೇ ಇರುವನು.

ಹದಿನೆಂಟನೆಯ ಅಧ್ಯಾಯದಲ್ಲಿಯೂ ಶ್ರೀ ಕೃಷ್ಣನು ಹೀಗೆಯೇ ಹೇಳಿರುತ್ತಾನೆ :—

**(3) ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ||**
—(18. 11.)

ಎಲೈ ಧನಂಜಯನೇ ! ದೇಹಧಾರಿಯಾದ ಈ ಜೀವನಿಗೆ ಯಾವ ಅವಸ್ಥೆಯಲ್ಲಿಯೂ ಸರ್ವ ಕರ್ಮಗಳನ್ನೂ ಪರಿತ್ಯಾಗ ಮಾಡುವುದು ಶಕ್ಯವಿಲ್ಲ.

ಪುನಃ ತೃತೀಯಾಧ್ಯಾಯದಲ್ಲಿ ಈ ವಿಷಯವನ್ನೇ ನಿರೂಪಿಸಿ ಕರ್ಮ ಪರಿತ್ಯಾಗಕ್ಕಿಂತ ನಿಯತ ಕರ್ಮಕರಣವು ಉತ್ತಮವೆಂದು ಶ್ರೀ ಕೃಷ್ಣನು ಹೇಳುತ್ತಾನೆ :—

**(4) ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ |**
**ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ||**
—(3. 8.)

ಎಲೈ ಅರ್ಜುನನೇ ! ಕರ್ಮಾಕರಣಕ್ಕಿಂತ ನಿಯತ ಕರ್ಮಕರಣವು ಶ್ರೇಷ್ಠವಾದುದರಿಂದ ನೀನು ವಿಧ್ಯುಕ್ತ ನಿಯತಕರ್ಮವನ್ನು ಅನುಷ್ಠಾನ ಮಾಡು. ಕರ್ಮಾಕರಣದಿಂದ ನೀನು ದೇಹಧಾರಣವನ್ನು ಮಾಡುವುದೇ ಅಶಕ್ಯವಾಗುವುದು.

ಕರ್ಮಾಕರಣವನ್ನು ಮೋಕ್ಷಹೇತುವೆಂದು ತಿಳಿದು ಅನುಷ್ಠಾನ ಮಾಡುವವನು ಶ್ವಾಸ, ಭೋಜನಾದಿ ಕ್ರಿಯಾಗಳನ್ನೂ ಪರಿತ್ಯಾಗ ಮಾಡಬೇಕಾಗಿ ಮರಣವನ್ನು ಹೊಂದುವನು. ಆದುದರಿಂದ ದೇಹಧಾರಣೋಪಯೋಗಿ ಕರ್ಮಗಳನ್ನು ಮಾಡುತ್ತಾ ಅತಿರಿಕ್ತ ಕರ್ಮಗಳನ್ನು ಮಾಡದಿರುವುದೇ ವಿವಕ್ಷಿತ ಕರ್ಮಾಕರಣವು ಎಂದು ಹೇಳುವುದಾದರೆ, ಪಶ್ವಾದಿ ಸಾಧಾರಣವಾದ ಇಂಥ ದುಷ್ಟತತ್ತ್ವದಿಂದೇನು ? ಪರಮಾತ್ಮನಿಂದ ವಿಹಿತವಾದ ಕರ್ಮಗಳನ್ನು ಮಾಡಿ ತದತಿರಿಕ್ತವಾದ ಕರ್ಮಗಳನ್ನು ಪರಿತ್ಯಾಗ ಮಾಡುವುದು ಶ್ರೇಯಸ್ಕರವು ಎಂದು "ಕರ್ಮ ಜ್ಯಾಯೋ ಹ್ಯಕರ್ಮಣಃ" ಎಂಬ ಪದಗಳಿಂದ ಶ್ರೀ ಕೃಷ್ಣನು ಬೋಧಿಸಿದನು. ನಿಯತ ಕರ್ಮ ಪರಿತ್ಯಾಗದಿಂದ ಬಹಳ ಅನರ್ಥವೂ ಉಂಟೆಂದು ಹೇಳಿರುವನು. ಅದನ್ನು ಮುಂದೆ ಉದಾಹರಿಸುವೆವು.

6 ಸಂಸಾರ ಬೀಜಭೂತವಾದುದರಿಂದ ಕರ್ಮದ ಪರಿತ್ಯಾಗದಿಂದ ಜನನ ಮರಣಾದಿ ರೂಪವಾದ ಸಂಸಾರವೃಕ್ಷವು ನಷ್ಟವಾಗಿ ಹೋಗುವುದು ಎಂಬ ಅರ್ಜು

ನನ ದ್ವಿತೀಯ ಶಂಕೆಗೂ ಶ್ರೀ ಕೃಷ್ಣನ ಈ ವಾಕ್ಯಗಳೇ ಉತ್ತರ ರೂಪವಾಗಿರುವುವು .—

**(1) ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।**

ಎಲೈ ಅರ್ಜುನನೇ ! ಕರ್ಮಗಳನ್ನು ಮಾಡದೇ ಇರುವುದರಿಂದ ಪುರುಷನು ಮುಕ್ತಿಯನ್ನು ಹೊಂದುವುದಿಲ್ಲ ಪುರುಷ ಶಬ್ದವು ಹೇತುಸೂಚಕವು ಅನಾದಿ ಕಾಲದಿಂದ ಅನಂತ ದೇಹಗಳಲ್ಲಿ ಈ ಜೀವನು ನಾನಾ ಕರ್ಮಗಳನ್ನು ಮಾಡಿರುವನು ಆ ಕರ್ಮ ಬೀಜಗಳು ಮುಗಿದ ಮೇಲಷ್ಟೇ ಸಂಸಾರವೃಕ್ಷ ನಾಶವು ಆಗಬೇಕು. ಸಪ್ತ ಸಮುದ್ರಗಳೂ ಶೋಷಣವನ್ನು ಹೊಂದಬಹುದು; ಅನಾದಿಯಾಗಿ ಬಂದಿರುವ ಜೀವನ ಅನಂತ ಕರ್ಮಗಳನ್ನು ಭೋಗಿಸಿ ಮುಗಿಸುವುದು ಅಶಕ್ಯವು. ಆದುದರಿಂದ ಕರ್ಮ ರೂಪವಾದ ಬೀಜನಾಶದಿಂದ ಸಂಸಾರ ನಾಶವನ್ನು ಹೊಂದುವುದು ಅಸಂಭಾವಿತವು ಎಂದು ಭಾವವು. *

ಕಿಂಚ "ಪ್ರಕೃತಿಜನ್ಯವಾದ ಗುಣಗಳಿಂದ ಪ್ರೇರಿತನಾಗಿ ಈ ಜೀವನು ಅವಶನಾಗಿ ನಾನಾ ಕರ್ಮಗಳನ್ನು ಮಾಡುತ್ತಲೇ ಇರುವನು, ದೇಹಧಾರಿಯಾದ ಈ ಜೀವನಿಂದ ಸರ್ವ ಕರ್ಮ ಪರಿತ್ಯಾಗವು ಶಕ್ಯವೂ ಅಲ್ಲ, ಮತ್ತು ಕರ್ಮಾಕರಣದಿಂದ ಶರೀರಯಾತ್ರೆಯೇ ದುರ್ಘಟವಾಗುವುದು ಆದುದರಿಂದ ನೀನು ನಿಯತ ಕರ್ಮಗಳನ್ನು ಮಾಡು" ಇತ್ಯಾದಿ ರೀತಿಯಾದ ಪೂರ್ವ ವಿಕಲ್ಪಕ್ಕೆ ಕೊಟ್ಟ ಉತ್ತರವು ಈ ಪ್ರಶ್ನೆಗೂ ಸಮಾಧಾನ ರೂಪವಾಗಿರುವುದು. ಮತ್ತು ಉಭಯಪಕ್ಷದಲ್ಲಿಯೂ ನಿಯತ ಕರ್ಮಪರಿತ್ಯಾಗಜನಿತ ಅನರ್ಥಗಳು ಇದ್ದೇ ಇರುವುವು

7. "ಕರ್ಮಣಾಬಧ್ಯತೇ ಜಂತುಃ" ಇತ್ಯಾದಿ ಪ್ರಮಾಣ ವಚನಾನುಸಾರವಾಗಿ ಕರ್ಮಾನುಷ್ಠಾನವು ಸಂಸಾರಬಂಧಕ್ಕೆ ಕಾರಣವಾಗುವುದು; ಆದುದರಿಂದ ಕರ್ಮ ಪರಿತ್ಯಾಗವು ಉಚಿತವು ಎಂಬ ತೃತೀಯ ವಿಕಲ್ಪಕ್ಕೂ ಪೂರ್ವೋದಾಹೃತ ಶ್ಲೋಕಗಳು ಉತ್ತರ ರೂಪವಾಗಿಯೇ ಇರುವುವು. ವಿಶೇಷ ಉತ್ತರವನ್ನೂ ಶ್ರೀ ಕೃಷ್ಣನು ಕೊಡುತ್ತಾನೆ .—

---

*** ಆಚತುರ್ದಶವರ್ಷಾತ್ಕರ್ಮಾಣಿ ನಿಯಮೇನ ತು ।**
**ದಶಾವರಾಣಾಂ ದೇಹಾನಾಂ ಕಾರಣಾನಿ ಕರೋತ್ಯಯಂ ॥**
**ಅತಃ ಕರ್ಮಕ್ಷಯಾನ್ಮುಕ್ತಿಃ ಕುತ ಏವ ಭವಿಷ್ಯತಿ ।**

ಹದಿನಾಲ್ಕನೆಯ ವರ್ಷವನ್ನು ಆರಂಭಿಸಿಕೊಂಡು ಈ ದೇಹಿಯು ಒಂದೊಂದು ದಿವಸ ಮಾಡುವ ಕರ್ಮಗಳೂ ಕೊನೆಯ ಪಕ್ಷ ಹತ್ತು ಜನ್ಮಗಳಿಗೆ ಕಾರಣವಾಗುತ್ತವೆ ಈ ರೀತಿಯಲ್ಲಿ ಪೂರ್ವದಲ್ಲಿ ಅನೇಕ ಜನ್ಮಗಳು ನಮಗೆ ಬಂದಿದ್ದಾಗ ಎಷ್ಟು ಕರ್ಮಗಳು ಸಂಚಿತವಾಗಿರುವುವೆಂಬುದು ಅಚಿಂತ್ಯವು ಅವುಗಳನ್ನು ಭೋಗಿಸುವಾಗ ಮತ್ತೂ ಹೊಸ ಕರ್ಮಗಳು ಬೆಳೆಯುವುವು ಆದುದರಿಂದ ಕರ್ಮಾಕರಣದಿಂದ ಪೂರ್ವದ ಕರ್ಮಗಳು ತಮಗೆ ತಾವೇ ಮುಗಿದು ಹೋಗುವುವು ಎಂದು ಹೇಳುವದು ಮೂಢರ ಮತವೇ ಸರಿ

(1) **ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮ ಬಂಧನಃ ।**
**ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಸ್ಸಮಾಚರ ॥**
—(3. 9.)

**ಅರ್ಥ :—** ಯಜ್ಞನಾಮಕ ಪರಮಾತ್ಮನ ಪ್ರೀತ್ಯರ್ಥವಲ್ಲದ ಇತರ ಕರ್ಮಗಳಿಂದ ಲೋಕದಲ್ಲಿ ಜನರು ಬದ್ಧರಾಗುತ್ತಾರೆ. ಆದುದರಿಂದ ಎಲೈ ಕೌಂತೇಯನೇ ! ನೀನು ಫಲಾಪೇಕ್ಷೆಯಿಂದ ರಹಿತನಾಗಿ ಭಗವತ್ಪೂಜಾರ್ಥವಾಗಿ ಕರ್ಮವನ್ನು ಆಚರಿಸು.

ಏವಂಚ ಕಾಮ್ಯಕರ್ಮವು, ಭಗವತ್ಪ್ರೀತಿಮಾತ್ರೋದ್ದೇಶಕವಾದ ನಿಷ್ಕಾಮ ಕರ್ಮವು ಎಂದು ಕರ್ಮವು ದ್ವಿವಿಧವು. ಅದರಲ್ಲಿ ಕಾಮ್ಯಕರ್ಮವು ಬಂಧಕವು. ಕೇವಲ ಭಗವತ್ಪ್ರೀತ್ಯುದ್ದೇಶದಿಂದ ಮಾಡಿದ ನಿಷ್ಕಾಮ ಕರ್ಮವು ಬಂಧಕವಲ್ಲ ಮತ್ತು ಮೋಚಕವಾದುದು.

ಕಾಮ್ಯಕರ್ಮವು ಬಂಧಕವೆಂದು ಗೀತೆಯಲ್ಲಿ ಮೂರು ನಾಲ್ಕು ಸ್ಥಳಗಳಲ್ಲಿ ಹೇಳಲ್ಪಟ್ಟಿರುವುದು :—

(2) **ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥**

**ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಂ ।**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥**

**ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಂ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥**
—(2. 42–44.)

ಈ ಶ್ಲೋಕಗಳು ಪೂರ್ವದಲ್ಲಿಯೇ ವ್ಯಾಖ್ಯಾತವಾಗಿರುವುವು. ವೇದವು ಕಾಮ್ಯಕರ್ಮವನ್ನು ವಿಧಿಸುವುದೆಂದು ಭ್ರಮಿಸಿ ಸ್ವರ್ಗಾದಿಫಲಕವಾದ ಕಾಮ್ಯಕರ್ಮಗಳಲ್ಲಿ ರತರಾದವರು ಸಮಾಧಿ ಯೋಗದಲ್ಲಿ ಪರಮಾತ್ಮನ ದರ್ಶನಕ್ಕೆ ಕಾರಣವಾದ ಯಥಾರ್ಥ ತತ್ವಜ್ಞಾನವನ್ನು ಹೊಂದಲಾರರು ಎಂದು ಫಲಿತಾರ್ಥವು. ಕಾಮ್ಯಕರ್ಮಿಗಳು ಮೋಕ್ಷಪ್ರಯೋಜಕವಾದ ಜ್ಞಾನವನ್ನು ಹೊಂದಲಾರರು. ಅವರು ಪುನಃ ಪುನಃ ಜನನ ಮರಣ ರೂಪಪ್ರವಾಹದಲ್ಲಿ ಬಿದ್ದು ಸುಖ ದುಃಖಗಳನ್ನು ಹೊಂದುತ್ತಲೇ ಇರುವರು ಎಂದು ಭಾವವು

(3) **ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥**
—(5. 12.)

ಜ್ಞಾನೋಪಾಯರಹಿತನಾದವನು ಫಲಕಾಮನಾಪೂರ್ವಕವಾದ ಕರ್ಮಾನು

ಷ್ಠಾನದಿಂದ ಸ್ವರ್ಗಾದಿ ಕ್ಷುದ್ರ ಫಲಗಳಲ್ಲಿ ಆಸಕ್ತನಾಗಿ ನಿಬಧ್ಯತೇ = ಅತ್ಯಂತವಾಗಿ ಸಂಸಾರಬಂಧನವನ್ನು ಅನುಭವಿಸುತ್ತಾನೆ

ಸಪ್ತಮಾಧ್ಯಾಯದಲ್ಲಿ ಶ್ರೀ ಕೃಷ್ಣನು ಫಲಾಪೇಕ್ಷಿಗಳಾದ ಕಾಮಿಗಳು ಅನ್ಯ ದೇವತೋಪಾಸನೆಯನ್ನು ಮಾಡುವರೆಂದು ನಿರೂಪಿಸಿ ಅವರಿಗಾಗುವ ಅಲ್ಪ ಫಲ ವನ್ನೂ ವರ್ಣಿಸಿರುವನು :—

(4) **ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।**

.... .... .... .... .... .... ....

**ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಂ ।**

—(7. 20-23.)

ಫಲಾಪೇಕ್ಷಿಗಳಾದ ಕರ್ಮಿಗಳು ಅವರವರಿಗೆ ಅಭೀಷ್ಟವಾದ ಕಾಮ್ಯ ವಸ್ತು ಗಳಲ್ಲಿ ಅತ್ಯಂತ ಆಸಕ್ತವಾದ ಚಿತ್ತವುಳ್ಳವರಾಗಿ ಇತರ ದೇವತೆಗಳನ್ನು ಶರಣು ಹೊಂದಿ ನಾನಾ ಕರ್ಮಗಳನ್ನು ಮಾಡುತ್ತಾರೆ. ........ಇಂಥ ಅಲ್ಪ ಬುದ್ಧಿಯುಳ್ಳ ಕಾಮಿಗಳಿಗೆ ಪ್ರಾಪ್ತವಾಗುವ ಫಲವು ಅಂತವತ್ತು= ಕ್ಷಿಪ್ರದಲ್ಲಿ ನಾಶವನ್ನು ಹೊಂದ ತಕ್ಕದ್ದು.

ನವಮಾಧ್ಯಾಯದಲ್ಲಿಯೂ ಸಹ, ವೇದದಲ್ಲಿ ಆಪಾತತಃ ತೋರುವ ಅರ್ಥ ದಿಂದ ಮೋಹಿತವಾದ ಬುದ್ಧಿಯುಳ್ಳವರಾದುದರಿಂದ ತ್ರೈವಿದ್ಯರೆಂದು ಕರೆಯಲ್ಪಡುವ ಕಾಮ್ಯಕರ್ಮಿಗಳು ಪುನಃ ಪುನಃ ಸಂಸಾರದಲ್ಲಿ ಪರಿವರ್ತನವನ್ನು ಹೊಂದುತ್ತಲೇ ಇರುವರೆಂದು ಶ್ರೀ ಕೃಷ್ಣನು ಹೇಳುತ್ತಾನೆ :—

(5) **ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾಃ**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।**
**ತೇ ಪುಣ್ಯಮಾಸಾದ್ಯ ಸುರೇಂದ್ರಲೋಕಂ**
**ಅಶ್ನಂತಿ ದಿವ್ಯಾನ್ ದಿವಿ ದೇವಭೋಗಾನ್ ॥**
**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ**
**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ॥**
**ಏವಂ ತ್ರಯೀಧರ್ಮಮನುಪ್ರಪನ್ನಾ**
**ಗತಾಗತಂ ಕಾಮಕಾಮಾ ಲಭಂತೇ ॥**

—(9. 20–21)

ವೇದದಿಂದ ಆಪಾತತಃ ತೋರುವ ಸ್ವರ್ಗಾದಿ ಫಲಗಳಲ್ಲಿ ಅಪೇಕ್ಷೆಯಿಂದ ಸಹಿತರಾದ ಕಾಮ್ಯಕರ್ಮಿಗಳು ಯಜ್ಞವನ್ನು ಮಾಡಿ, ಹುತಶೇಷವಾದ ಸೋಮ ರಸಪಾನವನ್ನು ಮಾಡಿ ಪಾಪಗಳನ್ನು ಪರಿಹರಿಸಿಕೊಂಡು ಸ್ವರ್ಗ ಫಲವನ್ನು ಭೋಗಿ ಸುತ್ತಾರೆ. ಅವರು ತಮ್ಮ ಪುಣ್ಯಲಭ್ಯವಾದ ಸ್ವರ್ಗವನ್ನು ಹೊಂದಿ ಅದ್ಭುತವಾದ

ದೇವ ಭೋಗ್ಯ ಸುಖಗಳನ್ನು ಅನುಭವಿಸುತ್ತಾರೆ. ಆದರೆ ಕ್ಷೀಣೇ ಪುಣ್ಯೇ = ಆ ಪುಣ್ಯವು ಕ್ಷಯವಾದ ನಂತರ, ಪುನಃ ಭೂಲೋಕಕ್ಕೆ ಬಂದು ಬೀಳುತ್ತಾರೆ. ಈ ರೀತಿಯಾಗಿ ಕಾಮ್ಯಕರ್ಮವನ್ನು ಮಾಡುವವರು ಸ್ವರ್ಗ ಲೋಕ, ಭೂಲೋಕ, ಪುನಃ ಸ್ವರ್ಗ ಲೋಕ, ಭೂಲೋಕ ಗಮನ ಹೀಗೆ ಬಂದು ಹೋಗುತ್ತಾ ಆವೃತ್ತಿಯನ್ನು ಹೊಂದುತ್ತಿರುತ್ತಾರೆ.

8. ಈ ರೀತಿಯಲ್ಲಿ ಶ್ರೀ ಕೃಷ್ಣನು ಮೂರು ಪ್ರಕಾರವಾಗಿ ವಿಕಲ್ಪ ಮಾಡಿಕೊಂಡು ಮೂರು ವಿಧವಿಂದಲೂ ಕರ್ಮಾಕರಣವು ಉಚಿತವಲ್ಲವೆಂದೂ ವಿಹಿತ ಕರ್ಮಾನುಷ್ಠಾನವು ಆವಶ್ಯಕವೆಂದೂ, ಅದರಲ್ಲಿಯೂ ಯಜ್ಞನಾಮಕ ಪರಮಾತ್ಮನ ಪ್ರೀತಿಯನ್ನು ಉದ್ದೇಶ ಮಾಡಿ ಮಾಡಿದ ನಿಷ್ಕಾಮಕರ್ಮವು ಬಂಧಕವಲ್ಲವೆಂದೂ ನಿರೂಪಿಸಿದನು ಇನ್ನು ಮುಂದೆ ಚತುರ್ವರ್ಣದವರೂ ತಮತಮಗೆ ವಿಹಿತವಾದ ಕರ್ಮಗಳನ್ನು ಪರಿತ್ಯಾಗ ಮಾಡಿದರೆ ವರ್ಣಸಾಂಕರ್ಯವು ಬರುವುದೆಂದು ಶ್ರೀ ಕೃಷ್ಣನು ಹೇಳುತ್ತಾನೆ :—

**(1) ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥**
**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮಚೇದಹಂ ।**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥**
—(3. 23–24.)

ಎಲೈ ಪಾರ್ಥನೇ ! (ಯದ್ಯಪಿ ನಾನು ಕರ್ಮಬಂಧರಹಿತನು. ಹಾಗಿದ್ದರೂ) ನಾನು ಸ್ವವರ್ಣಾಶ್ರಮೋಚಿತವಾದ ವಿಹಿತಕರ್ಮವನ್ನು ಆಚರಿಸದಿದ್ದರೆ, ಸಕಲ ಮನುಷ್ಯರೂ ನನ್ನನ್ನು ನೋಡಿಕೊಂಡು ಸ್ವವರ್ಣಾಶ್ರಮೋಚಿತವಾದ ಕರ್ಮವನ್ನು ಪರಿತ್ಯಾಗ ಮಾಡಿ ಬಿಡುವರು. ಹಾಗೆ ಚತುರ್ವರ್ಣದವರೂ ತಮ್ಮ ತಮ್ಮ ವಿಹಿತ ಕರ್ಮಾನುಷ್ಠಾನಗಳನ್ನು ಮಾಡದಿದ್ದರೆ, ಘೋರ ನರಕಪ್ರಾಪ್ತಿರೂಪವಾದ ನಾಶವನ್ನು ಹೊಂದಿ ಬಿಡುವರು; ನಾನೇ ವರ್ಣಸಾಂಕರ್ಯವನ್ನು ಮಾಡಿದ ಹಾಗಾಗುವುದು ಮತ್ತು ಸಕಲ ಪ್ರಜೆಗಳನ್ನೂ ನಾನೇ ನರಕಕ್ಕೆ ಕೆಡವಿದಂತಾಗುವುದು.

ಏವಂಚ ಕರ್ಮಾಕರಣದಿಂದ ನರಕಪ್ರಾಪ್ತಿರೂಪವಾದ ಫಲವು; ಇಹಲೋಕದಲ್ಲಿ ಜಾತಿ ವಿವೇಕವು ತಪ್ಪಿ ಹೋಗಿ ವರ್ಣಸಾಂಕರ್ಯಪ್ರಾಪ್ತಿದ್ವಾರಾ ಪರ್ಯವಸಾನದಲ್ಲಿ ಸರ್ವರಿಗೂ ನರಕಪ್ರಾಪ್ತಿಯು; ಹೀಗೆ ಉಭಯ ವಿಧದಿಂದ ಜನರಿಗೆ ದುಃಖವು ಬರುವುದೆಂದು ಪೂರ್ಣಕಾಮನಾದ ಪರಮಾತ್ಮನೂ ಕೂಡ ರಾಮಕೃಷ್ಣಾದ್ಯವತಾರಗಳಲ್ಲಿ ಲೋಕಸಂಗ್ರಹಾರ್ಥವಾಗಿ ವಿಹಿತ ಕರ್ಮಗಳನ್ನು ಅನುಷ್ಠಾನ ಮಾಡುತ್ತಲೇ ಇರುವನು ಎಂದು ಶ್ರೀ ಕೃಷ್ಣನ ವಾಕ್ಯಗಳಿಂದ ನಿಶ್ಚಿತವಾಗುವುದು.

9. ಶ್ರೀ ಕೃಷ್ಣನು ಇನ್ನೂ ಎರಡು ಪ್ರಕಾರದಿಂದ ಸ್ವಸ್ವವರ್ಣಾಶ್ರಮೋಚಿತವಾದ ವಿಹಿತ ಕರ್ಮಾನುಷ್ಠಾನವು ಆವಶ್ಯಕವೆಂದು ಉಪಪಾದಿಸಿರುತ್ತಾನೆ :—

(1) ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।
ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥
ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥
ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ ।
ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥
ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।
ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥
—(3. 10-13.)

**ಅರ್ಥ :—** ಸೃಷ್ಟಿಕರ್ತನಾದ ನಾರಾಯಣನು ಯಜ್ಞಾದಿ ಸ್ವವರ್ಣಾಶ್ರಮೋಚಿತ ಕರ್ಮಗಳಿಂದ ಸಹಿತರಾದ ಪ್ರಜೆಗಳನ್ನು ಸೃಷ್ಟಿಸಿದ ನಂತರ ಅವರನ್ನು ಕುರಿತು ಈ ರೀತಿ ಮಾತಾಡಿದನು :— ಎಲೈ ಪ್ರಜೆಗಳಿರಾ ! ಸ್ವವರ್ಣಾಶ್ರಮೋಚಿತ ಕರ್ಮವೆಂಬ ಯಜ್ಞದಿಂದ ನಿಮ್ಮ ಅಭೀಷ್ಟಗಳನ್ನು ಪಡೆಯಿರಿ. ನಿಮ್ಮಿಂದ ಆಚರಿಸಲ್ಪಡುವ ಯಜ್ಞಾದಿಕರ್ಮಗಳು ನಿಮಗೆ ಬೇಕಾದ ಭೋಗ್ಯದ್ರವ್ಯಗಳನ್ನು ಕೊಡುವುವಾಗಲಿ. ಎಲೈ ಪ್ರಜೆಗಳಿರಾ ! ನೀವು ಯಜ್ಞಾದಿ ಸ್ವಧರ್ಮದಿಂದ ದೇವತೆಗಳನ್ನು ಪೂಜಿಸಿರಿ. ಅವರು ನಿಮಗೆ ಇಷ್ಟಾರ್ಥಗಳನ್ನು ಕೊಟ್ಟು ರಕ್ಷಿಸಲಿ. ಈ ರೀತಿ ನೀವೂ ಮತ್ತು ಪರ್ಜನ್ಯಾದಿ ದೇವತೆಗಳೂ ಪರಸ್ಪರವಾಗಿ, ಭಾವಿತರಾಗಿ ಅಂತ್ಯದಲ್ಲಿ ಮೋಕ್ಷರೂಪ ಪ್ರಯೋಜನವನ್ನು ಹೊಂದುವಿರಿ. ಎಲೈ ಪ್ರಜೆಗಳಿರಾ ! ಯಜ್ಞದಿಂದ ಆರಾಧಿತರಾದ ದೇವತೆಗಳು ನಿಮಗೆ ಇಷ್ಟವಾದ ಅನ್ನಾದಿ ಭೋಗ್ಯದ್ರವ್ಯಗಳನ್ನು ಕೊಡುವರು. ಅಂತಹ ದೇವತೆಗಳಿಂದಲೇ ಕೊಡಲ್ಪಟ್ಟ ಪದಾರ್ಥಗಳನ್ನು ಯಜ್ಞಾದಿದ್ವಾರಾ ಆ ದೇವತೆಗಳಿಗೆ ಕೊಡದೆ ಭೋಗಿಸುವವನು ಚೋರನೇ ಸರಿ. ವಿಷ್ಣುವೇ ಮೊದಲಾಗಿ ಸಕಲ ದೇವತೆಗಳಿಗೂ ಹವಿಸ್ಸನ್ನು ಯಥಾಯೋಗ್ಯವಾಗಿ ಅರ್ಪಣೆ ಮಾಡಿ (ಪಂಚ ಮಹಾಯಜ್ಞವನ್ನು ಮಾಡಿ) ಯಜ್ಞಶೇಷವನ್ನು ಭೋಜನ ಮಾಡುವವರು ಸಕಲ ಪಾಪಗಳಿಂದಲೂ ಮುಕ್ತರಾಗುತ್ತಾರೆ. ಹಾಗಲ್ಲದೆ ತಮ್ಮ ಉದರಪೂರ್ತಿಗಾಗಿ ಯಾರು ಪಾಕ ಮಾಡಿ ಭೋಜನ ಮಾಡುತ್ತಾರೆಯೋ ಅಂತಹವರು ಪಾಪವನ್ನೇ ಭೋಜನ ಮಾಡುತ್ತಾರೆಂದು ತಿಳಿಯಬೇಕು. ( ಪಂಚಯಜ್ಞ ಮಾಡದೆ ಅತಿಥಿ ಅಭ್ಯಾಗತರನ್ನು ಸಂತುಷ್ಟಿಪಡಿಸದೆ ಭೋಜನ ಮಾಡುವವನು ಪಾಪವನ್ನು ಹೊಂದುವನೆಂದು ಅರ್ಥವು )

10. ಇದರಿಂದ ( ವಿಹಿತ ಕರ್ಮವನ್ನು ಬಿಟ್ಟು ಕಾಮಗಳನ್ನು ಭೋಗಿಸುವವನಿಗೆ ಚೌರ್ಯದೋಷಪ್ರಾಪ್ತಿ ನಿರೂಪಣದಿಂದ) ಕರ್ಮಾಕರಣವನ್ನು ಅವಲಂಬಿಸುವವನಿಗ ದೈವದ್ರೋಹವು ಬಂದು ಒಂದೊಂದು ದಿನದ ಭೋಜನದಿಂದಲೂ ಪಾಪವೃದ್ಧಿಯಾಗುವುದೆಂದು ಸಿದ್ಧವಾಯಿತು.

ಮತ್ತೊಂದು ಪ್ರಕಾರದಿಂದಲೂ ವರ್ಣಾಶ್ರಮೋಚಿತವಾದ ಕರ್ಮವು ಅವಶ್ಯ ಕರ್ತವ್ಯವೆಂಬುದನ್ನು ಶ್ರೀ ಕೃಷ್ಣನು ತೋರಿಸುತ್ತಾನೆ:—

(2) ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥
ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಂ ।
ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ ॥
ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥
—(3. 14–16.)

**ಅರ್ಥ :—** ಎಲೈ ಪಾರ್ಥನೇ ! ಅನ್ನದಿಂದ ಪ್ರಾಣಗಳು ಉತ್ಪನ್ನವಾಗುತ್ತವೆ. (ಅನ್ನವು ವೀರ್ಯಶುಕ್ಲಾದಿ ರೂಪೇಣ ಪರಿಣಮಿಸಿ ಗರ್ಭೋತ್ಪತ್ತಿಗೆ ಕಾರಣವಾಗಿ ಪ್ರಾಣಿಗಳ ಸೃಷ್ಟಿಗೆ ನಿಮಿತ್ತವಾಗುವುದು.) ಇಂತಹ ಅನ್ನವು ಪರ್ಜನ್ಯನಾಮಕ ಆದಿತ್ಯನಿಂದ ವೃಷ್ಟಿದ್ವಾರಾ ಪ್ರಾಪ್ತವಾಗುವುದು. ಅಂತಹ ಪರ್ಜನ್ಯನು ಯಜಮಾನನಿಂದ ಯಜ್ಞದಲ್ಲಿ ಹವಿಸ್ಸನ್ನು ಸ್ವೀಕರಿಸಿ ಬಲವುಳ್ಳವನಾಗಿ (ಅನುಗ್ರಹೋನ್ಮುಖನಾಗಿ) ವೃಷ್ಟಿಪ್ರದನಾಗುತ್ತಾನೆ. ಅಂತಹ ಪರ್ಜನ್ಯನನ್ನು ಪ್ರಸನ್ನೀಕರಿಸುವ ಯಜ್ಞವು ತದಂಗವಾದ ಕ್ರಿಯೆಗಳಿಂದ ಹುಟ್ಟುತ್ತದೆ. ಅಂತಹ ಯಜ್ಞಾಂಗಭೂತವಾದ ಕರ್ಮವು ಪರಮಾತ್ಮನ ಪ್ರೇರಣೆಯಿಂದ ಉಂಟಾಗುವುದು. ಆ ಪರಮಾತ್ಮನು ವೇದರೂಪವಾದ ನಿತ್ಯವಾದ ಶಬ್ದಪ್ರಮಾಣದಿಂದ ತಿಳಿಯಲ್ಪಡತಕ್ಕವನು. (ಯಥಾರ್ಥವಾದ ವೇದದಿಂದಲೇ ಪರಬ್ರಹ್ಮನು ಪ್ರಾಣಿಗಳಿಂದ ತಿಳಿಯಲ್ಪಡತಕ್ಕವನು.) ಹಾಗೆ ತಿಳಿಯಲ್ಪಟ್ಟರೆ ಆತನು ಪ್ರಸನ್ನನಾಗಿ ಸತ್ಕರ್ಮದಲ್ಲಿ ಪ್ರೇರಣೆ ಮಾಡುತ್ತಾನೆ. ಈ ರೀತಿಯಲ್ಲಿ ಜಗಚ್ಚಕ್ರಪ್ರವೃತ್ತಿಯು. ಆದುದರಿಂದ ಪೂರ್ವೋಕ್ತ ಪರಂಪರೆಯಿಂದ ಪರಬ್ರಹ್ಮನು ಯಜ್ಞದಿಂದ ಅಭಿವ್ಯಂಗ್ಯನಾದುದರಿಂದ ಪರಮಾತ್ಮನು ಸರ್ವದಾ ಯಜ್ಞದಲ್ಲಿ ಪ್ರತಿಷ್ಠಿತನೆಂದು ಹೇಳಿಸಿಕೊಳ್ಳಲ್ಪಡುತ್ತಾನೆ. ಈ ರೀತಿಯಾಗಿ ಪ್ರವರ್ತಿತವಾದ ಜಗಚ್ಚಕ್ರವನ್ನು ಯಾವಾತನು ಅನುವರ್ತಿಸುವುದಿಲ್ಲವೋ ಅಂತಹವನು ಪಾಪ ಸಂಪಾದನೆಗಾಗಿಯೇ ಉತ್ಪನ್ನನಾದವನು; ಅವನು ಇಂದ್ರಿಯ ವಿಷಯಗಳಲ್ಲಿ ಆಸಕ್ತನು; ಎಲೈ ಪಾರ್ಥನೇ ! ಅವನ ಬದುಕು ನಿರರ್ಥಕವು.

ಪ್ರಾಣಿಗಳು ವೇದದಿಂದ ಪರಮಾತ್ಮನನ್ನು ತಿಳಿಯುವರು. ಪರಮಾತ್ಮನು ಆದರಿಂದ ಸಂತುಷ್ಟನಾಗಿ ಸತ್ಕರ್ಮಗಳಲ್ಲಿ ಪ್ರೇರಿಸುವನು. ಸತ್ಕರ್ಮಗಳಿಂದ ಯಜ್ಞವು ನಿಷ್ಪನ್ನವಾಗಿ ಪರ್ಜನ್ಯಾದಿ ದೇವತೆಗಳಿಗೆ ಸಂತುಷ್ಟಿಯನ್ನುಂಟು ಮಾಡುವುದು. ಪರ್ಜನ್ಯಾದಿಗಳು ವೃಷ್ಟಿಯನ್ನು ಸುರಿಸುವರು. ಅದರಿಂದ ಅನ್ನವೃದ್ಧಿಯಾಗುವುದು. ಅದರಿಂದ ಪ್ರಾಣಿಗಳು ಪುಷ್ಟರಾಗುವರು ಮತ್ತು ನೂತನ ಪ್ರಾಣಿ

ಗಳೂ ಹುಟ್ಟುವರು; ಅವರು ಪುನಃ ವೇದಾಭ್ಯಾಸವನ್ನು ಮಾಡಿ ಪರಮಾತ್ಮನನ್ನು ತಿಳಿಯುವರು; ಈ ರೀತಿ ಜ್ಞಾತನಾದ ಪರಮಾತ್ಮನು ಪುನಃ ಸತ್ಕ್ರಿಯೆಗಳಿಗೆ ಪ್ರೇರಕನಾಗುವನು; ಅದರಿಂದ ಯಜ್ಞವು; ಅದರಿಂದ ಪರ್ಜನ್ಯಪ್ರೀತಿಯು; ಅದರಿಂದ ಸದನ್ನವು; ಅದರಿಂದ ಪುನಃ ಸಾತ್ವಿಕ ಪ್ರಾಣಿಗಳಿಗೆ ಪುಷ್ಟಿಯು, ನೂತನ ಪುರುಷರ ಜನನವು; ಮತ್ತು ಅವರ ವೇದಾಭ್ಯಾಸವು...... ಇದೇ ರೀತಿಯಾಗಿ ಜಗಚ್ಚಕ್ರವು ವೇದಜ್ಞಾನ, ಯಜ್ಞ, ಸಾತ್ವಿಕ ಅನ್ನಾದಿಗಳನ್ನೂ ನಿಮಿತ್ತ ಮಾಡಿಕೊಂಡಿರುವ ಪರಮಾತ್ಮನಿಂದ ನಡೆಯಿಸಲ್ಪಡುತ್ತಿರುವುದು. ಹೀಗಿರುವಲ್ಲಿ ಯಜ್ಞವನ್ನು ನಿಲ್ಲಿಸಿ ಬಿಟ್ಟರೆ ಪರ್ಜನ್ಯನು ಕುಪಿತನಾಗುವನು; ಅದರಿಂದ ಸರಿಯಾಗಿ ವೃಷ್ಟ್ಯಾದಿಗಳಾಗದೆ, ಕ್ಷಾಮಾದಿಗಳು ಒದಗಿ ಸಾತ್ವಿಕಾನ್ನವು ದೊರಕಲಾರದು; ಅದರಿಂದ ದುರ್ಬುದ್ಧಿಯುಂಟಾಗಿ ವೇದದಿಂದ ಪರಮಾತ್ಮನ ಯಥಾರ್ಥ ಜ್ಞಾನವು ಬರುವುದಿಲ್ಲ; ಅವನು ಸತ್ಕ್ರಿಯೆಗಳಲ್ಲಿ ಪ್ರೇರಿಸುವುದಿಲ್ಲ. ಈ ರೀತಿಯಾಗಿ ಜಗತ್ತು ತಾಮಸವಾಗಿ ವಿಲಯವನ್ನು ಹೊಂದುವುದು. ಆದುದರಿಂದ ಯಜ್ಞಾದಿ ಕರ್ಮಗಳನ್ನು ಮೋಕ್ಷಪರ್ಯಂತವೂ ಬಿಡಬಾರದು ಎಂದು ಶ್ರೀ ಕೃಷ್ಣನ ತಾತ್ಪರ್ಯವು. ಇದರಿಂದ ಕರ್ಮ ಪರಿತ್ಯಾಗವು ಅತಿ ತಾಮಸವಾದ ದೈವದ್ರೋಹವೆಂದು ಪ್ರಾಪ್ತವಾಯಿತು.

11. ಪುನಃ ಹದಿನಾರನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣನು ವಿಧಿಯನ್ನು ಅತಿಕ್ರಮಿಸಿ ನಡೆಯುವ ಆಸುರ ಸ್ವಭಾವವನ್ನೂ ಅದಕ್ಕೆ ಪ್ರಾಪ್ತವಾಗುವ ಅನರ್ಥ ಫಲಕಥನದಿಂದ ಸಹಿತವಾಗಿ ವರ್ಣಿಸಿ, ಉಪಸಂಹಾರದಲ್ಲಿ ಸ್ವವರ್ಣಾಶ್ರಮೋಚಿತ ಧರ್ಮವನ್ನು ವಿಧ್ಯುಕ್ತ ರೀತಿಯಲ್ಲಿ ಅವಶ್ಯವಾಗಿ ಅನುಷ್ಠಾನ ಮಾಡಬೇಕೆಂದು ಎರಡು ಶ್ಲೋಕಗಳಲ್ಲಿ ನಿರೂಪಿಸಿರುವನು. ಅವುಗಳನ್ನು ಪೂರ್ವದಲ್ಲಿಯೇ ಉದಾಹರಿಸಿ ವ್ಯಾಖ್ಯಾನ ಮಾಡಿರುತ್ತೇನೆ.

12. ಹದಿನೆಂಟನೆಯ ಅಧ್ಯಾಯದಲ್ಲಿ ಸ್ವರೂಪೇಣ ಕರ್ಮ ಪರಿತ್ಯಾಗವು ವಿಹಿತವೆಂಬ ಅದ್ವೈತವಾದವನ್ನು ಶ್ರೀ ಕೃಷ್ಣನು ಪೂರ್ವಪಕ್ಷ ಸ್ಥಾನದಲ್ಲಿಟ್ಟು ಅದನ್ನು ನಿರವಕಾಶ ವಾಕ್ಯಗಳಿಂದ ಖಂಡನೆ ಮಾಡಿ ವರ್ಣಾಶ್ರಮ ವಿಹಿತವಾದ ಸ್ವಕರ್ಮಗಳನ್ನು ಸರ್ವರೂ ಮಾಡಿಯೇ ತೀರಬೇಕೆಂದು ವಿಧಾನ ಮಾಡಿರುವನು :-

**(1) ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।**
**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥**
**ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಸ್ಸಂಪ್ರಕೀರ್ತಿತಃ ॥**
**ಯಜ್ಞದಾನತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ ॥**
**ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಂ ॥**

**ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥**

—(18. 3–7.)

**ಅರ್ಥ :**— "ಎಲೈ ಭರತಶ್ರೇಷ್ಠನೇ ! ಕೆಲವರು ಜ್ಞಾನಿಗಳು ದೋಷಯುಕ್ತವಾದ ಕರ್ಮವನ್ನು ಪರಿತ್ಯಾಗ ಮಾಡಬೇಕೆಂದು ಹೇಳುತ್ತಾರೆ. ಮತ್ತೂ ಕೆಲವರು ಜ್ಞಾನಿಗಳು ಯಜ್ಞ, ದಾನ, ತಪಸ್ಸೇ ಮುಂತಾದ ಕರ್ಮಗಳನ್ನು ಬಿಡಬಾರದೆಂದು ಹೇಳುತ್ತಾರೆ. ಈ ವಿವಾದಾಸ್ಪದವಾದ ತ್ಯಾಗ ವಿಷಯದಲ್ಲಿ ನನ್ನ ನಿಶ್ಚಯವನ್ನು ಕೇಳು.

"ಎಲೈ ಪುರುಷಶ್ರೇಷ್ಠನೇ ! ತ್ಯಾಗವು ಮೂರು ಪ್ರಕಾರವಾಗಿರುವುದು. ಅದರಲ್ಲಿ ವಸ್ತುತತ್ವವೇನೆಂದರೆ, ಯಜ್ಞ, ದಾನ, ತಪಸ್ಸೇ ಮುಂತಾದ ಕರ್ಮಗಳನ್ನು ಸರ್ವಥಾ ಬಿಡಬಾರದು. ಅವುಗಳು ಅವಶ್ಯವಾಗಿ ಅನುಷ್ಠೇಯವಾದುವುಗಳು. ಯಜ್ಞವೂ, ದಾನವೂ, ತಪಸ್ಸೂ ಜ್ಞಾನಿಗಳಿಗೂ ಪಾವನಕರವಾಗಿರುವುವು. ( ಹಾಗಿದ್ದರೆ ಕೆಲವರು ಜ್ಞಾನಿಗಳು ದೋಷಯುಕ್ತವಾದುದರಿಂದ ಕರ್ಮಗಳನ್ನು ಪರಿತ್ಯಾಗ ಮಾಡಬೇಕೆಂದು ಹೇಳಿದರಲ್ಲಾ; ಅವರ ತಾತ್ಪರ್ಯವೇನು ? ಎಂದರೆ ಹೇಳುತ್ತಾನೆ :— ) ಇದೇ ಕರ್ಮಗಳನ್ನು ಕರ್ಮ ಫಲಸ್ನೇಹ ( ವೆಂಬ ದೋಷ ) ವನ್ನು ಬಿಟ್ಟು ಕರ್ಮ ಫಲಗಳನ್ನು ಅಂತ್ಯದಲ್ಲಿ ಪರಮಾತ್ಮನಲ್ಲಿ ಸಮರ್ಪಿಸಿ ವಿಧ್ಯುಕ್ತ ರೀತಿಯಲ್ಲಿ ಅವಶ್ಯ ಮಾಡಬೇಕೆಂಬುದು ನನ್ನ ನಿಶ್ಚಿತವಾದ ಸಿದ್ಧಾಂತವು. ( ಇದರಿಂದ ಕಾಮ್ಯಕರ್ಮಗಳನ್ನು ಬಿಡಬೇಕೆಂಬುದೇ "ದೋಷಯುಕ್ತವಾದುದರಿಂದ ಕರ್ಮ ಪರಿತ್ಯಾಗ ಮಾಡಬೇಕು" ಎಂದು ಹೇಳಿದ ಜ್ಞಾನಿಗಳ ಅಭಿಪ್ರಾಯವೆಂದು ಸಿದ್ಧವಾಯಿತು. )

"ಎಲೈ ಪಾರ್ಥನೇ ! ವಿಧಿವಿಹಿತ ಸ್ವೋಚಿತ ಕರ್ಮಗಳ ಪರಿತ್ಯಾಗವು ಉಚಿತವಲ್ಲ. ವಿಪರೀತ ಬುದ್ಧಿಯಿಂದ ಅವುಗಳ ಪರಿತ್ಯಾಗವು ತಾಮಸವೆಂದು ಹೇಳಲ್ಪಟ್ಟಿರುತ್ತದೆ."

ಈ ರೀತಿ ಅನೇಕ ಪ್ರಕಾರವಾಗಿ ಪ್ರಸಕ್ತವಾದ ಕರ್ಮಾಕರಣ ಮತವನ್ನು ಅಮೋಘವಾದ ವಾಗ್ಬಾಣಗಳಿಂದ ಖಂಡಿಸಿ ಶ್ರೀ ಕೃಷ್ಣನು ನಿಷ್ಕಾಮವಾದ ವಿಹಿತ ಕರ್ಮಾನುಷ್ಠಾನವು ಮೋಕ್ಷಸಾಧಕವೆಂದೇ ಸಿದ್ಧಾಂತ ಮಾಡಿರುವನು. ಮತ್ತು ಸಾಂಖ್ಯರಿಂದಲೂ, ಕರ್ಮಿಗಳಿಂದಲೂ ಸಹ ಅಪರೋಕ್ಷ ಜ್ಞಾನೋತ್ಪತ್ತಿ ಪರ್ಯಂತವೂ ಅವಶ್ಯಾನುಷ್ಠೇಯವಾಗಿರುವುದೆಂದೂ ಹೇಳಿ, ಜ್ಞಾನಿಗಳಾದ ಜನಕಾದಿಗಳೂ ಕೂಡ ಭಗವದಾರಾಧನ ರೂಪವಾದ ಕರ್ಮಯೋಗವನ್ನು ಹರಿಭಕ್ತಿ ವೃದ್ಧಿಯನ್ನು ಉದ್ದೇಶ ಮಾಡಿ ಮತ್ತು ಲೋಕಸಂಗ್ರಹಾರ್ಥವಾಗಿಯೂ ಆಚರಿಸಿ ವಿಷ್ಣುಪ್ರಸಾದಕ್ಕೆ ಪಾತ್ರರಾಗಿ ಮುಕ್ತರಾಗಿರುವರೆಂದು ನಿರೂಪಿಸಿರುವನು. ಮುಮುಕ್ಷುವು ವಿಹಿತ ಕರ್ಮವನ್ನು ಪರಿತ್ಯಾಗ ಮಾಡಬೇಕೆಂಬ ಶಂಕರಾಚಾರ್ಯರ ವಾದವು ಘೋರ ನರಕಪ್ರಾಪ್ತಿಗೆ ಕಾರಣವಾದ ತಾಮಸ ಕಾರ್ಯವೆಂದು ಶ್ರೀ ಕೃಷ್ಣನಿಂದ ಧಿಕ್ಕರಿಸಲ್ಪಟ್ಟಿರುವುದು.

---

# 17. ಹದಿನೇಳನೆಯ ಅಂಶವು.

## ಕರ್ಮಾನುಷ್ಠಾನವು ( ಮುಂದುವರಿಸಿದ್ದು. )

## ನಿಷ್ಕಾಮಕರ್ಮದ ಮಹಿಮೆಯು.

1. **ಪ್ರಶ್ನೆ:**— ಸ್ವಾಮೀ! ಕರ್ಮಾಕರಣವು ನಿಷಿದ್ಧವೆಂದೂ ಕಾಮ್ಯ ಕರ್ಮವು ಬಂಧಕವೆಂದೂ ಸಿದ್ಧವಾಯಿತು. ಹಾಗಾದರೆ ಸಂಸಾರಮೋಚಕವಾದ ಕರ್ಮಸ್ವರೂಪವನ್ನು ಶ್ರೀ ಕೃಷ್ಣನು ಯಾವ ಲಕ್ಷಣವುಳ್ಳದ್ದೆಂದು ನಿರೂಪಿಸಿರುತ್ತಾನೆ ?

**ಉತ್ತರ:— ಶ್ರೀ ಶ್ರೀಗಳವರು:**— ಸಾಂಖ್ಯ, ಸಂನ್ಯಾಸ, ತ್ಯಾಗಗಳಿಂದ ಸಹಿತವಾದ, ವಿಷ್ಣುಭಕ್ತಿ ಪೂರ್ವಕವಾದ, ಸ್ವವರ್ಣಾಶ್ರಮೋಚಿತವಾದ ವಿಹಿತ ಕರ್ಮಾನುಷ್ಠಾನವು ಭವಸಾಗರವನ್ನು ಗೋಷ್ಪದದಂತೆ ಮಾಡಿ ಪರಬ್ರಹ್ಮನ ಪಾದಾರವಿಂದವನ್ನು ಧ್ಯಾನಗೋಚರವಾಗಿ ಮಾಡುವುದೆಂದು ನಾವು ಹಿಂದೆಯೇ ಹೇಳಿರುತ್ತೇವೆ.

**ಪ್ರಶ್ನೆ:**— ಸ್ವಾಮೀ! ಅಂಥ ಸಂಪೂರ್ಣವಾದ ಕಾಮ ಕ್ರೋಧ ಪರಿತ್ಯಾಗ ರೂಪವಾದ ಸಂನ್ಯಾಸವೂ, ನಿಶ್ಚಿತ ತತ್ವಜ್ಞಾನ ರೂಪವಾದ ಸಾಂಖ್ಯವೂ ಪ್ರಾಪ್ತವಾಗುವುದಕ್ಕೆ ಮೊದಲು ಪರಮಾತ್ಮನ ಪ್ರಸಾದಕ್ಕೆ ಪಾತ್ರವಾದ ಕರ್ಮಾನುಷ್ಠಾನವು ಯಾವ ಪ್ರಕಾರವಾಗಿರಬೇಕು ? ಅದನ್ನು ದಯಮಾಡಿ ವಿವರಿಸಬೇಕು.

**ಉತ್ತರ:— ಶ್ರೀ ಶ್ರೀಗಳವರು:**— ಇದೂ ಹಿಂದೆಯೇ ನಿರೂಪಿತವಾಗಿರುವುದು. ಸ್ವಲ್ಪ ಸಂನ್ಯಾಸ ಪೂರ್ವಕವಾದ, ಪರಮಾತ್ಮ ಸ್ಮೃತಿಯಿಂದ ಸಹಿತವಾದ ವಿಹಿತಕರ್ಮವು ಮತ್ತೂ ಅಧಿಕವಾದ ಮನಃಶುದ್ಧಿಗೆ ಕಾರಣವಾಗಿ ಶ್ರವಣಾದಿಗಳಲ್ಲಿ ಶ್ರದ್ಧೆಯನ್ನು ಹುಟ್ಟಿಸುವುದು. ಅನಂತರ ಭಗವನ್ಮಾಹಾತ್ಮ್ಯಜ್ಞಾನಪೂರ್ವಕವಾಗಿ ಹೆಚ್ಚು ವೈರಾಗ್ಯದಿಂದ ಪುನಃ ಉತ್ತಮ ಕರ್ಮಗಳನ್ನು ಮಾಡಬೇಕು. ಅದರಿಂದ ಮತ್ತೂ ಅಧಿಕವಾದ ಮನೋಜಯಾದಿಗಳು ಪ್ರಾಪ್ತವಾಗುವುವು. ಹೀಗೆ ಸ್ವಶಕ್ತ್ಯನುಸಾರವಾಗಿ ಕಾಮ ಕ್ರೋಧಗಳನ್ನು ಬಿಟ್ಟು ಪರಮಾತ್ಮನ ಸ್ಮೃತಿಪೂರ್ವಕವಾಗಿ ಫಲಾಪೇಕ್ಷೆಯಿಲ್ಲದೆ ವಿಹಿತ ಕರ್ಮವನ್ನು ಪ್ರತಿಯೊಬ್ಬ ಮುಮುಕ್ಷುವೂ ಮಾಡಬೇಕು. ಯದ್ಯಪಿ ಸಮಗ್ರವಾಗಿ ರಾಗ ದ್ವೇಷಾದಿಗಳ ಪರಿತ್ಯಾಗವು ಪ್ರಾರಂಭದಲ್ಲಿ ದುರ್ಘಟವು; ಮತ್ತು ಶ್ರವಣಾದಿರಹಿತನಾದವನಿಗೆ ಶಾಸ್ತ್ರನಿರ್ಣೀತವಾದ ತತ್ವಜ್ಞಾನವೂ ಅಲಭ್ಯವು. ಆದರೂ ಮುಮುಕ್ಷುವು ಆರಂಭದಲ್ಲಿ ಪರಮಾತ್ಮನ ಪ್ರೀತಿಯನ್ನು ಅಪೇಕ್ಷಿಸಿ, ಸ್ವರ್ಗ, ಧನ, ದಾರಾ, ಪುತ್ರ, ಮಿತ್ರಾದಿ ಭಾಗ್ಯಗಳನ್ನು ತನ್ನ ಕರ್ಮಗಳಿಗೆ ಫಲರೂಪವಾಗಿ ಕೋರದೆ, “ ನಾಹಂಕರ್ತಾ ಹರಿಃ ಕರ್ತಾ ” ಎಂದರೆ ಪರಮಾತ್ಮನೇ ಸ್ವತಂತ್ರನು ಮತ್ತು ಸರ್ವೇಂದ್ರಿಯಗಳಲ್ಲಿ ನಿಂತು ನನ್ನ ಕರ್ಮಗಳಲ್ಲಿ ಪ್ರೇರಕನು ಎಂಬ ಸಾಮಾನ್ಯ ಜ್ಞಾನಪೂರ್ವಕವಾಗಿ ವೇದೋಕ್ತವಾದ ವಿಹಿತ

ಕರ್ಮಗಳನ್ನು ಅನುಷ್ಠಾನ ಮಾಡಿ, ಪರಮಾತ್ಮನಿಗೆ ಆ ಕರ್ಮ ಫಲವನ್ನು ಸಮರ್ಪಿಸಬೇಕು. ಇದೇ ನಿಷ್ಕಾಮ ಕರ್ಮಾನುಷ್ಠಾನವು. ಇದರಿಂದ ಶ್ರೀ ಹರಿಯು ಪ್ರಸನ್ನನಾಗಿ ಮೋಕ್ಷೋಪಯೋಗಿಯಾದ ಸಚ್ಛಾಸ್ತ್ರ ಶ್ರವಣದಲ್ಲಿ ಅಧಿಕಾರವನ್ನು ಕೊಟ್ಟು ಅನುಕೂಲವನ್ನು ಕಲ್ಪಿಸಿ ಕೊಡುವನು. ಗುಣತ್ರಯರಾಹಿತ್ಯ ರೂಪವಾದ ಮೋಕ್ಷಕ್ಕೆ ಪರಂಪರಯಾ ಕಾರಣವಾಗುವುದರಿಂದ ಇದಕ್ಕೆ ನಿರ್ಗುಣ ಕರ್ಮವೆಂದು ಹೆಸರು. ನಾಶರಹಿತವಾದ ಫಲಕ್ಕೆ ಕಾರಣವಾಗುವುದರಿಂದ ಇದಕ್ಕೆ ಅಕ್ಷಯ ಕರ್ಮವೆಂದು ಹೆಸರು. ಮಂತ್ರಪೂತವಾದ ಇಂದ್ರನ ವಜ್ರಾಯುಧವಾದರೂ ಸಮಯ ವಿಶೇಷದಲ್ಲಿ ನಿಷ್ಫಲವಾಗಬಹುದು. ಆದರೆ ಸಮೀಚೀನವಾಗಿ ಆಚರಿಸಲ್ಪಟ್ಟ ಒಂದು ನಿಷ್ಕಾಮ ಕರ್ಮವೂ ಸಹ ವ್ಯರ್ಥವಾಗಲಾರದು. "ಕೃತಜ್ಞ" ನೆಂಬ ಪ್ರಸಿದ್ಧ ನಾಮವುಳ್ಳ ಶ್ರೀ ಪರಮಾತ್ಮನು ತನ್ನ ಭಕ್ತರು ಮಾಡುವ ಒಂದೊಂದು ಕರ್ಮವನ್ನೂ ಮರೆಯದೆ ಜ್ಞಾನ ಭಕ್ತಿ ವಿರಕ್ತಿ ರೂಪವಾದ ಉತ್ತಮ ಫಲಗಳನ್ನೇ ಕೊಡುವನು. ನಿಷ್ಕಾಮ ಕರ್ಮ ಸ್ತುತಿಯನ್ನು ಶ್ರೀ ಕೃಷ್ಣನೇ ಮಾಡಿರುವನು :—

**(1) ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥**
—(2. 40.)

**ಅರ್ಥ :—** ಎಲೈ ಪಾರ್ಥನೇ ! ಜ್ಞಾನೋಪಾಯ ರೂಪವಾದ ನಿಷ್ಕಾಮ ಕರ್ಮ ವಿಷಯದಲ್ಲಿ ಆರಂಭ ಮಾತ್ರಕ್ಕೂ ನಾಶವಿರುವುದಿಲ್ಲ. ( ಎಂದರೆ "ಆರಂಭ ಮಾತ್ರಮಿಚ್ಛಾ ವಾ ವಿಷ್ಣುಧರ್ಮೇನ ನಿಷ್ಫಲಾ" ಎಂಬ ಪ್ರಮಾಣಾನುಸಾರವಾಗಿ ನಿಷ್ಕಾಮ ಕರ್ಮವನ್ನು ಮಾಡುವೆನೆಂದು ಇಚ್ಛಿಸುವವನಿಗೂ, ಸ್ವಲ್ಪ ಆರಂಭ ಮಾಡಿ ಅಷ್ಟರಲ್ಲೇ ಕರ್ಮವನ್ನು ಪರಿತ್ಯಾಗ ಮಾಡಿದರೂ ಸಹ ಮಾಡಿದಷ್ಟಕ್ಕೆ ಪುಣ್ಯವು ಬಂದೇ ಬರುವುದು ಎಂದು ಭಾವವು.) ಮತ್ತು ಕರ್ಮವನ್ನು ಆರಂಭ ಮಾಡಿ ಮಧ್ಯೇ ವಿಚ್ಛೇದ ಬಂದರೂ ಕರ್ಮ ಪರಿತ್ಯಾಗ ನಿಮಿತ್ತಕವಾಗಿಯಾಗಲೀ, ಅಥವಾ ವಿಷ್ಣು ಧರ್ಮದಲ್ಲಿ ರತನಾಗಿ ಅನ್ಯ ಧರ್ಮಗಳನ್ನು ಮಾಡಲಿಲ್ಲವೆಂಬ ನಿಮಿತ್ತದಿಂದಲಾಗಲೀ ನರಕಾದ್ಯನರ್ಥಗಳು ಇರುವುದಿಲ್ಲ. ಮತ್ತು ನಿಷ್ಕಾಮ ಧರ್ಮವು ಸ್ವಲ್ಪ ಅನುಷ್ಠಿತವಾದರೂ ಸಂಸಾರ ರೂಪವಾದ ಮಹದ್ಭಯದಿಂದ ರಕ್ಷಿಸುತ್ತದೆ.

ಈ ವಾಕ್ಯದಲ್ಲಿ ನಾಲ್ಕೈದು ಪ್ರಕಾರವಾದ ನಿಷ್ಕಾಮ ಕರ್ಮಾನುಷ್ಠಾನದ ಮಹಿಮೆಗಳನ್ನು ಶ್ರೀ ಕೃಷ್ಣನು ವರ್ಣಿಸಿರುತ್ತಾನೆ. 1. ಕಾಮ್ಯ ಕರ್ಮವನ್ನು ಮಾಡುತ್ತೇನೆಂದು ಸಂಕಲ್ಪ ಮಾಡಿದ ಮಾತ್ರಕ್ಕೇ ಫಲವು ಬರುವುದಿಲ್ಲ. ಸಾಂಗವಾದ ಕರ್ಮವು ವಿಧ್ಯುಕ್ತರೀತ್ಯಾ ಅನುಷ್ಠಿತವಾದರೆ ಅಭೀಷ್ಟ ಫಲವು ಪ್ರಾಪ್ತವಾಗುವುದು. ಸ್ವಲ್ಪ ಆರಂಭ ಮಾಡಿ ಧನವ್ಯಯವನ್ನು ಮಾಡಿದ್ದರೂ ಕಾಮ್ಯ ಕರ್ಮವು ಸಂಪೂರ್ತಿಯನ್ನು ಹೊಂದದಿದ್ದರೆ ನಿಷ್ಫಲವೇ. ನಿಷ್ಕಾಮ ಕರ್ಮವು ಈ

ಪ್ರಕಾರವಾಗಿರುವುದಿಲ್ಲ. ವಿಷ್ಣು ಪ್ರೀತಿಕರವಾದ ಕರ್ಮವನ್ನು ಮಾಡಬೇಕೆಂದು ಮನಃಪೂರ್ವಕವಾಗಿ ಇಚ್ಛಾ ಮಾಡಿದ ಮಾತ್ರಕ್ಕೇ, ಹಾಗೂ ಆರಬ್ಧವಾದ ಕರ್ಮವು ಪರಿ ಸಮಾಪ್ತಿಯನ್ನು ಹೊಂದದೇ ನಿಂತು ಹೋದರೂ, ಯಥಾಯೋಗ್ಯವಾಗಿ ಪುಣ್ಯ ಫಲವನ್ನು ಶ್ರೀ ಹರಿಯು ಕೊಟ್ಟೇ ಕೊಡುವನು. 2. ಕಿಂಚ ಸಂಕಲ್ಪಿತ ವಾದ ಕಾಮ್ಯ ಕರ್ಮವು ಅರ್ಧದಲ್ಲೇ ನಿಂತು ಹೋದರೆ ಕರ್ಮ ಪರಿಸಮಾಪ್ತಿಯನ್ನು ಮಾಡದೆ ಸಂಕಲ್ಪಭ್ರಂಶವನ್ನು ಹೊಂದಿದ ಅಂಥ ಅವಿವೇಕಿಯು ನರಕಭಾಗಿ ಯಾಗುವನೆಂದು ಪ್ರಮಿತವಾಗಿರುವುದು. ನಿಷ್ಕಾಮ ಕರ್ಮಕ್ಕೆ ಪರಿತ್ಯಾಗದಿಂದ ಇಂಥ ಪ್ರತ್ಯವಾಯುವಿರುವುದಿಲ್ಲ. ಯೋಗಭ್ರಷ್ಟನು ಉತ್ತಮ ಜನ್ಮವನ್ನು ಸಂಪಾ ದಿಸಿ ಪುನಃ ತನ್ನ ಪೂರ್ವ ಜ್ಞಾನವನ್ನು ಹೊಂದಿ ಭಗವತ್ಪ್ರಸಾದ ಹೇತುವಾದ ಶುದ್ಧ ಧರ್ಮದಲ್ಲಿ ರತನಾಗುವನೆಂದು ಶ್ರೀ ಕೃಷ್ಣನು ಷಷ್ಠಾಧ್ಯಾಯದಲ್ಲಿ ಹೇಳಿರುತ್ತಾನೆ. 3. ಪ್ರತ್ಯವಾಯೋ ನ ವಿದ್ಯತೇ ಎಂಬ ಶ್ಲೋಕ ಭಾಗಕ್ಕೆ ಪ್ರತ್ಯವಾಯುವೆಂದರೆ ವಿಘ್ನವೆಂದೂ ಅರ್ಥವಾಗುವುದೆಂದು ಕೆಲವರು ಇಟ್ಟುಕೊಂಡು ನಿಷ್ಕಾಮ ಕರ್ಮ ವನ್ನು ಅನುಷ್ಠಾನ ಮಾಡುವವರನ್ನು ಪರಮಾತ್ಮನು ತನ್ನ ಕೃಪಾ ದೃಷ್ಟಿಯಿಂದ ವೀಕ್ಷಿಸಿ ಅವರ ಕರ್ಮಗಳನ್ನು ತಾನೇ ನಿರ್ವಿಘ್ನವಾಗಿ ಪರಿ ಸಮಾಪ್ತಿ ಮಾಡಿಸಿ ಕೊಂಡು ಸ್ವೀಕಾರ ಮಾಡುವನೆಂದು ಅರ್ಥವನ್ನು ಹೇಳುವರು. ಪ್ರತ್ಯವಾಯುವೆಂಬ ಪದಕ್ಕೆ ವಿಘ್ನವೆಂಬ ಅರ್ಥವು ಪ್ರಮಿತವಾಗಿದ್ದರೆ ಈ ಪ್ರಮೇಯವು ಶ್ಲೋಕಾರೂಢ ವಾಗುವುದು. ಅನ್ಯಥಾ ದ್ವಾದಶಾಧ್ಯಾಯದ ಗೀತಾ ವಚನಗಳಿಂದ ಈ ವಿಷಯ ವನ್ನು ನಿರ್ಣಯಿಸಬೇಕು. ಅಥವಾ ಇಲ್ಲಿಯೇ, "ನೇಹಾಭಿಕ್ರಮನಾಶೋಽಸ್ತಿ" ಎಂಬ ವಾಕ್ಯಕ್ಕೇ ಆರಬ್ಧವಾದ ನಿಷ್ಕಾಮ ಕರ್ಮವು ವಿಘ್ನದಿಂದ ನಾಶವನ್ನು ಹೊಂದುವುದಿಲ್ಲವೆಂದು ಅರ್ಥ ಮಾಡಬಹುದು. 4. ಕಾಮ್ಯ ಕರ್ಮಾನುಷ್ಠಾನವು ಅಂಗಡಿಯಲ್ಲಿ ದ್ರವ್ಯ ದಾನ ಮಾಡಿ ಪೀತಾಂಬರವನ್ನು ಕೊಂಡು ಕೊಂಡಂತೆಯೇ ಎಂದು ತಿಳಿಯಬೇಕು. ಕಾಸಿಗೆ ತಕ್ಕ ಕಜ್ಜಾಯ. ಧನಕ್ಕೆ ಅನುಗುಣವಾದ ಪದಾರ್ಥವನ್ನು ಅಂಗಡಿಯವನು ಕೊಡುವಂತೆ ಕಾಮ್ಯ ಕರ್ಮಗಳಿಗೆ ಕ್ಲೃಪ್ತವಾದ ಫಲಕ್ಕಿಂತ ಅತಿಶಯವಾದ ಸುಖವು ಬರಲಾರದು. ನಿಷ್ಕಾಮ ಕರ್ಮಾನುಷ್ಠಾನ ವಿಷಯದಲ್ಲಿ ಈ ರೀತಿಯಾದ ವ್ಯವಸ್ಥೆಯು ಇರುವುದಿಲ್ಲ. ಭಕ್ತ್ಯತಿಶಯದಿಂದ ವಿಷ್ಣು ಧರ್ಮವನ್ನು ಆಚರಿಸುವವನು ಸ್ವಲ್ಪ ಮಾಡಿದರೂ ಅಪರಿಮಿತ ಫಲವು ಬರುವುದು. "ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್" ಎಂಬ ಶ್ರೀ ಕೃಷ್ಣನ ವಾಕ್ಯಗಳಿಗೆ ಮೂರು ನಾಲ್ಕು ಅಭಿಪ್ರಾಯಗಳಿರುವುವು. ಕಾಮ್ಯ ಕರ್ಮವು ಸಂಸಾರ ಭಯದಿಂದ ಕಾಪಾಡಲಾರದು. ಸಂಸಾರದಲ್ಲಿ ಸ್ವಲ್ಪ ಕಾಲವೇ ನಿಷ್ಕಾಮ ಕರ್ಮವನ್ನು ಅಧಿಕಾರಿಯು ಅನುಷ್ಠಾನ ಮಾಡಿದರೂ ಪರಮಾತ್ಮನು ಅದನ್ನು ಎಂದೆಂದಿಗೂ ಮರೆಯದೆ ಅಧಿಕಾರಿಯನ್ನು, ಕುರಿ, ಕೋಳಿ ಮುಂತಾದ ದುರ್ಯೋನಿಗಳಿಗಾಗಲೀ, ನರಕಾದ್ಯನರ್ಥಗಳಿಗಾಗಲೀ ಪ್ರಾಯೇಣ ಗುರಿ ಮಾಡದೆ ಕ್ರಮವಾಗಿ ಜ್ಞಾನದ್ವಾರಾ ಮೋಕ್ಷ ರೂಪವಾದ ಮಹಾ ಫಲವನ್ನೇ ಕೊಟ್ಟು

ಸಂಸಾರ ಭಯದಿಂದಲೂ ಬಿಡಿಸಿ ಬಿಡುವನು. 5. ಮತ್ತು ಕಾಮ್ಯ ಕರ್ಮವು ಅನಿತ್ಯ ಫಲವನ್ನು ಕೊಡುವುದು. ಆದರೆ ನಿಷ್ಕಾಮ ಕರ್ಮದಿಂದ ಬರುವ ಮೋಕ್ಷ ರೂಪ ಫಲವು ನಿತ್ಯವಾದುದು. ಸ್ವಲ್ಪ ಕಾಲದಲ್ಲಿ ಆಚರಿಸಿದ ಕರ್ಮವೂ ಕೂಡ ಶಾಶ್ವತ ಫಲವನ್ನು ಕೊಡಿಸುವುದು. ನಾಶಶಿರಸ್ಕವಾದ ಕರ್ಮವು ನಾಶರಹಿತವಾದ ಫಲವನ್ನು ಕೊಡಿಸುವುದು. 6. ಇದೂ ಅಲ್ಲದೆ ಸ್ವಲ್ಪ ನಿಷ್ಕಾಮ ಕರ್ಮಕ್ಕೆ ಭಕ್ತಿ ತುಷ್ಟನಾದ ಪರಮಾತ್ಮನು ಅನಂತ ಮಡಿ ಮಾಡಿ ಅಧಿಕವಾಗಿ ಫಲವನ್ನೂ ಕೊಡು ವನು. ಕಾಮ್ಯ ಕರ್ಮಕ್ಕೆ ಸೇವಾನುಗುಣವಾದ ಫಲವೇ ಹೊರತು ಭಗವಂತನು ಆದನ್ನು ಅಧಿಕ ಮಾಡಿ ಫಲವನ್ನು ಹೆಚ್ಚಿಸಿ ಕೊಡುವುದಿಲ್ಲ.

ಇತರ ದೇವತೆಗಳನ್ನು ಕುರಿತು ಉಪಾಸನೆ ಮಾಡುವುದನ್ನು ಬಿಟ್ಟು ಸಕಲ ದೇವತೆಗಳನ್ನೂ ಭಗವತ್ಪರಿವಾರಭೂತರೆಂದು ಚಿಂತಿಸಿ ಸಾಕ್ಷಾತ್ಪರಮಾತ್ಮನ ಪ್ರೀತ್ಯರ್ಥವಾಗಿ ಕರ್ಮಾನುಷ್ಠಾನ ಮಾಡುವವರು ಸುಲಲಿತವಾಗಿ ಮೋಕ್ಷವನ್ನು ಹೊಂದುವರೆಂದೂ, ಲಕ್ಷ್ಮ್ಯಾದಿಗಳನ್ನು ಉಪಾಸನೆ ಮಾಡುವವರು ಬಹು ಕಷ್ಟ ಪಡಬೇಕಾಗುವುದೆಂದೂ, ಶ್ರೀ ಕೃಷ್ಣನು " ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾ ಸಕ್ತಚೇತಸಾಂ " ಎಂಬ ಶ್ಲೋಕದಲ್ಲಿ ನಿರೂಪಿಸಿರುತ್ತಾನೆ. ಶ್ರೀಮದಾಚಾರ್ಯರೂ ಅವ್ಯಕ್ತೋಪಾಸನೆಯು ಪರಮಾತ್ಮನ ಉಪಾಸನೆಗಿಂತ ಹೆಚ್ಚು ಕಠಿಣವಾಗುವುದಕ್ಕೆ ಅನೇಕ ಕಾರಣಗಳನ್ನು ನಿರೂಪಿಸುವಾಗ ಲಕ್ಷ್ಮ್ಯಾದಿ ದೇವತೆಗಳು ಸಾಧನಸಂಪೂರ್ತಿ ಯುಳ್ಳವರಿಗೆ ಫಲವನ್ನು ಕೊಡತಕ್ಕವರೇ ಹೊರತು ಅಧಿಕಾರಿಯಲ್ಲಿ ನಿಂತು ತಮ್ಮ ಪ್ರೇರಣೆಯಿಂದ ತಮ್ಮ ಸಾಧನಗಳನ್ನು ಸಂಪಾದನೆ ಮಾಡಿ ಕೊಡತಕ್ಕವರಲ್ಲವೆಂದು ಸಪ್ರಮಾಣವಾಗಿ ಹೇಳಿರುವರು. ಶ್ರೀ ಪರಮಾತ್ಮನು ಹೀಗಲ್ಲ. "ದೇವಸ್ತು ತಾನಿ ಸಾಧನಾನಿ ಭಕ್ತಿಮತಃ ಸ್ವಯಮೇವ ಪ್ರಯತ್ನೇನ ದದಾತೀತಿ ಸೌಕರ್ಯಮಿತಿ ಭಕ್ತಾ ನಾಂ ಭಗವದುಪಾಸನೇ " ಎಂದು ಗೀತಾ ಭಾಷ್ಯದಲ್ಲಿ ನಿರೂಪಿಸಿರುವರು. ಪರ ಮಾತ್ಮನು ಭಕ್ತಿಯಿಂದ ಸಹಿತನಾದ ನಿಷ್ಕಾಮನಾದ ಅಧಿಕಾರಿಯಲ್ಲಿ ಪ್ರವಿಷ್ಟನಾಗಿ ತಾನೇ ಒಂದು ವಿಶೇಷ ರೂಪದಿಂದ ಪ್ರೇರಣೆ ಮಾಡಿ ಇಂದ್ರಿಯಜಯಾದಿ ಸಾಧನ ಸಂಪತ್ತಿಗಳನ್ನು ಕೊಟ್ಟು ತನ್ನ ಸೇವೆಯನ್ನು ಮಾಡಿಸಿಕೊಂಡು ಫಲವನ್ನು ಕೊಡುವ ನಾದುದರಿಂದ ಸಾಕ್ಷಾದ್ವಿಷ್ಣುಪ್ರೀತಿಕರವಾದ ಉಪಾಸನೆಯು ಬಹು ಸುಲಭವು ಎಂದು ಅರ್ಥವು.

ಈ ವಿಷಯವನ್ನು ನಿಷ್ಕಾಮ ಭಗವದಾರಾಧನೆಯ ವಿಷಯದಲ್ಲಿಯೂ ಅನ್ವ ಯಿಸಿಕೊಳ್ಳಬಹುದು. ನಿಷ್ಕಾಮನಾಗಿ ಭಗವಂತನ ಪ್ರೀತ್ಯರ್ಥವಾಗಿ ಕರ್ಮ ಮಾಡುವುದಕ್ಕೆ ಉದ್ಯುಕ್ತನಾದಾಗಲೇ ಶ್ರೀ ಹರಿಯು ಆತನ ಭಕ್ತಿಗೆ ಪ್ರಸನ್ನನಾಗಿ ನಿರ್ವಿಘ್ನವಾಗಿ ಆತನ ಸೇವೆಯನ್ನು ಪೂರ್ಣ ಮಾಡಿ ಸ್ವೀಕರಿಸುವನು ಎಂದು ಶ್ರುತಿ ಸ್ಮೃತಿಗಳು ಹೇಳುವುವು. ಇದು ಸ್ಪಷ್ಟವಾದ ಪಂಚರಾತ್ರಾಗಮ ವಚನವು :—

**ಸಂಕಲ್ಪಾದೇವ ಭಗವಾನ್ ತತ್ತ್ವತೋ ಭಾವಿತಾತ್ಮನಾಂ ।**
**ವ್ರತಾಂತಮಖಿಲಂ ಕಾಲಂ ಸೇಚಯತ್ಯವ್ಯತೇನ ತು ॥**

**ಜ್ಞಾತ್ವೈವ ಬಂಧಂ ಮರ್ತ್ಯೇನ ಭವಿತವ್ಯಂ ಸದೈವ ಹಿ ।**
**ಪ್ರಾಪ್ತಯೇ ಸರ್ವಕಾಮಾನಾಂ ಸಂಸಾರಭಯಭೀರುಣಾ ॥ ***

ಮತ್ತೊಂದು ಸ್ಥಳದಲ್ಲಿ ಹೀಗಿರುವುದು :—

**ಪ್ರವೃತ್ತಿಕಾಲಾದಾರಭ್ಯ ಆತ್ಮಲಾಭಾವಸಾನಿಕಂ ।**
**ಯತ್ರಾವಕಾಶೋ ವಿಘ್ನಾನಾಂ ವಿದ್ಯತೇ ನ ಕದಾಚನ ॥ †**

2. ನಿಷ್ಕಾಮ ಭಗವದಾರಾಧನೆಯ ಮಹಿಮೆಯು ಈ ಪ್ರಕಾರವಾಗಿರುವುದು. ಇನ್ನು ನಿಷ್ಕಾಮ ಕರ್ಮವನ್ನು ಆರಂಭ ಮಾಡುವ ಮುಮುಕ್ಷುವಿನಲ್ಲಿ ಅವಶ್ಯವಾಗಿ ಇರಬೇಕಾದ ಧರ್ಮಗಳು ಯಾವುವು ಎಂಬ ನಿಮ್ಮ ಪ್ರಶ್ನೆಗೆ ಉತ್ತರವನ್ನು ಶ್ರೀ ಕೃಷ್ಣೋಕ್ತಿಗಳಿಂದಲೇ ತೋರಿಸುವೆವು.

1. ಯಥಾಯೋಗ್ಯವಾದ ಹರಿಭಕ್ತಿಯು ಪ್ರಥಮಾಂಗವೆಂದು ಶ್ರೀ ಕೃಷ್ಣನು ಹೇಳುತ್ತಾನೆ :—

**(1) ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥**

—(9. 26.)

"ಎಲೈ ಪಾರ್ಥನೇ ! ತುಲಸ್ಯಾದಿ ಪತ್ರಗಳನ್ನಾಗಲಿ, ಜಾಜಿಯೇ ಮುಂತಾದ ಪುಷ್ಪಗಳನ್ನಾಗಲಿ, ನಾರಿಕೇಳಾದಿ ಫಲಗಳನ್ನಾಗಲಿ, ಅಥವಾ ಶುದ್ಧ ಜಲವನ್ನಾಗಲಿ ಯಾವನು ನನಗೆ ಭಕ್ತಿಯಿಂದ ಕೊಡುತ್ತಾನೆಯೋ, ಅಂಥ ಜಿತಮನಸ್ಕನಾದ ವಿಷಯ ವಿರಕ್ತನಿಂದ ಕೊಡಲ್ಪಟ್ಟ ಪತ್ರಾದಿ ಸರ್ವವನ್ನೂ ನಾನು ಸ್ವೀಕರಿಸುತ್ತೇನೆ."

ಭಕ್ತಿಯಿಂದ ಸಮರ್ಪಿಸಲ್ಪಟ್ಟ ಪುಷ್ಪಾದಿಗಳನ್ನೇ ಭಗವಂತನು ಸ್ವೀಕರಿಸುವನು. ಭಕ್ತಿರಹಿತನ ಆರಾಧನೆಯನ್ನು, ದುರ್ಯೋಧನನ ಆತಿಥ್ಯವನ್ನು ನಿರಾಕರಿಸಿದಂತೆ, ಶ್ರೀ ಕೃಷ್ಣನು ತಿರಸ್ಕರಿಸುವನು ಆದುದರಿಂದ ಜ್ಞಾನೋಪಯೋಗಿಯಾದ ಉತ್ತಮ ಕರ್ಮವನ್ನು ಮುಮುಕ್ಷುವು ಭಗವದ್ಭಕ್ತಿಯಿಂದ ಆಚರಿಸಬೇಕು

---

* ನಿಷ್ಕಾಮವಾದ ತನ್ನ ಭಕ್ತರು ತನ್ನನ್ನು ಉದ್ದೇಶ ಮಾಡಿ ವ್ರತಗಳನ್ನು ಅನುಷ್ಠಿಸಬೇಕೆಂದು ಸಂಕಲ್ಪಗಳನ್ನು ಮಾಡಿದ ಒಡನೆಯೇ, ಪರಮಾತ್ಮನು ಅದನ್ನು ತಿಳಿದವನಾಗಿ, ತನ್ನ ಅಮೃತ ದೃಷ್ಟಿಯಿಂದ ವ್ರತ ಸಮಾಪ್ತಿಯಾಗುವ ಪೂರ್ಣ ಕಾಲದಲ್ಲೂ ಅವರನ್ನು ತೋಯಿಸುವನು. ಏತಕ್ಕೆಂದರೆ ಮರ್ತ್ಯನಾದ ಮನುಷ್ಯನ ಬಂಧವು ದುರತಿಕ್ರಮವು, ಮತ್ತು ಸಂಸಾರ ಭಯದಿಂದ ಕಂಗೆಟ್ಟ ಮಾನವರು ತನ್ನಿಂದ ಅಭೀಷ್ಟವಾದ (ಜ್ಞಾನಾದಿ) ಕಾಮಗಳನ್ನು ಹೊಂದಲಿ ಎಂದು ತಿಳಿದು ಶ್ರೀ ಪರಮಾತ್ಮನು ತನ್ನ ಆರಾಧಕರಿಗೆ ಈ ರೀತಿಯಾಗಿ ಅನುಗ್ರಹ ಮಾಡುವನು.

† ಈ ನಿಷ್ಕಾಮ ಕರ್ಮಾನುಷ್ಠಾನ ಮಾಡುವವರಿಗೆ ಕರ್ಮಾರಂಭ ಕಾಲ ಮೊದಲುಗೊಂಡು ಪರಮಾತ್ಮ ದರ್ಶನವಾಗುವವರೆವಿಗೂ ವಿಘ್ನಗಳಿಗೇ ಅವಕಾಶವಿಲ್ಲ. ( ಪರಮಾತ್ಮನು ಪ್ರಾಪ್ತವಾದ ವಿಘ್ನಗಳೆಲ್ಲವನ್ನೂ ಕತ್ತರಿಸಿ ಬಿಡುವನೆಂದು ಭಾವವು. )

ii. ಪರಂತು ಮಾಡತಕ್ಕ ಕರ್ಮವನ್ನು ಸ್ವರ್ಗ ಸುಖಾಪೇಕ್ಷೆಯಿಂದಲಾಗಲಿ, ವಿಷಯಕಾಂಕ್ಷೆಯಿಂದಲಾಗಲಿ ಆಚರಿಸಬಾರದು. ಅಷ್ಟೇ ಅಲ್ಲ. ಕರ್ಮಾನುಷ್ಠಾನವನ್ನು ಮಾಡುವಾಗ ವಿಷಯ ಧ್ಯಾನವನ್ನು ಮಾಡುತ್ತಿರಬಾರದು. ಮನಸ್ಸಿನಲ್ಲಿ ವಿಷಯಚಿಂತನೆಯನ್ನು ಮಾಡುತ್ತಾ ಬಾಹ್ಯ ವ್ಯಾಪಾರ ಮಾತ್ರ ರಹಿತನಾದವನು ಕಪಟಿಯು ಎಂದು ಶ್ರೀ ಕೃಷ್ಣನು ನಿಂದಿಸಿರುತ್ತಾನೆ. ಇಂಥ ರಾವಣ ಸಂನ್ಯಾಸವನ್ನು ಪರಿತ್ಯಜಿಸಿ ಮನಃಪೂರ್ವಕವಾಗಿ ಕರ್ಮ ಫಲಗಳನ್ನು ಅಪೇಕ್ಷಿಸದೆ, ವಿಷಯ ಧ್ಯಾನವನ್ನು ಮಾಡದೆ ಚಿತ್ತೈಕಾಗ್ರತೆಯಿಂದ ಸಹಿತನಾಗಿ ಕರ್ಮವನ್ನು ಆಚರಿಸಬೇಕು. ಶ್ರೀ ಕೃಷ್ಣನು ಹೇಳುತ್ತಾನೆ :—

(2) **ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥**
**ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥**
—(3. 7.)

ಎಲೈ ಅರ್ಜುನನೇ ! ಕರ್ಮೇಂದ್ರಿಯಗಳನ್ನು ( ಜ್ಞಾನೇಂದ್ರಿಯಗಳನ್ನೂ ) ನಿಗ್ರಹ ಮಾಡಿ ರೂಪಾದಿ ವಿಷಯಗಳನ್ನು ಮನಸ್ಸಿನಿಂದ ಸ್ಮರಿಸುತ್ತಿರುವ ಭ್ರಾಂತನು ಕಪಟಾಚಾರವುಳ್ಳವನು, ಡಾಂಭಿಕನು ಎನ್ನಿಸುವನು. ಯಾವಾತನು ಇಂದ್ರಿಯಗಳನ್ನು ವಿಷಯಗಳಿಗೆ ಹೋಗದಂತೆ ಮನಸ್ಸಿನಿಂದ ನಿಗ್ರಹಿಸಿ ಕರ್ಮೇಂದ್ರಿಯದಿಂದ ನಿಷ್ಕಾಮ ಕರ್ಮವನ್ನು ಆರಂಭಿಸುವನೋ ಆತನು ಶ್ರೇಷ್ಠನು.

iii. ಮತ್ತು ಕರ್ಮಾರಂಭದಲ್ಲಿ, ಕರ್ಮಾನುಷ್ಠಾನ ಕಾಲದಲ್ಲಿಯೂ ಸಹ "**ನಾಹಂ ಕರ್ತಾ ಹರಿಃ ಕರ್ತಾ**" ಎಂದರೆ ಭಗವಂತನೇ ಸ್ವತಂತ್ರನು, ಆತನ ಪ್ರೇರಣೆಯಿಂದಲೇ ನನ್ನ ಕರ್ಮವು ನಡೆಯುತ್ತಿರುವುದು ಎಂಬ ಜ್ಞಾನಪೂರ್ವಕವಾಗಿ ಪರಮಾತ್ಮನ ಸ್ಮೃತಿಯಿದ್ದರೇ ಆ ಕರ್ಮವು ಭಗವದಾರಾಧನೆಯೆನ್ನಿಸುವುದು. ಶ್ರೀ ಕೃಷ್ಣನ ತೃತೀಯಾಧ್ಯಾಯದ ಈ ವಾಕ್ಯಗಳು ಈ ವಿಷಯದಲ್ಲಿ ಪ್ರಮಾಣವಾಗಿರುತ್ತವೆ :—

(3) **ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥**
**ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।**
**ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥**
**ಪ್ರಕೃತೇರ್ಗುಣಸಂಮೂಢಾಃ ಸಜ್ಜಂತೇ ಗುಣಕರ್ಮಸು ॥**
—(3. 27-29.)

**ಅರ್ಥ :— ಪ್ರಕೃತೇಃ ಗುಣೈಃ —** ಪ್ರಕೃತಿನಾಮಕ ಈಶ್ವರನ ಜ್ಞಾನೇಚ್ಛಾದಿ ಗುಣಗಳಿಂದ, ಜೀವ ಸ್ವಭಾವಾನುಗುಣವಾದ ಗುಣಗಳಿಂದ, ಮತ್ತು ಜಡ

ಪ್ರಕೃತಿಯ ಪರಿಣಾಮಗಳಾದ ದೇಹೇಂದ್ರಿಯಾಂತಃಕರಣಾದಿಗಳಿಂದ, ಪ್ರೇರಿತವಾಗಿ ನಡೆಯುವ ಸರ್ವ ಕರ್ಮಗಳೂ ಕೇವಲ ನನ್ನಿಂದಲೇ ಸ್ವತಂತ್ರವಾಗಿ ಆಚರಿಸಲ್ಪಡುವುವು ಎಂದು ಅಹಂಕಾರದಿಂದ ಭ್ರಾಂತ ಚಿತ್ತವುಳ್ಳ ಮೂಢನು ತಿಳಿಯುತ್ತಾನೆ. ಎಲೈ ಮಹಾಬಾಹುವೇ ! ತತ್ವಜ್ಞಾನಿಯಾದರೋ, ಗುಣಕರ್ಮ ವಿಭಾಗಯೋಃ— ಗುಣ ವಿಭಾಗವನ್ನು ಎಂದರೆ ಪರಮಾತ್ಮನ ಜ್ಞಾನೇಚ್ಛಾದಿ ಗುಣಗಳು, ಜೀವನ ಸ್ವಾಭಾವಿಕ ಗುಣಗಳು, ಪ್ರಕೃತಿ ಪರಿಣಾಮಗಳಾದ ದೇಹೇಂದ್ರಿಯಾಂತಃಕರಣಗಳೆಂಬ ಗುಣಗಳು ಇವುಗಳನ್ನೂ ಮತ್ತು ಈಶ್ವರನ ಸ್ವತಂತ್ರಪ್ರೇರಕ ಕರ್ಮಗಳು, ಪ್ರಕೃತಿಯ ವಿಕಾರ ಕ್ರಿಯೆಗಳು ಈ ರೀತಿಕರ್ಮ ವಿಭಾಗವನ್ನೂ ಚೆನ್ನಾಗಿ ತಿಳಿದು, ಗುಣಾ ಗುಣೇಷು ವರ್ತಂತೇ— ಸ್ವತಂತ್ರನಾದ ಭಗವಂತನ ಜ್ಞಾನೇಚ್ಛಾ ಪ್ರಯತ್ನಾದಿ ಗುಣಗಳು, ಜೀವನ ಸ್ವಾಭಾವಿಕ ಗುಣಗಳಿಗೂ ಜೀವನ ಪ್ರಾಕೃತ ದೇಹದ ಇಂದ್ರಿಯಾದಿಗಳೆಂಬ ಗುಣಗಳಿಗೂ ಪ್ರೇರಕತನದಿಂದ ಪ್ರವರ್ತಿಸುತ್ತವೆ; ನಾನು ಸ್ವತಂತ್ರಕರ್ತನಲ್ಲ ಎಂದು ತಿಳಿದು, ನ ಸಜ್ಜತೇ — ಕರ್ಮ ಮಾಡುವುದರಲ್ಲಿ ನಾನೇ ಸ್ವತಂತ್ರನೆಂಬ ಅಭಿಮಾನವನ್ನು ಮಾಡುವುದಿಲ್ಲ. ಈ ರೀತಿ ಗುಣಕರ್ಮ ವಿಭಾಗವನ್ನು ತಿಳಿಯದ ಭ್ರಾಂತರು ತಾವೇ ಸ್ವತಂತ್ರರೆಂದು ಅಭಿಮಾನ ಹೊಂದುತ್ತಾರೆ ಮತ್ತು ಇಂದ್ರಿಯ ವಿಷಯಗಳಲ್ಲಿ ಆಸಕ್ತರಾಗುತ್ತಾರೆ.

ಚತುರ್ಥಾಧ್ಯಾಯಗತ ವಾಕ್ಯಗಳೂ ವಿಶದವಾಗಿಯೇ ಇರುವುವು :—

(4) **ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥**

**ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥**
**ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥**
—(4. 16–18.)

ಎಲೈ ಪಾರ್ಥನೇ ! ಕರ್ಮವು ಯಾವುದು ? ಅಕರ್ಮವು ಯಾವುದು ? ವಿಕರ್ಮವು ಯಾವುದು ? ಎಂದು ತಿಳಿಯುವ ವಿಷಯದಲ್ಲಿ ಪಂಡಿತರೂ ಸಹ ಮೋಹಿತರಾಗುತ್ತಾರೆ. ಆದುದರಿಂದ ಯಾವ ಕರ್ಮ ಸ್ವರೂಪವನ್ನು ತಿಳಿದು ಅನುಷ್ಠಾನ ಮಾಡುವುದರಿಂದ ನೀನು ಪಾಪದಿಂದ ಮುಕ್ತನಾಗುತ್ತೀಯೋ ಅಂತಹ ( ನಿಷ್ಕಾಮ ) ಕರ್ಮವನ್ನು ನಿನಗೆ ಉಪದೇಶ ಮಾಡುತ್ತೇನೆ, ಕೇಳು. ಕರ್ಮ ಅಕರ್ಮ, ವಿಕರ್ಮಗಳನ್ನು ವಿವೇಕ ಮಾಡಿ ಅಂದರೆ ಸತ್ಕರ್ಮವನ್ನು ಅಕರ್ಮ ವಿಕರ್ಮಗಳಿಂದ ಬೇರೆಯಾಗಿ, ಅಕರ್ಮವನ್ನು ಕರ್ಮ ವಿಕರ್ಮಗಳಿಂದ ಭಿನ್ನವಾದ ಲಕ್ಷಣವುಳ್ಳದ್ದನ್ನಾಗಿ, ವಿಕರ್ಮವನ್ನು ಕರ್ಮಾಕರ್ಮಗಳಿಂದ ವ್ಯಾವೃತ್ತ ಸ್ವರೂಪ

ವುಳ್ಳದ್ದನ್ನಾಗಿ ( ಅವುಗಳ ಲಕ್ಷಣಗಳನ್ನು ) ಸರಿಯಾಗಿ ತಿಳಿಯಬೇಕು. ಕರ್ಮಾದಿ ಜ್ಞಾನವು ಅತಿ ದುರ್ಘಟವು, ಮತ್ತು ಕರ್ಮ, ಅಕರ್ಮ, ವಿಕರ್ಮಗಳೆಲ್ಲವೂ ಭಗವಂತನ ಅಧೀನವೆಂದು ತಿಳಿಯಬೇಕು. ಎಲೈ ಪಾರ್ಥನೇ ! ಯಾವಾತನು ತಾನು ಸ್ವೋಚಿತ ಕರ್ಮ ಮಾಡುವಾಗಲೂ ತನಗೆ ಕರ್ಮಾಭಾವವನ್ನು ಎಂದರೆ ಸ್ವತಂತ್ರ ಕರ್ತೃತ್ವರಾಹಿತ್ಯವನ್ನು ತಿಳಿಯುತ್ತಾನೆಯೋ, ಎಂದರೆ ತಾನು ಕರ್ಮ ಮಾಡುವಾಗ ಭಗವಂತನು ಸ್ವತಂತ್ರಕರ್ತನೆಂದು ತಿಳಿಯುವನೋ ಮತ್ತು ಅಕರ್ಮಣಿ— ಜೀವನಾದ ತನ್ನಿಂದ ಆಚರಿಸಲ್ಪಡುವ ಕ್ರಿಯಾರಹಿತವಾದ ಸುಷುಪ್ತಿ ಸ್ವಪ್ನಾದ್ಯವಸ್ಥೆಗಳಲ್ಲಿಯೂ, ಕರ್ಮ ಯಃ ಪಶ್ಯೇತ್— ಸ್ವತಂತ್ರ ಭಗವಂತನ ಕ್ರಿಯೆಗಳುಂಟೆಂದು ಯಾವಾತನು ತಿಳಯುತ್ತಾನೆಯೋ ಆತನು ಮನುಷ್ಯರಲ್ಲಿ ಜ್ಞಾನಿಯು. ( ಸರ್ವಾವಸ್ಥೆಗಳಲ್ಲಿಯೂ, ಸರ್ವ ಕರ್ಮಗಳಲ್ಲಿಯೂ ಭಗವಂತನು ಸ್ವತಂತ್ರಕರ್ತನು ಎಂದು ತಿಳಿಯುವವನು ವಿವೇಕಿಯು ಎಂದು ಭಾವವು.) ಆತನೇ ಜ್ಞಾನೋಪಾಯವುಳ್ಳವನು; ಆತನೇ ಸ್ವಯೋಗ್ಯವಾದ ಸಕಲ ಕರ್ಮಗಳಿಗೂ ಫಲವನ್ನು ಹೊಂದಿದವನು.

ಅಷ್ಟಾದಶಾಧ್ಯಾಯದಲ್ಲಿಯೂ ಕೂಡ ಪರಮಾತ್ಮನ ಸ್ವಾತಂತ್ರ್ಯವನ್ನು ತಿಳಿಯದೇ ಕರ್ಮ ಮಾಡುವವನು ಅವಿವೇಕಿಯು ಎಂದು ಶ್ರೀ ಕೃಷ್ಣನು ಹೇಳಿರುವನು :—

(5) **ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।**
**ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಂ ॥**
**ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಂ ।**
**ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಂ ॥**
**ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ ।**
**ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥**
**ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।**
**ಪಶ್ಯತ್ಯಕೃತಬುದ್ಧಿತ್ವಾತ್ ನ ಸ ಪಶ್ಯತಿ ದುರ್ಮತಿಃ ॥**
—(18. 13-16.)

**ಅರ್ಥ :—** ಎಲೈ ಮಹಾಬಾಹುವೇ ! ಸಕಲ ಕರ್ಮಗಳು ಸ್ವರೂಪತಃ ನಿಷ್ಪನ್ನವಾಗಬೇಕಾದರೆ, ( ಕರ್ಮಗಳು ಉತ್ಪನ್ನವಾಗಬೇಕಾದರೆ, ) ಕಪಿಲನಾಮಕ ಸಾಕ್ಷಾತ್ ಶ್ರೀ ಪರಮಾತ್ಮನಿಂದ ಉಪದಿಷ್ಟವಾದ ಸಾಂಖ್ಯ ಸಿದ್ಧಾಂತದಲ್ಲಿ* ಐದು ಕಾರಣಗಳು ನಿರೂಪಿಸಲ್ಪಟ್ಟಿರುವುವು. ದೇಹಭೂಮ್ಯಾದಿ ಅಧಿಷ್ಠಾನವು; ಪರಾಧೀನಕರ್ತನಾದ ಜೀವನು, ಇಂದ್ರಿಯಾದಿಕರಣಗಳು; ಕರ್ಮೇಂದ್ರಿಯಗಳ ನಾನಾ

---

* ಈಗ ಲೋಕದಲ್ಲಿರುವ ಷಡ್ದರ್ಶನಗಳಲ್ಲಿ ಒಂದಾದ ಸಾಂಖ್ಯ ಮತವು ದುರ್ಮತವು. ಇದು ಪರಮಾತ್ಮನಿಂದ ರಚಿಸಲ್ಪಟ್ಟುದಲ್ಲ.

ವಿಧವಾದ ಕ್ರಿಯೆಗಳು ಮತ್ತು ಮಾನಸಿಕ ಕ್ರಿಯೆಗಳು; ಮತ್ತು ದೈವಂ- ಅದೃಷ್ಟಾದಿ ನಿಯಾಮಕನಾದ ಸ್ವತಂತ್ರ ಪರಮಾತ್ಮನು ಐದನೆಯ ಕಾರಣವು. ಹೀಗೆ ಐದು ಕಾರಣಗಳು. ಇದರಲ್ಲಿ ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಮನೋರೂಪವಾದ ಇಂದ್ರಿಯಗಳಿಂದ ಮನುಷ್ಯನು ನ್ಯಾಯವಾದ ಅಥವಾ ಅನ್ಯಾಯವಾದ ಯಾವ ಕರ್ಮವನ್ನು ಮಾಡಿದರೂ ಅದಕ್ಕೆ ಈ ಐದೂ ಕಾರಣಗಳುಂಟೆಂದು ತಿಳಿಯಬೇಕು. ಒಂದು ಕರ್ಮವು ಜೀವನಿಂದ ನಡೆಯಬೇಕಾದರೆ ಪಂಚ ಕಾರಣಗಳು ಇರಲಾಗಿ ಯಾವಾತನು ತಾನೊಬ್ಬನೇ ಆ ಕರ್ಮಕ್ಕೆ ಸ್ವತಂತ್ರವಾಗಿ ಕಾರಣನು ಎಂದು ತಿಳಿಯುವನೋ ಅಂಥವನು ಶ್ರವಣಾದಿ ಸಂಸ್ಕಾರರಹಿತವಾದ ಬುದ್ಧಿಯುಳ್ಳವನಾದುದರಿಂದ ದುರ್ಮತಿಯು, ವಿಪರೀತ ಜ್ಞಾನವುಳ್ಳವನು.

iv. ಭಗವತ್ಪ್ರೀತಿಕರವಾದ ನಿಷ್ಕಾಮ ಕರ್ಮವು ವಿಧ್ಯುಕ್ತವಾಗಿರಬೇಕು. ವೇದವಿಹಿತ ಕರ್ಮಗಳನ್ನೇ ವೇದೋಕ್ತ ರೀತಿಯಲ್ಲಿ ಅನುಷ್ಠಾನ ಮಾಡಿ ಪರಮಾತ್ಮನಿಗೆ ಅರ್ಪಿಸಬೇಕೇ ಹೊರತು ನಿಷಿದ್ಧ ಕರ್ಮಗಳನ್ನು ಅರ್ಪಿಸುವುದು ಅತಿ ತಾಮಸವಾದ ತುಚ್ಛ ವ್ಯಾಪಾರವೆಂದು ತಿಳಿಯಬೇಕು.

ಸಾತ್ವಿಕ ಕರ್ಮವನ್ನು ವಿವರಿಸುವಾಗ ಶ್ರೀ ಕೃಷ್ಣನು ಈ ಅಂಶವನ್ನು ಮರೆಯದೆ ಉಲ್ಲೇಖಿಸಿರುತ್ತಾನೆ :—

**(6) ನಿಯತಂ ಸಂಗರಹಿತಮರಾಗದ್ವೇಷತಃ ಕೃತಂ ।**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ವಿಕಮುಚ್ಯತೇ ॥**

—(18. 23.)

ಎಲೈ ಪಾರ್ಥನೇ ! ನಿಯತಂ = ಸ್ವವರ್ಣಾಶ್ರಮೋಚಿತವಾದ ಮತ್ತು ವಿಧ್ಯುಕ್ತವಾದ, ಫಲಸ್ನೇಹರಹಿತವಾಗಿ ರಾಗ ದ್ವೇಷಗಳಿಲ್ಲದೆ, ಸ್ವಾತಂತ್ರ್ಯಾಭಿಮಾನರಹಿತವಾಗಿ ಮಾಡಲ್ಪಟ್ಟ ಕರ್ಮವು ಸಾತ್ವಿಕವು ಎನ್ನಿಸಲ್ಪಡುತ್ತದೆ.

---

# 18. ಹದಿನೆಂಟನೆಯ ಅಂಶವು.

## ಕರ್ಮಾನುಷ್ಠಾನವು ( ಮುಂದುವರಿಸಿದ್ದು. )

## ಸರ್ವ ಕರ್ಮ ಸಮರ್ಪಣ ಕ್ರಮವು.

**ಪ್ರಶ್ನೆ :—** ಸ್ವಾಮೀ ! ಈ ಪ್ರಕಾರವಾದ ತಮ್ಮ ನಿರೂಪಣೆಯಿಂದ ನಮಗೆ ಮಹಾ ಸಂಕಟವು ಪ್ರಾಪ್ತವಾದಂತಾಗಿರುವುದು. ಹೇಗೆಂದರೆ **"ಪುಣ್ಯ ಪಾಪಗಳ ರ್ಪಿಸವನಡಿಗೆ"** ಇತ್ಯಾದಿ ರೀತಿಯಲ್ಲಿ ಜಗನ್ನಾಥ ದಾಸರೇ ಮೊದಲಾದ ಭಗವತ್ತತ್ವವನ್ನು ಸಮೀಚೀನವಾಗಿ ತಿಳಿದ ಅನೇಕ ಜ್ಞಾನಿಗಳು ಪಾಪವನ್ನು ಸೇರಿಸಿಕೊಂಡು ಸಕಲ ಕರ್ಮಗಳನ್ನೂ ಭಗವದಧೀನವನ್ನಾಗಿ ಮಾಡಬೇಕೆಂದು ತಿಳಿಸಿರುವರು. ಭಗವದ್ಗೀತೆಯಲ್ಲಿಯೇ ಶ್ರೀ ಕೃಷ್ಣನೂ ಕೂಡ " ಶುಭಾಶುಭ ಪರಿತ್ಯಾಗೀ, " "ಸರ್ವ ಧರ್ಮಾನ್ ಪರಿತ್ಯಜ ", " ಸರ್ವಾರಂಭ ಪರಿತ್ಯಾಗೀ " ಎಂದು ಅನೇಕ ಶ್ಲೋಕಗಳಲ್ಲಿ ಪಾಪದಿಂದ ಸಹಿತವಾದ ಸರ್ವ ಕರ್ಮಗಳನ್ನೂ ಭಗವಂತನ ಪಾದದಲ್ಲಿ ಅರ್ಪಿಸಿ ನಿಶ್ಚಲಚಿತ್ತನಾಗಿರಬೇಕು ಎಂದು ಉಪದೇಶ ಮಾಡಿರುವನು 2. ಪರಂತು ಸರ್ವ ಕರ್ಮ ಸಮರ್ಪಣೆಯು ಯುಕ್ತಿಸಿದ್ಧವಾಗಿಯೂ ಇರುವುದು. ಪರಮಾತ್ಮನೇ ಸರ್ವ ಸ್ವತಂತ್ರನು ಜೀವನು ಕಲ್ಲಿನಂತೆ, ಸ್ವತಂತ್ರವಾಗಿ ಯಾವುದನ್ನು ಮಾಡುವುದಕ್ಕೂ ಸಮರ್ಥನಲ್ಲ ಹೀಗಿರುವಲ್ಲಿ ಆತನು ಮಾಡಿಸಿದ ಸರ್ವ ಕರ್ಮಗಳನ್ನೂ ಆತನಿಗೇ ಅರ್ಪಿಸುವುದು ಯುಕ್ತವಲ್ಲವೇ ? ಆಗಮವೂ ಮತ್ತು ಅನುಮಾನವೂ ಕೂಡ ಪುಣ್ಯ ಪಾಪಗಳೆರಡನ್ನೂ ಪರಮಾತ್ಮನಿಗೆ ಸಮರ್ಪಿಸುವುದರಲ್ಲಿ ಸಾಧಕವಾಗಿರುವಾಗ ತಾವು ಕೇವಲ ಅನಿಷಿದ್ಧ ಕರ್ಮಗಳನ್ನೇ ಆಚರಿಸಿ ಪರಮಾತ್ಮನಿಗೆ ಅರ್ಪಿಸಬೇಕೆಂದು ಹೇಳಲು ಕಾರಣವೇನು ?

**ಉತ್ತರ :— ಶ್ರೀ ಶ್ರೀಗಳವರು :—** 1. " ಪುಣ್ಯ ಪಾಪಗಳರ್ಪಿಸು " " ಶುಭಾಶುಭ ಪರಿತ್ಯಾಗೀ " ಇತ್ಯಾದಿ ವಾಕ್ಯಗಳಿಗೆ ದುರರ್ಥಗಳನ್ನು ಮಾಡಿಕೊಂಡು ಪ್ರಶ್ನೆ ಮಾಡುತ್ತೀರಿ. ಯದ್ಯಪಿ " ಪುಣ್ಯ ಪಾಪಾದಿಕಂ ಕರ್ಮ ಅರ್ಪಣಂ ಕುರು ಸರ್ವದಾ " ಇತ್ಯಾದಿ ರೀತಿಯಲ್ಲಿ ಕೆಲವು ಪ್ರಮಾಣ ವಚನಗಳೂ ಇರುವುವು. ಆದರೆ ನಿರವಕಾಶವಾದ ಭಗವದ್ವಚನಾನುಗುಣವಾಗಿ ಸಾವಕಾಶವಾದ ಮತ್ತು ಮೋಹಕವಾದ ಈ ಪ್ರಕಾರವಾದ ವಾಕ್ಯಗಳಿಗೆ ಪ್ರಕರಣೋಚಿತವಾದ ಯಥಾರ್ಥವಾದ ಅರ್ಥವನ್ನು ಹೇಳಬೇಕಾಗಿರುವುದು. ಯಾತಕ್ಕೆಂದರೆ ಯಾವ ದಾಸರಾಯರು " ಪುಣ್ಯ ಪಾಪಗಳರ್ಪಿಸವನಡಿಗೆ " ಎಂದು ಹೇಳಿದರೋ ಅವರೇ **"ಪರಮೋತ್ಸವದಿಂದ" "ಪರಮಾದರದಿ"** ಇತ್ಯಾದಿ ವಿಶೇಷಣಗಳನ್ನು ಕೊಟ್ಟಿರುವರು. ಪರಮ ಭಕ್ತಿಯಿಂದ ಸಹಿತವಾಗಿ ಮಾಡಿದ ಪಾಪಗಳನ್ನು ಅವನಿಗೆ ಅರ್ಪಿಸು ಎಂದು ಹೇಳಿದರೆ ಅನ್ಯಾರ್ಥವನ್ನು ಕಲ್ಪಿಸದೇ ಇರುವುದು ಹೇಗೆ ? ಹೇಗೆಂದರೆ " ಶ್ರುತಿ ಸ್ಮೃತೀ ಹರೇರಾಜ್ಞೇ " ಎಂಬ ಪ್ರಮಾಣ ವಚನವಿರುವುದರಿಂದ ಪಾಪವೆಂದರೆ ಪರಮಾತ್ಮನ

ಆಜ್ಞೋಲ್ಲಂಘನೆಯೆನ್ನಿಸುವುದು. ಪರಮಾತ್ಮನಲ್ಲಿ ಭಕ್ತಿಯಿಂದ ಯುಕ್ತನಾಗಿ ಅವನ ಆಜ್ಞೆಯನ್ನು ಉಲ್ಲಂಘಿಸುವುದು ಅಸಂಭಾವಿತವು. ಇದು ಅನ್ಯತ್ರೋಕ್ತವಾದ ಶ್ರೀ ಕೃಷ್ಣನ ಮಾತು :—

**ಶ್ರುತಿಸ್ಮೃತೀ ಮಮೈವಾಜ್ಞೇ ಯು ಉಲ್ಲಂಘ್ಯ ಪ್ರವರ್ತತೇ ।**
**ಆಜ್ಞಾಛೇದೀ ಮಮ ದ್ವೇಷೀ ಮದ್ಭಕ್ತೋಽಪಿ ನ ವೈಷ್ಣವಃ ॥**

ನಾವು ಯಾವಾತನನ್ನು ಪ್ರೀತಿ ಮಾಡುತ್ತೇವೋ ಅಂಥ ಪುರುಷನನ್ನೇ ಅದೇ ಸಮಯದಲ್ಲಿ ದೊಣ್ಣೆಯಿಂದ ಹೊಡೆಯುವುದು ಸಂಭಾವಿತವಾಗುವುದೇ ? ಆಗಲಾರದು. ಆದುದರಿಂದ ಪರಮಾದರದಿಂದ ಒಡಗೂಡಿ ಪುಣ್ಯ ಪಾಪಗಳನ್ನು ಅವನಿಗೇ ಅರ್ಪಿಸು ಎಂಬ ದಾಸರಾಯರ ವಾಕ್ಯಗಳಿಗೂ, " ಪುಣ್ಯ ಪಾಪಾದಿಕಂ ಕರ್ಮ ಅರ್ಪಣಂ ಕುರು " ಇತ್ಯಾದಿ ಪುರಾಣ ವಾಕ್ಯಗಳಿಗೂ, " ಶುಭಾಶುಭ ಪರಿತ್ಯಾಗೀ " ಇತ್ಯಾದಿ ಶ್ರೀ ಕೃಷ್ಣನ ವಾಕ್ಯಗಳಿಗೂ ಬೇರೆ ಅರ್ಥವನ್ನೇ ಹೇಳಬೇಕು.

2. ಭಕ್ತಿಯಿಲ್ಲದಿದ್ದರೂ ಚಿಂತೆ ಇಲ್ಲ; ಪುಣ್ಯ ಪಾಪಾತ್ಮಕವಾದ ಸಕಲ ಕರ್ಮಗಳನ್ನೂ ಸರ್ವದಾ ಸರ್ವಾವಸ್ಥೆಯಲ್ಲಿಯೂ ಪರಮಾತ್ಮನಿಗೆ ಅರ್ಪಿಸಬಹುದು ಎಂಬ ಮತವು ನಿಮಗೂ ಸಮ್ಮತವಲ್ಲ. ಮತ್ತು ಯಾರೂ ಒಪ್ಪತಕ್ಕದ್ದಲ್ಲ. ಹಾಗೆ ಅಂಗೀಕರಿಸಿದರೆ ಯಥೇಷ್ಟವಾಗಿ ಅಸುರಕೃತ್ಯಗಳನ್ನು ಮಾಡಿ ಪರಮಾತ್ಮನಿಗೆ ಸಮರ್ಪಿಸುತ್ತಿರಬಹುದು. ಚೋರಾದಿಗಳಿಗೂ, ದುರಾಚಾರಿಗಳಿಗೂ, ಮದ್ಯಪಾನ, ಸುವರ್ಣಸ್ತೇಯಾದಿ ಮಹಾ ಪಾತಕಗಳನ್ನು ಆಚರಿಸಿದವರಿಗೂ ದಂಡಾದಿ ಅನರ್ಥಗಳು ಆಗುವುದಕ್ಕೆ ಕಾರಣವಿಲ್ಲ. ನಿಷೇಧ ಶಾಸ್ತ್ರಕ್ಕೆ ಪ್ರವೃತ್ತಿಯೇ ಲುಪ್ತಪ್ರಾಯವಾಗುವುದು. ಮತ್ತು ಅನ್ಯಾಯಾರ್ಜಿತ ದ್ರವ್ಯದಿಂದಲಾದರೂ ಯಜ್ಞಯಾಗಾದಿಗಳನ್ನು ಸರ್ವರೂ ಮಾಡಬಹುದೆಂದು ಒಪ್ಪಬೇಕಾಗುವುದು. ಕಿಂಚ ಈ ದುಷ್ಟವಾದವು ಯುಕ್ತಿಹತವಾಗಿಯೂ ಇರುವುದು. ಭಕ್ತಿರಹಿತನಾದವನು ಕೊಟ್ಟ ಉತ್ತಮ ವಜ್ರರತ್ನಾದಿ ದ್ರವ್ಯಗಳನ್ನೂ, ಭಕ್ತಿರಹಿತನ ತಪಸ್ಸನ್ನೂ ಸಹ ಪರಮಾತ್ಮನು ತಿರಸ್ಕರಿಸುವನು ಹೀಗಿರುವಲ್ಲಿ ಭಕ್ತಿಯಿಲ್ಲದವನ ಪಾಪವನ್ನು ಸಮರ್ಪಿಸಿದರೆ ಪರಮಾತ್ಮನು ಅದನ್ನು ಸ್ವೀಕರಿಸುವುದು ಅಸಂಭಾವಿತವು.

3. ಅಷ್ಟೇ ಅಲ್ಲ. ಪರಮಾತ್ಮನಿಗೆ ಅರ್ಪಿತವಾದುದು ಅನಂತವಾಗಿ ಜೀವನ ಭೋಗಕ್ಕೇ ರೂಪಾಂತರದಲ್ಲಿ ಪರಮಾತ್ಮನಿಂದ ಕೊಡಲ್ಪಡುವುದೆಂದು ಶಾಸ್ತ್ರದಲ್ಲಿ ನಿಶ್ಚಿತವಾಗಿರುತ್ತದೆ ಹೀಗಿರುವಲ್ಲಿ ಪಾಪಗಳನ್ನು ಅರ್ಪಿಸಿದರೆ ಪಾಪವೂ ಅನಂತ ಮಡಿಯಾಗಿ ಜೀವನ ಭೋಗಕ್ಕೇ ಬರುವುದೆಂದು ಅಂಗೀಕರಿಸಬೇಕಾಗುವುದು. ಪಾಪಫಲವಾದ ಅಜ್ಞಾನ ದುಃಖಾದಿಗಳು ಯಾರಿಗೂ ಇಷ್ಟವಲ್ಲವಾದುದರಿಂದ ಪಾಪ ಸಮರ್ಪಣೆಯು ಮತ್ತಷ್ಟು ಪಾಪಹೇತುವಾದ ತಾಮಸ ಕ್ರಿಯೆಯೆಂದು ಸರ್ವರೂ ನಿಶ್ಚಯಿಸಬೇಕು.

4. ಇದೂ ಅಲ್ಲದೆ ಶ್ರೀ ಕೃಷ್ಣನೂ ನಿರವಕಾಶವಾಗಿ ಪರಮಾತ್ಮನಿಗೆ ಸಮರ್ಪಿ

ಸಲ್ಪಡುವ ಕರ್ಮಗಳು "**ನಿಯತ**" ವಾಗಿರಬೇಕು. ಎಂದರೆ ವರ್ಣಾಶ್ರಮೋಚಿತವಾದ ವಿಧಿವಿಹಿತ ವ್ಯಾಪಾರವಾಗಿರಬೇಕೆಂದೇ ಹೇಳಿರುವನು :—

**(1) ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।**
**ಸ್ವಕರ್ಮನಿರತಃ ಸಿದ್ಧಿಂ........ವಿಂದತಿ........ ॥**

—(18. 45.)

ಬ್ರಾಹ್ಮಣಾದಿ ಸ್ವವರ್ಣೋಚಿತ ಕರ್ಮದಲ್ಲಿ ಆಸಕ್ತನಾದ ಮನುಷ್ಯನು ಜ್ಞಾನ ದ್ವಾರಾ ಮುಕ್ತಿಯನ್ನು ಹೊಂದುತ್ತಾನೆ. ಸ್ವಕರ್ಮದಲ್ಲಿ ನಿರತನಾದವನು........ ಸಿದ್ಧಿಯನ್ನು ಹೊಂದುತ್ತಾನೆ.

ಪುನಃ ಸ್ವಕರ್ಮನಿರತನೇ ಜ್ಞಾನಸಿದ್ಧಿಯನ್ನು ಹೊಂದುವನೆಂದು ಶ್ರೀ ಕೃಷ್ಣನು ಹೇಳುತ್ತಾನೆ :—

**(2) ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ।**

—(18. 46.)

5 ಸರ್ವ ಸಮರ್ಪಣೆಯು ಪರಮಾತ್ಮನಿಗೆ ತೃಪ್ತಿಕರವಲ್ಲವೆಂಬುದು ಯುಕ್ತಿ ಸಿದ್ಧವಾಗಿಯೂ ಇರುವುದು. ಪರಮಾತ್ಮನು ಸಕಲ ಸಜ್ಜನರ ಉದ್ಧಾರಾರ್ಥವಾಗಿ ವಿಧಿನಿಷೇಧ ಶಾಸ್ತ್ರವನ್ನು ಪ್ರವರ್ತನ ಮಾಡಿ ವಿಹಿತವನ್ನು ಅನುಷ್ಠಾನ ಮಾಡಿ ತನ್ನನ್ನು ಆರಾಧಿಸಬೇಕೆಂದೂ, ನಿಂದಿತವನ್ನು ಪರಿತ್ಯಾಗ ಮಾಡಿ ತನ್ನನ್ನು ಸಂತೋಷಪಡಿಸಬೇಕೆಂದೂ ಹೇಳಿರುತ್ತಾನೆ. " ಸ್ವಧರ್ಮಾಚರಣಂ ಶಕ್ತ್ಯಾ ವಿಧರ್ಮಾಚ್ಚ ನಿವರ್ತನಂ " ಇತ್ಯಾದಿ ಭಾಗವತ ಶ್ಲೋಕಗಳೂ,

**(3) ಶ್ರೇಯರ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ॥ ***

—(18. 47.)

---

* **ಅರ್ಥ:**— ಅಂಗವಿಹೀನವಾದರೂ ಸ್ವಧರ್ಮಾಚರಣೆಯು ಸಾಂಗವಾಗಿ ಅನುಷ್ಠಿಸಲ್ಪಟ್ಟ ಪರಧರ್ಮಕ್ಕಿಂತ ಶ್ರೇಷ್ಠವು. ( ಎಂದರೆ ಪುರುಷಾರ್ಥ ಸಾಧನವು. ) ಸ್ವವಿಹಿತ ಕರ್ಮವನ್ನು ಆಚರಿಸುವವನು ಪಾಪವನ್ನು ಹೊಂದುವುದಿಲ್ಲ. ( ಉತ್ತಮವಾದ ರೀತಿಯಲ್ಲಿ ಪರಕೀಯ ಧರ್ಮವನ್ನಾಚರಿಸಿದರೂ ಪಾಪವನ್ನು ಹೊಂದುವನು. ) ಇದು ವಿಷ್ಣುಪುರಾಣದಲ್ಲಿ ಔರ್ವರು ಹೇಳಿದ ಮಾತು :—

**ವರ್ಣಾಶ್ರಮಾಚಾರವತಾ ಪುರುಷೇಣ ಪರಃ ಪುಮಾನ್ ।**
**ವಿಷ್ಣುರಾರಾಧ್ಯತೇ ಪಂಥಾ ನಾನ್ಯಸ್ತತ್ತೋಷಕಾರಣಂ ॥**

ಇವು ಸುಪ್ರಸಿದ್ಧವಾದ ' ವಿಷ್ಣುಧರ್ಮ ' ದ ವಚನಗಳು :—

**ಶ್ರುತಿಸ್ಮೃತ್ಯುದಿತಂ ಧರ್ಮಂ ವರ್ಣಾಶ್ರಮವಿಭಾಗಜಂ ।**
**ಉಲ್ಲಂಘ್ಯ ಯೋ ಪ್ರವರ್ತಂತೇ ಸ್ವೇಚ್ಛಯಾ ಕೂಟಯುಕ್ತಿಭಿಃ ॥**
**ವಿಕರ್ಮಾಭಿರತಾ ಮೂಢಾ ಯುಕ್ತಿಪ್ರಾಗಲ್ಭ್ಯದುರ್ಮದಾಃ ।**
**ಪಾಷಂಡಿನಸ್ತೇ ದುಃಖಶೀಲಾ ನರಕಾರ್ಹಾ ನರಾಧಮಾಃ ॥**

ಇತ್ಯಾದಿ ವಚನಗಳೂ ಇದೇ ಅರ್ಥವನ್ನೇ ಪುಷ್ಟೀಕರಿಸುತ್ತವೆ. ವಿರುದ್ಧ ಕರ್ಮವನ್ನು ಅರ್ಪಣೆ ಮಾಡಿ ಸುಖಿಗಳಾಗಬಹುದಾದರೆ ಯಥೇಷ್ಟವಾಗಿ ಸರ್ವರೂ ಆಚರಿಸಬಹುದಾದುದರಿಂದ ವರ್ಣಸಾಂಕರ್ಯವು ಸ್ವಲ್ಪದರಲ್ಲೇ ಬಂದು ಬಿಡುವುದು. ಅಲ್ಲದೆ ಪರಮಾತ್ಮನು ಅನಿಷ್ಟವಾದ ಪಾಪವನ್ನು ಹೇಗೆ ತಾನೇ ಸ್ವೀಕರಿಸುವನು ? ಕೊಳೆತ ಮಾವಿನ ಹಣ್ಣನ್ನು ಯಾವ ಭಕ್ತನೂ ಇದುವರೆವಿಗೆ ದೇವರ ನೈವೇದ್ಯಕ್ಕೆ ಇಟ್ಟಿರುವುದಿಲ್ಲ. ಹೀಗೆಯೇ ನಿಷಿದ್ಧ ಕರ್ಮವನ್ನೂ ಪರಮಾತ್ಮನಿಗೆ ಅರ್ಪಿಸಬಾರದೆಂದು ಖಂಡಿತವಾಗಿ ತಿಳಿಯಬೇಕು.

6. ಪರಂತು ನೀವು ಹೇಳಿದ ಯುಕ್ತಿಯೂ ಸಹ ಸರ್ವ ಕರ್ಮ ಸಮರ್ಪಣೆಗೆ ಸಾಧಕವಾಗಿರುವುದಿಲ್ಲ. ಸ್ವತಂತ್ರನಾದ ಪರಮಾತ್ಮನೇ ಸಕಲ ಕರ್ಮಗಳಿಗೂ ಪ್ರೇರಕನಾದುದರಿಂದ ಅವನು ಮಾಡಿಸಿದುದನ್ನೂ ಮತ್ತು ಅವನು ಕೊಟ್ಟುದನ್ನೂ ಅವನಿಗೇ ಕೊಡಬೇಕೆಂದು ಹೇಳುವುದೂ ಉಚಿತವಲ್ಲ. ಯಾತಕ್ಕೆಂದರೆ ಲೋಕದಲ್ಲಿ ಪರಮಾತ್ಮನು ಸರ್ವ ಫಲಗಳನ್ನೂ ಅವರವರಿಗೆ ಅವರವರ ಸ್ವಭಾವ ಕರ್ಮಾನುಸಾರವಾಗಿ ಕೊಡುವನು. ಸತ್ಕರ್ಮವನ್ನು ಮಾಡಿದವರಿಗೆ ಸದ್ಬುದ್ಧಿಯನ್ನು ಕೊಟ್ಟು ಅನಿಷಿದ್ಧ ಕರ್ಮದಲ್ಲಿ ಅವರನ್ನು ಪ್ರೇರಿಸಿ ಸತ್ಫಲಗಳನ್ನು ಕೊಡುವನು ದುಸ್ಸಂಗಾದಿಗಳಿಂದ ದುಷ್ಕರ್ಮವನ್ನು ಮಾಡಿದವರಿಗೆ ದುರ್ಬುದ್ಧಿಯನ್ನು ಕೊಟ್ಟು ವಿರುದ್ಧ ವ್ಯಾಪಾರಗಳಲ್ಲಿ ಪ್ರೇರಿಸಿ ಅನರ್ಥ ಫಲಗಳನ್ನು ಕೊಡುವನು. ಶಿಕ್ಷಾರೂಪವಾಗಿ, ಸ್ವತಂತ್ರನಾದ ಪರಮಾತ್ಮನು ಪಾಪ ಕರ್ಮಗಳನ್ನು ಮಾಡಿಸಿರುವುದರಿಂದ ಅದನ್ನು ಪರಮಾತ್ಮನಿಗೆ ಪ್ರೀತಿಕರವಾಗಬೇಕೆಂಬ ಅನುಸಂಧಾನದಿಂದ ಆತನಿಗೆ ಅರ್ಪಿಸುವುದು ಶಾಸ್ತ್ರವಿರುದ್ಧವೂ, ಲೋಕವಿರುದ್ಧವೂ ಆಗಿರುವುದು. ಲೋಕದಲ್ಲಿ ಸ್ವತಂತ್ರನಾದ ಮಹಾರಾಜನು ಸೇವೆಯನ್ನು ಮಾಡಿದ ಪ್ರಜೆಗಳಿಗೆ ವೇತನಾದಿ ಬಹುಮಾನಗಳನ್ನು ಕೊಡುವನು. ಅದನ್ನು ಪುನಃ ಆತನಿಗೇ ಕಾಣಿಕೆಯಾಗಿ ಅರ್ಪಿಸಿ ರಾಜಸೇವೆಯನ್ನು ಮಾಡಿದರೆ ಮಹಾರಾಜನು ಪುನಃ ಹೆಚ್ಚು ಸಂತೋಷಪಡುವನು. ಚೌರ್ಯಾದಿ ವಿರುದ್ಧ ಕರ್ಮವನ್ನು ಮಾಡಿದವರನ್ನು ಕುಪಿತನಾದ ರಾಜನು ಕಾರಾಗೃಹದಲ್ಲಿಟ್ಟು ಗಂಜಿಯನ್ನೂ, ಸರಪಣಿಯನ್ನೂ ಉಡಿಗೆಗೋಸ್ಕರ ದುಷ್ಟ ಬಟ್ಟೆಗಳನ್ನೂ ಕೊಡುವನು. ಇವುಗಳನ್ನು ಪುನಃ ಯಾವ ರೀತಿಯಾಗಿಯೂ ಕಾಣಿಕೆಯಾಗಿ ರಾಜನಿಗೆ ಅರ್ಪಿಸುವುದು ಯುಕ್ತವಲ್ಲ. ಹೀಗೆಯೇ ಪರಮಾತ್ಮನ ಸ್ವಾತಂತ್ರ್ಯಾನುಸಂಧಾನವುಳ್ಳವನು ತನ್ನ ದುಷ್ಕರ್ಮಗಳಿಗೆ ನಿಷ್ಕೃತಿಯನ್ನು ಮಾಡಿಕೊಳ್ಳುವ ಉಪಾಯವನ್ನು ಮಾಡಬೇಕೇ ಹೊರತು ಪುನಃ ಆ ಪಾಪಗಳನ್ನೇ ಪರಮಾತ್ಮನಿಗೆ ಫಲದಂತೆ ಅರ್ಪಿಸುವುದು ಧಾರ್ಷ್ಟ್ಯಮೂಲವಾದ ತಾಮಸ ಕಾರ್ಯವೆಂದೇ ಶಾಸ್ತ್ರನಿಶ್ಚಯವು.

2. **ಪ್ರಶ್ನೆ :—** ಸ್ವಾಮೀ ! ಹಾಗಾದರೆ " ಪುಣ್ಯ ಪಾಪಗಳರ್ಪಿಸವನಡಿಗೆ " ಇತ್ಯಾದಿ ಶ್ಲೋಕಾರ್ಥವೇನು ?

**ಶ್ರೀ ಶ್ರೀಗಳವರು :—** ಎರಡು ಮೂರು ಪ್ರಕಾರವಾಗಿ ಶ್ಲೋಕಾರ್ಥಗಳಿರುವುವು. ಯಥಾಹಿ :—

1. ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿದ ಜ್ಞಾನಿಯು ಸರ್ವ ಕರ್ಮಗಳನೂ ಭಗವತ್ಪ್ರೀತಿಕರವಾಗುವಂತೆಯೇ ಮಾಡುವನೇ ಭಗವಂತನಿಗೆ ಇಷ್ಟವಲ್ಲದ ಒಂದು ಕಾರ್ಯವನ್ನೂ ಮಾಡಲಾರನು. ಜ್ಞಾನಿಯು ಜ್ಞಾನಿಯಾಗಿರುವ ಅವಸ್ಥೆಯಲ್ಲಿ ಪಾಪ ಕರ್ಮವನ್ನು ಮಾಡುವುದೇ ಅಸಂಭಾವಿತವು. ಆತನು ತನ್ನ ಬಿಂಬರೂಪನಾದ ಸ್ವತಂತ್ರ ಸ್ವಾಮಿಯಾದ ಶ್ರೀ ವಿಷ್ಣುವಿನ ಆಜ್ಞೆಯನ್ನು ಧರಿಸಿಯೇ ಲೋಕೋದ್ಧರಣಾದಿ ರೂಪವಾದ ಬಹು ಕರ್ಮಗಳನ್ನು ಮಾಡುವನು. ಹೀಗಿರುವಲ್ಲಿ ಪರಮಾತ್ಮನು ತನ್ನ ಇಚ್ಛಾನುಸಾರವಾಗಿ ಲೋಕ ರೀತಿಯಿಂದ ಪಾಪದಂತೆ ಕಾಣುವ ಕೆಲವು ಕರ್ಮಗಳನ್ನೂ ಸಹ ಮಾಡಬೇಕೆಂದು ತನ್ನ ಭಕ್ತನಿಗೆ ಆಜ್ಞಾಪಿಸುವನು. ಸ್ವತಂತ್ರನಾದ ಪರಮಾತ್ಮನು ಮಹಾದೇವರಿಗೆ ಪಾಶುಪತಾದಿ ದುಶ್ಶಾಸ್ತ್ರವನ್ನು ಮಾಡಬೇಕೆಂದೂ ಗೌತಮಾದಿಗಳಿಗೆ ನ್ಯಾಯಶಾಸ್ತ್ರವೇ ಮುಂತಾದುವುಗಳನ್ನು ರಚಿಸಬೇಕೆಂದೂ ಆಜ್ಞಾಪಿಸಿದನು. ಜಗತ್ಸಂಹಾರವನ್ನು ಮಾಡಬೇಕೆಂದು ರುದ್ರನಿಗೆ ಆಜ್ಞಾಪಿಸಿರುವನು. ಅಶ್ವತ್ಥಾಮನು ಮೃತನಾದನೆಂದು ಹೇಳಬೇಕೆಂದು ಯುಧಿಷ್ಠಿರನಿಗೆ ಅಜ್ಞಾಪಿಸಿದನು. ಇಂಥ ಕರ್ಮಗಳನ್ನು ಪರಮಾತ್ಮನಿಗೆ ಜ್ಞಾನಿಯು ಸಮರ್ಪಣೆ ಮಾಡುತ್ತಾನೆ. ಲೋಕ ರೀತಿಯಿಂದ ಇವುಗಳು ಪಾಪವಾಗಿ ಕಂಡು ಬಂದರೂ ಪರಮಾತ್ಮನ ಆಜ್ಞೆಯಿಂದ ಮಾಡಲ್ಪಡುವ ಕಾರಣ ಇವುಗಳೆಲ್ಲಾ ಪರಮಧರ್ಮಗಳೇ. ಇಂಥ 'ಪಾಪ' ಸಮರ್ಪಣೆಯು ಉಚಿತವೇ. ಕರ್ಮ ಸಮರ್ಪಣೆಯನ್ನು ಮಾಡಬೇಕಾದರೆ ಆ ಕರ್ಮವು ಪರಮಾತ್ಮನಿಂದ ಪ್ರೇರಿತವಾದರೆ ಸಾಲದು. ಪರಮಾತ್ಮನಿಗೆ ಇಷ್ಟವಾಗಿರಬೇಕು

2. ಇತರ ಮುಮುಕ್ಷುಗಳಿಗೂ ಸಹ ಇಂಥ ಅನೇಕ "ಪಾಪ" ಸಮರ್ಪಣೆಯು ಶಾಸ್ತ್ರೋಕ್ತವೇ ಆಗಿರುವುದು. ಪತ್ನೀ ಪರಿತ್ಯಾಗವು, ಪಿತೃ ಪರಿತ್ಯಾಗವು, ಪುತ್ರ ಪರಿತ್ಯಾಗವು, ಭೃತ್ಯಾದಿ ಸ್ವಜನ ಪರಿತ್ಯಾಗವು ಇವುಗಳೆಲ್ಲಾ ಬಹು ಪಾಪಹೇತುಗಳಾಗಿರುವುವು. ಆದರೆ ಭಗವತ್ಪ್ರಾಪ್ತಿ ಮಾರ್ಗಕ್ಕೆ ವಿರೋಧಿಗಳಾದರೆ ಪಿತೃಪಿತಾಮಹಾದಿ ಸಕಲ ಪೂಜ್ಯರನ್ನೂ ಕೂಡ ನಿಶ್ಯಂಕವಾಗಿ ಪರಿತ್ಯಜಿಸಿ ಅವರಿಗೆ ವಿರುದ್ಧವಾಗಿಯೂ ಆಚರಿಸಿ ಅಂಥ ಕರ್ಮಗಳೆಲ್ಲವನ್ನೂ ಪೂಜಾ ರೂಪವಾಗಿ ಪರಮಾತ್ಮನಿಗೆ ಸಮರ್ಪಿಸಬೇಕೆಂಬುದು ನಿರ್ಣೀತವಾದ ಶಾಸ್ತ್ರಾರ್ಥವು. **"ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ"** ಎಂಬ ಗೀತಾ ಶ್ಲೋಕವು ಈ ಅರ್ಥವನ್ನೂ ಹೇಳುವುದು. ಭಗವಂತನಲ್ಲಿ ಶರಣಾಗತಿಯು ಎಂದರೆ ಸರ್ವದಾ ಚಿತ್ತವೃತ್ತಿಯನ್ನು ಇಟ್ಟು ಆತನ ಸೇವೆಯಲ್ಲಿಯೇ ರತನಾಗುವುದು ಪರಮ ಧರ್ಮವು. ಇದಕ್ಕೆ ಸಾಧಕವಲ್ಲದ ಮತ್ತು ವಿರುದ್ಧವಾದ ಸರ್ವ ಕರ್ಮಗಳನ್ನೂ ಪರಿತ್ಯಾಗ ಮಾಡಬೇಕೆಂಬುದು ಶ್ರೀ ಕೃಷ್ಣನ ಅಭಿಪ್ರಾಯವು. ಆದುದರಿಂದ ವರ್ಣಾಶ್ರಮೋಚಿತ ಧರ್ಮಕ್ಕೆ ವಿರುದ್ಧವಾಗಿ, ಪರಮಾತ್ಮನ ಪ್ರಾಪ್ತಿಗೆ ವಿರೋಧಿಯಾಗುವ

ಜನಸೇವೆಯು, ದೇಶಸೇವೆಯು, ದುಷ್ಟ ಪಿತೃ ಸೇವೆಯು, ದುಷ್ಟ ಬಂಧು ಸೇವೆಯು ಇವುಗಳೆಲ್ಲಾ ಲೋಕ ರೀತಿಯಿಂದ "ಧರ್ಮ" ವೆಂದು ವ್ಯವಹರಿಸಲ್ಪಡುತ್ತಿದ್ದರೂ ಪರಮಾತ್ಮ ಪ್ರೀತಿಯನ್ನು ಆಕಾಂಕ್ಷೆ ಮಾಡುವವನು ಅವುಗಳನ್ನು ಪರಿತ್ಯಾಗ ಮಾಡ ಬೇಕೆಂಬುದು ಶ್ರೀ ಕೃಷ್ಣನ ಮತವು.

3. "ಪುಣ್ಯ ಪಾಪಗಳರ್ಪಿಸು" ಇತ್ಯಾದಿ ಶ್ಲೋಕಗಳಿಗೆ ಮತ್ತೊಂದು ಅರ್ಥವೂ ಇರುವುದು. ಲೋಕದಲ್ಲಿ ಪುಣ್ಯ ಶಬ್ದವು ಸ್ವರ್ಗಹೇತುವಾದ ಕಾಮ್ಯ ಕರ್ಮಜನಿತ ಅದೃಷ್ಟದಲ್ಲಿ ಹೆಚ್ಚು ರೂಢವಾಗಿರುವುದು. ಪಾಪಪದವು ನರಕ ಹೇತುವಾದ ದುಷ್ಕರ್ಮಜನಿತ ಅದೃಷ್ಟದಲ್ಲಿ ರೂಢವಾಗಿರುವುದು. ಭಕ್ತರಾದವರು ಪರಮಾತ್ಮನ ಪ್ರೀತಿಯನ್ನು ಉದ್ದೇಶ ಮಾಡಿ ಸಕಲ ಕರ್ಮಗಳನ್ನೂ ಮಾಡಬೇಕು. ಪರಮಾತ್ಮನಿಗೆ ಕೋಪ ಬರುವುದೆಂಬ ಭೀತಿಯಿಂದ ಆತನಿಗೆ ಇಷ್ಟವಲ್ಲದ ಕೆಲಸ ಗಳನ್ನು ಬಿಡಬೇಕು. ಅಷ್ಟೇ ಹೊರತು ಸ್ವರ್ಗ ಪ್ರಾಪಕವೆಂದು ಪುಣ್ಯಗಳನ್ನು ಆಚರಿಸುವುದೂ, ನರಕ ಭೀತಿಯಿಂದ ಪಾಪವನ್ನು ಪರಿತ್ಯಾಗ ಮಾಡುವುದೂ ಉತ್ತಮಾಧಿಕಾರಿಗೆ ಉಚಿತವಲ್ಲ. ಹೀಗಿರುವುದರಿಂದ ಪುಣ್ಯ ಪಾಪಗಳರ್ಪಿಸು ಎಂದರೆ ಪುಣ್ಯ ಪಾಪ ವಿವಕ್ಷೆಯಿಂದ ಕರ್ಮಗಳನ್ನು ಮಾಡುವುದೂ, ಬಿಡುವುದೂ ಯುಕ್ತವಲ್ಲ. ಮತ್ತೇನೆಂದರೆ "ಪರಮಾದರದಿ'— ಕೇವಲ ಭಗವದ್ಭಕ್ತಿಯಿಂದ ಅವನ ಪ್ರೀತಿ ಹೇತುವಾದ **ನಿಷ್ಕಾಮ** ವ್ಯಾಪಾರಗಳಲ್ಲಿ ಆಸಕ್ತನಾಗಬೇಕು ಎಂದು ತಾತ್ಪರ್ಯವು. "ಶುಭಾಶುಭ ಪರಿತ್ಯಾಗೀ" "ಸರ್ವ ಧರ್ಮಾನ್ ಪರಿತ್ಯಜ್ಯ", "ಕುಶಲೇನಾನುಷಜ್ಜತೇ" ಇತ್ಯಾದಿ ಗೀತಾ ವಚನಗಳು ಕಾಮ್ಯ ಧರ್ಮಗಳನ್ನೂ, ಪಾಪಗಳನ್ನೂ, ಸರ್ವವನ್ನೂ ಪರಿತ್ಯಾಗ ಮಾಡಿ ಪುಣ್ಯ ಪಾಪ ವಿವಕ್ಷೆಯನ್ನು ಬಿಟ್ಟು ಭಗವತ್ತೋಷಣವನ್ನು ಬಯಸಿ ನಿಷ್ಕಾಮನಾಗಿ ಆತನಿಗೆ ಇಷ್ಟವಾದ ವ್ಯಾಪಾರ ಗಳನ್ನು ಮಾಡುತ್ತಾ ನಮ್ಮ ಯಾವತ್ತೂ ದಿನಚರ್ಯೆಯನ್ನು ಅವನ ಆರಾಧನ ರೂಪವಾಗಿ ಮಾಡಿ ಅವನಿಗೆ ಅರ್ಪಿಸಬೇಕು ಎಂಬ ತಾತ್ಪರ್ಯವುಳ್ಳವುಗಳಾಗಿರು ವುವು ವೈಷ್ಣವರು ಹಾಸಿಗೆಯಿಂದ ಎದ್ದು ಪ್ರಾತಃಕಾಲದಲ್ಲಿ ಮಾಡುವ ಸಂಕಲ್ಪವೇ ಈ ವಿಶೇಷವನ್ನು ಸೂಚಿಸುವುದು :—

**ಪ್ರಾತಃ ಪ್ರಭೃತಿ ಸಾಯಾಂತಂ ಸಾಯಾದಿಪ್ರಾತರಂತತಃ ।**
**ಯತ್ಕರೋಮಿ ಜಗನ್ನಾಥ ತದಸ್ತು ತವ ಪೂಜನಂ ॥**

"ಎಲೈ ಜಗನ್ನಾಥನೇ! ಪ್ರಾತಃಕಾಲ ಮೊದಲು ಮಾಡಿ ಸಾಯಂಕಾಲ ಪರ್ಯಂತವೂ ಪುನಃ ಸಾಯಂಕಾಲವನ್ನು ಆರಂಭ ಮಾಡಿಕೊಂಡು ಪ್ರಾತಃಕಾಲ ಪರ್ಯಂತವೂ ನಿನ್ನಿಂದ ವಿಹಿತವಾದ, ನಾನು ಮಾಡುವ ಶೌಚ, ಆಚಮನ, ಸ್ನಾನ, ದೇವಪೂಜನ, ಉದ್ಯೋಗ, ಭಾರ್ಯಾಪುತ್ರಾದಿ ಪೋಷಣೆ, ಶಾಸ್ತ್ರಶ್ರವಣ, ಧರ್ಮ, ನಿದ್ರಾದಿ ವ್ಯಾಪಾರವೂ ಕೂಡ ಸ್ವತಂತ್ರನಾದ ನಿನಗೆ ಪೂಜಾ ರೂಪವಾಗಲಿ; ನೀನು ಇದನ್ನು ನಿನ್ನ ಪೂಜಾ ರೂಪವಾಗಿ ದಯಮಾಡಿ ಸ್ವೀಕರಿಸಬೇಕು" ಎಂಬ ಅರ್ಥವು. ಶ್ರೀ ಕೃಷ್ಣನೂ ಕೂಡ ಸಕಲ ಕರ್ಮಗಳನ್ನೂ ವಿಧ್ಯುಕ್ತವಾಗಿ ನೆರವೇರಿಸಿ ಯಾವತ್ತೂ

ದಿನಚರ್ಯೆಯನ್ನು ಭಗವದಾರಾಧನ ರೂಪವಾಗಿ ಸಮರ್ಪಿಸಬೇಕೆಂದು ಗೀತೆಯಲ್ಲಿಯೇ ಹೇಳಿರುತ್ತಾನೆ :—

**(1) ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ ॥**
—(9. 27.)

"ಎಲೈ ಕುಂತೀಪುತ್ರನೇ ! ನೀನು ಏನೇನು ಸತ್ಕರ್ಮಗಳನ್ನು ಮಾಡುತ್ತೀಯೋ ಯಾವುದನ್ನು ಭೋಜನ ಮಾಡುತ್ತೀಯೋ, ಹೋಮ ಮಾಡುತ್ತೀಯೋ, ದಾನ ಮಾಡುತ್ತೀಯೋ ಮತ್ತು ತಪಸ್ಸು ಮಾಡುತ್ತೀಯೋ ಅವೆಲ್ಲವನ್ನೂ ನನಗೆ ಅರ್ಪಣೆ ಮಾಡು."

ಈ ರೀತಿಯಾಗಿ ಸಾಮಾನ್ಯ ಕರ್ಮಗಳನ್ನೂ ಕೂಡ ಭಕ್ತಿಪೂರ್ವಕವಾಗಿ ಅರ್ಪಣೆ ಮಾಡಿದರೆ ನಾನು ಸ್ವೀಕರಿಸುತ್ತೇನೆಂದು ಶ್ರೀ ಕೃಷ್ಣನು ಸೂಚಿಸಿರುತ್ತಾನೆ :—

**ಪತ್ರ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾತ್ಮನಃ ॥** —(9. 26.)

ಈ ಶ್ಲೋಕವು ( ಪುಟ 276 ರಲ್ಲಿ ) ವ್ಯಾಖ್ಯಾತವಾಗಿರುವುದು.

**4.** ಮತ್ತೊಂದು ಪ್ರಕಾರವಾದ ಪಾಪ ಪುಣ್ಯ ಸಮರ್ಪಣೆಯು ಶಾಸ್ತ್ರೋಕ್ತವಾಗಿಯೇ ಇರುವುದು. ಪುಣ್ಯವೂ, ಪಾಪವೂ ಈ ಸಕಲ ಜಗತ್ತೂ ಭಗವದಧೀನವಾಗಿರುವುದು. ಪುಣ್ಯವೂ ಪರಮಾತ್ಮನಿಗೆ ಇಷ್ಟಕರವಾಗಿರುವುದರಿಂದ ಪುಣ್ಯಕರ್ಮವನ್ನು ಭಗವಂತನ ಸ್ವಾತಂತ್ರ್ಯಾನುಸಂಧಾನಪೂರ್ವಕವಾಗಿ ನಿಷ್ಕಾಮನಾಗಿ ಮಾಡಿ ಪುಣ್ಯ ಫಲವನ್ನು ಪರಮಾತ್ಮನಿಗೆ ಸಮರ್ಪಿಸಬೇಕು. ಪಾಪವನ್ನು ಅಜ್ಞಾನದಿಂದ ಮಾಡಿದ ನಂತರ, ಪ್ರಮಾದಾತ್ಮಕವಾಗಿ ಮಾಡಿದ ಪಾಪವನ್ನು ಪರಮಾತ್ಮನ ಅಧೀನವೆಂದು ತಿಳಿದು ಪಶ್ಚಾತ್ತಾಪಪೂರ್ವಕವಾಗಿ ಅದನ್ನು ಪರಿಹರಿಸಬೇಕೆಂದು ಅವನನ್ನು ಬೇಡಿಕೊಳ್ಳಬೇಕು. ಜ್ಞಾನಪೂರ್ವಕವಾಗಿ ಮಾಡಿದ ಪಾಪಕ್ಕೆ ಪ್ರಾಯಃಶ್ಚಿತ್ತವಿಲ್ಲ. ಆದರೆ ಪಶ್ಚಾತ್ತಾಪಯುಕ್ತನಾದ ಪುರುಷನು ಭಗವಂತನಲ್ಲಿ ಶರಣಾಗತನಾದರೆ ಪರಮಾತ್ಮನು ಅದನ್ನೂ ಪರಿಹರಿಸುವನು. ಆದುದರಿಂದ ಪಾಪ ಕರ್ಮಕ್ಕೆ ಸಮರ್ಪಣೆಯೆಂದರೆ "ಭಗವದಧೀನತ್ವ ಚಿಂತನವು" ಎಂದರೆ ಪಾಪವೂ ಪರಮಾತ್ಮನ ಪ್ರೇರಣೆಯಿಂದ ಅಧೀನನಾದ ಅಲ್ಪ ಜೀವನಾದ ನನ್ನಿಂದ ನಡೆಯಿತು ಎಂಬ ಜ್ಞಾನಪೂರ್ವಕವಾದ ಮತ್ತೂ ಪಶ್ಚಾತ್ತಾಪಪೂರ್ವಕವಾದ ವಿಜ್ಞಾಪನೆಯು. ಪುಣ್ಯಕ್ಕೆ ಫಲಪರ್ಯಂತವಾದ ಸಮರ್ಪಣೆಯು.

ಇದು ನಿರ್ಣೀತವಾದ ಶಾಸ್ತ್ರಾರ್ಥವು. ಇದೇ ಏಕಾದಶಸ್ಕಂದ ಭಾಗವತ ತಾತ್ಪರ್ಯದಲ್ಲಿ ಶ್ರೀಮದಾಚಾರ್ಯರು ನಿರೂಪಿಸಿರುವ ವಾಕ್ಯಗಳ ಅಭಿಪ್ರಾಯವು. ಆದುದರಿಂದ ಸ್ವವರ್ಣಾಶ್ರಮೋಚಿತವಾದ ವಿಹಿತ ಕರ್ಮಗಳು ವಿಧ್ಯುಕ್ತ ರೀತಿಯಲ್ಲಿ ಅನುಷ್ಠಾನ ಮಾಡಲ್ಪಟ್ಟರೇನೇ ಸಮೀಚೀನವೆನ್ನಿಸುವುವು.

# 19. ಹತ್ತೊಂಬತ್ತನೆಯ ಅಂಶವು.

## ಕರ್ಮಾನುಷ್ಠಾನವು ( ಮುಂದುವರಿಸಿದ್ದು )

## ಜೀವಕರ್ತೃತ್ವ ವಿಚಾರವು.

1. **ಪ್ರಶ್ನೆ:**— ಸ್ವಾಮೀ ! ಫಲಾಪೇಕ್ಷಾರಹಿತನಾಗಿ, ಭಗವಂತನ ಸ್ವಾತಂತ್ರ್ಯ ಜ್ಞಾನಪೂರ್ವಕವಾಗಿ ವಿಹಿತ ಕರ್ಮವನ್ನು ಮುಮುಕ್ಷುವು ಆಚರಿಸಬೇಕು ಎಂದು ಸಿದ್ಧವಾಯಿತು. ಆದರೆ ಇಲ್ಲಿ ಒಂದು ಶಂಕೆಯು ಬರುವುದು. ಭಗವಂತನೇ ಸರ್ವ ಸ್ವತಂತ್ರನಾದರೆ ವಿಧಿನಿಷೇಧ ಶಾಸ್ತ್ರಾದಿಗಳು ಏತಕ್ಕೆ ? ಮತ್ತು ಜೀವನಿಗೂ ಕಲ್ಲಿಗೂ ವ್ಯತ್ಯಾಸವೇನು ?

**ಉತ್ತರ:— ಶ್ರೀ ಶ್ರೀಗಳವರು :—** ಜೀವನೂ, ವಿಧಿನಿಷೇಧಾತ್ಮಕ ಶಾಸ್ತ್ರಾದಿಗಳೂ ಕರ್ಮದಲ್ಲಿ ಸ್ವತಂತ್ರ ಪ್ರೇರಕನಾದ ಭಗವಂತನಿಗೆ ನಿಮಿತ್ತಗಳು. ಶ್ರೀ ಕೃಷ್ಣನೂ ಹೇಳುತ್ತಾನೆ :—

**(1) ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥**
—(18. 18.)

ಕರ್ಮಚೋದನಾ=ಜೀವನನ್ನು ಕುರಿತು ನೀನು ಯಜ್ಞ ಮಾಡು, ಫಲಾಂಡು ಭಕ್ಷಣವನ್ನು ಮಾಡಬೇಡ ಇತ್ಯಾದಿ ರೂಪವಾಗಿ ಪ್ರವೃತ್ತವಾಗಿರುವ ಕರ್ಮವಿಧಿಯು, ಜ್ಞಾನಂ = ಎಂದರೆ ವಿಧಿಜ್ಞಾನವು, ಜ್ಞೇಯಂ=ಜ್ಞೇಯವಾದ ಮನುಷ್ಯ ಪ್ರಯತ್ನ, ಭೂಮಿ, ದೇಹಾದಿ ಆಶ್ರಯಗಳು. ಚರುಪುರೋಡಾಶ ಚಮಸಾದಿ ಸಾಮಗ್ರಿಗಳು ಮತ್ತು ಪರಿಜ್ಞಾತಾ ಎಂದರೆ ಪರಮಾತ್ಮನ ಪ್ರೇರಣೆಗೆ ವಿಷಯನಾದ ಕರ್ತೃಜೀವನು, ಈ ರೀತಿಯಾಗಿ ತ್ರಿವಿಧಾ = ಮೂರು ಪದಾರ್ಥಗಳನ್ನು ನಿಮಿತ್ತ ಮಾಡಿಕೊಂಡು ಪ್ರವೃತ್ತವಾಗಿರುವುದು. ( ಎಂದರೆ ಒಂದು ಸಂಧ್ಯಾವಂದನಾದಿ ರೂಪವಾದ ವಿಧ್ಯುಕ್ತ ಕರ್ಮವು ನಡೆಯಬೇಕಾದರೆ 1. ಅದನ್ನು ವಿಧಿಸುವ ಶಾಸ್ತ್ರ ಜ್ಞಾನವು, 2. ಅದರ ನಿಷ್ಪತ್ತಿಗೆ ಮತ್ತು **ಪರಿಸಮಾಪ್ತಿಗೆ** ಬೇಕಾದ ಪ್ರಯತ್ನ ಆಸನ, ಪಂಚಪಾತ್ರಾದಿ ಸಾಮಗ್ರಿಗಳು. 3. ಅದನ್ನು ಮಾಡುವ ಒಬ್ಬ ಜೀವನು ಮತ್ತು ಪ್ರೇರಕನಾದ ಪರಮಾತ್ಮನು ಇಷ್ಟೂ ಆವಶ್ಯಕವು; ಎಂದರೆ ಸ್ವತಂತ್ರನಾದ ಪರಮಾತ್ಮನು ಶಾಸ್ತ್ರ ವಿಧಿಯನ್ನೂ, ಪ್ರಯತ್ನ, ದೇಹಭೂಮ್ಯಾದಿ ಪದಾರ್ಥಗಳನ್ನೂ, ಜೀವನನ್ನೂ ನಿಮಿತ್ತ ಮಾಡಿಕೊಂಡು ಜೀವನನ್ನು ಪ್ರೇರಿಸಿ ಜ್ಞಾನವನ್ನು ಉತ್ಪತ್ತಿಗೊಳಿಸಿ ಇಚ್ಛೆಯನ್ನು ಹುಟ್ಟಿಸಿ, ಪ್ರಯತ್ನವನ್ನೂ ಮಾಡಿಸಿ, ಸಲಕರಣೆಗಳನ್ನು ಒದಗಿಸಿ ಕೊಟ್ಟು ಕರ್ಮವನ್ನು ಮಾಡಿಸುತ್ತಾನೆ. ಜೀವಾದಿಗಳು ನಿಮಿತ್ತಮಾತ್ರರು ಎಂದು ಭಾವವು.)

ಜೀವರು ಅಸ್ವತಂತ್ರರಾದರೆ ಹೀಗೆ ಮಾಡು ಎಂಬ ವಿಧಿಬದ್ಧತೆಯು ಕೂಡುವುದಿಲ್ಲವೆಂದು ಶಂಕಿಸಕೂಡದು. ಜೀವನು ಸ್ವತಂತ್ರನಲ್ಲದಿದ್ದರೂ ಸ್ವರೂಪತಃ

ಕ್ರಿಯಾಕರಣ ಸಾಮರ್ಥ್ಯದಿಂದ ಯುಕ್ತನಾಗಿರುವನು. ಕರ್ಮ ಪರಿಸಮಾಪ್ತಿಗೆ ಬೇಕಾದ ಕ್ರಿಯಾಶಕ್ತಿಯು ಜೀವನಲ್ಲಿ ಇರುವುದರಿಂದ ಸ್ವತಂತ್ರನಾದ ದೇವರು ಅಸ್ವತಂತ್ರನಾದ ಜೀವನನ್ನು ವಿಧಿಬದ್ಧನನ್ನಾಗಿ ಮಾಡಿರುವನು. ವಿಧಿಬದ್ಧನಾಗ ಬೇಕಾದರೆ ವಿಧ್ಯುಕ್ತ ಕರ್ಮಾನುಷ್ಠಾನಕ್ಕೆ ಬೇಕಾದ ಸ್ವಾಭಾವಿಕ ಶಕ್ತಿಯು ಇದ್ದರೆ ಸಾಕು. ಸ್ವಾತಂತ್ರ್ಯವು ಇರಬೇಕಾದುದಿಲ್ಲ. ಅಷ್ಟೇ ಅಲ್ಲ. ಸ್ವಾತಂತ್ರ್ಯವು ಇದ್ದರೆ ವಿಧಿಬದ್ಧತೆಯೇ ಕೂಡುವುದಿಲ್ಲ. ಅಸ್ವತಂತ್ರನಿಗೇ ವಿಧಿಬದ್ಧತೆಯು ಎಂದು ಲೋಕ ಸಿದ್ಧ ನ್ಯಾಯವಿರುವುದು. ಜೀವಾದಿಗಳು ನಿಮಿತ್ತ ಮಾತ್ರರು ಎಂಬ ವಿಷಯವು ಶ್ರೀ ಕೃಷ್ಣನ ವಿಧಿಯಿಂದಲೇ ತಿಳಿದು ಬರುವುದು.

(2) **ಮಯೈವೈತೇ ನಿಹತಾಃ ಪೂರ್ವಮೇವ**
**ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ।**
**ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ**
**ಕರ್ಣಂ ತಥಾಽನ್ಯಾನಪಿ ಯೋಧವೀರಾನ್ ॥**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾಃ**
**ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥**
—(11. 33-34.)

ಎಲೈ ಸವ್ಯಸಾಚಿಯೇ ! ಈ ನಿನ್ನ ಶತ್ರುಗಳೆಲ್ಲರೂ ನೀನು ಯುದ್ಧ ಮಾಡುವು ದಕ್ಕೆ ಮೊದಲೇ ಸ್ವತಂತ್ರನಾದ ನನ್ನಿಂದ ಹತಪ್ರಾಯರು. ನೀನು ನನ್ನ ಸ್ವತಂತ್ರ ಸಂಹಾರ ಕಾರ್ಯದಲ್ಲಿ ನಿಮಿತ್ತನಾಗು. ದ್ರೋಣಾಚಾರ್ಯರು, ಭೀಷ್ಮಾಚಾರ್ಯರು, ಜಯದ್ರಥ, ಕರ್ಣ ಮತ್ತು ಇನ್ನೂ ಇತರ ಯೋಧವೀರರು ಇವರೆಲ್ಲರೂ ಸ್ವತಂತ್ರ ನಾದ ನನ್ನಿಂದಲೇ ಸಂಹೃತ ಪ್ರಾಯರಾದವರು. ಅಂಥವರನ್ನು ನೀನು ಸಂಹರಿಸು. ವ್ಯಥೆಪಡಬೇಡ. ಯುದ್ಧ ಮಾಡು. ಯುದ್ಧದಲ್ಲಿ ಶತ್ರುವನ್ನು ಜಯಿಸುತ್ತೀ.

ಜೀವನ ಸ್ವಾತಂತ್ರ್ಯ ಜ್ಞಾನವು ಭ್ರಮವೇ. ಪರಮಾತ್ಮನಿಂದ ಸಂಕಲ್ಪಿತ ವಾದ ವ್ಯಾಪಾರವು ನಡೆದೇ ಹೋಗುವುದು ಎಂಬ ವಿಷಯವು ಹದಿನೆಂಟನೆಯ ಅಧ್ಯಾಯದ ಈ ಶ್ಲೋಕಗಳಿಂದ ತಿಳಿದು ಬರುತ್ತದೆ :—

(3) **ಯದ್ಯಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥**
—(18. 59.)

ಎಲೈ ಪಾರ್ಥನೇ ! ನೀನು ಸ್ವಾತಂತ್ರ್ಯಾಭಿಮಾನವನ್ನು ವಹಿಸಿ ನಾನು ಯುದ್ಧ ಮಾಡುವುದಿಲ್ಲವೆಂದು ನಿಶ್ಚಯಿಸುವುದಾದರೆ ನಿನ್ನ ನಿಶ್ಚಯವು ವ್ಯರ್ಥವೇ ಆಗುತ್ತದೆ. ಏತಕ್ಕೆಂದರೆ ಪ್ರಕೃತಿ :— ಈಶ್ವರೇಚ್ಛೆಯು, ನಿನ್ನನ್ನು ಯುದ್ಧ ಮಾಡುವುದರಲ್ಲಿ . ಪ್ರೇರಿಸುತ್ತದೆ. ( ಆದುದರಿಂದ ನೀನು ಯುದ್ಧ ಮಾಡದೇ ಇರುವುದರಲ್ಲಿ ಸ್ವತಂತ್ರನಲ್ಲ. )

ಪ್ರಕೃತಿಯನ್ನು ನಿಮಿತ್ತ ಮಾಡಿ ಪರಮಾತ್ಮನೇ ಸರ್ವ ಕರ್ಮಗಳನ್ನೂ ಪ್ರೇರಿಸುತ್ತಾನೆಂಬ ಭಾವವು ಸ್ವಲ್ಪ ಮುಂದಿನ ಶ್ಲೋಕದಿಂದ ಸ್ಪಷ್ಟವಾಗುವುದು.

(4) **ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥**
—(18. 61.)

ಎಲೈ ಅರ್ಜುನನೇ! ಸ್ವತಂತ್ರನಾದ ಈಶನಶೀಲನಾದ ನಾರಾಯಣನು ಸರ್ವ ಪ್ರಾಣಿಗಳ ಹೃದಯ ಪ್ರದೇಶದಲ್ಲಿಯೂ ಯಂತ್ರದಂತಿರುವ ಶರೀರದಲ್ಲಿಯೂ ಸರ್ವ ಜೀವರುಗಳನ್ನೂ ತನ್ನ ಸ್ವೇಚ್ಛೆಯಿಂದ ನಾನಾ ವ್ಯಾಪಾರಗಳಲ್ಲಿ ಪ್ರೇರಿಸುವನಾಗಿ ಸ್ಥಿತನಾಗಿರುತ್ತಾನೆ.

ಆದುದರಿಂದ (ಜೀವನಲ್ಲಿ ಸ್ವಾಭಾವಿಕ ಕ್ರಿಯಾಶಕ್ತಿಯಿರುವುದರಿಂದ, ಮತ್ತು ಪರಮಾತ್ಮನು ಜೀವ ಸ್ವಭಾವಾದಿಗಳನ್ನು ನಿಮಿತ್ತ ಮಾಡಿಕೊಂಡು ಪ್ರೇರಿಸುವುದರಿಂದ) ಭಗವದನುಗ್ರಹ ಪಾತ್ರನಾದ ಪ್ರತಿಯೊಬ್ಬ ಮುಮುಕ್ಷುವೂ ತನ್ನನ್ನು ಸಮೀಚೀನ ವ್ಯಾಪಾರಗಳಲ್ಲಿ ಪ್ರೇರಿಸಬೇಕೆಂದು ಪರಮಾತ್ಮನನ್ನೂ ಆವನ ಅಂಗಭೂತರಾದ ಇತರ ದೇವತೆಗಳನ್ನೂ ಪ್ರಾರ್ಥಿಸಬೇಕು ಮತ್ತು ಪ್ರಾರ್ಥಿಸುವನು.

ಶ್ರೀ ಕೃಷ್ಣನು ಹೇಳುತ್ತಾನೆ:—

(5) **ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ॥** —(18. 62.)

ಎಲೈ ಅರ್ಜುನನೇ! ಸ್ವತಂತ್ರ ಪ್ರೇರಕನಾದ ಪರಮಾತ್ಮನನ್ನೇ ನೀನು ಸರ್ವ ಪ್ರಕಾರದಿಂದಲೂ ಶರಣು ಹೊಂದು.

(6) **ತಮೇವ ಚಾದ್ಯಂ ಪುರುಷಂ ಪ್ರಪದ್ಯೇ ಯತಃ ಪ್ರವೃತ್ತಿಃ**
**ಪ್ರಸೃತಾ ಪುರಾಣೀ ॥**
—(15. 4.)

ಎಂಬ ಶ್ರೀಕೃಷ್ಣನ ಹಿತೋಪದೇಶವೂ ಸಮೀಚೀನ ವ್ಯಾಪಾರದಲ್ಲಿ ಪ್ರೇರಿಸಬೇಕೆಂದು ಪರಮಾತ್ಮನನ್ನು ಪ್ರಾರ್ಥಿಸುವುದೇ ಸಂಸಾರ ತರಣೋಪಾಯವೆಂದು ನಿರೂಪಿಸುವುದು.

ವೈಷ್ಣವರು ಪ್ರತಿ ದಿನವೂ ಮಾಡುವ ಪ್ರಾತಃಕಾಲದ ದೇವತಾ ಸ್ತುತಿಯಲ್ಲಿಯೂ ಹೀಗಷ್ಟೇ ಇರುವುದು.

**ನಮೋಽಸ್ತು ತಾತ್ವಿಕಾ ದೇವಾಃ ವಿಷ್ಣುಭಕ್ತಿಪರಾಯಣಾಃ ।**
**ಧರ್ಮಮಾರ್ಗೇ ಪ್ರೇರಯಂತು ಭವಂತಃ ಸರ್ವ ಏವ ಹಿ ॥**

ಎಲೈ ತತ್ವಾಭಿಮಾನಿ ದೇವತೆಗಳಿರಾ! ವಿಷ್ಣುಭಕ್ತಿ ಪರಾಯಣರಾದ ನಿಮಗೆಲ್ಲರಿಗೂ ನಮಸ್ಕಾರವು. ತಾವುಗಳೆಲ್ಲರೂ ನನ್ನನ್ನು ವಿಷ್ಣು ಪ್ರೀತಿಕರವಾದ ಕರ್ಮಾನುಷ್ಠಾನದಲ್ಲಿಯೇ ಪ್ರೇರಿಸೋಣಾಗಲಿ.

---

# 20. ಇಪ್ಪತ್ತನೆಯ ಅಂಶವು.

## ಕರ್ಮಾನುಷ್ಠಾನವು ( ಮುಂದುವರಿಸಿದ್ದು )

## ವಿಧ್ಯುಕ್ತಕರ್ಮಗಳು.

1. **ಪ್ರಶ್ನೆ:—** ಸ್ವಾಮೀ ! ಪ್ರಾತಃಕಾಲ ಮೊದಲುಗೊಂಡು ಸಾಯಂಕಾಲ ಪರ್ಯಂತವೂ ಪುನಃ ರಾತ್ರಿಯಲ್ಲಿಯೂ ಮುಮುಕ್ಷುವಿನಿಂದ ಅನುಷ್ಠೇಯವಾದ ವಿಧ್ಯುಕ್ತ ಕರ್ಮಗಳು ಯಾವುವು ?

**ಉತ್ತರ:— ಶ್ರೀ ಶ್ರೀಗಳವರು:—** ಅವುಗಳನ್ನೆಲ್ಲಾ ಸ್ಮೃತಿಗಳಿಂದ ಸುಲಭವಾಗಿ ತಿಳಿಯಬಹುದು. ವೈಷ್ಣವ ಆಹ್ನಿಕ ಪದ್ಧತಿ ಗ್ರಂಥಗಳಲ್ಲಿ ಕರ್ಮ ಸಂಗ್ರಹವು ನಿರೂಪಿತವಾಗಿರುವಂತೆ ಗುರುಗಳಿಂದ ಉಪದೇಶ ಹೊಂದಿ ತಿಳಿದು ಕೊಂಡು ಅನುಷ್ಠಾನ ಮಾಡಿದರೆ ವಿಧ್ಯುಕ್ತ ಫಲವು ಬರುವುದು. ಇಷ್ಟು ಸಂಗ್ರಹವು :— ಉಪನೀತನಾದ ಬ್ರಾಹ್ಮಣ ಕುಮಾರನು ಶಿಖಾಯಜ್ಞೋಪವೀತಗಳನ್ನು ರಕ್ಷಿಸಿಕೊಂಡು, ತಲೆಗೂದಲನ್ನು ನಾನಾ ವಿಧವಾದ ಪರಿವರ್ತನಗಳಿಂದ ಕಳೆದು ಕೊಂಡು ಬ್ರಾಹ್ಮಣ್ಯವನ್ನು ಕಳೆದುಕೊಳ್ಳದೆ ಆಚಾರಸಂಪನ್ನನಾಗಿರಬೇಕು, " ಏಷ ದೇವರಥಃ " ಎಂದು ಹೇಳಿರುವಂತೆ ಈ ನಮ್ಮ ದೇಹವು ರಥಿಕನಾದ ಶ್ರೀ ಪರಮಾತ್ಮನಿಗೆ ಆವಾಸಭೂತವಾದ ರಥವೆಂದು ತಿಳಿದು, ಅಥವಾ ಇದೂ ಒಂದು ದೇವಸ್ಥಾನ ವೆಂದು ತಿಳಿದು, ಸ್ವಾರ್ಥ ಕಾಮುಗಳನ್ನು ಪರಿತ್ಯಜಿಸಿ ಪರಮಾತ್ಮನಿಗೆ ಪ್ರೀತಿಕರವಾದ ಪದಾರ್ಥಗಳಿಂದಲೇ, ಪರಮಾತ್ಮನಿಗೆ ಇಷ್ಟವಾದ ವಿಧಿಗಳ ಅನುಸರಣೆಯಿಂದಲೇ ಇದನ್ನು ಪರಿಪಾಲಿಸಬೇಕು. ಆತನ ಸೇವಾರ್ಥವಾಗಿಯೇ ಯಾವತ್ತೂ ಕರ್ಮೇಂದ್ರಿಯ ಗಳನ್ನೂ, ಜ್ಞಾನೇಂದ್ರಿಯಗಳನ್ನೂ, ಮನಸ್ಸನ್ನೂ ಉಪಯೋಗಿಸಬೇಕು. ಈ ಪ್ರಕಾರವಾಗಿ ಆಲೋಚಿಸಿದರೆ ಮಲಮೂತ್ರ ವಿಸರ್ಜನ, ಶೌಚಾದಿಗಳು ಪರಮಾತ್ಮನ ಮಂದಿರವನ್ನು ಗುಡಿಸಿ ಸಾರಿಸಿದಂತೆ ಫಲಪ್ರದವಾಗುವುದು. ದಂತಧಾವನ, ಮುಖ ಪ್ರಕ್ಷಾಳನ, ಸ್ನಾನಾದಿಗಳು ದೇವಮಂದಿರ ಮಾರ್ಜನದಂತೆ ಫಲಪ್ರದವಾಗುವುವು. ಭೋಜನವು ವೈಶ್ವಾನರ ಯಜ್ಞವು, ಶಾಸ್ತ್ರಾಲಾಪಗಳು ಜ್ಞಾನ ಯಜ್ಞವು. ವಿಧ್ಯುಕ್ತ ಸ್ತ್ರೀ ಭೋಗವು ವಾಮದೇವ ಯಜ್ಞವೆನ್ನಿಸುವುದು. ರಾತ್ರಿ ಕಾಲದಲ್ಲಿ ಆವಶ್ಯವಾಗಿ ಪ್ರಾಪ್ತವಾದ ನಿದ್ರೆಯೂ ಸಹ ಪ್ರದಕ್ಷಣೆಯಂತೆ ವಿಷ್ಣು ಪ್ರೀತಿಕರವಾಗುವುದು. ಆದುದರಿಂದ ಸರ್ವ ಮುಮುಕ್ಷುಗಳೂ ವಿಧಿವಿಹಿತ ಮಾರ್ಗವನ್ನು ಸ್ವಲ್ಪವೂ ಅತಿ ಕ್ರಮಿಸದೆ ತಮ್ಮ ಯೋಗ್ಯತಾನು ಗುಣವಾಗಿ ಸರ್ವದಾ ಭಗವಂತನನ್ನು ಸೇವಿಸಿ ಜ್ಞಾನ ಫಲವನ್ನು ಹೊಂದುವುದಕ್ಕೆ ಯತ್ನವನ್ನು ಮಾಡಬೇಕು. ಜೀವನು ಕಲ್ಲಿ ನಂತೆ ಪ್ರಯತ್ನ ಯೋಗ್ಯತಾರಹಿತನಾದ ಪದಾರ್ಥವಲ್ಲ. ಪ್ರಯತ್ನ ಸಾಮರ್ಥ್ಯವು ಜೀವನಲ್ಲಿ ಸ್ವಾಭಾವಿಕವಾಗಿ ಇರುವುದು. ಅದನ್ನು ನಿಮಿತ್ತ ಮಾಡಿಕೊಂಡೇ ಕರ್ಮ ವಿಧಿಗಳು ಪ್ರವೃತ್ತವಾಗಿರುವುವು. ಜೀವನು, ಪರಮಾತ್ಮನು ಸ್ವತಂತ್ರಕರ್ತನು

ಎಂಬ ಅನುಸಂಧಾನಸಹಿತನಾಗಿ, ಸರ್ವ ವಿಧ್ಯುಕ್ತ ಕರ್ಮಗಳಲ್ಲಿ ತನ್ನ ಸ್ವಾಭಾವಿಕ ವಾದ ಪ್ರಯತ್ನವನ್ನು ನಿಯೋಗಿಸಬೇಕು

ಹದಿನೆಂಟನೆಯ ಅಧ್ಯಾಯದಲ್ಲಿ ಮಾತ್ರ ಶ್ರೀ ಕೃಷ್ಣನು ಬ್ರಾಹ್ಮಣಾದಿಗಳಿಗೆ ಸ್ವಾಭಾವಿಕವಾದ ಕೆಲವು ಮುಖ್ಯ ಧರ್ಮಗಳನ್ನು ಸಂಗ್ರಹಿಸಿ ಹೇಳಿರುತ್ತಾನೆ .—

**ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಂ ॥**
**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಂ ।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಂ ॥**
**ಕೃಷಿಗೋರಕ್ಷ ವಾಣಿಜ್ಯಂ ವೈಶ್ಯಂ ಕರ್ಮ ಸ್ವಭಾವಜಂ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಂ ॥**
**ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।**

—(18 42 45 )

"ಎಲೈ ಅರ್ಜುನನೇ ! ಶಮಃ— ಸರ್ವದಾ ಬುದ್ಧಿಯನ್ನು ಪರಮಾತ್ಮನಲ್ಲಿ ಇಡುವುದು; ದಮಃ – ಇಂದ್ರಿಯನಿಗ್ರಹವು, ತಪಃ – ಕೃಚ್ಛ್ರ, ಚಾಂದ್ರಾಯಣ, ಉಪವಾಸಾದಿ ತಪಸ್ಸುಗಳು; ಶೌಚಂ – ಮೃತ್ತಿಕಾದಿಗಳಿಂದ ಬಾಹ್ಯ ಶೌಚವು, ವೈರಾಗ್ಯ ಬ್ರಹ್ಮ ಜ್ಞಾನಾದಿಗಳಿಂದ ಅಂತಃಶೌಚವು; ಕ್ಷಾಂತಿಃ – ಸಹನ ಗುಣವು, ಆರ್ಜವಂ – ಮನೋವಾಕ್ಕಾಯಗಳಲ್ಲಿ ಏಕ ರೀತಿಯಿಂದ ಇರುವುದು; ಜ್ಞಾನಂ – ಸೃಷ್ಟಿಕರ್ತೃತ್ವಾದಿ ವಿಷಯಕ ಸಾಮಾನ್ಯವಾದ ಭಗವಜ್ಞಾನವನ್ನು ಹೊಂದು ವುದು; ವಿಜ್ಞಾನಂ = ವಿಶೇಷವಾದ ಭಗವನ್ಮಹಿಮೆಗಳನ್ನು ತಿಳಿಯುವುದು ಮತ್ತು ಭಗವದ್ದರ್ಶನವು, ಆಸ್ತಿಕ್ಯಂ = ಶಾಸ್ತ್ರದಲ್ಲಿ ಶ್ರದ್ಧೆಯು, ಇವುಗಳೆಲ್ಲವೂ ಬ್ರಾಹ್ಮಣ ನಿಗೆ ಜನ್ಮ ಸ್ವಭಾವಾನುಗುಣವಾಗಿ ಪರಮಾತ್ಮನಿಂದ ನಿಯತವಾದ ಸ್ವಧರ್ಮಗಳು.

"ಶೌರ್ಯವು, ತೇಜಸ್ಸು, ಧೈರ್ಯವು, ದಕ್ಷತೆಯು, ಯುದ್ಧದಲ್ಲಿ ಅಪಲಾಯ ನವು, ಬ್ರಾಹ್ಮಣರಿಗೆ ದಾನ ಮಾಡುವುದು, ದುಷ್ಟನಿಗ್ರಹ ಶಿಷ್ಟಪರಿಪಾಲನಾರ್ಥ ವಾಗಿ ದಂಡಧಾರಣೆಯು, ಇವುಗಳು ಕ್ಷತ್ರಿಯನಿಗೆ ಜನ್ಮ ಸ್ವಭಾವಾನುಗುಣವಾಗಿ ವಿಹಿತವಾದ ಧರ್ಮಗಳು

"ಕೃಷಿಯು, ಗೋರಕ್ಷಣೆಯು, ವ್ಯಾಪಾರವು; ಇವು ವೈಶ್ಯ ಜನ್ಮ ಸ್ವಭಾ ವಾನುಗುಣವಾಗಿ ಈಶ್ವರನಿಂದ ವಿಹಿತವಾದ ಕರ್ಮಗಳು "

"ಪೂರ್ವೋಕ್ತ ತ್ರೈವರ್ಣಿಕ ಸಜ್ಜನರ ಸೇವೆಯು ಶೂದ್ರನಿಗೆ ಜನ್ಮ ಸ್ವಭಾ ವಾನುಗುಣವಾಗಿ ವಿಹಿತವಾದ ಕರ್ಮವು. ಸ್ವಸ್ವಧರ್ಮಗಳ ಅನುಷ್ಠಾನದಲ್ಲಿ ನಿರತ ನಾದವನು ಜ್ಞಾನದ್ವಾರಾ ಮುಕ್ತಿ ರೂಪವಾದ ಸಂಸಿದ್ಧಿಯನ್ನು ಹೊಂದುತ್ತಾನೆ."

**ಪ್ರಶ್ನೆ:—** ಸ್ವಾಮೀ ! ಈ ವಾಕ್ಯಗಳಲ್ಲಿ ಯಜನ, ಯಾಜನ, ಅಧ್ಯಯನ,

ಅಧ್ಯಾಪನ, ದಾನ, ಪ್ರತಿಗ್ರಹಗಳೆಂಬ ಷಟ್ಕರ್ಮಗಳು ಬ್ರಾಹ್ಮಣನ ಸ್ವಧರ್ಮಗಳೆಂದು ಸ್ಮೃತ್ಯುಕ್ತ ರೀತಿಯಾಗಿ ಹೇಳದೆ ಶಮದಮಾದಿ ಗುಣಗಳು ಬ್ರಾಹ್ಮಣನ ಧರ್ಮಗಳು ಎಂದು ಹೇಳಿರುವುದರಿಂದ ಯಾರು ಬೇಕಾದರೂ ಉಕ್ತ ಧರ್ಮದಿಂದ ಸಹಿತನಾದರೆ ಬ್ರಾಹ್ಮಣನಾಗಬಹುದು ಎಂದು ಹೇಳಿದಂತಾಗಲಿಲ್ಲವೇ ?

**ಉತ್ತರ :— ಶ್ರೀ ಶ್ರೀಗಳವರು :—** ಈ ವಾಕ್ಯಗಳ ಸ್ವಾರಸ್ಯವನ್ನು ನೀವು ತಿಳಿಯಲಿಲ್ಲ. "ಬ್ರಾಹ್ಮಂ ಕರ್ಮ ಸ್ವಭಾವಜಂ", "ಕ್ಷಾತ್ರಂ ಕರ್ಮ", "ವೈಶ್ಯಂ ಕರ್ಮ", "ಶೂದ್ರಂ ಕರ್ಮ ಸ್ವಭಾವಜಂ" ಇತ್ಯಾದಿ ರೀತಿಯಾಗಿ ಉದ್ದೇಶ ಮಾಡುವಾಗಲೇ ಬ್ರಾಹ್ಮಣಾದಿ ಯೋನಿಗಳಲ್ಲಿ ಹುಟ್ಟಿರುವ ಭಿನ್ನ ಭಿನ್ನ ವರ್ಣಸ್ಥ ಅಧಿಕಾರಿಗಳನ್ನು ಬೇರೆ ಬೇರೆಯಾಗಿಯೇ ಗ್ರಹಣ ಮಾಡಿ ಅವರ ಜಾತ್ಯನುಗುಣವಾದ ವಿಶೇಷ ಧರ್ಮಗಳನ್ನು ಶ್ರೀ ಕೃಷ್ಣನು ಇಲ್ಲಿ ಹೇಳಿರುತ್ತಾನೆ. ಶಮದಮಾದಿ ಗುಣಗಳು ನಾಲ್ಕು ವರ್ಣದ ಮುಮುಕ್ಷುಗಳಿಗೂ ಬೇಕು. ಶೌರ್ಯಾದಿಗಳೂ ಬ್ರಾಹ್ಮಣರಲ್ಲಿ ಸ್ವಲ್ಪ ಇರಬೇಕು. ಬ್ರಾಹ್ಮಣರಿಗೂ ಉತ್ತಮರ ಪರಿಚರ್ಯೆಯೂ, ಕ್ಷತ್ರಿಯರಿಗೂ ಬ್ರಾಹ್ಮಣರ ಪರಿಚರ್ಯೆಯೂ ವಿಹಿತವೇ. ಆದರೆ ಶ್ರೀ ಕೃಷ್ಣನು ಇಲ್ಲಿ ಆಯಾಯ ವರ್ಣಸ್ಥ ಅಧಿಕಾರಿಗಳಲ್ಲಿ ಅಸಾಧಾರಣವಾಗಿ, ನಿರವಧಿಕವಾಗಿ ಇರಬೇಕಾದ ಮುಖ್ಯ ಧರ್ಮಗಳನ್ನು ಅವರವರ ಸಾಧನ ಸೌಲಭ್ಯಕ್ಕಾಗಿ ನಿರೂಪಿಸಿರುತ್ತಾನೆ. ಮೇಲಾಗಿ ಈ ವಿವರಣವನ್ನು ಬ್ರಾಹ್ಮಣಾದಿ ಜಾತಿಯಲ್ಲಿರುವ ಅಧಿಕಾರಿಗಳ ಲಕ್ಷಣಗಳನ್ನಾಗಿ ಇಟ್ಟುಕೊಳ್ಳಬಹುದು. ಶಮದಮಾದಿ ಸಂಪತ್ತುಗಳು ಬ್ರಾಹ್ಮಣರಲ್ಲಿ ಇರುವಷ್ಟು ಕ್ಷತ್ರಿಯಾದಿ ಜಾತಿಗಳಲ್ಲಿ ಜನ್ಮ ಸ್ವಭಾವದಿಂದಲೇ ಇಲ್ಲ. ಆದುದರಿಂದ ಬ್ರಾಹ್ಮಣನು ವಿಶೇಷವಾಗಿ ಧ್ಯಾನಾದಿಗಳಲ್ಲಿ ನಿರತನಾಗಬೇಕು. ಕ್ಷತ್ರಿಯರಲ್ಲಿರುವ ಜನ್ಮ ಸ್ವಭಾವದಿಂದಲೇ ಪ್ರಾಪ್ತವಾದ ಶೌರ್ಯಾದಿಗಳು ಬ್ರಾಹ್ಮಣನಲ್ಲಿ ಅಲ್ಪವಾಗಿರುವುವು. ಆದುದರಿಂದ ಕ್ಷತ್ರಿಯನು ಜನ್ಮದಿಂದ ಪ್ರಾಪ್ತವಾದ ಗುಣಗಳನ್ನು ಈಶ್ವರ ತುಷ್ಟಿಕರವಾಗುವಂತೆ ವಿಶೇಷವಾಗಿ ವೃದ್ಧಿ ಹೊಂದಿಸಿಕೊಳ್ಳಬೇಕು ಹೀಗೆಯೇ ವೈಶ್ಯ ಶೂದ್ರರಿಗೂ ವ್ಯಾಪಾರ, ಸೇವಾದಿಗಳು ತಮ್ಮ ತಮ್ಮ ಜಾತಿಯಲ್ಲಿ ಉತ್ಪತ್ತಿಯಿಂದಲೇ ಪ್ರಾಪ್ತವಾದ ಸ್ವಾಭಾವಿಕ ಕರ್ಮಗಳು. ಅವುಗಳು ಅವರಲ್ಲಿ ವಿಶೇಷವಾಗಿರುವುವು. ಅವುಗಳಿಂದಲೇ ಈಶ್ವರ ತುಷ್ಟಿಯನ್ನು ಅವರು ಹೊಂದಬಹುದು. ಸರ್ವರೂ ಯಥಾಯೋಗ್ಯವಾಗಿ ಶಮದಮಾದಿಗಳು, ಸ್ವಲ್ಪ ಶೌರ್ಯಾದಿಗಳು, ಸಾಮಾನ್ಯವಾದ ಉತ್ತಮ ಸೇವಾದಿಗಳು ಇದರಲ್ಲಿ ಅಧಿಕಾರಿಗಳೇ. ಆದರೂ "ಅಸಾಧಾರಣ್ಯೇನ ವ್ಯಪದೇಶಾ ಭವಂತಿ" ಎಂಬ ನ್ಯಾಯಾನುಗುಣವಾಗಿ ಕ್ಷತ್ರಿಯಾದಿಗಳ ಕರ್ಮಗಳನ್ನು ಮಾಡದೆ ಕೇವಲ ಧ್ಯಾನ, ಪ್ರವಚನ, ಶಮದಮಾದಿ ಗುಣಗಳಿಂದ ಸಹಿತರಾಗಿರೋಣವು ಬ್ರಾಹ್ಮಣರ ಸ್ವಧರ್ಮವೆಂದೂ, ಸ್ವಲ್ಪ ನ್ಯೂನವಾದ ಶಮಾದಿ ಗುಣಗಳನ್ನು ಹೊಂದಿದ್ದರೂ ಅವಶ್ಯವಾಗಿ ಪ್ರಜಾ ಪರಿಪಾಲನರೂಪವಾದ ಕಾರ್ಯದಲ್ಲಿ ವಿಶೇಷತಃ ಆಸಕ್ತನಾಗಬೇಕಾಗುವುದು ಕ್ಷತ್ರಿಯನ ಸ್ವಧರ್ಮವೆಂದೂ, ಹಾಗೆಯೇ ಇತರ ವರ್ಣಸ್ಥರ ಕರ್ಮಗಳನ್ನು ಮಾಡದೆ ಯಥಾಯೋಗ್ಯ

ಶಮಾದಿಗಳಿಂದ ಸಹಿತನಾಗಿ ವ್ಯಾಪಾರಾದಿಗಳಲ್ಲಿ ನಿರತನಾಗುವುದು ವೈಶ್ಯ ಧರ್ಮವೆಂದೂ, ಶಮಾದಿ ಗುಣಗಳಿಂದ ಸಹಿತನಾಗಿ ಇತರ ವರ್ಣಸ್ಥರ ಕರ್ಮವನ್ನು ಬಿಟ್ಟು ಅವರುಗಳ ಸೇವೆಯಲ್ಲಿಯೇ ತತ್ಪರನಾಗಿರುವುದು ಶೂದ್ರನ ಧರ್ಮವೆಂದೂ ಶ್ರೀ ಕೃಷ್ಣನ ಅಭಿಪ್ರಾಯವು.

ಆದುದರಿಂದ ಸರ್ವ ಸಜ್ಜನರೂ ಇನ್ನೂ ವಿಶೇಷವಾದ ಸ್ವವರ್ಣಾಶ್ರಮೋಚಿತ ಕರ್ಮಗಳನ್ನೂ ಆಪದ್ಧರ್ಮಗಳನ್ನೂ ಭಾರತದಿಂದಲೂ, ಸಾತ್ವಿಕ ಸ್ಮೃತಿ, ಪುರಾಣಾದಿಗಳಿಂದಲೂ ತಿಳಿದುಕೊಂಡು ಪರಧರ್ಮವನ್ನು ಸರ್ವಥಾ ಪರಿತ್ಯಜಿಸಿ ಸ್ವಧರ್ಮದಲ್ಲಿ ನಿರತರಾಗಿ ಭಗವದಾರಾಧನೆಯನ್ನು ಮಾಡುತ್ತಿರಬೇಕು. ಅದರಲ್ಲಿಯೂ ಜ್ಞಾನ ಸಂಪಾದನೆಯು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವನಿಗೆ ಅತ್ಯವಶ್ಯಕವಾದ ಕರ್ತವ್ಯ ಧರ್ಮವು. ಸಾಮಾನ್ಯ ಪುಣ್ಯ ಸಂಪಾದನೆಯು ಕ್ಷತ್ರಿಯಾದಿ ಯಾವ ಜಾತಿಯಲ್ಲಿ ಹುಟ್ಟಿದವನಿಗೂ ಸಾಧ್ಯವು. ವಿಶೇಷವಾಗಿ ಜ್ಞಾನ ಸಾಧನೆಗೆ ಬ್ರಾಹ್ಮಣ ದೇಹದಲ್ಲಿ ಅಧಿಕಾರವು ಹೆಚ್ಚಾಗಿರುವುದರಿಂದ, ಅಂಥ ದೇಹವನ್ನು ಜ್ಞಾನ ವಿಜ್ಞಾನ ಸಂಪಾದನೆಯಲ್ಲಿ ಉಪಯೋಗಿಸದೆ ಇರುವ ಬ್ರಾಹ್ಮಣನು ಬಂಗಾರದ ಇಟ್ಟಿಗೆಯನ್ನು ಮನೆಯ ತಳಪಾಯದ ಕಲ್ಲಿಗೆ ಉಪಯೋಗಿಸುವವನಂತೆ, ಮಂದನಾದ ಪಶುವೆಂದು ಬೇರೆ ಹೇಳಬೇಕಾದುದಿಲ್ಲ.

---

## 21. ಇಪ್ಪತ್ತೊಂದನೆಯ ಅಂಶವು.

### ಶಂಕರಾಚಾರ್ಯರ ಕರ್ಮಸಂನ್ಯಾಸವಾದದ ಯುಕ್ತಿವಿಮರ್ಶೆಯು.

1. **ಪ್ರಶ್ನೆ:—** ಸ್ವಾಮೀ ! ಅದ್ವೈತ ಮತದ ರೀತಿಯಿಂದ ಕರ್ಮಾನುಷ್ಠಾನವು ಕೂಡುವುದಿಲ್ಲವೆಂದು ತಮ್ಮಿಂದ ನಿರೂಪಿತವಾಯಿತಷ್ಟೆ. ಕರ್ಮಾಕರಣವನ್ನು ಶಂಕರಾಚಾರ್ಯರು ಎಲ್ಲಿ ಪ್ರತಿಪಾದಿಸಿರುವರು ? ಯಾವ ಯುಕ್ತಿಯನ್ನು ಹೇಳಿರುವರು ? ದಯಮಾಡಿ ನಿರೂಪಿಸಬೇಕು.

**ಉತ್ತರ :— ಶ್ರೀ ಶ್ರೀಗಳವರು :—** ಶಂಕರಾಚಾರ್ಯರು ತಮ್ಮ ಗೀತಾಭಾಷ್ಯದಲ್ಲಿ ಸಂಶಯಕ್ಕೇ ಆಸ್ಪದವಾಗದಿರುವ ನಿರವಕಾಶವಾದ ಅನೇಕ ವಾಕ್ಯಗಳಿಂದ ಬಹು ಸ್ಥಳಗಳಲ್ಲಿ ಅತ್ಯಾಗ್ರಹಪೂರ್ವಕವಾಗಿ ಕರ್ಮಾಕರಣವೇ ಶ್ರುತ್ಯಾದಿ ಶಾಸ್ತ್ರ ಸಮ್ಮತವಾದ ಅನುಷ್ಠಾನವೆಂದು ನಿರೂಪಿಸಿರುತ್ತಾರೆ. ತೃತೀಯಾಧ್ಯಾಯದಲ್ಲಿ ಈ ವಿಷಯವನ್ನು ಹೆಚ್ಚು ಪ್ರಯತ್ನದಿಂದ ಯುಕ್ತ್ಯುಪನ್ಯಾಸದಿಂದ ಸಹಿತವಾಗಿ ಉಪಪಾದಿಸಿರುತ್ತಾರಾದುದರಿಂದ ಆ ವಾಕ್ಯಗಳನ್ನು ಉದಾಹರಿಸುತ್ತೇವೆ:—

(1) **ಅಥ ಗೃಹಸ್ಥಸ್ಯೈವ ಆಯಾಸಬಾಹುಳ್ಯಕರಣಾತ್ ಮೋಕ್ಷಃಸ್ಯಾತ್ ನಾಶ್ರಮಾಂತರಾಣಾಂ ಶ್ರೌತನಿತ್ಯಕರ್ಮರಹಿತತ್ವಾದಿತಿ ।**
**ತದಪಿ ಅಸತ್ । ಸರ್ವೋಪನಿಷತ್ಸು ಇತಿಹಾಸ ಪುರಾಣಯೋಗ ಶಾಸ್ತ್ರೇಷು ಚ ಜ್ಞಾನಾಂಗತ್ವೇನ ಮುಮುಕ್ಷೋಃ ಸರ್ವಕರ್ಮ ಸಂನ್ಯಾಸವಿಧಾನಾತ್ ॥**

—( ಶಾಂಕರಗೀತಾಭಾಷ್ಯಂ, ಅಧ್ಯಾಯ 3. )

**ಅರ್ಥವು :—** ಗೃಹಸ್ಥಾಶ್ರಮವನ್ನು ಹೊಂದಿದವನು ಕರ್ಮತತ್ಪರನಾಗಿ ಬಹಳ ಆಯಾಸವನ್ನು ಹೊಂದುವುದರಿಂದ ಆತನಿಗೇ ಮೋಕ್ಷವಾಗಬೇಕು, ವೇದೋಕ್ತನಿತ್ಯಕರ್ಮ ರಹಿತರಾದ ಇತರ ( ಯತ್ಯಾದಿ ) ಆಶ್ರಮಸ್ಥರಿಗೆ ಮೋಕ್ಷವಾಗಕೂಡದು ಎಂಬ ಪೂರ್ವ ಪಕ್ಷವು ದುಷ್ಟವಾದುದು. ಯಾತಕ್ಕೆಂದರೆ ಸರ್ವ ಉಪನಿಷತ್ತುಗಳಲ್ಲಿಯೂ ಇತಿಹಾಸ, ಪುರಾಣ, ಯೋಗಶಾಸ್ತ್ರಗಳಲ್ಲಿಯೂ ಕೂಡ ಮುಮುಕ್ಷುವಿಗೆ **ಜ್ಞಾನಾಂಗವಾಗಿ** ಸರ್ವ ಕರ್ಮ ಸಂನ್ಯಾಸವು ಎಂದರೆ ಸಕಲ ನಿತ್ಯ ಕರ್ಮಗಳನ್ನು ನಿಶ್ಶೇಷವಾಗಿ ಪರಿತ್ಯಾಗ ಮಾಡೋಣವೇ ವಿಹಿತವಾಗಿರುವುದು.

ಪುನಃ ಪ್ರಮಾಣೋದಾಹರಣಪೂರ್ವಕವಾಗಿ ಇದೇ ವಿಷಯವನ್ನು ನಿರೂಪಿಸಿರುತ್ತಾರೆ :—

(2) **ಮುಮುಕ್ಷೋಃ ಸರ್ವಕರ್ಮಸಂನ್ಯಾಸವಿಧಾನಾತ್ । " ಪುತ್ರೈಷಣಾಯಾ ವಿತ್ತೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರಂತಿ ", " ಬ್ರಹ್ಮಚರ್ಯಾದೇವ ಪ್ರವ್ರಜೇತ್ " ಇತ್ಯಾದ್ಯಾಃ ಶ್ರುತಯಃ ॥**

**" ತ್ಯಜ ಧರ್ಮಮಧರ್ಮಂ ಚ ಉಭೇ ಸತ್ಯಾನೃತೇ ತ್ಯಜ ।**
**ಉಭೇ ಸತ್ಯಾನೃತೇ ತ್ಯಕ್ತ್ವಾ ಯೇನ ತ್ಯಜಸಿ ತಂ ತ್ಯಜ ॥ "**
**" ಸಂಸಾರಮೇವ ನಿಸ್ಸಾರಂ ದೃಷ್ಟ್ವಾ ಸಾರದಿದೃಕ್ಷಯಾ ।**
**ಪ್ರವ್ರಜಂತ್ಯಕೃತೋದ್ವಾಹಾಃ ಪರಂ ವೈರಾಗ್ಯಮಾಶ್ರಿತಾಃ ॥ "**
**ಇತಿ ಬೃಹಸ್ಪತಿಃ ॥**

**" ಕರ್ಮಣಾ ಬಧ್ಯತೇ ಜಂತುಃ ವಿದ್ಯಯಾ ಚ ವಿಮುಚ್ಯತೇ ।**
**ತಸ್ಮಾತ್ಕರ್ಮ ನ ಕುರ್ವಂತಿ ಯತಯಃ ಪಾರದರ್ಶಿನಃ ॥ "**
**ಇತಿ ಶುಕಾನುಶಾಸನಂ ॥**

**ಇಹಾಪಿ ಚ ಸರ್ವಕರ್ಮಾಣಿ ಮನಸಾ ಸಂನ್ಯಸ್ಯೇತ್ಯಾದಿ ॥**

**ಅರ್ಥವು:—** (ಜ್ಞಾನ ಕರ್ಮಗಳಿಗೆ ಏಕತ್ರನಿವಾಸವು ಉಚಿತವಲ್ಲ. ಯಾತಕ್ಕೆಂದರೆ ) ಮೋಕ್ಷಾರ್ಥಿಯಾದವನಿಗೆ ಸರ್ವ ಕರ್ಮ ಪರಿತ್ಯಾಗವೇ ವಿಧ್ಯುಕ್ತವಾಗಿರುವುದು. **" ಪುತ್ರೈಷಣಾಯಾಃ " " ಬ್ರಹ್ಮಚರ್ಯಾದೇವ "** ಇತ್ಯಾದಿ ಶ್ರುತಿ

ಗಳು ಸರ್ವ ಕರ್ಮ ಸಂನ್ಯಾಸವನ್ನೇ ಹೇಳುತ್ತವೆ. ಮತ್ತು "ತ್ಯಜ ಧರ್ಮ ಮಧರ್ಮಂ ಚ" "ಸಂಸಾರಮೇವ...." "ಕರ್ಮಣಾ ಬಧ್ಯತೇ ಜಂತುಃ" ಇತ್ಯಾದಿ ಸ್ಮೃತಿಗಳೂ ಸರ್ವ ಕರ್ಮ ಸಂನ್ಯಾಸವನ್ನೇ ವಿಧಾನ ಮಾಡುತ್ತವೆ. ಇಲ್ಲಿಯೇ ಗೀತೆಯಲ್ಲಿಯೂ ಕೂಡ "ಸರ್ವಕರ್ಮಾಣಿ ಮನಸಾ ಸಂನ್ಯಸ್ಯ" ಇತ್ಯಾದಿ ಶ್ಲೋಕಗಳಲ್ಲಿ ಕರ್ಮ ಪರಿತ್ಯಾಗವೇ ವಿಹಿತವಾಗಿರುವುದು.

ಈ ಪ್ರಕಾರವಾಗಿ ಶಂಕರಾಚಾರ್ಯರು ಮುಮುಕ್ಷುವು ನಿತ್ಯನೈಮಿತ್ತಿಕಾದಿ ಸರ್ವ ಕರ್ಮ ಪರಿತ್ಯಾಗವನ್ನು ಮಾಡಬೇಕೆಂದು ಪ್ರತಿಪಾದಿಸಿ ತಮ್ಮ ತತ್ತ್ವಕ್ಕೆ ಆಧಾರವಾಗುವುವೆಂಬ ಮೋಹದಿಂದ ಶ್ರುತಿಗಳನ್ನೂ, ಸ್ಮೃತಿಗಳನ್ನೂ ಉದಾಹರಿಸಿರುವುದಲ್ಲದೆ ಯುಕ್ತಿಯನ್ನೂ ಹೇಳುತ್ತಾರೆ :—

(3) **ಮೋಕ್ಷಸ್ಯಚಾಕಾರ್ಯತ್ವಾತ್ ಮುಮುಕ್ಷೋಃ ಕರ್ಮಾನರ್ಥಕ್ಯಂ। ನಿತ್ಯಾನಿ ಪ್ರತ್ಯವಾಯಪರಿಹಾರಾರ್ಥಾನಿ ಇತಿ ಚೇನ್ನ। ಅಸಂನ್ಯಾಸಿವಿಷಯತ್ವಾತ್ಪ್ರತ್ಯವಾಯ ಪ್ರಾಪ್ತೇಃ। ನಹಿ ಅಗ್ನಿಕಾರ್ಯಾದ್ಯಕರಣಾತ್ಸಂನ್ಯಾಸಿನಃ ಪ್ರತ್ಯವಾಯಃ ಕಲ್ಪಯಿತುಂ ಶಕ್ಯಃ ಯಥಾ ಬ್ರಹ್ಮಚಾರಿಣಾಂ ಅಸಂನ್ಯಾಸಿನಾಮಪಿ। ನ ತಾವತ್ ನಿತ್ಯಾನಾಮಕರಣಾತ್ ಅಭಾವಾದೇವ ಭಾವರೂಪಸ್ಯ ಪ್ರತ್ಯವಾಯಸ್ಯ ಉತ್ಪತ್ತಿಃ ಕಲ್ಪಯಿತುಂ ಶಕ್ಯಾ। "ಕಥಮಸತಃ ಸಜ್ಜಾಯೇತ" ಇತಿ ಅಸತಃ ಸಜ್ಜನ್ಮಾಸಂಭವಶ್ರುತೇಃ। ಯದಿ ವಿಹಿತಾಕರಣಾದಸಂಭಾವ್ಯಮಪಿ ಪ್ರತ್ಯವಾಯಂ ಬ್ರೂಯಾದ್ವೇದಃ ತದಾ ಅನರ್ಥಕರಃ ವೇದಃ ಅಪ್ರಮಾಣಮಿತ್ಯುಕ್ತಂ ಸ್ಯಾತ್। ವಿಹಿತಸ್ಯ ಕರಣಾಕರಣಯೋಃ ದುಃಖಮಾತ್ರಫಲತ್ವಾತ್। ತಥಾ ಚ ಕಾರಕಂ ಶಾಸ್ತ್ರಂ ನ ಜ್ಞಾಪಕಮಿತಿ ಅನುಪಪನ್ನಾರ್ಥಂ ಕಲ್ಪಿತಂ ಸ್ಯಾತ್। ನ ಚೈತದಿಷ್ಟಂ। ತಸ್ಮಾನ್ನ ಸಂನ್ಯಾಸಿನಾಂ ಕರ್ಮಾಣಿ॥**

**ಅರ್ಥವು :—** (ಕರ್ಮ ಪರಿತ್ಯಾಗದಲ್ಲಿ ಯುಕ್ತಿಗಳೂ ಇರುವುವು) 1. ಮೋಕ್ಷವು ಸಾಧನಾನುಷ್ಠಾನದಿಂದ ಜನ್ಯವಾದ (ಪ್ರಾಪ್ಯವಾದ) ಪದಾರ್ಥವಲ್ಲವಾದುದರಿಂದ ಮುಮುಕ್ಷುವಿಗೆ ಕರ್ಮವು ನಿಷ್ಪ್ರಯೋಜನವಾದುದೇ ಸರಿ. ಆತನಿಗೆ ಹೊಸದಾಗಿ ಮೋಕ್ಷವು ಬರಬೇಕಾದುದಿಲ್ಲ. ಜೀವರುಗಳು ಇಲ್ಲವೇ ಇಲ್ಲ ಎಂದು ಭಾವವು ನರಕ ಪ್ರಾಪ್ತಿ ರೂಪವಾದ ಪ್ರತ್ಯವಾಯ ಪರಿಹಾರ ರೂಪವಾದ ಪ್ರಯೋಜನವು ನಿತ್ಯ ಕರ್ಮಗಳಿಗೆ ಇರುವುದಾದುದರಿಂದ ನಿತ್ಯ ಕರ್ಮಗಳನ್ನು ಮಾಡಬೇಕೆಂದು ಹೇಳಕೂಡದು 2 ಅಗ್ನಿಕಾರ್ಯಾದಿ ನಿತ್ಯ ಕರ್ಮ ಪರಿತ್ಯಾಗದಿಂದ ಬ್ರಹ್ಮಚಾರಿಗಳಿಗಿರುವಂತೆ ಸಂನ್ಯಾಸಿಗಳಿಗೂ ಪ್ರತ್ಯವಾಯವು ಇರುವುದೆಂದು ಕಲ್ಪಿಸುವುದು ಶಕ್ಯವಲ್ಲ 3. ಅಷ್ಟೇ ಅಲ್ಲ ಯಾವ ರೀತಿಯಿಂದಲೂ ನಿತ್ಯ ಕರ್ಮಾಕರಣ

ದಿಂದ ಪ್ರತ್ಯವಾಯುವು ಬರುವುದುಂಟೆಂದು ಕಲ್ಪಿಸುವುದಕ್ಕೆ ಶಕ್ಯವಲ್ಲ. ಯಾತಕ್ಕೆಂದರೆ ಕರ್ಮಾಕರಣವು ಅಭಾವ ರೂಪವಾದ ಪದಾರ್ಥವು; ಪ್ರತ್ಯವಾಯುವು ಭಾವರೂಪ ಪದಾರ್ಥವು. ಅಭಾವ ರೂಪವಾದ ಕರ್ಮಾಕರಣದಿಂದ ಭಾವ ರೂಪವಾದ ಪ್ರತ್ಯವಾಯೋತ್ಪತ್ತಿಯು ಉಂಟಾಗಲಾರದು. ಅಸತ್ತಿನಿಂದ ಭಾವ ಪದಾರ್ಥಗಳ ಉತ್ಪತ್ತಿಯು ಅಸಂಭಾವಿತವು ಎಂಬ ಅರ್ಥವುಳ್ಳ "ಕಥಮಸತಃ ಸಜ್ಜಾಯೇತ" ಎಂಬ ಶ್ರುತಿಯೂ ಈ ವಿಷಯದಲ್ಲಿ ಪ್ರಮಾಣವಾಗಿರುವುದು. 4. ಈ ಪ್ರಕಾರವಾಗಿ ವಿಹಿತ ಕರ್ಮಾಕರಣದಿಂದ ಪ್ರತ್ಯವಾಯ ಪ್ರಾಪ್ತಿಗೆ ಕಾರಣವೇ ಇಲ್ಲದಿರುವಾಗ ಪ್ರತ್ಯವಾಯುವು ಉಂಟು ಎಂದು ಹೇಳುವುದಾದರೆ ವೇದವೂ ಕೂಡ ಅನರ್ಥಕರವಾಗಿ ಅಪ್ರಮಾಣವೆಂದು ಪ್ರಾಪ್ತವಾಗುವುದು.

ಅಭಾವ ರೂಪವಾದ ಕರ್ಮಾಕರಣದಿಂದ ಪ್ರತ್ಯವಾಯೋತ್ಪತ್ತಿಯಾಗುವುದು. ಅಶಕ್ಯವಾದರೂ ವೇದವು ಅಂಥ ಕೆಲಸವನ್ನು ಕೂಡ ಮಾಡುವುದು ಎಂದು ಹೇಳುವುದಾದರೆ ವೇದವು ಜ್ಞಾಪಕವಾದ ಪ್ರಮಾಣವೆಂದು ಇದುವರೆವಿಗೂ ನಾವು ತಿಳಿದಿದ್ದುದನ್ನು ಬಿಟ್ಟು ಅದು ಕಾರಕವಾದ ಎಂದರೆ ಸ್ಥೂಲ ಕಾರ್ಯಕಾರಿಯಾದ ಒಂದು ವಸ್ತುವೆಂದು ಒಪ್ಪಬೇಕಾಗುವುದು. ಆದುದರಿಂದ ಸಂನ್ಯಾಸಿಗಳಿಗೆ (ಮುಮುಕ್ಷುಗಳಿಗೆ) ಕರ್ಮವು ಇಲ್ಲ. (ಕರ್ಮಾಕರಣದಿಂದ ಯಾವ ಹಾನಿಯೂ ಇಲ್ಲ.)

ಈ ವಾಕ್ಯಗಳ ಪರ್ಯಾಲೋಚನೆಯಿಂದ ಶಂಕರಾಚಾರ್ಯರ ನಿರ್ಗಳಿತವಾದ ಅಭಿಪ್ರಾಯವು ಈ ರೀತಿಯಾಗಿ ಕಂಡು ಬರುತ್ತದೆ.

1. ಶ್ರುತಿ, ಸ್ಮೃತಿಗಳಲ್ಲಿ ಕರ್ಮವನ್ನು ಪರಿತ್ಯಜಿಸಬೇಕೆಂದು ವಿಧಾನವಿರುವುದರಿಂದ ಮುಮುಕ್ಷುವು ಕರ್ಮವನ್ನು ಪರಿತ್ಯಜಿಸಬೇಕು.
2. ಮೋಕ್ಷವು ಕರ್ಮಾನುಷ್ಠಾನದಿಂದ ನೂತನವಾಗಿ ಪ್ರಾಪ್ಯವಾದ ವಸ್ತುವಲ್ಲವಾದುದರಿಂದ ಕರ್ಮಾಚರಣೆಯು ನಿರರ್ಥಕವು. ಆದುದರಿಂದ ಮುಮುಕ್ಷುವು ಕರ್ಮವನ್ನು ಪರಿತ್ಯಜಿಸಬೇಕು.
3. ಕರ್ಮಾಕರಣದಿಂದ ಪ್ರತ್ಯವಾಯುವು ಬರುವುದೆಂಬ ಭೀತಿಗೂ ಕಾರಣವಿಲ್ಲ ಕರ್ಮಾಕರಣವು ಅಭಾವ ರೂಪವಾಗಿರುವುದು. ಅಭಾವದಿಂದ ಭಾವ ರೂಪವಾದ ಪ್ರತ್ಯವಾಯೋತ್ಪತ್ತಿಯು ಅಸಂಭಾವಿತವು. ಹೀಗೆ ಕರ್ಮಾಕರಣದಿಂದ ಯಾವ ನರಕಾದಿ ಪ್ರತ್ಯವಾಯೋತ್ಪತ್ತಿಗೂ ಸಂಭವವಿಲ್ಲದಿರುವುದರಿಂದ ಮುಮುಕ್ಷುವು ಕರ್ಮಾಕರಣವನ್ನೇ ಅವಲಂಬಿಸಬೇಕು.
4. ವೇದವು, ಕರ್ಮಾನುಷ್ಠಾನ ಪರಿತ್ಯಾಗದಿಂದ ಪ್ರತ್ಯವಾಯುವು ಬರುವುದೆಂದು ಪ್ರತಿಪಾದನೆ ಮಾಡುವುದಾದರೆ, ಅದಕ್ಕೆ ಪ್ರಾಮಾಣ್ಯವೇ ದುರ್ಘಟವಾಗಿ ಅದು ಅನರ್ಥಕರವೆಂದು ಪ್ರಾಪ್ತವಾಗುವುದರಿಂದ ವೇದ ಪ್ರಾಮಾಣ್ಯವನ್ನು ಅಂಗೀಕರಿಸುವ ಮುಮುಕ್ಷುಗಳೆಲ್ಲರೂ ಸರ್ವ ಕರ್ಮ

ಪರಿತ್ಯಾಗವೇ ವೇದ ತಾತ್ಪರ್ಯ ವಿಷಯಭೂತವಾಗಿರುವುದೆಂದು ನಿಶ್ಚಯಿಸಿ ಸಕಲ ಕರ್ಮಾನುಷ್ಠಾನಗಳನ್ನೂ ಪರಿತ್ಯಾಗ ಮಾಡಬೇಕು.

ಶಂಕರಾಚಾರ್ಯರಿಂದ ಪ್ರತಿಪಾದಿಸಲ್ಪಟ್ಟಿರುವ ಈ ನಾಲ್ಕು ಯುಕ್ತಿಗಳೂ ಮೂಢ ಜನ ಮೋಹಕವಾದ ಹೇತ್ವಾಭಾಸಗಳು. ಹೇಗೆಂದರೆ, ಶ್ರುತಿ, ಸ್ಮೃತಿಗಳಲ್ಲಿ ಎಲ್ಲಿಯೂ ಕರ್ಮ ಪರಿತ್ಯಾಗವು ಮೋಕ್ಷ ಸಾಧಕವೆಂದು ಹೇಳಲ್ಪಟ್ಟಿರುವುದಿಲ್ಲ. ಪ್ರತ್ಯುತ "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ" ಇತ್ಯಾದಿ ಅನೇಕ ಶ್ರುತಿಗಳಲ್ಲಿ ನಿತ್ಯ ಕರ್ಮಗಳನ್ನು ಮಾಡುತ್ತಲೇ ಜ್ಞಾನ ಸಾಧನಾನುಷ್ಠಾನವನ್ನು ಅವಲಂಬಿಸಬೇಕೆಂದು ವಿಧಿಸಲ್ಪಟ್ಟಿರುವುದು. 2. "ಪುತ್ರೈಷಣಾಯಾಃ ವಿತ್ತೈಷಣಾಯಾಃ" ಇತ್ಯಾದಿ ಶ್ರುತಿಗಳೂ ಪುತ್ರಾದಿ ರೂಪವಾದ ಕರ್ಮ ಫಲಗಳಲ್ಲಿ ಇಚ್ಛೆಯನ್ನು ಪರಿತ್ಯಾಗ ಮಾಡಬೇಕೆಂದು ಹೇಳುತ್ತವೆ. ನಿಷ್ಕಾಮ ಕರ್ಮಗಳನ್ನು ಪರಿತ್ಯಾಗ ಮಾಡುವುದು ಮೋಕ್ಷಾಂಗವಾದ ಜ್ಞಾನ ಸಾಧನವೆಂದು ಹೇಳುವುದಿಲ್ಲ. "ಸರ್ವಧರ್ಮಾನ್ ಪರಿತ್ಯಜ್ಯ", "ತ್ಯಜ ಧರ್ಮಮಧರ್ಮಂ ಚ" ಇತ್ಯಾದಿ ಸ್ಮೃತಿಗಳೂ ಕೂಡ ಸ್ವರ್ಗ, ನರಕಗಳು ಬರುವುವೆಂಬ ದೃಷ್ಟಿಯಿಂದ ಕರ್ಮದಲ್ಲಿ ಪ್ರವೃತ್ತಿ ನಿವೃತ್ತಿಗಳನ್ನು ಹೊಂದಕೂಡದು. ಮತ್ತೇನೆಂದರೆ ನಿಷ್ಕಾಮನಾಗಿ ಭಗವತ್ಪ್ರಸಾದವನ್ನು ಅಪೇಕ್ಷಿಸಿ ಕರ್ಮ ಮಾರ್ಗದಲ್ಲಿ ಅವಶ್ಯವಾಗಿ ಪ್ರವರ್ತಿಸಬೇಕೆಂದೇ ಬೋಧಿಸುತ್ತವೆ. 3. ಹಾಗೆಯೇ ಸಂನ್ಯಾಸವೆಂದರೆ ಕರ್ಮ ಪರಿತ್ಯಾಗಪೂರ್ವಕವಾದ ಯತ್ಯಾಶ್ರಮ ಸ್ವೀಕಾರವೆಂಬ ಶಂಕರಾಚಾರ್ಯರ ಅರ್ಥವು ಅಜ್ಞಾನ ವಿಜೃಂಭಿತವಾದ ದುರರ್ಥವು. "**ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ । ಸ ಸಂನ್ಯಾಸೀ**" ಎಂದೂ, "**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ**" ಎಂದೂ ಕರ್ಮ ಫಲಾಪೇಕ್ಷಾರಾಹಿತ್ಯವೇ ಸಂನ್ಯಾಸ ಶಬ್ದಾರ್ಥವೆಂದು ಶ್ರೀ ಕೃಷ್ಣನು ಸ್ಪಷ್ಟವಾಗಿ ಹೇಳಿ, ಕರ್ಮ ಪರಿತ್ಯಾಗಕ್ಕೆ ಭಯಂಕರವಾದ ಅನರ್ಥಗಳನ್ನು ಸಹ ಹದಿನೆಂಟನೆಯ, ಹದಿನಾರನೆಯ ಮತ್ತು ಹದಿನೇಳನೆಯ ಅಧ್ಯಾಯಗಳಲ್ಲಿ ನಿರೂಪಿಸಿರುತ್ತಾನೆ. "**ಕರ್ಮಣಾ ಬಧ್ಯತೇ ಜಂತುಃ**" ಇತ್ಯಾದಿ ಪ್ರಮಾಣಗಳಿಗೆ ಗತಿಯನ್ನು "**ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ**" ಇತ್ಯಾದಿ ಬಹು ಸ್ಥಳಗಳಲ್ಲಿ ಶ್ರೀ ಕೃಷ್ಣನೇ ತೋರಿಸಿರುತ್ತಾನೆ. ಕಾಮ್ಯ ಕರ್ಮಗಳು ಪುನಃ ಪುನಃ ಸಾಂಸಾರಿಕ ಅನುಭವಗಳಿಗೆ ಕಾರಣವಾಗುವುದರಿಂದ ಬಂಧಕಗಳಾಗುತ್ತವೆ. ಎಂದರೆ ಮೋಕ್ಷ ಪ್ರಾಪ್ತಿಗೆ ಪ್ರತಿಬಂಧಕಗಳಾಗುತ್ತವೆ. ನಿಷ್ಕಾಮ ಕರ್ಮವು ಅಪರೋಕ್ಷ ಜ್ಞಾನಕ್ಕೆ ಪೂರ್ವದಲ್ಲಿ ಪ್ರದರ್ಶಿತವಾದ ಅನೇಕ ಪ್ರಕಾರಗಳಲ್ಲಿ ಕಾರಣವಾಗುವುದರಿಂದ ಮೋಕ್ಷ ಸಾಧನವಾಗುವುದೇ ಹೊರತು ಮುಮುಕ್ಷುವಿನಿಂದ ಪರಿತ್ಯಾಜ್ಯವಾದ ನಿರರ್ಥಕ ವ್ಯಾಪಾರವಲ್ಲ. 4. ಕರ್ಮಾನುಷ್ಠಾನವು ನಿರರ್ಥಕವೆಂದು ಬಲ್ಲ ಶಂಕರಾಚಾರ್ಯರಿಂದ ನಿರೂಪಿತವಾದ ಯುಕ್ತಿಗಳು ಮೌಢ್ಯಮೂಲಕವಾಗಿರುವುವು. ಮೋಕ್ಷವು "**ಅಕಾರ್ಯ**"ವಾಗಿರುವುದರಿಂದ ಎಂದರೆ ನಿತ್ಯಸಿದ್ಧವಾಗಿರುವುದರಿಂದ ಇದನ್ನು

ತಿಳಿದ ಮುಮುಕ್ಷುವು ಕರ್ಮವನ್ನು ಯಾತಕ್ಕೆ ಮಾಡಬೇಕು ? ಎಂದು ಅವರೇ ಕೇಳಿರುವರು. ಈ ನ್ಯಾಯವನ್ನು ಅವಲಂಬಿಸಿ ಕರ್ಮವನ್ನು ಬಿಡುವುದಾದರೆ ಸಕಲ ಜ್ಞಾನೋಪಾಯಗಳನ್ನೂ ಅದೇ ಕಾರಣದಿಂದ ಪರಿತ್ಯಾಗ ಮಾಡಿ ವೇದ ವೇದಾಂತ ಗಳನ್ನೆಲ್ಲ ಸುಟ್ಟು ಸ್ವಸ್ಥನಾಗಿರುವುದೇ ನ್ಯಾಯಪ್ರಾಪ್ತವಾದ ಆಚರಣೆಯಾಗುವುದು. ನಿತ್ಯಸಿದ್ಧವಾದ ಮೋಕ್ಷವು ಕರ್ಮಜನ್ಯವಲ್ಲ ಮತ್ತು ಜ್ಞಾನಜನ್ಯವೂ ಅಲ್ಲ. ಮೋಕ್ಷವು ನಿತ್ಯಸಿದ್ಧವಾದರೂ ಜ್ಞಾನದಿಂದ ಅವಿದ್ಯಾ ನಿವೃತ್ತಿ ರೂಪವಾದ ಫಲವು ಪ್ರಮಿತವಾಗಿರುವುದರಿಂದ ಜ್ಞಾನೋಪಾಯವು ಅವಶ್ಯವಾಗಿ ಅನುಷ್ಠೇಯವೆಂದು ಹೇಳುವುದಾದರೆ ಜ್ಞಾನೋತ್ಪತ್ತಿಗೆ ಸಾಧಕವಾದ ಕರ್ಮವೂ ಕೂಡ ಅವಶ್ಯವಾಗಿ ಅನುಷ್ಠೇಯವೆಂದೇ ಪ್ರಾಪ್ತವಾಗುವುದು. 5. ಕಿಂಚ ಮೋಕ್ಷವು ನಿತ್ಯಸಿದ್ಧವಾಗಿರುವು ದಾದರೆ ಸರ್ವರಿಗೂ ನಿತ್ಯಸಿದ್ಧವೇ. ಹೀಗಿರುವಲ್ಲಿ ಸಂನ್ಯಾಸಿಯು ಮಾತ್ರ ಕರ್ಮ ಪರಿತ್ಯಾಗವನ್ನು ಮಾಡಬೇಕು ಎಂದು ಅಜ್ಞರನ್ನು ವ್ಯಾವೃತ್ತಿ ಮಾಡಿ ವಿಶೇಷವಾಗಿ ನಿರೂಪಿಸುವುದಕ್ಕೆ ಕಾರಣವಿಲ್ಲ. ಸಕಲರೂ ಕರ್ಮವನ್ನು ಪರಿತ್ಯಾಗ ಮಾಡ ಬಹುದು; ಇದನ್ನು ತಿಳಿಯದ ಮಂದನು ನಿರರ್ಥಕ ಕರ್ಮಗಳನ್ನು ಮಾಡುವನು. ಅಷ್ಟೇ ವಿನಹ ಅಜ್ಞನು ಕರ್ಮವನ್ನು **ಮಾಡಬೇಕು** ಎಂಬ **ವಿಧಿಗೆ** ಅವಕಾಶ ವಿರುವುದಿಲ್ಲ. ಈ ನ್ಯಾಯವನ್ನು ಅವಲಂಬಿಸಿ ಸರ್ವರೂ ಕರ್ಮವನ್ನು ಪರಿತ್ಯಾಗ ಮಾಡಿದರೆ ಶ್ರೀ ಕೃಷ್ಣನು ತೃತೀಯಾಧ್ಯಾಯದಲ್ಲಿ ಹೇಳಿರುವಂತೆ ವರ್ಣಸಾಂಕರ್ಯವು ಪ್ರಾಪ್ತವಾಗಿ ಸರ್ವರೂ ನರಕದಲ್ಲಿ ಬೀಳುವರು. 6. ನರಕಾದಿ ರೂಪವಾದ ಪ್ರತ್ಯ ವಾಯಗಳೆಲ್ಲಾ ಸುಳ್ಳೇ ಎಂದು ಹೇಳುವವರೋಪಾದಿಯಲ್ಲಿ ಶಂಕರಾಚಾರ್ಯರು ಈ ಸ್ಥಳದಲ್ಲಿ ವಾದಿಸಿರುತ್ತಾರೆ. ಅದಕ್ಕೆ ಸರಿಯಾಗಿ ಅಭಾವ ರೂಪವಾದ ಕರ್ಮಾಕರಣ ದಿಂದ ಭಾವ ರೂಪವಾದ ನರಕಾದಿ ಪ್ರತ್ಯವಾಯಗಳು ಬರುವುದಕ್ಕೆ ಕಾರಣವೇ ಇಲ್ಲ ಎಂದು ಒಂದು ಅಬದ್ಧ ಯುಕ್ತಿಯನ್ನೂ ಸಹ ಹೇಳಿರುವರು. ಇದು ನಿಜವಾಗುವು ದಾದರೆ ನಿತ್ಯ ಕರ್ಮ ಪರಿತ್ಯಾಗದಿಂದ ನರಕ ಪ್ರಾಪ್ತಿಯಾಗುವುದು, ಸಂಧ್ಯಾ ಪರಿ ತ್ಯಾಗದಿಂದ ಸೂರ್ಯಹತ್ಯಾ ದೋಷವು ಬರುವುದು. ಭೂಲೋಕದಲ್ಲಿ ಗೂಬೆಯಾಗಿ ಹುಟ್ಟುವನು ಇತ್ಯಾದಿ ರೀತಿಯಾಗಿ ಬೋಧಿಸುವ ಶ್ರುತಿ ಸ್ಮೃತಿಗಳೆಲ್ಲವೂ ಅಪ್ರ ಮಾಣಗಳೆಂದೇ ಒಪ್ಪಿದಂತಾಯಿತು. 7. ಕಿಂಚ ಋತು ಕಾಲವು ಪ್ರಾಪ್ತವಾಗುವ ದಕ್ಕೆ ಮೊದಲೇ ಕನ್ಯೆಗೆ ವಿವಾಹವನ್ನು ಮಾಡದಿದ್ದರೆ ಸ್ಮೃತಿಗಳು ಭಯಂಕರವಾದ ಪ್ರತ್ಯವಾಯಗಳನ್ನು ಹೇಳುವವು. ತಥಾಹಿ :— **ಯಾಜ್ಞವಲ್ಕ್ಯಃ :—**

(1) **ಅಪ್ರಯಚ್ಛನ್ ಸಮಾಪ್ನೋತಿ ಭ್ರೂಣಹತ್ಯಾಂ ಋತೌ ಋತೌ ॥**

ಕನ್ಯೆಯನ್ನು ಋತು ಕಾಲಕ್ಕೆ ಮೊದಲೇ ವಿವಾಹ ಮಾಡಿ ಕೊಡದಿದ್ದ ಪಕ್ಷ ದಲ್ಲಿ ಭ್ರೂಣಹತ್ಯೆಯನ್ನು ಹೊಂದುತ್ತಾನೆ.

(2) **ವ್ಯಾಸಃ—**

**ಯದಿ ಸಾ ದಾತೃವೈಕಲ್ಯಾದ್ರಜಃ ಪಶ್ಯೇತ್ಕುಮಾರಿಕಾ ।**
**ಭ್ರೂಣಹತ್ಯಾಮವಾಪ್ನೋತಿ ಪತಿತಸ್ಸ್ಯಾತ್ತದಪ್ರದಃ ॥**

ಕನ್ಯೆಯು ಕನ್ಯಾದಾನ ಮಾಡಬೇಕಾದವರ ದೋಷದಿಂದ ವಿವಾಹಿತಳಾಗದೆ ಋತುಮತಿಯಾಗಿ ಬಿಟ್ಟರೆ ಅಂತಹ ಕನ್ಯೆಯನ್ನು ವಿವಾಹ ಮಾಡದವನು ಭ್ರೂಣ ಹತ್ಯಾ ದೋಷವನ್ನು ಹೊಂದುವನು ಮತ್ತು ಪತಿತನಾಗುವನು.

(3) **ಪರಾಶರಃ—**

**ಪ್ರಾಪ್ತೇ ತು ದ್ವಾದಶೇ ವರ್ಷೇ ಯಃ ಕನ್ಯಾಂ ನ ಪ್ರಯಚ್ಛತಿ ।**
**ಮಾಸಿ ಮಾಸಿ ರಜಸ್ತಸ್ಯಾಃ ಪಿಬಂತಿ ಪಿತರಃ ಸ್ವಯಂ ॥**

ಇತ್ಯಾದಿ ಅನೇಕ ಪ್ರಮಾಣಗಳಲ್ಲಿ ಕರ್ತವ್ಯ ಕಾಲದಲ್ಲಿ ವಿವಾಹಾಕರಣಕ್ಕೆ ಪ್ರಬಲವಾದ ಅನರ್ಥ ಪ್ರಾಪ್ತಿಯು ಹೇಳಲ್ಪಟ್ಟಿರುವದು. ವಿವಾಹಾಕರಣವು ಅಭಾವ ರೂಪವಾದುದು, ಭ್ರೂಣಹತ್ಯಾದಿ ದೋಷಗಳು ಭಾವರೂಪವಾಗಿರುವವು. ಆದರೂ ಕಾರ್ಯಕಾರಣ ಭಾವವು ಸಿದ್ಧವಾಗಿರುವದು. ಹೀಗಿರುವಲ್ಲಿ ಅಭಾವ ರೂಪವಾದ ನಿತ್ಯ ಕರ್ಮಾಕರಣದಿಂದ ಭಾವರೂಪವಾದ ಪ್ರತ್ಯವಾಯವು ಹೇಗೆ ಬರುವುದು ? ಎಂಬ ಶಂಕರಾಚಾರ್ಯರ ಉಪಪಾದನೆಯು ಪ್ರಜ್ಞಾರಾಹಿತ್ಯಕ್ಕೆ ಪ್ರಥಮ ನಿದರ್ಶನವೇ ಸರಿ. ಕರ್ತವ್ಯಾಕರಣದಿಂದ ಭಾವ ರೂಪವಾದ ಅನಂತ ಅನರ್ಥಗಳು ಪ್ರಾಪ್ತವಾಗುತ್ತಿರುವುದು ಲೋಕಸಿದ್ಧವಾಗಿರುವುದು. ನಿರ್ದಿಷ್ಟ ಕಾಲದಲ್ಲಿ ಶಾಲೆಗೆ ಹೋಗದಿದ್ದರೆ ಭಾವ ರೂಪವಾದ ದಂಡವು ಪ್ರಾಪ್ತವಾಗುವುದು. ನಿರ್ದಿಷ್ಟ ಕಾಲದಲ್ಲಿ ಲಾಯರುಗಳು ಕೋರ್ಟಿಗೆ ಹೋಗದಿದ್ದರೆ ಕೇಸು ಕೆಟ್ಟು ಹೋಗಿ ಪ್ರಾಪ್ತವಾಗುವ ವರಮಾನಕ್ಕೆ ಕಲ್ಲು ಬೀಳುವದು ಮತ್ತು ಕೀರ್ತಿನಾಶಾದಿ ನಿಮಿತ್ತಕವಾದ ದುಃಖಗಳು ಬಂದೊದಗುವವು. ಆದುದರಿಂದ ಕರ್ಮಾಕರಣವು ಪ್ರತ್ಯವಾಯಜನಕವಲ್ಲವೆಂದು ಹೇಳಿದುದು ವಿಪರೀತ ಜ್ಞಾನ ಮೂಲಕವೇ ಆಗಿರುವದು. 8. ಶಂಕರಾಚಾರ್ಯರು ನಿರೂಪಿಸಿರುವ ದೃಷ್ಟಾಂತ ಪರಾಮರ್ಶೆಯಿಂದ ಈ ಅಭಿಪ್ರಾಯವು ನಿಶ್ಚಿತವಾಗುವದು. ಕರ್ಮಾಕರಣವು ಅಭಾವ ರೂಪವಾದುದರಿಂದ ಭಾವ ರೂಪವಾದ ಪ್ರತ್ಯವಾಯವನ್ನು ಹುಟ್ಟಿಸಲಾರದೆಂದು ಹೇಳಿ ಈ ವಿಷಯದಲ್ಲಿ "ಕಥಮಸತಃ ಸಜ್ಜಾಯೇತ" ಎಂದು ಶ್ರುತಿಯನ್ನು ಆಧಾರವಾಗಿ ಕೊಟ್ಟಿರುವರು. ಈ ಶ್ರುತಿಯಲ್ಲಿ ಅಭಾವಕ್ಕೆ ಭಾವ ರೂಪವಾದ ಪ್ರತ್ಯವಾಯಜನಕತ್ವವು ಸಂಭವಿಸುವದಿಲ್ಲವೆಂದು ಹೇಳಿರುವದಿಲ್ಲ. ಮತ್ತೇನೆಂದರೆ ಅಸತ್ತಿನಿಂದ ಸತ್ಪದಾರ್ಥಗಳು ಹುಟ್ಟಲಾರವು ಎಂದು ಹೇಳಿರುವದು. ಶಶವಿಷಾಣವು, ಗಗನಾರವಿಂದವು, ಶುಕ್ತಿರಜತವು, ರಜ್ಜು ಸರ್ಪವು ಇವುಗಳೆಲ್ಲವೂ ಮೂರು ಕಾಲದಲ್ಲಿಯೂ ಇಲ್ಲದ ಅಸತ್ ಎಂಬ ಹೆಸರುಳ್ಳ ಪದಾರ್ಥಗಳು. ಇವುಗಳಿಗೆ ಅರ್ಥ ಕ್ರಿಯಾಕಾರಿತ್ವವು ಇಲ್ಲ. ಎಂದರೆ ಇವುಗಳಿಂದ ಯಾವ ವಿಧವಾದ ಕಾರ್ಯೋತ್ಪತ್ತಿಯೂ ಕಂಡು ಬಂದಿಲ್ಲ. ಆದರೆ ಕ್ಷಾಮ ಕಾಲದಲ್ಲಿ ಜಲಾಭಾವ, ರಾಜ್ಯದಲ್ಲಿ ರಾಜಾಭಾವ ಇತ್ಯಾದಿ ಅಭಾವ ಪದಾರ್ಥಗಳು ಅರ್ಥಕ್ರಿಯಾಕಾರಿಗಳು. ಇವುಗಳಿಂದ ಬಹು ಕಾರ್ಯೋತ್ಪತ್ತಿಯು ಲೋಕದಲ್ಲಿ ಕಂಡು ಬಂದಿರುವದು. ಜಲಾಭಾವದಿಂದ ಅನೇಕರು ಮರಣವನ್ನು ಹೊಂದುವರು ರಾಜಾಭಾವದಿಂದ ರಾಜ್ಯವು ಅನಾಯಕವಾಗಿ ಪ್ರಜೆಗಳು ಸಂಕಟಕ್ಕೆ

ವಶರಾಗುವರು. ಶ್ರುತಿಯಲ್ಲಿ ಶಶವಿಷಾಣಾದಿ ಅಸತ್ಪದಾರ್ಥಗಳಿಂದ ಯಾವ ಪದಾರ್ಥವೂ ಹುಟ್ಟಲಾರದೆಂದು ಹೇಳಿರುವುದು. ಇದು ಅಭಾವ ರೂಪವಾದ ಕರ್ಮಾಕರಣದಿಂದ ಪ್ರತ್ಯವಾಯವು ಸಂಭವಿಸುವುದಿಲ್ಲವೆಂದು ಹೇಳುವುದಕ್ಕೆ ಹೇಗೆ ತಾನೇ ಸಾಧಕವಾಗುವುದು ? ಶಂಕರಾಚಾರ್ಯರಿಗೆ "ಅಭಾವ" ಮತ್ತು "ಅಸತ್" ಎಂಬ ಎರಡು ಪದಾರ್ಥಗಳಿಗೂ ಭೇದವು ತಿಳಿಯದೇ ಹೋದುದು ಈ ರೀತಿಯಾದ ದುಸ್ತತ್ವ ನಿರೂಪಣೆಗೆ ಕಾರಣವಾಯಿತು. ತತ್ತ್ವೋಪದೇಶ ಸಮಯದಲ್ಲಿ ಬುದ್ಧಿ ಮಾಂದ್ಯವು ಅಥವಾ ವಿಪರೀತ ಬುದ್ಧಿಯು ಎಷ್ಟು ಅನರ್ಥಗಳಿಗೆ ಕಾರಣವಾಗುವುದೆಂಬುದು ಈ ವಾಕ್ಯಾರ್ಥ ಪರ್ಯಾಲೋಚನೆಯಿಂದ ಸ್ಪಷ್ಟವಾಗುವುದು. 9. ಮತ್ತು ಅಭಾವ ರೂಪವಾದ ಪದಾರ್ಥವು ಎಲ್ಲರಿಗೂ ಅಭಾವ ರೂಪವೇ. ಶಶ ವಿಷಾಣದಂಥ ಪದಾರ್ಥವು ಎಲ್ಲರ ವಿಷಯದಲ್ಲೂ ಶಶವಿಷಾಣದಂಥ ಪದಾರ್ಥವೇ. 4 + 3 = 7 ಎಂಬುದು ಎಲ್ಲರಿಗೂ ಏಳೇ. ಹೀಗೆಯೇ ಕರ್ಮಾಕರಣವು ಅಭಾವ ರೂಪವೋ ಅಥವಾ ಶಶವಿಷಾಣದಂತೆ ಅಸತ್ಪದಾರ್ಥವೋ ಆಗಿ ಪ್ರತ್ಯವಾಯವನ್ನು ಹುಟ್ಟಿಸಲಾರದೆಂದು ಒಪ್ಪುವುದಾದರೆ, ಅದು ಲೋಕದಲ್ಲಿ ಯಾರಿಗೂ ಯಾವ ಕರ್ಮಾಕರಣದಿಂದಲೂ ಪ್ರತ್ಯವಾಯವಿರುವುದಿಲ್ಲವೆಂದು ಸಿದ್ಧವಾಗುವುದು. ಎಂದರೆ ಮುಮುಕ್ಷುವೂ, ಅಮುಮುಕ್ಷುವೂ, ಸಂನ್ಯಾಸಿಯೂ, ಗೃಹಸ್ಥನೂ, ಬ್ರಹ್ಮಚಾರಿಯೂ ಇತ್ಯಾದಿ ಸರ್ವ ವರ್ಣಾಶ್ರಮೋಪೇತರಾದವರೂ ಪ್ರತ್ಯವಾಯವಿಲ್ಲದಿರುವುದರಿಂದ ಅವರವರ ನಿತ್ಯ ಕರ್ಮಗಳನ್ನು ಪರಿತ್ಯಾಗ ಮಾಡಬಹುದೆಂದು ಸಿದ್ಧವಾಗುವುದು. **10.** ವೇದವು ಕರ್ಮಾಕರಣದಿಂದ ಪ್ರತ್ಯವಾಯವನ್ನು ಪ್ರತಿಪಾದನೆ ಮಾಡುವುದಾದರೆ ಅದಕ್ಕೆ ಪ್ರಾಮಾಣ್ಯವೇ ಸಂಭವಿಸುವುದಿಲ್ಲವೆಂಬ ಶಂಕರಾಚಾರ್ಯರ ನಿರೂಪಣೆಯು ಭ್ರಾಂತಿಮೂಲಕವೆಂದು ಉಪಪಾದಿಸಬೇಕಾದುದೇ ಇಲ್ಲ. **11.** ಇದೂ ಅಲ್ಲದೆ ಅದ್ವೈತ ಭಾಷ್ಯಕಾರರ ಮಾತುಗಳೆಲ್ಲಾ ನಿತ್ಯ ಕರ್ಮ ಪರಿತ್ಯಾಗವು ಉಚಿತವು ಎಂಬ ವಿಷಯದಲ್ಲಿ ಪ್ರವೃತ್ತವಾದ ಹಾಗಾಯಿತೇ ಹೊರತು ನಿಷ್ಕಾಮ ಕರ್ಮವನ್ನು ಮಾಡಿದರೆ ಜ್ಞಾನಾದಿ ಪುರುಷಾರ್ಥಗಳು ಪರಂಪರಯಾ ಒರುವುವೆಂದು ಹೇಳುವ ದ್ವೈತಿಗಳ ವಾದಕ್ಕೆ ವಿರೋಧಿಯಾಗಲಾರವು. ಶ್ರೀ ಕೃಷ್ಣನು ಚತುರ್ಥಾಧ್ಯಾಯದಲ್ಲಿ ಧ್ಯಾನ, ಅಗ್ನಿಹೋತ್ರ ಪ್ರಾಣಾಯಾಮಾದಿ ಅನೇಕ ಕರ್ಮಾನುಷ್ಠಾನಗಳನ್ನು ವಿವರಿಸಿ ಇವುಗಳನ್ನೆಲ್ಲಾ ನಿಷ್ಕಾಮವಾಗಿ ಆಚರಿಸಿದರೆ ಇಂದ್ರಿಯಜಯ. ಮನೋಜಯದ್ವಾರಾ **"ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ"** ಎಂದರೆ ಸಕಲ ಕರ್ಮಗಳೂ ಜ್ಞಾನಕ್ಕೆ ಕಾರಣವಾಗುತ್ತವೆ ಎಂದು ನಿರೂಪಿಸಿರುತ್ತಾನೆ. ಮೋಕ್ಷವು ಅಕಾರ್ಯವಾದುದರಿಂದ ವ್ಯರ್ಥವಾದ ಕರ್ಮವನ್ನು ಮಾಡಬಾರದೆಂದು ಶಂಕರಾಚಾರ್ಯರು ಹೇಳಿರುವರು. ಇದು ಸುಳ್ಳು. ಜಗದ್ಬಂಧವು ಸತ್ಯಭೂತವಾದುದು. ಬ್ರಹ್ಮನಿಂದ ಭಿನ್ನವಾದ ಜೀವನು ಅನಾದಿಯಾದ ಪ್ರಕೃತಿಯಿಂದ ಬದ್ಧನಾಗಿ ತನ್ನ ಸ್ವರೂಪಾನಂದವನ್ನು ಅನುಭವಿಸಲಾರದೇ ನಾನಾ ವಿಧವಾದ ಸಾಂಸಾರಿಕ ದುಃಖಗಳನ್ನು ಈಗ ಅನುಭವಿಸುತ್ತಿರುವನು. ನಿಷ್ಕಾಮ ಕರ್ಮ

ಯೋಗದಿಂದ ಜ್ಞಾನವೂ, ಜ್ಞಾನದಿಂದ ಪರಮಾತ್ಮನ ಪ್ರಸಾದವೂ, ಅದರಿಂದ ಪ್ರಕೃತಿಬಂಧದ ನಾಶವೂ ಪ್ರಾಪ್ತವಾಗಿ ಮೋಕ್ಷವು ಪ್ರಾಪ್ತವಾಗುವದು. ಆದುದ ರಿಂದ ಕರ್ಮವು ಅನರ್ಥಕರವೆಂಬ ವಾದವು ವೇದಾದಿ ಶಾಸ್ತ್ರವಿರುದ್ಧವಾದುದು.
12. ಕಿಂಚ ಕರ್ಮವು ಅನರ್ಥಕರವೆಂಬುದು ಲೋಕವಿರುದ್ಧವೂ ಆಗಿರುವುದು. ಭಕ್ತಿಪೂರ್ವಕವಾದ ರಾಜಸೇವೆಯೇ ವ್ಯರ್ಥವಾಗುವದಿಲ್ಲ. ಹೀಗಿರುವಲ್ಲಿ ಸರ್ವ ಸಾಕ್ಷಿಯಾದ ನಿಖಿಲಾಪೇಕ್ಷಿತದಾತನೆಂದು ಪ್ರಸಿದ್ಧನಾದ ಪರಬ್ರಹ್ಮನ ಸೇವಾ ರೂಪ ವಾದ ಕರ್ಮವು ಹೇಗೆ ತಾನೆ ವ್ಯರ್ಥವಾಗುವುದು ? ಈ ಪ್ರಕಾರವಾಗಿ ಶಂಕರಾ ಚಾರ್ಯರ ಕರ್ಮ ಸಂನ್ಯಾಸ ವಾದವು ಮಹಾತಮಸ್ಸವಾದ ಪಾಪಮೂಲವಾದ ದುಷ್ಟವಾದವು. ಜಗನ್ನಾಶಕರವಾದ ಈ ಭಯಂಕರ ಪ್ರಕ್ರಿಯೆಯನ್ನು ಅನೇಕರು ಅಂಗೀಕರಿಸಿ ವರ್ಣಾಶ್ರಮ ಧರ್ಮಗಳನ್ನು ಹಾಳು ಮಾಡುತ್ತಿರುವದು ಅನ್ಯಾಯ ವಾದ ವ್ಯಾಪಾರವು. ಶ್ರೀ ಕೃಷ್ಣನ ಅಭಿಪ್ರಾಯವನ್ನು ನಾವು ಮೊದಲೇ ಹೇಳಿರು ತ್ತೇವೆ :—

(1) **ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ॥**
—(16. 23.)

ಈ ಶ್ಲೋಕವು ಪೂರ್ವದಲ್ಲಿಯೇ ವ್ಯಾಖ್ಯಾತವಾಗಿರುವದು.

(2) **ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ॥**
—(18. 45.)

ಆದುದರಿಂದ ನೀವುಗಳೆಲ್ಲರೂ ಪರಬ್ರಹ್ಮನ ಆಜ್ಞಾರೂಪವಾದ ವಿಧಿಗಳನ್ನು ಪರಿಪಾಲಿಸುತ್ತಾ ಆತನಿಂದ ನಿಷಿದ್ಧವಾದ ಕ್ರಿಯೆಗಳನ್ನು ಪರಿತ್ಯಜಿಸಿ, ಭಗವದಾರಾ ಧನ ರೂಪವಾದ ಸ್ವಸ್ವವರ್ಣಾಶ್ರಮೋಚಿತವಾದ ನಾನಾ ಪ್ರಕಾರವಾದ ಕರ್ಮ ಗಳನ್ನು ಭಕ್ತ್ಯಾದಿಗಳಿಂದ ಸಹಿತವಾಗಿ ಅನುಷ್ಠಾನ ಮಾಡಿ ಪರಮಾತ್ಮನಿಗೆ ಸಮ ರ್ಪಿಸಿ ಆತನ ಪ್ರಸಾದಕ್ಕೆ ಪಾತ್ರರಾಗಿ ಜ್ಞಾನಾದಿ ಪುರುಷಾರ್ಥಗಳನ್ನು ಹೊಂದಲು ಉತ್ಸಾಹ ಸಮೃದ್ಧಿಯಿಂದ ಪುನಃ ಪುನಃ ಯತ್ನ ಮಾಡುತ್ತಿರಬೇಕೆಂದು ನಿರೂಪಿ ಸಿರುತ್ತೇವೆ.

---

# 22. ಇಪ್ಪತ್ತೆರಡನೆಯ ಅಂಶವು.

## ಕರ್ಮಾನುಷ್ಠಾನವು ( ಮುಂದುವರಿಸಿದ್ದು. )

## ವರ್ಣಾಶ್ರಮಾಚಾರ ವಿಭಾಗ ನಿರೂಪಣೆಯು.

1. **ಪ್ರಶ್ನೆ :—** ಸ್ವಾಮೀ ! ವಿಧ್ಯುಕ್ತ ಧರ್ಮಗಳನ್ನು ಅನುಷ್ಠಾನ ಮಾಡಬೇಕಾಗುವುದು ಆವಶ್ಯಕವು. ಆದರೆ ಸ್ವಸ್ವವರ್ಣಾಶ್ರಮೋಚಿತವಾದ ಕರ್ಮಗಳನ್ನು ಆಚರಿಸಬೇಕೆಂದು ತಮ್ಮ ಮಾತಿಗೆ ಅರ್ಥವಾಗಲಿಲ್ಲ. ಶಾಸ್ತ್ರದಲ್ಲಿ ನಾರಣಪ್ಪನಿಗೆ ಒಂದು ಧರ್ಮವು, ರಾಮಣ್ಣನಿಗೆ ಒಂದು ಧರ್ಮವು, ದೇವದತ್ತನಿಗೆ ಒಂದು ಧರ್ಮವು ಹೀಗೆ ಒಬ್ಬೊಬ್ಬನಿಗೆ ಒಂದೊಂದು ಧರ್ಮವೆಂದು ವಿಧಿಸಲ್ಪಟ್ಟಿರುವುದೆಂದು ಹೇಳಿದರೆ ಈ ಕಾಲದಲ್ಲಿ ಹಾಸ್ಯಾಸ್ಪದವಾಗದೇ ಇರಲಾರದು.

**ಉತ್ತರ :— ಶ್ರೀ ಶ್ರೀಗಳವರು :—** ಯದ್ಯಪಿ ಶಾಸ್ತ್ರದಲ್ಲಿ ಒಬ್ಬೊಬ್ಬ ವ್ಯಕ್ತಿಯ ಹೆಸರನ್ನು ಹಿಡಿದು ಈ ನಾಮಧೇಯವುಳ್ಳವನು ಈ ಪ್ರಕಾರವಾಗಿ ಆಚರಿಸಬೇಕೆಂದು ವಿಧಿಯು ಇರುವುದಿಲ್ಲ. ಆದರೆ ನಾವು ಒಂದು ನಿರ್ಣಯವನ್ನು ತಿಳಿಸುವೆವು. ಶಾಸ್ತ್ರದಲ್ಲಿ ಅಂಥ ವಿಧಿಯು ಇದ್ದರೂ ಸಹ ನಾವು ಗೌರವಿಸಬೇಕೇ ಹೊರತು ಅಜ್ಞರು ಹಾಸ್ಯ ಮಾಡುವರೆಂದು ಅಂಜಿಕೊಂಡು ಪುರುಷಾರ್ಥ ಸಾಧನವಾದ ಧರ್ಮಗಳನ್ನು ಪರಿತ್ಯಾಗ ಮಾಡಿ ನರಕಕ್ಕೆ ಬೀಳಲಾಗುವದಿಲ್ಲ. ಶ್ರೀ ಕೃಷ್ಣನ ಮಾತುಗಳಲ್ಲಿ ವಿಶ್ವಾಸವನ್ನಿಟ್ಟು ಅವನ ಪಕ್ಷವನ್ನು ವಹಿಸಿ ಧರ್ಮಾನುಷ್ಠಾನ ತತ್ಪರರಾಗಿ ಶಾಸ್ತ್ರವಿಚಾರರಹಿತರಾದ ಪಶುಗಳಂಥ ಮೂಢರ ಹಾಸ್ಯಕ್ಕೆ ವಿಷಯವಾದರೆ ತಾನೇ ಏನು ? ಅಜ್ಞ ಸಂಘದ ಪ್ರಶಂಸೆಗೆ ವಶರಾಗಿ ಜಾತಿಗೆಟ್ಟು ಹೋದರೆ ನರಕವು ತಪ್ಪಲಾರದು. ಪುರಂದರನಾಮಕ ಇಂದ್ರನು ನೂರು ಅಶ್ವಮೇಧಗಳನ್ನು ಮಾಡಬೇಕೆಂದು ಶಾಸ್ತ್ರವಿಧಿಯು ಇರುವುದು. ಹಾಗೆ ಮಾಡಿದರೆ ಆತನಿಗೆ ಸ್ವಯೋಗ್ಯತಾನುಗುಣವಾದ ಇಂದ್ರ ಪದವಿಯು ದೊರಕುವುದು. ಹೀಗೆಯೇ ಶಾಸ್ತ್ರದಲ್ಲಿ ಅನೇಕ ಆಧಿಕಾರಿಕ ಚೇತನರ ಹೆಸರನ್ನು ಹಿಡಿದು ಶಾಸ್ತ್ರದಲ್ಲಿ ಸಾಧನೆಗಳು ಕೆಲವು ಸ್ಥಳಗಳಲ್ಲಿ ಉಪದಿಷ್ಟವಾಗಿರುವುವು. ಆದರೆ ವರ್ಣಾಶ್ರಮ ಧರ್ಮಗಳು ನಾಮಗ್ರಹಣಪೂರ್ವಕವಾಗಿ ಪ್ರತಿ ಪ್ರತಿ ಪುರುಷನಿಗೂ ಉಪದಿಷ್ಟವಾಗಿರುವುದಿಲ್ಲ. ಅವುಗಳು ಬ್ರಾಹ್ಮಣಾದಿ ಜಾತಿಗಳನ್ನು ನಿಮಿತ್ತ ಮಾಡಿಕೊಂಡು ಪ್ರವೃತ್ತವಾಗಿರುವುವು.

2. **ಪ್ರಶ್ನೆ :—** ಸ್ವಾಮೀ ! ಶಾಸ್ತ್ರಕಾರರು ಇಂಥವರು ಬ್ರಾಹ್ಮಣರು, ಇಂಥವರು ಕ್ಷತ್ರಿಯರು, ಇಂಥವರು ವೈಶ್ಯರು, ಇಂಥವರು ಶೂದ್ರರು ಇತ್ಯಾದಿ ರೀತಿಯಾಗಿ ಪಟ್ಟಿಯನ್ನು ಬರೆದು ತಲೆಯ ಮೇಲೆ ಅಂಟಿಸಿರುತ್ತಾರೆಯೋ ?

**ಶ್ರೀ ಶ್ರೀಗಳವರು :—** ಹಾಗಾದರೆ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಎಂಬ ವಿವೇಕವು ಹೇಗೆ ಉಂಟಾಯಿತೆಂದು ತಿಳಿದಿರುತ್ತೀರಿ ?

**ವಿದ್ಯಾರ್ಥಿಗಳು :—** " by Division of Labour ", ಎಂದರೆ

ಕರ್ಮಭೇದದಿಂದ ವರ್ಣ ವಿಭಾಗಗಳು ಉಂಟಾಗಿರುವವೆಂದು ಆಂಗ್ಲೇಯರೂ, ನವೀನ ಹಿಂದೂ ವಿದ್ವಾಂಸರೂ ತೀರ್ಮಾನ ಮಾಡಿರುವರು.

**ಶ್ರೀ ಶ್ರೀಗಳವರು :—** ಅದು ಹೇಗೆ ?

**ವಿದ್ಯಾರ್ಥಿಗಳು :—** ಸ್ವಾಮೀ ! ಇದು ನಮ್ಮ ಅಭಿಪ್ರಾಯವು. ಅನಾದಿ ಕಾಲದಿಂದಲೂ ಸರ್ವ ಆರ್ಯರೂ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ವರ್ಣವಿಭಾಗರಹಿತರಾಗಿ ಸ್ತ್ರೀ ಪುರುಷರೆಂಬ ದೈವ ನಿರ್ಮಿತ ಭೇದಕ ಧರ್ಮದಿಂದ ಮಾತ್ರ ಸಹಿತರಾಗಿ ಅನ್ಯೋನ್ಯವಾಗಿ ಭರತಖಂಡದಲ್ಲಿ ವಾಸ ಮಾಡುತ್ತಿದ್ದರು. ಕಾಲ ಕರ್ಮವಶದಿಂದ ಕೆಲವರು ಧ್ಯಾನ ಪ್ರವಚನಾದಿ ರೂಪವಾದ ಉತ್ತಮ ಕರ್ಮಗಳಲ್ಲಿ ತತ್ಪರರಾದರು. ಕೆಲವರು ಪ್ರಜಾರಕ್ಷಣ ಕಾರ್ಯದಲ್ಲಿ ನಿಯುಕ್ತರಾಗಿ ಯುದ್ಧಾದಿ ಕರ್ಮಗಳಲ್ಲಿ ಉದ್ಯುಕ್ತರಾದರು. ಮತ್ತು ಕೆಲವರು ವ್ಯಾಪಾರ, ವ್ಯವಸಾಯಗಳಿಂದ ಜೀವನವನ್ನು ಕಳೆಯುವುದಕ್ಕಾರಂಭಿಸಿದರು. ಇನ್ನೂ ದರಿದ್ರರು ಸೇವಾವೃತ್ತಿಯನ್ನು ಅವಲಂಬಿಸಿ ಶೂದ್ರರೆಂದೆನಿಸಿಕೊಂಡರು. ಹೀಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳೂ ಮನುಷ್ಯನಿಂದ ನಿರ್ಮಿತವಾದ ವ್ಯವಸ್ಥಾ ವಿಶೇಷವೇ ಹೊರತು ಅನಾದಿಸಿದ್ಧವಾದ ಜಾತಿಗಳಲ್ಲ. ಸ್ತ್ರೀಯರು ಸ್ತ್ರೀಯರೇ. ಪುರುಷರು ಪುರುಷರೇ. ಈ ವಿವೇಕವು ಭಗವಂತನಿಂದ ನಿರ್ಮಿತವಾದುದು. ಆದುದರಿಂದ ಸ್ತ್ರೀ ಧರ್ಮಗಳನ್ನೂ, ಪುರುಷ ಧರ್ಮಗಳನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ನಿರೂಪಿಸಿರುವದು ಯುಕ್ತವೇ. ಬ್ರಾಹ್ಮಣಾದಿ ಜಾತಿಗಳು ಸ್ವಯಂ ಮನುಷ್ಯಕಲ್ಪಿತವಾಗಿರುವದರಿಂದ ಅವರುಗಳನ್ನು ಉದ್ದೇಶ ಮಾಡಿ ಪ್ರತ್ಯೇಕ ಪ್ರತ್ಯೇಕವಾಗಿ ಧರ್ಮಗಳನ್ನು ಶಾಸ್ತ್ರಕಾರರು ಹೇಳಿರುವದೂ ಇಲ್ಲ. ಕಥಂಚಿತ್ ಹೇಳಿದ್ದರೂ ಸಹ ಪೂರ್ವ ಕಾಲದ ಕಾಯಿದೆಗಳನ್ನು ಸರಕಾರದವರು ಬದಲಾಯಿಸಿ ಕಾಲಾನುಗುಣವಾಗಿ ಬೇರೆ ನಿಬಂಧನೆಗಳನ್ನು ನಿರ್ಮಿಸುವಂತೆ ಈಗ ನಾವೂ ಕೂಡ ಸ್ವಲ್ಪ ಧರ್ಮ ಪರಿವರ್ತನೆಯನ್ನೂ ಸಹ ಅವಶ್ಯವಾಗಿ ಮಾಡಬೇಕಾಗಿರುವದು. ಆದುದರಿಂದ ಈ ವಿಷಯದಲ್ಲಿ ತಾವು ಕೇವಲ ಶ್ರೀ ಕೃಷ್ಣನ ವಾಕ್ಯಗಳ ಆಧಾರದಿಂದ ಚರ್ಚೆಯನ್ನು ನಡೆಸಿ ನಿರ್ಣಯವನ್ನು ಹೇಳಬೇಕೆಂದು ಪ್ರಾರ್ಥಿಸುತ್ತೇವೆ.

**ಶ್ರೀ ಶ್ರೀಗಳವರು :—** ಧರ್ಮರಕ್ಷಕನಾದ ಶ್ರೀ ಕೃಷ್ಣನ ಮಾತುಗಳನ್ನು ನೀವು ಒಪ್ಪಿದರೆ ಸಾಕು. ಈಗ ನೀವು ಉಪನ್ಯಾಸ ಮಾಡಿರುವ ವಿಷಯವು ಶಾಸ್ತ್ರಜ್ಞಾನಶೂನ್ಯರಾದ ಭ್ರಾಂತರಿಂದ ನಿರ್ಮಿತವಾದ ಕುಕಲ್ಪನೆಯು. ಏಕೆಂದರೆ ಲೋಕನಾಶಕವಾದ ಮತ್ತು ಅಜ್ಞ ಜನ ವ್ಯಾಮೋಹಕವಾದ ಈ ಪ್ರಕ್ರಿಯೆಯು ಪುಂಖಾನುಪುಂಖವಾಗಿ ಶ್ರೀ ಕೃಷ್ಣನ ವಾಗ್ಬಾಣಗಳಿಂದ ಖಂಡಿಸಲ್ಪಟ್ಟು ಶಾಸ್ತ್ರ ಸಾಮ್ರಾಜ್ಯದಿಂದ ದೂರ ಹಾಕಲ್ಪಟ್ಟಿರುವದು. 1. ಚಾತುರ್ವರ್ಣ್ಯವನ್ನು ಎಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಜಾತಿ ವಿಭಾಗವನ್ನು ಸಾಕ್ಷಾತ್ಪರಬ್ರಹ್ಮನೇ ನಿರ್ಮಿಸಿರುತ್ತಾನೆ. ಸ್ತ್ರೀ ಪುರುಷ ಭೇದವನ್ನು ಪರಮಾತ್ಮನು ಹೇಗೆ ಮಾಡಿರುವನೋ, ದೇವ, ದಾನವ, ಗಂಧರ್ವ, ಮನುಷ್ಯ, ಪಶು, ಪಕ್ಷ್ಯಾದಿ ಯೋನಿ ಭೇದಗಳನ್ನು

ಹೇಗೆ ಸ್ವಯಂ ಪರಮಾತ್ಮನೇ ಸೃಷ್ಟಿಕಾಲದಲ್ಲಿಯೇ ರಚಿಸಿರುವನೋ, ಹಾಗೆಯೇ ಮನುಷ್ಯರನ್ನು ಸೃಷ್ಟಿಸುವಾಗಲೇ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣ ವಿಭಾಗಗಳನ್ನು ಮಾಡಿ ತತ್ತದ್ವರ್ಣಾನುಸಾರಿಯಾಗಿ ಕರ್ಮ ವಿಧಾನವನ್ನೂ ಸಾಕ್ಷಾತ್ಪರಮಾತ್ಮನೇ ಮಾಡಿರುತ್ತಾನೆ. ಶ್ರೀ ಕೃಷ್ಣನು ಹೇಳುತ್ತಾನೆ :—

**(3) ಓಂತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಸ್ಮೃತಃ ।**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥**
—(17. 23.)

ಪರಬ್ರಹ್ಮನಿಗೆ ಓಂ, ತತ್, ಸತ್ ಎಂಬ ಮೂರು ಹೆಸರುಗಳುಂಟು. ಆತನಿಂದಲೇ **ಪುರಾ** ಎಂದರೆ ಪೂರ್ವದಲ್ಲಿ, ಸೃಷ್ಟಿ ಕಾಲದಲ್ಲಿಯೇ ಬ್ರಾಹ್ಮಣರು, ನಿರ್ಮಿಸಲ್ಪಟ್ಟರು; ವೇದಗಳು ಅಭಿವ್ಯಕ್ತಿ ಮಾಡಲ್ಪಟ್ಟವು; ಯಜ್ಞಾದಿ ಕ್ರಿಯೆಗಳು ಪ್ರವರ್ತಿಸಲ್ಪಟ್ಟವು.

ಚತುರ್ಥಾಧ್ಯಾಯದಲ್ಲಿಯೂ ಸಹ ಸ್ಪಷ್ಟವಾಗಿ ಶ್ರೀ ಕೃಷ್ಣನು ಇದೇ ವಿಷಯವನ್ನು ಹೇಳಿರುತ್ತಾನೆ :—

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
—(4. 13.)

ಎಲೈ ಅರ್ಜುನನೇ ! ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚತುರ್ವರ್ಣ ಸಮೂಹವು ಸತ್ತ್ವರಜಸ್ತಮೋ ಗುಣಭೇದವನ್ನು ನಿಮಿತ್ತ ಮಾಡಿ ಮತ್ತು ತತ್ತದ್ವರ್ಣೋಚಿತವಾದ ಕರ್ಮ ವಿಧಾನಗಳನ್ನೂ ಮಾಡಿ ನನ್ನಿಂದ ಸೃಷ್ಟಿಸಲ್ಪಟ್ಟಿತು.

ಈ ವಾಕ್ಯದಲ್ಲಿ ಚಾತುರ್ವರ್ಣ್ಯವು ಪರಮಾತ್ಮನಾದ ಶ್ರೀ ಕೃಷ್ಣನಿಂದ ನಿರ್ಮಿತವಾದುದೆಂದು ಹೇಳಲ್ಪಟ್ಟಿರುವುದೇ ಹೊರತು ಇಷ್ಟಾನುಸಾರವಾದ ಉದ್ಯೋಗಭೇದದಿಂದ ಪ್ರಾಪ್ತವಾದ ಮನುಷ್ಯಕಲ್ಪಿತವಾದ ವ್ಯವಸ್ಥೆಯಲ್ಲವೆಂದು ಸಿದ್ಧವಾಗುವುದು. ದ್ವಾಪರಯುಗದಲ್ಲಿ ಶ್ರೀ ಕೃಷ್ಣನು ಚಾತುರ್ವರ್ಣ್ಯವನ್ನು ರಚಿಸಿದನೆಂದು ಭ್ರಮಿಸಕೂಡದು. ಶ್ರೀ ಕೃಷ್ಣನು ಅನಾದಿನಿತ್ಯನಾದ ಪ್ರಣವ ಪ್ರತಿಪಾದ್ಯನಾದ ಜಗತ್ಸೃಷ್ಟಿ ಕರ್ತನಾದ ಪರಬ್ರಹ್ಮನು. ಆತನೇ ಪುರುಷಸೂಕ್ತ ಪ್ರತಿಪಾದ್ಯನಾದ ನಾರಾಯಣನು. ಸೃಷ್ಟಿ ಕಾಲದಲ್ಲಿ ನಾರಾಯಣ ರೂಪದಿಂದ ಬ್ರಾಹ್ಮಣಾದಿ ವರ್ಣ ವಿಭಾಗವನ್ನು ಮಾಡಿ ವರ್ಣಾನುಗುಣವಾಗಿ ಕರ್ಮ ವಿಭಾಗವನ್ನೂ ನಾನೇ ಮಾಡಿರುವೆನೆಂದು ಶ್ರೀ ಕೃಷ್ಣನ ಅಭಿಪ್ರಾಯವು.*

---

* ತನ್ನ ರೂಪಾಂತರಗಳಿಗೂ ತನಗೂ ಇರುವ ಅಭೇದವನ್ನು ತೋರಿಸುವುದಕ್ಕೂ, ತಾನೇ ನಿತ್ಯನಾದ ಪರಿಪೂರ್ಣನಾದ ಪರಮಾತ್ಮನೆಂದು ಪ್ರಕಟ ಮಾಡುವುದಕ್ಕೂ ಶ್ರೀ ಕೃಷ್ಣನು ಅಲ್ಲಿ ಅಲ್ಲಿ ಈ ರೀತಿಯಾದ ಪ್ರಯೋಗಗಳನ್ನು ಮಾಡುತ್ತಾನೆಂದು ತಿಳಿಯಬೇಕು. ಪಂಚದಶಾಧ್ಯಾಯದಲ್ಲಿ

ಸೃಷ್ಟಿ ಪ್ರಾರಂಭದಲ್ಲಿ ಚತುರ್ವರ್ಣಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ನಾರಾಯಣನು ಸೃಷ್ಟಿ ಮಾಡಿರುವನೆಂಬ ವೃತ್ತಾಂತವು ಪುರುಷಸೂಕ್ತದಲ್ಲಿ "**ಬ್ರಾಹ್ಮಣೋಽಸ್ಯ ಮುಖಮಾಸೀತ್**" ಇತ್ಯಾದಿ ವಾಕ್ಯಗಳಲ್ಲಿ ಸ್ಪಷ್ಟವಾಗಿರುವುದು; ಪರಂತು ಚತುರ್ವರ್ಣಗಳ ದೇಹಸೃಷ್ಟಿಯ ವಿಭಾಗದಲ್ಲಿ ನಿಮಿತ್ತವಾದ ಸತ್ವರಜಸ್ತಮೋಗುಣ ವಿಭಾಗವು ಸ್ಮೃತಿ ಗ್ರಂಥಗಳಲ್ಲಿ ವಿಶದವಾಗಿ ನಿರೂಪಿತವಾಗಿರುವುದು. ರಜೋಗುಣಕ್ಕಿಂತಲೂ ಅತ್ಯಂತ ಅಧಿಕವಾದ ಸತ್ವಗುಣೋಪೇತರು ಬ್ರಾಹ್ಮಣರು; ರಜೋಗುಣಕ್ಕಿಂತಲೂ ಸ್ವಲ್ಪ ಅಧಿಕವಾದ ಸತ್ವಗುಣೋಪೇತರು ಕ್ಷತ್ರಿಯರು; ತಮೋಗುಣಕ್ಕಿಂತ ಅಧಿಕವಾದ ರಜೋಗುಣವುಳ್ಳವರಾಗಿ ರಜೋಗುಣಕ್ಕೆ ಸಮಾನವಾದ ಸತ್ವಗುಣೋಪೇತರು ವೈಶ್ಯರು; ರಜೋಗುಣಕ್ಕಿಂತ ಅಧಿಕವಾದ ತಮೋಗುಣವುಳ್ಳವರಾಗಿ ಆ ತಮೋಗುಣಕ್ಕಿಂತ ಅಧಿಕವಾದ ಸತ್ವಗುಣವುಳ್ಳವರು ಶೂದ್ರರು ಎಂದು ಗುಣವಿಭಾಗದ ಸಂಕ್ಷೇಪವು. ಈ ಗುಣ ತಾರತಮ್ಯವನ್ನು ಅನುಸರಿಸಿ ಶ್ರೀ ಕೃಷ್ಣನು ಕರ್ಮ ವಿಧಾನವನ್ನು ಮಾಡಿರುವನು. ಅಷ್ಟೇ ಹೊರತು ಕಾಲ, ದೇಶ, ನಡೆವಳಿಕೆಗಳಿಗೆ ಅನುಗುಣವಾದ ಉದ್ಯೋಗಭೇದದಿಂದ ವರ್ಣಭೇದವು ಪ್ರಾಪ್ತವಾಗಿರುವುದಿಲ್ಲ.

**ಪ್ರಶ್ನೆ:—** ಸ್ವಾಮೀ! ನಾರಾಯಣನೇ ಚತುರ್ವರ್ಣಗಳಿಗೆ ಸೃಷ್ಟಿಕರ್ತನೆಂಬುದು ಶ್ರೀ ಕೃಷ್ಣನ ವಾಕ್ಯಗಳಿಂದ ಸಿದ್ಧವಾಗುವುದು. ಅಷ್ಟನ್ನು ನಾವು ಒಪ್ಪುವೆವು. ಆದರೆ ಕರ್ಮ ವಿಭಾಗವು ಬ್ರಾಹ್ಮಣಾದಿ ಜಾತಿಗಳ ಸತ್ವಾದಿ ಗುಣಗಳಿಗೆ ಅನುಗುಣವಾಗಿ ಉತ್ಪನ್ನವಾದುದೆಂಬಲ್ಲಿ ಪ್ರಮಾಣವೇನು ?

**ಉತ್ತರ:— ಶ್ರೀ ಶ್ರೀಗಳವರು :—** ಶ್ರೀ ಕೃಷ್ಣನೇ ಹೇಳಿರುತ್ತಾನೆ :—

**ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ ।**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥**

—(18. 41.)

ಎಲೈ ಶತ್ರುಸಂತಾಪಕನಾದ ಅರ್ಜುನನೇ ! ಬ್ರಾಹ್ಮಣರಿಗೂ, ಕ್ಷತ್ರಿಯರಿಗೂ, ವೈಶ್ಯರಿಗೂ, ಶೂದ್ರರಿಗೂ ಸ್ವಭಾವ ಪ್ರಭವೈರ್ಗುಣೈಃ = ಎಂದರೆ, ಬ್ರಾಹ್ಮಣ್ಯಾದಿ ಜನ್ಮ ಸ್ವಭಾವಾನುಸಾರಿಯಾಗಿ ಪ್ರಾಪ್ತವಾದ ಸತ್ವಾದಿ ಗುಣಗಳಿಂದ ಕರ್ಮಗಳು ವಿಭಿನ್ನವಾಗಿರುತ್ತವೆ.

---

ಇದೇ ನ್ಯಾಯವನ್ನು ಅವಲಂಬಿಸಿ "**ವೇದಾಂತಕೃತ್**" ಎಂದರೆ ನಾನೇ ವೇದಾಂತಸೂತ್ರಗಳನ್ನು ರಚಿಸಿದವನೆಂದು ಹೇಳಿರುತ್ತಾನೆ. ವೇದವ್ಯಾಸರು ವೇದಾಂತ ಸೂತ್ರಗಳನ್ನು ರಚಿಸಿದವರೆಂದು ಸುಪ್ರಸಿದ್ಧವು. ಇದರಿಂದ ಶ್ರೀ ಕೃಷ್ಣ ವೇದವ್ಯಾಸರಿಗೆ ಐಕ್ಯವು ವಿದಿತವಾಗುವುದು. ಈ ನ್ಯಾಯವನ್ನು ಚೆನ್ನಾಗಿ ತಿಳಿಯದೆ ಅರ್ಜುನನು ಪ್ರಶ್ನೆ ಮಾಡಲು, ಶ್ರೀ ಕೃಷ್ಣನು ಚತುರ್ಥಾಧ್ಯಾಯದ ಆದಿಯಲ್ಲಿ ಉತ್ತರವನ್ನು ಕೊಟ್ಟಿರುತ್ತಾನೆಂದು ತಿಳಿಯಬೇಕು. ( ಶ್ಲೋಕ 4. 1–10. )

**ಪ್ರಶ್ನೆ:—** ಮಹಾಸ್ವಾಮೀ ! ಇದರಿಂದ ಇಷ್ಟು ನಿಶ್ಚಿತವಾಯಿತು. ದೇಹ ನಿಷ್ಟವಾದ ಸತ್ವರಜಸ್ತಮೋಗುಣಗಳ ನ್ಯೂನಾಧಿಕ್ಯ ಭಾವದಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ವರ್ಣಭೇದಗಳು ಪರಮಾತ್ಮನಿಂದ ಉಂಟಾಗುವುವು. ಸತ್ವಾದಿ ಗುಣ ತಾರತಮ್ಯಾನುಗುಣವಾಗಿ ಅಪರವರಿಗೆ ಕರ್ಮಗಳೂ ಪರಮಾತ್ಮನಿಂದ ವಿಧಿಸಲ್ಪಟ್ಟಿರುವುವು. ಹಾಗೆಯೇ ಆಗಲಿ. ಆದರೂ ಪ್ರಕೃತದಲ್ಲಿ ಯಾರಾದರೂ ಮಹಾ ಪುರುಷನು ಉತ್ಕೃಷ್ಟ ಕರ್ಮವನ್ನು ಆಚರಿಸಿ ಸತ್ವ ಪ್ರಚುರವಾದ ದೇಹವನ್ನು ಹೊಂದಿ ಯಾತಕ್ಕೆ ಬ್ರಾಹ್ಮಣನಾಗಬಾರದು ?

**ಉತ್ತರ:— ಶ್ರೀ ಶ್ರೀಗಳವರು:—** ಲೋಕದಲ್ಲಿರುವವರೆಲ್ಲರೂ ಬ್ರಾಹ್ಮಣರಾದರೂ ನಮಗೆ ಸಂಕಟವಿಲ್ಲ. ಆದರೆ ಆಗಲು ಸಾಧ್ಯವಿಲ್ಲವೆಂದು ತೋರಿಸುತ್ತೇವೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ವರ್ಣಪ್ರಭೇದವು ಅನಾದ್ಯನಂತ ಕಾಲದಲ್ಲಿಯೂ ಯೋನಿಭೇದದಂತೆ ಭಿನ್ನವಾಗಿಯೇ ಇರತಕ್ಕ ಈಶ್ವರ ನಿರ್ಮಿತ ವಿಭಾಗವಾಗಿ ಇರುತ್ತದೆ. ಸ್ತ್ರೀ ಪುರುಷರು ಹೇಗೆ ಸ್ವಭಾವತಃ ವಿಭಕ್ತರೋ ಹಾಗೆಯೇ ಬ್ರಾಹ್ಮಣಾದಿ ವರ್ಣಗಳು ಪರಸ್ಪರೈಕ್ಯವನ್ನು ಹೊಂದಲಾರವು. ಸೂಕ್ಷ್ಮ ಸತ್ವಗುಣದಿಂದ ದೇವತೆಗಳ ಶರೀರವು ನಿರ್ಮಿಸಲ್ಪಟ್ಟಿರುವುದು. ಎಷ್ಟು ಕರ್ಮ ಮಾಡಿದರೂ ಯಾವ ಆಹಾರವನ್ನು ತಿಂದರೂ ಅಂಥ ದೇಹವು ಮನುಷ್ಯನಿಗೆ ಬರಲಾರದು. ವಿಧ್ಯುಕ್ತವಾಗಿ ಸಕಾಲದಲ್ಲಿ ವಿವಾಹಿತಳಾದ ಬ್ರಾಹ್ಮಣ ಸ್ತ್ರೀಯಲ್ಲಿ ಷೋಡಶಸಂಸ್ಕಾರಗಳಿಂದ ಪವಿತ್ರವಾದ ದೇಹವುಳ್ಳ ಬ್ರಾಹ್ಮಣನ ವೀರ್ಯದಿಂದ ಉತ್ಪನ್ನನಾದ ಪುತ್ರನೇ ಬ್ರಾಹ್ಮಣನೆನ್ನಿಸುವನು. ಈ ಪ್ರಕಾರವಾಗಿ ಹುಟ್ಟಿದವರು ಬ್ರಾಹ್ಮಣ ಜಾತಿಗೆ ಸೇರಿದವರು. ಇದೇ ರೀತಿಯಲ್ಲಿ ವಿಧ್ಯುಕ್ತ ರೀತಿಯಲ್ಲಿ ವಿವಾಹಿತಳಾದ ಕ್ಷತ್ರಿಯ ಸ್ತ್ರೀಯಲ್ಲಿ ಕ್ಷತ್ರಿಯ ಪುರುಷನಿಂದ ಜನಿಸಿದ ಔರಸ ಪುತ್ರನು ಕ್ಷತ್ರಿಯನೆನ್ನಿಸುವನು. ವಿಧ್ಯುಕ್ತ ರೀತಿಯಲ್ಲಿ ವಿವಾಹಿತಳಾದ ವೈಶ್ಯ ನಾರಿಯಲ್ಲಿ ವೈಶ್ಯ ಪತಿಯಿಂದ ಜನಿಸಿದವನು ವೈಶ್ಯನು. ಶೂದ್ರ ಸ್ತ್ರೀಯಲ್ಲಿ, ಶೂದ್ರ ಪತಿಯಿಂದ ಹುಟ್ಟಿದವನು ಶೂದ್ರನು. ಹೀಗೆ ನಾಲ್ಕು ಜಾತಿಗಳೂ, ಸೃಷ್ಟಿ ಕಾಲದಿಂದಲೂ ಪರಂಪರೆಯಾಗಿ ನಡೆದುಕೊಂಡು ಬಂದಿರುವುವು. ಉಕ್ತ ಮಾರ್ಗವನ್ನು ಪರಿತ್ಯಜಿಸಿ ಬ್ರಾಹ್ಮಣ ಸ್ತ್ರೀಯರಲ್ಲಿ ಕ್ಷತ್ರಿಯಾದಿಗಳಿಂದ ಪುತ್ರರು ಉತ್ಪನ್ನರಾದರೆ ಅವರು ಕ್ಷೇತ್ರಗತ ಸತ್ವ ಗುಣವನ್ನು ಹೊಂದಿ ಬ್ರಾಹ್ಮಣರೆಂದೆನಿಸುವರು ಎಂದು ಭ್ರಮಿಸಬಾರದು. ವೇದನಿಷಿದ್ಧ ರೀತಿಯಲ್ಲಿ ಉತ್ಪನ್ನನಾದ ಆ ಪುತ್ರನು ತಮೋಗುಣಮಯವಾದ ದೇಹವುಳ್ಳವನಾಗಿ ಚಂಡಾಲ ಜಾತಿಯವನಾಗುವನು. ಆತನು ಅತ್ಯಂತ ಅಪವಿತ್ರನು. ಯದ್ಯಪಿ ಈ ರೀತಿಯಾಗಿ ಹುಟ್ಟಿದ ಪುತ್ರರು ವಿಪರೀತ ಬುದ್ಧಿಶಾಲಿಗಳಾಗಿ ಪ್ರಗಲ್ಭರಾಗಿರುವರು. ಆದರೆ ತಮೋಗುಣ ಪ್ರಾಚುರ್ಯದಿಂದ ಪ್ರಾಪ್ತವಾದ ಈ ತಾಮಸ ಬುದ್ಧಿಯು ಇಂದ್ರಜಿತ್ತು ಮುಂತಾದ ರಾಕ್ಷಸರ ತಾಮಸ ಬುದ್ಧಿಯಂತೆ ಲೋಕಕ್ಷಯಕ್ಕೂ, ಆತ್ಮನಾಶಕ್ಕೂ, ಪಿತೃವರ್ಗದ ಅಧಃಪಾತಕ್ಕೂ ಕಾರಣವಾಗುವುದು. ಬ್ರಾಹ್ಮಣಾದಿ ವರ್ಣ

ಗಳು ಪರಸ್ಪರ ಸಂಗಮಾದಿಗಳನ್ನು ಹೊಂದಿದರೆ ವರ್ಣನಾಶವೇ ಪ್ರಾಪ್ತವಾಗುವುದೇ ಹೊರತು ಅಧಮರು ಉತ್ತಮ ವರ್ಣ ಸಾಮ್ಯವನ್ನು ಹೊಂದಲಾರರು.

3. ವರ್ಣಸಾಂಕರ್ಯವು ಸರ್ವ ಪ್ರಕಾರದಿಂದಲೂ ಲೋಕ ನಾಶಕರವೆಂದು ಶ್ರೀ ಕೃಷ್ಣನು ನಿಂದಿಸಿರುತ್ತಾನೆ; ಮತ್ತು ಬ್ರಾಹ್ಮಣಾದಿ ವರ್ಣಗಳು ಪ್ರತ್ಯೇಕ ಪ್ರತ್ಯೇಕವಾಗಿ ಶ್ರೀ ಪರಮಾತ್ಮನಿಂದ ನಿರ್ಮಿತವಾಗಿರುವುವೆಂಬ ತತ್ವವು ಗೀತೆಯಲ್ಲಿ ಮಾಡಲ್ಪಟ್ಟಿರುವ ವರ್ಣಸಾಂಕರ್ಯವು ಪ್ರಾಪ್ತವಾಗುವ ಪ್ರಕಾರ ವರ್ಣನೆಯಿಂದಲೇ ವಿಶದವಾಗುವುದು. ಸ್ತ್ರೀಯರು ವ್ಯಭಿಚಾರದಲ್ಲಿ ಪ್ರವೃತ್ತರಾದರೇನೇ ವರ್ಣ ಸಾಂಕರ್ಯವು ಬರುವುದೆಂದು ಅರ್ಜುನನು ಹೇಳುತ್ತಾನೆ :—

(1) **ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥**
**ಅಧರ್ಮಾಭಿಭವಾತ್ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ ।**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥**
**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥** *

—(1. 40-42.)

**ಅರ್ಥ :—** ಹೇ ಕೃಷ್ಣ ! ಯೋಧಪುರುಷರುಗಳ ಮರಣದಿಂದ ಕುಲ ಕ್ಷಯವು ಉಂಟಾಗಿ ( ಮನೆಯಲ್ಲಿ ಸಾಂಪ್ರದಾಯಿಕ ಧರ್ಮಜ್ಞರು ಇಲ್ಲದೇ ಹೋಗುವುದರಿಂದ) ಕ್ಷತ್ರಿಯಾದಿ ಕುಲಧರ್ಮಗಳು ನಷ್ಟವಾಗುತ್ತವೆ. ಕುಲಕ್ರಮಾಗತವಾದ ಧರ್ಮವು ನಷ್ಟವಾದರೆ ಅಧರ್ಮವು ಸಕಲ ಕುಲವನ್ನೂ ಆಕ್ರಮಿಸಿ ಬಿಡುತ್ತದೆ. ಇಂಥ ಅಧರ್ಮ ವ್ಯಾಪ್ತಿಯಿಂದ ಸಾಧ್ವಿಗಳಾಗಿದ್ದ ಕುಲಸ್ತ್ರೀಯರು ದುಷ್ಟರಾಗುತ್ತಾರೆ. ( ಎಂದರೆ ವ್ಯಭಿಚಾರದಿಂದ ದೂಷಿತರಾಗುತ್ತಾರೆ. ) ಎಲೈ ವೃಷ್ಣಿ ಕುಲೋತ್ಪನ್ನನಾದ ಶ್ರೀ ಕೃಷ್ಣನೇ ! ಸ್ತ್ರೀಯರು ದುಷ್ಟರಾದರೆ ( ಅನ್ಯ ವರ್ಣಸ್ಥರ ವೀರ್ಯದಿಂದ ಮಕ್ಕಳು ಉತ್ಪನ್ನರಾಗಿ ) ವರ್ಣಸಾಂಕರ್ಯವು ಉತ್ಪನ್ನವಾಗುವುದು. ( ಪಾತಿವ್ರತ್ಯರಹಿತಳಾದ ದುಷ್ಟ ಸ್ತ್ರೀಯಲ್ಲಿ ಉತ್ಪನ್ನನಾದ ) ಸಂಕರ ಪುತ್ರನು ಕುಲನಾಶಕರನ್ನೂ, ಮತ್ತು ತಾನು ಹುಟ್ಟಿದ ಕುಲವನ್ನೂ ನರಕದಲ್ಲಿ ಕೆಡವುತ್ತಾನೆ.

---

* ಇದು ಅರ್ಜುನನ ಮಾತಾದುದರಿಂದ ಪೂರ್ವ ಪಕ್ಷ ಮಾತ್ರದ ನಿಶ್ಚಯವೆಂದು ತಿಳಿಯಕೂಡದು. ಈ ಯೋಧವೀರರು ಸತ್ತರೆ ಲೋಕದಲ್ಲಿ ಧರ್ಮೋಪದೇಶಕರು ಇಲ್ಲದೆ ಹೋಗಿ ಸ್ತ್ರೀಯರು ಕೆಟ್ಟು ವರ್ಣಸಾಂಕರ್ಯವು ಬರುವುದೆಂದು ಅರ್ಜುನನ ವಾದವು. ಇವರೇ ಭೂಭಾರ ರೂಪರಾದ ದೈತ್ಯರಾದುದರಿಂದ ಇವರಿಂದಲೇ ಧರ್ಮವು ಕೆಟ್ಟು ವರ್ಣಸಾಂಕರ್ಯವು ಪ್ರಾಪ್ತವಾಗುವುದರಿಂದ ಇವರನ್ನು ಅವಶ್ಯವಾಗಿ ಸಂಹರಿಸಬೇಕೆಂದು ಶ್ರೀ ಕೃಷ್ಣನ ಭಾವವು. " **ಸಂಕರಸ್ಯ ಚ ಕರ್ತಾ ಸ್ಯಾಂ** " ಇತ್ಯಾದಿ ತೃತೀಯಾಧ್ಯಾಯದ ವಚನಗಳಿಂದ ಶ್ರೀ ಕೃಷ್ಣನೂ ಧರ್ಮ ನಾಶದಿಂದ ಹೀಗೆಯೇ ವರ್ಣಸಾಂಕರ್ಯವು ಬರುವುದೆಂದು ತಿಳಿದಿದ್ದನೆಂದು ನಿಶ್ಚಿತವಾಗುವುದು.

ಈ ರೀತಿಯಾಗಿ ಶ್ರೀ ಕೃಷ್ಣನು ಬ್ರಾಹ್ಮಣ ದೇಹವು ಕ್ಷತ್ರಿಯಾದಿಗಳಿಗೂ, ಕ್ಷತ್ರಿಯಾದಿಗಳ ಅಧಿಕಾರಸಹಿತವಾದ ದೇಹವು ಇತರರಿಗೂ ಸರ್ವಥಾ ದೊರಕಲಾರದೆಂದು ಸ್ಪಷ್ಟವಾಗಿ, ಸಯುಕ್ತಿಕವಾಗಿ ನಿರೂಪಿಸಿರುತ್ತಾನೆ. ಬ್ರಾಹ್ಮಣ, ಕ್ಷತ್ರಿಯಾದಿ ಭಿನ್ನ ಭಿನ್ನ ವರ್ಣಸ್ಥರಾದ ಸ್ತ್ರೀ ಪುರುಷರಿಗೆ ಪರಸ್ಪರ ಸಂಗವುವು ಪ್ರಾಪ್ತವಾದರೆ ಸಂಕರ ಪುತ್ರರು ಹುಟ್ಟುವರು. ಅವರು ಚತುರ್ವರ್ಣದದೆಸೆಯಿಂದ ಹೊರಗಿನವರೆನ್ನಿಸುವರು.

4. ವರ್ಣಸಾಂಕರ್ಯದ ಅನರ್ಥವನ್ನು ತಪ್ಪಿಸುವುದು ಅತ್ಯವಶ್ಯಕವೆಂದೇ ನಾನೂ ಸಹ ಲೋಕಸಂಗ್ರಾಹಾರ್ಥವಾಗಿ ಸ್ವಕರ್ಮದಲ್ಲಿ ಆಸಕ್ತನಾಗಿರುವೆನೆಂದು ಶ್ರೀ ಕೃಷ್ಣನು ತೃತೀಯಾಧ್ಯಾಯದಲ್ಲಿಯೂ ಸಹ ನಿರೂಪಿಸಿರುತ್ತಾನೆ :—

(1) **ಯದಿ ಹ್ಯಹಂ ನ ಪ್ರವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥**
**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಂ ।**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥**
**—(3. 23–24.)**

ಎಲೈ ಅರ್ಜುನನೇ ! ಸ್ವಭಾವತಃ ಸರ್ವದಾ ಆಲಸ್ಯರಹಿತನಾದ ನಾನೂ ಯಾವಾಗಲಾದರೂ ಕರ್ಮವನ್ನು ಆಚರಿಸದಿದ್ದರೆ ಸಕಲ ಮನುಷ್ಯರೂ ನನ್ನ ಮಾರ್ಗವನ್ನೇ ಅನುಸರಿಸಿ ಬಿಡುತ್ತಾರೆ. ( ಎಂದರೆ ಎಲ್ಲರೂ ವಿಹಿತ ಕರ್ಮವನ್ನು ಪರಿತ್ಯಾಗ ಮಾಡಿ ಧರ್ಮಭ್ರಷ್ಟರಾಗಿ ಕರ್ಮ ಚಂಡಾಲರಾಗುವರು. ಅವರು ಅಧರ್ಮಿಷ್ಟರಾದರೆ ಕುಲಧರ್ಮವು ಕೆಟ್ಟು ಹೋಗಿ ಕ್ರಮೇಣ ಸ್ತ್ರೀಯರು ದೂಷಿತರಾಗುವರು. ನಂತರ ವರ್ಣಸಾಂಕರ್ಯವು ಪ್ರಾಪ್ತವಾಗುವುದೆಂದು ಭಾವವು. ) ಹೀಗೆ ನಾನು ಸ್ವವರ್ಣಾಶ್ರಮೋಚಿತ ಕರ್ಮವನ್ನು ಅನುಷ್ಠಾನ ಮಾಡದಿದ್ದರೆ ಈ ಸರ್ವ ಪ್ರಜೆಗಳೂ ನಾಶವನ್ನು ಹೊಂದಿ ಬಿಡುವರು; ನಾನೇ ವರ್ಣಸಾಂಕರ್ಯವನ್ನು ಮಾಡಿದಂತಾಗುವುದು ಮತ್ತು ಸರ್ವರನ್ನೂ ಕೊಂದಂತಾಗುವುದು. (ವರ್ಣಸಾಂಕರ್ಯದಿಂದ ಸರ್ವರೂ ಭ್ರಷ್ಟರಾಗಿ ನರಕಕ್ಕೆ ಬೀಳುವರೆಂದು ಭಾವವು. )

5. ಪರಂತು ಅಸುರ ಜನರು ಲೋಕದಲ್ಲಿ ಹೆಚ್ಚಿ ಸ್ವವರ್ಣಾಶ್ರಮ ಧರ್ಮಗಳನ್ನು ಉಲ್ಲಂಘಿಸಿ ಲೋಕ ನಾಶವನ್ನು ಮಾಡುತ್ತಿದ್ದುದರಿಂದಷ್ಟೇ ಭೂದೇವಿಯು ಅಂಥ ಪಾಪಿಗಳನ್ನು ಹೊರಲಾರದೇ ಬ್ರಹ್ಮದೇವರಿಗೆ ವಿಜ್ಞಾಪಿಸಿಕೊಂಡಳು; ಮತ್ತು ಚತುರ್ಮುಖಾದಿ ದೇವತೆಗಳಿಂದ ಪ್ರಾರ್ಥಿತನಾದ ಶ್ರೀ ಕೃಷ್ಣನು ತನ್ನ ಆಜ್ಞಾರೂಪವಾದ ವೇದ ಮರ್ಯಾದೆಯನ್ನು ಮೀರಿ ನಡೆಯುವ ಅಂಥ ಪಾಪಿಗಳನ್ನು ನಿಗ್ರಹ ಮಾಡಿ ವರ್ಣಾಶ್ರಮ ಧರ್ಮವನ್ನು ಪುನಃ ಸಂಸ್ಥಾಪಿಸುವ ಉದ್ದೇಶದಿಂದಷ್ಟೇ ಭೂಲೋಕದಲ್ಲಿ ಅವತರಿಸಿದುದು ! ಶ್ರೀ ಕೃಷ್ಣನು ಹೇಳುತ್ತಾನೆ :—

(1) ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥
—(4. 7–8.)

**ಅರ್ಥ :—** ಎಲೈ ಅರ್ಜುನನೇ ! ಯಾವ ಯಾವ ಕಾಲದಲ್ಲಿ ವರ್ಣಾಶ್ರಮ ಧರ್ಮಕ್ಕೆ ಹಾನಿಯೂ, ಅಧರ್ಮಕ್ಕೆ ವೃದ್ಧಿಯೂ ಬರುತ್ತದೆಯೋ ಆಗ ನಾನು ಅವತರಿಸುತ್ತೇನೆ. ಭಕ್ತರಾದ ಸಜ್ಜನರನ್ನು ರಕ್ಷಿಸುವುದಕ್ಕಾಗಿಯೂ, ದುರ್ಜನರನ್ನು ವಿನಾಶ ಹೊಂದಿಸುವುದಕ್ಕಾಗಿಯೂ ಮತ್ತು ವರ್ಣಾಶ್ರಮ ಧರ್ಮಸಂಸ್ಥಾಪನೆಗಾಗಿಯೂ ನಾನು ಆಯಾಯ ಕಾಲದಲ್ಲಿ ಅವತರಿಸುತ್ತೇನೆ.

ಈ ಪ್ರಕಾರವಾದ ಶ್ರೀ ಕೃಷ್ಣನ ವಾಕ್ಯಗಳಿಂದ ಸೂಚಿತವಾದ ಯುಕ್ತಿಪರಾಮರ್ಶವನ್ನು ಮಾಡಿದರೆ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಗಳು ಭಿನ್ನವಾಗಿ ಅನಾದಿ ಕಾಲದಿಂದಲೂ ಇರುವುವು; ಇವುಗಳು ಜನರುಗಳ ಕರ್ಮ ವೈಚಿತ್ರ್ಯದಿಂದ ಪ್ರಾಪ್ತವಾದ ಆಗಂತುಕ ಧರ್ಮಗಳಲ್ಲ; ಮತ್ತೇನೆಂದರೆ ಕ್ಲಪ್ತವಾದ ಯೋನಿಗಳಲ್ಲಿ ಜನ್ಮದಿಂದಲೇ ಪ್ರಾಪ್ತವಾಗತಕ್ಕ ಜಾತಿಗಳೆಂದು ಸಿದ್ಧವಾಗುವುದು.

6. ಪರಂತು ಉತ್ಕೃಷ್ಟ ಕರ್ಮದಿಂದ ಶೂದ್ರಾದಿಗಳು ಬ್ರಾಹ್ಮಣ್ಯವನ್ನು ಹೊಂದಬಹುದೆಂಬ ಅಭಿಪ್ರಾಯವೂ ಅಯುಕ್ತವೇ ಆಗಿರುವುದು. ಹೇಗೆಂದರೆ ಭಗವಂತನು ನಾಲ್ಕು ಜಾತಿಗಳನ್ನು ನಿರ್ಮಾಣ ಮಾಡಿ ಮೊದಲೇ ಕರ್ಮ ವಿಭಾಗವನ್ನು ಮಾಡಿರುವನು. ಇದರಿಂದ ಪರಮಾತ್ಮನು ಯಾವ ಜಾತಿಯನ್ನು ಉದ್ದೇಶ ಮಾಡಿ ಯಾವ ಕರ್ಮವನ್ನು ವಿಧಿಸಿರುವನೋ ಆ ಜಾತಿಸ್ಥ ಪುರುಷನಿಗೆ ಆ ಕರ್ಮವು ಉತ್ಕೃಷ್ಟವು. ತದ್ಭಿನ್ನವಾದುವುಗಳು ದುಷ್ಕರ್ಮವೆನ್ನಿಸುವುವು. ಹೀಗಿರುವುದರಿಂದ ಶೂದ್ರನು ಸಂಧ್ಯಾವಂದನೆ, ಗಾಯತ್ರೀ ಜಪ, ಅಗ್ನಿಹೋತ್ರಾದಿಗಳನ್ನು ಮಾಡಿದರೆ ಅವುಗಳು ದುಷ್ಕರ್ಮವೆನ್ನಿಸುವುವು. ಬ್ರಾಹ್ಮಣನು ಅದೇ ಕರ್ಮವನ್ನು ಮಾಡಿದರೆ ಉತ್ಕೃಷ್ಟ ಕರ್ಮವೆನ್ನಿಸುವುದು. ಹೀಗೆ ಆಯಾಯ ಜಾತಿಯವರಿಗೆ ತಮತಮಗೆ ವಿಹಿತವಾದ ಕರ್ಮಗಳೇ ಉತ್ಕೃಷ್ಟ ಕರ್ಮಗಳಾಗಿರುವುದರಿಂದ ಉತ್ಕೃಷ್ಟ ಕರ್ಮಾಚರಣೆಯಿಂದ ಜಾತಿ ವಿವೇಕವು ಪ್ರತಿಷ್ಠಿತವಾಗಿ ನಿಂತು ಸರ್ವರೂ ಸುಖಿಗಳಾಗುವರೇ ಹೊರತು ಶೂದ್ರನು ಬ್ರಾಹ್ಮಣನಾಗಲಾರನು. ಬ್ರಾಹ್ಮಣನು ಶೂದ್ರನಾಗಲಾರನು. ಸ್ವವರ್ಣಾಶ್ರಮೋಚಿತ ಕರ್ಮವೇ ಉತ್ಕೃಷ್ಟ ಕರ್ಮವು ಎಂಬ ಅಭಿಪ್ರಾಯವು ಶ್ರೀ ಕೃಷ್ಣನ ವಾಕ್ಯಗಳಿಂದ ಸ್ಪಷ್ಟವಾಗಿ ತಿಳಿದು ಬರುವುದು :—

(1) ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।

ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು ॥ *
—(18. 45.)

(2) ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥
ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।
ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ॥
ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।
ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥
—(18. 46–48 )

**ಅರ್ಥ :—** ಸರ್ವವ್ಯಾಪ್ತನಾದ ಭಗವಂತನನ್ನು **ಸ್ವಕರ್ಮ**ದಿಂದ ಚೆನ್ನಾಗಿ (ಭಕ್ತಿಸಹಿತನಾಗಿ) ಪೂಜಿಸಿ ಮನುಷ್ಯನು ಮೋಕ್ಷಾದಿ ಸಿದ್ಧಿಯನ್ನು ಹೊಂದುತ್ತಾನೆ. (ಸ್ವಧರ್ಮನಿರತತ್ವವು ಅತ್ಯಂತಾವಶ್ಯಕವೆಂಬುದನ್ನು ಅನ್ವಯ ವ್ಯತಿರೇಕಗಳಿಂದ** ಶ್ರೀ ಕೃಷ್ಣನು ಉಪಪಾದಿಸುತ್ತಾನೆ :—) ಅಂಗವಿಹೀನವಾದ ಸ್ವಧರ್ಮಾಚರಣೆಯು ಸಾಂಗವಾಗಿ ಉತ್ತಮ ರೀತಿಯಿಂದ ಆಚರಿಸಲ್ಪಟ್ಟ ಪರಧರ್ಮಕ್ಕಿಂತ ಶ್ರೇಷ್ಠವು.† ಸ್ವವರ್ಣಾಶ್ರಮ ಸ್ವಭಾವಾನುಗುಣವಾದ ವಿಹಿತ ಕರ್ಮವನ್ನು ಮಾಡುವವನು ಪಾಪವನ್ನು ಹೊಂದುವುದಿಲ್ಲ. (ಆದುದರಿಂದ ಅಂಗವೈಕಲ್ಯ ಶಂಕೆಯಿಂದ ಸ್ವಧರ್ಮವನ್ನು ಪರಿತ್ಯಾಗ ಮಾಡಬಾರದೆಂದು ಭಾವವು.) ಎಲೈ ಕೌಂತೇಯನೇ ! ಯಾವ ಕಾರಣದಿಂದ ಸಕಲ ಧರ್ಮಾನುಷ್ಠಾನಗಳೂ ಹೊಗೆಯಿಂದ ಅಗ್ನಿಯು ಆವರಿಸಲ್ಪಟ್ಟಿರುವಂತೆ ಅಂಗವೈಕಲ್ಯಾದಿ ದೋಷಗಳಿಂದ ಆವೃತವಾಗಿರುವುವೋ, ಆ ಕಾರಣದಿಂದ ಸ್ವಲ್ಪ ಅಂಗವ್ಯತ್ಯಾಸಾದಿ ರೂಪ ದೋಷದಿಂದ ಸಹಿತವಾದರೂ ಸ್ವವರ್ಣಾಶ್ರಮ ವಿಹಿತ ಕರ್ಮವನ್ನು ಬಿಡಕೂಡದು.

---

* ಈ ಶ್ಲೋಕವು ಈಗಾಗಲೇ ಹಿಂದೆ ವ್ಯಾಖ್ಯಾತವಾಗಿರುವುದು.

** ಸ್ವಧರ್ಮಾಚರಣೆಯಿಂದ ಪುರುಷಾರ್ಥ ಪ್ರಾಪ್ತಿಯ ಸ್ವಧರ್ಮಾಚರಣೆಯಿಲ್ಲದಿದ್ದರೆ ಪುರುಷಾರ್ಥ ಪ್ರಾಪ್ತಿರಾಹಿತ್ಯವು ಮತ್ತು ಪಾಪ ರೂಪವಾದ ಅನರ್ಥ ಪ್ರಾಪ್ತಿಯು; ಹೀಗೆ ಅನ್ವಯ ವ್ಯತಿರೇಕಗಳನ್ನು ತಿಳಿಯಬೇಕು.

† ಸಾಂಗವಾಗಿ ಆಚರಿಸಲ್ಪಟ್ಟ ಪರಧರ್ಮಕ್ಕಿಂತ ಅಂಗವಿಕಲವಾದ ಸ್ವಧರ್ಮವು ಶ್ರೇಷ್ಠವು ಎಂಬ ವಾಕ್ಯಾರ್ಥದಿಂದ ಸಾಂಗವಾದ ಪರಧರ್ಮಾಚರಣೆಯು ಸ್ವಲ್ಪ ಶುಭಕರವು, ಅಂಗವಿಕಲವಾದರೂ ಸ್ವಧರ್ಮಾಚರಣೆಯು ಹೆಚ್ಚು ಶುಭಕರವು ಎಂಬ ಭ್ರಮವು ಹುಟ್ಟುವುದು. ಇದು ದುರರ್ಥವು. ಪುರುಷನು ಸಾಂಗವಾದ ಪರಧರ್ಮಾಚರಣೆಯನ್ನು ಬಲ್ಲವನಾಗಿದ್ದರೂ ಅದನ್ನು ಪರಿತ್ಯಾಗ ಮಾಡಿ ಅಂಗವಿಕಲವಾದರೂ ಸ್ವಧರ್ಮವನ್ನೇ ಆಚರಿಸಬೇಕು ಎಂದು ಶ್ರೀ ಕೃಷ್ಣನ ಅಭಿಪ್ರಾಯವು. ಸಾಂಗವಾಗಿ ಆಚರಿಸಲ್ಪಟ್ಟರೂ ಪರಧರ್ಮಾನುಷ್ಠಾನವು ಪಾಪಕರವೇ. ಈ ವಿಷಯವು ಸ್ವಧರ್ಮವನ್ನು ಆಚರಿಸುವವನು ಪಾಪವನ್ನು ಹೊಂದುವುದಿಲ್ಲ ಎಂಬ ಅರ್ಥವುಳ್ಳ "ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ" ಎಂಬ ಶ್ಲೋಕ ಭಾಗದಿಂದ ಸೂಚಿತವಾಗುವುದು. "ಯಃ ಶಾಸ್ತ್ರವಿಧಿಮುತ್ಸೃಜ್ಯ" ಇತ್ಯಾದಿ ಶ್ಲೋಕಗಳಿಂದ ಸ್ಪಷ್ಟವಾಗುವುದು. "ಪರಧರ್ಮೋ ಭಯಾವಹಃ" ಎಂಬ ವಾಕ್ಯವು ವಿವಾದ ಪರಿಹಾರಕವಾದ ನಿರ್ಣಯಜನಕ ಶ್ಲೋಕವಾಗಿರುವುದು.

ತೃತೀಯಾಧ್ಯಾಯದಲ್ಲಿಯೂ ಕೂಡ ಇದೇ ವಿಷಯವನ್ನು ಶ್ರೀ ಕೃಷ್ಣನು ಸ್ಪಷ್ಟವಾಗಿ ಹೇಳಿರುತ್ತಾನೆ :—

(3) **ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥**
—(3. 35.)

ಹೇ ಪಾರ್ಥ ! ಸರ್ವಾಂಗ ಸಮೃದ್ಧಿಪೂರ್ವಕವಾಗಿ ಉತ್ಕೃಷ್ಟ ರೀತಿಯಿಂದ ಅನುಷ್ಠಿತವಾದ ಪರಧರ್ಮಾತ್ = ಎಂದರೆ ಅನ್ಯ ವರ್ಣಾಶ್ರಮೋಚಿತವಾದ ಧರ್ಮಕ್ಕಿಂತಲೂ ಅಂಗವೈಕಲ್ಯದಿಂದ ಯುಕ್ತವಾಗಿದ್ದರೂ ಸ್ವವರ್ಣಾಶ್ರಮೋಚಿತವಾದ ಧರ್ಮವು ಶ್ರೇಯಸ್ಕರವು. (ಸಾಂಗವಾಗಿ ಆಚರಿಸಲ್ಪಟ್ಟರೂ ಪರಧರ್ಮವು ನರಕಪ್ರದವು. ಅಂಗನ್ಯೂನತೆಯಿಂದ ಸಹಿತವಾಗಿದ್ದರೂ ಸ್ವಧರ್ಮವು ಶ್ರೇಯಸ್ಕರವು ಎಂದು ಭಾವವು. ಈ ಅರ್ಥವನ್ನೇ ಸ್ಪಷ್ಟವಾಗಿ ಶ್ರೀ ಕೃಷ್ಣನು ಹೇಳುತ್ತಾನೆ.) ಸ್ವಧರ್ಮಾನುಷ್ಠಾನದಲ್ಲಿ ಮರಣವನ್ನು ಹೊಂದಿದರೂ ಶ್ರೇಯಸ್ಕರವು; ಅನ್ಯ ವರ್ಣಾಶ್ರಮೋಚಿತ ಕರ್ಮಾನುಷ್ಠಾನವು ಭಯಂಕರವು. (ಎಂದರೆ ನರಕಪ್ರದವಾಗುವುದೆಂದು ಭಾವವು.)

ಈ ರೀತಿಯಾದ ಶ್ರೀ ಕೃಷ್ಣನ ವಾಕ್ಯಗಳಿಂದ ಸ್ವಧರ್ಮವು, ಪರಧರ್ಮವು ಎಂಬ ಎರಡು ಪ್ರಕಾರವಾದ ವ್ಯವಸ್ಥೆಯು ಇರುವುದೆಂದು ನಿಶ್ಚಿತವಾಗುವುದು. ಉಪನಯನಾದಿ ಸಂಸ್ಕಾರ ಮಾತ್ರದಿಂದ ಬ್ರಾಹ್ಮಣ್ಯವು ಬರುವುದಾಗಿದ್ದರೆ, ಮತ್ತು ಗಾಯತ್ರೀ ಜಪಾದಿಗಳನ್ನು ಮಾಡಿದವನು ಬ್ರಾಹ್ಮಣನು, ಯುದ್ಧಾದಿಗಳನ್ನು ಮಾಡಿದವನು ಕ್ಷತ್ರಿಯನು, ಕೃಷ್ಯಾದಿಗಳಲ್ಲಿ ಆಸಕ್ತನಾದವನು ವೈಶ್ಯನು, ಸೇವಾವೃತ್ತಿಯಲ್ಲಿ ರತನಾದವನು ಶೂದ್ರನು ಎಂಬ ವ್ಯವಸ್ಥೆಯೇ ವೇದಾದಿ ಶಾಸ್ತ್ರಸಮ್ಮತವಾಗಿದ್ದರೆ ಇದು **ಸ್ವಧರ್ಮವು,** ಇದು ಪರಧರ್ಮವು ಎಂಬ ಭೇದ ದೃಷ್ಟಿಗೇ ಅವಕಾಶವಿರಲಿಲ್ಲ ನಾಲ್ಕು ವಿಧವಾದ ಆಚರಣೆಗಳೂ ಧರ್ಮ ರೂಪವಾಗಿಯೇ ಇರುತ್ತಿದ್ದುವು. ಯಾರಿಗೆ ಯಾವ ಧರ್ಮದಲ್ಲಿ ಮನಃ ಪ್ರವೃತ್ತಿಯು ಅಧಿಕವೋ ಅಂಥವನು ಆ ಧರ್ಮಾನುಷ್ಠಾನವನ್ನು ಮಾಡಿ ಸುಖವನ್ನು ಹೊಂದಬಹುದಾಗಿತ್ತು. ಶ್ರೀ ಕೃಷ್ಣನಾದರೋ ಇಂಥ ಭ್ರಮೋತ್ಪತ್ತಿಗೆ ಅವಕಾಶ ಕೊಡದೆ ಚತುರ್ವರ್ಣಗಳೂ ತನ್ನಿಂದಲೇ ಸೃಷ್ಟಿಸಲ್ಪಟ್ಟು ಅನಾದಿ ಕಾಲದಿಂದ ಭಿನ್ನವಾಗಿರುವುದೆಂದು ಹೇಳಿ ನಾಲ್ಕು ವರ್ಣಗಳಿಗೂ ಭಿನ್ನ ಧರ್ಮಗಳು ವೇದವಿಹಿತವಾಗಿರುವುವೆಂದು ತಿಳಿಸಿ, ಇದು ಸ್ವಧರ್ಮವು, ಇದು ಪರಧರ್ಮವು ಎಂಬ ವ್ಯವಸ್ಥೆಯನ್ನು ಮಾಡಿ, ಸ್ವಧರ್ಮಾನುಷ್ಠಾನದಿಂದ ಪುರುಷಾರ್ಥ ಪ್ರಾಪ್ತಿಯನ್ನೂ ಪರಧರ್ಮಾಚರಣೆಯಿಂದ ಭಯಂಕರವಾದ ನರಕಾದಿ ಅನರ್ಥ ಫಲ ಪ್ರಾಪ್ತಿಯನ್ನೂ ನಿರೂಪಿಸಿರುತ್ತಾನೆ. ಆದುದರಿಂದ ಬ್ರಾಹ್ಮಣಾದಿ ವರ್ಣಗಳು ಕಲ್ಪಿತವೆಂದು ನೀವು ತಿಳಿಯಬಾರದು.

7. **ಪ್ರಶ್ನೆ:—** ಸ್ವಾಮೀ ! ಶೂದ್ರನು ಮೌಂಜೀ ಬಂಧನವನ್ನು ಮಾಡಿ

ಕೊಳ್ಳಬಾರದು, ಅಗ್ನಿಹೋತ್ರಾದಿಗಳನ್ನು ಮಾಡಬಾರದು ಎಂದು ವೇದದಲ್ಲಿ ಹೇಳಿರುವುದೇ ?

**ಉತ್ತರ:— ಶ್ರೀ ಶ್ರೀಗಳವರು:—** ಅನಂತ ವಾಕ್ಯಗಳಿರುತ್ತವೆ. "ನಾಗ್ನಿರ್ನ ಯಜ್ಞೋ ಶೂದ್ರಸ್ಯ" ಎಂಬ ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗಿರುತ್ತದೆ. ಮತ್ತು ಬ್ರಹ್ಮಸೂತ್ರದಲ್ಲಿ ಅಪಶೂದ್ರಾಧಿಕರಣದಲ್ಲಿ ಶೂದ್ರನು ವೇದಾಧಿಕಾರಿಯಲ್ಲವೆಂದು ಬಾದರಾಯಣರು ನಿಶ್ಚಯಿಸಿರುತ್ತಾರೆ. ಆದರೆ ನೀವು ಗೀತೆಯನ್ನು ಬಿಟ್ಟು ಯಾತಕ್ಕೆ ಪ್ರಶ್ನೆ ಮಾಡುತ್ತೀರಿ ? ಗೀತೆಯಲ್ಲಿ ಶ್ರೀ ಕೃಷ್ಣನು ಸ್ವಧರ್ಮದಲ್ಲಿ ಮರಣವನ್ನು ಹೊಂದಿದರೂ ಚಿಂತೆಯಿಲ್ಲ ಪರಧರ್ಮವನ್ನು ಆಚರಿಸುವುದು ಭಯಂಕರವು ಎಂದು ನಿರೂಪಿಸಿರುವುದರಿಂದಲೇ ನಾಲ್ಕು ವರ್ಣಗಳೂ ಭಿನ್ನ ಭಿನ್ನ ಧರ್ಮಗಳಿಂದ ಯುಕ್ತವಾಗಿರುವುವೆಂದು ನಿರ್ಣೀತವಾಗುವುದು.

ಈ ವಿಮರ್ಶೆಯಿಂದ ಮತ್ತೊಂದು ಶಂಕೆಯೂ ನಿರಸ್ತವಾಯಿತು. ಬುದ್ಧಿ ಪ್ರಾಗಲ್ಭ್ಯವನ್ನು ಹೊಂದಿದ ಶೂದ್ರವೈಶ್ಯಾದಿಗಳು ಧ್ಯಾನ ಪ್ರವಚನಾದಿ ಕಾರ್ಯದಲ್ಲಿ ಸಮರ್ಥರಾದರೆ ಬ್ರಾಹ್ಮಣ್ಯವನ್ನು ಯಾತಕ್ಕೆ ಹೊಂದಬಾರದು ಎಂಬ ಪೂರ್ವಪಕ್ಷವು ಕೆಲವು ಜನರುಗಳ ಮನಸ್ಸಿನಲ್ಲಿರುವುದು. ಇದೂ ಕೂಡ ಮೌಢ್ಯಮೂಲಕವಾದುದು. ಶೂದ್ರನು ಎಷ್ಟೇ ಬುದ್ಧಿವಂತನಾದರೂ ವೇದಾಧ್ಯಯನ, ವೇದಾರ್ಥ ವಿಚಾರದಲ್ಲಿ ಪ್ರವೇಶ ಮಾಡಿದರೆ ಆತನು ಶೂದ್ರನಿಗಿಂತಲೂ ನೀಚತೆಯನ್ನು ಹೊಂದಿ ಘೋರವಾದ ನರಕಗಳಿಗೆ ಬೀಳುವನು. ಯಾತಕ್ಕೆಂದರೆ ಅದು ಆತನಿಗೆ ಪರಧರ್ಮವು. ಹೀಗಿರುವಲ್ಲಿ ಶೂದ್ರನು ಬುದ್ಧಿ ಬಲದಿಂದ ಬ್ರಾಹ್ಮಣ್ಯವನ್ನು ಹೊಂದುವುದು ಹೇಗೆ ?

8. **ಪ್ರಶ್ನೆ:—** ಸ್ವಾಮೀ ! ಹಾಗಾದರೆ ಶೂದ್ರ ಚಂಡಾಲಾದಿ ಜನರಿಗೆ ಎಷ್ಟು ಬುದ್ಧಿಯಿದ್ದರೂ ವ್ಯರ್ಥವೋ ?

**ಉತ್ತರ :— ಶ್ರೀ ಶ್ರೀಗಳವರು :—** ನಿಮ್ಮ ಪ್ರಶ್ನೆಯು ಕೇವಲ ಭ್ರಾಂತಿಜನಿತವಾದುದು. ಹೀಗೆಯೇ ಅನೇಕರು ನಮ್ಮನ್ನು ಅಲ್ಲಿ ಅಲ್ಲಿ ಕೇಳುತ್ತಿರುತ್ತಾರೆ. ದೇಹಸ್ವಭಾವಭೇದದಿಂದ ಪ್ರಾಪ್ತವಾದ ಕರ್ಮವಿಭಾಗವನ್ನು ನಾವು ನಿರೂಪಣೆ ಮಾಡಿರುತ್ತೇವೆ. ಅಷ್ಟೇ ವಿನಾ ಚಂಡಾಲನೂ, ಶೂದ್ರನೂ ಮನಸ್ಸಿನಿಂದ ಪರಮಾತ್ಮನನ್ನು ಧ್ಯಾನ ಮಾಡಕೂಡದೆಂದು ಹೇಳಿದವರು ಯಾರು ? ಪರಬ್ರಹ್ಮನಾದ ಶ್ರೀ ಕೃಷ್ಣನ ಗುಣಗಣಗಳ ಧ್ಯಾನವನ್ನು ಸರ್ವ ವರ್ಣದವರೂ ಅವಶ್ಯವಾಗಿ ಸರ್ವದಾ ಮಾಡಬೇಕು. ಬ್ರಹ್ಮದೇವರ ಮನಸ್ಸೂ ಕೂಡ ಈ ಕಾರ್ಯದಲ್ಲಿ ಪರ್ಯಾಪ್ತವಾದ ಸಾಮರ್ಥ್ಯೋಪೇತವಾಗಿಲ್ಲವೆಂಬಲ್ಲಿ ಶೂದ್ರ ಚಂಡಾಲಾದಿಗಳಿಗೆ ಎಷ್ಟು ಊರ್ಜಿತವಾದ ಬುದ್ಧಿಯು ಇದ್ದರೂ ವ್ಯರ್ಥವಾಗಲಾರದೆಂದು ಹೇಳಬೇಕಾದುದೇನು ? ಶೂದ್ರಾದಿಗಳು, ಬ್ರಾಹ್ಮಣಾದಿ ಉತ್ತಮ ವರ್ಣಸ್ಥ ಹರಿಭಕ್ತರಿಂದ ಪರಮಾತ್ಮನ ಸ್ವರೂಪವನ್ನು ಉಕ್ತ ರೀತಿಯಲ್ಲಿ ಹೊಂದಿ ಸಂತತ ಭಗವದ್ಧ್ಯಾನದಲ್ಲಿ ಆಸಕ್ತರಾಗಿ ತಮ್ಮ ಯಾವತ್ತೂ ಬುದ್ಧಿ ಬಲವನ್ನೂ ಸಾರ್ಥಕಪಡಿಸಿಕೊಳ್ಳಬೇಕು. ಇದೇ ಶಾಸ್ತ್ರಾರ್ಥವು.

9. **ಪ್ರಶ್ನೆ :—** ಈ ಪ್ರಕಾರವಾಗಿ ಶೂದ್ರನು ಬ್ರಹ್ಮಜ್ಞಾನವನ್ನು ಹೊಂದಿದ ಮೇಲಾದರೂ ಅವನು ಬ್ರಾಹ್ಮಣನಾಗಲಾರನೇ ?

**ಉತ್ತರ :— ಶ್ರೀ ಶ್ರೀಗಳವರು :—** ಇದು ಆಶ್ಚರ್ಯವು. ಬ್ರಾಹ್ಮಣಾದಿ ನಾಲ್ಕು ವರ್ಣಗಳು ಭಿನ್ನವಾದ ಪರಮಾತ್ಮನಿಂದ ಸೃಷ್ಟವಾದ ಜಾತಿಗಳೆಂದು ನಾವು ಮೊದಲೇ ನಿರೂಪಿಸಿರುತ್ತೇವೆ. ಹೀಗಿರುವಾಗ ಶೂದ್ರನು ಬ್ರಹ್ಮಜ್ಞಾನವನ್ನು ಹೊಂದಿದ ಮೇಲೆ ಹೇಗೆ ತಾನೇ ಬ್ರಾಹ್ಮಣನಾಗುವನು ? ಶೂದ್ರನು ಜ್ಞಾನಿಯಾದರೆ ಅವನ ಶೂದ್ರ ದೇಹವು ಹೋಗುವುದೇ ? ಶೂದ್ರನು ಜ್ಞಾನಿಯಾದ ನಂತರವೂ ಶೂದ್ರ ಯೋನಿಯಿಂದ ಉತ್ಪನ್ನವಾದ ದೇಹವು ಆತನಿಗೆ ಇರುವವರೆವಿಗೂ ಶೂದ್ರ ವರ್ಣಕ್ಕೆ ವಿಹಿತವಾದ ಕರ್ಮಗಳನ್ನೇ ಆಚರಿಸುತ್ತಿರಬೇಕು.

**ವಿದ್ಯಾರ್ಥಿಗಳು :— ಪ್ರಶ್ನೆ :—** ಸ್ವಾಮೀ ! ಹಾಗಾದರೆ ಬ್ರಹ್ಮಜ್ಞಾನಿಯಾದ ಶೂದ್ರನಿಗಿಂತಲೂ ಪತಿತನಾದ ಮೂರ್ಖ ಬ್ರಾಹ್ಮಣನು ಅಧಿಕನು ಎಂದು ಪ್ರಾಪ್ತವಾಯಿತು. ಇದೀಗ ಬಹಳ ಚೆನ್ನಾಯಿತು !

**ಉತ್ತರ :— ಶ್ರೀ ಶ್ರೀಗಳವರು —** ನಾವು ಹಾಗೆ ಹೇಳಲಿಲ್ಲ. ಜ್ಞಾನಿಯಾದ ಶೂದ್ರನ ದೇಹಕ್ಕಿಂತ ಮೂಢನಾದರೂ ಬ್ರಾಹ್ಮಣ **ದೇಹವು** ಶ್ರೇಷ್ಠವು; ತತ್ಪ್ರಯುಕ್ತವಾಗಿ ಬ್ರಾಹ್ಮಣನು ಹೆಚ್ಚು ವೈದಿಕ ಕರ್ಮಗಳಲ್ಲಿ ಅಧಿಕಾರವುಳ್ಳವನಾಗಿರುವನೆಂದು ನಾವು ನಿರೂಪಿಸಿದೆವು. ಆದರೆ ಜ್ಞಾನ ವಿಚಾರದಲ್ಲಿ ಜ್ಞಾನಿಯಾದ ಶೂದ್ರನು ಹೆಚ್ಚು ಪುಣ್ಯವಂತನು, ಮೂಢನಾದ ಬ್ರಾಹ್ಮಣನು ಪಾಪಿಯು. ಶೂದ್ರನು ಸ್ವರ್ಗಾದಿ ಉತ್ತಮ ಲೋಕಗಳನ್ನು ಹೊಂದುವನು. ಪಾಪಿಯಾದ ಬ್ರಾಹ್ಮಣನು ಅಧೋಗತಿಯನ್ನೇ ಹೊಂದುವನು. ಶೂದ್ರನೂ ಜ್ಞಾನವನ್ನು ಹೊಂದಿ ಉತ್ತಮ ಗತಿಯನ್ನು ಹೊಂದುವುದರಲ್ಲಿ ಸಂಶಯವಿಲ್ಲವೆಂದು ಶ್ರೀ ಕೃಷ್ಣನು ಹೇಳುತ್ತಾನೆ :—

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರೀಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಂ ॥**
—(9. 32.)

“ಎಲೈ ಕೌಂತೇಯನೇ ! ನನ್ನಲ್ಲಿ ಭಕ್ತಿಯುಳ್ಳವರಾಗಿ ಶರಣಾಗತರಾದರೆ ಪಾಪ ನಿಮಿತ್ತಕವಾದ ನೀಚ ಯೋನಿಗಳಲ್ಲಿ ಜನ್ಮವನ್ನು ಹೊಂದಿದ ಸ್ತ್ರೀಯರೂ, * ವೈಶ್ಯರೂ, ಶೂದ್ರರೂ ಕೂಡ ಉತ್ತಮ ಗತಿಯನ್ನು ಹೊಂದುತ್ತಾರೆ.”

ಇದರಿಂದ ಇಷ್ಟು ವಿಷಯವು ಸಿದ್ಧವಾಗುವುದು. ಒಬ್ಬೊಬ್ಬ ಜೀವನೂ ಅನೇಕ ಕರ್ಮಶೇಷಗಳಿಂದ ಸಹಿತನಾಗಿ ಭೂಲೋಕದಲ್ಲಿ ಹುಟ್ಟುತ್ತಾನೆ. ಅವು

* ಇಲ್ಲಿ ಸ್ತ್ರೀಯರೆಂದರೆ ನಾಟಕಾದಿಗಳಲ್ಲಿ ಸ್ತ್ರೀ ವೇಶವನ್ನು ಧರಿಸೋಣವೇ ಮೊದಲಾದ ಪಾಪ ಪ್ರಯುಕ್ತವಾಗಿ ಜನ್ಮಾಂತರದಲ್ಲಿ ಸ್ತ್ರೀ ದೇಹವನ್ನು ಹೊಂದಿದ ಪುರುಷ ಜೀವರುಗಳೆಂದು ಅರ್ಥವನ್ನು ತಿಳಿದುಕೊಳ್ಳಬೇಕು. ಸ್ವರೂಪತಃ ಸ್ತ್ರೀ ಜೀವರಿಗೆ ಸ್ತ್ರೀ ದೇಹಪ್ರಾಪ್ತಿಯು ಪಾಪಮೂಲಕವಲ್ಲ.

ಗಳಲ್ಲಿ ಕೆಲವು ಕರ್ಮಗಳು ಹುಟ್ಟುವ ಯೋನಿಗೆ ನಿಮಿತ್ತವಾಗುವುವು. ಶರೀರ ಬಲಾದಿಗಳಿಗೆ ಕಾರಣವಾದುವುಗಳು ಕೆಲವು ಕರ್ಮಗಳು; ಜ್ಞಾನಾಜ್ಞಾನಾದಿಗಳಿಗೆ ಕಾರಣವಾದುವುಗಳು ಕೆಲವು ಕರ್ಮಗಳು. ಸಂಪತ್ತು, ದಾರಿದ್ರ್ಯಾದಿಗಳಿಗೆ ಕೆಲವು ಕರ್ಮಗಳು ನಿಮಿತ್ತಗಳು ಅದರಲ್ಲಿ ಯೋನಿಗೆ ಕಾರಣವಾಗತಕ್ಕ ಕರ್ಮವು ಆಜನ್ಮನಾಶಪರ್ಯಂತವೂ ಭೋಕ್ತವ್ಯವಾಗಿರುವುದು. ಪಾಪದಿಂದ ಸ್ತ್ರೀ ಯೋನಿಯು ಪ್ರಾಪ್ತವಾದರೆ ಆಜನ್ಮನಾಶಪರ್ಯಂತವೂ ಸ್ತ್ರೀತ್ವವು ಭೋಕ್ತವ್ಯವು. ಶೂದ್ರ ಯೋನಿಯಲ್ಲಿ ಹುಟ್ಟಿದರೆ ಸಾಯುವವರೆವಿಗೂ ಶೂದ್ರನಾಗಿರಬೇಕು. ಅಂಥ ದೇಹೋತ್ಪತ್ತಿಗೆ ಪೂರ್ವಕೃತ ಪಾಪವು ಕಾರಣವು.

ಹೀಗಿದ್ದರೂ ಸಹ, ಶೂದ್ರ ಚಂಡಾಲಾದಿ ನೀಚ ಯೋನಿಗಳಲ್ಲಿ ಉತ್ಪತ್ತಿಗೆ ಕಾರಣವಾದ ಪಾಪವನ್ನು ಮಾಡಿದವನಾದರೂ ಅದೇ ಪುರುಷನು ಬ್ರಹ್ಮಜ್ಞಾನ ಪ್ರಾಪ್ತಿಗೆ ಕಾರಣವಾಗುವಂಥ ಮಹತ್ಪುಣ್ಯವನ್ನು ಪೂರ್ವ ಜನ್ಮದಲ್ಲಿ ಆಚರಿಸಿರ ಬಹುದು, ಮಹಾ ಸಂಪತ್ತಿಗೆ ಕಾರಣವಾಗುವ ಪುಣ್ಯವನ್ನೂ ಆಚರಿಸಿರಬಹುದು. ಅಂಥ ಪುಣ್ಯ ಬಲದಿಂದ ಶೂದ್ರನೂ, ಚಂಡಾಲನೂ ಕೂಡ ಬ್ರಹ್ಮಜ್ಞಾನವನ್ನು ಹೊಂದಬಹುದು. ಹಾಗಾದರೂ ಯೋನಿಗೆ ಕಾರಣವಾಗಿರುವ ಪಾಪವು ಪ್ರಾಯಶ್ಚಿತ್ತ ರೂಪವಾಗಿ ಮರಣಾವಧಿ ಇದ್ದೇ ಇರುವುದರಿಂದ ಜ್ಞಾನಿಯಾದ ಶೂದ್ರನೂ, ಚಂಡಾಲಾದಿಗಳೂ ಉತ್ತಮ ವರ್ಣದಲ್ಲಿ ಸವ್ಯವಹಾರವನ್ನು ಮಾಡಿ ಪರಧರ್ಮಾನುಷ್ಠಾನ ರೂಪವಾದ ಭಯಂಕರ ಪಾಪವನ್ನು ಮಾಡಲಾರರು. ಮತ್ತು ಮರಣಾನಂತರದಲ್ಲಿ ಜ್ಞಾನಿಯಾದ ಬ್ರಾಹ್ಮಣನು ಹೇಗೆ ಉತ್ತಮ ಗತಿಯನ್ನು ಹೊಂದುವನೋ ಹಾಗೆಯೇ ಉತ್ತಮ ಗತಿಯನ್ನೇ ಶೂದ್ರಾದಿಗಳೂ ಹೊಂದುವುದರಲ್ಲಿ ಸಂಶಯವಿಲ್ಲ.

**ಪ್ರಶ್ನೆ :—** ಸ್ವಾಮೀ ! ಇಹಲೋಕದಲ್ಲಿ ಜ್ಞಾನಿಯಾದರೂ ಸಹ ಯಾವ ಶೂದ್ರನೂ, ಚಂಡಾಲನೂ ವ್ಯವಹಾರ ಯೋಗ್ಯನಲ್ಲದಿದ್ದ ಮೇಲೆ ಸತ್ತ ಮೇಲೆ ಸಮಾನವಾದ ಉರ್ಧ್ವ ಲೋಕಪ್ರಾಪ್ತಿಯಾಗುವುದೆಂದು ಹೇಳುವುದು ಹೇಗೆ ?

**ಉತ್ತರ :— ಶ್ರೀ ಶ್ರೀಗಳವರು :—** ಇದರಲ್ಲಿ ಏನು ಆಶ್ಚರ್ಯವು ? ಪೋಲೀಸು ಇಲಾಖಾ ಅಧ್ಯಕ್ಷನಿಗೂ 2000 ರೂಪಾಯಿ ವೇತನವು; ಚೀಫ್ ಕೋರ್ಟಿನ ನ್ಯಾಯಾಧಿಪತಿಗೂ 2000 ರೂಪಾಯಿಗಳು. ಮಹಾರಾಜನ ದರ್ಬಾರಿನಲ್ಲಿ ಇಬ್ಬರಿಗೂ ಸಮಾನವಾದ ಮರ್ಯಾದೆಯಾಗುವುದು. ಆದರೆ ಒಬ್ಬರ ವೇಷವನ್ನು ಒಬ್ಬರು ಧರಿಸಕೂಡದು, ಒಬ್ಬರ ಕರ್ಮವನ್ನು ಒಬ್ಬರು ಮಾಡಕೂಡದೆಂಬ ಸರ್ಕಾರದ ನಿರ್ಬಂಧನೆಯುಂಟು. ಹೀಗೆಯೇ ಪೋಲೀಸು ವೇಷಕ್ಕೂ, ಗೌನ್ ಧಾರಣೆಯೇ ಮುಂತಾದ ಜಡ್ಜಿಯ ವೇಷಕ್ಕೂ ಭೇದವು ಇರುವಂತೆ ಶೂದ್ರ ವರ್ಣಕ್ಕೂ, ಬ್ರಾಹ್ಮಣ ವರ್ಣಕ್ಕೂ ವ್ಯತ್ಯಾಸವಿರುವುದು. ಇಲಾಖಾ ಭೇದಪ್ರಯುಕ್ತವಾಗಿಯೂ ಪೋಲೀಸು ಅಧಿಕಾರಿಗೂ, ನ್ಯಾಯಸ್ಥಾನದ ಅಧಿಕಾರಿಗೂ ಕರ್ಮಭೇದವುಂಟು. ಹಾಗೆಯೇ ವರ್ಣಭೇದ ಪ್ರಯುಕ್ತವಾಗಿ ಬ್ರಾಹ್ಮಣನಿಗೂ, ಶೂದ್ರನಿಗೂ ಭಿನ್ನ ಭಿನ್ನ

ವಾದ ಧರ್ಮಗಳು ವಿಹಿತವಾಗಿರುವುವು. ರಾಜಸ್ಥಾನದಲ್ಲಿ ಪ್ರಾಪ್ತವಾದಾಗ ನ್ಯಾಯಾಧಿಪತಿಗೂ, ಸೇನಾಧಿಕಾರಿಗೂ ಇಬ್ಬರಿಗೂ ಅವರ ಯೋಗ್ಯತೆಗನುಗುಣ ವಾಗಿ ಉತ್ತಮ ಮರ್ಯಾದೆಯೇ ಮಾಡಲ್ಪಡುವುದು. ಹೀಗೆಯೇ ಶೂದ್ರಾದಿಗಳೂ, ಬ್ರಾಹ್ಮಣರೂ ಸ್ವವಿಹಿತ ಕರ್ಮಗಳನ್ನು ಮಾಡಿಕೊಂಡು ಬ್ರಹ್ಮಧ್ಯಾನದಲ್ಲಿ ಆಸಕ್ತ ರಾದರೆ, ರಾಜಸ್ಥಾನದಂತಿರುವ ನಾರಾಯಣನ ಲೋಕಗಳಲ್ಲಿ ಅವರವರ ಬ್ರಹ್ಮ ಜ್ಞಾನದಿಂದಲೂ, ಸ್ವಧರ್ಮ ಆಚರಣೆಯಿಂದಲೂ ಆರ್ಜಿತವಾದ ಪುಣ್ಯಕ್ಕೆ ಅನು ಗುಣವಾಗಿ ಉತ್ತಮ ಫಲವೇ ದೊರಕುವುದು, ಆದರೆ ಇಷ್ಟು ಮಾತ್ರ ವ್ಯತ್ಯಾಸವು ಇರುವುದು. ಸರ್ಕಾರದಲ್ಲಿ ಒಬ್ಬ ಇಲಾಖೆಯವನನ್ನು ಮತ್ತೊಂದು ಇಲಾಖೆಯ ಕರ್ಮದಲ್ಲಿ ಶೀಘ್ರವಾಗಿ ನಿಯೋಗಿಸುವರು. ಶ್ರೀ ಕೃಷ್ಣನ ಸರ್ಕಾರದಲ್ಲಿಯಾದರೋ ಶೂದ್ರನಿಗೆ ಬ್ರಾಹ್ಮಣಾದಿ ವರ್ಣವಿಹಿತವಾದ ಕರ್ಮದಲ್ಲಿ ಜನ್ಮಾಂತರದಲ್ಲಿ ಅಧಿ ಕಾರವು ಬರಬಹುದೇ ಹೊರತು ಅದೇ ಜನ್ಮದಲ್ಲಿ ಆಗಲಾರದು.

10. **ಪ್ರಶ್ನೆ :—** ಸ್ವಾಮೀ ! ಶೂದ್ರನಿಗೂ, ಚಂಡಾಲನಿಗೂ ಸಹ ಬ್ರಹ್ಮ ಧ್ಯಾನವು, ಉತ್ತಮ ಗತಿ ಪ್ರಾಪ್ತಿಯೂ ಬ್ರಾಹ್ಮಣಾದಿ ವರ್ಣಗಳಿಗೆ ದೊರೆಯುವಂತೆ ದೊರೆಯುವುದಾದರೆ ಬ್ರಾಹ್ಮಣರಾಗಿ ಹುಟ್ಟುವುದರಿಂದ ಬರುವ ಪ್ರಾಶಸ್ತ್ಯವೇನು ? ಶೂದ್ರ ಜನ್ಮವೇನೂ ಅಷ್ಟು ಶೋಕಾರ್ಹವಲ್ಲವೆಂದು ನಮಗೆ ತೋರುತ್ತದೆ.

**ಉತ್ತರ :— ಶ್ರೀ ಶ್ರೀಗಳವರು :—** ಅತಿ ಶೋಕಾರ್ಹವೆಂದು ಹೇಳಿ ದವರು ಯಾರು ? ಶೂದ್ರರು ಅಯೋಗ್ಯರು, ನರಕಕ್ಕೆ ಪಾತ್ರರು ಎಂದು ಯಾವ ಶಾಸ್ತ್ರದಲ್ಲಿ ನಿರೂಪಿಸಲ್ಪಟ್ಟಿದೆ ? ಮುಖ್ಯ ಶಾಸ್ತ್ರಾರ್ಥವನ್ನು ಕೇಳಿರಿ. ಯಾವ ಯೋನಿಯಲ್ಲಿ ಹುಟ್ಟಿದರೆ ತಾನೇ ಏನು ? ಯಾವ ಪಾಪದಿಂದ ದಾರಿದ್ರ್ಯಾದಿಗಳು ಬಂದರೆ ತಾನೇ ಏನು ? ಸ್ವವರ್ಣಾಶ್ರಮೋಚಿತವಾದ ಕರ್ಮವನ್ನು ಆಚರಿಸಿ ಕೊಂಡು, ಸಂಪನ್ನರಾದ ವಿಷ್ಣು ಭಕ್ತರ ಸದುಪದೇಶಾನುಸಾರವಾಗಿ ಪರಮಾತ್ಮನಾದ ಶ್ರೀ ಕೃಷ್ಣನನ್ನು ಧ್ಯಾನ ಮಾಡಿದವನು ಮರಣಾನಂತರ ಉತ್ತಮ ಗತಿಯನ್ನು ಹೊಂದುವನು. ಭೋಜನ, ಸ್ಪರ್ಶ, ವಿವಾಹಾದಿಗಳು ದೇಹನಿಬಂಧನವಾದುವು ಗಳು. ಅವುಗಳನ್ನು ವಿಧ್ಯುಕ್ತರಾಗಿ ಆಚರಿಸದಿದ್ದರೆ ವರ್ಣಸಾಂಕರ್ಯವು ಪ್ರಾಪ್ತ ವಾಗಿ ಸರ್ವರೂ ನರಕಕ್ಕೆ ಬೀಳುವರು. ಆದುದರಿಂದ ಸ್ವದೇಹಾನುಬಂಧದಿಂದ ಪ್ರಾಪ್ತವಾದ ವಿಹಿತ ಕರ್ಮಗಳನ್ನು ಅನುಷ್ಠಾನ ಮಾಡುತ್ತಾ ಪರಮಾತ್ಮನನ್ನು ಸೇವಿಸಬೇಕು. ಗಜೇಂದ್ರನು ಪಶುವಾದರೂ ಉತ್ತಮ ಲೋಕವನ್ನು ಹೊಂದಿದನು. ಭರತರಾಜನು ಹರಿಣನಾಗಿ ಹುಟ್ಟಿದರೂ ಪರಬ್ರಹ್ಮನನ್ನು ಉಪಾಸನೆ ಮಾಡಿ ಜನ್ಮಾಂತರದಲ್ಲಿ ಮುಕ್ತನಾದನು. ಪ್ರಹ್ಲಾದನು ನೀಚವಾದ ದೈತ್ಯ ಕುಲದಲ್ಲಿ ಹುಟ್ಟಿದರೂ ದೇವರ್ಷಿಗಳಿಂದ ಸ್ತುತ್ಯವಾದ ಕೀರ್ತಿಯುಳ್ಳವನಾದನು. ಚಕ್ರಿಕ, ಶಬರಿ ಪ್ರಭೃತಿಗಳು ಶೂದ್ರರಾದರೂ ಊರ್ಧ್ವ ಲೋಕವನ್ನು ಹೊಂದಿದರು. ನಂದ ಗೋಪಾದಿ ಗೋಕುಲದ ವಿಷ್ಣು ಭಕ್ತರೆಲ್ಲರೂ ವೈಶ್ಯರು, ಗೋಪಿಕಾ ಸ್ತ್ರೀಯರು, ಅಬಲೆಯರು. ಹೀಗಿದ್ದರೂ ಅವರ ಕೀರ್ತಿಯು ಪವಿತ್ರತಮವಾಗಿರುವುದು. ವರ್ಣ

ವಿವೇಕವು ಅನಾದಿ ನಿತ್ಯವಾಗಿರುವುದರಿಂದಲೇ ಶೂದ್ರ, ವೈಶ್ಯಾದಿಗಳೆಲ್ಲರೂ ಜ್ಞಾನಿಗಳಾದರೂ ಉತ್ತಮ ವರ್ಣಸ್ಥರಾದ ಬ್ರಾಹ್ಮಣರಲ್ಲಿ ವ್ಯವಹಾರವನ್ನು ಬೆಳಸಿ, ಪರಧರ್ಮವನ್ನು ಆಚರಿಸಿ ವರ್ಣಸಾಂಕರ್ಯವನ್ನು ತರಲಿಲ್ಲ. ಕರ್ಮಮಾರ್ಗಕ್ಕೂ, ಜ್ಞಾನಮಾರ್ಗಕ್ಕೂ ಈ ರೀತಿಯಾಗಿರುವ ವ್ಯತ್ಯಾಸವನ್ನು ತಿಳಿದುಕೊಂಡರೆ ಭರತಖಂಡದಲ್ಲಿರುವ ಬ್ರಾಹ್ಮಣರಿಗೂ, ಅಬ್ರಾಹ್ಮಣರಿಗೂ ಯಾವ ವಿಧವಾದ ಮನೋವೈಷಮ್ಯವು ಉತ್ಪತ್ತಿಯಾಗುವುದಕ್ಕೂ ಕಾರಣವಿಲ್ಲ.

ಹೀಗಿದ್ದರೂ ಬ್ರಾಹ್ಮಣ ಯೋನಿಯಲ್ಲಿ ಜನನದಿಂದ ಜ್ಞಾನಯೋಗ್ಯನಾದ ಪುಣ್ಯವಂತನಿಗೆ ಒಂದು ಅನುಕೂಲವು ಉಂಟು. ಜ್ಞಾನ ಸಂಪಾದನೆಗೆ ಬ್ರಾಹ್ಮಣ ಜನ್ಮದಲ್ಲಿ ಹೆಚ್ಚು ಅವಕಾಶವಿರುವುದು. ಬುದ್ಧಿವಂತನಾದವನಿಗೆ ರೇಲ್ವೆ ಇಲಾಖೆಯಲ್ಲಿ ಕೆಲಸವು ದೊರಕಿದರೆ ಬಹಳ ದುಃಖವಾಗುವುದು. ಪುಸ್ತಕ ಭಂಡಾರದಲ್ಲಿ ಅದೇ ಕೆಲಸವು ದೊರಕಿದರೆ ಆನಂದವುಂಟಾಗುವುದು. ಹೀಗೆಯೇ ಬ್ರಾಹ್ಮಣ ಜನ್ಮದಲ್ಲಿ ವೇದಾರ್ಥ ವಿಚಾರ, ಮತ್ತು ಸಾಕ್ಷಾತ್ ವೇದಾಂತೋಪದೇಶಾದಿಗಳಿಗೆ ಅಧಿಕಾರವು ಇರುವುದರಿಂದ ಮುಮುಕ್ಷುವು ಉತ್ತಮವಾದ ಬ್ರಾಹ್ಮಣ ಜನ್ಮವನ್ನು ಕೋರುವನು. ಬ್ರಾಹ್ಮಣ ದೇಹದಲ್ಲಿ ಭಗವತ್ಸನ್ನಿಧಾನವು ಅಧಿಕವಾಗಿರುವುದರಿಂದ ಶೀಘ್ರದಲ್ಲಿ ಜ್ಞಾನಸಿದ್ಧಿಯು ಪ್ರಾಪ್ತವಾಗುವುದು. ಈ ಅಭಿಪ್ರಾಯವೂ ಕೂಡ ಶ್ರೀ ಕೃಷ್ಣನಿಂದಲೇ ನಿರೂಪಿತವಾಗಿದೆ :—

**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ||**
—(9. 33.)

ಎಲೈ ಕುಂತೀನಂದನನೆ ! ( ಪಾಪ ಯೋನಿಗಳಲ್ಲಿ ಹುಟ್ಟಿದ ಶೂದ್ರಾದಿಗಳೂ ಕೂಡ ನನ್ನಲ್ಲಿ ಭಕ್ತಿ ಮಾಡಿ ಉತ್ತಮ ಗತಿಯನ್ನು ಹೊಂದುವರು. ಹೀಗಿರುವಲ್ಲಿ) ಪುಣ್ಯ ನಿಮಿತ್ತಕವಾದ ದೇಹವನ್ನು ಹೊಂದಿದ ಬ್ರಾಹ್ಮಣರೂ, ರಾಜರ್ಷಿಗಳೂ ನನ್ನ ಭಕ್ತರಾಗಿ ಉತ್ತಮ ಗತಿಯನ್ನು ಹೊಂದುವರೆಂದು ಹೇಳಬೇಕಾದುದೇನು ?

**11. ಪ್ರಶ್ನೆ :—** ಸ್ವಾಮೀ ! ಹಾಗಾದರೆ ಈಗ ಭರತಖಂಡದಲ್ಲಿ ಐಕಮತ್ಯವು ಬರಬೇಕಾದರೆ ಸ್ವವರ್ಣಾಶ್ರಮೋಚಿತವಾದ ಧರ್ಮಗಳಲ್ಲಿ ಚತುರ್ವರ್ಣದವರೂ ಆಸಕ್ತರಾಗಿ, ಎಲ್ಲರೂ ಪರಮಾತ್ಮನ ಉಪಾಸನೆಯಲ್ಲಿ ರತರಾಗಬೇಕು ಎಂದು ಪ್ರಾಪ್ತವಾಯಿತು.

**ಉತ್ತರ :— ಶ್ರೀ ಶ್ರೀಗಳವರು :—** ಹಾಗೆಯೇ ಸರಿ ! ಇವುಗಳನ್ನೆಲ್ಲಾ ನೀವೇ ವಿಮರ್ಶೆಯಿಂದ ನಿರ್ಣಯಿಸಿಕೊಳ್ಳಬಹುದು. ನಾವು ಇದ್ದ ಶಾಸ್ತ್ರಾರ್ಥವನ್ನೂ ಶ್ರೀ ಕೃಷ್ಣನ ತತ್ವವನ್ನೂ ನಿರೂಪಿಸಿರುತ್ತೇವೆ.

**12. ಪ್ರಶ್ನೆ :—** ಸ್ವಾಮೀ ! ಚಾತುರ್ವರ್ಣ್ಯವು ಅನಾದಿ ಕಾಲದಿಂದಲೂ ಇದ್ದಿತೆಂದು ಸಿದ್ಧವಾಗುವುದು. ಚಂಡಾಲರನ್ನು ದೇವರು ಸೃಷ್ಟಿ ಮಾಡಿದನೆ ? ಅದು ಮನುಷ್ಯ ಕಲ್ಪನೆಯು ಯಾತಕ್ಕೆ ಆಗಬಾರದು ?

**ಉತ್ತರ :— ಶ್ರೀ ಶ್ರೀಗಳವರು :—** ಬ್ರಾಹ್ಮಣ ಸ್ತ್ರೀಯಲ್ಲಿ ಶೂದ್ರ ಪುರುಷನಿಂದ ಉತ್ಪನ್ನನಾದ ಪುತ್ರನು ಚಂಡಾಲನೆನ್ನಿಸುವನು. ಆತನ ದೇಹವು ಅಸ್ಪೃಶ್ಯವೆಂದು ಶಾಸ್ತ್ರದಿಂದ ನಿಶ್ಚಿತವಾಗಿರುವುದು. ನಾವು ಪೂರ್ವದಲ್ಲಿಯೇ ನಿರೂಪಿಸಿರುತ್ತೇವೆ. ಚಂಡಾಲನಿಗೆ ಸ್ವದೇಹವು ಪಾಪದಿಂದ ಉತ್ಪನ್ನವಾಗಿದ್ದರೂ ಆತನೂ ಪುಣ್ಯವಂತನಾಗಿದ್ದರೆ, ಸ್ವವಿಹಿತ ಕರ್ಮವನ್ನು ಮಾಡಿಕೊಂಡು ಉತ್ತಮ ವರ್ಣದವರನ್ನು ಸ್ಪರ್ಶ ಮಾಡಿ ತಾನೂ ಪರಧರ್ಮದಿಂದ ಅನರ್ಥಗಳನ್ನು ಹೊಂದಿ ಅವರನ್ನು ಕೆಡಿಸದೆ ಇದ್ದರೆ ಪುಣ್ಯ ಲೋಕಗಳನ್ನೇ ಹೊಂದುವನು ಮತ್ತು ಅವನಿಗೆ ಏಕಾದಶೀ ಉಪವಾಸಕ್ಕೆ ಮತ್ತು ಪರಮಾತ್ಮನ ಸಂತತ ನಾಮಧ್ಯಾನಕ್ಕೆ ಅಧಿಕಾರವುಂಟು.

ಚಂಡಾಲರು ಪೂರ್ವದಲ್ಲಿರಲಿಲ್ಲ, ನೂತನವಾಗಿ ದುರುಳರಾದ ಮನುಷ್ಯರು ಅವರನ್ನು ಕಲ್ಪಿಸಿದರು ಎಂದು ತಿಳಿಯಕೂಡದು. ಶ್ರೀ ಕೃಷ್ಣನೇ " **ಶುನಿ ಚೈವ ಶ್ವಪಾಕೇ ಚ** " ಎಂಬ ಶ್ಲೋಕ ಭಾಗದಲ್ಲಿ ಶ್ವಪಾಕ ಶಬ್ದದಿಂದ ಚಂಡಾಲರ ನಾಮವನ್ನು ನಿರ್ದೇಶ ಮಾಡಿರುವನು. ಇದರಿಂದಲೂ ಕೂಡ ಪೂರ್ವದಿಂದಲೂ ಚಂಡಾಲರು ಇದ್ದರೆಂದು ತಿಳಿದು ಬರುವುದು.

" **ಚಂಡಾಲಾಯ ಉಚ್ಛಿಷ್ಟಂ ಪ್ರಯಚ್ಛೇತ್** " ಎಂಬ ಶ್ರುತಿಯ ವಾಕ್ಯದಿಂದಲೂ ಚಂಡಾಲರು ಅನಾದಿ ಕಾಲದಿಂದಲೂ ಇದ್ದರೆಂದು ತಿಳಿದು ಬರುವುದು. ಚಂಡಾಲರಿಗೆ ವಿಹಿತವಾದ ಧರ್ಮಗಳನ್ನು ಮನ್ವಾದಿ ಸ್ಮೃತಿಗಳಿಂದ ತಿಳಿಯಬೇಕು. ಶ್ರೀ ಕೃಷ್ಣನು ಅವರಿಗೂ ಮತ್ತು ಸಕಲರಿಗೂ ಸ್ವಹಿತ ಕರ್ಮಾಚರಣೆಯಿಂದ ಸಹಿತವಾದ ಭಗವದ್ಭಕ್ತಿಯಿಂದ ಸದ್ಗತಿಯುಂಟೆಂದು ನಿರೂಪಿಸಿರುತ್ತಾನೆ; ಮತ್ತು ಪರಧರ್ಮಾನುಷ್ಠಾನವು ದುರ್ಗತಿಗೆ ಕಾರಣವಾದ ಕುಪಥವೆಂದೂ ನಿರೂಪಿಸಿರುತ್ತಾನೆ.



# 23. ಇಪ್ಪತ್ತಮೂರನೆಯ ಅಂಶವು.

## ಕರ್ಮಾನುಷ್ಠಾನವು ( ಮುಂದುವರಿಸಿದ್ದು. )

### ಧರ್ಮ ಪರಿವರ್ತನೆಯು ಉಂಟೇ ?— ಶಾಶ್ವತ ಧರ್ಮ ಸದ್ಭಾವವು.

1. **ಪ್ರಶ್ನೆ :**— ಸ್ವಾಮೀ ! ತಾವು ಹೇಳಿದುದೆಲ್ಲಾ ಯುಕ್ತಿಯುಕ್ತವಾಗಿಯೇ ಇರುವುದು. ಇದೇ ಶ್ರೀಕೃಷ್ಣನ ಅಭಿಪ್ರಾಯವೆಂದು ನಮ್ಮ ಮನಸ್ಸಿನಲ್ಲಿ ದೃಢ ನಿಶ್ಚಯವು ಏರ್ಪಟ್ಟಿತು. ಆದರೆ ನಾವು ಒಂದು ಪ್ರಶ್ನೆಯನ್ನು ಕೇಳುತ್ತೇವೆ. ತಾವು ಸಾವಧಾನವಾಗಿ ಉತ್ತರವನ್ನು ದಯಪಾಲಿಸಬೇಕು.

**ಉತ್ತರ :— ಶ್ರೀ ಶ್ರೀಗಳವರು :**— ಕೇಳಿರಿ. ವಿದ್ಯಾರ್ಥಿಗಳ ಬುಭುತ್ಸೆಯನ್ನು ಪೂರ್ಣ ಮಾಡುವುದೇ ನಮ್ಮ ಕಾರ್ಯವಾಗಿರುವುದು.

**ಪ್ರಶ್ನೆ :**— ಸ್ವಾಮೀ ! ಜಾತಿವಿವೇಕವನ್ನು ಮಾಡಿ ಪರಮಾತ್ಮನು ಪೂರ್ವದಲ್ಲೇ ಅವರವರ ಧರ್ಮಗಳನ್ನು ನಿರೂಪಿಸಿರುವನು. ಆದರೆ ಕಾಲಾನುಗುಣವಾಗಿ ನಾವು ಕೆಲವು ಯೋಚನೆಗಳನ್ನು ಮಾಡಬೇಕಾದುದು ಆವಶ್ಯಕವು. ಪೂರ್ವ ಕಾಲದಲ್ಲಿ ಉಕ್ತವಾದ ಧರ್ಮಗಳ ಅನುಷ್ಠಾನವು ಈ ಕಾಲದಲ್ಲಿ ಅಶಕ್ಯವು. ಅದುದರಿಂದ ಈಗಿನ ಕಾಲ ಮರ್ಯಾದೆಗಳಿಗೆ ಅನುಗುಣವಾಗಿ ಕೆಲವು ಧರ್ಮಗಳನ್ನು ಬದಲಾಯಿಸುವುದಕ್ಕೆ ಸಾಧ್ಯವಾಗಲಾರದೇ ? ಎಂದು ನಮ್ಮ ಪ್ರಶ್ನೆಯು.

**ಉತ್ತರ :— ಶ್ರೀ ಶ್ರೀಗಳವರು :**— ಧರ್ಮವೆಂದರೆ ನೀವು ಏನು ತಿಳಿದಿರುವರೋ ?

**ವಿದ್ಯಾರ್ಥಿಗಳು :**— ಪರಮಾತ್ಮನ ಆಜ್ಞಾರೂಪವಾದ ಸ್ವವರ್ಣಾಶ್ರಮೋಚಿತ ರೂಪವಾದ ಶಾಸ್ತ್ರೋಕ್ತ ಆಚರಣೆಯು ಧರ್ಮವೆನ್ನಿಸುವುದೆಂದು ತಮ್ಮ ಈಗಿನ ನಿರೂಪಣೆಯಿಂದ ನಮಗೆ ತಿಳಿದು ಬಂದಿರುವುದು.

**ಶ್ರೀ ಶ್ರೀಗಳವರು :**— ಈ ಆಚರಣೆಗಳಿಂದ ಪ್ರಾಪ್ತವಾಗುವ ಫಲವೇನು ಎಂಬುದನ್ನು ನೀವು ತಿಳಿದಿರುವಿರೋ ?

**ವಿದ್ಯಾರ್ಥಿಗಳು :**— ತನ್ನ ಆಜ್ಞೆಯನ್ನು ಉಲ್ಲಂಘಿಸಿದವರಲ್ಲಿ ಪರಮಾತ್ಮನು ಕುಪಿತನಾಗಿ ನರಕಾದಿಗಳನ್ನು ಕೊಡುವನು. ಪರಮಾತ್ಮನಿಗೆ ಇಷ್ಟವಾದ ಆಚರಣೆಯಿಂದ ಇಂಥ ಅನರ್ಥ ಫಲವು ತಪ್ಪಿದುದಲ್ಲದೆ ಅವನ ಸಂತೋಷದಿಂದ ಜನ್ಯವಾದ ಮೋಕ್ಷಾದಿ ಪುರುಷಾರ್ಥಗಳೂ ಪ್ರಾಪ್ತವಾಗುವುವು. ಇವೆಲ್ಲವನ್ನೂ ನಾವು ನಂಬಿದ್ದೇವೆ. ಈ ವಿಷಯದಲ್ಲಿ ನಾವು ವಿವಾದ ಮಾಡುವವರಲ್ಲ. ನಾವು ಕೇಳುವುದೇನೆಂದರೆ ಕಾಲಮರ್ಯಾದಾನುಸಾರವಾಗಿ ಕೆಲವು ವಿಶೇಷ ಆಚರಣೆಗಳನ್ನು ನಾವು ಯಾತಕ್ಕೆ ಅವಲಂಬಿಸಬಾರದು ? ಇಷ್ಟೇ ನಮ್ಮ ಪ್ರಶ್ನೆಯು.

**ಉತ್ತರ :— ಶ್ರೀ ಶ್ರೀಗಳವರು :**— ನಿಮ್ಮ ಪ್ರಶ್ನೆಗೆ ಉತ್ತರವನ್ನೇ ನಾವು

ನಿರೂಪಣೆ ಮಾಡುತ್ತಿದ್ದೇವೆ ಅಡ್ಡ ಹಾದಿಗೆ ಹೋಗುವುವೆಂದು ತಿಳಿಯಬೇಡಿರಿ. ಇಷ್ಟು ಫಲಿತವಾಯಿತು ಪರಮಾತ್ಮನು ಮನುಷ್ಯನ ಯಾವ ಆಚರಣೆಯಿಂದ ಸಂತೋಷಪಟ್ಟು ಸ್ವರ್ಗಾದಿ ಉತ್ತಮ ಫಲವನ್ನು ಕೊಡುವನೋ ಅದು ಧರ್ಮವು. ಮನುಷ್ಯನ ಯಾವ ಆಚರಣೆಯಿಂದ ಕುಪಿತನಾಗಿ ನರಕಾದ್ಯನರ್ಥಗಳನ್ನು ಕೊಡುವನೋ ಅದು ಅಧರ್ಮವೆನ್ನಿಸುವುದು. ಬ್ರಾಹ್ಮಣನಿಗೆ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹಗಳೆಂಬ ಷಟ್ಕರ್ಮಗಳು ಸ್ವಧರ್ಮವೆನ್ನಿಸುವುವು. ಯಾತಕ್ಕೆಂದರೆ ಬ್ರಾಹ್ಮಣನು ಯಜನಾದಿ ಷಟ್ಕರ್ಮ ನಿರತನಾದರೆ ಪರಮಾತ್ಮನು ಸಂತೋಷವನ್ನು ಹೊಂದಿ ಸ್ವರ್ಗಾದಿ ಉತ್ತಮ ಲೋಕದಲ್ಲಿ ಆತನಿಗೆ ಸುಖವನ್ನು ಕೊಡುವನು ಬ್ರಾಹ್ಮಣನು ಶೂದ್ರ ಸೇವೆಯಲ್ಲಿ ರತನಾಗಿ, ತೊಗಲು ಮುಂತಾದ ಪದಾರ್ಥ ವಿಕ್ರಯಾದಿಗಳಲ್ಲಿ ಆಸಕ್ತನಾಗಿ ಶಿಖೆಯನ್ನು ಬೋಳಿಸಿಕೊಂಡು ಅಥವಾ ಮುಂಜುಟ್ಟು ಬಿಟ್ಟು ಯಜ್ಞೋಪವೀತವನ್ನು ಪರಿತ್ಯಾಗ ಮಾಡಿದರೆ ಪರಮಾತ್ಮನು ಸ್ವಧರ್ಮವನ್ನು ಬಿಟ್ಟು ಪರಧರ್ಮವನ್ನು ಅವಲಂಬಿಸಿದ ಆ ಬ್ರಾಹ್ಮಣನ ವಿಷಯದಲ್ಲಿ ಕುಪಿತನಾಗಿ ಆತನಿಗೆ ನರಕಾದ್ಯನರ್ಥಗಳನ್ನು ಕಲ್ಪಿಸಿ ಪುನಃ ಭೂಲೋಕದಲ್ಲಿ ದಾರಿದ್ರ್ಯಾದಿ ದುಃಖ ಪೂರ್ಣವಾದ ದುರ್ಯೋನಿಗಳಲ್ಲಿ ಹುಟ್ಟಿಸುವನು. ಆದುದರಿಂದ ಅವುಗಳು ಅಧರ್ಮವೆನ್ನಿಸುವುವು. ಇಷ್ಟನ್ನು ನೀವು ಒಪ್ಪುತ್ತೀರೋ ಅಥವಾ ಇನ್ನೇನಾದರೂ ತಕರಾರು ಉಂಟೋ ?

**ವಿದ್ಯಾರ್ಥಿಗಳು :—** ಅದೆಲ್ಲಾ ನಮಗೆ ಸಮ್ಮತವೇ ! ಆದರೆ ಕಾಲಾನುಗುಣವಾಗಿ ಸ್ವಾರ್ಥೋದ್ದೇಶವಿಲ್ಲದೆ ಈಗ ನಾವು ಆಚರಿಸುವ ಕರ್ಮಗಳು ಪರಮಾತ್ಮನಿಗೆ ಸಂತೋಷಕರವಾಗುವವೋ ಇಲ್ಲವೋ ಅದನ್ನು ನಮಗೆ ತಿಳಿಸೋಣವಾಗಲಿ.

**ಉತ್ತರ :— ಶ್ರೀ ಶ್ರೀಗಳವರು :—** ಅದನ್ನೇ ತಿಳಿಸುತ್ತೇವೆ ಪಟ್ಟಣದ ದೊಡ್ಡ ರತ್ನಪಡಿ ಅಂಗಡಿಗೆ ಹೋಗಿ ನೋಡಿದರೆ ಪ್ರತಿಯೊಂದು ಸಾಮಾನಿನ ಹೆಸರನ್ನು ಆಯಾಯ ಪೆಟ್ಟಿಗೆಯ ಮೇಲೆ ಬರೆದು ಅದರ ಮೇಲೆ ರತ್ನದ ಬೆಲೆಯನ್ನು ವರ್ತಕನು ಬರೆದಿರುವನು " ನೂರು ರೂಪಾಯಿಗಳನ್ನು ಕೊಟ್ಟರೆ ಈ ವಜ್ರವನ್ನು ಕೊಡುತ್ತೇನೆ " "ಲಕ್ಷ ರೂಪಾಯಿಗಳನ್ನು ಕೊಟ್ಟರೆ ಈ ಪದಕವನ್ನು ಕೊಡುತ್ತೇನೆ" ಎಂದು ಅದರ ಅರ್ಥವು ನಾವು ಕಾಲಾನುಗುಣವಾಗಿ ಬಡವರಾಗಿ ನಮ್ಮ ಮನೆಯಲ್ಲಿ ಬೆಲೆಗಳನ್ನು ಬದಲಾಯಿಸಿ ನೂರು ರೂಪಾಯಿನ ವಜ್ರವನ್ನು ಹತ್ತು ರೂಪಾಯಿಗಳಿಗೂ, ಲಕ್ಷ ರೂಪಾಯಿನ ಪದಕವನ್ನು ಸಾವಿರ ರೂಪಾಯಿಗೂ ಕೊಡಬೇಕೆಂದು ಹೇಳಿದರೆ ವರ್ತಕನು ಕೊಡುವನೋ ?

**ವಿದ್ಯಾರ್ಥಿಗಳು :—** ನಾವು ಮನೆಯಲ್ಲಿ ಬೆಲೆಯನ್ನು ಬದಲಾಯಿಸುವುದರಿಂದ ಆಗಲಾರದು. ಕಾಲಾನುಗುಣವಾಗಿ ಧನವು ವಿರಳವಾಗಿ ವಜ್ರಗಳು ಅಧಿಕವಾದರೆ ವರ್ತಕನೇ ಧಾರಣೆಯನ್ನು ಇಳಿಸುವನು.

**ಶ್ರೀ ಶ್ರೀಗಳವರು :—** ವರ್ತಕನು ಧಾರಣೆಯನ್ನು ಇಳಿಸದೇನೇ ಇದ್ದರೆ ?

**ವಿದ್ಯಾರ್ಥಿಗಳು :—** ವರ್ತಕನು ಧಾರಣೆಯನ್ನು ಇಳಿಸದಿದ್ದರೆ ನೂರು ರೂಪಾಯಿಯನ್ನೇ ಕೊಟ್ಟು ಅಪೇಕ್ಷೆಯಿದ್ದವರು ವಜ್ರವನ್ನೂ, ಲಕ್ಷ ರೂಪಾಯಿಗಳನ್ನೇ ಕೊಟ್ಟು ಅಪೇಕ್ಷೆಯಿದ್ದವರು ಪದಕವನ್ನೂ ಕೊಂಡುಕೊಳ್ಳಬೇಕು. ಬೇರೆ ಉಪಾಯವಿಲ್ಲ. ಪ್ರಕೃತದಲ್ಲಿ ದೃಷ್ಟಾಂತದಿಂದ ಏನು ತಿಳಿಯಬೇಕು ?

**ಶ್ರೀ ಶ್ರೀಗಳವರು :—** ಇದನ್ನು ತಿಳಿಯಬೇಕು : ಶ್ರೀ ಪರಮಾತ್ಮನೂ ಒಬ್ಬ ದೊಡ್ಡ ವರ್ತಕನಂತೆ, ಬ್ರಾಹ್ಮಣನು ಯಜನಾದಿ ಷಟ್ಕರ್ಮಗಳನ್ನು ಆಚರಿಸಿದರೆ ಇಷ್ಟು ವರ್ಷಗಳ ಕಾಲಪರ್ಯಂತ ಸ್ವರ್ಗವಾಸವನ್ನೂ ಮನುಷ್ಯ ಲೋಕದಲ್ಲಿ ಇಷ್ಟು ಸೌಖ್ಯವನ್ನೂ ಕೊಡುತ್ತೇನೆಂದು ವೇದಾದಿಗಳಲ್ಲಿ ಪಟ್ಟಿಯನ್ನು ತೋರಿಸಿರುತ್ತಾನೆ. ಕ್ಷತ್ರಿಯನು ರಾಜ್ಯ ಪರಿಪಾಲನಾದಿಗಳಲ್ಲಿ ರತನಾಗಿ ಬ್ರಾಹ್ಮಣರ ಧ್ಯಾನ ಪ್ರವಚನಾದಿಗಳಿಗೆ ಅನುಕೂಲನಾದರೇನೇ ಸುಖಪ್ರದನಾಗಿರುತ್ತೇನೆಂದು ವಿಧಿಸಿರುತ್ತಾನೆ. ಹಾಗೆಯೇ ವೈಶ್ಯನು ವ್ಯಾಪಾರಾದಿಗಳಲ್ಲಿಯೂ, ಶೂದ್ರನು ಉತ್ತಮ ವರ್ಣ ಸೇವೆಯಿಂದಲೂ ಜೀವನವನ್ನು ಮಾಡಬೇಕೆಂದು ವಿಧಿಸಿರುತ್ತಾನೆ. ಅನ್ಯಥಾ ಚರಣೆಯಿಂದ ವಜ್ರ, ರತ್ನಗಳಂತಿರುವ ಉತ್ತಮ ಲೋಕವಾಸವನ್ನು ಕೊಡುವುದಿಲ್ಲವೆಂದೂ ಹೇಳಿರುತ್ತಾನೆ. ಹೀಗಿರುವಲ್ಲಿ ನಾವು ಈ ದಿವಸ ಕಾಲಾನುಗುಣವಾಗಿ ಒಂದು ಆಚರಣೆಯನ್ನು ಮಾಡಿ ಅದನ್ನು ಧರ್ಮವೆಂದು ಕರೆಯುವುದಕ್ಕಾಗುವುದೋ ? ವರ್ತಕನು ವಜ್ರದ ಧಾರಣೆಯನ್ನು ಇಳಿಸಿದರೆ ಕಡಿಮೆ ಬೆಲೆಗೆ ಆ ಪದಾರ್ಥವು ನಮಗೆ ದೊರಕುವುದೇ ಹೊರತು ನಾವು ಮಾಡುವ ವಿಧಿಯಿಂದ ನಮಗೆ ಕಮ್ಮಿ ಖರೀದಿಗೆ ವಜ್ರವು ದೊರಕಲಾರದು. ಹೀಗೆಯೇ ಪರಮಾತ್ಮನು ಕನ್ಯೆಗೆ ಋತುಮತಿಯಾಗುವುದಕ್ಕಿಂತ ಮೊದಲೇ ವಿವಾಹವು ನಡೆದಿದ್ದರೆ ಆ ಕನ್ಯಾದಾನಕ್ಕೆ ದಾನ ಫಲವು ಬರುವುದು; ಕನ್ಯಾದಾನ ಮಾಡಿದವನಿಗೆ ಸ್ವರ್ಗಾದಿ ಲೋಕ ಪ್ರಾಪ್ತಿಯಾಗುವುದೆಂದು ವಿಧಿಸಿರುವನು. ಈ ದಿನ ನಾವುಗಳೆಲ್ಲರೂ ಸೇರಿ ಪ್ರೌಢ ಸ್ತ್ರೀ ದಾನದಿಂದಲೂ ದಾನ ಫಲವು ಬರಲಿ ಎಂಬ ಕಾನೂನನ್ನು ಮಾಡಿದರೆ ಅದರಿಂದ ಫಲವನ್ನು ಕೊಡುವವರು ಯಾರು ?

**ವಿದ್ಯಾರ್ಥಿಗಳು :—** ಸ್ವಾಮೀ ! ನಮ್ಮ ಕಾಯಿದೆಗಳಿಂದ ಧರ್ಮಗಳು ಹುಟ್ಟಲಾರವು. ನಮಗೆ ಧರ್ಮ ನಿರ್ಮಾಣದಲ್ಲಿ ಅಧಿಕಾರವೆಲ್ಲಿಂದ ಬಂತು ? ಯಾವಾತನು ಫಲಪ್ರದನೋ ಆತನೇ ಕಾಲಾನುಗುಣವಾದ ಬೇರೆ ಧರ್ಮಗಳನ್ನು ಹೇಳಿದರೆ ಅದರ ಆಚರಣೆಯಿಂದ ಅನುಕೂಲವಾಗುವುದೋ ಇಲ್ಲವೋ ? ಇಷ್ಟೇ ನಮ್ಮ ಪ್ರಶ್ನಾಭಿಪ್ರಾಯವು.

**ಉತ್ತರ :— ಶ್ರೀ ಶ್ರೀಗಳವರು :—** ಇಷ್ಟೇ ನಿಮ್ಮ ಪ್ರಶ್ನೆಯಾಗಿರಲಿಲ್ಲ. ಇದ್ದಿದ್ದರೆ ಸಂತೋಷವೇ. ಸರ್ಕಾರದವರು ಕಾಲಾನುಗುಣವಾಗಿ ಕಾಯಿದೆಗಳನ್ನು ಮಾಡುವಂತೆ ಪರಮಾತ್ಮನೂ ಇಂಥ ಕಾಲದಲ್ಲಿ ಇಂಥ ಆಚರಣೆಗಳು ಧರ್ಮವೆನ್ನಿಸುವುವು ಎಂದು ನಿರೂಪಿಸಿರುವನೇ ಎಂದು ನಿಮ್ಮ ಪ್ರಶ್ನೆಯಾಯಿತು.

**ವಿದ್ಯಾರ್ಥಿಗಳು :—** ಹೌದು ಮಹಾಸ್ವಾಮೀ ! ಅಷ್ಟೇ ನಮ್ಮ ಪ್ರಶ್ನೆಯು.

**ಉತ್ತರ :— ಶ್ರೀ ಶ್ರೀಗಳವರು :—** ಪರಮಾತ್ಮನೂ ಕೂಡ ಕಾಲಾನುಗುಣವಾದ ಕೆಲವು ಧರ್ಮಗಳನ್ನು ವಿಧಿಸಿರುತ್ತಾನೆ. ವಸಂತ ಕಾಲದಲ್ಲಿ ಛತ್ರ ಪಾನಕಾದಿ ದಾನಗಳಿಂದ ವಿಶೇಷ ಫಲವೂ, ಕಾರ್ತಿಕದಲ್ಲಿ ದೀಪದಾನದಿಂದ ವಿಶೇಷ ಫಲವೂ, ಮಾಘ ಮಾಸದಲ್ಲಿ ಕಂಬಳಾದಿ ವಸ್ತ್ರದಾನದಿಂದ ವಿಶೇಷ ಫಲವೂ ಬರುವುದೆಂದು ಪರಮಾತ್ಮನು ವಿಧಿಸಿರುತ್ತಾನೆ. ಆದರೂ ಶೂದ್ರನು ಯಜನಾದಿ ಷಟ್ಕರ್ಮಗಳನ್ನು ಕಲಿಯುಗದಲ್ಲಿ ಮಾಡಿದರೆ, ಅಥವಾ ಬ್ರಾಹ್ಮಣನು ಶೂದ್ರ ವೃತ್ತಿಯನ್ನು ಅವಲಂಬಿಸಿದರೆ, ಫಲವನ್ನು ಕೊಡುವೆನೆಂದು ಪರಮಾತ್ಮನು ವಿಧಿಸಿರುವುದಿಲ್ಲ. ಕೃತಯುಗದಲ್ಲಿ ಧ್ಯಾನದಿಂದ ಎಷ್ಟು ಪುಣ್ಯವೋ ಅಷ್ಟೇ ಪುಣ್ಯವು ಕಲಿಯುಗದಲ್ಲಿ ಭಕ್ತಿಯಿಂದ ವಿಷ್ಣು ನಾಮಸಂಕೀರ್ತನ ಮಾತ್ರದಿಂದ ಲಭಿಸುವುದೆಂದು ಶ್ರೀ ಪರಮಾತ್ಮನು ವಿಧಿಸಿರುತ್ತಾನೆ. ಅಷ್ಟೇ ಅಲ್ಲ. ಆಪತ್ಕಾಲದಲ್ಲಿ ಕೆಲವು ವಿಶೇಷ ಆಚರಣೆಗಳನ್ನೂ ಆಚರಿಸಬಹುದೆಂದು ಶ್ರೀ ಪರಮಾತ್ಮನೇ ವಿಧಿಸಿರುತ್ತಾನೆ. ಅಂಥ ಆಪದ್ಧರ್ಮಗಳು ಶಾಂತಿ ಪರ್ವದಲ್ಲಿ ಉಕ್ತವಾಗಿರುವುವು. ಸ್ಮೃತಿಗಳನ್ನು ಶ್ರವಣ ಮಾಡಿ ಅವುಗಳನ್ನು ನೀವು ತಿಳಿದುಕೊಳ್ಳಬಹುದು. ಆದುದರಿಂದ ಪರಮಾತ್ಮನೇ ಕಾಲ, ದೇಶ, ಅವಸ್ಥೆಗಳನ್ನು ಅನುಸರಿಸಿ ಕೆಲವು ವಿಶೇಷ ಆಚರಣೆಗಳನ್ನು ನಾಮಗ್ರಹಣ ಮಾಡಿ ನಿರ್ದೇಶ ಮಾಡಿ ಅವುಗಳ ಅನುಷ್ಠಾನದಿಂದ ಉತ್ತಮ ಫಲವನ್ನು ಕೊಡುವೆನೆಂದು ಪ್ರತಿಜ್ಞೆ ಮಾಡಿರುತ್ತಾನಾದುದರಿಂದ ನಾವು ಅವುಗಳನ್ನು ಆಚರಿಸಿದರೆ ಧರ್ಮವನ್ನು ಪರಿವರ್ತನೆ ಮಾಡಿದ ಹಾಗಾಗಲಿಲ್ಲ. ಇವು ಕೃತಯುಗದಲ್ಲಿ ಅನುಷ್ಠೇಯವಾದ ಧರ್ಮಗಳು. ಇವು ತ್ರೇತಾಯುಗದಲ್ಲಿ ಅನುಷ್ಠೇಯವಾದ ಧರ್ಮಗಳು, ಇವು ದ್ವಾಪರಯುಗದಲ್ಲಿ, ಮತ್ತು ಇವುಗಳು ಕಲಿಯುಗದಲ್ಲಿ ಅನುಷ್ಠೇಯವಾದ ಧರ್ಮಗಳು ಎಂದು ಹೇಳಿದ್ದರೆ ಅವುಗಳನ್ನು ಆಚರಿಸಿದರೆ ಪುಣ್ಯವು ಬಂದೇ ಬರುವುದು. ಪರಮಾತ್ಮನು ಅನೇಕ ಆಪದ್ಧರ್ಮಗಳನ್ನು ಮಾಡಿರುವನು. "ಪಟ್ಟಣೇ ಪಾದಮಾಚಾರಃ", "ಪಥಿ ಶೂದ್ರವದಾಚರೇತ್" ಇತ್ಯಾದಿ ವಿಧಿಗಳು ಆ ರೀತಿಯಾಗಿಯೇ ಇರುವುವು. ಆದರೆ ಎಷ್ಟು ಹುಡುಕಿ ನೋಡಿದರೂ ಪ್ರೌಢ ಸ್ತ್ರೀ ವಿವಾಹವು ಧರ್ಮವೆಂದಾಗಲೀ, ಅಸ್ಪೃಶ್ಯರನ್ನು ಸ್ಪರ್ಶ ಮಾಡುವುದೂ, ಅವರಲ್ಲಿ ಭೋಜನಾದಿ ವ್ಯವಹಾರಗಳನ್ನು ಮಾಡುವುದೂ ಧರ್ಮವಾಗುವುದೆಂದಾಗಲೀ ಪರಮಾತ್ಮನು ಹೇಳಿರುವುದಿಲ್ಲ. ಶಿಖಾರಾಹಿತ್ಯವೂ, ಯಜ್ಞೋಪವೀತರಾಹಿತ್ಯವೂ ಬ್ರಾಹ್ಮಣ್ಯವನ್ನು ನಾಶ ಮಾಡುವುದಿಲ್ಲವೆಂದಾಗಲೀ. ಸಂಸ್ಕಾರವಿಲ್ಲದೆ ಶೌಚಾಚಾರ ರಹಿತನಾಗಿ ಶಾಸ್ತ್ರ ಶ್ರವಣಾದಿಗಳನ್ನು ಮಾಡುವುದು ಫಲಪ್ರದವಾಗುವುವೆಂದಾಗಲೀ ಹೇಳಿರುವುದಿಲ್ಲ. **ಧರ್ಮವು ಶಾಶ್ವತವು;** ಮನುಷ್ಯಾದಿಗಳಿಂದ ಪರಿವರ್ತಿಸಲ್ಪಡಲಾರದೆಂದು ಶ್ರೀ ಕೃಷ್ಣನು ಹೇಳಿರುತ್ತಾನೆ :—

(1) **"........ಪ್ರತಿಷ್ಠಾಹಂ........ಶಾಶ್ವತಸ್ಯ ಚ ಧರ್ಮಸ್ಯ ।**

**—(14. 27.)**

ಶಾಶ್ವತವಾದ ಧರ್ಮಕ್ಕೂ ನಾನು (ಶ್ರೀ ಕೃಷ್ಣನು) ಆಧಾರಭೂತನೂ ನಿಯಾಮಕನೂ ಆಗಿರುವೆನು.

ಅರ್ಜುನನೂ ಹೀಗೆಯೇ ಶ್ರೀ ಕೃಷ್ಣನನ್ನು ಸ್ತುತಿಸುತ್ತಾನೆ :—

(2) **ತ್ವಮವ್ಯಯಃ ಶಾಶ್ವತ ಧರ್ಮಗೋಪ್ತಾ ।** —(11. 18)

ಎಲೈ ಕೃಷ್ಣನೇ ! ನೀನು ಅವ್ಯಯನು ಮತ್ತು ಶಾಶ್ವತವಾದ ಧರ್ಮಕ್ಕೂ ರಕ್ಷಕನಾಗಿರುತ್ತೀ.

2 ಧರ್ಮವು ನಿತ್ಯವೆಂಬಲ್ಲಿ ಅನಂತ ಯುಕ್ತಿಗಳೂ ಇರುವುವು. ಧರ್ಮವೆಂದರೆ ಪರಮಾತ್ಮನ ಕಾಯಿದೆಗಳಿಗೆ ಅನುಸಾರಿಯಾದ ವ್ಯಾಪಾರವಷ್ಟೇ ! ಎಂದ ಮೇಲೆ ಪರಮಾತ್ಮನೂ, ಅವನ ಪ್ರಜೆಗಳೂ ಯಾವಾಗ ಇರುವರೋ ಆಗೆಲ್ಲಾ ಕಾಯಿದೆಗಳೂ ಇದ್ದೇ ಇರುವುವು. ಸರ್ಕಾರವು ಇದ್ದಾಗಲೆಲ್ಲಾ ಸರ್ಕಾರದ ನಿಬಂಧನೆಗಳು ಆಯಾಯ ಪ್ರಜೆಗಳ ನಿಯಮನಾರ್ಥವಾಗಿ ಏರ್ಪಡುತ್ತಲೇ ಇರುವುವು. ಹೀಗೆಯೇ ಜೀವರುಗಳು ಸ್ವರೂಪೇಣ ನಿತ್ಯರಾದುದರಿಂದ ಅವರುಗಳನ್ನು ನಿಯಮಿಸುವ ಪರಮಾತ್ಮನೂ ನಿತ್ಯನಾದುದರಿಂದ, ಜೀವರುಗಳ ನಿಯಮನಾರ್ಥವಾಗಿ ಪರಮಾತ್ಮನಿಂದ ಕ್ಲುಪ್ತವಾದ ವಿಧಿನಿಷೇಧಗಳೂ ನಿತ್ಯವಾಗಿಯೇ ಇರುವುವು ಎಂದು ಯುಕ್ತಿಸಿದ್ಧವಾಗುವುದು.

**ಪ್ರಶ್ನೆ** :— ಸ್ವಾಮೀ ! ಮಹಾ ಪ್ರಳಯದಲ್ಲಿ ಸರ್ವವೂ ಪರಮಾತ್ಮನ ಉದರವನ್ನು ಪ್ರವೇಶಿಸಿರುವಾಗ ಧರ್ಮಗಳು ಎಲ್ಲಿರುವುವು ?

**ಉತ್ತರ :— ಶ್ರೀ ಶ್ರೀಗಳವರು :—** ಆಗ ಧರ್ಮಗಳೂ ಪರಮಾತ್ಮನ ಮನಸ್ಸಿನಲ್ಲಿ ಅಡಗಿರುವುವು. ಪುನಃ ಸೃಷ್ಟಿಯಾದ ನಂತರ ಪರಮಾತ್ಮನು ಪೂರ್ವದಲ್ಲಿದ್ದ ನಿಯಮಗಳನ್ನೇ ಅಭಿವ್ಯಕ್ತಿ ಮಾಡುವನು. ಲೋಕದಲ್ಲಿ, ರಾತ್ರಿಯಲ್ಲಿ ಎಲ್ಲರೂ ಗಾಢ ನಿದ್ರೆಯಿಂದ ಸುಪ್ತರಾಗಿದ್ದಾಗ ಸರ್ಕಾರದ ನಿಬಂಧನೆಗಳ ಚಾಲತಿಗೆ ಅವಕಾಶವಿಲ್ಲದೆ, ಪ್ರಾತಃಕಾಲವಾದ ನಂತರ ಕಾನೂನುಗಳು ಹೇಗೆ ಜಾರಿಗೆ ಬರುವುವೋ, ಹಾಗೆಯೇ ಪ್ರಳಯದಲ್ಲಿ ಕರ್ಮಾಧಿಕಾರಿಗಳಾದ ಜೀವರುಗಳು ಪರಮಾತ್ಮನ ಉದರವನ್ನು ಪ್ರವೇಶಿಸಿದ್ದರೂ ಪುನಃ ಸೃಷ್ಟಿಯಾದ ನಂತರ ಪರಮಾತ್ಮನಿಂದ ಸ್ಥೂಲ ಶರೀರವನ್ನು ಹೊಂದಿ ಕರ್ಮ ಭೂಮಿಯಲ್ಲಿ ಹುಟ್ಟಿದ ಒಡನೆಯೇ ಪರಮಾತ್ಮನು ತನ್ನ ಧರ್ಮಗಳನ್ನು ಬ್ರಹ್ಮಾದಿ ದೇವತೆಗಳಿಗೆ ಉಪದೇಶ ಮಾಡಿ ಋಷ್ಯಾದಿಗಳ ಮೂಲಕ ಲೋಕದಲ್ಲಿ ಪ್ರಚಾರಪಡಿಸುತ್ತಾನೆ. ಅಂಥ ಶಾಶ್ವತವಾದ ವರ್ಣಾಶ್ರಮ ಧರ್ಮಗಳನ್ನು ಗೌರವ ಮಾಡಿ ಅದರಂತೆ ನಡೆಯುವವರಿಗೆ ಉತ್ಕೃಷ್ಟ ಫಲವನ್ನೂ, ಅದನ್ನು ಉಲ್ಲಂಘಿಸುವ ದುರ್ಮತಿಗಳಿಗೆ ನರಕವಾಸಾದಿ ಭಯಂಕರವಾದ ಫಲವನ್ನೂ ಕೊಡುವನು.

3. **ಪ್ರಶ್ನೆ** :— ಸ್ವಾಮೀ ! ಇಹಲೋಕದಲ್ಲಿ ರಾಜ್ಯದ ನಿಬಂಧನೆಗಳನ್ನು ತಿಳಿಯುವುದಕ್ಕೆ ಸಹಾಯಕವಾದ **ಗೆಜಿಟ್** ಮೊದಲಾದ ಗ್ರಂಥಗಳಿರುವುವು. ಆದರೆ

ಪರಮಾತ್ಮನ ಆಜ್ಞಾರೂಪವಾದ ಧರ್ಮಗಳನ್ನು ಯಾವ ಪ್ರಮಾಣಗಳಿಂದ ತಿಳಿಯು ಬೇಕು ?

**ಉತ್ತರ:— ಶ್ರೀ ಶ್ರೀಗಳವರು:—** ಈ ವಿಷಯದಲ್ಲಿ ಶಾಸ್ತ್ರಗಳು ಪ್ರಮಾಣ ವಾಗಿರುವುವು. ಶ್ರೀ ಕೃಷ್ಣನು ಹೇಳುತ್ತಾನೆ:—

**(2) ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥**
—(16 24 )

ಎಲೈ ಅರ್ಜುನನೇ ! ಯಾವ ಕಾರಣದಿಂದ ಇದು ಕರ್ತವ್ಯಕರ್ಮವು, ಇದು ತ್ಯಾಜ್ಯವಾದ ಕರ್ಮವು ಎಂಬ ವ್ಯವಸ್ಥೆಯಾಗಬೇಕಾದರೆ ನಿನಗೆ ಶಾಸ್ತ್ರವು ಪ್ರಮಾಣವೋ ಅದನ್ನತಿಕ್ರಮಿಸಿದರೆ ದೋಷವು ಇರುವುದೋ ಆ ಕಾರಣದಿಂದ ವಿವೇಕಿಯಾದ ನೀನು ಶಾಸ್ತ್ರತಾತ್ಪರ್ಯ ವಿಷಯೀಭೂತವಾದ ಸ್ವವರ್ಣಾಶ್ರಮೋಚಿತವಾದ ವಿಹಿತ ಕರ್ಮಗಳನ್ನು ತಿಳಿದುಕೊಂಡು ಕರ್ಮಾನುಷ್ಠಾನಗಳನ್ನು ಮಾಡಬೇಕು.

ನಿತ್ಯ ಧರ್ಮಗಳನ್ನು ಶಾಸ್ತ್ರದಿಂದ ತಿಳಿಯಬೇಕೆಂದು ಪರಮಾತ್ಮನು ಹೇಳಿರುವನು.

**ಋಗ್ಯಜುಃ ಸಾಮಾಥರ್ವಾಶ್ಚ ಭಾರತಂ ಪಂಚರಾತ್ರಕಂ ।**
**ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ ॥**
**ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಂ ।**

ಎಂಬ ಪ್ರಮಾಣಾನುಸಾರವಾಗಿ ಋಗಾದಿ ನಾಲ್ಕು ವೇದಗಳೂ ಭಾರತ ಮೂಲ ರಾಮಾಯಣಗಳೂ ಪಂಚರಾತ್ರಾಗಮವೂ ಮತ್ತು ಇವುಗಳಿಗೆ ಅವಿರುದ್ಧವಾದ ಮತ್ತು ಅನುಕೂಲವಾದ ಸ್ಮೃತಿ ಗ್ರಂಥಗಳೂ ಶಾಸ್ತ್ರಗಳೆನ್ನಿಸುವವು. ಇವುಗಳು ಧರ್ಮಜ್ಞಾಪಕ ಪ್ರಮಾಣಗಳಾಗಿರುವದರಿಂದ ಇವುಗಳಿಂದ ಧರ್ಮಾಧರ್ಮಗಳನ್ನು ತಿಳಿದುಕೊಂಡು ವಿವೇಕಿಯು ಅಧರ್ಮಗಳನ್ನು ಪರಿತ್ಯಾಗ ಮಾಡಿ ಧರ್ಮಮಾರ್ಗವನ್ನು ಪ್ರಯತ್ನಪೂರ್ವಕವಾಗಿ ಅವಲಂಬಿಸಬೇಕು ಶ್ರೀ ಕೃಷ್ಣನು ಹೇಳಿರುತ್ತಾನೆ:—

**(2) ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ॥**
—(16 23.)

**ಅರ್ಥ :—** ಯಾವಾತನು ಶಾಸ್ತ್ರವಿಧಿಯನ್ನು ಪರಿತ್ಯಾಗ ಮಾಡಿ ಸ್ವೇಚ್ಛಾನುಸಾರವಾಗಿ ಆಚರಿಸುತ್ತಾನೆಯೋ ಆತನು ಜ್ಞಾನಾದಿ ಸಿದ್ಧಿಯನ್ನು ಹೊಂದುವದಿಲ್ಲ. ಇಹದಲ್ಲಿಯೂ ಸುಖವನ್ನು ಹೊಂದುವದಿಲ್ಲ ಮತ್ತು ಪರಲೋಕದಲ್ಲಿಯೂ ಉತ್ತಮ ಗತಿಯನ್ನು ಹೊಂದುವದಿಲ್ಲ

4. **ಪ್ರಶ್ನೆ :—** ಶಾಸ್ತ್ರಾದಿಗಳನ್ನು ಓದದೆ ಅಜ್ಞನಾಗಿರುವವನು ಸಂಧ್ಯಾ

ವಂದನಾದಿಗಳನ್ನು ಮಾಡುವದಕ್ಕೆ ಕಾರಣಗಳನ್ನು ತಿಳಿಯಲಾರದೆ ನಿತ್ಯ ಕರ್ಮಗಳನ್ನು ಪರಿತ್ಯಾಗ ಮಾಡಿದರೆ ಅವನ ಗತಿಯೇನು ?

**ಉತ್ತರ :— ಶ್ರೀ ಶ್ರೀಗಳವರು :—** ರಾಜ್ಯದಲ್ಲಿರುವ ಕಾನೂನುಗಳನ್ನು ತಿಳಿಯದೆ ಅಜ್ಞನಾಗಿರುವವನು ವಿಹಿತ ಕಾಲದಲ್ಲಿ ತೆರಿಗೆಯನ್ನು ಕೊಡದೆ ಮನೆಯಲ್ಲಿಯೇ ಕುಳಿತುಕೊಂಡಿದ್ದರೆ, ಅಥವಾ ಇಲ್ಲಿ ಹೇಸಿಗೆ ಮಾಡಬಾರದು ಎಂದು ಬರೆದಿರುವ ಸ್ಥಳದಲ್ಲಿ ಕಶ್ಮಲ ಮಾಡಿದರೆ ಆತನಿಗೆ ಆಗುವ ಗತಿಯೇನು ?

**ವಿದ್ಯಾರ್ಥಿಗಳು :—** ರಾಜದಂಡವು ತಪ್ಪಲಾರದು. ಆದರೆ ಅಜ್ಞನಿಗೆ ಶಿಕ್ಷೆಯು ಕಡಿಮೆಯಾಗಿ ವಿಧಿಸಲ್ಪಡುವುದು. ಲೋಕದಲ್ಲಿ ಪ್ರತಿಯೊಬ್ಬ ಪ್ರಜೆಗೂ ತನ್ನ ಸರ್ಕಾರದಿಂದ ವಿಧಿಸಲ್ಪಟ್ಟಿರುವ ಶಾಸನಗಳ ಜ್ಞಾನವನ್ನು ಹೊಂದುವುದು ಕರ್ತವ್ಯವಾಗಿರುವುದು. ಅವಶ್ಯಜ್ಞೇಯವಾದ ಕಾಯಿದೆಗಳ ಅಜ್ಞಾನವೂ ಒಂದು ದೋಷವೇ. "Ignorance is no plea for excuse" ಎಂದರೆ ಅಜ್ಞಾನವು ಅಪರಾಧ ಮನ್ನಣೆಗೆ ಕಾರಣವಾಗಲಾರದೆಂಬ ನ್ಯಾಯಾನುಸಾರವಾಗಿ ರಾಜ್ಯಾಧಿಕಾರಿಗಳು ಅಜ್ಞತೆಯಿಂದ ತಪ್ಪು ಮಾಡಿದವರಿಗೂ ಶಿಕ್ಷೆಯನ್ನೇ ಮಾಡುವರು.

**ಉತ್ತರ :— ಶ್ರೀ ಶ್ರೀಗಳವರು :—** ನೀವು ನ್ಯಾಯ ಮಾರ್ಗವನ್ನವಲಂಬಿಸಿ ವಾದ ಮಾಡುವಿರಾದುದರಿಂದ ನಿಮಗೆ ಶಾಸ್ತ್ರಾರ್ಥವನ್ನು ತಿಳಿಸಿ ಕೊಡಲು ನಮಗೆ ಕಷ್ಟವಿಲ್ಲ. ನಮ್ಮ ನಾರಾಯಣನೂ ಇಂಥ ಮಹಾಪ್ರಭುವೇ. ಶ್ರೀ ಪರಮಾತ್ಮನು ಧರ್ಮಾಧರ್ಮಗಳನ್ನು ವಿಧಾನ ಮಾಡಿ ಅದನ್ನು ತಿಳಿದುಕೊಳ್ಳುವುದಕ್ಕೆ ಅನುಕೂಲವಾಗುವ ಮನೋ ಬುದ್ಧಿಗಳನ್ನು ಅಧಿಕಾರಿಗೆ ಕೊಟ್ಟು, ಶಾಸ್ತ್ರಜ್ಞರಾದ ಗುರುಗಳನ್ನೂ, ವೇದಾದಿ ಶಾಸ್ತ್ರಗಳನ್ನೂ ಏರ್ಪಡಿಸಿ, ವೇದೋಕ್ತ ಧರ್ಮಾನುಷ್ಠಾನಕ್ಕೆ ಆವಶ್ಯಕವಾದ ಜ್ಞಾನೇಂದ್ರಿಯಗಳನ್ನೂ, ಕರ್ಮೇಂದ್ರಿಯಗಳನ್ನೂ ಕೊಟ್ಟಿರುವನು. ಹೀಗಿರುವಲ್ಲಿ ಜಗತ್ಪ್ರಭುವಾದ ಪರಮಾತ್ಮನ ನಿಬಂಧನೆಗಳನ್ನು ತಿಳಿಯದೆ ಅವನ ಅಧೀನವಾದ ಪ್ರಪಂಚದಲ್ಲಿ ಅವನಿಂದ ವಿಹಿತವಾದ ವರ್ಣಾಶ್ರಮೋಚಿತವಾದ ಧರ್ಮಾನುಷ್ಠಾನಗಳನ್ನು ಮಾಡದೆ ವಾಸ ಮಾಡುವುದಕ್ಕಿಂತ ಬೇರೆ ರಾಜದ್ರೋಹವು ಇನ್ನು ಎಲ್ಲಿರುವುದು ? ಆದುದರಿಂದ ಅಜ್ಞಾನದಿಂದ ಪಾಪ ಮಾಡಿದರೂ ನರಕಾದ್ಯನರ್ಥಗಳು ಸಂಭವಿಸುವುವು. ಶ್ರೀ ಕೃಷ್ಣನು ಹೇಳುತ್ತಾನೆ :—

(1) **ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥**
—(4. 40.)

"ಶಾಸ್ತ್ರಜ್ಞಾನರಹಿತನಾದವನು ಮತ್ತು ಶಾಸ್ತ್ರಕ್ಕೆ ವಿರುದ್ಧವಾದ ನಿಶ್ಚಯವುಳ್ಳವನು, ಮತ್ತು ಶಾಸ್ತ್ರಾರ್ಥವಿಷಯಕ ಸಂಶಯ ಮನಸ್ಕನಾದವನು ನರಕಾದಿಗಳನ್ನು ಹೊಂದುತ್ತಾನೆ. ಸಂಶಯಾತ್ಮಕನಾದವನಿಗೆ ಇಹಲೋಕದಲ್ಲಿ ಸುಖವಿಲ್ಲ ಮತ್ತು ಪರಲೋಕದಲ್ಲಿ ಗತಿಯಿಲ್ಲ.

5. ಈ ಪ್ರಕಾರವಾಗಿ 1. ಆದಿಸೃಷ್ಟಿ ಕಾಲದಲ್ಲಿಯೇ ಶ್ರೀಮನ್ನಾರಾಯಣನು ಗುಣ ವಿಭಾಗವನ್ನು ನಿಮಿತ್ತ ಮಾಡಿ ಭಿನ್ನ ಭಿನ್ನ ಜಾತಿ ರೂಪದಿಂದ ಬ್ರಾಹ್ಮಣಾದಿ ವರ್ಣಗಳನ್ನು ಸೃಷ್ಟಿ ಮಾಡಿ ಅವರಿಗೆ ಭಿನ್ನ ಭಿನ್ನವಾದ ಎಂದರೆ ಪರಸ್ಪರ ಅನನುಷ್ಠೇಯವಾದ ವಿಲಕ್ಷಣ ಕರ್ಮಗಳನ್ನೂ ಜೀವನೋಪಾಯಗಳನ್ನೂ ವಿಧಾನ ಮಾಡಿರುವುದರಿಂದಲೂ, 2. ಸ್ವಧರ್ಮ, ಪರಧರ್ಮ ಎಂದು ಪೃಥಕ್ ನಾಮನಿರ್ದೇಶವನ್ನು ಮಾಡಿ ವಿಲಕ್ಷಣ ಧರ್ಮಗಳನ್ನು ಬ್ರಾಹ್ಮಣಾದಿ ಚತುರ್ವರ್ಣಗಳಿಗೂ ಬೇರೆ ಬೇರೆ ಪ್ರಕಾರವಾಗಿ ಹೇಳಿರುವುದರಿಂದಲೂ 3. ಮತ್ತು ಇದ್ದ ಜಾತಿಯನ್ನು ಕಳೆದುಕೊಂಡು ಮತ್ತಷ್ಟು ಭ್ರಷ್ಟನಾಗಿ ನರಕಾದ್ಯನರ್ಥಗಳನ್ನು ಹೊಂದದಂತೆ ಯಾವ ಕರ್ಮ ಅಥವಾ ಜ್ಞಾನ ರೂಪವಾದ ಉಪಾಯದಿಂದಲೂ ಒಂದು ಜಾತಿಯವನು ಮತ್ತೊಂದು ವರ್ಣದಲ್ಲಿ ಬೆರೆತು ಹೋಗುವುದು ಅಸಾಧ್ಯವಾದುದರಿಂದಲೂ, 4. ವರ್ಣಸಾಂಕರ್ಯವು ಸ್ತ್ರೀಯರ ವ್ಯಭಿಚಾರ ಮೂಲಕವಾಗಿಯೇ ಬರುವುದೆಂದು ಬ್ರಾಹ್ಮಣಾದಿ ವರ್ಣಗಳು ಪರಸ್ಪರ ಅತ್ಯಂತ ಭಿನ್ನವಾದ, ಕರ್ಮಾದಿಗಳಿಂದ ಪರಸ್ಪರ ತಾದಾತ್ಮ್ಯವನ್ನು ಹೊಂದದ ಜಾತಿಗಳೆಂಬಲ್ಲಿ ಯುಕ್ತಿಯನ್ನು ಶ್ರೀ ಕೃಷ್ಣನು ಸೂಚಿಸಿರುವುದರಿಂದಲೂ ಪ್ರತಿಯೊಬ್ಬ ಮುಮುಕ್ಷುವೂ ಪರಮಾತ್ಮನಿಂದ ವಿಹಿತವಾದ ಸ್ವಸ್ವವರ್ಣಾಶ್ರಮೋಚಿತವಾದ ಕರ್ಮಾನುಷ್ಠಾನದಲ್ಲಿ ಪರಧರ್ಮ ಪರಿತ್ಯಾಗಪೂರ್ವಕವಾಗಿ ತತ್ಪರನಾಗಬೇಕು. 5. ಪರಂತು ಸ್ವವರ್ಣಾಶ್ರಮೋಚಿತ ಧರ್ಮಗಳು ಸೃಷ್ಟಿಕರ್ತನಾದ, ನಿಖಿಲ ಜಗದೀಶ್ವರನಾದ ಶ್ರೀಮನ್ನಾರಾಯಣನ ಆಜ್ಞಾ ರೂಪವಾದುದರಿಂದಲೂ, 6. ಶಾಶ್ವತವಾದ ಧರ್ಮವನ್ನು ಆಧುನಿಕರಾದ ಮನುಷ್ಯರು ಪರಿವರ್ತನೆ ಮಾಡಿ ಕಾಲೋಚಿತವಾದ ಕಾಮಚಾರಗಳಿಂದ ಫಲವನ್ನು ಹೊಂದುವುದು ಅಸಾಧ್ಯವಾದುದರಿಂದಲೂ, 7. ಕರ್ಮಫಲಪ್ರದನಾದ ವಾಸುದೇವನೇ ಆಯಾಯ ಕಾಲಗಳಲ್ಲಿ ಆಚರಿಸಬೇಕಾದ ಧರ್ಮಗಳನ್ನು ಸ್ಪಷ್ಟವಾಗಿ ಚತುರ್ವೇದಗಳಲ್ಲಿಯೂ, ಇತಿಹಾಸ, ಪುರಾಣಗಳಲ್ಲಿಯೂ ಇರುವಂತೆ ನಾನಾ ಅವತಾರಗಳಿಂದ ತನ್ನ ಶಿಷ್ಯರಾದ ಬ್ರಹ್ಮಾದಿ ದೇವತೆಗಳ ಮುಖಾಂತರವಾಗಿ ಲೋಕದಲ್ಲಿ ಪ್ರಕಾಶಪಡಿಸಿ, ತಾನೂ ನಾನಾ ಅವತಾರಗಳಲ್ಲಿ ನಿದರ್ಶನಾರ್ಥವಾಗಿ ಧರ್ಮಾನುಷ್ಠಾನಗಳನ್ನು ಮಾಡಿ ತೋರಿಸಿರುವುದರಿಂದಲೂ, 8. ಪರಧರ್ಮಾವಲಂಬಿಗಳೆಲ್ಲರೂ ಪೂರ್ವದಲ್ಲಿ, ದುಃಖದಲ್ಲಿ ಮಗ್ನರಾಗಿರುವರೆಂಬ ಚರಿತ್ರ ಪರಾಮರ್ಶೆಯಿಂದಲೂ ಧೀರರಾದ ಸಜ್ಜನರು ತಾವು ಎಷ್ಟೇ ಪ್ರಗಲ್ಭರಾದರೂ, ಎಂದರೆ ಅನ್ಯವರ್ಣಾಶ್ರಮೋಚಿತವಾದ ಕರ್ಮಗಳನ್ನು ಎಷ್ಟು ಸಾಂಗವಾಗಿ ಆಚರಿಸಲು ಶಕ್ತರಾದರೂ ಕೂಡ ಭಯಂಕರವಾದ ತಾಮಸ ವ್ಯಾಪಾರದಲ್ಲಿ ಪ್ರವೃತ್ತರಾಗದೆ ಸ್ವಸ್ವವಿಹಿತ ಧರ್ಮಾನುಷ್ಠಾನಗಳಿಂದಲೇ ಪರಮಾತ್ಮನನ್ನು ತೋಷಣಪಡಿಸಿ, ಇಂದ್ರಿಯನಿಗ್ರಹಾದಿದ್ವಾರಾ ಚಿತ್ತೈಕಾಗ್ರತೆಯನ್ನು ಸಂಪಾದಿಸಿ ಭಗವದ್ಧ್ಯಾನವನ್ನು ಮಾಡುವ ಅತ್ಯುತ್ತಮ ವ್ಯಾಪಾರದಲ್ಲಿ ತಮ್ಮ ಬುದ್ಧಿ ಬಲವನ್ನು ನಿಯೋಗಿಸಬೇಕು. 9. ಕಿಂಚ ಶೂದ್ರಾದಿಗಳಿಗೂ ಕೂಡ ಸ್ವಧರ್ಮವು ಜಘನ್ಯವೃತ್ತಿಯಾದರೂ ( ನೀಚವಾಗಿ

ಕಂಡರೂ ) ಭಕ್ತಿ ಶ್ರದ್ಧಾದಿಗಳಿಂದ ಆಚರಿಸಲ್ಪಟ್ಟರೆ ಉತ್ತಮ ವರ್ಣಸ್ಥನ ಉತ್ಕೃಷ್ಟ ವ್ಯಾಪಾರದಂತೆ ಅಂತ್ಯದಲ್ಲಿ ಉತ್ತಮ ಫಲಪ್ರದವಾಗುವುದೆಂಬುದು ಸ್ವಕರ್ಮದಲ್ಲಿ ಆದರವನ್ನು ಹುಟ್ಟಿಸತಕ್ಕ ಮತ್ತೊಂದು ಯುಕ್ತಿಯು. 10. ಪರಂತು ಧರ್ಮ ಪರಿತ್ಯಾಗ ಮಾಡುವುದರಲ್ಲಿ ಸಹಾಯಕವಾದ ಯುಕ್ತಿಯು ಒಂದೂ ಇರುವುದಿಲ್ಲ. ಕರ್ಮಾಕರಣದಿಂದ ವಿಷ್ಣು ದ್ರೋಹವು ಪ್ರಾಪ್ತವಾಗುವುದು. ಆದರ ಫಲವು ನರಕಾದ್ಯನರ್ಥಗಳು. ಅಷ್ಟೇ ಅಲ್ಲ. ಕರ್ಮಭೂಮಿಯಾದ ಭರತ ಖಂಡದಲ್ಲಿ ಸಾಧನಾನುಕೂಲವಾದ ಮನುಷ್ಯ ದೇಹವನ್ನು ಹೊಂದಿ ಸ್ವಧರ್ಮವೇನೆಂಬುದನ್ನು ವಿಚಾರಿಸಿ ತಿಳಿದುಕೊಳ್ಳದಿರುವುದೇ ಮಹಾ ದೈವದ್ರೋಹವು. ಶ್ರದ್ಧಾರಹಿತನಾದ ಮತ್ತು ವಿಷಯ ಪ್ರಪಂಚದಲ್ಲಿ ಮತ್ತನಾದ ಅಜ್ಞನೂ, ಸಂಶಯಾತ್ಮಕಚಿತ್ತನೂ, ತತ್ತ್ವಬುಭುತ್ಸಾರಹಿತನೂ, ಸ್ವಪಿತೃಗಳಿಗೂ ದುಃಖಪ್ರದನಾಗಿ, ಸ್ವನಾಶಾರ್ಥ ವಾಗಿಯೇ ಜನಿಸಿದ ಕುಲಪಾಂಸನು ಎಂದು ಶ್ರೀ ಕೃಷ್ಣನು ಸ್ಪಷ್ಟವಾಗಿ ಹೇಳಿರು ತ್ತಾನೆ.

**(1) ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥**
—(3. 16.)

**ಅರ್ಥ :—** ಕೇವಲ ಇಂದ್ರಿಯ ವಿಷಯಗಳಲ್ಲಿ ಆಸಕ್ತನಾದವನು ಪಾಪ ಸಂಪಾದನೆಗಾಗಿಯೇ ಭೂಮಿಯಲ್ಲಿ ಹುಟ್ಟಿದವನು; ಎಲೈ ಪಾರ್ಥನೇ ! ಅವನ ಜೀವನವು ನಿರರ್ಥಕವು.

ಇಂಥ ಸ್ವಧರ್ಮಚ್ಯುತರು ಭೂಭಾರಭೂತರಾದ ದುರ್ಜನರೆಂದೂ, ಇವರು ಗಳೇ ವಿಷ್ಣುದ್ವೇಷಿಗಳೆಂದೂ, ಇವರುಗಳು ಸಂಹಾರಾರ್ಥವಾಗಿ ತಾನೂ ದೇವತೆ ಗಳಿಂದ ಸಹಿತನಾಗಿ ಆಯಾಯ ಕಾಲಗಳಲ್ಲಿ ಅವತರಿಸುವನೆಂದೂ ಸಹ ಶ್ರೀ ಕೃಷ್ಣನು ಉದ್ಘೋಷಿಸಿರುತ್ತಾನೆ. ಆದುದರಿಂದ ಸಕಲ ಸಾತ್ವಿಕರೂ ಪರಮಾತ್ಮನು ಕೊಟ್ಟಿರುವ ಮನಸ್ಸು, ದೇಹಾಂದ್ರಿಯಗಳನ್ನು ಅವನಿಂದ ನಿಯತವಾದ ವಿಧಿಗಳಿಗೆ ಅನುಸಾರವಾಗಿ ಉಪಯೋಗಿಸಿ ಸ್ವಕರ್ಮಾನುಷ್ಠಾನ ಜನಿತವಾದ ಶ್ರವಣಾದಿ ಜ್ಞಾನ ಸಾಧನೋಪಯೋಗಿಯಾದ ಪರಮಾತ್ಮನ ಪ್ರಸಾದಕ್ಕೆ ಪಾತ್ರರಾಗಬೇಕೆಂದು ಪುನಃ ಪುನಃ ನಾವೂ ನಿರೂಪಿಸಿರುತ್ತೇವೆ.

---

# 24. ಇಪ್ಪತ್ತನಾಲ್ಕನೆಯ ಅಂಶವು.

## ತ್ಯಾಗಸ್ವರೂಪ ನಿರೂಪಣೆಯು.

**ಶ್ರೀ ಶ್ರೀಗಳವರು :—** ಭಗವತ್ಪ್ರಾಪ್ತಿಸಾಧಕವಾದ ಧ್ಯಾನಕಾರಣವಾದ ವಿಶಿಷ್ಟ ಕರ್ಮಯೋಗದಲ್ಲಿ ತ್ಯಾಗವು ಒಂದು ಅಂಶವೆಂದು ನಾವು ಪೂರ್ವದಲ್ಲಿಯೇ ನಿರೂಪಿಸಿರುತ್ತೇವೆ. ತ್ಯಾಗ ಶಬ್ದಾರ್ಥವನ್ನು ಶ್ರೀ ಕೃಷ್ಣನೇ ಹೇಳುತ್ತಾನೆ :—

(1) **ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥**
—(18. 2.)

ಸರ್ವ ಕರ್ಮಗಳಿಗೂ ಭಗವತ್ಪ್ರಸಾದಕ್ಕಿಂತ ಅನ್ಯವಾದ ಫಲವನ್ನು ಅಪೇಕ್ಷಿಸದೆ ಸರ್ವ ಕರ್ಮ ಫಲಗಳನ್ನೂ ಪರಮಾತ್ಮನಲ್ಲಿ ಸಮರ್ಪಿಸುವುದೇ ತ್ಯಾಗ ಶಬ್ದಾರ್ಥವೆಂದು ಜ್ಞಾನಿಗಳು ಹೇಳುತ್ತಾರೆ.

ಸಫಲವಾದ ಸಕಲ ಕರ್ಮಯೋಗಗಳಿಗೂ ತ್ಯಾಗವು ಅತ್ಯವಶ್ಯಕವಾದ ಅಂಗವೆಂದು ತಿಳಿಯಬೇಕು. ಎಂದರೆ ಮುಮುಕ್ಷುವು ತಾನು ಆಚರಿಸಿದ ಕರ್ಮದ ಫಲವನ್ನು ಶ್ರೀ ಪರಮಾತ್ಮನಲ್ಲಿ ಸಮರ್ಪಿಸಬೇಕು ಎಂದರ್ಥವು. ವೈಷ್ಣವ ಸಂಪ್ರದಾಯವೂ ಹೀಗೆಯೇ ಇರುತ್ತದೆ. ಸಕಲ ಸಜ್ಜನರೂ ನಿತ್ಯ ನೈಮಿತ್ತಿಕಾದಿ ಕರ್ಮಗಳನ್ನು ಮಾಡಿದ ನಂತರ, ಕೈಯಲ್ಲಿ ನೀರು ತುಂಬಿಕೊಂಡು "**ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ**" ಇತ್ಯಾದಿ ಮಂತ್ರಗಳನ್ನು ಪಠಿಸಿದ ನಂತರ ತಮ್ಮ ಕರ್ಮ ಫಲಗಳನ್ನು ಶ್ರೀ ಪರಮಾತ್ಮನ ಪಾದದಲ್ಲಿ ಸಮರ್ಪಿಸುವರು. ಮತ್ತು ತ್ಯಾಗ ಶಬ್ದಾರ್ಥವನ್ನು ಚೆನ್ನಾಗಿ ವಿವರಿಸುವ ಈ ಶ್ಲೋಕವನ್ನು ಪಠಿಸುವರು :—

**ಕಾಯೇನ ವಾಚಾ ಮನಸೇಂದ್ರಿಯೈರ್ವಾ**
**ಬುದ್ಧ್ಯಾತ್ಮನಾ ವಾಽನುಸೃತಃ ಸ್ವಭಾವಂ ।**
**ಕರೋಮಿ ಯದ್ಯತ್ಸಕಲಂ ಪರಸ್ಮೈ**
**ನಾರಾಯಣಾಯೇತಿ ಸಮರ್ಪಯಾಮಿ ॥**

**ಅರ್ಥವು :—** ಎಲೈ ಪರಮಾತ್ಮನೇ ! ನಾನು ನನ್ನ ಶರೀರದಿಂದಲೂ, ವಾಗಿಂದ್ರಿಯದಿಂದಲೂ, ಮನಸ್ಸಿನಿಂದಲೂ, ಇತರ ಜ್ಞಾನ ಕರ್ಮೇಂದ್ರಿಯಗಳಿಂದಲೂ, ಮತ್ತು ಬುದ್ಧಿಯಿಂದಲೂ, ಚಿತ್ತದಿಂದಲೂ, ನನ್ನ ಸ್ವಭಾವಾನುಗುಣವಾಗಿ, ಸ್ವತಂತ್ರನಾದ ನಿನ್ನ ಪ್ರೇರಣೆಯಿಂದ ಏನೇನು ನಿನ್ನ ಸೇವೆಯನ್ನು ಮಾಡುತ್ತೇನೆಯೋ ಅವೆಲ್ಲವನ್ನೂ ಪರಬ್ರಹ್ಮನಾದ, ನಾರಾಯಣನಾದ ನಿನಗೋಸ್ಕರ ಸಮರ್ಪಿಸುತ್ತೇನೆ.

ಇದು ನಿಜಭಕ್ತನ ಪ್ರತಿಜ್ಞೆಯು. ಶ್ರೀ ಕೃಷ್ಣನು ಇಂಥ ಆಚರಣೆಯು ಅವಶ್ಯ ಕರ್ತವ್ಯವೆಂದು ಅರ್ಜುನನಿಗೆ ಬೋಧಿಸಿರುತ್ತಾನೆ.

(2) ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ ॥
ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।
ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥
—(9. 27–28.)

ಹೇ ಕೌಂತೇಯ ! ನೀನು ಯಾವ ಯಾವ ಸತ್ಕರ್ಮವನ್ನು ಮಾಡುತ್ತೀಯೋ, ಯಾವುದನ್ನು ಭೋಜನ ಮಾಡುತ್ತೀಯೋ, ಯಾವುದನ್ನು ಹೋಮ ಮಾಡುತ್ತೀಯೋ, ಯಾವುದನ್ನು ದಾನ ಮಾಡುತ್ತೀಯೋ ಮತ್ತು ಯಾವ ತಪಸ್ಸನ್ನು ಆಚರಿಸುತ್ತೀಯೋ ಅವುಗಳೆಲ್ಲವನ್ನೂ ನನ್ನಲ್ಲಿ ಸಮರ್ಪಣೆ ಮಾಡುವವನಾಗು. ಏವಂ = ನೀನು ಹಾಗೆ ಮಾಡುವುದರಿಂದ, ಶುಭಾಶುಭ ಫಲಾತ್ಮಕವಾದ ಸಂಸಾರ ಬಂಧದಿಂದ ನೀನು ಮುಕ್ತನಾಗುತ್ತೀಯೆ. ( ಕ್ರಮೇಣ ಜ್ಞಾನವನ್ನು ಹೊಂದಿ ಮೋಕ್ಷವನ್ನು ಹೊಂದುತ್ತೀಯೆ ಎಂದು ಭಾವವು. ಅದನ್ನೇ ವಿವರಿಸುತ್ತಾನೆ :— ) ಸಂನ್ಯಾಸದಿಂದಲೂ, ವಿಹಿತ ಕರ್ಮಾನುಷ್ಠಾನದಿಂದಲೂ ಯುಕ್ತವಾದ ಬುದ್ಧಿಯುಳ್ಳವನಾಗಿ ( ಅಪರೋಕ್ಷ ಜ್ಞಾನದ್ವಾರಾ ) ವಿಮುಕ್ತನಾಗಿ ನನ್ನನ್ನು ಹೊಂದುತ್ತೀಯೆ.

2. ಶ್ರೀ ಕೃಷ್ಣನ ಈ ವಾಕ್ಯಗಳಿಂದ ತ್ಯಾಗ ಶಬ್ದಾರ್ಥವು ಸಿದ್ಧವಾಗುವುದಲ್ಲದೆ ತ್ಯಾಗವು ಯಾವ ಪ್ರಕಾರದಿಂದ ಮೋಕ್ಷ ಫಲಪ್ರದವಾಗುವುದೋ ಅಂಥ ಕ್ರಮವೂ ವಿದಿತವಾಗುವುದು. ಸಕಲ ಕರ್ಮ ಫಲಗಳನ್ನೂ ತ್ಯಾಗ ಮಾಡುವವನು ಸಂನ್ಯಾಸದಿಂದಲೂ, ವಿಹಿತ ಕರ್ಮಾನುಷ್ಠಾನದಿಂದಲೂ, ಸಾಂಖ್ಯ ರೂಪವಾದ ಪರೋಕ್ಷ ತತ್ವನಿಶ್ಚಯದಿಂದಲೂ ಯುಕ್ತನಾಗಿ ಕ್ರಮೇಣ ಮುಕ್ತನಾಗುವನು. ಇದರಿಂದ ತ್ಯಾಗವು **ಸಾಕ್ಷಾತ್** ಜ್ಞಾನಾದಿ ಪುರುಷಾರ್ಥಪ್ರದವಾಗಲಾರದೆಂದು ನಿಶ್ಚಿತವಾಗುವುದು. ಮತ್ತೇನೆಂದರೆ ಸಂನ್ಯಾಸ, ಯೋಗ, ಸಾಂಖ್ಯಗಳೆಂಬ ಇತರ ಮೂರು ಅಂಶಗಳಿಂದ ಸಹಿತವಾಗಿ ವಿಶಿಷ್ಟ ಕರ್ಮಯೋಗದಲ್ಲಿ ಅಂತರ್ಭೂತವಾಗಿ ಜ್ಞಾನಕ್ಕೂ ಅಪರೋಕ್ಷ ಜ್ಞಾನಕ್ಕೂ ಕಾರಣವಾಗಿ ಮೋಕ್ಷಪ್ರದವಾಗುವುದು.

ವಿಶಿಷ್ಟ ಕರ್ಮಯೋಗದಲ್ಲಿ ಅಂತರ್ಭಾವವನ್ನು ಹೊಂದಿದ ಕೇವಲ ತ್ಯಾಗವು ಸಾಕ್ಷಾತ್ಸತ್ವ ಶುದ್ಧಿಗೆ ( ಸಂನ್ಯಾಸಕ್ಕೆ ) ಕಾರಣವಾಗಿ, ಕ್ರಮೇಣ ಚತುರಂಗ ಸಮನ್ವಿತವಾದ ಕರ್ಮಯೋಗದ ನಿಷ್ಪತ್ತಿಗೆ ಕಾರಣವಾಗಿ ನಂತರ ಜ್ಞಾನಕ್ಕೆ ಕಾರಣವಾಗುವುದು. ಸಾಂಖ್ಯ, ಸಂನ್ಯಾಸ, ಕರ್ಮಾನುಷ್ಠಾನಗಳಿಂದ ಸಹಿತವಾದ ತ್ಯಾಗವೇ ಕ್ಷಿಪ್ರ ಫಲಪ್ರದವಾಗುವುದು; ಅದೇ ಉತ್ತಮ ತ್ಯಾಗವು. ಶ್ರೀ ಕೃಷ್ಣನು ಹೇಳುತ್ತಾನೆ :—

(1) ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।
ತ್ಯಾಗೀ ಸತ್ವಸಮಾವಿಷ್ಟೋ ಮೇಧಾವಿ ಛಿನ್ನಸಂಶಯಃ ॥
—(18. 10.)

**ಅರ್ಥ :—** ದುಷ್ಟ ಕರ್ಮವು ಪಾಪಕಾರಣವೆಂದು ಪರಿತ್ಯಾಗ ಮಾಡದೆ ಪುಣ್ಯ ಕಾರಣವೆಂದು ಸ್ನೇಹ ಮಾಡದೇ ( ಎಂದರೆ ಕೇವಲ ಭಗವತ್ಪ್ರೀತಿ ಕಾರಣವೆಂದು ಪುಣ್ಯ ಕರ್ಮವನ್ನೂ ಭಗವತ್ಕೋಪಕಾರಣವೆಂದು ದುಷ್ಟಕರ್ಮ ತ್ಯಾಗವನ್ನೂ ಮಾಡುವ ) ಉತ್ತಮ ಅಂತಃಕರಣದಿಂದ ಯುಕ್ತನಾದ ಭಗವತ್ತತ್ವ ಜ್ಞಾನವುಳ್ಳ ಪರಾಪರತತ್ವವಿಷಯದಲ್ಲಿ ಸಂಶಯರಹಿತನಾದ ಅಧಿಕಾರಿಯು ಉತ್ತಮ ತ್ಯಾಗಿಯು. ( ಇಂಥ ಕರ್ಮಯೋಗಿಯೇ ಶೀಘ್ರದಲ್ಲಿಯೇ ಜ್ಞಾನವನ್ನು ಹೊಂದುವನೆಂದು ಭಾವವು. )

3. ಇದು ಕರ್ಮಯೋಗದಲ್ಲಿ ಅಂತರ್ಭಾವವನ್ನು ಹೊಂದಿದ ತ್ಯಾಗದ ಮಹಿಮೆಯು. ಶ್ರೀ ಕೃಷ್ಣನು ತ್ಯಾಗದಿಂದ ಸಹಿತವಾದ ಧ್ಯಾನವೂ ಕೂಡ ಅತ್ಯಂತ ಅತಿಶಯವಾದ ಫಲವನ್ನು ಕ್ಷಿಪ್ರದಲ್ಲಿ ಕೊಡಿಸುವುದೆಂದು ಸೂಚಿಸಿರುತ್ತಾನೆ :—

**(1) ಶ್ರೇಯೋ ಹಿ ಜ್ಞಾನಮಭ್ಯಾಸಾತ್ ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಂ ॥**

—(12. 12.)

" ಅಜ್ಞಾನಪೂರ್ವಕವಾದ ಅಭ್ಯಾಸಕ್ಕಿಂತ ತತ್ವಜ್ಞಾನವು ಶ್ರೇಷ್ಠವು. ಕೇವಲ ಜ್ಞಾನಕ್ಕಿಂತಲೂ ಜ್ಞಾನಸಹಿತವಾದ ಧ್ಯಾನವು ಶ್ರೇಷ್ಠವು. ಕೇವಲ ಧ್ಯಾನಕ್ಕಿಂತಲೂ ಕರ್ಮಫಲ ತ್ಯಾಗದಿಂದ ಸಹಿತವಾದ ಧ್ಯಾನವು ಶ್ರೇಷ್ಠವು. ಕರ್ಮಫಲಾಪೇಕ್ಷಾ ರಹಿತವಾದ ಫಲತ್ಯಾಗ ಸಹಿತವಾದ ಧ್ಯಾನಕ್ಕಿಂತ ಅಪರೋಕ್ಷ ಜ್ಞಾನವು ಶ್ರೇಷ್ಠವು. ಅಪರೋಕ್ಷ ಜ್ಞಾನವಾದ ನಂತರ ಮೋಕ್ಷವು ಆಗುತ್ತದೆ. "

ಈ ರೀತಿಯಲ್ಲಿ ಕರ್ಮಫಲ ತ್ಯಾಗವು ಧ್ಯಾನಕ್ಕೂ ತನ್ನ ಮೇಳನದಿಂದ ಶ್ರೇಷ್ಠತ್ವ ಸಂಪಾದನೆಯಲ್ಲಿ ಕಾರಣವಾಗುವುದಾದರೆ ಅದು ಎಷ್ಟು ಮಹಿಮೋಪೇತ ವಾಗಿರುವುದೆಂಬುದು ಊಹೆಯಿಂದ ತಿಳಿಯುವ ಅಂಶವಾಗಿರುವುದು.

ಧ್ಯಾನಾತ್ಕರ್ಮಫಲತ್ಯಾಗಃ ಎಂಬಲ್ಲಿ ತ್ಯಾಗ ಶಬ್ದಾರ್ಥವು ಕೇವಲ ಕರ್ಮ ಫಲ ಸಮರ್ಪಣೆಯಲ್ಲ, ಮತ್ತೇನೆಂದರೆ ಕರ್ಮ ಫಲಾಪೇಕ್ಷಾರಾಹಿತ್ಯಪೂರ್ವಕವಾದ ಕರ್ಮಫಲ ಸಮರ್ಪಣೆಯೆಂದು ತಿಳಿಯಬೇಕು. ಎಂದರೆ ಸಂನ್ಯಾಸಪೂರ್ವಕವಾದ ಫಲಸಮರ್ಪಣೆಯು. ಇಂಥ ಫಲಸಮರ್ಪಣೆಯೇ ಉತ್ತಮವಾದುದು. ಸಕಾಮ ವಾದ ಫಲಸಮರ್ಪಣೆಯು ಬಲವಂತದಿಂದ ಕೊಡಲ್ಪಟ್ಟ ದಾನದಂತೆ ಅತ್ಯಲ್ಪ ಫಲ ಪ್ರದವಾಗುವುದು.

ಈ ಪ್ರಕಾರವಾಗಿ ಶ್ರೀ ಕೃಷ್ಣನು ಅನ್ವಯ ರೀತಿಯಿಂದ ತ್ಯಾಗದಿಂದ ಉಕ್ತ ಕ್ರಮವಾಗಿ ಮೋಕ್ಷಾದಿ ಪುರುಷಾರ್ಥಗಳು ಸಂಭವಿಸುವುವೆಂದು ನಿರೂಪಿಸಿ, ವ್ಯತಿ ರೇಕದಿಂದಲೂ ಎಂದರೆ ತ್ಯಾಗರಾಹಿತ್ಯದಿಂದ ಪ್ರಾಪ್ತವಾಗುವ ಅನರ್ಥವನ್ನು ಹೇಳು ವುದರಿಂದಲೂ ಕೂಡ ಸಂಸಾರತರಣ ರೂಪವಾದ ಕಾರ್ಯದಲ್ಲಿ ತ್ಯಾಗವು ಎಷ್ಟು ಅವಶ್ಯಕವಾದ ಉಪಾಯವೆಂಬುದನ್ನು ತೋರಿಸುತ್ತಾನೆ :—

(1) ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಂ ।
ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥
—(18. 12.)

ಅರ್ಥ :— ಕರ್ಮ ಫಲಗಳನ್ನು ಪರಮಾತ್ಮನಲ್ಲಿ ನಿಷ್ಕಾಮತೆಯಿಂದ ಸಮರ್ಪಿಸದವರಿಗೆ ನರಕಾದಿಗಳು, ಸ್ವರ್ಗಾದಿಗಳು, ಮತ್ತು ಮಿಶ್ರವಾದ ಮಾನುಷಾದಿ ಜನ್ಮ ರೂಪವಾದ ತ್ರಿವಿಧ ಕರ್ಮಫಲವೂ ಬರುತ್ತಲೇ ಇರುವುದು. ಸಂನ್ಯಾಸಿನಾಂ = ತ್ಯಾಗ ಉಳ್ಳವರಿಗೆ ಎಂದರೆ ಫಲೇಚ್ಛಾರಹಿತರಾಗಿ ಕರ್ಮ ಫಲಗಳನ್ನು ಪರಮಾತ್ಮನಲ್ಲಿ ಸಮರ್ಪಿಸುವವರಿಗೆ, ಪೂರ್ವೋಕ್ತ ತ್ರಿವಿಧವಾದ ಕರ್ಮ ಫಲಗಳು ಸರ್ವಥಾ ಬರಲಾರವು (ಅವರಿಗೆ ಮೋಕ್ಷವು ಬರುವುದೆಂದು ಭಾವವು.)

---

## 25. ಇಪ್ಪತ್ತೈದನೆಯ ಅಂಶವು.

### ತ್ಯಾಗ (ಮುಂದುವರಿಸಿದ್ದು)

### ಸಾತ್ವಿಕ ತ್ಯಾಗದ ಮಹಿಮೆಯು.

1. ಸ್ವರೂಪೇಣ ಕರ್ಮ ಪರಿತ್ಯಾಗವೇ ಮುಮುಕ್ಷುವಿನಿಂದ ಅನುಷ್ಠೇಯವಾದ ಕರ್ತವ್ಯ ಧರ್ಮವೆಂದು ಹೇಳುವ ಮಿಥ್ಯಾ ಜ್ಞಾನ ಮೂಲಕವಾದ ಅದ್ವೈತ ಮತವನ್ನು ಶ್ರೀ ಕೃಷ್ಣನು ಸಯುಕ್ತಿಕವಾಗಿ ಖಂಡನೆ ಮಾಡಿ ಸಕಲ ಸಜ್ಜನಾನುಷ್ಠೇಯವಾದ ಸಾತ್ವಿಕ ತ್ಯಾಗ ಸ್ವರೂಪವನ್ನು ಹದಿನೆಂಟನೆಯ ಅಧ್ಯಾಯದಲ್ಲಿ ನಿರೂಪಿಸಿರುತ್ತಾನೆ :—

(1) ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।
ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥
ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।
ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಸ್ಸಂಪ್ರಕೀರ್ತಿತಃ ॥
ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।
ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ ॥
ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।
ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಂ ॥
—(18. 3–6)

ಅರ್ಥವು:— ಕೆಲವರು ಜ್ಞಾನಿಗಳು (ಜನನ ಮರಣ ರೂಪವಾದ ಸಂಸಾರಕ್ಕೆ

ಕಾರಣವಾಗುವುದೇ ಮುಂತಾದ ) ದೋಷಯುಕ್ತವಾದ ಕರ್ಮವು ಬಿಡಲ್ಪಡ ಬೇಕೆಂದು ಹೇಳುತ್ತಾರೆ. ಇನ್ನು ಕೆಲವು ಜ್ಞಾನಿಗಳು, ಯಜ್ಞ, ದಾನ, ತಪಸ್ಸೇ ಮುಂತಾದ ಕರ್ಮಗಳು ಪರಿತ್ಯಾಗಾರ್ಹವಲ್ಲವೆಂದು ಹೇಳುವರು. ಎಲೈ ಭರತ ಶ್ರೇಷ್ಠನೇ ! ತ್ಯಾಗ ವಿಷಯದಲ್ಲಿ ನನ್ನ ನಿಶ್ಚಯವನ್ನು ಕೇಳು :— ತ್ಯಾಗವು ಮೂರು ಪ್ರಕಾರವೆಂದು ಹೇಳಲ್ಪಟ್ಟಿರುವುದು. ಯಜ್ಞವು, ದಾನವು, ತಪಸ್ಸು, ಮುಂತಾದ ಕರ್ಮಗಳು ತ್ಯಾಜ್ಯವಲ್ಲ; ಅವುಗಳು ಅವಶ್ಯವಾಗಿ ಅನುಷ್ಠೇಯವಾದವು ಗಳು. ಯಜ್ಞ, ದಾನ, ತಪಸ್ಸುಗಳು ಪಂಡಿತರಿಗೂ ಪಾಪನಾಶಕವಾದುವುಗಳು. ( ಕೆಲವು ಜ್ಞಾನಿಗಳು ದೋಷಯುಕ್ತವಾದುದರಿಂದ ಕರ್ಮವು ಪರಿತ್ಯಾಜ್ಯವೆಂದು ಹೇಳಿರುವರಲ್ಲವೇ, ಎಂದು ಶಂಕಿಸಿದರೆ ಅವರ ಅಭಿಪ್ರಾಯವನ್ನು ವಿವರಿಸಿ ಶಾಸ್ತ್ರ ನಿಶ್ಚಿತ ಸಿದ್ಧಾಂತವನ್ನು ಶ್ರೀ ಕೃಷ್ಣನು ತಿಳಿಸುತ್ತಾನೆ :— ) ಎಲೈ ಪಾರ್ಥನೇ ! ಪೂರ್ವೋಕ್ತ ಯಜ್ಞಾದಿ ಕರ್ಮಗಳೂ ಕೂಡ ಕರ್ತೃತ್ವಾಭಿಮಾನ, ಮಮತಾಭಿ ಮಾನ ರೂಪವಾದ ಸ್ನೇಹವನ್ನು ಪರಿತ್ಯಾಗ ಮಾಡಿ, ಫಲ ಸ್ನೇಹವನ್ನು ಬಿಟ್ಟು, ಫಲಾನಿ ತ್ಯಕ್ತ್ವಾ = ಕರ್ಮ ಫಲವನ್ನು ಭಗವಂತನಲ್ಲಿ ಸಮರ್ಪಿಸಿ ಕರ್ತವ್ಯಾನಿ = ಅವಶ್ಯ ಅನುಷ್ಠೇಯವಾದುವುಗಳು ಎಂದು ನನ್ನ ವ್ಯವಸ್ಥಿತವಾದ ಮತವು.

ಈ ಪ್ರಕಾರವಾಗಿ ಕರ್ಮ ಫಲಾಪೇಕ್ಷೆಯಿಂದ ರಹಿತವಾದ ಮನಸ್ಸಿನಿಂದ ಮಾಡಲ್ಪಟ್ಟ ಕರ್ಮದ ಫಲವನ್ನು ಭಗವಂತನಲ್ಲಿ ಸಮರ್ಪಿಸುವುದೇ ನಿಜವಾದ ತ್ಯಾಗವು; ಅದ್ವೈತ ಭಾಷ್ಯದಲ್ಲಿ ನಿರೂಪಿತವಾದ ಕರ್ಮ ಸ್ವರೂಪದ ತ್ಯಾಗವು ನಿಜ ವಾದ ತ್ಯಾಗವಲ್ಲ, ಎಂಬುದು ಶ್ರೀ ಕೃಷ್ಣನ ಸಿದ್ಧಾಂತವೆಂದು ಸ್ಪಷ್ಟವಾಯಿತು.

2. ಕರ್ಮವನ್ನು ನಿಶ್ಶೇಷವಾಗಿ ಪರಿತ್ಯಾಗ ಮಾಡುವುದು ಅಶಕ್ಯವೆಂದು ಶ್ರೀ ಕೃಷ್ಣನು ಹೇಳಿರುತ್ತಾನೆ :—

(1) **ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥**
—(18. 11.)

“ಎಲೈ ಪಾರ್ಥನೇ ! ಸಕಲ ಕರ್ಮಗಳನ್ನೂ ನಿಶ್ಶೇಷವಾಗಿ ಪರಿತ್ಯಾಗ ಮಾಡುವುದು ಯಾವ ಪ್ರಾಣಿಗೂ ಶಕ್ಯವಲ್ಲ ( ಆದುದರಿಂದ ಇದು ನಿಜವಾದ ತ್ಯಾಗವಲ್ಲವೆಂದು ಭಾವವು, ಯಥಾರ್ಥವಾದ ತ್ಯಾಗವೇನೆಂದರೆ :— ) ಯಾವಾ ತನು ಕರ್ಮ ಫಲಾಪೇಕ್ಷೆಯನ್ನು ಪರಿತ್ಯಾಗ ಮಾಡುವನೋ, ಮತ್ತು ಕರ್ಮ ಫಲ ಗಳನ್ನು ಪರಮಾತ್ಮನಲ್ಲಿ ಸಮರ್ಪಿಸುವನೋ ಆತನೇ ನಿಜವಾದ ತ್ಯಾಗವುಳ್ಳವ ನೆನ್ನಿಸುವನು.”

3. ವಿಧ್ಯುಕ್ತ ಕರ್ಮವನ್ನು ಪರಿತ್ಯಾಗ ಮಾಡುವುದು ತಾಮಸವೆಂದೂ ಶ್ರೀ ಕೃಷ್ಣನು ಹೇಳುತ್ತಾನೆ :—

(1) **ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥** —(18. 7.)

"ವಿಧಿವಿಹಿತವಾದ ವರ್ಣಾಶ್ರಮೋಚಿತವಾದ ಕರ್ಮಕ್ಕೆ ಸ್ವರೂಪೇಣ ತ್ಯಾಗವು ಉಚಿತವಲ್ಲ. (ಅದ್ವೈತ ಮತವೇ ಮುಂತಾದ ಮತಗಳಿಂದ ಪ್ರಸಂಜಿತವಾದ) ವಿಪರೀತ ಜ್ಞಾನದಿಂದ ವಿಹಿತ ಕರ್ಮವನ್ನು ಪರಿತ್ಯಾಗ ಮಾಡುವುದು ತಾಮಸ ವೆಂದು ಹೇಳಲ್ಪಟ್ಟಿರುವುದು."

4. ಹೀಗೆಯೇ ಶ್ರೀ ಕೃಷ್ಣನು ರಾಜಸ ತ್ಯಾಗವನ್ನು ನಿಂದಿಸಿ, ಸಾತ್ವಿಕ ವಾದ ಎಂದರೆ ಮುಕ್ತಿಯೋಗ್ಯರಾದ ಸಜ್ಜನರಿಂದ ಅನುಷ್ಠಿಸಲ್ಪಡುವ ಶಾಸ್ತ್ರಸಮ್ಮತ ವಾದ ತ್ಯಾಗವನ್ನು ವರ್ಣಿಸುತ್ತಾನೆ :—

(1) **ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥**
**ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।**
**ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಸ್ಸಾತ್ವಿಕೋ ಮತಃ ॥**
—(18. 8–9.)

**ಅರ್ಥವು :—** (ಕರ್ಮಾಚರಣೆಯು ಆವಶ್ಯಕವೆಂದು ತಿಳಿದು) ಕರ್ಮಾ ಚರಣೆಯು ದುಃಖರೂಪವಾಗಿರುವುದೆಂದು ಶರೀರಾಯಾಸ ಭೀತಿಯಿಂದ ಕರ್ಮ ಪರಿತ್ಯಾಗ ಮಾಡುವವನು ರಾಜಸ ತ್ಯಾಗವನ್ನು ಮಾಡಿದವನಾಗಿ (ಭಗವತ್ಪ್ರೀತ್ಯಾದಿ ರೂಪವಾದ) ತ್ಯಾಗದ ಫಲವನ್ನು ಹೊಂದುವುದಿಲ್ಲ. ವಿಹಿತ ಕರ್ಮಾನುಷ್ಠಾನವು ಅವಶ್ಯವಾಗಿ ಆಚರಿಸಲ್ಪಡತಕ್ಕದ್ದೆಂಬ ಬುದ್ಧಿಪೂರ್ವಕವಾಗಿ, ಕರ್ತೃತ್ವ, ಮಮತಾಭಿ ಮಾನ ಪರಿತ್ಯಾಗಪೂರ್ವಕವಾಗಿ, ಮತ್ತು ಫಲಾಪೇಕ್ಷಾರಾಹಿತ್ಯಪೂರ್ವಕವಾಗಿ ಮಾಡಲ್ಪಟ್ಟ ಕರ್ಮದ ಫಲವನ್ನು ಭಗವಂತನಲ್ಲಿ ಸಮರ್ಪಣೆ ಮಾಡೋಣವೆಂಬುದು ಯಾವುದೋ ಅದು ಸಾತ್ವಿಕ ತ್ಯಾಗವೆಂದು ಹೇಳಲ್ಪಡುವುದು.

5. **ಪ್ರಶ್ನೆ :—** ಸ್ವಾಮೀ! ಕರ್ಮಫಲಗಳಲ್ಲಿ ಅಪೇಕ್ಷೆಯನ್ನು ಪರಿತ್ಯಾಗ ಮಾಡಿ ನಿಷ್ಕಾಮವಾಗಿ ಕರ್ಮವನ್ನು ಆಚರಿಸಿದ ಮೇಲೆ ಕರ್ಮ ಫಲವನ್ನು ಈಶ್ವರ ನಲ್ಲಿ ಸಮರ್ಪಿಸುವುದರಲ್ಲಿ ಕಾರಣವೇನು? ಈಶ್ವರನಿಂದ ನಾವು ಯಾವ ಫಲವನ್ನೂ ಕೋರುವುದಿಲ್ಲವಷ್ಟೇ?

**ಉತ್ತರ :— ಶ್ರೀ ಶ್ರೀಗಳವರು :—** ಈಶ್ವರನ ಪ್ರೀತಿ, ಜ್ಞಾನ, ಭಕ್ತಿ, ವೈರಾಗ್ಯಾದಿ ಫಲಗಳನ್ನು ಕೋರುವಿರೋ ಇಲ್ಲವೋ?

**ವಿದ್ಯಾರ್ಥಿಗಳು :—** ಕೋರುತ್ತೇವೆ.

**ಶ್ರೀ ಶ್ರೀಗಳವರು :—** ಸರಿ, ಹಾಗಿದ್ದರೆ ಕರ್ಮ ಫಲವನ್ನು ಈಶ್ವರನಿಗೆ ಸಮರ್ಪಿಸುವುದು ಉಚಿತವೇ. ನಿಷ್ಕಾಮನಾಗಿ ಕರ್ಮ ಮಾಡೋಣವೆಂದರೆ ಕ್ಷುದ್ರ ವಾದ, ಅನಿತ್ಯವಾದ ಸ್ವರ್ಗ, ದಾರಾ, ಪುತ್ರ ಧನಾದಿ ರೂಪವಾದ ಫಲಗಳನ್ನು ಬಯಸದೆ ಉತ್ತಮವಾದ, ಶಾಶ್ವತವಾದ ಮೋಕ್ಷ ರೂಪ ಫಲವನ್ನೂ, ಭಗವತ್ಪ್ರೀತಿ

ರೂಪವಾದ ಮಹಾಫಲವನ್ನೂ ಅಪೇಕ್ಷಿಸಬೇಕೆಂದು ಅರ್ಥವು. ಅಲ್ಪ ಆಶೆಗಳನ್ನು ಮಾಡಬಾರದು, ದೊಡ್ಡ ಆಶೆಗಳನ್ನು ಮಾಡಬೇಕು ಎಂದು ಶಾಸ್ತ್ರದ ಹಿತೋಪದೇಶವು. ಸಾಮಾನ್ಯ ಜನರು ತಾವು ಮಾಡತಕ್ಕ ಕರ್ಮಗಳಿಗೆ ಕ್ಷಿಪ್ರದಲ್ಲಿ ಬರುವ ಸ್ವರ್ಗ ಸಂತಾನಾದಿ ಫಲವನ್ನು ಕೋರುವರು. ನಿಷ್ಕಾಮಿಗಳಾದ ಮುಮುಕ್ಷುಗಳು ಬಹುಕಾಲ ಪರ್ಯಂತವೂ ಕಾಯುವುದರಲ್ಲಿ ಸಮರ್ಥರಾಗಿ ಮಹತ್ಫಲವನ್ನೇ ಸಾಧಿಸುವರು. ಇಷ್ಟೇ ವಿನಹ ಪ್ರಯೋಜನವನ್ನು ಅಪೇಕ್ಷಿಸದೆ ಕರ್ಮವನ್ನು ಮಾಡುವುದು ಅಸಂಭಾವಿತವು.

ಇದರ ಮೇಲೆ ಸಕಾಮನಾಗಲೀ, ನಿಷ್ಕಾಮನಾಗಲೀ ಸರ್ವರೂ ಪರಮಾತ್ಮನ ಅಧೀನರು. ಕರ್ಮ ಫಲಪ್ರದಾತನು ಶ್ರೀ ಕೃಷ್ಣನೇ ಆಗಿರುವನು. ಆದುದರಿಂದ ಕರ್ಮಗಳನ್ನು ನಾವು ಆತನ ಆರಾಧನ ರೂಪವಾಗಿ ಆಚರಿಸಿ ಪರಮಾತ್ಮನು ಇವುಗಳನ್ನು ಸ್ವೀಕರಿಸಿ ಅನುಗ್ರಹೋನ್ಮುಖನಾಗಲಿ ಎಂಬ ಅನುಸಂಧಾನಪೂರ್ವಕವಾಗಿ ಆತನ ಪಾದದಲ್ಲಿ ಸಮರ್ಪಿಸಬೇಕು. ಅನ್ಯಥಾ ಕರ್ಮ ಫಲಗಳನ್ನು ದೈತ್ಯರು ಕದ್ದೊಯ್ಯುವರು ಎಂದು ಪ್ರಮಾಣಗಳಲ್ಲಿ ಉಕ್ತವಾಗಿರುವುದು. * ಆದುದರಿಂದ ನಾವು ಗಳಿಸಿದ ಹಣವನ್ನು ಬ್ಯಾಂಕಿನಲ್ಲಿ ಇಡುವಂತೆ ನಮ್ಮ ಕರ್ಮ ಫಲಗಳನ್ನು ಪರಮಾತ್ಮನಲ್ಲಿ ಅರ್ಪಿಸಬೇಕು. ಸಕಾಮನಾಗಿ ಅರ್ಪಿತವಾದುದನ್ನು ಸ್ವರ್ಗಾದಿ ಪ್ರತಿಫಲ ರೂಪವಾಗಿ ಪರಮಾತ್ಮನು ಕೊಟ್ಟು ಬಿಡುವನು. ನಿಷ್ಕಾಮನಾಗಿ ಅರ್ಪಿತವಾದ ಕರ್ಮವನ್ನು ಆತನು ತಾನೇ ಸ್ವೀಕರಿಸಿ ಅವುಗಳಿಗೆ ಕ್ಷುದ್ರ ಫಲಗಳನ್ನು ಪ್ರತಿಫಲ ರೂಪವಾಗಿ ಕೊಡದೆ ಉತ್ತಮವಾದ ಜ್ಞಾನಾದಿ ಫಲಗಳನ್ನು ಕೊಡುವನು. ಅನರ್ಪಿತವಾದ ಕರ್ಮವು ಮಾತ್ರ ಭಸ್ಮದಲ್ಲಿ ಮಾಡಿದ ಹೋಮದಂತೆ ನಿರರ್ಥಕವಾಗುವುದು.

6. ಪ್ರಶ್ನೆ :— ಸ್ವಾಮೀ ! ತ್ಯಾಗವು ಯಾವ ಪ್ರಕಾರವಾಗಿ ಬ್ರಹ್ಮಜ್ಞಾನಕ್ಕೆ ಸಾಧಕವಾಗುವುದು ?

**ಉತ್ತರ :— ಶ್ರೀ ಶ್ರೀಗಳವರು :—** ನಾವು ಹಿಂದೆಯೇ ನಿರೂಪಿಸಿರುತ್ತೇವೆ. ತ್ಯಾಗಾದಿಗಳು ಅಂತಃಕರಣ ಶುದ್ಧಿ ದ್ವಾರಾ ಪರಂಪರಯಾ ಜ್ಞಾನಕಾರಣವೆನ್ನಿಸುವುವು; ಅದರಲ್ಲಿಯೂ ತ್ಯಾಗವು ಮುಮುಕ್ಷುವಿಗೆ ಜ್ಞಾನಸಾಧನ ಮಾರ್ಗ

---

* ಇದು ಹರಿವಂಶದಲ್ಲಿ ಶ್ರೀ ವಾಮನ ದೇವರು ಬಲಿನಾಮಕ ದೈತ್ಯ ರಾಜನಿಗೆ ಹೇಳಿದ ಮಾತುಗಳು :—

**ವೇದೋಕ್ತಂ ಯೇ ಪರಿತ್ಯಜ್ಯ ಧರ್ಮಮನ್ಯಂ ಪ್ರಕುರ್ವತೇ ।**
**ತತ್ಸರ್ವಂ ತವ ದೈತ್ಯೇಂದ್ರ ಮತ್ಪ್ರಸಾದಾದ್ಭವಿಷ್ಯತಿ ॥**

**ಅರ್ಥವು :—** ವೇದೋಕ್ತ ವಿಧಿಯನ್ನು ಪರಿತ್ಯಜಿಸಿ ( ವಿಧ್ಯುಕ್ತವಾಗಿ ಕರ್ಮ ಮಾಡದೆ, ಪರಮಾತ್ಮನಲ್ಲಿ ಸಮರ್ಪಿಸದೆ ) ವಿಪರೀತ ರೀತಿಯಲ್ಲಿ ಕರ್ಮವನ್ನು ಆಚರಿಸಿದರೆ ಅದೆಲ್ಲವೂ ಎಲೈ ಬಲಿಯೇ ! ನನ್ನ ಪ್ರಸಾದದಿಂದ ನಿನಗೆ ಬಂದು ಸೇರುತ್ತದೆ.

ದಲ್ಲಿ ಪ್ರಾಪ್ತವಾಗುವ ಪ್ರಥಮ ಸೋಪಾನವು ಎಂದು ತಿಳಿಯಬೇಕು. ಜ್ಞಾನರಹಿತನಾಗಿ, ಚಿತ್ತಶುದ್ಧಿರಹಿತನಾಗಿ, ನಿಷ್ಕಾಮ ಕರ್ಮಾನುಷ್ಠಾನವನ್ನು ಉತ್ತಮ ಕಲ್ಪದಿಂದ ಮಾಡುವುದಕ್ಕೆ ಅಸಮರ್ಥನಾಗಿ ಶ್ರದ್ಧಾಮಾತ್ರದಿಂದ ಕೂಡಿದ ಮುಮುಕ್ಷುವು ಜ್ಞಾನವನ್ನು ಸಂಪಾದಿಸುವದಕ್ಕಾಗಿ ಪ್ರಥಮತಃ ಯಾವ ಉಪಾಯವನ್ನು ಆಚರಿಸಬೇಕು ಎಂದು ನೀವು ಹಿಂದೆ ಕೇಳಿದ್ದಿರಿ. ಅದಕ್ಕೆ ಇದು ಉತ್ತರವು :— ಶ್ರದ್ಧಾವಂತನಾದ ಮುಮುಕ್ಷುವು ಎಷ್ಟೇ ಕಲುಷಿತಚಿತ್ತನಾದರೂ ಪರಮಾತ್ಮನನ್ನು ಸ್ಮರಿಸುತ್ತಾ, ತನಗೆ ಯಾವ ದೇವತೆಯಲ್ಲಿ ವಿಶ್ವಾಸ ಇರುವುದೋ ಅಂಥ ದೇವತೆಯನ್ನೇ ಭಜಿಸಿ, ಅಥವಾ ಸಹಜವಾಗಿ ತನಗೆ ಅವಕಾಶ ಒದಗಿದಂತೆ ಏನೇನು ಪುಣ್ಯ ಕರ್ಮಗಳನ್ನು ಮಾಡುವನೋ ಅವುಗಳನ್ನೆಲ್ಲಾ "**ಶ್ರೀ ಕೃಷ್ಣಾರ್ಪಣಮಸ್ತು**" ಎಂದು ಭಗವಂತನಲ್ಲಿ ಸಮರ್ಪಿಸಬೇಕು. ಇದು ಸಾಮಾನ್ಯ ತ್ಯಾಗವು. ಇದರಿಂದ ಪರಮಾತ್ಮನು ಪ್ರಸನ್ನನಾಗಿ ಚಿತ್ತಶುದ್ಧಿಯನ್ನು ಕೊಡುವನು. ಅನಂತರ ಶುದ್ಧ ಮನಸ್ಸಿನಿಂದ ನಿಷ್ಕಾಮವಾದ ಕರ್ಮವನ್ನು ನಿಯತವಾದ ರೀತಿಯಲ್ಲಿ ಅಧಿಕವಾಗಿ ಮಾಡಿ ಪರಮಾತ್ಮನಲ್ಲಿ ಸಮರ್ಪಿಸಿದರೆ, ಭಗವದನುಗ್ರಹದಿಂದ ಮೋಕ್ಷ ಹೇತುಭೂತವಾದ ವಿಧ್ಯುಕ್ತ ಶ್ರವಣಾದಿಗಳಿಗೆ ಅವಕಾಶವು ಪ್ರಾಪ್ತವಾಗುವುದು. ಅನಂತರ ಧ್ಯಾನಾದಿ ಉಪಾಸನೆಯಿಂದ ಜೀವನು ಮುಕ್ತನಾಗುವನು.

ಶ್ರೀ ಕೃಷ್ಣನು ಹೇಳುತ್ತಾನೆ :—

**(1) ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥**
—**(12. 11.)**

**ಅರ್ಥ :—** ಎಲೈ ಅರ್ಜುನನೇ ! ನೀನು ನಿರಂತರ ಭಗವದುಪಾಸನೆಯನ್ನು ಮಾಡು. ಅದು ಅಸಾಧ್ಯವಾದರೆ ಪ್ರತ್ಯಾಹಾರಾದಿ ಪ್ರಯತ್ನಗಳನ್ನೂ, ಮನನಾದಿ ಪ್ರಯತ್ನವನ್ನೂ ಮಾಡುವವನಾಗು. ಅವುಗಳು ಸಾಧ್ಯವಲ್ಲದಿದ್ದರೆ ನಿಷ್ಕಾಮ ಕರ್ಮವನ್ನು ಅಧಿಕವಾಗಿ ಅನುಷ್ಠಾನ ಮಾಡು. ಚಿತ್ತೈಕಾಗ್ರತೆಯಿಂದ ಕರ್ಮಾಚರಣೆಯನ್ನು ಮಾಡುವುದಕ್ಕೂ ನೀನು ಅಸಮರ್ಥನಾದರೆ, ನೀನು ನಿನಗೆ ಇಷ್ಟವಾದ ದೇವತಾ ಪೂಜಾದಿಗಳನ್ನು ಮಾಡಿ, ಅಥವಾ ನೀನು ಅವುಗಳನ್ನು ಅವಶ್ಯವಾಗಿ ಮಾಡುವ ವಿಧ್ಯುಕ್ತ ನಿತ್ಯನೈಮಿತ್ತಿಕ ಕರ್ಮಗಳನ್ನೇ ನನ್ನ ಪ್ರೀತ್ಯರ್ಥವಾಗಲೆಂದು ಮಾಡಿ, ಯತಾತ್ಮವಾನ್ = ಮನಸ್ಸನ್ನು ನನ್ನಲ್ಲಿ ಇಡೋಣವೆಂಬ ಯತ್ನಪೂರ್ವಕವಾಗಿ ಸಕಲ ಕರ್ಮ ಫಲಗಳನ್ನೂ ನನ್ನಲ್ಲಿ ಸಮರ್ಪಿಸು

ಈ ಪ್ರಕಾರವಾಗಿ ಸಾಮಾನ್ಯವಾದ ತ್ಯಾಗವು ಮೋಕ್ಷೋಪಾಯದಲ್ಲಿ ಪ್ರಥಮ ಸೋಪಾನವೆಂದು ಕರೆಯಲ್ಪಡುವುದು. ಜ್ಞಾನಾದಿಗಳು ಪ್ರಾಪ್ತವಾದ ನಂತರ ಅತ್ಯಂತ ನಿಷ್ಕಾಮತೆಯಿಂದ ಸಹಿತವಾಗಿ ಆಚರಿಸಲ್ಪಟ್ಟ ತ್ಯಾಗವು ಕ್ಷಿಪ್ರದಲ್ಲಿ ಬ್ರಹ್ಮಾಪರೋಕ್ಷ ಜ್ಞಾನಕ್ಕೆ ಸಾಧನವಾಗುವುದು. ಹೇಗಿದ್ದರೂ ಸಾಂಖ್ಯ, ಸಂನ್ಯಾಸ, ಕರ್ಮಾನುಷ್ಠಾನ, ತ್ಯಾಗಗಳೆಂಬ ನಾಲ್ಕು ಅಂಶಗಳೂ, ಒಂದು ಯಂತ್ರದ ನಾಲ್ಕು

ಭಾಗಗಳಂತೆ, ಸಮಗ್ರವಾಗಿ, ಮಿಳಿತವಾಗಿಯೇ ಧ್ಯಾನಕ್ಕೆ ಕಾರಣವಾಗಿ ಶ್ರೀ ಹರಿ ಪ್ರಸಾದದ್ವಾರಾ ಅಪರೋಕ್ಷ ಜ್ಞಾನವನ್ನು ಹುಟ್ಟಿಸುವುವು. ಸರ್ವತ್ರ ಸರ್ವಸಾಧನಗಳ ಅನುಷ್ಠಾನಾರಂಭದಲ್ಲಿಯೂ, ಅಂತ್ಯದಲ್ಲಿ, ಅನುಷ್ಠಿತವಾದ ಸಾಧನೆಗಳಿಗೆ ಫಲವನ್ನು ಕೊಡುವುದರಲ್ಲಿಯೂ ಸ್ವತಂತ್ರನಾದ ಶ್ರೀ ಪರಮಾತ್ಮನ ಪ್ರಸಾದವು ಅತ್ಯಾವಶ್ಯಕವು ಎಂಬ ನಮ್ಮ ಪೂರ್ವ ನಿರೂಪಿತ ನಿಶ್ಚಯವನ್ನು ನೀವು ಜ್ಞಾಪಕದಲ್ಲಿಟ್ಟಿರಬೇಕು.

7. ಇಷ್ಟು ಸಂಕ್ಷಿಪ್ತ ಮೋಕ್ಷ ಸಾಧನ ಪ್ರಕಾರ ವರ್ಣನೆಯು ಪ್ರಕೃತಿ ಬಂಧ ನಿವೃತ್ತಿಪೂರ್ವಕವಾದ ಸ್ವರೂಪಾನಂದಾವಿರ್ಭಾವ ರೂಪವಾದ ಮುಕ್ತಿಯು ನಿಯಾಮಕನಾದ ಶ್ರೀ ಪರಮಾತ್ಮನ ಅನುಗ್ರಹದಿಂದ ಬದ್ಧರಾದ ಜೀವರುಗಳಿಗೆ ಪ್ರಾಪ್ತವಾಗಬೇಕು. ನಿಯಾಮಕನಾದ ಪರಮಾತ್ಮನ ಪ್ರಸಾದವು ನಿಷ್ಕಾರಣವಾಗಿ ಬರಲಾರದು. ಅಧಿಕಾರಿಯ ನಿರಪೇಕ್ಷವಾದ ಪರಮ ಭಕ್ತಿಯು ಮಹಾಪುರುಷನ ಪ್ರಸಾದವನ್ನು ಹೊಂದಿಸುವುದರಲ್ಲಿ ಸಮರ್ಥವಾಗುವುದೆಂದು ಹೇಳುವುದು ಯುಕ್ತಿಯುಕ್ತವಾಗಿಯೂ ಇರುವುದು. ಇಂಥ ಪರಮ ಭಕ್ತಿಯು ಬ್ರಹ್ಮಸಾಕ್ಷಾತ್ಕಾರದಿಂದಲೂ, ಅಂಥ ಬ್ರಹ್ಮಜ್ಞಾನವು ಧ್ಯಾನದಿಂದಲೂ ಪರಮಾತ್ಮ ಪ್ರಸಾದದಿಂದಲೇ ಪ್ರಾಪ್ತವಾಗುವುವು. ಧ್ಯಾನಕ್ಕೆ ಚಿತ್ತಪ್ರಸಾದವೂ ಮತ್ತು ಶ್ರವಣ, ಮನನ ಜನಿತವಾದ ವಿಷ್ಣು ಸರ್ವೋತ್ತಮತ್ವ ನಿಶ್ಚಯವೂ ಆವಶ್ಯಕವು. ನಿಷ್ಕಾಮತ್ವಪೂರ್ವಕವಾಗಿ ಆಚರಿಸಲ್ಪಟ್ಟು ಪರಮಾತ್ಮನಲ್ಲಿ ಸಮರ್ಪಿಸಲ್ಪಟ್ಟ ವಿಧ್ಯುಕ್ತ ಕರ್ಮವು ಚಿತ್ತಶುದ್ಧಿಗೆ ಕಾರಣವಾಗಿ ಶ್ರವಣ, ಮನನಾದಿ ದ್ವಾರಾ ಧ್ಯಾನಕ್ಕೆ ಕಾರಣವಾಗುವುದು. ವಿಹಿತ ಕರ್ಮವನ್ನು ಸ್ವರೂಪತಃ ಪರಿತ್ಯಜಿಸಿದ ಮಂದನು ನರಕಾದ್ಯನರ್ಥಗಳನ್ನು ಹೊಂದುವನು. ಆದರಲ್ಲಿಯೂ ಸ್ವಸ್ವವರ್ಣಾಶ್ರಮೋಚಿತವಾದ ಧರ್ಮಗಳನ್ನು ಪರಿತ್ಯಾಗ ಮಾಡಿ ಯಥೇಷ್ಟ ವ್ಯವಹಾರದಲ್ಲಿ ರತನಾದವನು ವರ್ಣಸಂಕರಕಾರಕನಾಗಿ ತಾನು ಘೋರವಾದ ನರಕಗಳನ್ನು ಹೊಂದುವುದಲ್ಲದೇ ತನ್ನ ಕುಲಸ್ಥ ಪೂರ್ವಿಕರಿಗೂ ದುರ್ಗತಿಯನ್ನು ಹೊಂದಿಸುವನು. ಆದುದರಿಂದ ಸರ್ವ ಸಜ್ಜನರೂ ಸ್ವಸ್ವವರ್ಣಾಶ್ರಮೋಚಿತ ಧರ್ಮಗಳಲ್ಲಿ ರತರಾಗಿ ಯಥಾಶಕ್ತಿ ಶ್ರವಣ, ಮನನಾದಿ ಜ್ಞಾನ ಸಾಧನಗಳಲ್ಲಿ ತತ್ಪರರಾಗಿ ಶ್ರೀ ಪರಮಾತ್ಮನ ಪ್ರಸಾದದಿಂದಲೇ ಕ್ರಮಕ್ರಮವಾಗಿ ವೃದ್ಧವಾದ ಜ್ಞಾನಾದಿ ಸಂಪತ್ತುಗಳನ್ನು ಅನುಭವಿಸಿ ಬ್ರಹ್ಮಾಪರೋಕ್ಷವನ್ನು ಹೊಂದುವುದಕ್ಕೆ ಯತ್ನಿಸಬೇಕು. ಇದು ಶ್ರೀ ಕೃಷ್ಣನ ಸಿದ್ಧಾಂತವು.

8. ಭಂಗಾರದ ಸರಪಣಿಯಲ್ಲಿ ಪೋಣಿಸಿರುವ ಮಾಣಿಕ್ಯ ಮಾಲೆಯಂತೆ ಯುಕ್ತ್ಯುಪನ್ಯಾಸ ಪೂರ್ವಕವಾದ ಭಗವತ್ಪ್ರಾಪ್ತಿಸಾಧಕ ಮಾರ್ಗವನ್ನು ಶ್ರೀ ಕೃಷ್ಣನು ನಿರೂಪಿಸಿರುತ್ತಾನೆ. ಆದರೂ ಗುಹ್ಯತಮವಾದ ಭಗವಂತನ ನಿಜಾಭಿಪ್ರಾಯವನ್ನು ತಿಳಿಯದ ಕುಮತಿಗಳು ನಾನಾ ರೀತಿಯಲ್ಲಿ ಮೋಕ್ಷ ಸಾಧನವನ್ನು ಉತ್ಪ್ರೇಕ್ಷಿಸುವರು. ಭಗವತ್ಪ್ರಸಾದ ನಿರಪೇಕ್ಷವಾಗಿ ಜ್ಞಾನ ಮಾತ್ರದಿಂದ ಮಿಥ್ಯಾಭೂತವಾದ ಸಂಸಾರ ಬಂಧವು ವಿಲೀನವಾಗುವುದು; ಜ್ಞಾನ ಕರ್ಮಗಳು ಸಮುಚ್ಚಿತವಾಗಿ ಸಮಕಕ್ಷತೆ

ಯಿಂದ ಮೋಕ್ಷ ಕಾರಣಗಳು; ದ್ವೇಷಾದಿಗಳಿಂದ ಸಹಿತವಾದರೂ ನಿರಂತರ ಧ್ಯಾನ ಮಾತ್ರವೇ ಮೋಕ್ಷ ಸಾಧನವು; ಗುರು ಪಾದದಲ್ಲಿ ಶ್ರವಣ ಮನನಾದಿ ಸಾಧನ ರಹಿತವಾದ ಪ್ರಪತ್ತಿ ಮಾತ್ರವು ಮುಕ್ತಿದಾಯಕವು; ಸಕಲ ಕರ್ಮ ಪರಿತ್ಯಾಗ ಪೂರ್ವಕವಾದ ಆತ್ಮೈಕ್ಯ ಜ್ಞಾನವು ಮುಕ್ತಿಸಾಧಕವು; ಅಹಿಂಸಾದಿ ಕರ್ಮ ಮಾತ್ರ ದಿಂದ ಮುಕ್ತಿಯು; ಇತ್ಯಾದಿ ನಾನಾ ಪ್ರಕಾರವಾಗಿ ತಮೋಗುಣ ವ್ಯಾಪ್ತವಾದ ತಮ್ಮ ಕುಬುದ್ಧಿಗಳಿಂದ ಜನಿತವಾದ ಸ್ವೋತ್ಪ್ರೇಕ್ಷಿತ ಅಭಿಪ್ರಾಯಗಳನ್ನು ಗೀತಾರ್ಥ ವೆಂದು ಉಪಪಾದಿಸಿ ಶ್ರೀ ಕೃಷ್ಣನ ಮತವನ್ನು ಆಗ್ರಹದಿಂದ ನಾಶ ಮಾಡುವರು. ತಮ್ಮ ತಮ್ಮ ಮನೋನುಕೂಲವಾಗಿ ತತ್ವಗಳನ್ನು ಕಲ್ಪಿಸಿಕೊಂಡು ಅದನ್ನು ಬಲಾ ತ್ಕಾರವಾಗಿ ಗೀತೆಯಲ್ಲಿ ಯೋಜನೆ ಮಾಡಿ, ಪ್ರಬಲಾಶ್ರಯದಿಂದ ತಮ್ಮ ದುಷ್ಕರ್ಮ ವನ್ನು ಮರೆಮಾಚುವುದಕ್ಕೆ ಎಣಿಸಿದ ದುರ್ಜನರಂತೆ, ನಾನಾ ಭಾಷ್ಯಕಾರರುಗಳೂ ಸಹ ಶ್ರೀ ಕೃಷ್ಣನ ದ್ರೋಹವನ್ನು ಸಂಪಾದಿಸಿರುವರೆಂದು ಪರಂಪರೋಪದೇಶದಿಂದ ಪ್ರಾಪ್ತವಾದ ವಿಷ್ಣು ತತ್ವ ರಹಸ್ಯವನ್ನು ಬಲ್ಲ ಸಜ್ಜನರು ನಿರ್ಣಯಿಸುವರು. ಆದುದ ರಿಂದ ಸರ್ವ ವೈಷ್ಣವ ಸಜ್ಜನರೂ, ಪ್ರಕೃತದಲ್ಲಿ, ಭರತಖಂಡದಲ್ಲಿ, ವರ್ಣಾಶ್ರಮ ಧರ್ಮನಾಶದಲ್ಲಿ ಪರ್ಯವಸಾನವನ್ನು ಹೊಂದಿರುವ ಆತಏವ ಭಗವಂತನಾದ ಶ್ರೀ ಕೃಷ್ಣನ ಕೋಪಾಗ್ನಿಯಿಂದ ಭಸ್ಮೀಭೂತವಾಗಿರುವ ದುಷ್ಟ ಸಮಾಜಗಳಿಂದ ದೂರೀ ಕೃತವಾದ ಮನಸ್ಸುಳ್ಳವರಾಗಿ, ಸ್ವಸ್ವವರ್ಣಾಶ್ರಮೋಚಿತವಾದ ರೀತಿಯಲ್ಲಿ ದೇಶ ಸೇವೆ, ಸಂಘಸೇವೆ, ಕುಟುಂಬಪೋಷಣೆ, ಸ್ವದೇಹಪಾಲನಾದಿಗಳನ್ನು ಮಾಡಬೇಕು. ಮತ್ತು ತಮ್ಮ ತಮ್ಮ ಮನೋಭಿಲಷಿತವಾದ ತತ್ವಗಳನ್ನು ಮುಕುಂದನು ಉಪದೇಶ ಮಾಡದಿರುವುದರಿಂದ, ಗೀತೆಯಲ್ಲಿ ದೋಷವನ್ನೆಣಿಸಿ ಕಾಲಾನುಗುಣವಾಗಿ ಧರ್ಮ ಪರಿವರ್ತನವನ್ನು ಬಯಸುವ ದುಷ್ಟಚಿತ್ತರೂ ಸಹ ಶ್ರೀ ಕೃಷ್ಣ ವಿದ್ವೇಷಿಗಳಾಗಿರು ವುದರಿಂದ, ಶ್ರೇಯೋರ್ಥಿಗಳು ಸಜ್ಜನ ಸಂಗದಲ್ಲಿ ಸಾವಧಾನ ಮನಸ್ಸಿನಿಂದ ವಿಚಾರ ಮಾಡಿ ನಿಜತತ್ವವನ್ನು ತಿಳಿದುಕೊಂಡು ಶಾಶ್ವತವಾದ ಶ್ರೀ ಕೃಷ್ಣನಿಂದ ಪರಿರಕ್ಷಿತ ವಾದ ಧರ್ಮ ಮಾರ್ಗದ ಮರ್ಯಾದೆಯನ್ನು ಸ್ವಲ್ಪವೂ ಮೀರದೆ, ಭಗವತ್ಪ್ರಸಾದಕ್ಕೆ ಪಾತ್ರರಾಗತಕ್ಕದ್ದೆಂದು ನಾವು ಪುನಃ ಪುನಃ ಉಪದೇಶ ಮಾಡಿರುತ್ತೇವೆ.

ಶ್ರೀ ಕೃಷ್ಣನು ಹೇಳುತ್ತಾನೆ :—

(1) **ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।**
**ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ॥**
**ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಂ ।**
**ಸರ್ವಜ್ಞಾನವಿಮೂಢಾಂಸ್ತಾನ್ವಿದ್ಧಿ ನಷ್ಟಾನಚೇತಸಃ ॥**
—(3. 31–32.)

**ಅರ್ಥವು :—** ಯಾವ ಮನುಷ್ಯರು ನನ್ನ (ಶ್ರೀ ಕೃಷ್ಣನ) ವಾಕ್ಯದಲ್ಲಿ ವಿಶ್ವಾಸವುಳ್ಳವರಾಗಿ, ಕಷ್ಟವಾದ ಕರ್ಮಾನುಷ್ಠಾನದಲ್ಲಿ ಪ್ರವೃತ್ತಿಯುಂಟು ಮಾಡಿದ

ನೆಂದು ನನ್ನಲ್ಲಿ ದೋಷ ದೃಷ್ಟಿಯನ್ನು ಮಾಡದೆ, ನನ್ನಿಂದ ಉಕ್ತವಾದ ರೀತಿಯಲ್ಲಿ ಜ್ಞಾನೋಪಾಯವನ್ನು ಅನುಷ್ಠಾನ ಮಾಡುತ್ತಾರೆಯೋ, ಅವರು ಸಕಲ ಕರ್ಮ ಬಂಧದಿಂದ ಮುಕ್ತರಾಗುತ್ತಾರೆ. ಯಾರು ನನ್ನ ಮಾತನ್ನು ಕುರಿತು ಅಭ್ಯಸೂಯಂತಃ = ಯಥಾರ್ಥವಾಗಿದ್ದರೂ ಅದರಲ್ಲಿ ದೋಷದೃಷ್ಟಿಯುಳ್ಳವರಾಗಿ ಆಚರಿಸುವುದಿಲ್ಲವೋ ಅಂಥವರು ವಿವೇಕಶೂನ್ಯರು, ಸರ್ವ ವಿಷಯದಲ್ಲಿಯೂ ಮಿಥ್ಯಾಜ್ಞಾನಿಗಳು ಮತ್ತು ನರಕಾದ್ಯನರ್ಥ ಭಾಗಿಗಳು ಎಂದು ನೀನು ತಿಳಿಯುವವನಾಗು.

---

## VIII.

# ಪ್ರಮಾಣ ವಿಚಾರವು.

**15-8-1930 ರಲ್ಲಿ ( ಚಿತ್ರರಂಜನ, ಮೈಸೂರು. )**



**ಸಭಿಕರು :— ಧರ್ಮಾಧಿಕಾರಿಗಳು, ವಿದ್ವಾಂಸರು ಮತ್ತು ವಿದ್ಯಾರ್ಥಿಗಳು.**

**ವಿದ್ಯಾರ್ಥಿಗಳು :—** ಸ್ವಾಮೀ ! " ಭಕ್ತಿಶ್ಚ ತತ್ಸಾಧನಂ " ಎಂಬ ಶ್ಲೋಕ ಭಾಗವು ಗೀತಾವಾಕ್ಯಗಳ ಆಧಾರದಿಂದ ತಮ್ಮಿಂದ ಸವಿಸ್ತರವಾಗಿ ವಿವೃತವಾಯಿತು. ಇನ್ನು " ಅಕ್ಷಾದಿತ್ರಿತಯಂ ಪ್ರಮಾಣಂ " ಎಂಬ ಪಾದದ ಅರ್ಥವನ್ನು ವಿವರಿಸಿ ಶ್ರೀ ಕೃಷ್ಣನ ವಾಕ್ಯಗಳಿಂದ ಉಕ್ತ ವಿಷಯವನ್ನು ಸಾಧಿಸಬೇಕಾಗಿರುವದು.

**ಉತ್ತರ :— ಶ್ರೀ ಶ್ರೀಗಳವರು :—** ಒಳ್ಳೆಯದು. ಸರ್ವಾರ್ಥ ಚಿಂತಾ ಮಣಿಯಾದ ಶ್ರೀ ಕೃಷ್ಣ ವಾಕ್ಯವನ್ನು ನಂಬಿದರೆ ಯಾವ ಅರ್ಥವನ್ನು ಸಾಧಿಸಿ ಕೊಡುವುದು ಕಷ್ಟವಾಗುವುದು ? " **ಅಕ್ಷಾದಿತ್ರಿತಯಂ ಪ್ರಮಾಣಂ** " ಎಂದರೆ ಪ್ರತ್ಯಕ್ಷ, ಅನುಮಾನ, ಆಗಮಗಳು ಮೂರೇ ಪ್ರಮಾಣಗಳು ಎಂದು ಅರ್ಥವು. ಪ್ರಮಾಣವೆಂದರೆ ಯಥಾರ್ಥ ಜ್ಞಾನವನ್ನು ಹುಟ್ಟಿಸತಕ್ಕದ್ದು ಎಂದು ಅರ್ಥವು. ಇದರಲ್ಲಿ ದೋಷರಹಿತವಾದ ಶ್ರೋತ್ರ, ಚಕ್ಷು, ತ್ವಕ್, ಜಿಹ್ವಾ, ಘ್ರಾಣಗಳೆಂಬ ಪಂಚ ಜ್ಞಾನಜನಕವಾದ ಇಂದ್ರಿಯಗಳು, ಮನಸ್ಸು ಮತ್ತು ಸಾಕ್ಷೀ ಎಂದು ಶಾಸ್ತ್ರ ದಲ್ಲಿ ಕರೆಯಲ್ಪಡುವ ಜೀವ ಸ್ವರೂಪೇಂದ್ರಿಯವು, ಇವು ಏಳು ಕರಣಗಳು ( ಜ್ಞಾನ ಸಾಧನಗಳು ) ಪ್ರತ್ಯಕ್ಷ ಪ್ರಮಾಣಗಳೆನ್ನಿಸುವುವು. ಇವುಗಳಿಂದ ಹುಟ್ಟತಕ್ಕ ಯಥಾರ್ಥ ಜ್ಞಾನಕ್ಕೂ ಪ್ರತ್ಯಕ್ಷವೆಂದು ಹೆಸರು. ಇವುಗಳಲ್ಲಿ ಶ್ರೋತ್ರೇಂದ್ರಿಯ ದಿಂದ ಶಬ್ದವಿಷಯಕ ಪ್ರತ್ಯಕ್ಷವು ಉಂಟಾಗುವುದು; ಚಕ್ಷುರಿಂದ್ರಿಯದಿಂದ ರೂಪ ವಿಷಯಕ ಪ್ರತ್ಯಕ್ಷವು ಉಂಟಾಗುವುದು; ತ್ವಗಿಂದ್ರಿಯದಿಂದ ಸ್ಪರ್ಶ ಸಾಕ್ಷಾತ್ಕಾರವು ಉಂಟಾಗುವುದು; ರಸನೇಂದ್ರಿಯದಿಂದ ರಸವಿಷಯಕ ಸಾಕ್ಷಾತ್ಕಾರವು ಉಂಟಾಗು ವುದು; ಘ್ರಾಣೇಂದ್ರಿಯದಿಂದ ಗಂಧವಿಷಯಕ ಪ್ರತ್ಯಕ್ಷವು ಉಂಟಾಗುವುದು. ಮತ್ತು ಸುಖ, ದುಃಖ, ಜ್ಞಾನ, ಅಜ್ಞಾನ, ಕಾಲಾದಿ ಅನೇಕ ವಿಷಯಗಳು ಸ್ವರೂ ಪೇಂದ್ರಿಯವಾದ ಸಾಕ್ಷಿಯಿಂದ ವಿಷಯೀಕರಿಸಲ್ಪಡುವುವು. ಪ್ರಪಂಚ ಈ ಬ್ರಹ್ಮಾಂಡ ದಲ್ಲಿರುವ ಪಂಚಭೂತಾತ್ಮಕವಾದ ಸಮಸ್ತ ವಸ್ತುಗಳ ಸದ್ಭಾವದಲ್ಲಿಯೂ ಪ್ರತ್ಯಕ್ಷವು ಪ್ರಮಾಣವಾಗಿರುವುದು.

2. ಮತ್ತೊಂದು ವ್ಯವಸ್ಥಿತ ವಿಷಯವನ್ನು ಸೂಚಿಸಿ ಉಕ್ತ ವಿಷಯದಲ್ಲಿ ಶ್ರೀ ಕೃಷ್ಣನ ವಾಕ್ಯಗಳನ್ನು ಪ್ರಮಾಣವನ್ನಾಗಿ ಉದಾಹರಿಸುವೆವು. ಏನೆಂದರೆ, ಇಂದ್ರಿಯಗೋಚರವಾಗತಕ್ಕ ಸಮಸ್ತ ಪದಾರ್ಥಗಳೂ ಸತ್ಯವೆಂಬುದರಲ್ಲಿ ನಿರ್ದುಷ್ಟ ಪ್ರತ್ಯಕ್ಷವು ಪ್ರಮಾಣವಾಗಿರುವುದು. ಬಧಿರತ್ವಾದಿಗಳು ಶ್ರೋತ್ರ ದೋಷಗಳೆನ್ನಿಸು ವುವು. ಅವುಗಳಿಂದ ರಹಿತವಾದ ಮತ್ತು ಸರಿಯಾಗಿ ಸನ್ನಿಕೃಷ್ಟವಾದ ಶ್ರೋತ್ರೇಂದ್ರಿ ಯದಿಂದ, ಷಡ್ಜ, ಋಷಭ ಗಾಂಧಾರಾದಿ ಸ್ವರಗಳಿಂದ ಸಹಿತವಾದ ಶಬ್ದವಿಷಯಕ ಯಥಾರ್ಥ ಜ್ಞಾನವು ಹುಟ್ಟುವುದು. ಅಂಥ ಯಥಾರ್ಥ ಜ್ಞಾನಕ್ಕೆ ವಿಷಯವಾದ ಶಬ್ದವೂ ಯಥಾರ್ಥವೆನ್ನಿಸವುದು. ಅದು ಶುಕ್ತಿರಜತದಂತೆ ಅಥವಾ ರಜ್ಜು ಸರ್ಪ ದಂತೆ ಸುಳ್ಳಾದ ಪದಾರ್ಥವೆಂದು ಹೇಳಲಾಗುವುದಿಲ್ಲ. ಹೀಗೆಯೇ ಕಾಚ, ಕಾಮ ಲಾದಿ ದೋಷಗಳಿಂದ ರಹಿತವಾದ, ಯುಕ್ತ ರೀತಿಯಲ್ಲಿ ವಸ್ತುಸನ್ನಿಕೃಷ್ಟವಾದ ಚಕ್ಷುರಿಂದ್ರಿಯದಿಂದ ( ಕಣ್ಣಿನಿಂದ ) ಯಥಾರ್ಥವಾದ ರೂಪ ವಿಶಿಷ್ಟ ಪದಾರ್ಥಗಳ ಯಥಾರ್ಥ ಜ್ಞಾನವು ಹುಟ್ಟುವುದು. ಇಂಥ ನಿರ್ದುಷ್ಟ ಜ್ಞಾನಕ್ಕೆ ವಿಷಯಗಳಾದ ಪದಾರ್ಥಗಳೂ ಸತ್ಯವೆನ್ನಿಸುವುವು. ಅವುಗಳು ಶುಕ್ತಿರಜತದಂತೆ ಮಿಥ್ಯಾ ಎನ್ನಿಸ ಲಾರವು.

ಸ್ಪರ್ಶೇಂದ್ರಿಯ ವಿಷಯದಲ್ಲಿಯೂ, ರಸನೇಂದ್ರಿಯ ವಿಷಯದಲ್ಲಿಯೂ, ಘ್ರಾಣೇಂದ್ರಿಯ ವಿಷಯದಲ್ಲಿಯೂ ಹೀಗೆಯೇ ತಿಳಿಯಬೇಕು. ಹಾಗೆಯೇ ರಾಗಾದಿ ದೋಷರಹಿತವಾದ ನಿರ್ದುಷ್ಟ ಮನಸ್ಸಿನಿಂದ ಉತ್ಪನ್ನವಾಗುವ ಸ್ಮೃತಿಯೂ ಯಥಾರ್ಥವಾಗಿರುವುದು ಅಂಥ ಸ್ಮೃತಿಯಲ್ಲಿ ಗೋಚರವಾಗತಕ್ಕ ಪೂರ್ವಾನು ಭೂತ ವಸ್ತುಗಳೂ ಆ ಪೂರ್ವಾವಸ್ಥೆಯಲ್ಲಿ ಇದ್ದವು ಎಂದೇ ನಿರ್ಣೀತವಾಗಿರುವುದು.

ಸ್ವರೂಪೇಂದ್ರಿಯವಾದ ಸಾಕ್ಷಿಯು ಸ್ವಭಾವತಃ ದೋಷರಹಿತವಾಗಿರುವುದು. ಸಾಕ್ಷಿಗೃಹೀತವಾದ ವಿಷಯಗಳೆಲ್ಲವೂ ಅತ್ಯಂತ ಸತ್ಯವಾದವುಗಳೆಂದು ಅನುಭವ ಸಿದ್ಧವಾಗಿರುವುದು ಸಾಕ್ಷಿಸಿದ್ಧವಾದ ವಿಷಯಗಳಲ್ಲಿ ಯಾವ ಕಾಲದಲ್ಲೂ ಯಾರಿಗೂ ಸಂಶಯವು ಬರುವುದಿಲ್ಲ. ಸಾಕ್ಷಿ ಪ್ರತ್ಯಕ್ಷವು ಅತ್ಯಂತ ಯಥಾರ್ಥವಾದುದರಿಂದ ಅಂಥ ಸ್ವರೂಪೇಂದ್ರಿಯಕ್ಕೆ ಗೋಚರವಾಗತಕ್ಕ ಅವ್ಯಾಕೃತಾಕಾಶ, ಕಾಲ, ಸುಖ, ದುಃಖ, ಜ್ಞಾನ, ಅಜ್ಞಾನ ಇತ್ಯಾದಿ ವಿಷಯಗಳೆಲ್ಲವೂ ಅತ್ಯಂತ ಸತ್ಯವಾದುವುಗಳು. ಶುಕ್ತಿರಜತದಂತೆ ಮಿಥ್ಯಾ ಅಲ್ಲ ಎಂದು ನಿರ್ಣೀತವಾಗುವುದು.

3. ಇನ್ನು ಪ್ರತ್ಯಕ್ಷ ಪ್ರಾಮಾಣ್ಯ ವಿಷಯದಲ್ಲಿ ಗೀತಾ ಸಮ್ಮತಿಯನ್ನು ತೋರಿಸುವೆವು. ಜೀವನು, ಮನ ಆದಿ ಪ್ರಕೃತಿನಿರ್ಮಿತ ಇಂದ್ರಿಯಗಳಿಂದ ಯುಕ್ತ ನಾಗಿ ವಿಷಯ ಜ್ಞಾನವನ್ನು ಹೊಂದುತ್ತಿರುವನೆಂದು ಶ್ರೀ ಕೃಷ್ಣನು ಹದಿನೈದನೆಯ ಅಧ್ಯಾಯದಲ್ಲಿ ಸ್ಪಷ್ಟವಾಗಿ ಹೇಳುತ್ತಾನೆ :—

**(1) ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।**
**ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥**

—(15. 7.)

ಬ್ರಹ್ಮಾದಿ ಜೀವ ಶರೀರದಲ್ಲಿ ಇರುವ ಸ್ವರೂಪತಃ ಅನಾದಿ ನಿತ್ಯನಾದ ನನ್ನ ಅಧೀನನಾದ ಜೀವನೆಂಬುವನು ನನ್ನ ಅಂಶನೆನಿಸುವನು. ( ನನ್ನಿಂದ ಅತ್ಯಂತ ಭಿನ್ನವಾದ ನನ್ನ ಅಧೀನವಾದ ಪ್ರತಿಬಿಂಬರೂಪನು ಎಂದು ಭಾವವು. ) ಇಂಥ ಜೀವನು ಪ್ರಕೃತಿಕಾರ್ಯವಾದ ದೇಹದಲ್ಲಿರುವ ಮನಸ್ಸಿನಿಂದ ಸಹಿತವಾದ ಪಂಚ ಜ್ಞಾನೇಂದ್ರಿಯಗಳನ್ನು ( ಒಟ್ಟು ಆರು ಇಂದ್ರಿಯಗಳನ್ನು ) ಕರ್ಷತಿ = ವಿಷಯ ಗಳನ್ನು ಕುರಿತು ಪ್ರೇರಿಸುತ್ತಾನೆ. ( ಜೀವನು ಪ್ರಕೃತಿನಿರ್ಮಿತ ದೇಹದಲ್ಲಿದ್ದು ತನ್ನ ಆರು ಇಂದ್ರಿಯಗಳನ್ನೂ ಪುನಃ ಪುನಃ ವಿಷಯ ಸಾಕ್ಷಾತ್ಕಾರಕ್ಕೋಸ್ಕರ ಪ್ರೇರಿ ಸುತ್ತಾನೆ ಎಂದು ತಾತ್ಪರ್ಯವು. )

ಇದರಿಂದ ಜೀವನಿಗೆ ಮನಸ್ಸೇ ಮುಂತಾದ ಆರು ಇಂದ್ರಿಯಗಳು ಉಂಟೆಂದೂ ಅವುಗಳಿಂದ ವಿಷಯ ಜ್ಞಾನವು ಬರುವುದೆಂದೂ ಸಿದ್ಧವಾಗುವುದು.

ಶತ್ರುಯೋಧರನ್ನು ನೋಡಿ ಶ್ರೀ ಕೃಷ್ಣನು ಮಾಡಿರುವ ನಿರ್ದೇಶದಿಂದಲೂ ಸಹ ಪ್ರತ್ಯಕ್ಷವು ಪ್ರಮಾಣವೆಂದೂ, ನಿರ್ದುಷ್ಟ ಪ್ರತ್ಯಕ್ಷಕ್ಕೆ ವಿಷಯವಾದ ಜಗತ್ತು ಸತ್ಯವೆಂದೂ ಸಿದ್ಧವಾಗುವುದು. ಶ್ರೀ ಕೃಷ್ಣನು ಹೇಳುತ್ತಾನೆ :—

(2) .... .... **ನೇಮೇ ಜನಾಧಿಪಾಃ ।** —(2. 12.)

ಎಲೈ ಅರ್ಜುನನೇ ! ಇಮೇ = ಈ ಪರಿದೃಶ್ಯಮಾನರಾದ ( ಕಣ್ಣಿಗೆ ಕಾಣುವ) ಕ್ಷತ್ರಿಯ ರಾಜರುಗಳು ಹಿಂದೆ ಇರಲಿಲ್ಲವೆಂದು ತಿಳಿಯಬೇಡ.

ಶ್ರೀ ಕೃಷ್ಣನು ಕ್ಷತ್ರಿಯ ರಾಜರುಗಳ ದೇಹವನ್ನು ನೋಡಿ ಈ ಮಾತನ್ನು ಹೇಳಿದನು. ಇದರಿಂದ ದೇಹಾದಿ ವಿಷಯಕ ಜ್ಞಾನವು ಚಕ್ಷುರಿಂದ್ರಿಯದಿಂದ ಬರುವುದೆಂದು ಸಿದ್ಧವಾಯಿತು. ಅಷ್ಟೇ ಅಲ್ಲ. ಪರಮೇಶ್ವರನಾದ ಶ್ರೀ ಕೃಷ್ಣನು ತನ್ನ ನಿರ್ದುಷ್ಟ ಇಂದ್ರಿಯದಿಂದ ಶತ್ರು ರಾಜರುಗಳ ದೇಹಗಳನ್ನು ನೋಡಿ " ಈ ದೇಹಗಳು " ಎಂದು ನಿರ್ದೇಶ ಮಾಡಿ ಹೇಳುವದರಿಂದ ಅವುಗಳು ಸತ್ಯವಾದವುಗಳು ರಜ್ಜು ಸರ್ಪದಂತೆ ಮಿಥ್ಯಾ ಅಲ್ಲ ಎಂದೂ ಸಿದ್ಧವಾಗುವದು.

ಪುನಃ ಶ್ರೀ ಕೃಷ್ಣನು ಹೇಳುತ್ತಾನೆ :—

(3) **ಅಂತವಂತ ಇಮೇ ದೇಹಾಃ ನಿತ್ಯಸ್ಯೋಕ್ತಾಃ ಶರೀರಿಣಃ ।** —(2. 18 )

ಎಲೈ ಪಾರ್ಥನೇ ! ಸ್ವರೂಪೇಣ ನಿತ್ಯನಾದ ಜೀವನ ಇಮೇ ದೇಹಾಃ = ಈ **ಪ್ರತ್ಯಕ್ಷಸಿದ್ಧವಾದ ದೇಹಗಳು** ನಾಶ ಹೊಂದತಕ್ಕವುಗಳು.

4. ಶ್ರೀ ಕೃಷ್ಣನ ಈ ನಿರ್ದೇಶವು ಅದ್ವೈತ ಮತಕ್ಕೆ ಕುಠಾರ ರೂಪವಾಗಿರು ವದು. ಅದ್ವೈತ ಮತದಲ್ಲಿ ಆಕಾಶ, ಕಾಲ, ಬ್ರಹ್ಮಾಂಡ, ದೇಹಗೇಹಾದಿ ಸಕಲ ವಸ್ತುಗಳೂ ಶುಕ್ತಿರಜತದಂತೆ ಮಿಥ್ಯಾಭೂತವಾದುವುಗಳು ಎಂದರೆ ಹಿಂದೆ ಇರಲಿಲ್ಲ, ಈಗ ಇಲ್ಲ ಮತ್ತು ಮುಂದೆ ಇರುವದಿಲ್ಲ. ಇವುಗಳ ವಿಷಯದಲ್ಲಿ ಸತ್ವಗ್ರಾಹಿ

ಪ್ರತ್ಯಕ್ಷವು ಅಪ್ರಮಾಣವೇ. ಎಂದರೆ ನನ್ನ ಮನೆಯು ನೆಲದ ಮೇಲೆ **ಇರುತ್ತದೆ,** ನನ್ನ ದೇಹವು **ಇರುತ್ತದೆ,** ಆಕಾಶವು **ಇರುತ್ತದೆ,** ಕಾಲವು **ಇರುತ್ತದೆ,** ಕಡಗ, ಕಿರೀಟಾದಿಗಳು **ಇರುತ್ತವೆ** ಇತ್ಯಾದಿ ರೀತಿಯಾಗಿ ಪದಾರ್ಥಗಳಲ್ಲಿ ಸತ್ತೆಯನ್ನು (ಇರೋಣವನ್ನು) ಗ್ರಹಿಸುವ ಜ್ಞಾನಗಳೆಲ್ಲವೂ ಅಪ್ರಮಾಣಗಳೇ (ಅಯಥಾರ್ಥಗಳೇ). ವಸ್ತುತಃ ಆಕಾಶ, ಕಾಲ, ದೇಹ, ಗೇಹಾದಿಗಳು ಇಲ್ಲದಿದ್ದರೂ ಭ್ರಾಂತಿಯಿಂದ ಇವು ಇರುವಂತೆ ತೋರುತ್ತವೆ ಎಂದು ಅದ್ವೈತಿಗಳು ಹೇಳುತ್ತಾರೆ.

ಕೃಷ್ಣ ಸರ್ವೋತ್ತಮತ್ವವನ್ನು ಧಿಕ್ಕರಿಸಿದ ಶಿಶುಪಾಲನನ್ನು ಶ್ರೀ ಕೃಷ್ಣನು ತನ್ನ ಅಪ್ರತಿಹತವಾದ ಚಕ್ರದಿಂದ ಸಂಹರಿಸಿದನು. ಪ್ರತ್ಯಕ್ಷ ಸಿದ್ಧವಾದ ಸಕಲ ಜಗತ್ತೂ ಸುಳ್ಳೆಂಬ ದುಸ್ತತ್ವವನ್ನು ಶ್ರೀ ಕೃಷ್ಣನು "ಇಮೇ" ಎಂಬ ತನ್ನ ನಿರ್ದೇಶ ಮಾತ್ರದಿಂದ ನಾಶ ಹೊಂದಿಸಿರುವನು. ಮಿಥ್ಯಾ ಪದಾರ್ಥಗಳು ನಿರ್ದುಷ್ಟ ಚಕ್ಷುಸ್ಸುಳ್ಳವನಿಗೆ ಗೋಚರವಾಗಲಾರವು. ಸರ್ವಜ್ಞನಾದ, ನಿರ್ದೋಷೇಂದ್ರಿಯಗಳುಳ್ಳ ಶ್ರೀ ಕೃಷ್ಣನು ತನ್ನ ಸ್ವಂತ ಕಣ್ಣುಗಳಿಂದ ಪುರೋವರ್ತಿ ರಾಜರುಗಳನ್ನು ನೋಡುತ್ತಾ "ಇಮೇ" ಎಂದು ನಿರ್ದೇಶ ಮಾಡಿರುವುದರಿಂದ ಅವುಗಳೆಲ್ಲವೂ ಯಥಾರ್ಥವೇ ಎಂದು ಸಿದ್ಧವಾಗುವುದು.

ಇದರಿಂದ ಅದ್ವೈತ ಮತದ ಮತ್ತೊಂದು ದೋಷವೂ ಹೊರಬಿದ್ದಂತಾಯಿತು. ಪ್ರತ್ಯಕ್ಷವು ಪ್ರಮಾಣವೆಂದು ಅದ್ವೈತಿಗಳು ಹೇಳುತ್ತಾರೆ. ಆದರೆ ಅವುಗಳಿಗೆ ವಿಷಯಗಳಾದ ಘಟ ಪಟಾದಿ ಸಕಲ ಪದಾರ್ಥಗಳೂ ಮಿಥ್ಯಾ ಎಂದು ಹೇಳುತ್ತಾರೆ. ಇದು ಅತ್ಯಂತ ಮೂರ್ಖೋಕ್ತಿಯು. ಹೇಗೆಂದರೆ ಜ್ಞಾನವು ಪ್ರಮಾಣವಾದರೆ (ಯಥಾರ್ಥವಾದರೆ) ಆ ಜ್ಞಾನಕ್ಕೆ ವಿಷಯವಾದ ಘಟ ಪಟಾದಿ ಪದಾರ್ಥಗಳು ಸತ್ಯವೆಂದು ಸಿದ್ಧವಾಗಿರುವುದು. ಜ್ಞಾನವು ಅಪ್ರಮಾಣವಾದರೆ ಆ ಜ್ಞಾನಕ್ಕೆ ವಿಷಯವಾದ ಶುಕ್ತಿರಜತಾದಿಗಳು ಮಿಥ್ಯಾ ಎನ್ನಿಸುವುವು. ಆದರೆ ಶಂಕರಾಚಾರ್ಯರೇ ಮುಂತಾದ ಅದ್ವೈತ ಗ್ರಂಥಕಾರರು ಧೈರ್ಯವಾಗಿ ಪ್ರತ್ಯಕ್ಷ ಜ್ಞಾನವು ಪ್ರಮಾಣವೆಂದು (ಯಥಾರ್ಥವೆಂದು) ಹೇಳಿ ಆ ಜ್ಞಾನಕ್ಕೆ ವಿಷಯವಾದ ದೇಹಗೇಹಾದಿ ಸಕಲ ಪದಾರ್ಥಗಳೂ ಶುಕ್ತಿರುಜತದಂತೆ ಸುಳ್ಳೆಂದು ಹೇಳಿರುವರು. ಇದು ಸರಿಯಲ್ಲ. ವಸ್ತುತಃ ಇಲ್ಲದೇ ಇರುವ ಘಟ ವಿಷಯದಲ್ಲಿ ಘಟವು ಇರುತ್ತದೆ ಎಂದು ಗ್ರಹಿಸುವ ಜ್ಞಾನವು ಅಪ್ರಮಾಣವೇ. ಆದುದರಿಂದ ಅದ್ವೈತ ಮತದಲ್ಲಿ ಪ್ರತ್ಯಕ್ಷವು ಪ್ರಮಾಣವಲ್ಲ, ಮತ್ತು ಸಕಲ ಪ್ರತ್ಯಕ್ಷವೂ ಅಪ್ರಮಾಣವು ಎಂದು ಸಿದ್ಧವಾಯಿತು. ಇದೇ ಬೌದ್ಧರ ಶೂನ್ಯವಾದವು. ಉಭಯ ಮತಗಳೂ ಲೋಕದಿಂದ ಶೂನ್ಯತೆಯನ್ನು ಹೊಂದುವುದಕ್ಕೆ ಅರ್ಹವಾಗಿರುವುದೆಂದು ಶ್ರೀ ಕೃಷ್ಣನ ನಿರ್ದುಷ್ಟ ಪ್ರತ್ಯಕ್ಷಪೂರ್ವಕವಾದ ನಿರ್ದೇಶವು ತಿಳಿಸಿರುವುದು.

5. ಕಿಂಚ ಶಬ್ದಾದಿ ಸರ್ವ ವಿಷಯಗಳೂ ಪರಮಾತ್ಮನಿಗೆ ಪ್ರತ್ಯಕ್ಷ ವಿಷಯವಾಗಿರುವುದೆಂದೂ, ಪರಮಾತ್ಮನು ವಿಷಯ ಜ್ಞಾನಜನಿತವಾದ ಸುಖವನ್ನೂ ಕೂಡ ತನ್ನ ಸ್ವೇಚ್ಛೆಯಿಂದ ಸ್ವೀಕರಿಸುವನೆಂದೂ ಶ್ರೀ ಕೃಷ್ಣನು ಹೇಳುತ್ತಾನೆ :—

(1) **ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥**
—(15. 9.)

**ಅರ್ಥ :—** ಸರ್ವೇಂದ್ರಿಯ ಪ್ರೇರಕನಾದ ಪರಮಾತ್ಮನು ( ಶ್ರೀ ಕೃಷ್ಣನು ) ಜೀವನ ಶ್ರೋತ್ರೇಂದ್ರಿಯವನ್ನೂ, ನೇತ್ರೇಂದ್ರಿಯವನ್ನೂ, ತ್ವಗಿಂದ್ರಿಯವನ್ನೂ, ರಸನೇಂದ್ರಿಯವನ್ನೂ, ಘ್ರಾಣೇಂದ್ರಿಯವನ್ನೂ ಮತ್ತೂ ಮನೋ ಇಂದ್ರಿಯವನ್ನೂ ಕೂಡ ಪ್ರವೇಶ ಮಾಡಿಯೇ ಶಬ್ದಾದಿ ಸದ್ವಿಷಯಗಳನ್ನು ಭೋಗಿಸುತ್ತಾನೆ.

ಏವಂಚ ಶಬ್ದಾದಿ ವಿಷಯಕ ಜ್ಞಾನವು ಪರಮಾತ್ಮನ ಪ್ರತ್ಯಕ್ಷ ರೂಪವಾಗಿರುವುದು. ಈಶ್ವರ ಪ್ರತ್ಯಕ್ಷವು ಅತ್ಯಂತ ಪ್ರಮಾಣವೆಂದು ನಿಶ್ಚಿತವಾಗಿರುವುದು. ಆದ್ದರಿಂದ ಆತನ ಜ್ಞಾನಕ್ಕೆ ಗೋಚರವಾದ ಸಕಲ ವಿಷಯಗಳೂ ಅತ್ಯಂತ ಸತ್ಯವೆಂದು ನಿರ್ವಿವಾದವಾಗಿ ಏರ್ಪಡುವುದು.

6. ಶ್ರೋತ್ರಾದಿ ಪಂಚ ಜ್ಞಾನೇಂದ್ರಿಯಗಳಿಗೂ ಕ್ರಮವಾಗಿ ಶಬ್ದ ಸ್ಪರ್ಶ ರೂಪ ರಸಗಂಧಗಳು ವಿಷಯಗಳೆಂಬುದು,

(1) **ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ॥**
—(2. 14.)

ಎಂಬ ಶ್ಲೋಕದಿಂದ ಸೂಚಿತವಾಗುವುದು. ಇಲ್ಲಿ ಮಾತ್ರಾ ಸ್ಪರ್ಶಾಃ ಎಂದರೆ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ವಿಷಯಗಳಿಗೂ ಶ್ರೋತ್ರಾದಿಗಳಿಗೂ ಇರುವ ಜ್ಞಾನಜನಕವಾದ ಸಂಬಂಧಗಳು ಎಂದರ್ಥವು. ಇಂದ್ರಿಯಗಳಿಗೆ ತತ್ತದ್ಯೋಗ್ಯ ವಿಷಯ ಸಂಬಂಧದಿಂದ ಆಯಾಯ ವಿಷಯಕವಾದ ಯಥಾರ್ಥ ಜ್ಞಾನವು ಹುಟ್ಟುವುದು. ಆ ಜ್ಞಾನಗಳಿಂದ ಸುಖ ದುಃಖಾದಿಗಳು ಹುಟ್ಟುವುವು.

---

## 2. ಎರಡನೆಯ ಅಂಶವು.

### ಪ್ರಮಾಣ ವಿಚಾರವು ( ಮುಂದುವರಿಸಿದ್ದು. )

### ಅನುಮಾನವು.

**ಪ್ರಶ್ನೆ :—** ಸ್ವಾಮೀ ! ಪ್ರತ್ಯಕ್ಷವು ಪ್ರಮಾಣವೆಂದು ಸರ್ವಸಮ್ಮತವು. ಆದರೆ ಅನುಮಾನವು ಪ್ರಮಾಣವೆಂದು ಶ್ರೀ ಕೃಷ್ಣನು ಎಲ್ಲಿ ಹೇಳಿರುವನು ?

**ಶ್ರೀ ಶ್ರೀಗಳವರು :—** ಅನುಮಾನವು ಪ್ರಮಾಣವಾಗಲಾರದೆಂದು ನಿಮ್ಮ ಶಂಕಾಭಿಪ್ರಾಯವೋ ಅಥವಾ........

**ವಿದ್ಯಾರ್ಥಿಗಳು :—** ಸ್ವಾಮೀ ! ಅನುಮಾನ ಪ್ರಾಮಾಣ್ಯವನ್ನು ತಾವು ಸಾಧಿಸಿ ತೋರಿಸಿರುವುದರಿಂದ ನಮಗೆ ಆ ವಿಷಯದಲ್ಲಿ ಸಂದೇಹವಿಲ್ಲ * ಶ್ರೀ ಕೃಷ್ಣನು ಅನುಮಾನ ಪ್ರಾಮಾಣ್ಯವನ್ನು ಎಲ್ಲಿಯೂ ಹೇಳಿರುವುದಿಲ್ಲವಾದುದರಿಂದ ಈ ವಿಷಯವು ಗೀತೆಯಿಂದ ಸಿದ್ಧವಾಗತಕ್ಕ ಪ್ರಮೇಯವಲ್ಲವೆಂದು ನಮ್ಮ ಅಭಿಪ್ರಾಯವು.

**ಶ್ರೀ ಶ್ರೀಗಳವರು :—** ಶ್ರೀ ಕೃಷ್ಣನು ಸ್ಪಷ್ಟವಾಗಿ ಅನುಮಾನವು ಪ್ರಮಾಣವು ಎಂದು ಹೇಳಿರುವುದಿಲ್ಲ ಆದರೆ ಅನುಮಾನಗಳಿಂದ ಯಥಾರ್ಥ ಪ್ರಮೇಯಗಳು ನಿಶ್ಚಯಿಸಲ್ಪಟ್ಟಿರುವುವು ಎಂದು ಹೇಳಿರುತ್ತಾನೆ. ಇದರಿಂದಲಾದರೂ ಅನುಮಾನಕ್ಕೆ ಪ್ರಾಮಾಣ್ಯವು ಸಿದ್ಧವಾಗುವುದಿಲ್ಲವೋ ?

**ಪ್ರಶ್ನೆ :—** ಸ್ವಾಮೀ ! ಶ್ರೀ ಕೃಷ್ಣನು ಹಾಗೆ ಎಲ್ಲಿ ಹೇಳಿರುತ್ತಾನೆ ?

**ಶ್ರೀ ಶ್ರೀಗಳವರು :—** ಶ್ರೀ ಕೃಷ್ಣನು ಕ್ಷೇತ್ರಕ್ಷೇತ್ರಜ್ಞಾದಿ ಸ್ವರೂಪವನ್ನು ನಿರೂಪಿಸುವುದಾಗಿ ಪ್ರತಿಜ್ಞೆ ಮಾಡಿ ಈ ವಿಷಯವು,

(1) **ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್ ।**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿಃ ಸುನಿಶ್ಚಿತೈಃ ॥**

—(13 5 )

ಎಂದು ಹೇಳಿರುವನು ಕ್ಷೇತ್ರ ಕ್ಷೇತ್ರಜ್ಞ ಸ್ವರೂಪವು **ಹೇತು**ಗಳಿಂದ ಪೂರ್ಣವಾದ ಬ್ರಹ್ಮಸೂತ್ರ ಪದಗಳಿಂದ ನಿರ್ಣೀತವಾದ ಅರ್ಥವುಳ್ಳ ವೇದಗಳಿಂದ ಬಹುವಿಧವಾಗಿ ನಿರೂಪಿಸಲ್ಪಟ್ಟಿರುವದು ಎಂದು ತಾತ್ಪರ್ಯವು ವೇದಾರ್ಥವು ಬ್ರಹ್ಮಸೂತ್ರದಲ್ಲಿ ಉಕ್ತವಾಗಿರುವ ಹೇತುಗಳಿಂದ ಎಂದರೆ ಅನುಮಾನ ಅಥವಾ ಯುಕ್ತಿಗಳಿಂದ ನಿಶ್ಚಯಿಸಲ್ಪಟ್ಟಿರುವದು ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ "ಅಥಾತೋ ಬ್ರಹ್ಮಜಿಜ್ಞಾಸಾ " ಎಂಬ ಸೂತ್ರವನ್ನು ಮೊದಲು ಮಾಡಿಕೊಂಡು " ಅನಾವೃತ್ತಿಃ ಶಬ್ದಾತ್ " ಎಂಬ ಸೂತ್ರದ ಕೊನೆಯವರೆಗಿರುವ ಐನೂರರವತ್ತನಾಲ್ಕು ಸೂತ್ರಗಳಿಗೆ ಬ್ರಹ್ಮಸೂತ್ರಗಳೆಂದು ಹೆಸರು. ಈ ಬ್ರಹ್ಮಸೂತ್ರಗಳು ವೇದಾರ್ಥನಿರ್ಣಾಯಕವಾದ ಯುಕ್ತಿ ಸಮುದಾಯವೆಂದು ತಿಳಿಯಬೇಕು. ವೇದ ವಾಕ್ಯಗಳು ಬಹು ಗಂಭೀರವಾಗಿಯೂ, ಗಹನವಾಗಿಯೂ ಇರುವದರಿಂದ ವೇದದಲ್ಲಿರುವ ಪದಗಳಿಗೂ, ವಾಕ್ಯಗಳಿಗೂ ಯಾವ ಅರ್ಥವನ್ನು ಮಾಡಬೇಕೆಂದು ಸಂದೇಹ ಬಂದರೆ ಸಂದಿಗ್ಧವಾದ ಪದಗಳಿಗೂ, ವಾಕ್ಯಗಳಿಗೂ ಬ್ರಹ್ಮಪರವಾಗಿಯೇ ಅರ್ಥ ಮಾಡುವದರಲ್ಲಿ ಯುಕ್ತಿಗಳನ್ನು ಬಾದರಾಯಣರು ಬ್ರಹ್ಮಸೂತ್ರಗಳಲ್ಲಿ ನಿರೂಪಿಸಿರುವರು

ಒಂದು ಉದಾಹರಣೆಯನ್ನು ಕೊಡುವೆವು " ಆನಂದಮಯೋ ಅಭ್ಯಾಸಾತ್ " ಎಂಬ ಬ್ರಹ್ಮಸೂತ್ರವಿರುವದು ಇಲ್ಲಿ " ಅನ್ಯೋ ಅಂತರ ಆತ್ಮಾ ಆನಂದಮಯಃ " ಎಂಬ ವೇದದಲ್ಲಿ **ಆನಂದಮಯ** ಎಂಬ ಪದಕ್ಕೆ ಆನಂದಮಯ

* ಸಭಾಸಾರಸಂಗ್ರಹ, Vol. I. ಪ್ರಶ್ನೋತ್ತರಗಳು.

ಕೋಶವೆಂದು ಅರ್ಥ ಮಾಡಬೇಕೋ, ಜೀವನೆಂದು ಅರ್ಥ ಮಾಡಬೇಕೋ, ಚತುರ್ಮುಖ ಬ್ರಹ್ಮನೆಂದು ಅರ್ಥ ಮಾಡಬೇಕೋ, ಪರಬ್ರಹ್ಮನಾದ ವಿಷ್ಣುವೆಂದು ಅರ್ಥ ಮಾಡಬೇಕೋ ಎಂದು ಸಂಶಯವು ಬಂದರೆ ಸೂತ್ರಕಾರರು ಆ ಶ್ರುತಿಯಲ್ಲಿ ಆನಂದಮಯ ಶಬ್ದ ಪ್ರತಿಪಾದ್ಯವಾದ ವಸ್ತುವು ಪರಬ್ರಹ್ಮನಾದ ವಿಷ್ಣುವೇ ಎಂಬಲ್ಲಿ "**ಅಭ್ಯಾಸಾತ್**" ಎಂಬ ಯುಕ್ತಿಯನ್ನು ಹೇಳಿರುವರು. ಎಂದರೆ ಆನಂದಮಯನನ್ನು ವರ್ಣಿಸುವಾಗ ತೈತ್ತಿರೀಯ ಶ್ರುತಿಯಲ್ಲಿ ಪರಮಾತ್ಮನಲ್ಲಿಯೇ ಮುಖ್ಯವಾಗಿ ಉಪಯೋಗಿಸಲ್ಪಡುವ **ಬ್ರಹ್ಮಶಬ್ದ**ವನ್ನು ದ್ವಿರಾವರ್ತಿ ಪ್ರಯೋಗಿಸಿರುವುದರಿಂದಲೂ, ಪರಮಾತ್ಮನಲ್ಲಿಯೇ ಮುಖ್ಯವಾಗಿ ಉಪಯೋಗಿಸಲ್ಪಡುವ **ಆತ್ಮಶಬ್ದ**ವನ್ನು ಅನೇಕಾವರ್ತಿ ಪ್ರಯೋಗಿಸಿರುವುದರಿಂದಲೂ ಆನಂದಮಯಶಬ್ದ ಪ್ರತಿಪಾದ್ಯವಾದ ವಸ್ತುವು ಪರಬ್ರಹ್ಮನಾದ ವಿಷ್ಣುವೇ ಹೊರತು ಜೀವ, ಕೋಶ, ವಿರಿಂಚ, ಸೂರ್ಯಾದಿಗಳಲ್ಲ ಎಂದು ನಿರ್ಣಯವನ್ನು ಮಾಡಿರುವರು. ಹೀಗೆಯೇ ಅನಂತ ಶ್ರುತಿಗಳ ಅರ್ಥವನ್ನು ಮಾಡುವುದರಲ್ಲಿ ಸಹಾಯಕವಾದ ಯುಕ್ತಿಗಳನ್ನು ಇತರ ಸೂತ್ರಗಳಲ್ಲಿ ನಿರೂಪಿಸಿರುವರೆಂದು ತಿಳಿಯಬೇಕು. ಯುಕ್ತಿಗಳಿಂದ ವೇದಾರ್ಥವು ನಿರ್ಣಯಿಸಲ್ಪಟ್ಟಿರುತ್ತದೆ ಎಂದು ಶ್ರೀ ಕೃಷ್ಣನು ಹೇಳಿದುದರಿಂದ ಯುಕ್ತಿಗೆ ಪ್ರಾಮಾಣ್ಯವನ್ನು (ಯಥಾರ್ಥ ಜ್ಞಾನಜನಕತ್ವವನ್ನು) ಶ್ರೀ ಕೃಷ್ಣನು ಒಪ್ಪಿರುವನೆಂದು ಅವಶ್ಯವಾಗಿ ಸಿದ್ಧವಾಗುವುದು. ಯುಕ್ತಿಬೋಧಕವಾದ ಪದಗಳು ಪ್ರಾಯೇಣ "ಪಂಚಮೀ ವಿಭಕ್ತ್ಯಂತವಾಗಿಯೋ, ತೃತೀಯಾಂತವಾಗಿಯೋ ಇರುವುವು. "ಆನಂದಮಯೋ ಅಭ್ಯಾಸಾತ್" ಎಂಬಲ್ಲಿ ಅಭ್ಯಾಸಾತ್ ಎಂಬುದು ಪಂಚಮೀ ವಿಭಕ್ತ್ಯಂತವಾದ ಯುಕ್ತಿ ಬೋಧಕ ಪದವು. ಅಭ್ಯಾಸಾತ್ ಎಂದರೆ ಅಭ್ಯಾಸವು **ಇರೋಣದರಿಂದ** ಎಂದು ಅರ್ಥವು. ಇವುಗಳಿಗೆ ಹೇತುಗಳೆಂದೂ ಹೆಸರುಂಟು.

2. ಸೂತ್ರಕಾರರು ಅನುಮಾನಗಳಿಂದ ವೇದಾರ್ಥ ನಿರ್ಣಯವನ್ನು ಮಾಡಿರುವರೆಂದು ಮಾತ್ರವೇ ಶ್ರೀ ಕೃಷ್ಣನು ಹೇಳಲಿಲ್ಲ. ತಾನೂ ಸಹ ವಿಷ್ಣುವೇ ಸರ್ವೋತ್ತಮನೆಂಬಲ್ಲಿ ಸಾಧಕವಾದ ಅನೇಕ ಯುಕ್ತಿಗಳನ್ನು ಉಪನ್ಯಾಸ ಮಾಡಿರುತ್ತಾನೆ. ಶ್ರೀ ಕೃಷ್ಣನಿಂದ ಉಪನ್ಯಸ್ತವಾದ ಅನೇಕ ಯುಕ್ತಿಗಳನ್ನು ನಾವು ಪೂರ್ವದಲ್ಲಿಯೇ ತೋರಿಸಿರುತ್ತೇವೆ. ಪ್ರಕೃತದಲ್ಲಿ ಪಂಚಮ್ಯಂತವಾದ ಪದಗಳಿಂದಲೇ ಸಾಕ್ಷಾತ್ತಾಗಿ ಯುಕ್ತಿಗಳನ್ನು ಶ್ರೀ ಕೃಷ್ಣನು ನಿರೂಪಿಸಿರುವ ಕೆಲವು ಸ್ಥಳಗಳನ್ನು ಪ್ರದರ್ಶಿಸುತ್ತೇವೆ. ಮತ್ತು ಇತರ ವಿಷಯಗಳಲ್ಲಿಯೂ ಯುಕ್ತಿಯನ್ನು ಬೋಧಿಸುವ ಕೆಲವು ಗೀತಾವಾಕ್ಯಗಳನ್ನೂ ಉದಾಹರಿಸರುತ್ತೇವೆ.

(1) **ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ||**
**ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ |**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ||**
—(5. 18–19.)

ಈ ಶ್ಲೋಕಾರ್ಥವು ಪೂರ್ವದಲ್ಲಿಯೇ ವಿವೃತವಾಗಿರುವುದು. "ಸಮ" ದರ್ಶಿ

ಗಳನ್ನು ಶ್ರೀ ಕೃಷ್ಣನು ಸ್ತುತಿ ಮಾಡಲು ಅರ್ಜುನನಿಗೆ ಬ್ರಹ್ಮ ಜ್ಞಾನಿಗಳನ್ನು ಸ್ತೋತ್ರ ಮಾಡದೆ " ಸಮ " ಪದಾರ್ಥ ಜ್ಞಾನಿಗಳನ್ನು ಶ್ರೀ ಕೃಷ್ಣನು ಸ್ತೋತ್ರ ಮಾಡಲು ಕಾರಣವೇನೆಂದು ಶಂಕೆಯು ಬರಲು ಶ್ರೀ ಕೃಷ್ಣನು ಸಮದರ್ಶಿಗಳು ಬ್ರಹ್ಮದರ್ಶಿಗಳೇ ಎಂಬಲ್ಲಿ ಅನುಮಾನವನ್ನು ಪ್ರಯೋಗ ಮಾಡಿರುತ್ತಾನೆ. ಇದು ಅನುಮಾನ ವಾಕ್ಯವು :—

**ಸಮದರ್ಶಿಗಳು:— ಬ್ರಹ್ಮಜ್ಞಾನಿಗಳೇ ಆಗಿರುವರು- ದೋಷಶೂನ್ಯನಾದ ಬ್ರಹ್ಮನೇ ಸಮನೆಂದು ಕರೆಯಲ್ಪಡುವ ವಸ್ತುವಾದುದರಿಂದ.** ಇದರಲ್ಲಿ ಸಮದರ್ಶಿಗಳು ಎಂಬುದು ಪಕ್ಷವೆನ್ನಿಸುವುದು; ಬ್ರಹ್ಮಜ್ಞಾನಿಗಳೇ ಆಗಿರುವರು. ಎಂಬುದು ಸಾಧ್ಯವು; ಬ್ರಹ್ಮನೇ ಸಮವಸ್ತುವಾದುದರಿಂದ ಎಂಬುದು ಹೇತುವೆನ್ನಿಸುವುದು. ಯುಧಿಷ್ಠಿರನನ್ನು ನೋಡಿದವರು ಧರ್ಮರಾಜನನ್ನು ನೋಡಿದವರಾಗುವರು, ಯಾತಕ್ಕೆಂದರೆ ಯುಧಿಷ್ಠಿರನೇ ಧರ್ಮರಾಜನು ಇತ್ಯಾದಿ ಪ್ರಯೋಗಗಳು ದೃಷ್ಟಾಂತವಾಗಿರುವುವು.

3. ಅನುಮಾನಗಳು ಕಾರ್ಯಾನುಮಾನವೆಂದೂ, ಕಾರಣಾನುಮಾನವೆಂದೂ, ಅಕಾರ್ಯಕಾರಣಾನುಮಾನವೆಂದೂ ಮೂರು ಪ್ರಕಾರವಾಗಿರುವುವು. ಪುನಃ ಮತ್ತೊಂದು ವಿವಕ್ಷೆಯಿಂದ ದೃಷ್ಟಾನುಮಾನವೆಂದೂ, ಸಾಮಾನ್ಯತೋದೃಷ್ಟಾನುಮಾನವೆಂದೂ ಅನುಮಾನವು ದ್ವಿವಿಧವಾಗಿರುವುದು. ಪ್ರಕೃತದಲ್ಲಿ ಶ್ರೀ ಕೃಷ್ಣನಿಂದ ಪ್ರಯುಕ್ತವಾದ ಅನುಮಾನವು ಅಕಾರ್ಯಕಾರಣಾನುಮಾನವೆನ್ನಿಸುವುದು, ಮತ್ತು ಸಾಮಾನ್ಯತೋದೃಷ್ಟಾನುಮಾನವೆಂದೂ ಕರೆಯಲ್ಪಡುವುದು.

4. ಹದಿನೈದನೆಯ ಅಧ್ಯಾಯದಲ್ಲಿ ಶ್ರೀ ಕೃಷ್ಣನು ತಾನು ಪುರುಷೋತ್ತಮನೆಂಬಲ್ಲಿ ಅನುಮಾನವನ್ನು ಪ್ರಯೋಗ ಮಾಡಿರುತ್ತಾನೆ :—

(1) **ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥**
—(15. 18.)

ಈ ಶ್ಲೋಕಾರ್ಥವು ಪೂರ್ವದಲ್ಲಿ ಉಕ್ತವಾಗಿರುವುದು. ಇಲ್ಲಿ ಶ್ರೀ ಕೃಷ್ಣನು ಪ್ರಯೋಗ ಮಾಡಿರುವ ಅನುಮಾನವನ್ನು ಈ ಪ್ರಕಾರವಾಗಿ ವಿವರಿಸಬಹುದು.

**ಶ್ರೀ ಕೃಷ್ಣನು :- ಪುರುಷೋತ್ತಮನು (ಸರ್ವೋತ್ತಮಚೇತನನು)- ಕ್ಷರಾಕ್ಷರರೆಂಬ ಲೋಕದಲ್ಲಿ ವಿದ್ಯಮಾನ ಉಭಯವಿಧರಾದ ಚೇತನರಿಗಿಂತಲೂ ಉತ್ತಮನಾದುದರಿಂದ.** ತಾಲೂಕಿನಲ್ಲಿರುವ ಒಬ್ಬೊಬ್ಬ ವ್ಯಕ್ತಿಗಿಂತಲೂ ತಾಸಿಲ್ದಾರನು ಅಧಿಕನಾಗಿದ್ದರೆ ತಾಸಿಲ್ದಾರನು ಆ ತಾಲೂಕಿನಲ್ಲಿ ಸರ್ವಾಧಿಕನೆನ್ನಿಸುವನು. ಇದೇ ರೀತಿಯಲ್ಲಿ ಚೇತನತ್ವವುಳ್ಳ ಕ್ಷರಾಕ್ಷರರೆಂಬ ಉಭಯವರ್ಗದಿಂದಲೂ ಪರಮಾತ್ಮನು ಅಧಿಕನಾದುದರಿಂದ ಪರಮಾತ್ಮನು ಸರ್ವಾಧಿಕಚೇತನನೆಂದು ಪ್ರಸಿದ್ಧವಾಗಿರುವನೆಂದು ಸಿದ್ಧವಾಗುವುದು.

ಈ ಅನುಮಾನವೂ ಕೂಡ ಸಾಮಾನ್ಯತೋದೃಷ್ಟಾನುಮಾನವೆಂದು ಶಾಸ್ತ್ರ ಪ್ರಸಿದ್ಧವಾಗಿರುವುದು.

5. ಶ್ರೀ ಕೃಷ್ಣನ ಈ ರೀತಿಯಾದ ಅನುಮಾನ ಪ್ರಯೋಗದಿಂದ ಮತ್ತೊಂದು ವಿಷಯವು ಸಿದ್ಧವಾಗುವುದು. ನೈಯಾಯಿಕರು ಪ್ರತಿಜ್ಞಾ, ಹೇತು, ಉದಾಹರಣ, ಉಪನಯನ, ನಿಗಮನಗಳೆಂಬ ಪಂಚಾವಯವ ವಾಕ್ಯಗಳಿಂದ ಸಹಿತವಾದ ಪರೋಪದೇಶರೂಪವಾದ ಅನುಮಾನ ಪ್ರಯೋಗವೇ ಸಾಧ್ಯ ಜ್ಞಾನವನ್ನು ಹುಟ್ಟಿಸುವುದು ಎಂದು ನಿರ್ಬಂಧವನ್ನು ಮಾಡಿರುವರು. ಶ್ರೀ ಕೃಷ್ಣನು ತಾನು ಪುರುಷೋತ್ತಮನೆಂಬಲ್ಲಿ ಹೇತುವನ್ನು ಹೇಳಿ ಉದಾಹರಣ, ಉಪನಯನ, ನಿಗಮನಗಳನ್ನು ಬಿಟ್ಟು ಬಿಟ್ಟನು. ಆದರೂ ಸುದೃಢವಾದ ಆತನ ಅನುಮಾನವು ಪರಮಾತ್ಮನು ಸರ್ವೋತ್ತಮ ಚೇತನನೆಂಬ ಸಾಧ್ಯ ಜ್ಞಾನವನ್ನು ಹುಟ್ಟಿಸಿಯೇ ಹುಟ್ಟಿಸುವುದು ಇದರಿಂದ ಸೂಕ್ಷ್ಮಜ್ಞರನ್ನು ಕುರಿತು ಯುಕ್ತ್ಯುಪನ್ಯಾಸವನ್ನು ಮಾಡುವಾಗ ಪಂಚಾವಯವಗಳುಳ್ಳ ಅನುಮಾನ ವಾಕ್ಯವನ್ನೇ ಪ್ರಯೋಗ ಮಾಡಬೇಕೆಂಬ ನಿಯಮವು ಉಚಿತವಲ್ಲವೆಂದು ಸೂಚಿತವಾಗುವದು. ಈ ಖಂಡನೆಯು ಷಟ್ಪ್ರಮಾಣವಾದಿಗಳಾದ ಅದ್ವೈತಿಗಳ ಮೇಲೂ ಬಂದೇ ಬರುವದು. ಬೌದ್ಧರು ಅನುಮಾನ ವಾಕ್ಯವು ನಿಯಮೇನ ಎರಡು ಅವಯವಗಳುಳ್ಳದ್ದಾಗಿರಬೇಕೆಂದು ನಿರೂಪಿಸುವರು. ಇತರರು ಪ್ರತಿಜ್ಞಾ ಹೇತೂದಾಹರಣಗಳೆಂಬ ಮೂರು ಅವಯವಗಳು ಇರಬೇಕೆಂದೂ ಅಥವಾ ಉದಾಹರಣ, ಉಪನಯ, ನಿಗಮನಗಳೆಂಬ ಮೂರು ಅವಯವಗಳು ನಿಯಮೇನ ಇರಬೇಕೆಂದೂ ನಿರ್ಬಂಧ ಮಾಡುವರು. ಇವರೆಲ್ಲರ ನಿಯಮಗಳೂ ಸ್ವಸ್ವಮತಾಭಿನಿವೇಶನದಿಂದ ಉತ್ಪನ್ನವಾದ ಆಗ್ರಹವೇ ಸರಿ. ಸಾಧ್ಯ ಜ್ಞಾನದ ಉತ್ಪತ್ತಿಯು ಅನುಮಾನ ವಾಕ್ಯಪ್ರಯೋಗಕ್ಕೆ ಫಲವು. ಅದು ಕ್ವಚಿತ್ ಸಂದರ್ಭಾನುಸಾರೇಣ ಹೇತು ವಾಕ್ಯ ಮಾತ್ರದಿಂದಲೂ, ಕ್ವಚಿತ್ ಎರಡು ಅವಯವಗಳ ಪ್ರಯೊಗದಿಂದಲೂ, ಕ್ವಚಿತ್ ಮೂರು ಅವಯವಗಳಿಂದಲೂ, ಕ್ವಚಿತ್ ನಾಲ್ಕು ಅಥವಾ ಐದು ಅವಯವಗಳಿಂದಲೂ ಮತ್ತೆ ಕೆಲವು ಸಂದರ್ಭಗಳಲ್ಲಿ ಸಂದೇಹದಿಂದ ವಿವಾದವು ಬಂದರೆ ಅನೇಕ ವಾಕ್ಯಗಳಿಂದಲೂ ಉತ್ಪನ್ನವಾಗುವುದು. ಆದುದರಿಂದ ಎರಡೇ ಅವಯವಗಳಿಂದ ಸಾಧ್ಯ ಜ್ಞಾನವು ಬರುವುದೆಂಬ ಬೌದ್ಧರ ನಿಯಮವೇ ಮುಂತಾದ ಸರ್ವ ನಿರ್ಬಂಧಗಳು ಲೌಕಿಕಾನುಭವ ನ್ಯೂನತಾಮೂಲಕವಾಗಿರುವುವು. ಶ್ರೀ ಕೃಷ್ಣನು ಕೆಲವು ಸ್ಥಳಗಳಲ್ಲಿ ಎರಡೇ ಅವಯವಗಳುಳ್ಳ ಮತ್ತು ಕೆಲವು ಸ್ಥಳಗಳಲ್ಲಿ ಮೂರು ಅವಯವಗಳುಳ್ಳ ಅನುಮಾನ ವಾಕ್ಯವನ್ನು ಪ್ರಯೋಗ ಮಾಡಿರುವುದು ಈ ಪ್ರಮೇಯ ವಿಶೇಷವನ್ನು ಸೂಚಿಸುವುದು. ಇನ್ನು ಕೆಲವು ವೇಳೆ ಹೇತ್ವರ್ಥಗರ್ಭ ವಿಶೇಷಣಗಳಿಂದ ಶ್ರೀ ಕೃಷ್ಣನು ಸಾಧ್ಯ ಜ್ಞಾನವನ್ನು ಹುಟ್ಟಿಸುವನು. ಹೇಗೆಂದರೆ ಶ್ರೀ ಕೃಷ್ಣನು “ **ಉತ್ತಮಃ ಪುರುಷಸ್ತ್ವನ್ಯಃ** ” ಎಂದರೆ ಕ್ಷರಾಕ್ಷರ ಚೇತನರಿಗಿಂತಲೂ ಉತ್ತಮ ಪುರುಷನು ಭಿನ್ನನು ಎಂದು ಹೇಳಿ ಈ ವಿಷಯದಲ್ಲಿ ಯುಕ್ತಿಯನ್ನು ಸೂಚಿಸುವುದಕ್ಕಾಗಿ, “ **ಯೋ ಲೋಕತ್ರಯಮಾ**

**ವಿಶ್ವ ಬಿಭರ್ತ್ಯವ್ಯಯ ಈಶ್ವರಃ"** ಎಂದು ಪುರುಷ ಶಬ್ದಕ್ಕೇ ನಾಲ್ಕೈದು ವಿಶೇಷಣಗಳನ್ನು ಕೊಟ್ಟಿರುವನು. "ಉತ್ತಮ ಪುರುಷನು ಭಿನ್ನನು" ಎಂದು ಇಷ್ಟೇ ಹೇಳದೆ, "ಮೂರು ಲೋಕವನ್ನು ಅನು ಪ್ರವೇಶ ಮಾಡಿ ಧಾರಣ ಪಾಲನವನ್ನು ಮಾಡುವಂಥ ನಾಶರಹಿತನಾದಂಥ ಅಚಿಂತ್ಯ ಶಕ್ತಿಯುಳ್ಳ ಉತ್ತಮ ಪುರುಷನು ಭಿನ್ನನು" ಎಂದು ಶ್ರೀಕೃಷ್ಣನು ಹೇಳಿರುವುದು, ಪರಮಾತ್ಮನು ಕ್ಷರಾಕ್ಷರವೆಂಬ ಉಭಯವಿಧವಾದ ಚೇತನ ವರ್ಗದಲ್ಲೇ ಅಂತರ್ಭಾವವನ್ನು ಹೊಂದದೆ ಅವೆರಡಕ್ಕಿಂತಲೂ ಭಿನ್ನವಾಗಿರುವುದರಲ್ಲಿ ಹೇತುಗಳನ್ನು ಸೂಚಿಸುವುದಕ್ಕಾಗಿ ಎಂದು ತಿಳಿಯಬೇಕು. ಹಾಗಾದ ಮೇಲೆ ಫಲಿತವಾದ ಅನುಮಾನ ವಾಕ್ಯವು ಈ ರೀತಿಯಾಗುವುದು :—

**ಪರಮಾತ್ಮನು :— ಕ್ಷರಾಕ್ಷರ ಪುರುಷರುಗಳಿಗಿಂತ ಅತ್ಯಂತ ಭಿನ್ನನು— ಕ್ಷರಾಕ್ಷರ ಪುರುಷರುಗಳಲ್ಲಿಲ್ಲದಿರುವ ತ್ರೈಲೋಕ್ಯಧಾರಣಪೋಷಣ ಕರ್ತೃತ್ವ ಅವ್ಯಯತ್ವ ಈಶ್ವರತ್ವಾದಿ ಮಹಾಮಹಿಮೋಪೇತನಾದುದರಿಂದ**—ಜಲದಲ್ಲಿಲ್ಲದಿರುವ ಧರ್ಮವುಳ್ಳ ಅಗ್ನಿಯು ಜಲಕ್ಕಿಂತ ಭಿನ್ನವಾಗಿರುವಂತೆ. ಈ ಪ್ರಕಾರವಾಗಿ ಆಲೋಚಿಸಿದರೆ ಇದು ಒಂದೇ ಅವಯವವುಳ್ಳ ಅನುಮಾನವಾದಂತಾಯಿತು. ಇಂಥ ಅನುಮಾನಗಳು ಗೀತೆಯಲ್ಲಿ ಅನೇಕವಾಗಿರುವುವು.

6. ಅನುಮಾನವು ಸಾಧ್ಯ ಜ್ಞಾನವನ್ನು ಹುಟ್ಟಿಸುವುದರಿಂದ ಪ್ರಮಾಣವೇ ಸರಿ ಎಂದು ನಿರೂಪಿತವಾಯಿತು. ಇಲ್ಲಿ ಅನುಮಾನ ಶಬ್ದದಿಂದ ನಿರ್ದುಷ್ಟವಾದ ಅನುಮಾನಗಳನ್ನೇ ತೆಗೆದುಕೊಳ್ಳಬೇಕು, ಯಾತಕ್ಕೆಂದರೆ ವ್ಯಾಪ್ತಿರಾಹಿತ್ಯಾದಿ ದೋಷಗಳಿಂದ ಯುಕ್ತವಾದ ಅನುಮಾನ ವಾಕ್ಯಪ್ರಯೋಗವು ಅಯಥಾರ್ಥ ಜ್ಞಾನವನ್ನು ಹುಟ್ಟಿಸುವುದು. ಅಂಥ ಅನುಮಾನಗಳಿಗೆ ಹೇತ್ವಾಭಾಸಗಳೆಂದು ಹೆಸರು.

**ಪ್ರಶ್ನೆ :—** ಸ್ವಾಮೀ ! ಇಂಥ ದುಷ್ಟಾನುಮಾನಕ್ಕೆ ಒಂದೆರಡು ಉದಾಹರಣೆಗಳನ್ನು ನಿರೂಪಿಸಬೇಕು.

**ಉತ್ತರ :— ಶ್ರೀ ಶ್ರೀಗಳವರು :—** ಅನಂತ ಅನುಮಾನಗಳಿರುತ್ತವೆ. ಎಲ್ಲಾ ನೀವುಗಳೇ ಸಭೆಯಲ್ಲಿ ಉಗ್ಗಳಿಸಿ ಹೇಳಿರುವುದೇ :—

1. ಚಂಡಾಲನು ಸ್ಪೃಶ್ಯನು ಮನುಷ್ಯನಾಗಿರೋಣದರಿಂದ ಬ್ರಾಹ್ಮಣನಂತೆ.

2. ಪ್ರೌಢಾವಿವಾಹವು ಪುಣ್ಯಪ್ರದವು ಸ್ತ್ರೀ ವಿವಾಹವಾದುದರಿಂದ— ಕನ್ಯಾ ವಿವಾಹದಂತೆ.

3. ಸ್ತ್ರೀ ಪುನರ್ವಿವಾಹವು ಪುಣ್ಯಕರವು ಪುನರ್ವಿವಾಹವಾದುದರಿಂದ ಪುರುಷನ ದ್ವಿತೀಯ ವಿವಾಹದಂತೆ.

4. ದೇವತಾ ಪ್ರತಿಮೆಯು ಪೂಜ್ಯವಲ್ಲ, ಪಾಷಾಣಾತ್ಮಕವಾದುದರಿಂದ ಬಚ್ಚಲಗುಂಡಿ ಕಲ್ಲಿನಂತೆ.

5. ಶಿಖಾಯಜ್ಞೋಪವೀತಗಳ ಪರಿತ್ಯಾಗವು ದೋಷಾರ್ಹವಲ್ಲ ವ್ಯರ್ಥ ಪದಾರ್ಥಗಳ ಪರಿತ್ಯಾಗವಾದುದರಿಂದ ನಖ ಚಿಂದೀ ವಸ್ತ್ರಗಳೇ ಮುಂತಾದುವುಗಳ ಪರಿತ್ಯಾಗದಂತೆ.

6. ಹೋಟೆಲು ಅನ್ನವು ಭೋಜ್ಯವು ಸಣ್ಣಕ್ಕಿ ಅನ್ನವಾಗಿರುವುದರಿಂದ ಮನೆಯ ನಿವೇದಿತ ಅನ್ನದಂತೆ.

7. ವ್ಯಸನಜನಿತ ಉಪವಾಸಗಳು ತಪೋರೂಪವು ಉಪವಾಸವಾದುದರಿಂದ ಏಕಾದಶೀ ಉಪವಾಸದಂತೆ.

8. ವಿಧವಾ ಕೇಶಧಾರಣೆಯು ಮಂಗಳಪ್ರದವು ಕೇಶಧಾರಣರೂಪವಾದುದ ರಿಂದ ಪತಿವ್ರತೆಯ ಕೇಶಧಾರಣೆಯಂತೆ.

9. ಗೋಹತ್ಯೆಯು ಪುಣ್ಯಪ್ರದವು ಹತ್ಯಾರೂಪವಾದುದರಿಂದ ಆತತಾಯಿಯ ಹನನದಂತೆ.

10. ಮದ್ಯಪಾನಾರ್ಥವಾದ ದ್ರವ್ಯದಾನವು ಪುಣ್ಯಪ್ರದವು ದ್ರವ್ಯದಾನವಾದು ದರಿಂದ ಉತ್ತಮ ಬ್ರಾಹ್ಮಣರಿಗೆ ಅರ್ಪಿತವಾದ ದಾನದಂತೆ.

11. ವೇದವಿರುದ್ಧವಾದ ಶೌರ್ಯ, ಧೈರ್ಯ, ಸೇವಾ, ದಾನ, ಕರ್ಮಾದಿ ಗಳೂ ಮೋಕ್ಷೋಪಯೋಗಿಯು ಉತ್ಸಾಹಪೂರ್ವಕ ಆಚರಣೆಯಾದುದರಿಂದ ವಿಶ್ವಾ ಮಿತ್ರರ ತಪಸ್ಸಿನಂತೆ.

**I. ವಿದ್ಯಾರ್ಥಿಗಳು :—** ಮಹಾಸ್ವಾಮೀ ! ದಯಮಾಡಿ ಸಾಕು ಮಾಡ ಬೇಕು. ಗೀತೆಯಲ್ಲಿ ಇಂಥ ದುಷ್ಟಾನುಮಾನಗಳಿಗೆ ದೃಷ್ಟಾಂತವಿದ್ದರೆ ತೋರಿಸ ಬೇಕು.

**ಶ್ರೀ ಶ್ರೀಗಳವರು :—** ಸರ್ವಜ್ಞನಾದ ಶ್ರೀ ಕೃಷ್ಣನ ವಾಕ್ಯಗಳಲ್ಲಿ ದುರ್ಯುಕ್ತಿ ಗಳು ದೊರಕಲಾರವು. ಆದರೆ ಬಂಧುಸ್ನೇಹ ಪರವಶನಾದ ಅರ್ಜುನನು ದುರ್ಯೋ ಧನಾದಿಗಳನ್ನು ಕೊಲ್ಲಬಾರದೆಂಬಲ್ಲಿ ಕೆಲವು ದುರನುಮಾನಗಳನ್ನು ಪ್ರಯೋಗಿಸಿರು ತ್ತಾನೆ. ಒಂದು ಅನುಮಾನವನ್ನು ಮಾದರಿಗಾಗಿ ತೋರಿಸುತ್ತೇವೆ.

(1) **ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ।**
**ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ ಸ್ವಬಾಂಧವಾನ್ ॥**
—(1. 36–37.)

ಈ ಶ್ಲೋಕಾರ್ಥವು ಪೂರ್ವದಲ್ಲಿ ಉಕ್ತವಾಗಿರುವುದು. ಇದು ಅರ್ಜುನನ ಅನುಮಾನವು. **1. ದುರ್ಯೋಧನಾದಿಗಳ ಹನನವು–ಪಾಪಕಾರಣವು–ಬಂಧು ಹನನವಾದುದರಿಂದ ಮಾತೃಹನನದಂತೆ. 2. ಪಾಂಡವರು ದುರ್ಯೋಧನಾದಿ ಗಳನ್ನು ಸಂಹರಿಸಕೂಡದು, ಪಾಪವು ಬರುವುದರಿಂದ, ಗುರುಸಂಹಾರ ದಂತೆ.**

**ಪ್ರಶ್ನೆ :— ವಿದ್ಯಾರ್ಥಿಗಳು :—** ಸ್ವಾಮೀ ! ಈ ಅನುಮಾನವನ್ನು ಯಾವ ಶ್ಲೋಕದಲ್ಲಿ ಶ್ರೀಕೃಷ್ಣನು ಖಂಡನೆ ಮಾಡಿರುವನು ?

**ಶ್ರೀ ಶ್ರೀಗಳವರು :—** ಶ್ರೀ ಕೃಷ್ಣನು ಎರಡು ರೀತಿಯಾಗಿ ಪ್ರತ್ಯನುಮಾನಗಳನ್ನು ಪ್ರಯೋಗ ಮಾಡಿ ದುರ್ಯೋಧನಾದಿಗಳು ಹನನಯೋಗ್ಯರೆಂದು ತೋರಿಸಿರುತ್ತಾನೆ. ದುರ್ಯೋಧನಾದಿಗಳ ಹನನವೆಂದರೆ ದುರ್ಯೋಧನಾದಿ ಜೀವ ಸ್ವರೂಪ ಹನನವೇ ಅಥವಾ ಅವರ ದೇಹಹನನವೇ ಎಂದು ವಿಕಲ್ಪ ಮಾಡಿ, ದುರ್ಯೋಧನಾದಿಗಳ ಜೀವ ಸ್ವರೂಪ ಹನನವು ಪಾಪಕಾರಣವು ಬಂಧುಹನನವಾದುದರಿಂದ ಎಂದು ಹೇಳುವುದಾದರೆ ಆಶ್ರಯಾಸಿದ್ಧಿ, ಸ್ವರೂಪಾಸಿದ್ಧ್ಯಾದಿ ಬಹು ದೋಷಗಳು ಬರುವುವೆಂದು " **ನ ತ್ವೇವಾಹಂ ಜಾತು ನಾಸಂ** " ಮುಂತಾದ ಅನೇಕ ಶ್ಲೋಕಗಳಿಂದ ಸಾವಧಾನವಾಗಿ ತೋರಿಸಿದನು. ದುರ್ಯೋಧನಾದಿಗಳ ದೇಹಹನನವು ಪಾಪಕರವು ಬಂಧುಹನನವಾದುದರಿಂದ ಎಂಬ ಅನುಮಾನವನ್ನು ಈ ಶ್ಲೋಕದಲ್ಲಿ ಖಂಡಿಸಿರುತ್ತಾನೆ :—

(2) **ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ಕ್ಷತ್ರಿಯಸ್ಯ ನ ವಿದ್ಯತೇ ॥**
—(2. 31.)

ಈ ಶ್ಲೋಕಾರ್ಥವೂ ಪೂರ್ವದಲ್ಲಿ ವಿವೃತವಾಗಿರುವುದು. ಇದು ಶ್ರೀ ಕೃಷ್ಣನ ಪ್ರತ್ಯನುಮಾನಗಳು :—

(1) **ದುರ್ಜನಹನನವು– ಕ್ಷತ್ರಿಯನಿಗೆ ಪಾಪಸಾಧನವಲ್ಲ ಮತ್ತು ಪುಣ್ಯಸಾಧನವು– ಸ್ವಧರ್ಮವಾದುದರಿಂದ.**

(2) **ದುರ್ಯೋಧನಾದಿಗಳ ಹನನವು– ಪಾಪಸಾಧನವಲ್ಲ ಮತ್ತು ಪುಣ್ಯಸಾಧನವು– ದುರ್ಜನಹನನವಾದುದರಿಂದ.**

ಈ ಅನುಮಾನಗಳಿಂದ ಅರ್ಜುನನ ಅನುಮಾನಗಳು ನಷ್ಟವಾದವು. ಇದೇ ರೀತಿಯಲ್ಲಿ ಅರ್ಜುನನು ಆಶಂಕಿಸಿದ ಇತರ ಹೇತುಗಳನ್ನೂ ಸಹ ಶ್ರೀ ಕೃಷ್ಣನು ಪ್ರತ್ಯನುಮಾನಗಳಿಂದ ಖಂಡಿಸಿರುತ್ತಾನೆ.

8. **ಪ್ರಶ್ನೆ :—** ಸ್ವಾಮೀ ! ಅರ್ಜುನನು ಅನುಮಾನಗಳನ್ನು ಪ್ರಯೋಗಿಸಿದನು. ಶ್ರೀ ಕೃಷ್ಣನು ಅವುಗಳಿಗೆ ವಿರುದ್ಧವಾಗಿ ಅನುಮಾನಗಳನ್ನು ಮಾಡಿರುವನು. ಇವುಗಳಲ್ಲಿ ಬಲಾಬಲವನ್ನು ನಿರ್ಣಯಿಸುವುದು ಹೇಗೆ ?

**ಉತ್ತರ :— ಶ್ರೀ ಶ್ರೀಗಳವರು :—** ನೀವು ಕೇಳಿದುದು ಸರಿ. ಅನುಮಾನವು ಸ್ವತಂತ್ರ ಪ್ರಮಾಣವಲ್ಲ. ಪ್ರತ್ಯಕ್ಷವೂ, ಆಗಮವೂ ಸ್ವತಂತ್ರ ಪ್ರಮಾಣಗಳು. ಪ್ರತ್ಯಕ್ಷ ಆಗಮಗಳಿಗೆ ಅನುಸಾರಿಯಾದ ಅಥವಾ ವಿರುದ್ಧವಾದ ಅನುಮಾನವು ಪ್ರಮಾಣವೆನ್ನಿಸುವುದು. ಪ್ರಕೃತದಲ್ಲಿ ಶ್ರೀ ಕೃಷ್ಣನು ಹೇಳಿದ ಅನು

ಮಾನಕ್ಕೆ ಆಗಮವು ಮೂಲವಾಗಿರುವುದು. ವೇದದಲ್ಲಿ ವಿಷ್ಣುದ್ವೇಷಿಗಳನ್ನು ಕ್ಷತ್ರಿಯರು ಧರ್ಮಯುದ್ಧದಲ್ಲಿ ನಿಗ್ರಹಿಸುವುದರಿಂದ ಶ್ರೇಯಸ್ಸನ್ನು ಹೊಂದುವರು; ಅವರು ಬಂಧುಗಳಾದರೂ ಹನನಯೋಗ್ಯರು ಎಂದು ನಿರ್ಣೀತವಾಗಿರುವುದು. ಶ್ರೀಕೃಷ್ಣನು ಅಂಥ ವೇದಾನುಸಾರಿಯಾಗಿ ಅನುಮಾನ ಮಾಡಿರುವುದರಿಂದ ಇದು ಪ್ರಬಲವೆನ್ನಿಸುವುದು ಅರ್ಜುನನ ಅನುಮಾನಗಳು ಆಗಮವಿರುದ್ಧವಾಗಿರುವುದರಿಂದ ಆಂಗ್ಲೇಯ ತತ್ವವಿಚಾರಪರವಾದ ಗ್ರಂಥಗಳಲ್ಲಿರುವ ಅನುಮಾನಗಳಂತೆ ನಿರ್ಮೂಲವಾಗಿರುವುವು. ವಿರೋಧ, ಅಸಂಗತಿ, ನ್ಯೂನ, ಆಧಿಕ್ಯಗಳೆಂದು ಅನುಮಾನ ದೋಷಗಳು ನಾಲ್ಕು ಪ್ರಕಾರವಾಗಿರುವುವು. ಇವುಗಳಲ್ಲಿ ಅನೇಕ ಅವಾಂತರ ಭೇದಗಳುಂಟು. ಈ ಸೂಕ್ಷ್ಮಗಳನ್ನು ಪ್ರಮಾಣ ಗ್ರಂಥಗಳಿಂದ ವಿಶೇಷವಾದ ವಿಚಾರಪೂರ್ವಕವಾಗಿ ತಿಳಿಯಬೇಕು. ಮತ್ತು "ಕಾಮಾಚ್ಚನಾನುಮಾನಾಪೇಕ್ಷಾ" ಇತ್ಯಾದಿ ಬ್ರಹ್ಮಸೂತ್ರಗಳಲ್ಲಿ ಅನುಮಾನಕ್ಕೆ ಇರುವ ಸಾಮರ್ಥ್ಯವನ್ನು ವೇದವ್ಯಾಸರು ನಿರ್ಣಯ ಮಾಡಿರುತ್ತಾರೆ. ಪ್ರಕೃತದಲ್ಲಿ ನೀವು ಇಷ್ಟನ್ನು ಒಪ್ಪಿದರೆ ಸಾಕು. ಪ್ರತ್ಯಕ್ಷಾಗಮಗಳೆಂಬ ಮೂಲ ಪ್ರಮಾಣಗಳಿಗೆ ಅವಿರುದ್ಧವಾದ ನಿರ್ದುಷ್ಟ ಅನುಮಾನಗಳು ಕ್ರಮವಾಗಿ ಇಂದ್ರಿಯಗೋಚರ ಮತ್ತು ಅತೀಂದ್ರಿಯ ವಿಷಯಗಳಲ್ಲಿ ಪ್ರಮಾಣಗಳು ಎಂದರೆ ಯಥಾರ್ಥ ಜ್ಞಾನಜನಕಗಳೆಂದು ಶಾಸ್ತ್ರನಿರ್ಣಯವು.

---

# 3. ಮೂರನೆಯ ಅಂಶವು.

## ಪ್ರಮಾಣ ವಿಚಾರವು (ಮುಂದುವರಿಸಿದ್ದು)

### ಆಗಮವು.

1. **ವಿದ್ಯಾರ್ಥಿಗಳು :— ಪ್ರಶ್ನೆ :—** ಸ್ವಾಮೀ ! ಆಗಮವು ಪ್ರಮಾಣವೆಂದರೆ ಏನು ?

**ಶ್ರೀ ಶ್ರೀಗಳವರು :—** ನಿರ್ದುಷ್ಟವಾದ ಶಬ್ದವು ಯಥಾರ್ಥ ಜ್ಞಾನಜನಕವು ಎಂದರ್ಥವು.

**ವಿದ್ಯಾರ್ಥಿಗಳು :—** ಶಬ್ದದಲ್ಲಿ ದೋಷಗಳು ಯಾವುವು ?

**ಶ್ರೀ ಶ್ರೀಗಳವರು:—** ಶಬ್ದದಲ್ಲಿ ಸ್ವಾಭಾವಿಕವಾದ ದೋಷಗಳು ಯಾವುವೂ ಇಲ್ಲ. ವಕ್ತೃ (ಮಾತಾಡುವ) ಪುರುಷನ ದೋಷದಿಂದ ಶಬ್ದವು ಕೆಲವು ವೇಳೆ ಅಯಥಾರ್ಥ ಜ್ಞಾನವನ್ನು ಹುಟ್ಟಿಸುವುದು. ಗಂಗೆಯು ಸ್ವಾಭಾವಿಕವಾಗಿ ನಿರ್ಮಲವಾಗಿ ಪಾವನಕರವಾಗಿರುವುದು. ಆದರೆ ನೀಚನ ಮದ್ಯಭಾಂಡದಲ್ಲಿ ಅದೇ ನೀರು

ಒಯ್ಯಲ್ಪಟ್ಟರೆ ಅದು ಪಾನಾರ್ಹವಲ್ಲ. ಪುರುಷ ದೋಷದಿಂದ ಸ್ವಾಭಾವಿಕವಾದ ಪವಿತ್ರ ಜಲವೂ ಪಾನಕ್ಕೆ ಅನರ್ಹವಾಗುವುದು. ಹೀಗೆಯೇ ಶಬ್ದವು ಸ್ವಾಭಾವಿಕವಾಗಿ ಯಥಾರ್ಥ ಜ್ಞಾನವನ್ನು ಹುಟ್ಟಿಸುವುದು. ಆದರೆ ವಂಚಕ ಪುರುಷನು ಅಥವಾ ಅಜ್ಞ ಪುರುಷನು ಆ ಶಬ್ದಗಳನ್ನು ತನ್ನ ಇಷ್ಟಾನುಸಾರ ಜೋಡಿಸಿ ಪ್ರಯೋಗಿಸಿದರೆ ಅದು ಅಯಥಾರ್ಥ ಜ್ಞಾನವನ್ನು ಹುಟ್ಟಿಸುವುದು. ವಕ್ತೃ ಪುರುಷ ದೋಷದಿಂದ ಶಬ್ದವು ದುಷ್ಟ ಜ್ಞಾನವನ್ನು ಹುಟ್ಟಿಸುವುದು. 1. ವಕ್ತೃ ಪುರುಷನು ನಿರ್ದುಷ್ಟನಾದರೆ ಅಥವಾ 2. ಯಾವ ಪುರುಷನೂ ಆನುಪೂರ್ವಿಯನ್ನು ರಚನೆ ಮಾಡದೆಯೇ ಇದ್ದರೆ ಅಂಥ ಶಬ್ದವು ಸ್ವತಃ ಯಥಾರ್ಥ ಜ್ಞಾನವನ್ನು ಹುಟ್ಟಿಸುವುದು.

**ಪ್ರಶ್ನೆ :—** ಸ್ವಾಮೀ ! ಹಾಗಾದರೆ ಈಗ ಬುದ್ಧ, ಕ್ರಿಸ್ತ ಮುಹಮ್ಮದಾದಿಗಳೂ ತತ್ವಗಳನ್ನು ಉಪದೇಶ ಮಾಡುವವರಾಗಿ, ನಾನಾ ವಿಧವಾಗಿ ಶಬ್ದ ರಚನೆಯನ್ನು ಮಾಡಿರುತ್ತಾರೆ. ಮತ್ತು ಶಂಕರ, ರಾಮಾನುಜ, ವಲ್ಲಭ, ಭಾಸ್ಕರಾದಿಗಳೂ ಶಬ್ದ ರಚನೆಯನ್ನು ಮಾಡಿರುತ್ತಾರೆ. ಈ ಶಬ್ದಗಳು ಪ್ರಮಾಣಗಳೋ ಅಲ್ಲವೋ ?

**ಶ್ರೀ ಶ್ರೀಗಳವರು :—** ಶಬ್ದದಲ್ಲಿ ಸ್ವಾಭಾವಿಕವಾದ ದೋಷವಿಲ್ಲ. ವಕ್ತೃ ಪುರುಷರುಗಳಾದ ಬುದ್ಧ, ಕ್ರಿಸ್ತ, ಮುಹಮ್ಮದ, ರಾಮಾನುಜ, ಶಂಕರ, ವಲ್ಲಭಾದಿಗಳು ನಿರ್ದುಷ್ಟ ಮನಸ್ಕರಾಗಿದ್ದರೆ ( ವಿವಕ್ಷಿತಾರ್ಥ ತತ್ವಜ್ಞಾನ, ಕರಣಪಾಟವ, ಅರ್ಥವಿವಕ್ಷಾ, ಅವಿಪ್ರಲಿಪ್ಸಾ ಎಂಬ ಗುಣಗಳಿಂದ ಯುಕ್ತರಾಗಿದ್ದರೆ ), ಅವರ ಶಾಸ್ತ್ರಗಳೂ ಯಥಾರ್ಥ ಜ್ಞಾನವನ್ನು ಹುಟ್ಟಿಸುವುವು. ಇಲ್ಲದಿದ್ದರೆ ಅಪ್ರಮಾಣಗಳೇ. ಎಂದರೆ ಅವರು ಮತ್ತೊಬ್ಬನನ್ನು ಹಿಂಸೆ ಮಾಡದ ಸಾಧುಗಳಾದ ಸಜ್ಜನರಾಗಿದ್ದರೆ ಅವರ ಶಾಸ್ತ್ರವು ಪ್ರಮಾಣವೆಂದು ನಂಬಕೂಡದು. ಅವರು ಸರ್ವಜ್ಞರಾಗಿದ್ದರೆ ಅವರ ತತ್ವನಿರೂಪಣೆಯು ಪ್ರಾಮಾಣಿಕವು. ಅನ್ಯಥಾ ಅಪ್ರಾಮಾಣಿಕವೇ.

**ವಿದ್ಯಾರ್ಥಿಗಳು :—** ಸ್ವಾಮೀ ! ಹಾಗಾದರೆ ಇವರೆಲ್ಲರೂ ತಾವು ತಾವು ಸರ್ವಜ್ಞರೆಂದು ಹೇಳಿಕೊಂಡರೆ ?

**ಶ್ರೀ ಶ್ರೀಗಳವರು :—** ಪರಸ್ಪರ ವಿರುದ್ಧವಾದ ತತ್ವಗಳನ್ನು ಉಪಪಾದಿಸುವರೆಲ್ಲರೂ ಯಥಾರ್ಥಜ್ಞರೆಂದು ನಿಶ್ಚಯಿಸುವುದಕ್ಕಾಗುವುದಿಲ್ಲ. "ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ" ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ. ಪ್ರಮಾಣಿಕವಾದ ತತ್ವನಿಶ್ಚಯವು ಒಂದೇ ಇರುವುದು. ಆದುದರಿಂದ ಇವರೆಲ್ಲರೂ ಸುಳ್ಳು ಹೇಳಿರುವರು, ಅಥವಾ ಒಬ್ಬರು ಸರಿಯಾಗಿ ಹೇಳಿರುವರೆಂದು ತಿಳಿಯಬೇಕು.

**ಪ್ರಶ್ನೆ :—** ಹಾಗಾದರೆ ಇದನ್ನು ನಿರ್ಣಯಿಸುವುದು ಹೇಗೆ ?

**ಉತ್ತರ :— ಶ್ರೀ ಶ್ರೀಗಳವರು :—** ಯಾವ ಪುರುಷನೂ ಸ್ವತಂತ್ರವಾಗಿ ರಚಿಸದೇ ಇರುವ ವೇದವು ಸ್ವಭಾವತಃ ನಿರ್ದುಷ್ಟವಾಗಿರುವುದಲ್ಲದೆ, ವಕ್ತೃಪುರುಷ

ಮೂಲಕವಾದ ದೋಷದಿಂದ ರಹಿತವಾಗಿರುವುದರಿಂದ ಅತ್ಯಂತ ಯಥಾರ್ಥವಾದ ಜ್ಞಾನವನ್ನು ಹುಟ್ಟಿಸುವದು. ಅಂಥ ವೇದೋಕ್ತ ತತ್ವವನ್ನೇ ನಿರೂಪಿಸುವ ಪೌರುಷೇಯ ಗ್ರಂಥಗಳು ವೇದವ್ಯಾಸರಿಂದ ರಚಿತವಾದ ಬ್ರಹ್ಮಸೂತ್ರ ಭಾರತಾದಿಗಳು ಪ್ರಮಾಣವೆನ್ನಿಸುವುವು. ತದ್ಭಿನ್ನವಾದುವುಗಳೆಲ್ಲಾ ಅಪ್ರಮಾಣಗಳೇ.

3. **ಪ್ರಶ್ನೆ :—** ವೇದವು ಯಾವ ಪುರುಷನೂ ರಚಿಸದಿರುವ ಅಪೌರುಷೇಯ ಗ್ರಂಥವೆಂದು ಶ್ರೀ ಕೃಷ್ಣನು ಎಲ್ಲಿ ಹೇಳಿರುತ್ತಾನೆ ? ಮತ್ತು ವೇದಕ್ಕೆ ಅನುಸಾರಿಯಾದ ಪೌರುಷೇಯ ಗ್ರಂಥಗಳು ಯಾವುವು ಎಂದು ಹೇಳಿರುವನು ?

**ಶ್ರೀ ಶ್ರೀಗಳವರು :—** ನಿಮ್ಮ ಎರಡು ಪ್ರಶ್ನೆಗಳಿಗೂ ಉತ್ತರವನ್ನು ಶ್ರೀ ಕೃಷ್ಣನು ಹದಿನೈದನೇಯ ಅಧ್ಯಾಯದಲ್ಲಿ ಸೂಚಿಸಿರುತ್ತಾನೆ. ಇದು ಶ್ರೀ ಕೃಷ್ಣನ ಮಾತುಗಳು :—

(1) **ವೇದೈಶ್ಚ ಸರ್ವೈರಹಮೇವ ವೇದ್ಯೋ**
**ವೇದಾಂತಕೃದ್ವೇದವಿದೇಹ ಚಾಹಂ ||** —(15. 15.)

**ಅರ್ಥವು :—** ಸರ್ವ ವೇದಗಳಿಂದಲೂ ನಾನೇ ಮುಖ್ಯತಃ ಪ್ರತಿಪಾದ್ಯನು. ವೇದಾರ್ಥನಿರ್ಣಾಯಕವಾದ ಬ್ರಹ್ಮಸೂತ್ರಗಳನ್ನು ರಚಿಸಿದವನೂ ನಾನೇ. ಮತ್ತು ವೇದಾರ್ಥವನ್ನು ಚೆನ್ನಾಗಿ ನಾನೇ ತಿಳಿದವನು.

ಶ್ರೀ ಕೃಷ್ಣನ ಈ ವಾಕ್ಯದಿಂದ ಮೂರು ವಿಷಯಗಳು ಸಿದ್ಧವಾಗುವುವು. 1. ವೇದರೂಪವಾದ ಅನಂತ ಶಬ್ದರಾಶಿಗಳೂ ಪರಮಾತ್ಮನನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುವುವು. ಎಂದರೆ ಸರ್ವ ವೇದಗಳಿಂದಲೂ ಪರಮಾತ್ಮವಿಷಯಕವಾದ ಯಥಾರ್ಥ ಜ್ಞಾನವು ಹುಟ್ಟುವುದರಿಂದ ವೇದವು ಪ್ರಮಾಣವು. 2. ಬ್ರಹ್ಮಸೂತ್ರಗಳನ್ನು ನಿರ್ದುಷ್ಟವಾದ ವೇದಗಳಲ್ಲಿ ಸರ್ವಜ್ಞನೆಂದು ಪ್ರಸಿದ್ಧನಾದ ಶ್ರೀ ಕೃಷ್ಣನು ಬಾದರಾಯಣ ರೂಪದಿಂದ ರಚಿಸಿರುವನಾದುದರಿಂದ ಅವುಗಳೂ ಉತ್ತಮ ಪ್ರಮಾಣಗಳೇ. ಈ ರೀತಿಯಾಗಿ ವೇದಾನುಸಾರಿಯಾಗಿರುವುದರಿಂದಲೇ ಬ್ರಹ್ಮಸೂತ್ರಗಳು ಪ್ರಮಾಣಗಳೆಂದು ಸಿದ್ಧವಾಗುವುದರಿಂದ ಇತರ ಗ್ರಂಥಗಳೂ ಈ ಮರ್ಯಾದೆಯಿಂದಲೇ ಪ್ರಾಮಾಣ್ಯವನ್ನು ಹೊಂದುವುವು. ಆದುದರಿಂದ ವೇದಾನುಸಾರಿಯಾದ ಪೌರುಷೇಯ ಗ್ರಂಥಗಳು ಪ್ರಮಾಣಗಳು. ಅನ್ಯ ಗ್ರಂಥಗಳು ಅಪ್ರಮಾಣಗಳು ಎಂದು ಸಿದ್ಧವಾಗುವುದು. 3. ವೇದಗಳು ಅಪೌರುಷೇಯಗಳೆಂದು ಈ ವಾಕ್ಯದಿಂದಲೇ ವಿದಿತವಾಗುವುದು. ಹೇಗೆಂದರೆ ಶ್ರೀ ಕೃಷ್ಣನು ಸರ್ವ ವೇದಗಳಿಂದಲೂ ನಾನು **ಪ್ರತಿಪಾದ್ಯನು** ಎಂದು ಹೇಳಿ, ಈ ವಿಷಯವನ್ನು ತಿಳಿಯುವುದು ಹೇಗೆ ಎಂಬ ಶಂಕೆಗೆ ಸಮಾಧಾನಾರ್ಥವಾಗಿ " ವೇದಾಂತಕೃತ್ ", " ವೇದವಿದೇವಚಾಹಂ " ಎಂಬ ಎರಡು ವಾಕ್ಯಗಳಿಂದ ಸಮಾಧಾನವನ್ನು ಕೊಟ್ಟಿರುವನು. ಸರ್ವ ವೇದಗಳಿಂದಲೂ ನಾನೇ ಪ್ರತಿಪಾದ್ಯನು. ಹೇಗೆಂದರೆ ವೇದಾರ್ಥನಿರ್ಣಾಯಕವಾದ ಬ್ರಹ್ಮಸೂತ್ರಗಳನ್ನು ರಚಿಸಿದವನೂ ನಾನೇ: ಮತ್ತು ನಾನೇ

ವೇದಾರ್ಥಗಳನ್ನು ಚೆನ್ನಾಗಿ ತಿಳಿದವನು ಎಂದು ಇವುಗಳ ಅರ್ಥವು. ಇದರಲ್ಲಿ ಶ್ರೀ ಕೃಷ್ಣನು ಬ್ರಹ್ಮಸೂತ್ರಗಳನ್ನು ನಾನು ರಚಿಸಿದವನು ಎಂದು ಹೇಳಿ ವೇದಗಳನ್ನು ರಚಿಸಿದವನು ನಾನು ಎಂದು ಹೇಳದಿರುವುದರಿಂದ ವೇದವು ಶ್ರೀ ಕೃಷ್ಣನಿಂದ ರಚಿತ ವಲ್ಲವೆಂದು ಸಿದ್ಧವಾಗುವುದು. ಅಷ್ಟೇ ಅಲ್ಲ. "ಅಹಂ ವೇದಕೃತ್" ಎಂದರೆ ವೇದವನ್ನು ನಾನು ಮಾಡಿದವನು ಎಂದು ಹೇಳಿಕೊಳ್ಳದೆ, ಶ್ರೀ ಕೃಷ್ಣನು "ಅಹಂ ವೇದವಿತ್" ಎಂದರೆ ವೇದವನ್ನು ನಾನು ಬಲ್ಲವನು ಎಂದು ಹೇಳಿರುತ್ತಾನೆ. ಈ ವಾಕ್ಯಸ್ವಾರಸ್ಯ ಪರ್ಯಾಲೋಚನೆಯಿಂದ ವೇದಗಳನ್ನು ಶ್ರೀ ಕೃಷ್ಣನು ಮಾಡಲಿಲ್ಲ ವೆಂದು ನಿಶ್ಚಿತವಾಗುವುದು. ಇದರಿಂದ ವೇದವು ಅಪೌರುಷೇಯವಾದ ಅನಾದಿ ಶಬ್ದರಾಶಿಯೆಂದು ಏರ್ಪಡುವುದು. ಯಾತಕ್ಕೆಂದರೆ ಶ್ರೀ ಕೃಷ್ಣನು ವೇದವನ್ನು ತಾನು ಮಾಡಲಿಲ್ಲ. ಇತರರು ಮಾಡಲಿಲ್ಲವೆಂದು ಸುಪ್ರಸಿದ್ಧ ವಿಷಯವು. ಪರಿಶೇಷದಿಂದಲೂ ಕೂಡ ವೇದವು ಅನಾದಿ ನಿತ್ಯವಾದ ಯಾರಿಂದಲೂ ರಚಿತವಲ್ಲದ ಶಬ್ದರಾಶಿಯು ಎಂದು ನಿಶ್ಚಿತವಾಗುವುದು.

ಮತ್ತೊಂದು ಸ್ಥಳದಲ್ಲಿಯೂ ಶ್ರೀ ಕೃಷ್ಣನು ಈ ವಿಷಯವನ್ನೇ ಸೂಚಿಸಿರುತ್ತಾನೆ :—

**(2) ಅತೋಽಸ್ಮಿಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥**
—(15. 18.)

ನಾನು ( ಶ್ರೀ ಕೃಷ್ಣನು ) ಸಕಲ ಪೌರುಷೇಯ ಪ್ರಮಾಣ ಗ್ರಂಥಗಳಲ್ಲಿಯೂ ವೇದಗಳಲ್ಲಿಯೂ ಪುರುಷೋತ್ತಮನು (ಸರ್ವೋತ್ತಮ ಚೇತನನು) ಎಂದು ಪ್ರಸಿದ್ಧ ನಾಗಿರುತ್ತೇನೆ.

ಈ ವಾಕ್ಯದಲ್ಲಿ ಶ್ರೀ ಕೃಷ್ಣನು ಸಕಲ ಪೌರುಷೇಯ ಪ್ರಾಮಾಣಿಕ ಗ್ರಂಥ ಗಳನ್ನು "ಲೋಕ" ಶಬ್ದದಿಂದ ನಿರ್ದೇಶ ಮಾಡಿ, ನಂತರ "ವೇದೇ" ಎಂದು ಪ್ರತ್ಯೇಕವಾಗಿ ಗ್ರಹಣ ಮಾಡಿರುವುದರಿಂದ ವೇದಗಳು "ಲೋಕ" ಕ್ಕಿಂತ ವಿಲಕ್ಷಣ ವಾದ ಎಂದರೆ ಪೌರುಷೇಯ ಗ್ರಂಥಗಳಿಗಿಂತ ವಿಲಕ್ಷಣವಾದ ಅಪೌರುಷೇಯವಾದ ಪ್ರಮಾಣಗಳೆಂದು ಸಿದ್ಧವಾಗುವುದು.

**ಪ್ರಶ್ನೆ :—** ಸ್ವಾಮೀ ! ಇಲ್ಲಿ "ಲೋಕೇ" ಎಂಬ ಪದಕ್ಕೆ ಸಕಲ ಲೋಕ ದಲ್ಲಿಯೂ ನಾನು ಪುರುಷೋತ್ತಮನೆಂದು ಪ್ರಸಿದ್ಧನಾಗಿರುತ್ತೇನೆ ಎಂದು ಯಾತಕ್ಕೆ ಅರ್ಥ ಮಾಡಬಾರದು ? ಸಕಲ ಪೌರುಷೇಯ ಸ್ಮೃತಿಗಳಲ್ಲಿಯೂ ಎಂದು ವಿಲಕ್ಷಣ ವಾಗಿ ಅರ್ಥ ಮಾಡುವುದರಲ್ಲಿ ಕಾರಣವೇನು ?

**ಉತ್ತರ :— ಶ್ರೀ ಶ್ರೀಗಳವರು :—** 1. "ಲೋಕ" ಶಬ್ದದಿಂದ ಇಲ್ಲಿ ಮನುಷ್ಯರನ್ನು ತೆಗೆದುಕೊಳ್ಳಬಾರದು. ಪರಮಾತ್ಮನು ಅತೀಂದ್ರಿಯನು. ಆತನು ಆಗಮಮಾತ್ರಗಮ್ಯನು. ಅವನನ್ನು ಪ್ರತಿಪಾದನೆ ಮಾಡುವ ಆಗಮಗಳು ಭಾರತ, ಭಾಗವತಾದಿಗಳಂತೆ ಕೆಲವು ಪೌರುಷೇಯಗಳು. ಇಂಥ ಪೌರುಷೇಯಾಗಮದಿಂದ

ಅನೇಕ ಅಧಿಕಾರಿಗಳು ಭಗವತ್ಸ್ವರೂಪವನ್ನು ತಿಳಿಯುವವರಾದುದರಿಂದ ಶ್ರೀ ಕೃಷ್ಣನು ನಾನು " ಲೋಕ " ದಲ್ಲಿ ಹೀಗೆ ಪ್ರಸಿದ್ಧನಾಗಿರುತ್ತೇನೆ ಎಂದು ಹೇಳಿದನು. ಆದುದರಿಂದ ಇಲ್ಲಿ ಲೋಕ ಶಬ್ದದಿಂದ ಗ್ರಂಥಗಳೆಂದೇ ಅರ್ಥವನ್ನು ಮಾಡಬೇಕು. 2. ಕಿಂಚ ಲೋಕಶಬ್ದದ ಮಗ್ಗುಲಿನಲ್ಲಿ " ವೇದೇ " ಎಂದು ಇತರ ಗ್ರಂಥಗಳನ್ನು ನಾಮದಿಂದ ನಿರ್ದೇಶ ಮಾಡಿರುವುದರಿಂದ ಲೋಕಶಬ್ದಕ್ಕೂ ಪೌರುಷೇಯ ಗ್ರಂಥ ಗಳೆಂದೇ ಅರ್ಥವನ್ನು ಮಾಡಬೇಕು. ಅನ್ಯಥಾ ನಿಷ್ಕಾರಣವಾಗಿ ಪ್ರಾಯಪಾಠ ವಿರೋಧವು ಬರುವುದು.

ಇಂಥ ಪೌರುಷೇಯ ಗ್ರಂಥವೈಲಕ್ಷಣ್ಯವು ವೇದದಲ್ಲಿ ಅಪೌರುಷೇಯತ್ವ ರೂಪವೇ ಆಗಿರುವುದು ವೇದವು ಅಪೌರುಷೇಯವಾದುದರಿಂದ ಸರ್ವ ಪ್ರಕಾರ ದಿಂದಲೂ ನಿರ್ದುಷ್ಟವಾಗಿರುವುದು. ಆದರಿಂದ ಯಾವ ಶಬ್ದ ದೋಷವೂ ಅದರಲ್ಲಿ ಪ್ರವೇಶಿಸುವುದಕ್ಕೆ ಕಾರಣವೇ ಇರುವುದಿಲ್ಲ. ಇದನ್ನು ತಿಳಿದವರಿಗೆ ವೇದದಲ್ಲಿ ಅಪ್ರಾಮಾಣ್ಯ ಶಂಕೆಯೇ ಉತ್ಪತ್ತಿಯಾಗಲಾರದು. ಆದುದರಿಂದಲೇ ವೇದವು ಅತ್ಯುತ್ತಮ ಪ್ರಮಾಣವೆನ್ನಿಸುವುದು. ಭಾರತಾದಿ ಪೌರುಷೇಯ ಗ್ರಂಥಗಳು ಪ್ರಮಾಣಗಳೋ ಅಲ್ಲವೋ ಎಂಬ ಶಂಕಾಸ್ಪದವಾಗಿರುವದರಿಂದ ಇವುಗಳೇ ವೇದ ದಷ್ಟು ನಿಶ್ಶಂಕವಾದ ಪ್ರವೃತ್ತಿಯನ್ನು ಉಂಟು ಮಾಡಲಾರವು.

4 **ಪ್ರಶ್ನೆ:**— ಸ್ವಾಮೀ ! ಹಾಗಾದರೆ ಪೌರುಷೇಯ ಗ್ರಂಥಗಳಲ್ಲಿ ಪ್ರಾಮಾಣ್ಯ ನಿಶ್ಚಯವು ಹೇಗೆ ?

**ಉತ್ತರ:— ಶ್ರೀ ಶ್ರೀಗಳವರು:—** ಯಾವ ಪೌರುಷೇಯ ಗ್ರಂಥಕರ್ತನು ವೇದದಿಂದ ಸರ್ವಜ್ಞನು, ಸುಳ್ಳು ಹೇಳುವವನಲ್ಲ ಎಂದು ಪ್ರಮಿತನಾಗಿರುವನೋ ಆತನು ಬರೆದುದೆಲ್ಲವೂ ಸತ್ಯವೇ ಸರಿ. ಒಂದು ಉದಾಹರಣೆಯನ್ನು ಕೊಡುವೆವು. " ಯದ್ವೈ ಕಿಂಚನ ಮನುರವದತ್ತದ್ಭೇಷಜಂ " ಎಂದು ಸರ್ವಜ್ಞನಾದ ವಾಯುವೂ ಮತ್ತು ಮನುವೂ ತನ್ನ ಗ್ರಂಥಗಳಲ್ಲಿ ಸುಳ್ಳು ಹೇಳಿರುವುದಿಲ್ಲವೆಂದು ವೇದವು ಹೇಳುತ್ತದೆ.* ಆದುದರಿಂದ ಮಧ್ವಶಾಸ್ತ್ರವೂ ಮನುಧರ್ಮಶಾಸ್ತ್ರವೂ ಪ್ರಮಾಣ ವೆನ್ನಿಸುವುವು. " ಇತಿಹಾಸ ಪುರಾಣಃ ಪಂಚಮೋ ವೇದಾನಾಂ ವೇದಃ " ಎಂಬ ಶ್ರುತಿ ವಚನದಿಂದ ಭಾರತ ಮೂಲ ರಾಮಾಯಣಗಳೆಂಬ ಇತಿಹಾಸಗಳೂ, ಸಾತ್ವಿಕ ಪುರಾಣಗಳೂ ಪ್ರಮಾಣಗಳೆಂದು ನಿರ್ಧರಿಸಲ್ಪಡುವುವು. ಯದ್ಯಪಿ ಈ ವಾಕ್ಯದಲ್ಲಿ ಪುರಾಣೇತಿಹಾಸಗಳು ಪ್ರಮಾಣವೆಂದು ಸಾಮಾನ್ಯವಾಗಿ ಹೇಳಲ್ಪಟ್ಟಿದ್ದರೂ ಸಹ ವಿಶೇಷ ವಚನ ಬಲದಿಂದ ಈ ವಾಕ್ಯಕ್ಕೆ ಸಂಕುಚಿತವಾದ ಅರ್ಥವನ್ನು ಮಾಡ ಬೇಕು. ಮುಖ್ಯವಾದ ಅಭಿಪ್ರಾಯವೇನೆಂದರೆ ಸ್ಪಷ್ಟವಾದ ವೇದ ವಾಕ್ಯ ವಿರುದ್ಧ

---

* **" ತೇ ವಾಯುವೇ ಮನವೇ ಬಾಧಿತಾ ಯೋ "** ಮುಂತಾದ ಶ್ರುತಿಗಳಿಂದ ವಾಯು ದೇವರೇ ಮುಖ್ಯವಾಗಿ ಈ ಶ್ರುತಿ ಪ್ರತಿಪಾದ್ಯ ಮನುವೆಂದು ನಿರ್ಧರಿಸಬೇಕು.

ವಾದ ಯಾವ ಪೌರುಷೇಯ ವಚನಕ್ಕೂ ಪ್ರಾಮಾಣ್ಯವು ಇರುವುದಿಲ್ಲ. ಅವು ಸುಳ್ಳು ಹೇಳುವುವು ಎಂದು ನಿಶ್ಚಯಿಸಬೇಕು. †

**ಪ್ರಶ್ನೆ :—** ಸ್ವಾಮೀ ! ಇದಕ್ಕೆ ಒಂದೆರಡು ದೃಷ್ಟಾಂತಗಳನ್ನು ಕೊಡಬೇಕು.

**ಉತ್ತರ:— ಶ್ರೀ ಶ್ರೀಗಳವರು:—** 1. **ಅಗ್ನಿರ್ವೈ ದೇವಾನಾಮವಮಃ ವಿಷ್ಣುಃ ಪರಮಃ** ಎಂಬ ನಿರವಕಾಶ ಶ್ರುತಿಯಲ್ಲಿ ವಿಷ್ಣುವು ಸರ್ವೋತ್ತಮ ದೇವತೆ ಯೆಂದು ಹೇಳಲ್ಪಟ್ಟಿರುವುದು. ಇದಕ್ಕೆ ವಿರುದ್ಧವಾಗಿ ಅನೇಕ ಸ್ಮೃತಿ ಪುರಾಣ ಗ್ರಂಥಗಳಲ್ಲಿ ಶಿವಾದಿಗಳು ಸರ್ವೋತ್ತಮರು ಎಂದು ಹೇಳಲ್ಪಟ್ಟಿರುವುದು. ಆದುದ ರಿಂದ ಅವುಗಳು ಅಪ್ರಮಾಣಗಳು ಎಂದರೆ ಸುಳ್ಳು ಹೇಳುವ ತಾಮಸ ಶಾಸ್ತ್ರಗಳು ಎಂದು ನಿಶ್ಚಯಿಸಬೇಕು. 2. ನ ಪಲಾಂಡುಂ ಭಕ್ಷಯೀತ ಎಂದು ಶ್ರುತಿಯು ಈರುಳ್ಳಿ ಭಕ್ಷಣದಿಂದ ನರಕವಾಗುವುದೆಂದು ಹೇಳುವುದು. ಇದಕ್ಕೆ ವಿರುದ್ಧವಾಗಿ ಆಂಗ್ಲೇಯ ಗ್ರಂಥಗಳು ಈರುಳ್ಳಿ ಭಕ್ಷಣವನ್ನು ಪ್ರಶಸ್ತವೆಂದು ಹೇಳುವುವು. ಅವು ಗಳು ತಾಮಸವೆಂದು ನಿಶ್ಚಯಿಸಬೇಕು.

---

† ಸರ್ವ ವೇದಗಳೂ ಶ್ರೀಮನ್ನಾರಾಯಣನೇ ಅನಂತ ಗುಣಭರಿತನಾದ ಪರಬ್ರಹ್ಮನೆಂದು ಹೇಳುವುದರಲ್ಲಿ ತಾತ್ಪರ್ಯವುಳ್ಳವುಗಳಾಗಿರುವುವು. ಇಂಥ ವೇದದ ಮಹಾ ತಾತ್ಪರ್ಯಕ್ಕೆ ವಿರುದ್ಧ ವಾದ ಸಮಸ್ತವೂ ತಾಮಸನೇ, ಮನುವೂ ಹಾಗೆಯೇ ಹೇಳಿರುತ್ತಾನೆ :—

**ಯಾ ವೇದ ಬಾಹ್ಯಾಃ ಸ್ಮೃತಯೋ ಯಾಶ್ಚ ಕಾಶ್ಚ ಕುದೃಷ್ಟಯಃ ।**
**ಸರ್ವಾಸ್ತಾಃ ನಿಷ್ಫಲಾಃ ಪ್ರೋಕ್ತಾಸ್ತಮೋನಿಷ್ಠಾ ಹಿತಾಃ ಸ್ಮೃತಾಃ ॥**

ಆದುದರಿಂದ ಪುರಾಣಗಳಲ್ಲಿ ವಿಷ್ಣು ಸರ್ವೋತ್ತಮತ್ವವನ್ನು ಪ್ರತಿಪಾದನೆ ಮಾಡುವ ಭಾಗ ಗಳೆಲ್ಲವೂ ಸಾತ್ವಿಕ ಭಾಗಗಳು. ತದ್ಭಿನ್ನವಾದುವುಗಳು ರಾಜಸ ತಾಮಸಗಳು. ಮತ್ಸ್ಯ ಪುರಾಣದಲ್ಲಿ ಈ ವ್ಯವಸ್ಥೆಯು ನಿರೂಪಿಸಲ್ಪಟ್ಟಿದೆ ;—

**‘ ಸಂಕೀರ್ಣಾಸ್ತಾಮಸಾಶ್ಚೈವ ರಾಜಸಾಃ ಸಾತ್ವಿಕಾಃ ಸ್ಮೃತಾಃ ।**
**ಕಲಾಶ್ಚತುರ್ವಿಧಾಃ ಪ್ರೋಕ್ತಾ ಬ್ರಹ್ಮಣೋದಿವಸಾಶ್ಚಯೇ ॥**
**ಯಸ್ಮಿನ್ ಕಲ್ಪೇ ತು ಯತ್ಪ್ರೋಕ್ತಂ ಪುರಾಣಂ ಬ್ರಹ್ಮಣಾ ಪುರಾ ।**
**ತಸ್ಯ ತಸ್ಯ ಚ ಮಾಹಾತ್ಮ್ಯಂ ತತ್ತತ್ಕಲ್ಪೇ ವಿಧೀಯತೇ ॥**
**ಅಗ್ನೇಃ ಶಿವಸ್ಯ ಮಾಹಾತ್ಮ್ಯಂ ತಾಮಸೇಷು ಪ್ರಕೀರ್ತಿತಂ ।**
**ರಾಜಸೇಷು ಚ ಮಹಾತ್ಮ್ಯಮಧಿಕಂ ಬ್ರಹ್ಮಣೋ ವಿದುಃ ॥**
**ಸಂಕೀರ್ಣೇಷು ಸರಸ್ವತ್ಯಾಃ ಪಿತ್ರಾಣಾಂ ಚ ನಿಗದ್ಯತೇ ।**
**ಸಾತ್ವಿಕೇಷು ಚ ಕಲ್ಪೇಷು ಮಾಹಾತ್ಮ್ಯಮಧಿಕಂ ಹರೇಃ ॥**
**ತೇಷ್ವೇವ ಯೋಗಸಂಸಿದ್ಧಾಃ ಗಮಿಷ್ಯಂತಿ ಪರಾಂ ಗತಿಂ ।**

ಕೂರ್ಮ ಪುರಾಣದಲ್ಲಿಯೂ ಕೂಡ ವಿಷ್ಣೂತ್ಕರ್ಷವನ್ನು ಪ್ರತಿಪಾದನೆ ಮಾಡದ ಗ್ರಂಥಗಳು ರಾಜಸ ತಾಮಸಗಳೆಂದೇ ಹೇಳಲ್ಪಟ್ಟಿರುವುದು :—

5. ಪ್ರಶ್ನೆ :— ಸ್ವಾಮೀ ! ಈ ರೀತಿಯಾಗಿ ಸುಳ್ಳು ಹೇಳುವ ಗ್ರಂಥಗಳು ಹೇಗೆ ಉತ್ಪನ್ನವಾದುವು ?

ಉತ್ತರ:— ಶ್ರೀ ಶ್ರೀಗಳವರು:— ಇದೇನು ಪ್ರಶ್ನೆಯು ! 1. ಅಜ್ಞಾನದಿಂದ ಕೆಲವರು ಸುಳ್ಳು ಬರೆಯುವರು. 2. ಜಗತ್ತನ್ನು ವಂಚಿಸಿ ದ್ರವ್ಯ ಸಂಪಾದಿಸಬೇಕೆಂದು ಜನಗಳ ಮನೋನುಕೂಲವಾಗಿ ಸುಳ್ಳು ವಿಷಯಗಳನ್ನು ಗ್ರಂಥಗಳಲ್ಲಿ ಕೆಲವರು ಬರೆಯುವರು. 3. ಪ್ರಸಂಗ ದೋಷದಿಂದ ಕೆಲವು ಸುಳ್ಳು ಗ್ರಂಥಗಳು ಉತ್ಪನ್ನವಾಗುವುವು. ಎಂದರೆ ಹುಡುಗಾಟದಿಂದ ಕೆಲವು ಸುಳ್ಳು ಮಾತುಗಳನ್ನು ಗ್ರಂಥಕಾರನು ಬರೆದರೆ ಮುಂದರು ಅದನ್ನು ನಿಜವೆಂದು ಭ್ರಮಿಸಿ ಮೋಸ ಹೋಗುವರು. 4. ಅಪಟುಕರಣತ್ವದಿಂದ ಕೆಲವು ಸುಳ್ಳುಗಳು ಹೊರಬೀಳುವವು. ಒಬ್ಬ ಮುದುಕನು "ಸಾರು ತೆಗೆದುಕೊಂಡು ಬಾ" ಎಂದು ಕೂಗುವುದಕ್ಕೆ ಬದಲಾಗಿ "ಸಾವು ತೆಗೆದುಕೊಂಡು ಬಾ" ಎಂದು ಕೂಗಿದನಂತೆ. ಹೀಗೆ ನಾನಾ ಕಾರಣಗಳಿಂದ ತಾಮಸ ಗ್ರಂಥಗಳು ಉತ್ಪನ್ನವಾಗುವುವು. ಪ್ರಾಯೇಣ ಅಜ್ಞಾನವೇ ತಾಮಸ ಗ್ರಂಥಗಳ ಉತ್ಪತ್ತಿಯಲ್ಲಿ ಹೆಚ್ಚಾದ ಕಾರಣವು. ಶ್ರೀ ಕೃಷ್ಣನು ಹೇಳುತ್ತಾನೆ :—

(1) **ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಂ ॥**
—(2. 41.)

---

**ಅಸಂಖ್ಯಾತಾಸ್ತದಾ ಕಲ್ಪಾ ಬ್ರಹ್ಮವಿಷ್ಣುಶಿವಾತ್ಮಕಾಃ ।**
**ಕಥಿತಾ ಹಿ ಪುರಾಣೇಷು ಮುನಿಭಿಃ ಕಾಲಚಿಂತಕೈಃ ॥**
**ಸಾತ್ವಿಕೇಷ್ವಪಿ ಕಲ್ಪೇಷು ಮಾಹಾತ್ಮ್ಯಮಧಿಕಂ ಹರೇಃ ।**
**ತಾಮಸೇಷು ಶಿವಸ್ಯೋಕ್ತಂ ರಾಜಸೇಷು ಪ್ರಜಾಪತೇಃ ॥**

ಪದ್ಮ ಪುರಾಣದಲ್ಲಿ ಸಾಮಾನ್ಯವಾದ ಸಾತ್ವಿಕಾದಿ ವ್ಯವಸ್ಥೆಯು ಈ ರೀತಿ ಮಾಡಲ್ಪಟ್ಟಿರುವುದು :—

**ಶೃಣು ದೇವಿ ಪ್ರವಕ್ಷ್ಯಾಮಿ ತಾಮಸಾನಿ ಯಥಾಕ್ರಮಾತ್ ।**
**ಯೇಷಾಂ ಶ್ರವಣಮಾತ್ರೇಣ ಪಾತಿತ್ಯಂ ಜ್ಞಾನಿನಾಮಪಿ ॥**
**ಮಾತ್ಸ್ಯಂ ಕೌರ್ಮಂ ತಥಾ ಲೈಂಗಂ ಶೈವಂ ಸ್ಕಾಂದಂ ತಥೈವ ಚ ।**
**ಆಗ್ನೇಯಂ ತು ಷಡೇತಾನಿ ತಾಮಸಾನಿ ನಿಬೋಧ ಮೇ ॥**
**ವೈಷ್ಣವಂ ನಾರದೀಯಂ ತು ತಥಾ ಭಾಗವತಂ ಶುಭಂ ।**
**ಗಾರುಡಂ ಚ ತಥಾ ಪಾದ್ಮಂ ವಾರಾಹಂ ಶುಭದರ್ಶನೇ ॥**
**ಸಾತ್ವಿಕಾನಿ ಪುರಾಣಾನಿ ವಿಜ್ಞೇಯಾನಿ ಶುಭಾನಿ ವೈ ।**
**ಬ್ರಹ್ಮಾಂಡಂ ಬ್ರಹ್ಮವೈವರ್ತಂ ಮಾರ್ಕಂಡೇಯಂ ತಥೈವ ಚ ॥**

"ವೇದಾದಿ ಶಾಸ್ತ್ರನಿರ್ಣೀತವಾದ ಅರ್ಥವನ್ನು ತಿಳಿಯದವರ ವಾಕ್ಯಗಳು ಪರಸ್ಪರ ವಿರುದ್ಧವಾಗಿ ನಾನಾ ವಿಧವಾಗಿ ವಿಷಯವನ್ನು ಪ್ರತಿಪಾದನೆ ಮಾಡತಕ್ಕವುಗಳಾಗಿರುವುವು"

ಮುಖ್ಯ ಕಾರಣವೇನೆಂದರೆ, ದುಷ್ಕರ್ಮ ನಿಮಿತ್ತಕವಾದ ತಮಃ ಪ್ರಚುರವಾದ ದೇಹಬುದ್ಧಿಗಳುಳ್ಳವರಾಗಿ ಭೂಲೋಕದಲ್ಲಿ ಅನೇಕರು ಹುಟ್ಟುತ್ತಾರೆ. ಅಂಥವರಿಗೆ ವೇದದಲ್ಲಿ ಅಧಿಕಾರವೇ ಇರುವುದಿಲ್ಲ. ಬ್ರಾಹ್ಮಣ ದೇಹವುಳ್ಳವರಿಗೆ ಅಧಿಕಾರವಿದ್ದರೂ ಬುದ್ಧಿಗತವಾದ ತಾಮಸ ಗುಣ ಪ್ರಭಾವದಿಂದ ವೇದದಲ್ಲಿ ರತಿಯಾಗಲೀ, ಪರಂಪರೋಪದೇಶದಿಂದ ಪ್ರಾಪ್ತವಾದ ವೇದಾರ್ಥ ಜ್ಞಾನವಾಗಲೀ ಪ್ರಾಪ್ತವಾಗಲಾರದು. ತಮ್ಮ ತಮ್ಮ ತಾಮಸ ಬುದ್ಧಿಯಿಂದ ಸ್ವತಂತ್ರವಾಗಿ ಆಲೋಚನೆ ಮಾಡಿ ಸ್ವಕಪೋಲಕಲ್ಪಿತವಾದ ದುಸ್ತತ್ವಗಳನ್ನು ಪ್ರಾಮಾಣಿಕವೆಂಬ ದುರಭಿಮಾನದಿಂದ ಲೋಕನಾಶಾರ್ಥವಾಗಿ ಪ್ರಪಂಚದಲ್ಲಿ ಹರಡುವರು. ಇದರಿಂದ ಶ್ರೀ ಕೃಷ್ಣನ ದ್ವೇಷವನ್ನು ಸಂಪಾದಿಸುವರೆಂದು ಬೇರೆ ಹೇಳಬೇಕಾಗಿಲ್ಲ. ತತ್ವವಿಚಾರದಲ್ಲಿ ಶಿಷ್ಯಭಾವದಿಂದ ಉತ್ತಮ ಗುರುವನ್ನು ಸೇರಿ ಬೇಕಾದಂತೆ ಪ್ರಶ್ನೆಗಳನ್ನು ಕೇಳಿ ಯಥಾರ್ಥ ಜ್ಞಾನವನ್ನು ಹೊಂದಬೇಕು. ನಿರಂಕುಶವಾದ ಮತ್ತು ನಿರ್ಮೂಲವಾದ ಆಲೋಚನೆಗೆ ವೇದೈಕ ಸಮಧಿಗಮ್ಯನಾದ ಅವ್ಯಕ್ತನಾದ ಪರಮಾತ್ಮನು ಗೋಚರನಾಗುವುದಿಲ್ಲವೆಂದು ನಿಶ್ಚಿತವಾದ ಸಿದ್ಧಾಂತವು.

---

ಭವಿಷ್ಯದ್ವಾಮನಂ ಬ್ರಾಹ್ಮಂ ರಾಜಸಾನಿ ನಿಬೋಧ ಮೇ ।
ಸಾತ್ವಿಕಾ ಮೋಕ್ಷದಾಃ ಪ್ರೋಕ್ತಾ ರಾಜಸಾ ಸ್ಸ್ವರ್ಗದಾಶ್ಶುಭಾಃ ॥
ತಥೈವ ತಾಮಸಾ ದೇವಿ ನಿರಯಪ್ರಾಪ್ತಿಹೇತವಃ ।
ತಥೈವ ಸ್ಮೃತಯಃ ಪ್ರೋಕ್ತಾ ಋಷಿಭಿಸ್ತ್ರಿಗುಣಾನ್ವಿತಾಃ ॥
ಸಾತ್ವಿಕಾ ರಾಜಸಾಶ್ಚೈವ ತಾಮಸಾಃ ಶುಭದರ್ಶನೇ ।
ವಾಸಿಷ್ಠಂ ಚೈವ ಹಾರೀತಂ ವ್ಯಾಸಂ ಪಾರಾಶರಂ ತಥಾ ॥
ಭಾರದ್ವಾಜಂ ಕಾಶ್ಯಪಂ ಚ ಸಾತ್ವಿಕಾ ಮುಕ್ತಿದಾಃ ಶುಭಾಃ ।
ಮಾನವಂ ಯಾಜ್ಞವಲ್ಕ್ಯಂ ಚ ಆತ್ರೇಯಂ ದಾಕ್ಷ್ಯಮೇವ ಚ ॥
ಕಾತ್ಯಾಯನಂ ವೈಷ್ಣವಂ ಚ ರಾಜಸಾಸ್ಸ್ವರ್ಗದಾಃ ಶುಭಾಃ ।
ಗೌತಮಂ ಬಾರ್ಹಸ್ಪತ್ಯಂ ಚ ಸಾಂವರ್ತಂ ಚ ಯಮಃ ಸ್ಮೃತಂ ॥
ಶಾಂಖಂ ಚೌಶನಸಂ ದೇವಿ ತಾಮಸಾ ನಿರಯಪ್ರದಾಃ ।
ಕಿಮತ್ರ ಬಹುನೋಕ್ತೇನ ಪುರಾಣೇಷು ಸ್ಮೃತಿಷ್ವಪಿ ॥
ತಾಮಸಾ ನಿರಯಾಯೈವ ವರ್ಜಯೇತ್ತಾನ್ ವಿಚಕ್ಷಣಃ

6. **ಪ್ರಶ್ನೆ :—** ಸ್ವಾಮೀ ! ಪರಮಾತ್ಮನು ವೇದೈಕಗಮ್ಯನೆಂದರೇನು ? ಆತನು ನಮ್ಮ ಆಲೋಚನೆಗಳಿಗೆ ವಿಷಯನಾಗಲಾರನೇ ?

**ಉತ್ತರ :— ಶ್ರೀ ಶ್ರೀಗಳವರು :—** ಪರಮಾತ್ಮನು ಅಜ್ಞೇಯನೆಂದು ನಾವು ಹೇಳಲಿಲ್ಲ. "ಜ್ಞೇಯಂ ಜ್ಞಾನಗಮ್ಯಂ" ಎಂದು ಪರಮಾತ್ಮನನ್ನು ಶ್ರೀ ಕೃಷ್ಣನೇ ವರ್ಣಿಸಿರುವನು. ಆದರೆ ಪರಮಾತ್ಮನನ್ನು ಜಿಜ್ಞಾಸುವಾದ ಅಧಿಕಾರಿಯು ಪ್ರತ್ಯಕ್ಷದಿಂದ ತಿಳಿಯಲಾರನು. ಪರಮಾತ್ಮನು ಅತೀಂದ್ರಿಯನು. ಪರಮಾತ್ಮನು ಕೇವಲ ಅನುಮಾನಗಮ್ಯನಲ್ಲ. ಆಗಮ ಸಹಾಯರಹಿತವಾದ ಅನುಮಾನವು ಸಂದಿಗ್ಧವೂ ಅನಿರ್ಣಾಯಕವೂ ಆಗುವುದು

**ವಿದ್ಯಾರ್ಥಿಗಳು :—** ಸರಿ ಮಹಾಸ್ವಾಮೀ ! ಕ್ಯಾಂಟ ಸಾಹೇಬನೂ ಹಾಗೆಯೇ ಹೇಳಿರುವನು. ಅನುಮಾನವು (Reasoning) ಅತೀಂದ್ರಿಯ ವಿಷಯಗಳಲ್ಲಿ ಯಾವ ನಿರ್ಣಯವನ್ನು ಹುಟ್ಟಿಸುವುದಕ್ಕೂ ಅಸಮರ್ಥವಾಗಿರುವುದೆಂದು ಆತನು ಬಹು ಚರ್ಚೆಯನ್ನು ಮಾಡಿ ನಿರ್ಧರಿಸಿದನು.

**ಶ್ರೀ ಶ್ರೀಗಳವರು :—** ಕ್ಯಾಂಟ್ ಸಾಹೇಬನು ಹೇಳಿದ ಮೇಲೆ ವೇದದಲ್ಲಿ ಹೇಳಿದಂತೆಯೇ ಸರಿ.

---

ಈ ವಾಕ್ಯಗಳಲ್ಲಿ ಮಾತ್ಸ್ಯಾದಿ ಪುರಾಣಗಳು ತಾಮಸಗಳೆಂದರೆ ಪ್ರಚುರವಾಗಿ ತಾಮಸಗಳೆಂದು ಅರ್ಥವು. ವೈಷ್ಣವಾದಿ ಪುರಾಣಗಳು ಪ್ರಚುರವಾಗಿ ಸಾತ್ವಿಕಗಳು. ಬ್ರಹ್ಮಾಂಡಾದಿ ಪುರಾಣಗಳು ಪ್ರಚುರವಾಗಿ ರಾಜಸಗಳು. ಇವುಗಳಲ್ಲೆಲ್ಲಾ ಒಂದೊಂದು ಸಾತ್ವಿಕಾಂಶವು ಇದ್ದೇ ಇರುವುದು. ಯಾವ ಭಾಗವು ವಿಷ್ಣು ಮಹಿಮೆಯನ್ನು ತಿಳಿಸುವುದೋ ಅದು ಸಾತ್ವಿಕವು, ತದ್ಭಿನ್ನವಾದುವುಗಳೆಲ್ಲವೂ ರಾಜಸ ತಾಮಸಗಳು. ಈ ವಿಷಯವು ಮತ್ಸ್ಯ ಕೂರ್ಮ ಪುರಾಣಗಳ ಉದಾಹೃತ ವಚನಗಳಿಂದ ಸಿದ್ಧವಾಗುವುದು. ಗರುಡ ಪುರಾಣಸ್ಥ ವಿಶೇಷ ವಾಕ್ಯವೂ ಸಹ ಈ ನಿರ್ಣಯವನ್ನೇ ನಿರೂಪಿಸುವುದು :—

**ಶಾಸ್ತ್ರಾಣ್ಯಪಿ ಚ ಸರ್ವಾಣಿ ತ್ರಿವಿಧಾನಿ ಮಹಾಮತೇ ।**
**ಯಾನಿ ಸತ್ತ್ವಪರಂ ವಿಷ್ಣುಂ ವದಂತಿ ಪರಮೇಶ್ವರಂ ॥**
**ತಾನಿ ಸರ್ವಾಣಿ ಶಾಸ್ತ್ರಾಣಿ ಸಾತ್ವಿಕಾನಿ ಮತಾನಿ ವೈ ।**
**ಪ್ರಜಾಪತಿಂ ಕೃಶಾನುಂ ಚ ತಥಾ ದೇವೀಂ ಸರಸ್ವತೀಂ ।**
**ಪರತ್ವೇನ ವದಚ್ಛಾಸ್ತ್ರಂ ರಾಜಸಂ ಪರಿಚಕ್ಷತೇ ।**
**ಯಚ್ಛಾಸ್ತ್ರಂ ಲಿಂಗಪಾರಮ್ಯಂ ಪರಂ ದೇವಮುಮಾಪತಿಂ ।**
**ತಮಃ ಪ್ರವರ್ತಕಂ ವಕ್ತಿ ತತ್ತಾಮಸಮುದಾಹೃತಂ ।**
**ಸತ್ತ್ವನಿಷ್ಠಾ ಹಿ ಪುರುಷಾ ವಿಷ್ಣುಮೇವ ಯಜಂತಿ ತೇ ॥**
**ಬ್ರಹ್ಮಾಣಂ ರಾಜಸಾಸ್ಸರ್ವೇ ತಮೋನಿಷ್ಠಾಸ್ತು ಶೂಲಿನಂ ।**

**ವಿದ್ಯಾರ್ಥಿಗಳು :—** ಸ್ವಾಮೀ ! ಕ್ಷಮಿಸಬೇಕು ಜ್ಞಾಪಕಕ್ಕೆ ಬಂದ ಸಂಗತಿಯನ್ನೇ ಹೇಳಿದೆವೇ ಹೊರತು ಕ್ಯಾಂಟನು ಮಹಾ ಜ್ಞಾನಿಯು, ಸರ್ವ ವಿಷಯಗಳಲ್ಲಿಯೂ ಯಥಾರ್ಥವನ್ನೇ ಹೇಳಿರುವನೆಂದು ತಾತ್ಪರ್ಯವಲ್ಲ. ಅತೀಂದ್ರಿಯ ಪದಾರ್ಥಗಳ ವಿಷಯದಲ್ಲಿ ವೇದಾದಿಗಳೇ ಪ್ರಮಾಣವೆಂದು ಶ್ರೀ ಕೃಷ್ಣನು ಎಲ್ಲಿ ಹೇಳಿರುತ್ತಾನೆ ?

**ಉತ್ತರ :— ಶ್ರೀ ಶ್ರೀಗಳವರು :—** ಧರ್ಮಾಧರ್ಮಗಳು ಅತೀಂದ್ರಿಯಗಳು. ಅವುಗಳನ್ನು ವೇದಾದಿ ಶಾಸ್ತ್ರದಿಂದಲೇ ತಿಳಿಯಬೇಕೆಂದು ಅರ್ಜುನನಿಗೆ ಉಪದೇಶಿಸಿರುವನು '—

(1) **ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ॥**
—(16. 24.)

ಧರ್ಮಾಧರ್ಮಗಳ ನಿರ್ಣಯದಲ್ಲಿ ಶಾಸ್ತ್ರವು ಆಧಾರವು ಎಂದು ಅರ್ಥವು.

(2) **ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ॥**
—(16. 23.)

ಶಾಸ್ತ್ರಾಧಾರವಿಲ್ಲದೆ ಕಾಮಕಾರತಃ = ಎಂದರೆ ಸ್ವಕಪೋಲಕಲ್ಪಿತವಾದ ಅನುಮಾನಗಳ ಆಧಾರದಿಂದ ರಚಿತವಾದ ಉಪದೇಶಾನುಸಾರವಾಗಿ ನಡೆಯುವವರು ಮೋಕ್ಷಾದಿ ಪುರುಷಾರ್ಥಗಳನ್ನು ಹೊಂದಲಾರರು ಎಂದು ಭಾವವು.

7. **ಪ್ರಶ್ನೆ :—** ಸ್ವಾಮೀ ! ಈ ವಿಷಯವು ತೀರ್ಮಾನವಾಯಿತು. ಸಾಕ್ಷಾತ್ಪರಮಾತ್ಮನೇ ವೇದವ್ಯಾಸ ಬುದ್ಧಾದಿ ರೂಪಗಳಿಂದ ಸುಳ್ಳು ಶಾಸ್ತ್ರಗಳನ್ನು ಬರೆದಿರುವನೆಂದು ತಿಳಿದು ಬರುವುದು. ತಾಮಸ ಪುರಾಣಗಳನ್ನೂ ವೇದವ್ಯಾಸರೇ ರಚಿಸಿದವರು. ಸಾಕ್ಷಾದ್ವಿಷ್ಣುವೇ ಸುಳ್ಳು ತತ್ವಗಳನ್ನು ರಚಿಸಿ ಜನಗಳನ್ನು ಮೋಸ ಮಾಡಲು ಕಾರಣವೇನು ?

**ಉತ್ತರ:— ಶ್ರೀ ಶ್ರೀಗಳವರು:—** ಸೂಕ್ಷ್ಮ ಕಾರ್ಯಗಳನ್ನು ಶ್ರೀ ಕೃಷ್ಣನು ಗೀತೆಯಲ್ಲಿ ಹೇಳಲಿಲ್ಲವಾದುದರಿಂದ ಬೇರೆ ವಿಚಾರದಲ್ಲಿ ಸಾವಧಾನವಾಗಿ ಈ ಪ್ರಶ್ನೆಗೆ ಉತ್ತರವನ್ನು ನಿರೂಪಿಸುವೆವು. ಆದರೆ ಈಗ ಇಷ್ಟನ್ನು ಹೇಳುವೆವು. " ಯಾಮಿಮಾಂ ಪುಷ್ಪಿತಾಂ ವಾಚಂ " ಇತ್ಯಾದಿ ಶ್ರೀ ಕೃಷ್ಣನ ವಾಕ್ಯಗಳ ಸ್ವಾರಸ್ಯಪರ್ಯಾಲೋಚನೆಯಿಂದ ಇಷ್ಟು ತಿಳಿದು ಬರುವದು. ಯದ್ಯಪಿ ಗ್ರಂಥಗಳಲ್ಲಿ ಪರಸ್ಪರ ವಿರುದ್ಧವಾದ ಅನೇಕ ಪ್ರಕ್ರಿಯೆಗಳೂ, ಆಪಾತತಃ ಕೆಲವು ವಿರೋಧಗಳೂ ಕಂಡು ಬರುವುವು. ಆದರೆ ಮುಮುಕ್ಷುವು ಗುರೂಪದೇಶದಿಂದ ಸೂಕ್ಷ್ಮ ವಿಚಾರ ಮಾಡಿ ವೇದಗಳ ತಾತ್ಪರ್ಯವನ್ನು ಚೆನ್ನಾಗಿ ತಿಳಿದುಕೊಂಡು ಅವುಗಳಿಗೆ ಅನುಗುಣವಾದ ಸ್ಮೃತಿಗಳಲ್ಲಿ ವಿಶ್ವಾಸ ಮಾಡಿ ತಾಮಸ ವಚನಗಳನ್ನು ಅನಾದರಿಸಬೇಕು. ಶ್ರೀ ಕೃಷ್ಣನು ಹೇಳುತ್ತಾನೆ :—

(1) ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥
—(16. 24.)

ಎಲೈ ಅರ್ಜುನನೇ! ಶಾಸ್ತ್ರಕ್ಕೆ ತಾತ್ಪರ್ಯವಿಷಯೀಭೂತವಾದ ಧರ್ಮವನ್ನು ತಿಳಿದು ನೀನು ಆಚರಿಸಬೇಕು.

ಪ್ರಶ್ನೆ :— ಸ್ವಾಮೀ! ವಿಷ್ಣುವೇ ಸುಳ್ಳು ಪುರಾಣಗಳನ್ನು ಯಾತಕ್ಕೆ ಬರೆಯಬೇಕು ?

**ಶ್ರೀ ಶ್ರೀಗಳವರು :—** ವಿಷ್ಣುವೇ ನಿಷಿದ್ಧವಾದ ಈರುಳ್ಳಿ ಮುಂತಾದ ಪದಾರ್ಥಗಳನ್ನು ಯಾತಕ್ಕೆ ಸೃಷ್ಟಿಸಿದನು ?

**ವಿದ್ಯಾರ್ಥಿಗಳು :—** ನಾವು ಹೇಳಲಾರೆವು ?

**ಶ್ರೀ ಶ್ರೀಗಳವರು :—** ಪರಮಾತ್ಮನು ನಾನಾ ದ್ರವ್ಯಗಳನ್ನು ಸೃಷ್ಟಿಮಾಡಿ ಕೆಲವು ಪದಾರ್ಥಗಳನ್ನು ಯಾರೂ ಯಾವಾಗಲೂ ಉಪಯೋಗಿಸಬಾರದೆಂದು ನಿಯಮನ ಮಾಡಿರುವನು. ಹೀಗೆಯೇ ನಾನಾ ವಿಧವಾದ ಗ್ರಂಥಗಳನ್ನು ಸೃಷ್ಟಿ ಮಾಡಿ ಕೆಲವು ಗ್ರಂಥಗಳನ್ನು ನಂಬಿ ಆಚರಿಸಬಾರದೆಂದು ನಿಯಮಿಸಿರುವನು. ಸರ್ವಕ್ಕೂ ತಾನೇ ಪ್ರೇರಕನೂ ಸೃಷ್ಟಿಕರ್ತನೂ ಆಗಿದ್ದರೂ ಸಾತ್ವಿಕ ಧರ್ಮಗಳಿಗೆ ಮಾತ್ರ ತಾನು ಫಲ ಕೊಡುವವನೆಂದು "**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ**" ಮುಂತಾದ ವಾಕ್ಯಗಳಲ್ಲಿ ಸೂಚಿಸಿರುತ್ತಾನೆ. ಹೀಗೆಯೇ ಅನೇಕ ಶಾಸ್ತ್ರಗಳನ್ನು ತಾನೇ ಸಾಕ್ಷಾತ್ತಾಗಿ ಅಥವಾ ಪ್ರೇರಣೆಯಿಂದ ಅನ್ಯರ ದ್ವಾರಾ ರಚಿಸಿದ್ದರೂ ಪಾಶುಪತಾದಿ ಗ್ರಂಥಗಳನ್ನೂ, ತಾಮಸ ಪುರಾಣಾದಿಗಳನ್ನೂ ಸ್ವಕಪೋಲಕಲ್ಪಿತ ವಿಷಯಗಳಿಂದ ಪೂರ್ಣವಾದ ಹೂಣಾದಿಗಳ ತತ್ವವಿಷಯಕ ಗ್ರಂಥಗಳನ್ನೂ ಮುಮುಕ್ಷುಗಳು ಯಥಾರ್ಥವೆಂದು ವಿಶ್ವಾಸ ಮಾಡಿ ಶ್ರೀ ಕೃಷ್ಣನ ಕೋಪಕ್ಕೆ ಪಾತ್ರರಾಗಬಾರದು.* ಏತಕ್ಕೆಂದರೆ ಇವುಗಳೆಲ್ಲಾ ವಕ್ತೃ ಪುರುಷ ದೋಷಗಳಿಂದ ಯಾಥಾರ್ಥ್ಯರಹಿತವಾದ ದುಷ್ಟ ಗ್ರಂಥಗಳು.

---

* ವಿಷ್ಣುವೇ ಉದ್ದೇಶಪೂರ್ವಕವಾಗಿ ತಾಮಸ ಪುರಾಣಗಳನ್ನು ಬರೆದಿರುವನು. ಮತ್ತು ರುದ್ರಾದಿಗಳಿಂದ ಬರೆಯಿಸಿರುವನು. ಬುದ್ಧನು ತಾಮಸ ಶಾಸ್ತ್ರವನ್ನು ಪ್ರಚುರಪಡಿಸಿದನು. ಅಸುರ ಜನರ ಮೋಹನಾರ್ಥವಾಗಿ ಸಾಕ್ಷಾತ್ ಶ್ರೀಮನ್ನಾರಾಯಣನೂ ಹೀಗೆ ಮಾಡುವನೆಂದು ಪದ್ಮಪುರಾಣದಿಂದ ವಿದಿತವಾಗುವುದು. ಇದು ವಿಷ್ಣುವಾಕ್ಯವು :—

**ತ್ವಂ ಹಿ ರುದ್ರ ಮಹಾಬಾಹೋ ಮೋಹನಾರ್ಥಂ ಸುರದ್ವಿಷಾಂ ।**
**ತಾಮಸಾನಿ ಪುರಾಣಾನಿ ಕಥಯಸ್ವ ಚ ತಾನ್ ಪ್ರತಿ ॥**
**ಪಾಷಂಡಾಚರಣಂ ಧರ್ಮಂ ಕುರುಷ್ವ ಸುರಸತ್ತಮ ।**
**ಮೋಹನಾನಿ ಚ ಶಾಸ್ತ್ರಾಣಿ ಕುರುಷ್ವ ಚ ಮಹಾಮತೇ ॥**

ನಿರ್ದುಷ್ಟವಾದ ವೇದವಾಕ್ಯಕ್ಕೆ ವಿರುದ್ಧವಾದುವುಗಳು. ವೇದವು ನಿರ್ದುಷ್ಟವೆಂಬುದು ಶ್ರೀ ಕೃಷ್ಣನ ಉಪದೇಶ ಪ್ರಕಾರದಿಂದಲೇ ತಿಳಿದು ಬರುವುದು. ತಾನು ಪುರುಷೋತ್ತಮನೆಂಬಲ್ಲಿ ವೇದದ ಸಮ್ಮತಿಯನ್ನು ಕೊಟ್ಟಿರುವನು. ತನ್ನ ಮಹಿಮೆಯನ್ನು ತಿಳಿಸಿ ಕೊಡಬೇಕಾಗಿ ಸರ್ವ ವೇದಗಳಲ್ಲಿ ತಾನು ಪ್ರತಿಪಾದ್ಯನೆಂದು ಹೇಳುವನು. ಜೀವ ಪರಮಾತ್ಮರು ನಿತ್ಯರೆಂದು ಹೇಳಿ "**ನ ಜಾಯತೇ ಮ್ರಿಯತೇ ವಾ ಕದಾಚಿತ್**" ಇತ್ಯಾದಿ ರೀತಿಯಾಗಿ ಕಾಠಕ ಶ್ರುತಿಯನ್ನು ಪ್ರಮಾಣವಾಗಿ ಉದಾಹರಿಸುವನು. ಸರ್ವಜ್ಞನಾದ ಶ್ರೀ ಕೃಷ್ಣನಿಂದ ಆಧಾರವೆಂದು ಸ್ವೀಕರಿಸಲ್ಪಡಬೇಕಾದರೆ ಆ ಶಬ್ದರಾಶಿಯು ಅತ್ಯಂತ ನಿರ್ದುಷ್ಟವೂ ಸಕಲ ಪೌರುಷೇಯ ಗ್ರಂಥವಿಲಕ್ಷಣವೂ ಆಗಿರಬೇಕೆಂದು ಅನುಮಾನದಿಂದಲೇ ಸಿದ್ಧವಾಗುವುದು. ವಿಶೇಷ ಚರ್ಚೆಯನ್ನು ಮಾಡಿದರೂ ಈ ನಿರ್ಣಯವು ಮತ್ತಷ್ಟು ನಿರ್ವಿವಾದವಾಗುವುದು.

**ವಿದ್ಯಾರ್ಥಿಗಳು** :— ಸ್ವಾಮೀ ! ಈ ವಿಷಯದಲ್ಲಿ ಬೇಕಾದಷ್ಟು ಚರ್ಚೆಯು ಆಗಲೇ ನಡೆದಿರುವುದು. ನಮಗೆ ವೇದಪ್ರಾಮಾಣ್ಯ ವಿಷಯದಲ್ಲಿ ಸಂಶಯವಿರುವುದಿಲ್ಲ. ನಾವು ಆಸ್ತಿಕರು.

**ಶ್ರೀ ಶ್ರೀಗಳವರು** :— ಬಹಳ ಸಂತೋಷ. ಹಾಗಾದರೆ ಇನ್ನೇನು ಕೇಳಬೇಕೆಂದಿರುತ್ತೀರಿ ?

**ವಿದ್ಯಾರ್ಥಿಗಳು** :— ನಾಳೆಯ ದಿವಸ ತಾವು "**ಅಖಿಲಾಮ್ನಾಯೈಕವೇದ್ಯೋ ಹರಿಃ**" ಎಂಬ ತಮ್ಮಿಂದ ಉದಾಹೃತವಾದ ಶ್ಲೋಕ ಭಾಗವನ್ನು ವಿವರಿಸಿ ಶ್ರೀ ಕೃಷ್ಣ ವಾಕ್ಯಗಳಿಂದ ಆ ವಿಷಯವನ್ನು ಕುರಿತು ಉಪನ್ಯಾಸ ಮಾಡಬೇಕಾಗಿ ಪ್ರಾರ್ಥನೆ

8. **ಶ್ರೀ ಶ್ರೀಗಳವರು**:— ಒಳ್ಳೆಯದು. ಪ್ರಕೃತದಲ್ಲಿ ಪ್ರಮಾಣ ವಿಚಾರವು ಸಮಾಪ್ತವಾಯಿತು. ಇಷ್ಟು ಸಂಕ್ಷಿಪ್ತಾರ್ಥವು. ಪ್ರತ್ಯಕ್ಷ, ಅನುಮಾನ, ಆಗಮಗಳೆಂಬ ಮೂರೇ ಪ್ರಮಾಣಗಳು. ಸಾದೃಶ್ಯ, ಅರ್ಥಾಪತ್ತಿ, ಸಂಭವ, ಅನುಪಲಬ್ಧಿ, ಪರಿಶೇಷ ಇವೇ ಮುಂತಾದುವುಗಳೆಲ್ಲಾ ಈ ಮೂರರಲ್ಲೇ ಅಂತರ್ಭಾವವನ್ನು ಹೊಂದುವುವು. ಪ್ರಮಾಣ ವಿಚಾರವು ಸ್ವಲ್ಪ ಸೂಕ್ಷ್ಮವಾಗಿರುವುದರಿಂದ ಅಲಸರಿಗೆ

---

**ಅಹಮಪ್ಯವತಾರೇಷು ತ್ವಾಂ ಚ ರುದ್ರ ಮಹಾಬಲ ।**
**ತಾಮಸಾನಾಂ ಮೋಹನಾರ್ಥಂ ಪೂಜಯಾಮಿ ಯುಗೇ ಯುಗೇ ॥**

**ಕಣಾದಂ ಗೌತಮಂ ಶಕ್ತಿಮುಪಮನ್ಯುಂ ಚ ಜೈಮಿನಿಂ ।**
**ಕಪಿಲಂ ಚೈವ ದುರ್ವಾಸಂ ಮೃಕುಂಡುಂ ಚ ಬೃಹಸ್ಪತಿಂ ॥**

**ತ್ವಚ್ಛಕ್ತ್ಯಾ ಸನ್ನಿವಿಷ್ಟಾಸ್ತೇ ತಮಸೋದ್ರಿಕ್ತಯಾ ಭೃಶಂ ।**
**ತಾಮಸಾಸ್ತೇ ಭವಿಷ್ಯಂತಿ ಕ್ಷಣಾದೇವ ನ ಸಂಶಯಃ ॥**

ಕಷ್ಟಕರವಾಗುವುದು. ಗೀತೆಯು ನಿರ್ಣಯ ಗ್ರಂಥವು. ಶ್ರೀ ಕೃಷ್ಣನು ಇದರಲ್ಲಿ ಹೆಚ್ಚು ಪ್ರಮಾಣವಿಷಯಕವಾದ ಚರ್ಚೆಯನ್ನು ನಡೆಸಿರುವದಿಲ್ಲ. ಬ್ರಹ್ಮತರ್ಕವೇ ಮುಂತಾದ ಉದ್ಗ್ರಂಥಗಳಲ್ಲಿ ಪ್ರಮಾಣ ಲಕ್ಷಣ ವಿಭಾಗಾದಿಗಳು ಉಪಪಾದಿಸಲ್ಪಟ್ಟಿರುವುವು. ಶ್ರೀಮದಾಚಾರ್ಯರು ಪ್ರಮಾಣ ಲಕ್ಷಣ, ಅನುವ್ಯಾಖ್ಯಾನಾದಿ ಗ್ರಂಥಗಳಲ್ಲಿ ಅವುಗಳನ್ನು ಉದ್ಧರಿಸಿ ಸೂಕ್ಷ್ಮ ವಿಷಯಗಳನ್ನು ನಿರೂಪಿಸಿರುವರು. ಆದುದರಿಂದ ನೀವುಗಳೆಲ್ಲರೂ ವಿಧ್ಯುಕ್ತವಾದ ರೀತಿಯಲ್ಲಿ ಆ ಗ್ರಂಥಗಳನ್ನು ಅಭ್ಯಾಸ ಮಾಡಿ ಗೀತಾರ್ಥವನ್ನೂ ಮತ್ತು ಇತರ ಪ್ರಮೇಯ ಗ್ರಂಥಗಳನ್ನೂ ಮನನ ಮಾಡಿದರೆ ನಿಮ್ಮ ಜ್ಞಾನವು ಸುದೃಢವೂ ಬ್ರಹ್ಮಸಾಕ್ಷಾತ್ಕಾರೋಪಯೋಗಿಯೂ ಆಗುವುದು. ಅನ್ಯಥಾ ಕೇವಲ ಕೆಲವು ಪ್ರಮೇಯಗಳ ವಿಶ್ವಾಸದಿಂದಲೇ ಮುಕ್ತಿಯಾಗುವುದೆಂದು ಮೂಢ ಭರವಸೆಯನ್ನು ಹೊಂದಿದ್ದರೆ ದುಸ್ತರವಾದ ಸಾಗರವನ್ನು ಸಣ್ಣ ದೋಣಿಯಿಂದ ದಾಟುವುದಕ್ಕೆ ಯತ್ನಿಸಿದಂತಾಗುವುದು. ಜ್ಯೋತಿಷ್ಯದಲ್ಲಿ ಗಣಿತ ಭಾಗವು ಹೇಗೆ ಶ್ರೇಷ್ಠವೋ ಮತ್ತು ಅಧಿಕ ಪುಣ್ಯಪ್ರದವೋ ಹಾಗೆಯೇ ಪ್ರಮಾಣ, ಪ್ರಮೇಯ ಭಾಗಗಳಲ್ಲಿ ಪ್ರಮಾಣ ಭಾಗದ ಜ್ಞಾನವು ಶ್ರೇಷ್ಠವೂ ಅಧಿಕ ಪುಣ್ಯಪ್ರದವೂ ಆಗಿರುವುದು. ಆದರೆ ಒಂದನ್ನು ಬಿಟ್ಟು ಒಂದನ್ನು ಅವಲಂಬಿಸಿ ಪುರುಷಾರ್ಥವನ್ನು ಸಂಪಾದಿಸುವುದು ಅಶಕ್ಯವು. ಉಭಯದಿಂದಲೂ ಸಹಿತನಾಗಿಯೇ ಗುರುದೇವತೆಗಳ ಅನುಗ್ರಹದಿಂದ ಅಧಿಕಾರಿಯು ಮುಕ್ತನಾಗುವನು.

9. **ಪ್ರಶ್ನೆ :—** ಸ್ವಾಮೀ ! ಪ್ರತ್ಯಕ್ಷ, ಅನುಮಾನ, ಆಗಮಗಳು ಮೂರೂ ಪ್ರಮಾಣವೆಂದು ಏರ್ಪಟ್ಟಿತು. ಆಗಮವೆಂದರೆ ಋಗಾದಿ ಶಾಸ್ತ್ರಗಳು. ಹೀಗಿರುವಲ್ಲಿ ಶ್ರೀಮನ್ಮಧ್ವಾಚಾರ್ಯರು ಮಾಡಿರುವ ಗ್ರಂಥವು ಪ್ರಮಾಣವೆಂದು ಹೇಗೆ ಪ್ರಾಪ್ತವಾಯಿತು ?

**ಉತ್ತರ :— ಶ್ರೀ ಶ್ರೀಗಳವರು :—** 1. ಆಗಮವು ಪ್ರಮಾಣವೆಂದು ಸಿದ್ಧಿಸಿದರೆ ಮಧ್ವ ಮತವು ಪ್ರಮಾಣವೆಂದು ಅನಾಯಾಸವಾಗಿ ಸಿದ್ಧಿಸಿತು. ಹೇಗೆಂದರೆ ಪ್ರಮೇಯಗಳಲ್ಲಾಗಲೀ, ಪ್ರಮಾಣ ವಿಷಯದಲ್ಲಾಗಲೀ ಪ್ರಾಚೀನ ಗ್ರಂಥಗಳಲ್ಲಿ ಇಲ್ಲದ ನವೀನ ರಚನೆಯನ್ನು ಶ್ರೀಮದಾಚಾರ್ಯರು ತಮ್ಮ ಭಾಷ್ಯಾದಿ ಗ್ರಂಥಗಳಲ್ಲಿ ಎಲ್ಲಿಯೂ ಮಾಡಿಲ್ಲ. 2. ಕಿಂಚ **" ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಂ"** ಎಂಬ ವಚನರೀತ್ಯಾ ವೇದ ಶಾಸ್ತ್ರಗಳಿಗೆ ಅವಿರುದ್ಧವಾದ ಗ್ರಂಥಗಳೆಲ್ಲವೂ ಸದಾಗಮವೆಂದೇ ಕರೆಯಲ್ಪಡುವುವು. ಸರ್ವ ಶಾಸ್ತ್ರಗಳೂ ಮಧ್ವ ಮತವನ್ನೇ ಪ್ರತಿಪಾದಿಸುತ್ತವೆ. ಪ್ರಕೃತದಲ್ಲಿ ಶ್ರೀಮಧ್ವ ಮತದಲ್ಲಿ ಹೇಳಲ್ಪಟ್ಟಿರುವ ಪ್ರಮೇಯಗಳು ಗೀತೋಕ್ತವೆಂದು ತೋರಿಸಿರುತ್ತೇವೆ. ಇದರಲ್ಲಿ ನಿಮಗೆ. ಸಂಶಯ ಉಂಟೋ ?

**ವಿದ್ಯಾರ್ಥಿಗಳು:—** ಸಕಲ ಗೀತಾ ವಾಕ್ಯಗಳೂ ಮಧ್ವ ಮತದ ಪ್ರಮೇಯಗಳನ್ನೇ ಹೇಳುತ್ತವೆ.

**ಶ್ರೀ ಶ್ರೀಗಳವರು** :— ಮಧ್ವ ಮತವೆಂದರೆ ತಾನೇ ಏನು ಎಂದು ತಿಳಿದಿರುತ್ತೀರಿ ? ಶ್ರೀಮನ್ಮಧ್ವಾಚಾರ್ಯರು ನಿರ್ಮಿಸಿದ ಮತವೆಂದು ತಿಳಿಯಬೇಡಿರಿ. ಶ್ರುತಿಯ ಮತವೇ ಶ್ರೀ ಕೃಷ್ಣನ ಮತವು. ಶ್ರೀ ಕೃಷ್ಣನ ಮತವೇ ಶ್ರೀಮನ್ಮಧ್ವಾಚಾರ್ಯರ ಮತವು. ಶ್ರೀಮದಾಚಾರ್ಯರ ಮತವೇ ನಮ್ಮ ಮತವು. ಶ್ರೀ ಕೃಷ್ಣನೇ ಮೊದಲಾದ ಸಕಲ ಗುರುಗಳೂ ವೈದಿಕ ಮತದ ಲುಪ್ತವಾದ ಪ್ರಾಚೀನ ಸತ್ಸಂಪ್ರದಾಯಗಳನ್ನು ಪುನರುಪದೇಶದಿಂದ ಪ್ರವರ್ತಿಸಿದವರೇ ಹೊರತು ನೂತನವಾಗಿ ಯಾವುದನ್ನೂ ನಿರ್ಮಾಣ ಮಾಡಲಿಲ್ಲ.

**ಪ್ರಶ್ನೆ :— ವಿದ್ಯಾರ್ಥಿಗಳು** :— ಸ್ವಾಮೀ ! ಇತರ ಮತಗಳು ಇಂಥ ಅನಾದಿ ಸತ್ಸಂಪ್ರದಾಯಕ್ಕೆ ಸೇರಿಲ್ಲವೆಂದು ಹೇಗೆ ನಿರ್ಣಯ ಮಾಡುವುದು ?

**ಶ್ರೀ ಶ್ರೀಗಳವರು** :— ವೇದಾದಿ ಶಾಸ್ತ್ರಗಳಿಗೆ ವಿರುದ್ಧವಾದ ಮತವು ದುರ್ಮತವು. ಸತ್ಸಂಪ್ರದಾಯದಿಂದ ಬಂದದ್ದಲ್ಲ. ಒಂದೊಂದಾಗಿ ಕೇಳಿರಿ

10. **ವಿದ್ಯಾರ್ಥಿಗಳು**:— ಅದ್ವೈತವು ಅನಾದಿ ಸತ್ಸಂಪ್ರದಾಯಕ್ಕೆ ಸೇರದ ಮತವೆಂದು ಹೇಗೆ ಹೇಳುವುದು ?

**ಶ್ರೀ ಶ್ರೀಗಳವರು**:— ಗೌಡಪಾದ ಶಂಕರಾಚಾರ್ಯರಿಂದ ಉಪಪಾದಿತವಾದ ಅದ್ವೈತ ಮತವು ಪ್ರಚ್ಛನ್ನ ಬೌದ್ಧ ಮತವೆಂದು ನಾವು ತೋರಿಸಿರುತ್ತೇವೆ. ಶ್ಯಾಮ ಶಾಸ್ತ್ರಿಗಳು ಅದನ್ನು ಒಪ್ಪಿದರಷ್ಟೇ ! ಜಗತ್ತಿನ ವಿಷಯದಲ್ಲಿಯೂ, ಬ್ರಹ್ಮನ ವಿಷಯದಲ್ಲಿಯೂ, ಮೋಕ್ಷ ವಿಷಯದಲ್ಲಿಯೂ ಅದಕ್ಕೂ ಬೌದ್ಧ ಮತಕ್ಕೂ ಸಹ ಅತ್ಯಂತ ಸಾದೃಶ್ಯವಿರುವುದು.* ಹೀಗಿರುವಲ್ಲಿ ಅದು ವೇದಾದಿ ಶಾಸ್ತ್ರಗಳಿಗೆ ಸಮ್ಮತವಾದ ಮತವೆಂದು ಹೇಳುವುದು ಹೇಗೆ ?

---

* ಸಭಾಸಾರಸಂಗ್ರಹ Vol. I. ಪ್ರಶ್ನೋತ್ತರಗಳು ಪುಟ 21–22. ಅದ್ವೈತ ಮತವು ಪ್ರಚ್ಛನ್ನ ಬೌದ್ಧ ಮತವೆಂಬಲ್ಲಿ ಪ್ರಾಯೇಣ ಸಕಲ ಆಂಗ್ಲೇಯರೂ ಸಮ್ಮತಿಸಿರುತ್ತಾರೆ. ಪ್ರಾಚೀನರಾದ ಅನೇಕ ಭರತಖಂಡದ ವಿದ್ವದಗ್ರಣಿಗಳೂ ಒಪ್ಪಿರುತ್ತಾರೆ. ಬೌದ್ಧಮತಕ್ಕೂ, ಗೌಡಪಾದ, ಶಂಕರಾಚಾರ್ಯರ ಮತಕ್ಕೂ ಅತ್ಯಂತ ಸಾದೃಶ್ಯವು ಇದ್ದರೂ ಗೌಡಪಾದರೂ ಶಂಕರಾಚಾರ್ಯರೂ ಉದ್ದೇಶಪೂರ್ವಕವಾಗಿ ಅಪಲಪಿಸಿರುವರೆಂದು ಪ್ರೊಫೆಸರ್ ರಾಧಾಕೃಷ್ಣರೂ, ದಾಸಗುಪ್ತರೂ ಸಹ ಬರೆದಿರುತ್ತಾರೆ :—

**1.** Later Buddhism is responsible for this exaggeration in Goudapada's theory. He seems to have been conscious of the similarity of his system to some phases of Buddhist thought. He therefore protests— rather overmuch— that his view is not Buddhism.

—Sir S. Radhakrishnan, M. A., D. Litt.

**ವಿದ್ಯಾರ್ಥಿಗಳು** :— ಅದ್ವೈತ ಮತವು ಬೌದ್ಧ ಮತವೇ. ಆದರೆ ಬೌದ್ಧ ಮತವು, ಯಾತಕ್ಕೆ ವೇದಾದಿ ಶಾಸ್ತ್ರ ಸಮ್ಮತವಾಗಿರಬಾರದು ?

**ಶ್ರೀ ಶ್ರೀಗಳವರು** :— ಬೌದ್ಧಮತವು ದುರ್ಮತವೆಂದು ಸೂತ್ರಕಾರರು ನಿರ್ಣಯಿಸಿರುವರು. ಶಂಕರಾಚಾರ್ಯರೂ ಕೂಡ ಬೌದ್ಧ ಮತವು ಶ್ರೇಯೋರ್ಥಿಗಳಿಂದ ಅನುಷ್ಠೇಯಯಾರ್ಹವಲ್ಲವೆಂದು ತೀರ್ಮಾನ ಮಾಡಿರುತ್ತಾರೆ :—

---

1. **ಅರ್ಥ** :— ಗೌಡಪಾದರ ತತ್ವದಲ್ಲಿ ಈ ವಿಪರೀತೋಕ್ತಿಗೆ ( ಸಕಲವೂ ಕಲ್ಪಿತವೆಂಬ ವಾದಕ್ಕೆ ) ಅರ್ವಾಚೀನ ಬೌದ್ಧ ಮತವು ಕಾರಣವು. ಗೌಡಪಾದರಿಗೂ ತಮ್ಮ ತತ್ವವು ಕೆಲವು ಬೌದ್ಧ ವಾದಗಳಿಗೆ ಸದೃಶವಾಗಿತ್ತೆಂದು ತಿಳಿದಿತ್ತೆಂದು ತೋರುತ್ತದೆ. ಆದ್ದರಿಂದಲೇ ಅವರು ತಮ್ಮ ತತ್ವವನ್ನು ಪ್ರತಿಪಾದನೆ ಮಾಡುವಾಗ, ಇದು ಬುದ್ಧನಿಂದ ಹೇಳಲ್ಪಟ್ಟಿಲ್ಲ, ಇದು ಬುದ್ಧನಿಂದ ಹೇಳಲ್ಪಟ್ಟಿಲ್ಲ ಎಂದು– ಸ್ವಲ್ಪ ತುಂಬ– ವಾದಿಸುತ್ತಾರೆ.

2. That Goudapada gives us a Vedantic adaptation of the Buddhist Sunyavada is supported by many scholars, such as Jacobi. Poussin, Sukhtankar and Vidhusekhara Bhattacharya. Unfortunately Samkara explains away all obvious references to Buddhism. See S. B. on iv. 1, 2, 19, 42, 90, where striking references to Buddha and his doctrine are explained away.

—Sir S. Radhakrishnan, M. A., D. Litt.

2. **ಅರ್ಥ** :— ಗೌಡಪಾದರು ಬೌದ್ಧ ಶೂನ್ಯವಾದವನ್ನೇ ರೀತ್ಯಂತರದಿಂದ ಉಪಪಾದಿಸುತ್ತಾರೆಂಬುದು ಪ್ರೊಫೆಸರ್ ಜೆಕೋಬಿ. ಪೌಸಿನ್, ಸುಖಟಂಕರ್, ವಿಧುಶೇಖರ ಭಟ್ಟಾಚಾರ್ಯರೇ ಮುಂತಾದ ಅನೇಕ ಪಂಡಿತರಿಂದ ಅಂಗೀಕರಿಸಲ್ಪಟ್ಟಿದೆ. ಆದರೆ ದುರದೃಷ್ಟದಿಂದ ಶಂಕರಾಚಾರ್ಯರೇ ತಮ್ಮ ಮತದಲ್ಲಿರುವ ಅತಿ ಸ್ಪಷ್ಟವಾದ ಬೌದ್ಧ ಸಾದೃಶ್ಯವನ್ನೂ ಸಹ ಅನ್ಯಾಯವಾಗಿ ಅನ್ಯಥಾ ಉಪಪಾದಿಸಿ ಬಿಟ್ಟಿರುತ್ತಾರೆ. ಬ್ರ. ಸೂ. ಭಾ. IV, 1, 2, 19, 42, 90, ಈ ಸ್ಥಳಗಳಲ್ಲಿ ಸ್ಪಷ್ಟ ಬೌದ್ಧ ಮತ ಸಾದೃಶ್ಯವು ಅನ್ಯಥಾ ಉಪಪಾದಿಸಲ್ಪಟ್ಟಿದೆ.

3. He ( Sankara ) has I think tried his level best to explain away even the most obvious references to Buddha and Buddhism in Goudapada's Karika.

—S. DasGupta, M.A., Ph.D.

3. ಶಂಕರಾಚಾರ್ಯರು ಗೌಡಪಾದಕಾರಿಕೆಯಲ್ಲಿ ಅತಿ ಸ್ಪಷ್ಟವಾದ ಬೌದ್ಧ ಮತ ಸಾದೃಶ್ಯವನ್ನೂ ಕೂಡ ಒಪ್ಪಿಕೊಳ್ಳದೆ ಅನ್ಯಥಾ ಪ್ರತಿಪಾದಿಸುವುದಕ್ಕೆ ಅತಿ ಪ್ರಯತ್ನ ಮಾಡಿರುತ್ತಾರೆ.

4. Thus, it does not seem so passing strange that there should be striking similarities between Buddhism and Sankara

"ಕಿಂ ಬಹುನಾ ? ಸರ್ವಪ್ರಕಾರೇಣ— ಯಥಾ ಯಥಾಯಂ ವೈನಾಶಿಕಸಮಯಃ ಉಪಪತ್ತಿಮತ್ವಾಯ ಪರೀಕ್ಷ್ಯತೇ ತಥಾ ತಥಾ ಸಿಕತಾಕೂಪವದ್ವಿದೀರ್ಯತೇ ಏವ। ನ ಕಾಂಚಿದಪ್ಯತ್ರೋಪಪತ್ತಿಂ ಪಶ್ಯಾಮಃ। ಅತಶ್ಚಾನುಪಪನ್ನೋ ವೈನಾಶಿಕತಂತ್ರವ್ಯವಹಾರಃ। ಅಪಿಚ ಬಾಹ್ಯಾರ್ಥವಿಜ್ಞಾನಶೂನ್ಯವಾದತ್ರಯಮಿತರೇತರವಿರುದ್ಧಮುಪದಿಶತಾ ಸುಗತೇನ ಸ್ಪಷ್ಟೀಕೃತಮಾತ್ಮನೋ ಅಸಂಬದ್ಧಪ್ರಲಾಪಿತ್ವಂ। ಪ್ರದ್ವೇಷೋ ವಾ ಪ್ರಜಾಸು– ವಿರುದ್ಧಾರ್ಥಪ್ರತಿಪತ್ತ್ಯಾ ವಿಮುಹ್ಯೇಯುರಿಮಾಃ ಪ್ರಜಾ ಇತಿ। ಸರ್ವಥಾಪ್ಯನಾದರಣೀಯೋಽಯಂ ಸುಗತಸಮಯಃ ಶ್ರೇಯಸ್ಕಾಮೈರಿತ್ಯಭಿಪ್ರಾಯಃ ॥
—(ಶಂಕರಭಾಷ್ಯಂ, 2. 2. 33.)

**ಅರ್ಥವು :—** ಅಧಿಕ ಮಾತಿನಿಂದೇನು ? ಯಾವ ರೀತಿಯಲ್ಲಿ ಈ ಬೌದ್ಧಮತವನ್ನು, ಯುಕ್ತಿ ಇರುವುದೇ ಎಂದು ಪರೀಕ್ಷೆ ಮಾಡಿದರೂ, ಅದು ಮರಳಿನಲ್ಲಿ ತೋಡಿದ ಭಾವಿಯಂತೆ ನಾಶವಾಗುವುದೇ ಹೊರತು, ಒಂದಾದರೂ ಸಾಧಕ ಯುಕ್ತಿಯನ್ನು ಕಾಣಲಾರೆವು ಆದುದರಿಂದ ಬೌದ್ಧ ಸಿದ್ಧಾಂತರೀತ್ಯಾ ವ್ಯವಹಾರವು ಅಯುಕ್ತವು. ಮತ್ತು ಬಾಹ್ಯಾರ್ಥವಾದ, ವಿಜ್ಞಾನವಾದ, ಶೂನ್ಯವಾದವೆಂಬ ಪರಸ್ಪರ ವಿರುದ್ಧವಾದ ಮೂರು ವಾದಗಳನ್ನು ಉಪದೇಶ ಮಾಡಿರುವುದರಿಂದಲೇ ಈ ಬುದ್ಧನು ತಾನು ಅಸಂಬದ್ಧ ಪ್ರಲಾಪಿಯೆಂದು ತೋರಿಸಿಕೊಂಡಿರುತ್ತಾನೆ. ಅಥವಾ ಈ ವಿರುದ್ಧೋಪದೇಶಗಳಿಂದ ಅವನಿಗೆ ಪ್ರಜೆಗಳಲ್ಲಿರುವ ಪ್ರದ್ವೇಷವು—

---

seeing that the sources of their thought lie so near together ....... But in view of all this, what are we to say of the vehement opposition to Buddhism which we find in Sankara's own writings, and particularly in the second section of the second chapter of his Commentary on the Vedanta sutras ?...... His language is that of the full-blooded controversialist rather than of the abstractly intellectual reasoner.......

—W. S. Urquhart, M.A., D. Litt.

4. ಈ ರೀತಿಯಾಗಿ ಶಂಕರ ಮತಕ್ಕೂ ಬೌದ್ಧವಾದಕ್ಕೂ ಸ್ಪಷ್ಟ ಸಾದೃಶ್ಯವು ಇರುವುದು ಏನೂ ಆಶ್ಚರ್ಯವಲ್ಲ. ಯಾತಕ್ಕೆಂದರೆ ಎರಡು ಮಾತುಗಳಿಗೂ ಆಧಾರವು ಅತಿ ಸಮೀಪವೇ.... ಹೀಗೆ ಇಷ್ಟೆಲ್ಲಾ ಇದ್ದರೂ ಕೂಡ ಶಂಕರಾಚಾರ್ಯರು ತಮ್ಮ ಗ್ರಂಥಗಳಲ್ಲಿ ಅದರಲ್ಲಿಯೂ ದ್ವಿತೀಯಾಧ್ಯಾಯ ಬ್ರಹ್ಮಸೂತ್ರಭಾಷ್ಯದ ದ್ವಿತೀಯ ಪಾದದಲ್ಲಿ ಅತ್ಯುಗ್ರವಾಗಿ ಬೌದ್ಧವಾದವನ್ನು ಖಂಡಿಸುವುದನ್ನು ನೋಡಿ ನಾವು ಏನು ಹೇಳಬೇಕು ? ಈ ಭಾಗದಲ್ಲಿ ಶಂಕರಾಚಾರ್ಯರ ಭಾಷೆಯು ಕೊಬ್ಬಿದ ವಾದಿಯ ವಾಣಿಯಂತಿರುವುದೇ ಹೊರತು ನಿರಭಿಮಾನಿಯಾದ ತತ್ವಜಿಜ್ಞಾಸುವಿನ ಮಾತುಗಳಲ್ಲ.

ತನ್ನ ದುರುಪದೇಶವನ್ನು ನಂಬಿ ಜನರು ಮೋಸ ಹೋಗಲಿ ಎಂಬ ಕ್ರೂರ ದ್ವೇಷವು ಪ್ರಕಟವಾಗುವುದು. ಆದುದರಿಂದ ಬೌದ್ಧ ಮತವು ಸರ್ವಥಾ ಮೋಕ್ಷಕಾಂಕ್ಷಿಗಳಿಂದ ಅನಾದರಣೀಯವು.

ಈ ದೂಷಣಗಳೆಲ್ಲಾ ಅದ್ವೈತಮತದ ಮೇಲೂ ಬಂದೇ ಬರುವುವು.*

11. **ಪ್ರಶ್ನೆ:**— ಸ್ವಾಮೀ! ಅದ್ವೈತಮತವು ಬೌದ್ಧ ಮತವಾದರೆ ಭಸ್ಮಧಾರಣಾದಿ ಸಂಪ್ರದಾಯಗಳು ಬರುವುದಕ್ಕೆ ಕಾರಣವೇನು?

**ಉತ್ತರ:— ಶ್ರೀ ಶ್ರೀಗಳವರು:—** ಅದ್ವೈತಿಗಳೆಲ್ಲರೂ ಪ್ರಾಚೀನ ಬ್ರಾಹ್ಮಣರೇ ಆದುದರಿಂದಲೇ ಅನೇಕ ವೈದಿಕ ಕರ್ಮಗಳು ಅವರಲ್ಲಿರುವುವು. ಆದರೆ ಭಸ್ಮಧಾರಣ ರುದ್ರಾಕ್ಷಮಾಲಾಧಾರಣಾದಿಗಳು ವೈದಿಕವಲ್ಲ. ಅವು ಶೈವ ಸಂಪ್ರದಾಯಗಳು. ಅವುಗಳು ಶೈವರಿಂದಲೇ ಬಂತೆಂದು ಕೆಲವರು ಹೇಳುವರು.†

* ಈ ದೂಷಣಗಳೆಲ್ಲಾ ಅದ್ವೈತಮತದ ಮೇಲೂ ಬಂದೇ ಬರುವುವು. ಅದ್ವೈತಮತದಲ್ಲೂ ಕೂಡ ಬ್ರಹ್ಮನು ಸರ್ವ ಧರ್ಮಶೂನ್ಯನೆಂಬ ವಾದವೂ, ಅಭಾವ ಧರ್ಮಗಳುಂಟೆಂಬ ವಾದವೂ ಸಂಚರಿಸುತ್ತಿರುವುದು. ಏಕಜೀವವಾದವು ಬಹುಜೀವವಾದವು ಎಂಬ ಎರಡು ವಾದಗಳು ಪರಸ್ಪರ ವಿರುದ್ಧವಾಗಿ ಸಂಚಲಿಸುತ್ತಿರುವುವು. ಬ್ರಹ್ಮನಿಗೆ ಅವಿದ್ಯಾ ಸಂಬಂಧವುಂಟು, ಇಲ್ಲ, ಅವಿದ್ಯೆಯು ಮಾಯಾಜನ್ಯವು, ಮಾಯೆಯು ಅವಿದ್ಯಾಜನ್ಯವು. ಅವಿದ್ಯೆಯು ಮಾಯೆಯು ಎರಡು ಪದಾರ್ಥಗಳು, ಒಂದೇ ಪದಾರ್ಥವು; ಅವಿದ್ಯೆಗೆ ಅಂಶವುಂಟು. ಅಂಶವಿಲ್ಲ; ಜಗತ್ತು ಮಿಥ್ಯಾ ಎಂದರೆ ಮೂರು ಕಾಲದಲ್ಲೂ ಇಲ್ಲದ್ದು ಎಂದು ಅರ್ಥ, ಅನಿತ್ಯ ಎಂದು ಅರ್ಥ; ಇತ್ಯಾದಿ ಅನೇಕ ವಿರುದ್ಧವಾದಗಳು ಕಂಡು ಬರುವುವು. ಪರಂತು ಅದ್ವೈತ ಮತವನ್ನು ವ್ಯಾಹತೋಕ್ತಿಗಳ ಭಂಡಾರವೆಂದು ಹೇಳಬಹುದು. ಸದಸದ್ವಿಲಕ್ಷಣ ವ್ಯಾವಹಾರಿಕ ಸತ್ತಾ, ನಿರ್ಗುಣಬ್ರಹ್ಮ, ವಿವರ್ತೋಪಾದಾನ, ತಟಸ್ಥಲಕ್ಷಣ, ಅತತ್ತ್ವಬೋಧಕ ಪ್ರಮಾಣ ಇವೇ ಮುಂತಾದ ಪದಕದಂಬಗಳು "ಇಲ್ಲ, ಉಂಟು" ಎಂಬಂತೆ ಭಾವಾಭಾವ ಸಮಾಹಾರರೂಪವಾಗಿರುವುದರಿಂದ ವಿರುದ್ಧೋಕ್ತಿಗಳಾಗಿರುವುವು. ಇಂಥ ಪದಾರ್ಥಗಳು ಅಪ್ರಸಿದ್ಧಗಳೇ. ಈ ಕಾರಣದಿಂದ ಅದ್ವೈತಮತವು ಮುಮುಕ್ಷುಗಳಿಂದ ಹೇಯವೆಂದು ನ್ಯಾಯಪ್ರಾಪ್ತವಾಗುವುದು.

† 1. ಇದು **ಗುರುವಂಶಕಾವ್ಯದ** 109 ನೇ ಪುಟದ ಶ್ಲೋಕವು :—

(1) **ಶ್ರೀಚಂದ್ರಮೌಳೀಶ್ವರಲಿಂಗಮಸ್ಮೈ**
**ಸದ್ರತ್ನಗರ್ಭಂ ಗಣನಾಯಕಂ ಚ ।**
**ಸ ವಿಶ್ವರೂಪಾಯ ಸುಸಿದ್ಧದತ್ತಂ**
**ದತ್ವಾ ನ್ಯಗಾದೀಚ್ಚಿರಮರ್ಚಯೇತಿ ॥**

**ಅರ್ಥವು :—** ಶಂಕರಾಚಾರ್ಯರು ತಮಗೆ ಸುಸಿದ್ಧನಿಂದ ಶ್ರೀ ಚಂದ್ರಮೌಳೀಶ್ವರನನ್ನೂ ರತ್ನಗರ್ಭ ಗಣಪತಿಯನ್ನೂ ಸುರೇಶ್ವರಾಚಾರ್ಯರಿಗೆ ಕೊಟ್ಟು ಇದನ್ನು ಬಹುಕಾಲ ಪೂಜಿಸೆಂದು ಹೇಳಿದರು,

**12. ಪ್ರಶ್ನೆ :— ವಿದ್ಯಾರ್ಥಿಗಳು :—** ಸ್ವಾಮೀ ! ಶೈವ ಸಂಪ್ರದಾಯವು ಅಪ್ರಾಮಾಣಿಕವೆಂದು ಹೇಳುವುದು ಹೇಗೆ ?

**ಉತ್ತರ :— ಶ್ರೀ ಶ್ರೀಗಳವರು :—** ವಿಷ್ಣು ಸರ್ವೋತ್ತಮತ್ವವನ್ನು ಗೀತೆಯಿಂದಲೇ ಸಾಧಿಸಿ ತೋರಿಸಿರುವೆವು. **ಅಗ್ನಿರ್ವೈ ದೇವಾನಾಮವಮಃ**

---

ಗ್ರಂಥಕಾರರೇ ಈ ಸುಸಿದ್ಧನು ಯಾರೆಂಬುದನ್ನು ತಮ್ಮ ಸ್ವಂತ ವ್ಯಾಖ್ಯಾನದಿಂದ ನಿರೂಪಿಸಿರುತ್ತಾರೆ;—**"ಸುಸಿದ್ಧೇನ ರೇವಣಾಸಿದ್ಧಮಹಾಯೋಗಿನಾ ದತ್ತಂ" ರೇವಣಸಿದ್ಧ**ನೆಂಬ ಮಹಾಯೋಗಿಯಿಂದ ಕೊಡಲ್ಪಟ್ಟಿದ್ದು ಎಂದು ಅರ್ಥವು.

ಈ ಗುರುವಂಶ ಕಾವ್ಯವು ಶೃಂಗೇರಿ ಆಸ್ಥಾನ ವಿದ್ವಾನ್ ಕಾಶೀ ಲಕ್ಷ್ಮಣಶಾಸ್ತ್ರಿಗಳಿಂದ ರಚಿಸಲ್ಪಟ್ಟಿದ್ದು. ಇದರ ಶೋಧಕರು ವಿದ್ಯಾವಿಶಾರದ ವಿದ್ವಚ್ಛಿರೋಭೂಷಣ ಕುಣಿಗಲ್ ರಾಮಶಾಸ್ತ್ರಿಗಳು, ಧರ್ಮಾಧಿಕಾರಿ ಮೈಸೂರು ಸಂಸ್ಥಾನ. ಶ್ರೀರಂಗದ ವಾಣೀವಿಲಾಸ ಪ್ರೆಸ್ಸಿನಲ್ಲಿ ಮುದ್ರಿತವಾದುದು. ಲಕ್ಷ್ಮಣಶಾಸ್ತ್ರಿಗಳು ಗ್ರಂಥಾದಿಯಲ್ಲಿಯೇ "ಪ್ರಾಚಾಮುಸಮ್ಮತಂ ನೈವ ಲಿಖ್ಯತೇತ್ರ ನ ಚಾಧಿಕಂ" ಎಂದು ಪ್ರತಿಜ್ಞೆ ಮಾಡಿರುವುದರಿಂದ ಈ ವಿಷಯಕ್ಕೆ ಆಧಾರವಾದ ಪ್ರಾಚೀನ ಚರಿತ್ರೆಯು ಇರುವುದೆಂದು ಸಿದ್ಧವಾಗುವುದು.

ಇನ್ನೂ ಪ್ರಾಚೀನವಾದ **ಶಿವತತ್ವರತ್ನಾಕರವೆಂಬ** ಗ್ರಂಥದ ನಾಲ್ಕನೆಯ ಕಲ್ಲೋಲದ ಹನ್ನೆರಡನೆಯ ತರಂಗದಲ್ಲಿ ವಿದ್ಯಾರಣ್ಯರು ಸನ್ಯಾಸಾಶ್ರಮವನ್ನು ಸ್ವೀಕಾರ ಮಾಡಿದ ಚರಿತ್ರೆಯನ್ನು ಬರೆಯುವ ಸಂದರ್ಭದಲ್ಲಿ ಹೀಗೆ ವರ್ಣಿಸಲ್ಪಟ್ಟಿರುವುದು :—

**ತತಃ ಸ ರೇವಣಾಸಿದ್ಧಸಂಪ್ರದಾಯಪ್ರವರ್ತಿನಾಂ |**
**ಶಂಕರಾಚಾರ್ಯವರ್ಯಾಣಾಂ ಪಾರಂಪರ್ಯಕ್ರಮಾಗತಂ ||೯||**
**ಸಂನ್ಯಾಸಿನಮುಪಾಶ್ರಿತ್ಯ ವಿನಯಾವನತೋಽಧಿಕಂ |**
**ವೃತ್ತಾಂತಮಖಿಲಂ ತಸ್ಮೈ ಯತಯೇ ಸ್ವಂ ವ್ಯಜಿಜ್ಞಪತ್ ||೧೦||**

.... .... .... .... ....

**ರೇವಣಾಸಿದ್ಧಸಂಪ್ರಾಪ್ತಂ ಚಂದ್ರಮೌಳೀಶಮಪ್ಯದಾತ್ |**
**ಆಖ್ಯಾಚ್ಚಾನೇನ ಲಿಂಗೇನ ತವಾಭೀಷ್ಟಾಪ್ತಿರಿತ್ಯಪಿ ||**

**ಅರ್ಥವು :—** ವಿದ್ಯಾರಣ್ಯರು (ಶಿವಧರ್ಮನಾಮಕ ಬ್ರಾಹ್ಮಣನು) ರೇವಣಾಸಿದ್ಧ ಸಂಪ್ರದಾಯ ಪ್ರವರ್ತಿಗಳಾದ ಶಂಕರಾಚಾರ್ಯರ ಪರಂಪರೆಯಲ್ಲಿ ಬಂದಂಥ ಸಂನ್ಯಾಸಿಗಳನ್ನು ಸಮೀಪಿಸಿ ಅತ್ಯಂತ ವಿನಯದಿಂದ ತಮ್ಮ ಅಖಿಲ ವೃತ್ತಾಂತವನ್ನೂ ವಿಜ್ಞಾಪಿಸಿಕೊಂಡರು. ......ಆಗ ಆ ಸಂನ್ಯಾಸಿಗಳು ಶಿವಧರ್ಮನಿಗೆ ( ವಿದ್ಯಾರಣ್ಯರಿಗೆ ) ಸಂನ್ಯಾಸವನ್ನು ಕೊಟ್ಟು ರೇವಣಸಿದ್ಧ ಸಂಪ್ರಾಪ್ತವಾದ ಚಂದ್ರಮೌಳೀಶ್ವರನನ್ನೂ ಸಹ ಕೊಟ್ಟು ಈ ಲಿಂಗದಿಂದ ನಿನ್ನ ಅಭೀಷ್ಟ ಸಿದ್ಧಿಯಾಗುವದೆಂದು ಹೇಳಿದರು.

ವಿಷ್ಣುಃ **ಪರಮಃ** ಮುಂತಾದ ಅನಂತ ಶ್ರುತಿಗಳಿಗೆ ವಿರುದ್ಧವಾಗಿ, “**ಪತ್ಯುರಸಾಮಂಜಸ್ಯಾತ್**” ಮುಂತಾದ ಬ್ರಹ್ಮಸೂತ್ರಗಳಲ್ಲಿ ಖಂಡಿಸಲ್ಪಟ್ಟು, “**ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ**” “**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯಃ**” ಮುಂತಾದ ಗೀತಾ ವಾಕ್ಯಗಳಿಂದ ತಿರಸ್ಕೃತವಾದ ಶೈವವಾದವು ಹೇಗೆ ತಾನೇ ವೇದಸಮ್ಮತವಾದ ಬ್ರಹ್ಮಾದಿ ಪರಂಪರೆಯಿಂದ ಪ್ರಾಪ್ತವಾದ ಪ್ರಾಚೀನ ಸಂಪ್ರದಾಯಾನುಗುಣವಾದ ಯಥಾರ್ಥ ತತ್ವವೆಂದು ನಿಶ್ಚಯಿಸಲ್ಪಡುವುದು. ಆದುದರಿಂದ ಅದು ಯಾರಿಂದಲೋ ಸ್ವಕಪೋಲಕಲ್ಪಿತವಾಗಿ ರಚಿಸಲ್ಪಟ್ಟ ವಿಚಾರ ಗ್ರಂಥವೆಂದು ನಿರ್ಣಯಿಸಬೇಕು. ವೇದ, ಸೂತ್ರ, ಗೀತೆಗಳಿಗೆ ಸಮ್ಮತವಾದ ಮತವು ಒಂದೇ ಪ್ರಾಮಾಣಿಕ ತತ್ವವು. ಅದು ಒಂದೇ ಬ್ರಹ್ಮಾದಿ ನಿಜ ಪರಂಪರೆಗೆ ಸೇರಿದ ಅನಾದಿ ಮತವು. ಇತರ ಮತಗಳೆಲ್ಲಾ ಸ್ವಬುದ್ಧ್ಯನುಸಾರವಾಗಿ ಕಲ್ಪಿತವಾದುವುಗಳು ಎಂದು ಸರ್ವಸಮ್ಮತವಾದ ನಿರ್ಣಯವು.

---

ಶಿವತತ್ವ ರತ್ನಾಕರ ಗ್ರಂಥವು ಬಹು ಪ್ರಾಚೀನ ಗ್ರಂಥವು. ಇದರ ನವೀನ ಎಡಿಟರುಗಳು ಬಿ. ರಾಮರಾವ್, ಎಂ.ಎ.,ಎಲ್.ಎಲ್.ಬಿ., ಮದ್ರಾಸ್ ಗೌರ್ನಮೆಂಟ್ ಸೀನಿಯರ್ ಟ್ರಾನ್ಸ್ಲೇಟರ್ ಮತ್ತು ವಿದ್ವಾನ್ ಪಿ. ಸುಂದರಶಾಸ್ತ್ರಿ, ಅಸಿಸ್ಟೆಂಟ್ ಲೈಬ್ರೇರಿಯನ್, ಮದ್ರಾಸ್ ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿ. ಈ ಗ್ರಂಥವನ್ನು ಮುದ್ರಣ ಮಾಡಿಸುವಾಗ ಇಂಡಿಯಾ ಗೌರ್ನಮೆಂಟಿನ ಪ್ರಾಚೀನ ಶಾಸನ ಶೋಧಕರಾದ **ರಾವ್ ಬಹಾದ್ದೂರ್ ಎಚ್. ಕೃಷ್ಣಶಾಸ್ತ್ರಿ**, ಬಿ.ಎ. ಎಂಬುವರು ಒಂದು ಇಂಗ್ಲೀಷ್ ಪ್ರಸ್ತಾವನೆಯನ್ನು ಬರೆದಿರುತ್ತಾರೆ. ಅದರಲ್ಲಿಯೂ ಈ ಭಾಗವು ಉದಾಹರಣ ಯೋಗ್ಯವಾಗಿರುವುದು :—

“One very interesting point which must be particularly drawn attention to in the story of Vidyaranya as given in the 12th Taranga of the 4th Kallola is the “Revanasiddha sampradaya” which the Acharyas of the Sankaracharya line that initiated our Vidyaranya were practising at Sringeri. The Linga of Chandramouleswara which is still worshipped as the chief deity by the Acharyas of Sringeri Mutt, is also said to have been presented, to Vidyaranya by his direct guru. Revanasiddha, we know, is a well-known Saiva teacher, whom the Veersaivas still claim as one of their earliest Acharyas. The Keladi chiefs who were mostly followers of the Veerasaiva religion, were devout adherents of the Sringeri Shankaracharya Mutt perhaps also for the same reason *viz*: that the Shankaracharyas were followers of the Revanasiddha sampradaya. This

**ಪ್ರಶ್ನೆ** :— ಸ್ವಾಮೀ ! ಇನ್ನು ಇತರ ದರ್ಶನಗಳ ಪಾಡೇನು ?

**ಉತ್ತರ:— ಶ್ರೀ ಶ್ರೀಗಳವರು:—** 1. ಸಾಂಖ್ಯ ಮತವು ಅಪ್ರಾಮಾಣಿಕವೆಂದು "**ಯತೋ ವಾ ಇಮಾನಿ ಭೂತಾನಿ ಜಾಯಂತೇ**" ಮುಂತಾದ ಶ್ರುತಿಗಳ ಪರ್ಯಾಲೋಚನೆಯಿಂದಲೂ, "**ರಚನಾನುಪಪತ್ತೇಶ್ಚ ನಾನುಮಾನಂ**" ಮುಂತಾದ ಬ್ರಹ್ಮಸೂತ್ರಾರ್ಥ ವಿಮರ್ಶೆಯಿಂದಲೂ "**ಅಹಂ ಸರ್ವಸ್ಯ ಪ್ರಭವಃ**" ಮುಂತಾದ ಗೀತಾ ವಾಕ್ಯಾರ್ಥ ಪರಾಮರ್ಶದಿಂದಲೂ ನಿಶ್ಚಿತವಾಗುವುದು. ಸಾಂಖ್ಯ ಮತದಲ್ಲಿ ಜಡವಾದ ಪ್ರಧಾನವೇ ಜಗತ್ಕರ್ತೃವು, ಚೇತನನಿಗೆ ಕರ್ತೃತ್ವವಿಲ್ಲ. ಇದು ಅವೈದಿಕವೆಂದು ಹೇಳಬೇಕಾದುದೇನು ?

**2.** ನ್ಯಾಯಶಾಸ್ತ್ರದಲ್ಲಿ ಈಶ್ವರನು, ಎಂಟು ಗುಣಮಾತ್ರವುಳ್ಳವನು, ಜೀವನೂ ಸರ್ವತ್ರವ್ಯಾಪ್ತನು, ದುಃಖಧ್ವಂಸವೇ ಮುಕ್ತಿಯು. ಇಂಥ ಅಭಿಪ್ರಾಯಗಳೂ, ಪರಮಾಣ್ವಾರಂಭವಾದವೂ, "ವಿಷ್ಣೋರ್ನುಕಂ ವೀರ್ಯಾಣಿ ಪ್ರಾವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ" ಮುಂತಾದ ಶ್ರುತಿಗಳಿಗೂ, "ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಂ" ಮುಂತಾದ ಬ್ರಹ್ಮಸೂತ್ರಗಳಿಗೂ, "ಅಕ್ಷಯ್ಯಂ

---

explains perhaps why in the Adwaita Mutt of Sringeri there is still a greater bias towards Saivism and Saiva worship than towards Vaishnavism and Krishna worship, though the founder, the great Shankaracharya was no respector of creeds nor of any distinction between Siva and Vishnu"

ಶೈವ ಗ್ರಂಥಕಾರನಾದ ಸಿದ್ಧನಾಥ ಶಿವಾಚಾರ್ಯನೆಂಬ ಇನ್ನು (800–900 ವರ್ಷಗಳ) ಪ್ರಾಚೀನ ಕವಿಯು ರೇವಣಸಿದ್ಧನ ಚರಿತ್ರೆಯನ್ನು ಬರೆದಿರುವಾಗಲೇ ಶಂಕರ ರೇವಣಸಿದ್ಧರ ಸಮಾಗಮವನ್ನು ವರ್ಣಿಸಿರುತ್ತಾನೆ,

ಆತನ ಗ್ರಂಥದಲ್ಲಿ ಶಂಕರಾಚಾರ್ಯರು ಮಲಯ ಪರ್ವತದಲ್ಲಿ ತಪಸ್ಸು ಮಾಡಿದ ಹಾಗೂ, ಅಶರೀರವಾಣಿಯಿಂದ ಚಂದ್ರಮೌಳೀಶ್ವರ ಪ್ರಾಪ್ತಿಯನ್ನು ಶ್ರವಣ ಮಾಡಿ ಊರಿಂದ ಊರಿಗೆ ಲಿಂಗಾನ್ವೇಷಣತತ್ಪರರಾಗಿ ಸಂಚಾರ ಮಾಡಿದ ಹಾಗೂ, ಸಹ್ಯಪರ್ವತದಲ್ಲಿ ಈ ತಪೋಫಲರೂಪವಾಗಿ ರೇವಣಸಿದ್ಧನ ದರ್ಶನವಾದಂತೆಯೂ ನಿರೂಪಿಸಲ್ಪಟ್ಟಿರುತ್ತದೆ. ಇದು ರೇಣುಕಾಚಾರ್ಯನನ್ನು ಕುರಿತು (ರೇವಣಸಿದ್ಧನಿಗೆ ರೇಣುಕ ಮುಂತಾದ ಮೂರು ನಾಲ್ಕು ಹೆಸರುಗಳುಂಟೆಂದು ಆ ಗ್ರಂಥದಿಂದಲೇ ತಿಳಿದು ಬರುವುದು.) ಶಂಕರಾಚಾರ್ಯರು ಮಾಡಿದ ಸ್ತುತಿಯ ಕೊನೆಯ ಶ್ಲೋಕವು:—

**ಭದ್ರಾಂಕುರಾಯ ಭಜತಾಮಭಯಂಕರಾಯ**
**ಯೋಗೇಶಕಲ್ಪತರವೇ ಕವಯೇ ಮುನೀನಾಂ ।**
**ಕೈವಲ್ಯತಲ್ಪಗುರವೇ ಗುರವೇ ಗುರೂಣಾಂ**
**ಶ್ರೀರೇಣುಕಾಯ ಗಣಪಾಯ ನಮೋಽಸ್ತು ತುಭ್ಯಂ ॥**

ಸುಖಮಶ್ನುತೇ" ಮುಂತಾದ ಗೀತಾ ವಾಕ್ಯಗಳಿಗೂ ವಿರುದ್ಧವಾಗಿರುವುವು. ಆದುದರಿಂದ ಅದೂ ಸ್ವಕಪೋಲಕಲ್ಪಿತವಾದ ತತ್ವವು.

3. ಪತಂಜಲಿಯ ಯೋಗಸೂತ್ರವೂ ಕೂಡ "ಏತೇನ ಯೋಗಃ ಪ್ರತ್ಯುಕ್ತಃ" ಮುಂತಾದ ಬ್ರಹ್ಮಸೂತ್ರಗಳಿಗೂ ಯೋಗಾನುಶಾಸನವನ್ನು ವರ್ಣಿಸುವ ಉಪನಿಷತ್ತುಗಳಿಗೂ ಅನೇಕ ವಿಷಯಗಳಲ್ಲಿ ವಿರುದ್ಧವಾಗಿರುವುದರಿಂದಲೂ, ಶ್ರೀ ಕೃಷ್ಣನಿಂದ ಉಪದಿಷ್ಟವಾದ ಕರ್ಮಯೋಗಾದಿಗಳಿಗೂ ಕೆಲವು ವಿಷಯಗಳಲ್ಲಿ ವಿರುದ್ಧವಾಗುವುದರಿಂದಲೂ ಸ್ವಕಪೋಲಕಲ್ಪಿತವಾದ ತತ್ವವೆಂದು ನಿರ್ಧರಿಸಬೇಕು.

4 ಜೈಮಿನಿಕೃತ ಮೀಮಾಂಸಾ ಶಾಸ್ತ್ರದ ಮೂಲಾರ್ಥವು ದುರ್ಘಟವು. ಶಾಬರ, ಭಟ್ಟ, ಪ್ರಭಾಕರರೇ ಮುಂತಾದವರ ವ್ಯಾಖ್ಯಾನರೂಪದಿಂದ ನಿರ್ಗಳಿತವಾದ ಮೀಮಾಂಸಾ ಶಾಸ್ತ್ರವು ಅಪ್ರಾಮಾಣಿಕವೆಂದು ಸಾಮಾನ್ಯರಿಗೂ ವಿದಿತವಾಗುವುದು. "ತಸ್ಮೈ ನಮಃ ಕರ್ಮಣೇ" ಎಂದು ಮೀಮಾಂಸಾ ಶಾಸ್ತ್ರಕಾರರು ಕರ್ಮವೇ ಸ್ವತಂತ್ರ ಫಲಪ್ರದವೆಂದು ನಂಬಿರುವರು. ಸ್ವರ್ಗವೇ ಮುಕ್ತಿಯು. ಈಶ್ವರನೇ ಇಲ್ಲವೆಂದು ಅನೇಕ ಮೀಮಾಂಸಕರ ವಾದವು.

14. **ವಿದ್ಯಾರ್ಥಿಗಳು :—** ಇದು ನಿಸ್ಸಂದೇಹವಾಗಿಯೂ ದುಸ್ತತ್ವವು. ಸ್ವಾಮೀ ! ರಾಮಾನುಜತತ್ವವು ದ್ವೈತವಾದವನ್ನೇ ಹೇಳುವುದಷ್ಟೇ !

**ಉತ್ತರ :— ಶ್ರೀ ಶ್ರೀಗಳವರು :—** ಅನೇಕ ವಿಷಯದಲ್ಲಿ ವೇದಕ್ಕೆ ಅವಿರುದ್ಧವಾಗಿರುವುದು. ಆದರೆ ಪರಂಪರೋಪದೇಶರಾಹಿತ್ಯವನ್ನು ತೋರಿಸುವ ಅನೇಕ ದೋಷಗಳು ಅದರಲ್ಲಿರುವುವು.

**1* ತ್ರಿವಿಧಾ ಭವತಿ ಶ್ರದ್ಧಾ ಪ್ರಾಣಿನಾಂ ಸಾ ಸ್ವಭಾವಜಾ ।**
**ಸಾತ್ವಿಕೀ ರಾಜಸೀ ಚೇತಿ ತಾಮಸೀ ಚೇತಿ ತಾಂ ಶೃಣು ॥**
**ಸತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಸ್ಸ ಏವ ಸಃ ॥**
**—(17. 2-3.)**

---

* ತಾ॥ ಭರತಕುಲೋತ್ಪನ್ನನೇ ! ಜೀವರ ಆಸ್ತಿಕ್ಯಬುದ್ಧಿಯು ಸಾತ್ವಿಕ, ರಾಜಸ, ತಾಮಸವೆಂದು ಮೂರು ವಿಧವಾಗಿರುವುದು, ಈ ಆಸ್ತಿಕ್ಯಬುದ್ಧಿಯು "ಸ್ವಭಾವಜಾ ಏವ" ಸ್ವರೂಪಭೂತವಾದದ್ದೇ, ಮನೋವೃತ್ತಿರೂಪವಾದುದು ಅಲ್ಲ. ಈ ಶ್ರದ್ಧಾತ್ರಯಗಳಿಂದ ಯುಕ್ತರಾದ ಜನರಿಂದ ಆಚರಿಸಲ್ಪಟ್ಟ ಯಜನ ಪ್ರಕಾರವನ್ನು ಕೇಳು. (ಅದರಂತೆ ಮಾಡು) ಸಮಸ್ತವಾದ ಪ್ರಾಣಿಗಳ ಆಸ್ತಿಕ್ಯಬುದ್ಧಿಯೂ, "ಸತ್ವಾನುರೂಪಾ" ಎಂದರೆ ಜೀವಸ್ವರೂಪವಾಗಿರುತ್ತದೆ. (ಸತ್ವಂ ಜೀವಃ ಕ್ವಚಿತ್ ಪ್ರೋಕ್ತಃ) (ಶ್ರದ್ಧೆಯು ಜೀವಸ್ವರೂಪಾನುರೂಪವಾಗಿರುವುದರಿಂದ ಅದರಿಂದ ಜೀವಸ್ವರೂಪವನ್ನು ತಿಳಿಯಬೇಕು ಎಂದು ಭಾವ.) ಶ್ರದ್ಧೆಗೆ ಜೀವಸ್ವರೂಪಾನುರೂಪತ್ವವು ಹೇಗೆ ಬಂತೆಂದರೆ; ಈ ಜೀವನು "ಶ್ರದ್ಧಾಮಯನು" ಎಂದರೆ ಶ್ರದ್ಧಾಸ್ವರೂಪನು. (ತಾದಾತ್ಮ್ಯಾರ್ಥೇಮಯಟ್, ಸೂರ್ಯನು ಪ್ರಕಾಶಮಯನು ಎಂಬಂತೆ.) ಯಾರು ಎಂತಹ ಶ್ರದ್ಧೆಯುಳ್ಳವರೋ ಅವರು ಅವರೇ.

ಮುಂತಾದ ಅನೇಕ ಸ್ಥಳಗಳಲ್ಲಿ ಶ್ರೀ ಕೃಷ್ಣನು ಸ್ಪಷ್ಟವಾಗಿ ಜೀವರುಗಳು ತ್ರಿವಿಧ ರೆಂದು ತೋರಿಸಿದ್ದರೂ ಸಹ ಜೀವತ್ರೈವಿಧ್ಯವು ಶಾಸ್ತ್ರಸಮ್ಮತವಲ್ಲವೆಂದು ಹೇಳುವರು. **2**. ಮತ್ತು ಜ್ಞಾನಾತಿರಿಕ್ತವಾದ ಆನಂದವೇ ಇಲ್ಲವೆಂದು ಅನುಭವವಿರುದ್ಧವಾದ ಪ್ರಕ್ರಿಯೆಯನ್ನು ಹೇಳುವರು. 3. ವಿಷ್ವಕ್ಸೇನ ಶೇಷಾದಿ ಅನೇಕ ದುಃಖಸಂಬಂಧ ವುಳ್ಳ ದೇವತೆಗಳು ನಿತ್ಯಮುಕ್ತರೆಂದು ಅಪ್ರಾಮಾಣಿಕ ನಿಶ್ಚಯವನ್ನು ಮಾಡಿರುವರು. **4**. ಸರ್ವಾಧಿಕವಾದ ಅನರ್ಥವೇನೆಂದರೆ, ನಿರವಧಿಕ ಪರಿಪೂರ್ಣನಾದ ಪರಮಾತ್ಮ ನಿಗೆ ಸಮಾನವಾದ ಆನಂದಭೋಗವು ಪ್ರತಿಯೊಬ್ಬ ಜೀವನಿಗೂ ಮುಕ್ತಿಯಲ್ಲಿ ಬರುವದೆಂದು ಕಲ್ಪನೆಯನ್ನು ಮಾಡಿರುವರು. 5 ಮತ್ತು ಅತಿ ಹಾಸ್ಯಾಸ್ಪದವಾದ ಸತ್ಖ್ಯಾತಿವಾದವನ್ನು ಶಾಸ್ತ್ರದಲ್ಲಿ ಅಂಗೀಕರಿಸಿ ಭ್ರಮವೇ ಯಾರಿಗೂ ಇಲ್ಲ, ಎಲ್ಲವೂ ಯಥಾರ್ಥ ಜ್ಞಾನವೆಂದು ಪ್ರತಿಪಾದಿಸಿರುವರು. ಇವೇ ಮುಂತಾದ ವಿಷಯಗಳ ಪರ್ಯಾಲೋಚನೆಯಿಂದ ಈ ಮತವೂ ಅನೇಕ ಮುಖ್ಯಾಂಶಗಳಲ್ಲಿ ಸ್ವಕಪೋಲ ಕಲ್ಪಿತವಾದ ಪ್ರಕ್ರಿಯೆಯೇ ಹೊರತು, ಪ್ರಾಚೀನ ಉತ್ತಮ ಪರಂಪರೋಪದೇಶ ದಿಂದ ಪ್ರಾಪ್ತವಾದ ತತ್ವವಲ್ಲವೆಂದು ಹೇಳಬೇಕಾಗಿರುವುದು.

15. **ವಿದ್ಯಾರ್ಥಿಗಳು :—** ಸ್ವಾಮೀ ! ಕೆಲವು ವಿಷಯಗಳು ಸುಳ್ಳಾಗಿದ್ದ ಮಾತ್ರಕ್ಕೆ ಸರ್ವ ವಿಷಯಗಳಲ್ಲಿಯೂ ಅಪ್ರಮಾಣವೆಂದು ಹೇಳುವುದು ಹೇಗೆ ?

**ಉತ್ತರ:— ಶ್ರೀ ಶ್ರೀಗಳವರು:—** ನಮ್ಮ ಅಭಿಪ್ರಾಯವು ನಿಮಗೆ ತಿಳಿಯ ಲಿಲ್ಲ. ಸಕಲ ಮತಗಳಲ್ಲಿಯೂ ಕೆಲವು ಪ್ರಾಮಾಣಿಕ ವಿಷಯಗಳು ಇದ್ದೇ ಇರು ವವು. ಆದರೆ ಆ ಕಾರಣದಿಂದ ಆ ಮತವು ಸಜ್ಜನರಿಂದ ಪರಿಗ್ರಾಹ್ಯವಾಗಿ ಪ್ರಾಚೀನ ಸಂಪ್ರದಾಯದಿಂದ ಬಂದುದೆಂದು ಹೇಳಲಾಗುವುದಿಲ್ಲ. ಸರ್ವ ಪ್ರಕಾರದಿಂದಲೂ ನಿರ್ದುಷ್ಟವಾಗಿ ಬ್ರಹ್ಮದೇವರ ಪರಂಪರೆಯಿಂದ ಪ್ರಾಪ್ತವಾದ, ಅತಏವ ನಿಜತತ್ವ ಗಳನ್ನು ಮಾತ್ರವೇ ಒಳಗೊಂಡ, ಒಂದು ವಿಷಯದಲ್ಲಿಯೂ ಸುಳ್ಳನ್ನು ಹೇಳದಿರುವ ಶಾಸ್ತ್ರವೇ ಶಾಸ್ತ್ರವು. ವೇದ, ಸೂತ್ರ, ಭಾರತಾದಿಗಳಿಗೆ ಅನುಗುಣವಾಗಿ ಸರ್ವ ದೋಷ ವಿವರ್ಜಿತವಾದ ಮತವೇ ಮತವು. ಅನ್ಯ ಮತಗಳ ಅವಲಂಬನೆಯಿಂದ ಮೋಕ್ಷಜನಕವಾದ ಪರಮಾತ್ಮನ ಪ್ರಸಾದವು ಪ್ರಾಪ್ತವಾಗಲಾರದು ಈಶ್ವರಾದಿ ಗಳು ತಾಮಸ ಉಗ್ರ ಕರ್ಮಗಳಿಗೂ ಪ್ರತಿಫಲ ರೂಪವಾಗಿ ವರಗಳನ್ನು ಕೊಡು ವರು. ಅದು ಬೇರೆ ವಿಷಯವು. ಪರಮಾತ್ಮನ ಸಾಕ್ಷಾತ್ಕಾರವು ಅರ್ಜುನಾದಿ ಭಕ್ತರುಗಳಿಗೆ ಆದಂತೆ ಆಗಲಾರದು.

**ದುರಾಗಮಾಸ್ತದನ್ಯೇ ಯೇ ತೈರ್ನ ಜ್ಞೇಯೋ ಜನಾರ್ದನಃ ||**

ಎಂದು ಸ್ಕಾಂದವಚನವಿರುವುದು.

ಯುಕ್ತಿಯಿಂದಲೂ ಕೂಡ ಯಾವುದಾದರೂ ಒಂದು ಮತವೇ ನಿಜತತ್ವ ವನ್ನು ಬೋಧಿಸತಕ್ಕ ಸಂಪ್ರದಾಯಕ್ಕೆ ಸೇರಿದುದು ಮತ್ತು ಸರ್ವ ದೋಷರಹಿತ ವಾದುದು ಎಂದು ಸಿದ್ಧವಾಗುವುದು. ಹೇಗೆಂದರೆ—

**ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥**

ಎಂಬ ಗೀತಾ ವಾಕ್ಯದಲ್ಲಿ ಶ್ರೀ ಕೃಷ್ಣನು ನಿರ್ಣೀತವಾದ ಶ್ರುತಿಸಿದ್ಧಾಂತವು ತಿಳಿದ ಮೇಲೆಯೇ ಅಪರೋಕ್ಷ ಜ್ಞಾನವು ಆಗುವುದೆಂದು ಹೇಳಿರುತ್ತಾನೆ. ಆ ಅಪರೋಕ್ಷವು ಸದುಪದೇಶದಿಂದ ಜನ್ಯವಾದ ತತ್ವಜ್ಞಾನದಿಂದಲೇ ಆಗಬೇಕು. ಹೇಗೆಂದರೆ "ವೇದವಿದೇವಚಾಹಂ" ಎಂದರೆ ದುರ್ಗಮವಾದ ವೇದಾರ್ಥವನ್ನು ನಾನೊಬ್ಬನೇ ಚೆನ್ನಾಗಿ ತಿಳಿದವನೆಂದು ಶ್ರೀ ಕೃಷ್ಣನು ಹೇಳಿದನು. ಆದುದರಿಂದ ಇತರರಿಗೆ ವೇದಾರ್ಥವು ಪರಮಾತ್ಮನ ಉಪದೇಶ ಪರಂಪರೆಯಿಂದ ಬರಬೇಕು. ಪರಮಾತ್ಮನು ದೇವತೆಗಳಿಗೆ ಸಾಕ್ಷಾತ್ತಾಗಿ ಉಪದೇಶ ಮಾಡಿರುವನು. ಸರ್ವಜ್ಞರಾದ ದೇವತೆಗಳು ಋಷ್ಯಾದಿಗಳಿಗೆ ಉಪದೇಶ ಮಾಡಿರುವರು. ಈ ರೀತಿಯಾಗಿಯೇ ನಿಜತತ್ವವು ಪ್ರಚಾರವನ್ನು ಹೊಂದುವುದು. ಪ್ರಾಚೀನ ಪರಂಪರೋಪದೇಶಕ್ಕೆ ಶ್ರೀ ಕೃಷ್ಣನ ತತ್ವವು ಸೇರಿದುದು ಎಂಬುದು,

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಂ ।**
**ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥**
**ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।**

* * * * *

**ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ ॥**
—(4. 1-3.)

ಇತ್ಯಾದಿ ಗೀತಾ ವಾಕ್ಯಗಳಿಂದ ಸ್ಪಷ್ಟವಾಗುವುದು. ಇಂಥ ಬ್ರಹ್ಮಾದಿ ದೇವತಾ ಪರಂಪರೆಗೆ ಸೇರದ ಅನ್ಯತತ್ವಗಳು ಸ್ವಬುದ್ಧಿ ವೈಚಿತ್ರ್ಯಾನುಗುಣವಾಗಿ ಸ್ವಲ್ಪ ಸುಳ್ಳು, ಹೆಚ್ಚು ಸುಳ್ಳು, ಮಹತ್ತರ ಸುಳ್ಳು ಹೀಗೆ ಕ್ರಮವಾಗಿ ಅನೃತ ಭೂಯಿಷ್ಠವಾಗಿ, ಮಾಡಿದವರಿಗೂ ನಂಬಿದವರಿಗೂ ಅನರ್ಥದಾಯಕವಾಗಿರುವುವು. "ವೇದವಾದರತಾಃ ಪಾರ್ಥ" ಎಂಬಲ್ಲಿಯೂ, "ಬಹುಶಾಖಾಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಂ" ಎಂಬಲ್ಲಿಯೂ ಆಪಾತತಃ ವೇದಕ್ಕೆ ತೋರುವ ಅರ್ಥವನ್ನು ಆಧಾರವಾಗಿಟ್ಟುಕೊಂಡು ಸುಳ್ಳು ಶಾಸ್ತ್ರಗಳನ್ನು ಅನೇಕರು ರಚಿಸಿರುವರು ಎಂದು ಶ್ರೀ ಕೃಷ್ಣನು ಸೂಚಿಸಿರುವನು. ಆದರೆ "ವ್ಯವಸಾಯಾತ್ಮಿಕಾ ಬುದ್ಧಿರೇಕೇಹ", ನಿರ್ಣೀತವಾದ ಶಾಸ್ತ್ರಸಮ್ಮತವಾದ ಮತವು ಒಂದೇ. ಅದನ್ನೇ ಶ್ರೀ ಕೃಷ್ಣನು ಹೇಳಿರುತ್ತಾನೆ. ಅದನ್ನೇ ಶ್ರೀಮನ್ಮಧ್ವಾಚಾರ್ಯರು ಪ್ರಮಾಣ ವಾಕ್ಯಗಳ ಉಪಬೃಂಹಣದಿಂದ ಪ್ರತಿಪಾದಿಸಿ ತೋರಿಸಿರುವರು. ಅವರು ಯಾವ ವಿಷಯದಲ್ಲಿಯೂ ವೇದಾದಿ ಪ್ರಮಾಣಗಳಿಗೆ ಅಸಮ್ಮತವಾಗಿಯಾಗಲೀ, ವಿರುದ್ಧವಾಗಿಯಾಗಲೀ ಬರೆದಿಲ್ಲವೆಂದು ನಾವು ತೋರಿಸುತ್ತೇವೆ. ನೀವು ಬೇಕಾದ ವಿಷಯದಲ್ಲಿ ಪ್ರಶ್ನೆ ಮಾಡಿರಿ.

16. **ವಿದ್ಯಾರ್ಥಿಗಳು :—** ಸ್ವಾಮೀ ! ನಾವು ಅಷ್ಟು ಸಮರ್ಥರಲ್ಲ. ಮಧ್ವ ಮತವೂ ಶ್ರೀ ಕೃಷ್ಣನ ಮತವೂ ಒಂದೇ ಎಂದು ನಮಗೆ ತಿಳಿಯಿತು ಆದರೂ ಶ್ರೀಮನ್ಮಧ್ವಾಚಾರ್ಯರು ಸರ್ವಜ್ಞರೆಂಬಲ್ಲಿ ಏನಾದರೂ ಪ್ರಮಾಣವಿದ್ದರೆ ಹೇಳ ಬೇಕಾಗಿ ಪ್ರಾರ್ಥಿಸುತ್ತೇವೆ.

**ಉತ್ತರ :— ಶ್ರೀ ಶ್ರೀಗಳವರು :—** ಮುಖ ನೋಡಿದರೆ ಇದು ಹನುಮಂತನ ವಿಗ್ರಹವು ಎಂದು ತಿಳಿಯುವಂತೆ ಅವರು ಮಾಡಿದ ಕಾರ್ಯವೇ ಅವರ ಸರ್ವಜ್ಞತೆಯನ್ನು ಪ್ರಕಟ ಮಾಡುವುದು. ಸರ್ವ ವಿಷಯಗಳಲ್ಲಿಯೂ ವೇದಾದಿಗಳ ಪ್ರಮಾಣ ವಾಕ್ಯಗಳನ್ನು ಉದಾಹರಿಸಿ ಬಾದರಾಯಣರ ಮತವನ್ನು ಪ್ರಕಾಶ ಪಡಿಸಿದರು.

ಪರಂತು ಶ್ರೀಮದಾಚಾರ್ಯರು **ಉತ್ತಮ** ದೇವತಾವತಾರರೂಪರೆಂದು ವಚನಗಳೂ ಉಂಟು. ಇತರ ಸರ್ವ ಮತಗಳನ್ನೂ ಧಿಕ್ಕರಿಸತಕ್ಕ ವಾಕ್ಯಗಳೂ ಉಂಟು. ಆದರೆ ಸ್ವಸ್ವಮತಾಭಿಮಾನದಿಂದ ಜನರುಗಳು ಆ ವಾಕ್ಯಗಳನ್ನು ಕೆಲವು ವೇಳೆ ಗ್ರಂಥಗಳಿಂದಲೇ ತೆಗೆದು ಬಿಡುವರು; ಕೆಲವು ವಚನಗಳನ್ನು ವ್ಯತ್ಯಾಸ ಮಾಡುವರು. ಕೆಲವು ಪ್ರಕ್ಷಿಪ್ತಗಳೆಂದು ಹೇಳುವರು. ಇಂಥ ವಿವಾದವನ್ನು ಪರಿಹರಿಸುವುದು ಅಶಕ್ಯವು. ಹೀಗೆ ನಾನಾ ವಿಧವಾದ ತೊಂದರೆಗಳಿದ್ದರೂ ಪ್ರಸಿದ್ಧವಾದ ಕೆಲವು ಶ್ರುತಿಗಳನ್ನು ಯಾರೂ ಏನೂ ಮಾಡಲಾರರು. ಅವುಗಳ ಅರ್ಥವನ್ನು ನೀವೇ ನೋಡಿರಿ.

(1) ಬಳಿತ್ಥಾ ಸೂಕ್ತದಲ್ಲಿ **ಯದೀಮನುಪ್ರದಿವೋ ಮಧ್ವ ಆಧವೇ ಗುಹಾಸಂತಂ ಮಾತರಿಶ್ವಾ ಮಥಾಯತಿ "** ಎಂದು ಹೇಳಲ್ಪಟ್ಟಿದೆ. ಎಂದರೆ ಜ್ಞಾನಿಶ್ರೇಷ್ಠನಾದ ವಾಯುದೇವತೆಯ ಅವತಾರರೂಪರಾದಂಥ ಮಧ್ವಾಚಾರ್ಯರು ಪರಮಾತ್ಮನೇ ಜಗತ್ಪತಿಯು ಎಂಬ ವಿಷಯದಲ್ಲಿ ಶ್ರುತಿತತಿಗಳನ್ನು ಮಥನ ಮಾಡುತ್ತಾರೆ ಮತ್ತು ದುಸ್ತತ್ವಗಳ ಪ್ರಚಾರದಿಂದ ಗೂಢನಾದ ವಿಷ್ಣುವನ್ನು ಸರ್ವೋತ್ತಮನೆಂದು ಪುನಃ ಪ್ರಕಟಿಸುತ್ತಾರೆ ಎಂದು ಅರ್ಥವು. ಈ ಮಹಿಮೆಯೂ "ಮಾತರಿಶ್ವಾ ಮಧ್ವಃ" ಎಂಬ ನಿರ್ದೇಶವೂ ಅನ್ಯರಿಗೆ ಸಲ್ಲಲಾರದು.

(2) **ಸಪ್ತಸ್ಯಸ್ಯಃ ಋಷಿರ್ವಾಜವಶಾನೋ ವಿದ್ವಾನ್**
**ಮಧ್ವ ಉಜ್ಜಭಾರಾದೃಶೀಕಂ ॥**

ಈ ಶ್ರುತಿಯಲ್ಲಿ **ವಿದ್ವಾನ್ ಮಧ್ವಃ** ಎಂದರೆ ಜ್ಞಾನಿಗಳಾದ ಮಧ್ವಾಚಾರ್ಯರು ಸಮೀಚೀನ ಜ್ಞಾನಾರ್ಥವಾಗಿ ಚತುರ್ವೇದಗಳು, ಮೂಲರಾಮಾಯಣ, ಪುರಾಣೇತಿಹಾಸಗಳು, ಪಂಚರಾತ್ರಾಗಮಗಳೆಂಬ ಸಪ್ತ ಪ್ರಕಾರವಾದ ಶಾಸ್ತ್ರಗಳನ್ನು ಉದ್ಧಾರ ಮಾಡುತ್ತಾರೆ ಎಂದು ಹೇಳಲ್ಪಟ್ಟಿರುವುದು. ಇದರಲ್ಲಿ ಉಕ್ತವಾದ ವ್ಯಾಪಾರವೂ, "ವಿದ್ವಾನ್ ಮಧ್ವಃ" ಎಂಬ ನಿರ್ದೇಶವೂ ಮತ್ತೊಬ್ಬರಿಗೆ ಸಲ್ಲಲಾರದು.

(3) ... .....**ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ ।**

ಸರ್ವೋತ್ತಮನಾದ ವಿಷ್ಣುವಿನ ಪಾದದಲ್ಲಿ ಮಧ್ವಾಚಾರ್ಯರು ಪೂರ್ಣೋತ್ಸಾಹ

ದಿಂದ ಆಸಕ್ತರಾಗಿದ್ದಾರೆ ಎಂದು ಅರ್ಥವು. ವಿಷ್ಣು ಸರ್ವೋತ್ತಮತ್ವ ಜ್ಞಾನ ಪೂರ್ವಕವಾಗಿ ವಿಷ್ಣುವಿನ ಪಾದದಲ್ಲಿ ಆಸಕ್ತರಾದ, ಮಧ್ವನಾಮಧಾರಕರು ಶ್ರೀಮದಾಚಾರ್ಯರೇ ಆಗಿರುವರು.

4. **ಪವಮಾನಮವಸ್ಯವೋ ವಿಪ್ರಮಭಿಪ್ರಗಾಯತ**
**ಸುಷ್ವಾಣಂ ದೇವವೀತಯೇ ॥**

**ಅರ್ಥವು :—** ದೇವತಾರಕ್ಷಣಾರ್ಥವಾಗಿ ಆವಿರ್ಭೂತರಾದ **ಪವಮಾನಂ ವಿಪ್ರಂ** = ವಾಯುಸ್ವರೂಪರಾದ ಬ್ರಾಹ್ಮಣರನ್ನು ಸಂಸಾರ ಭೀತಿಯಿಂದ ರಕ್ಷಣೆಯನ್ನು ಇಚ್ಛಿಸುವವರು ಸ್ತೋತ್ರ ಮಾಡಿರಿ

ಇಲ್ಲಿ ಬ್ರಾಹ್ಮಣತ್ವವನ್ನು ಹೊಂದಿದ ವಾಯುದೇವತ್ವವು, ದೇವತಾ ರಕ್ಷಣಾರ್ಥವಾಗಿ ಅವತರಿಸೋಣವು, ಮತ್ತು ಸಂಸಾರ ಭೀತಿಯಿಂದ ಜನರುಗಳನ್ನು ರಕ್ಷಾ ಮಾಡುವ ಸಾಮರ್ಥ್ಯವು ಈ ಮೂರು ಲಕ್ಷಣಗಳು ಮೋಕ್ಷಪ್ರದವಾದ ಶಾಸ್ತ್ರವನ್ನು ಪ್ರದರ್ಶಿಸಿ ವಿಷ್ಣು ದೇವತೋದ್ದೇಶಕ ಪರಮ ಧರ್ಮಗಳು ಯಥಾವಸ್ಥಿತವಾಗಿ ನಡೆಯುವಂತೆ ಮತವನ್ನು ಸ್ಥಾಪಿಸಿ ಬ್ರಾಹ್ಮಣ ರೂಪದಿಂದ ವಿಜೃಂಭಿಸಿದ ಶ್ರೀಮದಾಚಾರ್ಯರಲ್ಲಿ ಅನ್ವಯಿಸುವುದೇ ಹೊರತು ಅನ್ಯರಲ್ಲಿ ಕೂಡಲಾರದು.

5. **ಮಧ್ವೋ ವೋ ನಾಮ ಮಾರುತಂ ಯಜತ್ರಾಃ**
**ಪ್ರಯಜ್ಞೇಷು ಶವಸಾಮದಂತಿ ॥**

ಎಲೈ ದೇವತೆಗಳಿರಾ ! ನಿಮ್ಮ ಸ್ವಾಮಿಯಾದ ಮಧ್ವನಾಮಕವಾದ ಮರುದ್ರೂಪವನ್ನು ಯಾಜ್ಞಿಕರು ಯಜ್ಞದಲ್ಲಿ ಸುಖದಿಂದ ಸಂತೋಷಪಡಿಸುತ್ತಾರೆ. ಇಲ್ಲಿ ವಾಯುರೂಪರಾದ ಮಧ್ವಾಚಾರ್ಯರೆಂಬ ನಿರ್ದೇಶವು ವಾಯುದೇವರಿಗೆ ಮಧ್ವನಾಮಕ ಒಂದು ಅವತಾರವು ಉಂಟೆಂಬಲ್ಲಿ ಸಾಧಕವಾಗಿರುತ್ತದೆ

ಇನ್ನೂ ಅನೇಕ ಶ್ರುತಿ ಸ್ಮೃತಿಗಳಿರುತ್ತವೆ. ಸಾವಕಾಶವಾಗಿ ಶ್ರೀಮದಾಚಾರ್ಯರ ವಿಭವವನ್ನು ನಿರೂಪಿಸುತ್ತೇವೆ. ಪ್ರಕೃತದಲ್ಲಿ ಗೀತಾ ವಿಷಯದಲ್ಲಿ ನೀವು ಕೇಳಿದ ಪ್ರಶ್ನೆಗೆ ಉತ್ತರ ಬಂತೋ ಇಲ್ಲವೋ ?

**ವಿದ್ಯಾರ್ಥಿಗಳು :—** ಶ್ರೀಮನ್ಮಧ್ವಾಚಾರ್ಯರು ವಾಯುದೇವರಾದುದರಿಂದ ಅವರು ಸರ್ವಜ್ಞರೆಂದು ಸಿದ್ಧವಾಯಿತು. ಮತ್ತು ಅವರು ಮಾಡಿದ ಗ್ರಂಥಗಳು ಪ್ರಾಮಾಣಿಕವಾದುವುಗಳೆಂದು ಸಿದ್ಧವಾಗುವುವು.

17. **ಶ್ರೀ ಶ್ರೀಗಳವರು:—**ನಿಜವೇ ! ಆದರೂ ಒಂದು ಸೂಕ್ಷ್ಮವಿರುವುದು. ದೇವತಾ ಅವತಾರವಾದ ಮಾತ್ರಕ್ಕೆ ಅವರು ಮಾಡಿದ ಗ್ರಂಥಗಳು ಪ್ರಾಮಾಣಿಕವಾದುವುಗಳು ಎಂದು ಏರ್ಪಡುವುದಿಲ್ಲ. ದೇವತೆಯಾದ ಮಹಾದೇವನು ಪಾಶುಪತಾದಿ ದುರಾಗಮಗಳನ್ನು ರಚಿಸಿ ಲೋಕವನ್ನು ಮರುಳು ಮಾಡಿದನೆಂದು ಪ್ರಮಿತವಾಗಿರುವುದು. ವಿಷ್ಣುವಿನ ಅವತಾರರೂಪನಾದ ಬುದ್ಧನು ಸುಳ್ಳು ತತ್ವವನ್ನು ಬರೆದನೆಂದು ಪ್ರಮಿತವಾಗಿರುವುದು. ಹಾಗೆಯೇ ಅದ್ವೈತಾದಿ ಶಾಸ್ತ್ರಗಳನ್ನು

ಮಹಾದೇವರೇ ಮುಂತಾದ ದೇವತೆಗಳು ಅನ್ಯರನ್ನು ನಿಮಿತ್ತ ಮಾಡಿ ಪ್ರವೃತ್ತಿಗೆ ತಂದಿರುವರೆಂದೂ ಪ್ರಮಾಣಗಳಿರುತ್ತವೆ. ಪ್ರಕೃತದಲ್ಲಿ ವಾಯುದೇವತೆಯು ಲೋಕದಲ್ಲಿ ಅವತಾರ ಮಾಡಿ ಸುಳ್ಳು ತತ್ವವನ್ನು ರಚಿಸಿ ಜನರನ್ನು ಹಾಳು ಮಾಡುವನೆಂದು ಎಲ್ಲಿಯೂ ಪ್ರಮಿತವಾಗಿಲ್ಲ. ಇದೂ ಅಲ್ಲದೆ ಶ್ರೀಮದಾಚಾರ್ಯರ ತತ್ವವು ಅತ್ಯಂತ ಶ್ರೇಷ್ಠವೆಂಬಲ್ಲಿ ಮುಖ್ಯವಾದ ಯುಕ್ತಿಯೇನೆಂದರೆ ಅದು ಸರ್ವ ಶ್ರುತಿಗಳಿಗೂ ಸ್ಮೃತಿಗಳಿಗೂ ಸಾತ್ವಿಕ ಪುರಾಣಗಳಿಗೂ ಸಮ್ಮತವಾಗಿರುವುದು. ಲೋಕದಲ್ಲಿ ಅನ್ವಯಿಸಿ ನೋಡಿದರೆ ಹೃದಯಂಗಮವಾಗುವಂತೆ ಅನುಭವಕ್ಕೆ ಬರುವುದು. ತತ್ವಗಳ ಪ್ರಾಶಸ್ತ್ಯವನ್ನು ತಿಳಿಯಬೇಕಾದರೆ ಲೋಕ ವ್ಯವಹಾರವು ಒರೆಗಲ್ಲೆನಿಸುವುದು. ನಮ್ಮ ಸಮಸ್ತ ತತ್ವ ವಿಷಯಕ ಪ್ರಶ್ನೆಗಳಿಗೂ ಸಮಂಜಸವಾದ ಉತ್ತರವನ್ನು ಕೊಡುವ ತತ್ವವನ್ನು ಸುಳ್ಳೆಂದು ಅಪಲಪಿಸುವುದು ಹೇಗೆ ಸಾಧ್ಯವಾಗುವುದು ?

**ವಿದ್ಯಾರ್ಥಿಗಳು :—** ಹೌದು ಮಹಾ ಸ್ವಾಮೀ ! ಅದ್ವೈತಮತದಲ್ಲಿ ವ್ಯವಹಾರಾದಿಗಳೂ ಒಂದೂ ಇಲ್ಲ ಎಂಬ ಒಂದೇ ಉತ್ತರವೇ ಹೊರತು ತತ್ವದ ಆನುಗುಣ್ಯ ಚಿಂತೆಗೇ ಅವಕಾಶವಿರುವುದಿಲ್ಲ.

18. **ಶ್ರೀ ಶ್ರೀಗಳವರು :—** ತತ್ವವೂ ಸುಳ್ಳೆಂದು ಅವರ ಮಾತಿನಿಂದಲೇ ಪ್ರಾಪ್ತವಾಗುವುದರಿಂದ ಮುಮುಕ್ಷುಗಳು ವಿಚಾರ ಮಾಡಿ ಬೇರೆ ತತ್ವವನ್ನು ಅವಲಂಬಿಸುವುದು ಉಚಿತವು. ಸಮೀಚೀನ ಶಾಸ್ತ್ರಗಳು ವೇದಾದಿಗಳೆಂದು ಶ್ರೀ ಕೃಷ್ಣನು ಹೇಳಿದನು. ಮತ್ತು ವೇದತಾತ್ಪರ್ಯಕ್ಕೆ ವಿಷಯವಾದ ವಸ್ತುವು ತಾನೇ ಎಂದು ಹೇಳಿದನು. ಇದರಿಂದ ವಿಷ್ಣುವಿನಲ್ಲೇ ಸರ್ವಾಗಮಗಳಿಗೂ ತಾತ್ಪರ್ಯವಿರುವುದೆಂದು ಸಿದ್ಧವಾಯಿತು. ಮಹಾಭಾರತದಲ್ಲಿ ವಿಷ್ಣು ಸಹಸ್ರನಾಮದ ಉಪಸಂಹಾರ ಶ್ಲೋಕಗಳ ಮಧ್ಯದಲ್ಲಿ ಇದನ್ನೇ ಸದಾಗಮ ಲಕ್ಷಣವಾಗಿ ಭೀಷ್ಮಾಚಾರ್ಯರು ಪ್ರತಿಪಾದಿಸಿರುವರು.

**ಏಷ ನಿಷ್ಕಂಟಕಃ ಪಂಥಾಃ ಯತ್ರ ಸಂಪೂಜ್ಯತೇ ಹರಿಃ ।**
**ಕುಪಥಂ ತಂ ವಿಜಾನೀಯಾದ್ಗೋವಿಂದರಹಿತಾಗಮಂ ॥**

**ಅರ್ಥವು:—** ಯಾವ ಗ್ರಂಥದಲ್ಲಿ ಶ್ರೀ ಹರಿಯೇ ಸರ್ವೋತ್ತಮ ಪೂಜ್ಯನೆಂದು ಪ್ರತಿಪಾದಿಸಲ್ಪಟ್ಟಿರುವುದೋ ಅದೇ ಅನಾಯಾಸದಿಂದ ಮೋಕ್ಷವನ್ನು ಹೊಂದಿಸತಕ್ಕ ಶಾಸ್ತ್ರವು. ಗೋವಿಂದನನ್ನು ಪ್ರತಿಪಾದಿಸದ ಆಗಮವು ಎಂದರೆ ಅನ್ಯ ದೇವತೆಗಳ ಆಧಿಕ್ಯವನ್ನು ಪ್ರತಿಪಾದಿಸುವ ಅಥವಾ ನಿರ್ಗುಣ ಬ್ರಹ್ಮಾದಿಗಳನ್ನು ಪ್ರತಿಪಾದಿಸುವ ಆಗಮಗಳು ದುಷ್ಟ ಶಾಸ್ತ್ರಗಳೆನ್ನಿಸುವುವು.

ಇದರಿಂದ ವಿಷ್ಣು ಸರ್ವೋತ್ತಮತ್ವ ಪ್ರತಿಪಾದಕ ಗ್ರಂಥಗಳೇ ಸದಾಗಮಗಳು, ತದ್ಭಿನ್ನವಾದ ಸಕಲ ಗ್ರಂಥಗಳೂ ದುರಾಗಮಗಳು ಎಂದು ನಿಶ್ಚಿತವಾಗುವುದು. ಈ ಕಾರಣದಿಂದಲೇ ಶ್ರೀಮನ್ಮಧ್ವಶಾಸ್ತ್ರವು ಸದಾಗಮವು ತದನ್ಯ ಗ್ರಂಥಗಳೆಲ್ಲಾ ಸತ್ಪರಂಪರೆಗೆ ಸೇರದ ದುರಾಗಮಗಳೆಂದು ನಾವು ನಿರೂಪಿಸಿದೆವು.

---

# IX.

# ವಿಷ್ಣುವೇ ಸರ್ವವೇದ ಪ್ರತಿಪಾದ್ಯನು.

19-8-1930 ರಲ್ಲಿ ( ಚಿತ್ರರಂಜನ, ಮೈಸೂರು. )



**ಸಭಿಕರು— ಧರ್ಮಾಧಿಕಾರಿಗಳು, ವಿದ್ವಾಂಸರು, ಮತ್ತು ವಿದ್ಯಾರ್ಥಿಗಳು.**

1. **ಪ್ರಶ್ನೆ:— ವಿದ್ಯಾರ್ಥಿಗಳು:—** ಸ್ವಾಮೀ! ದಿವ್ಯ ಭೋಜನಾಂತ್ಯದಲ್ಲಿ ಮೊಸರನ್ನವನ್ನು ಬಯಸುವ ಬ್ರಾಹ್ಮಣನಂತೆ ನಮ್ಮ ಮನಸ್ಸು ತಮ್ಮ ಶ್ಲೋಕದ ಅಂತ್ಯಪಾದವಾದ "**ಅಖಿಲಾಮ್ನಾಯೈಕವೇದ್ಯೋ ಹರಿಃ**" ಎಂಬ ವಿಷಯದಲ್ಲಿ ವಿಶೇಷ ನಿರೂಪಣವನ್ನು ಶ್ರವಣ ಮಾಡಬೇಕೆಂದು ಇಚ್ಛಿಸುತ್ತಿರುವುದು.

**ಉತ್ತರ:— ಶ್ರೀ ಶ್ರೀಗಳವರು :—** "**ಅಖಿಲಾಮ್ನಾಯೈಕವೇದ್ಯೋ ಹರಿಃ**" ಎಂಬ ವಾಕ್ಯಕ್ಕೆ ಎರಡು ಅರ್ಥಗಳು ಇರುವುವು. 1. ಶ್ರೀಹರಿಯು ಶಾಸ್ತ್ರೈಕಗಮ್ಯನು ಎಂದು ಒಂದು ಅರ್ಥವು. ಎಂದರೆ ಕೇವಲ ಪ್ರತ್ಯಕ್ಷದಿಂದಲಾಗಲೀ ಕೇವಲ ಅನುಮಾನದಿಂದಲಾಗಲೀ ಮುಮುಕ್ಷುವು ಪ್ರಥಮತಃ ಪರಮಾತ್ಮನ ಮಹಿಮೆಯನ್ನೂ, ದರ್ಶನ ಪ್ರಕಾರವನ್ನೂ ನಿರ್ಣಯಿಸಲಾರನು. ಪರಮಾತ್ಮನನ್ನು ಶಾಸ್ತ್ರದಿಂದಲೇ ತಿಳಿಯಬೇಕು ಎಂದು ತಾತ್ಪರ್ಯವು. ಈ ವಿಷಯವು ಪೂರ್ವದಲ್ಲಿಯೇ ವಿಸ್ತಾರವಾಗಿ ಚರ್ಚಿಸಲ್ಪಟ್ಟಿರುತ್ತದೆ. 2. ಸರ್ವಾಗಮಗಳಿಂದಲೂ ಮುಖ್ಯತಃ ಎಂದರೆ ಪರಮ ಮುಖ್ಯವೃತ್ತಿಯಿಂದ ಪರಮಾತ್ಮನೇ ಪ್ರತಿಪಾದ್ಯನು ಎಂದು ಎರಡನೆಯ ಅರ್ಥವು. "**ಸರ್ವೇ ವೇದಾ ಯತ್ಪದಮಾಮನಂತಿ**" ಇತ್ಯಾದಿ ಶ್ರುತಿಗಳಲ್ಲಿ ಈ ಪ್ರಮೇಯವು ನಿರೂಪಿತವಾಗಿರುವುದು. ಸರ್ವ ವೇದಗಳು ಎಂದರೆ ವೇದದಲ್ಲಿರುವ ಸರ್ವ ವಾಕ್ಯಗಳೂ, ಪದಗಳೂ, ವರ್ಣಗಳೂ, ಸ್ವರಗಳೂ ಸಹ ಪರಮಾತ್ಮನ ಅಗಣಿತ ಗುಣಗಳನ್ನು ಬೋಧಿಸುವುವು. ವೇದವು ಮುಖ್ಯವಾಗಿ ಪರಮಾತ್ಮಸ್ತುತಿಪರವಾದ ಸ್ತೋತ್ರಮಾಲೆಯೇ. ಈ ವಿಷಯವನ್ನು ಈ ದಿವಸ ನಿರೂಪಿಸಬೇಕಾಗಿರುವುದು.

2. **ಪ್ರಶ್ನೆ :—** ಸ್ವಾಮೀ! ಸರ್ವ ವೇದಗಳೂ ಪರಮಾತ್ಮನನ್ನೇ ಬೋಧಿಸುವುವು ಎಂಬಲ್ಲಿ ಯಾವ ಗೀತಾ ವಾಕ್ಯವು ಆಧಾರವಾಗಿರುವುದು ?

**ಉತ್ತರ :— ಶ್ರೀ ಶ್ರೀಗಳವರು :—** ಕೇಳಿಲ್ಲವೇ ?

**ವೇದೈಶ್ಚ ಸರ್ವೈರಹಮೇವ ವೇದ್ಯೋ
ವೇದಾಂತಕೃದ್ವೇದವಿದೇವ ಚಾಹಂ ||**

—(15. 15.)

**ಅರ್ಥವು :**— ಸರ್ವ ವೇದಗಳಿಂದಲೂ ನಾನೇ ಪ್ರತಿಪಾದ್ಯನು, ವೇದಾರ್ಥ ನಿರ್ಣಾಯಕವಾದ ಬ್ರಹ್ಮಸೂತ್ರಗಳನ್ನು ರಚಿಸಿದವನೂ ನಾನೇ, ಸರ್ವ ವೇದಾರ್ಥ ಗಳನ್ನೂ ನಾನೇ ತಿಳಿದವನು.

ಈ ಶ್ಲೋಕಾರ್ಥ ಪರ್ಯಾಲೋಚನೆಯಿಂದ ಎರಡು ಮೂರು ವಿಷಯಗಳು ತಿಳಿದು ಬರುವುವು. 1. ಸರ್ವ ವೇದಗಳಿಗೂ ಎಂದರೆ ತತ್ವಮಸಿ ಅಹಂ ಬ್ರಹ್ಮಾಸ್ಮಿ ಮುಂತಾದ ಉಪನಿಷತ್ತುಗಳಿಂದ ಸಹಿತವಾದ ಸರ್ವ ವೇದಗಳಿಗೂ ಶ್ರೀ ಕೃಷ್ಣನು ಪುರುಷೋತ್ತಮನು ಎಂದು ಪ್ರತಿಪಾದಿಸುವುದರಲ್ಲಿಯೇ ತಾತ್ಪರ್ಯವಿರುತ್ತದೆ. ಆದುದರಿಂದ ಪುರುಷೋತ್ತಮನೆಂದು ಪ್ರಸಿದ್ಧನಾದ ಪರಬ್ರಹ್ಮನು ಸರ್ವ ವೇದ ಪ್ರತಿ ಪಾದ್ಯನು ಎಂದರೆ ಸರ್ವ ವೇದಗಳಿಂದಲೂ ಜ್ಞೇಯನು. ಅವನು ಅಜ್ಞೇಯನಾದ ನಿರ್ಗುಣ ವಸ್ತುವಲ್ಲ. " ಸರ್ವೈಃ ವೇದೈಃ ಅಹಂ ವೇದ್ಯ ಏವ " ಎಂಬ ಯೋಜನಾ ಪ್ರಕಾರದಿಂದ ಈ ಅರ್ಥವು ಸಿದ್ಧವಾಗುವುದು. 2 ಸರ್ವ ವೇದಗಳಿಂದ ವಿಷ್ಣುವೇ ಜ್ಞೇಯನಾದುದರಿಂದ ತತ್ವಮಸಿ, ಅಹಂ ಬ್ರಹ್ಮಾಸ್ಮಿ, ನೇಹ ನಾನಾಸ್ತಿ ಕಿಂಚನ ಮುಂತಾದ ವಾಕ್ಯಗಳಿಂದಲೂ ಪುರುಷೋತ್ತಮನೇ ಜ್ಞೇಯನು; ಬ್ರಹ್ಮೈಕ್ಯ ಪಿಶಾಚಿಗಾಗಲೀ, ಮಿಥ್ಯಾವಾದವೆಂಬ ಮಂಕು ಬೂದಿಗಾಗಲೀ ವೇದವೆಂಬ ದೇವ ಮಂದಿರದಲ್ಲಿ ಪ್ರವೇಶವು ಸರ್ವಥಾ ಇಲ್ಲವೆಂದೂ ನಿಶ್ಚಿತವಾಗುವುದು. 3. ಈ ಪ್ರಕಾರವಾಗಿ ಪರಮಾತ್ಮನು ಜ್ಞೇಯನು ಎಂದು ಸಿದ್ಧವಾಗುವುದಲ್ಲದೆ ಈ ವಾಕ್ಯ ಗಳಿಂದ ವೇದದ ಪ್ರತಿಯೊಂದು ವರ್ಣದಿಂದಲೂ ಪರಮಾತ್ಮನೇ ಜ್ಞೇಯನು ಎಂದು ಸಿದ್ಧವಾಗುವುದು. ವೇದಾಂತ ಸೂತ್ರಗಳಲ್ಲಿಯೂ ಪರಮಾತ್ಮನೇ ಸರ್ವ ವೇದಗಳಲ್ಲಿ ಪ್ರತಿಪಾದ್ಯನು ಎಂದು ತಿಳಿಸುವುದಕ್ಕಾಗಿಯೇ ಶ್ರೀ ಕೃಷ್ಣನು ನಾನೇ ವೇದಾಂತ ಸೂತ್ರಗಳನ್ನು ಮಾಡಿದವನು ಮತ್ತು ವೇದಾರ್ಥಗಳನ್ನು ತಿಳಿದವನು ಎಂದು ಹೇಳಿದನು.

3. **ಪ್ರಶ್ನೆ :**— ಸ್ವಾಮೀ ! ಸರ್ವ ವೇದಗಳೂ ಶ್ರೀವಿಷ್ಣುವನ್ನೇ ಪ್ರತಿಪಾದಿ ಸುವುವು ಎಂದು ಹೇಳಿದರೆ ಏನು ತಾತ್ಪರ್ಯವು ? ವೇದದ ಒಂದೊಂದು ಪದವೂ ಪರಮಾತ್ಮನನ್ನು ಬೋಧಿಸುವುದು ಎಂದು ಅರ್ಥವೇ ?

**ಶ್ರೀ ಶ್ರೀಗಳವರು:**— ಇದು ಶ್ರೀ ಕೃಷ್ಣನ ಭಾವವು. ಸಕಲ ವೇದಗಳೂ ಎರಡು ಪ್ರಕಾರದಿಂದ ಪರಮಾತ್ಮನನ್ನು ಬೋಧಿಸುವುವು. ವೇದದ ಪ್ರತಿಯೊಂದು ಪದವೂ ಪರಮಾತ್ಮನ ಗುಣಗಳನ್ನು ಬೋಧಿಸುವುದು ಎಂಬುದು ಒಂದು ಪಕ್ಷವು. ಈ ವಿವಕ್ಷೆಯಿಂದ ಅಗ್ನಿಮೀಳೇ ಪುರೋಹಿತಂ ಇತ್ಯಾದಿ ವೇದವಾಕ್ಯಗಳಲ್ಲಿ ಅಗ್ನಿಂ ಎಂದರೆ ಬ್ರಹ್ಮಾದಿಗಳನ್ನು ಆಳುವ ವಿಷ್ಣುವು ಎಂದರ್ಥವು; ಈಳೇ ಎಂದರೆ ಜಗ ದ್ವಂದ್ಯನಾದ ವಿಷ್ಣುವು ಎಂದರ್ಥವು; ಪುರೋಹಿತಂ ಎಂದರೆ ಸಕಲ ಜೀವರುಗಳ

ಲ್ಲಿಯೂ ಅಗ್ರಗಣ್ಯನಾದ ವಿಷ್ಣುವು ಎಂದರ್ಥವು. ಹೀಗೆಯೇ ವರ್ಣಗಳೂ, ಪ್ರತ್ಯಯಗಳೂ ಕೂಡ ಪರಮಾತ್ಮನ ಒಂದೊಂದು ಅಥವಾ ಅನೇಕ ಗುಣಗಳನ್ನು ಬೋಧಿಸುವುವು. ಇಂಥ ಪದ ಸಮನ್ವಯ ಪಕ್ಷದಲ್ಲಿ ಸಕಲ ವೇದಗಳೂ "ವಿಶ್ವಂ ವಿಷ್ಣುರ್ವಷಟ್ಕಾರೋ" ಎಂಬ ನಾಮಾವಳಿಯಂತೆ ಪರಮಾತ್ಮನ ಸ್ತುತಿರೂಪವಾದ ನಾಮ ಸಮುದಾಯವಾಗಿರುತ್ತದೆ.

ವಾಕ್ಯ ಸಮನ್ವಯ ಪಕ್ಷದಲ್ಲಿ ಸಕಲ ವಾಕ್ಯಗಳಿಗೂ ವಿಷ್ಣು ಸರ್ವೋತ್ತಮತ್ವ ವನ್ನೇ ಬೋಧಿಸುವುದರಲ್ಲಿ ಮುಖ್ಯ ತಾತ್ಪರ್ಯವಿರುತ್ತದೆ. ಶ್ರೀ ಕೃಷ್ಣನು ಸಂಕ್ಷೇಪ ವಾಗಿ ಈ ವಿಷಯವನ್ನು ಗೀತೆಯಲ್ಲಿ ಸೂಚಿಸಿರುವನು. ಭಾಗವತದಲ್ಲಿ ಉದ್ಧವನಿಗೆ ಉಪದೇಶ ಮಾಡುವಾಗ ಸ್ಪಷ್ಟವಾಗಿ ವಿಸ್ತರಿಸಿರುವನು :—

**ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯಾಪೋಹ್ಯ ಏವ ಚ ।**
**ಏತಾವಾನ್ ಸರ್ವವೇದಾರ್ಥಃ .... .... .... ॥**

**ಅರ್ಥವು :—** ಎಲೈ ಉದ್ಧವನೇ ! ಅಹರಹಃ ಸಂಧ್ಯಾಮುಪಾಸೀತ ಇವೇ ಮುಂತಾದ ವಿಧಿಪರವಾದ ಸಕಲ ವೇದವೂ ನನ್ನ ಪ್ರೀತ್ಯರ್ಥವಾಗಿಯೇ ಕರ್ಮವನ್ನು ವಿಧಾನ ಮಾಡುವುದರಿಂದ ಆ ವೇದ ಭಾಗವೂ ನನ್ನನ್ನೇ ಪ್ರತಿಪಾದಿಸುವುದು. ಇಂದ್ರಾದಿ ನಾಮಗಳನ್ನೂ ಸತ್ಯಜ್ಞಾನಾದಿ ಧರ್ಮಗಳನ್ನೂ ಬೋಧಿಸುವ ವೇದ ಭಾಗವು ಮುಖ್ಯವಾಗಿ ನನ್ನ ಹೆಸರುಗಳನ್ನೂ, ನನ್ನ ಗುಣಗಳನ್ನೂ ವರ್ಣಿಸುವು ದಾದುದರಿಂದ ಆ ವೇದಭಾಗವೂ ನನ್ನನ್ನೇ ಪ್ರತಿಪಾದಿಸುವುದು. ವಿವಿಧ ರೂಪ ಗಳನ್ನು ಬೋಧಿಸುವ ವೇದಭಾಗವೂ ಸಹ ನನ್ನ ವಾಸುದೇವಾದಿ ಅನಂತ ರೂಪ ಗಳನ್ನೇ ವರ್ಣಿಸುವುದರಿಂದ ನನ್ನನ್ನೇ ಪ್ರತಿಪಾದಿಸುವುದು. "ನ ಸುರಾಂ ಪಿಬೇತ್" ಇತ್ಯಾದಿ ನಿಷೇಧಗಳನ್ನು ಬೋಧಿಸುವ ವೇದಭಾಗವೂ ಕೂಡ ನನ್ನ ಪ್ರೀತ್ಯುದ್ದೇಶ ದಿಂದ ನನಗೆ ಅಪ್ರಿಯವಾದ ಆಚರಣೆಗಳನ್ನು ಪರಿತ್ಯಜಿಸಬೇಕೆಂದು ಬೋಧಿಸುವುದ ರಿಂದ ಆ ವೇದಭಾಗವೂ ಕೂಡ ನನ್ನನ್ನೇ ಪ್ರತಿಪಾದಿಸುವುದು. ಈ ರೀತಿಯಾಗಿ ನನ್ನ ವಿಷಯಕವಾದ ಉಪಪಾದನೆಯೇ ಸರ್ವ ವೇದಗಳಿಗೂ ತಾತ್ಪರ್ಯವಿಷಯೀ ಭೂತವಾದ ನಿಶ್ಚಯವು.

ಈ ರೀತಿಯಾಗಿ ಉಭಯವಿಧದಲ್ಲಿಯೂ ಪರಮಾತ್ಮನೇ ಸರ್ವ ವೇದ ಪ್ರತಿ ಪಾದ್ಯನು.

4. **ಪ್ರಶ್ನೆ :—** ಸ್ವಾಮೀ ! ಹಾಗಾದರೆ ವೇದದ ಪದಗಳಿಗೆ ಅರ್ಥವನ್ನು ಮಾಡುವಾಗ ಅಗ್ನಿ ಮುಂತಾದ ಪದಗಳಿಂದ ಪ್ರತ್ಯಕ್ಷ ಸಿದ್ಧವಾದ ಅಗ್ನಿಯನ್ನಾಗಲೀ, ಅಗ್ನಿದೇವತೆಯನ್ನಾಗಲೀ ಸರ್ವಥಾ ತೆಗೆದುಕೊಳ್ಳಬಾರದೋ ?

**ಉತ್ತರ :— ಶ್ರೀ ಶ್ರೀಗಳವರು :—** ಸರ್ವಥಾ ತೆಗೆದುಕೊಳ್ಳಬಾರದೆಂಬ ನಿರ್ಬಂಧವು ಇರುವುದಿಲ್ಲ. ಅಗ್ನಿಯೆಂದರೆ ಅಗ್ನಿಯಲ್ಲಿ ಅಂತರ್ಗತನಾದ ಪರಮಾ ತ್ಮನು ಎಂದರ್ಥವಾಗುವುದು. ವೇದದಲ್ಲಿ ಅಗ್ನಿ, ಹಿಮ, ಘಟ, ಮುಂತಾದ ಪದ

ಗಳಿಂದ ಪರಮಾತ್ಮನೇ ಪ್ರಧಾನವಾಚ್ಯನು. ಆದರೆ ಅಗ್ನಿ, ಹಿಮ, ಘಟ ಮುಂತಾದ ಪದಗಳಿಂದ ಅಜ್ಞರ ಹೃದಯದಲ್ಲಿ ಶೀಘ್ರವಾಗಿ ಉಪಸ್ಥಾಪಿತವಾಗುವ ಅಗ್ನಿಯೇ ಮುಂತಾದ ಜಡ ಪದಾರ್ಥಗಳೂ ಅರ್ಥವಾಗುವುವು. ಅಂಥ ಸಮಯದಲ್ಲಿ ಅಗ್ನಿ, ಹಿಮ, ಘಟ ಮುಂತಾದ ಪದಗಳನ್ನು ಅಗ್ನ್ಯಂತರ್ಗತನಾದ ಬ್ರಹ್ಮಾದಿಪತಿಯಾದ ಪರಮಾತ್ಮನು, ನಿರ್ದುಷ್ಟ ಜ್ಞಾನಾತ್ಮಕನಾದ ಹಿಮಾಂತರ್ಗತ ಪರಮಾತ್ಮನು, ಘಟಾಂತರ್ಗತನಾದ ಜಗಚ್ಚೇಷ್ಟಕನಾದ ಪರಮಾತ್ಮನು ಇತ್ಯಾದಿ ರೀತಿಯಾಗಿ ವಿಭೂತಿ ರೂಪಗಳ ಸ್ತುತಿಪರವಾಗಿ ತಿಳಿಯಬೇಕು. ಸಮಾಕರ್ಷಾತ್, ಸಾಕ್ಷಾದಪ್ಯವಿರೋಧಂ ಜೈಮಿನಿಃ, ಅಭಿವ್ಯಕ್ತೇರಿತ್ಯಾಶ್ಮರಥ್ಯಃ ಇತ್ಯಾದಿ ಬ್ರಹ್ಮಸೂತ್ರಗಳಲ್ಲಿ ಉಕ್ತ ವಿಷಯವೆಲ್ಲವೂ ನಿರ್ಣೀತವಾಗಿರುವುದು ಇದು ವಿಶೇಷವಾದ ವೇದವಿಚಾರದಿಂದ ತಿಳಿಯತಕ್ಕ ಸೂಕ್ಷ್ಮ ವಿಷಯವು. ಆದುದರಿಂದಲೇ ಶ್ರೀ ಕೃಷ್ಣನು ಜ್ಞಾತವ್ಯ ತತ್ವವಿಚಾರವನ್ನು ಸಾಮಾನ್ಯಜ್ಞಾನ ವಿಜ್ಞಾನಗಳೆಂದು ಎರಡು ವಿಭಾಗ ಮಾಡಿ ಪರಮಾತ್ಮನ ಸೃಷ್ಟಿಕರ್ತೃತ್ವ, ಸ್ಥಿತಿಕರ್ತೃತ್ವ, ಸಂಹಾರಕರ್ತೃತ್ವಾದಿ ಮಹಿಮೆಗಳನ್ನು ಸಾಮಾನ್ಯ ಜ್ಞಾನದಲ್ಲಿ ಅಂತರ್ಭಾವವನ್ನು ಹೊಂದಿಸಿ, ಇನ್ನೂ ಉತ್ತಮಾಧಿಕಾರಿಗಮ್ಯವಾದ ವಿಶೇಷ ಸ್ವರೂಪ ಜ್ಞಾನವನ್ನೂ ಪರಮಾತ್ಮನ ವಿಭೂತಿ ರೂಪಗಳ ಮಹಿಮೆಯನ್ನೂ ದಶಮಾಧ್ಯಾಯದಲ್ಲಿ ವಿವರಿಸಿದನು. ವೇದದ ಪದಗಳು ಇತರ ವಸ್ತುಗಳನ್ನೂ ಬೋಧಿಸುವುವು. ಆದರೆ ಪರಮಮುಖ್ಯವಾಗಿ ಪರಮಾತ್ಮನನ್ನು ಬೋಧಿಸುವುವು. ಹಾಗೆಯೇ ಅಪ್ರಧಾನವಾಗಿ ದೇವತಾದಿಗಳನ್ನೂ, ನಂತರ ಯಜ್ಞಾದಿ ಕರ್ಮಗಳನ್ನೂ ಬೋಧಿಸುವುವು. ಶ್ರೀ ಕೃಷ್ಣನೂ ಈ ವಿಷಯವನ್ನು ಸೂಚಿಸಿರುತ್ತಾನೆ :—

(1) **ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥**
—(2. 42–44.)

ವೇದವು ಕರ್ಮ ಸ್ವರ್ಗಾದಿಗಳನ್ನೇ ಸಾಧನ ಫಲರೂಪಗಳಾಗಿ ಪ್ರತಿಪಾದಿಸುವುದೆಂದು ತಿಳಿದ, ವೇದದ ಆಪಾತಾರ್ಥದಲ್ಲಿ, ಆಸಕ್ತರಾದ; (ಎಂದರೆ ವೇದದ ಮುಖ್ಯ ತಾತ್ಪರ್ಯವನ್ನು ತಿಳಿಯದ) ಅಜ್ಞರಿಗೆ ಮೋಕ್ಷಜನಕವಾದ ಅಪರೋಕ್ಷ ಜ್ಞಾನಕಾರಣವಾನ ನಿರ್ಣೀತ ತತ್ವನಿಶ್ಚಯವು ಉಂಟಾಗುವುದಿಲ್ಲವೆಂದು ತಾತ್ಪರ್ಯವು.

5. ಇದರಿಂದ ವಿಧಿನಿಷೇಧಪರವಾದ ಮತ್ತು ದೇವತಾ ಪ್ರತಿಪಾದಕವಾದ ವೇದಭಾಗಗಳಿಗೂ ಕೂಡ ಮೋಕ್ಷಜನಕವಾದ ಅಪರೋಕ್ಷ ಜ್ಞಾನಕಾರಣವಾದ ಉಪದೇಶ ಮಾಡುವುದರಲ್ಲಿಯೇ ತಾತ್ಪರ್ಯವಿರುವುದೇ ಹೊರತು ಸ್ವತಂತ್ರವಾಗಿ ಕರ್ಮವನ್ನೂ, ದೇವತೆಗಳನ್ನೂ, ಸ್ವರ್ಗಾದಿ ಫಲಗಳನ್ನೂ ವರ್ಣಿಸುವುದರಲ್ಲಿ

ತಾತ್ಪರ್ಯವಿರುವುದಿಲ್ಲ ಎಂದು ಸಿದ್ಧವಾಗುವುದು. ಸಕಲ ವೇದಗಳೂ ಮೋಕ್ಷ ಜನಕವಾದ ಉಪದೇಶವನ್ನು ಮಾಡುವುವು ಎಂದ ಮೇಲೆ ಸಕಲ ವೇದಗಳೂ ವಿಷ್ಣು ಸರ್ವೋತ್ತಮತ್ವವನ್ನೂ, ವಿಷ್ಣುವಿನ ಗುಣಗಳನ್ನೂ ವಿಷ್ಣುಪ್ರೀತಿಕರವೆಂದು ಸಾತ್ವಿಕಕರ್ಮಗಳನ್ನೂ, ವಿಷ್ಣುದಾಸರೆಂದು ದೇವತೆಗಳನ್ನೂ, ವಿಷ್ಣುವಿರೋಧಿ ಯಾದುದರಿಂದ ತ್ಯಾಜ್ಯವೆಂದು ತೋರಿಸುವುದಕ್ಕಾಗಿ ನಿಷೇಧ ಮಾಡಿ ಅಭಕ್ಷ್ಯಭಕ್ಷ ಣಾದಿ ದುಷ್ಕರ್ಮಗಳನ್ನೂ ಪ್ರತಿಪಾದಿಸುವುವು ಎಂದು ಸಿದ್ಧವಾಗುವುದು. ಈ ರೀತಿಯಾಗಿ ವಿಚಾರ ಮಾಡಿದರೆ ಕರ್ಮಾದಿಗಳನ್ನು ಪ್ರತಿಪಾದಿಸುವ ವೇದಭಾಗವೂ ಪರಮಾತ್ಮನನ್ನೇ ಮುಖ್ಯವಾಗಿ ಪ್ರತಿಪಾದಿಸಿದಂತೆಯೇ ಆಯಿತು. ಯಾತಕ್ಕೆಂದರೆ ಪರಮಾತ್ಮನ ಪ್ರೀತ್ಯರ್ಥವಾಗಿ ಕರ್ಮ ಮಾಡಬೇಕೆಂದು ವಿಧಿಸುವ ವೇದವು ಪರ ಮಾತ್ಮನ ಉತ್ಕರ್ಷವನ್ನೇ ಸಾಧಿಸಿದಂತಾಯಿತು. ಹಾಗೆಯೇ ದೇವತೆಗಳನ್ನು ಪ್ರತಿಪಾದಿಸುವ ವೇದಭಾಗವೂ ಪರಮಾತ್ಮನ ಸೇವಕರನ್ನು ತಿಳಿಯಬೇಕೆಂದು ವಿಧಿಸುವುದರ ಮೂಲಕ ಸ್ವಾಮಿಯಾದ ಪರಮಾತ್ಮನ ಉತ್ಕರ್ಷವನ್ನೇ ಸಾಧಿಸಿ ದಂತಾಯಿತು.

**ವಿದ್ಯಾರ್ಥಿಗಳು :—** ಸ್ವಾಮೀ ! ಹಾಗಾದರೆ ಸರ್ವ ವೇದಗಳಿಗೂ ಮುಖ್ಯ ತಾತ್ಪರ್ಯವಿಷಯನಾದವನು ಶ್ರೀ ಪರಮಾತ್ಮನೇ ಎಂದು ಹೇಳಿದಂತಾಯಿತು.

**ಶ್ರೀ ಶ್ರೀಗಳವರು :—** ಹೌದು ! ವಾಕ್ಯಸಮನ್ವಯ ಪಕ್ಷದಲ್ಲಿ ಈ ಪ್ರಕಾರ ದಿಂದಲೇ ಪರಮಾತ್ಮನಿಗೆ ನಿಖಿಲವೇದ ಪ್ರತಿಪಾದ್ಯತ್ವವು ಸಂಭವಿಸುವುದು.

6. **ವಿದ್ಯಾರ್ಥಿಗಳು :—** ಸ್ವಾಮೀ ! ಇನ್ನು ಶಾಸ್ತ್ರದಲ್ಲಿರುವ ಸರ್ವ ಪದ ಗಳಿಂದಲೂ ಪರಮಾತ್ಮನ ಅನಂತ ವಿಭೂತಿ ರೂಪಗಳನ್ನು ತಿಳಿಯಬೇಕೆಂದು ಹೇಳಿ ದುದಕ್ಕೆ ಗೀತೆಯಲ್ಲಿ ಆಧಾರವೇನು ?

**ಉತ್ತರ:— ಶ್ರೀ ಶ್ರೀಗಳವರು:—** ಸಪ್ತಮಾಧ್ಯಾಯ, ನವಮಾಧ್ಯಾಯ, ದಶಮಾಧ್ಯಾಯಗಳಲ್ಲಿ ತನ್ನಾಮ, ತದ್ರೂಪ, ತತ್ಕ್ರಿಯೆಗಳನ್ನನುಸರಿಸಿ ಸರ್ವ ಪದಾರ್ಥಗಳಲ್ಲಿ ಪರಮಾತ್ಮನು ಇರುವನು; ಆದರೂ ಆ ಪದಾರ್ಥ ಧರ್ಮಗಳಿಗಿಂತ ವಿಲಕ್ಷಣವಾದ ವಿಶಿಷ್ಟ ಗುಣಗಳಿಂದ ಪೂರ್ಣನಾಗಿ ಅಲ್ಲಿ ವಾಸ ಮಾಡುವನು ಎಂದು ತೋರಿಸುವುದಕ್ಕಾಗಿ ಶ್ರೀ ಕೃಷ್ಣನು ಶೃಂಗಗ್ರಾಹಿಕತಯಾ ಕೆಲವು ವೈದಿಕಪದ ಬೋಧ್ಯವಾದ ವಿಭೂತಿರೂಪ ವಿಶೇಷಗಳನ್ನು ನಿರ್ದೇಶ ಮಾಡಿ ವರ್ಣಿಸಿರುವನು. ಇಂಥ ರೂಪಗಳು ಅನಂತವಾಗಿರುವುವು. ಅನಂತ ಬ್ರಹ್ಮಕಲ್ಪಗಳಲ್ಲಿಯೂ ಅನಂತ ಜೀವರುಗಳೂ ಪ್ರತ್ಯೇಕ ಪ್ರತ್ಯೇಕವಾಗಿ ಗಣನೆ ಮಾಡಿದರೂ ಪರಮಾತ್ಮನ ರೂಪ ಸಂಖ್ಯೆಯನ್ನು ಎಣಿಸಿ ಮುಗಿಸುವುದು ಅಸಾಧ್ಯವೆಂದು ಶ್ರೀ ಕೃಷ್ಣನು ತಾನೇ ಹೇಳಿ ಬಿಟ್ಟಿರುತ್ತಾನೆ :—

(1) **ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತಿನಾಂ ಪರಂತಪ ।**
**ಏಷತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥**

**ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥**
—(10. 40-41.)

"ಎಲೈ ಅರ್ಜುನನೇ! ನನ್ನ ಅತ್ಯದ್ಭುತವಾದ ವಿಭೂತಿರೂಪಗಳಿಗೆ ಪರ್ಯವಸಾನವು ಇಲ್ಲ. ಈಗ ಆತ್ಮರೂಪವೇ ಮೊದಲುಗೊಂಡು ನನ್ನಿಂದ ಮಾಡಲ್ಪಟ್ಟ ಅನಂತ ವಿಭೂತಿರೂಪಗಳ ಸಂಕ್ಷೇಪ ನಿರೂಪಣವು ಶೃಂಗಗ್ರಾಹಿಕತಯಾ ಎಂದರೆ ಕೊಂಬು ಹಿಡಿದುಕೊಂಡು 'ಇದು ಆಕಳು' ಎಂದು ತೋರಿಸುವಂತೆ 'ಪರಮಾತ್ಮನ ವಿಭೂತಿರೂಪಗಳು ಈ ಪ್ರಕಾರವಾಗಿರುತ್ತವೆ' ಎಂದು ಪರಿಚಯಾರ್ಥವಾಗಿಯೇ. ಪರಂತು ಯಾವ ಯಾವ ವಸ್ತುವು ಸ್ವಸಜಾತೀಯ ವಸ್ತುಗಳಲ್ಲಿ ಶ್ರೇಷ್ಠತ್ವವನ್ನು ಹೊಂದಿರುವುದೋ, ಸಂಪದ್ಯುಕ್ತವಾಗಿರುವುದೋ ಅಥವಾ ಬೇರೆ ವಿಧವಾದ ಅಭಿವೃದ್ಧಿಯಿಂದ ಕೂಡಿರುವುದೋ ಅಂಥದೆಲ್ಲವೂ ನನ್ನ ವಿಭೂತಿರೂಪ ವಿಶೇಷದಿಂದ ಸಹಿತವಾಗಿರುವುದೆಂದು ತಿಳಿ."

7. ಲೋಕದಲ್ಲಿ ಪರಮಾತ್ಮನ ವ್ಯಾಪ್ತಿಯು ಎರಡು ಪ್ರಕಾರವಾಗಿರುವುದು. ಸರ್ವತ್ರ ಪರಮಾತ್ಮನು ವ್ಯಾಪ್ತನು. ಪ್ರತಿಯೊಂದು ವಸ್ತುವಿನಲ್ಲಿಯೂ ಪರಮಾತ್ಮನು ಅದರ ಸತ್ತಾಪ್ರವೃತ್ತ್ಯಾದಿಗಳಿಗೆ ನಿಯಾಮಕನಾಗಿ ಒಂದೊಂದು ರೂಪದಿಂದ ರಕ್ಷಕನಾಗಿರುವನು. ಘಟದಲ್ಲಿರುವ ಪರಮಾತ್ಮನು ಚೇಷ್ಟಕತ್ವಾದಿ ಕಲ್ಯಾಣಗುಣನಿಮಿತ್ತಕವಾಗಿ ಘಟ ಶಬ್ದವಾಚ್ಯನಾಗಿ ಅದರ ನಾಮರೂಪ ಕ್ರಿಯೆಗಳಿಗೆ ಪಾಲಕನಾಗಿರುವನು. ಹೀಗೆ ಪಟದಲ್ಲಿರುವ ದೇವರಿಗೆ ಪಟವೆಂದು ಹೆಸರು. ತೃಣದಲ್ಲಿರುವ ದೇವರಿಗೆ ತೃಣವೆಂದು ಹೆಸರು. ತತ್ತದ್ವಸ್ತ್ವಂತರ್ಗತನಾದ ಪರಮಾತ್ಮನ ಹೆಸರೇ ಆಯಾಯ ವಸ್ತುಗಳಿಗೆ ಅಮುಖ್ಯವಾಗಿ ವಾಚಕವಾಗಿರುವುದೆಂದು ಹೇಳಲ್ಪಟ್ಟಿರುವುದು. ಇದರಿಂದಲೇ ಪರಮಾತ್ಮನು ಸರ್ವ ಶಬ್ದಗಳಿಂದಲೂ ವಾಚ್ಯನೆಂದೂ, ಆತನಿಗೆ ಅನಂತ ನಾಮಗಳೆಂದೂ ಶಾಸ್ತ್ರದಲ್ಲಿ ನಿರೂಪಿಸಲ್ಪಟ್ಟಿರುವುದು. ಆದರೆ ಲೋಕದಲ್ಲಿರುವ ನಾಮಗಳಿಗೂ ಪರಮಾತ್ಮನ ನಾಮಗಳಿಗೂ ಒಂದು ವ್ಯತ್ಯಾಸವುಂಟು. ಲೋಕದಲ್ಲಿ ಒಬ್ಬನನ್ನು ನಾವು ಇಂದ್ರ, ಚಂದ್ರ, ನಾರಾಯಣಭಟ್ಟ ಎಂದು ಕರೆಯುತ್ತೇವೆ. ಆ ಇಂದ್ರ, ಚಂದ್ರ, ನಾರಾಯಣಭಟ್ಟರುಗಳಲ್ಲಿ ಶ್ರೀ ಪರಮಾತ್ಮನೂ ಇಂದ್ರ, ಚಂದ್ರ, ನಾರಾಯಣಭಟ್ಟನೆಂಬ ಹೆಸರುಗಳಿಂದಲೇ ಇರುತ್ತಾನೆ. ಆದರೆ ಪರಮಾತ್ಮನು ಪರಮೈಶ್ವರ್ಯ ಸಂಪೂರ್ಣನಾದುದರಿಂದ ಇಂದ್ರನೆಂಬ ಹೆಸರನ್ನು ಹೊಂದಿದವನಾಗಿ ಇಂದ್ರಚೇತನನಲ್ಲಿ ಇರುವನು. ನಾವು ಇಂದ್ರನೆಂದು ಕರೆಯುವ ಚೇತನನಿಗಾದರೋ, ಪೂರ್ಣವಾದ ಪರಮೈಶ್ವರ್ಯವು ಇರುವುದಿಲ್ಲ. ಒಂದು ಕೋಟಿ ಧನವು ಇರಬಹುದು. ಅಥವಾ ಸಂಕೇತಮಾತ್ರವಾದ ನಾಮಕರಣವಿರಬಹುದು. ಪರಮಾತ್ಮನ ನಾಮಗಳೆಲ್ಲಾ ಯೌಗಿಕನಾಮಗಳು; ಲೋಕದಲ್ಲಿರುವ ಪದಾರ್ಥಗಳ ನಾಮಗಳು ರೂಢನಾಮಗಳು; ಅಥವಾ ಕೇವಲ ಸಂಕೇತಿತವಾದುವುಗಳು. ಸರ್ವ ವಸ್ತುಗಳಲ್ಲಿಯೂ ಪರಮಾತ್ಮನು ವ್ಯಾಪ್ತ

ನಾಗಿ ತತ್ತತ್ಪದಾರ್ಥಗಳ ಸತ್ತಾಪಾಲಕನಾಗಿರುವನೆಂದು ಈ ಶ್ಲೋಕದಿಂದ ನಿಶ್ಚಿತ ವಾಗುವುದು :—

(1) **ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥**

—(10. 42.)

ನಾನು ( ಶ್ರೀ ಕೃಷ್ಣನು ) ಪ್ರಮಾಣಪ್ರಮಿತವಾದ ಸಮಸ್ತ ಪ್ರಪಂಚವನ್ನೂ ನನ್ನ ಒಂದು ಅಂಶದಿಂದಲೇ ವ್ಯಾಪಿಸಿಕೊಂಡು ಇದ್ದೇನೆ. ( ಪ್ರತಿಯೊಂದು ವಸ್ತುವಿನಲ್ಲಿಯೂ ತತ್ತಚ್ಛಬ್ದವಾಚ್ಯನಾಗಿ ಅದರ ಸತ್ತಾ, ನಾಮ, ರೂಪ, ಕ್ರಿಯಾದಿಗಳಿಗೆ ನಿಯಾಮಕನಾಗಿ ವ್ಯಾಪಿಸಿಕೊಂಡಿರುತ್ತೇನೆ ಎಂದು ಭಾವವು. )

ಶ್ರೀ ಕೃಷ್ಣನ ವಾಕ್ಯಾಂತರವೂ ಈ ಅರ್ಥವನ್ನೇ ಸೂಚಿಸುವುದು :—

(2) **ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಂ ॥**

—(10. 39.)

ಎಲೈ ಅರ್ಜುನನೇ ! ಚರಾಚರ ಜಗತ್ತಿನಲ್ಲಿ ನನ್ನಿಂದ ಸಹಿತವಾಗದೇ ಇರುವ ವಸ್ತುವು ಇಲ್ಲ. ( ಪ್ರತಿಯೊಂದು ವಸ್ತುವಿನಲ್ಲಿಯೂ ನಾನು ತತ್ತಚ್ಛಬ್ದವಾಚ್ಯನಾಗಿ ಒಂದೊಂದು ರೂಪದಿಂದ ಅದರ ಸತ್ತಾದಿಗಳಿಗೆ ನಿಯಾಮಕನಾಗಿ ವಾಸ ಮಾಡುತ್ತೇನೆ ಎಂದು ಭಾವವು. )

ಪರಮಾತ್ಮನ ಇಂಥ ವ್ಯಾಪ್ತಿಯು ಸರ್ವ ಚೇತನಾಚೇತನಾತ್ಮಕ ಪದಾರ್ಥಗಳಲ್ಲಿಯೂ ಇದ್ದರೂ, ಉತ್ತಮ ವಸ್ತುಗಳಲ್ಲಿರುವ ರೂಪಗಳನ್ನೇ ಮುಮುಕ್ಷುವು ಧ್ಯಾನ ಮಾಡಬೇಕು. ಸಪ್ತಮಾಧ್ಯಾಯದಲ್ಲಿ ಅಂಥ ಸತ್ತಾನಿಯಾಮಕವಾದ ತತ್ತಚ್ಛಬ್ದವಾಚ್ಯವಾಗಿ ರಸಾದಿಗಳಲ್ಲಿ ವ್ಯಾಪ್ತವಾದ ಭಗವದ್ರೂಪಗಳೇ "ರಸೋಽಹಮಪ್ಸು ಕೌಂತೇಯ" ಎಂಬ ಶ್ಲೋಕದಿಂದ ಆರಂಭ ಮಾಡಿ "ಕಾಮೋಽಸ್ಮಿ ಭರತರ್ಷಭ" ಎಂಬ ಶ್ಲೋಕಪರ್ಯಂತವೂ ಶ್ರೀ ಕೃಷ್ಣನಿಂದ ಹೇಳಲ್ಪಟ್ಟಿರುವುದು. ( ಶ್ಲೋಕಗಳು 7. 8–11.) ಇದು ಆ ಶ್ಲೋಕಗಳ ತಾತ್ಪರ್ಯವು :— ಎಲೈ ಅರ್ಜುನನೇ ! ನಾನು ರಸದಲ್ಲಿ ರಸಶಬ್ದವಾಚ್ಯನಾಗಿದ್ದೇನೆ. ಪ್ರಭೆಯಲ್ಲಿ ಪ್ರಭಾಶಬ್ದವಾಚ್ಯನಾಗಿದ್ದೇನೆ. ಪ್ರಣವದಲ್ಲಿ ಪ್ರಣವಶಬ್ದವಾಚ್ಯನಾಗಿದ್ದೇನೆ ಶಬ್ದದಲ್ಲಿ ಶಬ್ದ ಶಬ್ದದಿಂದ ವಾಚ್ಯನಾಗಿದ್ದೇನೆ. ಪೌರುಷದಲ್ಲಿ ಪೌರುಷ ಶಬ್ದವಾಚ್ಯನಾಗಿದ್ದೇನೆ. ಗಂಧದಲ್ಲಿ ಗಂಧಶಬ್ದವಾಚ್ಯನಾಗಿದ್ದೇನೆ. ತೇಜಸ್ಸಿನಲ್ಲಿ ತೇಜಶ್ಶಬ್ದವಾಚ್ಯನಾಗಿದ್ದೇನೆ. ತಪಸ್ಸಿನಲ್ಲಿ ತಪಶ್ಶಬ್ದವಾಚ್ಯನಾಗಿದ್ದೇನೆ. ಬುದ್ಧಿಯಲ್ಲಿ ಬುದ್ಧಿಶಬ್ದವಾಚ್ಯನಾಗಿದ್ದೇನೆ. ಬಲದಲ್ಲಿ ಬಲಶಬ್ದವಾಚ್ಯನಾಗಿದ್ದೇನೆ. ಕಾಮದಲ್ಲಿ ಕಾಮಶಬ್ದವಾಚ್ಯನಾಗಿದ್ದೇನೆ.

ನವಮಾಧ್ಯಾಯದಲ್ಲಿಯೂ, ದಶಮಾಧ್ಯಾಯದಲ್ಲಿಯೂ ಕೂಡ ಶ್ರೀ ಪರಮಾತ್ಮನು ತನ್ನ ವ್ಯಾಪ್ತಿಯನ್ನು ಬೋಧಿಸಿ ತತ್ತಚ್ಛಬ್ದವಾಚ್ಯನಾಗಿ ಅನೇಕ ಪದಾರ್ಥಗಳಲ್ಲಿ ತಾನು ಇರುವೆನೆಂದು ಹೇಳಿರುವನು.

8. **ಪ್ರಶ್ನೆ :—** ಸ್ವಾಮೀ ! ವೇದದಲ್ಲಿರುವ ಸರ್ವ ಪದಗಳಿಂದಲೂ ಪರಮಾತ್ಮನು ಪ್ರತಿಪಾದ್ಯನು ಎಂದು ತಮ್ಮಿಂದ ನಿರೂಪಿತವಾಯಿತು. ಪ್ರತಿಯೊಂದು ಪದಾರ್ಥದಲ್ಲಿಯೂ ಒಂದೊಂದು ರೂಪದಿಂದ ಶ್ರೀ ಪರಮಾತ್ಮನು ಇರುವನೆಂದು ಈಗ ನಿರೂಪಿಸಲ್ಪಸಲ್ಪಟ್ಟಿತು. ಇವುಗಳಿಗೆ ಪರಸ್ಪರ ಸಂಬಂಧವೇನು ?

**ಉತ್ತರ :— ಶ್ರೀ ಶ್ರೀಗಳವರು :—** ವೇದಗಳಲ್ಲಿರುವ ಶಬ್ದಗಳೇ ಜಗತ್ತಿನಲ್ಲಿ ಪದಾರ್ಥಗಳ ನಾಮಗಳಾಗಿರುವುವು. ವೇದದಲ್ಲಿರುವ ಪ್ರತಿಯೊಂದು ಪದವೂ ಪರಮಾತ್ಮನನ್ನು ಬೋಧಿಸುವುದೆಂದು ಹೇಳಿದರೆ ಆಯಾಯ ನಾಮದಿಂದ ಪರಮಾತ್ಮನು ಅದೇ ನಾಮವುಳ್ಳ ವಸ್ತುವಿನಲ್ಲಿ ನಿಯಾಮಕನಾಗಿದ್ದು ರಕ್ಷಿಸುವನೆಂದು ಭಾವವು. ಪರಮಾತ್ಮನು ಸರ್ವ ಪದಗಳಿಂದಲೂ ವಾಚ್ಯನು, ಆತನು ಅನಂತ ನಾಮಗಳುಳ್ಳವನು. **" ಸರ್ವನಾಮಾ "** **" ನಾಮಾನಿ ಸರ್ವಾಣಿ ಯಮಾವಿಶಂತಿ ", " ಯೋ ದೇವಾನಾಂ ನಾಮಧಾ "** ಇತ್ಯಾದಿ ಅನೇಕ ಶ್ರುತಿಗಳೂ ಪರಮಾತ್ಮನಿಗೆ ಅನಂತ ಹೆಸರುಗಳುಂಟು ಎಂದು ಹೇಳುತ್ತವೆ.

9. **ಪ್ರಶ್ನೆ :—** ಸ್ವಾಮೀ ! ಪರಮಾತ್ಮನನ್ನು ಅನಂತ ನಾಮಗಳನ್ನು ಹೊಂದಿದುದರಿಂದ ಏನು ಸಿದ್ಧಿಸುವುದು ?

**ಉತ್ತರ :—** ಒಂದೊಂದು ನಾಮದಿಂದ ಬೋಧ್ಯವಾದ ಗುಣವೂ ಪರಮಾತ್ಮನಲ್ಲಿರುವುದೆಂದು ಸಿದ್ಧವಾಗುವುದರಿಂದ ಅನಂತ ಯೌಗಿಕ ನಾಮಗಳುಳ್ಳವನು ಅನಂತ ಕಲ್ಯಾಣ ಗುಣವುಳ್ಳವನು ಎಂದು ಸಿದ್ಧವಾಗುವುದು. ಇದನ್ನು ಮಾತ್ರ ನೆನಪಿನಲ್ಲಿಡಬೇಕು. ಪರಮಾತ್ಮನ ಹೆಸರುಗಳೆಲ್ಲವೂ ಯೌಗಿಕ ನಾಮಗಳು ಎಂದರೆ ಅವನಲ್ಲಿರುವ ಉತ್ಕೃಷ್ಟ ಗುಣಗಳನ್ನೇ ಬೋಧಿಸುವುವು ವಿಷ್ಣು ಸಹಸ್ರನಾಮ ಸ್ತುತಿಯಲ್ಲಿಯೂ ಈ ವಿಷಯವು ಹೇಳಲ್ಪಟ್ಟಿರುವುದು :—

**ಯಾನಿ ನಾಮಾನಿ ಗೌಣಾನಿ ವಿಖ್ಯಾತಾನಿ ಮಹಾತ್ಮನಃ ||**

**ಅರ್ಥವು :—** ಪರಮಾತ್ಮನ ಇಂದ್ರ, ಚಂದ್ರ, ವಿಶ್ವಾದಿ ಸಕಲ ನಾಮಗಳೂ ಗೌಣಗಳು ಎಂದರೆ ಅವನಲ್ಲಿ ವಿದ್ಯಮಾನವಾದ ಗುಣನಿಮಿತ್ತಕವಾಗಿ ಅವನಿಗೆ ಅನಾದಿ ಕಾಲದಿಂದಲೂ ಇರುವುವು.

ಹೀಗೆ " ಸರ್ವೇ ವೇದಾ ಯತ್ಪದಮಾಮನಂತಿ " ಎಂಬ ಶ್ರುತಿ ಪ್ರತಿಪಾದ್ಯವಾದ ಈ ನಿಶ್ಚಯವನ್ನು ಶ್ರೀ ಕೃಷ್ಣನು " ವೇದೈಶ್ಚ ಸರ್ವೈರಹಮೇವ ವೇದ್ಯಃ " ಎಂಬ ವಾಕ್ಯದಿಂದ ಹೇಳಿರುವನು.

10. **ಪ್ರಶ್ನೆ :—** ಸ್ವಾಮೀ ! ಮತ್ತೊಂದು ಪ್ರಕಾರವಾದ ಪರಮಾತ್ಮನ ವ್ಯಾಪ್ತಿಯು ಯಾವುದು ?

**ಉತ್ತರ :— ಶ್ರೀ ಶ್ರೀಗಳವರು :—** ಲಕ್ಷ್ಮೀ ಬ್ರಹ್ಮರುದ್ರೇಂದ್ರಾದಿ ದೇವತೆಗಳಲ್ಲಿ ಪರಮಾತ್ಮನು ಆಯಾಯ ದೇವತೆಗಳ ನಾಮಕನಾಗಿಯೇ ವಿಶೇಷ

ರೂಪದಿಂದ ಆವಿಷ್ಟನಾಗಿ ಕೆಲವು ಅಸಾಧಾರಣ ಮಹಿಮೆಗಳನ್ನು ಪ್ರಕಟನೆ ಮಾಡಿರುವನು. ಇಂಥ ರೂಪಗಳಿಗೆ ವಿಭೂತಿರೂಪಗಳೆಂದು ಹೆಸರು. ವೇದೋಕ್ತವಾದ ಈ ನಾಮಗಳು ಪರಮಾತ್ಮನ ಮಹಿಮಾತಿಶಯವನ್ನು ವಿಶದೀಕರಿಸುತ್ತವೆ. ಮತ್ತು ಇದೇ ರೀತಿಯಾಗಿ ಚಿಂತಾಮಣಿ, ಮೇರುಪರ್ವತವೇ ಮುಂತಾದ ಜಡ ವಸ್ತುಗಳಲ್ಲಿಯೂ ಪರಮಾತ್ಮನು ತತ್ತನ್ನಾಮಕವಾದ ವಿಭೂತಿರೂಪದಿಂದ ಸನ್ನಿಹಿತನಾಗಿ ಅವುಗಳಿಗೆ ಸಜಾತೀಯವಾದ ಇತರ ವಸ್ತುಗಳಿಗಿಂತ ಆಧಿಕ್ಯಪ್ರದನಾಗಿರುವನು. ಆದುದರಿಂದ ವೇದೋಕ್ತವಾದ ಈ ನಾಮಗಳೂ ಕೂಡ ಪರಮಾತ್ಮನ ಮಹಿಮಾತಿಶಯವನ್ನು ಸ್ಪಷ್ಟೀಕರಿಸುತ್ತವೆ. ಏವಂಚ ವೇದೋಕ್ತ ದೇವತಾ ನಾಮಗಳೂ, ವೇದೋಕ್ತ ಮೇರ್ವಾದಿ ಜಡ ಪದಾರ್ಥಗಳ ನಾಮಗಳೂ ಪರಮಾತ್ಮನಿಗೇ ಮುಖ್ಯವಾಗಿ ಇರುವವು. ತತ್ತನ್ನಾಮಕ ಪರಮಾತ್ಮನ ಆವಾಸ ಸ್ಥಾನವಾದ ಕೆಲವು ಪದಾರ್ಥಗಳಿಗೆ ಪರಮಾತ್ಮನ ನಿಯಮನದಿಂದ ತತ್ತಚ್ಛಬ್ದವಾಚ್ಯತ್ವದ ಜೊತೆಗೆ ಮಹಿಮಾತಿಶಯವೂ ಬರುವುದೆಂಬುದು ಸಿದ್ಧವಾದ ಪ್ರಮೇಯವು. ಇದು ಅರ್ಜುನನ ಪ್ರಶ್ನೆಯು—

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥**
**ಕಥಂ ವಿದ್ಯಾಮಹಂ ಯೋಗಿನ್ ತ್ವಾಂ ಸದಾ ಪರಿಚಿಂತಯನ್ ।**
**ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ ॥**
**ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಂ ॥**
—(10. 16-18.)

ಎಲೈ ಭಗವಂತನೇ ! ಯಾವ ವಿಶೇಷ ರೂಪಗಳಿಂದ ನೀನು ಈ ಸಮಸ್ತ ಲೋಕಗಳನ್ನೂ ವ್ಯಾಪಿಸಿಕೊಂಡು ಸ್ಥಿತನಾಗಿದ್ದೀಯೋ ಅಂಥ ನಿನ್ನ ಅದ್ಭುತ ರೂಪಗಳನ್ನು ಸಂಪೂರ್ಣವಾಗಿ ನೀನು ನನಗೆ ಬೋಧಿಸುವವನಾಗು. ಎಲೈ ಅಚಿಂತ್ಯ ಶಕ್ತಿಸಂಪನ್ನನಾದ ಸ್ವಾಮಿಯೇ ! ನಾನು ಯಾವ ಪ್ರಕಾರವಾಗಿ ಸರ್ವದಾ ಧ್ಯಾನ ಮಾಡುವವನಾಗಿ ನಿನ್ನನ್ನು ತಿಳಿಯುವುದಕ್ಕಾಗುವುದು ? ಮತ್ತು ಯಾವ ಯಾವ ಪದಾರ್ಥಗಳಲ್ಲಿ ವಿಭೂತಿರೂಪವುಳ್ಳ ನೀನು ನನ್ನ ಧ್ಯಾನಕ್ಕೆ ಗೋಚರನಾಗುವಿ ? ( ಯಾವ ಪದಾರ್ಥಗಳಲ್ಲಿ ನಿನ್ನ ವಿಭೂತಿರೂಪವು ಇರುವದು ಎಂದು ಪ್ರಶ್ನಭಾವವು.) ಎಲೈ ಜನಾರ್ದನನೇ ! ನಿನ್ನ ವಿಭೂತಿರೂಪಗಳನ್ನೂ ಮತ್ತು ನಿನ್ನ ಸಾಮರ್ಥ್ಯವನ್ನೂ ನನಗೆ ವಿಸ್ತಾರವಾಗಿ ಪುನಃ ನಿರೂಪಿಸುವವನಾಗು. ನಿನ್ನ ವಾಗಮೃತವನ್ನು ಎಷ್ಟು ಪಾನ ಮಾಡಿದರೂ ನನಗೆ ತೃಪ್ತಿ ಇಲ್ಲವು.

ಈ ಪ್ರಕಾರವಾಗಿ ಪ್ರಶ್ನೆಯನ್ನು ಶ್ರವಣ ಮಾಡಿದ ಪರಮಾತ್ಮನು ಇಂದ್ರ

ಚಂದ್ರಾದಿ ನಾನಾ ನಾಮಗಳಿಂದ ಭೂಷಿತವಾದ ತನ್ನ ವಿಭೂತಿರೂಪಗಳನ್ನು ನಿರೂಪಿಸುವುದಕ್ಕಾರಂಭಿಸಿದನು.

11. **ಪ್ರಶ್ನೆ** :— ಸ್ವಾಮೀ ! ಘಟ, ಪಟ, ಕುಡ್ಯ, ಸ್ಥಂಡಿಲಾದಿ ಅನಂತ ನಾಮಗಳಿಂದ ಪರಮಾತ್ಮನು ಜಡವಾದ ಸ್ವಭಿನ್ನವಾದ ಘಟಾದಿ ಅಧಿಷ್ಠಾನಗಳಲ್ಲಿ ನಿಯಾಮಕನಾಗಿ ವ್ಯಾಪ್ತನಾಗಿದ್ದಾನೆಂದು ಪೂರ್ವದಲ್ಲಿಯೇ ತಮ್ಮಿಂದ ನಿರೂಪಿತವಾಯಿತು. ಇದೂ ಅಲ್ಲದೆ ಈಗ ಬೇರೆ ವಿಭೂತಿರೂಪಗಳ ನಿರೂಪಣೆಗೆ ಅವಸರವೇನು ?

**ಉತ್ತರ :— ಶ್ರೀ ಶ್ರೀಗಳವರು :—** ಸಾಮಾನ್ಯ ವಿಶೇಷಭಾವದಿಂದ ವಿಚಾರವು ಮಾಡಲ್ಪಡುವುದು ಅಧಿಕ ವ್ಯತ್ಯಾಸವೇನೂ ಇರುವುದಿಲ್ಲ. ಘಟ ಪಟಾದಿ ನಾಮವುಳ್ಳ ಪರಮಾತ್ಮನು ಘಟಪಟಾದಿಗಳಲ್ಲಿ ವಾಸ ಮಾಡಿ ಅವುಗಳ ಸತ್ತಾದಿಗಳಿಗೆ ರಕ್ಷಕನಾಗಿರುತ್ತಾನೆ ಸರ್ವ ಚೇಷ್ಟಕತ್ವ ಸಾಮರ್ಥ್ಯೋಪೇತನಾದುದರಿಂದ ಪರಮಾತ್ಮನಿಗೆ ಘಟನೆಂದು ಹೆಸರು. ಇಂಥ ಪರಮಾತ್ಮನು ಘಟದಲ್ಲಿ ವಾಸ ಮಾಡಿದರೂ ಸಹ ಆ ಗಡಿಗೆಯು ನಿಶ್ಚಲವಾಗಿ ಜಡವಾಗಿರುವುದು. ಅದಕ್ಕೆ ಚೇಷ್ಟಕತ್ವ ಶಕ್ತಿಯನ್ನು ಪರಮಾತ್ಮನು ಕೊಡಲಿಲ್ಲ. ಆದುದರಿಂದ ಈ ನಾಮಗಳು ಪರಮಾತ್ಮನ ಸಾಮಾನ್ಯ ರೂಪಗಳ ನಾಮಗಳು.

ಆದರೆ ಈ ಪರಮಾತ್ಮನೇ ಪೂರ್ಣೈಶ್ವರ್ಯವುಳ್ಳವನಾದುದರಿಂದ ಇಂದ್ರ ಶಬ್ದವಾಚ್ಯನಾಗಿ ಇಂದ್ರನಲ್ಲಿರುವನು ಇದರಿಂದ ಇಂದ್ರನಿಗೂ ಸ್ವಲ್ಪ ಐಶ್ವರ್ಯವೂ, ಸಜಾತೀಯ ದೇವತೆಗಳಲ್ಲಿ ಶ್ರೇಷ್ಠತ್ವವೂ ಬರುವುದು. ಇಂಥ ಪರಮಾತ್ಮನ ರೂಪಗಳಿಗೆ ವಿಭೂತಿರೂಪಗಳೆಂದು ಹೆಸರು. ಯಾವ ವಸ್ತುವಿನಲ್ಲಿದ್ದ ಪರಮಾತ್ಮನು ತನ್ನ ಸಾಮರ್ಥ್ಯವನ್ನು ವಿಶೇಷವಾಗಿ ಅಭಿವ್ಯಕ್ತಿ ಮಾಡುವನೋ ಆ ರೂಪವು ವಿಭೂತಿರೂಪವೆಂದು ಕರೆಯಲ್ಪಡುವುದು. ಆ ನಾಮಗಳು ವಿಶೇಷ ನಾಮಗಳು ಎನ್ನಿಸುವುವು. ನಾರಾಯಣಾದಿ ನಾಮಗಳು ಇನ್ನೂ ವಿಶೇಷ ನಾಮಗಳು. ಯಾತಕ್ಕೆಂದರೆ ನಾರಾಯಣಾದಿ ಭಗವದ್ರೂಪಗಳು ಮತ್ತೊಂದು ಪದಾರ್ಥದಲ್ಲಿ ಪ್ರತ್ಯೇಕವಾಗಿ ಆವಿಷ್ಟವಾಗಿ ವಾಸ ಮಾಡದೆ ಸ್ವರೂಪದಿಂದಲೇ ಭಕ್ತಾದಿಗಳಿಗೆ ಅನುಗ್ರಹಿಸುವುವು ಇವುಗಳು ಸ್ವಯಂಭೂತಿ ರೂಪಗಳೆನ್ನಿಸುವುವು. ನಾರಾಯಣಾದಿ ನಾಮಗಳು ಭಗವಂತನಿಗೆ ಕೇವಲ ಸ್ವಕೀಯನಾಮಗಳೆನ್ನಿಸುವುವು. ಆದರೂ ಎಲ್ಲ ವೈದಿಕ ಪದಗಳೂ ಭಗವನ್ನಾಮಗಳೇ. ಈ ವಿಷಯದಲ್ಲಿ ಸಂದೇಹವಿಲ್ಲ.

12. **ಪ್ರಶ್ನೆ :— ವಿದ್ಯಾರ್ಥಿಗಳು :—** ಸ್ವಾಮೀ ! ಈ ವಿಶೇಷ ಭಗವದ್ರೂಪಗಳು ಎಷ್ಟು ಪ್ರಕಾರವಾಗಿರುವವು ?

**ಉತ್ತರ :— ಶ್ರೀ ಶ್ರೀಗಳವರು :—** ಮೂರು ಪ್ರಕಾರವಾಗಿ ವಿಭೂತಿ ರೂಪಗಳು ಸಾಮರ್ಥ್ಯವನ್ನು ಅಭಿವ್ಯಕ್ತಿ ಮಾಡುತ್ತವೆ, ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ. 1 ಕೆಲವು ಸ್ವಯಂ ( ಪ್ರತ್ಯಕ್ಷ ) ವಿಭೂತಿರೂಪಗಳು; ಎಂದರೆ

ಶ್ರೀ ಪರಮಾತ್ಮನು ಮತ್ಸ್ಯ, ಕೂರ್ಮ, ವರಾಹಾದಿ ಅನಂತ ಅವತಾರಗಳನ್ನು ಸ್ವೀಕರಿಸಿ, ಮತ್ಸ್ಯಾದಿ ಕೇವಲ ಸ್ವವಾಚಕವಾದ ನಾಮಗಳಿಂದ ಭೂಷಿತವಾಗಿ ಬ್ರಹ್ಮಾದಿ ದೇವತೆಗಳಿಗೂ ಅಸಾಧ್ಯವಾದ ಅನಂತ ಮಹಿಮೆಗಳನ್ನು ಪ್ರಕಟನೆ ಮಾಡಿ ತನ್ನ ಲೀಲಾದಿಗಳನ್ನು ಭಜಿಸುವ ಭಕ್ತರಿಗೆ ಮೋಕ್ಷಪ್ರದನಾಗಿರುವನು. ಈ ಭಗವದ್ರೂಪಗಳು ಮತ್ತೊಂದು ಜೀವನಲ್ಲಿ ಆವಿಷ್ಟವಾದುವುಗಳಲ್ಲ. ಇವು ಸಾಕ್ಷಾದವತಾರಗಳು. 2. ಇಂದ್ರ, ಚಂದ್ರ, ವರುಣ, ಕುಬೇರಾದಿಗಳಲ್ಲಿ ಶ್ರೀ ಪರಮಾತ್ಮನು ತತ್ತನ್ನಾಮಗಳಿಂದಲೇ ಸಹಿತವಾದ ವಿಭೂತಿರೂಪಗಳನ್ನು ಸ್ವೀಕರಿಸಿ ಅವರಲ್ಲಿ ವಾಸ ಮಾಡಿ ಆ ದೇವತೆಗಳಿಗೆ ಸ್ವಸಜಾತೀಯವಾದ ಇತರ ಚೇತನರುಗಳಿಗಿಂತ ಆಧಿಕ್ಯಪ್ರದನಾಗಿರುವನು. ಲಕ್ಷ್ಮೀ ದೇವತೆಯಲ್ಲಿ ಭಗವಂತನು ಲಕ್ಷ್ಮೀ ನಾಮಕ ವಿಭೂತಿರೂಪದಿಂದ ಆಕೆಗೆ ಸ್ವಸಜಾತೀಯವಾದ ಸರ್ವ ಚೇತನ ವರ್ಗಕ್ಕಿಂತಲೂ ಶ್ರೇಷ್ಠತ್ವವನ್ನು ಕೊಟ್ಟಿರುತ್ತಾನೆ. ಬ್ರಹ್ಮದೇವರಲ್ಲಿ ಬ್ರಹ್ಮನಾಮಕ ಪರಮಾತ್ಮನು ವಾಸ ಮಾಡಿ ಅವರಿಗೆ ಸ್ವಸಜಾತೀಯ ಸರ್ವ ದೇವತೆಗಳಿಗಿಂತಲೂ ಆಧಿಕ್ಯಪ್ರದನಾಗಿರುವನು. ರುದ್ರೇಂದ್ರಾದಿಗಳಲ್ಲಿ ಶ್ರೀ ಪರಮಾತ್ಮನು ರುದ್ರೇಂದ್ರಾದಿ ನಾಮಕವಾದ ತನ್ನ ವಿಭೂತಿರೂಪಗಳನ್ನು ಇಟ್ಟು ಅವರುಗಳಿಗೆ ಸ್ವಜಾತೀಯೈಕದೇಶಾಧಿಕ್ಯಕ್ಕೆ ಕಾರಣನಾಗುತ್ತಾನೆ; ಎಂದರೆ ಅವರುಗಳಿಂದ ಅಧಿಕರಾದ ಬ್ರಹ್ಮ ವಾಯ್ವಾದಿ ದೇವತೆಗಳನ್ನು ಬಿಟ್ಟು ಅವರುಗಳಿಂದ ನೀಚರಾದ ದೇವತೆಗಳದೆಸೆಯಿಂದ ಅವರನ್ನು ಅಧಿಕರನ್ನಾಗಿ ಮಾಡುತ್ತಾನೆ 3. ಮತ್ತು ಕೆಲವು ಭಗವದ್ರೂಪಗಳು ತಮ್ಮಿಂದ ಅಧಿಷ್ಠಿತವಾದ ವಸ್ತುಗಳಿಗೆ ವಿಜಾತೀಯ ಇತರ ವಸ್ತುಗಳಿಗಿಂತ ಆಧಿಕ್ಯಪ್ರದವಾಗುವುವು ಚಂದ್ರನಲ್ಲಿ ಪರಮಾತ್ಮನು ಚಂದ್ರನಾಮಕನಾಗಿದ್ದು ವಿಜಾತೀಯವಾದ ನಕ್ಷತ್ರಗಳಿಗಿಂತ ಚಂದ್ರನಿಗೆ ಆಧಿಕ್ಯಪ್ರದನಾಗಿರುವನು. ಇದೂ ಅಲ್ಲದೆ ಪರಮಾತ್ಮನು ಅನಂತ ಪದಾರ್ಥಗಳಲ್ಲಿಯೂ ಒಂದೊಂದು ರೂಪದಿಂದ ನಿಯಾಮಕನಾಗಿದ್ದು ಅವುಗಳಲ್ಲಿರುವ ಸಾರಧರ್ಮಕ್ಕೆ ಕಾರಣನಾಗುತ್ತಾನೆ. ಕೆಲವು ಪದಾರ್ಥಗಳಲ್ಲಿ ಒಂದೊಂದೇ ವಿಧವಾದ ವಿಭೂತಿರೂಪವೂ, ಕೆಲವು ವಸ್ತುಗಳಲ್ಲಿ ಎರಡು ಮೂರು ವಿಧವಾದ ವಿಭೂತಿರೂಪಗಳೂ ಇರಬಹುದು. ಈ ಮೂರು ನಾಲ್ಕು ವಿಧವಾದ ವಿಭೂತಿರೂಪಗಳಿಗೂ ದೃಷ್ಟಾಂತವು ಗೀತೆಯಲ್ಲಿಯೇ ಉಕ್ತವಾಗಿರುತ್ತದೆ. ಕೆಲವು ರೂಪಗಳನ್ನು ನಿರೂಪಿಸಿದ ಮಾತ್ರಕ್ಕೆ ಭಗವದ್ವಿಭೂತಿಗಳು ಪರಿಚ್ಛಿನ್ನ ಸಂಖ್ಯಾಕವೆಂದು ತಿಳಿಯಕೂಡದು. ವಿಭೂತಿರೂಪ ನಿರೂಪಣೆಗೆ ಪ್ರಾರಂಭದಲ್ಲಿಯೇ ಶ್ರೀ ಕೃಷ್ಣನು ನನ್ನ ನಾಮರೂಪಗಳನ್ನು ಅಗಣಿತವೆಂದು ತಿಳಿಯಬೇಕೆಂದು ಬೋಧಿಸಿರುತ್ತಾನೆ :—

**ಶ್ರೀ ಭಗವಾನುವಾಚ :—**

**ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ ॥**

—(10. 19.)

" ಎಲೈ ಕುರುಶ್ರೇಷ್ಠನೇ ! ಅದ್ಭುತವಾದ ನನ್ನ ವಿಭೂತಿರೂಪಗಳಲ್ಲಿ (ವಸ್ತುಗಳಿಗೆ ವಿಶೇಷಪ್ರದವಾದ ಅಥವಾ ನಾನಾವಿಧ ಮಹಿಮೆಗಳುಳ್ಳ ನನ್ನ ರೂಪಗಳಲ್ಲಿ) ಮುಖ್ಯವಾದ ಕೆಲವು ರೂಪಗಳನ್ನು ನಿನಗೆ ಹೇಳುತ್ತೇನೆ. ನನ್ನ ವಿಭೂತಿರೂಪಗಳಿಗೆ ಪರಿಸಮಾಪ್ತಿಯು ಇಲ್ಲವು. "

13. **ಪ್ರಶ್ನೆ :—** ಸ್ವಾಮೀ ! ವಸ್ತುತಃ ಪರಮಾತ್ಮನು ಸರ್ವತ್ರವ್ಯಾಪ್ತನು. ವಿಭೂತಿರೂಪಗಳೆಂದರೆ ಒಂದೊಂದು ದೇಹದಲ್ಲಿ ಮಾತ್ರ ಇರತಕ್ಕ ಮಧ್ಯಮ ಪರಿಮಾಣಮಾತ್ರೋಪೇತವಾದ ರೂಪಗಳು. ಇವೆರಡು ಧರ್ಮಗಳೂ ಒಬ್ಬನಲ್ಲಿ ಹೇಗೆ ಸಂಭವಿಸುವುವು ? ಸರ್ವಗತನಾದವನು ಸಣ್ಣ ರೂಪಗಳಿಂದ ಇರುವುದು ಹೇಗೆ ?

**ಉತ್ತರ:— ಶ್ರೀ ಶ್ರೀಗಳವರು:—** ಬ್ರಹ್ಮಾದಿ ದೇವತೆಗಳಿಗೂ ದುರ್ಜ್ಞೇಯವಾದ ಮಹಿಮೆಯುಳ್ಳವನು ಶ್ರೀ ಪರಮಾತ್ಮನು. ಆತನ ಅಚಿಂತ್ಯ ಶಕ್ತಿಯಿಂದ ಇದು ಸಂಭವಿಸುವುದು. ಆತ್ಮನಿ ಚೈವಂ ವಿಚಿತ್ರಾಶ್ಚ ಹಿ, ಸರ್ವೋಪೇತಾ ಚ ತದ್ದರ್ಶನಾತ್, ಇತ್ಯಾದಿ ಬ್ರಹ್ಮಸೂತ್ರಗಳಲ್ಲಿ ಈ ವಿಷಯವು ನಿರ್ಣೀತವಾಗಿರುವುದು. ಅಣೋರಣೀಯಾನ್ ಮಹತೋ ಮಹೀಯಾನ್ ಮುಂತಾದ ಶ್ರುತಿಗಳು ಈ ಅರ್ಥವನ್ನೇ ಉದ್ಘೋಷಿಸುವುವು. ದಾಮೋದರನೆಂಬ ಪರಮಾತ್ಮನ ಹೆಸರೇ ಆತನಿಗೆ ಇಂಥ ಅಚಿಂತ್ಯ ಮಹಿಮೆಯು ಉಂಟೆಂಬುದನ್ನು ಸೂಚಿಸುವುದು. ಶ್ರೀ ಕೃಷ್ಣನು ಹೇಳುತ್ತಾನೆ :—

(1) **ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**

—(10. 20.)

ಎಲೈ ಜಿತನಿದ್ರನಾದ ಪಾರ್ಥನೇ ! ಸರ್ವಸ್ವಾಮಿಯಾದ ನಾನು ( ವ್ಯಾಪ್ತನಾದರೂ ) ಸರ್ವ ಪ್ರಾಣಿಗಳ ಹೃದಯ ಗುಹೆಯಲ್ಲಿರುತ್ತೇನೆ.

14. **ಪ್ರಶ್ನೆ :—** ಸ್ವಾಮೀ ! ಇನ್ನು ಮೇಲೆ ಪರಮಾತ್ಮನ ವಿಭೂತಿರೂಪಗಳನ್ನು ಆ ರೂಪಗಳ ನಾಮನಿರ್ವಚನಪೂರ್ವಕವಾಗಿ ವಿವರಿಸಬೇಕೆಂದು ಪ್ರಾರ್ಥಿಸುತ್ತೇವೆ.

**ಉತ್ತರ:— ಶ್ರೀ ಶ್ರೀಗಳವರು:—** ಇವುಗಳು ಶ್ರೀ ಪರಮಾತ್ಮನ ಪ್ರತ್ಯಕ್ಷ ವಿಭೂತಿರೂಪಗಳು ಎಂದರೆ ಮತ್ತೊಂದು ಜೀವನಲ್ಲಿ ಆವಿಷ್ಟವಾಗದೆ ವ್ಯಾಪಾರ ಮಾಡುವ ಸ್ವಯಂ ವಿಭೂತಿರೂಪಗಳು.

1. **ಆದಿತ್ಯಾನಾಮಹಂ ವಿಷ್ಣುಃ........ ॥** —(10. 21.)
2. **........ಸಿದ್ಧಾನಾಂ ಕಪಿಲೋ ಮುನಿಃ ॥** —(10. 26.)
3. **ರಾಮಶ್ಶಸ್ತ್ರಭೃತಾಮಹಂ ॥** —(10. 31.)
4. **ವೃಷ್ಣೀನಾಂ ವಾಸುದೇವೋಽಸ್ಮಿ ॥** —(10. 37.)
5. **ಮುನೀನಾಮಪ್ಯಹಂ ವ್ಯಾಸಃ........ ॥** —(10. 37.)

**ಅರ್ಥವು:—** ನಾನು ( ಶ್ರೀ ಕೃಷ್ಣನು ) ಸರ್ವತ್ರವ್ಯಾಪ್ತನಾದುದರಿಂದ ವಿಷ್ಣುನಾಮಕವಾಗಿ ಆದಿತ್ಯರಲ್ಲಿ ಶ್ರೇಷ್ಠನಾಗಿ ಸ್ಥಿತನಾಗಿದ್ದೇನೆ. ನಾನು ಸುಖ ರೂಪನಾಗಿಯೂ, ಜಗತ್ಪಾಲಕನಾಗಿ, ಜಗತ್ಸಂಹಾರಕಾರಣನಾಗಿಯೂ ಇರುವುದ ರಿಂದ ಕಪಿಲನಾಮಕನಾಗಿ ಬ್ರಹ್ಮಾದಿ ಸರ್ವಸಿದ್ಧರುಗಳಲ್ಲಿಯೂ ಶ್ರೇಷ್ಠನಾಗಿದ್ದೇನೆ. ಲೋಕರಂಜಕನಾದುದರಿಂದ ರಾಮನಾಮಕನಾಗಿ ನಾನು ಸಕಲ ಶಸ್ತ್ರಧಾರಿಗಳ ಲ್ಲಿಯೂ ಅಗ್ರಗಣ್ಯನಾಗಿರುವೆನು. ಸರ್ವತ್ರ ವಾಸ ಮಾಡುವವನಾಗಿ ಮತ್ತು ಕ್ರೀಡಾದಿ ಅನಂತ ಗುಣಭರಿತನಾದುದರಿಂದ ವಾಸುದೇವನಾಮಕನಾಗಿ ನಾನು ಸರ್ವ ಯಾದವರ ಮಧ್ಯದಲ್ಲಿ ಶ್ರೇಷ್ಠನಾಗಿರುವೆನು. ಸರ್ವೋತ್ತಮವಾದ ಸ್ಥಿತಿ ಯುಳ್ಳವನಾದುದರಿಂದ ವ್ಯಾಸನಾಮಕನಾಗಿ ನಾನು ಸರ್ವ ಮುನಿಗಳಲ್ಲಿ ಶ್ರೇಷ್ಠ ನಾಗಿರುವೆನು.

ಇವೆಲ್ಲಾ ಭಗವಂತನ ಸಾಕ್ಷಾದವತಾರ ರೂಪಗಳು. ವಿಷ್ಣು, ಕಪಿಲ, ರಾಮ, ವಾಸುದೇವ ವ್ಯಾಸಾದಿ ನಾಮಗಳಿಂದ ಪರಮಾತ್ಮನು ವಾಚ್ಯನಾದುದರಿಂದ ಆಯಾಯ ಶಬ್ದಗಳಿಂದ ಬೋಧ್ಯವಾದ ಅನೇಕ ಗುಣಗಳು ಅವನಲ್ಲಿರುವುವು ಎಂದು ಸಿದ್ಧವಾಗುವುದು.

15. ಇನ್ನು ಸಜಾತೀಯವಾದ ಇತರ ವಸ್ತುಗಳಿಗಿಂತ ಆಧಿಕ್ಯಪ್ರದವಾಗಿ ತತ್ತದ್ವಸ್ತುಗಳಲ್ಲಿ ಸನ್ನಿಹಿತವಾದ ಅನೇಕ ಭಗವದ್ರೂಪಗಳನ್ನು ಅವುಗಳ ನಾಮ ನಿರ್ವಚನಪೂರ್ವಕವಾಗಿ ನಿರೂಪಿಸುತ್ತೇವೆ. ಶ್ರೀ ಕೃಷ್ಣನು ಹೇಳುತ್ತಾನೆ:—

(1) ................**ಜ್ಯೋತಿಷಾಂ ರವಿರಂಶುಮಾನ್ ।**
**ಮರೀಚಿರ್ಮರುತಾಮಸ್ಮಿ**.........................॥
**ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।**
**ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥**
**ರುದ್ರಾಣಾಂ ಶಂಕರಶ್ಚಾಸ್ಮಿ**................ ।
**ವಸೂನಾಂ ಪಾವಕಶ್ಚಾಸ್ಮಿ ಮೇರುಶ್ಶಿಖರಿಣಾಮಹಂ ॥**
**ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಂ ।**
**ಸೇನಾನೀನಾಮಹಂ ಸ್ಕಂದಃ ಸರಸಾಮಸ್ಮಿ ಸಾಗರಃ ॥**
**ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಂ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ॥**
**ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗಂಧರ್ವಾಣಾಂ ಚಿತ್ರರಥಃ**................ ॥

—(10. 21–26.)

ಎಲೈ ಪಾರ್ಥನೆ ! ವೇದರೂಪವಾದ ಶಬ್ದದಿಂದ ಜ್ಞೇಯನಾದುದರಿಂದ ರವಿಶಬ್ದವಾಚ್ಯನಾಗಿ ನಾನು ರವಿಯಲ್ಲಿದ್ದು ಸಕಲ ತೇಜೋಮಯ ಪದಾರ್ಥಗಳಿಗಿಂತಲೂ ಆತನಿಗೆ ಆಧಿಕ್ಯಪ್ರದನಾಗಿರುವೆನು. ಮೇಘಚಾಲನ ಶಕ್ತಿಯುಳ್ಳವನಾದುದರಿಂದ ಮರೀಚಿನಾಮಕನಾಗಿ ನಾನು ಮರೀಚಿ ವಾಯುವಿನಲ್ಲಿದ್ದು ಆತನನ್ನು (ಪ್ರಧಾನವಾಯುವೇ ಮೊದಲಾದ ಕೆಲವರನ್ನು ಬಿಟ್ಟು) ಇತರ ವಾಯುಗಳಿಗಿಂತ ಅಧಿಕನನ್ನಾಗಿ ಮಾಡಿರುವೆನು ಸರ್ವತ್ರ ಜ್ಞಾನಾನಂದಾದಿ ಗುಣಗಳಿಂದ ಸಮನಾದುದರಿಂದ ಸಾಮಶಬ್ದವಾಚ್ಯವಾದ ನಾನು ಸಾಮವೇದದಲ್ಲಿದ್ದು (ಋಗ್ವೇದ ಹೊರತು) ಇತರ ವೇದಗಳಿಗಿಂತ ಅದಕ್ಕೆ ಶ್ರೇಷ್ಠತ್ವಪ್ರದನಾಗಿರುವೆನು. ಸರ್ವದೇಶದಲ್ಲಿಯೂ ಸದಾ ವಾಸ ಮಾಡುವವನಾದುದರಿಂದ ವಾಸವನಾಮಕವಾದ ನಾನು ವಾಸವನಲ್ಲಿದ್ದು ಆತನನ್ನು (ಬ್ರಹ್ಮರುದ್ರಾದಿ ದೇವತೆಗಳನ್ನು ಬಿಟ್ಟು) ಇತರ ದೇವತೆಗಳಿಗಿಂತ ಅಧಿಕನನ್ನಾಗಿ ಮಾಡಿರುವೆನು. ಜ್ಞಾನಸ್ವರೂಪನಾದುದರಿಂದ ಮನೋನಾಮಕನಾದ ನಾನು ಮನೋ ಇಂದ್ರಿಯದಲ್ಲಿದ್ದು ಅದಕ್ಕೆ ಸಕಲ ಇಂದ್ರಿಯಾಪೇಕ್ಷಯಾ ಉತ್ತಮತ್ವಪ್ರದನಾಗಿರುವೆನು. ಸಕಲರ ಚಿತ್ತನಿಯಾಮಕನಾದುದರಿಂದ ಚೇತನನಾಮಕನಾದ ನಾನು ಚಿತ್ತದಲ್ಲಿದ್ದು ಚಿತ್ತಕ್ಕೆ ಅಧಿಕ ಶಕ್ತಿಪ್ರದನಾಗುವೆನು. ಸಜ್ಜನರಿಗೆ ಸುಖಕಾರಣನಾದುದರಿಂದ ಶಂಕರನಾಮಕನಾದ ನಾನು ಉಮಾಪತಿಯಾದ ರುದ್ರನಲ್ಲಿದ್ದು ಆತನಿಗೆ ಏಕಾದಶ ರುದ್ರರುಗಳಲ್ಲಿ ಉತ್ತಮತ್ವಪ್ರದನಾಗಿರುವೆನು. ಪಶ್ಚಾತ್ತಪ್ತರಾದ ಪಾಪಿಗಳನ್ನು ಶುದ್ಧಿ ಮಾಡುವುದರಿಂದ ಪಾಪಕನಾಮಕನಾದ ನಾನು ಅಗ್ನಿಯಲ್ಲಿದ್ದು ಆತನನ್ನು ಸರ್ವ ವಸ್ತುಗಳಲ್ಲಿಯೂ ಶ್ರೇಷ್ಠನನ್ನಾಗಿ ಮಾಡಿರುವೆನು. ಅನನ್ಯ ಪ್ರೇರಕನಾದುದರಿಂದ ಮೇರು ಶಬ್ದವಾಚ್ಯನಾದ ನಾನು ಮೇರು ಪರ್ವತದಲ್ಲಿದ್ದು ಸಕಲ ಪರ್ವತಗಳದೆಸೆಯಿಂದ ಅದಕ್ಕೆ ಉತ್ತಮತ್ವಪ್ರದನಾಗಿರುತ್ತೇನೆ ಶ್ರೇಷ್ಠರಾದ ಬ್ರಹ್ಮಾದಿಗಳಿಗೂ ಕೂಡ ಸ್ವಾಮಿಯಾದುದರಿಂದ ಬೃಹಸ್ಪತಿನಾಮಕನಾದ ನಾನು ಬೃಹಸ್ಪತ್ಯಾಚಾರ್ಯರಲ್ಲಿ ಸನ್ನಿಹಿತನಾಗಿ ಅವರಿಗೆ ಸಕಲ ಪುರೋಹಿತರುಗಳಲ್ಲಿ ಉತ್ತಮತ್ವಪ್ರದನಾಗಿರುತ್ತೇನೆ. ಸ್ವೇದರದಿಂದ ಜಗತ್ತನ್ನು ಸೃಷ್ಟಿ ಕಾಲದಲ್ಲಿ ಹೊರಗೆ ಹಾಕುವುದರಿಂದ ಸ್ಕಂದನಾಮಕನಾದ ನಾನು ಷಣ್ಮುಖನಲ್ಲಿ ಸ್ಥಿತನಾಗಿ ಆತನನ್ನು ಸೇನಾಧಿಪತಿಗಳಲ್ಲಿ ಅಗ್ರಗಣ್ಯನನ್ನಾಗಿ ಮಾಡಿರುವೆನು. ಸಾರಭೋಕ್ತನಾದುದರಿಂದ ಸಾಗರನಾಮಕನಾದ ನಾನು ಸಮುದ್ರದಲ್ಲಿದ್ದು ಜಲಾಶಯಗಳಲ್ಲೆಲ್ಲಾ ಸಮುದ್ರವನ್ನು ಶ್ರೇಷ್ಠವನ್ನಾಗಿ ಮಾಡಿರುವೆನು. ದೈತ್ಯರನ್ನು ಹುರಿಯುವುದರಿಂದ (ಕ್ಲೇಶಗಳಿಂದ ಪೀಡಿಸುವುದರಿಂದ) ಭೃಗುನಾಮಕನಾಗಿ ನಾನು ಭೃಗುಋಷಿಗಳಲ್ಲಿದ್ದು ಅವರಿಗೆ ಮಹರ್ಷಿಗಳಲ್ಲಿ ಉತ್ತಮತ್ವಪ್ರದನಾಗಿರುವೆನು. ಸರ್ವಪ್ರಧಾನನೂ ಚತುರ್ವಿಧ ನಾಶರಹಿತನೂ ಆದುದರಿಂದ ಏಕಾಕ್ಷರನಾಮಕನಾದ ನಾನು ಪ್ರಣವದಲ್ಲಿದ್ದು ಅದನ್ನು ಸರ್ವ ವೇದಾಕ್ಷರಗಳಲ್ಲಿ ಶ್ರೇಷ್ಠವರ್ಣವನ್ನಾಗಿ ಮಾಡಿರುವೆನು. ಹುಟ್ಟಿದವರನ್ನೆಲ್ಲಾ ರಕ್ಷಣೆ ಮಾಡುತ್ತಾ ಭಕ್ತರಿಂದ ಯಜ್ಞದಲ್ಲಿ ಪೂಜ್ಯನಾದುದರಿಂದ ಜಪಯಜ್ಞನಾಮಕನಾದ ನಾನು ಜಪ

ಕ್ರಿಯೆಯಲ್ಲಿ ಸನ್ನಿಹಿತವಾಗಿ ಅದಕ್ಕೆ (ಶ್ರವಣ ಮನನಾದಿ ಜ್ಞಾನಯಜ್ಞಗಳನ್ನು ಹೊರತು) ಸರ್ವ ಯಜ್ಞಗಳಿಗಿಂತಲೂ ಶ್ರೈಷ್ಠ್ಯಪ್ರದನಾಗಿರುವೆನು. ಲಕ್ಷ್ಮೀ ದೇವಿಯವರಿಗೆ ನಿವಾಸಭೂತನಾದುದರಿಂದ ಹಿಮಾಲಯ ಶಬ್ದವಾಚ್ಯನಾದ ನಾನು ಹಿಮಾಲಯದಲ್ಲಿದ್ದು ಅದನ್ನು ಸರ್ವ ಸ್ಥಾವರಗಳಲ್ಲಿಯೂ ಶ್ರೇಷ್ಠವನ್ನಾಗಿ ಮಾಡಿರುತ್ತೇನೆ. ಅತಿ ಶೀಘ್ರಗಮನವುಳ್ಳವನಾದುದರಿಂದ ಅಶ್ವತ್ಥನಾಮಕನಾದ ನಾನು ಅಶ್ವತ್ಥವೃಕ್ಷದಲ್ಲಿ ಸ್ಥಿತನಾಗಿ ಅಶ್ವತ್ಥವೃಕ್ಷಕ್ಕೆ ಸರ್ವ ವೃಕ್ಷಗಳಿಗಿಂತ ಆಧಿಕ್ಯಪ್ರದನಾಗಿರುತ್ತೇನೆ. ಭಕ್ತರಿಗೆ ಅಭೀಷ್ಟವಾದ ಜ್ಞಾನಾದಿದಾತನಾದುದರಿಂದ ನಾರದ ನಾಮಕನಾದ ನಾನು ನಾರದರಲ್ಲಿ ಸ್ಥಿತನಾಗಿ ಅವರನ್ನು ಸಕಲ ದೇವರ್ಷಿ ಶ್ರೇಷ್ಠರನ್ನಾಗಿ ಮಾಡಿರುತ್ತೇನೆ. ವಿಚಿತ್ರವಾದ ದೇವಾದಿ ದೇಹಗಳನ್ನೇ ರಥವನ್ನಾಗಿ ಮಾಡಿಕೊಂಡಿರುವುದರಿಂದ ಚಿತ್ರರಥನಾಮಕನಾದ ನಾನು ಚಿತ್ರರಥನೆಂಬ ಗಂಧರ್ವನಲ್ಲಿದ್ದು ಅವನಿಗೆ ಇತರ ಗಂಧರ್ವರಿಗಿಂತ ಉತ್ತಮತ್ವಪ್ರದನಾಗಿರುತ್ತೇನೆ.

ಈ ವಾಕ್ಯಗಳಿಂದ ವೇದೋಕ್ತವಾದ, ರವಿ, ಮರೀಚಿ, ಸಾಮ, ವಾಸವ, ಮನ, ಚೇತನಾ, ಶಂಕರ, ಪಾವಕ, ಮೇರು ಬೃಹಸ್ಪತಿ, ಸ್ಕಂದ, ಸಾಗರ, ಭೃಗು ಏಕಾಕ್ಷರ, ಜಪಯಜ್ಞ, ಹಿಮಾಲಯ, ಅಶ್ವತ್ಥ, ನಾರದ, ಚಿತ್ರರಥಾದಿ ಅನೇಕ ನಾಮಗಳಿಂದ ಶ್ರೀ ವಿಷ್ಣುವೇ ಮುಖ್ಯ ಪ್ರತಿಪಾದ್ಯನೆಂದು ಸಿದ್ಧವಾಗುವುದು. ಇನ್ನೂ ವೇದದಲ್ಲಿರುವ ಅನೇಕ ನಾಮಗಳು ಇದೇ ರೀತಿಯಾಗಿ ಪರಮಾತ್ಮನನ್ನು ಬೋಧಿಸುವುವೆಂದು ಶ್ರೀ ಪರಮಾತ್ಮನು ತೋರಿಸುತ್ತಾನೆ:—

**ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಂ ।**
**ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಂ ॥**
**ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।**

—(10. 26-28)

ಅತ್ಯುತ್ಕೃಷ್ಟವಾದ ಕೀರ್ತಿಯುಳ್ಳವನಾದುದರಿಂದ ಉಚ್ಚೈಃಶ್ರವನಾಮಕನಾದ ನಾನು ಉಚ್ಚೈಃಶ್ರವವೆಂಬ ಕ್ಷೀರಸಮುದ್ರಜಾತವಾದ ಇಂದ್ರನ ಕುದುರೆಯಲ್ಲಿ ಸ್ಥಿತನಾಗಿ ಆ ಕುದುರೆಗೆ ಸರ್ವಾಪೇಕ್ಷಯಾ ಆಧಿಕ್ಯಪ್ರದನಾಗಿರುವೆನು. ಐರನಾಮಕ ಮುಕ್ತಸ್ಥಾನದ ಲಕ್ಷ್ಮ್ಯಾತ್ಮಕ ಸರೋವರಕ್ಕೆ ನಿಯಾಮಕನಾದುದರಿಂದ ಐರಾವತ ನಾಮಕನಾದ ನಾನು ಐರಾವತವೆಂಬ ಗಜ ಶ್ರೇಷ್ಠನಲ್ಲಿ ಸ್ಥಿತನಾಗಿ ಅದಕ್ಕೆ ಸರ್ವ ಆನೆಗಳ ದೆಸೆಯಿಂದ ಉತ್ತಮತ್ವಪ್ರದನಾಗಿರುವೆನು. ಸಕಲ ಪ್ರಜೆಗಳಿಗೂ ಅಧಿಪತಿಯಾಗಿರುವುದರಿಂದ ನರಾಧಿಪ ಸಂಜ್ಞಕನಾದ ನಾನು ಚಕ್ರವರ್ತ್ಯಾದಿಗಳಲ್ಲಿ ಸ್ಥಿತನಾಗಿ ಅವರುಗಳಿಗೆ ಇತರ ಜನಗಳಿಗಿಂತ ಆಧಿಕ್ಯಪ್ರದನಾಗಿರುವೆನು.

ಸರ್ವ ದೋಷವರ್ಜಿತನಾದುದರಿಂದ ವಜ್ರನಾಮಕನಾದ ನಾನು ವಜ್ರಾಯುಧದಲ್ಲಿ ಸ್ಥಿತನಾಗಿ ಅದನ್ನು ಆಯುಧಗಳಲ್ಲಿ ಶ್ರೇಷ್ಠವನ್ನಾಗಿ ಮಾಡಿರುವೆನು. ಕಾಮಿತಾರ್ಥಪ್ರದನಾದುದರಿಂದ ಕಾಮಧೇನುನಾಮಕನಾದ ನಾನು ಕಾಮಧೇನುವಿನಲ್ಲಿ ಸ್ಥಿತನಾಗಿ ಅದಕ್ಕೆ ಇತರ ಗೋವುಗಳದೆಸೆಯಿಂದ ಉತ್ತಮತ್ವಪ್ರದನಾಗಿರುವೆನು.

ಮತ್ತು ಕೆಲವು ವೈದಿಕ ನಾಮಗಳು ಶ್ರೀಹರಿಗೆ ಉಂಟೆಂದು ಮುಂದಿನ ಶ್ಲೋಕಗಳಿಂದ ನಿರೂಪಿಸಲ್ಪಡುವುದು :—

**.... .... .... ಸರ್ಪಾಣಾಮಸ್ಮಿ ವಾಸುಕಿಃ ॥**
**ಅನಂತಶ್ಚಾಸ್ಮಿ ನಾಗಾನಾಂ.... .... .... .... ।**
**ಪಿತೄಣಾಮರ್ಯಮಾ ಚಾಸ್ಮಿ ಯಮಸ್ಸಂಯಮತಾಮಹಂ ॥**
**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಂ ।**
**ಮೃಗಾಣಾಂ ಚ ಮೃಗೇಂದ್ರೋಽಹಂ ವೈನತೇಯಶ್ಚ ಪಕ್ಷಿಣಾಂ ॥**
**ಪವನಃ ಪವತಾಮಸ್ಮಿ .... .... .... .... ।**
**ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥**
**.... .... .... .... .... .... ।**
**ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಂ ॥**
**ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ ।**
—(10. 28-33.)

ಎಲೈ ಪಾರ್ಥನೇ ! ಭಕ್ತರಿಗೆ ವಾಸಸುಖಪ್ರದನಾದುದರಿಂದ ವಾಸುಕಿನಾಮಕನಾದ ನಾನು ವಾಸುಕಿನಾಮಕನಾದ ಸರ್ಪದಲ್ಲಿ ಸ್ಥಿತನಾಗಿ ಅದಕ್ಕೆ ಸರ್ವ ಸರ್ಪಗಳ ದೆಸೆಯಿಂದ ಆಧಿಕ್ಯಪ್ರದನಾಗಿರುತ್ತೇನೆ ದೇಶತಃ ಕಾಲತಃ ಮತ್ತು ಗುಣತಃ ಪರಿಪೂರ್ಣನಾದುದರಿಂದ ಅನಂತ ನಾಮಕನಾದ ನಾನು ಶೇಷಾಖ್ಯ ಸರ್ಪನಲ್ಲಿದ್ದು ಅವನನ್ನು ಸರ್ಪನಾಗಗಳ ( ಅನೇಕ ಹೆಡೆಗಳುಳ್ಳ ಸರ್ಪಗಳ ) ದೆಸೆಯಿಂದ ಅಧಿಕನನ್ನಾಗಿ ಮಾಡಿರುತ್ತೇನೆ. ಜ್ಞೇಯವಾದ ಸಕಲವನ್ನೂ ತಿಳಿದವದಾದುದರಿಂದ ಅರ್ಯಮಾನಾಮಕನಾದ ನಾನು ಅರ್ಯಮನೆಂಬ ಪಿತೃ ದೇವನಲ್ಲಿದ್ದು ಆತನಿಗೆ ಇತರ ಪಿತೃ ದೇವತೆಗಳಿಗಿಂತ ಉತ್ತಮತ್ವಪ್ರದನಾಗಿರುವೆನು. ಜಗನ್ನಿಯಮನಕರ್ತನಾದುದರಿಂದ ಯಮನಾಮಕನಾದ ನಾನು ಯಮದೇವರಲ್ಲಿದ್ದು ಆತನಿಗೆ ನಿಗ್ರಹ ಮಾಡುವವರಲ್ಲಿ ಶ್ರೇಷ್ಠತ್ವ ಸಂಪಾದಕನಾಗಿರುತ್ತೇನೆ. ಪ್ರಕೃಷ್ಟ ಸುಖಪೂರ್ಣನಾದುದರಿಂದ ಪ್ರಹ್ಲಾದನಾಮಕನಾದ ನಾನು ಪ್ರಹ್ಲಾದನೆಂಬ ದೈತ್ಯನಲ್ಲಿ ಸ್ಥಿತನಾಗಿ ಆತನಿಗೆ ಉತ್ತಮತ್ವಪ್ರದನಾಗಿರುವೆನು. ಸರ್ವಜ್ಞನಾದುದರಿಂದ ಕಾಲನಾಮಕನಾದ ನಾನು ಕಾಲದಲ್ಲಿ ಸ್ಥಿತನಾಗಿ ಅದನ್ನು ನಾಶಕಾರಣಗಳಲ್ಲೆಲ್ಲಾ ಶ್ರೇಷ್ಠವನ್ನಾಗಿ ಮಾಡಿರುತ್ತೇನೆ. ನನ್ನನ್ನು ಅನ್ವೇಷಣ ಮಾಡತಕ್ಕ ಭಕ್ತರಿಗೆ ಅಧಿಪತಿಯಾದುದರಿಂದ ಮೃಗೇಂದ್ರನಾಮಕನಾದ ನಾನು ಸಿಂಹದಲ್ಲಿ ಸ್ಥಿತನಾಗಿ ಅದನ್ನು ಸರ್ವ ಮೃಗಗಳಿಗಿಂತಲೂ ಶ್ರೇಷ್ಠವನ್ನಾಗಿ ಮಾಡಿರುವೆನು. ಶರಣಾಗತರಿಗೆ ಆಶ್ರಯನಾದುದರಿಂದ ವೈನತೇಯ ನಾಮಕನಾದ ನಾನು ಗರುಡನಲ್ಲಿ ಸ್ಥಿತನಾಗಿ ಆತನನ್ನು ಸರ್ವ ಪಕ್ಷಿಗಳಿಗಿಂತಲೂ ಶ್ರೇಷ್ಠನನ್ನಾಗಿ ಮಾಡಿರುವೆನು. ಜಗತ್ಪಾಲಕರಾದ ದೇವತೆ

ಗಳಿಂದ ಭಜನೀಯನಾದುದರಿಂದ ಪವನ ನಾಮಕನಾದ ನಾನು ಪ್ರಧಾನ ವಾಯುವಿನಲ್ಲಿ ಸ್ಥಿತನಾಗಿ ಆತನನ್ನು ಶುದ್ಧಿ ಮಾಡುವವರಲ್ಲೆಲ್ಲಾ ಶ್ರೇಷ್ಠನನ್ನಾಗಿ ಮಾಡಿರುವೆನು. (ಅಥವಾ ಸಕಲ ವಾಯುಗಳಿಗಿಂತಲೂ ಉತ್ತಮನನ್ನಾಗಿ ಮಾಡಿರುವೆನು.) ಸಕಲರನ್ನೂ ಅನಂತ ಅಲ್ಪಜ್ಞಾನ ಉಳ್ಳವರನ್ನಾಗಿ ಮಾಡುವವನಾದುದರಿಂದ ಮಕರನಾಮಕನಾದ ನಾನು ಮೊಸಳೆಯಲ್ಲಿ ಸ್ಥಿತನಾಗಿ ಅದನ್ನು ಸಕಲ ಮೀನುಗಳಲ್ಲಿ ಶ್ರೇಷ್ಠವನ್ನಾಗಿ ಮಾಡಿರುವೆನು. ವೈರಾಗ್ಯದಿಂದ ಸಂಸಾರವನ್ನು ಪರಿತ್ಯಾಗ ಮಾಡಿದವರನ್ನು ರಕ್ಷಿಸುವೆನಾದುದರಿಂದ ಜಾಹ್ನವೀನಾಮಕನಾದ ನಾನು ಗಂಗಾ ನದಿಯಲ್ಲಿ ಸ್ಥಿತನಾಗಿ ಅದನ್ನು ಸಕಲ ಪ್ರವಾಹಗಳದೆಸೆಯಿಂದಲೂ ಅಧಿಕವನ್ನಾಗಿ ಮಾಡಿರುವೆನು........ ನಿಖಿಲ ಜೀವೇಶ್ವರನಾಗಿ ನಿತ್ಯಜ್ಞಪ್ತಿಸ್ವರೂಪನಾದುದರಿಂದ ಅಧ್ಯಾತ್ಮ ವಿದ್ಯಾನಾಮಕನಾದ ನಾನು ಬ್ರಹ್ಮವಿದ್ಯೆಯಲ್ಲಿ ಸ್ಥಿತನಾಗಿ ಅದಕ್ಕೆ ಸರ್ವ ವಿದ್ಯೆಗಳಿಗಿಂತಲೂ ಉತ್ತಮತ್ವಪ್ರದನಾಗಿರುವೆನು. ನಿಖಿಲ ಶಬ್ದವಾಚ್ಯನಾದುದರಿಂದ ವಾದನಾಮಕನಾದ ನಾನು ವಾದ ಕಥೆಯಲ್ಲಿ ಸನ್ನಿಹಿತನಾಗಿ ಅದಕ್ಕೆ ಇತರ ವಾದಗಳಿಂತ ಆಧಿಕ್ಯಪ್ರದನಾಗಿರುವೆನು. “ಅ” ಎಂದು ಕರೆಯಲ್ಪಡುವುದರಿಂದ “ಅಕಾರ” ನಾಮಕನಾದ ನಾನು ಅವರ್ಣದಲ್ಲಿ ಸ್ಥಿತನಾಗಿ ಅದಕ್ಕೆ ಇತರ ವರ್ಣಗಳದೆಸೆಯಿಂದ ಆಧಿಕ್ಯಪ್ರದನಾಗಿರುವೆನು. ಅಂತಃ ಮತ್ತು ಬಹಿಃ ಎಂದು ಎರಡು ರೂಪಗಳಿಂದ ಸ್ಥಿತನಾದುದರಿಂದ ದ್ವಂದ್ವನಾಮಕನಾದ ನಾನು ದ್ವಂದ್ವ ಸಮಾಸದಲ್ಲಿ ಸ್ಥಿತನಾಗಿ ಅದನ್ನು ಸಮಾಸಗಳಲ್ಲಿ ಶ್ರೇಷ್ಠವನ್ನಾಗಿ ಮಾಡಿರುವೆನು.

ಈ ವಾಕ್ಯಾರ್ಥಪರ್ಯಾಲೋಚನೆಯಿಂದ ಉಚ್ಚೈಃಶ್ರವ, ಐರಾವತ, ನರಾಧಿಪ, ವಜ್ರ, ಕಾಮಧುಕ್, ವಾಸುಕಿ, ಅನಂತ, ಅರ್ಯಮಾ, ಯಮ, ಪ್ರಹ್ಲಾದ, ಕಾಲ, ಮೃಗೇಂದ್ರ, ವೈನತೇಯ, ಪವನ, ಮಕರ, ಜಾಹ್ನವೀ, ಅಧ್ಯಾತ್ಮವಿದ್ಯಾ, ವಾದ, ಅಕಾರ ದ್ವಂದ್ವಗಳೆಂಬ ವೈದಿಕ ಪದಗಳಿಂದ ಶ್ರೀ ಹರಿಯೇ ಪ್ರತಿಪಾದ್ಯನು ಎಂದು ಸ್ಪಷ್ಟವಾಗುವುದು. ಆ ನಾಮಾಂಕಿತನಾದ ಪರಮಾತ್ಮನು ಆಯಾಯ ನಾಮವುಳ್ಳ ರೂಪದಿಂದ ಒಂದೊಂದು ವಸ್ತುವಿನಲ್ಲಿ ಸ್ಥಿತನಾಗಿ ತನ್ನಿಂದ ಅಧಿಷ್ಠಿತವಾದ ವಸ್ತುವಿಗೆ ಸಜಾತೀಯವಾದ ಇತರ ವಸ್ತುಗಳಿಗಿಂತ ಆಧಿಕ್ಯಪ್ರದನಾಗಿರುವೆನೆಂದೂ ಸಿದ್ಧವಾಗುವುದು.

ಉತ್ತರ ಶ್ಲೋಕಗಳಲ್ಲಿ ಇದೇ ರೀತಿಯಾದ ವಿಭೂತಿರೂಪಗಳಿಗೆ ವಾಚಕಗಳಾದ ಮತ್ತೆ ಕೆಲವು ವೈದಿಕ ನಾಮಗಳನ್ನು ನಿರೂಪಿಸಿ ಅವುಗಳೂ ನನ್ನನ್ನೇ ಪ್ರತಿಪಾದಿಸುವುವೆಂದು ಶ್ರೀ ಕೃಷ್ಣನು ಉಪದೇಶ ಮಾಡಿರುತ್ತಾನೆ :—

**ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಂ ।**
**ಮಾಸಾನಾಂ ಮಾರ್ಗಶೀರ್ಷೋಽಹಂ ಋತೂನಾಂ ಕುಸುಮಾಕರಃ ॥**
**...............ಪಾಂಡವಾನಾಂ ಧನಂಜಯಃ ।**
**......................ಕವೀನಾಮುಶನಾಃ ಕವಿಃ ॥**

—(10. 35-37.)

ಪೂರ್ಣಸಾರನಾಗಿಯೂ ಸಾಕಲ್ಯೇನ ಅಜ್ಞೇಯನಾಗಿಯೂ ಇರುವುದರಿಂದ ಬೃಹತ್ಸಾಮನಾಮಕನಾದ ನಾನು ಬೃಹತ್ಸಾಮವೆಂಬ ಸಾಮಭಾಗದಲ್ಲಿ ಸ್ಥಿತನಾಗಿ ಅದನ್ನು ಇತರ (ರಥಂತರಾದಿ) ಸಾಮಗಳಿಗಿಂತಲೂ ಶ್ರೇಷ್ಠವನ್ನಾಗಿ ಮಾಡಿರುವೆನು. ನನ್ನನ್ನು ಕುರಿತು ಗಾಯನ ಮಾಡುವವರನ್ನು ರಕ್ಷಿಸುವನಾದುದರಿಂದ ಗಾಯತ್ರೀನಾಮಕನಾದ ನಾನು ಗಾಯತ್ರಿಯನ್ನು ಛಂದಸ್ಸುಗಳಲ್ಲಿ ಶ್ರೇಷ್ಠವನ್ನಾಗಿ ಮಾಡಿರುವೆನು. ಸನ್ಮಾರ್ಗದಿಂದ ಪ್ರಾಪ್ಯರಾದವರಲ್ಲಿ ನಾನೇ ಕೊನೆಯವನಾದುದರಿಂದ ಮಾರ್ಗಶೀರ್ಷನಾಮಕನಾದ ನಾನು ಮಾರ್ಗಶೀರ್ಷದಲ್ಲಿ ಸ್ಥಿತನಾಗಿ ಅದನ್ನು (ಕಾರ್ತಿಕಾದಿ ಮಾಸಗಳನ್ನು ಬಿಟ್ಟು) ಇತರ ಮಾಸಗಳಿಗಿಂತ ಶ್ರೇಷ್ಠವನ್ನಾಗಿ ಮಾಡಿರುವೆನು ಜನರ ಯೋಗ್ಯತಾನುಸಾರ ಉತ್ತಮ ಜ್ಞಾನವನ್ನೂ, ದುಷ್ಟ ಜ್ಞಾನವನ್ನೂ, ವಿತರಿಸುವವನಾದುದರಿಂದ ಕುಸುಮಾಕರ ನಾಮಕನಾದ ನಾನು ವಸಂತ ಋತುವಿನಲ್ಲಿ ಸನ್ನಿಹಿತನಾಗಿ ಅದನ್ನು ಇತರ ಋತುಗಳಿಗಿಂತ ಶ್ರೇಷ್ಠವನ್ನಾಗಿ ಮಾಡಿರುವೆನು. ಸಮಸ್ತ ಧನವನ್ನೂ ಜಯಿಸುವವನಾದುದರಿಂದ ಧನಂಜಯನಾಮಕನಾದ ನಾನು ಅರ್ಜುನನಲ್ಲಿ ಸ್ಥಿತನಾಗಿ ಆತನನ್ನು (ಭೀಮಸೇನನನ್ನು ಹೊರತು) ಇತರ ಪಾಂಡವರಿಗಿಂತ ಅಧಿಕನನ್ನಾಗಿ ಮಾಡಿರುವೆನು. ಸೃಷ್ಟ್ಯಾದಿ ಕಾಲಗಳಲ್ಲಿ ಜಗತ್ಸರ್ಜನಾದಿ ಇಚ್ಛೆಯುಳ್ಳವನಾದುದರಿಂದ ಉಶನಾನಾಮಕನಾದ ನಾನು ಶುಕ್ರಾಚಾರ್ಯರಲ್ಲಿ ಸ್ಥಿತನಾಗಿ ಅವರನ್ನು (ಬ್ರಹ್ಮಾದಿ ಉತ್ತಮ ಕವಿಗಳಿಂದ ಭಿನ್ನರಾದ) ಇತರ ಕಾಳಿದಾಸಾದಿ ಕವಿಗಳಿಗಿಂತ ಉತ್ತಮರನ್ನಾಗಿ ಮಾಡಿರುವೆನು.

ಈ ಪ್ರಕಾರವಾಗಿ ವೇದದಲ್ಲಿರುವ ಬೃಹತ್ಸಾಮ, ಗಾಯತ್ರೀ, ಮಾರ್ಗಶೀರ್ಷ, ಕುಸುಮಾಕರ, ಧನಂಜಯ, ಉಶನಾ ಇತ್ಯಾದಿ ಶಬ್ದಗಳು ಪರಮಾತ್ಮನ ಗುಣಗಳನ್ನೇ ಬೋಧಿಸುವುವೆಂದು ಸ್ಪಷ್ಟವಾಗುವುದು. ಇವುಗಳೆಲ್ಲವೂ ಸಜಾತೀಯ ವಸ್ತುಗಳಿಗಿಂತ ಉತ್ಕರ್ಷ ದಾನಾರ್ಥವಾಗಿ ಆಯಾಯ ಯೋಗ್ಯ ವಸ್ತುವಿನಲ್ಲಿ ಸ್ಥಿತವಾದ ಭಗವದ್ರೂಪಗಳ ಹೆಸರುಗಳಾಗಿರುವುವು.

16. ಮತ್ತು ಕೆಲವು ವೈದಿಕ ಶಬ್ದಗಳು ವಿಜಾತೀಯ ವಸ್ತುಗಳಿಂದ ಸ್ವಾಧಿಷ್ಠಾನಕ್ಕೆ ಆಧಿಕ್ಯಪ್ರದಾನಾರ್ಥವಾಗಿ ಸ್ಥಿತವಾದ ಭಗವದ್ರೂಪಗಳ ಹೆಸರುಗಳಾಗಿರುವುವು. ಶ್ರೀ ಕೃಷ್ಣನು ಹೇಳುತ್ತಾನೆ:—

(1) .... .... **ನಕ್ಷತ್ರಾಣಾಮಹಂ ಶಶೀ ||** —(10. 21.)

(2) .... .... **ವಿತ್ತೇಶೋ ಯಕ್ಷರಕ್ಷಸಾಂ |** —(10. 23.)

(3) .... .... **ವರುಣೋ ಯಾದಸಾಮಹಂ |**—(10. 29.)

**ಅರ್ಥ :—** ಅತಿ ಸುಖವಂತನಾದುದರಿಂದ ಶಶಿನಾಮಕನಾದ ನಾನು ಚಂದ್ರನಲ್ಲಿ ಸ್ಥಿತನಾಗಿ ಆತನನ್ನು ಸರ್ವ ನಕ್ಷತ್ರಗಳಿಗೆ ಅಧಿಪತಿಯನ್ನಾಗಿ ಮಾಡಿರುತ್ತೇನೆ. ನಿಖಿಲ ದ್ರವ್ಯಗಳಿಗೂ ಸ್ವಾಮಿಯಾದುದರಿಂದ ವಿತ್ತೇಶನಾಮಕನಾದ ನಾನು ಕುಬೇರ

ನಲ್ಲಿ ಸ್ಥಿತನಾಗಿ ಆತನನ್ನು ಯಕ್ಷರಕ್ಷೋ ಗಣಗಳಿಗೆ ಅಧಿಪತಿಯನ್ನಾಗಿ ಮಾಡಿರುವೆನು; ಉತ್ಕೃಷ್ಟಾನಂದ ಸ್ವರೂಪನಾದುದರಿಂದ ವರುಣನಾಮಕನಾದ ನಾನು ವರುಣದೇವನಲ್ಲಿ ಸನ್ನಿಹಿತನಾಗಿ ಆತನನ್ನು ಸರ್ವ ಜಲಚರ ಪ್ರಾಣಿಗಳಿಗೂ ಅಧಿಪತಿಯನ್ನಾಗಿ ಮಾಡಿರುವೆನು.

ಈ ಪ್ರಕಾರವಾಗಿ ವೇದೋಕ್ತವಾದ ಶಶಿ, ವಿತ್ತೇಶ, ವರುಣನಾಮಗಳಿಂದ ಪರಮಾತ್ಮನೇ ಪ್ರತಿಪಾದ್ಯನು

17. ಕಂದರ್ಪ, ಕೀರ್ತಿ, ಶ್ರೀ, ನೀತಿ ಮುಂತಾದ ಇನ್ನೂ ಅನೇಕ ವೈದಿಕ ಶಬ್ದಗಳಿಂದಲೂ ಪರಮಾತ್ಮನೇ ಪ್ರತಿಪಾದ್ಯನು. ಈ ನಾಮಗಳಿಂದ ಕರೆಯಲ್ಪಡುವ ತನ್ನ ರೂಪಗಳನ್ನು ಶ್ರೀ ಪರಮಾತ್ಮನು ನಾನಾ ಪದಾರ್ಥಗಳಲ್ಲಿಟ್ಟು, ಆಯಾಯ ವಸ್ತುಗತ ಸಾರ ಧರ್ಮಗಳಿಗೆ ಕಾರಣನಾಗಿಯೂ. ನಿಯಾಮಕನಾಗಿಯೂ ಇರುವನು. ಕೆಲವು ಭಗವನ್ನಾಮಗಳು ಪರಮಾತ್ಮನ ಗುಣಗಳನ್ನು ಮಾತ್ರ ಬೋಧಿಸುವುವು. ಆ ನಾಮದಿಂದ ವಾಚ್ಯವಾದ ಭಗವದ್ರೂಪವು ನಿಯತವಾದ ಒಂದು ಅಧಿಷ್ಠಾನದಲ್ಲಿರುವುದಿಲ್ಲ. ಶ್ರೀ ಕೃಷ್ಣನು ಹೇಳುತ್ತಾನೆ :—

(1) **ಪ್ರಜನಶ್ಚಾಸ್ಮಿ ಕಂದರ್ಪಃ... ....** ॥ —(10. 28.)

(2) **ಮೃತ್ಯುಸ್ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಂ ।**
**ಕೀರ್ತಿಶ್ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ॥**
—(10. 34.)

**ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಂ ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಂ ॥**
—(10. 36.)

**ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಂ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಂ ॥**
—(10. 38.)

"ಮೋದಪ್ರಮೋದಾದಿ ಅನೇಕ ಸುಖಪ್ರಭೇದಗಳನ್ನು ಅನುಭವಿಸುವನಾದುದರಿಂದ ಕಂದರ್ಪನಾಮಕನಾದ ನಾನು ಪ್ರಕೃಷ್ಟಜನನಕಾರಣನಾದ ಮನ್ಮಥನಲ್ಲಿ ಸ್ಥಿತನಾಗಿ ( ಸರ್ವರಲ್ಲಿರುವ ಪ್ರಜನನ ಶಕ್ತಿಗೂ ) ನಿಯಾಮಕನಾಗಿರುವೆನು. ಮಾರಕನಾದುದರಿಂದ ಮೃತ್ಯುನಾಮಕನಾದ ನಾನು ಆಯುಸ್ಸು ಮುಗಿದವರನ್ನು ಸಂಹಾರ ಮಾಡುವ ಮೃತ್ಯುದೇವತೆಯಲ್ಲಿ ಸ್ಥಿತನಾಗಿ ಆಕೆಯ ಶಕ್ತಿಗೆ ನಿಯಾಮಕನಾಗಿರುವೆನು. ಜಗದುತ್ಪಾದಕನಾದುದರಿಂದ ಉದ್ಭವನಾಮಕನಾದ ನಾನು ಉತ್ಪನ್ನವಾಗುವ ಸಕಲ ವಸ್ತುಗಳ ಉತ್ಪತ್ತಿಗೆ ನಿಯಾಮಕನಾಗಿರುವೆನು. ಗಾಯಕರ ಸಂಕೀರ್ತನೆಗಳಿಗೆ ವಿಷಯನಾದುದರಿಂದ ಕೀರ್ತಿನಾಮಕನೂ; ಜಗತ್ತಿಗೆ ಆಶ್ರಯ

ನಾದುದರಿಂದ ಶ್ರೀನಾಮಕನೂ; ಉತ್ತಮನಾದ ವಾಗ್ಮಿಯಾದುದರಿಂದ ನಾನೇ ವಾಙ್ನಾಮಕನೂ ಆಗಿ, ನಾನೇ ಕೀರ್ತಿ, ಶ್ರೀ ಮತ್ತು ವಚನ ಶಕ್ತಿಗಳಿಗೆ ನಿಯಾಮಕನಾಗಿರುವೆನು ಭಕ್ತರಿಂದ ಸ್ಮರಣೀಯನಾದುದರಿಂದ ಸ್ಮೃತಿನಾಮಕನಾದ ನಾನು ಸ್ಮೃತಿಗೆ ನಿಯಾಮಕನಾಗಿರುವೆನು. ಹೀಗೆ ಮೇಧಾರೂಪನಾದುದರಿಂದ ಮೇಧಾನಾಮಕನಾಗಿ ಬುದ್ಧಿಯಲ್ಲಿ ಸನ್ನಿಹಿತನಾಗಿರುವೆನು ಧೃತಿಸ್ವರೂಪನಾದುದರಿಂದ ಧೃತಿನಾಮಕನಾಗಿ ನಾನು ಧೃತಿಗೆ ನಿಯಾಮಕನಾಗಿರುವೆನು. ಕ್ಷಮಾರೂಪನಾದುದರಿಂದ ಕ್ಷಮಾನಾಮಕನಾದ ನಾನು ಕ್ಷಮಾಗುಣಕ್ಕೆ ನಿಯಾಮಕನಾಗಿರುತ್ತೇನೆ.

ಕಪಟಿಗಳಲ್ಲಿ ದ್ಯೂತವೆಂಬ ಪ್ರಧಾನ ಧರ್ಮಕ್ಕೆ ಕ್ರೀಡಾರತನಾದುದರಿಂದ ದ್ಯೂತನಾಮಕನಾದ ನಾನು ನಿಯಾಮಕನಾಗಿರುತ್ತೇನೆ. ಪ್ರಕಾಶಸ್ವರೂಪನಾದುದರಿಂದ ತೇಜಶ್ಶಬ್ದವಾಚ್ಯನಾದ ನಾನು ತೇಜೋವಂತರಲ್ಲಿರುವ ತೇಜಸ್ಸೆಂಬ ಸಾರಧರ್ಮಕ್ಕೆ ಪ್ರವರ್ತಕನು. ನಿತ್ಯಜಯಶೀಲನಾದುದರಿಂದ ಜಯನಾಮಕನಾದ ನಾನು ಜಯವಂತರಲ್ಲಿರುವ ಜಯರೂಪವಾದ ಸಾರಧರ್ಮಕ್ಕೆ ನಿಯಾಮಕನು. ನಿಶ್ಚಯವಂತರಲ್ಲಿರುವ ನಿಶ್ಚಯರೂಪವಾದ ಸಾರಧರ್ಮಕ್ಕೆ ಕಾರಣನಾದುದರಿಂದ ನಾನೇ ವ್ಯವಸಾಯನಾಮಕನು. ಬಲವಂತರಲ್ಲಿರುವ ಬಲರೂಪವಾದ ಸಾರಧರ್ಮಕ್ಕೆ ಕಾರಣನಾದುದರಿಂದ ನಾನೇ ಸತ್ವನಾಮಕನು. ದಂಡ ಮಾಡುವವರಲ್ಲಿರುವ ದಂಡನಶಕ್ತಿಗೆ ಕಾರಣನಾದುದರಿಂದ ನಾನೇ ದಂಡನಾಮಕನು. ಜಯಾಪೇಕ್ಷಿಗಳಲ್ಲಿರುವ ನೀತಿರೂಪವಾದ ಸಾರಧರ್ಮಕ್ಕೆ ಪ್ರವರ್ತಕನಾದುದರಿಂದ ನಾನೇ ನೀತಿನಾಮಕನು. ಗೋಪನೀಯ ವಸ್ತುಗಳಲ್ಲೆಲ್ಲಾ ಅತ್ಯಂತ ಗೋಪನೀಯನಾದುದರಿಂದ ಮೌನನಾಮಕನಾದ ನಾನು ಮುನಿಗಳಲ್ಲಿರುವ ಮೌನವೆಂಬ ಸಾರಧರ್ಮಕ್ಕೆ ಪ್ರವರ್ತಕನು. ಸ್ವಯಂ ಜ್ಞಾನಸ್ವರೂಪನಾದುದರಿಂದ ಜ್ಞಾನನಾಮಕನಾದ ನಾನು ಜ್ಞಾನವಂತರಲ್ಲಿರುವ ಜ್ಞಾನವೆಂಬ ಸಾರಧರ್ಮಕ್ಕೆ ಪ್ರವರ್ತಕನು."

ಈ ಶ್ಲೋಕಾರ್ಥ ಪರ್ಯಾಲೋಚನೆಯಿಂದ ಕಂದರ್ಪ, ಮೃತ್ಯು, ಕೀರ್ತಿ, ಶ್ರೀ, ವಾಕ್, ಸ್ಮೃತಿ, ಮೇಧಾ, ಧೃತಿ, ಕ್ಷಮಾ, ದ್ಯೂತ, ತೇಜ, ಜಯ, ವ್ಯವಸಾಯ, ಸತ್ವ, ದಂಡ, ನೀತಿ, ಮೌನ, ಜ್ಞಾನ ಮುಂತಾದ ವೇದದಲ್ಲಿರುವ ಪದಗಳು ಶ್ರೀ ಪರಮಾತ್ಮನನ್ನೇ ಪ್ರತಿಪಾದಿಸುವುವು ಎಂದು ಸಿದ್ಧವಾಗುವುದು.

ಸಪ್ತಮಾಧ್ಯಾಯದಲ್ಲಿಯೂ ಕೂಡ ರಸ, ಪ್ರಭಾ, ಪ್ರಣವ, ಶಬ್ದ, ಪೌರುಷ, ಗಂಧ, ತೇಜಸ್ಸು, ಜೀವನ, ತಪ, ಬುದ್ಧಿ, ಬಲ ಕಾಮಾದಿ ನಾನಾ ವಸ್ತುಗಳಲ್ಲಿರುವ ಸಾರಧರ್ಮಗಳಿಗೆ ಪ್ರವರ್ತಕನಾದುದರಿಂದ ರಸಾದಿ ವೈದಿಕನಾಮಗಳಿಂದ ಶ್ರೀಮನ್ನಾರಾಯಣನೇ ಪ್ರತಿಪಾದ್ಯನೆಂದು ಸಿದ್ಧವಾಗುವುದು.

18. ನವಮಾಧ್ಯಾಯದ ಕೆಲವು ಶ್ಲೋಕಗಳಿಂದಲೂ ಕೂಡ ಕ್ರತು, ಯಜ್ಞ, ಸ್ವಧಾ, ಔಷಧ, ಮಂತ್ರ, ಆಜ್ಯ, ಅಗ್ನಿ, ಹುತಾದಿಗಳಿಗೆ ನಿಯಾಮಕನಾದುದರಿಂದ

ಶ್ರೀ ಪರಮಾತ್ಮನೇ ಕ್ರತು, ಯಜ್ಞಾದಿ ವೈದಿಕ ನಾಮಗಳಿಂದ ಕರೆಯಿಸಿಕೊಳ್ಳಲ್ಪಡುವವನಾಗಿ ಕ್ರತ್ವಾದಿಗಳಲ್ಲಿದ್ದು ಫಲಪ್ರದನಾಗುವನು ಎಂದು ಸಿದ್ಧವಾಗುವುದು. ಪ್ರಕಾರಾಂತರದಿಂದಲೂ ಈ ನಾಮಗಳ ನಿರ್ವಚನವು ಸಾಧ್ಯವಾಗಿರುವುದು. ಶ್ಲೋಕವನ್ನು ಉದಾಹರಿಸಿ ವ್ಯಾಖ್ಯಾನವನ್ನು ನಿರೂಪಿಸುವೆವು :—

(1) **ಅಹಂ ಕ್ರತುರಹಂ ಯಜ್ಞಃ ಸ್ವಧಾಽಹಮಹಮೌಷಧಂ ।**
**ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಂ ॥**

—(9. 16.)

**ತಾತ್ಪರ್ಯವು :—** ಉತ್ತಮ ಕೃತಿ ಸ್ವರೂಪನಾದುದರಿಂದ ನಾನು ಕ್ರತು ನಾಮಕನಾಗಿ, ಕ್ರತುಗಳಿಗೆ ಪ್ರವರ್ತಕನಾಗಿರುತ್ತೇನೆ. ಪ್ರಾಮಾಣಿಕವಾದ ಸರ್ವವನ್ನೂ ತಿಳಿಯುವವನಾದುದರಿಂದ ಯಜ್ಞನಾಮಕನಾದ ನಾನು ಯಜ್ಞಗಳಿಗೆ ಪ್ರವರ್ತಕನಾಗಿರುತ್ತೇನೆ. ನಾನೇ ನನಗೆ ಆಧಾರನಾಗಿರುವುದರಿಂದ ಸ್ವಧಾನಾಮಕನಾದ ನಾನು ಸ್ವಧೆಗೆ ನಿಯಾಮಕನಾಗಿರುವೆನು. ತಾಪತ್ರಯದಗ್ಧರಾದವರಿಗೆ ನಿಧಿ ರೂಪನಾದುದರಿಂದ ನಾನು ಓಷಧನಾಮಕನಾಗಿ ವನಸ್ಪತಿಗಳಲ್ಲಿ ನಿಯಾಮಕನಾಗಿರುವೆನು. ಜ್ಞಾನವನ್ನು ಕೊಟ್ಟು ಭಕ್ತರನ್ನು ರಕ್ಷಿಸುವುದರಿಂದ ಮಂತ್ರ ನಾಮಕನಾದ ನಾನು ಮಂತ್ರದಲ್ಲಿ ಸನ್ನಿಹಿತನಾಗಿರುವೆನು. ಸರ್ವರದೆಸೆಯಿಂದ ಶ್ರೇಷ್ಠನಾದುದರಿಂದ ಆಜ್ಯನಾಮಕನಾದ ನಾನು ಆಜ್ಯದಲ್ಲಿ ಸನ್ನಿಹಿತನಾಗಿರುವೆನು. ಗತಿವಿಹೀನರಿಗೆ ನಾಯಕನಾದುದರಿಂದ ಅಗ್ನಿನಾಮಕನಾದ ನಾನು ಅಗ್ನಿಯಲ್ಲಿ ಸನ್ನಿಹಿತನಾಗಿರುವೆನು. ಯಜ್ಞದಲ್ಲಿ ಆಹೂತನಾದುದರಿಂದ ಹುತನಾಮಕನಾದ ನಾನು ಹೋಮದಲ್ಲಿ ಸನ್ನಿಹಿತನಾಗಿರುವೆನು.

ಇದೇ ರೀತಿಯಲ್ಲಿ ಪಿತೃ, ಮಾತೃ, ಧಾತೃ, ಪಿತಾಮಹಾದಿ ವೈದಿಕ ಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನು ವೇದ್ಯ, ಪವಿತ್ರ, ಓಂಕಾರ, ಋಕ್, ಸಾಮ, ಯಜುಃ, ಮುಂತಾದ ವೈದಿಕ ಪದಗಳೂ ಭಗವಂತನನ್ನೇ ಪ್ರತಿಪಾದಿಸುವುವು. ಹಾಗೆಯೇ ಗತಿ, ಭರ್ತಾ, ಪ್ರಭು, ಸಾಕ್ಷೀ, ನಿವಾಸ, ಶರಣಂ, ಸುಹೃತ್, ಪ್ರಭವ, ಪ್ರಳಯ, ಸ್ಥಾನ, ನಿಧಾನ, ಬೀಜ, ಅಮೃತ, ಮೃತ್ಯು, ಸತ್, ಅಸತ್ ಮುಂತಾದ ವೈದಿಕ ಪದಗಳೂ ಪರಮಾತ್ಮನನ್ನೇ ಪ್ರತಿಪಾದಿಸುವುವು. ಶ್ರೀ ಕೃಷ್ಣನು ಹೇಳುತ್ತಾನೆ :—

(2) **ಪಿತಾಮಹಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ ಋಕ್ಸಾಮಯಜುರೇವ ಚ ॥**
**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಶ್ಶರಣಂ ಸುಹೃತ್ ।**
**ಪ್ರಭವಃ ಪ್ರಳಯಃ ಸ್ಥಾನಂ ನಿಧಾನಂ ಬೀಜಮವ್ಯಯಂ ॥**

.... .... .... .... .... ....

**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ।**

—(9.17–19.)

**ತಾತ್ಪರ್ಯವು :—** ಜಗತ್ತನ್ನು ಸೃಷ್ಟಿಸುವುದರಿಂದ ಪಿತೃನಾಮಕನಾದವನು ನಾನು; ರಕ್ಷಕನಾದುದರಿಂದ ಮಾತೃನಾಮಕನು ನಾನು; ಧಾರಕನಾದುದರಿಂದ ಧಾತೃನಾಮಕನು ನಾನು; ಅತ್ಯಂತ ಪೂಜ್ಯನಾದುದರಿಂದ ಪಿತಾಮಹನಾಮಕನು ನಾನು. ಜ್ಞೇಯನಾದುದರಿಂದ ವೇದ್ಯನಾಮಕನು ನಾನು; ಭಜಕರನ್ನು ಶುದ್ಧಿ ಮಾಡುವುದರಿಂದ ಪವಿತ್ರನಾಮಕನು ನಾನು; ಪ್ರಣವ ಪ್ರತಿಪಾದ್ಯನಾದುದರಿಂದ ಓಂಕಾರನಾಮಕನು ನಾನು; ಋಗ್ವೇದದಿಂದ ಪ್ರತಿಪಾದ್ಯನಾದುದರಿಂದ ಋಕ್‌ನಾಮಕನು ನಾನು; ಸಾಮವೇದ ಪ್ರತಿಪಾದ್ಯನಾದುದರಿಂದ ಸಾಮನಾಮಕನು ನಾನು. ಯಜುರ್ವೇದ ಪ್ರತಿಪಾದ್ಯನಾದುದರಿಂದ ಯಜುರ್ನಾಮಕನು ನಾನು. ಮೋಕ್ಷಾರ್ಥಿಗಳಿಂದ ಪ್ರಾಪ್ಯನಾದುದರಿಂದ ಗತಿನಾಮಕನು ನಾನು; ಪೋಷಕನಾದುದರಿಂದ ಭರ್ತೃನಾಮಕನು ನಾನು; ಸ್ವಾಮಿಯಾದುದರಿಂದ ಪ್ರಭುನಾಮಕನು ನಾನು; ಸಾಕ್ಷಾತ್ತಾಗಿ ಸರ್ವವನ್ನೂ ನೋಡುವುದರಿಂದ ಸಾಕ್ಷಿನಾಮಕನು ನಾನು; ಆಶ್ರಯನಾದುದರಿಂದ ನಿವಾಸನಾಮಕನು ನಾನು; ಭೀತರಾದವರಿಗೆ ರಕ್ಷಕನಾದುದರಿಂದ ಶರಣನಾಮಕನು ನಾನು; ಜಗದುತ್ಪತ್ತಿಕರ್ತನಾದುದರಿಂದ ಪ್ರಭವನಾಮಕನು ನಾನು. ಲಯಕರ್ತನಾದುದರಿಂದ ಪ್ರಳಯನಾಮಕನು ನಾನು. ಸರ್ವಾಧಾರನಾದುದರಿಂದ ಸ್ಥಾನನಾಮಕನು ನಾನು. ಅತ್ಯಂತವಾಗಿ ಧಾರಕನಾದುದರಿಂದ ನಿಧಾನನಾಮಕನು ನಾನು. ಜಗದ್ವ್ಯಂಜಕನಾದುದರಿಂದ ಬೀಜನಾಮಕನು ನಾನು. ನಾಶರಹಿತನಾದುದರಿಂದ ಅವ್ಯಯನಾಮಕನು ನಾನು........ ಇಂದ್ರಿಯಗಳಲ್ಲಿದ್ದು ಅವುಗಳಿಗೆ ದೇಹಧಾರಣೆಯಿಂದ ಪ್ರಾಪ್ತವಾಗುವ ಮೃತಿಯನ್ನು ಪರಿಹರಿಸುವವನಾದುದರಿಂದ ಅಮೃತನಾಮಕನು ನಾನು. ಪ್ರಳಯ ಕಾಲದಿಂದ ಭಿನ್ನವಾದ ಕಾಲಗಳಲ್ಲಿಯೂ ಸಂಹಾರಕನಾದುದರಿಂದ ಮೃತ್ಯುನಾಮಕನು ನಾನು; ಕಾರ್ಯಪ್ರಪಂಚಕ್ಕೆ ನಿಯಾಮಕನಾದುದರಿಂದ ಸನ್ನಾಮಕನು ನಾನು; ಕಾರಣ ವಸ್ತುಗಳಿಗೆ ನಿಯಾಮಕನಾದುದರಿಂದ ಅಸನ್ನಾಮಕನು ನಾನು.

ಮತ್ತೂ ಮೂರು ವೈದಿಕನಾಮಗಳಿಂದ ಶ್ರೀ ಕೃಷ್ಣನೇ ಪ್ರತಿಪಾದ್ಯನೆಂಬುದು ಹದಿನೇಳನೆಯ ಅಧ್ಯಾಯದ ಈ ಶ್ಲೋಕದಿಂದ ವಿದಿತವಾಗುವುದು :—

**(3) ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ||**

" ಸರ್ವರಕ್ಷಕನಾದುದರಿಂದ ಜಗತ್ತಿನಲ್ಲಿ ಪ್ರವಿಷ್ಟನಾದುದರಿಂದಲೂ ಗುಣಪೂರ್ಣನಾದುದರಿಂದಲೂ ಓಂ ನಾಮಕನು ಪರಬ್ರಹ್ಮನಾದ ಶ್ರೀ ಕೃಷ್ಣನು. ಸರ್ವತ್ರ ವ್ಯಾಪ್ತನಾದುದರಿಂದಲೂ, ವೇದೈಕವೇದ್ಯನಾದುದರಿಂದಲೂ, ಪ್ರತ್ಯಕ್ಷಕ್ಕೆ ಅಗೋಚರನಾದುದರಿಂದಲೂ ತತ್ ಎಂಬ ನಾಮವುಳ್ಳವನು ಶ್ರೀ ಪರಮಾತ್ಮನೇ. ದೋಷಗಳಿಂದ ರಹಿತನಾದುದರಿಂದ ' ಸತ್ ' ನಾಮಕನು ಶ್ರೀ ಪರಮಾತ್ಮನು. "

" ವೇದೈಶ್ಚ ಸರ್ವೈರಹಮೇವ ವೇದ್ಯಃ " ಎಂಬ ವಾಕ್ಯದಲ್ಲಿ ನಾನೇ ಸರ್ವವೇದ ಪ್ರತಿಪಾದ್ಯನೆಂದು ಪ್ರತಿಜ್ಞೆ ಮಾಡಿದ ಶ್ರೀ ಕೃಷ್ಣನು, ಪೂರ್ವೋಕ್ತ ಪ್ರಕಾರವಲ್ಲಿ ವೇದದಲ್ಲಿರುವ ಅನೇಕ ಪದಗಳಿಂದ ತಾನೇ ಪ್ರತಿಪಾದಿತನೆಂದು ನಿರ್ದೇಶ ಮಾಡಿ

ನಿರೂಪಿಸಿ, ಈ ಕ್ರಮದಿಂದಲೇ ಸಕಲ ವೈದಿಕ ಪದಗಳೂ ತನ್ನನ್ನೇ ಪ್ರತಿಪಾದಿಸುವುವೆಂದು ತಿಳಿಯಬೇಕೆಂದು ತೋರಿಸಿರುತ್ತಾನೆ. ಆದುದರಿಂದಲೇ ಶ್ರೀ ಕೃಷ್ಣನು ಅನಂತ ಕಲ್ಯಾಣಗುಣಭರಿತನಾದ ಸರ್ವ ದೋಷ ವಿವರ್ಜಿತನಾದ ಪರಬ್ರಹ್ಮನೆಂಬ ಸತ್ಸಿದ್ಧಾಂತವು ಸಜ್ಜನರ ಹೃತ್ಕಮಲದಲ್ಲಿ ವಿರಾಜಿಸುತ್ತಿದೆ *

---

* ಶಾಸ್ತ್ರದ ಯಥಾರ್ಥ ತತ್ವವನ್ನು ತಿಳಿಯದೇ, ಎಂದರೆ ಸಕಲ ಶಾಸ್ತ್ರಗಳಲ್ಲಿಯೂ ರುಕ್ಮಿಣೀ ವಲ್ಲಭನಾದ ಶ್ರೀ ಕೃಷ್ಣನೇ ಪರಮ ಮುಖ್ಯ ವೃತ್ತಿಯಿಂದ ಪ್ರತಿಪಾದಿತನಾದ ಪರಬ್ರಹ್ಮನೆಂದು ತಿಳಿಯದೇ, ಬ್ರಹ್ಮನು ಗುಣಶೂನ್ಯನು, ಅನ್ಯ ದೇವತೆಗಳಿಗಿಂತ ಉತ್ಕರ್ಷರಹಿತನು ಇತ್ಯಾದಿ ರೀತಿಯಾಗಿ ದುಸ್ತತ್ವವನ್ನು ರಚಿಸುವ ವಾದಿಗಳ ಸ್ವರೂಪವನ್ನು ಮಹಾಭಾರತದಲ್ಲಿಯೇ ಶ್ರೀ ವೇದವ್ಯಾಸರು ಅವರಿಗೆ ಪ್ರಾಪ್ತವಾಗುವ ಫಲಕಥನಪೂರ್ವಕವಾಗಿ ನಿರೂಪಿಸಿರುವರು ;—

**ಯಾಥಾತಥ್ಯಮವಿಜ್ಞಾಯ ಶಾಸ್ತ್ರಾಣಾಂ ಶಾಸ್ತ್ರದಸ್ಯವಃ ।**
**ವೈಗುಣ್ಯಮೇವ ಪಶ್ಯಂತಿ ನ ಗುಣಾನಿ ನಿಯುಂಜತೇ ॥**
**ತೇಷಾಂ ತಮಃಶರೀರಾಣಾಂ ತಮ ಏವ ಪರಾಯಣಂ ।**

**ಅರ್ಥ :—** ಶಾಸ್ತ್ರದಸ್ಯವಃ = ಶಾಸ್ತ್ರದ ( ನಿಜವಾದ ತತ್ವವನ್ನು ಮರೆಮಾಚುವ ) ಕಳ್ಳರು, ಶಾಸ್ತ್ರಾಣಾಂ = ಶಾಸ್ತ್ರಗಳ, ಯಾಥಾತಥ್ಯಂ = ನಿಜವಾದ ತತ್ವವನ್ನು; ಅವಿಜ್ಞಾಯ = ತಿಳಿಯದೇ, (ಶ್ರೀ ಹರಿಯಲ್ಲಿ) ವೈಗುಣ್ಯಮೇವ = ಗುಣಶೂನ್ಯತೆಯನ್ನೇ, ಪಶ್ಯಂತಿ = ತಿಳಿಯುತ್ತಾರೆ; ಗುಣಾನಿ = (ಶ್ರೀ ಹರಿಯಲ್ಲಿರುವ ಕಲ್ಯಾಣ) ಗುಣಗಳನ್ನು, ನ ನಿಯುಂಜತೇ = ಅವನಲ್ಲಿರುವುವೆಂದು ತಿಳಿಯುವುದಿಲ್ಲ. ತಮಶ್ಶರೀರಾಣಾಂ = ತಮೋಗುಣಮಯವಾದ ಸ್ವರೂಪ ದೇಹಗಳುಳ್ಳಂಥ, ತೇಷಾಂ = ಆ ಶಾಸ್ತ್ರಚೋರರಿಗೆ, ತಮ ಏವ = ಅಂಧಂತಮಸ್ಸೇ, ಪರಾಯಣಂ = ಪ್ರಾಪ್ಯವಾದ ಸ್ಥಾನವು.

---

# X.

# ಗೀತಾಮಾಹಾತ್ಮ್ಯವು.

## ಅನುಬಂಧಚತುಷ್ಟಯವು.

1. **ಪ್ರಶ್ನೆ :—** ಸ್ವಾಮೀ ! ಸರ್ವ ಧರ್ಮಗಳಿಗಿಂತಲೂ ಗೀತೋಕ್ತವಾದ ಧರ್ಮಗಳೇ ಅವಶ್ಯ ಅನುಷ್ಠೇಯವೆಂದೂ ಗೀತೆಯಲ್ಲಿ ಶ್ರೀ ಕೃಷ್ಣನು ಸರ್ವತ್ರ ಪ್ರಾಮಾಣಿಕವಾದ ಉಪದೇಶವನ್ನೇ ಮಾಡಿರುವನೆಂದೂ ನಿರ್ಧರಿಸುವುದು ಹೇಗೆ ?

**ಉತ್ತರ:— ಶ್ರೀ ಶ್ರೀಗಳವರು:—** ಆ ವಿಚಾರವೂ ನಡೆಯಲಿ. ಶ್ರೀಮದ್ಭಗವದ್ಗೀತೆಯಿಂದಲೇ ಈ ವಿಷಯಕ್ಕೂ ಉತ್ತರವನ್ನು ನಿರೂಪಿಸಬೇಕೋ ಅಥವಾ ಪ್ರಮಾಣಾಂತರದಿಂದ ನಿಮ್ಮ ಪ್ರಶ್ನೆಗೆ ಉತ್ತರವನ್ನು ಹೇಳಬಹುದೋ ?

**ವಿದ್ಯಾರ್ಥಿಗಳು:—** ಮಹಾಸ್ವಾಮೀ ! ಶ್ರೀ ಕೃಷ್ಣ ವಾಕ್ಯಗಳಿಂದಲೇ ಸಾಧ್ಯವಾದಷ್ಟುಮಟ್ಟಿಗೆ ಈ ಪ್ರಶ್ನೆಗೂ ಉತ್ತರವನ್ನು ಹೇಳಬೇಕೆಂದು ಪ್ರಾರ್ಥಿಸುತ್ತೇವೆ.

**ಉತ್ತರ :— ಶ್ರೀ ಶ್ರೀಗಳವರು :—** ಓಂ ! ಕೇಳಿರಿ. ಭಗವದ್ಗೀತೆಯು ಅತ್ಯಂತ ಪ್ರಾಮಾಣಿಕವಾದ ಗ್ರಂಥವು. ಮತ್ತು ಮುಮುಕ್ಷುವಿನ ನಿಶ್ಶಂಕ ಪ್ರವೃತ್ತಿಗೆ ಕಾರಣವಾದ ಸಕಲ ಗುಣಗಳೂ ಗೀತೋಕ್ತ ವಿಷಯಗಳಲ್ಲಿ ತುಂಬಿರುವುವು. ತಥಾಹಿ :—

ಭಗವದ್ಗೀತೆಯು ಆಪತ್ತಮನಾದ ಶ್ರೀ ಕೃಷ್ಣನಿಂದ ಉತ್ತಮಾಧಿಕಾರಿಯಾದ ಅರ್ಜುನನಂಥ ಶಿಷ್ಯನಿಗೆ ಧರ್ಮ ಸಂಕಟವನ್ನು ಪರಿಹರಿಸಬೇಕೆಂಬ ಉದ್ದೇಶದಿಂದ ಮಾಡಿದ ಹಿತೋಪದೇಶವಾಗಿರುತ್ತದೆ. ಆದುದರಿಂದ ಇದರಲ್ಲಿ ಆಪ್ತಿಮೂಲಕವಾದ ಪ್ರಾಮಾಣ್ಯವು ಸಮಗ್ರವಾಗಿರುವುದು. ಯಾವ ಗ್ರಂಥದಲ್ಲಿ ವಕ್ತ್ರಾನುಕೂಲ್ಯವೂ, ಶ್ರೋತ್ರಾನುಕೂಲ್ಯವೂ, ಮತ್ತು ಪ್ರಸಂಗಾನುಕೂಲ್ಯವೂ ಇರುವುದೋ ಅದರಲ್ಲಿ ಸಮಗ್ರವಾದ ಆಪ್ತಿಮೂಲತ್ವವು ಸಿದ್ಧವಾಗಿರುವುದು. ಗೀತೆಯ ಉಪದೇಶಕನಾದ ಶ್ರೀ ಕೃಷ್ಣನು ಉತ್ತಮ ವಕ್ತೃ ಗುಣಗಳಿಂದ ಪೂರ್ಣನಾದವನು. ಆತನು ಸರ್ವಜ್ಞನಾದುದರಿಂದ ವಿವಕ್ಷಿತಾರ್ಥ ತತ್ವಜ್ಞಾನದಿಂದ ಪೂರ್ಣನು "ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ" ಇತ್ಯಾದಿ ವಾಕ್ಯಗಳಿಂದ ಈ ವಿಷಯವು ಸಿದ್ಧವಾಗುವುದು.

ತಿಳಿದ ವಿಷಯವನ್ನು ಬೋಧಿಸುವಾಗ ಅಪಟುಕರಣತ್ವದಿಂದ ಸ್ಖಲನಾದಿಗಳು ಲೋಕದಲ್ಲಿ ಸಂಭವಿಸುವುದುಂಟು ಶ್ರೀ ಕೃಷ್ಣನು ಅನಂತ ಬಲವುಳ್ಳ ಪರಬ್ರಹ್ಮನಾದುದರಿಂದ ಆತನಲ್ಲಿ ಕರಣಪಾಟವವು ಸಮಗ್ರವಾಗಿರುವುದು. "ಅನಂತವೀರ್ಯಾಮಿತವಿಕ್ರಮಸ್ತ್ವಂ", "ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ"

ಇತ್ಯಾದಿ ವಚನಗಳು ಈ ವಿಷಯದಲ್ಲಿ ಸಾಧಕವಾಗಿರುವುವು. ಅರ್ಥವಿವಕ್ಷೆಯೂ ಗೀತೆಯಲ್ಲಿ ಕಂಡು ಬಂದಿರುವುದು. ಉಪದೇಶಕನಾದ ಗುರುವು ಸರ್ವಜ್ಞನಾದರೂ ಆತನು ತನ್ನಿಂದ ತಿಳಿದ ಪ್ರಮೇಯವನ್ನು ಶಿಷ್ಯನಿಗೆ ಬೋಧಿಸಬಾರದೆಂಬ ನಿಶ್ಚಯವನ್ನು ಮಾಡಿ ಮೌನವನ್ನು ಧರಿಸಿದರೆ ಗ್ರಂಥೋತ್ಪತ್ತಿಯೇ ದುರ್ಘಟವಾಗುವುದು. ದುರ್ಜನ ಶಿಷ್ಯರು ಒದಗಿದರೆ ಪ್ರಾಯೇಣ ಸದ್ಗುರುಗಳು ಈ ಆಚರಣೆಯನ್ನು ಅವಲಂಬಿಸುವರು. ಗೀತೆಯಲ್ಲಿ ಭಕ್ತಾಗ್ರಣಿಯಾದ ಪಾಂಡುನಂದನನು "ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ" ಎಂದು ಪ್ರಾರ್ಥನಾಪೂರ್ವಕವಾಗಿ ಪ್ರಪನ್ನನಾಗಿರುವುದರಿಂದ ಶ್ರೀ ಕೃಷ್ಣನು ಮುಖ್ಯ ತತ್ವವನ್ನು ಬಚ್ಚಿಡುವುದಕ್ಕೆ ಕಾರಣವಿಲ್ಲವಾದುದರಿಂದ ಶ್ರೀ ಕೃಷ್ಣನು ಸ್ವಾಭಿಪ್ರಾಯವನ್ನು ನಿಶ್ಶಂಕವಾಗಿ ತಿಳಿಸಿರುವನು. ಇದು ( ಅರ್ಥವಿವಕ್ಷೆಯು ) ಶ್ರೋತ್ರಾನುಕೂಲ್ಯ ನಿಬಂಧನವಾದುದು ಶಿಷ್ಯನಾದ ಅರ್ಜುನನು ವಕ್ತೃ ಪ್ರೀತಿ ವಿಷಯನಾಗಿ ತತ್ವಜ್ಞಾನಕ್ಕೆ ಅಧಿಕಾರಿಯಾಗಿರುವನು.

ಅವಿಪ್ರಲಿಪ್ಸೆ ( ವಂಚನಾಭಾವ ) ಯೆಂಬ ಆಪ್ತಧರ್ಮವೂ ಗೀತೋಪದೇಶಕನಲ್ಲಿರುವುದು. ಉಪದೇಶಕನಾದ ಗುರುವು ಸರ್ವಜ್ಞನಾದರೂ ಪಟುಕರಣನಾದರೂ ಶಿಷ್ಯನು ಅನಧಿಕಾರಿಯಾದರೆ ದುಸ್ತತ್ವಗಳನ್ನು ತಿಳಿಸುವನು. ಚೋರನು ಧನಿಕನು ಹೋದ ಮಾರ್ಗವು ಯಾವುದೆಂದು ಪ್ರಶ್ನೆ ಮಾಡಿದರೆ ಸಜ್ಜನರು ತಾವು ಯಥಾರ್ಥ ಮಾರ್ಗವನ್ನು ತಿಳಿದಿದ್ದರೂ ವಿರುದ್ಧ ಮಾರ್ಗವನ್ನು ತೋರಿಸಿ ಸುಳ್ಳು ಹೇಳುವರು. ಇದು ದೋಷವಲ್ಲ. "ಪಂಚಾನೃತಾನ್ಯಾಹುರಪಾತಕಾನಿ" ಇತ್ಯಾದಿ ಮನುವಚನಗಳಿಂದಲೂ ಇದು ಧರ್ಮವೆಂದೇ ಪ್ರಮಿತವಾಗಿರುವುದು ಇದೇ ಕಾರಣದಿಂದ ಬೌದ್ಧಶಾಸ್ತ್ರ, ಪಾಶುಪತಶಾಸ್ತ್ರವೇ ಮುಂತಾದ ಅನೇಕ ಗ್ರಂಥಗಳು ಜ್ಞಾನಿಗಳಿಂದ ಪ್ರಣೀತವಾದರೂ ವಂಚನೋದ್ದೇಶದಿಂದ ರಚಿತವಾದವುಗಳಾಗಿರುವುದರಿಂದ ಅವುಗಳೆಲ್ಲವೂ ದುಸ್ತತ್ವವನ್ನೇ ಬೋಧಿಸುವುವು. ಶಿಷ್ಯನು ಅಧಿಕಾರಿಯಾಗಿದ್ದರೂ ನರ್ಮ, ಕ್ರೀಡಾ, ಪರಿಹಾಸಾದಿ ಸಮಯಗಳಲ್ಲಿ ಉದ್ದೇಶಪೂರ್ವಕವಾಗಿ ಗುರುವು ಜ್ಞಾನಿಯಾದರೂ ಸುಳ್ಳು ಹೇಳುವನು. ಪ್ರಕೃತದಲ್ಲಿ ಗೀತೋಪದೇಶ ಸಮಯವು ಕ್ರೀಡಾ ಕಾಲವಲ್ಲ. ಗೀತೆಗೆ ಪ್ರಸಂಗಾನುಕೂಲ್ಯವೂ ಇರುವುದು.

ಈ ರೀತಿಯಾಗಿ ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ ಮತ್ತು ಪ್ರಸಂಗಾನುಕೂಲ್ಯವೂ ಸಹ ಗೀತೆಯಲ್ಲಿ ಸಮೀಚೀನವಾಗಿ ಕಂಡು ಬಂದಿರುವುದರಿಂದ ಶ್ರೀ ಕೃಷ್ಣನ ಉಪದೇಶವು ಆಪ್ತಿಮೂಲವಾದುದೆಂದು ಸರ್ವರೂ ಸಮ್ಮತಿಸಿರುವರು. ಆಪ್ತಿಗೆ ಕಾರಣವಾದ ವಿವಕ್ಷಿತಾರ್ಥ ತತ್ವಜ್ಞಾನ, ಪಟುಕರಣತ್ವ, ಅರ್ಥವಿವಕ್ಷಾ, ಅವಿಪ್ರಲಿಪ್ಸಾ ಎಂಬ ನಾಲ್ಕು ಧರ್ಮಗಳೂ ಇಲ್ಲಿ ಇರುವುವು.

1. ಕೃಷ್ಣನು ಸರ್ವಜ್ಞನಾದುದರಿಂದ ವಿವಕ್ಷಿತಾರ್ಥ ತತ್ವಜ್ಞಾನವುಳ್ಳವನು. ಲೋಕಪಾಲಕರಾದ ಸೂರ್ಯಾದಿ ದೇವತೆಗಳಿಗೂ ಜಗದ್ಗುರುಗಳಾದ ಬ್ರಹ್ಮಾದಿಗಳಿಗೂ ಗುರುವಾದುದರಿಂದಲೂ, ವೇದಾಂತ ಶಾಸ್ತ್ರವನ್ನು ರಚಿಸಿದವನಾದುದರಿಂದಲೂ, ಪರಾಪರ ನಿಖಿಲ ಜಗತ್ತಿಗೂ ಸೃಷ್ಟ್ಯಾದಿಗಳನ್ನು ಮಾಡುವ ಪರಬ್ರಹ್ಮ

ನಾದುದರಿಂದಲೂ ಶ್ರೀ ಕೃಷ್ಣನು ಪೂರ್ಣವಾದ ತತ್ವಜ್ಞಾನವುಳ್ಳವನೆಂದು ಸಿದ್ಧವಾಗುವುದು

2. ಸೃಷ್ಟ್ಯಾದಿಕರ್ತನಾದ ಪರಬ್ರಹ್ಮನಿಗೆ ಇಂದ್ರಿಯಸಾಮರ್ಥ್ಯವು ಇರುವುದೆಂದು ಬೇರೇ ಹೇಳಬೇಕಾದುದಿಲ್ಲ.

3. ಅರ್ಥವಿವಕ್ಷೆಯು ಗೀತೆಯಲ್ಲಿರುವುದೆಂದು ಅರ್ಜುನನ ಗುಣಗಳನ್ನು ಪರ್ಯಾಲೋಚಿಸಿದರೆ ವಿದಿತವಾಗುವುದು "ವಕ್ಷ್ಯಾಮಿ ತೇ ಹಿತಂ" ಎಂದು ಪುನಃ ಪುನಃ ಶ್ರೀ ಕೃಷ್ಣನು ಪ್ರತಿಜ್ಞೆ ಮಾಡಿರುವುದರಿಂದಲೂ ಇದು ಸಿದ್ಧವಾಗುವುದು.

4. ಗೀತೆಯು ವಂಚನೋಪದೇಶವಲ್ಲವೆಂಬುದು ಸರ್ವಸಮ್ಮತವಾದ ಅಭಿಪ್ರಾಯವು. "ಅಧ್ಯಾತ್ಮಸಂಮೂಢಚೇತಾಃ" ಎಂದು ಅರ್ಜುನನು ಹೇಳಿರುವಂತೆ ತತ್ವವಿಷಯದಲ್ಲಿ ಪ್ರಾಪ್ತವಾದ ಸಂದೇಹವನ್ನು ಪರಿಹಾರ ಮಾಡುವ ಉದ್ದೇಶದಿಂದಲೇ ಪ್ರವೃತ್ತವಾದುದರಿಂದಲೂ, ಅಧಿಕಾರಿಯೂ ಶ್ರೀ ಕೃಷ್ಣನ ಪರಮಪ್ರೀತಿಗೆ ವಿಷಯನಾದುದರಿಂದಲೂ, ಪರಮಗೋಪ್ಯವಾದ ಉಪನಿಷದ್ರಹಸ್ಯಗಳೇ ಇದರಲ್ಲಿ ಅಡಗಿರುವುವು. **"ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವ"** ಎಂಬ ಶ್ರೀ ಕೃಷ್ಣನ ಉಕ್ತಿಯೇ ಅರ್ಜುನನ ಯೋಗ್ಯತೆಯನ್ನೂ ಶ್ರೀ ಕೃಷ್ಣನಿಗೆ ಅವನಲ್ಲಿದ್ದ ಪ್ರೀತ್ಯತಿಶಯವನ್ನೂ ವ್ಯಕ್ತಗೊಳಿಸುತ್ತದೆ. ಆದುದರಿಂದಲೇ **"ಬ್ರಹ್ಮವಿದ್ಯಾಯಾಂ........ ಶ್ರೀಕೃಷ್ಣಾರ್ಜುನಸಂವಾದೇ"** ಎಂಬಲ್ಲಿ ಕೃಷ್ಣಾರ್ಜುನ ಸಂವಾದವು ಪರಮ ತತ್ವವನ್ನು ಬೋಧಿಸುವ ಬ್ರಹ್ಮವಿದ್ಯೆಯೆಂದು ಉಲ್ಲೇಖಿಸಲ್ಪಟ್ಟಿರುವುದು.

2. ಶ್ರುತಿಸಂವಾದರೂಪವಾಗಿರುವುದರಿಂದಲೂ ಗೀತೆಯು ಅತ್ಯಂತ ಪ್ರಾಮಾಣಿಕ ಗ್ರಂಥವೆಂದು ನಿರ್ಧರಿಸಬಹುದು **"ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ"** ಎಂಬ ಛಾಂದೋಗ್ಯಶ್ರುತಿಯು, ಭಾರತರೂಪವಾದ ಇತಿಹಾಸವು ವೇದತುಲ್ಯವೆಂದು ಬೋಧಿಸಿರುವುದು. ಗೀತೆಯು ಸುವರ್ಣನಿರ್ಮಿತ ಆಸನದಂತಿರುವ ಇಂಥ ಭಾರತದ ಮಧ್ಯಭಾಗದಲ್ಲಿ ವಜ್ರದಂತೆ ವಿರಾಜಿಸುತ್ತಿರುವುದು. ಇಷ್ಟೇ ಅಲ್ಲ. ಗೀತೆಯು ವೇದಕ್ಕೆ ಸಂವಾದರೂಪವಾಗಿಯೂ ಇರುವುದು; ಎಂದರೆ ವೇದದಲ್ಲಿ ಪ್ರತಿಪಾದಿತವಾಗಿರುವ ಪ್ರಮೇಯಗಳೇ ವಿಶದವಾಗಿ ಗೀತೆಯಲ್ಲಿ ಪ್ರತಿಪಾದಿಸಲ್ಪಟ್ಟಿರುವುವು. ಗೀತೆಯಲ್ಲಿ ಪ್ರತಿಪಾದಿಸಲ್ಪಟ್ಟಿರುವ ವಿಷ್ಣುಸರ್ವೋತ್ತಮತ್ವವು **"ಅಗ್ನಿರ್ವೈ ದೇವಾನಾಮವಮಃ ವಿಷ್ಣುಃ ಪರಮಃ"** ಮುಂತಾದ ಶ್ರುತಿಗಳಲ್ಲಿ ನಿರೂಪಿಸಲ್ಪಟ್ಟಿರುವುದು. ಜಗತ್ಸತ್ಯತ್ವವು **"ವಿಶ್ವಂ ಸತ್ಯಂ"** ಮುಂತಾದ ಶ್ರುತಿಗಳಲ್ಲಿ ನಿರೂಪಿಸಲ್ಪಟ್ಟಿರುವುದು. **'ದ್ವಾಸುಪರ್ಣಾ'** ಮುಂತಾದ ಶ್ರುತಿಗಳಲ್ಲಿ ಗೀತೋಕ್ತವಾದ ಜೀವಬ್ರಹ್ಮರ ಭೇದವೂ, **"ಸರ್ವಂ ತದಿಂದ್ರ ತೇ ವಶೇ"** ಮುಂತಾದ ಶ್ರುತಿಗಳಲ್ಲಿ ಸರ್ವ ಜಗತ್ತಿಗೆ ಹರಿವಶತ್ವವೂ ಪ್ರತಿಪಾದಿಸಲ್ಪಟ್ಟಿರುವುವು. ಗೀತೆಯಲ್ಲಿ ಸಮರ್ಥಿಸಲ್ಪಟ್ಟಿರುವ ಜೀವತ್ರೈವಿಧ್ಯವು **"ಶ್ರುಣ್ವೇ ವೀರಮುಗ್ರಂ"** ಮುಂತಾದ ಶ್ರುತಿಗಳಲ್ಲಿಯೂ, ತಾರತಮ್ಯವು **ಅಗ್ನಿರ್ವೈ ದೇವಾನಾಮವಮಃ**

ಮುಂತಾದ ಶ್ರುತಿಗಳಲ್ಲಿಯೂ ನಿರೂಪಿಸಲ್ಪಟ್ಟಿರುವುವು. **"ಮಮ ಸಾಧರ್ಮ್ಯ ಮಾಗತಾಃ"** ಮುಂತಾದ ಗೀತಾ ಶ್ಲೋಕಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವ ಮುಕ್ತಿ ಸ್ವರೂಪವು ವೇದದಲ್ಲಿ **"ನಿರಂಜನಃ ಪರಮಂ ಸಾಮ್ಯಮುಪೈತಿ"** ಮುಂತಾದ ಶ್ರುತಿಗಳಲ್ಲಿ ನಿರೂಪಿಸಲ್ಪಟ್ಟಿರುವುದು. **"ಯಮೇವೈಷ ವೃಣುತೇ" "ನಾನ್ಯಃ ಪಂಥಾ ಅಯನಾಯ ವಿದ್ಯತೇ", "ಅತ್ಮಾ ವಾ ಆರೇ ದ್ರಷ್ಟವ್ಯಃ" "ಕರ್ಮಣಾ ಜ್ಞಾನಮಾತನೋತಿ"** ಮುಂತಾದ ಶ್ರುತಿಗಳಲ್ಲಿ ಮೋಕ್ಷಸಾಧನ ನಿರೂಪಣವೂ ಮಾಡಲ್ಪಟ್ಟಿರುವುದು ಇನ್ನೂ ವಿಚಾರ ಮಾಡಿದರೆ ಗೀತೆಯು ವೇದಕ್ಕೆ ವ್ಯಾಖ್ಯಾನರೂಪವಾಗಿರುವುದು. ಶ್ರೀ ಕೃಷ್ಣನು ಅಲ್ಲಿ ಅಲ್ಲಿ ತತ್ವಗಳನ್ನು ನಿರೂಪಣೆ ಮಾಡಿ ತಾನು ಹೇಳಿರುವ ಪ್ರಮೇಯಗಳು ವೇದದಲ್ಲಿ ಉಕ್ತವಾದುವು ಗಳೆಂದು ತೋರಿಸುವುದಕ್ಕಾಗಿ, **"ಪರಮಾತ್ಮೇತ್ಯುದಾಹೃತಃ", "ನ ಜಾಯತೇ ಮ್ರಿಯತೇ ವಾ"** ಇತ್ಯಾದಿ ಸ್ಥಳಗಳಲ್ಲಿ ಶ್ರುತಿಗಳನ್ನು ಪ್ರತೀಕದಿಂದ ಗ್ರಹಣ ಮಾಡಿ ವ್ಯಾಖ್ಯಾನವನ್ನು ಮಾಡಿರುವನು. ಈ ರೀತಿಯಾಗಿ ನಿರ್ದುಷ್ಟವಾದ ವೇದ ದಿಂದ ಪ್ರತಿಪಾದ್ಯವಾದ ತತ್ವವೂ ಗೀತಾ ಪ್ರತಿಪಾದ್ಯವಾದ ತತ್ವವೂ ಒಂದೇ ಆಗಿರು ವುದರಿಂದಲೂ ಭಗವದ್ಗೀತೆಯು ಅತ್ಯಂತ ಪ್ರಾಮಾಣಿಕವಾದ ಮೋಕ್ಷಶಾಸ್ತ್ರವೆಂದು ಸಿದ್ಧವಾಗುವುದು.

3. ಇದೇ ಪ್ರಕಾರವಾಗಿ ಉತ್ತಮ ಯುಕ್ತ್ಯುಪಬೃಂಹಿತವಾಗಿರುವುದರಿಂದ ಗೀತೋಕ್ತ ತತ್ವವು ಅತ್ಯಂತ ಪ್ರಾಮಾಣಿಕವೆಂದು ಸಿದ್ಧವಾಗುವುದು. ಅದು ಹೇಗೆಂದರೆ ಯುಕ್ತಿಶಾಸ್ತ್ರವೆಂದು ಪ್ರಸಿದ್ಧವಾದ ಬ್ರಹ್ಮಸೂತ್ರಗಳಲ್ಲಿ ಪ್ರತಿಪಾದಿತವಾದ ತತ್ವಗಳೇ ಗೀತೆಯಲ್ಲಿ ಪ್ರತಿಪಾದಿತವಾಗಿರುವುವು. ಮತ್ತು ಶ್ರೀ ಕೃಷ್ಣನು ತಾನು ತತ್ವಗಳನ್ನಾಗಿ ನಿರೂಪಿಸುವಾಗ ಅಲ್ಲಿ ಅಲ್ಲಿ ಅವುಗಳನ್ನು ಅಂಗೀಕರಿಸುವುದಕ್ಕೆ ಸಹಾಯಕವಾಗುವ ಕಾರಣಗಳನ್ನೂ ನಿರೂಪಿಸಿರುತ್ತಾನೆ.

4. ಈ ಪ್ರಕಾರವಾಗಿ ತ್ರಿವಿಧ ಪರಾಮರ್ಶೆಯಿಂದಲೂ ಗೀತೆಯು ಅತ್ಯಂತ ಪ್ರಾಮಾಣಿಕ ಗ್ರಂಥವೆಂದು ನಿಶ್ಚಿತವಾಗುವುದು. ಆದರೆ ಪ್ರಾಮಾಣಿಕ ಗ್ರಂಥ ಗಳೆಲ್ಲಾ ಅಭ್ಯಾಸಾರ್ಹವಲ್ಲ. ಲಂಡನ್ ಪಟ್ಟಣದ ಚರಿತ್ರೆಯೂ, ನ್ಯೂಸ್‌ಪೇಪರ್ ವೃತ್ತಾಂತಗಳೂ ಪ್ರಾಮಾಣಿಕವಾದರೂ ಮುಮುಕ್ಷುಗಳು ಅವುಗಳನ್ನು ಆದರ ಮಾಡಲಾರರು. ಪರಂತು ಲೌಕಿಕ ಹರಟೆಗಳನ್ನು ದೂರೀಕರಿಸಿ ಉತ್ತಮ ಗ್ರಂಥ ಗಳನ್ನು ಅಭ್ಯಾಸ ಮಾಡುವರು. ಆದುದರಿಂದ ಗ್ರಂಥವು ಪ್ರಾಮಾಣಿಕವಾದರೂ ಉತ್ತಮವಾದ ವಿಷಯ, ಪ್ರಯೋಜನ, ಅಧಿಕಾರಿ ಮತ್ತು ಇವುಗಳಿಗೆ ಪರಸ್ಪರ ಸಂಬಂಧಗಳೆಂಬ ಅನುಬಂಧ ಚತುಷ್ಟಯವು ಇದ್ದರೆ ಅದು ಶ್ರದ್ಧಾಪೂರ್ವಕವಾದ ಅನುಷ್ಠಾನಕ್ಕೆ ವಿಷಯವಾಗುವುದು. ಪ್ರಕೃತದಲ್ಲಿ ಭಗವದ್ಗೀತೆಯು ತನ್ನಲ್ಲಿರುವ ವಿಷಯಪ್ರಯೋಜನಾದಿಗಳ ಮಹತ್ವದಿಂದಲೇ ಸರ್ವೋತ್ತಮ ಗ್ರಂಥವೆಂದು ಪ್ರಸಿದ್ಧ ವಾಗಿ ವಿರಾಜಿಸುತ್ತಿರುವುದು. ನಿಖಿಲ ವೇದಪ್ರತಿಪಾದ್ಯನೂ ಬ್ರಹ್ಮಾಂಡನಾಯಕನೂ ಆದ ಶ್ರೀ ಪದ್ಮನಾಭನೂ ಅವನ ಅನಂತಾನಂತ ವಿಭೂತಿಗಳೂ ಗೀತಾ ಪ್ರತಿಪಾದ್ಯ

ವಾದ ವಿಷಯುಗಳು ಅಷ್ಟಾದಶ ಅಧ್ಯಾಯುಗಳೂ ಪ್ರತ್ಯೇಕ ಪ್ರತ್ಯೇಕವಾಗಿ ಪರಮಾತ್ಮನ ಒಂದೊಂದು ಅವಯುವವೆಂದು ತಿಳಿಯುಬಹುದು. ಪರಮಾತ್ಮನೂ ಅವನ ಮಹಿಮೆಗಳೂ ಮುಖ್ಯ ವಿಷಯುರೂಪವಾಗಿರುವುವು. ಅಂಥ ಬ್ರಹ್ಮಸ್ವರೂಪ ಜ್ಞಾನವನ್ನು ಹೊಂದುವ ಕ್ರಮವು ಎಂದರೆ ಮೋಕ್ಷಸಾಧನೋಪಾಯಾನುಷ್ಠಾನಗಳು ಅಮುಖ್ಯ ವಿಷಯುಗಳೆನ್ನಿಸುವುವು. ಸರ್ವೋತ್ತಮನಾದ ಪರಬ್ರಹ್ಮನನ್ನೇ ವಿಷಯವನ್ನಾಗಿ ಒಳಗೊಂಡ ಗ್ರಂಥವು ಸರ್ವೋತ್ತಮ ವಿಷಯೋಪೇತವಾದುದೆಂದು ತಿಳಿಸಬೇಕಾದುದೇನು? ಗೀತಾ ಗ್ರಂಥದ ಬಿರುದುಗಳೇ ಅವರಲ್ಲಿರುವ ವಿಷಯುಗಳನ್ನು ಉದ್ಘೋಷಿಸುವುವು. **"ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ"** ಎಂಬಲ್ಲಿ ಬ್ರಹ್ಮವಿದ್ಯಾಯಾಂ ಎಂಬ ವಿಶೇಷಣದಿಂದ ಗೀತೆಯಲ್ಲಿ ಪರಬ್ರಹ್ಮ ಸ್ವರೂಪವು ವಿಷಯುವೆಂದೂ, ಯೋಗಶಾಸ್ತ್ರೇ ಎಂಬ ವಿಶೇಷಣದಿಂದ ಮೋಕ್ಷಸಾಧನಾನುಷ್ಠಾನವು ವಿಷಯುವೆಂದೂ ಸಿದ್ಧವಾಗುವುದು. ಶ್ರೀಕೃಷ್ಣನೂ ಸಹ ಸಪ್ತಮ ನವಮಾಧ್ಯಾಯುಗಳಲ್ಲಿ ಭಗವನ್ಮಹಿಮೆಗಳನ್ನು ಉಪದೇಶ ಮಾಡುತ್ತೇನೆಂದು ಸ್ಪಷ್ಟವಾಗಿ ಪ್ರತಿಜ್ಞೆಯನ್ನು ಮಾಡಿರುತ್ತಾನೆ.

5. ಭಗವದ್ಗೀತೆಯ ಉತ್ತಮತ್ವವು ಅದರ ಅಭ್ಯಾಸದಿಂದ ಪ್ರಾಪ್ತವಾಗುವ ಪ್ರಯೋಜನ ವಿಮರ್ಶೆಯಿಂದಲೂ ವಿದಿತವಾಗುವುದು. "ಕೃಷ್ಣಗೀತಾ ಚ ತಜ್ಜ್ಞಾನಾನ್ಮುಚ್ಯತೇಽಂಜಸಾ" ಎಂಬ ಶ್ರೀಮದಾಚಾರ್ಯರಿಂದ ಉದಾಹೃತವಾದ ಪ್ರಮಾಣ ವಚನದಿಂದ ಭಗವದ್ಗೀತೆಯು ಮೋಕ್ಷದಾಯಕವಾದ ಶಾಸ್ತ್ರವೆಂದು ನಿಶ್ಚಿತವಾಗುವುದು. ಪದ್ಮಪುರಾಣದಲ್ಲಿಯೂ ವರಾಹ ಪುರಾಣದಲ್ಲಿಯೂ ಗೀತೆಯ ಒಂದೊಂದು ಅಕ್ಷರದ ಪಾಠಮಾತ್ರಕ್ಕೂ ಮಹತ್ಪ್ರಯೋಜನವು ನಿರೂಪಿಸಲ್ಪಟ್ಟಿರುವುದು. ಇನ್ನು ಅದರಿಂದ ಪ್ರತಿಪಾದಿತವಾದ ಅರ್ಥ ಮನನದಿಂದ ಆಗುವ ಪ್ರಯೋಜನವನ್ನು ಸ್ವಯಂ ಗೀತಾಪ್ರತಿಪಾದ್ಯನಾದ ಶ್ರೀ ಕೃಷ್ಣನು ಹೇಳಲು ಸಮರ್ಥನೇ ಹೊರತು ಇತರರಿಗೆ ಶಕ್ಯವಲ್ಲ ಶ್ರೀ ಕೃಷ್ಣನು ಗೀತಾ ಜ್ಞಾನವನ್ನು ಹೊಂದಿ ಅದರಂತೆ ಅನುಷ್ಠಾನ ಮಾಡುವವರಿಂದ ಲಭ್ಯವಾಗುವ ಫಲವನ್ನು ಹೇಳಿಯೂ ಇರುತ್ತಾನೆ :—

**(1) ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ ।**
**ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥**
**—(15. 20.)**

"ಎಲೈ ಪಾಪರಹಿತನಾದ ಅರ್ಜುನನೇ! ನನ್ನ ಜಗದ್ವೃಕ್ಷ ಮೂಲತ್ವ, ಸರ್ವಾಂತರ್ಯಾಮಿತ್ವ, ಪುರುಷೋತ್ತಮತ್ವಾದಿ ಅತಿ ಗೋಪ್ಯವಾದ ರಹಸ್ಯಗಳು ನನ್ನಿಂದ ನಿನಗೆ ನಿರೂಪಿಸಲ್ಪಟ್ಟವು. ಇದನ್ನು ತಿಳಿದವನು (ತಿಳಿದು ಅನುಷ್ಠಾನ ಮಾಡುವವನು) ಅಪರೋಕ್ಷ ಜ್ಞಾನಿಯಾಗುತ್ತಾನೆ"

ಇದರಿಂದ ಭಗವದ್ಗೀತೆಗೆ ಮುಕ್ತಿಯು ಮುಖ್ಯ ಪ್ರಯೋಜನವೆಂದೂ, ಅಪರೋಕ್ಷ ಜ್ಞಾನವು ಅಮುಖ್ಯ ಪ್ರಯೋಜನವೆಂದೂ ಸಿದ್ಧವಾಗುವುದು.

ಮಧ್ಯೇ ಮಧ್ಯೇ ಶ್ರೀ ಕೃಷ್ಣನು ತತ್ತ್ವವನ್ನು ಉಪದೇಶ ಮಾಡಿ ಅವುಗಳ ಅನುಷ್ಠಾನದಿಂದ ಪ್ರಾಪ್ತವಾಗುವ ಫಲವನ್ನು ನಿರೂಪಿಸಿರುತ್ತಾನೆ. ಶ್ರೀ ಕೃಷ್ಣನು ಹೇಳುತ್ತಾನೆ:—

(2) **ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥**
—(13. 18.)

" ಎಲೈ ಪಾರ್ಥನೇ ! ಈ ರೀತಿಯಾಗಿ ನನ್ನಿಂದ ಸಂಕ್ಷೇಪವಾಗಿ ಕ್ಷೇತ್ರ ಸ್ವರೂಪ, ಜ್ಞಾನಸಾಧನ ಮತ್ತು ಜ್ಞೇಯವಾದ ಭಗವನ್ಮಹಿಮೆ ಮುಂತಾದ ವಿಷಯಗಳ ಉಪದೇಶವು ಮಾಡಲ್ಪಟ್ಟಿತು. ಇದನ್ನು ತಿಳಿದು ನನ್ನ ಭಕ್ತನಾದವನು ನನ್ನಲ್ಲಿ ಸಾರೂಪ್ಯ ಮುಕ್ತಿಯನ್ನು ಹೊಂದುವುದಕ್ಕೆ ಅರ್ಹನಾಗುತ್ತಾನೆ. "

(3) **ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಽಮೃತಮಶ್ನುತೇ ।**
—(13. 13.)

" ಎಲೈ ಪಾರ್ಥನೇ ! ನಾನು ನಿನಗೆ ಯಾವ ಜ್ಞೇಯವಾದ ಭಗವತ್ಸ್ವರೂಪವನ್ನು ತಿಳಿಯುವುದರಿಂದ ಅಧಿಕಾರಿಯು ಮುಕ್ತನಾಗುತ್ತಾನೆಯೋ ಅಂಥ ಉಪದೇಶವನ್ನು ಮಾಡುತ್ತೇನೆ. "

ಇದರಿಂದ ಗೀತೋಕ್ತವಾದ ಭಗವತ್ಸ್ವರೂಪ ಧ್ಯಾನದಿಂದ ಮುಕ್ತಿಯಾಗುವುದೆಂದು ಸಿದ್ಧವಾಗುವುದು

ಇನ್ನೂ ಕೆಲವು ಶ್ಲೋಕಗಳ ಪರಾಮರ್ಶೆಯಿಂದ ಯಥಾರ್ಥ ತತ್ತ್ವಜ್ಞಾನ ದ್ವಾರಾ ವೈರಾಗ್ಯ ಜ್ಞಾನ ಭಕ್ತಿಗಳು ಮತ್ತು ಪಾಪನಾಶಾದಿಗಳು ಭಗವದ್ಗೀತೆಗೆ ಅವಾಂತರ ಪ್ರಯೋಜನಗಳೆಂದು ಸಿದ್ಧವಾಗುವುದು. ಶ್ರೀ ಕೃಷ್ಣನು ಹೇಳುತ್ತಾನೆ :–

(4) **ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥**
—(9. 1.)

" ಎಲೈ ಪಾರ್ಥನೇ ! ಯಾವುದನ್ನು ತಿಳಿಯುವುದರಿಂದ ಅಮಂಗಳವಾದ ಸಂಸಾರದದೆಸೆಯಿಂದ ಮುಕ್ತನಾಗುತ್ತೀಯೋ ಅಂಥ ಅತಿ ಗೋಪ್ಯವಾದ ವಿಜ್ಞಾನದಿಂದ ಸಹಿತವಾದ ಜ್ಞಾನವನ್ನು ಅಸೂಯಾರಹಿತನಾದ ನಿನಗೋಸ್ಕರ ನಾನು ಉಪದೇಶ ಮಾಡುತ್ತೇನೆ. "

(5) **ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ ॥**
—(7. 2.)

" ಎಲೈ ಅರ್ಜುನನೇ ! ಯಾವ ನನ್ನ ಉಪದೇಶವನ್ನು ತಿಳಿದ ಬಳಿಕ ಪುನಃ

ಜ್ಞಾತವ್ಯವಾದ ಪ್ರಮೇಯವು ಒಂದೂ ಉಳಿಯುವುದಿಲ್ಲವೋ ಅಂಥ ( ಸರ್ವಜ್ಞತೆಯನ್ನುಂಟು ಮಾಡುವ ) ವಿಜ್ಞಾನದಿಂದ ಸಹಿತವಾದ ಜ್ಞಾನವನ್ನು ನಿನಗೆ ಉಪದೇಶ ಮಾಡುತ್ತೇನೆ. ”

(6) **ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।**
**ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥**
—(10 7 )

“ ನನ್ನ ( ಶ್ರೀ ಕೃಷ್ಣನ ) ವಿಭೂತಿರೂಪಗಳನ್ನೂ, ಸಾಮರ್ಥ್ಯವನ್ನೂ ಯಥಾರ್ಥವಾಗಿ ತಿಳಿದವನು ನಿಶ್ಚಲವಾದ ಧ್ಯಾನರೂಪವಾದ ಉಪಾಯದಿಂದ ಸಹಿತನಾಗುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ. ”

(7) **ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।**
**ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ॥**
—(3. 31.)

“ ಎಲೈ ಧನಂಜಯನೇ ! ಯಾವ ಮನುಷ್ಯರು ಶ್ರದ್ಧಾವಂತರಾಗಿ ಮತ್ತು ಅಸೂಯಾರಹಿತರಾಗಿ ನನ್ನಿಂದ ಉಪದಿಷ್ಟವಾದ ನಿಷ್ಕಾಮಕರ್ಮವನ್ನು ಅನುಷ್ಠಾನ ಮಾಡುತ್ತಾರೆಯೋ ಅವರು ಕರ್ಮಬಂಧದಿಂದ ಮುಕ್ತರಾಗುತ್ತಾರೆ. ”

(8) **ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು ।**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ ॥**
—(2. 39.)

“ ಎಲೈ ಪಾರ್ಥನೆ ! ನನ್ನಿಂದ ಮುಂದೆ ಉಪದೇಶ ಮಾಡಲ್ಪಡುವ ಜ್ಞಾನ ಸಾಧನೋಪಾಯವನ್ನು ಕೇಳು. ಅದನ್ನು ಅನುಷ್ಠಾನ ಮಾಡುವುದರಿಂದ ನೀನು ಕರ್ಮಬಂಧವನ್ನು ದಾಟುತ್ತೀಯೆ. ”

ಗೀತೆಯ ಉಪದೇಶಕ್ಕೂ, ಅಧ್ಯಯನಕ್ಕೂ ಶ್ರವಣಗಳಿಗೂ ಸಹ ಶ್ರೀ ಕೃಷ್ಣನು ಫಲವನ್ನು ಹೇಳಿರುತ್ತಾನೆ:—

(9) **ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಂ ॥**

**ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥**

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।**
**ಜ್ಞಾನಯಜ್ಞೇನ ತೇನಾಹಮಿಷ್ಟಸ್ಸ್ಯಾಮಿತಿ ಮೇ ಮತಿಃ ॥**

(10) **ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।**

